ಶ್ರೀವ್ಯಾಸರಾಜ ಗುರುಸಾರ್ವಭೌಮರಿಂದ ರಚಿತವಾದ

# ತರ್ಕತಾಂಡವ

## ಕನ್ನಡಾನುವಾದ ಸಹಿತ

(ಪ್ರಾಮಾಣ್ಯವಾದ ಪ್ರಕರಣ)

ಶ್ರೀರಾಘವೇಂದ್ರಸ್ವಾಮಿಗಳಿಂದ ರಚಿತವಾದ
ನ್ಯಾಯದೀಪ ವ್ಯಾಖ್ಯಾನದ ಅನುವಾದ ಸಹಿತ

ಅನುವಾದಕರು
**ವಿ|| ಎ. ಹರಿದಾಸಭಟ್**
ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು
ನಿವೃತ್ತ ಪ್ರಾಚಾರ್ಯರು
ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು

ಪ್ರಕಾಶನ
ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ
ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

ಶ್ರೀವ್ಯಾಸರಾಜ ಗುರುಸಾರ್ವಭೌಮರಿಂದ ರಚಿತವಾದ

# ತರ್ಕತಾಂಡವ

ಕನ್ನಡಾನುವಾದ ಸಹಿತ

(ಪ್ರಾಮಾಣ್ಯವಾದ ಪ್ರಕರಣ)

ಶ್ರೀರಾಘವೇಂದ್ರಸ್ವಾಮಿಗಳಿಂದ ರಚಿತವಾದ
ನ್ಯಾಯದೀಪ ವ್ಯಾಖ್ಯಾನದ ಅನುವಾದ ಸಹಿತ

ಅನುವಾದಕರು

## ವಿ॥ ಎ. ಹರಿದಾಸಭಟ್

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು
ನಿವೃತ್ತ ಪ್ರಾಚಾರ್ಯರು
ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು

ಪ್ರಕಾಶನ

## ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

ಈ ಪುಸ್ತಕವನ್ನು ಮಂತ್ರಾಲಯಕ್ಷೇತ್ರದಲ್ಲಿ ನಡೆದ ಶ್ರೀಮನ್ನ್ಯಾಯಸುಧಾಮಂಗಲ ಮಹೋತ್ಸವದ ಸುಸಂದರ್ಭದಲ್ಲಿ ಶ್ರೀಮಂತ್ರಾಲಯ ಮಠಾಧೀಶರಾದ ಶ್ರೀಶ್ರೀಸುಬುಧೇಂದ್ರ ತೀರ್ಥ ಶ್ರೀಪಾದಂಗಳವರು ಬಿಡುಗಡೆ ಮಾಡಿರುತ್ತಾರೆ.


ಅನುವಾದಕರು :

ಡಾ॥ ಎ. ಹರಿದಾಸಭಟ್

ಪ್ರಕಾಶನ :

ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ





ಪ್ರತಿಗಳು : 1000

ಅಕ್ಷರ ವಿನ್ಯಾಸ : ಆರ್.ಎಸ್. ಪ್ರೇಮಕುಮಾರ್, ಮೊ. 9964334285

ಮುದ್ರಣ :

ಶ್ರೀ ರಾಘವೇಂದ್ರ ಸ್ವಾಮಿ ಆಫ್‌ಸೆಟ್ ಪ್ರಿಂಟಿಂಗ್ ಪ್ರೆಸ್,

ಎಮ್ಮಿಗನೂರು-518 360. ಮೊ.: 9247188605

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ ಸರ್ವತಂತ್ರಸ್ವತಂತ್ರ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿ ವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ ಶ್ರೀಮತ್ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

# ಪರಮಪೂಜ್ಯ 1008 ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರ

## ಅನುಗ್ರಹವಚನ

"ವಿದ್ವತ್ಪರಿಚ್ಛೇಯಮಹಾವಿಶೇಷಃ" ಎಂಬ ಅಪ್ಪಣ್ಣಾಚಾರ್ಯರ ಮಾತಿನಂತೆ ಶ್ರೀಗುರುಸಾರ್ವಭೌಮರ ಗ್ರಂಥಗಳ ಸಾರವನ್ನು ಕಂಡ ವಿದ್ವಾಂಸರೆಲ್ಲರು ಅವರನ್ನು ಮುಕ್ತ ಕಂಠದಿಂದ ಕೊಂಡಾಡಿದ್ದಾರೆ.

ಇಂಥಹ ಗುರುರಾಜರ ಗ್ರಂಥಗಳನ್ನು ಸರ್ವಸಜ್ಜನರಿಗೂ ಅವಗಾಹನವಾಗಲೆಂದು ಅವರ ಎಲ್ಲಾಗ್ರಂಥಗಳನ್ನು ಕನ್ನಡದಲ್ಲಿ ಅನುವಾದ ಮಾಡಿಸಿ ಪ್ರಕಾಶನಗೊಳಿಸುವ ಯೋಜನೆಯಲ್ಲಿ ಶ್ರೀವ್ಯಾಸರಾಜರಿಂದ ರಚಿತವಾದ ತರ್ಕತಾಂಡವ ಎಂಬ ಗ್ರಂಥದ ಕೆಲವು ಭಾಗಗಳನ್ನು ಈಗಾಗಲೇ ಪ್ರಕಾಶಿಸಲಾಗಿದೆ "ತರ್ಕತಾಂಡವವು" ಗಂಗೇಶೋಪಾಧ್ಯಾಯರೆಂಬ ಅದ್ವೈತಿಪಂಡಿತರಿಂದ ರಚಿತವಾದ "ಮಣಿ" ಎಂಬ ಗ್ರಂಥದ ಖಂಡನರೂಪವಾದ ಗ್ರಂಥ ಈ "ಮಣಿ" ಗೆ ಗದಾಧರಭಟ್ಟಾಚಾರ್ಯರು ಪ್ರಕಾಶ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ.

ಪ್ರಕೃತ ಶ್ರೀಗುರುರಾಜರು "ತರ್ಕತಾಂಡವ" ವ್ಯಾಖ್ಯಾನವನ್ನು ಬರೆದಿರುತ್ತಾರೆ. ಈ ವ್ಯಾಖ್ಯಾನದ ಬಗ್ಗೆ ಶ್ರೀಗುರುಗುಣಸ್ತವನ ಕಾರರಾದ ಶ್ರೀವಾದೀಂದ್ರತೀರ್ಥರು "ವಿಖ್ಯಾತಶ್ರೀಸುಧೀಂದ್ರ..........। ಎಂಬ ಶ್ಲೋಕದಿಂದ ಶ್ರೀಗುರುರಾಜರ ಈ ತರ್ಕತಾಂಡವ ವ್ಯಾಖ್ಯಾನದಿಂದ ಮೂಲ ಗ್ರಂಥದ ಹೃದಯವು ಪ್ರತಿಪಕ್ಷದ ವಿದ್ವಾಂಸರಿಗೂ ವೇದ್ಯವಾಗುವಂತೆ ರಚಿತವಾಗಿದೆ. ಅಷ್ಟೇ ಅಲ್ಲ ಈ ಒಂದು ಗ್ರಂಥದಿಂದ ಮೇಲ್ಕಂಡ ಗ್ರಂಥಗಳು ಖಂಡಿನಮಾಡಲ್ಪಟ್ಟಿವೆ. ಶ್ರೀಗುರುಸಾರ್ವಭೌಮರು ವಿದ್ವತ್ಪ್ರಪಂಚಕ್ಕೆ ಚಿಂತಾಮಣಿಯನ್ನೇ ಕೊಟ್ಟಂತೆ ಆಗಿದೆ ಎಂದು ಮುಕ್ತಕಂಠದಿಂದ ಸ್ತುತಿಸಿದ್ದಾರೆ.

ಶ್ರೀವ್ಯಾಸರಾಜರ ತರ್ಕತಾಂಡವ, ಶ್ರೀಗುರುಸಾರ್ವಭೌಮರ ವ್ಯಾಖ್ಯಾನ ಅಲ್ಲದೇ, ಬೇರೆ ಕೆಲವೊಂದು ವ್ಯಾಖ್ಯಾನಗಳ ಸ್ವಾರಸ್ಯದೊಂದಿಗೆ ಅನುವಾದಿಸಲು ನಮ್ಮ ಶ್ರೀಮಠದ ಆಸ್ಥಾನ ವಿದ್ವಾಂಸರಾದ ಉತ್ತಮ ಸಂಶೋಧಕರು, ಅನುವಾದಕರೂ ಆದ ವಿದ್ವಾನ್ ಎ. ಹರಿದಾಸಭಟ್ಟರಿಗೆ ಸೂಚಿಸಿದ್ದೆವು. ಅವರು ತರ್ಕತಾಂಡವ ಹಾಗೂ ಶ್ರೀರಾಯರ ವ್ಯಾಖ್ಯಾನವನ್ನು ಯಥಾವತ್ತಾಗಿ ಅನುವಾದವನ್ನು ಬಹಳ ಸ್ವಾರಸ್ಯವಾಗಿ ಮಾಡಿ ಶ್ರೀಗುರುರಾಜರಿಗೆ ಪ್ರೀತಿಪಾತ್ರರಾಗಿದ್ದಾರೆ. ಈ ಕನ್ನಡ ಅನುವಾದಿತ ಕೃತಿಯನ್ನು ನಾವು ನಡೆಸುತ್ತಿರುವ ಸುಧಾಮಂಗಳಮಹೋತ್ಸವದ ಸಂದರ್ಭದಲ್ಲಿ ಬಿಡುಗಡೆಗೊಳ್ಳುತ್ತಿರುವುದು ಅತ್ಯಂತ ಸಂತೋಷವನ್ನು ತಂದಿದೆ. ಅನುವಾದಕರಾದ ಎ. ಹರಿದಾಸಭಟ್ಟರಿಗೆ ಮತ್ತಷ್ಟು ಸಾರಸ್ವತ ಸೇವೆ ಮಾಡುವ ಸಾಮರ್ಥ್ಯವನ್ನು ದಯಪಾಲಿಸಲೆಂದು ಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಮನ್ಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ದಿನಾಂಕ: 14-12-2016 ಇತಿ ನಾರಾಯಣ ಸ್ಮರಣೆಗಳು.

# ಶ್ರೀಮದಾನಂದತೀರ್ಥಭಗವತ್ಪಾದರು



ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।
ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥

# ಶ್ರೀ ಟೀಕಾರಾಯರು



ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ಪ್ರಯಚ್ಛತಿ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ॥

# ಶ್ರೀವ್ಯಾಸರಾಯರು



ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

# ಶ್ರೀವಿಜಯೀಂದ್ರತೀರ್ಥರು



ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ।
ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ॥

ಶ್ರೀ ರಾಘವೇಂದ್ರ ತೀರ್ಥ ಗುರುಸಾರ್ವಭೌಮರು, ಮಂತ್ರಾಲಯ.



ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

# ಶ್ರೀಮತ್ಸುಯತೀಂದ್ರ ತೀರ್ಥರು



ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಂ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ॥

# ಶ್ರೀಮತ್ಸುಬುಧೇಂದ್ರತೀರ್ಥರು



ಪ್ರಸ್ತುತ ಪೀಠಾಧಿಪತಿಗಳು

**ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.**

# ಓದುವ ಮುನ್ನ

ಜ್ಞಾನವು ಚೇತನವರ್ಗಕ್ಕೆ ದೇವರು ಕೊಟ್ಟ ದೊಡ್ಡ ವರ. ಮನುಷ್ಯ ವರ್ಗಕ್ಕಂತೂ ವಿಶಿಷ್ಟವಾದ ಪ್ರಜ್ಞಾಶಕ್ತಿ ಇದೆ. ನಮ್ಮ ಪ್ರತಿಯೊಂದು ಚಟುವಟಿಕೆಯ ಮೊದಲ ಹೆಜ್ಜೆ ಜ್ಞಾನ. ಜ್ಞಾನವು ಎಷ್ಟು ಮುಖ್ಯವೋ ಅದರ ಸತ್ಯಾಸತ್ಯತೆಯೂ ಅಷ್ಟೇ ಮುಖ್ಯವಾದುದು. ಸತ್ಯ ಎಂದರೆ ಶಾಸ್ತ್ರೀಯ ಪರಿಭಾಷೆಯಲ್ಲಿ ಪ್ರಮಾಣ. ಅಸತ್ಯವೆಂದರೆ ಅಪ್ರಮಾಣ. ಶ್ರಮಸಾಧ್ಯವಾದ ಅಥವಾ ಬಹಳಷ್ಟು ಆರ್ಥಿಕ ವೆಚ್ಚವಾಗುವ ಕೆಲಸದಲ್ಲಿ ನಾವು ತೊಡಗಬೇಕಾದರೆ ಯೋಚನೆ ಮಾಡಿ ನಿರ್ಧಾರಕ್ಕೆ ಬರುತ್ತೇವೆ. ಹೀಗೆ ಮಾಡಿದರೆ ಹೀಗಾಗುತ್ತದೆ, ಎಂದು ಮತ್ತೊಬ್ಬರು ಹೇಳಿದ ಮಾತ್ರಕ್ಕೆ ನಾವು ಕಾರ್ಯದಲ್ಲಿ ಪ್ರವೃತ್ತರಾಗುವುದಿಲ್ಲ. ಮತ್ತೊಬ್ಬರು ಹೇಳಿದ್ದನ್ನು ಖಾತ್ರಿ ಮಾಡಿಕೊಂಡೇ ಯತ್ನಕ್ಕೆ ಇಳಿಯುತ್ತೇವೆ. ಇದನ್ನೇ ಪ್ರಾಮಾಣ್ಯನಿಶ್ಚಯ ಪ್ರವೃತ್ತಿಹೇತು, ಎಂದು ಶಾಸ್ತ್ರದಲ್ಲಿ ಹೇಳಲಾಗುತ್ತದೆ. ಇದು ಆಚಾರ್ಯರು ಮಾಡಿರುವ ಸಿದ್ಧಾಂತ. ಇದನ್ನು ಸಮರ್ಥನೆ ಮಾಡುವುದಕ್ಕಾಗಿಯೇ ತರ್ಕತಾಂಡವದ ಪ್ರಾಮಾಣ್ಯವಾದಪ್ರಕರಣದಲ್ಲಿ ಒಂದು ವಿಭಾಗವನ್ನು ಮಾಡಲಾಗಿದೆ. ಇತರ ದಾರ್ಶನಿಕರು ಅರ್ಥನಿಶ್ಚಯವು ಪ್ರವೃತ್ತಿ ಹೇತು ಎನ್ನುತ್ತಾರೆ. ಆದರೂ ಎಲ್ಲಾ ದಾರ್ಶನಿಕರಿಗೂ ಜ್ಞಾನಪ್ರಾಮಾಣ್ಯ ನಿರ್ಧಾರ ಅನಿವಾರ್ಯ. ಸ್ವರ್ಗಾದಿಫಲಗಳಿಗೆ, ಕಷ್ಟ–ನಷ್ಟ ಪರಿಹಾರಕ್ಕೆ ವೇದಗಳು ಅನೇಕ ಯಜ್ಞ–ಯಾಗಗಳನ್ನು, ಪ್ರಾಯಶ್ಚಿತ್ತಕರ್ಮಗಳನ್ನು ಹೇಳುತ್ತವೆ. ಅವುಗಳು ಬಹುವಿತ್ತವ್ಯಯ–ಆಯಾಸ ಸಾಧ್ಯಗಳು. ವೇದ ಹೇಳಿದ ಮಾತ್ರಕ್ಕೆ ಅವುಗಳನ್ನು ಮಾಡಲು ಯಾರೂ ಸಿದ್ಧರಾಗುವುದಿಲ್ಲ. ವೇದ ಹೇಳಿದ ಕರ್ಮಗಳನ್ನು ಮಾಡಿದರೆ ನಮ್ಮ ಇಷ್ಟಸಿದ್ಧಿ ಆಗಿಯೇ ತೀರುತ್ತದೆ, ಎಂದು ನಿರ್ಧಾರವಾದರೆ ಮಾತ್ರ ಅಂತಹ ಧಾರ್ಮಿಕಕಾರ್ಯಗಳನ್ನು ಮಾಡಲು ನಾವು ಸಿದ್ಧರಾಗುತ್ತೇವೆ. ಆದ್ದರಿಂದ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವು ಅನಿವಾರ್ಯವಾದುದು.

ಭಾರತೀಯ ದಾರ್ಶನಿಕರಲ್ಲಿ ಪ್ರಾಮಾಣ್ಯ-ಅಪ್ರಾಮಾಣ್ಯಗಳ ನಿರ್ಧಾರದ ಬಗ್ಗೆ ಆಳವಾದ ಚರ್ಚೆಯಿದೆ. ನಮಗೆ ಬಂದಿರುವ ಜ್ಞಾನಗಳಲ್ಲಿ ಸಾಮಾನ್ಯತಃ ಪ್ರಾಮಾಣ್ಯವೂ ಇದ್ದೇ ಇರುತ್ತದೆ. ಬಾಧಕಗಳಿದ್ದಾಗ ಕೆಲವೊಮ್ಮೆ ಅದು ಅಪ್ರಮಾಣವಾಗುತ್ತದೆ, ಎಂದು ಒಂದು ಸಿದ್ಧಾಂತ. ಈ ಸಿದ್ಧಾಂತದಲ್ಲಿ ಜ್ಞಾನಕ್ಕೆ ಕಾರಣವಾದ ಇಂದ್ರಿಯಾದಿಗಳೇ ಪ್ರಾಮಾಣ್ಯಕ್ಕೂ ಕಾರಣ. ಅವುಗಳಲ್ಲಿ ದೋಷವಿದ್ದಾಗ ಮಾತ್ರ ಹುಟ್ಟಿದ ಜ್ಞಾನವು ಅಪ್ರಮಾಣವಾಗುತ್ತದೆ. ಈ ಸಿದ್ಧಾಂತವನ್ನು ಪ್ರಾಮಾಣ್ಯಂ ಉತ್ಪತ್ತೌ ಸ್ವತಸ್ತ್ವವಾದ ಎಂದು ಕರೆಯಲಾಗುವುದು. ಇದರಂತೆ, ನಮಗೆ ಯಾವುದೇ ಜ್ಞಾನ ಬರಲಿ ಆ ಜ್ಞಾನವು ಬಂದಿದೆ ಎಂದು ನಮ್ಮ ತಿಳುವಳಿಕೆಗೆ ಬಂದೇ ತೀರುತ್ತದೆ. ಜ್ಞಾನ ಬಂದರೂ ನಮಗೆ ಗೊತ್ತಾಗಲಿಲ್ಲ, ಎನ್ನುವ ಸಂದರ್ಭ ಇಲ್ಲ. ಹೀಗೆ ಜ್ಞಾನದ ಜ್ಞಾನ ಬಂದಾಗ ಸಹಜವಾಗಿ ಅದು ಪ್ರಮಾಣವೆಂದೂ ತಿಳಿಯುತ್ತದೆ. ಜ್ಞಾನದಜ್ಞಾನ ಬಂದ ಮೇಲೆ ಅದರ ಪ್ರಾಮಾಣ್ಯದ ಜ್ಞಾನಕ್ಕೆ ಮತ್ತೆ ಪ್ರತ್ಯೇಕವಾದ ಕಾರಣದ ಅಪೇಕ್ಷೆ ಇಲ್ಲ. ನೀರನ್ನು ಕಣ್ಣಿನಿಂದ ನೋಡಿದಾಗ ಅದು ಬಿಸಿ ಇದೆಯೋ, ತಣ್ಣಗಿದೆಯೋ ಗೊತ್ತಾಗುವುದಿಲ್ಲ. ಮುಟ್ಟಿನೋಡಿದರೆ ಮಾತ್ರ ಅದು ತಿಳಿಯುತ್ತದೆ. ಇದರಂತೆ ಜ್ಞಾನದ ತಿಳುವಳಿಕೆ ಬಂದ ಮೇಲೆ ಅದರ ಪ್ರಾಮಾಣ್ಯದ ತಿಳುವಳಿಕೆಗೆ ಮತ್ತೊಂದು ಕಾರಣದ ಅಗತ್ಯವಿಲ್ಲ. ಜ್ಞಾನದ ಜ್ಞಾನವೇ ಜ್ಞಾನಗತವಾದ ಪ್ರಾಮಾಣ್ಯವನ್ನೂ ತಿಳಿಸುತ್ತದೆ. ಇದನ್ನು ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವ ಎನ್ನಲಾಗುತ್ತದೆ. ಇದಕ್ಕೆ ವಿರುದ್ಧವಾದ ವಾದ ಪ್ರಾಮಾಣ್ಯ ಪರತಸ್ತ್ವ. ಭ್ರಮಾತ್ಮಕ ಜ್ಞಾನಕ್ಕೆ ದೋಷವು ಕಾರಣ, ಪ್ರಮಾತ್ಮಕ ಜ್ಞಾನಕ್ಕೆ ಗುಣವು ಕಾರಣ ಎಂದು ಪರತಸ್ತ್ವ ಸಿದ್ಧಾಂತ. ಜ್ಞಾನಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳಲ್ಲಿ ಸ್ವತಸ್ತ್ವ-ಪರತಸ್ತ್ವಗಳ ಬಗ್ಗೆ ಎಷ್ಟು ಸಂಭಾವ್ಯತೆಗಳಿವೆಯೋ ಅಷ್ಟೂ ವಿಕಲ್ಪಗಳು ಭಾರತೀಯ ವಿಭಿನ್ನ ದರ್ಶನಗಳಲ್ಲಿವೆ—

1. ಪ್ರಾಮಾಣ್ಯ-ಅಪ್ರಾಮಾಣ್ಯ ಎರಡೂ ಸ್ವತಃ-ಸಾಂಖ್ಯಸಿದ್ಧಾಂತ.

2. ಪ್ರಾಮಾಣ್ಯ-ಅಪ್ರಾಮಾಣ್ಯ ಎರಡೂ ಪರತಃ-ವೈಶೇಷಿಕ ಸಿದ್ಧಾಂತ.

3. ಪ್ರಾಮಾಣ್ಯಂ ಸ್ವತಃ, ಅಪ್ರಾಮಾಣ್ಯಂ ಪರತಃ-ವೇದಾಂತಿಗಳು, ಮೀಮಾಂಸಕರು.

4. ಅಪ್ರಾಮಾಣ್ಯಂ ಸ್ವತಃ, ಪ್ರಾಮಾಣ್ಯಂ ಪರತಃ-ಬೌದ್ಧಸಿದ್ಧಾಂತ.

ಈ ಒಂದೊಂದೂ ಸಿದ್ಧಾಂತದ ವಾದ ಹೀಗಿದೆ—

**1. ಸಾಂಖ್ಯವಾದ**—ಸಾಂಖ್ಯಸಿದ್ಧಾಂತದ ಕುರಿತಾದ ಗ್ರಂಥಗಳು ಅತ್ಯಲ್ಪ. ಆದ್ದರಿಂದ ಪ್ರಾಮಾಣ್ಯವಾದದ ಬಗ್ಗೆ ಹೆಚ್ಚಿನ ವಿವರ ಸಿಗುವುದಿಲ್ಲ. ಅವರು ಹೇಳುವ ಪ್ರಾಮಾಣ್ಯದ ಉತ್ಪತ್ತೌಸ್ವತಸ್ತ್ವಕ್ಕೆ ಹೀಗೆ ಕಾರಣವನ್ನು ಊಹಿಸಬಹುದು-ಸಾಂಖ್ಯರು ಸತ್ಕಾರ್ಯವಾದಿಗಳು. ತಿಲದಲ್ಲಿ ತೈಲದಂತೆ ಉಪಾದಾನಕಾರಣದಲ್ಲಿ ಇದ್ದ ಕಾರ್ಯವೇ ಕಾರಣಸಾಮಗ್ರಿಗಳಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಜ್ಞಾನ ಮತ್ತು ಕರಣಗಳಲ್ಲಿ ಮೊದಲೇ ಇದ್ದ ಪ್ರಾಮಾಣ್ಯವು ತತ್ತತ್ಕಾರಣಗಳಿಂದ ವ್ಯಕ್ತವಾಗುತ್ತದೆ. ಈ ವಿಷಯವು ಮೀಮಾಂಸಕರು ಹೇಳಿರುವ ಒಂದು

ವಾಕ್ಯದಿಂದ ತಿಳಿಯುತ್ತದೆ– 'ನ ವಯಂ ಸತ್ಕಾರ್ಯವಾದ–ಸಮಾಶ್ರಯಣಾತ್ ಸ್ವತಃಪ್ರಾಮಾಣ್ಯ ವಾದಿನಃ'. ಹೀಗಾಗಿ ಜ್ಞಾನಕಾರಣ ಗಳಿಂದಲೇ ಜ್ಞಾನಗತಪ್ರಾಮಾಣ್ಯವೂ ಹುಟ್ಟುತ್ತದೆ. ಅದರಂತೆ, ಜ್ಞಾನಗ್ರಾಹಕವಾದ ಮನಸ್ಸೇ ತದ್ಗತ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳನ್ನು ತಿಳಿಸುತ್ತದೆ. ಹೀಗೆ ಪ್ರಾಮಾಣ್ಯಾಪ್ರಾಮಾಣ್ಯಗಳೆರಡೂ ಸ್ವತಃ. ಇದು ಸಾಂಖ್ಯದರ್ಶನದ ವಾದ.

2. **ನ್ಯಾಯವೈಶೇಷಿಕದರ್ಶನ**—ನ್ಯಾಯದರ್ಶನ ಅಕ್ಷಪಾದೋಪಜ್ಞ. ಅಕ್ಷಪಾದನು ನ್ಯಾಯಸೂತ್ರದಲ್ಲಿ—'ಮಂತ್ರಾಯುರ್ವೇದ–ಪ್ರಾಮಾಣ್ಯವಚ್ಚ ತತ್‌ಪ್ರಾಮಾಮಾಣ್ಯಮ್ ಆಪ್ತಪ್ರಾಮಾಣ್ಯಾತ್' (2-1-68) ಆಪ್ತಪ್ರಾಮಾಣ್ಯನಿಮಿತ್ತವಾಗಿ ವೇದಪ್ರಾಮಾಣ್ಯ ಎಂದು ಪ್ರಾಮಾಣ್ಯಕ್ಕೆ ಉತ್ಪತ್ತೌಪರತಸತ್ತ್ವವನ್ನು ಹೇಳಿದ್ದಾನೆ. ನ್ಯಾಯಭಾಷ್ಯದಲ್ಲೂ—

''ಪ್ರಮಾಣತೋ ಅರ್ಥಪ್ರತಿಪತ್ತೌ ಪ್ರವೃತ್ತಿಸಾಮರ್ಥ್ಯಾತ್ ಅರ್ಥವತ್ ಪ್ರಮಾಣಮ್''

ಎಂದಿದೆ. ಇಲ್ಲಿ ಪ್ರವೃತ್ತಿಸಾಮರ್ಥ್ಯ ಎಂದರೆ ಸಫಲಪ್ರವೃತ್ತಿಜನಕತ್ವ. ಅದರಿಂದಾಗಿ ಜ್ಞಾನದ ಪ್ರಾಮಾಣ್ಯವನ್ನು ಅನುಮಾನ ಮಾಡಬೇಕು, ಎಂದು ಭಾಷ್ಯದ ಅಭಿಪ್ರಾಯ. ನಮಗೆ ಬಂದ ಜ್ಞಾನದಿಂದ ಪ್ರವೃತ್ತಿ ಉಂಟಾಗುತ್ತದೆ. ಪ್ರವೃತ್ತಿ ಮಾಡಿದಾಗ ಅಪೇಕ್ಷಿತವಾದ ವಸ್ತು ದೊರಕಿದರೆ ಆ ಪ್ರವೃತ್ತಿ ಸಫಲವಾದಂತೆ. ಸಫಲವಾದರೆ ಪ್ರವೃತ್ತಿಗೆ ಕಾರಣವಾದ ಜ್ಞಾನವು ಪ್ರಮಾಣ. ವಿಫಲವಾದರೆ ಜ್ಞಾನವು ಅಪ್ರಮಾಣ. ಹೀಗೆ, ಮನಸ್ಸು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಜ್ಞಾನಕ್ಕೆ ವಿಷಯವಾದ ವಸ್ತು ಸತ್ಯವಾಗಿದೆ ಅಥವಾ, ಅಸತ್ಯವಾಗಿದೆ, ಎಂದು ನಿರ್ಧರಿಸುವ ಸಾಮರ್ಥ್ಯ ಅದಕ್ಕಿಲ್ಲ. ಏಕೆಂದರೆ, ಜ್ಞಾನವು ಗ್ರಹಿಸಿರುವ ವಸ್ತುಗಳು ಬಾಹ್ಯವಾಗಿವೆ. ಮನಸ್ಸು ಆಂತರ ಇಂದ್ರಿಯ. ಅದಕ್ಕೆ ಬಾಹ್ಯವಸ್ತುಗಳನ್ನು ಗ್ರಹಿಸುವ ಸಾಮರ್ಥ್ಯವೇ ಇಲ್ಲ. ಅದು 'ಜ್ಞಾನವು ಇಲ್ಲಿ ಆ ವಸ್ತು ಇದೆ ಎಂದು ಹೇಳುತ್ತದೆ' ಎಂದಿಷ್ಟೇ ಆತ್ಮನಿಗೆ ಸಂದೇಶ ಕೊಡುತ್ತದೆ. ಆ ವಸ್ತು ಇದೆ ಅಥವಾ ಇಲ್ಲ ಎಂಬ ವಿಷಯದಲ್ಲಿ ಅದು ತಟಸ್ಥವಾಗಿರುತ್ತದೆ. ಅದು ನಿರ್ಧಾರವಾಗುವುದು ಪ್ರವೃತ್ತಿಯಿಂದ. ಹೀಗೆ ಜ್ಞಾನ ಮನೋಗ್ರಾಹ್ಯ, ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಇವೆರಡು ಪ್ರವೃತ್ತಿಹೇತುಕವಾದ ಅನುಮಾನದಿಂದ ಗ್ರಾಹ್ಯ. ಹೀಗೆ, ಪ್ರಾಮಾಣ್ಯಂ ಜ್ಞಪ್ತೌ ಪರತಃ.

ಇದರಂತೆ, ಸೂತ್ರ ಹೇಳಿದಂತೆ ಪ್ರಾಮಾಣ್ಯಂ ಉತ್ಪತ್ತೌ ಪರತಃ, ಜ್ಞಾನ ಎರಡು ವಿಧ. ಪ್ರಮಾ, ಅಪ್ರಮಾ ಎಂದು. ಇವೆರಡಕ್ಕೂ ಕಾರಣವಾದುದು ಆತ್ಮಮನಃಸಂಯೋಗಾದಿಗಳು. ಅವುಗಳ ಜೊತೆಯಲ್ಲಿ ಗುಣವು ಸೇರಿದರೆ ಜ್ಞಾನವು ಪ್ರಮಾ ಆಗುತ್ತದೆ, ದೋಷ ಸೇರಿದರೆ ಅಪ್ರಮಾ ಆಗುತ್ತದೆ. ಹೀಗೆ ಪ್ರಾಮಾಣ್ಯಾಪ್ರಾಮಾಣ್ಯಗಳೆರಡೂ ಉತ್ಪತ್ತೌ ಪರತಃ.

ಸೂತ್ರ–ಭಾಷ್ಯಕಾರರ ಅನಂತರ ಬಂದ ಪ್ರಾಚೀನ–ನವೀನನ್ಯಾಯಗಳ ಮಧ್ಯದಲ್ಲಿದ್ದ ಉದಯನಾಚಾರ್ಯರೂ ಪ್ರಾಮಾಣ್ಯಪರತಸ್ತ್ವವನ್ನು ಸಮರ್ಥನೆ ಮಾಡಿದ್ದಾರೆ. ನವೀನ ನ್ಯಾಯ ಪ್ರವರ್ತಕರಾದ ಗಂಗೇಶೋಪಾಧ್ಯಾಯರು ಮಣಿಗ್ರಂಥದ ಪ್ರತ್ಯಕ್ಷಖಂಡದಲ್ಲಿ ಈ ಬಗ್ಗೆ ವಿಸ್ತೃತವಾದ ವಿವೇಚನೆಯನ್ನು ನಡೆಸಿದ್ದಾರೆ. ಅವರಿಗೆ ಮೀಮಾಂಸಕರೇ ಪೂರ್ವಪಕ್ಷಿಗಳು. ಭಾಟ್ಟ–ಪ್ರಾಭಾಕರ–

ಮಿಶ್ರ ಹೀಗೆ ಮೂವರು ಮೀಮಾಂಸಕರು ಸ್ಥಾಪಿಸಿರುವ ಪ್ರಾಮಾಣ್ಯಸ್ವತಸ್ತ್ವದ ವಿಭಿನ್ನರೀತಿಗಳನ್ನು ಮಣಿಗ್ರಂಥದಲ್ಲಿ ನಿರಾಕರಿಸಿ ಪ್ರಾಮಾಣ್ಯವು ಉತ್ಪತ್ತೌ ಮತ್ತು ಜ್ಞಪ್ತೌ ಪರತಃ ಎಂದು ಸಮರ್ಥಿಸಲಾಗಿದೆ.

3. **ವೇದಾಂತಿಮತ**—ವೇದಾಪೌರುಷೇಯತ್ವವನ್ನು ಅಂಗೀಕರಿಸುವ ಮೀಮಾಂಸಕರು ಮತ್ತು ದ್ವೈತಾದ್ವೈತವಿಶಿಷ್ಟಾದ್ವೈತವೇದಾಂತಿಗಳೆಲ್ಲರೂ ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುತ್ತಾರೆ. ಶಬ್ದದಲ್ಲಿ ಪ್ರಾಮಾಣ್ಯಕ್ಕೆ ನಿಮಿತ್ತ ಅಪೌರುಷೇಯತ್ವ. ವೇದದಲ್ಲಿ ಅಪೌರುಷೇಯತ್ವ ಇಲ್ಲ. ಅದರ ಪ್ರಾಮಾಣ್ಯವನ್ನು ಕೊಡಿಸುವುದಕ್ಕಾಗಿ ಪ್ರಾಮಾಣ್ಯಕ್ಕೆ ಪ್ರತ್ಯೇಕವಾದ ಒಂದು ನಿಮಿತ್ತಬೇಕಾಗಿಲ್ಲ, ಅದು ಸ್ವತಃ ಎಂದು ಅಂಗೀಕರಿಸಲಾಗಿದೆ. ಸ್ವತಃ ಎಂದರೆ ಉತ್ಪತ್ತಿಯೂ ಸ್ವತಃ, ಜ್ಞಪ್ತಿಯೂ ಸ್ವತಃ. ಉತ್ಪತ್ತಿಯ ಸ್ವತಸ್ತ್ವವು ಎರಡು ವಿಧವಾಗಿ ನಿರೂಪಿಸಲ್ಪಟ್ಟಿದೆ.

1. ಕಾರ್ಯಕಾರಣಾದೇವ ಕಾರ್ಯೇಣ ಸಹ ಉತ್ಪತ್ತಿಃ ।

2. ಜ್ಞಾನಜನಕಶಕ್ತ್ಯೈವ ಪ್ರಾಮಾಣ್ಯಜನಕತ್ವಮ್ ।

ಜ್ಞಾನಕ್ಕೆ ಎಷ್ಟು ಕಾರಣಗಳು ಬೇಕೋ ಅಷ್ಟೇ ಕಾರಣಗಳಿಂದ ಜ್ಞಾನದಲ್ಲಿ ಪ್ರಾಮಾಣ್ಯವೂ ಹುಟ್ಟುತ್ತದೆ. ಪ್ರಾಮಾಣ್ಯದ ಉತ್ಪತ್ತಿಗಾಗಿ ಆಗಂತುಕ ಕಾರಣದ ಅಪೇಕ್ಷೆ ಇಲ್ಲ. ಪರತಸ್ತ್ವವಾದಿಗಳಾದ ನೈಯಾಯಿಕರು ಆತ್ಮಮನಃಸಂಯೋಗ, ಮನಇಂದ್ರಿಯಸಂಯೋಗ, ಇಂದ್ರಿಯಾರ್ಥಸಂಯೋಗ, ಆಲೋಕ, ಮಹತ್ವೇ ಸತಿ ಉದ್ಭೂತರೂಪ ಇತ್ಯಾದಿಗಳು ಚಕ್ಷುರಿಂದ್ರಿಯದಿಂದ ದ್ರವ್ಯಪ್ರತ್ಯಕ್ಷಕ್ಕೆ ಕಾರಣ. ಆದರೆ ಇವಿಷ್ಟು ಮಾತ್ರ ಇದ್ದರೆ ಹುಟ್ಟಿದ ಜ್ಞಾನವು ಪ್ರಮಾಣವಾಗುವುದಿಲ್ಲ. ದ್ರವ್ಯದ ಭೂಯೋಽವಯವಗಳೊಂದಿಗೆ ಇಂದ್ರಿಯಸಂಯೋಗವು ಪ್ರಾಮಾಣ್ಯಕ್ಕೆ ಕಾರಣ, ಎನ್ನುತ್ತಾರೆ. ಹೀಗಿದ್ದರೆ ಪ್ರಾಮಾಣ್ಯವು ಪರತಃ. ಆದರೆ, ಚಕ್ಷುರಿಂದ್ರಿಯ ನಿರ್ಮಲವಾಗಿರಬೇಕು, ಧಾತುಗಳು ಸಮಸ್ಥಿತಿಯಲ್ಲಿರಬೇಕು, ಮನಸ್ಸು ಸ್ವಸ್ಥವಾಗಿರಬೇಕು. ಈ ನಿಬಂಧನೆಗಳಿದ್ದಾಗ ಮಾತ್ರ ಹುಟ್ಟಿದ ಜ್ಞಾನವು ಪ್ರಮಾಣವಾಗುತ್ತದೆ. ಇವುಗಳಲ್ಲಿ ವ್ಯತ್ಯಾಸವಾದರೆ ಜ್ಞಾನವು ಬರುತ್ತದೆ, ಜ್ಞಾನದಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಅಂದಮಾತ್ರಕ್ಕೆ ಪ್ರಾಮಾಣ್ಯವು ಪರತಃ ಎಂದಾಗುವುದಿಲ್ಲ. ಇಂತಹ ಗುಣಗಳು ಚಕ್ಷುರಿಂದ್ರಿಯದಲ್ಲಿ ಇರುವುದು ಸ್ವಾಭಾವಿಕ. ಅವುಗಳು ಇಲ್ಲದಿರಬೇಕಾದರೆ ಏನಾದರೊಂದು ದೋಷಗಳು ಇರಬೇಕು. ಆಗ ಹುಟ್ಟಿದ ಜ್ಞಾನವು ಪ್ರಮಾಣ ಆಗುವ ಬದಲು, ಅಪ್ರಮಾಣವಾಗುತ್ತದೆ. ಹೀಗೆ, ಆಗಂತುಕವಾದ ದೋಷಜನ್ಯವಾದುದರಿಂದ ಅಪ್ರಾಮಾಣ್ಯಂ ಪರತಃ. ಇದು ತಾರ್ಕಿಕರ ವಾದ. ಆದರೆ, ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವಲ್ಲ. ಇದಕ್ಕೆ ದ್ವೈತದರ್ಶನದಲ್ಲಿ ವೇತ್ರಬೀಜವನ್ನು ಉದಾಹರಣೆಯನ್ನಾಗಿ ಕೊಡಲಾಗಿದೆ. ವೇತ್ರಬೀಜವು ತನ್ನ ಸಹಜಶಕ್ತಿಯಿಂದ ವೇತ್ರಾಂಕುರವನ್ನು ಹುಟ್ಟಿಸುತ್ತದೆ. ದಾವದಗ್ಧವಾದಾಗ ಅದು ಕದಲೀಕಾಂಡಕ್ಕೆ ಕಾರಣವಾಗುತ್ತದೆ. ಅಂದಮಾತ್ರಕ್ಕೆ ದಾವದಹನಾಭಾವವೂ ವೇತ್ರಬೀಜಕ್ಕೆ ಕಾರಣವಲ್ಲ. ಅದರಂತೆ, ದೋಷಾಭಾವವು ಪ್ರಾಮಾಣ್ಯಕ್ಕೆ ಜನಕವಲ್ಲ. ಪ್ರಾಮಾಣ್ಯಂ ಸ್ವತಃ. ಇದು ದ್ವೈತದರ್ಶನದ ವಾದ.

2. ಎರಡನೆಯದು, ಕರಣಗತಶಕ್ತಿಯು ಸಹಜವಾಗಿದೆ, ಎಂದು. ಕರಣಗಳಲ್ಲಿ ಅಪ್ರಾಮಾಣ್ಯ ಜನನಶಕ್ತಿಯು ದೋಷಪ್ರಯುಕ್ತವಾಗಿ ಬರುತ್ತದೆ. ಅದರಂತೆ ಪ್ರಾಮಾಣ್ಯಜನನಶಕ್ತಿಯಲ್ಲ. ಜ್ಞಾನಜನನಶಕ್ತಿಯಂತೆಯೇ ಅದೂ ಸಹಜವಾದುದು. ಇದು ಯೋಗ್ಯತಾಘಟಿತವಾದ ಪ್ರಾಮಾಣ್ಯಸ್ವತಸ್ತ್ವ.

ಹೀಗೆ ಶಕ್ತಿಯನ್ನು ಅಂಗೀಕರಿಸಿದಾಗ ಒಂದು ಅನುಪಪತ್ತಿ ಇದೆ. ಕರಣಗಳಲ್ಲಿ ದೋಷಗಳಿದ್ದಾಗ ಜ್ಞಾನವು ಹುಟ್ಟುತ್ತದೆ. ಜ್ಞಾನದಲ್ಲಿ ಪ್ರಾಮಾಣ್ಯವು ಹುಟ್ಟುವುದಿಲ್ಲ. ಪ್ರಾಮಾಣ್ಯಜನನಶಕ್ತಿಯು ದೋಷದಿಂದ ಪ್ರತಿಬದ್ಧವಾಗುತ್ತದೆ. ಆದರೆ, ಉಭಯ ಜನನಶಕ್ತಿಯೂ ಒಂದೇ ಆದಲ್ಲಿ ದೋಷದಿಂದ ಪ್ರಾಮಾಣ್ಯಜನನ ಶಕ್ತಿಯು ಪ್ರತಿಬದ್ಧವಾದರೆ ಜ್ಞಾನವೂ ಹುಟ್ಟಬಾರದು. ಜ್ಞಾನವಾದರೂ ಹೇಗೆ ಹುಟ್ಟಿತು?

ಇದಕ್ಕೆ ಎರಡು ಪರಿಹಾರಗಳನ್ನು ತರ್ಕತಾಂಡವದಲ್ಲಿ ಕೊಡಲಾಗಿದೆ. ಮೊದಲನೆಯದು ಶಕ್ತಿಭೇದವಾದ. ಕರಣದಲ್ಲಿ ಜ್ಞಾನಜನನಶಕ್ತಿ ಮತ್ತು ಜ್ಞಾನಗತ ಪ್ರಾಮಾಣ್ಯಜನನಶಕ್ತಿ, ಹೀಗೆ ಎರಡು ಶಕ್ತಿಗಳಿವೆ. ದೋಷಗಳಿಂದ ಪ್ರಾಮಾಣ್ಯಜನನಶಕ್ತಿಯು ಪ್ರತಿಬದ್ಧವಾದರೂ ಜ್ಞಾನಜನನಶಕ್ತಿಯು ಪ್ರತಿಬದ್ಧವಾಗುವುದಿಲ್ಲ. ಆದರಿಂದಾಗಿ, ಜ್ಞಾನಹುಟ್ಟಿದರೂ ಜ್ಞಾನದಲ್ಲಿ ಪ್ರಾಮಾಣ್ಯವು ಹುಟ್ಟುವುದಿಲ್ಲ. ಈ ಪಕ್ಷದಲ್ಲಿ ಪ್ರಾಮಾಣ್ಯಕ್ಕೆ ಉತ್ಪತ್ತೌ ಸ್ವತಸ್ತ್ವ ಎಂದರೆ, ಪ್ರಾಮಾಣ್ಯಜನನಶಕ್ತಿಯು ಕರಣದಲ್ಲಿ ಸ್ವಾಭಾವಿಕ, ಆಗಂತುಕವಲ್ಲ, ಎಂದು.

ಎರಡನೆಯದು, ಶಕ್ತಿ ಒಂದೇ ಎಂಬ ವಾದ. ಇಂದ್ರಿಯಾದಿಗಳಲ್ಲಿ ಜ್ಞಾನಜನನಶಕ್ತಿ ಮತ್ತು ಪ್ರಾಮಾಣ್ಯಜನನಶಕ್ತಿ ಈ ಎರಡಕ್ಕೂ ಭೇದವಿಲ್ಲ. ದೋಷವು ಆ ಶಕ್ತಿಯ ಜ್ಞಾನಜನಕತ್ವಾಂಶಕ್ಕೆ ಪ್ರತಿಬಂಧಕವಾಗುವುದಿಲ್ಲ, ಪ್ರಾಮಾಣ್ಯಜನಕತ್ವಾಂಶಕ್ಕೆ ಮಾತ್ರ ಪ್ರತಿಬಂಧಕ. ಚಂದ್ರಕಾಂತ ಮಣಿಯು ಬೆಂಕಿಯಲ್ಲಿ ಇರುವ ಶಕ್ತಿಯ ದಾಹಜನಕತ್ವಾಂಶಕ್ಕೆ ಪ್ರತಿಬಂಧಕ ಪ್ರಕಾಶಕತ್ವಾಂಶಕ್ಕೆ ಅಲ್ಲ. ಅಥವಾ, ಇವನಿಗೆ ಮಾತ್ರ ಬೆಂಕಿ ಸುಡದಿರಲಿ, ಎಂದು ಸಂಕಲ್ಪ ಮಾಡಿ ಮಂತ್ರವನ್ನು ಪಠಿಸಿದರೆ ಬೆಂಕಿಯ ದಾಹಶಕ್ತಿಯು ಒಬ್ಬನಿಗೆ ಮಾತ್ರ ಸುಡದೆ ಉಳಿದವರಿಗೆ ಸುಡುತ್ತದೆ. ಹೀಗೆ ಒಂದೇ ಶಕ್ತಿಯು ಅಂಶಭೇದೇನ ಪ್ರತಿಬದ್ಧ-ಅಪ್ರತಿಬದ್ಧವಾಗಬಹುದು.

ಈ ಪ್ರಾಮಾಣ್ಯಸ್ವತಸ್ತ್ವ ಪಕ್ಷಕ್ಕೆ ನೈಯಾಯಿಕರು ಹೇಳುವ ಮುಖ್ಯಬಾಧಕ-ಜ್ಞಾನವು ಗೃಹೀತವಾದಾಗ ಪ್ರಾಮಾಣ್ಯವೂ ಗೃಹೀತವಾದರೆ ಕೆಲವೊಮ್ಮೆ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುವುದು ಹೇಗೆ? ಎಂದು. ಈ ಆಕ್ಷೇಪಕ್ಕೆ ಈಗ ಸಮಾಧಾನ ಸಿಕ್ಕಿದಂತಾಗಿದೆ. ಹಿಂದೆ ಹೇಳಿದಂತೆ, ದೋಷಗಳಿದ್ದಾಗ ಮನಸ್ಸು ಜ್ಞಾನವನ್ನು ಮಾತ್ರ ಗ್ರಹಿಸಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯದ ಬಗ್ಗೆ ಸಂದೇಹ ಬರುತ್ತದೆ. ಹೀಗೆ ಸ್ವತಸ್ತ್ವದ ಬಗ್ಗೆ ಬರುವ ಆಕ್ಷೇಪಕ್ಕೆ ಸೂಕ್ತ ಪರಿಹಾರ ಇದೆ. ಆದರೆ, ಪರತಸ್ತ್ವದ ಬಗ್ಗೆ ಮಾಡಲಾಗುವ ಆಕ್ಷೇಪಕ್ಕೆ ಈ ರೀತಿಯ ಸಮಾಧಾನ ಇಲ್ಲ. ಪರತಸ್ತ್ವವಾದದಲ್ಲಿ ಅನವಸ್ಥಾದೋಷವಿದೆ. ಜನ್ಯಜ್ಞಾನದ ಪ್ರಾಮಾಣ್ಯವನ್ನು ಅನುಮಿತಿ

ಗ್ರಹಿಸುತ್ತದೆ. ಅನುಮಿತಿಯ ಪ್ರಾಮಾಣ್ಯಗ್ರಹಣೆಗೆ ಮತ್ತೊಂದು ಜ್ಞಾನ. ಹೀಗೆ ಅನವಸ್ಥಾದೋಷ. ಇದಕ್ಕೆ ಪ್ರಾಚೀನ ನೈಯಾಯಿಕರು (ವಾಚಸ್ಪತಿ ಮಿಶ್ರರು) ಹೀಗೆ ಸಮಾಧಾನ ಹೇಳುತ್ತಾರೆ—ಪ್ರತ್ಯಕ್ಷ ಪ್ರಾಮಾಣ್ಯವನ್ನು ಸಫಲಪ್ರವೃತ್ತಿಜನಕತ್ವ ಎಂಬ ಹೇತುಜನ್ಯವಾದ ಅನುಮಿತಿಯು ಗ್ರಹಿಸುತ್ತದೆ. ಅನುಮಿತೌ ಪ್ರಾಮಾಣ್ಯಂ ಸ್ವತಃ. ಅದರ ಪ್ರಾಮಾಣ್ಯಗ್ರಹಣೆಗೆ ಗ್ರಾಹಕಾಂತರವು ಬೇಡ. ಇದರಿಂದ ಅನವಸ್ಥಾ ಪರಿಹಾರವಾಗುತ್ತದೆ. ಆದರೆ, ಹೀಗೆ ಅನವಸ್ಥಾಪರಿಹಾರಕ್ಕಾಗಿ ಅನುಮಿತಿಯಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುವುದಾದಲ್ಲಿ ಪ್ರತ್ಯಕ್ಷವು ಏನು ಅಪರಾಧ ಮಾಡಿದೆ? ಅಲ್ಲೂ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸಬಹುದು.

ಮಣಿಕಾರ—ಅವಶ್ಯವೇದ್ಯತ್ವಾಭಾವಾತ್ ನಾನವಸ್ಥಾ–ಎಂದಿರುತ್ತಾನೆ. ಜಲಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬಂದಾಗ ಸಫಲಪ್ರವೃತ್ತಿಜನಕತ್ವಾನುಮಿತಿಯಿಂದ ಪ್ರಾಮಾಣ್ಯನಿಶ್ಚಯವಾಗುತ್ತದೆ. ಆ ಪ್ರಾಮಾಣ್ಯಾನುಮಿತಿಯಲ್ಲಿ ಪ್ರಾಮಾಣ್ಯಜಿಜ್ಞಾಸೆಯೇ ಬರುವುದಿಲ್ಲ. ಆ ಪ್ರಾಮಾಣ್ಯದ ಜ್ಞಾನವೇ ಬರುವುದಿಲ್ಲ. ಹೀಗಾಗಿ, ಅದು ಅಜ್ಞಾಯಮಾನವಾಗಿಯೇ ಉಳಿಯುತ್ತದೆ. ಆದ್ದರಿಂದ ಅನವಸ್ಥಾ ಇಲ್ಲ, ಎಂದು. ಆದರೆ, ಇದೂ ಸರಿಯಲ್ಲ. ಯಾವುದೇ ಜ್ಞಾನ ಬಂದರೂ ಅದು ತಿಳಿಯದೇ ಇರುವುದಿಲ್ಲ. ಜ್ಞಾನವು ಅವಶ್ಯವೇದ್ಯ. ಜ್ಞಾನದ ಜ್ಞಾನ ಬಂದು ಅದರಲ್ಲಿ ಪ್ರಾಮಾಣ್ಯವು ತಿಳಿಯದಿದ್ದಲ್ಲಿ ಪ್ರಾಮಾಣ್ಯದ ಬಗ್ಗೆ ಸಂದೇಹವು ಬಂದೇ ತೀರುತ್ತದೆ. ಆದ್ದರಿಂದ ಪ್ರಾಮಾಣ್ಯವು ಪರತೋ ಗ್ರಾಹ್ಯವಾದರೆ ಅನವಸ್ಥಾದೋಷವು ಅನಿವಾರ್ಯವಾಗುತ್ತದೆ. ಇದಕ್ಕೆ ಮನ ಒಪ್ಪುವ ಪರಿಹಾರ ನ್ಯಾಯದರ್ಶನದಲ್ಲಿ ಇಲ್ಲ.

ದ್ವೈತದರ್ಶನದಲ್ಲಿ ಅನವಸ್ಥಾದೋಷವನ್ನು ಹೀಗೆ ಪರಿಹಾರ ಮಾಡಲಾಗುತ್ತದೆ. ಜ್ಞಾನವು ಸಾಕ್ಷಿಗ್ರಾಹ್ಯ. ಸಾಕ್ಷಿ ಸ್ವಪ್ರಕಾಶ. ಅದರ ಸ್ವರೂಪದ ಜ್ಞಾನಕ್ಕಾಗಲೀ ಅದರಲ್ಲಿರುವ ಪ್ರಾಮಾಣ್ಯದ ಜ್ಞಾನಕ್ಕಾಗಲೀ ಮತ್ತೊಂದು ಪ್ರಮಾಣದ ಅಗತ್ಯವಿಲ್ಲ. ಆದ್ದರಿಂದ ಅನವಸ್ಥಾದೋಷವಿಲ್ಲ.

**ಅದ್ವೈತದರ್ಶನದಲ್ಲಿ** ಪ್ರಾಮಾಣ್ಯವು ಉತ್ಪತ್ತೌ ಜ್ಞಪ್ತೌ ಚ ಸ್ವತಃ ಆದರೂ ಅದಕ್ಕೆ ದೋಷಾಭಾವದ ಸಹಕಾರಬೇಕು. ದ್ವೈತದರ್ಶನದಲ್ಲಿ ದೋಷವು ಪ್ರತಿಬಂಧಕ. ಪ್ರತಿಬಂಧಕಾಭಾವವು ಕಾರ್ಯಹೇತುವಲ್ಲ. ಆದ್ದರಿಂದ ಜ್ಞಾನಕಾರಣಾತಿರಿಕ್ತಾನಪೇಕ್ಷತ್ವವು ದ್ವೈತದರ್ಶನದಲ್ಲಿ ಉತ್ಪತ್ತೌ ಸ್ವತಸ್ತ್ವವಾದರೆ ಅದ್ವೈತದರ್ಶನದಲ್ಲಿ, ದೋಷಾಭಾವಸಹಕೃತ–ಜ್ಞಾನ–ಸಾಮಗ್ರೀ ಪ್ರಯೋಜ್ಯತ್ವಂ ಸ್ವತಸ್ತ್ವಮ್।

**ವಿಶಿಷ್ಟಾದ್ವೈತಮತದಲ್ಲೂ** ಹೀಗೆಯೇ ಅಂಗೀಕರಿಸಲಾಗಿದೆ. ಈಶ್ವರಜ್ಞಾನದಲ್ಲಿ ಪ್ರಾಮಾಣ್ಯ ಇರುವುದಕ್ಕೆ ದೋಷಾಭಾವವೇ ಕಾರಣವಾದುದರಿಂದ ಸರ್ವತ್ರ, ಪ್ರಾಮಾಣ್ಯಕ್ಕೆ ದೋಷಾಭಾವವೇ ಪ್ರಯೋಜಕ. ಆದ್ದರಿಂದ ದೋಷಾಭಾವಾತಿರಿಕ್ತ ಕಾರಣ ನಿರಪೇಕ್ಷತ್ವಂ, ಇದೇ ಸ್ವತಸ್ತ್ವ. ಜ್ಞಪ್ತಿಯಲ್ಲಿ ಪ್ರಾಭಾಕರಮೀಮಾಂಸಾ ಸಿದ್ಧಾಂತದಂತೆ, ರಾಮಾನುಜದರ್ಶನದಲ್ಲಿ ಆತ್ಮಧರ್ಮಭೂತವಾದ ಜ್ಞಾನವು ಸ್ವಪ್ರಕಾಶ. ಹೀಗಾಗಿ ಸ್ವಾಶ್ರಯ ಜ್ಞಾನಗ್ರಾಹ್ಯತ್ವವೇ ಅವರಲ್ಲಿ ಜಪ್ತೌ ಸ್ವತಸ್ತ್ವ. ಪ್ರಾಮಾಣ್ಯಾಶ್ರಯವಾದ ಜ್ಞಾನವೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದರ್ಥ.

**ಬೌದ್ಧದರ್ಶನ**—ಈ ದರ್ಶನದಂತೆ ಜ್ಞಾನವು ಗೃಹೀತವಾದಾಗ ಅದು ಅಪ್ರಮಾಣವೆಂದೇ ಗ್ರಹಿಸಲ್ಪಡುತ್ತದೆ. ಸಫಲ ಪ್ರವೃತ್ತಿಯಾದ ಮೇಲೆ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವಾಗುತ್ತದೆ. ಬೌದ್ಧಮತದಲ್ಲಿ ವಸ್ತುತಃ ಪಾರಮಾರ್ಥಿಕ ದೃಷ್ಟಿಯಲ್ಲಿ ಎಲ್ಲ ಜ್ಞಾನಗಳೂ ಅಪ್ರಮಾಣಗಳು. ಪೂರ್ವೋತ್ಪನ್ನ ಜ್ಞಾನಜನ್ಯವಾದ ಅಥವಾ ಮತ್ತೊಬ್ಬರ ಮಾತಿನಿಂದ ಹುಟ್ಟಿದ, ಇಲ್ಲವೇ ಅನಾದಿಯಾದ ಸಂಸ್ಕಾರದಿಂದ ಆಹಿತವಾದ ಧರ್ಮವಿಶಿಷ್ಟವಾಗಿಯೇ ವಸ್ತುಗಳ ಜ್ಞಾನವು ಹುಟ್ಟುತ್ತದೆ. ಆದರಿಂದಾಗಿ ಒಂದೇ ವಸ್ತುವಿನ ಬಗ್ಗೆ ಒಬ್ಬೊಬ್ಬರಿಗೆ ಹುಟ್ಟುವ ಜ್ಞಾನ ಒಂದೊಂದು ವಿಧ. ಅವರವರ ಭಾವಕ್ಕೆ ತಕ್ಕಂತೆ ಅವರವರ ಜ್ಞಾನ. ಹೀಗಾಗಿ ಸವಿಕಲ್ಪಕ ಜ್ಞಾನಗಳೆಲ್ಲವೂ ಅಪ್ರಮಾಣ.

**ಜೈನದರ್ಶನ**—ಜೈನಮತದಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳೆರಡೂ ಉತ್ಪತ್ತೌ ಪರತಃ. ಜ್ಞಪ್ತೌ ಸ್ವತಃ, ಪರತಶ್ಚ, ಸ್ಯಾದ್ವಾದರತ್ನಾಕರ ವ್ಯಾಖ್ಯಾನದಲ್ಲಿ ಹೀಗಿದೆ—

**ಜ್ಞಾನಸ್ಯ ಪ್ರಾಮಾಣ್ಯಮ್ ಅಪ್ರಾಮಾಣ್ಯಂ ಚ ದ್ವಿತಯಮಪಿ ಜ್ಞಾನಕರಣಗತಗುಣ–ದೋಷರೂಪಂ ಪರಮಪೇಕ್ಷ್ಯ ಉತ್ಪದ್ಯತೇ। ನಿಶ್ಚೀಯತೇ ತು ಅಭ್ಯಾಸದಶಾಯಾಂ ಸ್ವತಃ, ಅನಭ್ಯಾಸದಶಾಯಾಂ ತು ಪರತಃ ॥**

ಹೀಗೆ ಪ್ರಾಮಾಣ್ಯದ ಉತ್ಪತ್ತಿಯಲ್ಲಿ ನೈಯಾಯಿಕಪಕ್ಷವೇ ಜೈನಸಿದ್ಧಾಂತದ್ದು. ಜ್ಞಪ್ತಿಯಲ್ಲಿ ಹೊಸ ಸಿದ್ಧಾಂತ–ಅನಿಯತತ್ವಪಕ್ಷ.

ಓಗೆ, ಪ್ರಾಮಾಣ್ಯವಾದದಲ್ಲಿ ವೈದಿಕ ಮತ್ತು ಅವೈದಿಕ ದರ್ಶನಗಳಲ್ಲಿ ವಿಸ್ತಾರವಾದ ಹಾಗೂ ಆಳವಾದ ಚರ್ಚೆ ನಡೆದಿದೆ.

**ತರ್ಕತಾಂಡವಗ್ರಂಥದ ಸಮರ್ಥನೆ**

ಪ್ರಸಿದ್ಧ ವಿದ್ವಾಂಸರಾದ ಶ್ರೀಯುತ ರಾಮಾನುಜ ತಾತಾಚಾರ್ಯರು 'ಪ್ರತ್ಯಕ್ಷ ಚಿಂತಾಮಣಿ ವಿಮರ್ಶಃ' ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರ ಪ್ರಾಮಾಣ್ಯವಾದ ವಿಭಾಗದಲ್ಲಿ ಮಣಿಗ್ರಂಥದ ಮೇಲೆ ಇತರ ದಾರ್ಶನಿಕರು ಮಾಡಿರುವ ಆಕ್ಷೇಪಗಳನ್ನು ಅನುವಾದ ಮಾಡಿ ವಿಮರ್ಶೆ ಮಾಡಿದ್ದಾರೆ. ಪೂರ್ವಗ್ರಹವಿಲ್ಲದೆ ವಿಮರ್ಶಕದೃಷ್ಟಿಯಲ್ಲಿ ಅವರು ಆ ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ, ತರ್ಕತಾಂಡವದಲ್ಲಿ ಶ್ರೀವ್ಯಾಸತೀರ್ಥರು ಮಾಡಿರುವ ಮಣಿಗ್ರಂಥದ ನಿರಾಕರಣೆಯನ್ನೂ ಅವರು ವಿಮರ್ಶೆ ಮಾಡಿದ್ದಾರೆ. ಅದರ ಬಗ್ಗೆ ವಿಚಾರವನ್ನು ಇಲ್ಲಿ ಮಾಡಲಾಗಿದೆ.

I

ಮಣಿಕಾರ ಪ್ರಾಮಾಣ್ಯಪರತಸ್ತ್ವವನ್ನು ಸಾಧನೆ ಮಾಡಿರುವ ಮೊದಲ ಅನುಮಾನದ

ಅಭಿಪ್ರಾಯ ಹೀಗಿದೆ— ಒಂದು ಕಾರ್ಯವು ಇತರ ಕಾರ್ಯಕ್ಕಿಂತ ವಿಲಕ್ಷಣವಾಗಬೇಕಾದರೆ ಅದರ ಕಾರಣವೂ ವಿಲಕ್ಷಣವಾಗಿರಬೇಕು. ಪ್ರಮಾತ್ಮಕಕಾರ್ಯವು ಭ್ರಮರೂಪವಾದ ಕಾರ್ಯಕ್ಕಿಂತ ವಿಲಕ್ಷಣವಾಗಿದೆ. ಆದ್ದರಿಂದ ಭ್ರಮೆಗೆ ಕಾರಣವಾಗದ ವಿಶೇಷಕಾರಣದಿಂದ ಅದು ಹುಟ್ಟಿರಬೇಕು. ಅಂತಹ ಕಾರಣವೇ ಗುಣ. ಹೀಗೆ ಪ್ರಾಮಾಣ್ಯವು ಗುಣಜನ್ಯವಾದುದರಿಂದ ಪರತಃ, ಎಂದು ಮಣಿಗ್ರಂಥದ ಭಾವ.

ಇದನ್ನು ತರ್ಕತಾಂಡವದಲ್ಲಿ ಹೀಗೆ ನಿರಾಕರಿಸಲಾಗಿದೆ—ಕಾರ್ಯವು ವಿಲಕ್ಷಣವಾದಾಗಲೆಲ್ಲ ಕಾರಣವೂ ವಿಲಕ್ಷಣವೇ ಆಗಿರಬೇಕೆಂಬ ನಿಯಮವೇನಿಲ್ಲ. ಘಟಜ್ಞಾನವು ಪಟಜ್ಞಾನಕ್ಕಿಂತ ವಿಲಕ್ಷಣವಾಗಿದೆ. ಆದರೆ ಘಟಜ್ಞಾನಸಾಮಾನ್ಯಕ್ಕೆ ಮೀಸಲಾದ ಒಂದು ವಿಲಕ್ಷಣವಾದ ಕಾರಣವಿಲ್ಲ. ಘಟಜ್ಞಾನವು ಅನುಮಿತಿರೂಪವಾಗಿರಬಹುದು, ಪ್ರತ್ಯಕ್ಷಾತ್ಮಕವಾಗಿರಬಹುದು, ಅಥವಾ, ಶಾಬ್ದಬೋಧಾತ್ಮಕವಾಗಿರಬಹುದು. ಈ ಮೂರಕ್ಕೂ ಅನುಗತವಾದ ಒಂದು ವಿಲಕ್ಷಣಕಾರಣ ಇಲ್ಲ. ಆದ್ದರಿಂದ ಮಣಿಕಾರನ ನಿಯಮ ಸರಿಯಲ್ಲ. ಹೀಗಾಗಿ, ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ಅದೇ ಪ್ರಮಾತ್ಮಕ ಜ್ಞಾನಕ್ಕೂ ಕಾರಣ. ಅದರ ಜೊತೆಯಲ್ಲಿ ದೋಷಸೇರಿದರೆ ಪ್ರಮೆಯ ಬದಲು ಭ್ರಮೆ ಹುಟ್ಟುತ್ತದೆ. ಹೀಗೆ ಜ್ಞಾನಕಾರಣಮಾತ್ರಜನ್ಯವಾದುದರಿಂದ ಪ್ರಾಮಾಣ್ಯಂ ಉತ್ಪತ್ತೌ ಸ್ವತಃ.

ಇದನ್ನು ತಾತಾಚಾರ್ಯರು ತಮ್ಮ ಗ್ರಂಥದಲ್ಲಿ ಹೀಗೆ ನಿರಾಕರಿಸಿದ್ದಾರೆ— ಘಟಜ್ಞಾನಸಾಮಾನ್ಯಕ್ಕೆ ಅನುಗತವಾದ ಒಂದು ಕಾರಣವು ಇಲ್ಲ ಎನ್ನುವ ಮಾತು ಯುಕ್ತವಲ್ಲ. ಆತ್ಮಮನಃಸಂಯೋಗಾದಿಗಳೇ ಅದಕ್ಕೆ ಕಾರಣ. ಘಟಜ್ಞಾನವು ಪ್ರತ್ಯಕ್ಷವೇ ಆಗಿರಲಿ, ಅನುಮಿತಿಯೇ ಆಗಿರಲಿ. ಅದಕ್ಕೆ ಆತ್ಮಮನಃಸಂಯೋಗ ಬೇಕೇಬೇಕು. ಆದ್ದರಿಂದ ಘಟಜ್ಞಾನ ಸಾಮಾನ್ಯಕ್ಕೆ ಕಾರಣವಿಲ್ಲ, ಎನ್ನುವುದು ಸರಿಯಲ್ಲ.

ಆದರೆ, ಇಲ್ಲಿ ಒಂದಂಶವನ್ನು ಮರೆತಂತಿದೆ. ಪಟಾದಿ ಜ್ಞಾನಕ್ಕೆ ಯಾವುದು ಕಾರಣವೋ ಅದಕ್ಕಿಂತ ವಿಲಕ್ಷಣವಾದ ಒಂದು ಅನುಗತಕಾರಣ ಘಟಜ್ಞಾನಕ್ಕೆ ಇಲ್ಲ, ಎಂದು ತರ್ಕತಾಂಡವ ಗ್ರಂಥದ ವಾದ. ಅರ್ಥಾತ್ ಆ ಕಾರಣವು ಅನುಗತವೂ ಆಗಿರಬೇಕು, ಪಟಜ್ಞಾನಕ್ಕೆ ಕಾರಣವಾಗಿರ ಬಾರದು. ಆತ್ಮಮನಃಸಂಯೋಗವು ಜ್ಞಾನಸಾಮಾನ್ಯಕ್ಕೆ ಕಾರಣವಾದುದರಿಂದ ಪಟಜ್ಞಾನಕ್ಕೂ ಕಾರಣವಾಗಿದೆ. ಹೀಗೆ, ಅದು ಘಟಜ್ಞಾನಸಾಮಾನ್ಯಕ್ಕೆ ಕಾರಣವಾದರೂ ವಿಲಕ್ಷಣಕಾರಣವಲ್ಲ. ಇದನ್ನು ಮಣಿಕಾರನೇ ಹೇಳಿದ್ದಾನೆ—'ಘಟಜ್ಞಾನತ್ವಾದೌ ತು ಬಾಧಕಮ್'(ಪು.336) ಘಟಜ್ಞಾನತ್ವವು ಕಾರ್ಯಮಾತ್ರವೃತ್ತಿಧರ್ಮವಾದರೂ ಬಾಧಕವಿರುವ ಕಾರಣ ಕಾರ್ಯತಾವಚ್ಛೇದಕವಲ್ಲ, ಎಂದು ಆ ವಾಕ್ಯದ ಭಾವ. ಪ್ರಕಾಶವ್ಯಾಖ್ಯಾನದಲ್ಲಿ ಇದೇ ವಿವರಣೆಯನ್ನು ಕೊಡಲಾಗಿದೆ— ಘಟಜ್ಞಾನತ್ವಾದೌ ಇತಿ ॥ ''ಘಟಾನಿತ್ಯಜ್ಞಾನತ್ವಾದೌ ಸ್ವಾವಚ್ಛಿನ್ನಕಾರ್ಯತಾ ಪ್ರತಿಯೋಗಿಕಕಾರಣತಾ–ಅಸಂಭವರೂಪ ಬಾಧಕಸತ್ವಾತ್ ನ ವ್ಯಭಿಚಾರಃ''।

## II

ಮಣಿಗ್ರಂಥದಲ್ಲಿ ಪ್ರಾಮಾಣ್ಯಪರತಸ್ತ್ವಸಾಧಕವಾದ ಎರಡನೆಯ ಅನುಮಾನದ ಅಭಿಪ್ರಾಯ ಹೀಗಿದೆ—ಅನಿತ್ಯಜ್ಞಾನತ್ವವು ಭ್ರಮೆ ಮತ್ತು ಪ್ರಮೆ ಎರಡರಲ್ಲೂ ಇದೆ. ಅನಿತ್ಯಪ್ರಮಾತ್ವವು ಪ್ರಮಾದಲ್ಲಿ ಮಾತ್ರ ಇದೆ. ಅರ್ಥಾತ್ ಜ್ಞಾನತ್ವವು ವ್ಯಾಪಕಧರ್ಮ, ಪ್ರಮಾತ್ವವು ವ್ಯಾಪ್ಯಧರ್ಮ. ವ್ಯಾಪ್ಯಧರ್ಮಾವಚ್ಛಿನ್ನಕ್ಕೆ, ವ್ಯಾಪಕಧರ್ಮಾವಚ್ಛಿನ್ನಕ್ಕೆ ಯಾವುದು ಕಾರಣವೋ ತದ್ಭಿನ್ನವಾದ ಒಂದು ಕಾರಣವು ಇರಬೇಕು. ಈ ನಿಬಂಧನೆಯಂತೆ, ಅನಿತ್ಯಪ್ರಮಾಸಾಮಾನ್ಯಕ್ಕೆ ಯಾವುದು ಕಾರಣವೋ ಅದೇ ಗುಣ. ಹೀಗೆ ಪ್ರಮಾಣತ್ವವು ಗುಣಜನ್ಯತಾವಚ್ಛೇದಕವಾದುದರಿಂದ ಪ್ರಾಮಾಣ್ಯಂ ಪರತಃ.

ಇದರ ವಿಮರ್ಶೆ ತರ್ಕತಾಂಡವದಲ್ಲಿ ಹೀಗೆ ಬಂದಿದೆ–ಅನಿತ್ಯಪ್ರಮಾಸಾಮಾನ್ಯಕ್ಕೆ ಕಾರಣವಾದ ಒಂದು ಅನುಗತವಾದ ಗುಣವು ಇಲ್ಲ, ಎಂದು ಮಣಿಕಾರನೇ ಅಂಗೀಕರಿಸಿದ್ದಾನೆ. ಅನಿತ್ಯಪ್ರಮಾದಲ್ಲಿ ಸೇರಿರುವ ಪ್ರತ್ಯಕ್ಷಪ್ರಮಾಕ್ಕೆ ಭಯೋऽವಯವೇಂದ್ರಿಯಸನ್ನಿಕರ್ಷ ಗುಣ. ಅನುಮಿತಿಗೆ ಯಥಾರ್ಥಲಿಂಗಪರಾಮರ್ಶ ಗುಣ. ಶಾಬ್ದಬೋಧಕ್ಕೆ ಯಥಾರ್ಥ ವಾಕ್ಯಾರ್ಥ ಜ್ಞಾನವು ಗುಣ. ಹೀಗೆ ಅನುಗತವಾದ ಒಂದು ಕಾರಣ ಇಲ್ಲದಿರುವಾಗ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗಲಾರದು. ಆದ್ದರಿಂದ ಅನಿತ್ಯಪ್ರಮಾಸಾಮಾನ್ಯಕ್ಕೆ ಒಂದು ಕಾರಣವೇ ಇಲ್ಲ. ಇನ್ನು ಅನನುಗತವಾದ ಪೂರ್ವೋಕ್ತ ಪ್ರಮಾಕಾರಣಗಳಲ್ಲಿ ಗುಣತ್ವವೆಂಬ ಅನುಗತಧರ್ಮ ವನ್ನು ಕಲ್ಪಿಸಿ ಅನಿತ್ಯಪ್ರಮಾಸಾಮಾನ್ಯಕ್ಕೆ ಗುಣತ್ವಾವಚ್ಛಿನ್ನವು ಕಾರಣ, ಎಂದು ಹೇಳಬೇಕು. ಆದರೆ, ಗುಣತ್ವವು ಜಾತಿಯಲ್ಲ. 'ಪ್ರಮಾಜನಕತ್ವಂ ಗುಣತ್ವಂ' ಎಂದೇ ಅದನ್ನು ನಿರೂಪಿಸಬೇಕು. ಆಗ ಅನ್ಯೋऽನ್ಯಾಶ್ರಯದೋಷ. ಆದ್ದರಿಂದ ಮಣ್ಯುಕ್ತವಾದ ದ್ವಿತೀಯಾನುಮಾನವೂ ಸರಿಯಲ್ಲ.

ಇದರ ಬಗ್ಗೆ ತಾತಾಚಾರ್ಯರ ಅಭಿಪ್ರಾಯ ಹೀಗಿದೆ—ಮಣಿಕಾರ ಅನುಗತವಾದ ಗುಣವನ್ನು ಅಂಗೀಕರಿಸುವುದಿಲ್ಲವಾದುದರಿಂದ ಅನಿತ್ಯಪ್ರಮಾ ಗುಣಜನ್ಯ ಎಂದು ಅವನು ಹೇಳಿದ್ದರೂ ಅವನ ಅಭಿಪ್ರಾಯ ಅನಿತ್ಯಪ್ರತ್ಯಕ್ಷಪ್ರಮಾದಿ ವಿಶೇಷಗಳು ಗುಣಜನ್ಯವಾಗಿವೆ, ಎಂದೇ ಆಗಿದೆ. ಮಣಿವ್ಯಾಖ್ಯಾನವಾದ ಪ್ರಕಾಶದಲ್ಲಿ ರುಚಿದತ್ತಮಿಶ್ರರು ಹಾಗೆಯೇ ಹೇಳಿದ್ದಾರೆ, ಎಂದು.

ಆದರೆ, ಮಣಿಗ್ರಂಥದಲ್ಲಿ ಅನಿತ್ಯಪ್ರಮಾತ್ವವು ಜನ್ಯತಾವಚ್ಛೇದಕವಾಗಿದೆ, ಎಂದು ಸಾಧಿಸುವ ಅನುಮಾನ ಇದೆ(ಪು.353) ಈ ಅನುಮಾನಕ್ಕೆ ದೋಷವನ್ನು ತರ್ಕತಾಂಡವದಲ್ಲಿ ಹೇಳಲಾಗಿದೆ. ಅದು ಜನ್ಯತಾವಚ್ಛೇದಕವಾಗಬೇಕಾದರೆ ತದಾಶ್ರಯವಾದ ಪ್ರಮಾಸಾಮಾನ್ಯಕ್ಕೆ ಅನುಗತವಾದ ಒಂದು ಗುಣವು ಅನಿವಾರ್ಯ. ಅಂತಹ ಗುಣ ಇಲ್ಲ, ಎನ್ನುವ ತರ್ಕತಾಂಡವೋಕ್ತವಾದ ದೋಷ ಅಸಂಗತವಾಗುವುದು ಹೇಗೆ?

ಪ್ರಕಾಶವ್ಯಾಖ್ಯಾನದಲ್ಲಿ ಅನಿತ್ಯಪ್ರತ್ಯಕ್ಷಪ್ರಮಾತ್ವವು ಕಾರ್ಯತಾವಚ್ಛೇದಕ ಎಂದು

ಮಣಿಗ್ರಂಥದ ಆಶಯವನ್ನು ತಿಳಿಸಲಾಗಿದೆ. ಆದರೆ, ಅದನ್ನೂ ತಾರ್ಕಿಕರು ಹೇಳುವಂತಿಲ್ಲ. ಪ್ರತ್ಯಕ್ಷಪ್ರಮಾಕ್ಕೆ ಕೆಲವು ಕಡೆ ಭೂಯೋಽವಯವೇಂದ್ರಿಯ ಸನ್ನಿಕರ್ಷವು ಗುಣ, ಕೆಲವು ಕಡೆ (ಸಂಶಯೋತ್ತರ ಪ್ರತ್ಯಕ್ಷಕ್ಕೆ) ವಿಶೇಷದರ್ಶನವು ಗುಣ. ಹೀಗೆ, ಪ್ರತ್ಯಕ್ಷಸಾಮಾನ್ಯಕ್ಕೆ ಅನುಗತವಾದ ಒಂದು ಗುಣವಿಲ್ಲ. ಆದ್ದರಿಂದ ಪ್ರಕಾಶವ್ಯಾಖ್ಯಾನದ ಈ ಆಶಯವೂ ಸರಿಯಲ್ಲ.

## III

ಸ್ಥೂಲವಸ್ತುವಿನ ಪ್ರತ್ಯಕ್ಷಪ್ರಮಾಕ್ಕೆ ಭೂಯೋಽವಯವೇಂದ್ರಿಯ ಸನ್ನಿಕರ್ಷವು ಕಾರಣ. ಸಂಶಯೋತ್ತರಪ್ರತ್ಯಕ್ಷಕ್ಕೆ ವಿಶೇಷದರ್ಶನವು ಕಾರಣ, ಎಂಬ ಮಣಿಕಾರನ ಸಿದ್ಧಾಂತವನ್ನು ತರ್ಕತಾಂಡವದಲ್ಲಿ ಹೀಗೆ ನಿರಾಕರಿಸಲಾಗಿದೆ— ಶಂಖದಲ್ಲಿ ಇವೆರಡೂ ಇದ್ದರೂ ಪಿತ್ತದೋಷವಿದ್ದವರಿಗೆ 'ಶ್ವೇತಃ ಶಂಖಃ' ಎಂಬ ಪ್ರಮಾ ಹುಟ್ಟುವುದಿಲ್ಲ. 'ಪೀತಃ ಶಂಖಃ' ಎಂಬ ಭ್ರಮೆಯೇ ಹುಟ್ಟುತ್ತದೆ. ಇಲ್ಲಿ ಗುಣಕ್ಕೆ ಅನ್ವಯ ವ್ಯಭಿಚಾರ ಇದೆ. ಇದರ ಪರಿಹಾರಕ್ಕಾಗಿ ಪ್ರಮೆ ಹುಟ್ಟದಿರಲು ದೋಷವು ಪ್ರತಿಬಂಧಕ ಎನ್ನುವುದಾದಲ್ಲಿ ಆವಶ್ಯಕತ್ವಾತ್ ದೋಷಾಭಾವವೇ ಪ್ರಮಾಕಾರಣವೆನ್ನಬಹುದು. ಗುಣವು ಕಾರಣ ಎಂದು ಹೇಳುವುದು ಗೌರವ.

ಇದಕ್ಕೆ ರುಚಿದತ್ತಮಿಶ್ರರು ಹೇಳಿದ ಪರಿಹಾರವನ್ನು ತಾತಾಚಾರ್ಯರು ಉಲ್ಲೇಖಿಸಿದ್ದಾರೆ. ಭೂಯೋಽವಯವೇಂದ್ರಿಯಸನ್ನಿಕರ್ಷಾದಿರೂಪವಾದ ಗುಣೋತ್ಕರ್ಷದಿಂದ ಪ್ರಮೋತ್ಕರ್ಷವು ಅನುಭವಸಿದ್ಧವಾದುದರಿಂದ ದೋಷಾಭಾವಸಹಕೃತವಾದ ಗುಣವೇ ಪ್ರಮಾಕಾರಣ ಎಂದು ಹೇಳಬೇಕು. ಇದು ಒಂದು ಪರಿಹಾರ.

ಇದಲ್ಲದೆ, ವಸ್ತುತಸ್ತು ಎಂದು ಇನ್ನೊಂದು ಪರಿಹಾರವನ್ನು ತಾತಾಚಾರ್ಯರು ಹೇಳಿದ್ದಾರೆ—ಪ್ರತ್ಯಕ್ಷಪ್ರಮಾಕ್ಕೆ ವಿಶೇಷಣವದ್ವಿಶೇಷ್ಯಸನ್ನಿಕರ್ಷವೇ ಗುಣ. 'ಪೀತಃ ಶಂಖಃ' ಎಂಬ ಭ್ರಮೆಯಲ್ಲಿ ವಿಶೇಷಣವಾದುದು ಪೀತರೂಪ. ಅದು ಶಂಖದಲ್ಲಿ ಇಲ್ಲ. ಹೀಗಾಗಿ ವಿಶೇಷ್ಯವಾದ ಶಂಖವು ವಿಶೇಷಣವತ್ತಾಗಿಲ್ಲ. ಗುಣ ಇಲ್ಲವಾದುದರಿಂದ 'ಪೀತಃ ಶಂಖಃ' ಎಂಬ ಪ್ರಮಾ ಹುಟ್ಟುವುದಿಲ್ಲ, ಎಂದು. (ಪು.40)

ರುಚಿದತ್ತಮಿಶ್ರರ ಮೇಲಿನ ಅಭಿಪ್ರಾಯವನ್ನು ತರ್ಕತಾಂಡವ ವ್ಯಾಖ್ಯಾನವಾದ ನ್ಯಾಯದೀಪದಲ್ಲಿ ರಾಯರು ನಿರಾಕರಿಸಿದ್ದಾರೆ– (ಪು.664) ಸನ್ನಿಕರ್ಷ ಮತ್ತು ವಿಶೇಷದರ್ಶನರೂಪವಾದ ಗುಣೋತ್ಕರ್ಷವು ಇದ್ದರೂ ಪ್ರಮಾ ಬರುವ ಬದಲು 'ಪೀತಃ ಶಂಖಃ' ಎಂಬ ಭ್ರಮೆಯೇ ಬಂದಿದೆ. ಆದ್ದರಿಂದ ಗುಣೋತ್ಕರ್ಷವು ಪ್ರಮೋತ್ಕರ್ಷಕ್ಕೆ ಕಾರಣ, ಎಂಬ ವಾದವೂ ಸರಿಯಲ್ಲ. ಇದು ರಾಯರು ಮಾಡಿದ ಖಂಡನ.

ತಾತಾಚಾರ್ಯರು ಹೇಳಿದ ಎರಡನೆಯ ಖಂಡನೆ ತರ್ಕತಾಂಡವಕ್ಕೆ ಸಂಬಂಧಪಟ್ಟಿಲ್ಲ. ತರ್ಕತಾಂಡವದಲ್ಲಿ ವಿಶೇಷದರ್ಶನಾದಿಗಳಿದ್ದರೂ ''ಶ್ವೇತಃ ಶಂಖಃ'' ಎಂಬ ಪ್ರಮಾ ಹುಟ್ಟಿಲ್ಲವಾದ ಕಾರಣ ಗುಣಕ್ಕೆ ಅನ್ವಯವ್ಯಭಿಚಾರವನ್ನು ಹೇಳಲಾಗಿದೆ. ಹೊರತು, ಅಲ್ಲಿ 'ಪೀತಃ ಶಂಖಃ' ಎಂಬ

ಪ್ರಮಾ ಹುಟ್ಟಲಿ, ಎನ್ನುವ ಆಪಾದನೆಯನ್ನು ಮಾಡಲಾಗಿಲ್ಲ. ಆ ಆಪಾದನೆಗೆ ಉತ್ತರ–ವಿಶೇಷಣವತ್ ವಿಶೇಷ್ಯಸನ್ನಿಕರ್ಷವಿಲ್ಲ ಎಂಬ ಸಮಾಧಾನವು ಸಮಂಜಸವಾಗುತ್ತದೆ. ತರ್ಕತಾಂಡವದಲ್ಲಿ ಕೇಳಿರುವುದು– 'ಶಂಖಃ ಶ್ವೇತಃ' ಎಂಬ ಪ್ರಮಾ ಏಕೆ ಹುಟ್ಟಿಲ್ಲ, ಎಂದು. ಅದಕ್ಕೆ ಬೇಕಾಗಿರುವ ಶ್ವೇತತ್ವರೂಪವಿಶೇಷಣವಿಶಿಷ್ಟವಾದ ಶಂಖರೂಪವಾದ ವಿಶೇಷ್ಯದ ಸನ್ನಿಕರ್ಷವು ಇದ್ದೇ ಇದೆ. ಆದರೂ ಆ ಪ್ರಮಾ ಬರುವುದಿಲ್ಲ, ಅನ್ವಯವ್ಯಭಿಚಾರ. ಇದು ತರ್ಕತಾಂಡವದ ಅಭಿಪ್ರಾಯ. ಇದಕ್ಕೆ ತಾತಾಚಾರ್ಯರು ಹೇಳಿರುವ ಸಮಾಧಾನ ಸಂಬಂಧಪಡುವುದಿಲ್ಲ.

ದಿನಕರಿ ಗ್ರಂಥದಲ್ಲಿ ದೋಷಾಭಾವವು ಪ್ರಮಾಹೇತುವಾದಲ್ಲಿ ಪಿತ್ತರೂಪ ದೋಷ ಹೋದ ಮೇಲೆ ''ಪೀತಃ ಶಂಖಃ'' ಎಂಬ ಪ್ರಮಾ ಬರಲಿ ಎಂಬ ಆಕ್ಷೇಪದ ಪರಿಹಾರಕ್ಕಾಗಿ ವಿಶೇಷಣವದ್ವಿಶೇಷ್ಯಸನ್ನಿಕರ್ಷವು ಇಲ್ಲ, ಎಂದು ಹೇಳಲಾಗಿದೆ. ಆದ್ದರಿಂದ ತರ್ಕತಾಂಡವದ ಆಕ್ಷೇಪಕ್ಕೆ ಮುಕ್ತಾವಲೀ ಗ್ರಂಥದಲ್ಲಿ ಉತ್ತರ ಇಲ್ಲ. (ಇದರ ಉಲ್ಲೇಖವೂ ತಾತಾಚಾರ್ಯರ ಗ್ರಂಥದಲ್ಲಿದೆ)

## IV

ಅನುಮಿತಿಗೆ ಯಥಾರ್ಥಲಿಂಗ ಪರಾಮರ್ಶವು ಗುಣ ಎಂದು ಮಣಿಕಾರ ಹೇಳಿದ್ದಾನೆ. ಅದನ್ನು ತರ್ಕತಾಂಡವದಲ್ಲಿ ನಿರಾಕರಿಸಲಾಗಿದೆ.(ಪು.673) ಭಾಷ್ಪದಲ್ಲಿ ಧೂಮತ್ವಭ್ರಮೆಯಿಂದ 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬ ಪರಾಮರ್ಶ ಹುಟ್ಟಿ ಅದರಿಂದ 'ಪರ್ವತಃ ವಹ್ನಿಮಾನ್' ಎಂಬ ಅನುಮಿತಿ ಬಂತು. ಯದೃಚ್ಛಯಾ ಪರ್ವತದಲ್ಲಿ ವಹ್ನಿಯೂ ಇತ್ತು. ಆಗ ಅನುಮಿತಿಯು ಪ್ರಮಾ ಎನಿಸುತ್ತದೆ. ಆದರೆ, ಅದಕ್ಕೆ ಕಾರಣವಾದ ಪರಾಮರ್ಶವು ಭ್ರಮಾತ್ಮಕ. ಇಲ್ಲಿ ಗುಣವಿಲ್ಲದೆಯೂ ಪ್ರಮಾ ಹುಟ್ಟಿದೆ. ಆದ್ದರಿಂದ ವ್ಯತಿರೇಕ ವ್ಯಭಿಚಾರ.

ಇದನ್ನು 'ತತ್ತ್ವಚಿಂತಾಮಣಿ ವಿಮರ್ಶ' ಗ್ರಂಥದಲ್ಲಿ (ತಾತಾಚಾರ್ಯಕೃತ) ಹೀಗೆ ವಿಮರ್ಶಿಸಲಾಗಿದೆ–ಅನುಮಿತಿ ಪ್ರಮಾಕ್ಕೆ ವಸ್ತುತಃ ಸಾಧ್ಯವ್ಯಾಪ್ಯವಾದುದು ಯಾವುದೋ ತದ್‌ವೈಶಿಷ್ಟ್ಯಾವಗಾಹಿ ಜ್ಞಾನವೇ ಗುಣ. ವಸ್ತುತಃ ವಹ್ನಿವ್ಯಾಪ್ಯವಾದುದು ಧೂಮ. ಉಕ್ತಭ್ರಮಾತ್ಮಕವಾದ ಪರಾಮರ್ಶವು ವಸ್ತುತಃ ಧೂಮವೈಶಿಷ್ಟ್ಯವನ್ನು ತಿಳಿಸುವುದಿಲ್ಲ. ಧೂಮತ್ವೇನ ಬಾಷ್ಪವೈಶಿಷ್ಟ್ಯವನ್ನು ತಿಳಿಸುತ್ತದೆ. ಆದ್ದರಿಂದ ಅಂತಹ ಪರಾಮರ್ಶವು ಗುಣವಲ್ಲ. ಆದ್ದರಿಂದ ಯಾದೃಚ್ಛಿಕಾನುಮಿತಿ ಪ್ರಮಾಕ್ಕೆ ಅದೃಷ್ಟವಿಶೇಷ ಅಥವಾ ಈಶ್ವರೀಯ ಯಥಾರ್ಥಜ್ಞಾನವೇ ಗುಣ, ಎಂದು.

ತರ್ಕತಾಂಡವದಲ್ಲಿ ಅನುಮಿತಿ ಹೇತುಗುಣವನ್ನು ಹೀಗೆ ಪರಿಷ್ಕರಿಸಿದ್ದಾರೆ— 'ವಸ್ತುತಃ ಸಾಧ್ಯವ್ಯಾಪ್ಯವತಃ ಪಕ್ಷಸ್ಯ ವ್ಯಾಪ್ಯವತ್ತ್ವೇನ ಜ್ಞಾನಂ ಗುಣಃ' ಎಂದು. ನ್ಯಾಯದೀಪದಲ್ಲಿ ಇದರಿಂದ ವ್ಯಭಿಚಾರ ಪರಿಹಾರದ ಕ್ರಮವನ್ನೂ ಹೀಗೆ ವಿವರಿಸಲಾಗಿದೆ–

**ಯಾದೃಚ್ಛಿಕಸಂವಾದಿನಿ ಧೂಮಾಭಾವೇಽಪಿ ವಹ್ನಿವ್ಯಾಪ್ಯಸ್ಯ ಆಲೋಕಾದೇಃ ಸತ್ವೇನ ತಾದೃಶೇ ಪಕ್ಷೇ, ಬಾಷ್ಪೇ ಧೂಮಜ್ಞಾನಂ, ವ್ಯಾಪ್ಯವತ್ವಜ್ಞಾನಂ ಭವತೀತಿ ನ ವ್ಯಭಿಚಾರಃ ।**

ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ಪರ್ವತದಲ್ಲಿ ವಹ್ನಿ ಇದ್ದಮೇಲೆ ಅದಕ್ಕೆ ವ್ಯಾಪ್ಯವಾದುದೂ ಇರಲೇಬೇಕು. ಧೂಮ ಇಲ್ಲದಿದ್ದರೆ, ಆಲೋಕವಾದರದೂ ಸರಿ. ಅಂತೂ ಪಕ್ಷವು ವ್ಯಾಪ್ಯವತ್ತಾಗಿದೆ. ಪರಾಮರ್ಶವು ಭ್ರಮೆಯಾದರೂ 'ವ್ಯಾಪ್ಯವತಿ ಪಕ್ಷೇ ವ್ಯಾಪ್ಯವತ್ತಾ (ಧೂಮವತ್ತಾ)' ಜ್ಞಾನರೂಪವಾದುದರಿಂದ ಅದು ಗುಣವಾಗಿದೆ. ಗುಣಜನ್ಯವಾದುದರಿಂದ ಅನುಮಿತಿ ಪ್ರಮಾರೂಪವಾಗಿದೆ. ವ್ಯಭಿಚಾರವಿಲ್ಲ. ಆದರೆ, ತತ್ತ್ವಚಿಂತಾಮಣಿ ವಿಮರ್ಶಕೃತಿಯಲ್ಲಿ ತಾತಾಚಾರ್ಯರು ಇದಕ್ಕೆ ಅರ್ಥಾಂತರ ಮಾಡಿ ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ಗುಣ ಇಲ್ಲ ಎಂಬುದನ್ನೇ ದೃಢೀಕರಿಸಿ ಈಶ್ವರ ಜ್ಞಾನವು ಗುಣ ಎಂದು ಹೇಳಿದ್ದಾರೆ. ವಸ್ತುತಃ ತರ್ಕತಾಂಡವದಲ್ಲಿ ಹೇಳಿದಂತೆ ಅಯಥಾರ್ಥಪರಾಮರ್ಶವೇ ಗುಣವೆಂದು ಹೇಳಿ ವ್ಯಭಿಚಾರವನ್ನು ಪರಿಹರಿಸಬಹುದು. ಇಲ್ಲದಿದ್ದಲ್ಲಿ ಆ ರೀತಿಯಾದ ಗುಣದ ಪರಿಷ್ಕಾರವೇ ಅನಗತ್ಯವಾದೀತು. ಹೀಗೆ ತರ್ಕತಾಂಡವದಲ್ಲಿ ತಾರ್ಕಿಕರೀತಿಯಿಂದ ವ್ಯಭಿಚಾರ ಪರಿಹಾರವನ್ನು ಆಶಂಕೆ ಮಾಡಿ 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧಮಾನ್' ಎಂಬಲ್ಲಿ ಅಂತಹ ಗುಣವಿದ್ದರೂ ಪ್ರಮಾತ್ಮಕಾನುಮಿತಿ ಹುಟ್ಟಿಲ್ಲ, ಎಂದು ಅನ್ವಯವ್ಯಭಿಚಾರವನ್ನು ತೋರಿಸಲಾಗಿದೆ. ಈಶ್ವರಜ್ಞಾನವೇ ಗುಣ ಎಂಬುದನ್ನು ತರ್ಕತಾಂಡವದಲ್ಲಿ ಪ್ರಬಲ ದೋಷಗಳನ್ನು ಹೇಳಿ ನಿರಾಕರಿಸಲಾಗಿದೆ.

ಗಂಧ ಪ್ರಾಗಭಾವವಾನ್ ಘಟಃ ಗಂಧವಾನ್, ಪೃಥಿವೀತ್ವಾತ್, ಎಂಬ ಅನುಮಾನದಲ್ಲಿ ವ್ಯಾಪ್ಯವತಿ ಪಕ್ಷೇ ವ್ಯಾಪ್ಯವತ್ತಾಪರಾಮರ್ಶರೂಪವಾದ ಗುಣ ಇದೆ. ಆದರೂ ಅದರಿಂದ ಹುಟ್ಟಿದ ಅನುಮಿತಿ ಭ್ರಮಾತ್ಮಗಕವಾಗಿದೆ, ಆದ್ದರಿಂದ ತಾರ್ಕಿಕೋಕ್ತಗುಣಕ್ಕೆ ಅನ್ವಯ ವ್ಯಭಿಚಾರವಿದೆ, ಎಂದು ತರ್ಕತಾಂಡವದಲ್ಲಿ(ಪು.619) ದೋಷವನ್ನು ಹೇಳಿದ್ದಾರೆ.

ಇದನ್ನು ಪಕ್ಷಧರಮಿಶ್ರೋಕ್ತ ಪರಿಹಾರವನ್ನು ಹೇಳಿ ತಾತಾಚಾರ್ಯರು ತಮ್ಮ ಕೃತಿಯಲ್ಲಿ ನಿರಾಕರಿಸಿದ್ದಾರೆ–ವ್ಯಾಪ್ಯವತಿ ಪಕ್ಷೇ ವ್ಯಾಪ್ಯವತ್ತಾ ಪರಾಮರ್ಶವು ಪಕ್ಷತಾವಚ್ಛೇಕಾವಿರೋಧಿ ಸಾಧ್ಯಕಾನುಮಿತಿಗೆ ಗುಣ. ಪ್ರಕೃತಾನುಮಾನದಲ್ಲಿ ಪಕ್ಷತಾವಚ್ಛೇದಕ ಗಂಧಪ್ರಾಗಭಾವ. ಅದಕ್ಕೆ ವಿರೋಧಿಯಾಗಿದೆ ಪ್ರಕೃತಸಾಧ್ಯ ಗಂಧ. ಆದ್ದರಿಂದ ಇಲ್ಲಿ ಉಕ್ತಗುಣವಿದ್ದರೂ ಅನುಮಿತಿ ಪ್ರಮಾತ್ಮಕವಾಗಿಲ್ಲ, ಎಂದು.

ತರ್ಕತಾಂಡವದ ಮೇಲೆ ಬರಬಹುದಾದ ಈ ಆಕ್ಷೇಪವನ್ನು ರಾಯರು ನ್ಯಾಯದೀಪದಲ್ಲಿ ಪರಿಹರಿಸಿದ್ದಾರೆ–

**''ಏತೇನೈವ ಪಕ್ಷತಾವಚ್ಛೇದಕಾವಿರೋಧಿಸಾಧ್ಯಕಾನುಮಿತಿ–ಪ್ರಮಾಯಾಂ ಯಥಾರ್ಥಲಿಂಗ**

**ಪರಾಮರ್ಶೋ ಗುಣಃ, ಇತಿ ಪಕ್ಷಧರೋಕ್ತಮಪಿ ಪ್ರತ್ಯುಕ್ತಮ್। ಗಂಧಪ್ರಾಗಾಭಾವೇತ್ಯುಕ್ತಸ್ಥಲೇ ತ್ವದುಕ್ತಗುಣೇ ಸತ್ಯಪಿ ಪಕ್ಷತಾವಚ್ಛೇದಕಾವಿರೋಧಿಸಾಧ್ಯಪ್ರಮಾಯಾಃ ಅನುದಯಾತ್॥'' (ಪು.622)**

ಹೀಗೆ 'ಪ್ರತ್ಯಕ್ಷಮಣಿವಿಮರ್ಶ' ಗ್ರಂಥದಲ್ಲಿ ತರ್ಕತಾಂಡವ ಗ್ರಂಥದ ಬಗ್ಗೆ ಹೇಳಿರುವ ದೋಷಗಳು ಆಪಾತತಃ ಸರಿ ಎನಿಸಿದರೂ ವಿಚಾರಮಾಡಿದಾಗ ಅವುಗಳು ಪ್ರಬಲ ದೋಷಗಳಲ್ಲ.

**ಕೊನೆಯ ವಕ್ತವ್ಯ**—ತರ್ಕತಾಂಡವ ಗ್ರಂಥದ ಅನುವಾದವನ್ನು ಮಾಡುವಂತೆ ಮಂತ್ರಾಲಯ ಮಠಾಧೀಶರಾದ ಶ್ರೀ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದರು, ರಾಯರ ಸನ್ನಿಧಿಯಲ್ಲಿ ಆದೇಶ ಮಾಡಿದ್ದಾರೆ. ತರ್ಕತಾಂಡವದ ಈ ಭಾಗವನ್ನು ಎರಡುಬಾರಿ ಪಾಠ ಹೇಳಿದ ಮೇಲೆ ಈ ಅನುವಾದವನ್ನು ಮಾಡಿದ್ದೇನೆ. ಆದರೂ ಎಲ್ಲ ಅಂಶಗಳನ್ನೂ ಮನವರಿಕೆ ಮಾಡಿಕೊಂಡಿದ್ದೇನೆ, ಎಂಬ ಆತ್ಮವಿಶ್ವಾಸ ನನಗಿಲ್ಲ. ಶ್ರೀಗಳವರು ಮಾಡಿದ ಆದೇಶದಿಂದಾಗಿ ಇದಕ್ಕೆ ಸಂಬಂಧಪಟ್ಟ ಮಣಿಗ್ರಂಥ, ಕುಸುಮಾಂಜಲಿ, ಅವುಗಳ ವ್ಯಾಖ್ಯಾನ, ಶ್ರೀವಿಜಯೀಂದ್ರಸ್ವಾಮಿಗಳ ವ್ಯಾಖ್ಯಾನದ ಅಮುದ್ರಿತ ಪ್ರತಿಗಳನ್ನು ಓದಿ ನನಗೆ ರಾಯರು ಅರ್ಥಮಾಡಿಸಿದ್ದನ್ನು ನಾನು ಅನುವಾದಿಸಿದ್ದೇನೆ. ಪಾಠವನ್ನೇ ಕೇಳದೆ ಈ ಅನುವಾದದಿಂದಲೇ ತರ್ಕತಾಂಡವದ ಕ್ಲಿಷ್ಟಭಾಗವಾದ ಪ್ರಾಮಾಣ್ಯವಾದ ಗ್ರಂಥವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗಲಿಕ್ಕಿಲ್ಲ. ಆದರೂ, ಪಾಠಕೇಳಿದವರಿಗೆ ಮತ್ತೆ ಓದಿ ಅರ್ಥಮಾಡಿಕೊಳ್ಳಲು ಇದು ಸಹಕಾರಿಯಾಗುತ್ತದೆ.

ವ್ಯಾಸತ್ರಯಗಳಲ್ಲಿ ತರ್ಕತಾಂಡವದ ಅಧ್ಯಯನ ಇತ್ತೀಚೆಗೆ ತುಂಬಾ ಅಪರೂಪ. ಅದಕ್ಕೆ ಅದರ ಕ್ಲಿಷ್ಟತೆಯೂ ಒಂದು ಕಾರಣ. ಆದರೆ, ಶ್ರೀವ್ಯಾಸರಾಯರ ಅದ್ಭುತ ವಿಮರ್ಶಾಚಾತುರ್ಯಕ್ಕೆ ಇದೊಂದು ಸ್ಪಷ್ಟ ನಿದರ್ಶನ. ಶ್ರೀಸುಬುಧೇಂದ್ರತೀರ್ಥರು ವ್ಯಾಸತ್ರಯಗಳನ್ನೂ ವಿದ್ವಾಂಸರಿಂದ ಕನ್ನಡಕ್ಕೆ ಅನುವಾದಿಸುವ ಸಂಕಲ್ಪವನ್ನು ಮಾಡಿದ್ದಾರೆ. ಇದರಿಂದಾಗಿ ವ್ಯಾಸತ್ರಯದ ಅಧ್ಯಯನದ ಪ್ರವೃತ್ತಿಯಾಗಲಿ ಎಂದು ಅವರ ಉದ್ದೇಶ. ಇದಕ್ಕೆ ರಾಯರ ಅನುಗ್ರಹವೂ ಸೇರಿದೆ. ಶ್ರೀಗಳವರು ಮಾಡಿರುವ ಅಭಿಮಾನಪೂರ್ವಕ ಒತ್ತಾಯದಿಂದ ಈ ಕೆಲಸ ನನ್ನಿಂದ ನಡೆದಿದೆ. ಅವರ ಸಂಕಲ್ಪದಂತೆ ಇದು ಈ ಮೊದಲೇ ಜಿಜ್ಞಾಸುಗಳ ಕೈಸೇರಬೇಕಿತ್ತು. ಆದರೂ ಅವಸರಿಸದೆ ತಾಳ್ಮೆಯಿಂದ ನನ್ನಿಂದಾದ ವಿಳಂಬವನ್ನು ಅವರು ಸಹಿಸಿಕೊಂಡಿದ್ದಾರೆ. ಅವರಿಗೆ ಪ್ರಣಾಮಪೂರ್ವಕ ಕೃತಜ್ಞತೆಗಳು.

ಪಂ.ಶ್ಯಾಮಾಚಾರ್ಯ ಬಂಡಿಯವರು ಈ ಅನುವಾದ ಕಾರ್ಯಕ್ಕೆ ಗೌರವಪೂರ್ವಕ ಪ್ರೋತ್ಸಾಹವನ್ನು ನೀಡಿದ್ದಾರೆ. ಶ್ರೀಗುರುಸಾರ್ವಭೌಮವಿದ್ಯಾಪೀಠದ ಪ್ರಾಚಾರ್ಯರಾದ ವಿ॥ವಾದಿರಾಜಾಚಾರ್ಯರೂ ಈ ಕಾರ್ಯಕ್ಕೆ ಪ್ರೋತ್ಸಾಹ ನೀಡಿರುತ್ತಾರೆ. ಇವರಿಬ್ಬರಿಗೂ ಕೃತಜ್ಞತೆಗಳು.

ಇದರ ಡಿ.ಟಿ.ಪಿ. ಕಾರ್ಯವನ್ನು ಶ್ರೀ ಪ್ರೇಮಕುಮಾರ್ ಇವರು ಮಾಡಿದ್ದಾರೆ. ಮತ್ತೆ ಮತ್ತೆ ಮಾಡಿದ ತಿದ್ದುಪಡಿಯನ್ನು ಬೇಸರವಿಲ್ಲದೆ ಹಾಕಿ ನಾಲ್ಕು ಪ್ರೂಫ್‌ಗಳನ್ನು ಕೊಟ್ಟು ಸಹಕರಿಸಿದ್ದಾರೆ. ಅವರಿಗೂ ಕೃತಜ್ಞತೆಗಳು.

ವಿದ್ವಾಂಸರು ಇದನ್ನು ಪಾಠದ ಸಂದರ್ಭದಲ್ಲಿ ಉಪಯೋಗಿಸಿ ವ್ಯತ್ಯಾಸಗಳು ಕಂಡುಬಂದಲ್ಲಿ ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಅದನ್ನು ಸರಿಪಡಿಸಲು ಉಪಕಾರವಾಗುತ್ತದೆ.

ಇತಿ

**ಎ.ಹರಿದಾಸಭಟ್ಟ**
ನಿವೃತ್ತ ಪ್ರಾಚಾರ್ಯರು
ಪೂ.ಪ್ರ.ವಿದ್ಯಾಪೀಠ
ಬೆಂಗಳೂರು.

**ವಿ.ಸೂ. : ಈ ಪುಸ್ತಕದಲ್ಲಿ ಮಣಿಗ್ರಂಥದ ಉಲ್ಲೇಖವಿದ್ದಲ್ಲಿ ತಿರುಪತಿ ರಾ.ಸಂ.ವಿದ್ಯಾಪೀಠ ದಿಂದ ವಿ॥ತಾತಾಚಾರ್ಯರು ಶೋಧಿಸಿ ಪ್ರಕಟಿಸಿದ ಪುಸ್ತಕದ ಪುಟಸಂಖ್ಯೆಯನ್ನು ಕೊಡಲಾಗಿದೆ.**

# ವಿಷಯಾನುಕ್ರಮಣಿಕೆ

**ಪ್ರಕರಣ – 4**

॥ ಶ್ರೀಮದ್ ಹನುಮ ಭೀಮ ಮಧ್ವಾಂತರ್ಗತ ರಾಮ ಕೃಷ್ಣ ವೇದವ್ಯಾಸಾಯ ನಮಃ ॥

॥ ಶ್ರೀವ್ಯಾಸರಾಜಗುರುಭ್ಯೋ ನಮಃ ॥

॥ ಶ್ರೀರಾಘವೇಂದ್ರಗುರುಭ್ಯೋ ನಮಃ ॥

॥ ಹರಿಃ ಓಂ ॥

**अनन्तकल्याणगुणैकराशिमशेदोषोज्झितमप्रमेयम् ।**
**मुमुक्षुभिः सेव्यनन्तसौख्यप्रदं रमेशं प्रणमामि नित्यम् ॥ १ ॥**

ಅಪರಿಮಿತ–ಶುಭಗುಣ ಸಮೂಹರೂಪನಾದ, ಸಕಲದೋಷರಹಿತನಾದ, ಎಲ್ಲೆಡೆ ವ್ಯಾಪ್ತನಾದ, ಮೋಕ್ಷಾರ್ಥಿಗಳಿಂದ ಆರಾಧಿಸಲ್ಪಡುವ, ಎಲ್ಲೆ ಇಲ್ಲದ ಸುಖವನ್ನು ನೀಡುವ ರಮಾರಮಣನನ್ನು ನಿರಂತರ ನಮಿಸುವೆನು.

## ನ್ಯಾಯದೀಪದ ಮಂಗಲ ಪದ್ಯ

**ವಿಶ್ವೋತ್ಪತ್ತಿ–ಸ್ಥಿತಿ–ಧ್ವಂಸ–ಕಾರಣಂ ರಮಣಂ ಶ್ರಿಯಃ ।**
**ಪ್ರಣಮ್ಯ ಪೂರ್ಣಬೋಧಾದೀನ್ ವ್ಯಾಕುರ್ವೇ ತರ್ಕತಾಂಡವಮ್ ॥ 1 ॥**

**ಗುರುಪಾದಕೃತಾಪ್ಯಸ್ತಿ ವ್ಯಾಖ್ಯಾ ಸಾತ್ಯಂತ ವಿಸ್ತರಾ ।**
**ವ್ಯಾಖ್ಯೇಯಂ ಮಂದಬೋಧಾಯ ಕ್ರಿಯತೇಽಶೇಷಗೋಚರಾ ॥**

## ಮೂಲಗ್ರಂಥದ ಮಂಗಲ ಪದ್ಯದ ವ್ಯಾಖ್ಯಾನ

**ಗ್ರಂಥದೌ ವಿಶಿಷ್ಟೇಷ್ಟದೇವತಾ ನತಿರೂಪಂ ಮಂಗಲಮಾಚರತಿ–ಅನಂತೇತಿ ॥**

**ಸತ್ವಾದಿಷು ಗುಣತ್ವಪ್ರಸಿದ್ಧೇಃ, ದುಃಖಾದೇಃ ಗುಣತ್ವೇನ ಪರೈಃ ಪರಿಗಣನಾಚ್ಚ ತದ್–ವ್ಯುದಾಸಾಯ ಆನಂದ–ಜ್ಞಾನ–ಬಲ–ದ್ಯುತಿಪ್ರಭೃತಿ–ಶುಭಧರ್ಮಲಾಭಾಯ ಕಲ್ಯಾಣಗುಣೇತ್ಯುಕ್ತಿಃ ।**

ಸತ್ವಾದಿ ತ್ರಿಗುಣಗಳೇ ಗುಣಗಳೆಂದು ಪ್ರಸಿದ್ಧವಾಗಿದೆ. ಅಥವಾ, ನೈಯಾಯಿಕರು ದುಃಖಾದಿಗಳನ್ನೂ ಗುಣಗಳೆಂದು ಪರಿಗಣಿಸಿದ್ದಾರೆ. ಅಂತಹ ಗುಣಗಳು ಭಗವಂತನಲ್ಲಿ ಇಲ್ಲ. ಅಂತಹ ಗುಣಗಳ ನಿರಾಸಕ್ಕಾಗಿ ಮೂಲದಲ್ಲಿ 'ಕಲ್ಯಾಣ–ಗುಣ' ಎಂದು ಗುಣಕ್ಕೆ ಕಲ್ಯಾಣ ಎಂಬ ವಿಶೇಷಣವನ್ನು ಕೊಡಲಾಗಿದೆ. ಇದರಿಂದಾಗಿ ಆನಂದ–ಜ್ಞಾನ–ಬಲ–ಕಾಂತಿ ಮೊದಲಾದ ಶುಭಗುಣಗಳು ಮಾತ್ರ ಭಗವಂತನಲ್ಲಿ ಸಿದ್ಧವಾಗುತ್ತವೆ.

**ತಾರ್ಕಿಕರೀತ್ಯಾ ಗುಣ–ಗುಣಿನೋಃ ಭೇದಭ್ರಮನಿರಾಸಾಯ ಗುಣ್ಯೈಕರಾಶಿಮ್ ಇತ್ಯುಕ್ತಿಃ ।**

**'ಅಷ್ಟಾವೇವೇಶ್ವರೇ ಗುಣಾಃ' ಇತಿ ಧೀನಿರಾಸಾಯ–ಅನಂತೇತಿ ॥**

ತಾರ್ಕಿಕರು ಗುಣಗಳಿಗೂ ಗುಣಿಯಾದ ಈಶನಿಗೂ ಭೇದವನ್ನು ಹೇಳಿ ಸಮವಾಯ ಸಂಬಂಧವನ್ನು ಕಲ್ಪಿಸುತ್ತಾರೆ. ಆದರೆ, ಭಗವಂತನಿಗೂ ಅವನ ಗುಣಗಳಿಗೂ ಭೇದವಿಲ್ಲ. ಹೀಗೆ ಭೇದನಿರಾಸಕ್ಕಾಗಿ ಗುಣಗಳ ಸಮೂಹವೇ ಭಗವಂತ ಎನ್ನಲಾಗಿದೆ.

ತಾರ್ಕಿಕರ ಮತದಲ್ಲಿ ಈಶನಿಗೆ ಎಂಟೇ ಗುಣಗಳು. ಸಂಖ್ಯಾ–ಪರಿಮಾಣ–ಪೃಥಕ್ತ್ವ–ಸಂಯೋಗ–ವಿಭಾಗ–ಈ ಐದು ಗುಣಗಳು ಸರ್ವದ್ರವ್ಯ ಸಾಧಾರಣರಗಳು. ಅವು ಈಶನಲ್ಲೂ ಇವೆ. ಇವುಗಳಲ್ಲದೇ ಜಗತ್ ಕರ್ತೃತ್ವಕ್ಕೆ ಬೇಕಾದ ಜ್ಞಾನ–ಇಚ್ಛಾ–ಕೃತಿ ಎಂಬ ಮೂರು ಗುಣಗಳೂ ಅವನಿಗಿವೆ. ಹೀಗೆ ಒಟ್ಟು ಎಂಟೇ ಗುಣಗಳು ದೇವರಿಗೆ. ಇದು ತಾರ್ಕಿಕ ಸಿದ್ಧಾಂತ. ಆದರ ನಿರಾಸಕ್ಕಾಗಿ ಮೂಲದಲ್ಲಿ 'ಅನಂತ'(ಗುಣ) ಎಂಬ ಪದವಿದೆ.

## 'ಗುಣ್ಯೈಕ' ಎಂಬ ಪ್ರಯೋಗದ ಸಮರ್ಥನೆ

**'ದೋಷೈಕದೃಕ್ ಪುರೋಭಾಗೀ' ಇತ್ಯಮರೇ 'ಹ್ಲಾದೈಕಮಯೀಮ್' ಇತ್ಯಾದಿ ಕಾವ್ಯಪ್ರಕಾಶಾದೌ ಪ್ರಯೋಗ ದರ್ಶನಾತ್,**

**'ಸಂಖ್ಯಾರ್ಥಕಸ್ಯೈವ ಏಕಶಬ್ದಸ್ಯ ''ಪೂರ್ವಕಾಲೈಕ'' ಇತಿ ಪೂರ್ವನಿಪಾತಃ, ನ ಕೇವಲಾರ್ಥಸ್ಯ'**

**ಇತಿ ತತ್ತ್ವನಿರ್ಣಯಟೀಕಾದ್ಯುಕ್ತ್ಯಾ 'ಗುಣ್ಯೈಕರಾಶಿಮ್' ಇತ್ಯಸ್ಯ ಸಾಧುತ್ವಂ ಧ್ಯೇಯಮ್ ।**

**ಉಕ್ತರೂಪಗುಣಾನಾಂ ಮುಖ್ಯರಾಶಿಮ್, ಇತಿ ವಾ ಭೇದಶೂನ್ಯರಾಶಿಮ್ ಇತಿ ವಾ ಅರ್ಥಃ ॥**

ಸಂಖ್ಯಾವಾಚಕವಾದ ಏಕ ಶಬ್ದಕ್ಕೆ ಸಮಾಸವನ್ನು ಹೇಳುವ ಸೂತ್ರ– 'ಪೂರ್ವಕಾಲ–ಏಕ–ಸರ್ವ' ಇತ್ಯಾದಿ. ಅಲ್ಲಿ ಪೂರ್ವಾದಿ ಶಬ್ದಗಳನ್ನು ಪ್ರಥಮಾಂತವಾಗಿ ನಿರ್ದೇಶ ಮಾಡಿರುವುದರಿಂದ ಅವುಗಳಿಗೆ ಉಪಸರ್ಜನ ಸಂಜ್ಞೆ ಬರುತ್ತದೆ. 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದಿಂದ ಉಪಸರ್ಜನಸಂಜ್ಞೆ ಇರುವ ಶಬ್ದವು ಸಮಸ್ತಪದದ ಪೂರ್ವಪದವಾಗಬೇಕು. ಆಗ 'ಏಕಗುಣ' ಎಂದೇ ಸರಿಯಾದ ಪ್ರಯೋಗ. 'ಗುಣ್ಯೈಕ' ಎಂಬ ಪ್ರಯೋಗ ಹೇಗೆ?

ಉತ್ತರ–ಏಕಶಬ್ದಕ್ಕೆ 'ಏಕತ್ವಸಂಖ್ಯಾವುಳ್ಳದ್ದು' ಎಂದೂ ಅರ್ಥ ಇದೆ. 'ಕೇವಲ' ಇತ್ಯಾದಿ

ಅರ್ಥಾಂತರಗಳೂ ಇವೆ. 'ಏಕೇ ಮುಖ್ಯಾನ್ಯ ಕೇವಲಾಃ' ಎಂದು ಕೋಶವೇ ಈ ಅರ್ಥಗಳನ್ನು ಹೇಳಿದೆ. ಪ್ರಕೃತದಲ್ಲಿ ಏಕಶಬ್ದಕ್ಕೆ ಕೇವಲ ಎಂದು ಅರ್ಥ. ಆದ್ದರಿಂದಲೇ 'ದೋಷೈಕದೃಕ್' ಎಂಬ ಅಮರಕೋಶದ ಪ್ರಯೋಗ, 'ಹ್ಲಾದೈಕಮಯೀಮ್' ಎಂಬ ಕಾವ್ಯಪ್ರಕಾರ ಎಂಬ ಗ್ರಂಥಕಾರನಾದ ಮಮ್ಮಟನ ಅಲಂಕಾರ ಗ್ರಂಥದಲ್ಲಿ ಪ್ರಯೋಗ ಉಪಪನ್ನವಾಗುತ್ತದೆ.

ತತ್ತ್ವನಿರ್ಣಯ ಟೀಕಾದಲ್ಲಿ 'ಸದಾಗಮ್ಯೆಕ ವಿಜ್ಞೇಯಮ್' ಎಂಬ ಆಚಾರ್ಯರ ಮಂಗಳ ಪದ್ಯದ ಪ್ರಯೋಗವನ್ನು ಹೀಗೆಯೇ ಸಮರ್ಥಿಸಲಾಗಿದೆ–

'ಸಂಖ್ಯಾವಾಚಕವಾದಾಗ ಮಾತ್ರ ಏಕ ಶಬ್ದಕ್ಕೆ 'ಪೂರ್ವಕಾಲೈಕ' ಇತ್ಯಾದಿ ಸೂತ್ರದಂತೆ ಸಮಾಸವಾಗಿ ಪೂರ್ವನಿಪಾತ ಬರುತ್ತದೆ. 'ಕೇವಲ' ಎಂಬ ಅರ್ಥ ಮಾಡಿದಾಗ ಆ ಸೂತ್ರದಿಂದ ಸಮಾಸವಲ್ಲ, ಆಗ 'ಏಕ' ಪದವು ಉತ್ತರಪದವಾಗಬಹುದು' ಎಂದು.

ಪ್ರಕೃತ 'ಗುಣೈಕರಾಶಿಮ್' ಎಂದರೆ 'ಗುಣಗಳ ಮುಖ್ಯರಾಶಿ' ಎಂದಾಗಲೀ ಏಕಶಬ್ದಕ್ಕೆ ಕೇವಲ ಎಂಬ ಅರ್ಥವಿದ್ದಾಗ ಗುಣಗಳಿಂದ ಭೇದರಹಿತ ರಾಶಿ, ಎಂದಾಗಲೀ ಅರ್ಥ.

## ಅಶೇಷದೋಷೋಜ್ಝಿತಮ್

**ಗುಣವತ್ ದೋಷಃ ನಾಶಂಕ್ಯಃ ಇತ್ಯಾಹ–ಅಶೇಷೇತಿ । ಚಿಂತಾಸಂತಾಪಾದಿ ದೋಷಹೀನಮ್ ಇತ್ಯರ್ಥಃ ॥**

ಗುಣದಂತೆ ದೋಷಗಳೂ ಭಗವಂತನಲ್ಲಿ ಇವೆ, ಎಂದು ಸಂದೇಹ ಪಡಬಾರದು. ಆದಕ್ಕಾಗಿ– 'ಅಶೇಷದೋಷೋಜ್ಝಿತಮ್' ಎಂಬ ವಿಶೇಷಣವಿದೆ. ಚಿಂತೆ–ದುಃಖ ಈ ಮೊದಲಾದ ದೋಷರಹಿತನಾದವನು ಎಂದು ಅಭಿಪ್ರಾಯ.

## ಅಪ್ರಮೇಯಮ್

**ನನು ಗುಣವಿಶಿಷ್ಟಸ್ಯ ಮಾಯಾಶಬಲತ್ವಾತ್ ಕಥಂ ದೋಷೋಜ್ಝಿತಮ್ ಇತಿ ಭಾವೇನ ಉಕ್ತಮ್–ಅಪ್ರಮೇಯಮ್–ದೇಶತೋऽಪರಿಚ್ಛಿನ್ನಮ್–ಇತಿ । ಶಬಲಂ ತು ಪರಿಚ್ಛಿನ್ನಮ್ ಇತ್ಯಭ್ಯುಪೇತತ್ವಾತ್ ಇತಿ ಭಾವಃ ।**

**ತತ್ರ ಹೇತುಃ–ನಿತ್ಯಮಿತಿ–ಅನಿವರ್ತ್ಯಮ್ । ಶಬಲಂ ತು ಮಿಥ್ಯಾ- ತ್ವಾತ್ ನಿವರ್ತ್ಯಮ್ ಇತ್ಯರ್ಥಃ ॥**

ಅದ್ವೈತವಾದವನ್ನು ಅವಲಂಬಿಸಿ ಪ್ರಶ್ನೆ–ಗುಣವಿಶಿಷ್ಟನಾದ ಬ್ರಹ್ಮ ಸುಗುಣಬ್ರಹ್ಮ. ಅವನು 'ಮಾಯಾ' ಶಬಲ. ಮಾಯೆಯೇ ಒಂದು ದೋಷ. ಹೀಗಾಗಿ ಅವನು ಸದೋಷ, ನಿರ್ದೋಷ

ಹೇಗೆ? ಅದರ ನಿರಾಸಕ್ಕಾಗಿ 'ಅಪ್ರಮೇಯಮ್' ಎಂಬ ವಿಶೇಷಣ ಇದೆ. 'ಮಾ' ಧಾತುವಿಗೆ ಅಳತೆ ಎಂದರ್ಥ. ಪ್ರಮೇಯ ಎಂದರೆ ಅಳತೆ ಇರುವ ವಸ್ತು, ಅರ್ಥಾತ್ ದೇಶದ-ಕಾಲದ ಪರಿಮಿತಿ ಇರುವ ವಸ್ತು. ಪ್ರಕೃತ ರಮೇಶನು ಅಪ್ರಮೇಯ-ದೇಶದ-ಕಾಲದ ಮಿತಿ ಇಲ್ಲದವ. ಅದಕ್ಕೆ ಕಾರಣವನ್ನು 'ನಿತ್ಯಮ್' ಎಂದು ಹೇಳಲಾಗಿದೆ. ಅಂದರೆ ನಿವೃತ್ತಿ ಇಲ್ಲದವ ಎಂದು ಅರ್ಥ. ಶಬಲಬ್ರಹ್ಮ ಮಿಥ್ಯಾ. ಮಾಯಾ ನಿವೃತ್ತಿಯಾದಾಗ ಶಬಲಬ್ರಹ್ಮ ನಿವೃತ್ತಿಯಾಗುತ್ತಾನೆ. ಅವನು ಅನಿತ್ಯ. ಆದ್ದರಿಂದ ಅಪ್ರಮೇಯನಲ್ಲ. ಪ್ರಕೃತ ಮುಖ್ಯಬ್ರಹ್ಮನೇ ಗುಣಪೂರ್ಣ-ದೋಷದೂರ.

## ಮುಮುಕ್ಷಿಭಿಃ ಸೇವ್ಯಮ್

**ಏವಂ ದೇಶ-ಕಾಲ-ಗುಣ-ಆನಂತ್ಯರೂಪ ಬ್ರಹ್ಮಶಬ್ದಾರ್ಥಸ್ಯ ಅತ್ರೋಕ್ತ್ಯಾ ರಮೇಶ ಏವ ಬ್ರಹ್ಮಶಬ್ದಾರ್ಥಃ ಇತಿ ಸೂಚಿತಮ್ ।**

**ಅತ ಏವ ಮುಮುಕ್ಷುಭಿಃ ಸೇವ್ಯಮ್, ನ ತು ಮಂದೋಪಾಸ್ಯಮ್, ಇತ್ಯರ್ಥಃ ।**

**ಕಿಂ ಫಲಮ್? ಅನಂತ ಸೌಖ್ಯಪ್ರದಮ್, ಅವಿನಾಶಿ ಸುಖಪ್ರದ ಮಿತ್ಯರ್ಥಃ । ಸ್ವಾರ್ಥೇ ಷ್ಯಞ್ ।**

ಹೀಗೆ ಇಲ್ಲಿ 'ಅನಂತಕಲ್ಯಾಣ ಗುಣೈಕರಾಶಿಮ್' ಎಂಬ ವಿಶೇಷಣದಿಂದ ರಮೇಶನಲ್ಲಿ ಗುಣಾನಂತ್ಯವಿದೆ ಎಂದೂ, 'ಅಪ್ರಮೇಯಂ, ನಿತ್ಯಮ್' ವಿಶೇಷಣಗಳಿಂದ ದೇಶ-ಕಾಲಗಳ ಆನಂತ್ಯ ಎದೆ ಎಂದೂ ಹೇಳಿರುವುದರಿಂದ ಬ್ರಹ್ಮಶಬ್ದದ ಅರ್ಥವಾದ ತ್ರಿವಿಧಾನಂತ್ಯವೂ ಅವನಲ್ಲಿ ಇದೆ, ಎಂದು ಸೂಚಿಸಲಾಗಿದೆ. ಹೀಗೆ ರಮೇಶನೇ ಬ್ರಹ್ಮಶಬ್ದಾರ್ಥ. ಅವನು ಮುಖ್ಯಬ್ರಹ್ಮನಾದುದ ರಿಂದಲೇ ಮೋಕ್ಷಾರ್ಥಿಗಳಿಂದ ಸೇವ್ಯ, ಅಜ್ಞೋಪಾಸ್ಯನಲ್ಲ, ಮಂದರಿಂದ ಸೇವ್ಯನಾದವನು ಸಗುಣ ಬ್ರಹ್ಮ.

'ಯೇ ಮಂದಾಃ ತೇಽನುಕಂಪ್ಯಂತೇ ಸವಿಶೇಷ –ವಿಶೇಷಣೈಃ ॥'

ಅವರಿಗೆ ಸಿಗುವ ಫಲ ಏನು? ಅನಂತಸೌಖ್ಯ-ನಿತ್ಯಸುಖ. ಸುಖಮೇವ=ಸೌಖ್ಯಮ್। ಸೌಖ್ಯವೆಂದರೆ ಸುಖವೇ. ಅಲ್ಲಿರುವ ಷ್ಯಞ ಪ್ರತ್ಯಯಕ್ಕೆ ಅರ್ಥವಿಲ್ಲ, ಸ್ವಾರ್ಥದಲ್ಲೇ ಬಂದಿದೆ.

## ಅನುಬಂಧ ಚತುಷ್ಟಯ

**ಅತ್ರ ನ್ಯಾಯಚಿಂತಾಪರೇ ಗ್ರಂಥೇ ಬ್ರಹ್ಮತಂತ್ರಾಧ್ಯಾಯ-ಚತುಷ್ಟಯ-ಉಕ್ತ-ಗುಣವೈಶಿಷ್ಟ್ಯೋಕ್ತಿಃ,**

**ಪ್ರಮಾಣ–ನ್ಯಾಯ–ಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನ–ನ್ಯಾಯೈಸ್ತು ತತ್ಸಿದ್ಧೈಃ ಮೀಮಾಂಸಾ ಮೇಯಶೋಧನಮ್ ॥**

**ಇತ್ಯುಕ್ತ್ಯಾ ಬ್ರಹ್ಮತಂತ್ರೋಕ್ತ–ಪ್ರಮೇಯ–ನಿರ್ಣಯೋಪಯುಕ್ತಪ್ರಮಾಣ–ನ್ಯಾಯಚಿಂತಾಪರತ್ವಾತ್ ತದ್ವಿಷಯಾದಿನ್ನೈವ ಅಸ್ಯ ವಿಷಯಾದಿಮತ್ತಾ ಇತಿ ಸೂಚನಾರ್ಥಾ ॥**

ತರ್ಕತಾಂಡವ ಗ್ರಂಥವು ಪ್ರಮಾಣಗಳಲ್ಲಿ ಒಂದಾದ ಅನುಮಾನ ಪ್ರಮಾಣದ ವಿಮರ್ಶೆಯನ್ನು ಮಾಡುತ್ತದೆ. ಅಂತಹ ಗ್ರಂಥಕ್ಕೆ ಮಂಗಲಪದ್ಯವನ್ನು ರಚಿಸುವಾಗ ಬ್ರಹ್ಮಸೂತ್ರಗಳ ಅಧ್ಯಾಯ ಚತುಷ್ಟಯ ಪ್ರತಿಪಾದ್ಯವಾದ ಗುಣಪೂರ್ಣತ್ವ–ನಿರ್ದೋಷತ್ವ–ಮುಮುಕ್ಷೂಪಾಸ್ಯತ್ವ–ಮುಕ್ತಪ್ರಾಪ್ಯತ್ವ ಗುಣಗಳ ಪ್ರಸ್ತಾಪದ ಔಚಿತ್ಯವೇನು?

'ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರತ್ಯಕ್ಷಾದಿಪ್ರಮಾಣಗಳು ಮತ್ತು ವ್ಯಾಪ್ತಿಯನ್ನು ಆಧಾರವಾಗಿ ಕೊಟ್ಟು ಪ್ರಮೇಯಗಳ ನಿರ್ಣಯವನ್ನು ಮಾಡಲಾಗುತ್ತದೆ. ಅದಕ್ಕೆ ಬೇಕಾಗುವ ಪ್ರಮಾಣ ಮತ್ತು ವ್ಯಾಪ್ತಿಯ ವಿಮರ್ಶೆಯನ್ನು ಬ್ರಹ್ಮತರ್ಕದಲ್ಲಿ ಮಾಡಲಾಗುತ್ತದೆ' ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರಿಂದ ಬ್ರಹ್ಮತಂತ್ರಕ್ಕೂ ಪ್ರಮಾಣ ವಿಮರ್ಶಾತ್ಮಕ ತರ್ಕಶಾಸ್ತ್ರಕ್ಕೂ ಏಕಶಾಸ್ತ್ರತ್ವವಿದೆ, ಎಂದು ತಿಳಿಯುತ್ತದೆ. ಹೀಗಾಗಿ ಬ್ರಹ್ಮತಂತ್ರಕ್ಕೆ ಯಾವುದು ವಿಷಯ–ಪ್ರಯೋಜನಾದಿಗಳಿವೆಯೋ ಅವೇ ಪ್ರಮಾಣ–ನ್ಯಾಯವಿಮರ್ಶೆ ಮಾಡುವ ಈ ಗ್ರಂಥಕ್ಕೂ ವಿಷಯಾದಿಗಳು. ಇದನ್ನು ಸೂಚನೆ ಮಾಡುವ ಕಾರಣದಿಂದ ಬ್ರಹ್ಮತಂತ್ರೋಕ್ತ ಗುಣವಿಶಿಷ್ಟನಾಗಿ ರಮೇಶನನ್ನು ಇಲ್ಲಿ ನಮಿಸಲಾಗಿದೆ.

## ಮೂರೇ ಪರಿಚ್ಛೇದ ಏಕೆ?

**ಏವಂ ಚ ನ್ಯಾಯಪಂಚಾಧ್ಯಾಯಾನುರೋಧೇನ ಕುಸುಮಾಂಜಲೌ ಪಂಚ ಪರಿಚ್ಛೇದ–ಕೃತಿವತ್ ಬ್ರಹ್ಮಸೂತ್ರಾನುರೋಧೇನ ಪರಿಚ್ಛೇದಚತುಷ್ಟಯೇ ಕಾರ್ಯೇಽಪಿ ಪ್ರಮಾಣತ್ರಿತ್ವ–ದ್ಯೋತನಾಯ ಪರಿಚ್ಛೇದತ್ರಯಕೃತಿಃ ಇತಿ ॥**

ನ್ಯಾಯಸೂತ್ರಗಳು ಐದು ಅಧ್ಯಾಯಗಳಲ್ಲಿ ವಿಭಾಗಿಸಲ್ಪಟ್ಟಿವೆ. ಅದಕ್ಕೆ ಅನುಸಾರವಾಗಿ ಉದಯನಾಚಾರ್ಯರು ನ್ಯಾಯಕುಸುಮಾಂಜಲಿಯಲ್ಲಿ ಐದು ಸ್ತಬಕಗಳನ್ನು ಮಾಡಿದ್ದಾರೆ. ಆದರೆ ಬ್ರಹ್ಮಸೂತ್ರದಲ್ಲಿ ನಾಲ್ಕು ಅಧ್ಯಾಯಗಳಾದರೂ ತರ್ಕತಾಂಡವದಲ್ಲಿ ಮೂರೇ ಪರಿಚ್ಛೇದಗಳು. ಏಕೆಂದರೆ, ಬ್ರಹ್ಮಸೂತ್ರ ಪ್ರಮೇಯಶಾಸ್ತ್ರ. ಪ್ರಮೇಯಗಳಿಗೆ ಅನುಗುಣವಾಗಿ ನಾಲ್ಕು ಅಧ್ಯಾಯಗಳು ಅಲ್ಲಿವೆ. ಆದರೆ ಇದು ಪ್ರಮಾಣಶಾಸ್ತ್ರ. ಪ್ರಮಾಣಗಳು ಮೂರೇ. ಆದ್ದರಿಂದ ಇಲ್ಲಿ ಕುಸುಮಾಂಜಲಿ ಗ್ರಂಥದಂತೆ, ಪರಿಚ್ಛೇದಗಳೂ ಮೂರೇ.

## ಗುರು ನಮನ

**श्रीशपादाम्बुजासक्तः करुणापूरशीतलः ।**

**मध्वाख्यो मरुदंशो मे सन्तापान् हन्तु सन्ततम् ।। २ ।।**

ಕಮಲಾಪತಿಯ ಪಾದಕಮಲದಲ್ಲಿ ಆಸಕ್ತರಾದ, ಕಾರುಣ್ಯವೆಂಬ ಜಲಕಣಗಳಿಂದ ತಂಪಾದ ಶ್ರೀಮಧ್ವರೆಂಬ ವಾಯ್ವಂಶರು ನನ್ನ ಸಂತಾಪವನ್ನು ಸತತ ಪರಿಹರಿಸಲಿ.

## ನ್ಯಾಯದೀಪ

**ದೇವತಾ ನತಿ ಸಮನಂತರಂ ಭಾಷ್ಯಕರ್ತ್ರ್ಯನ್ ಅರ್ಥಯತೇ–ಶ್ರೀಶೇತಿ ॥ ಅತ್ರಾದ್ಯೇನ ವಿಶೇಷಣೇನ ಸೌರಭ್ಯಸ್ಯ, ದ್ವಿತೀಯೇನ ಶೈತ್ಯಸ್ಯ, ಅಂಶ ಇತಿ ಮಾಂದ್ಯಸ್ಯ ವಾಯುಗುಣಸ್ಯ ಉಕ್ತಿಃ ಜ್ಞೇಯಾ ॥**

## ಶ್ರೀಜಯತೀರ್ಥರವಂದನೆ

**आनन्दतीर्थोपदिष्टो निधिर्नारायणाह्वयः ।**

**प्रदर्शितो येन सम्यग् जयतीर्थं तमाश्रये ।। ३ ।।**

ಶ್ರೀಮದಾನಂದತೀರ್ಥರು ಉಪದೇಶಿಸಿದ ಶ್ರೀಮನ್ನಾರಾಯಣನೆಂಬ ಗುಪ್ತನಿಧಿಯು ಯಾರಿಂದ ಎಲ್ಲರೂ ತಿಳಿಯುವಂತೆ ಪ್ರದರ್ಶಿತವಾಯಿತೋ ಅಂತಹ ಶ್ರೀಮಜ್ಜಯತೀರ್ಥರನ್ನು ಆಶ್ರಯಿಸುತ್ತೇನೆ.

## ನ್ಯಾಯದೀಪ

**ಟೀಕಾಕರ್ತ್ರ್ಯನ್ ನಮತಿ – ಆನಂದೇತಿ ॥ ಫಲೋಕ್ತಿಪೂರ್ವಂ ಚಿಕೀರ್ಷಿತಂ ಪ್ರತಿಜಾನೀತೇ – ಶ್ರೀಮದಿತಿ ॥**

## ಕರ್ತವ್ಯ ಪ್ರತಿಜ್ಞಾ

**श्रीमदानन्दतीर्थार्यस्वामिनः कमलापतेः ।**

**प्रीतये क्रियते व्यासयतिना तर्कताण्डवम् ।। ४ ।।**

ಶ್ರೀಮದಾನಂದತೀರ್ಥರಿಗೆ ಒಡೆಯನಾದ ಲಕ್ಷ್ಮೀರಮಣನ ಪ್ರೀತಿಗಾಗಿ ವ್ಯಾಸಯತಿ ಯಿಂದ ತರ್ಕತಾಂಡವ ಗ್ರಂಥವು ರಚಿಸಲ್ಪಡುತ್ತದೆ.

**स्वतः प्रमाणैराम्नायैरादरेणादिवर्जितैः ।**
**आख्यातानन्तकल्याणगुणं श्रीरमणं भजे ॥ ५ ॥**

ಪ್ರಮಾಣಾಂತರದ ಅಪೇಕ್ಷೆ ಇಲ್ಲದೆಯೂ ಪರಮಪ್ರಮಾಣವೆನಿಸಿರುವ, ಉತ್ಪತ್ತಿರಹಿತ ವಾದ, ಸರ್ವದಾ ಸ್ವರ–ವರ್ಣ–ಪದ–ವಾಕ್ಯಗಳ ಆನುಪೂರ್ವಿಯಲ್ಲಿ ವ್ಯತ್ಯಾಸವಿಲ್ಲದ ವೇದಗಳಿಂದ ಬಣ್ಣಿಸಲ್ಪಟ್ಟ ಅನಂತಗುಣಾಕರನಾದ ಲಕ್ಷ್ಮೀಪತಿಯನ್ನು ಭಜಿಸುತ್ತೇನೆ.

## ನ್ಯಾಯದೀಪ

**'ಅನುಮಾನಿಕತ್ವಾತ್ ಈಶ್ವರಾತ್ಮನಃ ನ ಅಷ್ಟಗುಣಾಧಿಕವತ್ವಮ್' ಇತ್ಯತಃ ಆದ್ಯಪದ್ಯೋಕ್ತ–ರಮೇಶ–ವಿಶೇಷಣಾನಿ ಮಾನೋಕ್ತ್ಯಾ ಸ್ಥಿರೀಕುರ್ವನ್ ತಾಂಡವಕರಣಸ್ಯ ಪೂರ್ವರಂಗಂ ನಿಬಧ್ನಾತಿ–ಸ್ವತ ಇತಿ ॥**

ಈಶ್ವರನು ಅನುಮಾನ–ಪ್ರಮಾಣಸಿದ್ಧ. ಜಗತ್ಕರ್ತೃತ್ವೇನ ಅವನನ್ನು ಅನುಮಾನ ಮಾಡಿದಾಗ ಕರ್ತೃತ್ವಕ್ಕೆ ಆಗತ್ಯವಾದ ಜ್ಞಾನ, ಇಚ್ಛಾ, ಪ್ರಯತ್ನಗಳೆಂಬ ಮೂರು ವಿಶೇಷಗುಣಗಳು ಸಿದ್ಧವಾಗುತ್ತವೆ. ಸಕಲದ್ರವ್ಯ ಸಾಧಾರಣವಾದ ಸಂಖ್ಯಾದಿ ಪಂಚಕಗಳು ಸೇರಿದರೆ ಒಟ್ಟು ಎಂಟು ಗುಣಗಳು. ಅನಂತಗುಣಗಳು ಹೇಗೆ?

ಈ ಆಕ್ಷೇಪದ ಪರಿಹಾರಕ್ಕಾಗಿ ಮೊದಲ ಮಂಗಲಪದ್ಯದಲ್ಲಿ ರಮೇಶನಿಗೆ ಹೇಳಿದ ಅನಂತಗುಣಗಳಿಗೆ ಪ್ರಮಾಣವನ್ನು ಹೇಳಿ ದೃಢಪಡಿಸುತ್ತಾ 'ತಾಂಡವ' ಮಾಡುವುದಕ್ಕೆ ಬೇಕಾದ ಪೂರ್ವರಂಗವನ್ನು ಸಿದ್ಧಪಡಿಸಲು 'ಸ್ವತಃ ಪ್ರಮಾಣೈಃ' ಎಂಬ ಐದನೆಯ ಪದ್ಯವನ್ನು ರಚಿಸಲಾಗಿದೆ.

## ಆಮ್ನಾಯವೆಂದರೆ

**ಆಮ್ನಾಯೈಃ=ಸಜಾತೀಯಾನುಪೂರ್ವೀವಿಶಿಷ್ಟವೇದ್ಯೈಃ ।**
**ಆಖ್ಯಾತೇತಿನಿತ್ಯಸಾಪೇಕ್ಷತ್ವಾತ್ ಸಮಾಸಃ ।**
**ವೇದಾಸ್ತೇ ನಿತ್ಯವಿನ್ನತ್ವಾತ್ ಶ್ರುತಯಶ್ಚಾಖಿಲೈಃ ಶ್ರುತೇಃ ।**
**ಆಮ್ನಾಯೋಽನನ್ಯಥಾಪಾಠಾತ್...... ॥**

**ಇತಿ ತತ್ತ್ವನಿರ್ಣಯೋಕ್ತೇಃ ।**

ಆಮ್ನಾಯ ಎಂದರೆ ಪ್ರತಿಕಲ್ಪದಲ್ಲಿ ಒಂದೇರೀತಿಯ ಆನುಪೂರ್ವೀ ಇರುವ ವೇದಗಳು. ವಿಷ್ಣುತತ್ತ್ವನಿರ್ಣಯದಲ್ಲಿ ಆಚಾರ್ಯರು ಇದೇ ಅರ್ಥವನ್ನು ಹೇಳಿದ್ದಾರೆ–

''ನಿತ್ಯವೂ ಇರುವುದರಿಂದ ಅವುಗಳು ವೇದಗಳು. ಎಲ್ಲರೂ ಕೇಳಿದವರೇ, ರಚಿಸಿದವರು ಯಾರೂ ಇಲ್ಲ. ಆದರಿಂದಾಗಿ ಅವುಗಳು ಶ್ರುತಿಗಳು. ಪಾಠವ್ಯತ್ಯಾಸ ಇಲ್ಲದೆ ಪಠಿಸಲ್ಪಡುವ ಕಾರಣ ಅವುಗಳು ಆಮ್ನಾಯಗಳು''.

'ಆಖ್ಯಾತಾನಂತಗುಣ' ಎಂಬ ಸಮಸ್ತಪದದಲ್ಲಿ ಸೇರಿದ 'ಆಖ್ಯಾತ' ಪದವು ಸಮಾಸ ಅಘಟಕವಾದ 'ವೇದ್ಯೈಃ' ಎಂಬ ಪದದೊಂದಿಗೆ ಅನ್ವಯ ಸಾಪೇಕ್ಷವಾಗಿದೆ. ಹೀಗೆ ಸಾಮರ್ಥ್ಯ ವಿಲ್ಲದಿರುವುದರಿಂದ ಸಮಾಸ ಹೊಂದಬಾರದು. ಆದರೂ ಅದು ನಿತ್ಯಸಾಪೇಕ್ಷ ಪದವಾದುದರಿಂದ 'ಚೈತ್ರಸ್ಯ ಗುರುಕುಲಮ್' ಎಂಬ ಪದದಂತೆ ಇಲ್ಲಿ ಸಮಾಸವಾಗಿದೆ.

**ಗುಣಮಿತಿ ನಿರ್ದೋಷಾದೇರುಪಲಕ್ಷಣಮ್ । ಗುಣಪದೇನ ವಾ ನಿರ್ದೋಷತ್ವ-ಮುಮುಕ್ಷುಸೇವ್ಯತ್ವ-ಅನಂತಸೌಖ್ಯಪ್ರದತ್ವರೂಪ ಧರ್ಮಗ್ರಹಃ ।**

**ಆಮ್ನಾಯತ್ವೇ ಹೇತುಃ-ಆದಿವರ್ಜಿತೈಃ ಇತಿ । ಸ್ವತಂತ್ರಪುರುಷಾಪ್ರಣೇತೃಃ ಇತ್ಯರ್ಥಃ ।**

'ಆಖ್ಯಾತಾನಂತ-ಕಲ್ಯಾಣಗುಣಮ್' ಎಂಬಲ್ಲಿ ಗುಣ ಪದೇನ ಅಜಹಲ್ಲಕ್ಷಣಯಾ ಪ್ರಥಮ ಶ್ಲೋಕದಲ್ಲಿ ಹೇಳಿದ ನಿರ್ದೋಷತ್ವಾದಿ ಎಲ್ಲಾ ಧರ್ಮಗಳನ್ನೂ ತೆಗೆದುಕೊಳ್ಳಬೇಕು.

ಅಥವಾ, ಗುಣಪದಕ್ಕೆ ಕಲ್ಯಾಣಗುಣಗಳು, ನಿರ್ದೋಷತ್ವ, ಮುಮುಕ್ಷುಸೇವ್ಯತ್ವ ಅನಂತಸೌಖ್ಯಪ್ರದತ್ವ ಈ ಎಲ್ಲಾ ಧರ್ಮಗಳೂ ವಾಚ್ಯಾರ್ಥ.

ವೇದಗಳು ಆಮ್ನಾಯ ಎನಿಸಲು ಹೇತು-ಆದಿವರ್ಜಿತೈಃ ಎಂದು. ಅದರ ಅಭಿಪ್ರಾಯ ವೇದವು ಸ್ವತಂತ್ರ ಪುರುಷನಿಂದ ರಚಿತವಲ್ಲ, ಎಂದು. ವೇದವನ್ನು ಯಾರೂ ರಚಿಸಿಲ್ಲ ವಾದುದರಿಂದಲೇ ಅದರ ಪದ-ವರ್ಣ-ವಾಕ್ಯಾನುಪೂರ್ವೀ ಇವೆಲ್ಲವೂ ಅನಾದಿಕಾಲದಿಂದ ಒಂದೇ ರೀತಿ ಇವೆ.

## ವೇದವು ಸ್ವತಃ ಪ್ರಮಾಣ

**ನನು ಅಪೌರುಷೇಯೇ ವೇದೇ ಅದೃಷ್ಟಾರ್ಥಕೇ ಚ ಆಪ್ತೋಕ್ತತ್ವ ಫಲಸಂವಾದಾದಿ ಹೇತೋಃ ಪ್ರಾಮಾಣ್ಯನಿಶ್ಚಾಯಕಸ್ಯ ಅಭಾವಾತ್,**

**ನಿಶ್ಚಿತಪ್ರಾಮಾಣ್ಯಕಸ್ಯೈವ ಪ್ರಮಾಣಸ್ಯ ಅರ್ಥಸತ್ವ-ನಿರ್ಣಾಯಕತ್ವಸ್ಯ ಅಗ್ರೇ ಪ್ರಾಮಾಣ್ಯನಿಶ್ಚಯ ಪ್ರವರ್ತಕವಾದೇ ವ್ಯಕ್ತತ್ವಾತ್,**

**ಕಥಂ ವೇದೇ ಪ್ರಮಾಣ್ಯನಿಶ್ಚಯಃ ? ಆಪ್ತೋಕ್ತತ್ವಗುಣಾಭಾವಾತ್ ಪ್ರಾಮಾಣ್ಯಂ ವಾ ಕಥಮ್ ?**

**ಇತ್ಯತಃ 'ನ ವಿಲಕ್ಷಣತ್ವಾದಸ್ಯ' ಇತ್ಯಧಿಕರಣಸಿದ್ಧಾಂತಮಾಹ – ಸ್ವತಃ ಪ್ರಮಾಣ್ಯೈಃ ಇತಿ ॥**

ಅ. ವೇದವು ಅಪೌರುಷೇಯ. ಆದ್ದರಿಂದ ಆಪ್ತಪ್ರಣೀತ ಎಂಬ ಕಾರಣದಿಂದ ಅದನ್ನು ಪ್ರಮಾಣ ಎಂದು ನಿಶ್ಚಯಿಸಲಾಗದು.

ಆ. ಅದರಲ್ಲಿ ಕರ್ಮಗಳಿಗೆ ಹೇಳಿದ ಫಲ ಸ್ವರ್ಗಾದಿಗಳು.ಅವು ಇಹದಲ್ಲಿ ಸಿಗುವಂತವುಗಳಲ್ಲ. ಅದೃಷ್ಟ ಫಲಗಳು. ಹೀಗಾಗಿ ವೇದದಲ್ಲಿ ಹೇಳಿದ ಯಜ್ಞಾದಿ ಕರ್ಮಗಳನ್ನು ಮಾಡಿದಾಗ ಫಲವು ದೊರೆಯುತ್ತಿದೆಯಾದ್ದರಿಂದ ವೇದವು ಪ್ರಮಾಣ, ಎಂದೂ ನಿಶ್ಚಯಿಸಲಾಗದು.

ಹೀಗೆ ವೇದಗಳ ಪ್ರಮಾಣ್ಯವನ್ನು ನಿಶ್ಚಯಿಸುವುದು ಸಾಧ್ಯವಿಲ್ಲ. ಪ್ರಾಮಾಣ್ಯ ನಿಶ್ಚಯವಾಗದೇ ಇದ್ದರೆ ವೇದ ಹೇಳಿದ ವಿಷಯವು ನಿರ್ಧಾರವಾಗುವುದಿಲ್ಲ. ಮುಂದೆ ತರ್ಕತಾಂಡವ ಗ್ರಂಥದ 'ಪ್ರಾಮಾಣ್ಯ ನಿಶ್ಚಯಸ್ಯ ಪ್ರವರ್ತಕತ್ವಮ್' ಎಂಬ ಆರನೇ ಪ್ರಕರಣದಲ್ಲಿ 'ಯಾವ ಗ್ರಂಥದಲ್ಲಿ ಪ್ರಾಮಾಣ್ಯವು ನಿಶ್ಚಯವಾಗುವುದೋ ಅಂತಹ ಗ್ರಂಥದಿಂದ ಅಥವಾ ಜ್ಞಾನದದಿಂದ ಮಾತ್ರ ಅರ್ಥಸತ್ವವು ನಿರ್ಧಾರವಾಗುತ್ತದೆ' ಎಂದು ನಿರ್ಣಯಿಸಲಾಗಿದೆ.

ಆದ್ದರಿಂದ ವೇದದಲ್ಲಿ ಹೇಳಿರುವ ವಿಷಯಗಳ ನಿರ್ಧಾರಕ್ಕೆ ಕಾರಣವಾದ ಪ್ರಾಮಾಣ್ಯನಿಶ್ಚಯ ಹೇಗೆ? ಪ್ರಾಮಾಣ್ಯಕ್ಕೆ ಕಾರಣವಾದ ಆಪ್ತೋಕ್ತತ್ವವು ಇಲ್ಲದಿರುವುದರಿಂದ ವೇದವು ಪ್ರಮಾಣವಾಗುವುದಾದರೂ ಹೇಗೆ?

ಈ ಆಕ್ಷೇಪದ ಪರಿಹಾರಕ್ಕಾಗಿ 'ನ ವಿಲಕ್ಷಣತ್ವಾತ್' ಎಂಬ ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಪ್ರಥಮಪಾದದ ಎರಡನೆಯ ಅಧಿಕರಣದಲ್ಲಿ ಹೇಳಿರುವ ಸಿದ್ಧಾಂತವನ್ನೇ ಗ್ರಂಥಕಾರರು ತಿಳಿಸಿದ್ದಾರೆ. ''ಸ್ವತಃ ಪ್ರಮಾಣ್ಯೈಃ' ಎಂದು.

## ಸ್ವತಃ ಪ್ರಮಾಣವೆಂದರೆ

**ಸ್ವತಃ ಪ್ರಮಾಣ್ಯೈರಿತಿ ॥ ಕರಣೇ ಲ್ಯುಟ್ । ಜ್ಞಾನಜನನಶಕ್ತಿ–ಗ್ರಾಹಕಮಾತ್ರಗ್ರಾಹ್ಯ – ಪ್ರಮಾಜನನ – ಶಕ್ತಿಮದ್ಭಿಃ ಇತ್ಯರ್ಥಃ । ತಥಾ ಜ್ಞಾನಜನನ– ಶಕ್ತಿತ ಏವ ಪ್ರಮಾಜನಕೈಃ ಇತ್ಯರ್ಥಃ ॥**

ಪ್ರಮಾಣ ಪದದಲ್ಲಿ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಇದೆ. ಪ್ರಮೀಯತೇ ಅನೇನ ಇತಿ ಪ್ರಮಾಣಮ್। ಯಥಾರ್ಥಜ್ಞಾನ ಸಾಧನ ಎಂದು ಅರ್ಥ. ಕರಣದಲ್ಲಿರುವ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವದ ಪರಿಷ್ಕೃತರೂಪ–ಕರಣದಲ್ಲಿ ಜ್ಞಾನಜನನಶಕ್ತಿ ಮತ್ತು ಪ್ರಮಾಜನನ ಶಕ್ತಿ ಎರಡೂ ಒಂದೇ ಅಥವಾ ಸಹಜ ಎಂದು.

ನೈಯಾಯಿಕರು, ಕರಣಗಳಲ್ಲಿ ಜ್ಞಾನ ಜನನಶಕ್ತಿ ಸ್ವಾಭಾವಿಕ, ಪ್ರಮಾಜನನ ಶಕ್ತಿಯು ಗುಣದಿಂದಾಗಿ ಆಹಿತ, ಎನ್ನುತ್ತಾರೆ. ಆದರೆ ಸ್ವತಸ್ತ್ವವಾದಿಗಳು ಆ ಶಕ್ತಿ ಸಹಜ ಎನ್ನುತ್ತಾರೆ. ಇದೇ ಕರಣಗಳಿಗೆ ಸ್ವತಃ ಪ್ರಾಮಾಣ್ಯ.

ಇನ್ನು ಕರಣದಲ್ಲಿ ಜ್ಞಪ್ತೌ ಸ್ವತಸ್ತ್ವ-'ಜ್ಞಾನಜನನಶಕ್ತಿ ಗ್ರಾಹಕ-ಮಾತ್ರಗ್ರಾಹ್ಯಪ್ರಮಾ ಜನನಶಕ್ತಿ ಮತ್ವಂ' ಅಂದರೆ, ಕರಣದಲ್ಲಿ ಜ್ಞಾನಜನಕತ್ವವನ್ನು ಯಾವುದರಿಂದ (ಅನ್ವಯವ್ಯತಿರೇಕಗಳಿಂದ) ತಿಳಿಯುತ್ತೇವೆಯೋ ಅದರಿಂದಲೇ ಪ್ರಮಾಜನಕತ್ವವನ್ನೂ ತಿಳಿಯುತ್ತೇವೆ.

ಒಟ್ಟಿನಲ್ಲಿ 'ಸ್ವತಃ ಪ್ರಮಾಣ್ಯೈಃ' ಎಂದರೆ ಜ್ಞಾನಜನಕವಾದ ಶಕ್ತಿಯಿಂದಲೇ ಯಥಾರ್ಥಜ್ಞಾನವನ್ನೂ ಹುಟ್ಟಿಸುವ (ವೇದಗಳಿಂದ) ಎಂದು ಅರ್ಥ.

## ವೇದದಲ್ಲಿ ಜ್ಞಪ್ತಿ ಮತ್ತು ಉತ್ಪತ್ತಿಯಲ್ಲಿ ಪ್ರಾಮಾಣ್ಯ ಸ್ವತಸ್ತ್ವ

**ಜ್ಞಪ್ತೌ ಉತ್ಪತ್ತೌ ಚ ಅನ್ಯ-ಅನಪೇಕ್ಷಣಾತ್**

**ಅ. ಜ್ಞಾನಜನನಶಕ್ತಿ-ಗ್ರಾಹಕೇಣೈವ ಪ್ರಮಾಜನನಶಕ್ತಿಗ್ರಹ- ರೂಪ ಪ್ರಾಮಾಣ್ಯಗ್ರಹಸ್ಯ,**

**ಆ. ಜ್ಞಾನಜನನ ಶಕ್ತ್ಯೈವ ಪ್ರಮೋತ್ಪಾದಕತ್ವಸ್ಯ ಚ,**

**ಸಂಭವಾತ್, ಅಪವಾದಕಸ್ಯ ಚ ದೋಷಸ್ಯ ವೇದಾಪೌರುಷೇಯತ್ವವಾದೇ ವಕ್ಷ್ಯಮಾಣದಿಶಾ ಅಪೌರುಷೇಯೇ ಅಭಾವನಿಶ್ಚಯಾತ್ ಇತಿ ಭಾವಃ ॥**

ಪ್ರಾಮಾಣ್ಯವು ಹುಟ್ಟಲು ಅಥವಾ ಅದನ್ನು ತಿಳಿಯಲು ಪ್ರತ್ಯೇಕವಾದ ಒಂದು ಕಾರಣದ ಅಗತ್ಯವಿಲ್ಲ. ಆದ್ದರಿಂದ ಕರಣಪ್ರಾಮಾಣ್ಯವು ಉತ್ಪತ್ತೌ ಮತ್ತು ಜಪ್ತೌ ಸ್ವತಃ.

**ಜಪ್ತೌಸ್ವತಸ್ತ್ವ**-ಚಕ್ಷುರಾದಿ ಕರಣಗಳಲ್ಲಿ ಜ್ಞಾನಜನನ ಶಕ್ತಿಯು ಅನ್ವಯ-ವ್ಯತಿರೇಕಗಳಿಂದ ತಿಳಿಯಲ್ಪಡುತ್ತದೆ. ಅದೇ ಅನ್ವಯವ್ಯತಿರೇಕದಿಂದ ಪ್ರಮಾಜನನ ಶಕ್ತಿಯೂ ತಿಳಿಯಲ್ಪಡುತ್ತದೆ.

**ಉತ್ಪತ್ತೌಸ್ವತಸ್ತ್ವ**-ಕರಣಗಳಲ್ಲಿ ಇರುವ ಜ್ಞಾನಜನನ ಶಕ್ತಿಯೇ ಪ್ರಾಮಾಣ್ಯಕ್ಕೂ ಜನಕವಾಗಿದೆ. ಅಂದರೆ, ಕರಣವು ಜ್ಞಾನಜನಕವಾದರೆ ಪ್ರಮಾಣವಾಗಿದೆ ಎಂದೇ ಅರ್ಥ.

ಇಂತಹ ಉತ್ಪತ್ತೌ ಮತ್ತು ಜ್ಞಪ್ತೌ ಸ್ವತಸ್ತ್ವವು ಇಲ್ಲದೇ ಇರಬೇಕಾದರೆ ಕರಣದಲ್ಲಿ ದೋಷಗಳೇನಾದರೂ ಇರಬೇಕು. ಆದರೆ, ವೇದವು ಅಪೌರುಷೇಯವಾದುದರಿಂದ ಅಂತಹ ದೋಷಗಳು ವೇದದಲ್ಲಿ ಇರಲು ಸಾಧ್ಯವಿಲ್ಲ. ಇದನ್ನು ವೇದಾಪೌರುಷೇಯತ್ವಸಾಧನ ಪ್ರಕರಣದಲ್ಲಿ ಹೇಳಲಾಗುತ್ತದೆ. ಆದ್ದರಿಂದ ವೇದವು ಸ್ವತಃ ಪ್ರಮಾಣವಾಗಿದೆ.

## 'ಆದರೇಣ ಆಖ್ಯಾತ'

**ನನು ಪ್ರಮಾಣೇನಾಪಿ ತಾತ್ಪರ್ಯ ಅವಿಷಯೋಽರ್ಥಃ ನ ಸಿದ್ಧ್ಯತಿ, ಇತ್ಯತ ಉಕ್ತಮ್–ಆದರೇಣ–ಆಖ್ಯಾತೇತಿ ॥ ಆಙಃ ಮುಖ್ಯತ್ವಮ್ ಅರ್ಥಃ । ತಾತ್ಪರ್ಯಪೂರ್ವಂ ಮುಖ್ಯವೃತ್ತ್ಯಾ ಉಕ್ತೇತ್ಯರ್ಥಃ । ಲಕ್ಷಣಯಾ ವಿದಿತತ್ವೇ ಗುಣಾಸಿದ್ಧೇಃ । ತಾದೃಶಗುಣೇ ವಿಷ್ಣೌ ವೇದಾನಾಂ ಶಕ್ತಿತಾತ್ಪರ್ಯೇ ಇತ್ಯೇತದನ್ಯತ್ರ ವ್ಯಕ್ತಮ್ ।**

**ಅತ್ರ ಸ್ವತಃ ಪ್ರಾಮಾಣ್ಯಜ್ಞಪ್ತಿವಾದಪರ್ಯಂತಂ ವಿಸ್ತರಸ್ತು ಗುರುಪಾದ ಕೃತ–ಯುಕ್ತಿರತ್ನಾಕರೇ ದ್ರಷ್ಟವ್ಯಮ್ ॥**

ವೇದವು ಪ್ರಮಾಣವಾದರೂ ಅದಕ್ಕೆ ತಾತ್ಪರ್ಯವಿಲ್ಲದ ವಿಷಯವು ಸಿದ್ಧವಾಗುವುದು ಹೇಗೆ? ಅದಕ್ಕುತ್ತರ ಮಂಗಲ ಪದ್ಯದಲ್ಲಿ– ಆದರೇಣ–ಆಖ್ಯಾತ, ಎಂದು. 'ಆಖ್ಯಾತ' ಎಂಬಲ್ಲಿರುವ 'ಆಙ' ಉಪಸರ್ಗಕ್ಕೆ ಮುಖ್ಯ ಎಂದು ಅರ್ಥ. ತಾತ್ಪರ್ಯಪೂರ್ವಕವಾಗಿ ಮುಖ್ಯವೃತ್ತಿಯಿಂದಲೇ ವೇದಗಳು ರಮೇಶನ ಅನಂತಗುಣಗಳನ್ನು ತಿಳಿಸುತ್ತವೆ. ವೇದಗಳು ಲಕ್ಷಣಾವೃತ್ತಿಯಿಂದ ಭಗವಂತನ ಸ್ವರೂಪವನ್ನು ಮಾತ್ರ ತಿಳಿಸಿದರೆ ಅವನಲ್ಲಿ ಗುಣಗಳು ಸಿದ್ಧವಾಗುವುದಿಲ್ಲ. ಆದರೆ, ಮುಖ್ಯವೃತ್ತಿಯಿಂದಲೇ ಗುಣಪೂರ್ಣನಾದ ರಮೇಶನು ವೇದಗಳಿಂದ ಪ್ರತಿಪಾದ್ಯ. ಆದ್ದರಿಂದ ಭಗವಂತನ ಗುಣಪೂರ್ಣತ್ವವು ವೇದತಾತ್ಪರ್ಯಕ್ಕೆ ಅವಿಷಯವಲ್ಲ.

ಇಲ್ಲಿ ಸ್ವತಃ ಪ್ರಾಮಾಣ್ಯ ಜ್ಞಪ್ತಿವಾದದವರೆಗಿನ ವಿವರಗಳನ್ನು ಗುರುಗಳು (ಶ್ರೀವಿಜಯೇಂದ್ರರು) ರಚಿಸಿರುವ ಯುಕ್ತಿರತ್ನಾಕರ ಗ್ರಂಥದಿಂದ ತಿಳಿಯಬೇಕು.[1]

**ಇಲ್ಲಿಗೆ ಮಂಗಲಪದ್ಯಗಳ ವಿವರಣೆ ಮುಗಿಯಿತು.**

---

1. **ಯುಕ್ತಿರತ್ನಾಕರದಲ್ಲಿ ಪ್ರಾಮಾಣ್ಯವೆಂದರೇನು? ಎಂದು ಪ್ರಶ್ನಿಸಿ ಅದರ ಅನೇಕ ರೂಪಗಳನ್ನು ಖಂಡಿಸಿ 'ಉಚ್ಯತೇ' ಎಂದು ಹೀಗೆ ಸಿದ್ಧಾಂತಿಸಲಾಗಿದೆ– ಯೇನ ಜ್ಞಾನೇನ ಯತ್ಕಾಲೀನಂ ಯನ್ನಿರೂಪಿತಂ–ವೈಶಿಷ್ಟ್ಯಕತ್ವಂ ತಸ್ಯ ಜ್ಞಾನಸ್ಯ ತತ್ರಪ್ರಾಮಾಣ್ಯಮ್ ॥ ಮುಂದೆ ಪ್ರಮಾತ್ವವು ಜಾತಿರೂಪವಲ್ಲ ಎಂದು ಸಾಧಿಸಲಾಗಿದೆ.**

# ಪ್ರಕರಣ–1

## ಸ್ವಮತೇ ಸ್ವತಸ್ತ್ವನಿರುಕ್ತಿಃ

## ನ್ಯಾಯದೀಪ

### ಜಪ್ತೌ ಸ್ವತಸ್ತ್ವನಿರುಕ್ತಿಗೆ ಸಂಗತಿ

**ಅ. ವೇದರೂಪ–ಕರಣ–ಪ್ರಾಮಾಣ್ಯಸ್ಯ ಸ್ವತಸ್ತ್ವಂ ನಿಶ್ಚಿತ ಪ್ರಾಮಾಣ್ಯಕ–ಜ್ಞಾನೇನ ಜ್ಞಾತವ್ಯಮ್ ।**

**ಆ. ತಥಾ ತಜ್ಜನ್ಯ – ಜ್ಞಾನ – ಪ್ರಾಮಾಣ್ಯೋತ್ಪತ್ತಿ – ಸ್ವತಸ್ತ್ವಾಧೀನೋ–ತ್ಪತ್ತಿಸ್ವತಸ್ತ್ವಂ ಇತಿ,**

**ಕ್ರಮಾತ್ (ಅ) ಜ್ಞಪ್ತೌ (ಆ) ಉತ್ಪತ್ತೌ ಚ ತದೇವಾದೌ ಸಮರ್ಥಯಿತುಂ 'ಜ್ಞಾನಗ್ರಾಹಕ ಮಾತ್ರ ಗ್ರಾಹ್ಯತ್ವಂ ಸ್ವತಸ್ತ್ವಂ' ಇತಿ ಟೀಕಾಕೃದುಕ್ತಂ ವಾಕ್ಯಂ ವಿವೃಣ್ವಾನಃ ಜ್ಞಪ್ತೌ ಸ್ವತಸ್ತ್ವಂ ತಾವತ್ ನಿರ್ವಕ್ತಿ–ಯಾಥಾರ್ಥ್ಯರೂಪಸ್ಯೇತಿ ।**

ಅ. ವೇದವು ಜ್ಞಾನಕರಣ. 'ಯಥಾರ್ಥ–ಜ್ಞಾನಜನಕತ್ವಂ' ಇದು ಅದರಲ್ಲಿರುವ ಪ್ರಾಮಾಣ್ಯ. ಅದು ಸ್ವತಃ ಎಂದು ತಿಳಿಯಬೇಕಾದರೆ ಈಗಾಗಲೇ ಪ್ರಮಾಣವೆಂದು ಖಚಿತವಾದ ಜ್ಞಾನಾಂತರದ ಅಗತ್ಯವಿದೆ. ಅದಕ್ಕಾಗಿ ಜ್ಞಾನದಲ್ಲಿ ಜ್ಞಪ್ತೌ ಸ್ವತಸ್ತ್ವವನ್ನು ಮೂಲದಲ್ಲಿ ಮೊದಲು ಹೇಳಲಾಗಿದೆ.

ಆ. ವೇದದಿಂದ ಜನ್ಯವಾದ ಜ್ಞಾನದಲ್ಲಿ ಪ್ರಾಮಾಣ್ಯದ ಉತ್ಪತ್ತಿಯು ಸ್ವತಃ ಎಂದಾದರೆ ಆಗ ಜ್ಞಾನ ಜನಕವಾದ ವೇದವು ಯಥಾರ್ಥ ಜ್ಞಾನಜನಕವಾಗುತ್ತದೆ. ಇದೇ ವೇದದಲ್ಲಿ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವ. ಇದಕ್ಕಾಗಿ ಜ್ಞಾನದಲ್ಲಿರುವ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವವನ್ನೂ ಹೇಳಬೇಕಾಗುತ್ತದೆ.

ಈ ಕಾರಣದಿಂದ ಜನ್ಯಜ್ಞಾನದಲ್ಲಿ ಜ್ಞಪ್ತೌ ಸ್ವತಸ್ತ್ವವನ್ನು ಮೊದಲು ಹೇಳಿ ಆಮೇಲೆ ಉತ್ಪತ್ತೌ ಸ್ವತಸ್ತ್ವವನ್ನು ಮೂಲದಲ್ಲಿ ನಿರೂಪಿಸಲಾಗಿದೆ.

ಶ್ರೀಜಯತೀರ್ಥರು ನ್ಯಾಯಸುಧಾದಲ್ಲಿ 'ಜ್ಞಾನಗ್ರಾಹಕ ಮಾತ್ರಗ್ರಾಹ್ಯತ್ವಮ್ ಸ್ವತಸ್ತ್ವಮ್' ಎಂದು ಜ್ಞಾನಗತ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವವನ್ನು ಹೇಳಿದ್ದಾರೆ. ಅದನ್ನೇ ಇಲ್ಲಿ ವಿವರಿಸಿ ಹೇಳಲಾಗಿದೆ.

**याथार्थ्यरूपस्य तत्तज्ज्ञानप्रामाण्यस्य,**

**ग्राह्यप्रमाण्यविरोध्युपस्थापक - सामग्र्यसमवहित-ग्राह्यप्रामाण्याश्रय-तत्तज्ज्ञानविषयक-साक्षिज्ञानविषयत्वनैयत्यं स्वतस्त्वम् ।**

**तार्किकाभिमतानुव्यवसाय एवास्माकं साक्षी ।**

ಎಲ್ಲಾ ಜ್ಞಾನದಲ್ಲಿ ಇರುವ ಪ್ರಾಮಾಣ್ಯವೆಂದರೆ ''ಯಾಥಾರ್ಥ್ಯ''. ಅಂತಹ ಪ್ರಾಮಾಣ್ಯದ ಜ್ಞಪ್ತೌಸ್ವತಸ್ತ್ವವು ಈ ರೀತಿಯಾಗಿದೆ– ನಾವು ಜ್ಞಾನಗತವಾದ ಯಾವ ಪ್ರಾಮಾಣ್ಯವನ್ನು ತಿಳಿಯ ಬೇಕಾಗಿದೆಯೋ ಅಂತಹ ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯಾದಿಗಳ ಜ್ಞಾನಕ್ಕೆ ಬೇಕಾದ ಸಾಮಗ್ರಿಗಳಿಂದ ಸಹಿತವಾಗದ (ಸಾಕ್ಷೀಂದ್ರಿಯ), ತಿಳಿಯಬೇಕಾಗಿರುವ ಪ್ರಾಮಾಣ್ಯಕ್ಕೆ ಆಶ್ರಯವಾದ ಜ್ಞಾನವನ್ನು ಗ್ರಹಿಸುವ ಸಾಕ್ಷಿಗೆ ಆ ಜ್ಞಾನದಲ್ಲಿರುವ ಪ್ರಾಮಾಣ್ಯವೂ ನಿಶ್ಚಿತವಾಗಿ ವಿಷಯವಾಗಿಯೇ ಇರುತ್ತದೆ.

ತಾರ್ಕಿಕರು ಅಂಗೀಕರಿಸಿರುವ ಅನುವ್ಯಾವಸಾಯವನ್ನೇ ಸಾಕ್ಷಿ, ಎಂದು ಇಲ್ಲಿ ಪರಿಗಣಿಸ ಲಾಗಿದೆ.

**ವಿವರಣೆ** : ನಮಗೆ ಬರುವ ಜ್ಞಾನಗಳು ಕೆಲವು ಯಥಾರ್ಥವಾಗಿರುತ್ತವೆ, ಕೆಲವು ಅಯಥಾರ್ಥವಾಗಿರುತ್ತವೆ. ನಮಗೆ ಬಂದ ಜ್ಞಾನವು ಯಥಾರ್ಥವಾಗಿದೆ ಎಂದು ತಿಳಿಯಲು ಪ್ರಯಾಸಪಡಬೇಕಿಲ್ಲ. ಆ ಜ್ಞಾನವನ್ನು ಗ್ರಹಿಸುವ ಸಾಕ್ಷಿಯೇ ಅದನ್ನು ಯಥಾರ್ಥವೆಂದೂ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸಬೇಕಾದರೆ ಪ್ರತಿಬಂಧಕಗಳು ಇರಬಾರದು. ''ಈ ಜ್ಞಾನವು ಸರಿಯೋ ತಪ್ಪೋ'' ಎಂಬ ಸಂದೇಹವಾಗಲೀ ಅಥವಾ ''ಈ ಜ್ಞಾನ ಸರಿಯಲ್ಲ'' ಎಂಬ ನಿರ್ಧಾರವಾಗಲೀ ಇದ್ದರೆ ಸಾಕ್ಷಿಯು ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅಂತಹ ಯಾವ ಪ್ರತಿಬಂಧಕಗಳೂ ಇಲ್ಲದಿರುವಾಗ ಸಾಕ್ಷಿಯು ಜ್ಞಾನವನ್ನೂ ಅದರಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಇದೇ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವ.

ಉದಾಹರಣೆಗೆ— ನಮ್ಮ ಮುಂದಿರುವ ಆನೆಯನ್ನು ಕಣ್ಣಿನಿಂದ ನೋಡಿ ''ಇದು ಆನೆ'' ಎಂಬ ಜ್ಞಾನ ಬರುತ್ತದೆ. ಈ ಜ್ಞಾನವು ಅಂತಃಕರಣದ ಪರಿಣಾಮರೂಪವಾದುದು. ಇದನ್ನು ವೃತ್ತಿಜ್ಞಾನ ಎನ್ನಲಾಗುವುದು. ಇಂತಹ ಜ್ಞಾನವನ್ನು ಸಾಕ್ಷೀಂದ್ರಿಯವು ಗ್ರಹಿಸುತ್ತದೆ. ಅಂದರೆ ''ಆನೆ, ಇದೆ, ಎಂಬ ಜ್ಞಾನವು ನನಗೆ ಬಂದಿದೆ'' ಎಂದು ಸಾಕ್ಷೀಂದ್ರಿಯದಿಂದ ತಿಳಿಯುತ್ತದೆ. ಬಾಹ್ಯವಸ್ತುಗಳು ಇದ್ದರೂ ಅವುಗಳ ಜ್ಞಾನ ನಮಗೆ ಇರಲೇಬೇಕೆಂಬ ಅನಿವಾರ್ಯವೇನಿಲ್ಲ. ಆದರೆ ಆಂತರಿಕವಾದ ಜ್ಞಾನವು ಹುಟ್ಟಿದ ಮೇಲೆ ತಿಳಿಯಲ್ಪಡಲೇಬೇಕು. ಅಂದರೆ, ಜ್ಞಾನ ಬಂದಿದೆ, ನಮಗೆ ತಿಳಿದೇ ಇಲ್ಲ, ಎನ್ನುವ ಸಂದರ್ಭವೇ ಇಲ್ಲ. ಬಂದ ಜ್ಞಾನವು ತಿಳಿದಿರಲೇಬೇಕು. ಹಾಗೆ ಜ್ಞಾನವು

ತಿಳಿಯಲ್ಪಟ್ಟಾಗ ಆ ಜ್ಞಾನದಲ್ಲಿರುವ ಪ್ರಾಮಾಣ್ಯವೂ ತಿಳಿಯುತ್ತದೆ. ಏಕೆಂದರೆ, ಜ್ಞಾನಗ್ರಾಹಕ ಸಾಮಗ್ರಿಯೇ ಜ್ಞಾನಗತ ಪ್ರಾಮಾಣ್ಯಗ್ರಾಹಕವೂ ಆಗಿರುತ್ತದೆ. ಹೇಗೆ ನೀರನ್ನು ನೋಡುವುದು ಕಣ್ಣಿನಿಂದಾದರೆ ಅದರಲ್ಲಿರುವ ರುಚಿಯನ್ನು ತಿಳಿಯುವುದು ನಾಲಗೆಯೋ ಅದರಂತೆ, ಜ್ಞಾನವನ್ನು ತಿಳಿಯಲು ಬೇಕಾದ ಸಾಮಗ್ರೀ ಬೇರೆ, ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ತಿಳಿಯಲು ಬೇಕಾದ ಸಾಮಗ್ರಿಯು ಬೇರೆಯಲ್ಲ. ನೀರನ್ನೂ ಅದರ ಬಣ್ಣವನ್ನೂ ಕಣ್ಣಿನಿಂದಲೇ ನೋಡುವಂತೆ ಜ್ಞಾನವನ್ನೂ ಅದರಲ್ಲಿರುವ ಪ್ರಾಮಾಣ್ಯವನ್ನೂ ಸಾಕ್ಷೀಂದ್ರಿಯವೇ ಗ್ರಹಿಸುತ್ತದೆ.

ನೈಯಾಯಿಕರು ಇದನ್ನು ಒಪ್ಪುವುದಿಲ್ಲ. ಅವರ ಮತದಲ್ಲಿ ಜ್ಞಾನವು ಆತ್ಮಗುಣ. ಅದನ್ನು ತಿಳಿಯುವ ಇಂದ್ರಿಯ ಮನಸ್ಸು. ಆ ಮನಸ್ಸು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಜ್ಞಾನಗತ ಪ್ರಾಮಾಣ್ಯವನ್ನು ತಿಳಿಸುವ ಸಾಮರ್ಥ್ಯ ಮನಸ್ಸಿಗಿಲ್ಲ. ಪ್ರಾಮಾಣ್ಯವನ್ನು ಅನುಮಾನದಿಂದಲೇ ನಿರ್ಧರಿಸಬೇಕು. ಉದಾಹರಣೆಗೆ, 'ಇದು ನೀರು' ಎಂಬ ಜ್ಞಾನ ಬಂದ ಮೇಲೆ ಹತ್ತಿರ ಹೋಗಿ, ನೀರನ್ನು ಕುಡಿದು, ನೀರಡಿಕೆ ಶಾಂತವಾದ ಮೇಲೆ ''ನನಗೆ ಬಂದ ನೀರು ಎಂಬ ಜ್ಞಾನವು ಯಥಾರ್ಥವಾಗಿದೆ. ಏಕೆಂದರೆ, ನೀರಿನಿಂದಾಗುವ ಸುಖವನ್ನು ನಾನು ಕಂಡ ನೀರು ನೀಡಿದೆ'' ಎಂದು ಅನುಮಾನದಿಂದ ತಿಳಿಯಬೇಕು. ತಾರ್ಕಿಕರು ಹೇಳುವ ಅನುಮಾನದ ಸ್ವರೂಪ ಹೀಗೆ— ''ಇದಂ ಜಲಂ ಇತಿ ಜ್ಞಾನಂ, ಪ್ರಮಾಣಮ್, ಸಫಲಪ್ರವೃತ್ತಿ ಜನಕತ್ವಾತ್''.

'ಇದಂ ಜಲಂ' ಎಂಬ ಜ್ಞಾನ ಬಂದಮೇಲೆ ನಾನು ನೀರಿಗಾಗಿ ಪ್ರವತ್ತಿ ಮಾಡಿದೆ. ಅದರಿಂದ ನೀರು ದೊರೆತು, ನೀರಡಿಕೆ ಶಾಂತವಾದುದರಿಂದ ನನ್ನ ಪ್ರವೃತ್ತಿಯು ಸಫಲವಾಯಿತು. ಇದರಿಂದಾಗಿ ನನಗೆ ಬಂದಿದ್ದ ನೀರಿನ ಜ್ಞಾನವು ಯಥಾರ್ಥವಾಗಿದೆ. ಹೀಗೆ ಜ್ಞಾನ ಪ್ರಾಮಾಣ್ಯವು ಅನುಮಾನದಿಂದ ನಿರ್ಧರಿಸಲ್ಪಡುತ್ತದೆ. ಜ್ಞಾನವು ಮನಸ್ಸಿನಿಂದ ಗ್ರಾಹ್ಯವಾಗಿದೆ. ಆದಕಾರಣ ಪ್ರಾಮಾಣ್ಯಂ ಪರತಃ. ಇದು ನೈಯಾಯಿಕ ಸಿದ್ಧಾಂತ.

ಈ ಸಿದ್ಧಾಂತವನ್ನು ದ್ವೈತದರ್ಶನವು ಒಪ್ಪುವುದಿಲ್ಲ. ಜ್ಞಾನ ಬಂದ ಮೇಲೆ ಎಲ್ಲಾ ಕಡೆಯಲ್ಲೂ ಪ್ರವತ್ತಿಯಾಗಲೇಬೇಕೆಂಬ ನಿರ್ಬಂಧವೇನಿಲ್ಲ. ಅಂತಹ ಸಂದರ್ಭದಲ್ಲಿ ಹಿಂದೆ ಹೇಳಿದ ಅನುಮಾನಕ್ಕೆ ಅವಕಾಶವಿಲ್ಲ. ಅಲ್ಲಿ ಜ್ಞಾನ ತಿಳಿದಾಗಲೇ ಅದರ ಪ್ರಾಮಾಣ್ಯವೂ ತಿಳಿಯುತ್ತದೆ. ಅಥವಾ ಕೆಲವೆಡೆ ಜ್ಞಾನದಿಂದ ಪ್ರವೃತ್ತಿ ಮಾಡಿದರೂ, ಪ್ರವೃತ್ತಿ ಮಾಡುವ ಮೊದಲೇ ಪ್ರಾಮಾಣ್ಯವು ನಿರ್ಧಾರಿತವಾಗಿರುತ್ತದೆ. ಐಹಿಕ ಸಮೃದ್ಧಿ, ಸ್ವರ್ಗ, ಮೋಕ್ಷಾದಿಗಳನ್ನು ಪಡೆಯಬೇಕಾದರೆ ವೇದವು ಅನೇಕ ಧಾರ್ಮಿಕವಿಧಾನಗಳನ್ನು ಹೇಳುತ್ತದೆ. ಅವುಗಳು ಸುಲಭ ಸಾಧ್ಯವಲ್ಲ. ಆದರೂ ಅವುಗಳನ್ನು ಮಾಡಲು ದೈಹಿಕಶ್ರಮಕ್ಕೂ ಆರ್ಥಿಕ ವೆಚ್ಚಕ್ಕೂ ನಾವು ಸಿದ್ಧರಾಗುತ್ತವೆ. ಏಕೆಂದರೆ, ವೇದ ತಿಳಿಸಿದ ವಿಷಯವು ಯಥಾರ್ಥವೇ ಆಗಿದೆ, ಎಂಬ ದೃಢವಾದ ನಂಬಿಕೆ ನಮ್ಮಲ್ಲಿದೆ. ಇಂತಹ ಸಂದರ್ಭದಲ್ಲಿ ಪ್ರವೃತ್ತಿ ಮಾಡಿ ಫಲ ದೊರೆತ ಮೇಲೆ ಪ್ರಾಮಾಣ್ಯ ನಿಶ್ಚಯವಲ್ಲ. ಮೊದಲೇ, ವೇದಜನಿತ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವಾಗುತ್ತದೆ. ಸಾಕ್ಷೀಂದ್ರಿಯವು ವೇದಜನಿತ ಜ್ಞಾನವನ್ನು ಗ್ರಹಿಸಿದಾಗ

ಅದರಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಆದ್ದರಿಂದ ದೃಢವಿಶ್ವಾಸದಿಂದ ನಾವು ಯಜ್ಞಾದಿ ಕರ್ಮಗಳಲ್ಲಿ ಪ್ರವೃತ್ತಿ ಮಾಡುತ್ತೇವೆ. ಆದ್ದರಿಂದ ಪ್ರಾಮಾಣ್ಯ ಸ್ವತಸ್ತ್ವವೇ ಅನುಭವ ಸಿದ್ಧವಾದುದು.

ಸ್ವತಸ್ತ್ವ ಲಕ್ಷಣದಲ್ಲಿ 'ಸಾಕ್ಷಿಜ್ಞಾನ ವಿಷಯತ್ವ ನಿಯಮಃ' ಎಂದರೆ ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಿಯೇ ಗ್ರಹಿಸುತ್ತದೆ, ಎನ್ನುವ ನಿರ್ಬಂಧ. ಆದರೆ ಕೆಲವೊಮ್ಮೆ ಈ ನಿಯಮ ಇರುವುದಿಲ್ಲ. ಮರವು ದೂರದಲ್ಲಿದ್ದಾಗ 'ಇದು ಮಾವಿನ ಮರ' ಎಂಬ ಜ್ಞಾನ ಬರುತ್ತದೆ. ಇಂತಹ ಜ್ಞಾನವನ್ನು ಗ್ರಹಿಸಿದ ಸಾಕ್ಷಿಯು ಈ ಜ್ಞಾನವು ಯಥಾರ್ಥವಾಗಿದೆ, ಎಂದು ಗ್ರಹಿಸುವುದಿಲ್ಲ. ಏಕೆಂದರೆ, ವಸ್ತು ದೂರದಲ್ಲಿರುವುದರಿಂದ ಬಂದ ಜ್ಞಾನವು ಸರಿಯೋ ತಪ್ಪೋ, ಎನ್ನುವ ಸಂದೇಹವು ಸಾಕ್ಷಿಗೆ ಅಡ್ಡಿಯಾಗುತ್ತದೆ. ಅಂತಹ ಸಂದರ್ಭದಲ್ಲಿ ಸಾಕ್ಷಿಯು ಜ್ಞಾನವನ್ನು ಗ್ರಹಿಸಿದರೂ ಅದರ ಪ್ರಾಮಾಣ್ಯದ ಬಗ್ಗೆ ಮೌನ ತಾಳುತ್ತದೆ. ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧಾರಾತ್ಮಕವಾಗಿ ಗ್ರಹಿಸಬೇಕಾದರೆ ಇಂತಹ ತೊಡಕುಗಳು ಇರಬಾರದು. ಅಪ್ರಾಮಾಣ್ಯ ಸಂದೇಹ, ನಿಶ್ಚಯ, ಅಪ್ರಾಮಾಣ್ಯ ವ್ಯಾಪ್ಯಧರ್ಮದರ್ಶನ ಇವುಗಳೆಲ್ಲ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಲು ಪ್ರತಿಬಂಧಕವಾಗುತ್ತವೆ. ಇಂತಹ ಪ್ರತಿಬಂಧಕಗಳು ಇಲ್ಲದಿರುವಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಿಯೇ ತೀರುತ್ತದೆ. ಇದನ್ನು ಲಕ್ಷಣವಾಕ್ಯದಲ್ಲಿರುವ 'ಗ್ರಾಹ್ಯಪ್ರಾಮಾಣ್ಯ ವಿರೋಧಿ–ಉಪಸ್ಥಾಪಕ ಸಾಮಗ್ರೀ–ಅಸಮವಹಿತ' ಎಂಬ ವಿಶೇಷಣವು ತಿಳಿಸುತ್ತದೆ. ಇದು ಲಕ್ಷಣ ವಾಕ್ಯದಲ್ಲಿರುವ ಸಾಕ್ಷಿಗೆ ವಿಶೇಷಣ. ಪ್ರಾಮಾಣ್ಯ ವಿರೋಧಿಯಾದ ಅಪ್ರಾಮಾಣ್ಯ ಮತ್ತು ಪ್ರಾಮಾಣ್ಯಾಭಾವದ ಉಪಸ್ಥಾಪಕ–ಉಪಸ್ಥಿತಿಗೆ–ಜ್ಞಾನಕ್ಕೆ ಕಾರಣವಾದ ಸಾಮಗ್ರಿಗಳು ಅಥವಾ, ಅಪ್ರಾಮಾಣ್ಯದ ಉಪಸ್ಥಿತಿ ಸಾಕ್ಷಿಯೊಂದಿಗೆ ಸೇರಿರಬಾರದು. ಆಗ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದರ್ಥ.

ನೈಯಾಯಿಕರಿಗೆ ಈ ಸ್ವತಸ್ತ್ವದ ಲಕ್ಷಣವನ್ನು ಹೇಳಲಾಗಿದೆ. ಆದರೆ ಅವರು 'ಸಾಕ್ಷಿ' ಎಂಬ ಒಂದು ಇಂದ್ರಿಯವನ್ನೇ ಒಪ್ಪಿಲ್ಲ. ಹೀಗಿರುವಾಗ ಈ ಲಕ್ಷಣ ಅವರಿಗೆ ಸಮ್ಮತವಾಗುವುದು ಹೇಗೆ? ಈ ಪ್ರಶ್ನೆಗೆ ಉತ್ತರವಾಗಿ— ''ತಾರ್ಕಿಕಾಭಿಮತಾನುವ್ಯವಸಾಯ ಏವ ಅಸ್ಮಾಕಂ ಸಾಕ್ಷೀ'' ಎನ್ನಲಾಗಿದೆ. ಈ ಲಕ್ಷಣದಲ್ಲಿ ಸಾಕ್ಷಿಪದಕ್ಕೆ ಸಾಕ್ಷೀಂದ್ರಿಯ ಎಂದು ಅರ್ಥವಲ್ಲ. ಸಾಕ್ಷಿಯಿಂದ ಬಂದ ಜ್ಞಾನ ಎಂದರ್ಥ. ಅದನ್ನು ಅನುವ್ಯವಸಾಯ ಎನ್ನಲಾಗುತ್ತದೆ. ಕಣ್ಣಿನಿಂದ ಬರುವ 'ಇದಂ ಜಲಂ' ಎನ್ನುವ ಜ್ಞಾನ ವ್ಯವಸಾಯ. ಅದನ್ನು ಅನುಸರಿಸಿ ಆಮೇಲೆ ಬರುವ ''ಇದಂ ಜಲಂ ಇತಿ ಜ್ಞಾನವಾನಹಂ'' ಎಂಬ ಜ್ಞಾನ ಅನುವ್ಯಾವಸಾಯ. ಇಂತಹ ಜ್ಞಾನವು ಮನಸ್ಸಿನಿಂದ ಬರುತ್ತದೆ, ಎಂದು ನೈಯಾಯಿಕರ ಪಕ್ಷ, ಸಾಕ್ಷಿಯಿಂದ ಬರುತ್ತದೆ, ಎಂದು ದ್ವೈತಸಿದ್ಧಾಂತದ ಪಕ್ಷ. ಎರಡೂ ಪಕ್ಷಗಳಲ್ಲಿ ಜ್ಞಾನ ಬರುವ ಇಂದ್ರಿಯದ ಬಗ್ಗೆ ಚರ್ಚೆ ಇದ್ದರೂ ಜ್ಞಾನಸ್ವರೂಪದ ಬಗ್ಗೆ ಚರ್ಚೆ ಇಲ್ಲ. ಅಂತಹ ಅನುವ್ಯವಸಾಯ ರೂಪವಾದ ಜ್ಞಾನವೇ ಲಕ್ಷಣದಲ್ಲಿ ಸೇರಿದೆ. ಹೊರತು, ಅಂತಹ ಜ್ಞಾನಕ್ಕೆ ಜನಕವಾದ ಸಾಕ್ಷೀಂದ್ರಿಯವಲ್ಲ. ಆದ್ದರಿಂದ ಈ ಲಕ್ಷಣವು ತಾರ್ಕಿಕರಿಗೂ ಸಮ್ಮತವಾಗಿದೆ.

## ಜ್ಞಪ್ತಿಗತ ಪ್ರಾಮಾಣ್ಯದ ಪರಿಚಯ

**ಅರ್ಥಂ=ಜ್ಞೇಯಮ್ ಅನತಿಕ್ರಮ್ಯ ವರ್ತಮಾನಂ ಯಥಾರ್ಥಮ್ 'ಯಥಾ ಅಸಾದೃಶ್ಯೇ' ಇತಿ ಅವ್ಯಯೀಭಾವಃ ।**

**ಯಥಾರ್ಥಭಾವಃ ಯಾಥಾರ್ಥ್ಯಂ=ಯಥಾವಸ್ಥಿತ-ಜ್ಞೇಯವಿಷಯೀಕಾರಿತ್ವ-ರೂಪಂ ಜ್ಞೇಯಾವ್ಯಭಿಚಾರಿತ್ವಮ್, ತದ್ರೂಪಸ್ಯ ಇತ್ಯರ್ಥಃ ।**

'ಯಾಥಾರ್ಥ್ಯರೂಪಸ್ಯ...ಪ್ರಾಮಾಣ್ಯಸ್ಯ' ಎಂಬ ಮೂಲವಾಕ್ಯದಲ್ಲಿ ಯಥಾರ್ಥಸ್ಯ ಭಾವಃ=ಯಾಥಾರ್ಥ್ಯಂ-ಯಥಾರ್ಥವಾದ ಜ್ಞಾನದಲ್ಲಿ ಇರುವ ಧರ್ಮವೇ ಯಾಥಾರ್ಥ್ಯ, ಎಂದರ್ಥ.

ಅರ್ಥಂ ಅನತಿಕ್ರಮ್ಯ ವರ್ತಮಾನಂ=ಯಥಾರ್ಥಮ್ । 'ಯಥಾ ಅಸಾದೃಶ್ಯೇ=ಸಾದೃಶ್ಯ ಭಿನ್ನವಾದ ಅರ್ಥವಿರುವ ಯಥಾ ಎಂಬ ಅವ್ಯಯವು ಯೋಗ್ಯವಾದ ಇನ್ನೊಂದು ಶಬ್ದದೊಂದಿಗೆ ಸಮಾಸ ಹೊಂದುತ್ತದೆ' ಈ ವ್ಯಾಕರಣ ನಿಯಮದಂತೆ ಇಲ್ಲಿ ಸಮಾಸವಾಗಿದೆ. ಇಲ್ಲಿ ಯಥಾ ಶಬ್ದಕ್ಕೆ 'ಅನತಿಕ್ರಮ=ಅತಿಕ್ರಮಿಸದಿರುವ' ಎಂದು ಅರ್ಥ. ಅರ್ಥ ಎಂದರೆ ವಿಷಯ. ಅಲ್ಲಿಗೆ ವಿಷಯವನ್ನು ಅತಿಕ್ರಮಿಸದ ಅಂದರೆ ಇದ್ದುದನ್ನು ಇದ್ದಂತೆಯೇ ಗ್ರಹಿಸುವ ಜ್ಞಾನವೇ ಯಥಾರ್ಥಜ್ಞಾನ. ಒಟ್ಟಿನಲ್ಲಿ ಜ್ಞೇಯವಸ್ತುವಿನಿಂದ ಅವ್ಯಭಿಚಾರಿಯಾದ ಜ್ಞಾನವೇ ಯಥಾರ್ಥಜ್ಞಾನ.

ರಜತವನ್ನು ರಜತವೆಂದೇ ಗ್ರಹಿಸುವ ಜ್ಞಾನ ಯಥಾರ್ಥ. ಶುಕ್ತಿಯನ್ನು ರಜತವೆಂದು ಜ್ಞಾನವು ಗ್ರಹಿಸಿದರೆ ಆಗ ರಜತಜ್ಞಾನ ಇರುತ್ತದೆ, ರಜತವಿರುವುದಿಲ್ಲ. ಅಂತಹ ಜ್ಞಾನವು ಜ್ಞೇಯ ವ್ಯಭಿಚಾರಿಯಾಯಿತು. ಅದು ಯಥಾರ್ಥವಲ್ಲ.

## ಜ್ಞಾನಪದದ ಸಾರ್ಥಕ್ಯ

**ಏತಚ್ಚ ಪರೋಕ್ಷಾಪರೋಕ್ಷ-ಜನ್ಯಾಜನ್ಯ-ಸರ್ವಪ್ರಮಿತಿ-ಮಾತ್ರನಿಷ್ಠಮ್ ಇತ್ಯುಪೇತ್ಯ ಜ್ಞಾನ-ಪ್ರಾಮಾಣ್ಯಸ್ಯ, ಇತ್ಯುಕ್ತಮ್ ।**

**ಅನುಭೂತಿತ್ವಾ - ನಧಿಗತಾರ್ಥಗಂತೃತ್ವ - ಪ್ರಮಾಕರಣತ್ವ - ಸಾಧನಾ ಶ್ರಯಯೋಃ ಅನ್ಯತರತ್ವ-ಪ್ರಮಾವ್ಯಾಪ್ತತ್ವಾದೇಃ ಅವ್ಯಾಪ್ತಿ-ಅಸಂಭ ವಾದಿ-ದುಷ್ಟತ್ವಾತ್ ಇತಿ ಭಾವಃ ।**

**ಅಸ್ಯ ಅನುಪ್ರಮಾಣ-ಸಾಧರಣ್ಯೇಽಪಿ ಸಾಕ್ಷಾತ್-ಜ್ಞೇಯವಿಷಯೀಕಾರಿತ್ವ ಲಾಭಾಯಾಪಿ ಜ್ಞಾನಪ್ರಾಮಾಣ್ಯಸ್ಯ ಇತ್ಯುಕ್ತಮ್ ।**

ಯಥಾವಸ್ಥಿತ–ಜ್ಞೇಯ ವಿಷಯೀಕಾರಿತ್ವ ರೂಪವಾದ ಪ್ರಾಮಾಣ್ಯವು ಪರೋಕ್ಷ ಜ್ಞಾನದಲ್ಲೂ ಇದೆ, ಅಪರೋಕ್ಷಜ್ಞಾನದಲ್ಲೂ ಇದೆ. ಜನ್ಯಜ್ಞಾನದಲ್ಲೂ ಇದೆ, ಅಜನ್ಯವಾದ ಈಶಜ್ಞಾನದಲ್ಲೂ ಇದೆ. ಹೀಗೆ ಇದು ಸಕಲ ಜ್ಞಾನ ಸಾಧಾರಣವಾಗಿದೆ ಎಂದು ತಿಳಿಸುತ್ತದೆ—'ಜ್ಞಾನ–ಪ್ರಾಮಾಣ್ಯಸ್ಯ' ಎಂಬ ಮೂಲದಲ್ಲಿರುವ ಜ್ಞಾನಪದ.

'ಅನುಭೂತಿಃ ಪ್ರಮಾಣಮ್' ಎಂದು ಪ್ರಾಭಾಕರ ಮೀಮಾಂಸಕರು ಹೇಳಿರುವ ಪ್ರಮಾಣಲಕ್ಷಣ. ಸ್ಮೃತಿಭಿನ್ನವಾದ ಜ್ಞಾನ ಅನುಭೂತಿ. ಈ ಲಕ್ಷಣವು ಸಂಶಯ–ಭ್ರಾಂತಿಗಳಲ್ಲೂ ಇದೆ. ಆದ್ದರಿಂದ ಅತಿವ್ಯಾಪ್ತಿ. ಸ್ಮೃತಿಯಲ್ಲೂ ವೇದಾದಿಕರಣಗಳಲ್ಲಿಯೂ ಇಲ್ಲ, ಆದ್ದರಿಂದ ಅವ್ಯಾಪ್ತಿ.

'ಅನಧಿಗತಾರ್ಥಗಂತೃಪ್ರಮಾಣಮ್' ಇದೂ ಪ್ರಾಭಾಕರರದೇ ಲಕ್ಷಣಾಂತರ. ಈ ಲಕ್ಷಣವೂ ಸ್ಮೃತಿಯಲ್ಲಿ, ಜ್ಞಾನಕರಣದಲ್ಲಿ ಇಲ್ಲ, ಆದ್ದರಿಂದ ಅವ್ಯಾಪ್ತಿ.

'ಪ್ರಮಾಕರಣಂ ಪ್ರಮಾಣಮ್' ನೈಯಾಯಿಕರ ಈ ಲಕ್ಷಣವು ಯಥಾರ್ಥಜ್ಞಾನದಲ್ಲಿ ಇಲ್ಲ, ಆದ್ದರಿಂದ ಅವ್ಯಾಪ್ತಿ.

'ಸಾಧನಾಶ್ರಯಯೋಃ ಅನ್ಯತರತ್ವಮ್' ಇದು ಉದಯನಾಚಾರ್ಯರು ಹೇಳಿದ ಪ್ರಮಾಣಲಕ್ಷಣ. ಇಲ್ಲಿ ಆಶ್ರಯಪದದಿಂದ ಈಶ್ವರನೂ ಪ್ರಮಾಣ ಎಂದು ಪರಿಗಣಿಸಲಾಗಿದೆ. ಆದರೆ, 'ಪ್ರಮಾಣ' ಎಂಬ ಲ್ಯುಡಂತ ಶಬ್ದವು ಆಶ್ರಯಾರ್ಥದಲ್ಲಿ ಇಲ್ಲ, ಆದ್ದರಿಂದ ಆಶ್ರಯ ಶಬ್ದ ವ್ಯರ್ಥ.

'ಪ್ರಮಾ ವ್ಯಾಪ್ತಮ್ ಪ್ರಮಾಣಮ್' ಎಂಬ ಅವರದೇ ಇನ್ನೊಂದು ಲಕ್ಷಣವೂ ಯುಕ್ತವಲ್ಲ. ಎಲ್ಲ ವಸ್ತುಗಳೂ ಈಶ ಪ್ರಮಾವನ್ನು ಬಿಟ್ಟಿರಲಾರದು. (ಯದಾ ಪ್ರಮೇಯಂ ತದಾ ಈಶ್ವರಪ್ರಮಾ) ಹೀಗೆ ಈ ಲಕ್ಷಣವು ಪ್ರಮೇಯದಲ್ಲಿ ಅತಿವ್ಯಾಪ್ತ.

ಹೀಗೆ ಈ ಎಲ್ಲಾ ಲಕ್ಷಣಗಳೂ ದುಷ್ಟವಾಗಿವೆ.

'ಯಥಾವಸ್ಥಿತ–ಜ್ಞೇಯವಿಷಯೀಕಾರಿತ್ವಮ್' ಎಂಬ ನಾವು ಹೇಳಿರುವ ಈ ಲಕ್ಷಣವು ಅನುಪ್ರಮಾಣದಲ್ಲೂ ಇದೆ. ಅದಕ್ಕಾಗಿ 'ಸಾಕ್ಷಾತ್ ಜ್ಞೇಯವಿಷಯೀಕಾರಿತ್ವಂ' ಎಂಬ ಲಕ್ಷಣವನ್ನು ಹೇಳಬೇಕು. ಇದು ಕೇವಲಪ್ರಮಾಣದಲ್ಲಿ ಮಾತ್ರವೇ ಇದೆ. ಇದಕ್ಕಾಗಿಯೂ ಜ್ಞಾನಪದವನ್ನು ಮೂಲದಲ್ಲಿ ಕೊಡಲಾಗಿದೆ. ಜ್ಞಾನಗತಂ ಪ್ರಾಮಾಣ್ಯಂ, ಎಂದು ಅರ್ಥ.

## 'ತತ್ತತ್' ಪದ ಏಕೆ?

**ಏತಚ್ಚ ಭಿನ್ನಂ ಭಿನ್ನಮೇವ ಇತಿ ಸರ್ವಪ್ರಮಿತಿ–ನಿಷ್ಠ–ಪ್ರಾಮಾಣ್ಯ–ಸ್ವತಸ್ತ್ವದ್ಯೋತನಾಯ ತತ್ತದಿತಿ ಜ್ಞಾನವಿಶೇಷಣಮ್ । ತಸ್ಯ ತಸ್ಯ ಜ್ಞಾನಸ್ಯ ಯತ್ ತತ್ತದರ್ಥ – ಅವ್ಯಭಿಚಾರಿತ್ವರೂಪಂ ಪ್ರಾಮಾಣ್ಯಂ ತಸ್ಯೇತ್ಯರ್ಥಃ ।**

ಯಥಾವಸ್ಥಿತ–ಜ್ಞೇಯ–ವಿಷಯೀಕಾರಿತ್ವರೂಪವಾದ ಪ್ರಾಮಾಣ್ಯವು ಒಂದೊಂದು ಜ್ಞಾನದಲ್ಲಿ ಬೇರೆ ಬೇರೆಯಾದುದು, ಒಂದೇ ಅಲ್ಲ, ಹೀಗೆ ಜ್ಞಾನಭೇದೇನ ಭಿನ್ನವಾದ ಈ ಎಲ್ಲ ಪ್ರಾಮಾಣ್ಯದಲ್ಲೂ ಸ್ವತಸ್ತ್ವವನ್ನು ತಿಳಿಸುವುದಕ್ಕಾಗಿ 'ತತ್ತತ್' ಎಂಬುದು ಜ್ಞಾನಕ್ಕೆ ವಿಶೇಷಣ. ಒಂದೊಂದು ಜ್ಞಾನದಲ್ಲಿಯೂ ಆಯಾಯ ವಿಷಯಪದಾರ್ಥಗಳ ಅವ್ಯಭಿಚಾರರೂಪವಾದ ಪ್ರಮಾಣ್ಯವೇನಿದೆಯೋ ಅವೆಲ್ಲ ಪ್ರಾಮಾಣ್ಯಗಳ 'ಸ್ವತಸ್ತ' ಎಂದು ಅರ್ಥ.

## ಪ್ರಾಮಾಣ್ಯವು ಪ್ರವೃತ್ತಿ ನಿಮಿತ್ತ

**ಪ್ರಮಾಪದ–ಪ್ರವೃತ್ತಿನಿಮಿತ್ತ–ಪ್ರಾಮಾಣ್ಯಸ್ಯ ಇತಿ ಯಾವತ್ । 'ಯಾಥಾರ್ಥ್ಯಮೇವ ಮಾನತ್ವಮ್' ಇತಿ ದ್ವಿತೀಯ ಪಾದೀಯಾನು-ಭಾಷ್ಯೋಕ್ತೇಃ । ನಿರ್ಧಾರಿತಂ ಚೈತತ್ ಯಾಥಾರ್ಥ್ಯಂ ತತ್ರೈವ ಸುಧಾ-ಯಾಮ್ । ಪ್ರಪಂಚಿತಂ ಗುರುಪಾದೈಃ ಅತ್ರೈವ ಪ್ರಾಮಾಣ್ಯಸ್ವತಸ್ತ್ವಾನುಮಾನವಾದೇ ।**

**ಘಟತ್ವವತಿ ಘಟತ್ವಪ್ರಕಾರಕತ್ವಾದಿರೂಪಂ ಪರಾಭಿಮತಮೇವ ಅಸ್ಮಾಕಂ ಯಾಥಾರ್ಥ್ಯಮ್ ಇತಿ ವಕ್ಷ್ಯಮಾಣಾದಿಶಾ ಸ್ವಪರ – ಸಾಧಾರಣ ಮೇವೈತದಿತಿ ಜ್ಞೇಯಮ್ ॥**

ಪ್ರಮಾ ಎಂಬ ಪದದ ಪ್ರವೃತ್ತಿನಿಮಿತ್ತವೇ ಪ್ರಾಮಾಣ್ಯ. ಪ್ರಥಮಾಧ್ಯಾಯದ ದ್ವಿತೀಯ ಪಾದದಲ್ಲಿರುವ 'ಯಾಥಾರ್ಥ್ಯಮೇವ ಮಾನತ್ವಂ' ಎಂಬ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಯಾಥಾರ್ಥ್ಯರೂಪವಾದ ಪ್ರಾಮಾಣ್ಯವು ಮಾನಪದದ ಪ್ರವೃತ್ತಿನಿಮಿತ್ತ ಎಂದಿರುತ್ತಾರೆ. ''ಅರ್ಥಂ ನಾತಿವರ್ತತೇ ಇತಿ ಯಥಾರ್ಥಂ । ತಸ್ಯ ಭಾವಃ ಯಾಥಾರ್ಥ್ಯಮ್ । ತದೇವ ಮಾನತ್ವಂ=ಮಾನಶಬ್ದ ಪ್ರವೃತ್ತಿನಿಮಿತ್ತಮ್ ಇತಿ ಯಾವತ್ ।'' ಹೀಗೆ ಸುಧಾದಲ್ಲಿ ಯಾಥಾರ್ಥ್ಯಸ್ವರೂಪವನ್ನು ನಿರೂಪಿಸಿ ಸಾಸ್ನಾದಿಮತ್ವದಂತೆ ಅದು ಪ್ರವೃತ್ತಿನಿಮಿತ್ತ ಭಿನ್ನವಾದ ಲಕ್ಷಣವಲ್ಲ, ಗೋತ್ವದಂತೆ ಪ್ರವೃತ್ತಿನಿಮಿತ್ತ ರೂಪವಾದ ಲಕ್ಷಣ ಎನ್ನಲಾಗಿದೆ. ತರ್ಕತಾಂಡವದಲ್ಲೇ ಪ್ರಾಮಾಣ್ಯಸ್ವತಸ್ತ್ವಾನುಮಾನ ಪ್ರಕರಣದಲ್ಲಿ ಗುರುಗಳಾದ ಶ್ರೀ ವಿಜಯೀಂದ್ರತೀರ್ಥರು ಈ ಲಕ್ಷಣವನ್ನು ವಿವರಿಸಿದ್ದಾರೆ.

ಯುಕ್ತಿರತ್ನಾಕರ–ಶ್ರೀವಿಜಯೀಂದ್ರರ ತರ್ಕತಾಂಡವವ್ಯಾಖ್ಯಾನ. ಅಲ್ಲಿ ಹೀಗಿದೆ—

**'ಜ್ಞಾನಪ್ರಾಮಾಣ್ಯಮಿತಿ ॥ ಜ್ಞಾನಾನ್ಯ–ಅವೃತ್ತಿ ಪ್ರಮಾಣಪದ–ಪ್ರವೃತ್ತಿ ನಿಮಿತ್ತಮಿತ್ಯರ್ಥಃ । ತಚ್ಚ ಲಾಘವಾತ್ 'ಘಟತ್ವವದ್ ವಿಶೇಷ್ಯಕತ್ವೇ ಸತಿ ಘಟತ್ವಪ್ರಕಾರಕ–ಜ್ಞಾನತ್ವಮ್ ।'**

ನೈಯಾಯಿಕರು 'ಘಟತ್ವವತಿ ಘಟತ್ವ ಪ್ರಕಾರಕತ್ವಂ' ಇದು ಘಟಜ್ಞಾನಗತ ಪ್ರಾಮಾಣ್ಯ

ಎಂದು ಹೇಳಿದ್ದಾರೆ. ಇದು ನಮಗೂ ಅಭಿಮತವಾದ ಪ್ರಾಮಾಣ್ಯರೂಪ, ಎಂದು ಮುಂದೆ ತರ್ಕತಾಂಡವದಲ್ಲಿ ಹೇಳಲಾಗಿದೆ. ಹೀಗೆ ಈ ರೂಪವಾದ ಪ್ರಾಮಾಣ್ಯವು ಸ್ವಪಕ್ಷ ಮತ್ತು ಪರಪಕ್ಷಗಳಿಗೆ ಸಮ್ಮತವಾಗಿದೆ.

## ಯಥಾಶಬ್ದಕ್ಕೆ ಸಾದೃಶ್ಯವೂ ಅರ್ಥವಾಗಬಹುದು

**ಉಪಾಧಿ ಖಂಡನಟೀಕಾ ಮಂದಾರಮಂಜರ್ಯಾಂ 'ಅಥ ಕೇಯಂ ಪ್ರಮಾ' ಇತ್ಯಾದಿನಾ ಪ್ರಮಾತ್ವಂ ಆಕ್ಷಿಪ್ಯ–**

**''ಯಥಾರ್ಥಜ್ಞಾನಮಿತ್ಯೇವ ಪ್ರಮಾಯಾ ಲಕ್ಷಣಸ್ಥಿತಿಃ ।**
**ಸ್ಮೃತೇರಪಿ ಚ ಲಕ್ಷ್ಯತ್ವಾದ್ ಅತಿವ್ಯಾಪ್ತಿಕಥಾ ಮುಧಾ ॥**

**ಇತಿ ಪ್ರತಿಜ್ಞಾಪೂರ್ವಕಂ 'ಸಾದೃಶ್ಯಸ್ಯ ಯಥಾಶಬ್ದಾರ್ಥತ್ವಾತ್ । ಸಾದೃಶ್ಯಂ ಚ ಜ್ಞಾನಾರ್ಥಯೋಃ ಸತ್ತಯಾ, ನ ಚ ಭ್ರಮೇ ಅತಿವ್ಯಾಪ್ತಿಃ । ತತ್ರ ಜ್ಞಾನಸ್ಯ ಸತ್ವಾತ್, ಅರ್ಥಸ್ಯ ಚ ಅಸತ್ವಾತ್ ಜ್ಞಾನಾರ್ಥಯೋಃ ಸತ್ತಯಾ ಸಾದೃಶ್ಯಾಭಾವಾತ್' ।**

**ಏವಂ ಚ 'ಯಥಾ=ಸಾದೃಶ್ಯವಿಶಿಷ್ಟ ಏವ ಅರ್ಥಃ ಯಸ್ಯ' ಇತಿ ಬಹುವ್ರೀಹ್ಯಾಶ್ರಯಣೇ ಯಥಾರ್ಥಶಬ್ದಸ್ಯ 'ಯಥಾರ್ಥಾ ಪ್ರತೀತಿಃ' ಇತ್ಯಾದಿ ಅಭಿಧೇಯವಲ್ಲಿಂಗಂ ಲೋಕಸಿದ್ಧಂ ಸಿದ್ಧಮ್ ।**

**'ಯಥಾಶಬ್ದೋಽನತಿಕ್ರಮೇ ವರ್ತತೇ' ಇತಿ ಟೀಕಾವಚನಂ ತು ಫಲಿತ ಪ್ರದರ್ಶನ–ಪರತಯಾ ವ್ಯಾಖ್ಯೇಯಮ್ । ಜ್ಞಾನಾರ್ಥಯೋಃ ಸಾದೃಶ್ಯ ಕಥನೇ ಜ್ಞಾನಸ್ಯ ಅರ್ಥಾನತಿಕ್ರಮಸ್ಯ ಆವಶ್ಯಕತ್ವಾತ್'' ಇತ್ಯಾದಿ ಗ್ರಂಥೇನ ।**

ಉಪಾಧಿ ಖಂಡನಟೀಕೆಯ 'ಮಂದಾರಮಂಜರೀ' ಟಿಪ್ಪಣಿಯಲ್ಲಿ ಶ್ರೀವ್ಯಾಸತೀರ್ಥರು– 'ಪ್ರಮಾ ಎಂದರೇನು?' ಎಂದು ಆಕ್ಷೇಪಿಸಿ–

''ಯಥಾರ್ಥಜ್ಞಾನಂ ಪ್ರಮಾ' ಎಂದೇ ಪ್ರಮಾದ ಲಕ್ಷಣ.

ಸ್ಮೃತಿಯೂ ಲಕ್ಷ್ಯವೇ ಆದ ಕಾರಣ ಅದರಲ್ಲಿ ಅತಿವ್ಯಾಪ್ತಿಯ ಪ್ರಶ್ನೆಯೇ ಇಲ್ಲ''.

ಎಂದು ಪ್ರತಿಜ್ಞೆ ಮಾಡಿದ್ದಾರೆ. ಆಮೇಲೆ ಹೀಗೆ ಹೇಳಿದ್ದಾರೆ– 'ಯಥಾ ಶಬ್ದಕ್ಕೆ ಸಾದೃಶ್ಯ ಎಂದೇ ಅರ್ಥ. ಜ್ಞಾನಕ್ಕೂ ಅರ್ಥಕ್ಕೂ (ವಿಷಯಕ್ಕೂ) ಸತ್ತಾರೂಪೇಣ ಸಾದೃಶ್ಯವನ್ನು ಹೇಳಬೇಕು. ಪ್ರಮಾದಲ್ಲಿ ಅರ್ಥದಂತೆ ಜ್ಞಾನವೂ ಸತ್ತಾಗಿರುತ್ತದೆ. ಭ್ರಮೆಯಲ್ಲಿ ಜ್ಞಾನವು ಸತ್ಯ, ಆರೋಪಿತವಾದ ವಿಷಯ ಅಸತ್ಯ. ಅಲ್ಲಿ ಜ್ಞಾನಕ್ಕೂ ಅರ್ಥಕ್ಕೂ ಸತ್ತಯಾ ಸಾದೃಶ್ಯ ಇಲ್ಲ.

ಆದ್ದರಿಂದ ಯಥಾರ್ಥಶಬ್ದಕ್ಕೆ ಬಹುವ್ರೀಹಿ ಸಮಾಸ ಮಾಡಬೇಕು– 'ಯಥಾ ಏವ+ಅರ್ಥಃ ಯಸ್ಯ ಸಃ=ಯಥಾರ್ಥಃ' ಯಥಾ ಎಂದರೆ ಸಾದೃಶ್ಯ ವಿಶಿಷ್ಟ ಎಂದು ಅರ್ಥ. (ಜ್ಞಾನದೊಂದಿಗೆ ಸತ್ವರೂಪೇಣ ಸಾದೃಶ್ಯವಿಶಿಷ್ಟ ಅರ್ಥ). ಹೀಗೆ ಅರ್ಥಮಾಡುವುದರಿಂದ ಯಥಾರ್ಥ ಶಬ್ದವು ವಿಶೇಷ್ಯನಿಘ್ನವಾಗುತ್ತದೆ. ಯಥಾ ಶಬ್ದಕ್ಕೆ ಅನತಿಕ್ರಮ ಎಂದು ಅರ್ಥಮಾಡಿ ಅವ್ಯಯೀಭಾವ ಸಮಾಸ ಮಾಡಿದರೆ 'ಯಥಾರ್ಥಂ' ಎಂದು ಅವ್ಯಯವಾಗುತ್ತದೆ. ಆಗ 'ಯಥಾರ್ಥಾ ಪ್ರತೀತಿಃ' ಎಂಬ ಪ್ರಯೋಗವನ್ನು ಸಮರ್ಥಿಸುವುದು ಸಾಧ್ಯವಾಗುವುದಿಲ್ಲ.

ಆದರೆ, 'ಯಥಾಶಬ್ದಃ ಅನತಿಕ್ರಮೇ ವರ್ತತೇ' ಎಂದು ಪ್ರಮಾಣಪದ್ಧತಿಯ ವಾಕ್ಯ ನಾವು ಹೇಳಿದ ಅರ್ಥಕ್ಕೆ ವಿರುದ್ಧವಾಗುತ್ತದೆ. ಅದು ಫಲಿತಾರ್ಥಕಥನ, ವಾಚ್ಯಾರ್ಥಕಥನವಲ್ಲ ಎಂದು ಪರಿಗಣಿಸಬೇಕು. ಸಾದೃಶ್ಯಾರ್ಥವನ್ನು ಇಟ್ಟುಕೊಂಡಾಗ ಜ್ಞಾನಕ್ಕೂ ಅರ್ಥಕ್ಕೂ ಸತ್ತಾರೂಪೇಣ ಸಾದೃಶವನ್ನು ಹೇಳಬೇಕು. ಅಂದರೆ, ಜ್ಞಾನದಂತೆ ಅರ್ಥವೂ ಸತ್ಯ. ಅರ್ಥಾತ್, ಜ್ಞಾನವು ಅರ್ಥ ವನ್ನು ಅತಿಕ್ರಮಿಸಿಲ್ಲ. ಹೀಗೆ ಸಾದೃಶ್ಯ ಎಂಬ ವಾಚ್ಯಾರ್ಥದ ಫಲಿತ–ಜ್ಞಾನಕ್ಕೆ ಅರ್ಥ–ಅನತಿಕ್ರಮ.'

ಹೀಗೆ ಮಂದಾರಮಂಜರಿಯಲ್ಲಿ 'ಯಥಾ' ಶಬ್ದಕ್ಕೆ ಸಾದೃಶ್ಯಾರ್ಥವನ್ನು ಹೇಳಿ ಯಥಾರ್ಥ ಶಬ್ದದ ನಿರುಕ್ತಿಯನ್ನು ಮಾಡಲಾಗಿದೆ.

## ಸಾದೃಶ್ಯಾರ್ಥ ಪ್ರಕೃತಕ್ಕೆ ಸಂಗತವೆ?

**ಬಹುವ್ರೀಹ್ಯುಪಾದಾನೇನ ಉಕ್ತಾರ್ಥಸ್ಯ ಗ್ರಹಣೇ ತು ನ ಸ್ವಪರಸಾಧಾರಣ್ಯಂ ಪ್ರಾಮಾಣ್ಯಸ್ಯ ಲಭ್ಯತೇ । ಪರಮತೇ ಭ್ರಮವಿಷಯಸ್ಯ ಸತ್ತ್ವೇನ ಲಕ್ಷಣಾತಿವ್ಯಾಪ್ತೇಃ ।**

**ಯದ್ವಾ ತನ್ಮತೇಽಪಿ ಪ್ರಾಚಾಂ ರೀತ್ಯಾ ವೈಶಿಷ್ಟ್ಯಸ್ಯ ಭ್ರಮೇ ಅಸತ್ವಾತ್, ನವೀನಮತೇ ಚ ಪುರತೋ ಅಸತ್ವಾತ್ ತದಪಿ ತನ್ಮತಸಾಧಾರಣಮೇವ ಇತ್ಯಾಹುಃ ।**

ಯಥಾರ್ಥ ಶಬ್ದಕ್ಕೆ ಹಿಂದೆ ಹೇಳಿದಂತೆ ಬಹುವ್ರೀಹಿ ಸಮಾಸವನ್ನು ಮಾಡಿ 'ಅರ್ಥದಂತಿರುವ ಜ್ಞಾನ' ಎಂದು ಅರ್ಥವನ್ನು ಹೇಳಿದರೆ ಈ ಲಕ್ಷಣವು ನಮ್ಮ ಮತದಂತೆ ನಿರ್ದುಷ್ಟವಾದರೂ ತಾರ್ಕಿಕರಿಗೆ ಸಮ್ಮತವಾಗುವುದಿಲ್ಲ. ಅವರ ಸಿದ್ಧಾಂತದಲ್ಲಿ 'ಇದಂ ರಜತಮ್' ಎಂಬ ಭ್ರಮೆಯಲ್ಲಿ ಕಾಣುವ ರಜತವು ದೇಶಾಂತರದಲ್ಲಿ ಸತ್ಯವಾಗಿದೆ. ಹೀಗಾಗಿ ಭ್ರಮಾತ್ಮಕ ಜ್ಞಾನವೂ ಸತ್ತಾರೂಪೇಣ ವಿಷಯ ಸದೃಶವಾಗಿದೆ. ಆದ್ದರಿಂದ ಪ್ರಮಾಲಕ್ಷಣಕ್ಕೆ ಭ್ರಮೆಯಲ್ಲಿ ಅತಿವ್ಯಾಪ್ತಿ ಬರುತ್ತದೆ.

ಅಥವಾ, ಪ್ರಾಚೀನ ತಾರ್ಕಿಕರ ಮತದಲ್ಲಿ ರಜತವು ದೇಶಾಂತರದಲ್ಲಿ ಸತ್ಯವಾದರೂ ಅದರ

ತಾದಾತ್ಮ್ಯವು ಶುಕ್ತಿಯಲ್ಲಿ ಅಸತ್ಯ. ಆದ್ದರಿಂದ ವಿಷಯದ (ಶುಕ್ತಿರಜತತಾದಾತ್ಮ್ಯದ) ಸಾದೃಶ್ಯವು ಜ್ಞಾನಕ್ಕೆ ಇಲ್ಲ.

ನವೀನ ಮತದಲ್ಲಿ ರಜತ ತಾದಾತ್ಮ್ಯವೂ ರಜತದಲ್ಲಿ ಸತ್ಯ. ಆದರೂ, ರಜತವು ಪುರೋದೇಶದಲ್ಲಿ ಅಸತ್ಯ. ಆದರೆ ಜ್ಞಾನವು, ಪುರೋದೇಶದಲ್ಲಿ ರಜತವು ಇದೆ, ಎಂದು ಹೇಳುತ್ತದೆ. ಹೀಗೆ ಅವರ ಮತದಲ್ಲೂ ವಿಷಯ ಸಾದೃಶ್ಯ ಜ್ಞಾನಕ್ಕಿಲ್ಲ.

ಈ ರೀತಿಯಾಗಿ ಬಹುವ್ರೀಹಿ ಸಮಾಸ ಮಾಡಿದಾಗಲೂ ಈ ಲಕ್ಷಣವು ಸ್ವಪರ ಸಾಧಾರಣವಾಗುತ್ತದೆ, ಎಂದು ಕೆಲವರು ಹೇಳುತ್ತಾರೆ.

## ಜ್ಞಾನಸಾಮಾನ್ಯದ ಸ್ವತಸ್ತ್ವನಿರುಕ್ತಿ ಏಕೆ?

**ಅತ್ರ ಯದ್ಯಪಿ ಆಮ್ನಾಯಜನ್ಯ-ಜ್ಞಾನ-ಪ್ರಾಮಾಣ್ಯ-ಸ್ವತಸ್ತ್ವಮಾತ್ರಂ ಪ್ರಕೃತಮ್ । ತಥಾಪಿ ತತ್-ಸ್ವರೂಪಗ್ರಾಹಿ-ಪ್ರತ್ಯಕ್ಷಜ್ಞಾನಸ್ಯ, ತದನು-ಗ್ರಾಹಕ-ನ್ಯಾಯಜಾ-ನುಮಿತಿರೂಪ-ಜ್ಞಾನಸ್ಯ, ತತ್-ಪ್ರಾಮಾಣ್ಯಜ್ಞಾನಸ್ಯ ಚ ಪ್ರಾಮಾಣ್ಯ-ನಿಶ್ಚಯೋಪಾಯಸ್ಯ ಅಪಿ ಆವಶ್ಯಕತ್ವಾತ್ ಜ್ಞಾನಪ್ರಾಮಾಣ್ಯ-ಮಾತ್ರಸ್ಯಾಪಿ ಧರ್ಮಿತ್ವೇನ ಉಪಾದಾನಮ್ ।**

**ಯದ್ವಾ, ಪ್ರಾಚೀನ-ತಾರ್ಕಿಕಮತೇ ಇವ ಕ್ವಚಿತ್ ಪ್ರಾಮಾಣ್ಯಂ ಸ್ವತಃ, ಕ್ವಚಿತ್ ಪರತಃ, ಇತಿ ನ ಭ್ರಮಿತವ್ಯಮ್, ಕಿಂತು ಸರ್ವತ್ರಾಪಿ ।**

**ನವೀನಮತೇ ಸರ್ವತ್ರ ಪರತಸ್ತ್ವೋಪಗಮೇನ ತದ್ ವ್ಯುದಾಸಾಯ ಇತಿ ಧ್ಯೇಯಮ್ ॥**

ಪ್ರಕೃತ ಗ್ರಂಥದ ಮಂಗಲ ಶ್ಲೋಕದಲ್ಲಿ 'ಸ್ವತಃ ಪ್ರಮಾಣೈಃ ಆಮ್ನಾಯೈಃ' ಎಂದು ವೇದಗಳ ಪ್ರಾಮಾಣ್ಯ ಪ್ರಸ್ತುತವಾದುದರಿಂದ ವೇದಜನ್ಯ ಜ್ಞಾನದಲ್ಲಿ ಮಾತ್ರವೇ ಪ್ರಾಮಾಣ್ಯ ಸ್ವತಸ್ತ್ವವನ್ನು ಪರಿಷ್ಕಾರ ಮಾಡಬೇಕು. ಅದು ಬಿಟ್ಟು 'ತತ್ತತ್-ಜ್ಞಾನಪ್ರಾಮಾಣ್ಯಮ್' ಎಂದು ಸಕಲ ಜ್ಞಾನಗತ ಪ್ರಾಮಾಣ್ಯದ ಪ್ರಸ್ತಾವ ಅನಗತ್ಯ. ಆದರೂ ಅದು ಅಸಂಗತವಲ್ಲ. ವೇದಗಳ ಸ್ವರೂಪವನ್ನು ಗ್ರಹಿಸುವುದು ಶ್ರಾವಣ ಪ್ರತ್ಯಕ್ಷ. ಅದು ಪ್ರಮಾಣವಾದರೆ ಮಾತ್ರ ವೇದಸ್ವರೂಪವು ಸಿದ್ಧವಾಗುತ್ತದೆ. ಅದರಂತೆ, ವೇದಕ್ಕೆ ಅನುಗ್ರಾಹಕವಾದ ಬ್ರಹ್ಮಸೂತ್ರೋಕ್ತ-ನ್ಯಾಯಗಳಿಂದ ಜನ್ಯವಾದ ಅನುಮಿತಿಯು ಪ್ರಮಾಣವಾಗಿರಬೇಕು. ಆ ಅನುಮಿತಿಯ ಪ್ರಾಮಾಣ್ಯಜ್ಞಾನವೂ ಪ್ರಮಾಣ ಎಂದು ನಿಶ್ಚಯವಾಗಬೇಕು. ಆಗ ಬಾಧಕಶಂಕಾ ನಿವೃತ್ತಿಯಾಗಿ ವೇದಪ್ರಾಮಾಣ್ಯವು ದೃಢವಾಗುತ್ತದೆ. ಹೀಗೆ ವೇದಪ್ರಾಮಾಣ್ಯ ಸಿದ್ಧವಾಗಬೇಕಾದರೆ ಅನೇಕ ಜ್ಞಾನಗಳಲ್ಲಿ ಪ್ರಾಮಾಣ್ಯ ಸಿದ್ಧಿಯಾಗಬೇಕಾಗುತ್ತದೆ. ಅದಕ್ಕಾಗಿ ಜ್ಞಾನಸಾಮಾನ್ಯಗತ ಪ್ರಾಮಾಣ್ಯದ ಸ್ವತಸ್ತ್ವವನ್ನು ನಿರೂಪಿಸಲಾಗಿದೆ.

ಅಥವಾ, ಇನ್ನೊಂದು ರೀತಿಯಿಂದ ಇದು ಸಂಗತವಾಗುತ್ತದೆ. ಪ್ರಾಚೀನ ನೈಯಾಯಿಕರು ಧರ್ಮಿಜ್ಞಾನ ಮತ್ತು ಅನುಮಿತಿಯ ಪ್ರಾಮಾಣ್ಯವು ಸ್ವತಃ, ಇತರ ಜ್ಞಾನಪ್ರಾಮಾಣ್ಯ ಪರತಃ ಎನ್ನುತ್ತಾರೆ. ಹೀಗೆ ಭ್ರಮಿಸಬಾರದು. ಎಲ್ಲಾ ಜ್ಞಾನಗಳ ಪ್ರಾಮಾಣ್ಯವೂ ಸ್ವತಃ, ಎಂದು ತಿಳಿಸುವುದಕ್ಕಾಗಿ ಸಕಲ ಜ್ಞಾನಪ್ರಾಮಾಣ್ಯಕ್ಕೂ ಸ್ವತಸ್ತ್ವವನ್ನು ಸಾಧಿಸಲಾಗಿದೆ.

ನವೀನ ಮತದಲ್ಲಿ ಸರ್ವಜ್ಞಾನ ಪ್ರಾಮಾಣ್ಯವೂ ಪರತಃ, ಅದಕ್ಕೆ ವಿರುದ್ಧವಾಗಿ ಸರ್ವಜ್ಞಾನಪ್ರಾಮಾಣ್ಯಕ್ಕೂ ಸ್ವತಸ್ತ್ವವನ್ನು ಸಾಧಿಸಲಾಗಿದೆ.

ಹೀಗೆ ನವೀನ-ಪ್ರಾಚೀನ ಉಭಯಮತಕ್ಕೆ ವಿರೋಧವಾಗುವಂತೆ ಜ್ಞಾನಸಾಮಾನ್ಯಗತವಾದ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಮೂಲದಲ್ಲಿ ನಿರೂಪಿಸಲಾಗಿದೆ.

## ಸ್ವತಸ್ತ್ವನಿರುಕ್ತಿಯ ವಿವರಣೆ

**ಗ್ರಾಹ್ಯೇತಿ ॥ ಗ್ರಾಹ್ಯಪ್ರಾಮಾಣ್ಯಸ್ಯ ಯದ್ವಿರೋಧಿ-**

**1. ಪ್ರಾಮಾಣ್ಯಾಭಾವ 2. ಅಪ್ರಾಮಾಣ್ಯ**

**3. ಪ್ರಾಮಾಣ್ಯಾಭಾವವ್ಯಾಪ್ಯ 4. ಅಪ್ರಮಾಣ್ಯವ್ಯಾಪ್ಯರೂಪಂ**

**ತಸ್ಯ ಯಾ ಉಪಸ್ಥಾಪಕ ಸಾಮಗ್ರೀ ದೋಷಶಂಕಾದಿರೂಪಾ ತದಸಮವಹಿತಂ ಗ್ರಾಹ್ಯಪ್ರಾಮಾಣ್ಯಾಶ್ರಯ-ತತ್ತತ್-ಜ್ಞಾನವಿಷಯಕಂ ಯತ್ ಸಾಕ್ಷಿಜ್ಞಾನಂ ತೇನ ಗೃಹ್ಯತೇ ಏವ, ಇತ್ಯೇವಂರೂಪ-ತದ್ವಿಷಯತ್ವ-ನೈಯತ್ಯಮ್ ಇತ್ಯರ್ಥಃ ।**

ಗ್ರಾಹ್ಯಪ್ರಾಮಾಣ್ಯವಿರೋಧಿ- ಎಂಬುದರ ವಿವರಣೆ-ಗ್ರಾಹ್ಯಪ್ರಾಮಾಣ್ಯಕ್ಕೆ ಯಾವುದು ವಿರೋಧಿಯೋ ಅದು, ಎಂದು. ಅದಕ್ಕೆ ವಿರೋಧಿಗಳು ಒಟ್ಟು ನಾಲ್ಕು.

1. ಪ್ರಾಮಾಣ್ಯದ ಅಭಾವ
2. ತದಭಾವವತಿ ತತ್-ಪ್ರಕಾರಕತ್ವರೂಪವಾದ ಅಪ್ರಾಮಾಣ್ಯ.
3. ಪ್ರಾಮಾಣ್ಯಾಭಾವ ವ್ಯಾಪ್ಯವಾದ ದೋಷಜನ್ಯತ್ವಾದಿ ಧರ್ಮಗಳು.
4. ಅಪ್ರಾಮಾಣ್ಯಕ್ಕೆ ವ್ಯಾಪ್ಯವಾದ ದೋಷಜನ್ಯತ್ವ.

ಇಂತಹ ಪ್ರಾಮಾಣ್ಯವಿರೋಧಿಗಳ ಜ್ಞಾನಕ್ಕೆ ಬೇಕಾದ ಸಾಮಗ್ರೀ ಎಂದರೆ ದೋಷ ಸಂದೇಹಾದಿಗಳು. ಇಂದ್ರಿಯ ಮತ್ತು ವಿಷಯಾದಿಗಳಲ್ಲಿ ದೋಷ ಸಂದೇಹ ಅಥವಾ ನಿಶ್ಚಯ ಇದ್ದರೆ ಮೇಲೆ ಹೇಳಿದ ನಾಲ್ಕು ವಿಧವಾದ ಅಪ್ರಾಮಾಣ್ಯದ ಜ್ಞಾನವು ಬರುತ್ತದೆ. ಅಂತಹ ಅಪ್ರಾಮಾಣ್ಯಜ್ಞಾನಕ್ಕೆ ಕಾರಣವಾದ ದೋಷಶಂಕಾದಿಗಳು ಇಲ್ಲದಿರುವಾಗ ಜ್ಞಾನಗ್ರಾಹಕವು ಜ್ಞಾನಗತ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ.

ಗ್ರಾಹ್ಯಪ್ರಾಮಾಣ್ಯ ಎಂದರೆ ಪ್ರಕೃತ ಯಾವ ಜ್ಞಾನದ ಪ್ರಾಮಾಣ್ಯವು ತಿಳಿಯಲ್ಪಡಬೇಕೋ ಅಂತಹ ಪ್ರಾಮಾಣ್ಯ. ಅದಕ್ಕೆ ಆಶ್ರಯವಾದುದು ಆಯಾಯ ಜ್ಞಾನಗಳು. ಅಂತಹ ಜ್ಞಾನವಿಷಯಕ ಜ್ಞಾನ ಎಂದರೆ, ಸಾಕ್ಷಿಜ್ಞಾನ. ಸಾಕ್ಷಿಜ್ಞಾನ ವಿಷಯತ್ವ ನೈಯತ್ಯ ಪ್ರಾಮಾಣ್ಯಕ್ಕಿದೆ, ಅಂದರೆ ಬಾಧಕಗಳು ಇಲ್ಲದಿರುವಾಗ ಸಾಕ್ಷಿಜ್ಞಾನದಿಂದ ಪ್ರಾಮಾಣ್ಯವು ನಿಯಮೇನ ಗ್ರಹಿಸಲ್ಪಡುತ್ತದೆ, ಎಂದು ಅರ್ಥ. ಇದೇ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವ.

## ವಿಪ್ರತಿಪತ್ತಿಯ ಅಗತ್ಯವಿಲ್ಲ

**ವಿಪ್ರತಿಪತ್ತೇಃ ಅನಾವಶ್ಯಕತ್ವಸ್ಯ ನ್ಯಾಯಾಮೃತೇ ವ್ಯುತ್ಪಾದನಾತ್**
**'ನೈಯತ್ಯಂ ಅಸ್ತಿ ನವಾ' ಇತಿ ಅನುಕ್ತ್ವೈವ ಕೋಟಿರುಕ್ತಾ ।**

ವಿಪ್ರತಿಪತ್ತಿ ಎಂದರೆ ವಿರುದ್ಧಾರ್ಥ ಪ್ರತಿಪಾದಕ ವಾಕ್ಯದ್ವಯ. ಇದರ ಅಗತ್ಯವಿಲ್ಲ ಎನ್ನುವುದನ್ನು ನ್ಯಾಯಾಮೃತ ಗ್ರಂಥದಲ್ಲಿ ಸಮರ್ಥನೆ ಮಾಡಲಾಗಿದೆ. ಆದಕಾರಣ 'ನೈಯತ್ಯಂ ಅಸ್ತಿ, ನ ವಾ' ಎಂಬ ವಿಪ್ರತಿಪತ್ತಿಯನ್ನು ಹೇಳದೆಯೇ ನೇರವಾಗಿ ಸ್ವಪಕ್ಷ ನಿರೂಪಣೆಯನ್ನೇ ಇಲ್ಲಿ ಮಾಡಲಾಗಿದೆ.

## ನ್ಯಾಯಾಮೃತದಲ್ಲಿ ವಿಪ್ರತಿಪತ್ತಿ ನಿರಾಸ

ನ್ಯಾಯಾಮೃತದಲ್ಲಿ 'ಸತ್ಯಂ ಮಿಥ್ಯಾ ವಾ' ಎಂದು ವಿಪ್ರತಿಪತ್ತಿಯನ್ನು ಹೇಳಿ 'ಇದಂ ಚ ವಿಪ್ರತಿಪತ್ತಿ–ಪ್ರದರ್ಶನಂ ತಾರ್ಕಿಕರೀತ್ಯೈವ' ಎಂದು ನಿರಾಕರಿಸಲಾಗಿದೆ. ಮಧ್ಯಸ್ಥನು ವಿಪ್ರತಿಪತ್ತಿಯನ್ನು ತೋರಿಸಿದಾಗ ವಾದಿಯು ಅವೆರಡರಲ್ಲಿ ಯಾವ ಒಂದನ್ನು ತಾನು ಸಾಧನೆ ಮಾಡಲು ಹೊರಟಿದ್ದಾನೆ, ಎನ್ನುವುದು ಸ್ಪಷ್ಟವಾಗುತ್ತದೆ. ಅದಕ್ಕಾಗಿಯಷ್ಟೇ ವಿಪ್ರತಿಪತ್ತಿ. ಆದರೆ ಹೀಗೆ ಪಕ್ಷಪರಿಗ್ರಹ ಜ್ಞಾನಕ್ಕಾಗಿ ವಿಪ್ರತಿಪತ್ತಿವಾಕ್ಯವನ್ನೇ ಹೇಳಬೇಕೆಂದೇನಿಲ್ಲ. ಮಧ್ಯಸ್ಥನು 'ನೀನು ಈ ಪಕ್ಷವನ್ನು ಸಾಧಿಸು' ಎಂದಾಗಲೀ, ವಾದಿಯೇ 'ನಾನು ಈ ಪಕ್ಷವನ್ನು ಸಾಧಿಸುತ್ತೇನೆ' ಎಂದಾಗಲೀ, ವಾದ ಕಥೆಗಿಂತ ಮೊದಲೇ ಹೇಳುವುದರಿಂದಲೇ ಪಕ್ಷಪರಿಗ್ರಹವು ಸಿದ್ಧವಾಗುತ್ತದೆ. ಅದಕ್ಕಾಗಿ ವಿಪ್ರತಿಪತ್ತಿಯ ಅಗತ್ಯವಿಲ್ಲ.

ಸಂಶಯರೂಪ ಪಕ್ಷತಾ ಸಿದ್ಧಿಗಾಗಿಯೂ ವಿಪ್ರತಿಪತ್ತಿಯ ಅಗತ್ಯವಿಲ್ಲ. ವಾದಿ, ಪ್ರತಿವಾದಿ, ಮಧ್ಯಸ್ಥರಿಗೆ ಒಂದು ಪಕ್ಷದ ನಿರ್ಧಾರವಿರುವಾಗ ವಿಪ್ರತಿಪತ್ತಿ ವಾಕ್ಯದಿಂದ ಸಂದೇಹ ಬರಲು ಸಾಧ್ಯವಿಲ್ಲ. ಅಥವಾ ಸಿಷಾಧಯಿಷಾವಿರಹ ವಿಶಿಷ್ಟ ಸಿದ್ಧ್ಯಭಾವವೇ ಪಕ್ಷತಾ, ಸಾಧ್ಯಸಂದೇಹವು ಪಕ್ಷತಾ ಅಲ್ಲ. ಆದ್ದರಿಂದಲೂ ವಿಪ್ರತಿಪತ್ತಿಯ ಅಗತ್ಯವಿಲ್ಲ.

## ಪ್ರಾಮಾಣ್ಯ ವಿರೋಧಿತ್ವ ಎಂದರೇನು?

**ಅತ್ರ ಪ್ರಾಮಾಣ್ಯವಿರಹರೂಪತ್ವ-ತದ್ವ್ಯಾಪ್ಯತ್ವಾದಿರೂಪ ವಿರೋಧಿತ್ವಸ್ಯ ಪ್ರಾಮಾಣ್ಯಾಭಾವಾದಿಷು ಚತುರ್ಷು ಏಕಸ್ಯ ಅಭಾವೇಽಪಿ, ಯಜ್ಜ್ಞಾನೇ ಸತಿ ಪ್ರಾಮಾಣ್ಯನಿಶ್ಚಯಃ ಪ್ರತಿಬದ್ಧ್ಯತೇ ತಜ್ಜ್ಞಾನವಿಷಯತ್ವರೂಪಂ ಗ್ರಾಹ್ಯ-ಪ್ರಾಮಾಣ್ಯವಿರೋಧಿತ್ವಂ ಪ್ರಾಮಾಣ್ಯಾಭಾವಾದೌ ಧ್ಯೇಯಮ್ ।**

**ವಕ್ಷ್ಯತಿ ಚ ಪ್ರಾಮಾಣ್ಯನಿಶ್ಚಯಸ್ಯ ಪ್ರವರ್ತಕತ್ವವಾದೇ 'ಅಭಾವಾನಾಂ ಪ್ರಾಮಾಣ್ಯ-ವಿರೋಧ್ಯಭಾವತ್ವೇನ' ಇತ್ಯಾದಿ ।**

ಹಿಂದೆ ಪ್ರಾಮಾಣ್ಯವಿರೋಧಿಗಳು ಒಟ್ಟು ನಾಲ್ಕು ಎಂದು ಹೇಳಲಾಗಿದೆ. ಈ ನಾಲ್ಕರಲ್ಲಿ ಅನುಗತವಾದ ವಿರೋಧಿತ್ವ ಎಂದರೇನು? ಪ್ರಾಮಾಣ್ಯ ವಿರಹ ರೂಪತ್ವಂ, ಎಂದರೆ ಅದು ಪ್ರಾಮಾಣ್ಯಾಭಾವದಲ್ಲಿ ಮಾತ್ರವೇ ಬರುತ್ತದೆ. ಪ್ರಾಮಾಣ್ಯ-ವಿರಹ-ವ್ಯಾಪ್ಯತ್ವಮ್, ಎಂದರೆ ಅದು ಪ್ರಾಮಾಣ್ಯಾಭಾವದಲ್ಲಿ ಬರುವುದಿಲ್ಲ. ಆದರೂ, 'ಪ್ರಾಮಾಣ್ಯನಿಶ್ಚಯ ಪ್ರತಿಬಂಧಕತ್ವಮ್' ಎಂಬ ಧರ್ಮವು ನಾಲ್ಕರಲ್ಲೂ ಇದೆ. ಅದೇ ಪ್ರಾಮಾಣ್ಯವಿರೋಧಿತ್ವಮ್. ಪ್ರಾಮಾಣ್ಯ ನಿಶ್ಚಯ ಪ್ರತಿಬಂಧಕತ್ವವೆಂದರೆ ಯಾವುದರ ನಿಶ್ಚಯವಿದ್ದಾಗ ಪ್ರಾಮಾಣ್ಯನಿಶ್ಚಯವಾಗುವುದಿಲ್ಲವೋ ಅದು. ಪ್ರಾಮಾಣ್ಯಾಭಾವ ನಿಶ್ಚಯವು ತದಭಾವನಿಶ್ಚಯ ವಿಧಯಾ ಪ್ರಾಮಾಣ್ಯ ನಿಶ್ಚಯಕ್ಕೆ ಪ್ರತಿಬಂಧಕವಾಗಿದೆ. ಉಳಿದ ಮೂರರ ನಿಶ್ಚಯವು ತದಭಾವವ್ಯಾಪ್ಯವತ್ತಾ ನಿಶ್ಚಯ ರೂಪವಾಗಿ ಪ್ರತಿಬಂಧಕವಾಗಿವೆ. ಹೀಗೆ 'ಪ್ರಾಮಾಣ್ಯ ನಿಶ್ಚಯ ವಿರೋಧಿ ಜ್ಞಾನವಿಷಯತ್ವವು' ನಾಲ್ಕರಲ್ಲೂ ಇದೆ.

ಇದನ್ನು, ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣ, ಎಂದು ಸಮರ್ಥಿಸುವ ಮುಂದಿನ ಪ್ರಕರಣದಲ್ಲಿ ಮೂಲದಲ್ಲೇ ಹೇಳಲಾಗಿದೆ.

## ಮುಂದಿನ ಪ್ರಕರಣದ ಆಶಯ

ಸ್ವತಸ್ತ್ವಸಾಧಕ ಹೇತುಗಳು ಅಪ್ರಯೋಜಕಗಳು ಎಂಬ ಆಶಂಕೆಯನ್ನು ನಿರಾಸಮಾಡುವಾಗ, ಪ್ರವೃತ್ತಿಗೆ ಪ್ರಾಮಾಣ್ಯ ನಿಶ್ಚಯವೇ ಕಾರಣ ಹೊರತು, ಅಪ್ರಾಮಾಣ್ಯಶಂಕಾಭಾವ, ಪ್ರಾಮಾಣ್ಯಾತ್ಯಂತಾಭಾವ ಶಂಕಾಭಾವ, ತದುಭಯ ವ್ಯಾಪ್ಯಶಂಕಾಭಾವ (ಒಟ್ಟು 2) ಈ ನಾಲ್ಕು ಕಾರಣ ಎಂದು ಹೇಳುವುದು ಗೌರವ. ಈ ನಾಲ್ಕನ್ನೂ 'ಪ್ರಾಮಾಣ್ಯ ನಿಶ್ಚಯ-ವಿರೋಧಿ -ಅಭಾವತ್ವೇನ' ಅನುಗಮ ಮಾಡಿದರೂ ಗೌರವ. ಅದಕ್ಕಿಂತ ಪ್ರಾಮಾಣ್ಯನಿಶ್ಚಯವೇ ಕಾರಣ ಎನ್ನುವುದು ಲಾಘವ.

ಇಲ್ಲಿ ನಾಲ್ಕು ಶಂಕಾಭಾವಗಳಲ್ಲಿ ಅನುಗತಧರ್ಮ 'ಪ್ರಾಮಾಣ್ಯನಿಶ್ಚಯ ವಿರೋಧಿ ಅಭಾವತ್ವಂ' ಎನ್ನುವ ಮೂಲಕ ಪ್ರಾಮಾಣ್ಯಾಭಾವ, ಅಪ್ರಾಮಾಣ್ಯಾದಿಗಳು ಪ್ರಾಮಾಣ್ಯ ವಿರೋಧಿ

ಗಳು ಎಂದು ತಿಳಿಸಲಾಗಿದೆ. ಆ ಧರ್ಮವನ್ನೇ ಇಟ್ಟುಕೊಂಡು ಪ್ರಕೃತ ಪರಿಷ್ಕಾರದಲ್ಲಿ 'ಗ್ರಾಹ್ಯಪ್ರಾಮಾಣ್ಯ ವಿರೋಧಿ' ಎಂಬ ಪದದಿಂದ ನಾಲ್ಕನ್ನೂ ಪರಿಗಣಿಸಬಹುದು.

## ಪ್ರತಿಬಂಧಕತ್ವವೆಂದರೆ

**ಪ್ರಾಮಾಣ್ಯನಿಶ್ಚಯ-ಪ್ರತಿಬಂಧಕತ್ವಂ ಚ ತದನುಕೂಲ-ಕಿಂಚಿದ್ಧರ್ಮ-ವಿಘಟಕತ್ವಂ ವಾ ತದನುತ್ಪಾದವ್ಯಾಪ್ಯತ್ವಂ ವಾ । ಪ್ರಾಮಾಣ್ಯ-ನಿಶ್ಚಯಸ್ಯ ಸಾಕ್ಷಿರೂಪತಯಾ ನಿತ್ಯಜ್ಞಾನತ್ವೇಽಪಿ ಪ್ರಾಮಾಣ್ಯವಿಷಯಕತ್ವಾದಿಕಮ್ ಉತ್ಪತ್ತಿಮದೇವ ಇತಿ ತದ್ವಿಶಿಷ್ಟ-ಪ್ರಾಮಾಣ್ಯನಿಶ್ಚಯಾನುತ್ಪಾದಃ ನ ದುರ್ಲಭಃ ।**

ಪ್ರಾಮಾಣ್ಯ ನಿಶ್ಚಯವು ಸಾಕ್ಷಿರೂಪ. ಆದಕ್ಕೆ ಅಪ್ರಾಮಾಣ್ಯ ನಿಶ್ಚಯವು ಪ್ರತಿಬಂಧಕವಾಗುವುದು ಎಂದರೆ, ಅಂತಹ ಪ್ರಾಮಾಣ್ಯನಿಶ್ಚಯಕ್ಕೆ ಬೇಕಾಗಿರುವ ಪ್ರತಿಬಂಧಕಾಭಾವ ರೂಪವಾದ (ಅಪ್ರಾಮಾಣ್ಯನಿಶ್ಚಯಾಭಾವ) ಧರ್ಮಕ್ಕೆ ವಿನಾಶಕ ಎಂದರ್ಥ.

ಅಥವಾ, ಅಪ್ರಾಮಾಣ್ಯಾದಿ ನಿಶ್ಚಯವಿದ್ದಾಗ ಎಂದೂ ಪ್ರಾಮಾಣ್ಯನಿಶ್ಚಯವು ಉತ್ಪತ್ತಿಯಾಗುವುದಿಲ್ಲ. ಹೀಗೆ ತಾದೃಶ ನಿಶ್ಚಯಾ-ನುತ್ಪಾದಕ್ಕೆ ವ್ಯಾಪ್ಯವಾಗಿವೆ ಅಪ್ರಾಮಾಣ್ಯ ನಿಶ್ಚಯಾದಿಗಳು. ಅವುಗಳಲ್ಲಿ ಇರುವ ಆ ವ್ಯಾಪ್ಯತ್ವಧರ್ಮವೇ ಅವುಗಳಲ್ಲಿ ಇರುವ ವಿರೋಧಿತ್ವ.

ವಸ್ತುತಃ ಪ್ರಾಮಾಣ್ಯ ನಿಶ್ಚಯವು ಸಾಕ್ಷಿರೂಪವಾದುದರಿಂದ ಅನಾದಿ. ಅದಕ್ಕೆ ಉತ್ಪತ್ತಿಯೇ ಇಲ್ಲ. ಅಂದಮೇಲೆ 'ತದನುತ್ಪಾದ' ಎನ್ನುವುದು ಹೇಗೆ? ಎಂದರೆ ಸಾಕ್ಷಿಜ್ಞಾನವು ನಿತ್ಯವಾದರೂ ಅದಕ್ಕೆ ಪ್ರಾಮಾಣ್ಯವಿಷಯಕತ್ವ ಕೆಲವೊಮ್ಮೆ ಬರುತ್ತದೆ. ಕೆಲವೊಮ್ಮೆ ಬರುವುದಿಲ್ಲ. ಆ ಧರ್ಮವು ಸಾಕ್ಷಿಯಲ್ಲಿ ಕಾದಾಚಿತ್ಕವಾದುದರಿಂದ ಜನ್ಯ. ಜನ್ಯವಾದ ತಾದೃಶ ವಿಷಯಕತ್ವದಿಂದ ವಿಶಿಷ್ಟವಾದ ಸಾಕ್ಷಿಜ್ಞಾನವೂ ಜನ್ಯವಾಗುತ್ತದೆ. ಹೀಗೆ ಸಾಕ್ಷಿಜ್ಞಾನದಲ್ಲಿ ಉತ್ಪಾದ-ಅನುತ್ಪಾದಗಳನ್ನು ತಿಳಿಯಬೇಕು.

## ಉಪಸ್ಥಾಪಕವೆಂದರೆ

**ಉಪಸ್ಥಾಪಕೇತ್ಯತ್ರ (1) ವಿರೋಧ್ಯುಪಸ್ಥಿತಿ (2) ತಜ್ಜನಕ ಸಾಮಗ್ರೀಭ್ಯಾಂ ಅಸಮವಹಿತೇತ್ಯರ್ಥೋ ಧ್ಯೇಯಃ । ತಥಾಚ ಪ್ರಾಮಾಣ್ಯವಿರೋಧಿ-ಉಪಸ್ಥಿತಿವೇಲಾಯಾಂ ತತ್-ಸಾಮಗ್ರ್ಯಭಾವೇನ ತದಸಮವಹಿತೇನಾಪಿ 'ಸಾಕ್ಷಿಣಾ ಗೃಹ್ಯತೇ ಏವ' ಇತಿ ನೈಯತ್ಯಂ ನೇತಿ ಶಂಕಾನವಕಾಶಃ ।**

'ಪ್ರಾಮಾಣ್ಯವಿರೋಧಿ-ಉಪಸ್ಥಾಪಕ ಸಾಮಗ್ರೀ' ಎಂಬ ವಿಶೇಷಣದಿಂದ ವಿರೋಧಿ

ಸಾಮಗ್ರಿಯನ್ನು ಮಾತ್ರವೇ ನಿಷೇಧ ಮಾಡಲಾಗಿದ್ದರೂ ತಾದೃಶ ಸಾಮಗ್ರೀ ಹಾಗೂ ವಿರೋಧಿ ಜ್ಞಾನ ಎರಡೂ ಇರಬಾರದು ಎಂದೇ ಅರ್ಥವನ್ನು ತಿಳಿಯಬೇಕು. ಏಕೆಂದರೆ, ಕೆಲವೊಮ್ಮೆ ವಿರೋಧಿ ಸಾಮಗ್ರಿಗಳು ನಾಶವಾದರೂ ವಿರೋಧಿಗಳಾದ ಅಪ್ರಾಮಾಣ್ಯಾದಿಜ್ಞಾನವಿರುತ್ತದೆ. ಆಗಲೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಇದರಿಂದ 'ಸಾಕ್ಷಿಯು ವಿರೋಧಿ ಸಾಮಗ್ರೀ ಇಲ್ಲದಿರುವಾಗ ಪ್ರಾಮಾಣ್ಯವನ್ನು ಗ್ರಹಿಸಿಯೇ ತೀರುತ್ತದೆ' ಎಂಬ ನಿಯಮಕ್ಕೆ ಚ್ಯುತಿ ಬರುತ್ತದೆ. ಅದಕ್ಕಾಗಿ ಸಾಮಗ್ರೀ ಅಥವಾ ವಿರೋಧಿ ನಿಶ್ಚಯ ಇವೆರಡೂ ಇರಬಾರದು, ಎಂಬ ನಿಬಂಧನೆಯನ್ನು ಹಾಕಬೇಕು.

## ಅಸಮವಹಿತತ್ತ್ವವೆಂದರೆ

**ಅಸಮವಹಿತತ್ವಂ ಚ ತದಸಾಮಾನಾಧಿಕರಣತ್ವೇ ಸತಿ ತದಸಮಾನ-ಕಾಲಿಕತ್ವಮ್ ।**

ವಿರೋಧಿಸಾಮಗ್ರಿಯಿಂದ ಸಾಕ್ಷಿಯು ಅಸಮವಹಿತವಾಗಿರಬೇಕು, ಎಂದರೆ ಅಂತಹ ಸಾಮಗ್ರಿ ಇದ್ದಲ್ಲೇ, ಅದು ಇರುವ ಕಾಲದಲ್ಲೇ ಸಾಕ್ಷಿ ಇರಬಾರದು ಎಂದರ್ಥ. ಯಾರ ಸಾಕ್ಷಿಯು ಅಂತಹ ಸಾಮಗ್ರೀ ಇರುವ ದೇಹದಲ್ಲಿ ಆ ಸಾಮಗ್ರಿಯ ಸಮಕಾಲದಲ್ಲಿ ಇರುವುದೋ ಅಂತಹ ಸಾಕ್ಷಿಯು ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ. ಬೇರೊಬ್ಬನ ಶರೀರದಲ್ಲಿ ವಿರೋಧಿ ಸಾಮಗ್ರೀ ಇದ್ದರೂ ಅಥವಾ ಅವನದೇ ಶರೀರದಲ್ಲಿ ಬೇರೆ ಕಾಲದಲ್ಲಿ ವಿರೋಧಿ ಸಾಮಗ್ರೀ ಇದ್ದರೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅದಕ್ಕಾಗಿ ಸಾಮಗ್ರಿಯೊಂದಿಗೆ ಸಾಕ್ಷಿಗೆ ದೈಶಿಕ-ಕಾಲಿಕ ಎರಡೂ ವಿಧದ ಸಾಮಾನಾಧಿಕರಣ್ಯವನ್ನು ನಿಷೇಧಿಸಬೇಕು.

## ಜ್ಞಾನಪದದ ಕೃತ್ಯ

**''ಪ್ರತ್ಯಕ್ಷಂ ಸಪ್ತವಿಧಂ ಸಾಕ್ಷಿ–ಷಡಿಂದ್ರಿಯಭೇದೇನ'' ಇತಿ ಪ್ರಮಾಣಲಕ್ಷಣೇ 'ಸ್ವರೂಪೇಂದ್ರಿಯಂ ಸಾಕ್ಷೀತ್ಯುಚ್ಯತೇ' ಇತಿ ಪದ್ಧತ್ಯಾದೌ ಚ ಸಾಕ್ಷಿಣೋಽನುಪ್ರಮಾಣತ್ವೋಕ್ತೇಃ ಇಹ ಪರಾಭ್ಯುಪೇತ–ಅನುವ್ಯವಸಾಯ ರೂಪತ್ವ–ಸ್ಫೋರಣಾಯ ಸಾಕ್ಷಿಜ್ಞಾನೇತ್ಯುಕ್ತಮ್ ।**

**'ಸಾಕ್ಷಿಪ್ರತ್ಯಕ್ಷತೋ ಹ್ಯೇವ ಮಾನಾನಾಂ ಮಾನತೇಯತೇ ।'**

**ಇತ್ಯಾದೌ ಜ್ಞಾನೇಽಪಿ ಪ್ರಯೋಗಾತ್ । ತಥಾ ಯುಕ್ತಿಪಾದೇ 'ನ ವಿಲಕ್ಷಣತ್ವಾತ್' ಇತಿ ನಯೇ–**

**'ಸುಖದುಃಖಾದಿವಿಷಯಂ ಶುದ್ಧಂ ಸಂಸಾರಗೇಷ್ವಪಿ ।'**

**ಇತ್ಯಸ್ಯ ವ್ಯಾಖ್ಯಾವಸರೇ ಸುಧಾಯಾಂ 'ಸ್ವರೂಪಭೂತಂ ಚೈತನ್ಯೇಂದ್ರಿಯಂ ಸಾಕ್ಷೀತ್ಯುಚ್ಯತೇ, ತದಭಿವ್ಯಕ್ತಂ ಜ್ಞಾನಂ ಚ' ಇತ್ಯುಕ್ತತ್ವಾಚ್ಚ ।**

ಪರಿಷ್ಕಾರದಲ್ಲಿ 'ಸಾಕ್ಷಿಜ್ಞಾನ' ಎಂಬಲ್ಲಿ ಇಂದ್ರಿಯರೂಪವಾದ ಸಾಕ್ಷಿಯು ಪ್ರಕೃತದಲ್ಲಿ ವಿವಕ್ಷಿತವಲ್ಲ, ಸಾಕ್ಷಿಜ್ಞಾನವು ವಿವಕ್ಷಿತ ಎಂದು ತಿಳಿಸಲು ಜ್ಞಾನಪದವಿದೆ.

ಇಂದ್ರಿಯ ಎಂಬ ಅರ್ಥದಲ್ಲೂ ಸಾಕ್ಷಿಪದದ ಪ್ರಯೋಗ ಇದೆ–ಪ್ರಮಾಣ ಲಕ್ಷಣದಲ್ಲಿ ಆಚಾರ್ಯರು 'ಪ್ರತ್ಯಕ್ಷವು ಏಳುವಿಧ–ಸಾಕ್ಷಿ ಮತ್ತು ಚಕ್ಷುರಾದಿ ಆರು ಇಂದ್ರಿಯಗಳು' ಎಂದಿದ್ದಾರೆ. ಇಲ್ಲಿ ಸಾಕ್ಷಿ ಎಂದರೆ ಇಂದ್ರಿಯ. ಪ್ರಮಾಣ ಪದ್ಧತಿಯಲ್ಲೂ ಶ್ರೀಜಯತೀರ್ಥರು– 'ಆತ್ಮಸ್ವರೂಪಭೂತವಾದ ಇಂದ್ರಿಯವೇ ಸಾಕ್ಷಿ ಎಂದು ಹೇಳಲ್ಪಡುತ್ತದೆ' ಎಂದಿದ್ದಾರೆ. ಈ ಎರಡು ಕಡೆಯಲ್ಲೂ ಸಾಕ್ಷಿ ಎಂದರೆ ಪ್ರಮಾಕರಣವಾದ ಅನುಪ್ರಮಾಣ–ಇಂದ್ರಿಯ. ಆದರೆ ಪ್ರಕೃತ ಪರಿಷ್ಕಾರದಲ್ಲಿ ತಾರ್ಕಿಕರಿಗೂ ಸಮ್ಮತವಾದ ಅನುವ್ಯವಸಾಯವೇ (ಜ್ಞಾನದ ಜ್ಞಾನ) ಸಾಕ್ಷಿಪದದ ಅರ್ಥ. ಇದನ್ನು ತಿಳಿಸುವುದಕ್ಕಾಗಿ 'ಸಾಕ್ಷಿಜ್ಞಾನ' ಎಂದು ಹೇಳಲಾಗಿದೆ.

'ಸಾಕ್ಷಿ ಪ್ರತ್ಯಕ್ಷದಿಂದಲೇ ಪ್ರಮಾಣಗಳ ಪ್ರಾಮಾಣ್ಯವು ಸಿದ್ಧವಾಗುವುದು' ಇಂತಹ ಕಡೆಗಳಲ್ಲಿ ಜ್ಞಾನ ಎಂಬ ಅರ್ಥದಲ್ಲಿಯೂ ಸಾಕ್ಷಿಪದವನ್ನು ಪ್ರಯೋಗಿಸಲಾಗಿದೆ. ಆದರಂತೆ, ಯುಕ್ತಿಪಾದದ 'ನ ವಿಲಕ್ಷಣತ್ವಾಧಿಕರಣ'ದಲ್ಲಿ 'ಸುಖದುಃಖಾದಿ' ಎಂಬ ಅನುವ್ಯಾಖ್ಯಾನ ಶ್ಲೋಕವನ್ನು ವ್ಯಾಖ್ಯಾನ ಮಾಡಿರುವ ಸುಧಾದಲ್ಲಿ 'ಆತ್ಮಸ್ವರೂಪಭೂತವಾದ ಜ್ಞಾನೇಂದ್ರಿಯವು ಸಾಕ್ಷಿ ಎಂದು ಕರೆಯಲ್ಪಡುತ್ತದೆ. ಆ ಸಾಕ್ಷೀಂದ್ರಿಯದೀದ ಅಭಿವ್ಯಕ್ತವಾದ ಜ್ಞಾನವೂ ಸಾಕ್ಷಿ, ಎಂದೇ ಕರೆಯಲ್ಪಡುತ್ತದೆ' ಎಂದೂ ಹೇಳಲಾಗಿದೆ. ಹೀಗೆ ಸಾಕ್ಷಿ ಎಂಬ ಹೆಸರು ಸ್ವರೂಪೇಂದ್ರಿಯ ಹಾಗೂ ಆ ಇಂದ್ರಿಯದಿಂದ ಬರುವ ಜ್ಞಾನ ಎರಡಕ್ಕೂ ಇದೆ.

## ಅನುವ್ಯವಸಾಯದ ಪರಿಷ್ಕಾರ

**ನನು ಆತ್ಮಸ್ವರೂಪ–ಜ್ಞಾನತ್ವಾದಿರೂಪ–ಸಾಕ್ಷಿತ್ವಸ್ಯ ಪರಮತೇ ಅಪ್ರಸಿದ್ಧಿಃ ಇತ್ಯತ ಆಹ – ತಾರ್ಕಿಕೇತಿ ।**

**ಸ್ವತಸ್ತ್ವಾನುಮಾನವಾದೇ ವಕ್ಷ್ಯಮಾಣದಿಶಾ ವ್ಯವಸಾಯ–ಪ್ರಕಾರ–ಪ್ರಕಾರಕತಯಾ ವ್ಯವಸಾಯ – ಪ್ರಕಾರವದ್ – ವಿಶೇಷ್ಯಕತಯಾ ಚ ತದ್ವಿಷಯಕ– ಪ್ರತ್ಯಕ್ಷತ್ವಂ ವಾ,**

**ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷತ್ವಂ ವಾ, ಅನುವ್ಯವಸಾಯತ್ವಮ್ । ಸಾಕ್ಷಿತ್ವಮಪಿ ಏವಂರೂಪಮೇವ ಅತ್ರ ಸ್ವತಸ್ತ್ವನಿರುಕ್ತೌ ಪ್ರವಿಷ್ಟಮಿತ್ಯರ್ಥಃ ।**

ಈ ಸ್ವತಸ್ತ್ವ ನಿರುಕ್ತಿಯಲ್ಲಿ ಸಾಕ್ಷಿಯು ಸೇರಿದೆ. ಸಾಕ್ಷಿ ಎಂದರೆ ಆತ್ಮಸ್ವರೂಪಭೂತವಾದ ಇಂದ್ರಿಯ. ಇಂತಹ ಸಾಕ್ಷೀಂದ್ರಿಯವನ್ನು ನೈಯಾಯಿಕರು ಅಂಗೀಕರಿಸಿಲ್ಲವಾದ್ದರಿಂದ ಅವರನ್ನು ಕುರಿತು ಈ ರೀತಿಯ ಸ್ವತಸ್ತ್ವವನ್ನು ಹೇಳುವುದು ಹೇಗೆ? ಎನ್ನುವ ಪ್ರಶ್ನೆಗೆ ಉತ್ತರವನ್ನು ಮೂಲದಲ್ಲಿರುವ 'ತಾರ್ಕಿಕ' ಎಂಬ ವಾಕ್ಯದಲ್ಲಿ ಕೊಡಲಾಗಿದೆ.

ಮುಂದೆ ಸ್ವತಸ್ತ್ವಸಾಧಕ-ಅನುಮಾನಗಳನ್ನು ಹೇಳುವಾಗ ಅನುವ್ಯವಸಾಯ ಸ್ವರೂಪವನ್ನು ಹೇಳಲಾಗಿದೆ. ಅದನ್ನೇ ಪ್ರಕೃತ ಸ್ವತಸ್ತ್ವನಿರುಕ್ತಿಯಲ್ಲಿ ಸಾಕ್ಷಿ ಎಂದು ಪರಿಗಣಿಸಲಾಗಿದೆ. ಅದು ಹೀಗಿದೆ— ವ್ಯವಸಾಯದಲ್ಲಿ ಪ್ರಕಾರವಾಗಿ ತೋರುವ ಧರ್ಮ ಪ್ರಕಾರಕತ್ವೇನ, ಅಂತಹ ಧರ್ಮವುಳ್ಳ ಧರ್ಮಿ-ವಿಶೇಷ್ಯಕತ್ವೇನ ಜ್ಞಾನವನ್ನು ವಿಷಯೀಕರಿಸುವ ಪ್ರತ್ಯಕ್ಷವೇ ಅನುವ್ಯವಸಾಯ. ಉದಾಹರಣೆಗೆ— 'ಅಯಂ ಘಟಃ' ಇದು ವ್ಯವಸಾಯ. ಇದರಲ್ಲಿ ಘಟತ್ವವು ಪ್ರಕಾರ. ಘಟತ್ವವದ್-ಘಟವು ವಿಶೇಷ್ಯ. ಈ ವ್ಯವಸಾಯದಲ್ಲಿ ಘಟತ್ವ ಪ್ರಕಾರಕತ್ವ ಮತ್ತು ಘಟತ್ವವದ್-ಘಟವಿಶೇಷ್ಯಕತ್ವ ಎಂಬ ಎರಡು ಧರ್ಮಗಳಿವೆ. ಅಂತಹ ಧರ್ಮಗಳೊಂದಿಗೆ ಆ ಜ್ಞಾನದ ಮಾನಸಪ್ರತ್ಯಕ್ಷ-'ಘಟತ್ವ-ಪ್ರಕಾರಕ ಘಟತ್ವವದ್ ವಿಶೇಷ್ಯಕ-ಜ್ಞಾನವಾನ್ ಅಹಮ್' ಎಂದು ಬರುತ್ತದೆ. ಈ ಜ್ಞಾನವೇ ಅನುವ್ಯವಸಾಯ. ಇದೇ ಸಾಕ್ಷಿಜ್ಞಾನ.

ಅಥವಾ ಅನುವ್ಯವಸಾಯದಲ್ಲಿ ಜ್ಞಾನ ಮತ್ತು ಆತ್ಮ ಎರಡೂ ವಿಷಯವಾಗಿರುತ್ತದೆ. ಅವುಗಳಲ್ಲಿ ಜ್ಞಾನವು ಕೆಲವೊಮ್ಮೆ ಜ್ಞಾನ-ಲಕ್ಷಣಾ ಎಂಬ ಅಲೌಕಿಕ ಸನ್ನಿಕರ್ಷದಿಂದ ತೋರುತ್ತದೆ, ಕೆಲವೊಮ್ಮೆ ಸಂಯುಕ್ತ ಸಮವಾಯ ಎಂಬ ಲೌಕಿಕ ಸನ್ನಿಕರ್ಷದಿಂದಲೂ ತೋರುತ್ತದೆ. ಪ್ರಕೃತ ಜ್ಞಾನಾಂಶದಲ್ಲಿ ಲೌಕಿಕ ಸನ್ನಿಕರ್ಷಜನ್ಯವಾದ ಪ್ರತ್ಯಕ್ಷವೇ ಅನುವ್ಯವಸಾಯತ್ವೇನ ವಿವಕ್ಷಿತ. ಆದ್ದರಿಂದ ಇಂತಹ ವಿಶಿಷ್ಟ-ಅನುವ್ಯವಸಾಯವನ್ನೇ ಸಾಕ್ಷೀ ಎಂದು ಇಲ್ಲಿ ಪರಿಗಣಿಸಲಾಗಿದೆ. ಅದನ್ನು ತಾರ್ಕಿಕರೂ ಒಪ್ಪಿರುತ್ತಾರೆ.

## ದ್ವಿವಿಧಾನುವ್ಯವಸಾಯಗ್ರಹಣ ಕಲ್ಪಭೇದೇನ

**ಯನ್ಮತೇ ವೈಶಿಷ್ಟ್ಯಂ ಅನುವ್ಯವಸಾಯ-ವಿಷಯೋಽಪಿ, ನ ಸ್ವಾತಂತ್ರ್ಯೇಣ ವಿಷಯಃ ಇತಿ, ತನ್ಮತೇನ ಆದ್ಯಃ ಕಲ್ಪಃ । ತತ್ರ ಚ, ವಿಷಯತ್ವ – ನೈಯತ್ಯಂ, ಸ್ವಾತಂತ್ರ್ಯೇಣ ಇತಿ ಪ್ರವೇಶನೀಯಮ್ ।**

**ಯನ್ಮತೇ ವೈಶಿಷ್ಟ್ಯಮ್ ಅನುವ್ಯವಸಾಯ ವಿಷಯ ಏವ ನೇತಿ ತನ್ಮತೇನ ಅಂತ್ಯಃ । ತತ್ರ ತು ನ ಸ್ವಾತಂತ್ರ್ಯೇಣ ಇತಿ ವಿವಕ್ಷಣೀಯಮ್ ।**

ಒಂದೆ ಅನುವ್ಯವಸಾಯವನ್ನು ಎರಡು ಪಿಧವಾಗಿ ನಿರೂಪಿಸಲಾಗಿದೆ. ಅವುಗಳಲ್ಲಿ ಮೊದಲನೆಯ ಪಕ್ಷ ಯಜ್ಞಪತಿ ಉಪಾಧ್ಯಾಯರದು. ಅವರು-ಅನುವ್ಯವಸಾಯದಲ್ಲಿ ವ್ಯವಸಾಯ

ಗತವಾದ ತದ್ವದ್-ವಿಶೇಷ್ಯಕತ್ವಾಂಶವೂ ತೋರುತ್ತದೆ ಎಂದಿರುತ್ತಾರೆ. ಆದರೆ ಅವರು, ತದ್ವತ್ತಾಂಶವು (ವಿಶೇಷ್ಯದಲ್ಲಿ ಪ್ರಕಾರದ ಸಂಬಂಧವು) ಸಾಕ್ಷಾತ್ತಾಗಿ ಅನುವ್ಯವಸಾಯದಲ್ಲಿ ವಿಷಯವಲ್ಲ, 'ವ್ಯವಸಾಯವು ತದ್ವಿಷಯಕವಾಗಿವೆ' ಎಂದು ಅನುವ್ಯವಸಾಯವು ವ್ಯವಸಾಯ ವಿಷಯತ್ವೇನ ಆ ಅಂಶವನ್ನು ಗ್ರಹಿಸುತ್ತದೆ, ಎನ್ನುತ್ತಾರೆ. ಈ ಮತಾನುಸಾರೇಣ ಪ್ರಾಮಾಣ್ಯವೂ (ವೈಶಿಷ್ಟ್ಯವು) ಅನುವ್ಯವಸಾಯ ಗಮ್ಯ ಎಂದು ಸಿದ್ಧವಾದುದರಿಂದ ಸಿದ್ಧಸಾಧನತಾದೋಷ ಬರುತ್ತದೆ. ಆದರ ಪರಿಹಾರಕ್ಕಾಗಿ 'ಸ್ವಾತಂತ್ರ್ಯೇಣ ಸಾಕ್ಷಿವಿಷಯತ್ವ ನೈಯತ್ಯಂ' ಎಂದೇ ಸ್ವತಸ್ತ್ವವನ್ನು ಪರಿಷ್ಕರಿಸಬೇಕು.

ಅನುವ್ಯವಸಾಯವು ವ್ಯವಸಾಯವನ್ನು ಕಿಂಚಿತ್-ಪ್ರಕಾರಕತ್ವೇನ ವಿಷಯೀಕರಿಸುತ್ತದೆ. ತದ್ವತ್ತಾಂಶವು ಅನುವ್ಯವಸಾಯದಲ್ಲಿ ವಿಷಯವೇ ಅಲ್ಲ, ಎನ್ನುವ ಇತರ ತಾರ್ಕಿಕ ಮತದಲ್ಲಿ 'ಜ್ಞಾನಾಂಶೇ ಲೌಕಿಕಪ್ರತ್ಯಕ್ಷತ್ವಮ್' ಎಂಬ ಎರಡನೆಯ ಕಲ್ಪ. ಈ ಕಲ್ಪದಲ್ಲಿ ಮೊದಲಿನಂತೆ 'ಸಾಕ್ಷಾತ್' ಎಂಬ ಪದದ ಆಗತ್ಯವಿಲ್ಲ. ಅವರು ಅಂಗೀಕರಿಸದಿರುವ ವೈಶಿಷ್ಟ್ಯವಿಷಯಕತ್ವವನ್ನಷ್ಟೇ ಸಾಧನೆ ಮಾಡಿದರೂ ನಮ್ಮ ಉದ್ದೇಶ ಸಿದ್ಧವಾಗುತ್ತದೆ, ಸಿದ್ಧಸಾಧನತಾ ದೋಷಕ್ಕೂ ಅವಕಾಶವಿಲ್ಲ.

## ಜ್ಞಾನಾಂಶೇ ಪದದ ಕೃತ್ಯ

**ಲೌಕಿಕತ್ವಂ ಚ ಪರಾಭಿಮತ-ಸಾಮಾನ್ಯಾದಿ-ಪ್ರತ್ಯಾಸತ್ತಿ-ತ್ರಯಾಜನ್ಯತ್ವಮ್ । ಜ್ಞಾನಾಂಶೇ ಇತಿ ವಿಶೇಷಣಾತ್ ಸ್ಮೃತ್ಯುಪನೀತೇ ಅತೀತೇ ಘಟಜ್ಞಾನೇ ತದ್ವಿಷಯಕಮ್ 'ಅಹಂ ಘಟಜ್ಞಾನವಾನ್' ಇತಿ ಯತ್-ಜ್ಞಾನಮ್ ಆತ್ಮಾಂಶೇ ಲೌಕಿಕಪ್ರತ್ಯಕ್ಷಂ ತೇನ ಪ್ರಾಮಾಣ್ಯಾಗ್ರಹಣಾತ್ ಬಾಧವಾರಣಮ್ ಇತಿ ಧ್ಯೇಯಮ್ ।**

**ವಸ್ತುತಸ್ತು ಅಂತ್ಯಪಕ್ಷ-ಪ್ರವೇಶ ಏವ ಸಾಧುಃ । ತಥಾಚ 'ಪ್ರಾಮಾಣ್ಯ ವಿರೋಧಿ' ಇತ್ಯಾದಿ ವಿಶೇಷಣ ವೈಯರ್ಥ್ಯ-ಶಂಕಾವಕಾಶ-ಲೇಶೋಽಪಿ ನೇತಿ ಜ್ಞೇಯಮ್ ।**

ದ್ವಿತೀಯ ಪಕ್ಷದಲ್ಲಿ 'ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷತ್ವಮ್' ಎಂದಿದೆ. ಇಲ್ಲಿ ಲೌಕಿಕ ಎಂದರೆ ಆ ಪ್ರತ್ಯಕ್ಷವು ಸಾಮಾನ್ಯಲಕ್ಷಣಾ-ಜ್ಞಾನಲಕ್ಷಣಾ-ಯೋಗಜಧರ್ಮ ಎಂಬ ಈ ಮೂರು ವಿಧದ ಅಲೌಕಿಕ ಸನ್ನಿಕರ್ಷದಿಂದ ಹುಟ್ಟಿರಬಾರದು, ಎಂದರ್ಥ.

ಅದರಲ್ಲೂ 'ಜ್ಞಾನಾಂಶೇ' ಎಂಬ ವಿಶೇಷಣದಿಂದ ಸಿಗುವ ಪ್ರಯೋಜನ-ಮೊದಲೊಮ್ಮೆ ಘಟಜ್ಞಾನ ಬಂದು ಆದರ ಪ್ರತ್ಯಕ್ಷ ಮನಸ್ಸಿನಿಂದ ಬಂದಿತ್ತು. ಮರುದಿನ ಸ್ಮೃತಿ-ರೂಪವಾದ ಜ್ಞಾನ-ಲಕ್ಷಣಾ ಸನ್ನಿಕರ್ಷದಿಂದಾಗಿ 'ಘಟಜ್ಞಾನವಾನ್ ಅಹಮ್' ಎಂಬ ಅನುವ್ಯವಸಾಯ ಬರುತ್ತದೆ. ಈ ಅನುವ್ಯವಸಾಯ ಜ್ಞಾನಾಂಶದಲ್ಲಿ ಅಲೌಕಿಕ, ಆತ್ಮಾಂಶದಲ್ಲಿ ಲೌಕಿಕಪ್ರತ್ಯಕ್ಷ. ಇಲ್ಲಿ ಪ್ರಾಮಾಣ್ಯವು

ವಿಷಯವಾಗಿಲ್ಲ. ಆದರಿಂದ ಬಾಧದೋಷ. 'ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷ' ಎಂದು ವಿವಕ್ಷೆ ಮಾಡಿದಾಗ ಈ ದೋಷಕ್ಕೆ ಅವಕಾಶವಿಲ್ಲ.

ಅನುವ್ಯವಸಾಯದ ಈ ಎರಡು ವಿಧದ ನಿರೂಪಣೆಗಳಲ್ಲಿ ಎರಡನೆಯ ರೀತಿಯೇ ಯುಕ್ತವಾದುದು. ಏಕೆಂದರೆ, ಮೊದಲನೆಯ ಪಕ್ಷದಲ್ಲಿ 'ತದ್ವದ್ವಿಶೇಷ್ಯಕತ್ವೇನ' ಜ್ಞಾನವನ್ನು ಅನುವ್ಯವಸಾಯವು ವಿಷಯೀಕರಿಸಬೇಕಾದರೆ ಪ್ರಾಮಾಣ್ಯ-ವಿರೋಧ್ಯುಪಸ್ಥಾಪಕ ಸಾಮಗ್ರಿಗಳು ಇರಬಾರದು. ಅಂದಮೇಲೆ ಸ್ವತಸ್ತ್ವಲಕ್ಷಣದಲ್ಲಿ 'ಪ್ರಾಮಾಣ್ಯವಿರೋಧಿ ಉಪಸ್ಥಾಪಕ ಸಾಮಗ್ರೀ ಅಸಮವಹಿತ' ಎಂಬ ವಿಶೇಷಣ ವ್ಯರ್ಥ, ಎಂಬ ಶಂಕೆಗೆ ಆಸ್ಪದ ಇದೆ. ಎರಡನೆಯ ಪಕ್ಷದಲ್ಲಿ ಆ ಶಂಕೆಗೆ ಆಸ್ಪದವೇ ಇಲ್ಲ. ಆದ್ದರಿಂದ ಎರಡನೆಯ ಪಕ್ಷವೇ ಯುಕ್ತವಾದುದು.

## ವಿಶೇಷಣಗಳ ಕೃತ್ಯವಿಚಾರ

**अत्र च नियमोक्त्या न्यायमतेऽपि १. क्वचिदनुव्यवसायेन प्रामाण्यग्रहस्य वक्ष्यमाणत्वात् सिद्धसाधनमिति शङ्का ।**

**२. साक्षीत्युक्त्या 'घटज्ञानमस्ति' इत्यादिशब्दजन्यम् अप्रतिबद्धं घटज्ञानविषयकं ज्ञानं प्रति घटज्ञानप्रामाण्यस्य अविषयत्वाद्बाध इति शङ्का ।**

**३. ग्राह्य-प्रामाण्याश्रयतत्तज्ज्ञानविषयेकत्युक्त्या घटज्ञानं गृह्णता साक्षिणा पटज्ञानप्रामाण्यस्य अग्रहणाद्बाध इति शङ्का ।**

**४. अवशिष्टेन, मन्मतेऽपि दोषशङ्कादिरूपे ग्राह्यप्रामाण्यविरोधिग्राहकसामग्रीसमवधानात्मके प्रतिबन्धे सति साक्षिणा प्रामाण्यस्य अग्रहणाद्बाध इति शङ्का च निरस्ता ।**

೧. ಲಕ್ಷಣದಲ್ಲಿರುವ ನಿಯಮಪದಕ್ಕೆ ಕೃತ್ಯ–

ಸ್ವತಸ್ತ್ವಲಕ್ಷಣದಲ್ಲಿ ''ಸಾಕ್ಷಿಜ್ಞಾನ ವಿಷಯತ್ವನ್ಯೆಯತ್ಯಂ'' ಎಂದಿದೆ. ''ಜ್ಞಾನವಿಷಯಕ ಜ್ಞಾನತ್ವಂ ಯತ್ರ, ತತ್ರ, ಪ್ರಾಮಾಣ್ಯವಿಷಯಕತ್ವಮ್'' ಎಂಬ ವ್ಯಾಪ್ತಿಯು ಇಲ್ಲಿ ವಿವಕ್ಷಿತ. ಇದರ ಅರ್ಥ–'ವ್ಯವಸಾಯ ವಿಷಯಕ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ಆಗಿಯೇ ಇರುತ್ತದೆ' ಎಂದು. ಇಂತಹ ನಿಯಮವನ್ನು ಹೇಳದೇ ಇದ್ದರೆ, ಜ್ಞಾನವಿಷಯಕ ಜ್ಞಾನದಲ್ಲಿ

ಪ್ರಾಮಾಣ್ಯವು ವಿಷಯವಾಗುತ್ತದೆ, ಎನ್ನುವುದಷ್ಟೇ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾದೀತು. ಇದು ಸ್ವತಸ್ತ್ವವನ್ನು ಅಂಗೀಕರಿಸದ ನೈಯಾಯಿಕರಿಗೂ ಸಮ್ಮತವಾಗಿದೆ. ಏಕೆಂದರೆ, ನ್ಯಾಯಮತದಲ್ಲೂ ಕೆಲವೆಡೆ ಪಂಚಮಾನುವ್ಯವಸಾಯಕ್ಕೆ ಪ್ರಾಮಾಣ್ಯವು ವಿಷಯವಾಗುತ್ತದೆ, ಎಂದು ''ಸ್ವತಸ್ತ್ವಾನು-ಮಾನೇಷು ಬಾಧೋದ್ಧಾರಃ'' (ಪ್ರಕರಣ-4) ಎಂಬ ಪ್ರಕರಣದಲ್ಲಿ ಹೇಳಲಾಗುತ್ತದೆ. ಆದ್ದರಿಂದ ಸಿದ್ಧಸಾಧನತಾದೋಷ. ಅದರ ಪರಿಹಾರಕ್ಕಾಗಿ 'ನೈಯತ್ಯಂ' ಎಂಬ ಪದವನ್ನು ಸೇರಿಸಲಾಗಿದೆ.

**ವಿವರಣೆ :** 'ಸಾಕ್ಷಿಜ್ಞಾನ ವಿಷಯತ್ವಂ ನೈಯತ್ಯಂ' ಎಂದರೆ, ಅಪ್ರತಿಬದ್ಧವಾದ ಎಲ್ಲಾ ಅನುವ್ಯವಸಾಯಗಳಲ್ಲೂ ಪ್ರಾಮಾಣ್ಯವು ವಿಷಯವಾಗಿದೆ, ಎಂದು ಅರ್ಥ. ಇಲ್ಲಿ ನಿಯಾಮಾಂಶವನ್ನು ಬಿಟ್ಟರೆ 'ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ' ಎಂದಿಷ್ಟೇ ಅರ್ಥವಾಗುತ್ತದೆ. ಅದನ್ನು ತಾರ್ಕಿಕರೂ ಒಪ್ಪಿದ್ದಾರೆ. ಕೆಲವೊಮ್ಮೆ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವೂ ವಿಷಯವಾಗುತ್ತದೆ ಎಂದು ಅವರು ಹೇಳುತ್ತಾರೆ. ಉದಾಹರಣೆಗೆ–

1. ಮೊದಲು ''ಇದಂ ಜಲಂ' ಎಂದು ವ್ಯವಸಾಯ.

2. ಆಮೇಲೆ ''ಇದಂ ಜಲಂ ಇತಿ ಜ್ಞಾನವಾನಹಮ್'' ಎಂಬ ಅನುವ್ಯವಸಾಯ.

3. ಅನುವ್ಯವಸಾಯ ಜನ್ಯಸಂಸ್ಕಾರದಿಂದ ಜಲಜ್ಞಾನದ ಸ್ಮೃತಿ.

4. ವ್ಯವಸಾಯ ಜನ್ಯಸಂಸ್ಕಾರದಿಂದ ಜಲ–ಜಲತ್ವ–ವೈಶಿಷ್ಟ್ಯ ರೂಪವಾದ ಪ್ರಾಮಾಣ್ಯ-ಸ್ಮರಣೆ.

5. ಈ ಎರಡು ಸ್ಮರಣೆಗಳೆಂಬ ಜ್ಞಾನಲಕ್ಷಣಾ ಸನ್ನಿಕರ್ಷಗಳ ಸಹಕಾರದಿಂದ 'ಇದಂ ಜಲಂ ಇತಿ ಜ್ಞಾನಂ ಪ್ರಮಾಣಂ' ಎಂಬ ಪಂಚಮಾನುವ್ಯವಸಾಯ.

ಈ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಆದ್ದರಿಂದ ಸಿದ್ಧಸಾಧನತಾ.

ನಿಯಮ ಪದವಿದ್ದಾಗ ಈ ದೋಷವಿಲ್ಲ. ಏಕೆಂದರೆ, ಆಗ ಜ್ಞಾನವಿಷಯಕವಾದ ಎಲ್ಲಾ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯ ಎಂಬ ಅರ್ಥ ಸಿಗುತ್ತದೆ. ಅಂತಹ ಜ್ಞಾನ ಮೊದಲನೆಯ ಅನುವ್ಯವಸಾಯ. (ಅಂದರೆ, ಮೇಲೆ ತೋರಿಸಿರುವ ಎರಡನೆಯ ಹಂತದ ಜ್ಞಾನ) ಅಲ್ಲಿ ಪ್ರಾಮಾಣ್ಯವು ವಿಷಯವೆಂದು ತಾರ್ಕಿಕರು ಒಪ್ಪಿಲ್ಲ. ಹೀಗಾಗಿ ಸಿದ್ಧಸಾಧನತಾ ಇಲ್ಲ.

**ಬಾಧೋದ್ಧಾರಗ್ರಂಥ – ''ನಚೈವಂ ಸ್ಮೃತ್ಯುಪನೀತೇ ವ್ಯವಸಾಯೇ ಸ್ಮೃತ್ಯುಪನೀತಂ ಯದ್ರಜತತ್ವಂ ತದ್ವದ್ವಿಶೇಷ್ಯಕತ್ವಮಪಿ ಮನಸಾ ಪರಿಚ್ಛಿದ್ಯತಾಂ, ತಥಾ ಚ ಪ್ರಾಮಾಣ್ಯಸ್ಯ ಸ್ವತಸ್ತ್ವಂ ಸ್ಯಾದಿತಿ ವಾಚ್ಯಮ್, ಮನಸೈವಂ ಪ್ರಾಮಾಣ್ಯಗ್ರಹೇಽಪಿ ಪ್ರಥಮಾನುವ್ಯವಸಾಯೇನ ಅಗೃಹೀತತಯಾ...ಪರತಸ್ತ್ವ–ಅಹಾನೇಃ ॥ (ತರ್ಕತಾಂಡವ)**

ವಿಷಯವಾಗಿಲ್ಲ. ಆದರಿಂದ ಬಾಧದೋಷ. 'ಜ್ಞಾನಾಂಶೇ ಲೌಕಿಕ ಪತ್ಯಕ್ಷ' ಎಂದು ವಿವಕ್ಷೆ ಮಾಡಿದಾಗ ಈ ದೋಷಕ್ಕೆ ಅವಕಾಶವಿಲ್ಲ.

ಅನುವ್ಯವಸಾಯದ ಈ ಎರಡು ವಿಧದ ನಿರೂಪಣೆಗಳಲ್ಲಿ ಎರಡನೆಯ ರೀತಿಯೇ ಯುಕ್ತವಾದುದು. ಏಕೆಂದರೆ, ಮೊದಲನೆಯ ಪಕ್ಷದಲ್ಲಿ 'ತದ್ವದ್ವಿಶೇಷ್ಯಕತ್ವೇನ' ಜ್ಞಾನವನ್ನು ಅನುವ್ಯವಸಾಯವು ವಿಷಯೀಕರಿಸಬೇಕಾದರೆ ಪ್ರಾಮಾಣ್ಯ-ವಿರೋಧ್ಯುಪಸ್ಥಾಪಕ ಸಾಮಗ್ರಿಗಳು ಇರಬಾರದು. ಅಂದಮೇಲೆ ಸ್ವತಸ್ತ್ವಲಕ್ಷಣದಲ್ಲಿ 'ಪ್ರಾಮಾಣ್ಯವಿರೋಧಿ ಉಪಸ್ಥಾಪಕ ಸಾಮಗ್ರೀ ಅಸಮವಹಿತ' ಎಂಬ ವಿಶೇಷಣ ವ್ಯರ್ಥ, ಎಂಬ ಶಂಕೆಗೆ ಆಸ್ಪದ ಇದೆ. ಎರಡನೆಯ ಪಕ್ಷದಲ್ಲಿ ಆ ಶಂಕೆಗೆ ಆಸ್ಪದವೇ ಇಲ್ಲ. ಆದ್ದರಿಂದ ಎರಡನೆಯ ಪಕ್ಷವೇ ಯುಕ್ತವಾದುದು.

## ವಿಶೇಷಣಗಳ ಕೃತ್ಯವಿಚಾರ

**अत्र च नियमोक्त्या न्यायमतेऽपि १. क्वचिदनुव्यवसायेन प्रामाण्यग्रहस्य वक्ष्यमाणत्वात् सिद्धसाधनमिति शङ्का ।**

**२. साक्षीत्युक्त्या 'घटज्ञानमस्ति' इत्यादिशब्दजन्यम् अप्रतिबद्धं घटज्ञानविषयकं ज्ञानं प्रति घटज्ञानप्रामाण्यस्य अविषयत्वाद्बाध इति शङ्का ।**

**३. ग्राह्य-प्रामाण्याश्रयतत्तज्ज्ञानविषयेकत्युक्त्या घटज्ञानं गृह्णता साक्षिणा पटज्ञानप्रामाण्यस्य अग्रहणाद्बाध इति शङ्का ।**

**४. अवशिष्टेन, मन्मतेऽपि दोषशङ्कादिरूपे ग्राह्यप्रामाण्यविरोधिग्राहकसामग्रीसमवधानात्मके प्रतिबन्धे सति साक्षिणा प्रामाण्यस्य अग्रहणाद्बाध इति शङ्का च निरस्ता ।**

೧. ಲಕ್ಷಣದಲ್ಲಿರುವ ನಿಯಮಪದಕ್ಕೆ ಕೃತ್ಯ–

ಸ್ವತಸ್ತ್ವಲಕ್ಷಣದಲ್ಲಿ ''ಸಾಕ್ಷಿಜ್ಞಾನ ವಿಷಯತ್ವನ್ನೈಯತ್ಯಂ'' ಎಂದಿದೆ. ''ಜ್ಞಾನವಿಷಯಕ ಜ್ಞಾನತ್ವಂ ಯತ್ರ ತತ್ರ ಪ್ರಾಮಾಣ್ಯವಿಷಯಕತ್ವಮ್'' ಎಂಬ ವ್ಯಾಪ್ತಿಯು ಇಲ್ಲಿ ವಿವಕ್ಷಿತ. ಇದರ ಅರ್ಥ–'ವ್ಯವಸಾಯ ವಿಷಯಕ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ಆಗಿಯೇ ಇರುತ್ತದೆ' ಎಂದು. ಇಂತಹ ನಿಯಮವನ್ನು ಹೇಳದೇ ಇದ್ದರೆ, ಜ್ಞಾನವಿಷಯಕ ಜ್ಞಾನದಲ್ಲಿ

ಪ್ರಾಮಾಣ್ಯವು ವಿಷಯವಾಗುತ್ತದೆ, ಎನ್ನುವುದಷ್ಟೇ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾದೀತು. ಇದು ಸ್ವತಸ್ತ್ವವನ್ನು ಅಂಗೀಕರಿಸದ ನೈಯಾಯಿಕರಿಗೂ ಸಮ್ಮತವಾಗಿದೆ. ಏಕೆಂದರೆ, ನ್ಯಾಯಮತದಲ್ಲೂ ಕೆಲವೆಡೆ ಪಂಚಮಾನುವ್ಯವಸಾಯಕ್ಕೆ ಪ್ರಾಮಾಣ್ಯವು ವಿಷಯವಾಗುತ್ತದೆ, ಎಂದು ''ಸ್ವತಸ್ತ್ವಾನುಮಾನೇಷು ಬಾಧೋದ್ಧಾರಃ'' (ಪ್ರಕರಣ-4) ಎಂಬ ಪ್ರಕರಣದಲ್ಲಿ ಹೇಳಲಾಗುತ್ತದೆ. ಆದ್ದರಿಂದ ಸಿದ್ಧಸಾಧನತಾದೋಷ. ಅದರ ಪರಿಹಾರಕ್ಕಾಗಿ 'ನೈಯತ್ಯಂ' ಎಂಬ ಪದವನ್ನು ಸೇರಿಸಲಾಗಿದೆ.

**ವಿವರಣೆ :** 'ಸಾಕ್ಷಿಜ್ಞಾನ ವಿಷಯತ್ವಂ ನೈಯತ್ಯಂ' ಎಂದರೆ, ಅಪ್ರತಿಬದ್ಧವಾದ ಎಲ್ಲಾ ಅನುವ್ಯವಸಾಯಗಳಲ್ಲೂ ಪ್ರಾಮಾಣ್ಯವು ವಿಷಯವಾಗಿದೆ, ಎಂದು ಅರ್ಥ. ಇಲ್ಲಿ ನಿಯಾಮಾಂಶವನ್ನು ಬಿಟ್ಟರೆ 'ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ' ಎಂದಿಷ್ಟೇ ಅರ್ಥವಾಗುತ್ತದೆ. ಅದನ್ನು ತಾರ್ಕಿಕರೂ ಒಪ್ಪಿದ್ದಾರೆ. ಕೆಲವೊಮ್ಮೆ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವೂ ವಿಷಯವಾಗುತ್ತದೆ ಎಂದು ಅವರು ಹೇಳುತ್ತಾರೆ. ಉದಾಹರಣೆಗೆ-

1. ಮೊದಲು ''ಇದಂ ಜಲಂ' ಎಂದು ವ್ಯವಸಾಯ.

2. ಆಮೇಲೆ ''ಇದಂ ಜಲಂ ಇತಿ ಜ್ಞಾನವಾನಹಮ್'' ಎಂಬ ಅನುವ್ಯವಸಾಯ.

3. ಅನುವ್ಯವಸಾಯ ಜನ್ಯಸಂಸ್ಕಾರದಿಂದ ಜಲಜ್ಞಾನದ ಸ್ಮೃತಿ.

4. ವ್ಯವಸಾಯ ಜನ್ಯಸಂಸ್ಕಾರದಿಂದ ಜಲ-ಜಲತ್ವ-ವೈಶಿಷ್ಟ್ಯ ರೂಪವಾದ ಪ್ರಾಮಾಣ್ಯ-ಸ್ಮರಣೆ.

5. ಈ ಎರಡು ಸ್ಮರಣೆಗಳೆಂಬ ಜ್ಞಾನಲಕ್ಷಣಾ ಸನ್ನಿಕರ್ಷಗಳ ಸಹಕಾರದಿಂದ 'ಇದಂ ಜಲಂ ಇತಿ ಜ್ಞಾನಂ ಪ್ರಮಾಣಂ' ಎಂಬ ಪಂಚಮಾನುವ್ಯವಸಾಯ.

ಈ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಆದ್ದರಿಂದ ಸಿದ್ಧಸಾಧನತಾ.

ನಿಯಮ ಪದವಿದ್ದಾಗ ಈ ದೋಷವಿಲ್ಲ. ಏಕೆಂದರೆ, ಆಗ ಜ್ಞಾನವಿಷಯಕವಾದ ಎಲ್ಲಾ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯ ಎಂಬ ಅರ್ಥ ಸಿಗುತ್ತದೆ. ಅಂತಹ ಜ್ಞಾನ ಮೊದಲನೆಯ ಅನುವ್ಯವಸಾಯ. (ಅಂದರೆ, ಮೇಲೆ ತೋರಿಸಿರುವ ಎರಡನೆಯ ಹಂತದ ಜ್ಞಾನ) ಅಲ್ಲಿ ಪ್ರಾಮಾಣ್ಯವು ವಿಷಯವೆಂದು ತಾರ್ಕಿಕರು ಒಪ್ಪಿಲ್ಲ. ಹೀಗಾಗಿ ಸಿದ್ಧಸಾಧನತಾ ಇಲ್ಲ.

ಬಾಧೋದ್ಧಾರಗ್ರಂಥ - ''ನಚೈವಂ ಸ್ಮೃತ್ಯುಪನೀತೇ ವ್ಯವಸಾಯೇ ಸ್ಮೃತ್ಯುಪನೀತಂ ಯದ್ರಜತತ್ವಂ ತದ್ವದ್ವಿಶೇಷ್ಯಕತ್ವಮಪಿ ಮನಸಾ ಪರಿಚ್ಛಿದ್ಯತಾಂ, ತಥಾ ಚ ಪ್ರಾಮಾಣ್ಯಸ್ಯ ಸ್ವತಸ್ತ್ವಂ ಸ್ಯಾದಿತಿ ವಾಚ್ಯಮ್, ಮನಸ್ಯೈವಂ ಪ್ರಾಮಾಣ್ಯಗ್ರಹೇಽಪಿ ಪ್ರಥಮಾನುವ್ಯವಸಾಯೇನ ಅಗೃಹೀತತಯಾ...ಪರತಸ್ತ್ವ-ಅಹಾನೇಃ ॥ (ತರ್ಕತಾಂಡವ)

**೨. ಸಾಕ್ಷಿಪದದ ಕೃತ್ಯ–**

ಸಾಕ್ಷಿಪದವನ್ನು ಬಿಟ್ಟರೆ 'ವ್ಯವಸಾಯ ವಿಷಯಕವಾದ ಎಲ್ಲಾ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯವಾಗಿರುತ್ತದೆ, ಎಂದಂತಾಗುತ್ತದೆ. ಆದರೆ, ''ಮಮ ಘಟಜ್ಞಾನಮ್ ಅಸ್ತಿ'' ಎಂಬ ವಾಕ್ಯಜನ್ಯವಾದ ಶಾಬ್ದಬೋಧದಲ್ಲಿ ಘಟಜ್ಞಾನವು ವಿಷಯವಾಗಿದೆ. ಆದರೆ 'ಘಟತ್ವವತಿ ಘಟತ್ವಪ್ರಕಾರತ್ವಂ' ಎಂಬ ಪ್ರಾಮಾಣ್ಯವು ವಿಷಯವಾಗಿಲ್ಲ. ಆದ್ದರಿಂದ ಬಾಧ. ಏಕೆಂದರೆ, ಶಬ್ದಕ್ಕೆ ಅನುಗುಣವಾಗಿಯೇ ಶಾಬ್ದಬೋಧ ಬರುತ್ತದೆ. ಆ ವಾಕ್ಯದಲ್ಲಿ 'ಘಟತ್ವವತಿ ಘಟತ್ವ ಪ್ರಕಾರಕತ್ವ' ಎಂಬ ಪ್ರಾಮಾಣ್ಯಬೋಧಕವಾದ ಶಬ್ದವಿಲ್ಲ. ಹೀಗಾಗಿ ಅಂತಹ ವಾಕ್ಯಜನ್ಯ ಬೋಧದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

ಸಾಕ್ಷಿಪದ ಕೊಟ್ಟಾಗ ಬಾಧವಿಲ್ಲ. ಏಕೆಂದರೆ ಆ ಜ್ಞಾನವು ಶಾಬ್ದಬೋಧವಾದರೂ ಜ್ಞಾನವಿಷಯಕ ಅನುವ್ಯವಸಾಯವಲ್ಲ. ಅನುವ್ಯವಸಾಯರೂಪವಾದ ಜ್ಞಾನವಿಷಯಕ ಪ್ರತ್ಯಕ್ಷದಲ್ಲಿ ಮಾತ್ರ ಪ್ರಾಮಾಣ್ಯವಿಷಯಕತ್ವವು ನಿಯಮೇನ ಇರುತ್ತದೆ. ಇದೇ ಸ್ವತಸ್ತ್ವ. ಶಾಬ್ದಬೋಧವು ಜ್ಞಾನವಿಷಯಕವಾದರೂ ಅದರಲ್ಲಿ ಪ್ರಾಮಾಣ್ಯವಿಷಯಕತ್ವ ಇರಬೇಕೆಂದೇನೂ ಸ್ವತಸ್ತ್ವಲಕ್ಷಣದಲ್ಲಿ ಹೇಳಲಾಗಿಲ್ಲ. ಆದ್ದರಿಂದ ಬಾಧವಿಲ್ಲ.

**೩. ಗ್ರಾಹ್ಯಪ್ರಾಮಾಣ್ಯಾಶ್ರಯ ತತ್ತತ್ ಜ್ಞಾನವಿಷಯಕ ಸಾಕ್ಷಿ...**

ಎಂದು ಸ್ವತಸ್ತ್ವಲಕ್ಷಣದಲ್ಲಿ ಸಾಕ್ಷಿಗೆ ವಿಶೇಷಣವನ್ನು ಕೊಟ್ಟಿರುವುದರಿಂದ ಘಟಜ್ಞಾನವನ್ನು ಗ್ರಹಿಸುವ ಸಾಕ್ಷಿಪ್ರತ್ಯಕ್ಷದಲ್ಲಿ ಪಟಜ್ಞಾನಗತ ಪ್ರಾಮಾಣ್ಯವು ವಿಷಯವಾಗದಿರುವುದರಿಂದ ಮತ್ತೆ ಬಾಧ, ಎಂಬ ಶಂಕೆಗೆ ಅವಕಾಶವಿಲ್ಲ.

**ವಿವರಣೆ:** ''ತದ್ವತಿ ತತ್ಪ್ರಕಾರಕತ್ವ'' ಇದು ನೈಯಾಯಿಕರಲ್ಲಿ ಪ್ರಾಮಾಣ್ಯ. ನಮ್ಮ ಮತದಲ್ಲಿ 'ಯಥಾವಸ್ಥಿತ–ಜ್ಞೇಯ–ವಿಷಯೀಕಾರಿತ್ವ' ಪ್ರಾಮಾಣ್ಯ. ಇಂತಹ ಪ್ರಾಮಾಣ್ಯವು ಜ್ಞಾನಭೇದೇನ ಭಿನ್ನವಾದುದು. ಹೀಗಾಗಿ 'ಘಟತ್ವವತಿ ಘಟತ್ವಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವು ಘಟಜ್ಞಾನವನ್ನು ಗ್ರಹಿಸುವ ಸಾಕ್ಷಿಜ್ಞಾನದಲ್ಲಿ ನಿಯತವಾಗಿ ತೋರುತ್ತದೆ. 'ಪಟತ್ವವತಿ ಪಟಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವು ಪಟಜ್ಞಾನವಿಷಯಕ ಸಾಕ್ಷಿಯಲ್ಲಿ ನಿಯತವಾಗಿ ತೋರುತ್ತದೆ. ಸ್ವತಸ್ತ್ವಲಕ್ಷಣದಲ್ಲಿ ಗ್ರಾಹ್ಯಪ್ರಾಮಾಣ್ಯಪದದಿಂದ ಇಂತಹ ಒಂದೊಂದೇ ಪ್ರಾಮಾಣ್ಯವನ್ನು ತೆಗೆದುಕೊಂಡು ತಾದೃಶಪ್ರಾಮಾಣ್ಯಾಶ್ರಯ ಜ್ಞಾನವಿಷಯಕ ಸಾಕ್ಷಿವಿಷಯತ್ವ–ನೈಯತ್ಯವನ್ನೇ ಆಯಾಯ ಪ್ರಾಮಾಣ್ಯಕ್ಕೆ ಸ್ವತಸ್ತ್ವವೆಂದು ತಿಳಿಯಬೇಕು.

ಒಂದುವೇಳೆ 'ಪ್ರಾಮಾಣ್ಯಂ ಜ್ಞಾನವಿಷಯಕ ಜ್ಞಾನೇ ನಿಯಮೇನ ಭಾಸತೇ' ಎಂದಿಷ್ಟೇ ಹೇಳಿದರೆ ಪ್ರಾಮಾಣ್ಯಪದದಿಂದ ಘಟಜ್ಞಾನಗತ ಪ್ರಾಮಾಣ್ಯವನ್ನು ಪರಿಗ್ರಹಿಸಿ ಅದು ಪಟಜ್ಞಾನವಿಷಯಕವಾದ ಅನುವ್ಯವಸಾಯದಲ್ಲಿ ವಿಷಯವಾಗಿಲ್ಲ, ಎಂದು ನಿಯತತ್ವಭಂಗವನ್ನು

ತೋರಿಸಿ ಬಾಧವನ್ನು ಹೇಳಬಹುದಿತ್ತು. ಪ್ರಕೃತ ತತ್ತತ್ ಪ್ರಾಮಾಣ್ಯವು ತತ್ತದಾಶ್ರಯ ಜ್ಞಾನ ಯಾವುದಿದೆಯೋ ಅಂತಹ ಜ್ಞಾನವಿಷಯಕವಾದ ಅನುವ್ಯವಸಾಯದಲ್ಲಿ ನಿಯತವಾಗಿ ವಿಷಯ ವಾಗುತ್ತದೆ, ಎಂದೇ ಸ್ವತಸ್ತ್ವದ ಲಕ್ಷಣವಾಗುವುದು. ಘಟಜ್ಞಾನ ಪ್ರಾಮಾಣ್ಯವು ಘಟಜ್ಞಾನ ವಿಷಯಕ ಅನುವ್ಯವಸಾಯದಲ್ಲಷ್ಟೇ ನಿಯಮೇನ ತೋರಿದರೂ ಸ್ವತಸ್ತ್ವ ಸಿದ್ಧವಾಗುತ್ತದೆ. ಅದು ಪಟಜ್ಞಾನ ವಿಷಯಕವಾದ ಅನುವ್ಯವಸಾಯದಲ್ಲಿ ತೋರಬೇಕಾಗಿಲ್ಲ. ಆದ್ದರಿಂದ ಬಾಧವಿಲ್ಲ.

**೪. ಸಾಕ್ಷಿಗೆ ಇನ್ನೊಂದು ವಿಶೇಷಣ – ಗ್ರಾಹ್ಯ – ಪ್ರಾಮಾಣ್ಯ – ವಿರೋಧ್ಯುಪಸ್ಥಾಪಕ – ಸಾಮಗ್ರೀ– ಅಸಮವಹಿತತ್ವ.**

ಅಂದರೆ ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯದ ಗ್ರಾಹಕ ಸಾಮಗ್ರಿಯಿಂದ ಸಹಿತವಾಗಿರಬಾರದು. ಅಂತಹ ಸಾಮಗ್ರೀ ದೋಷಸಂಶಯ. ಅಂದರೆ ಈ ಜ್ಞಾನವು ಇಂದ್ರಿಯ ದೋಷಗಳಿಂದ ಅಥವಾ ಅರ್ಥದೋಷದಿಂದ ಹುಟ್ಟಿರಬಹುದು ಎಂಬ ಸಂದೇಹ ಅಥವಾ ನಿಶ್ಚಯ. ಇಂತಹ ಸಂದರ್ಭದಲ್ಲಿ ಸ್ವತಸ್ತ್ವಮತದಲ್ಲೂ ಸಾಕ್ಷಿಯು ಜ್ಞಾನವನ್ನಷ್ಟೇ ಗ್ರಹಿಸಿ ಅದರಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಹೀಗಾಗಿ ಸಾಕ್ಷಿಯಲ್ಲಿ ಜ್ಞಾನವಿಷಯಕತ್ವ ಇದ್ದರೂ ಪ್ರಾಮಾಣ್ಯವಿಷಯಕತ್ವ ಇಲ್ಲ. ನೈಯತ್ಯ ಬರಲಿಲ್ಲ, ಬಾಧದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಅಸಮವಹಿತತ್ವವಿಶೇಷಣವನ್ನು ಸಾಕ್ಷಿಗೆ ಕೊಡಲಾಗಿದೆ. ಮೇಲಿನ ಸಂದರ್ಭದಲ್ಲಿ ಸಾಕ್ಷಿಯು ಅಂತಹ ಸಾಮಗ್ರೀ ಸಮವಹಿತವಾಗಿದೆ. ಅಂತಹ ಸಾಕ್ಷಿಗ್ರಾಹ್ಯತ್ವ ನಿಯಮವನ್ನು ಲಕ್ಷಣವು ಹೇಳುತ್ತಿಲ್ಲ. ಆದ್ದರಿಂದ ಬಾಧವಿಲ್ಲ.

## ನ್ಯಾಯದೀಪ

**ವಿಶೇಷಣಕೃತ್ಯಾನಿ ಸ್ವಯಮೇವ ವ್ಯನಕ್ತಿ – ಅತ್ರೇತಿ ॥ ನಿರುಕ್ತಿವಾಕ್ಯೇ ಇತ್ಯರ್ಥಃ ।**

**ನಿಯಮೋಕ್ತ್ಯಾ='ಗೃಹ್ಯತೇ ಏವ' ಇತಿ ನೈಯ್ಯತ್ಯೋಕ್ತ್ಯಾ ಇತ್ಯರ್ಥಃ ।**

**ವಕ್ಷ್ಯಮಾಣತ್ವಾತ್ ಇತಿ ॥ ಬಾಧೋದ್ಧಾರ-ಗ್ರಂಥಾದೌ ಘಟಾದಿಜ್ಞಾನಾನು-ವ್ಯಸಾಯಜನ್ಯ–ಸಂಸ್ಕಾರೋತ್ಪನ್ನ–ಸ್ಮೃತ್ಯುಪನೀತೇ ಘಟಾದಿಜ್ಞಾನೇ ಘಟಾದಿ –ಜ್ಞಾನಜನ್ಯ–ಸಂಸ್ಕಾರೋತ್ಪನ್ನ–ಸ್ಮೃತ್ಯುಪನೀತಂ ಘಟ–ಘಟತ್ವ–ತದ್ವೈಶಿಷ್ಟ್ಯ ರೂಪ–ಪ್ರಾಮಾಣ್ಯಂ ಪಂಚಮಾನುವ್ಯವಸಾಯೇನ ಗೃಹ್ಯತೇ ಇತಿ ವಕ್ಷ್ಯಮಾಣತ್ವಾತ್ ಇತ್ಯರ್ಥಃ । ಶಂಕಾ ನಿರಸ್ತೇತ್ಯನ್ವಯಃ ।**

(ಈ ಅಂಶವು ಮೂಲದ ಅನುವಾದದಲ್ಲಿ ಬಂದಿದೆ. ಆದ್ದರಿಂದ ಇಲ್ಲಿ ಅನುವಾದ ಮಾಡಲಾಗಿಲ್ಲ.)

**ಏತಚ್ಚ 'ತತ್–ಪ್ರಕಾರ–ಪ್ರಕಾರಕತಯಾ' ಇತ್ಯುಕ್ತಾನುವ್ಯವಸಾಯತ್ವರೂಪ ಸಾಕ್ಷಿತ್ವವಿವಕ್ಷಯಾ ಬೋಧ್ಯಮ್ ।**

**ಅಂತ್ಯಕಲ್ಪೇ ತು ಗೃಹೀತಪ್ರಾಮಾಣ್ಯಕ–ಜ್ಞಾನಸಜಾತೀಯ–ಜ್ಞಾನಾಂತ–ರಾನುವ್ಯವಸಾಯಮ್ ಈಶ್ವರ–ಜ್ಞಾನಮ್ ವಾ ಆದಾಯ ಸಿದ್ಧಸಾಧನತಾ ಧ್ಯೇಯಾ ।**

ಮೇಲೆ ಹೇಳಿದ ಪಂಚಮಾನುವ್ಯವಸಾಯದಲ್ಲಿ ಸ್ಮೃತಿಯಿಂದ ಉಪನೀತವಾದ ಪ್ರಾಮಾಣ್ಯವು ತೋರಬೇಕಾದರೆ ಅನುವ್ಯವಸಾಯವು ತದ್ವದ್ ವಿಶೇಷ್ಯಕತ್ವೇನ ವ್ಯವಸಾಯವನ್ನು ಗ್ರಹಿಸುತ್ತದೆ, ಎಂಬ ಅನುವ್ಯವಸಾಯ ಸ್ವರೂಪನಿರೂಪಣೆಯ ಮೊದಲನೆಯ ಪಕ್ಷವನ್ನು ಪರಿಗ್ರಹಿಸಬೇಕು. ಆಗ ಸಿದ್ಧಸಾಧನತಾ ಬರುತ್ತದೆ.

ಎರಡನೆಯ ಪಕ್ಷದಲ್ಲಿ ಹೀಗೆ ಸಿದ್ಧಸಾಧನತಾವನ್ನು ಹೇಳಲಾಗದು. ಆ ಪಕ್ಷದಲ್ಲಿ ಪ್ರಾಮಾಣ್ಯವು ಅನುಮಾನೈಕಗಮ್ಯ. ಆ ಪಕ್ಷದಲ್ಲಿ ಸಿದ್ಧಸಾಧನತಾವನ್ನು ಹೀಗೆ ಹೇಳಬೇಕು– ಜಲಜ್ಞಾನ ಬಂದು ಅದರಲ್ಲಿ ಅನುಮಿತಿಯಿಂದ ಪ್ರಾಮಾಣ್ಯವು ಗೃಹೀತವಾಯಿತು. ಆಮೇಲೆ ಅದೇ ಜಲಜ್ಞಾನ ಮತ್ತೊಮ್ಮೆ ಬಂದಾಗ ಆ ಜಲಜ್ಞಾನ ಗ್ರಾಹಕವಾದ ಅನುವ್ಯವಸಾಯವು ಸ್ಮೃತ್ಯುಪನೀತವಾಗಿ ಜಲಜ್ಞಾನಗತ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ. ಇದರಿಂದಾಗಿ ಸಿದ್ಧಸಾಧನತಾ. ಅಥವಾ ಈಶ್ವರಜ್ಞಾನವು ಏಕವಾದುದರಿಂದ ಜಲಜ್ಞಾನ ಪ್ರಾಮಾಣ್ಯವಿಷಯಕವೂ ಆಗಿದೆ, ಎಂದು ಸಿದ್ಧಸಾಧನತಾ. ಆದರ ಪರಿಹಾರಕ್ಕಾಗಿ 'ನಿಯತ' ಪದದ ಅಗತ್ಯವಿದೆ.

## ಸಾಕ್ಷಿಪದದಿಂದ ಬಾಧ ನಿರಾಸ ಹೇಗೆ?

**ಶಬ್ದಜನ್ಯಮಿತಿ ಉಪಲಕ್ಷಣಮ್, ಸಾಮಾನ್ಯಪ್ರತ್ಯಾಸತ್ತಿಜನ್ಯಂ ಜ್ಞಾನಾಂಶೇ ಅಲೌಕಿಕಂ 'ಜ್ಞಾನವಾನಹಮ್' ಇತಿ ಜ್ಞಾನಂ ಚ, ಇತ್ಯಪಿ ಧ್ಯೇಯಮ್ । ಸಾಕ್ಷಿತ್ವಸ್ಯ ದ್ವಿರೂಪಸ್ಯ ಅಭಿಮತತ್ವಾತ್ ತತ್‌ಪ್ರಕಾರಕೇತ್ಯಾದಿರೂಪೇಣ ಶಬ್ದಜನ್ಯಜ್ಞಾನಸ್ಯ, 'ಜ್ಞಾನಾಂಶೇ ಲೌಕಿಕ' ಇತಿ ಅಂತ್ಯಪಕ್ಷರೂಪೇಣ ಚ ಸಾಮಾನ್ಯಪ್ರತ್ಯಾಸತ್ತಿ–ಜನ್ಯಸ್ಯ ನಿರಾಸಾತ್ ।**

ಮೂಲದಲ್ಲಿ ಸಾಕ್ಷಿಪದಕ್ಕೆ ಕೃತ್ಯವನ್ನು ಹೇಳುತ್ತಾ ಶಬ್ದಜನ್ಯಜ್ಞಾನದಲ್ಲಿ ಬಾಧವನ್ನು ಹೇಳಲಾಗಿದೆ. ಅದು ಉಪಲಕ್ಷಣ. ಅನುವ್ಯವಸಾಯ ವಿಶೇಷದಲ್ಲೂ ಬಾಧವನ್ನು ಹೇಳಬಹುದು. ಜ್ಞಾನತ್ವರೂಪ ಸಾಮಾನ್ಯ ಪ್ರತ್ಯಾಸತ್ತಿಯಿಂದ 'ಜ್ಞಾನವಾನಹಮ್' ಎಂಬ ಜ್ಞಾನ ಬಂತು. ಆ

ಜ್ಞಾನದಲ್ಲಿ ಜ್ಞಾನವಿಷಯಕತ್ವ ಇದೆ, ಪ್ರಾಮಾಣ್ಯವಿಷಯಕತ್ವವಿಲ್ಲ. ಬಾಧ ಬಂತು. ಅದರ ಪರಿಹಾರವೂ ಸಾಕ್ಷಿಪದದಿಂದಾಗಿ ಆಗುತ್ತದೆ. ಸಾಕ್ಷಿಪದಕ್ಕೆ ಮೊದಲ ವಿವರಣೆ–ವ್ಯವಸಾಯ ಪ್ರಕಾರ–ಪ್ರಕಾರಕತಯಾ ತದ್ವದ್–ವಿಶೇಷ್ಯಕತಯಾ ವ್ಯವಸಾಯ–ವಿಷಯಕ–ಅನುವ್ಯವಸಾಯ, ಎಂದು. ಮೂಲದಲ್ಲಿ ತೋರಿಸಿದ 'ಘಟಜ್ಞಾನಮಸ್ತಿ' ಎಂಬ ಶಬ್ದದಿಂದ ಬಂದ ಜ್ಞಾನವಿಷಯಕ ಜ್ಞಾನವು, ಉಕ್ತರೂಪೇಣ ಜ್ಞಾನವಿಷಯಕವಲ್ಲ. ಆದ್ದರಿಂದ ಅದು ಪ್ರಕೃತವಿವಕ್ಷಿತ ಸಾಕ್ಷಿಜ್ಞಾನವಲ್ಲ.

ಸಾಕ್ಷಿಪದದ ಎರಡನೆಯ ವಿವರಣೆ– ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷ ಎಂದು. ಉಕ್ತಾನುವ್ಯವಸಾಯವು ಜ್ಞಾನಾಂಶೇ ಸಾಮಾನ್ಯ–ಲಕ್ಷಣಾರೂಪವಾದ ಅಲೌಕಿಕ ಸನ್ನಿಕರ್ಷ ಜನ್ಯವಾಗಿದೆ. ಆದ್ದರಿಂದ ಅದು ಪ್ರಕೃತ ವಿವಕ್ಷಿತ ಸಾಕ್ಷಿ ಅಲ್ಲ.

## ಪಕ್ಷಧರಮಿಶ್ರರ ಖಂಡನೆ

**ಅಪ್ರತಿಬದ್ಧಮಿತಿ ॥ ವಿರೋಧ್ಯುಪಸ್ಥಿತಿ–ತತ್ಸಾಮಗ್ರ್ಯಸಮವಹಿತ-ಮಿತ್ಯರ್ಥಃ ॥**

**ಯಸ್ತು 'ಘಟಜ್ಞಾನಮ್' ಇತಿ ಜ್ಞಾನೇನಾಪಿ ಪ್ರಾಮಾಣ್ಯಂ ಗೃಹ್ಯತೇ ಇತಿ ಪಕ್ಷಧರೋದ್ಘಾಟಿತಃ ಪಕ್ಷಃ, ಸ ತು ಅಪದಾರ್ಥತ್ವಾತ್ ಅವಾಕ್ಯಾರ್ಥತ್ವಾತ್, ಇತಿ ರುಚಿದತ್ತಾದಿನೈವ ದೂಷಿತತ್ವಾತ್ ಉಪೇಕ್ಷ್ಯಃ। ಅತ್ರ ವಿವಕ್ಷಿತತತ್-ಪ್ರಕಾರ – ಪ್ರಕಾರಕತ್ವಾದಿರೂಪ ಜ್ಞಾನ – ಜ್ಞಾನತ್ವಾಭಾವಾಚ್ಚ।**

ಮೂಲದಲ್ಲಿ ಶಬ್ದ ಜನ್ಯಜ್ಞಾನವು ಅಪ್ರತಿಬದ್ಧವಾದುದು, ಎನ್ನಲಾಗಿದೆ. ಅಲ್ಲಿ ಅಪ್ರತಿಬದ್ಧ ಎಂದರೆ ಪ್ರಾಮಾಣ್ಯಗ್ರಹಕ್ಕೆ ಪ್ರತಿಬಂಧಕವಾದ ಅಪ್ರಾಮಾಣ್ಯಾದಿ ಉಪಸ್ಥಿತಿ ಅಥವಾ ಅಂತಹ ಉಪಸ್ಥಿತಿಗೆ ಬೇಕಾದ ಸಾಮಗ್ರೀ ಇವುಗಳ ಪ್ರತಿಬಂಧಕವಿಲ್ಲ, ಎಂದು ಅರ್ಥ.

ಪಕ್ಷಧರ ಮಿಶ್ರರು 'ಘಟಜ್ಞಾನಮ್' ಎಂಬ ಶಬ್ದಜನ್ಯವಾದ ಜ್ಞಾನದಲ್ಲೂ ಘಟತ್ವವದ್ ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವು ಗೃಹೀತವಾಗುತ್ತದೆ. ಆದ್ದರಿಂದ ಬಾಧ ದೋಷವಿಲ್ಲ ಎನ್ನುತ್ತಾರೆ. ಅದನ್ನು ತಾರ್ಕಿಕನೇ ಆದ ರುಚಿದತ್ತನು ನಿರಾಕರಿಸಿದ್ದಾನೆ–ಶಾಬ್ದಬೋಧದಲ್ಲಿ ಪದದ ಅರ್ಥವು ವಿಷಯವಾಗುತ್ತದೆ, ಅಥವಾ ವಾಕ್ಯಾರ್ಥವು ಅಂದರೆ ಅನ್ವಯವು ವಿಷಯವಾಗುತ್ತದೆ. ಪ್ರಾಮಾಣ್ಯವು ಪದಾರ್ಥವೂ ಅಲ್ಲ, ವಾಕ್ಯಾರ್ಥವೂ ಅಲ್ಲ. ಅದು ವಿಷಯವಾಗಲು ಸಾಧ್ಯವಿಲ್ಲ, ಎಂದು. (ಇದರ ವಿವರ ಮುಂದೆ ಬಂದಿದೆ)

ಅಷ್ಟೇ ಅಲ್ಲ. ಆ ಶಾಬ್ದಬೋಧವು ವ್ಯವಸಾಯ–ಪ್ರಕಾರ–ಪ್ರಕಾರಕತಯಾ ಜ್ಞಾನವನ್ನು ವಿಷಯೀಕರಿಸುತ್ತಿಲ್ಲ. ಹೀಗಾಗಿ ಪ್ರಕೃತವಿವಕ್ಷಿತ ಸಾಕ್ಷಿತ್ವವೂ ಅದರಲ್ಲಿ ಇಲ್ಲ.

**ಏತಚ್ಚ 'ತತ್-ಪ್ರಕಾರ-ಪ್ರಕಾರಕತಯಾ' ಇತ್ಯುಕ್ತಾನುವ್ಯವಸಾಯತ್ವರೂಪ ಸಾಕ್ಷಿತ್ವವಿವಕ್ಷಯಾ ಬೋಧ್ಯಮ್ ।**

**ಅಂತ್ಯಕಲ್ಪೇ ತು ಗೃಹೀತಪ್ರಾಮಾಣ್ಯಕ-ಜ್ಞಾನಸಜಾತೀಯ-ಜ್ಞಾನಾಂತ-ರಾನುವ್ಯವಸಾಯಮ್ ಈಶ್ವರ-ಜ್ಞಾನಮ್ ವಾ ಆದಾಯ ಸಿದ್ಧಸಾಧನತಾ ಧ್ಯೇಯಾ ।**

ಮೇಲೆ ಹೇಳಿದ ಪಂಚಮಾನುವ್ಯವಸಾಯದಲ್ಲಿ ಸ್ಮೃತಿಯಿಂದ ಉಪನೀತವಾದ ಪ್ರಾಮಾಣ್ಯವು ತೋರಬೇಕಾದರೆ ಅನುವ್ಯವಸಾಯವು ತದ್ವದ್ ವಿಶೇಷ್ಯಕತ್ವೇನ ವ್ಯವಸಾಯವನ್ನು ಗ್ರಹಿಸುತ್ತದೆ, ಎಂಬ ಅನುವ್ಯವಸಾಯ ಸ್ವರೂಪನಿರೂಪಣೆಯ ಮೊದಲನೆಯ ಪಕ್ಷವನ್ನು ಪರಿಗ್ರಹಿಸಬೇಕು. ಆಗ ಸಿದ್ಧಸಾಧನತಾ ಬರುತ್ತದೆ.

ಎರಡನೆಯ ಪಕ್ಷದಲ್ಲಿ ಹೀಗೆ ಸಿದ್ಧಸಾಧನತಾವನ್ನು ಹೇಳಲಾಗದು. ಆ ಪಕ್ಷದಲ್ಲಿ ಪ್ರಾಮಾಣ್ಯವು ಅನುಮಾನೈಕಗಮ್ಯ. ಆ ಪಕ್ಷದಲ್ಲಿ ಸಿದ್ಧಸಾಧನತಾವನ್ನು ಹೀಗೆ ಹೇಳಬೇಕು– ಜಲಜ್ಞಾನ ಬಂದು ಅದರಲ್ಲಿ ಅನುಮಿತಿಯಿಂದ ಪ್ರಾಮಾಣ್ಯವು ಗೃಹೀತವಾಯಿತು. ಆಮೇಲೆ ಅದೇ ಜಲಜ್ಞಾನ ಮತ್ತೊಮ್ಮೆ ಬಂದಾಗ ಆ ಜಲಜ್ಞಾನ ಗ್ರಾಹಕವಾದ ಅನುವ್ಯವಸಾಯವು ಸ್ಮೃತ್ಯುಪನೀತವಾಗಿ ಜಲಜ್ಞಾನಗತ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ. ಇದರಿಂದಾಗಿ ಸಿದ್ಧಸಾಧನತಾ. ಅಥವಾ ಈಶ್ವರಜ್ಞಾನವು ಏಕವಾದುದರಿಂದ ಜಲಜ್ಞಾನ ಪ್ರಾಮಾಣ್ಯವಿಷಯಕವೂ ಆಗಿದೆ, ಎಂದು ಸಿದ್ಧಸಾಧನತಾ. ಅದರ ಪರಿಹಾರಕ್ಕಾಗಿ 'ನಿಯತ' ಪದದ ಅಗತ್ಯವಿದೆ.

## ಸಾಕ್ಷಿಪದದಿಂದ ಬಾಧ ನಿರಾಸ ಹೇಗೆ?

**ಶಬ್ದಜನ್ಯಮಿತಿ ಉಪಲಕ್ಷಣಮ್, ಸಾಮಾನ್ಯಪ್ರತ್ಯಾಸತ್ತಿಜನ್ಯಂ ಜ್ಞಾನಾಂಶೇ ಅಲೌಕಿಕಂ 'ಜ್ಞಾನವಾನಹಮ್' ಇತಿ ಜ್ಞಾನಂ ಚ, ಇತ್ಯಪಿ ಧ್ಯೇಯಮ್ । ಸಾಕ್ಷಿತ್ವಸ್ಯ ದ್ವಿರೂಪಸ್ಯ ಅಭಿಮತತ್ವಾತ್ ತತ್ಪ್ರಕಾರಕೇತ್ಯಾದಿರೂಪೇಣ ಶಬ್ದಜನ್ಯಜ್ಞಾನಸ್ಯ, 'ಜ್ಞಾನಾಂಶೇ ಲೌಕಿಕ' ಇತಿ ಅಂತ್ಯಪಕ್ಷರೂಪೇಣ ಚ ಸಾಮಾನ್ಯಪ್ರತ್ಯಾಸತ್ತಿ-ಜನ್ಯಸ್ಯ ನಿರಾಸಾತ್ ।**

ಮೂಲದಲ್ಲಿ ಸಾಕ್ಷಿಪದಕ್ಕೆ ಕೃತ್ಯವನ್ನು ಹೇಳುತ್ತಾ ಶಬ್ದಜನ್ಯಜ್ಞಾನದಲ್ಲಿ ಬಾಧವನ್ನು ಹೇಳಲಾಗಿದೆ. ಅದು ಉಪಲಕ್ಷಣ. ಅನುವ್ಯವಸಾಯ ವಿಶೇಷದಲ್ಲೂ ಬಾಧವನ್ನು ಹೇಳಬಹುದು. ಜ್ಞಾನತ್ವರೂಪ ಸಾಮಾನ್ಯ ಪ್ರತ್ಯಾಸತ್ತಿಯಿಂದ 'ಜ್ಞಾನವಾನಹಮ್' ಎಂಬ ಜ್ಞಾನ ಬಂತು. ಆ

ಜ್ಞಾನದಲ್ಲಿ ಜ್ಞಾನವಿಷಯಕತ್ವ ಇದೆ, ಪ್ರಾಮಾಣ್ಯವಿಷಯಕತ್ವವಿಲ್ಲ, ಬಾಧ ಬಂತು. ಅದರ ಪರಿಹಾರವೂ ಸಾಕ್ಷಿಪದದಿಂದಾಗಿ ಆಗುತ್ತದೆ. ಸಾಕ್ಷಿಪದಕ್ಕೆ ಮೊದಲ ವಿವರಣೆ–ವ್ಯವಸಾಯ ಪ್ರಕಾರ–ಪ್ರಕಾರಕತಯಾ ತದ್ವದ್–ವಿಶೇಷ್ಯಕತಯಾ ವ್ಯವಸಾಯ–ವಿಷಯಕ–ಅನುವ್ಯವಸಾಯ, ಎಂದು. ಮೂಲದಲ್ಲಿ ತೋರಿಸಿದ 'ಘಟಜ್ಞಾನಮಸ್ತಿ' ಎಂಬ ಶಬ್ದದಿಂದ ಬಂದ ಜ್ಞಾನವಿಷಯಕ ಜ್ಞಾನವು, ಉಕ್ತರೂಪೇಣ ಜ್ಞಾನವಿಷಯಕವಲ್ಲ, ಆದ್ದರಿಂದ ಅದು ಪ್ರಕೃತವಿವಕ್ಷಿತ ಸಾಕ್ಷಿಜ್ಞಾನವಲ್ಲ.

ಸಾಕ್ಷಿಪದದ ಎರಡನೆಯ ವಿವರಣೆ– ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷ ಎಂದು. ಉಕ್ತಾನುವ್ಯವಸಾಯವು ಜ್ಞಾನಾಂಶೇ ಸಾಮಾನ್ಯ–ಲಕ್ಷಣಾರೂಪವಾದ ಅಲೌಕಿಕ ಸನ್ನಿಕರ್ಷ ಜನ್ಯವಾಗಿದೆ. ಆದ್ದರಿಂದ ಅದು ಪ್ರಕೃತ ವಿವಕ್ಷಿತ ಸಾಕ್ಷಿ ಅಲ್ಲ.

## ಪಕ್ಷಧರಮಿಶ್ರರ ಖಂಡನೆ

**ಅಪ್ರತಿಬದ್ಧಮಿತಿ ॥ ವಿರೋಧ್ಯುಪಸ್ಥಿತಿ–ತತ್ಸಾಮಗ್ರ್ಯಸಮವಹಿತ-ಮಿತ್ಯರ್ಥಃ ॥**

**ಯಸ್ತು 'ಘಟಜ್ಞಾನಮ್' ಇತಿ ಜ್ಞಾನೇನಾಪಿ ಪ್ರಾಮಾಣ್ಯಂ ಗೃಹ್ಯತೇ ಇತಿ ಪಕ್ಷಧರೋದ್ಘಾಟಿತಃ ಪಕ್ಷಃ, ಸ ತು ಅಪದಾರ್ಥತ್ವಾತ್ ಅವಾಕ್ಯಾರ್ಥತ್ವಾತ್, ಇತಿ ರುಚಿದತ್ತಾದಿನೈವ ದೂಷಿತತ್ವಾತ್ ಉಪೇಕ್ಷ್ಯಃ। ಅತ್ರ ವಿವಕ್ಷಿತತತ್-ಪ್ರಕಾರ – ಪ್ರಕಾರಕತ್ವಾದಿರೂಪ ಜ್ಞಾನ – ಜ್ಞಾನತ್ವಾಭಾವಾಚ್ಚ।**

ಮೂಲದಲ್ಲಿ ಶಬ್ದ ಜನ್ಯಜ್ಞಾನವು ಅಪ್ರತಿಬದ್ಧವಾದುದು, ಎನ್ನಲಾಗಿದೆ. ಅಲ್ಲಿ ಅಪ್ರತಿಬದ್ಧ ಎಂದರೆ ಪ್ರಾಮಾಣ್ಯಗ್ರಹಕ್ಕೆ ಪ್ರತಿಬಂಧಕವಾದ ಅಪ್ರಾಮಾಣ್ಯಾದಿ ಉಪಸ್ಥಿತಿ ಅಥವಾ ಅಂತಹ ಉಪಸ್ಥಿತಿಗೆ ಬೇಕಾದ ಸಾಮಗ್ರೀ ಇವುಗಳ ಪ್ರತಿಬಂಧಕವಿಲ್ಲ, ಎಂದು ಅರ್ಥ.

ಪಕ್ಷಧರ ಮಿಶ್ರರು 'ಘಟಜ್ಞಾನಮ್' ಎಂಬ ಶಬ್ದಜನ್ಯವಾದ ಜ್ಞಾನದಲ್ಲೂ ಘಟತ್ವವದ್ ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವು ಗೃಹೀತವಾಗುತ್ತದೆ. ಆದ್ದರಿಂದ ಬಾಧ ದೋಷವಿಲ್ಲ ಎನ್ನುತ್ತಾರೆ. ಅದನ್ನು ತಾರ್ಕಿಕನೇ ಆದ ರುಚಿದತ್ತನು ನಿರಾಕರಿಸಿದ್ದಾನೆ–ಶಾಬ್ದಬೋಧದಲ್ಲಿ ಪದದ ಅರ್ಥವು ವಿಷಯವಾಗುತ್ತದೆ, ಅಥವಾ ವಾಕ್ಯಾರ್ಥವು ಅಂದರೆ ಅನ್ವಯವು ವಿಷಯವಾಗುತ್ತದೆ. ಪ್ರಾಮಾಣ್ಯವು ಪದಾರ್ಥವೂ ಅಲ್ಲ, ವಾಕ್ಯಾರ್ಥವೂ ಅಲ್ಲ. ಅದು ವಿಷಯವಾಗಲು ಸಾಧ್ಯವಿಲ್ಲ, ಎಂದು. (ಇದರ ವಿವರ ಮುಂದೆ ಬಂದಿದೆ)

ಅಷ್ಟೇ ಅಲ್ಲ, ಆ ಶಾಬ್ದಬೋಧವು ವ್ಯವಸಾಯ–ಪ್ರಕಾರ–ಪ್ರಕಾರಕತಯಾ ಜ್ಞಾನವನ್ನು ವಿಷಯೀಕರಿಸುತ್ತಿಲ್ಲ. ಹೀಗಾಗಿ ಪ್ರಕೃತವಿವಕ್ಷಿತ ಸಾಕ್ಷಿತ್ವವೂ ಅದರಲ್ಲಿ ಇಲ್ಲ.

## 'ತತ್ತತ್' ಪದಕೃತ್ಯ

**ತತ್ತಜ್ಞಾನೇತಿ ॥ ಗ್ರಾಹ್ಯಪ್ರಾಮಾಣ್ಯಾಶ್ರಯ–ವಿಷಯಕೇತಿ ಉಕ್ತಾವಪಿ ಘಟಜ್ಞಾನ–ಪಟಜ್ಞಾನಯೋಃ ದ್ವಯೋರಪಿ ಗ್ರಾಹ್ಯಪ್ರಾಮಾಣ್ಯಾಶ್ರಯತ್ವೇನ ಅನ್ಯತರ–ಗ್ರಾಹಕೇಣ ಅನ್ಯತರ–ಪ್ರಾಮಾಣ್ಯಾಗ್ರಹಣೇನ ಉಕ್ತದೋಷ–ತಾದವಸ್ಥ್ಯಾತ್ ತತ್ತಜ್ಞಾನವಿಷಯಕೇತ್ಯಪ್ಯನುವಾದಃ। ಅತ ಏವ ಧರ್ಮಿನಿರ್ದೇಶೇಽಪಿ ತತ್ತದಿತ್ಯುಕ್ತಿಃ।**

ಘಟಜ್ಞಾನ ವಿಷಯಕವಾದ ಸಾಕ್ಷಿಯು ಪಟಜ್ಞಾನ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲವಾದ ಕಾರಣ ಬರುವ ಬಾಧವನ್ನು 'ತತ್ತತ್' ಪದವನ್ನು ಕೊಡದೆ 'ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನಗ್ರಾಹಕ' ಎಂದು ಹೇಳಿಯೇ ಪರಿಹರಿಸುವಂತಿಲ್ಲ. ಏಕೆಂದರೆ, ಘಟಜ್ಞಾನವೂ ಗ್ರಾಹ್ಯಪ್ರಮಾಣ್ಯಾಶ್ರಯವಾಗಿರುತ್ತದೆ. ಪಟಜ್ಞಾನವೂ ಆಗಿರುತ್ತದೆ. ಘಟಜ್ಞಾನಗ್ರಾಹಕ ಸಾಕ್ಷಿಯು ಪಟಜ್ಞಾನ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಹೀಗಾಗಿ ಬಾಧವು ಅನಿವಾರ್ಯ. ಅದಕ್ಕಾಗಿ 'ತತ್ತತ್' ಎಂಬ ಪದವನ್ನು ಸೇರಿಸಿ ಸಾಧ್ಯವನ್ನು ಅನುವಾದ ಮಾಡಲಾಗಿದೆ. ಆದ್ದರಿಂದಲೇ ಸ್ವತಸ್ತ್ವ ಪರಿಷ್ಕಾರದ ಧರ್ಮಿಯನ್ನು ನಿರ್ದೇಶ ಮಾಡುವಾಗಲೂ 'ತತ್ತತ್' ಪದವನ್ನು ಬಳಸಲಾಗಿದೆ. ಯಾವ ಜ್ಞಾನದ ಪ್ರಾಮಾಣ್ಯವು ಧರ್ಮಿಯೋ ಅದೇ ಜ್ಞಾನವನ್ನು ಗ್ರಹಿಸುವ ಸಾಕ್ಷಿಯಲ್ಲಿ ಆ ಪ್ರಾಮಾಣ್ಯವು ವಿಷಯವಾಗಿರುತ್ತದೆ, ಎಂದು ಅಭಿಪ್ರಾಯ. ಹೀಗೆ ಹೇಳಿದಾಗ ಬಾಧಕ್ಕೆ ಅವಕಾಶವಿಲ್ಲ.

## ಪ್ರಾಮಾಣ್ಯಾಶ್ರಯಪದಕೃತ್ಯ

**ಗ್ರಾಹ್ಯಪ್ರಾಮಾಣ್ಯಾಶ್ರಯೇತಿ ಅನುಕ್ತೌ ಅಪ್ರಾಮಾಣ್ಯಾಶ್ರಯಸ್ಯಾಪಿ ಜ್ಞಾನಸ್ಯ ತತ್ತಜ್ಞಾನಪದೇನ ಗ್ರಹಣಪ್ರಸಂಗಾತ್ ತದ್ವಿಷಯಕೇಣ ಸಾಕ್ಷಿಣಾ ಪ್ರಾಮಾಣ್ಯಾಗ್ರಹಣಾದ್ ಬಾಧ ಏವ।**

'ಗ್ರಾಹ್ಯಪ್ರಾಮಾಣ್ಯಾಶ್ರಯ' ಎನ್ನುವ ವಿಶೇಷಣವನ್ನು ಬಿಟ್ಟು 'ತತ್ತತ್‌ಜ್ಞಾನ' ಎಂದಿಷ್ಟೇ ಹೇಳಿದರೂ ಬಾಧ ಇದ್ದಿದ್ದೆ. ತತ್ತತ್–ಜ್ಞಾನವೆಂದರೆ ಅಪ್ರಾಮಾಣ್ಯಾಶ್ರಯವಾದ ಭ್ರಮಾತ್ಮಕವಾದ ಜ್ಞಾನ. ತದ್–ಗ್ರಾಹಕ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅದಕ್ಕಾಗಿ 'ಗ್ರಾಹ್ಯಪ್ರಾಮಾಣ್ಯಾಶ್ರಯ' ಎಂಬ ವಿಶೇಷಣವೂ ಬೇಕು. ಆಗ ಭ್ರಮೆಯ ಸಂಗ್ರಹವಾಗುವುದಿಲ್ಲ.

## ಬಾಧಶಂಕೆ ಯುಕ್ತವಾಗಿದೆ

**ಸಾಕ್ಷಿಣಃ ಏಕತ್ವೇಽಪಿ ಪಟಜ್ಞಾನ–ಪ್ರಾಮಾಣ್ಯಗ್ರಹಣಸ್ಯ ಪಟಜ್ಞಾನಗ್ರಹಣ**

**ಪ್ರಯುಕ್ತತ್ವೇನ ಘಟಜ್ಞಾನಗ್ರಹಣ-ಪ್ರಯುಕ್ತತ್ವಾಭಾವಾತ್ ಬಾಧಶಂಕಾ-ಯುಕ್ತೈವ ಇತಿ ಭಾವಃ ।**

**ದೋಷಶಂಕೇತಿ ॥ ದುಷ್ಟಕರಣ-ಜನ್ಯತ್ವಶಂಕಾ ತನ್ನಿಶ್ಚಯತಜ್ಜನಕಾದಿ ರೂಪೇತ್ಯರ್ಥಃ ।**

ಹಿಂದಿನ ಬಾಧಶಂಕೆಗೆ ಅವಕಾಶವೇ ಇಲ್ಲ. ಘಟಜ್ಞಾನ ಮತ್ತು ಪಟಜ್ಞಾನ ವಿಷಯಕ ಸಾಕ್ಷಿಯು ಆತ್ಮರೂಪವಾದುದರಿಂದ ಒಂದೇ. ಅದು ಉಭಯಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹೀಗಿರುವಾಗ ಘಟಜ್ಞಾನ ಗ್ರಾಹಕ ಸಾಕ್ಷಿಯು ಪಟಜ್ಞಾನಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎನ್ನುವುದು ಹೇಗೆ?

ಇದಕ್ಕೆ ಹೀಗೆ ಸಮಾಧಾನ- ಸಾಕ್ಷಿ ಒಂದೇ ಆದರೂ ಅದು ಪಟಜ್ಞಾನ-ಗ್ರಾಹಕವಾದ ಪ್ರಯುಕ್ತವಾಗಿಯೇ ತಜ್ಞಾನಗತ-ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹೊರತು ಘಟಜ್ಞಾನ-ಗ್ರಹಣ ಪ್ರಯುಕ್ತವಾಗಿ ಅಲ್ಲ. ಹೀಗೆ ಪ್ರಯೋಜಕಭೇದವಿರುವುದರಿಂದ ಬಾಧಕ್ಕೆ ಅವಕಾಶವಿದೆ.

'ತಜ್ಜ್ಞಾನ-ಗ್ರಾಹಕಸಾಕ್ಷಿ-ವಿಷಯತ್ವ-ನೈಯತ್ಯಂ' ಎಂಬ ಸ್ವತಸ್ತ್ವಪರಿಷ್ಕಾರಕ್ಕೆ 'ತಜ್ಜ್ಞಾನ ಗ್ರಾಹಕತ್ವ-ಪ್ರಯುಕ್ತ-ಸಾಕ್ಷಿವಿಷಯತ್ವ-ನೈಯತ್ಯಂ ತತ್ಪ್ರಾಮಾಣ್ಯಸ್ಯ' ಎಂದು ಅರ್ಥ. ಆದ್ದರಿಂದ ಬಾಧ ಬರುತ್ತದೆ.

## ಸ್ವತಸ್ತ್ವನಿರುಕ್ತಿಯಲ್ಲಿ ವಿವಕ್ಷಿತವಾದ ನಿಯಮ

**अत्र यद्यपि विषयत्वं साक्षिज्ञानं प्रत्येवेति नियमो न युक्तः । मन्मतेऽपि प्रामाण्यस्यानुमित्यापि ग्राह्यत्वात् । तथापि साक्षिज्ञानं प्रति विषत्वमेवेति नियमो युक्त एव ।**

'ಸಾಕ್ಷಿವಿಷಯತ್ವ ನೈಯತ್ಯಮ್' ಎಂದು ಸ್ವತಸ್ತ್ವನಿರುಕ್ತಿಯಲ್ಲಿ ನೈಯತ್ಯಪದದಿಂದ ನಿಯಮವು ಹೇಳಲ್ಪಟ್ಟಿದೆ. ಆ ನಿಯಮವನ್ನು ಎರಡು ರೀತಿಯಲ್ಲಿ ಪರಿಗಣಿಸಬಹುದು.

1. ಸಾಕ್ಷಿಣಃ ಏವ ಪ್ರಾಮಾಣ್ಯಂ ವಿಷಯಃ-ಪ್ರಾಮಾಣ್ಯವು ಸಾಕ್ಷಿಗೆ ಮಾತ್ರ ವಿಷಯ.

2. ಸಾಕ್ಷಿಣಃ ವಿಷಯಃ ಭವತ್ಯೇವ-ಪ್ರಾಮಾಣ್ಯವು ಸಾಕ್ಷಿಗೆ ನಿಯಮೇನ ವಿಷಯವಾಗ ಬೇಕು.

ಇದರಲ್ಲಿ ಮೊದಲನೆಯ ನಿಯಮ ನಮಗೆ ವಿವಕ್ಷಿತವಲ್ಲ. ಏಕೆಂದರೆ ನಮ್ಮ ಮತದಲ್ಲೂ ಪ್ರಾಮಾಣ್ಯವು ಕೆಲವೊಮ್ಮೆ ಅನುಮಿತಿಗೂ ವಿಷಯವಾಗುತ್ತದೆ. ಆದ್ದರಿಂದ ಎರಡನೆಯ

ನಿಯಮವೇ ಪ್ರಕೃತದಲ್ಲಿ ವಿವಕ್ಷಿತ. ಸಾಕ್ಷಿಯು ಪ್ರತಿಂಬಂಧಕಗಳಿಲ್ಲದಿರುವಾಗ ಜ್ಞಾನದ ಜೊತೆಗೆ ಅದರಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸಿಯೇ ತೀರುತ್ತದೆ. ಸ್ವತಸ್ತ್ವಪಕ್ಷದಲ್ಲಿ ಈ ನಿಯಮವು ನಿರ್ದುಷ್ಟವಾದುದು.

## ನ್ಯಾಯದೀಪ

**ನೈಯ್ಯತ್ಯಸ್ಯ, ಸಾಕ್ಷಿಣೈವ ಗೃಹ್ಯತೇ, ಸಾಕ್ಷಿಣಾ ಗೃಹ್ಯತೇ ಏವ, ಇತಿ ದ್ವೇಧಾ ಸಂಭವಾತ್ ವಿವಕ್ಷಿತಮಾಹ-ಅತ್ರೇತಿ ।। ನಿರುಕ್ತೌ ಇತ್ಯರ್ಥಃ।**

**ಅನುಮಿತ್ಯೇತಿ ।। ಚೈತ್ರಜ್ಞಾನಂ ಪ್ರಮಾ, ಅರ್ಥಸಂವಾದಾತ್, ಇತ್ಯಾದಿ ರೂಪೇಣ ಮೈತ್ರಾದೇಃ ಅನುಮಿತ್ಯುದಯಾತ್, ಇತ್ಯರ್ಥಃ ।।**

ಪ್ರಾಮಾಣ್ಯವು ಅನುಮಿತಿಗೂ ವಿಷಯವಾಗುತ್ತದೆ– ಚೈತ್ರನ ಜ್ಞಾನವು ಅರ್ಥಸಂವಾದಿಯಾಗಿರುವುದರಿಂದ ಪ್ರಮಾವಾಗಿದೆ, ಎಂದು ಮೈತ್ರನು ಅನುಮಾನ ಮಾಡುತ್ತಾನೆ. ಈ ಅನುಮಿತಿಗೆ ಪ್ರಾಮಾಣ್ಯವು ವಿಷಯವಾಗಿದೆ. ಆದ್ದರಿಂದ ಪ್ರಾಮಾಣ್ಯವು ಸಾಕ್ಷಿಗೆ ಮಾತ್ರ ವಿಷಯ ಎಂದು ನಿಯಮ ಮಾಡಲು ಬರುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಜ್ಞಾನಗ್ರಾಹಕ ಸಾಕ್ಷಿಣಃ ವಿರೋಧಿಸಾಮಗ್ರ್ಯಭಾವಮ್ ಅಪೇಕ್ಷ್ಯ ಪ್ರಾಮಾಣ್ಯಗ್ರಾಹಕತ್ವೇ ನಿರಪೇಕ್ಷಜ್ಞಾನಗ್ರಾಹಕ-ಗ್ರಾಹ್ಯತ್ವರೂಪ-ಸ್ವತಸ್ತ್ವಾ-ಯೋಗಃ ಇತ್ಯತ ಆಹ – ಮಣಿಕೃತಾಪೀತಿ ।। ಪರತಸ್ತ್ವವಾದಿನಾ-ಪೀತ್ಯರ್ಥಃ ।।**

ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ಪ್ರಾಮಾಣ್ಯವಿರೋಧಿ ಸಾಮಗ್ರಿಗಳು ಇರಬಾರದು, ಎಂದು ನಿಬಂಧನೆ ಮಾಡಿದರೆ ಸಾಕ್ಷಿಯು ಆ ವಿರೋಧಿ ಸಾಮಗ್ರಿಯ ಅಭಾವವನ್ನು ಅವಲಂಬಿಸಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದಂತಾಯಿತು. ಆಗ ಸ್ವತಸ್ತ್ವಹಾನಿ. ಸತಸ್ತ್ವ ಎಂದರೆ ಜ್ಞಾನಗ್ರಾಹಕವು ನಿರಪೇಕ್ಷವಾಗಿ ಪ್ರಾಮಾಣ್ಯವನ್ನು ಗ್ರಹಿಸಬೇಕು. ಆದರೆ ಪ್ರಕೃತದಲ್ಲಿ ಸಾಕ್ಷಿಯು ಸಾಪೇಕ್ಷವಾಯಿತು.

ಈ ಆಕ್ಷೇಪದ ಪರಿಹಾರಕ್ಕಾಗಿ ಮೂಲದಲ್ಲಿ 'ಮಣಿಕೃತಾಪಿ' ಇತ್ಯಾದಿ ವಾಕ್ಯವಿದೆ. ಇಲ್ಲಿ 'ಮಣಿಕಾರ' ಎಂದರೆ 'ಪ್ರಾಮಾಣ್ಯಂ ಪರತಃ' ಎಂದು ಹೇಳುವವನು ಎಂದರ್ಥ.

## ಪ್ರತಿಬಂಧಕಾಭಾವವು ಪ್ರಯೋಜಕ ಮಾತ್ರ

**मणिकृतापि हि तदप्रामाण्याग्राहकेति विशिंषता प्रामाण्यग्रहणेऽप्रामाण्योपस्थापकसामग्र्यसमवधानस्य प्रयोजकतोक्तैव ।। १ ।।**

ತತ್ತ್ವ ಚಿಂತಾಮಣಿ ಗ್ರಂಥವನ್ನು ಬರೆದ ಗಂಗೇಶೋಪಾಧ್ಯಾಯರೂ ಪ್ರಾಮಾಣ್ಯ ಸ್ವತಸ್ತ್ವನಿರುಕ್ತಿಯಲ್ಲಿ 'ತದಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಆ ಮೂಲಕ ಅನುವ್ಯವಸಾಯವು ಪ್ರಾಮಾಣ್ಯ-ಗ್ರಹಣೆ ಮಾಡಬೇಕಾದರೆ ಅಪ್ರಾಮಾಣ್ಯಜ್ಞಾನಜನಕವಾದ ಸಾಮಗ್ರಿಯ ಅಭಾವವು ಪ್ರಯೋಜಕವಾಗಿದೆ ಎಂದು ಅಂಗೀಕರಿಸಿದ್ದಾರೆ.

**ವಿವರಣೆ** : ಹಿಂದೆ ಹೇಳಿದ ಸ್ವತಸ್ತ್ವನಿರುಕ್ತಿಯಲ್ಲಿ, ಸಾಕ್ಷಿಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗಬೇಕಾದರೆ ಪ್ರಾಮಾಣ್ಯವಿರೋಧಿಗ್ರಾಹಕ ಸಾಮಗ್ರಿಗಳು ಇರಬಾರದು ಎಂಬ ನಿಬಂಧನೆ ಇದೆ. ಅಲ್ಲಿಗೆ ಸಾಕ್ಷಿಜ್ಞಾನವು ನಿರಪೇಕ್ಷವಾಗಿ ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ, ಅದಕ್ಕೆ ವಿರೋಧಿಗ್ರಾಹಕ-ಸಾಮಗ್ರ್ಯಭಾವದ ಸಹಕಾರವೂ ಬೇಕು, ಎಂದಂತಾಯಿತು. ಹೀಗಿದ್ದರೆ ಸ್ವತಸ್ತ್ವ ಹೇಗಾದೀತು?

ಈ ಆಕ್ಷೇಪಕ್ಕೆ ಉತ್ತರ— ಪರತಸ್ತ್ವವಾದಿಗಳಾದ ನೈಯಾಯಿಕರಿಗೂ ಅದು ಸಮ್ಮತ ವಾಗಿದೆ. ಅರ್ಥಾತ್ ವಿರೋಧಿ ಸಾಮಗ್ರ್ಯಭಾವವು ಕಾರಣವಲ್ಲ, ಪ್ರಯೋಜಕ. ಆದರೂ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಚ್ಯುತಿ ಇಲ್ಲ, ಎಂದು ಅವರೂ ಒಪ್ಪಿದ್ದಾರೆ.

ಮಣಿಕಾರ ಮಾಡಿದ ಸ್ವತಸ್ತ್ವ ಪರಿಷ್ಕಾರ– 'ಜ್ಞಾನ ಪ್ರಾಮಾಣ್ಯಂ ತದಪ್ರಾಮಾಣ್ಯಾಗ್ರಾಹಕ–ಜ್ಞಾನಗ್ರಾಹಕ-ಯಾವತ್-ಸಾಮಗ್ರೀ-ಗ್ರಾಹ್ಯಮ್' ಎಂದಿದೆ. ಅಪ್ರಾಮಾಣ್ಯ-ಅಗ್ರಾಹಕವಾದ, ಜ್ಞಾನಗ್ರಾಹಕವಾದ ಯಾವ ಸಾಮಗ್ರಿಗಳಿವೆಯೋ ಅವುಗಳಿಂದ ಹುಟ್ಟಿದ ಜ್ಞಾನಗಳಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಎಂದು ಅದರ ಅರ್ಥ. ಅಂತಹ ಸಾಮಗ್ರಿಯಲ್ಲಿ ಅನುಮಿತಿ ಸಾಮಗ್ರಿಯಂತೆ ಅನುವ್ಯವಸಾಯ ಸಾಮಗ್ರಿಯೂ ಸೇರುತ್ತದೆ. ಅದರಿಂದ ಪ್ರಾಮಾಣ್ಯಗ್ರಾಹ್ಯ ವೆಂದು ನೈಯಾಯಿಕರು ಒಪ್ಪಿಲ್ಲ, ಸ್ವತಸ್ತ್ವವಾದಿಗಳು ಒಪ್ಪಿದ್ದಾರೆ. ಆದ್ದರಿಂದ ಇದು ಸ್ವತಸ್ತ್ವಪರಿಷ್ಕಾರ ವೆನಿಸಬಲ್ಲದು.

ಇಲ್ಲಿ ಜ್ಞಾನಗ್ರಾಹಕ ಸಾಮಗ್ರಿಗೆ 'ತದಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣವನ್ನು ಮಣಿಕಾರ ಕೊಟ್ಟಿದ್ದಾನೆ. ಇದರಿಂದಾಗಿ ಜ್ಞಾನಗ್ರಾಹಕ ಸಾಮಗ್ರಿಯು ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯ ಅಭಾವದ ಸಹಕಾರವಿದ್ದಾಗಲೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು ತಿಳಿಯುತ್ತದೆ. ಹೀಗೆ ಮಣಿಕಾರನೂ ಸಹ ಪ್ರತಿಬಂಧಕಾಭಾವದ ಸಹಾಯದಿಂದ ಪ್ರಾಮಾಣ್ಯವು ಗೃಹೀತವಾದರೂ ಸ್ವತಸ್ತ್ವದ ಹಾನಿ ಇಲ್ಲ, ಎಂದು ಒಪ್ಪಿಕೊಂಡಿದ್ದಾನೆ.

## ಶಕ್ತಿ ಸಹಜ ಹೇಗೆ?

**ವಿರೋಧ್ಯುಪಸ್ಥಾಪಕ-ಸಾಮಗ್ರ್ಯಸಮವಧಾನಸ್ಯ ಪ್ರಾಮಾಣ್ಯ ಗ್ರಹಣ ಕಾರಣತ್ವೇ ಹಿ ದೋಷಃ। ಗಮನಶಕ್ತಸ್ಯ ಗಜಸ್ಯ ಗೋಕ್ಷುರ-ಕಾಪಸರ್ಪಣಸ್ಯೇವ ಪ್ರಯೋಜಕತ್ವೇ ತು ನ ದೋಷಃ, ಇತಿ ಭಾವೇನ ಉಕ್ತಮ್-ಪ್ರಯೋಜಕೇತಿ ॥**

ಮೂಲದಲ್ಲಿ ಪ್ರಯೋಜಕ ಪದದಿಂದ ಆಕ್ಷೇಪಕ್ಕೆ ಪರಿಹಾರವು ಸೂಚಿತವಾಗಿದೆ-ವಿರೋಧ್ಯುಪಸ್ಥಾಪಕ ಸಾಮಗ್ರಿಯು ಪ್ರಾಮಾಣ್ಯಜ್ಞಾನಕ್ಕೆ ಕಾರಣವೆಂದಾಗ ಮಾತ್ರ ಸ್ವತಸ್ತ್ವಹಾನಿ. ಅದು ಕಾರಣವಲ್ಲ, ಪ್ರಯೋಜಕ: ಪ್ರಯೋಜಕವನ್ನು ಅಪೇಕ್ಷಿಸಿದಾಗ ಶಕ್ತಿಯು ಅಸಹಜವಾಗುವುದಿಲ್ಲ. ಉದಾಹರಣೆಗೆ-ಗಜವು ನಡೆಯಬೇಕಾದರೆ 'ಗೋಕ್ಷುರಕ' ಮುಳ್ಳು ಇರಬಾರದು. ಗೋಕ್ಷುರಕಾಭಾವವು ಪ್ರಯೋಜಕ. ಅಂದಮಾತ್ರಕ್ಕೆ ಗಜಕ್ಕೆ ಗಮನಶಕ್ತಿ ಅನ್ಯಾಧೀನ, ಅಸ್ವಾಭಾವಿಕ, ಎಂದೇನೂ ಆಗುವುದಿಲ್ಲ. ಅದರಂತೆ ಪ್ರಕೃತದಲ್ಲಿ ಸ್ವತಸ್ತ್ವಹಾನಿ ಇಲ್ಲ. ಇದನ್ನು ಪರತಸ್ತ್ವವಾದಿಗಳೂ ಒಪ್ಪಿದ್ದಾರೆ. ॥ ಲಕ್ಷಣ-1॥

## ದ್ವಿತೀಯ ಲಕ್ಷಣಕ್ಕೆ ಅವತರಣಿಕೆ

**ಪೂರ್ವಂ ಫಲೋಪಧಾನಾಪೇಕ್ಷಯಾ ಪ್ರಯೋಜಕವಿಶೇಷಣೋಕ್ತ್ಯಾ-ನಿರುಕ್ತಿಃ ಕೃತಾ। ಅಧುನಾ ತು ತಾದೃಶ ವಿಶೇಷಣತ್ಯಾಗೇನ ಪ್ರಕಾರಂತರ ಮಾಹ-ಯದ್ವಾ ಇತಿ ॥**

**ಸಾರ್ವತ್ರಿಕ-ಸಾರ್ವಕಾಲೀನ-ಪ್ರಾಮಾಣ್ಯಸ್ವತಸ್ತ್ವ - ಲಾಭಾಯ ವಾ ಆಹ-ಯದ್ವಾ ಇತಿ ॥**

**ನನ್ವೇವಂ ಸ್ವತಸ್ತ್ವಸ್ಯ ಅಪ್ರತಿಬದ್ಧ-ಸಾಕ್ಷಿವೇದ್ಯತ್ವರೂಪತ್ವೇ 'ಜ್ಞಾನ ಗ್ರಾಹಕಃ ಸಾಕ್ಷೀ ಪ್ರಮಾಣತಯೈವ ಗೃಹ್ಣಾತಿ, ಇತಿ ಉತ್ಸರ್ಗ ಏವ। ವಿಸಂವಾದ ಲಕ್ಷಣಾತ್ ಅಪವಾದಾತ್ ಅಪ್ರಾಮಾಣ್ಯಂ ಚ ಗೃಹ್ಣಾತಿ' ಇತಿ ತತ್ತ್ವನಿರ್ಣಯಟೀಕಾದ್ಯುಕ್ತ - ಔತ್ಸರ್ಗಿಕತ್ವ - ವಿರೋಧಃ, ಇತ್ಯತಃ ತದನು-ರೋಧೇನ ವಾ ಪಕ್ಷಾಂತರಮಾಹ-ಯದ್ವಾ ಇತಿ।**

ಒಂದಿನ ಸ್ವತಸ್ತ್ವನಿರುಕ್ತಿಯು ಪ್ರಾಮಾಣ್ಯಜ್ಞಾನರೂಪವಾದ ಫಲವನ್ನು ಪರಿಗಣಿಸಿ ಮಾಡಿರುವುದಾಗಿದೆ. ಆದ್ದರಿಂದಲೇ ಆ ನಿರುಕ್ತಿಯಲ್ಲಿ ಸಾಕ್ಷಿಗೆ 'ಪ್ರಾಮಾಣ್ಯ ವಿರೋಧ್ಯುಪಸ್ಥಾಪಕ-ಸಾಮಗ್ರ್ಯಸಮವಹಿತ' ಎಂಬ ಪ್ರಾಮಾಣ್ಯಗ್ರಹಣಕ್ಕೆ ಪ್ರಯೋಜಕವಾದ ವಿಶೇಷಣವನ್ನು

ಕೊಡಬೇಕಾಗಿತ್ತು. ಆದರೆ, ದ್ವಿತೀಯ ನಿರುಕ್ತಿಯಲ್ಲಿ ಸಾಕ್ಷಿಯಲ್ಲಿರುವ ಪ್ರಾಮಾಣ್ಯಗ್ರಹಣ ಯೋಗ್ಯತೆಯನ್ನು ಪರಿಗಣಿಸಿರುವುದರಿಂದ ಆ ವಿಶೇಷಣದ ಅಗತ್ಯವಿಲ್ಲ. ಅದನ್ನು ಬಿಟ್ಟ ನಿರುಕ್ತ್ಯಂತರ ಇದು.

ಈ ನಿರುಕ್ತಿಯ ಇನ್ನೊಂದು ವಿಶೇಷ ಹೀಗಿದೆ— ಮೊದಲಿನ ನಿರುಕ್ತಿ ಪ್ರಾಮಾಣ್ಯವು ಸಾಕ್ಷಿಯಿಂದ ಗೃಹೀತವಾದಾಗ ಮಾತ್ರ ಅಥವಾ ಗೃಹೀತ ಪ್ರಾಮಾಣ್ಯದಲ್ಲಿ ಮಾತ್ರ ಸಮನ್ವಯವಾಗುತ್ತದೆ. ದ್ವಿತೀಯ ನಿರುಕ್ತಿಯು ಸಕಲ ಪ್ರಾಮಾಣ್ಯದಲ್ಲೂ, ಸರ್ವದಾ ಇದೆ.

ಈ ಸ್ವತಸ್ತ್ವನಿರುಕ್ತಿಯು ವಿಷ್ಣುತತ್ತ್ವನಿರ್ಣಯ ಟೀಕಾಕ್ಕೆ ಅನುಗುಣವಾಗಿಲ್ಲ. ಅಲ್ಲಿ ಟೀಕೆಯ ಅಭಿಪ್ರಾಯ ಹೀಗಿದೆ— ''ಜ್ಞಾನಗ್ರಾಹಕವಾದ ಸಾಕ್ಷಿಯು ತಾನು ಗ್ರಹಿಸಿರುವ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸಿಯೇ ತೀರುತ್ತದೆ, ಎಂದೇನೂ ನಿಯಮವಿಲ್ಲ. ವಿಸಂವಾದರೂಪವಾದ ಅಪವಾದ ಇದ್ದಾಗ ಜ್ಞಾನದಲ್ಲಿ ಪ್ರಾಮಾಣ್ಯದ ಬದಲು ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ''.

ಹೀಗೆ ಅಲ್ಲಿ ಸಾಕ್ಷಿಗೆ ಪ್ರಾಮಾಣ್ಯಗ್ರಾಹಕತ್ವವು ಔತ್ಸರ್ಗಿಕ, ಅರ್ಥಾತ್ ಸಾಪವಾದ. ಅದು ಪ್ರಾಮಾಣ್ಯವನ್ನು ಗ್ರಹಿಸದೆಯೂ ಇರಬಹುದು ಎನ್ನಲಾಗಿದೆ. ಆದರೆ ಪ್ರಥಮ ನಿರುಕ್ತಿಯಲ್ಲಿ ಅಪವಾದಾಭಾವವನ್ನು ಪ್ರಯೋಜಕವನ್ನಾಗಿ ಪರಿಗಣಿಸಿ 'ಸಾಕ್ಷಿಗೆ ಪ್ರಾಮಾಣ್ಯಗ್ರಾಹಕತ್ವವು ನಿಯತ' ಎನ್ನಲಾಗಿದೆ. ಹೀಗೆ ಈ ನಿರುಕ್ತಿಯು ತತ್ತ್ವನಿರ್ಣಯ ಟೀಕಾನುಸಾರಿಯಲ್ಲವಾದ ಕಾರಣ ಇನ್ನೊಂದು ನಿರುಕ್ತಿಯನ್ನು ಹೇಳಲಾಗಿದೆ.

ಹೀಗೆ ದ್ವಿತೀಯ ನಿರುಕ್ತಿಗೆ ಮೂರು ರೀತಿಯ ಸಾಂಗತ್ಯವನ್ನು ರಾಯರು ನ್ಯಾಯದೀಪದಲ್ಲಿ ತೋರಿಸಿದ್ದಾರೆ.

## ದ್ವಿತೀಯ ಸ್ವತಸ್ತ್ವಪರಿಷ್ಕಾರ

**यद्वा तत्तज्ज्ञानप्रामाण्यस्य ग्राह्यप्रामाण्याश्रयतत्तज्ज्ञानविषयक साक्षिज्ञानविषयत्वयोग्यत्वं स्वतस्त्वं । योग्यत्वं च साक्षिनिष्ठां सहजां ग्रहणशक्तिं प्रति स्वविषयज्ञानद्वाराऽवच्छेदकत्वम् ।**

ಹಿಂದಿನ ಲಕ್ಷಣ ಫಲೋಪದಾನಾಪೇಕ್ಷಯಾ. ಈ ಎರಡನೆಯ ಲಕ್ಷಣ ಯೋಗ್ಯತಾಪೇಕ್ಷಯಾ. ಫಲ ಎಂದರೆ ಪ್ರಾಮಾಣ್ಯಜ್ಞಾನ. ಸಾಕ್ಷಿಯಿಂದ ಜ್ಞಾನದ ಜ್ಞಾನ ಬಂದಾಗ ಪ್ರಾಮಾಣ್ಯದ ಜ್ಞಾನವೂ ಬರುತ್ತದೆ, ಎಂದು ಮೊದಲನೆಯ ಲಕ್ಷಣದ ಅರ್ಥ. ಆದರೆ, ಈ ಪಕ್ಷದಲ್ಲಿ 'ಅಪ್ರಾಮಾಣ್ಯ ಸಂದೇಹಾದಿರೂಪವಾದ ಪ್ರತಿಬಂಧಕ ಇಲ್ಲದಿರುವಾಗ' ಎಂಬ ನಿಬಂಧನೆಯ ಅಗತ್ಯವಿದೆ. ಈಗಿನ, ಎರಡನೆಯ ಲಕ್ಷಣದಲ್ಲಿ ಅದರ ಅಗತ್ಯವಿಲ್ಲ. ಈ ಲಕ್ಷಣ, ಪ್ರಾಮಾಣ್ಯವು ಸಾಕ್ಷಿಗ್ರಹಣ

ಯೋಗ್ಯವಾಗಿದೆ ಎನ್ನುತ್ತದೆ. ಪ್ರತಿಬಂಧಕ ಇದ್ದಾಗಲೂ ಅಂತಹ ಯೋಗ್ಯತೆಯು ಸಾಕ್ಷಿಗೆ ಇದ್ದೇ ಇದೆ. ಆದ್ದರಿಂದ 'ಪ್ರತಿಬಂಧಕ ಇಲ್ಲದಿರುವಾಗ' ಎಂಬ ನಿಬಂಧನೆಯ ಅಗತ್ಯ ಈ ಲಕ್ಷಣದಲ್ಲಿ ಇಲ್ಲ.

**ಲಕ್ಷಣದ ಅರ್ಥ**–ಅಥವಾ, ಪ್ರತಿಯೊಂದು ಜ್ಞಾನದ ಪ್ರಾಮಾಣ್ಯವೂ ಆ ಜ್ಞಾನವನ್ನು ವಿಷಯೀಕರಿಸುವ ಸಾಕ್ಷಿಜ್ಞಾನಕ್ಕೆ ವಿಷಯವಾಗುವುದಕ್ಕೆ ಯೋಗ್ಯವಾಗಿದೆ. ಇದನ್ನು ಪರತಸ್ತ್ವವಾದಿಗಳು ಒಪ್ಪಿಲ್ಲ. ಅವರ ಮತದಂತೆ ಸಾಮಾನ್ಯತಃ ಅನುವ್ಯವಸಾಯಕ್ಕೆ (ಸಾಕ್ಷಿಜ್ಞಾನಕ್ಕೆ) ಪ್ರಾಮಾಣ್ಯವು ವಿಷಯವೇ ಅಲ್ಲ. ಅಂದಮೇಲೆ ಪ್ರಾಮಾಣ್ಯದಲ್ಲಿ ಈ ಲಕ್ಷಣದಲ್ಲಿ ವಿವಕ್ಷಿತವಾದ ಸಾಕ್ಷಿಜ್ಞಾನ ವಿಷಯತ್ವ–ಯೋಗ್ಯತ್ವವೂ ಇಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಪ್ರಾಮಾಣ್ಯದಲ್ಲಿ ಸಾಕ್ಷಿವಿಷಯತ್ವಯೋಗ್ಯತೆ ಎಂದರೆ ಸಾಕ್ಷಿಯಲ್ಲಿ ಸಹಜವಾಗಿರುವ ಜ್ಞಾನ ಗ್ರಹಣಶಕ್ತಿಗೆ ಜ್ಞಾನದ್ವಾರಾ ಅವಚ್ಛೇದಕವಾಗಿರುವುದು. ಅರ್ಥಾತ್ ಆ ಶಕ್ತಿಯನ್ನು 'ಪ್ರಾಮಾಣ್ಯ ಗ್ರಹಣಶಕ್ತಿ' ಎಂದೂ ಹೇಳಬಹುದು. ಆಗ ಆ ಶಕ್ತಿಯಲ್ಲಿ ಪ್ರಾಮಾಣ್ಯವು ಅವಚ್ಛೇದಕವಾಗುತ್ತದೆ.

## ವಿಶೇಷಣ ಸಾರ್ಥಕ್ಯ ಕಥನ

**1. ಅತ್ರ 'ಯೋಗ್ಯತ್ವಮ್' ಇತ್ಯುಕ್ತ್ಯಾ, ಯಥೋಕ್ತವಿಶೇಷಣೇನಾಪಿ ಸಾಕ್ಷಿಜ್ಞಾನೇನ ಪ್ರತಿಬಂಧದಶಾಯಾಂ ಪ್ರಾಮಾಣ್ಯಾಗ್ರಹಣಾದ್ ಬಾಧ ಇತಿ ಶಂಕಾ,**

**2. ಸಾಕ್ಷೀತ್ಯುಕ್ತ್ಯಾ 'ಘಟಜ್ಞಾನಮಸ್ತಿ' ಇತ್ಯಾದಿ ಶಬ್ದಜನ್ಯಂ ಘಟಜ್ಞಾನ–ವಿಷಯಕ–ಜ್ಞಾನಂ ಪ್ರತಿ,**

**ತಥಾ, ಜ್ಞಾನಾಂಶೇ ಅಲೌಕಿಕಂ ಸಾಮಾನ್ಯಪ್ರತ್ಯಾಸತ್ತಿಜನ್ಯಂ ಜ್ಞಾನಂ ಚ ಪ್ರತಿ, ಪ್ರಾಮಾಣ್ಯಸ್ಯ ಕದಾಪ್ಯವಿಷಯತಯಾ ಯೋಗ್ಯತ್ವಂ ನೇತಿ ಬಾಧಃ ಇತಿ ಶಂಕಾ,**

**3. ಗ್ರಾಹ್ಯಪ್ರಾಮಾಣ್ಯಾಶ್ರಯ–ತತ್ತಜ್ಜ್ಞಾನವಿಷಯಕೇತ್ಯುಕ್ತ್ಯಾ ಘಟಜ್ಞಾನಂ ಗೃಹ್ಣತಾ ಸಾಕ್ಷಿಣಾ ಪಟಜ್ಞಾನಪ್ರಾಮಾಣ್ಯಸ್ಯ ಕದಾಪಿ ಅಗ್ರಹೇಣ ಯೋಗ್ಯತ್ವಂ ನೇತಿ ಬಾಧ ಇತಿ ಶಂಕಾ ಚ**

**ನಿರಸ್ತೇತಿ ಪೂರ್ವವದ್ ಯುಕ್ತಮಿತಿ ಭಾವಃ ॥**

ಇಲ್ಲಿ ಮೂರು ಪದಗಳಿಗೆ ಕೃತ್ಯವನ್ನು ಹೇಳಲಾಗಿದೆ.

1. 'ಸಾಕ್ಷಿಜ್ಞಾನವಿಷಯತ್ವ–ಯೋಗ್ಯತ್ವಮ್'. ಇಲ್ಲಿ ಯೋಗ್ಯತ್ವವನ್ನು ಬಿಟ್ಟರೆ 'ಸಾಕ್ಷಿಜ್ಞಾನ ವಿಷಯತ್ವಮ್' ಎಂದಾಗುತ್ತದೆ. ಆದರೆ, ಜ್ಞಾನಗ್ರಾಹಕವಾದರೂ ಸಾಕ್ಷಿಯು ಪ್ರತಿಬಂಧಕ ಇದ್ದಾಗ

(ದೋಷಶಂಕಾ) ಪ್ರಾಮಾಣ್ಯವನ್ನು ಗ್ರಹಣೆ ಮಾಡುವುದಿಲ್ಲ. ಆದ್ದರಿಂದ ಬಾಧ ಬರುತ್ತಿತ್ತು. ಯೋಗ್ಯತ್ವವನ್ನು ವಿವಕ್ಷೆ ಮಾಡಿದಾಗ, ಆಗಲೂ ಸಾಕ್ಷಿವಿಷಯತ್ವ ಯೋಗ್ಯತೆಯು ಪ್ರಾಮಾಣ್ಯದಲ್ಲಿ ಇರುವುದರಿಂದ ಬಾಧದೋಷ ಇಲ್ಲ.

2. 'ಜ್ಞಾನವಿಷಯಕ ಸಾಕ್ಷಿ' ಎನ್ನುವ ಬದಲು 'ಜ್ಞಾನವಿಷಯಕ ಜ್ಞಾನ' ಎಂದಿದ್ದರೆ ಬಾಧ ಬರುತ್ತದೆ. 'ತವ ಘಟಜ್ಞಾನಮಸ್ತಿ' ಇತ್ಯಾದಿಯಾದ ಶಬ್ದದಿಂದ ಹುಟ್ಟಿದ ಘಟಜ್ಞಾನವಿಷಯಕ ಜ್ಞಾನದಲ್ಲಿ ಪ್ರಾಮಾಣ್ಯವು ಎಂದೂ ವಿಷಯವಾಗಿಲ್ಲ. ಆದರಿಂದ ಗ್ರಹಣಯೋಗ್ಯತೆಯೇ ಪ್ರಾಮಾಣ್ಯಕ್ಕೆ ಇಲ್ಲ.

ಅ. ಆದರಂತೆ, ಜ್ಞಾನಾಂಶದಲ್ಲಿ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತಿಯಿಂದ ಹುಟ್ಟಿರುವ 'ಜ್ಞಾನವಾನಹಮ್' ಎಂಬ ಅನುವ್ಯವಸಾಯದಲ್ಲಿ ಎಂದೂ ಪ್ರಾಮಾಣ್ಯವು ವಿಷಯವಾಗದ ಕಾರಣ ತದ್ವಿಷಯತ್ವ ಯೋಗ್ಯತ್ವವು ಪ್ರಾಮಾಣ್ಯದಲ್ಲಿ ಇಲ್ಲ. ಆದರಿಂದಾಗಿ ಬಾಧ ಬರುತ್ತಿತ್ತು.

ಸಾಕ್ಷಿಪದವನ್ನು ಕೊಟ್ಟಾಗ ಈ ಎರಡೂ ಬಾಧಗಳು ಪರಿಹಾರವಾಗುತ್ತವೆ. ಸಾಕ್ಷಿಪದಕ್ಕೆ ಒಂದು ವಿವರಣೆ– ವ್ಯವಸಾಯ–ಪ್ರಕಾರ–ಪ್ರಕಾರಕತಯಾ ತದ್ವದ್ ವಿಶೇಷ್ಯಕತಯಾ ಚ ವ್ಯವಸಾಯ ಗ್ರಾಹಕ ಅನುವ್ಯವಸಾಯ, ಎಂದು. ಪೂರ್ವೋಕ್ತ ಶಬ್ದಜನ್ಯ ಜ್ಞಾನದಲ್ಲಿ ಘಟಜ್ಞಾನವು ಆ ರೀತಿಯಲ್ಲಿ ವಿಷಯವಾಗಿಲ್ಲ. ಆದ್ದರಿಂದ ಅದು ವಿವಕ್ಷಿತ ಸಾಕ್ಷಿಜ್ಞಾನ ಅಲ್ಲ. ಆದರಿಂದಾಗಿ ಮೊದಲನೆಯ ಬಾಧದೋಷ ಇಲ್ಲ.

ಸಾಕ್ಷಿಪದಕ್ಕೆ ಇನ್ನೊಂದು ವಿವರಣೆ– 'ಜ್ಞಾನಾಂಶೇ, ಲೌಕಿಕ ಪ್ರತ್ಯಕ್ಷ' ಎಂದು. 'ಜ್ಞಾನವಾನಹಮ್' ಎಂಬ ಪ್ರತ್ಯಕ್ಷವು ಜ್ಞಾನಾಂಶದಲ್ಲಿ ಸಾಮಾನ್ಯ–ಲಕ್ಷಣಾ ಸನ್ನಿಕರ್ಷದಿಂದ ಜನ್ಯವಾಗಿದೆ. ಲೌಕಿಕ ಸನ್ನಿಕರ್ಷ ಜನ್ಯವಲ್ಲ. ಆದ್ದರಿಂದ ಬಾಧ ಇಲ್ಲ.

3. 'ಗ್ರಾಹ್ಯಪ್ರಾಮಾಣ್ಯಾಶ್ರಯ–ತತ್ತದ್–ಜ್ಞಾನ' ಎನ್ನದೆ 'ಜ್ಞಾನವಿಷಯಕ ಸಾಕ್ಷಿ' ಎಂದಿಷ್ಟೇ ಹೇಳಿದ್ದರೆ ಘಟಜ್ಞಾನ ವಿಷಯಕ ಸಾಕ್ಷಿಯಲ್ಲಿ ಪಟಜ್ಞಾನಗತವಾದ ಪ್ರಾಮಾಣ್ಯವು ವಿಷಯವಾಗಿಲ್ಲದ ಕಾರಣ ಬಾಧದೋಷ ಬರುತ್ತಿತ್ತು. ಯಥೋಕ್ತ ವಿಶೇಷಣವನ್ನು ಜ್ಞಾನದಲ್ಲಿ ಕೊಟ್ಟಾಗ ತತ್ತದ್–ಜ್ಞಾನಗ್ರಾಹಕ ಸಾಕ್ಷಿಯಲ್ಲಿ ತತ್ತದ್–ಜ್ಞಾನಗತ ಪ್ರಾಮಾಣ್ಯವು ವಿಷಯತ್ವಯೋಗ್ಯ ವಾಗಬೇಕು, ಎಂದು ಅರ್ಥ ಬರುತ್ತದೆ. ಆಗ ಬಾಧಪರಿಹಾರವಾಗುತ್ತದೆ.

(ಈ ಕೃತ್ಯಗಳು ಪ್ರಥಮ ನಿರುಕ್ತಿಯಲ್ಲಿ ಮೂಲದಲ್ಲೇ ಬಂದಿವೆ)

## ಜ್ಞಾನಾದಿ ಪದಗಳ ಪ್ರಯೋಜನ

**ಅತ್ರಾಪಿ ಜ್ಞಾನಪದಂ ಪೂರ್ವವತ್ ಸ್ವರೂಪೇಂದ್ರಿಯ–ಭ್ರಮನಿರಸಾಯ। ಸಾಕ್ಷಿತ್ವಮಪಿ–ವ್ಯವಸಾಯ–ಪ್ರಕಾರ–ಪ್ರಕಾರಕತಯಾ, ತತ್–ಪ್ರಕಾರವದ್–ವಿಶೇಷ್ಯಕತಯಾ ಚ ತದ್ವಿಷಯಕ–ಪ್ರತ್ಯಕ್ಷತ್ವರೂಪಂ ವಾ, ಜ್ಞಾನಾಂಶೇ**

**ಲೌಕಿಕ–ಪ್ರತ್ಯಕ್ಷತ್ವರೂಪಂ ವಾ ಅನುವ್ಯವಸಾಯತ್ವಮೇವ ಇತಿ ಭಾವಃ। ಅತ್ರಾಪಿ ಪೂರ್ವತ್ರೇವ ಗ್ರಾಹ್ಯಪ್ರಾಮಾಣ್ಯಾಶ್ರಯ-ಇತ್ಯಂಶಕೃತ್ಯಂ ಬೋಧ್ಯಮ್ ।**

ಈ ನಿರುಕ್ತಿಯಲ್ಲಿ 'ಸಾಕ್ಷಿಜ್ಞಾನ' ಎಂಬಲ್ಲಿ ಜ್ಞಾನಪದದಿಂದ ಸಾಕ್ಷೀಂದ್ರಿಯವನ್ನು ನಿರಾಸಮಾಡಲಾಗಿದೆ. ಅದನ್ನು ತಾರ್ಕಿಕರು ಅಂಗೀಕರಿಸಿಲ್ಲ. ಅದಕ್ಕಾಗಿ ವ್ಯವಸಾಯ ವಿಷಯಕವಾದ ಅನುವ್ಯವಸಾಯ ಜ್ಞಾನವೇ ಇಲ್ಲಿ ವಿವಕ್ಷಿತ. ಅದಕ್ಕಾಗಿ ಜ್ಞಾನಪದ ಅಗತ್ಯವಾಗಿದೆ.

ಸಾಕ್ಷಿ ಎಂದರೆ ಹಿಂದೆ ಹೇಳಿದಂತೆಯೇ ಎರಡೂ ರೀತಿಯ ವಿವರಣೆಗಳನ್ನು ಪರಿಗಣಿಸಬೇಕು.

ಜ್ಞಾನದಲ್ಲಿ 'ತತ್ವತ್' ಎಂದಿಷ್ಟೇ ವಿಶೇಷಣ ಕೊಟ್ಟರೆ, ಅಪ್ರಮಾಣರೂಪಜ್ಞಾನವೂ ಸಂಗ್ರಹ ವಾಗುತ್ತದೆ. ಆಗ ತದ್ವಿಷಯಕವಾದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯತ್ವಯೋಗ್ಯವಲ್ಲ, ಬಾಧದೋಷ ಬರುತ್ತಿತ್ತು. ಅದಕ್ಕಾಗಿ ಹಿಂದಿನಂತೆಯೇ ಗ್ರಾಹ್ಯಪ್ರಾಮಾಣ್ಯಾಶ್ರಯ ಎಂಬ ವಿಶೇಷಣವನ್ನೂ ಸೇರಿಸಬೇಕು.

## ಯೋಗ್ಯತ್ವನಿರುಕ್ತಿ ಏಕೆ?

**ನನು ಅತ್ರ–ಸ್ವಾಶ್ರಯ ಜ್ಞಾನಗ್ರಾಹಕ–ಗ್ರಾಹ್ಯತ್ವಯೋಗ್ಯತ್ವಂ ಸ್ವತಸ್ತ್ವಂ, ಇತ್ಯುಕ್ತಂ ಸ್ಯಾತ್ । ತಚ್ಚ ಅಪ್ರಾಮಾಣ್ಯಸ್ಯಾಪಿ ಅಸ್ತಿ।**

**ನ ಚ ತತ್ರ, ಜ್ಞಾನಂ ಸಾಕ್ಷಿವೇದ್ಯಮ್, ಅಪ್ರಾಮಾಣ್ಯಂ ತು ಅನುಮೇಯಮ್ ಇತಿ ನ ದೋಷಃ, ಇತಿ ಯುಕ್ತಮ್ । ಪ್ರಥಮಂ ಪ್ರಾಮಾಣ್ಯಾನುಮಿತ್ಯ ಸಂಭವವಾದೇ ವಿಸಂವಾದಾಹಿತ–ಶಕ್ತಿಕೇನ ಸಾಕ್ಷಿಣೈವ ಅಪ್ರಾಮಾಣ್ಯ ಗ್ರಹಣಸ್ಯ ವಕ್ಷ್ಯಮಾಣತ್ವಾತ್, ಇತ್ಯತೋ ವಾ,**

**ಸಾಕ್ಷಿವಿಷಯತ್ವಯೋಗ್ಯತ್ವಂ ಯದಿ ಸಾಕ್ಷಿಜನ್ಯವ್ಯವಹಾರಯೋಗಿತ್ವಾದಿರೂಪಂ ತದಾ ಏತತ್ ಫಲೋಪಧಾನಪರ್ಯವಸನ್ನಮಿತಿ ನ ಪ್ರತಿಬಂಧಕಾಲೀನ– ಪ್ರಾಮಾಣ್ಯ–ಸ್ವತಸ್ತ್ವಲಾಭಃ,**

**ಇತ್ಯತೋ ವಾ ಆಹ–ಯೋಗ್ಯತ್ವಂ ಚೇತಿ ॥**

ಈ ಎರಡನೆಯ ನಿರುಕ್ತಿಯ ಒಟ್ಟು ಫಲಿತಾರ್ಥ–ಪ್ರಾಮಾಣ್ಯವು ಸ್ವಾಶ್ರಯವಾದ ಜ್ಞಾನಕ್ಕೆ ಯಾವುದು ಗ್ರಾಹಕವೋ ಅದರಿಂದ ಗ್ರಹಣ–ಯೋಗ್ಯವಾಗಿದೆ, ಎಂದು. ಇದೇ ಪ್ರಾಮಾಣ್ಯಸ್ವತಸ್ತ್ವ. ಇದು ಅಪ್ರಾಮಾಣ್ಯದಲ್ಲೂ ಇದೆ.

ಅಪ್ರಾಮಾಣ್ಯದಲ್ಲಿ ಇಂತಹ ಸ್ವತಸ್ತ್ವವು ಇಲ್ಲ. ಏಕೆಂದರೆ, ಭ್ರಮೆ ಬಂದಾಗ ಆ ಭ್ರಮೆ ಮಾತ್ರ

ಸಾಕ್ಷಿವೇದ್ಯ, ಅದರಲ್ಲಿರುವ ಅಪ್ರಾಮಾಣ್ಯವು ಅನುಮಾನ ವೇದ್ಯ. ಆದ್ದರಿಂದ ಅದರಲ್ಲಿ ಸ್ವತಸ್ತ್ವ ಹೇಗೆ?

ಈ ಉತ್ತರ ಸಮಂಜಸವಲ್ಲ. ಮುಂದಿನ ಎಂಟನೆಯ ಪ್ರಕರಣ 'ಪ್ರಥಮ–ಪ್ರಾಮಾಣ್ಯಾನುಮಿತಿ–ಅಸಂಭವವಾದ'. ಅಲ್ಲಿ ಅಪ್ರಾಮಾಣ್ಯವೂ ಸಾಕ್ಷಿಯಿಂದಲೇ ಗೃಹೀತವಾಗುತ್ತದೆ, ಎಂದು ನಿರೂಪಿಸಲಾಗಿದೆ. ಆದರೆ, ಸಾಕ್ಷಿಯಲ್ಲಿರುವ ಅಪ್ರಾಮಾಣ್ಯಗ್ರಹಣ ಶಕ್ತಿ ವಿಸಂವಾದದಿಂದ ಆಹಿತವಾದುದು. ಪ್ರಾಮಾಣ್ಯಗ್ರಹಣ–ಶಕ್ತಿಯಂತೆ ಸ್ವಾಭಾವಿಕವಲ್ಲ. ಹೀಗೆ ಆ ಪ್ರಕರಣದಲ್ಲಿ ಹೇಳಲಾಗಿದೆ.

**(ಎಂಟನೇ ಪ್ರಕರಣದಲ್ಲಿ ನಿರೂಪಣೆ ಹೀಗಿದೆ–ಮನ್ಮತೇ ತು ಉತ್ಸರ್ಗತಃ ಪ್ರಾಮಾಣ್ಯಂ ಗೃಹ್ಣನ್ ಅಪಿ ಸಾಕ್ಷೀ ಬಾಧಾನಂತರಮ್ ಉಕ್ತರೀತ್ಯಾ ವಿಸಂವಾದ–ಲಕ್ಷಣಾದ್ ಅಪವಾದಾತ್ ಅಪ್ರಾಮಾಣ್ಯಮಪಿ ಗೃಹ್ಣಾತಿ।)**

ಹೀಗೆ ಅಪ್ರಾಮಾಣ್ಯವೂ ಸಾಕ್ಷಿಗ್ರಾಹ್ಯವಾದುದರಿಂದ ಅದರಲ್ಲಿ ಸ್ವತಸ್ತ್ವ–ನಿರುಕ್ತಿಗೆ ಅತಿವ್ಯಾಪ್ತಿ. ಈ ಕಾರಣಕ್ಕಾಗಿ ಪ್ರಕೃತ ನಿರುಕ್ತಿಯಲ್ಲಿರುವ ಯೋಗ್ಯತ್ವವನ್ನು ಮೂಲದಲ್ಲಿ ನಿರೂಪಿಸಲಾಗಿದೆ.

ಅಥವಾ, ಸಾಕ್ಷಿವಿಷಯತ್ವ ಯೋಗ್ಯತ್ವವೆಂದರೆ, ಸಾಕ್ಷಿಯಿಂದ ಆಗುವ ವ್ಯವಹಾರ ಯೋಗಿತ್ವ. ಸಾಕ್ಷಿಯಿಂದ ಪ್ರಾಮಾಣ್ಯದ ಜ್ಞಾನ ಬಂದರೆ 'ಇದಂ ಪ್ರಮಾಣಂ' ಎಂದು ಶಬ್ದವ್ಯವಹಾರವನ್ನು ಮಾಡುತ್ತೇವೆ. ಅಂದರೆ ಪ್ರಾಮಾಣ್ಯವು ವ್ಯವಹಾರಕ್ಕೆ ವಿಷಯವಾಗುತ್ತದೆ. ಇದೇ ಪ್ರಾಮಾಣ್ಯದಲ್ಲಿ ಸಾಕ್ಷಿವಿಷಯತ್ವಯೋಗ್ಯತೆ ಎನ್ನುವುದು ಯುಕ್ತವಲ್ಲ. ಹೀಗೆ ಹೇಳಿದರೆ ಈ ನಿರುಕ್ತಿಯೂ ಪ್ರಥಮ ನಿರುಕ್ತಿಯಂತೆ ಫಲೋಪಧಾನದಲ್ಲೇ ಪರ್ಯವಸಾನ ಹೊಂದಿದಂತಾಗುತ್ತದೆ. ವ್ಯವಹಾರವು ಸಾಕ್ಷಿರೂಪವಾದ ಪ್ರಾಮಾಣ್ಯಜ್ಞಾನದ ಫಲ. ಹೀಗೆ, ಈ ಲಕ್ಷಣವೂ ಫಲಪರ್ಯವಸಾಯಿಯಾದರೆ, ಹಿಂದಿನ ಲಕ್ಷಣದಂತೆ, ಇದೂ ಪ್ರಾಮಾಣ್ಯಗ್ರಹ–ಪ್ರತಿಬಂಧಕವಿದ್ದಾಗ ಪ್ರಾಮಾಣ್ಯದಲ್ಲಿ ಸಮನ್ವಯಗೊಳ್ಳುವುದಿಲ್ಲ. ಏಕೆಂದರೆ, ಆಗ ಪ್ರಾಮಾಣ್ಯಜ್ಞಾನವು ಇಲ್ಲದಿರುವುದರಿಂದ ಅದರಲ್ಲಿ ವ್ಯವಹಾರರೂಪವಾದ ಫಲವು ಬರುವುದಿಲ್ಲ. ಹೀಗಾಗಿ ಅಂತಹ ಪ್ರಾಮಾಣ್ಯದಲ್ಲಿ ಸ್ವತಸ್ತ್ವವು ಸಿದ್ಧಿಸುವುದಿಲ್ಲ. ಈ ಆಕ್ಷೇಪದ ಪರಿಹಾರಕ್ಕಾಗಿಯೂ ಯೋಗ್ಯತೆಯನ್ನು ಮೂಲದಲ್ಲಿ ಪರಿಷ್ಕರಿಸಲಾಗಿದೆ.

## ಯೋಗ್ಯತೆಯ ವಿವರಣೆ

**ಸಹಜಾಂ=ಸ್ವಾಭಾವಿಕೀಂ ವಿಷಯೀಕರಣ ಶಕ್ತಿಂ ಪ್ರತಿ, ಸ್ವಸ್ಯ=ಸಾಕ್ಷಿಣಃ, ತಚ್ಛಕ್ತೇಃ ವಾ ಯೋ ವಿಷಯಃ=ಗ್ರಾಹ್ಯಪ್ರಾಮಾಣ್ಯಾಶ್ರಯ ರೂಪಂ ಜ್ಞಾನಂ, ತದ್ವಾರಾ ಅವಚ್ಛೇದಕತ್ವಮ್=ವಿಷಯತಯಾ ವ್ಯಾವರ್ತಕತ್ವಮ್।**

**ಜ್ಞಾನಗ್ರಹಣ ಶಕ್ತಿರಿತಿವತ್ ಪ್ರಾಮಾಣ್ಯಗ್ರಹಣ-ಶಕ್ತಿರಿತಿ ವ್ಯವಹಾರಾ ಪಾದಕತ್ವಮೇವ ಪ್ರಾಮಾಣ್ಯಸ್ಯ ಸಾಕ್ಷಿವಿಷಯತ್ವ-ಯೋಗ್ಯತ್ವಮ್, ಇತ್ಯರ್ಥಃ ।**

ಸಹಜಾಂ ಎಂದರೆ ಸಾಕ್ಷಿಯಲ್ಲಿರುವ ವಿಷಯೀಕರಣ ಶಕ್ತಿಯು ಏನು ಸ್ವಾಭಾವಿಕವಾಗಿಯೇ ಇದೆಯೋ ಅಂತಹ ಶಕ್ತಿಗೆ, 'ಸ್ವವಿಷಯಜ್ಞಾನದ್ವಾರಾ' ಎಂಬಲ್ಲಿ 'ಸ್ವಸ್ಯ ವಿಷಯಃ' ಎಂದು ಷಷ್ಠೀಸಮಾಸ. ಸ್ವಸ್ಯ=ಸಾಕ್ಷಿಗೆ ಅಥವಾ ಸಾಕ್ಷಿಯಲ್ಲಿರುವ ಶಕ್ತಿಗೆ ವಿಷಯವಾದ ಗ್ರಾಹ್ಯಪ್ರಾಮಾಣ್ಯಕ್ಕೆ ಆಶ್ರಯವಾದ ಜ್ಞಾನ. ಆ ಜ್ಞಾನದ್ವಾರಾ 'ಅವಚ್ಛೇದಕ' ಎಂದರೆ ವಿಷಯತಯಾ ವ್ಯಾವರ್ತಕ ವಾದುದು ಪ್ರಾಮಾಣ್ಯ. ಪ್ರಾಮಾಣ್ಯದಲ್ಲಿರುವ ವ್ಯಾವರ್ತಕತ್ವವೇ ಸಾಕ್ಷಿವಿಷಯತ್ವ ಯೋಗ್ಯತ್ವ.

ಇದರ ತಾತ್ಪರ್ಯ-ಸಾಕ್ಷಿಯಲ್ಲಿರುವ ಶಕ್ತಿಯನ್ನು ಜ್ಞಾನಗ್ರಹಣಶಕ್ತಿ ಎಂದು ಕರೆಯಲಾಗುತ್ತದೆ. ಅದರಂತೆ ಆ ಶಕ್ತಿಯನ್ನು 'ಪ್ರಾಮಾಣ್ಯಗ್ರಹಣಶಕ್ತಿ' ಎಂದೂ ಕರೆಯಬಹುದು. ಬೇರೆ ಬೇರೆ ಪದಾರ್ಥಗಳಲ್ಲಿ ಬೇರೆ ಬೇರೆ ಶಕ್ತಿಗಳಿವೆ. ಇತರ ಶಕ್ತಿಗಳಿಂದ ಸಾಕ್ಷಿಗತ ಶಕ್ತಿಯನ್ನು ವಿಷಯತಯಾ ವ್ಯಾವೃತ್ತಿಗೊಳಿಸುವ ಧರ್ಮ ಪ್ರಾಮಾಣ್ಯ. ಹೀಗೆ ಪ್ರಾಮಾಣ್ಯದಲ್ಲಿರುವ ವ್ಯಾವರ್ತಕತ್ವವೇ ಸಾಕ್ಷಿ ವಿಷಯತ್ವಯೋಗ್ಯತ್ವ.

## ಜ್ಞಾನದ್ವಾರಾ ಎಂದರೆ

**ಸಾಕ್ಷಿಶಕ್ತಿಃ ಜ್ಞಾನದ್ವಾರೈವ (ತನ್ನಿಷ್ಠ) ಪ್ರಾಮಾಣ್ಯಂ ಗೃಹ್ಣಾತಿ, ನ ಸಾಕ್ಷಾತ್, ಯಥಾ ಪ್ರತ್ಯಕ್ಷಂ ವ್ಯಕ್ತಿದ್ವಾರೈವ ಜಾತಿಂ, ನ ಸಾಕ್ಷಾದಿತಿ ಸ್ವವಿಷಯ-ಜ್ಞಾನದ್ವಾರಾ, ಇತ್ಯುಕ್ತಮ್ ।**

**ಜ್ಞಾನಗ್ರಾಹಕ-ಏಕಶಕ್ತಿವಿಷಯತ್ವಂ ಪ್ರಾಮಾಣ್ಯಸ್ಯ ಸಾಕ್ಷಿವಿಷಯತ್ವ-ಯೋಗ್ಯತ್ವಮ್ । ನೈತದಪ್ರಾಮಾಣ್ಯೇ ಅಸ್ತಿ । ಭಿನ್ನಶಕ್ತಿ-ವಿಷಯತ್ವಾತ್, ಇತಿ ಅಗ್ರೇ ವ್ಯಕ್ತಮ್ ।**

'ಮೂಲದಲ್ಲಿ ಜ್ಞಾನದ್ವಾರಾ ಅವಚ್ಛೇದಕತ್ವಂ' ಎಂದಿದೆ. ಅದರ ಅಭಿಪ್ರಾಯ ಹೀಗೆ-ಸಾಕ್ಷಿಯಲ್ಲಿರುವ ಶಕ್ತಿಯು ಜ್ಞಾನದ ಜೊತೆಯಲ್ಲೇ ತದ್ಗತ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಜ್ಞಾನವನ್ನು ಬಿಟ್ಟು ಕೇವಲ ಪ್ರಾಮಾಣ್ಯವನ್ನು ಅದು ಗ್ರಹಿಸುವುದಿಲ್ಲ. ಅದಕ್ಕೆ ಉದಾಹರಣೆ ಪ್ರತ್ಯಕ್ಷ. ಪ್ರತ್ಯಕ್ಷವು ಘಟತ್ವಾದಿ ಜಾತಿಗಳನ್ನು ಮಾತ್ರ ಪ್ರತ್ಯೇಕವಾಗಿ ಗ್ರಹಿಸುವುದಿಲ್ಲ. ವ್ಯಕ್ತಿಗಳ ಜೊತೆಯಲ್ಲೇ ಅದು ಜಾತಿಯನ್ನು ಗ್ರಹಿಸುತ್ತದೆ. ಅದರಂತೆ ಸಾಕ್ಷಿಗತ ಶಕ್ತಿ. ಇದನ್ನೇ ಮೂಲದಲ್ಲಿ 'ಜ್ಞಾನದ್ವಾರಾ' ಎನ್ನಲಾಗಿದೆ.

ಸಾಕ್ಷಿಯಲ್ಲಿ ಸಹಜವಾಗಿರುವ ಜ್ಞಾನಗ್ರಹಣ ಶಕ್ತಿಯಿಂದಲೇ ಜ್ಞಾನಗತವಾದ ಪ್ರಾಮಾಣ್ಯವೂ

ಗೃಹೀತವಾಗುತ್ತದೆ. ಆದ್ದರಿಂದ ಜ್ಞಾನಗ್ರಾಹಕ–ಏಕಶಕ್ತಿ–ವಿಷಯತ್ವವೇ ಪ್ರಾಮಾಣ್ಯದಲ್ಲಿ ಸಾಕ್ಷಿ ಗ್ರಹಣಯೋಗ್ಯತ್ವ. ಪ್ರಾಮಾಣ್ಯದಲ್ಲಿರುವ ಇಂತಹ ಯೋಗ್ಯತೆ ಅಪ್ರಾಮಾಣ್ಯದಲ್ಲಿ ಇಲ್ಲ. ಏಕೆಂದರೆ, ಸಾಕ್ಷಿಯಲ್ಲಿರುವ ಅಪ್ರಾಮಾಣ್ಯಗ್ರಹಣಶಕ್ತಿಯು ಸಹಜವಲ್ಲ, ದೋಷಶಂಕಾದಿಗಳಿಂದ ಆಹಿತ ವಾದುದು. ಆದ್ದರಿಂದಲೇ ಜ್ಞಾನಗ್ರಾಹಕ ಸ್ವಾಭಾವಿಕಶಕ್ತಿಗಿಂತ ಅದು ಭಿನ್ನವಾದುದು. ಹೀಗಾಗಿ ಅಪ್ರಾಮಾಣ್ಯದಲ್ಲಿ ಸ್ವಾಭಾವಿಕಶಕ್ತಿಂ ಪ್ರತಿ ಅವಚ್ಛೇದಕತ್ವರೂಪವಾದ ಯೋಗ್ಯತೆ ಇಲ್ಲ. ಇದನ್ನು ಮೂಲದಲ್ಲಿ ಎಂಟನೆಯ ಪ್ರಕರಣದಲ್ಲಿ ಸ್ಪಷ್ಟಪಡಿಸಲಾಗಿದೆ.

## ಶ್ರೀವಿಜಯೀಂದ್ರರು ವ್ಯಾಖ್ಯಾನಿಸಿದ ಯೋಗ್ಯತ್ವ

**ಗುರುಪಾದಾಸ್ತು–ಸ್ವಪದೇನ ಪ್ರಾಮಾಣ್ಯಮ್ । ಬಹುವ್ರೀಹಿ–ಸಮಾಸಃ । ಸ್ವವಿಷಯಕಂ ಯತ್ ಜ್ಞಾನಂ ಸಾಕ್ಷ್ಯೇವ । ತನ್ನಿಷ್ಠಶಕ್ತಿಂ ಪ್ರತಿ ಪ್ರಾಮಾಣ್ಯಸ್ಯ ನ ಸಾಕ್ಷಾದ್ವಿಷಯತ್ವಮ್, ಇತ್ಯತಃ ಸ್ವವಿಷಯ 'ಜ್ಞಾನದ್ವಾರಾ' ಇತ್ಯುಕ್ತಂ, ಇತ್ಯಾಹುಃ ।**

'ಸ್ವವಿಷಯ ಜ್ಞಾನದ್ವಾರಾ' ಎಂಬ ಮೂಲದ ಪದವನ್ನು ವ್ಯಾಖ್ಯಾನಿಸುವಾಗ ರಾಯರು ಸ್ವಪದದಿಂದ ಸಾಕ್ಷಿಯನ್ನು ಗ್ರಹಣ ಮಾಡಿದ್ದಾರೆ. ಶ್ರೀವಿಜಯೀಂದ್ರರು ಈ ಗ್ರಂಥದ ವ್ಯಾಖ್ಯಾನ ದಲ್ಲಿ ಸ್ವಪದದಿಂದ ಪ್ರಾಮಾಣ್ಯವನ್ನು ತೆಗೆದುಕೊಂಡಿದ್ದಾರೆ. ಹಾಗೆ ವಿವಕ್ಷೆ ಮಾಡಿದಾಗ 'ಸ್ವವಿಷಯಪದಕ್ಕೆ' ಸ್ವಂ=ಪ್ರಾಮಾಣ್ಯಂ ವಿಷಯಃ ಯಸ್ಯ ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕು. ಆಗ ಪ್ರಾಮಾಣ್ಯವಿಷಯಕವಾದ ಸಾಕ್ಷಿ, ಎಂದು ಅರ್ಥವಾಗುತ್ತದೆ. 'ಸ್ವವಿಷಯಂ ಚ ತತ್ ಜ್ಞಾನಂ ಚ' ಎಂದು ಕರ್ಮಧಾರಯ ಸಮಾಸ ಮಾಡಿದಾಗ 'ಸಾಕ್ಷಿಜ್ಞಾನ' ಎಂದು ಅರ್ಥ. ಸಾಕ್ಷಿನಿಷ್ಠವಾದ ಶಕ್ತಿಗೆ ಸಾಕ್ಷಿಜ್ಞಾನದ್ವಾರಾ ಪ್ರಾಮಾಣ್ಯವು ವಿಷಯ ಎಂದು ಅರ್ಥ.

ಇದಕ್ಕೆ ಒಂದು ನಿದರ್ಶನವನ್ನು ವಿಜಯೀಂದ್ರರು ಕೊಟ್ಟಿದ್ದಾರೆ–

**'ಯಥಾ ಕರತಲಾದೇಃ ದಾಹವಿಷಯತ್ವಂ ದಾಹಶಕ್ತಿಪ್ರಯೋಜ್ಯಂ ಇತಿ ಕರತಲಾದಿಕಮಪಿ ದಾಹದ್ವಾರಾ ತಚ್ಛಕ್ತಿವಿಷಯಃ । ತಥಾ ಪ್ರಾಮಾಣ್ಯಸ್ಯ ಸಾಕ್ಷಿದ್ವಾರಾ ತನ್ನಿಷ್ಠಸಹಜಶಕ್ತಿ ವಿಷಯತ್ವಮ್' ।**

ಅಂಗೈಗೆ ದಾಹವಿಷಯತ್ವ ಬರಬೇಕಾದರೆ ಬೆಂಕಿಯಲ್ಲಿ ದಾಹಶಕ್ತಿ ಇರಬೇಕು. ಬೆಂಕಿಯಲ್ಲಿ ಸುಡುವ ಶಕ್ತಿ ಇದ್ದರೆ ಮಾತ್ರ ಅಂಗೈ ದಾಹವಿಷಯವಾಗುತ್ತದೆ. ಅರ್ಥಾತ್ ಅಂಗೈಯಲ್ಲಿರುವ ದಾಹವಿಷಯತ್ವವು ವಹ್ನಿಗತಶಕ್ತಿ ಪ್ರಯೋಜ್ಯ. ಆದ್ದರಿಂದ, ದಾಹದ್ವಾರಾ ಅಂಗೈಯು ಶಕ್ತಿವಿಷಯವಾಗುತ್ತದೆ. ಅದರಂತೆ ಪ್ರಾಮಾಣ್ಯದಲ್ಲಿ ಸಾಕ್ಷಿಜ್ಞಾನವಿಷಯತ್ವ ಬರಲು ಸಾಕ್ಷಿಯಲ್ಲಿರುವ ಪ್ರಾಮಾಣ್ಯಗ್ರಹಣ ಶಕ್ತಿಯು ಪ್ರಯೋಜಕ. ಅದರಿಂದಾಗಿ ಪ್ರಾಮಾಣ್ಯವು ಸಾಕ್ಷಿಜ್ಞಾನದ್ವಾರಾ ಸಾಕ್ಷಿಗತ–ಶಕ್ತಿಗೆ ವಿಷಯ. ಇದೇ ಪ್ರಾಮಾಣ್ಯದಲ್ಲಿರುವ ಯೋಗ್ಯತೆ.

## ಶಕ್ತಿಘಟಿತಯೋಗ್ಯತೆ ಪರಸಮ್ಮತ

**ಪರಮತೇ ಶಕ್ತೇರಪ್ರಸಿದ್ಧಾವಪಿ ಸ್ವಮತಾಸಾಧಾರಣಮಿತಿ ವಾ, ಪರೇಣಾಪಿ ಶಕ್ತಿಮ್ ಅಂಗೀಕಾರಯಿಷ್ಯಾಮಿ ಇತಿ ವಾ, ಜ್ಞಾನಗ್ರಾಹಕ ಸಾಮಗ್ರೀಮಾತ್ರಂ ಪ್ರತಿ ಸ್ವವಿಷಯಜ್ಞಾನದ್ವಾರಾ ಅವಚ್ಛೇದಕತ್ವಮಿತಿ ವಾ, ಜ್ಞಾನಗ್ರಾಹಕತಾವಚ್ಛೇದಕ-ಧರ್ಮಾವಚ್ಛಿನ್ನ-ಗ್ರಾಹಕತಾಕತ್ವಂ ವಾ ತದರ್ಥಃ ಇತಿ ಭಾವಃ।**

1. ಹಿಂದೆ ಹೇಳಿದ ಯೋಗ್ಯತ್ವನ್ನು ತಾರ್ಕಿಕರ ಮುಂದೆ ಮಂಡಿಸಲು ಆಗುವುದಿಲ್ಲ. ಅವರು ಸಾಕ್ಷಿ, ಅದರಲ್ಲಿರುವ ಸಹಜ ಶಕ್ತಿ ಇವುಗಳನ್ನು ಅಂಗೀಕರಿಸುವುದಿಲ್ಲ. ತಾರ್ಕಿಕಮತದಲ್ಲಿ ಶಕ್ತಿ ಎಂಬ ಪದಾರ್ಥವೇ ಇಲ್ಲ. ಆದರೂ ಇದು ಸ್ವಮತದಲ್ಲಿ ಮಾತ್ರ ಒಪ್ಪಬಹುದಾದ ಯೋಗ್ಯತೆ, ಎನ್ನುವ ಅಭಿಪ್ರಾಯದಿಂದ ನಿರೂಪಿಸಲಾಗಿದೆ.

2. ಅಥವಾ, ತಾರ್ಕಿಕಾದಿಗಳಿಂದ ಅಂತಹ ಸ್ವಾಭಾವಿಕವಾದ ಶಕ್ತಿಯನ್ನು ಒಪ್ಪುವಂತೆ ಮಾಡಿಸಿ ಅವರ ಮುಂದೆ ಈ ಯೋಗ್ಯತೆಯನ್ನು ಹೇಳಲಾಗಿದೆ, ಎಂದಾದರೂ ತಿಳಿಯಬಹುದು.

3. ಅಥವಾ ಶಕ್ತಿಪದದಿಂದ ಸಾಮಗ್ರಿಯನ್ನು ಪರಿಗ್ರಹಿಸಿ 'ಜ್ಞಾನಗ್ರಾಹಕವಾದ ಎಲ್ಲಾ ಸಾಮಗ್ರಿಗಳಿಗೂ ಜ್ಞಾನದ್ವಾರಾ ಪ್ರಾಮಾಣ್ಯವು ಅವಚ್ಛೇಕವಾಗಿದೆ'. ಇದೇ ಯೋಗ್ಯತೆ. ಇದನ್ನು ತಾರ್ಕಿಕರ ಮುಂದೆಯೂ ಹೇಳಬಹುದಾಗಿದೆ.

4. ಅಥವಾ, ಜ್ಞಾನಗ್ರಾಹಕತಾದಲ್ಲಿ ಯಾವ ಧರ್ಮವು ಅವಚ್ಛೇದಕವಾಗಿದೆಯೋ, ತದ್ಧರ್ಮಾವಚ್ಛಿನ್ನವೇ ಆಗಿದೆ ಪ್ರಾಮಾಣ್ಯ ಗ್ರಾಹಕತಾ, ಎಂದು ಅಭಿಪ್ರಾಯ. ಉದಾಹರಣೆಗೆ– ಅನುವ್ಯವಸಾಯವು ಜ್ಞಾನಗ್ರಾಹಕ. ಗ್ರಾಹಕತಾ ಅನುವ್ಯವಸಾಯ ನಿಷ್ಠಾ. ಅದರಲ್ಲಿ ಅವಚ್ಛೇದಕವಾದ ಧರ್ಮ ಅನುವ್ಯವಸಾಯತ್ವ. ತದವಚ್ಛಿನ್ನ ಗ್ರಾಹಕತಾಕವಾಗಿದೆ ಪ್ರಾಮಾಣ್ಯ. ಅಂದರೆ, ಜ್ಞಾನಗ್ರಾಹಕವಾದ ಅನುವ್ಯವಸಾಯವೇ ಪ್ರಾಮಾಣ್ಯಗ್ರಾಹಕವಾದುದರಿಂದ ಜ್ಞಾನಗ್ರಾಹಕತಾವಚ್ಛೇಕವೂ ಪ್ರಾಮಾಣ್ಯಗ್ರಾಹಕತಾವಚ್ಛೇಕವೂ ಒಂದೇ ಆಗುತ್ತದೆ. ಹೀಗೆ ಏಕಧರ್ಮಾವಚ್ಛಿನ್ನಗ್ರಾಹಕತಾ ನಿರೂಪಕವಾಗಿದೆ ಪ್ರಾಮಾಣ್ಯ. ಇದೇ ಪ್ರಾಮಾಣ್ಯದಲ್ಲಿರುವ ಸಾಕ್ಷಿಜ್ಞಾನ ವಿಷಯತ್ವ-ಯೋಗ್ಯತಾ. ಈ ಯೋಗ್ಯತಾಶರೀರದಲ್ಲಿ ತಾರ್ಕಿಕರು ಒಪ್ಪದಿರುವ ಯಾವ ಅಂಶಗಳೂ ಘಟಕವಾಗಿಲ್ಲ.

**एवं च प्रतिबन्ध-दशायामपि करतलादौ दाहयोग्यतावत् प्रामाण्ये ग्रहणयोग्यतास्त्येव । तथा च प्रामाण्यग्रहणशक्तेः सहजत्वात् प्रामाण्यग्रहणस्यौत्सर्गिकत्वरूप-स्वतस्त्वसिद्धिः । उक्तं च टीकाकारैः ''साक्ष्येव ज्ञानं तत्प्रामाण्यं च विषयीकर्तुं क्षमः । किं तु प्रतिबद्धो ज्ञानमात्रं गृहीत्वा तत्प्रामाण्यग्रहणस्य नेष्टे'' इति ।। २ ।।**

ಹಿಂದೆ ಹೇಳಿದಂತೆ ಯೋಗ್ಯತಾ ರೂಪವಾದ ಸ್ವತಸ್ತ್ವವನ್ನು ಹೇಳಿದಾಗ, ಪ್ರಾಮಾಣ್ಯ ಗ್ರಹಣೆಗೆ ಪ್ರತಿಬಂಧಕವಾದ ಅಪ್ರಾಮಾಣ್ಯ-ಗ್ರಹಣಸಾಮಗ್ರೀ ಇರುವಾಗ ಸಾಕ್ಷಿಯು ಪ್ರಾಮಾಣ್ಯವಿಷಯಕವಾಗದಿದ್ದರೂ (ಪ್ರಾಮಾಣ್ಯಜ್ಞಾನ ಬರದಿದ್ದರೂ) ಪ್ರಾಮಾಣ್ಯದಲ್ಲಿ ಸಾಕ್ಷಿವಿಷಯತ್ವ ಯೋಗ್ಯತಾ ಇದೆ. ಅದಕ್ಕೆ ಉದಾಹರಣೆ- ದಾಹ ಪ್ರತಿಬಂಧಕವಾದ ಮಣಿ ಇದ್ದಾಗ ಕೈಯಲ್ಲಿ ದಾಹವಾಗದಿದ್ದರೂ ದಾಹಯೋಗ್ಯತಾ ಇದೆ. ಅದರಂತೆ ಅಗೃಹೀತ ಪ್ರಾಮಾಣ್ಯದಲ್ಲೂ ಸಾಕ್ಷಿವಿಷಯತ್ವಯೋಗ್ಯತಾ ಇದೆ. ಆದ್ದರಿಂದ ಈ ಪಕ್ಷದಲ್ಲಿ ಹಿಂದಿನಂತೆ ಸಾಕ್ಷಿಗೆ ''ವಿರೋಧಿ ಸಾಮಗ್ರೀ-ಅಸಮವಹಿತತ್ವ'' ವಿಶೇಷಣದ ಆವಶ್ಯಕತೆ ಇಲ್ಲ.

ಯೋಗ್ಯತಾಘಟಿತವಾದ ಸ್ವತಸ್ತ್ವದ ಫಲಿತಾರ್ಥ- ಸಾಕ್ಷಿಯಲ್ಲಿರುವ ಪ್ರಾಮಾಣ್ಯ ಗ್ರಹಣಶಕ್ತಿಯು ಸಹಜವಾಗಿದೆ. ಅಂದರೆ ಅದು ಆಗಂತುಕವಾದುದಲ್ಲ.

ಆದ್ದರಿಂದಲೇ ಸಾಕ್ಷಿಯಿಂದ ಪ್ರಾಮಾಣ್ಯಗ್ರಹಣವು ಔತ್ಸರ್ಗಿಕ. ಅಂದರೆ, ಸಾಕ್ಷಿಯು ಕೆಲವೊಮ್ಮೆ ಪ್ರತಿಬಂಧಕವಶಾತ್ ಪ್ರಾಮಾಣ್ಯವನ್ನು ಗ್ರಹಣೆ ಮಾಡದಿದ್ದರೂ ಅಂತಹ ಪ್ರಾಮಾಣ್ಯದಲ್ಲಿ ಸಾಕ್ಷಿಗ್ರಹಣ ಯೋಗ್ಯತೆ ಇದ್ದೇ ಇದೆ.

ಈ ಎರಡೂ ಅಂಶಗಳನ್ನೂ ವಿಷ್ಣುತತ್ತ್ವವಿನಿರ್ಣಯ ಟೀಕೆಯಲ್ಲಿ ಶ್ರೀಜಯತೀರ್ಥರು ಹೀಗೆ ಹೇಳಿದ್ದಾರೆ- ''ಇತರ ಸಹಾಯವಿಲ್ಲದೆ ಸಾಕ್ಷಿಯೇ ವ್ಯವಸಾಯಾತ್ಮಕ ಜ್ಞಾನವನ್ನೂ ಅದರಲ್ಲಿರುವ ಪ್ರಾಮಾಣ್ಯವನ್ನೂ ವಿಷಯೀಕರಿಸಲು ಸಮರ್ಥವಾಗಿದೆ. ಆದರೆ ದೋಷದಿಂದ ಪ್ರತಿಬದ್ಧವಾದಾಗ ಜ್ಞಾನವನ್ನು ಮಾತ್ರ ವಿಷಯೀಕರಿಸಿ ಅದರಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.''

ಮೇಲಿನ ಟೀಕಾಪಂಕ್ತಿಯಲ್ಲಿರುವ ''ಸಾಕ್ಷೀ ಏವ ಕ್ಷಮಃ'' ಎನ್ನುವುದರಿಂದ ಸಾಕ್ಷಿಯಲ್ಲಿರುವ ಶಕ್ತಿಯು ಸಹಜವೆಂದು ತಿಳಿಯುತ್ತದೆ. 'ಪ್ರಾಮಾಣ್ಯ ಗ್ರಹಣಸ್ಯ ನೇಷ್ಟೇ' ಎನ್ನುವುದರಿಂದ ಪ್ರಾಮಾಣ್ಯಜ್ಞಾನ ಬರದಿದ್ದರೂ ಪ್ರಾಮಾಣ್ಯ ಗ್ರಹಣ ಯೋಗ್ಯತೆ ಇದೆ ಎಂದು ತಿಳಿಯುತ್ತದೆ.

**ನನು ಏತಾವತಾಪಿ ಕಥಂ ಪ್ರತಿಬಂಧದಶಾಪನ್ನ-ಜ್ಞಾನಪ್ರಾಮಾಣ್ಯಸ್ಯ ಸ್ವತಸ್ತ್ವಲಾಭಃ? ಯೇನ ಸರ್ವಪ್ರಾಮಾಣ್ಯಾನಾಂ ಸ್ವತಸ್ತ್ವಂ ಸ್ಯಾತ್ ಇತ್ಯತ ಆಹ-ಏವಂ ಚೇತಿ ॥ ಯೋಗ್ಯತಾರೂಪೇ ಸ್ವತಸ್ತ್ವೇ ಸತೀತ್ಯರ್ಥಃ। ಯೋಗ್ಯತ್ವಸ್ಯ ಉಕ್ತರೂಪತ್ವೇ ಸತೀತಿ ವಾರ್ಥಃ।**

**ದಾಹೇತಿ ॥ ದಾಹವಿಷಯತ್ವಯೋಗ್ಯತಾವತ್ ಇತ್ಯರ್ಥಃ।**

**ದ್ವಿತೀಯನಿರುಕ್ತ್ಯಾ ಅನ್ಯದಪ್ಯನುಕೂಲಿತಮಿತ್ಯಾಹ-ತಥಾಚೇತಿ ॥ ಉಕ್ತರೂಪಯೋಗ್ಯತ್ವಗರ್ಭನಿರುಕ್ತೌ ಸತ್ಯಾಮ್ ಇತ್ಯರ್ಥಃ।**

**ಔತ್ಸರ್ಗಿಕತ್ವೇತಿ ॥ 'ಜ್ಞಾನಗ್ರಾಹಕಃ ಸಾಕ್ಷೀ ಪ್ರಮಾಣತಯೈವ ಗೃಹ್ಣಾತಿ ಇತ್ಯುತ್ಸರ್ಗ ಏವ' ಇತಿ ತತ್ತ್ವನಿರ್ಣಯಟೀಕಾದ್ಯುಕ್ತ-ಔತ್ಸರ್ಗಿಕತ್ವೇತ್ಯರ್ಥಃ।**

**ಉಕ್ತಂ ಚೇತಿ ॥ ಪ್ರಾಮಾಣ್ಯಸ್ಯ ಸಹಜಶಕ್ತಿವಿಷಯತ್ವಂ, ಪ್ರತಿಬಂಧಸ್ಥಲೇ ಯೋಗ್ಯತಾಸ್ತಿ ಇತ್ಯೇತಚ್ಚೋಕ್ತಂ ತತ್ತ್ವನಿರ್ಣಯಟೀಕಾಯಾಮ್ ಇತ್ಯರ್ಥಃ । 'ಕಾರಣಾಂತರೋಪನಿಪಾತೇನ ಮಾನಸಾಪರಾಧೇನ ಪ್ರತಿಬದ್ಧಃ' ಇತ್ಯೇವಂ ರೂಪೇಣ ತತ್ರ, ಪಾಠೇಽಪಿ ಅಯಮ್ ಏಕದೇಶಾನುವಾದಃ ಇತ್ಯದೋಷಃ ।**

(ನ್ಯಾಯದೀಪ ಸ್ಪಷ್ಟವಾಗಿದೆ. ॥ ಲಕ್ಷಣ-3 ॥)

## ಸರ್ವಮತ ಸಮ್ಮತ ಸ್ವತಸ್ತ್ವ

**यद्वा, उभयसिद्ध-प्रामाण्याविषयक-ज्ञानभिन्नज्ञानविषयत्व-नैयत्यं स्वतस्त्वम् । तत्र प्रामाण्याविषियकज्ञानभिन्नेत्युक्त्या 'घटोऽयम्' इत्यादिघटादिविषयकप्रत्यक्षज्ञानं प्रति,**

**'ज्ञानं गुणः' इत्यादिशब्देन 'घटज्ञानम्' इत्यादिशब्देन च जन्यं ज्ञानविषयकज्ञानं प्रति, प्रतिबद्धानुव्यवसायं प्रति च,**

**स्वतस्त्वपक्षेऽपि प्रामाण्यस्य अविषयत्वात् विषयत्वनैयत्यसाधने बाध इति शङ्का निरस्ता । उक्तस्य त्रिविधस्यापि ज्ञानस्य प्रामाण्याविषयकत्वेन तद्भिन्नत्वाभावात् ।**

ಹಿಂದೆ ಹೇಳಿರುವ ಎರಡೂ ವಿಧದ ಸ್ವತಸ್ತ್ವಗಳು ಮಾಧ್ವಮತ ಮಾತ್ರ ಸಿದ್ಧವಾದುದು. ಈ ಸ್ವತಸ್ತ್ವ-ಪರಿಷ್ಕಾರವು ಪ್ರಾಮಾಣ್ಯ-ಸ್ವತಸ್ತ್ವವನ್ನು ಅಂಗೀಕರಿಸುವ ಮೀಮಾಂಸಕರು-ವೇದಾಂತಿಗಳಿಗೆಲ್ಲರಿಗೂ ಸಮ್ಮತವಾಗುವುವಂತಿದೆ.

ಮೂಲದಲ್ಲಿ 'ಜ್ಞಾನವಿಷಯತ್ವ ನೈಯತ್ಯಂ' ಎಂದಿದೆ. ಆ ಜ್ಞಾನಕ್ಕೆ 'ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನವಿಷಯಕ' ಎಂಬ ವಿಶೇಷಣವನ್ನು ಸೇರಿಸಿಕೊಳ್ಳಬೇಕೆಂದು ರಾಯರು ತಿಳಿಸುತ್ತಾರೆ. ಆಗ, ಗ್ರಾಹ್ಯಪ್ರಾಮಾಣ್ಯಕ್ಕೆ ಆಶ್ರಯವಾದ ವ್ಯವಸಾಯ ವಿಷಯಕ, ಅನುವ್ಯವಸಾಯಾತ್ಮಕ ಜ್ಞಾನ, ಎಂದು ಅರ್ಥವಾಗುತ್ತದೆ.

ಮೀಮಾಂಸಕರಲ್ಲಿ ಮೂರು ಪಂಗಡಗಳಿವೆ–

**1. ಭಾಟ್ಟರು**–ಇವರು ಜ್ಞಾನವು ಅತೀಂದ್ರಿಯ, ಜ್ಞಾತತಾ ಎಂಬ ಫಲದಿಂದ ಜ್ಞಾನವನ್ನೂ, ಅದರ ಪ್ರಾಮಾಣ್ಯವನ್ನೂ ಅನುಮಾನ ಮಾಡಿ ತಿಳಿಯಬೇಕು, ಎನ್ನುತ್ತಾರೆ.

2. **ಪ್ರಾಭಾಕರರು**–ಇವರು ಜ್ಞಾನವು ಸ್ವಪ್ರಕಾಶ. ಅದು ತನ್ನನ್ನೂ, ತನ್ನ ಪ್ರಾಮಾಣ್ಯವನ್ನೂ ತಾನೇ ತಿಳಿಯುತ್ತದೆ, ಎನ್ನುತ್ತಾರೆ.

3. **ಮಿಶ್ರರು**–ಇವರು ತಾರ್ಕಿಕರಂತೆ ಜ್ಞಾನವು ಮಾನಸಪ್ರತ್ಯಕ್ಷ ವಿಷಯ, ಎನ್ನುತ್ತಾರೆ. ಅದೇ ಮನಸ್ಸು ಜ್ಞಾನಗತ ಪ್ರಾಮಾಣ್ಯದ ಜ್ಞಾನಕ್ಕೂ ಕಾರಣವಾಗುತ್ತದೆ. ಇದು ಮಿಶ್ರಮತ.

ಹೀಗೆ ಈ ಮೂರು ಮತಗಳಲ್ಲಿ ಜ್ಞಾನಗ್ರಾಹಕಗಳು ವಿಭಿನ್ನವಾದರೂ ಜ್ಞಾನಗ್ರಾಹಕವೇ ಪ್ರಾಮಾಣ್ಯಗ್ರಾಹಕ ಎನ್ನುವ ವಿಷಯದಲ್ಲಿ ವಿವಾದವಿಲ್ಲ.

ವೇದಾಂತಿಗಳೆನಿಸಿರುವ ದ್ವೈತ-ಅದ್ವೈತ-ವಿಶಿಷ್ಟಾದ್ವೈತ ಮತಾನುಯಾಯಿಗಳು ಜ್ಞಾನ ಗ್ರಾಹಕ ಸಾಕ್ಷಿಗ್ರಾಹ್ಯವಾಗಿದೆ ಪ್ರಾಮಾಣ್ಯ ಎನ್ನುತ್ತಾರೆ.

ಲಕ್ಷಣದಲ್ಲಿರುವ ಉಭಯಪದದಿಂದ ಸ್ವತಸ್ತ್ವವಾದಿಗಳಲ್ಲಿ ಒಬ್ಬರು ಮತ್ತು ಪರತಸ್ತ್ವವಾದಿ ಯಾದ ತಾರ್ಕಿಕ ಹೀಗೆ ಇಬ್ಬರನ್ನು ಇಟ್ಟುಕೊಳ್ಳಬೇಕು. ಆಗ ಮತಭೇದೇನ ಸ್ವತಸ್ತ್ವಸ್ವರೂಪ ಹೀಗಾಗುತ್ತದೆ–

1. **ಭಾಟ್ಟರು ಮತ್ತು ತಾರ್ಕಿಕರು** ಇವರಿಬ್ಬರಿಗೂ ಪ್ರಾಮಾಣ್ಯ ಅವಿಷಯಕ ಎಂದು ಸಿದ್ಧವಾದುದು– 'ಅಯಂ ಘಟಃ' ಎಂಬ ವ್ಯವಸಾಯಾತ್ಮಕ ಜ್ಞಾನ. ಅಂತಹ ಜ್ಞಾನವು ಘಟವಿಷಯಕ. ಪ್ರಾಮಾಣ್ಯ-ಅವಿಷಯಕ. ತದ್ಭಿನ್ನ ಜ್ಞಾನವೆಂದರೆ ಭಾಟ್ಟಾಭಿಮತ ಜ್ಞಾತತಾ ಲಿಂಗಕ-ಅನುಮಿತಿ. ಅಂತಹ ಅನುಮಿತಿಯಲ್ಲಿ ಪ್ರಾಮಾಣ್ಯವು ವಿಷಯವಾಗಿದೆ ಎಂದು ಭಾಟ್ಟಮತ. ಆದುದರಿಂದ ಅದು ಪ್ರಾಮಾಣ್ಯ-ಅವಿಷಯಕತ್ವೇನ ಉಭಯ ಸಿದ್ಧವಲ್ಲ, ಉಭಯಸಿದ್ಧಭಿನ್ನ. ಅದರಲ್ಲಿ ಪ್ರಾಮಾಣ್ಯವು ನಿಯಮೇನ ವಿಷಯವಾಗಿದೆ. ಹೀಗೆ ಭಾಟ್ಟಮತದಲ್ಲಿ ಸ್ವತಸ್ತ್ವಲಕ್ಷಣ ಸಮನ್ವಯ.

2. **ಪ್ರಾಭಾಕರರು** 'ಅಯಂ ಘಟಃ' ಎಂಬ ವ್ಯವಸಾಯವು ಸ್ವಪ್ರಕಾಶವಾಗಿದ್ದು ಅದು ತನ್ನ ಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ, ಎನ್ನುತ್ತಾರೆ. ಹೀಗಾಗಿ ಆ ಜ್ಞಾನವು ಪ್ರಾಮಾಣ್ಯಾವಿಷಯಕ ಎಂದು ತಾರ್ಕಿಕರು ಒಪ್ಪಿದರೂ ಪ್ರಾಭಾಕರರು ಒಪ್ಪಿಲ್ಲ. ಆದ್ದರಿಂದ 'ಅಯಂ ಘಟಃ' ಎಂಬ ಜ್ಞಾನವು ಪ್ರಾಮಾಣ್ಯಾವಿಷಯಕವೆಂದು ಉಭಯ ಸಮ್ಮತವಲ್ಲ. ಪ್ರಾಮಾಣ್ಯಾವಿಷಯಕತ್ವೇನ ಉಭಯ ಸಮ್ಮತವಾದ ಜ್ಞಾನ ''ಇದಂ ಜ್ಞಾನಂ ಅಪ್ರಮಾಣಂ'' ಎಂಬ ಜ್ಞಾನ. ತದ್ಭಿನ್ನ ಜ್ಞಾನ-'ಅಯಂ ಘಟಃ' ಎಂಬ ವ್ಯವಸಾಯಾತ್ಮಕವಾದ ಜ್ಞಾನ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಹೀಗೆ ಪ್ರಾಭಾಕರ ಮತದಲ್ಲಿ ಸಮನ್ವಯ.

3. **ಮಿಶ್ರಮತದಲ್ಲಿ**– ''ಘಟಜ್ಞಾನವಾನಹಂ'' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿರುವುದರಿಂದ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧ ಜ್ಞಾನ

ಅನುವ್ಯವಸಾಯ ಅಲ್ಲ. ''ಅಯಂ ಘಟಃ'' ಎಂಬ ವ್ಯವಸಾಯ. ತದ್ಭಿನ್ನ-ಜ್ಞಾನ ಅನುವ್ಯವಸಾಯ. ಆದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ.

ವೇದಾಂತಿಗಳು ಮೂವರೂ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ಎಂದು ಅಂಗೀಕರಿಸಿರುವುದರಿಂದ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧ ಜ್ಞಾನ-ವ್ಯವಸಾಯ ಅಂದರೆ ಘಟಜ್ಞಾನ. ತದ್ಭಿನ್ನಜ್ಞಾನ ಅನುವ್ಯವಸಾಯ. ಆದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ.

ಹೀಗೆ ಈ ಪರಿಷ್ಕಾರವು ಸ್ವತಸ್ತ್ವವನ್ನು ಅಂಗೀಕರಿಸುವ ಎಲ್ಲ ದರ್ಶನಗಳಲ್ಲೂ ಸಮನ್ವಯವಾಗುತ್ತದೆ. ಆದ್ದರಿಂದ ರಾಯರು ನ್ಯಾಯದೀಪದಲ್ಲಿ ''ಪ್ರೌಢ್ಯಾ ಸ್ವತಸ್ತ್ವವಾದಿ ಮಾತ್ರ (ಕೃತ್ಸ್ನ) ಸಾಧಾರಣಂ ಪಕ್ಷಾಂತರಮಾಹ'' ಎಂದು ಈ ಲಕ್ಷಣಕ್ಕೆ ಅವತಾರಿಕೆ ನೀಡಿದ್ದಾರೆ.

(ನ್ಯಾಯದೀಪ ವ್ಯಾಖ್ಯಾನದ ಅಭಿಪ್ರಾಯಗಳು ಈಗಾಗಲೇ ಮೂಲಗ್ರಂಥದ ಕನ್ನಡ ಅನುವಾದದಲ್ಲಿ ಬಂದಿವೆ. ಆದ್ದರಿಂದ ಈ ಮೂಲಗ್ರಂಥಕ್ಕೆ ಸಂಬಂಧಪಟ್ಟ ನ್ಯಾಯದೀಪ ವ್ಯಾಖ್ಯಾನವನ್ನು ಮಾತ್ರ ಕೊಡಲಾಗಿದೆ.)

**ಪ್ರೌಢ್ಯಾ ಸ್ವತಸ್ತ್ವವಾದಿ-ಮಾತ್ರಸಾಧಾರಣಂ ಪಕ್ಷಾಂತರಮಾಹ-ಯದ್ವೇತಿ ॥**

**ತತ್ತಜ್ಞಾನಪ್ರಾಮಾಣ್ಯಸ್ಯ ಇತಿ ಅನುಷಂಗಃ, ಸಾಧ್ಯೇ ಗ್ರಾಹ್ಯ-ಪ್ರಾಮಾಣ್ಯಾ-ಶ್ರಯ-ತತ್ತದ್-ಜ್ಞಾನವಿಷಯಕೇತಿ ಗ್ರಾಹ್ಯಮ್ ।**

**ಸ್ವತಸ್ತ್ವವಾದಿನೋ ಹಿ ಅನೇಕೇ- ಗ್ರಂಥಕರ್ತಾ(ಶ್ರೀವ್ಯಾಸರಾಜಃ) ಏಕಃ, ಭಟ್ಟಃ, ಗುರುಃ, ಮುರಾರಿಮಿಶ್ರಶ್ಚ ಇತಿ ತ್ರಯಃ । ಮಾಯಾವಾದ್ಯಾದಯೋ ವೇದಾಂತಿನಶ್ಚ ।**

**ತತ್ರ ಭಟ್ಟಃ ಜ್ಞಾನಾತೀಂದ್ರಿಯತ್ವವಾದೀ । ಗುರುಃ ಜ್ಞಾನಮಾತ್ರ-ಸ್ವಪ್ರಕಾಶತ್ವವಾದೀ । ಮಿಶ್ರಸ್ತು ನ್ಯಾಯಮತ ಇವ ಅಸ್ವಪ್ರಕಾಶಾನು-ವ್ಯವಸಾಯವಾದೀ ।**

**ತತ್ರ 'ಉಭಯ' ಇತ್ಯಸ್ಯ**

**1. ಸಿದ್ಧಾಂತಿ-ತಾರ್ಕಿಕೋಭಯೇತಿ**

**2. ಭಟ್ಟ-ತಾರ್ಕಿಕೋಭಯೇತಿ**

**3. ಗುರು-ತಾರ್ಕಿಕೋಭಯೇತಿ**

**4. ಮಿಶ್ರ-ತಾರ್ಕಿಕೋಭಯೇತಿ**

**5. ಮಾಯಿ-ತಾರ್ಕಿಕೋಭಯೇತಿ**

**ಏವಂ ರೂಪೇಣ ಅರ್ಥಃ । ಏಕದಾ ಅನೇಕೈಃ ಸಹ ವಿವಾದಾಯೋಗಾತ್ ।**

**ಉಭಯಸಿದ್ಧಂ ಯತ್ ಪ್ರಾಮಾಣ್ಯಾವಿಷಯಕಂ ಜ್ಞಾನಂ=ಪ್ರಾಮಾಣ್ಯಾವಿಷಯಕತ್ವೇನ ಉಭಯಸಮ್ಮತಂ ಯತ್ ಜ್ಞಾನಮ್ 'ಅಯಂ ಘಟಃ' ಇತ್ಯಾದಿರೂಪಂ ಜ್ಞಾನಂ ತದ್ಭಿನ್ನಂ, ಗ್ರಾಹ್ಯೇತ್ಯಾದಿರೂಪಂ ಚ ಯತ್ಜ್ಞಾನಂ–**

**1. ಸಿದ್ಧಾಂತೇ ಪ್ರಾಗುಕ್ತರೂಪ ಸಾಕ್ಷಿಜ್ಞಾನಮ್**

**2. ಭಟ್ಟಮತೇ ಜ್ಞಾನಾನುಮಿತಿರೂಪಮ್**

**3. ಗುರುಮತೇ ಸ್ವಪ್ರಕಾಶ–ಘಟಾದಿಜ್ಞಾನಮ್**

**4. ಮಿಶ್ರಮತೇ ತದನುವ್ಯವಸಾಯಃ ।**

**ತೇನ ಗೃಹ್ಯತೇ ಏವ, ಇತ್ಯೇವಂ ರೂಪಂ ತದ್ವಿಷಯತ್ವ ನೈಯತ್ಯಮ್, ತತ್ತನ್ಮತೇ ಸ್ವತಸ್ತ್ವಮ್ ಇತ್ಯರ್ಥಃ ।**

## ನ್ಯಾಯದೀಪ

**ನ ಚ ಗುರುಮತೇ ಸರ್ವಜ್ಞಾನ–ಯಾಥಾರ್ಥ್ಯ–ಸ್ವಪ್ರಕಾಶತ್ವಯೋಃ ಉಪಗಮೇನ ಪ್ರಾಮಾಣ್ಯಾವಿಷಯಕಂ ಜ್ಞಾನಂ ನಾಸ್ತ್ಯೇವ, ಇತಿ ಶಂಕ್ಯಮ್ ।**

**'ಇದಂ ಜ್ಞಾನಮ್ ಅಪ್ರಮಾಣಮ್' ಇತ್ಯಾದಿ ಆರೋಪಸ್ಥಲೇ ಜ್ಞಾನಸ್ಯ ಪ್ರಾಮಾಣ್ಯಾವಿಷಯಕತ್ವಸ್ಯ ಗುರು–ತಾರ್ಕಿಕ ಸಮ್ಮತೇಃ ।**

**ಆರೋಪಸ್ತು ಗುರುಮತೇ ಇಚ್ಛಾಸ್ಥಸ್ಯ ವ್ಯಧಿಕರಣ–ಪ್ರಕಾರತ್ವರೂಪ–ಅಪ್ರಾಮಾಣ್ಯಸ್ಯ ಅಸಂಸರ್ಗಾಗ್ರಹಃ । ನ್ಯಾಯಮತೇ ವಿಶಿಷ್ಟಜ್ಞಾನಮ್, ಇತ್ಯನ್ಯದೇತತ್ ।**

ಪ್ರಾಭಾಕರರ ಮತದಲ್ಲಿ (ಗುರುಮತ) ಎಲ್ಲಾ ಜ್ಞಾನಗಳೂ ಯಥಾರ್ಥಗಳೇ ಆಗಿವೆ. ಅಯಥಾರ್ಥಜ್ಞಾನವೇ ಇಲ್ಲ. ಆದರಂತೆ, ಸಕಲಜ್ಞಾನಗಳೂ ಸ್ವಪ್ರಕಾಶಗಳು. ಇದರಿಂದಾಗಿ ಎಲ್ಲಾ ಜ್ಞಾನಗಳೂ ಪ್ರಾಮಾಣ್ಯವಿಷಯಕಗಳೇ ಆಗುತ್ತವೆ. ಗುರು–ತಾರ್ಕಿಕ–ಉಭಯ ಸಮ್ಮತವಾದ ಪ್ರಾಮಾಣ್ಯ–ಅವಿಷಯಕ ಜ್ಞಾನ ಗುರುಮತದಲ್ಲಿ ಅಪ್ರಸಿದ್ಧ. ಆದ್ದರಿಂದ ಅವರ ಮತದಂತೆ ಈ ಸ್ವತಸ್ತ್ವ–ಲಕ್ಷಣವನ್ನು ಹೇಗೆ ಸಮನ್ವಯ ಮಾಡುವುದು?

ಇದಕ್ಕೆ ಸಮಾಧಾನ–ಗುರುಮತದಲ್ಲಿ 'ಇದಂ ಜ್ಞಾನಂ ಅಪ್ರಮಾಣಮ್' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಇದು ಪ್ರಾಮಾಣ್ಯ–ಅವಿಷಯಕತ್ವೇನ ಗುರು–ತಾರ್ಕಿಕ–ಉಭಯ ಸಮ್ಮತವಾದ ಜ್ಞಾನ. ಆದ್ದರಿಂದ ಅಪ್ರಸಿದ್ಧಿ ಇಲ್ಲ.

'ಇದಂ ಜ್ಞಾನಂ ಅಪ್ರಮಾಣಮ್' ಎಂಬ ಜ್ಞಾನವನ್ನು ಪ್ರಾಭಾಕರರು ಹೀಗೆ ನಿರೂಪಿಸುತ್ತಾರೆ– ಇಲ್ಲಿ 'ಇದಂ ಜ್ಞಾನಮ್' ಎಂದು ವ್ಯವಸಾಯದ ಅನುಭವಾತ್ಮಕ ಜ್ಞಾನ. 'ಅಪ್ರಮಾಣಮ್' ಎಂದು ಸ್ಮರಣಾತ್ಮಕ ಜ್ಞಾನ. ಇದರಲ್ಲಿ ವಿಷಯವಾದ ಅಪ್ರಾಮಾಣ್ಯವು ಜ್ಞಾನಗತಧರ್ಮವಲ್ಲ, ಇಚ್ಛಾದಲ್ಲಿರುವ ಧರ್ಮ. ಅವರು ಎಲ್ಲ ಜ್ಞಾನಗಳೂ ಯಥಾರ್ಥವೆಂದು ಹೇಳಿದರೂ, ಇಚ್ಛೆಯು ಅಯಥಾರ್ಥವಾದುದೂ ಇದೆ, ಎನ್ನುತ್ತಾರೆ. ಹೀಗೆ ಇಚ್ಛೆಯಲ್ಲಿರುವ ಅಪ್ರಾಮಾಣ್ಯ ಎಂಬ ಧರ್ಮಕ್ಕೂ ಅನುಭವಕ್ಕೂ ಅಸಂಸರ್ಗಾಗ್ರಹರೂಪವಾದ ಸ್ವಪ್ರಕಾಶ ಜ್ಞಾನ– 'ಇದಂ ಜ್ಞಾನಂ ಅಪ್ರಮಾಣಮ್' ಎಂಬುದು. ಇಚ್ಛಾಗತವಾದ ಅಪ್ರಾಮಾಣ್ಯವೆಂದರೆ 'ವ್ಯಧಿಕರಣ ಪ್ರಕಾರಕತ್ವ'. ವಿಶೇಷ್ಯದಲ್ಲಿ ಇಲ್ಲದಿರುವ ಧರ್ಮವು ವ್ಯಧಿಕರಣಧರ್ಮ. ಅಂತಹ ಧರ್ಮವು ಪ್ರಕಾರವಾಗಿ ತೋರಿದರೆ ಅಪ್ರಮಾಣವಾಗುತ್ತದೆ. ಹೀಗೆ ಪ್ರಾಭಾಕರರು 'ಇದಂ ಜ್ಞಾನಂ ಅಪ್ರಮಾಣಮ್' ಎಂಬ ಆರೋಪವನ್ನು ನಿರೂಪಿಸುತ್ತಾರೆ. ಅವರಲ್ಲಿ ಇದು ಗ್ರಹಣ–ಸ್ಮರಣಾತ್ಮಕ ವಾದ ಖಂಡಜ್ಞಾನ. ನ್ಯಾಯಮತದಲ್ಲಿ ಇದು ಅಖಂಡಜ್ಞಾನ. ಪ್ರಮಾತ್ಮಕವೂ ಆಗಿರಬಹುದು.

## ದಲಕೃತ್ಯವಿಚಾರ

**ಅತ್ರ ಗ್ರಾಹ್ಯಪ್ರಾಮಾಣ್ಯಾಶ್ರಯ–ತತ್ತದ್–ಜ್ಞಾನವಿಷಯಕೇತ್ಯುಕ್ತ್ಯಾ ತದಂಶೇ ಏವ ಉಕ್ತರೂಪಜ್ಞಾನ–ಭಿನ್ನತ್ವಸ್ಯ ಅಭಿಮತತ್ವಾತ್ 'ಜ್ಞಾನವಿಷಯಕಂ ಜ್ಞಾನಂ ಪ್ರಮಾ' ಇತಿ ಜ್ಞಾನಸ್ಯ ಆದ್ಯಜ್ಞಾನೇ ಪ್ರಾಮಾಣ್ಯಾವಿಷಯಕತ್ವೇಽಪಿ ಗ್ರಾಹ್ಯಪ್ರಾಮಾಣ್ಯಾಶ್ರಯಜ್ಞಾನೇ ಪ್ರಾಮಾಣ್ಯಾವಿಷಯಕ–ಭಿನ್ನತ್ವ–ಸತ್ವಾತ್ ನ ದೋಷಃ ।**

**ಪ್ರಾಮಾಣ್ಯಪದಂ ಗ್ರಾಹ್ಯ–ತತ್ತತ್–ಪ್ರಾಮಾಣ್ಯಪರಂ ವಾ । ತಥಾ ಚ ಯಥಾನ್ಯಾಸೇನೈವ ಉಕ್ತಸ್ಥಲೇ ನ ದೋಷಃ ॥**

'ಜ್ಞಾನ ವಿಷಯತ್ವ ನೈಯತ್ಯಂ' ಎಂಬಲ್ಲಿ ಜ್ಞಾನ ಎಂದರೆ ಅನುವ್ಯವಸಾಯಾತ್ಮಕ ಜ್ಞಾನ. ಅದರಲ್ಲಿ 'ಗ್ರಾಹ್ಯಪ್ರಾಮಾಣ್ಯಾಶ್ರಯ ತತ್ತದ್ ಜ್ಞಾನವಿಷಯಕ' ಎಂದು ವಿಶೇಷಣವನ್ನು ಸೇರಿಸ ಬೇಕು. ಅರ್ಥಾತ್ ಆ ಅನುವ್ಯವಸಾಯವು ಪ್ರಕೃತದಲ್ಲಿ ಗ್ರಾಹ್ಯವಾದ ಪ್ರಾಮಾಣ್ಯಕ್ಕೆ ಆಶ್ರಯವಾದ ಜ್ಞಾನವಿಷಯಕವಾಗಿರಬೇಕು. ಅಂತಹ ಅನುವ್ಯವಸಾಯದಲ್ಲಿ, ಗ್ರಾಹ್ಯಪ್ರಾಮಾಣ್ಯಾಶ್ರಯ– ಜ್ಞಾನಗತ–ಪ್ರಾಮಾಣ್ಯಾವಿಷಯಕತ್ವ–ಭಿನ್ನತ್ವವು ಉಭಯ ಸಮ್ಮತವಾಗಿರಬೇಕು.

ಈ ನಿಬಂಧನೆಯಿಂದಾಗಿ– 'ಜ್ಞಾನವಿಷಯಕಂ ಜ್ಞಾನಂ ಪ್ರಮಾ' ಎಂಬ ಅನುವ್ಯವಸಾಯ ಸಂಗ್ರಹವಾಗುತ್ತದೆ. ಇದು ಅನುವ್ಯವಸಾಯದ ಅನುವ್ಯವಸಾಯ. ಇದರಲ್ಲಿ ಅನುವ್ಯವಸಾಯ ಗತವಾದ ಪ್ರಾಮಾಣ್ಯವು ವಿಷಯವಾಗುತ್ತದೆ. ಇಲ್ಲಿ ಮೊದಲನೆಯ ಜ್ಞಾನವೆಂದರೆ

ವ್ಯವಸಾಯಾತ್ಮಕವಾದ ಘಟಾದಿ ಜ್ಞಾನ. ತದ್ವಿಷಯಕವಾದ ಎರಡನೆಯ ಜ್ಞಾನ ಅನುವ್ಯವಸಾಯ ರೂಪವಾದುದು. ಅದನ್ನು ಪ್ರಮಾ ಎಂದು ಮೂರನೆಯ ಜ್ಞಾನ ಹೇಳುತ್ತದೆ. ಈ ಮೂರನೆಯ ಜ್ಞಾನದಲ್ಲಿ ದ್ವಿತೀಯ ಜ್ಞಾನಗತವಾದ ಪ್ರಾಮಾಣ್ಯವು ವಿಷಯ, ಪ್ರಥಮ ಜ್ಞಾನಗತ ಪ್ರಾಮಾಣ್ಯವು ವಿಷಯವಲ್ಲ. ಹೀಗಾಗಿ ಪ್ರಥಮ ಜ್ಞಾನ ವಿವಕ್ಷೆಯಿಂದ 'ಪ್ರಾಮಾಣ್ಯಾವಿಷಯಕತ್ವೇನ ಉಭಯ ಸಮ್ಮತ' ಎಂದು ಮೂರನೆಯ ಜ್ಞಾನವನ್ನು ಪರಿಗಣಿಸಬಹುದು. ಅದು ತದ್ಭಿನ್ನವಾಗಿಲ್ಲ. ಆದ್ದರಿಂದ ಅದರ ಸಂಗ್ರಹವಾಗಲಿಲ್ಲ, ಅವ್ಯಾಪ್ತಿದೋಷ ಬರುತ್ತದೆ. ಆದರೆ, ಪ್ರಕೃತದಲ್ಲಿ ದ್ವಿತೀಯ ಜ್ಞಾನಗತವಾದ ಪ್ರಾಮಾಣ್ಯವು ಗ್ರಾಹ್ಯ. ಪ್ರಥಮ ಜ್ಞಾನಗತವಾದುದಲ್ಲ, ಆದ್ದರಿಂದ ಗ್ರಾಹ್ಯ ಪ್ರಾಮಾಣ್ಯಾಶ್ರಯಜ್ಞಾನ ಎಂದರೆ ದ್ವಿತೀಯ ಜ್ಞಾನ. ಸ್ವತಸ್ತ್ವವಾದದಲ್ಲಿ ತದ್ಗತ ಪ್ರಾಮಾಣ್ಯವಿಷಯಕ ವಾಗಿದೆ ತೃತೀಯಜ್ಞಾನ. ಆದ್ದರಿಂದ ತೃತೀಯ ಜ್ಞಾನವು ಗ್ರಾಹ್ಯಪ್ರಾಮಾಣ್ಯಾಶ್ರಯ–ದ್ವಿತೀಯ ಜ್ಞಾನಗತ–ಪ್ರಾಮಾಣ್ಯ–ಅವಿಷಯಕತ್ವೇನ ಉಭಯಸಮ್ಮತ ಭಿನ್ನವಾಗಿದೆ. ತದ್ಗ್ರಾಹ್ಯತ್ವವು ಪ್ರಾಮಾಣ್ಯದಲ್ಲಿ ಬರುತ್ತದೆ. ಅವ್ಯಾಪ್ತಿಗೆ ಅವಕಾಶವಿಲ್ಲ.

ಅಥವಾ, ಹೊಸದಾದ ವಿಶೇಷಣವನ್ನು ಸೇರಿಸದೆ, ಮೂಲೋಕ್ತವಾದ ಯಥಾಶ್ರುತವಾದ ಸ್ವತಸ್ತ್ವಪರಿಷ್ಕಾರವನ್ನು ಇಟ್ಟುಕೊಂಡೂ ಹಿಂದಿನ ಅನುವ್ಯವಸಾಯವನ್ನು ಸಂಗ್ರಹಿಸಬಹುದು. ಹೇಗೆಂದರೆ,

'ಪ್ರಾಮಾಣ್ಯಾವಿಷಯಕತ್ವೇನ ಉಭಯಸಮ್ಮತಭಿನ್ನ' ಎಂಬಲ್ಲಿ 'ಪ್ರಾಮಾಣ್ಯ' ಎಂದರೆ 'ಪ್ರಕೃತ ಗ್ರಾಹ್ಯಪ್ರಾಮಾಣ್ಯ' ಎಂದು ಅರ್ಥ. ಅಂತಹ ಪ್ರಾಮಾಣ್ಯ ದ್ವಿತೀಯ ಜ್ಞಾನಗತ ಪ್ರಾಮಾಣ್ಯ, ಪ್ರಥಮ ಜ್ಞಾನಗತಪ್ರಾಮಾಣ್ಯವಲ್ಲ. ಹಿಂದೆ ಹೇಳಿದಂತೆ, ದ್ವಿತೀಯ ಜ್ಞಾನಗತ ಪ್ರಾಮಾಣ್ಯವು 'ಜ್ಞಾನ–ವಿಷಯಕಂ ಜ್ಞಾನಂ ಪ್ರಮಾ' ಎಂಬ ಜ್ಞಾನದಲ್ಲಿ ಸ್ವತಸ್ತ್ವವಾದದಂತೆ ವಿಷಯವೇ ಆಗಿದೆ. ಆದ್ದರಿಂದ ಆ ಜ್ಞಾನವು ಪ್ರಾಮಾಣ್ಯ–ಅವಿಷಯಕತ್ವೇನ ಉಭಯಸಿದ್ಧ ಭಿನ್ನವಾಗುತ್ತದೆ.

## ನಿಷೇಧದ್ವಯ ಪ್ರವೇಶದ ಪ್ರಯೋಜನ

**ಅತ್ರ ನಞ್–ದ್ವಯಾಪ್ರವೇಶೇನ ಉಭಯಸಿದ್ಧ–ಪ್ರಾಮಾಣ್ಯವಿಷಯಕ–ಜ್ಞಾನ ವಿಷಯತ್ವ–ನೈಯತ್ಯಮ್, ಇತ್ಯುಕ್ತೇ ತಾದೃಶಾನುಮಿತ್ಯಾದಿನಾ ಸಿದ್ಧಸಾಧನಮ್, ಅತೋ ಅವಿಷಯಕ ಭಿನ್ನೇತ್ಯುಕ್ತಿಃ ।**

ಈ ಪರಿಷ್ಕಾರದಲ್ಲಿ 'ಪ್ರಾಮಾಣ್ಯ–ಅವಿಷಯಕಭಿನ್ನ' ಎಂದು ಎರಡು ನಿಷೇಧಗಳು ಸೇರಿವೆ. ಇದರ ವಿಧಿರೂಪ–ಪ್ರಾಮಾಣ್ಯವಿಷಯಕತ್ವೇನ ಉಭಯಸಮ್ಮತ, ಎಂದು. ಹಾಗೆ ಹೇಳಿದರೆ ಸಿದ್ಧಸಾಧನತಾದೋಷ ಬರುತ್ತದೆ. ಸ್ವತಸ್ತ್ವವಾದಿಗಳಿಗೂ, ನೈಯಾಯಿಕರಿಗೂ ಪ್ರಾಮಾಣ್ಯ ವಿಷಯಕತ್ವೇನ ಸಮ್ಮತವಾದುದು ಅನುಮಿತಿ ಅಥವಾ ಪಂಚಮಾನುವ್ಯವಸಾಯ. ತದ್ವಿಷಯತ್ವ–

ನೈಯತ್ಯವನ್ನು ನೈಯಾಯಿಕರು ಅಂಗೀಕರಿಸಿದ್ದಾರೆ. ಅದಕ್ಕಾಗಿ ಎರಡು ನಿಷೇಧಗಳನ್ನು ಸೇರಿಸಲಾಗಿದೆ.

ವಿಧಿರೂಪದಲ್ಲಿದ್ದರೆ ನೈಯಾಯಿಕರಿಗೆ ಪ್ರಾಮಾಣ್ಯವಿಷಯಕತ್ವೇನ ಸಮ್ಮತವಾದ ಜ್ಞಾನವಿಷಯಕ ಜ್ಞಾನವನ್ನು ತೆಗೆದುಕೊಳ್ಳಬೇಕಾಗುತ್ತದೆ. ನಿಷೇಧ ದ್ವಯಗಳಿದ್ದರೆ ನೈಯಾಯಿಕರು ಪ್ರಾಮಾಣ್ಯವಿಷಯಕ ಎಂದು ಅಂಗೀಕರಿಸದ, ಸ್ವತಸ್ತ್ವವಾದಿಗಳು ಯಾರಾದರೊಬ್ಬರು ಪ್ರಾಮಾಣ್ಯವಿಷಯಕ ಎಂದು ಅಂಗೀಕರಿಸಿದ ಜ್ಞಾನ–ಜ್ಞಾನವೂ ಸಂಗ್ರಹವಾಗುತ್ತದೆ. ಏಕೆಂದರೆ, ನೈಯಾಯಿಕರು ಪ್ರಾಮಾಣ್ಯವಿಷಯಕ ಎಂದು ಅಂಗೀಕರಿಸಿರುವ ಜ್ಞಾನವು ಪ್ರಾಮಾಣ್ಯ ವಿಷಯಕವಾಗಿದೆ ಎಂದು ಸ್ವತಸ್ತ್ವವಾದಿಗಳಿಗೂ ಸಮ್ಮತ. ಆದರೆ ಸ್ವತಸ್ತ್ವವಾದಿಗಳು ಯಾವ ಜ್ಞಾನವು ಪ್ರಾಮಾಣ್ಯವಿಷಯಕ ಎಂದು ಹೇಳುತ್ತಾರೋ ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಎಂದು ನೈಯಾಯಿಕರು ಅಂಗೀಕರಿಸಿಲ್ಲ. ಆದಕ್ಕಾಗಿ ಎರಡು ನಿಷೇಧಗಳ ಅಗತ್ಯವಿದೆ.

## ಭಿನ್ನಾಂತ ವಿಶೇಷಣಕೃತ್ಯ

**तत्र प्रामाण्याविषयकज्ञानभिन्नेत्युक्त्या घटोऽयमित्यादिघटादिविषयकप्रत्यक्षज्ञानं प्रति, ज्ञानं गुणः इत्यादिशब्देन, घटज्ञानमित्यादिशब्देन च जन्यं ज्ञानविषयक ज्ञानं प्रति, प्रतिबद्धानुव्यवसायं प्रति च स्वतस्त्वपक्षेऽपि प्रामाण्यस्याविषयत्वात् विषयत्वनैयत्यसाधने बाध इति शङ्का निरस्ता । उक्तस्य त्रिविधस्यापि ज्ञानस्य प्रामाण्याविषयकत्वेन तद्भिन्नत्वाभावात् ।**

'ಲಕ್ಷಣದಲ್ಲಿ ಪ್ರಾಮಾಣ್ಯಾವಿಷಯಕ ಜ್ಞಾನ ಭಿನ್ನ' ಎಂಬ ವಿಶೇಷಣವನ್ನು ಬಿಟ್ಟರೆ ''ಜ್ಞಾನವಿಷಯತ್ವ ನೈಯತ್ಯಮ್'' ಎಂದಿಷ್ಟೇ ಲಕ್ಷಣವಾಗುತ್ತದೆ. ಎಲ್ಲಾ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯ ಎಂದು ಅಭಿಪ್ರಾಯವಾಗುತ್ತದೆ. ಇದು ಬಾಧಿತ. ''ಅಯಂ ಘಟಃ'' ಎಂಬ ಜ್ಞಾನದಲ್ಲಿ ಆ ಜ್ಞಾನದ ಪ್ರಾಮಾಣ್ಯವು ವಿಷಯವಲ್ಲ.

ಅದರ ಪರಿಹಾರಕ್ಕಾಗಿ ''ಜ್ಞಾನವಿಷಯಕ ಜ್ಞಾನ ವಿಷಯತ್ವ ನೈಯತ್ಯಮ್'' ಎಂದು ಪರಿಷ್ಕಾರ ಮಾಡಬಹುದು. ಆಗ ಹಿಂದಿನ ಬಾಧ ಇಲ್ಲ. ''ಅಯಂ ಘಟಃ'' ಎಂಬ ಜ್ಞಾನವು ಘಟವಿಷಯಕ ಜ್ಞಾನ, ಜ್ಞಾನವಿಷಯಕ ಜ್ಞಾನವಲ್ಲ. ಆದರೂ ''ಘಟಜ್ಞಾನಂ ಗುಣಃ'' ಎಂಬ ವಾಕ್ಯದಿಂದ ಹುಟ್ಟಿದ ಶಾಬ್ದಬೋಧವು ಜ್ಞಾನವಿಷಯಕ ಜ್ಞಾನವಾಗಿದೆ. ಅದರಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಮತ್ತೆ ಬಾಧ ಬಂತು.

ಇದನ್ನೂ ಪರಿಹಾರ ಮಾಡಬಹುದು. ''ವಿಷಯ ವಿಶಿಷ್ಟವಾದ ಜ್ಞಾನವು ಯಾವ ಜ್ಞಾನದಲ್ಲಿ ವಿಷಯವೋ ಅಂತಹ ಜ್ಞಾನಗಳಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ'' ಎಂದಾಗ ಹಿಂದೆ ಹೇಳಿದ ಬಾಧದೋಷ ಇಲ್ಲ. ''ಜ್ಞಾನಂ ಗುಣಃ'' ಎಂಬ ಶಬ್ದದಿಂದ ಬಂದಿರುವ ಶಾಬ್ದಬೋಧದಲ್ಲಿ ಜ್ಞಾನವು ವಿಷಯ. ಆ ಜ್ಞಾನವು ಘಟಜ್ಞಾನವೆಂದೋ, ಪಟಜ್ಞಾನವೆಂದೋ ವಿಷಯಸಹಿತವಾಗಿ ತೋರುವುದಿಲ್ಲ. ಹೀಗಾಗಿ ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗದಿದ್ದರೂ ಬಾಧವಿಲ್ಲ. ಆದರೂ ''ಇದಂ ಘಟಜ್ಞಾನಂ'' ಎಂಬ ಶಬ್ದದಿಂದ ಹುಟ್ಟಿದ ಶಾಬ್ದಬೋಧದಲ್ಲಿ ವಿಷಯ ಸಹಿತವಾದ ಜ್ಞಾನವು ವಿಷಯವಾಗಿದೆ. ಆದರೆ, ಅದರಲ್ಲಿ ಪ್ರಾಮಾಣ್ಯ ವಿಷಯವಲ್ಲ. ಹೀಗಾಗಿ ಪುನಃ ಬಾಧದೋಷ.

ಇದನ್ನೂ ಪರಿಹರಿಸಬಹುದು. 'ಅನುವ್ಯವಸಾಯ ವಿಷಯತ್ವ ನೈಯತ್ಯಂ' ಎಂದು ಪರಿಷ್ಕರಿಸಿದಾಗ ಹಿಂದಿನ ಬಾಧ ಇಲ್ಲ. ವಾಕ್ಯದಿಂದ ಜನ್ಯವಾದ ಜ್ಞಾನವು ಶಾಬ್ದಬೋಧ ಹೊರತು, ಅನುವ್ಯವಸಾಯವಲ್ಲ. ಜ್ಞಾನ ವಿಷಯಕ ಪ್ರತ್ಯಕ್ಷವೇ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯ ವಿಷಯಕತ್ವ ಇದೆ. ಆದ್ದರಿಂದ ಬಾಧ ಇಲ್ಲ ಎಂದರೆ, ಆದರೂ ಬಾಧ ಇದ್ದೇ ಇದೆ. ಪ್ರತಿಬದ್ಧ-ಅನುವ್ಯವಸಾಯದಲ್ಲಿ ಬಾಧ. ಅಪ್ರಾಮಾಣ್ಯಗ್ರಹ ಅಥವಾ ತತ್‌ಸಾಮಗ್ರಿಗಳು ಪ್ರಾಮಾಣ್ಯಗ್ರಹಕ್ಕೆ ಪ್ರತಿಬಂಧಕಗಳು. ಅಂತಹ ಸಾಮಗ್ರಿಗಳು ಇದ್ದಾಗ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಅದರಲ್ಲಿ ನೈಯತ್ಯ ಭಂಗ ಬರುತ್ತದೆ. ಅದರಿಂದ ಬಾಧ. ಅದರ ಪರಿಹಾರಕ್ಕಾಗಿ ಉಭಯಸಿದ್ಧ-ಪ್ರಾಮಾಣ್ಯಾವಿಷಯಕ ಜ್ಞಾನಭಿನ್ನ ಎಂಬ ವಿಶೇಷಣವನ್ನೇ ಕೊಡಬೇಕು. ಪ್ರತಿಬದ್ಧ ಅನುವ್ಯವಸಾಯವು ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧವೇ ಆಗಿದೆ. ತದ್ಭಿನ್ನವಾಗಿಲ್ಲ. ಆದ ಕಾರಣ ಅದರಲ್ಲಿ ಪ್ರಾಮಾಣ್ಯವು ವಿಷಯವಾಗದಿದ್ದರೂ ತೊಂದರೆ ಇಲ್ಲ.

ಹೀಗೆ ಭಿನ್ನಾಂತ ವಿಶೇಷಣವಿಲ್ಲದಿದ್ದರೆ ಬಾಧ ಬಂದೇ ಬರುತ್ತದೆ. ಅದರ ಪರಿಹಾರಕ್ಕಾಗಿ ಆ ವಿಶೇಷಣ ಸಾರ್ಥಕ.

ಈ ಲಕ್ಷಣದ ಅಭಿಪ್ರಾಯ ಇದು-ಸ್ವತಸ್ತ್ವವಾದಿಗಳಲ್ಲಿ ಪ್ರಾಮಾಣ್ಯವು ಯಾವ ಜ್ಞಾನಕ್ಕೆ ವಿಷಯ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಕೆಲವರು ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ಎನ್ನಬಹುದು, ಇನ್ನು ಕೆಲವರು ಸ್ವಪ್ರಕಾಶವಾದ ವ್ಯವಸಾಯದಲ್ಲೇ ಪ್ರಾಮಾಣ್ಯವು ವಿಷಯ ಎನ್ನಬಹುದು. ಅಂತೂ ತಾರ್ಕಿಕರು ಪ್ರಾಮಾಣ್ಯವಿಷಯಕ ಎಂದು ಒಪ್ಪದಿರುವ ಒಂದು ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯ ಎನ್ನುವುದನ್ನಂತೂ ಎಲ್ಲರೂ ಒಪ್ಪಿದ್ದಾರೆ. ಅಂತಹ ಜ್ಞಾನವು ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧ ಭಿನ್ನವಾಗಿರುತ್ತದೆ. ಏಕೆಂದರೆ, ಆ ಜ್ಞಾನವನ್ನು ತಾರ್ಕಿಕರು ಪ್ರಾಮಾಣ್ಯಾವಿಷಯಕ ಎಂದರೂ ಮೀಮಾಂಸಕರ ಗುಂಪಿನಲ್ಲಿ ಯಾರಾದರೂ ಒಬ್ಬರು ಪ್ರಾಮಾಣ್ಯ ಅವಿಷಯಕ ಎಂದು ಒಪ್ಪಿಕೊಳ್ಳುವುದಿಲ್ಲ. ಅಲ್ಲಿಗೆ ಆ ಜ್ಞಾನವು ಉಭಯಸಿದ್ಧ ಪ್ರಾಮಾಣ್ಯಾವಿಷಯ ಭಿನ್ನವಾಯಿತು. ಅಲ್ಲಿ ಪ್ರಾಮಾಣ್ಯವು ನಿಯಮೇನ

ವಿಷಯವಾಗಿದೆ, ಎಂದು ಯಾರಾದರೊಬ್ಬರು ಸ್ವತಸ್ತ್ವವಾದಿಗಳು ಒಪ್ಪಿರುತ್ತಾರೆ. ಇದರಿಂದ ಅವರವರ ಮತದಲ್ಲಿ ಸ್ವತಸ್ತ್ವ ಸಿದ್ಧವಾಗುತ್ತದೆ. ಆದರೆ, ನೈಯಾಯಿಕರು ಅಂತಹ ಅನುವ್ಯವಸಾಯಾದಿಗಳಲ್ಲಿ ಪ್ರಾಮಾಣ್ಯವು ವಿಷಯ ಎಂದು ಒಪ್ಪಿಲ್ಲ. ಆದ್ದರಿಂದ ಸಿದ್ಧಸಾಧನತಾ ದೋಷವೂ ಇಲ್ಲ.

## ಜ್ಞಾನಪದಗಳಿಗೆ ಕೃತ್ಯ

**ಅತ್ರ ಆದ್ಯಜ್ಞಾನಪದಂ ಯಥೋಕ್ತರೂಪ-ಘಟಾದಿಭಿನ್ನೇನ ಘಟ-ಜ್ಞಾನಾದಿನಾ ಪ್ರಾಮಾಣ್ಯಾಗ್ರಹಾದ್ ಬಾಧ ಇತಿ ಶಂಕಾನಿರಾಸಾಯ, ಅಂತ್ಯಂ ತು ತಾದೃಶಜ್ಞಾನಭಿನ್ನ-ಘಟಾದಿ ವಿಷಯತ್ವಾಭಾವೇನ ಬಾಧ ಇತಿ ಶಂಕಾನಿರಾಸಾಯ ಇತಿ ವ್ಯಕ್ತಮ್ ಇತಿ ಶಿಷ್ಟಪದಕೃತ್ಯಾನ್ಯಾಹ-ತತ್ರೇತಿ ॥**

ಈ ಪರಿಷ್ಕಾರದಲ್ಲಿ ಮೊದಲನೆಯ ಜ್ಞಾನಪದವನ್ನು ಬಿಟ್ಟರೆ ಉಭಯಸಿದ್ಧ-ಪ್ರಾಮಾಣ್ಯಾವಿಷಯಕಭಿನ್ನ-ಜ್ಞಾನವಿಷಯತ್ವನೈಯತ್ಯಮ್, ಎಂದು ಲಕ್ಷಣವಾಗುತ್ತದೆ. ಇದು ಬಾಧಿತ. ಪ್ರಾಮಾಣ್ಯಾವಿಷಯತ್ವೇನ ಉಭಯಸಿದ್ಧವಾದುದು (ಜ್ಞಾನಭಿನ್ನವಾದ) ಘಟಾದಿವಸ್ತುಗಳು. ಅದಕ್ಕಿಂತ ಭಿನ್ನವಾದ ಜ್ಞಾನ ಎಂದರೆ 'ಅಯಂ ಘಟಃ' ಎಂಬ ಜ್ಞಾನ. ಅದರಿಂದ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಆದ್ದರಿಂದ ಬಾಧ. ಮೊದಲ ಜ್ಞಾನ ಪದವಿದ್ದರೆ ಪ್ರಾಮಾಣ್ಯ-ಅವಿಷಯಕತ್ವೇನ ಉಭಯ ಸಿದ್ಧವಾದ ಜ್ಞಾನ ಎಂದರೆ ಘಟವಲ್ಲ, ಘಟಜ್ಞಾನ. ಅದು ತದ್ಭಿನ್ನವಲ್ಲ. ಕಿಂತು ತದ್ಭಿನ್ನವಾದುದು ಘಟಜ್ಞಾನದ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಬಾಧವಿಲ್ಲ.

ಎರಡನೆಯ ಜ್ಞಾನಪದವನ್ನು ಬಿಟ್ಟರೆ ಪೂರ್ವೋಕ್ತ ಜ್ಞಾನಭಿನ್ನವಾದ ವಸ್ತು ಎಂದರೆ ಘಟ. ಅದು ಪ್ರಾಮಾಣ್ಯಾವಿಷಯಕವಲ್ಲ. ಮತ್ತೆ ಬಾಧ ಬರುತ್ತದೆ. ಜ್ಞಾನಪದವನ್ನು ಕೊಟ್ಟಾಗ ಅನುವ್ಯವಸಾಯ ಮಾತ್ರ ಸಂಗ್ರಹೀತವಾಗುತ್ತದೆ. ಬಾಧಪರಿಹಾರವಾಗುತ್ತದೆ.

ಹೀಗೆ ಈ ವಿಶೇಷಣಗಳಿಗೆ ಕೃತ್ಯವು ಸ್ಪಷ್ಟವಾಗಿರುವುದರಿಂದ ಇತರ ವಿಶೇಷಣಗಳಿಗೆ ಮಾತ್ರ ಮೂಲದಲ್ಲಿ ಕೃತ್ಯವನ್ನು ಹೇಳಲಾಗಿದೆ.

## ಕೃತ್ಯವಿಶ್ಲೇಷಣೆ

**ಪ್ರಾಮಾಣ್ಯಾವಿಷಯಕ-ಜ್ಞಾನ ಭಿನ್ನೇತಿ ಅನುಕ್ತ್ವಾ 'ಉಭಯಸಿದ್ಧಜ್ಞಾನ ವಿಷಯತ್ವ-ನೈಯತ್ಯಮ್' ಇತ್ಯೇತಾವತ್ಯುಕ್ತೇ ಸತಿ ಪ್ರಷ್ಟವ್ಯಮ್-**

**1. ಉಭಯಸಿದ್ಧ ಜ್ಞಾನಪದೇನ ಕಿಂ ಪ್ರತ್ಯಕ್ಷಜ್ಞಾನಮ್ ಅಭಿಮತಮ್ ?**

**2. ಉತ ಶಾಬ್ದಮ್ ?**

**3. ಅಥ ಅನುವ್ಯವಸಾಯರೂಪಮ್ ?**

**ದ್ವಿತೀಯೇಽಪಿ – ಅ. ಕಿಂ ಜ್ಞಾನವಿಷಯಕಮ್ ?**

**ಆ. ವಿಷಯಾಲಿಂಗಿತ ಜ್ಞಾನವಿಷಯಕಂ ವಾ?**

**ಇತಿ ವಿಕಲ್ಪಾನ್ ವಾ,**

**1. ವಿಷಯಗ್ರಾಹಿ ಜ್ಞಾನಮಿತಿ ವಾ?**

**2. ಜ್ಞಾನಗ್ರಾಹಿ ಜ್ಞಾನಮಿತಿ ವಾ?**

**3. ಉಭಯಗ್ರಾಹಿ ಜ್ಞಾನಮಿತಿ ವಾ?**

**4. ಉಭಯಗ್ರಾಹಿ–ಅನುವ್ಯವಸಾಯರೂಪ ಪ್ರತ್ಯಕ್ಷಂ ವಾ?**

**ಇತಿ ವಿಕಲ್ಪಾನ್ ಹೃದಿ ನಿಧಾಯ ಕ್ರಮೇಣ ನಿರಾಹ–ಘಟೋಽಯಮಿತ್ಯಾದಿನಾ ॥**

**'ಪ್ರತ್ಯಕ್ಷಜ್ಞಾನಂ ಪ್ರತಿ' ಇತ್ಯಾದೇಃ 'ಪ್ರಾಮಾಣ್ಯಸ್ಯ ಅವಿಷಯತ್ವಾತ್' ಇತ್ಯನ್ವಯಃ ।**

**ಗುರುಮತೇ 'ಘಟೋಽಯಮ್' ಇತಿ ಜ್ಞಾನೇನಾಪಿ ಪ್ರಾಮಾಣ್ಯಗ್ರಹಾತ್ 'ಇದಂ ಜ್ಞಾನಮ್ ಅಪ್ರಮಾಣಮ್' ಇತ್ಯಾದಿಜ್ಞಾನಂ ಪ್ರತಿ ಇತಿ ಗ್ರಾಹ್ಯಮ್।**

**ಶಂಕಾನಿರಾಸಂ ವ್ಯನಕ್ತಿ–ಉಕ್ತಸ್ಯ ತ್ರಿವಿಧಸ್ಯಾಪೀತಿ ॥**

ಮೂಲದಲ್ಲಿ ಹೇಳಿರುವ ಪರಿಷ್ಕಾರದಲ್ಲಿ 'ಪ್ರಾಮಾಣ್ಯಾವಿಷಯಕ ಜ್ಞಾನ ಭಿನ್ನ' ಎಂಬ ಅಂಶವನ್ನು ಬಿಟ್ಟು 'ಉಭಯಸಿದ್ಧ ಜ್ಞಾನವಿಷಯತ್ವ ನೈಯತ್ಯಮ್' ಇಷ್ಟೇ ಸ್ವತಸ್ತ್ವ ಲಕ್ಷಣವೆಂದಾಗ ಮೂರು ಪ್ರಧಾನ ಪ್ರಶ್ನೆಗಳನ್ನು ಕೇಳಬಹುದು–

1. ಉಭಯ ಸಿದ್ಧಜ್ಞಾನವೆಂದರೆ ಪ್ರತ್ಯಕ್ಷಾತ್ಮಕಜ್ಞಾನವೋ?

2. ಶಬ್ದಜನ್ಯವಾದ ಶಾಬ್ದಬೋಧರೂಪವಾದುದೋ?

3. ಅಥವಾ ಅನುವ್ಯವಸಾಯರೂಪವಾದ ಪ್ರತ್ಯಕ್ಷವಿಶೇಷವೋ?

ಎರಡನೆಯ ಪ್ರಶ್ನೆಯಲ್ಲಿ ಎರಡು ಉಪಪ್ರಶ್ನೆಗಳನ್ನು ಮಾಡಬಹುದು.

ಅ. ಜ್ಞಾನವಿಷಯಕವಾದ ಶಾಬ್ದಬೋಧವೋ?

ಆ. ವಿಷಯವಿಶಿಷ್ಟ ಜ್ಞಾನವಿಷಯಕ ಶಾಬ್ದಬೋಧವೋ?

ಅಥವಾ ಪ್ರಧಾನ ಪ್ರಶ್ನೆಗಳೇ ನಾಲ್ಕು–

1. ವಿಷಯವಸ್ತುಗಳನ್ನು ಗ್ರಹಿಸುವ ಜ್ಞಾನವೋ?

2. ಜ್ಞಾನವನ್ನು ಗ್ರಹಿಸುವ ಜ್ಞಾನವೋ?

3. ವಿಷಯ ಮತ್ತು ಜ್ಞಾನ ಇವೆರಡನ್ನೂ ಗ್ರಹಿಸುವ ಜ್ಞಾನವೋ?

4. ಎರಡನ್ನೂ ಗ್ರಹಿಸುವ ಅನುವ್ಯವಸಾಯವೋ?

ಈ ವಿಕಲ್ಪಗಳನ್ನು ಮೂಲದಲ್ಲಿ ಕ್ರಮವಾಗಿ ನಿರಾಕರಿಸಲಾಗಿದೆ.

1. ಮೊದಲನೆಯ ಪ್ರಧಾನ ಪಕ್ಷದ ನಿರಾಕರಣೆ–'ಘಟೋಽಯಂ' ಎಂಬ ಪ್ರತ್ಯಕ್ಷದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲ, ಎಂದು.

2. ಅ. ನಿರಾಸ–'ಜ್ಞಾನಂ ಗುಣಃ' ಎಂಬ ಶಬ್ದಜನ್ಯ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

ಆ. 'ಘಟ ಜ್ಞಾನಂ ಗುಣಃ' ಎಂಬ ಶಬ್ದಜನ್ಯಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲ.

3. ನಿರಾಸ–ಪ್ರತಿಬದ್ಧವಾದ ಅನುವ್ಯವಸಾಯದಲ್ಲಿ ಜ್ಞಾನವು ವಿಷಯವಾದರೂ ಪ್ರಾಮಾಣ್ಯವು ವಿಷಯವಾಗಿಲ್ಲ.

ಅಥವಾ, ಪ್ರಧಾನವಾದ ನಾಲ್ಕು ವಿಕಲ್ಪಗಳ ಕ್ರಮೇಣ ನಿರಾಸ ಹೀಗೆ–

1. ವಿಷಯಗ್ರಾಹಿ ಜ್ಞಾನ 'ಘಟೋಽಯಂ'. ಇದರಲ್ಲಿ ಪ್ರಾಮಾಣ್ಯವಿಷಯವಲ್ಲ.

2. ಜ್ಞಾನ ಗ್ರಾಹಿ ಜ್ಞಾನ– 'ಜ್ಞಾನಂ ಗುಣಃ' ಎಂಬ ಶಬ್ದಜನ್ಯಜ್ಞಾನ. ಅದರಲ್ಲಿ ಪ್ರಾಮಾಣ್ಯವು ವಿಷಯವಲ್ಲ.

3. ಉಭಯಗ್ರಾಹಿ ಜ್ಞಾನ– 'ಘಟಜ್ಞಾನಮ್' ಎಂಬ ಶಬ್ದಜನ್ಯಜ್ಞಾನ. ಅದರಲ್ಲೂ ಪ್ರಾಮಾಣ್ಯವು ವಿಷಯವಾಗಿಲ್ಲ.

4. ಉಭಯಗ್ರಾಹಿ ಅನುವ್ಯವಸಾಯಪ್ರತ್ಯಕ್ಷ–ಪ್ರತಿಬದ್ಧಾನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲ.

ಹೀಗೆ ಈ ಎಲ್ಲ ಪಕ್ಷಗಳಲ್ಲೂ ನೈಯತ್ಯಭಂಗದಿಂದ ಬಾಧದೋಷವಿದೆ.

ಆದರೆ ಮೊದಲನೆಯ ವಿಕಲ್ಪಕ್ಕೆ ಹೇಳಿದ ದೋಷವು ಗುರುಮತದಲ್ಲಿ ಇಲ್ಲ. ಅವರ ಮತದಂತೆ ಘಟಪ್ರತ್ಯಕ್ಷವು(ಘಟಮಹಂ ಜಾನಾಮಿ) ಸ್ವಪ್ರಕಾಶವಾದುದರಿಂದ ತನ್ನನ್ನೂ ತನ್ನಲ್ಲಿರುವ ಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ. ಆದ್ದರಿಂದ ಬಾಧವಿಲ್ಲ. ಅದಕ್ಕಾಗಿ, ಹಿಂದೆ ಹೇಳಿದಂತೆ 'ಇದಂ ಜ್ಞಾನಮ್ ಅಪ್ರಮಾಣಮ್' ಎಂಬ ಜ್ಞಾನವು ಸ್ವವಿಷಯಕವಾದರೂ ಸ್ವಪ್ರಾಮಾಣ್ಯ ವಿಷಯಕವಲ್ಲವಾದ ಕಾರಣ ಆ ಜ್ಞಾನದಲ್ಲಿ ಬಾಧವನ್ನು ಹೇಳಬೇಕು.

## ನ್ಯಾಯದೀಪ

**ಯತ್ತು 'ಘಟಜ್ಞಾನಮ್' ಇತಿ ಶಬ್ದಜನ್ಯಜ್ಞಾನೇನ 'ಘಟತ್ವವತಿ ಘಟತ್ವಪ್ರಕಾರಕತ್ವರೂಪಂ' ಪ್ರಾಮಾಣ್ಯಂ ಗೃಹ್ಯತೇ ಇತಿ, ತತ್ತು ಅಪದಾರ್ಥತ್ವಾತ್, ಅವಾಕ್ಯಾರ್ಥತ್ವಾತ್ ಅಯುಕ್ತಮ್ ।**

**ಪ್ರತಿಬದ್ಧಾನುವ್ಯವಸಾಯಂ ಪ್ರತಿ ಇತ್ಯತ್ರ ಗುರುಮತೇ 'ಇದಂ ಜ್ಞಾನಮ್ ಅಪ್ರಮಾಣಮ್' ಇತ್ಯಾದಿ ಪ್ರತಿಬದ್ಧಜ್ಞಾನಂ ಪ್ರತಿ ಇತಿ, ಭಟ್ಟಮತೇ ಪ್ರತಿಬದ್ಧ-ಜ್ಞಾನಾನುಮಿತಿಂ ಪ್ರತಿ ಇತ್ಯಪಿ ಧ್ಯೇಯಮ್ ॥**

ಪಕ್ಷಧರ ಮಿಶ್ರರು 'ಘಟಜ್ಞಾನಮ್' ಎಂಬ ಶಬ್ದದಿಂದ ಬರುವ ಶಾಬ್ದಬೋಧದಲ್ಲಿ 'ಘಟತ್ವವತಿ ಘಟತ್ವ ಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವು, 'ಘಟಮಾನಯ' ಎಂಬ ವಾಕ್ಯಜನ್ಯ ಶಾಬ್ದಬೋಧದಲ್ಲಿ ಭಿದ್ರೇತರತ್ವವು ಘಟದಲ್ಲಿ ಕಾಣುವಂತೆ, ವಿಷಯವಾಗುತ್ತದೆ, ಎನ್ನುತ್ತಾರೆ. ಆದರೆ ಅಂತಹ ಪ್ರಾಮಾಣ್ಯವು ಪದಾರ್ಥವೂ ಅಲ್ಲ, ಅನ್ವಯರೂಪವಾದ ವಾಕ್ಯಾರ್ಥವೂ ಅಲ್ಲ. ಆದ್ದರಿಂದ ಅದು ಶಾಬ್ದಬೋಧದಲ್ಲಿ ವಿಷಯವಾಗಲು ಸಾಧ್ಯವಿಲ್ಲ-ಮೂಲದಲ್ಲಿ ಹೇಳಿದ ಬಾಧ ಬಂದೇ ಬರುತ್ತದೆ.

ಮೂಲದಲ್ಲಿ ಮೂರನೆಯ ಪಕ್ಷವನ್ನು ನಿರಾಸಮಾಡುವಾಗ 'ಪ್ರತಿಬದ್ಧ-ಅನುವ್ಯವಸಾಯ' ಎಂದಿದೆ. ಪ್ರಾಭಾಕರಮತದಲ್ಲಿ ಅಂತಹ ಅನುವ್ಯವಸಾಯದ ಆಕಾರ 'ಇದಂ ಜ್ಞಾನಮ್ ಅಪ್ರಮಾಣಮ್' ಎಂದು. (ಈ ಜ್ಞಾನದ ವಿವರ ಹಿಂದೆ ಬಂದಿದೆ.) ಭಾಟ್ಟಮತದಲ್ಲಿ ಪ್ರಾಮಾಣ್ಯ ಗ್ರಹಣೆಗೆ ಪ್ರತಿಬಂಧಕವಿರುವ ಜ್ಞಾತತಾಲಿಂಗಕ-ಅನುಮಿತಿ.

## ಉಭಯಸಿದ್ಧ ಪದದ ಸಾರ್ಥಕ್ಯ

**उभयसिद्धेत्युक्त्या न्यायमते अप्रतिबद्धस्यापि अनुव्यवसायस्य प्रामाण्याविषयकत्वेन तद्भिन्नत्वाभावात् सिद्धान्त्यभिप्रेतस्या-प्रतिबद्धानुव्यवसायं प्रति विषयत्वस्यासिद्ध्याऽर्थान्तरमिति शङ्का परास्ता । अप्रतिबद्धानुव्यवसायस्य न्यायमते प्रामाण्याविषयकत्वेऽपि मन्मते तदभावेनोभयसिद्धात् प्रामाण्याविषयकात् भिन्नत्वसंभवात् ।**

**नैयत्यमित्युत्क्या न्यायमते प्रामाण्यस्यैवंविधां प्रामाण्यानुमितिं प्रति**

**क्वचिदनुव्यवसायं प्रति च विषयत्वात् सिद्धसाधनमिति शङ्का व्युदस्ता ।**

ಈ ಪರಿಷ್ಕಾರದಲ್ಲಿ 'ಉಭಯಸಿದ್ಧ' ಎಂಬ ಪದವನ್ನು ಬಿಟ್ಟರೆ 'ಪ್ರಾಮಾಣ್ಯಾವಿಷಯಕ ಭಿನ್ನವಾದ ಜ್ಞಾನವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ' ಎಂದಂತೆ ಆಗುತ್ತದೆ. ಆಗ ಸಿದ್ಧಾಂತಿಗಳಾದ ನಮಗೆ ಪ್ರಾಮಾಣ್ಯಗ್ರಾಹಕತ್ವೇನ ಅಭಿಮತವಾದ ಅನುವ್ಯವಸಾಯದ ಸಂಗ್ರಹವಾಗಲಿಕ್ಕಿಲ್ಲ. ಹೇಗೆಂದರೆ, ಘಟಜ್ಞಾನದ ಅನುವ್ಯವಸಾಯವು ಅಪ್ರತಿಬದ್ಧವಾದರೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ನ್ಯಾಯಸಿದ್ಧಾಂತ. ಇದರಿಂದ ನ್ಯಾಯಸಿದ್ಧಾಂತದಂತೆ, ಅಂತಹ ಅನುವ್ಯವಸಾಯವು ಪ್ರಾಮಾಣ್ಯಾವಿಷಯಕವಾಯಿತು, ತದ್ಭಿನ್ನವಾಗಿಲ್ಲ, ಆದ್ದರಿಂದ ಆ ಅನುವ್ಯವಸಾಯದ ಸಂಗ್ರಹವಾಗಲಿಲ್ಲ. ಹೀಗೆ ನಮಗೆ ಅಭಿಪ್ರೇತವಾದ ಅಪ್ರತಿಬದ್ಧ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಾಗಿದೆ, ಎಂಬ ಉದ್ದೇಶಿದ ಅಂಶವೇ ಸಿದ್ಧವಾಗದೆ ಅರ್ಥಾಂತರತಾದೋಷ.

'ಉಭಯಸಿದ್ಧ' ಪದವಿದ್ದಾಗ ಈ ದೋಷ ಇಲ್ಲ. ಏಕೆಂದರೆ, ಅಂತಹ ಅನುವ್ಯವಸಾಯವು ಪ್ರಾಮಾಣ್ಯಾವಿಷಯಕ, ಎಂದು ನೈಯಾಯಿಕರು ಒಪ್ಪಿದರೂ ಸಿದ್ಧಾಂತಿಗಳು ಒಪ್ಪಿಲ್ಲ. ಆದ್ದರಿಂದ ಅದು ಅಪ್ರಾಮಾಣ್ಯಾವಿಷಯಕತ್ವೇನ ಉಭಯ ಸಿದ್ಧವಾಗಲಿಲ್ಲ, ತದ್ಭಿನ್ನವಾಗುತ್ತದೆ. ಅದರ ಸಂಗ್ರಹವಾಗುತ್ತದೆ. ಅರ್ಥಾಂತರತಾ ಇಲ್ಲ.

ನೈಯತ್ಯವನ್ನು ವಿವಕ್ಷೆ ಮಾಡದಿದ್ದರೆ ಸಿದ್ಧಸಾಧನತಾದೋಷ. ಏಕೆಂದರೆ, ಪ್ರಾಮಾಣ್ಯ-ಅವಿಷಯಕತ್ವೇನ ಉಭಯಸಿದ್ಧಭಿನ್ನವಾದ ಜ್ಞಾನ ಎಂದರೆ ಪ್ರಾಮಾಣ್ಯಾನುಮಿತಿ ಅಥವಾ ಪಂಚಮಾನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವಿಷಯಕತ್ವವನ್ನು ನೈಯಾಯಿಕರೂ ಒಪ್ಪಿರುತ್ತಾರೆ. ನೈಯತ್ಯಕೊಟ್ಟಾಗ ತಾದೃಶ-ಪ್ರಥಮಾನುವ್ಯವಸಾಯದಲ್ಲಿ ಪ್ರಾಮಾಣ್ಯವಿಷಯಕತ್ವ ಸಿದ್ಧವಾಗಿಲ್ಲದ ಕಾರಣ ಸಿದ್ಧಸಾಧನತಾ ಇಲ್ಲ.

## ನ್ಯಾಯದೀಪ

**ಉಭಯಸಿದ್ಧೇತ್ಯುಕ್ತ್ಯಾ ಇತಿ ॥ 'ಪ್ರಾಮಾಣ್ಯಾವಿಷಯಕ' ಇತ್ಯಾದೌ ಉಕ್ತೇ ಸತಿ ಅನ್ಯತರಸಿದ್ಧಂ ಪ್ರಾಮಾಣ್ಯಾವಿಷಯಕಂ ಯತ್ ಅಪ್ರತಿಬದ್ಧಾನು-ವ್ಯವಸಾಯರೂಪಂ ಜ್ಞಾನಂ ತದ್ವಿಷಯತ್ವಮಾದಾಯ ಪ್ರಾಮಾಣ್ಯಸ್ಯ ಸ್ವತಸ್ತ್ವಂ ಸಿದ್ಧಾಂತೇ ನ ಸಿದ್ಧ್ಯೇತ್ । ತಸ್ಯ ಪ್ರಾಮಾಣ್ಯಾವಿಷಯಕ ಭಿನ್ನತ್ವಾಭಾವಾತ್ । ಉಭಯಸಿದ್ಧೇತ್ಯುಕ್ತೌ ಅಪ್ರತಿಬದ್ಧಾನುವ್ಯವಸಾಯಸ್ಯ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧತ್ವಾಭಾವಾತ್ ಉಭಯಸಿದ್ಧ-ತಾದೃಶಜ್ಞಾನಭಿನ್ನತ್ವಮ್ ಅಸ್ತ್ಯೇವ, ಇತಿ ನಾರ್ಥಾಂತರತ್ವದೋಷಃ ।**

ಉಭಯಸಿದ್ಧ ಪದಕ್ಕೆ ಮೂಲದಲ್ಲಿ ಹೇಳಿದ ಕೃತ್ಯವನ್ನು ರಾಯರು ವಿವರಿಸುತ್ತಿದ್ದಾರೆ–ಆ ಅಂಶವನ್ನು ಬಿಟ್ಟರೆ 'ಪ್ರಾಮಾಣ್ಯಾವಿಷಯಕಂ ಯತ್ ಜ್ಞಾನಂ ತದ್ವಿಷಯತ್ವ ನೈಯತ್ಯಮ್' ಎಂದು ಸ್ವತಸ್ತ್ವಲಕ್ಷಣವಾಗುತ್ತದೆ. ಹೀಗಾದರೆ ಸಿದ್ಧಾಂತಕ್ಕೆ ಅಭಿಪ್ರೇತವಾದ ಸ್ವತಸ್ತ್ವವು ಸಿದ್ಧವಾಗಲಿಕ್ಕಿಲ್ಲ. ಅಪ್ರತಿಬದ್ಧ–ಜ್ಞಾನಾನುವ್ಯವಸಾಯ–ವಿಷಯತ್ವವೇ ಸಿದ್ಧಾಂತ–ರೀತ್ಯಾ ಸ್ವತಸ್ತ್ವ. ಆದರೆ ಅಪ್ರತಿಬದ್ಧ ವಾದ ಅನುವ್ಯವಸಾಯದಲ್ಲಿ ತಾರ್ಕಿಕರು ಪ್ರಾಮಾಣ್ಯವು ವಿಷಯವಾಗಿದೆ, ಎಂದು ಹೇಳುವುದಿಲ್ಲ. ಹೀಗಾಗಿ ಆ ಅನುವ್ಯವಸಾಯವು ಪ್ರಾಮಾಣ್ಯಾವಿಷಯಕವಾಯಿತು, ತದ್ಭಿನ್ನವಾಗಿಲ್ಲ.

ಉಭಯಸಿದ್ಧ, ಎಂಬ ಅಂಶವನ್ನು ಸೇರಿಸಿದರೆ ಅಪ್ರತಿಬದ್ಧವಾದ ಅನುವ್ಯವಸಾಯವು ಪ್ರಾಮಾಣ್ಯಾವಿಷಯಕತ್ವೇನ ತಾರ್ಕಿಕ ಸಿದ್ಧವಾದರೂ ಸಿದ್ಧಾಂತಿಗಳಿಗೆ ಸಿದ್ಧವಾಗಿಲ್ಲದ ಕಾರಣ ತದ್ಭಿನ್ನವಾಗುತ್ತದೆ. ತದ್ವಿಷಯತ್ವವನ್ನು ಸಾಧನೆ ಮಾಡಬಹುದಾದ್ದರಿಂದ ಅರ್ಥಾಂತರತಾ ದೋಷವಿಲ್ಲ.

## ಮೂಲದಲ್ಲಿ ಹೇಳಿದ ಅನುವ್ಯವಸಾಯ ಉಪಲಕ್ಷಣ

**ಅನುವ್ಯವಸಾಯಸ್ಯ, ಇತಿ ಉಪಲಕ್ಷಣಮ್, ಅಪ್ರತಿಬದ್ಧಾನುಮಿತೇಃ, ಅಪ್ರತಿಬದ್ಧ–ಸ್ವಪ್ರಕಾಶಜ್ಞಾನಸ್ಯ ಇತ್ಯಪಿ ಧ್ಯೇಯಮ್ । ಏವಮಗ್ರೇಽಪಿ । ಅಪ್ರತಿಬದ್ಧತ್ವಂ ಚ ಪ್ರಾಮಾಣ್ಯವಿರೋಧ್ಯುಪಸ್ಥಿತಿ–ತತ್–ಸಾಮಗ್ರೀ–ಅಸಮವಹಿತತ್ವಮ್ ।**

ಸಿದ್ಧಾಂತಮತದಲ್ಲಿ ಬರುವ ದೋಷವನ್ನು ಹೇಳಿ ಉಭಯಸಿದ್ಧ ವಿಶೇಷಣಕ್ಕೆ ಸಾರ್ಥಕ್ಯವನ್ನು ಮೂಲದಲ್ಲಿ ತಿಳಿಸಲಾಗಿದೆ. ಇದು ಉಪಲಕ್ಷಣ. ಇದರಂತೆ, ಪ್ರಾಭಾಕರ–ಭಾಟ್ಟಮೀಮಾಂಸಕರ ಮತದಲ್ಲಿಯೂ ಅರ್ಥಾಂತರತಾದೋಷವು ಬರುವುದರಿಂದ ಅದರ ಪರಿಹಾರಕ್ಕಾಗಿ 'ಉಭಯಸಿದ್ಧ' ಎಂಬ ವಿಶೇಷಣವು ಸಾರ್ಥಕವಾಗಿದೆ–

ಭಾಟ್ಟರಮತದಲ್ಲಿ ಅಪ್ರತಿಬದ್ಧವಾದ ಜ್ಞಾತತಾಲಿಂಗಕಾನುಮಿತಿಯು ತಾರ್ಕಿಕರ ಸಿದ್ಧಾಂತದಂತೆ ಪ್ರಾಮಾಣ್ಯ–ಅವಿಷಯಕವಾಗಿದೆ. ಪ್ರಾಭಾಕರರು ಹೇಳುವ ಸ್ವಪ್ರಕಾಶಾತ್ಮಕ ವ್ಯವಸಾಯವು ನ್ಯಾಯಮತದಲ್ಲಿ ಪ್ರಾಮಾಣ್ಯಾವಿಷಯಕವಾಗಿದೆ. ಅದರ ಸಂಗ್ರಹಕ್ಕಾಗಿ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧಭಿನ್ನ, ಎಂದು ಹೇಳಬೇಕು. ಆಗ ಅವೆರಡರ ಸಂಗ್ರಹವೂ ಆಗುತ್ತದೆ. ಮುಂದೆಯೂ ಕೃತ್ಯಚಿಂತನೆ ಮಾಡುವಾಗ ಇದೇರೀತಿ ಮತದ್ವಯವನ್ನು ಉಪಲಕ್ಷಣವನ್ನಾಗಿ ಪರಿಗಣಿಸಬೇಕು.

ಅನುವ್ಯವಸಾಯಾದಿಗಳು 'ಅಪ್ರತಿಬದ್ಧ' ಎಂದರೆ ಅವುಗಳೊಂದಿಗೆ ಪ್ರಾಮಾಣ್ಯಕ್ಕೆ ವಿರೋಧಿ ಯಾದ ಅಪ್ರಾಮಾಣ್ಯಾದಿಗಳ ಉಪಸ್ಥಿತಿ ಅಥವಾ ಅಂತಹ ಉಪಸ್ಥಿತಿಜನಕವಾದ ಸಾಮಗ್ರೀ

ಇರಬಾರದು, ಎಂದರ್ಥ. ಅವುಗಳು ಇದ್ದಾಗ ಅನುವ್ಯವಸಾಯಾದಿಗಳು ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ.

## ನ್ಯಾಯದೀಪ

**ಶಂಕಾನಿರಾಸಪ್ರಕಾರಂ ವ್ಯನಕ್ತಿ–ಅಪ್ರತಿಬದ್ಧೇತಿ ॥ ಉಭಯಸಿದ್ಧೇತ್ಯಾದೇಃ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧಾತ್ ಭಿನ್ನತ್ವಸಂಭವಾತ್, ಇತ್ಯರ್ಥಃ ।**

**ಏವಂವಿಧಾಮಿತಿ ॥ ಉಭಯಸಿದ್ಧ–ಪ್ರಾಮಾಣ್ಯಾವಿಷಯಕಜ್ಞಾನ–ಭಿನ್ನ–ಜ್ಞಾನರೂಪಾಂ 'ಇದಂ ಜ್ಞಾನಂ ಪ್ರಮಾಣಮ್, ಸಮರ್ಥಪ್ರವೃತ್ತಿ ಹೇತುತ್ವಾತ್' ಇತ್ಯನುಮಿತಿಂ ಪ್ರತಿ, ವಕ್ಷ್ಯಮಾಣದಿಶಾ ಸ್ಮೃತ್ಯುಪನೀತೇ ವ್ಯವಸಾಯೇ ಸ್ಮೃತ್ಯುಪನೀತ–ಪ್ರಾಮಾಣ್ಯಾವಗಾಹಿ ಅನುವ್ಯವಸಾಯಮ್, ಗೃಹೀತ ಪ್ರಾಮಾಣ್ಯಕ ಜ್ಞಾನಸಜಾತೀಯ–ಜ್ಞಾನಗೋಚರಾನುವ್ಯವಸಾಯಂ ಚ ಪ್ರತಿ ।**

'ಉಭಯಸಿದ್ಧ' ಎಂಬ ವಿಶೇಷಣಕೊಟ್ಟಾಗ ದೋಷ ಹೇಗೆ ಪರಿಹಾರವಾಗುತ್ತದೆ, ಎಂಬುದನ್ನು 'ಅಪ್ರತಿಬದ್ಧ' ಇತ್ಯಾದಿ ವಾಕ್ಯದಲ್ಲಿ ತಿಳಿಸಲಾಗಿದೆ.

'ನೈಯತ್ಯ' ವಿಶೇಷಣಕ್ಕೆ ಕೃತ್ಯಹೇಳುವಾಗ ಮೂಲದಲ್ಲಿ 'ಏವಂ ವಿಧಾಮ್ ಅನುಮಿತಿಮ್' ಎಂದಿದೆ. ಅಲ್ಲಿ 'ಏವಂ ವಿಧಾಮ್' ಎಂದರೆ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧಭಿನ್ನವಾದ ಎಂದರ್ಥ. ಅನುಮಿತಿ ಎಂದರೆ ತಾರ್ಕಿಕರ ಸಮರ್ಥಪ್ರವೃತ್ತಿಜನಕತ್ವ ಹೇತುವಿನಿಂದ ಹುಟ್ಟಿದ ಅನುಮಿತಿ. 'ಕ್ವಚಿತ್ ಅನುವ್ಯವಸಾಯಂ ಪ್ರತಿ' ಎಂದರೆ, ಮೊದಲು ವ್ಯವಸಾಯ, ಆಮೇಲೆ ಪ್ರಾಮಾಣ್ಯಜ್ಞಾನ, ಆಮೇಲೆ ಅವೆರಡರ ವಿಷಕಲಿತ ಸ್ಮೃತಿಯು ಉಪನಯ ಮರ್ಯಾದಯಾ 'ಅಯಂ ಘಟಃ ಇತಿ ಪ್ರಮಾವಾನಹಮ್' ಎಂಬ ಅನುವ್ಯವಸಾಯರೂಪವಾದ ಜ್ಞಾನವನ್ನು ಹುಟ್ಟಿಸುತ್ತದೆ. ಅಂತಹ ಅನುವ್ಯವಸಾಯ. ಅಥವಾ, ಮೊದಲೊಮ್ಮೆ ಜಲಜ್ಞಾನವು ಬಂದು ಅದರ ಪ್ರಾಮಾಣ್ಯವೂ ಗೃಹೀತವಾಗಿರುತ್ತದೆ. ಅದೇ ಜಲಜ್ಞಾನವು ಮತ್ತೆ ಬಂದಾಗ ಅದರ ಅನುವ್ಯವಸಾಯವು 'ಜಲಜ್ಞಾನಂ ಪ್ರಮಾಣಮ್' ಎಂದೇ ಬರುತ್ತದೆ. ಈ ಮೂರರಲ್ಲೂ ಪ್ರಾಮಾಣ್ಯವು ವಿಷಯವಾಗುತ್ತದೆ, ಎನ್ನುವುದು ನೈಯಾಯಿಕರಿಗೆ ಸಮ್ಮತವಾಗಿದೆ. ಆದ್ದರಿಂದ ಸಿದ್ಧಸಾಧನತಾದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ನೈಯತ್ಯವನ್ನು ಹೇಳಬೇಕು.

## ಸ್ವತಸ್ತ್ವಪರಿಷ್ಕಾರಗಳಲ್ಲಿ ವಿಶೇಷ

**अत्राद्यं पक्षद्वयं स्वमतासाधारणम् । तृतीयं तु मीमांसकादिमतसाधारणमिति ज्ञेयम् ।**

ಇದುವರೆಗೆ ಮೂರು ವಿಧದಲ್ಲಿ ಸ್ವತಸ್ತ್ವವನ್ನು ನಿರ್ವಚನ ಮಾಡಲಾಗಿದೆ. ಇವುಗಳಲ್ಲಿ ಮೊದಲ ಎರಡು ಪಕ್ಷಗಳು ದ್ವೈತಮತಕ್ಕೆ ಮಾತ್ರ ಅಭಿಪ್ರೇತವಾದುದು. ಮೀಮಾಂಸಕರ ಮತದಲ್ಲಿ ಆ ಎರಡು ಲಕ್ಷಣಗಳನ್ನು ಸಮನ್ವಯ ಮಾಡಲಾಗದು. ಏಕೆಂದರೆ, ಆ ಎರಡೂ ಲಕ್ಷಣಗಳಲ್ಲಿ ಸಾಕ್ಷಿಪದವು ಸೇರಿದೆ. ಸಾಕ್ಷಿ ಎಂದರೆ ವ್ಯವಸಾಯವಿಷಯಕವಾದ ಲೌಕಿಕ ಪ್ರತ್ಯಕ್ಷ. ಅಂದರೆ, ಅನುವ್ಯವಸಾಯ. ಭಾಟ್ಟರಾಗಲೀ ಪ್ರಾಭಾಕರರಾಗಲೀ ಇಂತಹ ಅನುವ್ಯವಸಾಯವನ್ನು ಒಪ್ಪಿಲ್ಲ. ಆದ್ದರಿಂದ ಅವರಿಗೆ ಈ ಪರಿಷ್ಕಾರವು ಸಮ್ಮತವಾಗುವುದಿಲ್ಲ. ದ್ವೈತದರ್ಶನಕ್ಕೆ ಮಾತ್ರ ಸಮ್ಮತವಾದ ಲಕ್ಷಣಗಳು ಅವು.

ಕೊನೆಯ ಲಕ್ಷಣ ದ್ವೈತದರ್ಶನಕ್ಕೂ ಮೀಮಾಂಸಾದರ್ಶನಕ್ಕೂ ಸಮ್ಮತವಾಗಿದೆ. ಎಲ್ಲರ ಮತದಲ್ಲೂ ಆ ಲಕ್ಷಣವನ್ನು ಸಮನ್ವಯ ಮಾಡಬಹುದಾಗಿದೆ. ಆದ್ದರಿಂದ ಆ ಲಕ್ಷಣವು ಸರ್ವಸ್ವತಸ್ತ್ವಮತ ಸಾಧಾರಣವಾಗಿದೆ.

## ನ್ಯಾಯದೀಪ

**ಅತ್ರೇತಿ ॥ ಉಕ್ತಸ್ವತಸ್ತ್ವನಿರುಕ್ತಿ-ತ್ರಯಮಧ್ಯೇ ಇತ್ಯರ್ಥಃ । ಸ್ವಮತೇತಿ ॥ ತಾರ್ಕಿಕಮತಸಾಧಾರಣ್ಯೇಽಪಿ ಮೀಮಾಂಸಕ-ತ್ರಿತಯಸಾಧಾರಣಂ ನೇತ್ಯರ್ಥಃ । ಮೀಮಾಂಸಕಾದೀತ್ಯಾದಿಪದೇನ ಮುರಾರಿಮಿಶ್ರಃ, ಸಿದ್ಧಾಂತೀ, ಮಾಯಾವಾದಿಪ್ರಭೃತಿರ್ವಾ ಗ್ರಾಹ್ಯಃ ।**

ಮೂಲದಲ್ಲಿ 'ಮೀಮಾಂಸಕಾದಿ' ಎಂಬ ಆದಿಪದದಿಂದ ಮುರಾರಿ ಮಿಶ್ರ, ದ್ವೈತವಾದಿಗಳು, ಮಾಯಾವಾದಿಗಳನ್ನು ಪರಿಗ್ರಹಿಸಬೇಕು.

## ಪ್ರಥಮಸ್ವತಸ್ತ್ವನಿರುಕ್ತಿ ಸುಧಾ ಸಮ್ಮತವಾಗಿದೆ

**एतदेव पक्षत्रयम् अभिप्रेत्योक्तं सुधायां ''ज्ञानगतयाथार्थ्यस्य ज्ञानग्राहकमात्रग्राह्यत्वं स्वतस्त्वं'' इति । अत्राद्ये पक्षे सुधास्थेन ज्ञानग्राहकशब्देन ग्राह्यप्रामाण्याश्रय-तत्तज्ज्ञानविषयक-साक्षिज्ञानं,**

**ग्राह्यशब्देन तद्विषयत्वं, मात्रपदेन कार्त्स्न्यपरेण तन्नियमः, अवधारणपरेण प्रतिबद्धव्यवच्छेदश्च विवक्षितः ।**

ಈ ಮೂರು ವಿಧದ ಸ್ವತಸ್ತ್ವಲಕ್ಷಣಗಳಿಗೆ ಅನುಗುಣವಾಗಿಯೇ ಶ್ರೀಮನ್ನ್ಯಾಯಸುಧಾದಲ್ಲಿ ಹೀಗೆ ಹೇಳಲಾಗಿದೆ- ಜ್ಞಾನದಲ್ಲಿರುವ ಯಥಾರ್ಥ್ಯರೂಪವಾದ ಪ್ರಾಮಾಣ್ಯಕ್ಕೆ ''ಜ್ಞಾನಗ್ರಾಹಕ ಮಾತ್ರ ಗ್ರಾಹ್ಯತ್ವವೇ ಸ್ವತಸ್ತ್ವ'' ಎಂದು. (ಜಿಜ್ಞಾಸಾಧಿಕರಣ-'ಅನವಸ್ಥಾನ್ಯಥಾ ಹಿ ಸ್ಯಾತ್-ಅನು.)

ಇಲ್ಲಿ ಮಾಡಿರುವ ಮೊದಲನೆಯ ಪರಿಷ್ಕಾರ-''ಗ್ರಾಹ್ಯ ಪ್ರಾಮಾಣ್ಯ ವಿರೋಧ್ಯುಪಸ್ಥಾಪಕ ಸಾಮಗ್ರ್ಯಸಮವಹಿತ - ಗ್ರಾಹ್ಯಪ್ರಾಮಾಣ್ಯಾಶ್ರಯ-ತತ್ತಜ್ಞಾನವಿಷಯಕ-ಸಾಕ್ಷಿಜ್ಞಾನವಿಷಯತ್ವ-ನೈಯತ್ಯಮ್'' ಎಂದಿದೆ.

ಈ ಲಕ್ಷಣದಲ್ಲಿ ನಾಲ್ಕು ಅಂಶಗಳು ಸೇರಿವೆ.

1.ಸಾಕ್ಷಿಜ್ಞಾನ 2.ಸಾಕ್ಷಿಜ್ಞಾನ ವಿಷಯತ್ವ 3.ನೈಯತ್ಯ(ನಿಯಮ) 4.ವಿರೋಧಿ ಸಾಮಗ್ರ್ಯಸಮವಹಿತತ್ವ.

ಈ ಅಂಶಗಳು ಸುಧಾ ಗ್ರಂಥದ ಪದಗಳಿಂದ ಲಭ್ಯವಾಗಿವೆ.

1. ಸುಧಾದ ಜ್ಞಾನಗ್ರಾಹಕ ಪದದಿಂದ ಸಾಕ್ಷಿಜ್ಞಾನವು ಅಭಿಪ್ರೇತವಾಗಿದೆ. ಜ್ಞಾನಗ್ರಾಹಕ ಎಂದರೆ ಜ್ಞಾನವಿಷಯಕ ಪ್ರತ್ಯಕ್ಷ. ಅದು ಸಾಕ್ಷಿಜ್ಞಾನರೂಪವಾದುದು. ಸಾಕ್ಷಿಗೆ ವಿಷಯವಾದ ಆ ಜ್ಞಾನವು ಗ್ರಾಹ್ಯಪ್ರಾಮಾಣ್ಯಕ್ಕೆ ಆಶ್ರಯವಾಗಿದೆ. ಆದ್ದರಿಂದ ಜ್ಞಾನಗ್ರಾಹಕ ಎಂಬ ಸುಧಾದಲ್ಲಿರುವ ಪದಕ್ಕೆ ಗ್ರಾಹ್ಯಪ್ರಾಮಾಣ್ಯಾಶ್ರಯಜ್ಞಾನ (ವ್ಯವಸಾಯ) ವಿಷಯಕ ಸಾಕ್ಷಿ, ಎಂದು ಅರ್ಥ.

2. ಸುಧಾದಲ್ಲಿರುವ 'ಗ್ರಾಹ್ಯ' ಎಂಬ ಶಬ್ದದಿಂದ ಅಂತಹ ಸಾಕ್ಷಿಜ್ಞಾನಕ್ಕೆ ವಿಷಯವಾದುದು ಪ್ರಾಮಾಣ್ಯ ಎಂದು ಅರ್ಥ. ಗ್ರಾಹ್ಯ ಎಂದರೆ ಗ್ರಹವಿಷಯ ಎಂದರ್ಥ. ಗ್ರಹ ಎಂದರೆ ಜ್ಞಾನ. ಆ ಜ್ಞಾನ ಪ್ರಕೃತದಲ್ಲಿ ಸಾಕ್ಷಿರೂಪವಾದ ಜ್ಞಾನ ವಿವಕ್ಷಿತ. ಅದಕ್ಕೆ ವಿಷಯ ಪ್ರಾಮಾಣ್ಯ. ಅಲ್ಲಿಗೆ ಗ್ರಾಹ್ಯಪದದಿಂದ ಸಾಕ್ಷಿಜ್ಞಾನ ವಿಷಯ ಎಂಬ ಅರ್ಥವು ಅಭಿಪ್ರೇತ.

3. ಸುಧಾದಲ್ಲಿರುವ ಮಾತ್ರ ಶಬ್ದದಿಂದ ''ಸಾಕ್ಷಿಜ್ಞಾನಕ್ಕೆ ನಿಯಮೇನ ಪ್ರಾಮಾಣ್ಯವು ವಿಷಯವಾಗುತ್ತದೆ'' ಎಂಬ ನೈಯತ್ಯವು ಹೇಳಲ್ಪಟ್ಟಿದೆ. ಹೇಗೆಂದರೆ, 'ಜ್ಞಾನಗ್ರಾಹಕ ಮಾತ್ರ' ಎಂಬಲ್ಲಿ ಮಾತ್ರ ಶಬ್ದಕ್ಕೆ ಕೃತ್ಸ್ನ-ಸಕಲ ಎಂದು ಅರ್ಥ. ಅಲ್ಲಿಗೆ 'ಜ್ಞಾನಗ್ರಾಹಕವಾದ ಎಲ್ಲ ಸಾಕ್ಷಿಜ್ಞಾನ ದಲ್ಲೂ ಪ್ರಾಮಾಣ್ಯವು ವಿಷಯವಾಗಿದೆ' ಎಂದರ್ಥ. ಅದರ ಅಭಿಪ್ರಾಯ 'ಯಾವ ಸಾಕ್ಷಿಜ್ಞಾನವು ಜ್ಞಾನವನ್ನು ವಿಷಯೀಕರಿಸುವುದೋ ಆ ಜ್ಞಾನವು ಪ್ರಾಮಾಣ್ಯವನ್ನೂ ವಿಷಯೀಕರಿಸಿಯೇ ಇರುತ್ತದೆ' (ಜ್ಞಾನಗ್ರಾಹಕೇಣ ಗೃಹ್ಯತೇ ಏವ) ಎಂದು. ಇದರಿಂದ ನಿಯಮ ಸಿದ್ಧವಾಯಿತು.

4. ಸುಧಾದಲ್ಲಿರುವ ಸ್ವತಸ್ತ್ವ ಪರಿಷ್ಕಾರದ ಮಾತ್ರ ಶಬ್ದಕ್ಕೆ ಅವಧಾರಣವೂ ಅರ್ಥ.

''ಜ್ಞಾನಗ್ರಾಹಕೇಣೈವ ಗ್ರಾಹ್ಯತ್ವಂ'' (ಪ್ರಾಮಾಣ್ಯಸ್ಯ) ಎಂದು ಅಭಿಪ್ರಾಯ. ಏವಕಾರದಿಂದ ವಿರೋಧಿಸಾಮಗ್ರೀ ಸಮವಧಾನವು ವ್ಯಾವರ್ತ್ಯ. ಅಂದರೆ, ಪ್ರಾಮಾಣ್ಯವು ಕೇವಲ ಸಾಕ್ಷಿಯಿಂದ ಗ್ರಾಹ್ಯವಾಗುತ್ತದೆ, ವಿರೋಧಿ ಸಾಮಗ್ರೀ ಸಹಿತವಾದ ಸಾಕ್ಷಿಯಿಂದಲ್ಲ, ಎಂದು ತಾತ್ಪರ್ಯ. ಇದರಿಂದ ಇಲ್ಲಿ ಸಾಕ್ಷಿಗೆ ಹೇಳಿದ ''ಪ್ರಾಮಾಣ್ಯವಿರೋಧಿ-ಉಪಸ್ಥಾಪಕ ಸಾಮಗ್ರೀ- ಅಸಮವಹಿತ'' ಎಂಬ ವಿಶೇಷಣವು ತಿಳಿಯುತ್ತದೆ.

ಹೀಗೆ ತರ್ಕತಾಂಡವದಲ್ಲಿ ಹೇಳಿರುವ ಮೊದಲನೆಯ ಸ್ವತಸ್ತ್ವಪರಿಷ್ಕಾರವು ನ್ಯಾಯಸುಧಾದಲ್ಲಿ ಹೇಳಿದ ಸ್ವತಸ್ತ್ವದ ವಿವರಣೆಯೇ ಆಗಿದೆ.

## ನ್ಯಾಯದೀಪ

**ಉಕ್ತಪಕ್ಷತ್ರಯಂ ಸುಧಾವಾಕ್ಯಾರೂಢಂ ಕರೋತಿ– ಏತದಿತಿ ॥ ಉಕ್ತಮಿತಿ ॥**

**ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ।**

**ಇತಿ ಜಿಜ್ಞಾಸಾನಯಾನುವ್ಯಾಖ್ಯಾನ-ವ್ಯಾಖ್ಯಾನಾವಸರೇ ಉಕ್ತಮಿತ್ಯರ್ಥಃ । ತದ್ವ್ಯನಕ್ತಿ-ಅತ್ರೇತ್ಯಾದಿನಾ । ಮಾತ್ರಪದಸ್ಯ ದ್ವ್ಯರ್ಥತ್ವಮುಪೇತ್ಯಾಹ-ಕಾಸ್ನ್ಯೇತ್ಯಾದಿ ॥ ಯಾವಂತಿ ಜ್ಞಾನಗ್ರಾಹಕಾಣಿ ತಾವದ್ಭಿಃ ಗ್ರಾಹ್ಯತ್ವೋಕ್ತೌ ಜ್ಞಾನಗ್ರಾಹಕೇಣ ಗೃಹ್ಯತೇ ಏವ ಇತಿ ನಿಯಮಲಾಭಾದಿತಿ ಭಾವಃ । ಪ್ರತಿಬದ್ಧೇತಿ ॥ ಜ್ಞಾನಗ್ರಾಹಕೇಣೈವ ಗೃಹ್ಯತೇ ಇತ್ಯುಕ್ತೇ, ನ ತು ವಿರೋಧಿ ಸಾಮಗ್ರೀ ಸಮವಹಿತೇನ ಇತ್ಯರ್ಥಲಾಭಾತ್ ಇತಿ ಭಾವಃ ॥**

ಸುಧಾಪರಿಷ್ಕಾರದಲ್ಲಿರುವ ಮಾತ್ರ ಪದಕ್ಕೆ ಸಕಲ, ಅವಧಾರಣ ಎಂದು ಎರಡು ಅರ್ಥ. ಸಕಲ ಎಂಬ ಅರ್ಥ ಮಾತ್ರ ಮಾಡಿದಾಗ ಜ್ಞಾನಗ್ರಾಹಕ ಸಕಲಗಳಿಂದಲೂ ಪ್ರಾಮಾಣ್ಯವು ಗೃಹೀತವಾಗಿಯೇ ಆಗುತ್ತದೆ, ಎಂಬ ನಿಯಮ ಸಿಗುತ್ತದೆ. ಅವಧಾರಣಾರ್ಥವನ್ನು 'ಜ್ಞಾನಗ್ರಾಹಕೇಣೈವ' ಎಂಬಲ್ಲಿ ಸೇರಿಸಬೇಕು. ಇದರಿಂದ, ವಿರೋಧಿ ಸಮವಹಿತವಾದ ಸಾಮಗ್ರಿಯ ವ್ಯವಚ್ಛೇದ ಲಭ್ಯವಾಗುತ್ತದೆ.

## ದ್ವಿತೀಯ ಪಕ್ಷವೂ ಸುಧೋಕ್ತ

**द्वितीय पक्षे, ग्राह्यशब्देन उक्तसाक्षिज्ञानविषयत्वयोग्यता, अवधारणपरेण मात्रपदेन ज्ञानत्वग्रहणशक्तिवत् प्रमात्वग्रहणशक्तेरपि सहजत्वं विवक्षितम् ।**

ಎರಡನೆಯ ಸ್ವತಸ್ತ್ವ ಹೀಗಿದೆ–ಗ್ರಾಹ್ಯಪ್ರಾಮಾಣ್ಯಾಶ್ರಯ ತತ್ತಜ್ಜ್ಞಾನವಿಷಯಕ–ಸಾಕ್ಷಿಜ್ಞಾನ ವಿಷಯತ್ವಯೋಗ್ಯತ್ವಮ್॥ ಇಲ್ಲಿ ಯೋಗ್ಯತ್ವವನ್ನು ವ್ಯಾಸರಾಜರು ಹೀಗೆ ತಿಳಿಸಿದ್ದಾರೆ– ''ಸಾಕ್ಷಿನಿಷ್ಠಾಂ ಸಹಜಾಂ ಶಕ್ತಿಂ ಪ್ರತಿ ಅವಚ್ಛೇದಕತ್ವಮ್'' ಎಂದು. ಇದರಿಂದ ಈ ಪರಿಷ್ಕಾರದಲ್ಲಿ ಎರಡು ಅಂಶಗಳು ಸೇರುತ್ತವೆ–

1. ಪ್ರಾಮಾಣ್ಯವು ಸಾಕ್ಷಿಜ್ಞಾನ ವಿಷಯತ್ವ ಯೋಗ್ಯವಾಗಿದೆ.

2. ಸಾಕ್ಷಿಗೆ ಪ್ರಾಮಾಣ್ಯಗ್ರಹಣ ಶಕ್ತಿ ಸಹಜವಾದುದು.

ಈ ಎರಡೂ ಅಂಶಗಳೂ ಸುಧಾದಲ್ಲಿರುವ ಪರಿಷ್ಕಾರದಿಂದ ತಿಳಿಯುತ್ತವೆ.

ಸುಧಾದಲ್ಲಿ ಪ್ರಾಮಾಣ್ಯವು 'ಜ್ಞಾನಗ್ರಾಹಕ ಮಾತ್ರ ಗ್ರಾಹ್ಯ' ಎನ್ನಲಾಗಿದೆ. 'ಗ್ರಾಹ್ಯ' ಎಂಬಲ್ಲಿ ಅರ್ಹಾರ್ಥದಲ್ಲಿ ಣ್ಯತ್ ಪ್ರತ್ಯಯ ಬಂದಿದೆ–ಗೃಹೀತುಂ ಯೋಗ್ಯಂ=ಗ್ರಾಹ್ಯಮ್, ಎಂದರ್ಥ. ಪ್ರಾಮಾಣ್ಯವು ಸಾಕ್ಷಿಜ್ಞಾನವಿಷಯತ್ವ–ಯೋಗ್ಯವಾಗಿದೆ, ಎಂದು ಅಭಿಪ್ರಾಯ. ಇದರಿಂದ ಮೊದಲನೆಯ ಅಂಶ ತಿಳಿಯಿತು.

2. ಸುಧಾದ ಮಾತ್ರ ಶಬ್ದವು ಅವಧಾರಣಾರ್ಥಕವಾಗಿದೆ. ಆದರಿಂದಾಗಿ 'ಪ್ರಾಮಾಣ್ಯಂ ಜ್ಞಾನಗ್ರಾಹಕೇಣೈವ ಗೃಹ್ಯತೇ, ನ ತು ಅಧಿಕೇನ ಕಾರಣವಿಶೇಷೇಣ' ಎಂಬ ಅಭಿಪ್ರಾಯ ಬರುತ್ತದೆ. ಇದರ ತಾತ್ಪರ್ಯ–ಸಾಕ್ಷಿಯಲ್ಲಿರುವ ಪ್ರಾಮಾಣ್ಯ ಗ್ರಹಣ ಶಕ್ತಿಯು ಜ್ಞಾನತ್ವ ಗ್ರಹಣಶಕ್ತಿಯಂತೆಯೇ ಸಹಜವಾಗಿದೆ, ಹೊರತು, ಕಾರಣಾಂತರಗಳಿಂದ ಆಹಿತವಾದ ಶಕ್ತಿಯಲ್ಲ, ಹೀಗೆ ಎರಡನೆಯ ಅಂಶವೂ ತಿಳಿಯುತ್ತದೆ.

ಹೀಗೆ ಎರಡನೆಯ ಸ್ವತಸ್ತ್ವ ಪರಿಷ್ಕಾರವೂ ಸುಧಾವಾಕ್ಯದ ಅಭಿಪ್ರಾಯವೇ ಆಗಿದೆ.

## ನ್ಯಾಯದೀಪ

**ಅರ್ಹಾರ್ಥ–ಣ್ಯತ್‌ಪ್ರತ್ಯಯಾಂತತ್ವಮುಪೇತ್ಯಾಹ–ಗ್ರಾಹ್ಯಶಬ್ದೇನೇತಿ ॥**

**ಪ್ರಮಾತ್ವೇತ್ಯಾದಿ॥ ಜ್ಞಾನಗ್ರಾಹಕಮಾತ್ರೇಣ ಇತ್ಯಸ್ಯ ಜ್ಞಾನಗ್ರಾಹಕೇಣೈವ, ನತು ಅಧಿಕೇನ ಇತ್ಯುಕ್ತೌ ಪ್ರಮಾತ್ವಗ್ರಹಣಶಕ್ತೇರಪಿ ಸಹಜತ್ವಲಾಭಾತ್, ಇತಿ ಭಾವಃ ॥**

**ಯದ್ಯಪಿ ಶಕ್ತೇರೇಕತ್ವಮೇವ ಲಭ್ಯತೇ। ತಥಾಪಿ ಪ್ರತಿಬಂಧಸ್ಥಲೇ ಸಾಕ್ಷಿಣಃ ಪ್ರಾಮಾಣ್ಯಗ್ರಹಣಶಕ್ತೇಃ ಪ್ರತಿಬಂಧೇಽಪಿ ನ ಜ್ಞಾನತ್ವಗ್ರಹಣಶಕ್ತೇಃ ಇತಿ ಶಕ್ತಿದ್ವಿತ್ವಮುಪೇತ್ಯ ಸಹಜತ್ವಂ ವಿವಕ್ಷಿತಮ್ ಇತ್ಯುಕ್ತಮ್ ।**

ವಸ್ತುತಸ್ತು ಅವಧಾರಣಾರ್ಥಕವಾದ ಮಾತ್ರಪದದಿಂದ ಸಾಕ್ಷಿಯಲ್ಲಿರುವ ಜ್ಞಾನಗ್ರಹಣಶಕ್ತಿ ಮತ್ತು ಪ್ರಾಮಾಣ್ಯಗ್ರಹಣಶಕ್ತಿ ಇವೆರಡೂ ಒಂದೇ ಎಂದಿಷ್ಟೇ ಸಿದ್ಧವಾಗುತ್ತದೆ. ಸಹಜತ್ವವು ಉಕ್ತಿಲಭ್ಯ

ವಲ್ಲ. ಆದರೂ ಪ್ರತಿಬಂಧಕವಿದ್ದಾಗ ಸಾಕ್ಷಿಯು ಜ್ಞಾನವನ್ನು ಗ್ರಹಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಇಂತಹ ಸ್ಥಿತಿಯಲ್ಲಿ ಶಕ್ತಿದ್ವಯವನ್ನು ಅಂಗೀಕರಿಸಬೇಕಾದ ಸಂಭವ ಇದೆ. ಆದ್ದರಿಂದ ಸುಧಾದ ಅಭಿಪ್ರಾಯ ಶಕ್ತಿಯ ಏಕತ್ವವಲ್ಲ, ಅದರ ಸಹಜತ್ವ ಎಂದಿದ್ದಾರೆ ಮೂಲಕಾರರು.

## ತೃತೀಯ ಪಕ್ಷವೂ ಸುಧಾಲಭ್ಯ

**तृतीयपक्षे ज्ञानग्राहकशब्देन साक्षितदितरसाधारणं ज्ञानम्, मात्रशब्देनावधारणपरेण उभयसिद्धप्रामाण्याविषयकज्ञान-व्यवच्छेदः, कात्स्न्यार्थेनाप्रतिबद्धसर्वानुव्यवसायसंग्रहश्च विवक्षित इति ज्ञेयम् ॥ ३ ॥**

ಮೂರನೆಯ ಸ್ವತಸ್ತ್ವ-ಉಭಯಸಿದ್ಧ-ಪ್ರಾಮಾಣ್ಯಾವಿಷಯಕಜ್ಞಾನಭಿನ್ನ-ಜ್ಞಾನವಿಷಯತ್ವ-ನೈಯತ್ಯಮ್, ಈ ಲಕ್ಷಣದಲ್ಲಿ ಮೂರು ಅಂಶಗಳಿವೆ.

ಜ್ಞಾನವಿಷಯತ್ವ-ಎಂಬಲ್ಲಿ ಜ್ಞಾನಪದದಿಂದ ಸಾಕ್ಷಿಜ್ಞಾನಮಾತ್ರ ವಿವಕ್ಷಿವಲ್ಲ. ಹಾಗಿದ್ದರೆ, ಅದು ಮೀಮಾಂಸಾಮತಸಾಧಾರಣವಾಗುವುದಿಲ್ಲ. ಆದ್ದರಿಂದ ಅಲ್ಲಿ ಜ್ಞಾನ ಎಂದರೆ ಸಾಕ್ಷಿ-ಸ್ವಪ್ರಕಾಶಜ್ಞಾನ-ಅನುಮಿತಿ-ಅನುವ್ಯವಸಾಯ ಇವೆಲ್ಲವೂ ಆಗಿದೆ. ಸಿದ್ಧಾಂತದಲ್ಲಿ ಸಾಕ್ಷಿಯನ್ನು ಪರಿಗಣಿಸಿ ಸಮನ್ವಯ, ಪ್ರಾಭಾಕರ ಮತದಂತೆ ಸ್ವಪ್ರಕಾಶ ಜ್ಞಾನವನ್ನೂ, ಭಾಟ್ಟಮತದಲ್ಲಿ ಅನುಮಿತಿಯನ್ನೂ, ಮಿಶ್ರಮತದಲ್ಲಿ ಅನುವ್ಯವಸಾಯವನ್ನೂ ಪರಿಗಣಿಸಿ ಸಮನ್ವಯ.

1. ಸುಧಾದಲ್ಲಿರುವ 'ಜ್ಞಾನಗ್ರಾಹಕ ಮಾತ್ರಗ್ರಾಹ್ಯತ್ವಂ' ಎಂಬಲ್ಲಿರುವ ಜ್ಞಾನಗ್ರಾಹಕ ಪದದಿಂದ ಸಾಕ್ಷಿ, ಸ್ವಪ್ರಕಾಶಜ್ಞಾನ ಇವೆಲ್ಲವನ್ನೂ ಇಟ್ಟುಕೊಳ್ಳಬೇಕು. ಜ್ಞಾನಗ್ರಾಹಕಪದವು ಮತಭೇದೇನ ಅವೆಲ್ಲದಕ್ಕೂ ವಾಚಕ.

2. ಎರಡನೆಯ ಅಂಶ- 'ಉಭಯಸಿದ್ಧ-ಪ್ರಾಮಾಣ್ಯ-ಅವಿಷಯಕ ಜ್ಞಾನಭಿನ್ನ' ಎನ್ನುವ ವಿಶೇಷಣ. ಈ ವಿಶೇಷಣವು ಸುಧಾದಲ್ಲಿರುವ ಮಾತ್ರ ಶಬ್ದದ ಅಭಿಪ್ರಾಯ. ಅದಕ್ಕೆ 'ಅವಧಾರಣ' ಅರ್ಥ. ''ಜ್ಞಾನಗ್ರಾಹಕೇಣೈವ'' ಎಂದು. ಇಲ್ಲಿ ಏವ ಪದದಿಂದ ಉಭಯಸಿದ್ಧ-ಪ್ರಾಮಾಣ್ಯಾವಿಷಯಕ ಜ್ಞಾನದ ವ್ಯವಚ್ಛೇದವು ವಿವಕ್ಷಿತ. ಅದರಿಂದಾಗಿ ತಾದೃಶಜ್ಞಾನಭಿನ್ನ ಜ್ಞಾನಗ್ರಾಹಕೇಣ ಗೃಹ್ಯತೇ, ಎನ್ನುವ ಅರ್ಥ ಸಿದ್ಧವಾಗುತ್ತದೆ.

3. ಮೂರನೆಯ ಅಂಶ- ನೈಯತ್ಯ. ನೈಯತ್ಯ ಎಂದರೆ ತಾದೃಶ ಸಕಲ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯವಾಗಿದೆ, ಎಂದರ್ಥ. ಸುಧಾದಲ್ಲಿರುವ 'ಜ್ಞಾನಗ್ರಾಹಕೇಣೈವ' ಎಂಬಲ್ಲಿ ಏವಕಾರಕ್ಕೆ ಕೃತ್ಸ್ನ=ಸಕಲ ಎಂದರ್ಥ. ಅರ್ಥಾತ್ ತಾದೃಶ ಜ್ಞಾನಗ್ರಾಹಕವಾದ ಸಕಲ

ಜ್ಞಾನಗಳಿಂದಲೂ ಪ್ರಾಮಾಣ್ಯವು ಗ್ರಾಹ್ಯವಾಗಿದೆ, ಎಂದು ಅಭಿಪ್ರಾಯ. ಇದರಿಂದ ನೈಯತ್ಯ ಸಿದ್ಧವಾಯಿತು.

ಹೀಗೆ ಮೂರನೆಯ ಪರಿಷ್ಕಾರವೂ ಸುಧಾಸಮ್ಮತವಾಗಿದೆ.

## ನ್ಯಾಯದೀಪ

**ತದಿತರೇತಿ ॥ ಸಾಕ್ಷೀತರ–ಸ್ವಪ್ರಕಾಶಜ್ಞಾನ–ಅನುಮಿತಿ–ಅನುವ್ಯವಸಾಯ ರೂಪಮ್ ಇತ್ಯರ್ಥಃ । ನೈಯತ್ಯಲಾಭ–ಪ್ರಕಾರಮಾಹ–ಕಾಸ್ನ್ಯಾರ್ಥೇನೇತಿ ॥ ಅಪ್ರತಿಬದ್ಧೇತಿ ॥ ವಿರೋಧಿಸಾಮಗ್ರ್ಯ-ಸಮವಹಿತ– ಜ್ಞಾನಗೋಚರ–ಸರ್ವಜ್ಞಾನಗ್ರಹಶ್ಚ ವಿವಕ್ಷಿತ ಇತ್ಯರ್ಥಃ ॥**

ಮೂಲದಲ್ಲಿ ಅಪ್ರತಿಬದ್ಧ–ಸರ್ವಾನುವ್ಯವಸಾಯ, ಎಂದರೆ ಪ್ರಾಮಾಣ್ಯ ವಿರೋಧಿ ಸಾಮಗ್ರಿಗಳು ಇಲ್ಲದಿರುವ, ಜ್ಞಾನವಿಷಯಕವಾದ ಸಕಲ ಜ್ಞಾನಗಳು, ಎಂದು ಅರ್ಥ.

**॥ ಇಲ್ಲಿಗೆ ಸ್ವಮತೇ ಸ್ವತಸ್ತ್ವನಿರುಕ್ತಿ ಪ್ರಕರಣ ಮುಗಿಯಿತು ॥ ೧ ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಮೂರು ರೀತಿಯಿಂದ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವವನ್ನು ನಿರೂಪಿಸ ಲಾಗಿದೆ. ಅವುಗಳಲ್ಲಿ ಮೊದಲನೆಯದು ಪ್ರಾಮಾಣ್ಯ ಜ್ಞಾನರೂಪ ಫಲಮುಖವಾದುದು. ಎರಡನೆಯದು ಸಾಕ್ಷಿಗ್ರಹಣಯೋಗ್ಯತಾರೂಪವಾದುದು। ಮೂರನೆಯದು ಸ್ವತಸ್ತ್ವವಾದಿಗಳಾದ ಮೀಮಾಂಸಕರು ಹಾಗೂ ಸಕಲ ವೇದಾಂತಿಗಳಿಗೂ ಸಮ್ಮತವಾದುದು. ಈ ಮೂರೂ ಸ್ವತಸ್ತ್ವ ನಿರುಕ್ತಿಗಳು ಸುಧೋಕ್ತಪರಿಷ್ಕಾರದಿಂದಲೇ ಲಭ್ಯವಾಗುತ್ತವೆ, ಎಂದು ಶ್ರೀವ್ಯಾಸರಾಜರು ತೋರಿಸಿ ಕೊಟ್ಟಿದ್ದಾರೆ.

**ಮೊದಲನೆಯ ಸ್ವತಸ್ತ್ವನಿರುಕ್ತಿ**–ಗ್ರಾಹ್ಯಪ್ರಾಮಾಣ್ಯವಿರೋಧ್ಯುಪಸ್ಥಾಪಕ–ಸಾಮಗ್ರ್ಯಸಮ-ವಹಿತ–ಗ್ರಾಹ್ಯಪ್ರಾಮಾಣ್ಯಾಶ್ರಯ–ತತ್ತಜ್ಜ್ಞಾನವಿಷಯಕ–ಸಾಕ್ಷಿಜ್ಞಾನವಿಷಯತ್ವನೈಯತ್ಯಮ್ ।

ವಿವಕ್ಷಿತ ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯಾದಿಗಳ ಉಪಸ್ಥಿತಿ ಅಥವಾ ಅಂತಹ ಉಪಸ್ಥಿತಿಗೆ ಜನಕವಾದ ಸಾಮಗ್ರಿಗಳು ಇಲ್ಲದಿರುವಾಗ ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರಾಮಾಣ್ಯವನ್ನೂ ಗ್ರಹಿಸಿಯೇ ತೀರುತ್ತದೆ, ಎಂದು ಇದರ ಅರ್ಥ.

ಇಲ್ಲಿ ಸಾಕ್ಷಿ ಎಂದರೆ ಜ್ಞಾನವಿಷಯಕವಾದ ಲೌಕಿಕಪ್ರತ್ಯಕ್ಷ. ಅದು ತಾರ್ಕಿಕಮತದಲ್ಲಿ ಮಾನಸ ಅನುವ್ಯವಸಾಯ, ನಮ್ಮ ಮತದಲ್ಲಿ ಆತ್ಮರೂಪವಾದ ಸಾಕ್ಷಿಯಿಂದ ಜನ್ಯವಾದ ಜ್ಞಾನ. ಸಾಕ್ಷಿಪದವನ್ನು ಸೇರಿಸಿರುವುದರಿಂದಾಗಿ 'ಜ್ಞಾನಂ ಗುಣಃ' ಇತ್ಯಾದಿ ವಾಕ್ಯಗಳಿಂದ ಹುಟ್ಟುವ ಶಾಬ್ದಬೋಧವು 'ಜ್ಞಾನವಿಷಯಕಜ್ಞಾನ' ಪದದಿಂದ ಗೃಹೀತವಾಗುವುದಿಲ್ಲ. ಆದ್ದರಿಂದ ಜ್ಞಾನವಿಷಯಕ ಶಾಬ್ದಬೋಧದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲದ ಕಾರಣ ನಿಯಮಕ್ಕೆ ಚ್ಯುತಿಯಾಗಿ ಬಾಧದೋಷಕ್ಕೆ ಅವಕಾಶವಿಲ್ಲ. ನೈಯಾಯಿಕರು ಸ್ವತಸ್ತ್ವಪರಿಷ್ಕಾರದಲ್ಲಿ ಸಾಕ್ಷಿಪದವನ್ನು ಸೇರಿಸದಿರುವುದರಿಂದಾಗಿಯೇ ಅದು ಸಮಂಜಸವಲ್ಲ, ಎಂದು ಮುಂದಿನ ಪ್ರಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಸಾಕ್ಷಿಪದವು ಈ ಪರಿಷ್ಕಾರದಲ್ಲಿ ಮುಖ್ಯವಾದುದು.

'ಸಾಕ್ಷಿವಿಷಯತ್ವ ನೈಯತ್ಯಂ' ಎಂದಿರುವುದರಿಂದ ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ. ನೈಯಾಯಿಕರು ಕೆಲವೆಡೆ ಮಾತ್ರ ಅನುವ್ಯವಸಾಯಕ್ಕೆ ಪ್ರಾಮಾಣ್ಯವು ವಿಷಯ, ಎಂದು ಹೇಳುತ್ತಾರೆ. ಅವರ ಮತದಲ್ಲಿ ಎಲ್ಲಾ ಅನುವ್ಯವಸಾಯಗಳಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಸಿದ್ಧಾಂತದಲ್ಲೂ ಅಪ್ರಾಮಾಣ್ಯಸಂದೇಹಾದಿಗಳು ಇದ್ದಾಗ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಸಾಕ್ಷಿಗ್ರಾಹ್ಯತ್ವ ನಿಯಮಕ್ಕೆ ಚ್ಯುತಿ ಬರುತ್ತದೆ. ಅದಕ್ಕಾಗಿ 'ವಿರೋಧಿಸಾಮಗ್ರೀ ಅಸಮವಹಿತ' ಎಂಬ ವಿಶೇಷಣವನ್ನು ಸಾಕ್ಷಿಗೆ ಕೊಡಲಾಗಿದೆ.

ಪ್ರತಿಬಂಧಕಗಳು ಇದ್ದಾಗಲೂ ಸಾಕ್ಷಿಯು 'ನಿರ್ದೋಷಂ ಚೇತ್ ಪ್ರಮಾಣಮ್' ಎಂದು ಸಮ್ಮುಗ್ಧವಾಗಿ ಪ್ರಾಮಾಣ್ಯವನ್ನು ಗ್ರಹಣೆ ಮಾಡುತ್ತದೆ. ಆದರೆ, 'ಪ್ರಮಾಣಮೇವೇದಂ' ಎಂದು ನಿರ್ಧಾರ ಮಾಡುವುದಿಲ್ಲ. ಇದನ್ನು ಪ್ರಕೃತ್ಯಧಿಕರಣ ಸುಧಾದಲ್ಲಿ ಹೇಳಲಾಗಿದೆ–

''ನ ಸಾಕ್ಷೀ ಜ್ಞಾನಂ ಗೃಹ್ಣನ್ ಪ್ರಮಾಣಮೇವೈತತ್, ಇತಿ ಗೃಹ್ಣಾತಿ। ಕಿಂ ತರ್ಹಿ? ಅದೋಷಂ ಚೇತ್ ಪ್ರಮಾಣಂ ಸದೋಷಮ್ ಅಪ್ರಮಾಣಮಿತಿ, ವ್ಯವಸ್ಥಯಾ'' (ಅತೋಽದೋಷ ಪ್ರತೀತಸ್ಯ–ಅನುವ್ಯಾಖ್ಯಾನ ಭಾಗ)

ಜ್ಞಾನಪಾದದಲ್ಲೂ 'ಸಾಕ್ಷೀ ದೋಷಾಭಾವೇ ಪ್ರಮಾಣವೇತತ್ ಇತಿ ಪ್ರಥಮಂ ಸಮ್ಮುಗ್ಧಂ ಪ್ರಾಮಾಣ್ಯಂ ಗೃಹೀತ್ವಾ' ಎಂದು ಹೇಳಲಾಗಿದೆ. (ಅತೋ ನ ಸರ್ವಮಾನಾನಾಂ–ಎಂಬ ಅನುವ್ಯಾಖ್ಯಾನ. 3-4-34)

ದೋಷಸಂಹೇದವಿದ್ದಾಗ ಮಾನಸಪ್ರಾಮಾಣ್ಯಸಂದೇಹ ಬರುತ್ತದೆ. ಆಗ ಸಾಕ್ಷಿಯ ಪ್ರಾಮಾಣ್ಯನಿರ್ಧಾರಣ ಶಕ್ತಿ ಪ್ರತಿಬದ್ಧವಾಗುತ್ತದೆ. ಮಾನಸಸಂದೇಹದ ಎರಡು ಕೋಟಿಗಳಲ್ಲಿ ವ್ಯವಸ್ಥೆಯನ್ನಷ್ಟೇ ಅದು ಮಾಡುತ್ತದೆ–ನಿರ್ದೋಷವಾದರೆ ಈ ಜ್ಞಾನ ಪ್ರಮಾಣ, ಸದೋಷವಾದರೆ, ಅಪ್ರಮಾಣ, ಎಂದು. ಆದ್ದರಿಂದಲೇ ಇದು ಸಂದೇಹವಲ್ಲ. 'ವೃಷ್ಟಿಶ್ಚೇತ್ ಸಸ್ಯವೃದ್ಧಿಃ' ಎಂದಂತೆ ವ್ಯವಸ್ಥಿತ ವಿಕಲ್ಪ.

ಈ ಪ್ರಥಮ ನಿರುಕ್ತಿಯು ನ್ಯಾಯಸುಧಾದಲ್ಲಿ ಮಾಡಿರುವ ಸ್ವತಸ್ತ್ವನಿರೂಪಣೆಯ ವಿವರಣೆಯಾಗಿದೆ. ನ್ಯಾಯಸುಧಾದಲ್ಲಿ 'ಜ್ಞಾನಗ್ರಾಹಕ ಮಾತ್ರಗ್ರಾಹ್ಯತ್ವಮ್' ಎಂದು ಸ್ವತಸ್ತ್ವವನ್ನು ನಿರೂಪಿಸಲಾಗಿದೆ. ಇಲ್ಲಿರುವ ಜ್ಞಾನಗ್ರಾಹಕಪದಕ್ಕೆ ಗ್ರಾಹ್ಯಪ್ರಾಮಾಣ್ಯಾಶ್ರಯ ತತ್ತಜ್ಜ್ಞಾನವಿಷಯಕ ಸಾಕ್ಷಿಜ್ಞಾನ, ಎಂದು ಅರ್ಥ. ಗ್ರಾಹ್ಯಪದಕ್ಕೆ ಆ ಸಾಕ್ಷಿಜ್ಞಾನಕ್ಕೆ ವಿಷಯ ಎಂದು ಅರ್ಥ. ಅಲ್ಲಿರುವ ಮಾತ್ರಶಬ್ದಕ್ಕೆ 'ಸಕಲ' ಎಂದು ಒಂದರ್ಥ. ಜ್ಞಾನಗ್ರಾಹಕವಾದ ಎಲ್ಲಾ ಸಾಕ್ಷಿಜ್ಞಾನಕ್ಕೂ ಪ್ರಾಮಾಣ್ಯವು ವಿಷಯ ಎಂದರ್ಥ. ಇದರಿಂದ ಈ ಪರಿಷ್ಕಾರದಲ್ಲಿರುವ 'ವಿಷಯತ್ವ–ನೈಯತ್ಯಂ' ಎಂಬ ಅಂಶವು ಲಭ್ಯವಾಗುತ್ತದೆ. ಮಾತ್ರಶಬ್ದವು ಅವಧಾರಣಾರ್ಥಕ ಎಂದು ಪರಿಗಣಿಸಿದಾಗ 'ಜ್ಞಾನ ಗ್ರಾಹಕೇಣೈವ ಗೃಹ್ಯತೇ–ನತು ವಿರೋಧಿಸಾಮಗ್ರೀ ಸಮವಹಿತೇನ, ಎಂದು ತಿಳಿಯುತ್ತದೆ. ಹೀಗೆ, ಸುಧಾದಲ್ಲಿ ಹೇಳಿದ ಪರಿಷ್ಕಾರದ ವಿವರಣೆಯೇ ಇದು, ಎಂದು ಶ್ರೀವ್ಯಾಸರಾಜರು ತಿಳಿಸಿದ್ದಾರೆ.

## ದ್ವಿತೀಯ ಸ್ವತಸ್ತ್ವನಿರುಕ್ತಿ

ದ್ವಿತೀಯ ಸ್ವತಸ್ತ್ವನಿರುಕ್ತಿಯು ಯೋಗ್ಯತಾ ಘಟಿತವಾದುದು. ಗ್ರಾಹ್ಯಪ್ರಾಮಾಣ್ಯಾಶ್ರಯ–ತತ್ತಜ್ಜ್ಞಾನವಿಷಯಕ–ಸಾಕ್ಷಿಜ್ಞಾನವಿಷಯತ್ವ–ಯೋಗ್ಯತ್ವಮ್ ।।

ಪ್ರಕೃತ ಪ್ರಾಮಾಣ್ಯಕ್ಕೆ ಆಶ್ರಯವಾದ ಯಾವ ಜ್ಞಾನವಿದೆಯೋ ಆ ಜ್ಞಾನಗ್ರಾಹಕ ಸಾಕ್ಷಿಜ್ಞಾನ ವಿಷಯತಾಯೋಗ್ಯತೆ, ಆ ಪ್ರಾಮಾಣ್ಯಕ್ಕೆ ಇದೆ. ಇಲ್ಲಿ ವಿರೋಧಿಸಾಮಗ್ರೀ–ಅಸಮವಹಿತ ಎಂಬ ವಿಶೇಷಣವನ್ನು ಕೊಡುವ ಅಗತ್ಯವಿಲ್ಲ. ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯವು ಸಾಕ್ಷಿಗ್ರಾಹ್ಯ ವಾಗದಿದ್ದರೂ ಸಾಕ್ಷಿಗ್ರಹಣಯೋಗ್ಯತೆ ಅದರಲ್ಲಿದೆ. ಪ್ರತಿಬಂಧಕವಾದ ಚಂದ್ರಕಾಂತ ಮಣಿ ಇದ್ದಾಗ ವಹ್ನಿಯು ದಾಹಕವಾಗದಿದ್ದರೂ ಅದರಲ್ಲಿ ದಾಹಯೋಗ್ಯತೆ ಇರುವಂತೆ ಪ್ರತಿಬದ್ಧವಾದ ಸಾಕ್ಷಿಯಲ್ಲೂ ಪ್ರಾಮಾಣ್ಯಗ್ರಹಣಯೋಗ್ಯತೆ ಇದೆ.

ಪ್ರಾಮಾಣ್ಯದಲ್ಲಿ ಸಾಕ್ಷಿಗ್ರಹಣಯೋಗ್ಯತೆಯನ್ನು ವ್ಯಾಸರಾಜರು ಹೀಗೆ ಪರಿಷ್ಕರಿಸಿದ್ದಾರೆ– 'ಸಾಕ್ಷಿನಿಷ್ಠಾಂ ಸಹಜಾಂ ಗ್ರಹಣ–ಶಕ್ತಿಂ ಪ್ರತಿ ಅವಚ್ಛೇದಕತ್ವಮ್' ಎಂದು. ಸಾಕ್ಷಿಯಲ್ಲಿ ಜ್ಞಾನಗ್ರಹಣ ಶಕ್ತಿಯು ಸಹಜವಾದುದು. ಅದು ಪ್ರಾಮಾಣ್ಯಗ್ರಹಣಶಕ್ತಿಯೂ ಆಗಿದೆ, ಎನ್ನುವುದು ಸ್ವತಸ್ತ್ವವಾದ. ಹೀಗೆ ಈ ಶಕ್ತಿಯಲ್ಲಿ ಅವಚ್ಛೇದಕವಾಗಿದೆ ಪ್ರಾಮಾಣ್ಯ. ಇದೇ ಪ್ರಾಮಾಣ್ಯದಲ್ಲಿರುವ ಸಾಕ್ಷಿಗ್ರಹಣ ಯೋಗ್ಯತೆ.

ಈ ಯೋಗ್ಯತೆಯ ವಿವರಣೆಯಲ್ಲಿ ರಾಯರು ತಮ್ಮ ಗುರುಗಳಿಗಿಂತ ವಿಭಿನ್ನವಾದ ಅಭಿಪ್ರಾಯವನ್ನು ತಿಳಿಸಿ 'ಗುರುಪಾದಾಸ್ತು' ಎಂದು ತಮ್ಮ ಗುರುಗಳ ಅಭಿಪ್ರಾಯವನ್ನೂ ಉಲ್ಲೇಖಿಸುತ್ತಾರೆ.

ಇಂತಹ ಯೋಗ್ಯತೆಯಲ್ಲಿ 'ಶಕ್ತಿ'ಯ ಉಲ್ಲೇಖ ಬಂದಿದೆ. ಆದ್ದರಿಂದ ಇದನ್ನು ತಾರ್ಕಿಕರು ಒಪ್ಪುವುದಿಲ್ಲ. ಆದರೂ ಇದು ಸ್ವಮತರೀತ್ಯಾ ಮಾಡಿದ ವಿವರಣೆ. ಅಥವಾ, ನೈಯಾಯಿಕರಿಗೂ ಶಕ್ತಿಯನ್ನು ಒಪ್ಪಿಸಿ ಈ ಯೋಗ್ಯತೆಯನ್ನು ಹೇಳಬೇಕು, ಎಂದು ಅಭಿಪ್ರಾಯ.

ಈ ನಿರುಕ್ತಿಯೂ ಸುಧಾವಾಕ್ಯ ಲಭ್ಯ. ಅಲ್ಲಿರುವ 'ಗ್ರಾಹ್ಯ' ಶಬ್ದ ಅರ್ಹಾರ್ಥದಲ್ಲಿ ಬಂದಿರುವ ಣ್ಯತ್ ಪ್ರತ್ಯಯಾಂತಶಬ್ದ. ಗ್ರಹಣಯೋಗ್ಯ ಎಂದು ತಾತ್ಪರ್ಯಾರ್ಥ. 'ಜ್ಞಾನಗ್ರಾಹಕಮಾತ್ರ' ಎಂಬಲ್ಲಿರುವ ಮಾತ್ರ ಶಬ್ದ ಅವಧಾರಣಾರ್ಥಕ. ಜ್ಞಾನಗ್ರಾಹಕದಿಂದಲೇ ಪ್ರಾಮಾಣ್ಯವು ಗ್ರಾಹ್ಯ, ಪ್ರಾಮಾಣ್ಯಗ್ರಹಣೆಗೆ ಅದಕ್ಕಿಂತ ಹೆಚ್ಚಿನ ಸಾಮಗ್ರಿಗಳ ಅಗತ್ಯವಿಲ್ಲ, ಎಂದರ್ಥ. ಇದರಿಂದ ಜ್ಞಾನಗ್ರಾಹಕ ಶಕ್ತಿಯಂತೆ ಪ್ರಾಮಾಣ್ಯಗ್ರಾಹಕಶಕ್ತಿಯೂ ಸಹಜ, ಎಂದು ತಿಳಿಯುತ್ತದೆ. ಒಟ್ಟಿನಲ್ಲಿ ಜ್ಞಾನಗ್ರಾಹಕ–ಸಾಕ್ಷಿಗತ–ಸಹಜ–ಶಕ್ತ್ಯಾ ಗ್ರಹಣಯೋಗ್ಯವಾದುದು ಪ್ರಾಮಾಣ್ಯ ಎಂದು ಅಭಿಪ್ರಾಯ.

## ತೃತೀಯ ಸ್ವತಸ್ತ್ವನಿರುಕ್ತಿ

ಈ ಹಿಂದಿನ ಎರಡು ನಿರುಕ್ತಿಗಳು ಸ್ವತಸ್ತ್ವವಾದಿಗಳೆಲ್ಲರಿಗೂ ಸಮ್ಮತವಾದುದಲ್ಲ. ವೇದಾಂತಿಗಳು, ಪ್ರಾಭಾಕರ–ಭಾಟ್ಟ–ಮಿಶ್ರಮೀಮಾಂಸಕರು ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುತ್ತಾರೆ.

ಆದರೆ, ಅವರೆಲ್ಲರೂ ಜ್ಞಾನವು ಅನುವ್ಯವಸಾಯವೇದ್ಯ, ಎಂದು ಒಪ್ಪಿಲ್ಲ. ಹಿಂದಿನ ಸ್ವತಸ್ತ್ವ ನಿರುಕ್ತಿಗಳಲ್ಲಿ ಸಾಕ್ಷಿಪದವು ಸೇರಿದೆ. ಅದಕ್ಕೆ ಅನುವ್ಯವಸಾಯ ಎಂದು ಅರ್ಥ. ಆದ್ದರಿಂದ ಆ ಎರಡು ಪರಿಷ್ಕಾರಗಳನ್ನು ಅನುವ್ಯವಸಾಯವನ್ನು ಅಂಗೀಕರಿಸದ ಸ್ವತಸ್ತ್ವವಾದಿಗಳು ಒಪ್ಪುವುದಿಲ್ಲ. ಅದಕ್ಕಾಗಿ, ಸರ್ವಸಮ್ಮತವಾದ ಮೂರನೆಯ ಸ್ವತಸ್ತ್ವನಿರುಕ್ತಿಯನ್ನು ಮಾಡಲಾಗಿದೆ.

'ಉಭಯಸಿದ್ಧ-ಪ್ರಾಮಾಣ್ಯಾವಿಷಯಕ-ಜ್ಞಾನಭಿನ್ನ-ಜ್ಞಾನವಿಷಯತ್ವ-ನೈಯತ್ಯಮ್''

ಇಲ್ಲಿ ಉಭಯಪದದಿಂದ ಸ್ವತಸ್ತ್ವವನ್ನು ಒಪ್ಪುವ ಅನೇಕರಲ್ಲಿ ಒಬ್ಬರು ಮತ್ತು ಸ್ವತಸ್ತ್ವವನ್ನು ಒಪ್ಪದ ನೈಯಾಯಿಕ ಹೀಗೆ ಇಬ್ಬರನ್ನು ತೆಗೆದುಕೊಳ್ಳಬೇಕು. ದ್ವೈತವಾದಿಯನ್ನು ಪರಿಗ್ರಹಿಸಿದಾಗ ದ್ವೈತವಾದಿ ಮತ್ತು ನೈಯಾಯಿಕ ಇಬ್ಬರೂ ಪ್ರಾಮಾಣ್ಯ-ಅವಿಷಯಕ ಎಂದು ಸಮ್ಮತಿಸಿರುವ ಜ್ಞಾನ ಎಂದರೆ ವ್ಯವಸಾಯಾತ್ಮಕವಾದ ಜ್ಞಾನ. ತದ್ಭಿನ್ನಜ್ಞಾನ ಎಂದರೆ, ಅನುವ್ಯವಸಾಯ. ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ ಎಂದು ದ್ವೈತವಾದಿಗಳು ಹೇಳುವುದ ರಿಂದ ಅದು ಪ್ರಾಮಾಣ್ಯಅವಿಷಕತ್ವೇನ ಉಭಯಸಮ್ಮತವಲ್ಲ. ಅಂತಹ ಅನುವ್ಯವಸಾಯದಲ್ಲಿ ನಿಯಮೇನ ಪ್ರಾಮಾಣ್ಯವಿಷಯಕತ್ವ ಇದೆ. ಹೀಗೆ ತತ್ತನ್ಮತದಲ್ಲಿ ಪ್ರಾಮಾಣ್ಯವಿಷಯಕತ್ವೇನ ಸಮ್ಮತವಾದ ಜ್ಞಾನಗಳನ್ನು ಭಿನ್ನಾಂತಪದದಿಂದ ಪರಿಗ್ರಹಿಸಿ ಈ ಲಕ್ಷಣವನ್ನು ಸಮನ್ವಯ ಮಾಡಬೇಕು. ನೈಯಾಯಿಕರೂ ಪ್ರಾಮಾಣ್ಯವಿಷಯಕ ಎಂದು ಅಂಗೀಕರಿಸಿರುವ ಸಫಲಪ್ರವೃತ್ತಿ ಜನಕತ್ವರೂಪ ಹೇತುಜನ್ಯವಾದ ಅನುಮಿತಿಯೂ ಭಿನ್ನಾಂತಪದಿಂದ ಸಂಗ್ರಹೀತವಾದರೂ ಸಿದ್ಧಸಾಧನತಾ ಇಲ್ಲ. ಏಕೆಂದರೆ, ತದ್ಭಿನ್ನವಾದ ತತ್ತನ್ಮತಸಿದ್ಧವಾದ ಅನುವ್ಯವಸಾಯಾದಿಗಳೂ ಗೃಹೀತವಾಗುವುದರಿಂದ ತದ್ವಿಷಯತ್ವವನ್ನು ನೈಯಾಯಿಕರು ಅಂಗೀಕರಿಸುವುದಿಲ್ಲ. ಪ್ರತಿಬದ್ಧ ಅನುವ್ಯವಸಾಯ, ಜ್ಞಾನವಿಷಯಕ ಶಾಬ್ದಬೋಧ ಇವುಗಳು ಪ್ರಾಮಾಣ್ಯಾವಿಷಯಕತ್ವೇನ ಉಭಯ ಸಮ್ಮತವೇ ಆಗಿವೆ, ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧಭಿನ್ನವಾಗಿಲ್ಲ. ಆದ್ದರಿಂದ ಅದರ ಸಂಗ್ರಹವಾಗುವುದಿಲ್ಲ, ಬಾಧದೋಷಕ್ಕೆ ಅವಕಾಶವಿಲ್ಲ. ಹೀಗೆ ಈ ಸ್ವತಸ್ತ್ವ ಸರ್ವಮತ ಸಾಧಾರಣವಾಗಿದೆ.

ಈ ನಿರುಕ್ತಿಯೂ ಸುಧೋಕ್ತ ಪರಿಷ್ಕಾರಲಭ್ಯ-ಜ್ಞಾನಗ್ರಾಹಕ ಮಾತ್ರ ಎಂಬ ಸುಧಾವಾಕ್ಯಗತ ಮಾತ್ರಶಬ್ದವು ಅವಧಾರಣಾರ್ಥಕ. ಆದರಿಂದ ವ್ಯವಚ್ಛೇದ್ಯವಾದುದು ಉಭಯಸಿದ್ಧ-ಪ್ರಾಮಾಣ್ಯಾ ವಿಷಯಕಜ್ಞಾನ. ಆಗ ಪ್ರಾಮಾಣ್ಯಾವಿಷಯಕತ್ವೇನ ಉಭಯಸಿದ್ಧಭಿನ್ನ ಎಂಬ ಅರ್ಥ ಲಾಭವಾಗುತ್ತದೆ. ಮಾತ್ರ ಶಬ್ದಕ್ಕೆ 'ಎಲ್ಲ' ಎಂಬ ಅರ್ಥವನ್ನು ಹೇಳಿದಾಗ ಅಂತಹ ಎಲ್ಲ ಜ್ಞಾನಕ್ಕೂ ಪ್ರಾಮಾಣ್ಯವು ವಿಷಯವಾಗುತ್ತದೆ, ಎಂಬ ನೈಯತ್ಯ ಲಭ್ಯವಾಗುತ್ತದೆ. ಹೀಗೆ ಈ ಲಕ್ಷಣವೂ ಸುಧಾ ಸಮ್ಮತ.

ಹೀಗೆ ಈ ಪ್ರಕರಣದಲ್ಲಿ ವಿಭಿನ್ನ ದೃಷ್ಟಿಯಿಂದ ಮೂರು ರೀತಿಯ ಸ್ವತಸ್ತ್ವಗಳನ್ನು ನಿರೂಪಿಸಲಾಗಿದೆ.

## ನ್ಯಾಯದೀಪದಲ್ಲಿ ವಿಶೇಷಾಂಶ

''ಯಥಾರ್ಥಂ ಪ್ರಮಾಣಂ'' ಎಂಬಲ್ಲಿ ಯಥಾಶಬ್ದಕ್ಕೆ ಅನತಿಕ್ರಮ, ಎಂದು ಅರ್ಥ. ಸಾದೃಶ್ಯಾರ್ಥವನ್ನು ಇಟ್ಟುಕೊಂಡಾಗ ''ಯಥಾ ಅಸಾದೃಶ್ಯೇ'' ಎಂಬ ನಿಯಮದಂತೆ ಸಮಾಸಸಾಧುವಲ್ಲ. ಇದು ಪ್ರಸಿದ್ಧವಿಷಯ. ಆದರೆ, ಅನತಿಕ್ರಮಾರ್ಥದಲ್ಲಿ ಬಹುವ್ರೀಹಿ ಸಮಾಸ ಮಾಡಿದರೆ ಅದು ಅವ್ಯಯೀಭಾವಸಮಾಸವೆನಿಸಿ ಅವ್ಯಯವಾಗುತ್ತದೆ. ಆಗ ''ಯಥಾರ್ಥಾ ಪ್ರತೀತಿಃ'' ಎಂಬ ಪ್ರಯೋಗ ತಪ್ಪಾಗುತ್ತದೆ. ಆದಕ್ಕಾಗಿ ಸಾದೃಶ್ಯಾರ್ಥವನ್ನು ಪರಿಗ್ರಹಿಸಿ 'ಯಥಾ ಅರ್ಥಃ ಯಸ್ಯಸಃ' ಎಂದು ಬಹುವ್ರೀಹಿ ಸಮಾಸ ಮಾಡಬೇಕು. ಯಥಾ ಎಂದರೆ ಸಾದೃಶ್ಯ ವಿಶಿಷ್ಟವಾದ ಅರ್ಥ. ಅಂತಹ ಅರ್ಥವುಳ್ಳದ್ದು ಜ್ಞಾನ. ಜ್ಞಾನಕ್ಕೂ ಅರ್ಥಕ್ಕೂ ಸಾದೃಶ್ಯ ಸತ್ತಯಾ. ಪ್ರಮಾದಲ್ಲಿ ಅರ್ಥವೂ ಸತ್ಯ ಜ್ಞಾನವೂ ಸತ್ಯ. ಭ್ರಮೆಯಲ್ಲಿ ಜ್ಞಾನ ಸತ್ಯ, ಅರ್ಥ ಅಸತ್ಯ. ಆದ್ದರಿಂದ ಅಲ್ಲಿ ಜ್ಞಾನಕ್ಕೆ ಅರ್ಥಸಾದೃಶ್ಯವಿಲ್ಲ.

ವ್ಯಾಸರಾಜರು ಮಂದಾರ ಮಂಜರಿಯಲ್ಲಿ ಹೇಳಿರುವ ಈ ವಿಷಯವನ್ನು ರಾಯರು ನ್ಯಾಯದೀಪದಲ್ಲಿ ಚರ್ಚಿಸಿದ್ದಾರೆ.

**ಪ್ರಕರಣ ॥ ೧ ॥**

# ಪ್ರಕರಣ – 2

## ಪರೋಕ್ತಸ್ವತಸ್ತ್ವನಿರುಕ್ತಿ ಭಂಗಃ

**यत्तु मणावुक्तम् - ''तदप्रामाण्याग्रहक-यावाज्ज्ञानग्राहक-सामग्री ग्राह्यत्वं स्वतस्त्वं, तदभावश्च परतस्त्वम्'' इति ।**

ಚಿಂತಾಮಣಿ ಗ್ರಂಥದಲ್ಲಿ ಸ್ವತಸ್ತ್ವದ ಪರಿಷ್ಕಾರವನ್ನು ಹೀಗೆ ಮಾಡಲಾಗಿದೆ– ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸದ, ಜ್ಞಾನಗ್ರಾಹಕವಾದ ಎಷ್ಟು ಸಾಮಗ್ರಿಗಳಿವೆಯೋ ಅವೆಲ್ಲವುಗಳಿಂದಲೂ ಪ್ರಾಮಾಣ್ಯವು ಗ್ರಾಹ್ಯವಾಗಿದೆ. ಇದೇ ಮೀಮಾಂಸಾಮತತ್ರಯ ಸಾಧಾರಣವಾದ ಸ್ವತಸ್ತ್ವ. ಇದರ ಅಭಾವವೇ ಪರತಸ್ತ್ವ.

ಲಕ್ಷಣವಾಕ್ಯದ ಮೊದಲ ಶಬ್ದ 'ತದಪ್ರಾಮಾಣ್ಯ' ಎಂದಿದೆ. 'ತಸ್ಮಿನ್ ಅಪ್ರಮಾಣ್ಯಂ ತದಪ್ರಾಮಾಣ್ಯಮ್' ಹೀಗೆ ಸಪ್ತಮೀ ತತ್ಪುರುಷ ಸಮಾಸ ಮಾಡಬೇಕು. ತತ್‌ಪದಕ್ಕೆ ಪೂರ್ವಪ್ರಸ್ತುತವಾದ, ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಘಟಾದಿ ಜ್ಞಾನ, ಎಂದರ್ಥ. ಅಂತಹ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಜ್ಞಾನಗ್ರಾಹಕ ಸಾಮಗ್ರಿಯು ಗ್ರಹಿಸಿರಬಾರದು. ಗ್ರಹಿಸಿದರೆ ಆಗ ತತ್ಸಾಮಗ್ರೀ ಜನ್ಯಗ್ರಹದಲ್ಲಿ ಪ್ರಾಮಾಣ್ಯವು ವಿಷಯವಾಗುವುದಿಲ್ಲ. ಉದಾಹರಣೆಗೆ— ರಜತವನ್ನು ನೋಡಿ 'ಇದಂ ರಜತಂ' ಎಂಬ ಜ್ಞಾನ ಬಂತು. ಆಮೇಲೆ ''ಇದಂ ರಜತಂ ಇತಿ ಜ್ಞಾನಂ ಅಪ್ರಮಾಣಂ' ಎಂಬ ಭ್ರಮಾತ್ಮಕ ಅನುವ್ಯವಸಾಯ ಬಂತು. ಆ ಅನುವ್ಯವಸಾಯ ಸಾಮಗ್ರಿಯು ಜ್ಞಾನ ಗ್ರಾಹಕವಾಗಿದೆ. ಅಂದರೆ, ಜ್ಞಾನವಿಷಯಕ ಜ್ಞಾನಕ್ಕೆ ಜನಕವಾಗಿದೆ. ಆದರೆ ಆ ಅನುವ್ಯವಸಾಯವು ಅಪ್ರಾಮಾಣ್ಯವನ್ನು ವಿಷಯೀಕರಿಸುತ್ತಿರುವುದರಿಂದ ತತ್ಸಾಮಗ್ರಿಯು ಪ್ರಾಮಾಣ್ಯಗ್ರಾಹಕವಲ್ಲ. ಅಂದರೆ ಪ್ರಾಮಾಣ್ಯವಿಷಯಕ ಜ್ಞಾನ ಜನಕವಲ್ಲ. ಹೀಗೆ ಜ್ಞಾನಗ್ರಾಹಕ ಯಾವತ್ಸಾಮಗ್ರೀ–ಗ್ರಾಹ್ಯತ್ವ ಪ್ರಾಮಾಣ್ಯದಲ್ಲಿ ಬರಲಿಲ್ಲ. ಅದರಿಂದ ಬಾಧದೋಷ. ಅದಕ್ಕಾಗಿ ಜ್ಞಾನಗ್ರಾಹಕ ಸಾಮಗ್ರಿಯಲ್ಲಿ ತದಪ್ರಾಮಾಣ್ಯಾಗ್ರಾಹಕ, ಎಂಬ ವಿಶೇಷಣವನ್ನು ಕೊಡಬೇಕು. ಹಿಂದೆ ಹೇಳಿದ ಜ್ಞಾನಗ್ರಾಹಕ ಸಾಮಗ್ರಿಯು ತದಪ್ರಾಮಾಣ್ಯಗ್ರಾಹಕವೇ ಆಗಿದೆ. ಆದ್ದರಿಂದ ತದಗ್ರಾಹ್ಯತ್ವ ಬಂದರೂ ಸ್ವತಸ್ತ್ವ ಬಾಧ ಇಲ್ಲ.

ಈ ಲಕ್ಷಣವು ಮೀಮಾಂಸಕರ ಮೂರು ಮತದಲ್ಲಿ ಸಮನ್ವಯವಾಗುತ್ತದೆ.

**1. ಪ್ರಾಭಾಕರಮತ**–ಅವರ ಮತದಲ್ಲಿ ಜ್ಞಾನವು ಸ್ವಪ್ರಕಾಶ. ಆದ್ದರಿಂದ ಜ್ಞಾನಜನಕ ಸಾಮಗ್ರಿಯೇ ಜ್ಞಾನ ಗ್ರಾಹಕ ಸಾಮಗ್ರೀ. ಜ್ಞಾನಜನಕ ಸಾಮಗ್ರಿಯು ಸ್ವಯಂಪ್ರಕಾಶವಾದ ಜ್ಞಾನಕ್ಕೆ ಜನಕವಾದುದರಿಂದ ಜ್ಞಾನಗ್ರಾಹಕವೂ ಆಗುತ್ತದೆ. 'ಘಟಮಹಂ ಜಾನಾಮಿ' ಎಂಬ ಜ್ಞಾನಕ್ಕೆಗ್ರಾಹಕವಾದ (ಜನಕವಾದ) ಘಟಚಕ್ಷುಃಸಂಯೋಗ ಘಟಿತವಾದ ಸಾಮಗ್ರಿಯು

ಅಪ್ರಾಮಾಣ್ಯ-ಗ್ರಾಹಕವಲ್ಲ. ಅಂತಹ ಸಾಮಗ್ರಿಯಿಂದ ಜನ್ಯಗ್ರಹ ''ಘಟಮಹಂ ಜಾನಾಮಿ'' ಎಂಬ ವ್ಯವಸಾಯ. ಅದು ಸ್ವಪ್ರಕಾಶವಾದುದರಿಂದ ಅದರಲ್ಲಿ ಜ್ಞಾನವೂ, ಅದರಲ್ಲಿರುವ ಪ್ರಾಮಾಣ್ಯವೂ ವಿಷಯವಾಗಿದೆ. ಹೀಗೆ ಪ್ರಾಭಾಕರ ಮತದಲ್ಲಿ ಈ ಲಕ್ಷಣವನ್ನು ಜ್ಞಾನಸಾಮಗ್ರೀ-ಜನ್ಯವಾದ ಸ್ವಪ್ರಕಾಶ ಜ್ಞಾನವನ್ನು ಪರಿಗ್ರಹಿಸಿ ಸಮನ್ವಯ ಮಾಡಬೇಕು.

**2. ಭಾಟ್ಟದರ್ಶನ**—ಭಾಟ್ಟರಲ್ಲಿ 'ಜ್ಞಾತತಾ' ಲಿಂಗದಿಂದ ಜ್ಞಾನವು ಅನುಮೇಯ. ಗಮನ ಕ್ರಿಯೆಯಿಂದ ಸಂಯೋಗ ಎಂಬ ಫಲ ಹುಟ್ಟುತ್ತದೆ. ಜ್ಞಾನವೂ ಒಂದು ಕ್ರಿಯೆಯಾದುದರಿಂದ ಅದರಿಂದಲೂ ವಿಷಯದಲ್ಲಿ 'ಜ್ಞಾತತಾ' ಎಂಬ ಫಲವು ಹುಟ್ಟುತ್ತದೆ. ಈ ಫಲವು ಪ್ರತ್ಯಕ್ಷ. ''ಜ್ಞಾತೋ ಘಟಃ'' ಎಂಬ ಪ್ರತ್ಯಕ್ಷದಲ್ಲಿ ಜ್ಞಾತತಾರೂಪವಾದ ಫಲವು ವಿಷಯ. ಅದನ್ನು ನೋಡಿ ಅದಕ್ಕೆ ಕಾರಣವಾದ ಜ್ಞಾನವನ್ನು ಅನುಮಾನ ಮಾಡಬೇಕು. ಆ ಅನುಮಿತಿಯೇ ಜ್ಞಾತತಾಲಿಂಗಕ-ಅನುಮಿತಿ. ಅದರಲ್ಲಿ ಜ್ಞಾನವೂ ತದ್ಗತ ಪ್ರಾಮಾಣ್ಯವೂ ವಿಷಯ.

ಜ್ಞಾತತಾಲಿಂಗಕಾನುಮಾನ ಹೀಗೆ- 'ಘಟಃ ಜ್ಞಾನವಿಷಯಃ ಜ್ಞಾತತಾಧಾರತ್ವಾತ್' ಎಂದು. ಈ ಅನುಮಿತಿಯಲ್ಲಿ ಜ್ಞಾನ ಮತ್ತು ತದ್ಗತ ಪ್ರಾಮಾಣ್ಯಗಳು ವಿಷಯ. ಭಾಟ್ಟಮತದಲ್ಲಿ ಜ್ಞಾನಗ್ರಾಹಕ ಸಾಮಗ್ರೀ ಎಂದರೆ ಅನುಮಿತಿ ಸಾಮಗ್ರೀ-ವ್ಯಾಪ್ತಿಜ್ಞಾನ ಮತ್ತು ಪಕ್ಷಧರ್ಮತಾಜ್ಞಾನ. ತಜ್ಜನ್ಯಗ್ರಹ ಅನುಮಿತಿ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಹೀಗೆ ಲಕ್ಷಣ ಸಮನ್ವಯ.

**3. ಮಿಶ್ರಮತದಲ್ಲಿ**—ತಾರ್ಕಿಕರಂತೆ ಜ್ಞಾನವು ಮನೋಗ್ರಾಹ್ಯ. ಜ್ಞಾನಗ್ರಾಹಕ ಸಾಮಗ್ರೀ= ಅನುವ್ಯವಸಾಯಜನಕಸಾಮಗ್ರೀ. ಅದು ಜ್ಞಾನದೊಂದಿಗೆ ಮನಸ್ಸಿಗೆ ಆಗುವ ಸಂಯುಕ್ತ ಸಮವಾಯ ಸನ್ನಿಕರ್ಷ-ಘಟಿತ-ಸಾಮಗ್ರೀ. ತಜ್ಜನ್ಯ ಜ್ಞಾನ=ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ.

ಹೀಗೆ ಈ ಸ್ವತಸ್ತ್ವವು ಮತತ್ರಯ ಸಾಧಾರಣವಾಗಿದೆ.

**ವಿಶೇಷ ವಿಚಾರ**

ಮೀಮಾಂಸಕರಲ್ಲಿ ಪ್ರಾಭಾಕರರು ಎಲ್ಲ ಜ್ಞಾನವೂ ಪ್ರಮಾಣ, ಅಪ್ರಮಾಣವಾದ ಜ್ಞಾನವೇ ಇಲ್ಲ, ಎನ್ನುತ್ತಾರೆ. ಅವರ ಮತದಲ್ಲಿ ಅಪ್ರಾಮಾಣ್ಯಗ್ರಾಹಕ ಜ್ಞಾನಗ್ರಾಹಕ ಸಾಮಗ್ರಿಯೇ ಅಪ್ರಸಿದ್ಧ. ಹೀಗಾಗಿ ಸ್ವತಸ್ತ್ವಲಕ್ಷಣವನ್ನು ಸಮನ್ವಯ ಮಾಡಬೇಕಾದರೆ ಸಮಸ್ಯೆ ಇದೆ. ಅದನ್ನು ಹೀಗೆ ಪರಿಹರಿಸಬೇಕು. ಎಲ್ಲಾ ಜ್ಞಾನಗಳೂ ಪ್ರಮಾಣವಾಗಿದ್ದರೂ ಕೆಲವೊಮ್ಮೆ ಹುಟ್ಟಿದ ಜ್ಞಾನವು ಅಪ್ರಮಾಣ, ಎಂಬ ಭ್ರಾಂತಿ ಬರುವ ಸಂಭವ ಇದೆ. 'ಅಪ್ರಾಮಾಣ್ಯಭ್ರಮೆ' ಎಂದರೆ ಪ್ರಾಮಾಣ್ಯಾಭಾವವತಿ ಪ್ರಾಮಾಣ್ಯಪ್ರಕಾರಕತ್ವಮ್. ಅದು ಇಚ್ಛೆಯಲ್ಲಿ ಪ್ರಸಿದ್ಧವಾಗಿದೆ. ಇಚ್ಛೆಯು ಅಪ್ರಮಾವಾಗಿರುತ್ತದೆ. ಅದರ ಸ್ಮರಣೆ ಬಂದು ಜ್ಞಾನದೊಂದಿಗೆ ವಿವೇಕಾಗ್ರಹದಿಂದಾಗಿ ಗ್ರಹಣ-ಸ್ಮರಣಾತ್ಮಕವಾದ 'ಘಟಜ್ಞಾನಂ ಅಪ್ರಮಾಣಮ್' ಎಂಬ ಅಪ್ರಾಮಾಣ್ಯಭ್ರಮೆ

ಬರಬಹುದು. ಅದಕ್ಕೆ ಬೇಕಾದ ಸಾಮಗ್ರೀ ಅಪ್ರಾಮಾಣ್ಯಗ್ರಾಹಕ ಸಾಮಗ್ರಿ–ಅದು ಸ್ವರೂಪತಃ ವಿಷಯತಶ್ಚ ವಿವೇಕಾಗ್ರಹ ಘಟಿತ ಸಾಮಗ್ರೀ. ''ಘಟಜ್ಞಾನಂ ಅಪ್ರಮಾಣಂ'' ಎಂಬ ಭ್ರಮೆಯಲ್ಲಿ ಘಟಜ್ಞಾನದ ಜ್ಞಾನ ಅನುಭವಾತ್ಮಕ 'ಅಪ್ರಮಾಣಂ' ಎಂಬ ಜ್ಞಾನ ಸ್ಮೃತ್ಯಾತ್ಮಕ. ಅವೆರಡಕ್ಕೆ ಭೇದವಿದ್ದರೂ ಭೇದವು ತಿಳಿಯುವುದಿಲ್ಲ. ಇದು ಸ್ವರೂಪತಃ ಭೇದಾಗ್ರಹ. ಅದರಂತೆ ಘಟಜ್ಞಾನಕ್ಕೂ 'ಅಪ್ರಮಾಣ'ಕ್ಕೂ (ಇಚ್ಛಾ) ಭೇದವಿದೆ. ಅವೆರಡೂ ವಿಷಯ. ಅವುಗಳಿಗೂ ಭೇದವು ಕಾಣುವುದಿಲ್ಲ. ಹೀಗೆ ವಿಷಯತಃ ಭೇದಾಗ್ರಹ. ಏತಾದೃಶ ಭೇದಾಗ್ರಹ–ಘಟಿತವಾದ ಸಾಮಗ್ರೀ ಅಪ್ರಾಮಾಣ್ಯ ಗ್ರಾಹಕ. ಅದು ಪ್ರಸಿದ್ಧವಾಗಿದೆ.

**ಮೀಮಾಂಸಕತ್ರಿತಯಸಾಧಾರಣೀಂ ಪರೋಕ್ತ–ಸ್ವತಸ್ತ್ವನಿರುಕ್ತಿಮ್ ಅನೂದ್ಯ ನಿರಾಹ–ಯತ್ತ್ವಿತಿ ॥**

**ಮಣಿಗ್ರಂಥೇ 'ಜ್ಞಾನಪ್ರಾಮಾಣ್ಯಮ್' ಇತಿ ಪೂರ್ವವಾಕ್ಯನಿರ್ದಿಷ್ಟಂ ಜ್ಞಾನಂ ತದಿತಿ ಪರಾಮೃಶ್ಯತೇ । ತತ್ರ=ಗ್ರಾಹ್ಯಪ್ರಾಮಾಣ್ಯಾಶ್ರಯೇ 'ಅಯಂ ಘಟಃ' ಇತ್ಯಾದಿಜ್ಞಾನೇ ಅಪ್ರಾಮಾಣ್ಯಾಗ್ರಾಹಿಕಾ, ಯಾವತೀ, ಜ್ಞಾನಗ್ರಾಹಿಕಾ ಸಾಮಗ್ರೀ ।**

**1. ಗುರುಮತೇ– 'ಘಟಮಹಂ ಜಾನಾಮಿ' ಇತ್ಯೇವಮಾಕಾರ ಸ್ವಪ್ರಕಾಶ ವ್ಯವಸಾಯಜನಿಕಾ ಚಕ್ಷುರ್ಘಟ ಸಂಯೋಗರೂಪಾ ।**

**2. ಮಿಶ್ರಮತೇ– ತದನುವ್ಯವಸಾಯಜನಕ–ಮನಃಸಂಯೋಗಾದಿರೂಪಾ ।**

**3. ಭಾಟ್ಟಮತೇ– 'ಘಟಃ ಜ್ಞಾನವಿಷಯಃ ಜ್ಞಾತತಾಧಾರತ್ವಾತ್' ಇತ್ಯಾದಿ ಅನುಮಿತಿ ಜನಕ–ವ್ಯಾಪ್ತಿಜ್ಞಾನಾದಿರೂಪಾ ।**

**ತಾವತ್ಯಾ ಗ್ರಾಹ್ಯತ್ವಂ ಸ್ವತಸ್ತ್ವಮ್ ॥**

'ತದಪ್ರಾಮಾಣ್ಯ' ಎಂಬಲ್ಲಿ ತತ್‌ಪದದಿಂದ ಪೂರ್ವಪ್ರಕೃತವಾದ ಜ್ಞಾನವನ್ನು ಪರಿಗ್ರಹಿಸಿ 'ತಸ್ಮಿನ್ ಅಪ್ರಾಮಾಣ್ಯಂ' ಎಂದು ಸಪ್ತಮೀ ತತ್‌ಪುರುಷಸಮಾಸ ಮಾಡಬೇಕು. ವ್ಯವಸಾಯ ರೂಪವಾದ ಘಟಾದಿ ಜ್ಞಾನಗಳಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸದ ಜ್ಞಾನಗ್ರಾಹಕ ಸಾಮಗ್ರೀ ಎಂದು ಅರ್ಥ.

ಅದು ಮೀಮಾಂಸಕ ಮತತ್ರಯದಲ್ಲಿ ಭಿನ್ನಭಿನ್ನವಾದುದು.

1. ಗುರುಮತದಲ್ಲಿ ಸ್ವಪ್ರಕಾಶವಾದ ಜ್ಞಾನಸಾಮಗ್ರೀ.
2. ಮಿಶ್ರಮತದಲ್ಲಿ ಅನುವ್ಯವಸಾಯಸಾಮಗ್ರೀ.
3. ಭಾಟ್ಟಮತದಲ್ಲಿ–ಜ್ಞಾತತಾಲಿಂಗಕ–ಅನುಮಿತಿಸಾಮಗ್ರೀ.

## ತತ್ಪದಕೃತ್ಯ

**ಅತ್ರ ನಿರುಕ್ತೌ ತತ್ರೇತ್ಯುಕ್ತ್ಯಾ ಯತ್ರ ಶುಕ್ತಿರಜತಾದಿ-ಜ್ಞಾನೇ ವಿಸಂವಾದಾದಿ ಲಿಂಗೇನ ಅಪ್ರಾಮಾಣ್ಯಾನುಮಿತ್ಯನಂತರಮ್ 'ಇದಮ್ ಅಪ್ರಮಾತ್ವೇನ ಜಾನಾಮಿ' ಇತಿ ಅನುವ್ಯವಸಾಯಃ ತತ್ರ, ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವರೂಪ-ಅಪ್ರಾಮಾಣ್ಯಘಟಿತ-ಅನುಮಿತಿನಿಷ್ಠ-ಪ್ರಾಮಾಣ್ಯಸ್ಯ ಪ್ರಥಮಜ್ಞಾನನಿಷ್ಠ-ಅಪ್ರಾಮಾಣ್ಯ-ಗ್ರಾಹಿಣ್ಯೈವ ಅನುವ್ಯವಸಾಯಯೇನ ಗ್ರಹಣಾತ್ ಬಾಧ ಇತಿ ಶಂಕಾ (ನಿರಸ್ತಾ)।**

ಲಕ್ಷಣದಲ್ಲಿ 'ತದಪ್ರಾಣ್ಯ' ಎಂದಿದೆ. ತಸ್ಮಿನ್ ಅಪ್ರಾಮಾಣ್ಯಂ=ತದಪ್ರಾಮಾಣ್ಯಂ. 'ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನದಲ್ಲಿರುವ ಅಪ್ರಾಮಾಣ್ಯದ ಗ್ರಾಹಕಸಾಮಗ್ರೀ ಇರಬಾರದು' ಎಂದರ್ಥ. ಇಲ್ಲಿ 'ತತ್' ಪದವನ್ನು ಬಿಟ್ಟರೆ ''ಅಪ್ರಾಮಾಣ್ಯ-ಗ್ರಾಹಕ ಸಾಮಗ್ರೀ-ಅಸಮವಹಿತ'' ಎಂದು ಅರ್ಥವಾಗುತ್ತದೆ. ಹೀಗೆ ಹೇಳಿದರೆ ಬಾಧದೋಷ ಬರುತ್ತದೆ.

ಶುಕ್ತಿಯನ್ನು ನೋಡಿ 'ಇದಂ ರಜತಂ' ಎಂಬ ಜ್ಞಾನ ಬಂತು. ಹತ್ತಿರ ಹೋಗಿ ನೋಡಿದಾಗ ರಜತ ಲಭ್ಯವಾಗಲಿಲ್ಲ. ಈ ವಿಸಂವಾದಲಿಂಗದಿಂದ 'ಇದಂ ರಜತಂ ಇತಿ ಜ್ಞಾನಮ್ ಅಪ್ರಮಾಣಮ್' ಎಂಬ ಅನುಮಿತಿ ಬರುತ್ತದೆ. ಆಮೇಲೆ ''ಇದಂ ಜ್ಞಾನಂ ಅಪ್ರಮಾತ್ವೇನ ಜಾನಾಮಿ' ಎಂಬ ಅನುವ್ಯವಸಾಯ ಬಂತು. ಇದು ಅಪ್ರಾಮಾ ಜ್ಞಾನದ ಅನುವ್ಯವಸಾಯ. 'ರಜತಜ್ಞಾನಂ ಅಪ್ರಮಾಣಂ' ಎಂಬ ಜ್ಞಾನವು ಅಪ್ರಾಮಾಣ್ಯವತಿ ರಜತಜ್ಞಾನೇ ಅಪ್ರಾಮಾಣ್ಯ ಪ್ರಕಾರಕವಾದುದರಿಂದ ಪ್ರಮಾಣವಾಗಿದೆ. ಅದರ ಪ್ರಾಮಾಣ್ಯವನ್ನು ಈ ಅನುವ್ಯವಸಾಯವು ಗ್ರಹಿಸುತ್ತದೆ. ಆದರೆ, ಅನುವ್ಯವಸಾಯ ಗ್ರಹಿಸುವ ಪ್ರಾಮಾಣ್ಯದಲ್ಲಿ ನಿರುಕ್ತ ಸ್ವತಸ್ತ್ವ ಇಲ್ಲವಾದುದರಿಂದ ಬಾಧ. ಹೇಗೆಂದರೆ, ಆ ಅನುವ್ಯವಸಾಯವು ರಜತಜ್ಞಾನಗತವಾದ ಅಪ್ರಮಾಣ್ಯವನ್ನು ವಿಷಯೀಕರಿಸುತ್ತದೆ. ಹೀಗಾಗಿ ಆ ಅನುವ್ಯವಸಾಯ ಸಾಮಗ್ರಿಯು ಅಪ್ರಾಮಾಣ್ಯ ಗ್ರಾಹಕವೇ ಆಗಿದೆ. ತದಗ್ರಾಹಕ ಜ್ಞಾನಗ್ರಾಹಕಸಾಮಗ್ರೀ ಆಗಿಲ್ಲ. ಆದ್ದರಿಂದ ಸ್ವತಸ್ತ್ವ ಬರಲಿಲ್ಲ.

ಆದಕ್ಕಾಗಿ 'ತದಪ್ರಾಮಾಣ್ಯ-ಅಗ್ರಾಹಕ' ಎಂಬ ವಿಶೇಷಣದಲ್ಲಿ ತತ್ಪದವನ್ನು ಕೊಡಬೇಕು. ಗ್ರಾಹ್ಯಪ್ರಾಮಾಣ್ಯಾಶ್ರಯದಲ್ಲಿ ಅಪ್ರಾಮಾಣ್ಯ ಅಗ್ರಾಹಕ ಎಂದರ್ಥ. ಪ್ರಕೃತ ''ರಜತ ಜ್ಞಾನಂ ಅಪ್ರಮಾಣಂ'' ಎಂಬ ಅನುಮಿತ್ಯಾತ್ಮಕವಾದ ಜ್ಞಾನದ ಪ್ರಾಮಾಣ್ಯವು ಅನುವ್ಯವಸಾಯದಿಂದ ಗ್ರಾಹ್ಯವಾಗಿದೆ. ಅದಕ್ಕೆ ಆಶ್ರಯವಾದುದು 'ಅನುಮಿತಿ'. ಅದರಲ್ಲಿರುವ ಅಪ್ರಾಮಾಣ್ಯವನ್ನು ಪ್ರಕೃತಜ್ಞಾನಗ್ರಾಹಕ ಸಾಮಗ್ರಿಯು ಗ್ರಹಿಸುತ್ತಿಲ್ಲ. ಅದು ರಜತಜ್ಞಾನದಲ್ಲಿರುವ ಅಪ್ರಾಮಾಣ್ಯವನ್ನು ಗ್ರಹಿಸುತ್ತಿದೆ. ರಜತ-ಜ್ಞಾನವಾದರೋ ಗ್ರಾಹ್ಯಪ್ರಾಮಾಣ್ಯಾಶ್ರಯವಲ್ಲ. ಹೀಗಾಗಿ, ಆ

ಅನುವ್ಯವಸಾಯ ಸಾಮಗ್ರಿಯು ಗ್ರಾಹ್ಯಪ್ರಾಮಾಣ್ಯಾಶ್ರಯಗತ-ಅಪ್ರಾಮಾಣ್ಯ- ಅಗ್ರಾಹವಾದ ಜ್ಞಾನಗ್ರಾಹಕವಾದ ಸಾಮಗ್ರೀ ಆಗಿದೆ. ಆದರಿಂದ ಪ್ರಾಮಾಣ್ಯವು ಗ್ರಾಹ್ಯವಾಗಿದೆ. ಆದ್ದರಿಂದ ಬಾಧವಿಲ್ಲ.

## ಅಪ್ರಾಮಾಣ್ಯಾಗ್ರಾಹಕಪದಕೃತ್ಯ

**(ಅತ್ರ ನಿರುಕ್ತೌ) ಅಪ್ರಾಮಾಣ್ಯಾಗ್ರಾಹಕೇತ್ಯುಕ್ತ್ಯಾ 'ಇದಂ ಜ್ಞಾನಮ್ ಅಪ್ರಮಾ' ಇತ್ಯಾದೌ ಅಪ್ರಾಮಾಣ್ಯಗ್ರಾಹಕಸಾಮಗ್ರ್ಯಾ ತಜ್ಜ್ಞಾನನಿಷ್ಠಸ್ಯ ಪ್ರಾಮಾಣ್ಯಸ್ಯ ಅಗ್ರಹಣಾದ್ ಬಾಧ ಇತಿ ಶಂಕಾ (ನಿರಸ್ತಾ) ।**

ಮಣಿಕಾರನ ಸ್ವತಸ್ತ್ವನಿರುಕ್ತಿಯಲ್ಲಿ ಜ್ಞಾನಗ್ರಾಹಕ ಸಾಮಗ್ರಿಯಲ್ಲಿ ಅಪ್ರಾಮಾಣ್ಯಾಗ್ರಾಹಕ, ಎಂಬ ವಿಶೇಷಣವನ್ನು ಕೊಡದಿದ್ದರೆ ಬಾಧದೋಷ- 'ಇದಂ ಜ್ಞಾನಂ ಅಪ್ರಮಾ' ಎಂಬ ಜ್ಞಾನಗ್ರಾಹಕ ಸಾಮಗ್ರಿಯು ಪ್ರಾಮಾಣ್ಯವನ್ನು ಗ್ರಹಿಸುತ್ತಿಲ್ಲ. ಆದರಿಂದಾಗಿ ಬಾಧ. ಆ ವಿಶೇಷಣವನ್ನು ಕೊಟ್ಟಾಗ, ಅಂತಹ ಸಾಮಗ್ರಿಯು ಅಪ್ರಾಮಾಣ್ಯ-ಅಗ್ರಾಹಕವಲ್ಲವಾದುದರಿಂದ ಪ್ರಕೃತ ನಿರುಕ್ತಿಯಲ್ಲಿ ಸೇರುವುದಿಲ್ಲ. ಪ್ರಾಮಾಣ್ಯವು ತದಗ್ರಾಹ್ಯವಾದರೂ ಬಾಧವಿಲ್ಲ.

## ಯಾವತ್‌ಪದಕೃತ್ಯ

**(ಅತ್ರ ನಿರುಕ್ತೌ) ಯಾವದಿತ್ಯುಕ್ತ್ಯಾ ನ್ಯಾಯಮತೇ ಜ್ಞಾನಗ್ರಾಹಕ-ಅನುಮಿತಿ ಸಾಮಗ್ರ್ಯಾ ಕ್ವಚಿತ್ ಅನುವ್ಯವಸಾಯೇನ ಚ ಪ್ರಾಮಾಣ್ಯಗ್ರಹಣಾತ್ ಸಿದ್ಧಸಾಧನಮ್, ಇತಿ ಶಂಕಾ ನಿರಸ್ತಾ ।**

ಮಣಿಕಾರೋಕ್ತ ಸ್ವತಸ್ತ್ವನಿರುಕ್ತಿಯಲ್ಲಿ ಸಾಮಗ್ರಿಗೆ 'ಯಾವತ್' ಎಂಬ ವಿಶೇಷಣ ವಿರುವುದರಿಂದ ಸಿದ್ಧಸಾಧನತಾ ದೋಷಪರಿಹಾರವಾಗುತ್ತದೆ. ಹೇಗೆಂದರೆ-ಜ್ಞಾನಗ್ರಾಹಕಸಾಮಗ್ರೀ ಎಂದರೆ ನೈಯಾಯಿಕರು ಹೇಳುವ ಸಮರ್ಥ ಪ್ರವೃತ್ತಿಜನಕತ್ವ ಹೇತುಕ-ಅನುಮಿತಿ ಸಾಮಗ್ರೀ. ಅಥವಾ, ಪಂಚಮಾನುವ್ಯವಸಾಯ ಸಾಮಗ್ರೀ. ತಜ್ಜನ್ಯವಾದ ಅನುಮಿತಿ ಅಥವಾ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಎನ್ನುವುದು ನೈಯಾಯಿಕರಿಗೂ ಸಮ್ಮತ. ಆದ್ದರಿಂದ ಸಿದ್ಧಸಾಧನತಾ. ಯಾವತ್‌ಪದ ಸೇರಿದಾಗ ಯಾವತ್ ಸಾಮಗ್ರಿಯಲ್ಲಿ ತತ್ತನ್ನತದಲ್ಲಿ ಜ್ಞಾನಗ್ರಾಹಕತ್ವೇನ ಸಿದ್ಧವಾದ ಅನುವ್ಯವಸಾಯಾದಿ ಸಾಮಗ್ರಿಗಳೆಲ್ಲವೂ ಸಂಗೃಹೀತವಾಗುತ್ತವೆ. ಅವುಗಳಿಂದ ಪ್ರಾಮಾಣ್ಯವು ಗೃಹೀತವಾಗುತ್ತದೆ, ಎಂದು ನೈಯಾಯಿಕರು ಅಂಗೀಕರಿಸಿಲ್ಲ. ಆದ್ದರಿಂದ ಸಿದ್ಧಸಾಧನತಾ ಪರಿಹಾರವಾಗುತ್ತದೆ.

## ಬಾಧ ಮತ್ತು ಸಿದ್ಧಸಾಧನತಾದೋಷವ್ಯವಸ್ಥೆ

**ವಿಧಿಕೋಟೌ ಬಾಧವಾರಕಾಣಾಂ, ತದಭಾವಕೋಟೌ ಸಿದ್ಧಸಾಧನತಾ ವಾರಕತ್ವಮ್, ತದ್ವಾರಕಸ್ಯ ಚ ಬಾಧವಾರಕತ್ವಂ ಜ್ಞೇಯಮ್ ।**

ಮಣಿಕಾರ ವಿಪ್ರತಿಪತ್ತಿ ರೂಪದಿಂದ ಸ್ವತಸ್ತ್ವ ಪರಿಷ್ಕಾರಗಳನ್ನು ನಿರೂಪಿಸಿದ್ದಾನೆ. ಅಲ್ಲಿ 'ಯಾವತ್ ಸಾಮಗ್ರೀ ಗ್ರಾಹ್ಯಮ್' ಎಂದು ವಿಧಿಕೋಟಿ. ಅದು ಸ್ವತಸ್ತ್ವವಾದ ಪರವಾದುದು. 'ನ ವಾ' ಎಂದು ನಿಷೇಧಕೋಟಿ. ಸ್ವತಸ್ತ್ವಪರಿಷ್ಕಾರದ ವಿಶೇಷಣಗಳಿಗೆ ವಿಧಿಕೋಟಿಯಲ್ಲಿ ಬಾಧ ದೋಷಪರಿಹಾರವು ಪ್ರಯೋಜನವಾದರೆ ಅದೇ ವಿಶೇಷಣಗಳಿಗೆ ನಿಷೇಧ ಕೋಟಿಯಲ್ಲಿ ಸಿದ್ಧಸಾಧನತಾ ಪರಿಹಾರವು ಪ್ರಯೋಜನವಾಗಿರುತ್ತದೆ. ವಿಧಿಕೋಟಿಯಲ್ಲಿ ಸಿದ್ಧಸಾಧನತಾ ವಾರಣೆಯು ಪ್ರಯೋಜನವಾಗಿದ್ದಲ್ಲಿ ನಿಷೇಧಕೋಟಿಯಲ್ಲಿ ಬಾಧವಾರಣೆ ಪ್ರಯೋಜನ.

ಉದಾಹರಣೆಗೆ– ಯಾವತ್ ಪದವನ್ನು ಬಿಟ್ಟರೆ 'ಪ್ರಾಮಾಣ್ಯಂ ಜ್ಞಾನಗ್ರಾಹಕ ಸಾಮಗ್ರೀ ಗ್ರಾಹ್ಯಮ್' ಎಂದು ವಿಧಿಕೋಟಿಯಾಗುತ್ತದೆ. ತಾದೃಶ–ಅನುವ್ಯವಸಾಯ ಗ್ರಾಹತ್ವವು ನೈಯಾಯಿಕರಿಗೆ ಸಿದ್ಧವಾದುದರಿಂದ ಸಿದ್ಧಸಾಧನತಾ. ಇದನ್ನು ಪರತಸ್ತ್ವವಾದಿಯಾದ ನೈಯಾಯಿಕರು 'ತಾದೃಶ ಸಾಮಗ್ರೀ ಗ್ರಾಹ್ಯಂ ನ' ಎಂದು ನಿಷೇಧ ಮಾಡಬೇಕು. ಆಗ ಬಾಧ.

## ಗುರುಮತದಲ್ಲಿ ಅಪ್ರಸಿದ್ಧಿ ಪರಿಹಾರ

**ಗುರುಮತೇ ಸರ್ವಜ್ಞಾನಾನಾಂ ಪ್ರಮಾಣತ್ವೇಽಪಿ ತದಭಾವವತಿ ತತ್–ಪ್ರಕಾರಕತ್ವರೂಪ–ಅಪ್ರಾಮಾಣ್ಯಸ್ಯ ಇಚ್ಛಾಯಾಂ ಪ್ರಸಿದ್ಧಸ್ಯ 'ಇದಂ ಜ್ಞಾನಮ್ ಅಪ್ರಮಾ' ಇತ್ಯಾದೌ ಸ್ಮರಣ ಸಂಭವೇನ ಅಗೃಹೀತಾ–ಸಂಸರ್ಗ ರೂಪ–ಅಪ್ರಾಮಾಣ್ಯಗ್ರಹಸಂಭವಾತ್ ತನ್ಮತೇಽಪಿ ಅಪ್ರಾಮಾಣ್ಯಾ ಗ್ರಾಹಕ–ಪದ–ವೈಯರ್ಥ್ಯಂ ನೇತಿ ॥**

ಗುರುಮತದಲ್ಲಿ ಎಲ್ಲ ಜ್ಞಾನಗಳೂ ಪ್ರಮಾಣಗಳೇ ಆಗಿವೆ. ಅಪ್ರಮಾಣವಾದ ಜ್ಞಾನವೇ ಇಲ್ಲ. ಹೀಗಾಗಿ ಅಪ್ರಾಮಾಣ್ಯಗ್ರಾಹಕ ಜ್ಞಾನಸಾಮಗ್ರೀ ಅಪ್ರಸಿದ್ಧ. ಅದರಿಂದ ತದ್ವಾರಣಾಯ ಅಪ್ರಾಮಾಣ್ಯಾಗ್ರಾಹಕಸಾಮಗ್ರೀ ಎಂಬ ವಿಶೇಷಣ ವ್ಯರ್ಥ, ಎಂದು ಆಕ್ಷೇಪ.

ತನ್ಮತದಲ್ಲೂ ಇಚ್ಛೆಯಲ್ಲಿ ಅಪ್ರಾಮಾಣ್ಯವು ಇದೆ. ಅದರ ಅಸಂಸರ್ಗಾಗ್ರಹದಿಂದ 'ಇದಂ ಜ್ಞಾನಂ ಅಪ್ರಮಾಣಂ' ಎಂಬ ಭ್ರಮೆ ಬರುತ್ತದೆ. ಆ ಭ್ರಮಸಾಮಗ್ರಿಯೇ ತದಪ್ರಾಮಾಣ್ಯಗ್ರಾಹಕ ಸಾಮಗ್ರೀ. ಅದರ ಸಂಗ್ರಹವಾಗಬಾರದು. ಅದಕ್ಕಾಗಿ ತನ್ಮತದಲ್ಲೂ ತದಪ್ರಾಮಾಣ್ಯಾಗ್ರಾಹಕ, ಎಂಬ ವಿಶೇಷಣ ಬೇಕು, ಎಂದು ಸಮಾಧಾನ.

## ಮಣ್ಯುಕ್ತ ಸ್ವತಸ್ತ್ವನಿರಾಸ

**तन्न । तदभाववति तत्प्रकारकत्वरूपाप्रामाण्याग्राहकस्यापि तद्वति तत्प्रकारकत्वरूपप्रामाण्यात्यन्ताभावविषयकस्य ज्ञानज्ञानस्य प्रामाण्याग्राहकत्वेन बाधात् ।**

ತಾರ್ಕಿಕರು ಮಾಡಿರುವ ಈ ಸ್ವತಸ್ತ್ವ ಪರಿಷ್ಕಾರವು ಸರಿಯಲ್ಲ. ಆ ಸ್ವತಸ್ತ್ವದಲ್ಲಿ ಜ್ಞಾನಗ್ರಾಹಕ ಸಾಮಗ್ರೀಗಳೆಲ್ಲವೂ ಪ್ರಾಮಾಣ್ಯವನ್ನು ಗ್ರಹಿಸುತ್ತವೆ, ಎನ್ನಲಾಗಿದೆ. ಇದು ತಪ್ಪು. ಪ್ರಮಾತ್ಮಕವಾದ ಘಟಜ್ಞಾನವನ್ನು 'ಇದಂ ಜ್ಞಾನಂ ಪ್ರಾಮಾಣ್ಯಾಭಾವವತ್' ಎಂದು ಅನುವ್ಯವಸಾಯವು ಗ್ರಹಿಸುತ್ತದೆ. ಇಂತಹ ಅನುವ್ಯವಸಾಯ ಸಾಮಗ್ರಿಯು 'ತದಭಾವವತಿ ತತ್ಪ್ರಕಾರಕತ್ವರೂಪವಾದ' ಅಪ್ರಾಮಾಣ್ಯವನ್ನು ಗ್ರಹಿಸುತ್ತಿಲ್ಲ. ಪ್ರಾಮಾಣ್ಯಾಭಾವವನ್ನಷ್ಟೇ ಗ್ರಹಿಸುತ್ತದೆ. ಆದ್ದರಿಂದ ಜ್ಞಾನಗ್ರಾಹಕವಾದ ಆ ಅನುವ್ಯವಸಾಯ ಸಾಮಗ್ರಿಯು ಅಪ್ರಾಮಾಣ್ಯಾಗ್ರಾಹಕವಾಗಿದೆ. ಅಂತಹ ಸಾಮಗ್ರಿಯಿಂದ ಘಟಜ್ಞಾನದಲ್ಲಿರುವ ಪ್ರಾಮಾಣ್ಯವು ಗೃಹೀತವಾಗಿಲ್ಲ. ಆದ್ದರಿಂದ ಆ ಪ್ರಾಮಾಣ್ಯದಲ್ಲಿ ತದಪ್ರಾಮಾಣ್ಯಾಗ್ರಾಹಕ-ಜ್ಞಾನಗ್ರಾಹಕ-ಯಾವತ್-ಸಾಮಗ್ರೀಗ್ರಾಹ್ಯತ್ವವು ಬರಲಿಲ್ಲ. ಆದ್ದರಿಂದ ಬಾಧ.

## ಖಂಡನ ಗ್ರಂಥಕ್ಕೆ ಅವತಾರಿಕೆ

**ಅತ್ರ ಯದುಕ್ತಮ್, ಪ್ರಾಮಾಣ್ಯಘಟಕ-ಅಪ್ರಾಮಾಣ್ಯಗ್ರಾಹಿಣಾ ಜ್ಞಾನೇನ ಪ್ರಾಮಾಣ್ಯಾಗ್ರಹಣಾದ್ ಬಾಧವಾರಣಾಯ ತತ್‌ಪದಮಿತಿ,**

**ತನ್ನ, 'ಇಮೌ ವಹ್ನೀ' ಇತಿ ವಹ್ನಿದ್ವಯಗೋಚರ-ಏಕಜ್ಞಾನವಿಷಯಕ-ಅನುವ್ಯವಸಾಯಾದಿ-ರೂಪಜ್ಞಾನೇನ ದೋಷವಶಾತ್ ಅನ್ಯತರಾಂಶ-ಅಪ್ರಾಮಾಣ್ಯಗ್ರಾಹಿಣಾಪಿ ಅನ್ಯತರಾಂಶೇ ಪ್ರಾಮಾಣ್ಯಗ್ರಹಣೇನ ಬಾಧಾತ್ ।**

ನ್ಯಾಯದೀಪದಲ್ಲಿ ತಾರ್ಕಿಕೋಕ್ತ-ಸ್ವತಸ್ತ್ವನಿರುಕ್ತಿಯನ್ನು ನಿರಾಕರಣೆ ಮಾಡುತ್ತಿದ್ದಾರೆ- ಹಿಂದೆ 'ತದಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣದಲ್ಲಿ ಸೇರಿದ ತತ್ ಪದಕ್ಕೆ 'ತತ್ರ' ಎಂಬ ಅರ್ಥವನ್ನು ಮಾಡಿ ಹೀಗೆ ಸಾರ್ಥಕ್ಯವನ್ನು ಹೇಳಲಾಗಿದೆ-ಭ್ರಮೆಯನ್ನು 'ಇದಂ ಜ್ಞಾನಮ್ ಅಪ್ರಮಾಣಂ' ಎಂದು ಗ್ರಹಿಸುವ ಅನುಮಿತಿ ಬಂದಮೇಲೆ 'ಇದಂ ಅಪ್ರಮಾತ್ವೇನ ಜಾನಾಮಿ' ಎಂದು ಅನುವ್ಯವಸಾಯವು ಬರುತ್ತದೆ. ಈ ಅನುವ್ಯವಸಾಯವು ಅನುಮಿತಿಯಲ್ಲಿರುವ 'ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವ' ಎಂಬ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಆದರೆ, ಆ

ಜ್ಞಾನವು ರಜತಜ್ಞಾನಗತವಾದ ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಆದ್ದರಿಂದ ಉಕ್ತಪ್ರಾಮಾಣ್ಯದಲ್ಲಿ 'ಅಪ್ರಾಮಾಣ್ಯಾಗ್ರಾಹಕ ಜ್ಞಾನಗ್ರಾಹಕ ಸಾಮಗ್ರೀಗ್ರಾಹ್ಯತ್ವ' ಬಂದಿಲ್ಲವಾದ ಕಾರಣ ಬಾಧ.

(ನ್ಯಾಯದೀಪದಲ್ಲಿ- 'ಪ್ರಾಮಾಣ್ಯಘಟಕ-ಅಪ್ರಾಮಾಣ್ಯ' ಎಂದರೆ-ಪ್ರಕತ 'ಇದಂ ಜ್ಞಾನಂ ಅಪ್ರಮಾ' ಎಂಬ ಅನುಮಿತಿಯಲ್ಲಿ ಇರುವ ಪ್ರಾಮಾಣ್ಯ. ಇದು 'ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವ'. ಈ ಪ್ರಾಮಾಣ್ಯದಲ್ಲಿ ಅಪ್ರಾಮಾಣ್ಯವು ಅಡಕವಾಗಿದೆ, ಎಂದರ್ಥ.)

ತತ್‌ಪದವನ್ನು ಕೊಟ್ಟರೆ ಈ ಬಾಧ ಇಲ್ಲ. ತದಪ್ರಾಮಾಣ್ಯ ಎಂದರೆ ಗ್ರಾಹ್ಯ ಪ್ರಾಮಾಣ್ಯಾಶ್ರಯಜ್ಞಾನದಲ್ಲಿರುವ ಅಪ್ರಾಮಾಣ್ಯ ಎಂದು ಅರ್ಥ. ಪ್ರಕೃತ, ಗ್ರಾಹ್ಯ ಪ್ರಾಮಾಣ್ಯಾಶ್ರಯ ಜ್ಞಾನ ಅನುಮಿತಿ. ತನ್ನಿಷ್ಠವಾದ ಅಪ್ರಾಮಾಣ್ಯವನ್ನು ಅನುವ್ಯವಸಾಯವು ಗ್ರಹಿಸುತ್ತಿಲ್ಲ. ಇದು 'ಇದಂ ರಜತಂ' ಎಂಬ ವ್ಯವಸಾಯಗತವಾದ ಅಪ್ರಾಮಾಣ್ಯವನ್ನು ಗ್ರಹಿಸುತ್ತಿದೆ. ಆದ್ದರಿಂದ ಬಾಧದೋಷ ಇಲ್ಲ.

ರಾಯರು ಹೇಳುತ್ತಾರೆ— ಹೀಗೆ ಹೇಳಿದರೂ ಬಾಧವು ತಪ್ಪಿದ್ದಲ್ಲ. 'ಇಮೌ ವಹ್ನೀ' ಎಂದು ವಹ್ನಿದ್ವಯವಿಷಯಕವಾದ ಒಂದು ಜ್ಞಾನ ಬರುತ್ತದೆ. ಈ ಜ್ಞಾನವು ಒಂದಂಶದಲ್ಲಿ ಪ್ರಮಾ ಇನ್ನೊಂದಂಶದಲ್ಲಿ ಭ್ರಮೆ. ಒಂದು ವಹ್ನಿ ಇದೆ, ಇನ್ನೊಂದು ಗುಂಜಾಪುಂಜ. ಅದನ್ನು ನೋಡಿ ವಹ್ನಿ ಎಂಬ ಭ್ರಾಂತಿ ಬಂದಿದೆ. ಈ ಭ್ರಾಂತಿ ಬಂದ ವ್ಯಕ್ತಿಯ ಮುಂದೆ ಎರಡು ಬೆಂಕಿಗಳಿಲ್ಲ-ಒಂದು ಬೆಂಕಿ, ಇನ್ನೊಂದು ಗುಂಜಾಪುಂಜ.

ಇಂತಹ ಜ್ಞಾನವನ್ನು ಅನುವ್ಯವಸಾಯವು ಗ್ರಹಿಸುವಾಗ ಒಂದಂಶದಲ್ಲಿ ಪ್ರಾಮಾಣ್ಯವನ್ನೂ ಮತ್ತೊಂದಂಶದಲ್ಲಿ ಅಪ್ರಾಮಾಣ್ಯವನ್ನೂ ಸರಿಯಾಗಿಯೇ ಗ್ರಹಿಸಿದೆ. ಆದರೆ ಈ ಪ್ರಾಮಾಣ್ಯ ಗ್ರಾಹಕವಾದ ಅನುವ್ಯವಸಾಯವು ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಜ್ಞಾನದಲ್ಲೇ ಒಂದಂಶದಲ್ಲಿ ಅಪ್ರಾಮಾಣ್ಯವನ್ನೂ ಗ್ರಹಿಸುತ್ತಿದೆ. ಆದ್ದರಿಂದ ತದಪ್ರಾಮಾಣ್ಯಾಗ್ರಾಹಕ-ಜ್ಞಾನಗ್ರಾಹ-ಸಾಮಗ್ರೀ ಗ್ರಾಹ್ಯತ್ವವು ಈ ಜ್ಞಾನಗತ-ಪ್ರಾಮಾಣ್ಯದಲ್ಲಿ ಬಂದಿಲ್ಲ. ಆದ್ದರಿಂದ, ಬಾಧ.

## ಬಾಧಪರಿಹಾರ, ಬಾಧಾಂತರ

**ಯತ್ತು-ತದಿತ್ಯಸ್ಯ ತತ್ರ=ತದಂಶೇ=ಗ್ರಾಹ್ಯಪ್ರಾಮಾಣ್ಯಾಶ್ರಯ-ಜ್ಞಾನಾಂಶೇ ಅಪ್ರಾಮಾಣ್ಯಾಗ್ರಾಹಕ-ಇತ್ಯರ್ಥತ್ವಾತ್ ನ ದೋಷ ಇತಿ,**

**ತನ್ನ। ತಥಾಪಿ ತದಂಶೇ ಭಾವರೂಪಾಪ್ರಾಮಾಣ್ಯಗ್ರಾಹಿಣಾಪಿ 'ನೇದಂ ಜ್ಞಾನಂ ಪ್ರಮಾಣಮ್' ಇತಿ ತದಂಶೇ ಪ್ರಾಮಾಣ್ಯಾಭಾವಾವಗಾಹಿನಾ ಪ್ರಾಮಾಣ್ಯಾಗ್ರಹೇಣ ಬಾಧಾತ್, ಇತಿ ಮೂಲೋಕ್ತದೋಷಗ್ರಾಸಾತ್ ।**

ಹಿಂದಿನ ಬಾಧದೋಷವನ್ನು ಹೀಗೆ ಪರಿಹಾರ ಮಾಡಬಹುದು— 'ತದಪ್ರಾಮಾಣ್ಯ' ಎಂಬಲ್ಲಿ ತತ್ರ=ತದಂಶೇ ಅಂದರೆ ಯಾವಾಂಶದಲ್ಲಿ ಜ್ಞಾನಗತ ಪ್ರಾಮಾಣ್ಯವನ್ನು ಗ್ರಹಿಸಬೇಕೋ ಆ ಅಂಶದಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸಬಾರದು, ಎಂದರ್ಥ. 'ಇಮೌ ವಹ್ನೀ' ಎಂಬ ಜ್ಞಾನದಲ್ಲಿ ಸಾಕ್ಷಿಯು ಪ್ರಾಮಾಣ್ಯಗ್ರಹಣೆ ಮಾಡುವ ಜ್ಞಾನಾಂಶದಲ್ಲಿ ಮನಸ್ಸು ಅಪ್ರಾಮಾಣ್ಯವನ್ನು ಗ್ರಹಣೆ ಮಾಡುತ್ತಿಲ್ಲ. ಆದರಿಂದ ಬಾಧ ಪರಿಹಾರವಾಗುತ್ತದೆ.

ಆದರೂ ಮೂಲದಲ್ಲಿ ಹೇಳಿದ ಬಾಧ ಅಪರಿಹಾರ್ಯ–ಅಪ್ರಾಮಾಣ್ಯ ಎರಡು ವಿಧ.

1. ಭಾವರೂಪ ಅಪ್ರಾಮಾಣ್ಯ–ತದಭಾವವತಿ ತತ್ಪ್ರಕಾರಕತ್ವ.

2. ಅಭಾವರೂಪ ಅಪ್ರಾಮಾಣ್ಯ–ತದ್ವತಿ ತತ್ಪ್ರಕಾರಕತ್ವಾಭಾವ.

ಇವೆರಡರಲ್ಲಿ ಯಾವುದೇ ಒಂದು ರೀತಿಯ ಅಪ್ರಾಮಾಣ್ಯವನ್ನು ಗ್ರಹಿಸಿದರೂ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆದರೂ ಯಾವ ಅನುವ್ಯವಸಾಯವು ('ಇದಂ ಜ್ಞಾನಮ್ ಅಪ್ರಾಮಾಣಮ್') ಒಂದು ವಿಧದ ಅಪ್ರಾಮಾಣ್ಯಗ್ರಾಹಕವಾದಾಗಲೂ ಇನ್ನೊಂದು ವಿಧದ ಅಪ್ರಾಮಾಣ್ಯ–ಅಗ್ರಾಹಕವಾಗುವುದರಿಂದ ಅಂತಹ ಅನುವ್ಯವಸಾಯದ ಸಂಗ್ರಹವಾಗುತ್ತದೆ. ಆದರೆ, ಆದರಿಂದ ಪ್ರಾಮಾಣ್ಯದ ಗ್ರಹಣೆ ಆಗಿಲ್ಲ, ಆದ್ದರಿಂದ ಬಾಧ.

## ರುಚಿದತ್ತಮಿಶ್ರರ ಅಭಿಪ್ರಾಯ ನಿರಾಸ

**ಯದಪಿ, ತತ್ಪದಂ ಗ್ರಾಹ್ಯಪರಂ ಸತ್ ಪ್ರಾಮಾಣ್ಯಪದೇನ ಅನ್ವೀಯಮಾನಂ 'ಗ್ರಾಹ್ಯಪ್ರಾಮಾಣ್ಯ ವಿರೋಧಿ' ಇತ್ಯರ್ಥಲಾಭಾರ್ಥಮ್, ಅತೋ ನ ದೋಷ ಇತಿ ।**

**ತದಪಿ ನ । ತಥಾತ್ವೇ 'ಅತತ್ಪ್ರಾಮಾಣ್ಯ' ಇತಿ ನಿರ್ದೇಶಾಪಾತೇನ ಯಥೋಕ್ತನಿರ್ದೇಶೇ ತತ್ಪದಸ್ಯ ಪ್ರಾಮಾಣ್ಯಪದೇನ ಅಸಾಮರ್ಥ್ಯಾತ್ ।**

ರುಚಿದತ್ತಮಿಶ್ರರು ಮಣಿವ್ಯಾಖ್ಯಾನ ಪ್ರಕಾಶದಲ್ಲಿ ಹೀಗೆ ಪರಿಹಾರ ಹೇಳಿದ್ದಾರೆ—

'ತದಪ್ರಾಮಾಣ್ಯ' ಎಂಬಲ್ಲಿರುವ ತತ್ಪದಕ್ಕೆ 'ಗ್ರಾಹ್ಯ' ಎಂದರ್ಥ. ಅದಕ್ಕೆ 'ಅಪ್ರಾಮಾಣ್ಯ' ಪದದಲ್ಲಿ ಸೇರಿರುವ ಪ್ರಾಮಾಣ್ಯದಲ್ಲಿ ಅನ್ವಯ. ಅ ಎಂಬ ನಞ್‌ಗೆ ವಿರೋಧಿ ಎಂದು ಅರ್ಥ. ಒಟ್ಟಿನಲ್ಲಿ– 'ಗ್ರಾಹ್ಯಪ್ರಾಮಾಣ್ಯ ವಿರೋಧಿ ಅಗ್ರಾಹಕ' ಎಂದು ಅರ್ಥ. ''ಇಮೌ ವಹ್ನೀ'' ಎಂಬ ಜ್ಞಾನವು ಒಂದಂಶದಲ್ಲಿ ಅಪ್ರಮಾಣವಾದರೂ ಆ ಅಂಶದಲ್ಲಿರುವ ಅಪ್ರಾಮಾಣ್ಯವು ಇನ್ನೊಂದು ಅಂಶದಲ್ಲಿರುವ ಪ್ರಾಮಾಣ್ಯಕ್ಕೆ ವಿರೋಧಿಯಲ್ಲ, ಆದ್ದರಿಂದ ಬಾಧ ಇಲ್ಲ.

ಇದು ಸರಿಯಲ್ಲ. ಪ್ರಕೃತದಲ್ಲಿ ತತ್ ಪದವು ಅಪ್ರಾಮಾಣ್ಯ ಪದದ ಪೂರ್ವದಲ್ಲಿದೆ. ಅದಕ್ಕೆ

ಉತ್ತರಪದವಾದ ಅಪ್ರಾಮಾಣ್ಯಪದದೊಂದಿಗೆ ಸಮಾಸಮಾಡಬಹುದು. ಪ್ರಾಮಾಣ್ಯಪದ ದೊಂದಿಗೆ ಸಾಮಾಸಮಾಡಲುಬೇಕಾದ ಸಾಮಾರ್ಥ್ಯ ಅದಕ್ಕಿಲ್ಲ. ಹಾಗಿದ್ದಲ್ಲಿ 'ಅತತ್ ಪ್ರಾಮಾಣ್ಯ' ಎಂದು ನಿರ್ದೇಶ ಮಾಡಬೇಕಾಗಿತ್ತು. ಆದ್ದರಿಂದ ಮಿಶ್ರರ ಅಭಿಪ್ರಾಯ ಸಮಂಜಸವಲ್ಲ.

## ಪ್ರಾಭಾಕರ ಮತದಲ್ಲಿ ಉಕ್ತ ಸ್ವತಸ್ತ್ವಕ್ಕೆ ಬಾಧ

**ಗುರುಮತೇ 'ಇದಂ ಜ್ಞಾನಮ್ ಅಪ್ರಮಾ' ಇತ್ಯಾದೌ ಅಪ್ರಮೇತಿ ಸ್ಮೃತೇಃ ಅಪ್ರಾಮಾಣ್ಯಗ್ರಾಹಕತ್ವೇಽಪಿ 'ಇದಂ ಜ್ಞಾನಮ್' ಇತಿ ಗ್ರಹಣಾತ್ಮಕಸ್ಯ ಅಪ್ರಮಾಣಸ್ಮೃತಿ-ಪ್ರತಿಬಂಧೇನ ಪ್ರಾಮಾಣ್ಯಾಗ್ರಹಣೇನ ಬಾಧಾಪತ್ತ್ಯಾ ಉಕ್ತಸ್ವತಸ್ತ್ವನಿರುಕ್ತೇಃ ಗುರುಮತಸಾಧಾರಣ್ಯಾಯೋಗಾಚ್ಚ ।**

ಪ್ರಾಭಾಕರ ಮತದಲ್ಲಿ 'ಇದಂ ಜ್ಞಾನಮ್ ಅಪ್ರಮಾಣಮ್' ಎಂಬ ಜ್ಞಾನವು ಗ್ರಹಣ ಸ್ಮರಣಾತ್ಮಕ-ಜ್ಞಾನದ್ವಯ. ಅವರ ಮತದಲ್ಲಿ ಎಲ್ಲ ಜ್ಞಾನಗಳೂ ಪ್ರಮಾಣವಾದುದರಿಂದ ಈ ಜ್ಞಾನ ಭ್ರಮಾತ್ಮಕ. ಇದರಲ್ಲಿ 'ಅಪ್ರಮಾಣಂ' ಎನ್ನುವ ಅಂಶ ಸ್ಮರಣಾತ್ಮಕ. ಅದರಲ್ಲಿ ಮಾತ್ರ ಅಪ್ರಾಮಾಣ್ಯವು ವಿಷಯ. 'ಇದಂ ಜ್ಞಾನಮ್' ಎಂಬ ಗ್ರಹಣಾತ್ಮಕ ಜ್ಞಾನದಲ್ಲಿ ಅಪ್ರಾಮಾಣ್ಯವು ವಿಷಯವಲ್ಲ. ಆದ್ದರಿಂದ ಆ ಜ್ಞಾನವು ತದಪ್ರಾಮಾಣ್ಯಾವಿಷಯಕ ಜ್ಞಾನವಿಷಯಕ ಸ್ವಪ್ರಕಾಶಾತ್ಮಕ ಜ್ಞಾನ. ಆದರೆ ಸ್ಮರಣಾತ್ಮಕ ಜ್ಞಾನವು ಪ್ರತಿಬಂಧಕವಾಗಿರುವುದರಿಂದ ಅದು ತಜ್ಜ್ಞಾನಗತ ಪ್ರಾಮಾಣ್ಯವಿಷಯಕವಾಗಿಲ್ಲ. ಹೀಗೆ ಬಾಧ.

## ಮಣ್ಯುಕ್ತದಿಶಾ ಬಾಧಪರಿಹಾರ-ಖಂಡನೆ

**ನ ಚ ಉತ್ಪತ್ತಿಪ್ರಾಮಾಣ್ಯಗ್ರಂಥೇ ಮಣಿಕೃತೈವ 'ಪ್ರಾಭಾಕರಾಸ್ತು' ಇತ್ಯಾದಿನಾ ಗುರುಮತೇ ಸಂಶಯಾನುಪಪತ್ತ್ಯುಪಪಾದನ-ಪ್ರಸ್ತಾವೇ 'ಇದಂ ಜ್ಞಾನಂ ಪ್ರಮಾ ನವಾ' ಇತ್ಯಾದೌ ಅಪಿ ಪ್ರಾಮಾಣ್ಯಗ್ರಹೋ ಅಸ್ತಿ, ಇತ್ಯುಪೇತ್ಯ ಸಂಶಯಸ್ಯ ಅನ್ಯವಿಷಯತ್ವೋಪಪಾದನಾತ್ ತಾದೃಶಸ್ಥಲೇಽಪಿ ಪ್ರಾಮಾಣ್ಯಗ್ರಹಸದ್ಭಾವಾತ್ ನ ಬಾಧ ಇತಿ ಶಂಕ್ಯಮ್ ।**

**ತಥಾತ್ವೇ ತನ್ಮತೇ ತದಪ್ರಾಮಾಣ್ಯಾಗ್ರಾಹಕಪದ-ವೈಯರ್ಥ್ಯಾಪತ್ತೇಃ ।**

ತತ್ತ್ವಚಿಂತಾಮಣಿ ಗ್ರಂಥದ 'ಉತ್ಪತ್ತಿಪ್ರಾಮಾಣ್ಯ' ಪ್ರಕರಣದಲ್ಲಿ 'ಪ್ರಭಾಕರಾಸ್ತು' ಎಂದು ಪ್ರಾಭಾಕರ ಸಿದ್ಧಾಂತವನ್ನು ನಿರೂಪಿಸುತ್ತಾ 'ಇದಂ ಜ್ಞಾನಂ ಪ್ರಮಾ ನವಾ' ಎಂಬ ಸಂದೇಹವೂ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ, ಎಂದು ಹೇಳಿ 'ಪ್ರಮಾ ನವಾ' ಎಂದರೆ 'ಜ್ಞಾನವು ಒಂದೋ ಎರಡೋ' ಎಂದು ಸಂದೇಹ, ಪ್ರಾಮಾಣ್ಯದ ಸಂದೇಹವೇ ಇಲ್ಲ, ಪ್ರಮಾ ಎಂದರೆ ಅಖಂಡಜ್ಞಾನ ಎಂದರ್ಥ. ನವಾ, ಎಂದರೆ ಖಂಡಜ್ಞಾನ ಎಂದರ್ಥ, ಎನ್ನಲಾಗಿದೆ.

**(ಮಣಿವಾಕ್ಯ–'ನಹ್ಯತ್ರ ಜ್ಞಾನೇ ಸತ್ಯತ್ವಾಸತ್ಯತ್ವಸಂಶಯಃ, ಸರ್ವಜ್ಞಾನಾನಾಂ ಸತ್ಯತ್ವಾತ್ । ಕಿಂ ತು ಅಗೃಹೀತಭೇದಂ ಜ್ಞಾನದ್ವಯಂ ಏಕಂ ವಾ ಜ್ಞಾನಮ್, ಇತ್ಯಾಕಾರೋ ಜ್ಞಾನಂ ಪ್ರಮಾ ನವಾ' ಇತಿ ಸಂಶಯಃ । (ಪುಟ.396)**

ಇದೇ ಯುಕ್ತಿಯಿಂದ 'ಇದಂ ಜ್ಞಾನಂ ಅಪ್ರಮಾಣಮ್' ಎಂಬ ಭ್ರಾಂತಿಯಲ್ಲೂ ಪ್ರಾಮಾಣ್ಯವು ವಿಷಯವಾಗಿದೆ. 'ಅಪ್ರಮಾಣಂ' ಎಂದರೆ 'ಜ್ಞಾನದ್ವಯಮ್' ಎಂದರ್ಥ. ಏಕೆಂದರೆ, ಶುಕ್ತಿಯನ್ನು ನೋಡಿ 'ಇದಂ ರಜತಂ' ಎಂಬ ಜ್ಞಾನ ಎಂದರೆ, ಈ ಜ್ಞಾನವು ಅಪ್ರಮಾಣ. ಪ್ರಾಭಾಕರ ಸಿದ್ಧಾಂತದಂತೆ, ಈ ಜ್ಞಾನದ 'ಇದಂ' ಎಂಬ ಅಂಶ ಗ್ರಹಣಾತ್ಮಕ, 'ರಜತಂ' ಎನ್ನುವ ಅಂಶವು ಸ್ಮರಣಾತ್ಮಕ. ಈ ಎರಡೂ ಜ್ಞಾನಗಳೂ ಸ್ವಪ್ರಕಾಶ. ಹಾಗೂ ಸ್ವನಿಷ್ಠ ಪ್ರಾಮಾಣ್ಯವಿಷಯಕ. ಹೀಗೆ ಜ್ಞಾನವು ಅಪ್ರಮಾಣವೆಂದರೆ ಜ್ಞಾನದ್ವಯಾತ್ಮಕ ಎಂದರ್ಥ. ಪ್ರಮಾಣ ಎಂದರೆ ಅಖಂಡಜ್ಞಾನ, ಎಂದರ್ಥ, ಆದ್ದರಿಂದ ಬಾಧ ದೋಷ ಇಲ್ಲ. ಏಕೆಂದರೆ 'ಇದಂಜ್ಞಾನಂ' ಎಂಬ ಗ್ರಹಣಾತ್ಮಕ ಅಂಶವೂ ಸ್ವಪ್ರಕಾಶ, ಸ್ವಪ್ರಾಮಾಣ್ಯವಿಷಯಕ. ಅಪ್ರಮಾಣಂ ಎಂಬ ಜ್ಞಾನವೂ ಸ್ವಪ್ರಕಾಶ, ಸ್ವಪ್ರಾಮಾಣ್ಯವಿಷಯಕ.

ಇದು ಯುಕ್ತವಲ್ಲ. ಇದರ ಅಭಿಪ್ರಾಯ–ಪ್ರಾಭಾಕರ ಮತದಲ್ಲಿ ಪ್ರಾಮಾಣ್ಯವನ್ನು ಗ್ರಹಿಸದ ಜ್ಞಾನವೇ ಇಲ್ಲ. ಎಲ್ಲ ಜ್ಞಾನಗಳೂ ಪ್ರಾಮಾಣ್ಯವನ್ನೇ ಗ್ರಹಿಸುತ್ತವೆ, ಎಂದು. ಹಾಗಾದರೆ, ವ್ಯಾವರ್ತ್ಯವೇ ಇಲ್ಲದಿರುವುದರಿಂದ 'ತದಪ್ರಾಮಾಣ್ಯಾಗ್ರಾಹಕ' (ಅಪ್ರಾಮಾಣ್ಯಾವಿಷಯಕ) ಎಂಬ ವಿಶೇಷಣ ವ್ಯರ್ಥವಾದೀತು.

## ಪ್ರಕಾರಾಂತರದಿಂದ ಬಾಧ ಪರಿಹಾರ–ನಿರಾಸ

**ತಾದೃಶಸ್ಥಲೇ ಪ್ರಾಮಾಣ್ಯಾಗ್ರಹಮ್ ಉಪೇತ್ಯ ಅಗ್ರಾಹಕಪದೇನ ಗ್ರಾಹಕಸಾಮಗ್ರ್ಯಸಮವಧಾನ–ವಿವಕ್ಷಾಯಾಂ ಚ ಮಿಶ್ರಾದಿಮತೇ ಅಪ್ರಾಮಾಣ್ಯ–ಗ್ರಹಸ್ಥಲೇ ತತ್–ಸಾಮಗ್ರ್ಯಭಾವೇನ ತದಸಮವಹಿತೇನಾಪಿ ಜ್ಞಾನಗ್ರಾಹಕೇಣ ತತ್ರ ಪ್ರಾಮಾಣ್ಯಾಗ್ರಹಾದ್ ಬಾಧ ಏವ, ಇತ್ಯಾದಿದೂಷಣಮ್ ಸ್ಫುಟತ್ವಾದುಪೇಕ್ಷ್ಯ ಉಕ್ತನಿರುಕ್ತೌ ಯಾವಜ್ಜ್ಞಾನ ವಿಷಯಕ–ಜ್ಞಾನವಿಷಯತ್ವಮ್ ಇತ್ಯೇವ ಸಾಮಂಜಸ್ಯೇ ಗ್ರಾಹಕ–ಸಾಮಗ್ರೀತ್ಯುಕ್ತಿ–ವೈಯರ್ಥ್ಯಾತ್ ಗೌರವಾಚ್ಚ ಇತ್ಯುಪೇತ್ಯ ಗ್ರಾಹಕ ಸಾಮಗ್ರೀ–ಪದತ್ಯಾಗೇನ ಜ್ಞಾನಪದೇನೈವಾನುವದನ್ ಯಥಾ ಶ್ರುತಾಪ್ರಾಮಾಣ್ಯಪದಾರ್ಥೇ ತಾವದ್ದೋಷಮಾಹ– ತದಭಾವವತೀತಿ ।**

'ಇದಂ ಜ್ಞಾನಮ್ ಅಪ್ರಮಾಣಮ್' ಎಂಬ ಜ್ಞಾನದಲ್ಲಿರುವ 'ಇದಂ ಜ್ಞಾನಮ್'

ಇತ್ಯಾಕಾರಕ-ಗ್ರಹಣಾತ್ಮಕಜ್ಞಾನವು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಅಂಗೀಕರಿಸಿ ದಾಗಲೂ ಬಾಧ ಬರುವುದಿಲ್ಲ. ಏಕೆಂದರೆ, 'ಅಪ್ರಾಮಾಣ್ಯಾವಿಷಯಕ' ಎಂಬ ವಿಶೇಷಣವನ್ನು ಜ್ಞಾನವಿಷಯಕ ಜ್ಞಾನದಲ್ಲಿ ಕೊಟ್ಟರೆ ಬಾಧಕ್ಕೆ ಅವಕಾಶ. ಆಗ, 'ಇದಂ ಜ್ಞಾನಮ್' ಎಂಬ ಗ್ರಹಣಾತ್ಮಕ ಭಾಗವು ಅಪ್ರಾಮಾಣ್ಯ-ಅವಿಷಯಕವಾಗಿದ್ದರೂ ಪ್ರಾಮಾಣ್ಯವನ್ನು ವಿಷಯೀಕರಿಸು ತ್ತಿಲ್ಲ, ಎಂದು. ಆದರೆ ಜ್ಞಾನದಲ್ಲಿ ಅಪ್ರಾಮಾಣ್ಯಾವಿಷಯಕತ್ವವನ್ನು ವಿಶೇಷಣವನ್ನಾಗಿ ಕೊಡದೆ ಅಪ್ರಾಮಾಣ್ಯಗ್ರಾಹಕಸಾಮಗ್ರೀ-ಅಸಮವಹಿತತ್ವವನ್ನು ಜ್ಞಾನದಲ್ಲಿ ವಿಶೇಷಣವನ್ನಾಗಿ ಕೊಡಬೇಕು. ಪ್ರಕೃತದಲ್ಲಿ ಗ್ರಹಣಾತ್ಮಕ ಭಾಗವು ಅಪ್ರಾಮಾಣ್ಯಗ್ರಾಹಕವಾದ ಸ್ಮರಣಾತ್ಮಕಭಾಗದಿಂದ ಸಮವಹಿತವಾಗಿದೆ. ಹೀಗಾಗಿ ಅದರಿಂದ ಪ್ರಾಮಾಣ್ಯವು ಗೃಹೀತವಾಗದಿದ್ದರೂ ಬಾಧ ಇಲ್ಲ.

ಹೀಗೆ ಪ್ರಾಭಾಕರಮತದಲ್ಲಿ ಬಾಧವನ್ನು ಪರಿಹಾರ ಮಾಡಿದರೆ ಮಿಶ್ರಾದಿಮತದಲ್ಲಿ ಬಾಧ ಬರುತ್ತದೆ. ಮಿಶ್ರಮತದಲ್ಲಿ ಅಪ್ರಾಮಾಣ್ಯಗ್ರಹವು ಅನುಮಿತ್ಯಾತ್ಮಕ. 'ಇದಂ ಜ್ಞಾನಮ್ ಅಪ್ರಮಾಣಮ್' ಎಂಬ ಅನುಮಿತಿಕಾಲದಲ್ಲಿ ಅನುಮಿತಿ ಸಾಮಗ್ರಿಗಳು ನಾಶವಾಗಿರುತ್ತವೆ. ಆಗ ಅನುಮಿತಿಯು ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯಿಂದ ಅಸಮವಹಿತವಾಯಿತು. ಆದರೆ, ಅದರಿಂದ ಪ್ರಾಮಾಣ್ಯಗ್ರಹವಾಗಿಲ್ಲ, ಆದ್ದರಿಂದ ಬಾಧ.

ಹೀಗೆ ಮಣಿಕಾರನ ಸ್ವತಸ್ತ್ವಪರಿಷ್ಕಾರಕ್ಕೆ ಇಂತಹ ಅನೇಕ ದೋಷಗಳಿವೆ. ಇವೆಲ್ಲ ಸ್ಪಷ್ಟವಾಗಿವೆ ಎಂದು ಮೂಲದಲ್ಲಿ ಉಪೇಕ್ಷೆ ಮಾಡಲಾಗಿದೆ.

ಮಣಿಕಾರನ ಪರಿಷ್ಕಾರದಲ್ಲಿ ಗೌರವದೋಷ ಇದೆ- 'ಯಾವಜ್ಞಾನವಿಷಯಕ ಜ್ಞಾನವಿಷಯತ್ವಮ್' ಹೀಗೆ ಸಾಮಗ್ರೀ ಪದವನ್ನು ಬಿಟ್ಟು ಲಘುರೂಪದಿಂದಲೇ ಸ್ವತಸ್ತ್ವವನ್ನು ಪರಿಷ್ಕಾರ ಮಾಡಬಹುದು. ಅದಕ್ಕಾಗಿ ಮೂಲದಲ್ಲಿ ಗ್ರಾಹಕಪದವನ್ನು ಬಿಟ್ಟು ಜ್ಞಾನಪದವನ್ನೇ ಸೇರಿಸಿ ಮಣಿಕಾರನ ಲಕ್ಷಣವನ್ನು ಅನುವಾದ ಮಾಡಿ ಆ ಲಕ್ಷಣದಲ್ಲಿರುವ ಅಪ್ರಾಮಾಣ್ಯಪದಕ್ಕೆ 'ತದಭಾವವತಿ ತತ್‌ಪ್ರಕಾರಕತ್ವ' ರೂಪವಾದ ಯಥಾಶ್ರುತ ಅರ್ಥವನ್ನು ಪರಿಗ್ರಹಿಸಿ ಅದಕ್ಕೆ ದೋಷವನ್ನು ಹೇಳಲಾಗಿದೆ.

**ಅಪ್ರಾಮಾಣ್ಯಾಗ್ರಾಹಕಸ್ಯಾಪೀತಿ ॥ ಉಕ್ತವಿಧ ಭಾವರೂಪ-ಅಪ್ರಾಮಾಣ್ಯಾವಿಷಯಕಸ್ಯಾಪಿ ಇತ್ಯರ್ಥಃ । ಪ್ರಾಮಾಣ್ಯಾತ್ಯಂತಾಭಾವೇತಿ ಉಪಲಕ್ಷಣಮ್ । ಅಪ್ರಾಮಾಣ್ಯವ್ಯಾಪ್ಯ-ಪ್ರಾಮಾಣ್ಯಾತ್ಯಂತಾಭಾವ ವ್ಯಾಪ್ಯವಿಷಯಕಸ್ಯ ಇತ್ಯಪಿ ಜ್ಞೇಯಮ್ । ತೇನ ನಞಃ ಅಭಾವಾರ್ಥವಿವಕ್ಷಾಪಿ ಪ್ರತ್ಯುಕ್ತಾ ಧ್ಯೇಯಾ ।**

ಮೂಲದಲ್ಲಿ ಅಪ್ರಾಮಾಣ್ಯಾವಿಷಯಕತ್ವ ಎಂದರೆ 'ತದಭಾವವತಿ ತತ್‌ಪ್ರಕಾರಕತ್ವ' ರೂಪವಾದ ಅಪ್ರಾಮಾಣ್ಯಾವಿಷಕ, ಎಂದರ್ಥ. ಇದು ಭಾವರೂಪವಾದ ಅಪ್ರಾಮಾಣ್ಯ.

'ಪ್ರಾಮಾಣ್ಯಾತ್ಯಂತಾಭಾವ' ಎಂಬುದು ಉಪಲಕ್ಷಣ. ಅದರ ಜೊತೆಯಲ್ಲಿ ಅಪ್ರಾಮಾಣ್ಯ-ಪ್ರಾಮಾಣ್ಯಾಭಾವ-ವ್ಯಾಪ್ಯವಿಷಯಕಜ್ಞಾನ ಎಂದು ಪರಿಗ್ರಹಿಸಬೇಕು. ಇದರಿಂದ 'ಅಪ್ರಾಮಾಣ್ಯ' ಎಂಬ ಪದದ ನಞಗೆ ಅಭಾವ ಎಂಬ ಅರ್ಥವೂ ಯುಕ್ತವಲ್ಲ, ಎಂದು ತಿಳಿಯುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ನಞಃ ವಿರೋಧಾರ್ಥತ್ವೇ,**

**ಪ್ರಾಮಾಣ್ಯಾಭಾವ-ತದ್ ವ್ಯಾಪ್ಯ-ಅಪ್ರಾಮಾಣ್ಯ-ತದ್ವ್ಯಾಪ್ಯಾನಾಂ ಚತುರ್ಣಾಮಪಿ ಅಪ್ರಾಮಾಣ್ಯಪದೇನ ಪ್ರಾಮಾಣ್ಯವಿರೋಧಿವಾಚಿನಾ ಗ್ರಹಣಸಂಭವಾತ್ ನೋಕ್ತದೋಷಃ । ವಿರೋಧಿತ್ವಸ್ಯ ಪ್ರಾಮಾಣ್ಯನಿಶ್ಚಯ ಪ್ರತಿಬಂಧಕಜ್ಞಾನ ವಿಷಯತ್ವರೂಪತ್ವಾತ್ । ಇತ್ಯಾಶಯೇನ ಪಕ್ಷಧರಾದ್ಯುಕ್ತ-ವಿವಕ್ಷಾಮನೂದ್ಯ ನಿರಾಹ-ಅಪ್ರಾಮಾಣ್ಯೇತಿ ॥**

ಅಪ್ರಾಮಾಣ್ಯ ಎಂಬಲ್ಲಿ ನಞಗೆ ವಿರೋಧ ಎಂದರ್ಥ. ಪ್ರಾಮಾಣ್ಯಕ್ಕೆ ವಿರೋಧಿಗಳು ನಾಲ್ಕು. ಆ ನಾಲ್ಕನ್ನೂ ಅಪ್ರಾಮಾಣ್ಯಪದದಿಂದ ತೆಗೆದುಕೊಳ್ಳಬೇಕು. ಪ್ರಾಮಾಣ್ಯ ನಿಶ್ಚಯಕ್ಕೆ ಈ ನಾಲ್ಕರ ಜ್ಞಾನವೂ ಪ್ರತಿಬಂಧಕವಾಗಿದೆ. ಆದ್ದರಿಂದ 'ಪ್ರಾಮಾಣ್ಯನಿಶ್ಚಯ ಪ್ರತಿಬಂಧಕ-ಜ್ಞಾನ-ವಿಷಯತ್ವಂ' ಇದೇ ಈ ನಾಲ್ಕರಲ್ಲಿರುವ ಪ್ರಾಮಾಣ್ಯವಿರೋಧಿತ್ವ. ಅಪ್ರಾಮಾಣ್ಯಾಗ್ರಾಹಕ, ಎಂದರೆ ಈ ನಾಲ್ಕನ್ನೂ ವಿಷಯೀಕರಿಸದ ಜ್ಞಾನವು ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ ಎಂದು ಅಭಿಪ್ರಾಯ. ಆದ್ದರಿಂದ ಬಾಧ ಇಲ್ಲ. ಹೀಗೆ, ಪಕ್ಷಧರಮಿಶ್ರರು ಬಾಧವನ್ನು ಪರಿಹರಿಸಿದ್ದಾರೆ. ಅದನ್ನೂ ಈ ಮುಂದಿನ ವಾಕ್ಯದಲ್ಲಿ ನಿರಾಕರಿಸಲಾಗಿದೆ.

## ತಾರ್ಕಿಕರ ಪ್ರತಿಸಮಾಧಾನ

**अप्रामाण्यपदेन प्रामाण्यविरोधिविवक्षायामपि 'ज्ञानं गुणः' इत्यादिवाक्यजन्यस्य 'ज्ञानं प्रमेयम्' इति सामान्यप्रत्यासत्तिजन्यस्य च ज्ञानज्ञानस्य प्रामाण्याविषयकत्वाद् बाधतादवस्थ्यात् ।**

ಒಂದೆ ಹೇಳಿದ ಬಾಧವನ್ನು ಓಗೆ ಪರಿಹರಿಸಬಹುದು- ತದಪ್ರಾಮಾಣ್ಯಾಗ್ರಾಹಕ ಎಂಬ ಸ್ವತಸ್ತ್ವಪರಿಷ್ಕಾರದಲ್ಲಿರುವ ಅಪ್ರಾಮಾಣ್ಯಪದಕ್ಕೆ ತದಭಾವವತಿ ತತ್ಪ್ರಕಾರಕತ್ವರೂಪವಾದ ಅಪ್ರಾಮಾಣ್ಯ, ಎಂದು ಮಾತ್ರ ಅರ್ಥವಲ್ಲ. ಅಲ್ಲಿರುವ 'ಅ' ಎಂಬ ನಿಷೇಧಕ್ಕೆ ವಿರೋಧಿ ಎಂದು ಅರ್ಥ. (ಅಸುರಾಃ ಪದದಲ್ಲಿರುವ ಅಕಾರದಂತೆ) ಆಗ 'ಪ್ರಾಮಾಣ್ಯವಿರೋಧಿ ಅಗ್ರಾಹಕ' ಎಂಬ ಅರ್ಥ ಬರುತ್ತದೆ. ಪ್ರಾಮಾಣ್ಯಕ್ಕೆ ವಿರೋಧಿಯಾದುದು ಒಟ್ಟು ನಾಲ್ಕು-

1. ತದಭಾವವತಿ ತತ್ಪ್ರಕಾರಕತ್ವರೂಪವಾದ ಅಪ್ರಾಮಾಣ್ಯ.

2. ತಾದೃಶ ಅಪ್ರಾಮಾಣ್ಯವ್ಯಾಪ್ಯವಾದ ಜ್ಞಾನಗತ ದೋಷಜನ್ಯತ್ವ.

3. ತದ್ವತಿ ತತ್–ಪ್ರಕಾರಕತ್ವಾಭಾವ (ಪ್ರಾಮಾಣ್ಯಾಭಾವ).

4. ತದ್ವತಿ ತತ್–ಪ್ರಕಾರಕತ್ವಾಭಾವ–ವ್ಯಾಪ್ಯ.

ಈ ನಾಲ್ಕನ್ನೂ ಗ್ರಹಿಸುವ ಸಾಮಗ್ರಿಗಳು ಇಲ್ಲದಿರುವಾಗ ಮಾತ್ರ ಜ್ಞಾನಗ್ರಾಹಕ ಸಾಮಗ್ರಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹಿಂದೆ ಬಾಧ ಹೇಳಿರುವ ಸಂದರ್ಭದಲ್ಲಿ ಈ ನಾಲ್ಕರಲ್ಲಿ ಒಂದಾಗಿರುವ ಪ್ರಾಮಾಣ್ಯಾಭಾವಗ್ರಾಹಕಸಾಮಗ್ರೀ ಸಹಿತವಾಗಿದೆ ಜ್ಞಾನಗ್ರಾಹಕ ಸಾಮಗ್ರೀ. ಆದರಿಂದ ಪ್ರಾಮಾಣ್ಯವು ಗೃಹೀತವಾಗದಿದ್ದಲ್ಲಿ ಬಾಧವಿಲ್ಲ, ಎಂದು ಸಮಾಧಾನ ನೀಡಿದರೆ ಇನ್ನೊಂದು ಕಡೆ ಬಾಧವಿದೆ–''ಜ್ಞಾನಂ ಗುಣಃ'' ಎಂಬ ವಾಕ್ಯದಿಂದ ಜ್ಞಾನವಿಷಯಕ ಶಾಬ್ದಬೋಧ ಬರುತ್ತದೆ. ಆದ್ದರಿಂದ ಆ ಶಾಬ್ದಬೋಧ ಸಾಮಗ್ರಿಯು ಜ್ಞಾನಗ್ರಾಹಕವಾಯಿತು. ಅದರೊಂದಿಗೆ ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯು ಇಲ್ಲ. ಅಂತಹ ಸಾಮಗ್ರಿಯಿಂದ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಏಕೆಂದರೆ, ಆ ಶಾಬ್ದಬೋಧದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಜ್ಞಾನಮಾತ್ರವೇ ವಿಷಯ. ಆದ್ದರಿಂದ ಈ ಶಾಬ್ದಬೋಧ ಸಾಮಗ್ರಿಯು ತದಪ್ರಾಮಾಣ್ಯಾಗ್ರಾಹಕ–ಜ್ಞಾನಗ್ರಾಹಕ ಸಾಮಗ್ರಿಯಾಗಿದೆ. ಅಂತಹ ಸಾಮಗ್ರೀ ಗ್ರಾಹ್ಯತ್ವ ಪ್ರಾಮಾಣ್ಯಕ್ಕೆ ಇಲ್ಲ. ಆದರಿಂದಾಗಿ ಬಾಧ.

## ವಿರೋಧಾರ್ಥವನ್ನು ಮಾಡಿದರೂ ವಿವಕ್ಷಿತ ಲಾಭವಿಲ್ಲ

**ಅಪಿಪದೇನ ಏತತ್ ಸೂಚಯತಿ–ಯದ್ಯಪಿ ಗ್ರಾಹ್ಯಪ್ರಾಮಾಣ್ಯವಿರೋಧಿ ಲಾಭಃ ನೈತಾವತಾ ಭವತಿ । ತತ್ಪದಮಿಲಿತೇನಾಪಿ ಅಸಾಮರ್ಥ್ಯಾತ್ ಅಲಾಭ ಏವ । ವಿರೋಧಿತಾಮಾತ್ರಂ ತು ಅಪ್ರಯೋಜಕಮ್ । ತಥಾಪಿ ಅಭ್ಯುಪಗಮೋಽಯಮ್, ಇತಿ ।**

ಮೂಲದಲ್ಲಿ 'ವಿರೋಧಿವಿವಕ್ಷಾಯಾಮಪಿ' ಎಂದು ಅಪಿಪದವು ಅಸ್ವಾರಸ್ಯವನ್ನು ಸೂಚನೆ ಮಾಡುತ್ತದೆ– 'ತದಪ್ರಾಮಾಣ್ಯಾಗ್ರಹಕ' ಎಂಬ ಪದವು ಮಣಿಕಾರೋಕ್ತ–ಸ್ವತಸ್ತ್ವ ಪರಿಷ್ಕಾರದಲ್ಲಿದೆ. ತತ್ ಪದಕ್ಕೆ 'ಗ್ರಾಹ್ಯ' ಎಂದರ್ಥ. 'ಅ' ಎಂಬ ನಿಷೇಧವಾಚಕಪದವು ಮಧ್ಯದಲ್ಲಿದೆ. ಅದಕ್ಕೆ 'ವಿರೋಧಿ' ಎಂದು ಅರ್ಥವನ್ನು ಮಾಡಿದರೆ 'ಗ್ರಾಹ್ಯವಾದುದು ಪ್ರಾಮಾಣ್ಯವಿರೋಧಿ' ಎಂದು ಅರ್ಥವಾಗಬಹುದು. 'ಗ್ರಾಹ್ಯವಾದ ಯಾವ ಪ್ರಾಮಾಣ್ಯವಿದೆಯೋ ಅದಕ್ಕೆ ವಿರೋಧಿ' ಎಂಬ ಅರ್ಥ ಬರುವುದಿಲ್ಲ. ಹೀಗೆ ತತ್ಪದವನ್ನು ಜೊತೆ ಸೇರಿಸಿದರೂ ಸಮಾಸಕ್ಕೆಬೇಕಾದ ಸಾಮರ್ಥ್ಯವು ಇಲ್ಲದಿರುವುದರಿಂದ ವಿವಕ್ಷಿತವಾದ ಅರ್ಥವು ಸಿಗುವುದಿಲ್ಲ. ತತ್ಪದವನ್ನು ಬಿಟ್ಟು 'ಪ್ರಾಮಾಣ್ಯ

ವಿರೋಧಿ ಅಗ್ರಾಹಕ' ಎಂದು ಅರ್ಥಮಾಡಿದರೂ ಅದರಿಂದೇನೂ ಲಾಭವಿಲ್ಲ. ತತ್‌ಪದ ಸೇರಿಸಿದರೆ ವಿವಕ್ಷಿತಾರ್ಥ ಸಿಗುವುದಿಲ್ಲ. ಆದರೂ ನೈಯಾಯಿಕರಿಗೆ ವಿವಕ್ಷಿತವಾದ ಅರ್ಥವನ್ನು ಒಪ್ಪಿಕೊಂಡು ಅದನ್ನು ನಿರಾಕರಿಸಲಾಗಿದೆ.

**ಇತ್ಯಾದಿ ವಾಕ್ಯೇತಿ ॥ 'ಜ್ಞಾನಂ ಸಮವೇತಂ' 'ಜ್ಞಾನಮ್ ಅಮೂರ್ತಮ್' ಇತ್ಯಾದಿ–ವಾಕ್ಯಜನ್ಯಸ್ಯ ಗುಣತ್ವಾದಿಪ್ರಕಾರಕ–ಜ್ಞಾನವಿಶೇಷ್ಯಕಸ್ಯ ಇತ್ಯರ್ಥಃ । ಜ್ಞಾನ ಜ್ಞಾನಸ್ಯೇತ್ಯನ್ವಯಃ ॥**

ಮೂಲದಲ್ಲಿರುವ ಆದಿಪದದಿಂದ 'ಜ್ಞಾನಂ ಸಮವೇತಂ' 'ಜ್ಞಾನಮ್ ಅಮೂರ್ತಂ' ಇಂತಹ ವಾಕ್ಯಗಳನ್ನೂ ತೆಗೆದುಕೊಳ್ಳಬಹುದು. ಮೂಲದಲ್ಲಿ ತೋರಿಸಿದ ವಾಕ್ಯದಿದಂದ 'ಗುಣತ್ವ ಪ್ರಕಾರಕ ಜ್ಞಾನವಿಶೇಷ್ಯಕ' ಜ್ಞಾನ ಬರುತ್ತದೆ. 'ಜ್ಞಾನಂ ಸಮವೇತಮ್' ಈ ವಾಕ್ಯದಿಂದ ಸಮವೇತತ್ವಪ್ರಕಾರಕ ಜ್ಞಾನದ ಜ್ಞಾನವು ಬರುತ್ತದೆ.

## ನ್ಯಾಯದೀಪದಲ್ಲಿ ಬಾಧ ಪರಿಹಾರ

**ಸಾಕ್ಷಾದ್ ಜ್ಞಾನತ್ವವ್ಯಾಪಕಧರ್ಮ–ಅಪ್ರಕಾರಕೇತ್ಯಪಿ ಗ್ರಾಹಕವಿಶೇಷಣ–ಮಸ್ತು ಇತ್ಯತ ಉಕ್ತಮ್–ಜ್ಞಾನಂ ಪ್ರಮೇಯಮಿತೀತಿ ॥**

ಈ ಬಾಧದೋಷವನ್ನು ನ್ಯಾಯದೀಪದಲ್ಲಿ ಹೀಗೆ ಪರಿಹರಿಸಲಾಗಿದೆ— ಜ್ಞಾನತ್ವ ಸಾಕ್ಷಾದ್–ವ್ಯಾಪಕಧರ್ಮ–ಅಪ್ರಕಾರಕವಾದ ಜ್ಞಾನವಿಷಯಕ ಜ್ಞಾನಕ್ಕೆ ಜನಕವಾದ ಸಾಮಗ್ರೀ–ಗ್ರಾಹ್ಯತ್ವಂ ಸ್ವತಸ್ತ್ವಮ್–ಪ್ರಕೃತ 'ಜ್ಞಾನಂ ಗುಣಃ' ಎಂಬ ಜ್ಞಾನವಿಷಯಕ ಜ್ಞಾನದಲ್ಲಿ ಗುಣತ್ವವು ಪ್ರಕಾರ. ಅದು ಜ್ಞಾನತ್ವಕ್ಕೆ ಸಾಕ್ಷಾತ್ ವ್ಯಾಪಕವಾದ ಧರ್ಮ. ಗುಣದ ಪ್ರಭೇದದಲ್ಲಿ ಒಂದು ಜ್ಞಾನ. ಆದ್ದರಿಂದ ಪೃಥಿವೀತ್ವಕ್ಕೆ ದ್ರವ್ಯತ್ವವು ಸಾಕ್ಷಾದ್–ವ್ಯಾಪಕವಾದಂತೆ ಜ್ಞಾನತ್ವಕ್ಕೂ ಗುಣತ್ವವು ಸಾಕ್ಷಾತ್ ವ್ಯಾಪಕವಾಗಿದೆ. ಅಂತಹ ಧರ್ಮವು ಪ್ರಕಾರವಾದುದರಿಂದ 'ಜ್ಞಾನಂ ಗುಣಃ' ಎಂಬ ಜ್ಞಾನ–ಜನಕ –ಸಾಮಗ್ರಿಯು ಪ್ರಕತ ವಿವಕ್ಷಿತ ಜ್ಞಾನಗ್ರಾಹಕ–ಸಾಮಗ್ರಿಯಲ್ಲಿ ಸೇರಿಲ್ಲ. ಆದ್ದರಿಂದ ತಾದೃಶಸಾಮಗ್ರೀ–ಗ್ರಾಹ್ಯತ್ವ ಬರದಿದ್ದರೂ ಬಾಧವಿಲ್ಲ. ಹೀಗೆ ಇಲ್ಲಿ ಬಾಧದೋಷವನ್ನು ಪರಿಹರಿಸಬಹುದು. ಅದಕ್ಕಾಗಿ ಇನ್ನೊಂದು ಕಡೆ ಬಾಧವನ್ನು ತೋರಿಸಲಾಗಿದೆ.

'ಜ್ಞಾನಂ ಪ್ರಮೇಯಂ' ಎಂದು ಜ್ಞಾನವಿಶೇಷದಲ್ಲಿ ಪ್ರಕಾರವಾಗಿ ತೋರಿದ ಪ್ರಮೇಯತ್ವವು ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಾಗಿ ಆದರಿಂದ ''ಪ್ರಮೇಯಂ'' ಎಂದು ಜ್ಞಾನ ಹುಟ್ಟಿತು. ಈ ಜ್ಞಾನದಲ್ಲಿ ಸಕಲ ಜ್ಞಾನಗಳೂ ವಿಷಯವಾಗಿವೆ. ಜ್ಞಾನತ್ವ–ಸಾಕ್ಷಾದ್–ವ್ಯಾಪಕವಾದ ಧರ್ಮವು ಇಲ್ಲಿ ಪ್ರಕಾರವಲ್ಲ. ಪ್ರಮೇಯತ್ವವು ಪ್ರಕಾರವಾದರೂ ಅದು ಜ್ಞಾನತ್ವ ಸಾಕ್ಷಾದ್ ವ್ಯಾಪಕವಲ್ಲ. ಸಾಕ್ಷಾದ್ ವ್ಯಾಪಕತ್ವವೆಂದರೆ–ತದ್‌ವ್ಯಾಪಕ ಅವ್ಯಾಪಕತ್ವೇ ಸತಿ ತದ್‌ವ್ಯಾಪಕತ್ವಮ್ । ಜ್ಞಾನತ್ವ

ವ್ಯಾಪಕವಾದುದು ಗುಣತ್ವಜಾತಿ. ಅದಕ್ಕೂ ವ್ಯಾಪಕವಾದುದು ಪ್ರಮೇಯತ್ವ. ಹೀಗೆ ಪ್ರಮೇಯತ್ವವು ಜ್ಞಾನತ್ವ–ವ್ಯಾಪಕ–ವ್ಯಾಪಕವೇ ಆಗಿದೆ, ವ್ಯಾಪಕ ಅವ್ಯಾಪಕವಾಗಿಲ್ಲ. ಆದ್ದರಿಂದ ಅದು ಜ್ಞಾನತ್ವ ಸಾಕ್ಷಾದ್ ವ್ಯಾಪಕವಲ್ಲ. ಹೀಗಾಗಿ ''ಪ್ರಮೇಯಂ'' ಎಂಬ ಜ್ಞಾನದಲ್ಲಿ ಜ್ಞಾನವು ವಿಷಯವಾಗಿದೆ, ಜ್ಞಾನತ್ವ ಸಾಕ್ಷಾದ್ ವ್ಯಾಪಕವಾದ ಧರ್ಮವು ವಿಷಯವಲ್ಲ. ಆದರೂ ಆ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಆದರಿಂದಾಗಿ ಆ ಜ್ಞಾನದಲ್ಲಿ ಬಾಧ.

ನ್ಯಾಯದೀಪದಲ್ಲಿ 'ಜ್ಞಾನಂ ಪ್ರಮೇಯಂ' ಎಂಬ ಮೂಲವಾಕ್ಯದ ವಿವರಣೆ ಹೀಗೆ ಬಂದಿದೆ–

**ಜ್ಞಾನೇ ಪ್ರಮೇಯತ್ವಂ ಜ್ಞಾತಂ ಸತ್ ಪ್ರತ್ಯಾಸತ್ತೀಭೂಯ ಸ್ವವಿಶೇಷಣತಾ ಸಂಬಂಧೇನ ಸ್ವಾಶ್ರಯೀಭೂತಾನಿ ಸರ್ವಜ್ಞಾನವಸ್ತೂನಿ ಉಪಸ್ಥಾಪಯತೀತಿ ಪ್ರಮೇಯತ್ವ ಪ್ರಕಾರಕ ಜ್ಞಾನವಿಶೇಷ್ಯಕ ಜ್ಞಾನಜ್ಞಾನಸ್ಯ ಪ್ರಮೇಯತ್ವಾಶ್ರಯಜ್ಞಾನೇ ಪ್ರಾಮಾಣ್ಯಾವಿಷಯಕತ್ವಾದಿತ್ಯರ್ಥಃ ॥**

ಪ್ರಯೇತ್ವರೂಪ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ಯಾ ಪ್ರಮೇಯತ್ವಾಶ್ರಯವಾದ ಸಕಲ ಜ್ಞಾನಗಳ ಜ್ಞಾನವು ''ಪ್ರಮೇಯಮ್'' ಎನ್ನುವ ಆಕಾರಕವಾಗಿ ಹುಟ್ಟುತ್ತದೆ. ಹೀಗೆ ಸಾಮಾನ್ಯಲಕ್ಷಣಾದಿಂದ ಜ್ಞಾನ ಬರಬೇಕಾದರೆ ಆ ಸಾಮಾನ್ಯವು ಇಂದ್ರಿಯ ಸಂಬಂಧ್ದವಿಶೇಷ್ಯಕ ಜ್ಞಾನದಲ್ಲಿ ಪ್ರಕಾರವಾಗಿ ತೋರಬೇಕು. ಅಂತಹ ಇಂದ್ರಿಯ–ಸಂಬದ್ಧ–ವಿಶೇಷ್ಯಕ–ಜ್ಞಾನವನ್ನು ಮೂಲದಲ್ಲಿ ''ಜ್ಞಾನಂ ಪ್ರಮೇಯಂ'' ಎಂದು ತೋರಿಸಲಾಗಿದೆ. ಅಂತಹ ಜ್ಞಾನದಲ್ಲಿ ಪ್ರಕಾರೀಭೂತವಾದ ಪ್ರಮೇಯತ್ವರೂಪ ಸಾಮಾನ್ಯ–ಲಕ್ಷಣಾಪ್ರತ್ಯಾಸತ್ತಿಯಿಂದ ''ಪ್ರಮೇಯಂ'' ಎಂಬ ಜ್ಞಾನ ಹುಟ್ಟುತ್ತದೆ. ಇಲ್ಲಿ ಪ್ರಮೇಯ ಎಂದರೆ ಜ್ಞಾನರೂಪ ಪ್ರಮೇಯ. ಈ ಜ್ಞಾನದಲ್ಲಿ ಜ್ಞಾನವು ವಿಶೇಷ್ಯ, ಪ್ರಮೇಯತ್ವವು ಪ್ರಕಾರ. ಆದ್ದರಿಂದ ಈ ಜ್ಞಾನವು ಜ್ಞಾನವಿಷಯಕ ಜ್ಞಾನವಾಗಿದೆ. ಆದರೆ ಜ್ಞಾನನಿಷ್ಠ ಪ್ರಾಮಾಣ್ಯವು ವಿಷಯವಲ್ಲ. ಹೀಗಾಗಿ ಪ್ರಾಮಾಣ್ಯದಲ್ಲಿ ಜ್ಞಾನಗ್ರಾಹಕ ಯಾವತ್ ಸಾಮಗ್ರೀ ಗ್ರಾಹ್ಯತ್ವವು ಬರಲಿಲ್ಲ. ಆದ್ದರಿಂದ ಬಾಧ.

**ज्ञानग्राहकपदेन स्वविषयघटितत्वेन ज्ञानग्राहकत्वविवक्षायामपि 'घटज्ञानम्' इत्यादिशब्दजन्यस्य ज्ञानज्ञानस्य प्रामाण्याविषयकत्वेन बाध एव ।**

ಹಿಂದೆ ಹೇಳಿದ ಬಾಧದ ಪರಿಹಾರವನ್ನು ಹೀಗೆ ಮಾಡಬಹುದು. 'ಜ್ಞಾನಗ್ರಾಹಕಯಾವತ್ ಸಾಮಗ್ರೀ–ಗ್ರಾಹ್ಯತ್ವಮ್' ಎಂಬ ಸ್ವತಸ್ತ್ವಸ್ವರೂಪದಲ್ಲಿ ಜ್ಞಾನಗ್ರಾಹಕ ಎಂದರೆ 'ವಿಷಯ ಘಟಿತತ್ವೇನ ಜ್ಞಾನವನ್ನು ಗ್ರಹಿಸುವ (ಸಾಮಗ್ರೀ)' ಎಂದರ್ಥ. 'ಪ್ರಮೇಯಮ್' ಎಂಬ ಜ್ಞಾನವು ಜ್ಞಾನಕ್ಕೆ ಯಾವುದು ವಿಷಯವೋ ಅದನ್ನು ಗ್ರಹಿಸದೆ ಪ್ರಮೇಯತ್ವೇನ ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ.

ಆದ್ದರಿಂದ ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗದಿದ್ದರೂ ಬಾಧಕವಿಲ್ಲ. ''ಘಟಜ್ಞಾನವಾನಹಂ' ಎಂಬ ಅನುವ್ಯವಸಾಯವು ವಿಷಯಘಟಿತವಾದ ಜ್ಞಾನವನ್ನು ವಿಷಯೀಕರಿಸುತ್ತಿದೆ. ಅಲ್ಲಿ ಘಟಜ್ಞಾನಗತವಾದ ಪ್ರಾಮಾಣ್ಯವೂ ವಿಷಯವಾಗಿದೆ, ಎಂದು ಸ್ವತಸ್ತ್ವವಾದಿಗಳು ಹೇಳುತ್ತಾರೆ. ಆದ್ದರಿಂದ ಬಾಧವಿಲ್ಲ.

ಈ ಪರಿಷ್ಕಾರದಿಂದ ''ಪ್ರಮೇಯಂ'' ಎಂಬ ಜ್ಞಾನವನ್ನು ಪರಿಗ್ರಹಿಸಿ ಪ್ರಾಮಾಣ್ಯದಲ್ಲಿ ಹೇಳಿದ ಬಾಧವನ್ನು ಪರಿಹರಿಸಿದರೂ ''ಇದಂ ಘಟಜ್ಞಾನಮ್'' ಎಂಬ ಶಬ್ದಜನ್ಯವಾದ ಶಾಬ್ದಬೋಧವನ್ನು ಪರಿಗಣಿಸಿದಾಗ ಪ್ರಾಮಾಣ್ಯದಲ್ಲಿ ಬಾಧ ಇದ್ದೇ ಇದೆ. ಆ ಶಬ್ದದಿಂದ ಬಂದಿರುವ ಶಾಬ್ದಬೋಧದಲ್ಲಿ ಘಟರೂಪ ವಿಷಯಘಟಿತವಾದ ಜ್ಞಾನವು ವಿಷಯವಾಗಿದೆ. ಆದರೆ ತದ್ಗತ ಪ್ರಾಮಾಣ್ಯವು ವಿಷಯವಲ್ಲ. ಆದ್ದರಿಂದ ತತ್ಪ್ರಾಮಾಣ್ಯದಲ್ಲಿ ಬಾಧ.

## ನ್ಯಾಯದೀಪ

**ಉಕ್ತದೋಷಪರಿಹಾರಾಯ ಶಂಕತೇ–ಜ್ಞಾನಗ್ರಾಹಕಪದೇನೇತಿ ॥**

**ಪ್ರಾಮಾಣ್ಯಾವಿಷಯಕತ್ವೇನೇತಿ॥ ಅಪದಾರ್ಥತ್ವಾತ್ ಅವಾಕ್ಯಾರ್ಥತ್ವಾಚ್ಚ ಘಟತ್ವವದ್ವಿಶೇಷ್ಯಕತ್ವಾದೇಃ ತೇನ ಸರ್ವಥಾ ಅಭಾನಾತ್ ಇತಿ ಭಾವಃ ॥**

ಘಟಜ್ಞಾನದಲ್ಲಿರುವ ಪ್ರಾಮಾಣ್ಯವೆಂದರೆ–''ಘಟತ್ವವತಿ ಘಟತ್ವ ಪ್ರಕಾರಕತ್ವ''. ಇದು 'ಘಟಜ್ಞಾನಂ' ಎಂಬ ಸಮಗ್ರವಾಕ್ಯದ ಅರ್ಥವೂ ಅಲ್ಲ, ವಾಕ್ಯಘಟಕವಾದ ಪದದ ಅರ್ಥವೂ ಅಲ್ಲ. ಹೀಗಾಗಿ ಅಂತಹ ಪ್ರಾಮಾಣ್ಯ ಆ ವಾಕ್ಯಜನ್ಯಶಾಬ್ದಬೋಧದಲ್ಲಿ ವಿಷಯವಾಗುವುದಿಲ್ಲ. ವಾಕ್ಯಾರ್ಥ–ಪದಾರ್ಥಗಳನ್ನು ಹೊರತುಪಡಿಸಿ ಇನ್ನಾವುದೂ ಶಾಬ್ದಬೋಧದಲ್ಲಿ ವಿಷಯವಲ್ಲ. ಆದ್ದರಿಂದ ಘಟಜ್ಞಾನವಿಷಯಕವಾದ ಆ ಶಾಬ್ದಬೋಧದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

## ಪಕ್ಷಧರ ಪಕ್ಷದ ಪ್ರಸ್ತಾವ

**ಯತ್ತು ಶಬ್ದಾನುಪಸ್ಥಿತಮಪಿ ಪ್ರಾಮಾಣ್ಯಂ ಅನ್ವಯಿತಾವಚ್ಛೇದಕತಯಾ 'ಘಟಜ್ಞಾನಮ್' ಇತಿ ಜ್ಞಾನೇ ಭಾತೀತಿ ಪಕ್ಷಧರೋತ್ಪ್ರೇಕ್ಷಿತಂ ಮತಂ ತತ್ ತೇನೈವ ದೂಷಿತಮ್ ಇತ್ಯಭಿಪ್ರೇತ್ಯ ಉಕ್ತಮ್ ಬಾಧ ಏವ ಇತಿ ॥ ವಿವೃತಂ ಚೈತದ್ ಗುರುಪಾದೈಃ ॥**

ಪಕ್ಷಧರ ಮಿಶ್ರರ ಮತದಂತೆ 'ಘಟಜ್ಞಾನಂ' ಎಂಬ ಶಾಬ್ದಬೋಧದಲ್ಲಿ ಅನ್ವಯಿತಾವಚ್ಛೇದಕತಯಾ ಪ್ರಾಮಾಣ್ಯವೂ ಭಾಸವಾಗುತ್ತದೆ. 'ಘಟೇನ ಜಲಮಾಹರ' ಎಂದಾಗ

'ಛಿದ್ರೇತರ–ಘಟೇನ ಜಲಮಾಹರ' ಎಂಬ ಬೋಧ ಬರುತ್ತದೆ. ವಾಕ್ಯದಲ್ಲಿ ಛಿದ್ರೇತರ ಪದವು ಇಲ್ಲ. ಆದರೂ ಯೋಗ್ಯತಯಾ ಅದು ಉಪಸ್ಥಿತವಾಗಿ ಶಾಬ್ದಬೋಧದಲ್ಲಿ ತೋರುತ್ತದೆ. ಅದರಂತೆ ಪ್ರಕೃತವಾದ 'ಘಟಜ್ಞಾನಮ್' ಎಂಬ ವಾಕ್ಯಜನ್ಯ ಬೋಧದಲ್ಲೂ ಪ್ರಾಮಾಣ್ಯವು ತೋರುತ್ತದೆ. ಹೇಗೆಂದರೆ–'ಘಟ–ಜ್ಞಾನಮ್' ಎಂದರೆ 'ಘಟವಿಷಯಕಂ ಜ್ಞಾನಂ' ಎಂದು ಅರ್ಥ. ಘಟವಿಷಯಕತ್ವ ಘಟೇಚ್ಛಾದಲ್ಲಿ ಇದೆ. ಜ್ಞಾನತ್ವ ಜ್ಞಾನದಲ್ಲಿ ಇದೆ. ಆದ್ದರಿಂದ ಘಟವಿಷಯಕಕ್ಕೂ ಜ್ಞಾನಕ್ಕೂ ಅಭೇದಾನ್ವಯ ಮಾಡಲಾಗದು. ಅದಕ್ಕಾಗಿ 'ಘಟವಿಷಯಕ' ಪದದಿಂದ 'ಘಟತ್ವವದ್–ವಿಶೇಷ್ಯಕ–ಜ್ಞಾನ' ಎಂಬ ಅರ್ಥವು ಆಕ್ಷಿಪ್ತವಾಗುತ್ತದೆ. ಜ್ಞಾನಪದದಿಂದ 'ಘಟತ್ವಪ್ರಕಾರಕ ಜ್ಞಾನ' ಎಂಬ ಅರ್ಥವು ಆಕ್ಷಿಪ್ತ. ಅವೆರಡಕ್ಕೆ ಅಭೇದಾನ್ವಯ. ಒಟ್ಟಿನಲ್ಲಿ ''ಘಟತ್ವವದ್–ವಿಶೇಷ್ಯಕ–ಘಟತ್ವ–ಪ್ರಕಾರಕ ಜ್ಞಾನಂ' ಎಂದು ಶಾಬ್ದಬೋಧ ಬರುತ್ತದೆ. ಈ ಬೋಧದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಇದು ಮಿಶ್ರರ ಅಭಿಪ್ರಾಯ. ಇದನ್ನು ಮಿಶ್ರರೇ ನಿರಾಕರಿಸಿದ್ದಾರೆ.

## ಯುಕ್ತಿರತ್ನಾಕರದಲ್ಲಿ ಪಕ್ಷಧರಪಕ್ಷ ನಿರಾಸ

ಇದು ಸರಿಯಲ್ಲ ಎಂದು ಶ್ರೀವಿಜಯೀಂದ್ರ ಸ್ವಾಮಿಗಳೂ ತರ್ಕತಾಂಡವ ವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**ಯೇನ ಪುಂಸಾ ಘಟವಿಶೇಷ್ಯಕಜ್ಞಾನತ್ವ–ಘಟತ್ವಪ್ರಕಾರಕತ್ವಯೋಃ ಅನ್ವಯಿತಾವಚ್ಛೇದಕತ್ವಂ ನ ಗೃಹೀತಂ ತೇನ ಘಟಜ್ಞಾನಮ್ ಇತಿ ಶಬ್ದೇನ ಪ್ರಾಮಾಣ್ಯಾಗ್ರಹೇಣ ಬಾಧಾತ್ । ನ ಹಿ 'ಘಟೇನ ಜಲಮಾಹರ' ಇತ್ಯಾದೌ ಛಿದ್ರೇತರತ್ವಾದೇರಿವ ಇಹಾಪಿ ಅನ್ವಯಿತಾವಚ್ಛೇದಕಯೋಃ ಅನುಪಸ್ಥಿತೌ ಅನ್ವಯಬೋಧಾಸಂಭವಃ । ತದ್ವದಿಹ ಅನ್ವಯಾನುಪಪತ್ತೇಃ ಅಭಾವಾತ್ ॥ (ಶ್ರೀವಿಜಯೀಂದ್ರಸ್ವಾಮಿಕೃತ ತರ್ಕತಾಂಡವ ವ್ಯಾಖ್ಯಾನ.)**

'ಘಟೇನ ಜಲಮಾಹರ' ಎಂಬ ವಾಕ್ಯದಲ್ಲಿ ಘಟ ಶಬ್ದದಿಂದ ಛಿದ್ರೇತರ ಘಟದ ಜ್ಞಾನ ಅನಿವಾರ್ಯ. ಇಲ್ಲದಿದ್ದರೆ ಯೋಗ್ಯತಾಜ್ಞಾನಭಾವಾತ್ ಅನ್ವಯ–ಬೋಧವೇ ಬರುವುದಿಲ್ಲ. ತೂತು ಮಡಿಕೆಯಿಂದ ನೀರು ತರಲಾಗುವುದಿಲ್ಲ. ಆದರೆ 'ಘಟ ಜ್ಞಾನಮ್' ಎಂಬ ವಾಕ್ಯದಿಂದ ಘಟವಿಷಯಕಕ್ಕೂ ಜ್ಞಾನಕ್ಕೂ ಅಭೇದಾನ್ವಯ ಬೋಧವು ಬಾಧಿತವಲ್ಲ. 'ದ್ರವ್ಯಂ ಘಟಃ' ಎಂಬ ವಾಕ್ಯದಿಂದ ಬಂದಂತೆ ಈ ವಾಕ್ಯದಿಂದಲೂ ಬೋಧ ಬರಬಹುದು. ಆದ್ದರಿಂದ ಎರಡೂ ಶಬ್ದಗಳಿಂದ 'ಘಟತ್ವಪ್ರಕಾರಕ ಜ್ಞಾನ, ಘಟತ್ವವದ್ ವಿಶೇಷ್ಯಕ ಜ್ಞಾನ' ಎಂಬ ಅರ್ಥದ ಉಪಸ್ಥಿತಿ ಅನಿವಾರ್ಯವಲ್ಲ. ಯಾರಿಗೆ ಅಂತಹ ಅರ್ಥವಿಶೇಷದ ಉಪಸ್ಥಿತಿಯು ಇಲ್ಲವೋ ಅವನಿಗೆ ಆ ವಾಕ್ಯದಿಂದ ಶಾಬ್ದಬೋಧ ಬಂದಾಗ ಅದರಲ್ಲಿ ಪ್ರಾಮಾಣ್ಯವಿಷಯಕತ್ವವು ಇಲ್ಲವಾದುದರಿಂದ ಬಾಧದ ಅವಕಾಶ ಇದ್ದೇ ಇದೆ.

## ಬಾಧ ಪರಿಹಾರದ ಖಂಡನೆ

**ನನು ಶಬ್ದಾನ್ಯತ್ವೇ ಸತಿ ಸ್ವವಿಷಯಘಟಿತತ್ವೇನ ಜ್ಞಾನಗ್ರಾಹಕತ್ವವಿವಕ್ಷಾ ಅಸ್ತು, ಇತಿ ಚೇನ್ನ । ತದಾಪಿ 'ಅಯಂ ಘಟಜ್ಞಾನವಾನ್ ತದ್ ವ್ಯವಹಾರವತ್ವಾತ್' ಇತ್ಯಾದ್ಯನುಮಾನಜನ್ಯ-ಜ್ಞಾನಜ್ಞಾನಸ್ಯಾಪಿ ಪ್ರಾಮಾಣ್ಯಾವಿಷಯತ್ವೇನ ಬಾಧಾತ್ ।**

**''ಜ್ಞಾನಂ ಪ್ರಮಾ'' ಇತಿ ಶಬ್ದಜನ್ಯ-ಜ್ಞಾನಸ್ಯ ಪ್ರಾಮಾಣ್ಯಾವಿಷಯಕತ್ವಾಪಾತಾಚ್ಚ ಇತಿ ಭಾವಃ ॥**

ಹಿಂದೆ ಹೇಳಿದ ಬಾಧವನ್ನು ಪರಿಹಾರ ಮಾಡಬಹುದು. ವಿಷಯಘಟಿತವಾಗಿ ಜ್ಞಾನವನ್ನು ಗ್ರಹಿಸುವ ಅಂದರೆ ಜ್ಞಾನವಿಷಯಕ ಜ್ಞಾನಜನಕವಾದ, ಶಬ್ದಾನ್ಯ-ಸಾಮಗ್ರೀಜನ್ಯ-ಜ್ಞಾನ ವಿಷಯತ್ವವೇ ಪ್ರಾಮಾಣ್ಯದ ಸ್ವತಸ್ತ್ವ. ''ಘಟಜ್ಞಾನಂ'' ಎಂಬ ವಾಕ್ಯವು ಶಬ್ದರೂಪವಾದ ಜ್ಞಾನಗ್ರಾಹಕ ಸಾಮಗ್ರೀ, ಶಬ್ದಾನ್ಯ ಸಾಮಗ್ರಿ ಅಲ್ಲ. ಆದ್ದರಿಂದ ಅದರಿಂದ ಹುಟ್ಟಿದ ಜ್ಞಾನವಿಷಯಕ ಶಾಬ್ದಬೋಧವು ಪ್ರಾಮಾಣ್ಯ-ವಿಷಯಕವಾಗಬೇಕಿಲ್ಲ. ಹೀಗೆ ಬಾಧದೋಷವನ್ನು ಪರಿಹರಿಸಬಹುದು.

ಆದರೂ ಅನುಮಿತಿ-ವಿಶೇಷವನ್ನು ಇಟ್ಟುಕೊಂಡು ಪ್ರಾಮಾಣ್ಯದಲ್ಲಿ ಬಾಧದೋಷವು ಅಪರಿಹಾರ್ಯ. ''ಈ ವ್ಯಕ್ತಿಯ, ಘಟವಿಷಯಕ ಶಬ್ದಪ್ರಯೋಗ ಮಾಡುತ್ತಿರುವುದರಿಂದ ಅವನಿಗೆ ಘಟಜ್ಞಾನವಿದೆ'' ಎಂದು ಅನುಮಾನ ಮಾಡಿದಾಗ ''ಅಯಂ ಘಟಜ್ಞಾನವಾನ್' ಎಂಬ ಅನುಮಿತಿ ಹುಟ್ಟುತ್ತದೆ. ಆ ಅನುಮಿತಿಯ ಸಾಮಗ್ರಿಯು ವಿಷಯಘಟಿತವಾದ ಘಟಜ್ಞಾನದ ಜ್ಞಾನಕ್ಕೆ ಜನಕವಾದ ಶಬ್ದಾನ್ಯ ಸಾಮಗ್ರಿಯಾಗಿದೆ. ಆದರೆ ಅದರಲ್ಲಿ ಘಟಜ್ಞಾನ ಪ್ರಾಮಾಣ್ಯವು ವಿಷಯವಲ್ಲ. ಆದ್ದರಿಂದ ಬಾಧ.

'ಇದಂ ಜ್ಞಾನಂ ಪ್ರಮಾ'' ಎಂಬ ಶಬ್ದದಿಂದ ಶಾಬ್ದಬೋಧ ಬರುತ್ತದೆ. ಆ ಶಾಬ್ದಬೋಧದಲ್ಲಿ ಜ್ಞಾನಗತ ಪ್ರಾಮಾಣ್ಯವು ವಿಷಯವಾಗಿದೆ. ಆದರೆ, ಆ ಬೋಧವು ಶಬ್ದಾನ್ಯ ಸಾಮಗ್ರೀ ಜನ್ಯವಲ್ಲ. ಆದ್ದರಿಂದ ಪ್ರಾಮಾಣ್ಯ ವಿಷಯವಾಗಬಾರದು. ಈ ಅನುಪಪತ್ತಿಯೂ ಇನ್ನೊಂದು ದೋಷ.

## ಯಜ್ಞಪತ್ಯುಪಾಧ್ಯಾಯರ ಸ್ವತಸ್ತ್ವಪರಿಷ್ಕಾರ

**ननु ज्ञानग्राहकपदेन ग्राह्यप्रामाण्याश्रयज्ञानप्रकारप्रकारकतया तत्प्रकारवद्विशेष्यकतया च तद्विषयत्वं विवक्षितम् । अत्र च विशेषणद्वयेन 'तव घटविशेष्यकं ज्ञानम्' इति, 'तव घटत्वप्रकारकं**

**ज्ञानम्' इति च शब्दाभ्यां जन्ययोः घट-ज्ञानविषयकज्ञानयोः प्रामाण्यायविषयकत्वाद्बाध इति शङ्काद्वयं क्रमेण निरस्तमिति चेदुच्यते ।**

'ತದಪ್ರಾಮಾಣ್ಯಾಗ್ರಾಹಕ ಜ್ಞಾನಗ್ರಾಹಕ ಯಾವತ್ ಸಾಮಗ್ರೀಗ್ರಾಹತ್ವಮ್' ಎಂಬ ಸ್ವತಸ್ತ್ವಪರಿಷ್ಕಾರದಲ್ಲಿ 'ಜ್ಞಾನಗ್ರಾಹಕ' ಎಂಬ ವಿಶೇಷಣವನ್ನು ಯಜ್ಞಪತ್ಯುಪಾಧ್ಯಾಯರು ಪರಿಷ್ಕರಿಸಿ ಹಿಂದಿನ ಬಾಧಗಳನ್ನು ಪರಿಹರಿಸಿದ್ದಾರೆ–

ಜ್ಞಾನಗ್ರಾಹಕ ಎಂದರೆ ಯಾವುದೋ ಒಂದು ರೀತಿಯಿಂದ ಜ್ಞಾನದ ಜ್ಞಾನವನ್ನು ಉಂಟುಮಾಡುವ ಸಾಮಗ್ರೀ ಎಂದಿಷ್ಟೇ ಅರ್ಥವಲ್ಲ. ಪ್ರಕೃತ ಯಾವ ಪ್ರಾಮಾಣ್ಯವು ಅನುವ್ಯವಸಾಯಗ್ರಾಹ್ಯವೋ ಆ ಪ್ರಾಮಾಣ್ಯಕ್ಕೆ ಆಶ್ರಯವಾದ ಜ್ಞಾನವನ್ನು–ಆ ಜ್ಞಾನದಲ್ಲಿ ಯಾವ ಧರ್ಮವು ಪ್ರಕಾರವಾಗಿ ತೋರುತ್ತಿದೆಯೋ ತತ್–ಪ್ರರಾಕತ್ವೇನ ಹಾಗೂ ತಾದೃಶಪ್ರಕಾರ ವಿಶಿಷ್ಟವಸ್ತುವಿಶೇಷ್ಯಕತ್ವೇನ ಜ್ಞಾನವನ್ನು ಗ್ರಹಿಸುವ ಸಾಮಗ್ರಿಯೇ ಜ್ಞಾನಗ್ರಾಹಕ ಸಾಮಗ್ರೀ. ಉದಾಹರಣೆಗೆ—'ಅಯಂ ಘಟಃ' ಎಂಬ ಜ್ಞಾನದಲ್ಲಿ ಘಟತ್ವವು ಪ್ರಕಾರ, ಪುರೋವರ್ತಿಯು ವಿಶೇಷ್ಯ. ಆ ಪುರೋವರ್ತಿವಸ್ತು ಘಟವೇ ಆಗಿರುವುದರಿಂದ ಅದು ಪ್ರಕಾರೀಭೂತ ಘಟತ್ವವಿಶಿಷ್ಟವೂ ಆಗಿದೆ. ಆದ್ದರಿಂದ ಆ ಜ್ಞಾನವು ಘಟತ್ವವಿಶಿಷ್ಟ ಪುರೋವೃತ್ತಿ ವಿಶೇಷ್ಯಕವಾಗಿದೆ. ಆ ಜ್ಞಾನವನ್ನು ಘಟತ್ವಪ್ರಕಾರಕತಯಾ, ಘಟತ್ವವಿಶಿಷ್ಟಪುರೋವರ್ತಿ–ವಿಶೇಷ್ಯಕತಯಾ ಗ್ರಾಹಕವಾದ ಅನುವ್ಯವಸಾಯ– 'ಘಟತ್ವಪ್ರಕಾರಕ–ಘಟತ್ವವಿಶಿಷ್ಟ–ವಿಶೇಷ್ಯಕ ಜ್ಞಾನವಾನಹಮ್' ಎಂಬ ಜ್ಞಾನ. ಆದರಲ್ಲಿ ಪ್ರಾಮಾಣ್ಯವು ವಿಷಯವಾಗಿಯೇ ಇರುತ್ತದೆ.

ಆದರೆ, ಹಿಂದೆ ಹೇಳಿದ 'ಇದಂ ಘಟಜ್ಞಾನಮ್' ಎಂಬ ಶಬ್ದದಿಂದ ಜನ್ಯವಾದ ಶಾಬ್ದ-ಬೋಧದಲ್ಲಿ ಜ್ಞಾನವು ಘಟವಿಷಯಕತ್ವೇನ ಗೃಹೀತವಾಗಿದೆ. ಘಟತ್ವಪ್ರಕಾರಕತ್ವೇನ, ಘಟತ್ವವದ್ ವಿಶೇಷ್ಯಕತ್ವೇನ ಗೃಹೀತವಾಗಿಲ್ಲ. ಆದ್ದರಿಂದ ಅಂತಹ ಜ್ಞಾನಜನಕಸಾಮಗ್ರಿಯು ಪ್ರಕೃತ ಲಕ್ಷಣದಲ್ಲಿ ಅಂತರ್ಗತವಾಗಿಲ್ಲ. ಹೀಗಾಗಿ ತದ್‌ಗ್ರಾಹ್ಯತ್ವ ಇಲ್ಲದಿದ್ದರೂ ಪ್ರಾಮಾಣ್ಯದಲ್ಲಿ ಬಾಧ ಇಲ್ಲ.

## ಕೃತ್ಯ ವಿಚಾರ

ಈ ಪರಿಷ್ಕಾರದಲ್ಲಿ ವ್ಯವಸಾಯವನ್ನು ಅನುವ್ಯವಸಾಯವು ಎರಡು ಧರ್ಮಗಳಿಂದ ಗ್ರಹಿಸಬೇಕು ಎನ್ನಲಾಗಿದೆ—

1. ವ್ಯವಸಾಯದಲ್ಲಿ ಯಾವುದು ಪ್ರಕಾರವಾಗಿದೆಯೋ ತತ್‌ಪ್ರಕಾರಕತ್ವೇನ,

2. ತಾದೃಶಪ್ರಕಾರವದ್ ವಿಶೇಷ್ಯಕತ್ವೇನ.

ಮೊದಲನೆಯ ಅಂಶವನ್ನು ಕೊಡದಿದ್ದರೆ ''ತವ ಘಟವಿಶೇಷ್ಯಕಂ ಜ್ಞಾನಮಸ್ತಿ'' ಎಂಬ ವಾಕ್ಯದಿಂದ ಬಂದ ಶಾಬ್ದಬೋಧವು 'ಘಟತ್ವವದ್ ವಿಶೇಷ್ಯಕತ್ವೇನ' ವ್ಯವಸಾಯವನ್ನು ವಿಷಯೀಕರಿಸುತ್ತದೆ. ಆದರೆ ಆ ಶಾಬ್ದಾಬೋಧ-ಸಾಮಗ್ರಿಯು ಪ್ರಾಮಾಣ್ಯವನ್ನು ವಿಷಯೀಕರಿಸುತ್ತಿಲ್ಲ. ಏಕೆಂದರೆ, ಜ್ಞಾನದಲ್ಲಿ ಘಟತ್ವವತ್ತಾದ ಘಟವು ವಿಶೇಷ್ಯವಾಗಿದ್ದರೂ ಅಂತಹ ಘಟವು ಘಟತ್ವೇನಾಪಿ ತೋರಿರಬಹುದು, ಅಥವಾ ಪಟತ್ವಾದಿನಾಪಿ ತೋರಿರಬಹುದು. ಆದ್ದರಿಂದ ತದ್ವದ್ ವಿಶೇಷ್ಯಕತ್ವೇನ ಜ್ಞಾನಗ್ರಾಹಿಯಾದ ಜ್ಞಾನವು ತಜ್ಜ್ಞಾನದಲ್ಲಿ ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ. ಹೀಗಾಗಿ ತಾದೃಶಜ್ಞಾನಗ್ರಾಹಕ ಸಾಮಗ್ರೀ-ಗ್ರಾಹ್ಯತ್ವವು ಪ್ರಾಮಾಣ್ಯದಲ್ಲಿ ಬಂದಿಲ್ಲವಾದುದರಿಂದ ಬಾಧ. ಅದಕ್ಕಾಗಿ ಮೊದಲ ವಿಶೇಷಣವನ್ನು ಕೊಡಬೇಕು.

ಎರಡನೆಯ ವಿಶೇಷಣವನ್ನು ಬಿಟ್ಟರೆ 'ತವ ಘಟತ್ವ ಪ್ರಕಾರಕ ಜ್ಞಾನಮಸ್ತಿ' ಎಂಬ ಶಬ್ದಜನ್ಯ ಶಾಬ್ದಬೋಧವು ಘಟತ್ವಪ್ರಕಾರಕತ್ವೇನ ಜ್ಞಾನವನ್ನು ಗ್ರಹಿಸಿದರೂ ತದ್ವದ್‌ವಿಶೇಷ್ಯಕತ್ವೇನ ಜ್ಞಾನವನ್ನು ಗ್ರಹಿಸುವುದಿಲ್ಲ. ಆದ್ದರಿಂದ ಪ್ರಾಮಾಣ್ಯವು ವಿಷಯವಲ್ಲ. ಮತ್ತೆ ಬಾಧ ಬರುತ್ತದೆ. ಅದಕ್ಕಾಗಿ ಎರಡನೆಯ ವಿಶೇಷಣವನ್ನು ಕೊಡಬೇಕು.

## ನ್ಯಾಯದೀಪ

**ನನು ಅಸ್ತು ತರ್ಹಿ ಸ್ವಾಶ್ರಯಪ್ರಕಾರ-ಪ್ರಕಾರತಯಾ ಸ್ವಾಶ್ರಯ ವಿಶೇಷ್ಯ-ವಿಶೇಷ್ಯಕತಯಾ ಸಾಶ್ರಯಗ್ರಾಹಕ-ಗ್ರಾಹ್ಯತ್ವಮ್ ಇತಿ ಯಜ್ಞಪತಿನೋಕ್ತಂ ಮತಮ್ । ತತ್ರ ಯದ್ಯಪಿ ಯಥಾಶ್ರುತೇ 'ಘಟತ್ವಪ್ರಕಾರಕಂ ಕಿಂಚಿದ್ವಿ-ಶೇಷ್ಯಕಮ್' ಇತಿ ಜ್ಞಾನೇನಾಪಿ ಪ್ರಾಮಾಣ್ಯಾಗ್ರಹಾತ್ ಸ್ವಾಶ್ರಯಪ್ರಕಾರ-ಪ್ರಕಾರತಯಾ ಸ್ವಾಶ್ರಯ ಪ್ರಕಾರವದ್ ವಿಶೇಷ್ಯಕತಯಾ ಇತಿ ವಾಚ್ಯಮ್ ।**

**ತತ್ರಾಪಿ ಪ್ರಕಾರವದಿತ್ಯತ್ರ ಪ್ರಕಾರಸ್ಯ ಉಪಲಕ್ಷಣತ್ವೇ ಉಕ್ತದೋಷಾಪತ್ತ್ಯಾ ತತ್-ಪ್ರಕಾರವಿಶಿಷ್ಟ ವಿಶೇಷ್ಯಕತಯಾ ಇತ್ಯುಚ್ಯತೇ । ಅತೋ ನ ಕೋಽಪಿ ದೋಷಃ ಇತಿ ಭಾವೇನ ಶಂಕತೇ – ನನ್ವಿತಿ ॥**

ಯಜ್ಞಪತ್ಯುಪಾಧ್ಯಾಯರು ಹೇಳಿದ ನಿರುಕ್ತಿ ಇದು. ಸ್ವಂ=ಪ್ರಾಮಾಣ್ಯ. ಅದಕ್ಕೆ ಆಶ್ರಯವಾದುದು ಜ್ಞಾನ. ಆ ಜ್ಞಾನದಲ್ಲಿ ಪ್ರಕಾರವಾಗಿ ಕಾಣುವ ಧರ್ಮ ಪ್ರಕಾರಕತಯಾ, ಆ ಜ್ಞಾನದಲ್ಲಿ ಭಾಸವಾಗುವ ವಿಶೇಷ್ಯ-ವಿಶೇಷ್ಯಕತಯಾ ಪ್ರಾಮಾಣ್ಯಾಶ್ರಯ-ಜ್ಞಾನಗ್ರಾಹಕವಾದ ಅನುವ್ಯವಸಾಯಾದಿಗಳಿಂದ ಪ್ರಾಮಾಣ್ಯವು ಗ್ರಾಹ್ಯವಾಗಿರಬೇಕು.

ಸ್ವಾಶ್ರಯ=ಪ್ರಾಮಾಣ್ಯಾಶ್ರಯಜ್ಞಾನದಲ್ಲಿ ಯಾವುದು ವಿಶೇಷ್ಯವೋ ತದ್ವಿಶೇಷ್ಯಕತಯಾ ಜ್ಞಾನಗ್ರಾಹಕ-ಜ್ಞಾನ ಎಂದರೆ 'ಘಟತ್ವಪ್ರಕಾರಕಂ ಜ್ಞಾನಂ ಕಿಂಚಿದ್ವಿಶೇಷ್ಯಕಂ' ಎಂಬ

ಅನುವ್ಯವಸಾಯವೂ ಆಗುತ್ತದೆ. ಆದರೆ ಅದರಲ್ಲಿ ಪ್ರಾಮಾಣ್ಯವು ತೋರುವುದಿಲ್ಲ, ಬಾಧ. ಅದಕ್ಕಾಗಿ 'ಪ್ರಕಾರೀಭೂತಧರ್ಮವದ್ ವಿಶೇಷ್ಯಕತಯಾ' ಎಂಬ ಅಂಶವನ್ನು ಪರಿಷ್ಕರಿಸಬೇಕು. ಆಗ 'ಘಟತ್ವಪ್ರಕಾರಕಂ ಇದಂ ಜ್ಞಾನಂ ಘಟತ್ವವದ್-ವಿಶೇಷ್ಯಕಮ್' ಎಂಬ ಅನುವ್ಯವಸಾಯ ಮಾತ್ರವೇ ಸಂಗ್ರಹವಾಗುತ್ತದೆ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ.

''ಮೂಲದಲ್ಲಿ ಪ್ರಕಾರವದ್ವಿಶೇಷ್ಯಕತಯಾ'' ಎಂದರೆ 'ತತ್‌ಪ್ರಕಾರವಿಶಿಷ್ಟ ವಿಶೇಷ್ಯಕತಯಾ' ಎಂದು ಅರ್ಥ. ಅಂದರೆ ಪ್ರಕಾರೀಭೂತಧರ್ಮವು ವಿಶೇಷ್ಯತಾವಚ್ಛೇದಕವಾಗಿ ಜ್ಞಾನದಲ್ಲಿ ತೋರಿದೆ, ಎಂದು ಅನುವ್ಯವಸಾಯವು ಜ್ಞಾನವನ್ನು ಗ್ರಹಿಸಬೇಕು. ಆಗ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ. ವಿಶೇಷ್ಯದಲ್ಲಿ ಪ್ರಕಾರೀಭೂತಧರ್ಮವು ಉಪಲಕ್ಷಣವಾಗಿ ತೋರಿದರೂ ಸಾಕು, ಎಂದರೆ ''ಘಟತ್ವ ಪ್ರಕಾರಕಂ ಜ್ಞಾನಂ ಕಿಂಚಿದ್ವಿಶೇಷ್ಯಕಮ್'' ಎಂಬ ಅನುವ್ಯವಸಾಯವೂ ಸಂಗ್ರಹೀತವಾಗುತ್ತದೆ. ಅಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಅದಕ್ಕಾಗಿ ಪ್ರಕಾರೀಭೂತಧರ್ಮ-ವಿಶಿಷ್ಟವಿಶೇಷ್ಯಕ ಎಂದು ಹೇಳಬೇಕು.

## ಯಜ್ಞಪತ್ಯುಕ್ತ ಸ್ವತಸ್ತ್ವನಿರಾಸ

**त्वदुक्तं यत् ग्राह्यप्रामाण्याश्रयज्ञानप्रकारप्रकारकतया तत्प्रकारवद्विशेष्यकतया च तद्विषयत्वं तत् प्रमाण्यविषयकत्वमेव । स्वप्रकारवद्विशेष्यकत्वस्यैव प्रामाण्यरूपत्वात् । तथा च यावती प्रामाण्यविषयिका सामग्री तद् ग्राह्यत्वं स्वतस्त्वमित्युक्तं स्यात् । तथा चैतादृशस्वतस्त्वस्य परतस्त्वपक्षेऽपि सत्वात् सिद्धसाधनम् । एतदभावरूपपरतस्त्वसाधनेऽपसिद्धान्तश्च । न हि परतस्त्वपक्षे अनुव्यवसायाविषयोऽपि प्रामाण्यं प्रामाण्यानुमितेरप्यविषयः । अस्मिन् पक्षे अप्रामाण्याग्राहकत्वविशेषणवैयर्थ्यं च ।**

[1]ಯಜ್ಞಪತ್ಯುಪಾಧ್ಯಾಯರು ಮಾಡಿದ ಪರಿಷ್ಕಾರಕ್ಕೆ ದೋಷವಿದೆ—ಘಟಜ್ಞಾನದಲ್ಲಿ ಪ್ರಾಮಾಣ್ಯವೆಂದರೆ 'ಘಟತತ್ವವದ್-ವಿಶೇಷ್ಯಕತ್ವೇ ಸತಿ ಘಟತ್ವ-ಪ್ರಕಾರಕತ್ವ'. ಈ ರೂಪದಿಂದ ಜ್ಞಾನವನ್ನು (ವ್ಯವಸಾಯವನ್ನು) ಗ್ರಹಿಸುವ ಅನುವ್ಯವಸಾಯ ಸಾಮಗ್ರಿಯು ಪ್ರಾಮಾಣ್ಯ

1. ಯಜ್ಞಪತ್ಯುಪಾಧ್ಯಾಯರು 15ನೇ ಶತಮಾನದಲ್ಲಿದ್ದ ಮಿಥಿಲೆಯ ಖ್ಯಾತ ವಿದ್ವಾಂಸರು. 'ಉಪಾಧ್ಯಾಯ ಮತ' ಎಂದೇ ಇವರ ಅಭಿಪ್ರಾಯವನ್ನು ಮುಂದಿನ ಗ್ರಂಥಕಾರರು ಉಲ್ಲೇಖಿಸುತ್ತಾರೆ. ಮಣಿಗ್ರಂಥಕ್ಕೆ 'ಪ್ರಭಾ' ಎಂಬ ಟೀಕೆಯನ್ನು ಇವರು ಬರೆದಿದ್ದಾರೆ. ಪಕ್ಷಧರ ಮಿಶ್ರರು ಇವರ ಶಿಷ್ಯರು.

ಗ್ರಾಹಕ, ಎಂದು ಯಜ್ಞಪತಿಗಳ ಪರಿಷ್ಕಾರದ ಅಭಿಪ್ರಾಯ. ಇದರ ಪರ್ಯವಸಿತ ಅರ್ಥ– ಪ್ರಾಮಾಣ್ಯಗ್ರಾಹಕವಾದ ಯಾವ ಯಾವ ಸಾಮಗ್ರಿಗಳಿವೆಯೋ ಆ ಸಾಮಗ್ರಿ, ಗಳೆಲ್ಲವುಗಳಿಂದಲೂ ಪ್ರಾಮಾಣ್ಯವು ಗ್ರಾಹ್ಯವಾಗಿದೆ. ಇದೇ ಪ್ರಾಮಾಣ್ಯದ ಸ್ವತಸ್ತ್ವ. ಇಂತಹ ಸ್ವತಸ್ತ್ವವನ್ನು 'ಪ್ರಾಮಾಣ್ಯಂ ಪರತಃ' ಎಂದು ಹೇಳುವ ನೈಯಾಯಿಕರೂ ಒಪ್ಪಿದ್ದಾರೆ. ಏಕೆಂದರೆ, ಅವರ ಮತದಲ್ಲಿ ಘಟತ್ವಪ್ರಕಾರತ್ವೇನ ಘಟತ್ವವದ್‌ವಿಶೇಷ್ಯಕತ್ವೇನ ಜ್ಞಾನವು ಭಾಸವಾಗುವುದು ಪ್ರಾಮಾಣ್ಯಾನುಮಿತಿಯಲ್ಲಿ ಮಾತ್ರ. ಆ ಅನುಮತಿ ಸಾಮಗ್ರಿಯು ಪ್ರಾಮಾಣ್ಯವನ್ನು ಗ್ರಹಿಸಿಯೇ ಇರುತ್ತದೆ. ಆದ್ದರಿಂದ ಸಿದ್ಧಸಾಧನತಾದೋಷ.

ಅಪಸಿದ್ಧಾಂತದೋಷವೂ . ಇದೆ–ತಾರ್ಕಿಕರು ಇಂತಹ ಸ್ವತಸ್ತ್ವದ ಅಭಾವವನ್ನು ಸ್ವತಸ್ತ್ವವಾದಿಗಳ ಮುಂದೆ ಸಾಧಿಸಬೇಕು. ಅರ್ಥಾತ್ ''ಪ್ರಾಮಾಣ್ಯಂ ಘಟತ್ವಪ್ರಕಾರತ್ವೇನ, ಘಟತ್ವವದ್–ವಿಶೇಷ್ಯಕತ್ವೇನ ಜ್ಞಾನಗ್ರಾಹಕಗ್ರಾಹ್ಯಂ ನ'' ಎಂದು ಸಾಧಿಸಬೇಕು. ಆದರೆ ಅಂತಹ ಅನುಮಿತಿಯಿಂದ ಪ್ರಾಮಾಣ್ಯವು ಗ್ರಾಹ್ಯವೆಂದು ಅವರೇ ಒಪ್ಪಿದ್ದಾರೆ. ಅದನ್ನು ನಿರಾಕರಿಸಿದರೆ ಸಿದ್ಧಾಂತ ವಿರೋಧ. ಪ್ರಾಮಾಣ್ಯಂ ಪರತಃ ಎನ್ನುವ ತಾರ್ಕಿಕರ ಪಕ್ಷದಲ್ಲೂ ಅನುವ್ಯವಸಾಯದಲ್ಲಿ ಅವಿಷಯವಾದ ಪ್ರಾಮಾಣ್ಯವು ಸಮರ್ಥಪ್ರವೃತ್ತಿ ಜನಕತ್ವಹೇತುಜನ್ಯವಾದ ಅನುಮಿತಿಯಲ್ಲೂ ಅವಿಷಯ, ಎನ್ನಲು ಸಾಧ್ಯವಿಲ್ಲ. ಪ್ರಾಮಾಣ್ಯಕ್ಕೆ ಅನುಮಿತಿ ವಿಷಯತ್ವವನ್ನು ಅವರೂ ಒಪ್ಪಿದ್ದಾರೆ.

ಜ್ಞಾನದಲ್ಲಿ ತದ್ವದ್ ವಿಶೇಷ್ಯಕತ್ವವು ಸಾಕ್ಷಾತ್ತಾಗಿ ಅನುವ್ಯವಸಾಯದಲ್ಲಿ ತೋರಿದರೆ ಅಂತಹ ಅನುವ್ಯವಸಾಯವು ಅಪ್ರಾಮಾಣ್ಯವನ್ನು ಗ್ರಹಿಸುವ ಸಂಭವವೇ ಇಲ್ಲವಾದುದರಿಂದ ''ತದಪ್ರಾಮಾಣ್ಯಾಗ್ರಾಹಕ'' ಎಂಬ ವಿಶೇಷಣ ವ್ಯರ್ಥವೂ ಆಗುತ್ತದೆ.

## ವಿಶೇಷ ವಿಚಾರ

ತಾರ್ಕಿಕರ ಮತದಂತೆ–'ಅಯಂ ಘಟಃ' ಎಂದು ಮೊದಲು ಜ್ಞಾನ ಬಂದಮೇಲೆ ''ಪುರೋವರ್ತಿನಿ ಘಟತ್ವ ಪ್ರಕಾರಕ ಜ್ಞಾನವಾನಹಂ'' ಎಂದು ಅನುವ್ಯವಸಾಯ ಬರುತ್ತದೆ. ಅಂತಹ ಅನುವ್ಯವಸಾಯ ಜನಕವಾದ ಮನಸ್ಸು, 'ನನ್ನ ಮುಂದಿರುವ ವಸ್ತುವನ್ನು ಘಟವೆಂದು ತಿಳಿದ್ದಿದೇನೆ' ಎಂದಿಷ್ಟೇ ಹೇಳುತ್ತದೆ. ಹೊರತು, ಆ ವಸ್ತುವಿನಲ್ಲಿ ಘಟತ್ವ ಇದೆ, ಎಂದೇನೂ ಹೇಳುವುದಿಲ್ಲ. ಏಕೆಂದರೆ, ಪುರೋವರ್ತಿಯಲ್ಲಿ ಘಟತ್ವದ ಸಂಬಂಧವು ಬಾಹ್ಯಾರ್ಥ್ಯ. ಅದನ್ನು ತಿಳಿಸುವ ಸಾಮರ್ಥ್ಯ ಅನುವ್ಯವಸಾಯಕ್ಕೆ ಇಲ್ಲ. ಆದ್ದರಿಂದ ಮನಸ್ಸು ಪ್ರಾಮಾಣ್ಯವನ್ನು (ಘಟತ್ವ ಸಂಬಂಧವನ್ನು) ಗ್ರಹಿಸುವುದಿಲ್ಲ. ಈ ಅನುವ್ಯವಸಾಯ ಬಂದಮೇಲೆ ಪ್ರವೃತ್ತಿ ಮಾಡಿ, ಘಟವು ದೊರೆತಾಗ ಅನುಮಾನದಿಂದ ಪುರೋವರ್ತಿಯಲ್ಲಿ ಘಟತ್ವ ಇದೆ, ಎಂಬ ಪ್ರಾಮಾಣ್ಯವು ಗೃಹೀತವಾಗುತ್ತದೆ.

ಇಲ್ಲಿ ಮೊದಲು ಬಂದ ಅನುವ್ಯಾವಸಾಯವು 'ಘಟತ್ವ ಪ್ರಕಾರಕತ್ವೇನ' ಜ್ಞಾನವನ್ನು

ಗ್ರಹಿಸಿದರೂ 'ಘಟತ್ವವದ್ ವಿಶೇಷ್ಯಕತ್ವೇನ' ಜ್ಞಾನವನ್ನು ಗ್ರಹಿಸುವುದಿಲ್ಲ. ಆದ್ದರಿಂದ ಆ ಅನುವ್ಯವಸಾಯ ಸಾಮಗ್ರಿಯು ಪ್ರಕೃತ ಸ್ವತಸ್ತ್ವಪರಿಷ್ಕಾರದಲ್ಲಿರುವ ಜ್ಞಾನಗ್ರಾಹಕ ಸಾಮಗ್ರೀ ಪದದಿಂದ ಸಂಗ್ರಹೀತವಾಗುವುದಿಲ್ಲ. ಅನುಮಿತಿಯು ಪ್ರಾಮಾಣ್ಯವನ್ನು ಗ್ರಹಿಸುವುದರಿಂದ ಅದು ಘಟತ್ವವದ್ವಿಶೇಷ್ಯಕತ್ವೇನ ಜ್ಞಾನಗ್ರಾಹಕವಾಗಿದೆ. ಹೀಗಾಗಿ ಅನುಮಿತಿ ಸಾಮಗ್ರಿಯು ಮಾತ್ರ ಸ್ವತಸ್ತ್ವಲಕ್ಷಣದ ಜ್ಞಾನಗ್ರಾಹಕ ಪದದಿಂದ ಗೃಹೀತವಾಗುತ್ತದೆ. ಅದು ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಇದು ತಾರ್ಕಿಕರಿಗೂ ಸಮ್ಮತ. ಒಂದು ವೇಳೆ ಅನುವ್ಯವಸಾಯ ಸಾಮಗ್ರಿಯು ಸಂಗ್ರಹಿಸಲ್ಪಟ್ಟಿದ್ದರೆ ಅದರಿಂದ ಪ್ರಾಮಾಣ್ಯ ಗೃಹಿತವಾಗುತ್ತದೆ, ಎಂದು ತಾರ್ಕಿಕರು ಒಪ್ಪಿಲ್ಲವಾದುದರಿಂದ ಅವರಿಗೆ ಈ ಸ್ವತಸ್ತ್ವವು ಬಾಧಕವಾಗುತ್ತಿತ್ತು. ಪ್ರಕೃತ ಪರಿಷ್ಕೃತ ಲಕ್ಷಣದಂತೆ ಅನುಮಿತಿ ಸಾಮಗ್ರೀ ಮಾತ್ರವೇ ಸಂಗ್ರಹವಾಗುವುದರಿಂದ ಈ ಸ್ವತಸ್ತ್ವವು ತಾರ್ಕಿಕರಿಗೆ ಸಮ್ಮತವೇ ಆಗುತ್ತದೆ.

ಸ್ವಪ್ರಕಾರವದ್-ವಿಶೇಷ್ಯಕತ್ವಸ್ಯೈವ ಪ್ರಾಮಾಣ್ಯರೂಪತ್ವಾತ್-ಘಟಪ್ರಕಾರಕತ್ವವು ಭ್ರಮೆಯಲ್ಲೂ ಇದೆ ಪ್ರಮಾದಲ್ಲೂ ಇದೆ. ಘಟತ್ವಪ್ರಕಾರವದ್‌ವಿಶೇಷ್ಯಕತ್ವವು ಘಟಪ್ರಮಾದಲ್ಲಿ ಮಾತ್ರವೇ ಇದೆ. ತದ್ರೂಪೇಣ ಜ್ಞಾನಗ್ರಾಹಕ ಸಾಮಗ್ರೀ ಎಂದರೆ ಪ್ರಾಮಾಣ್ಯಗ್ರಾಹಕ ಸಾಮಗ್ರೀ ಎಂದಂತೆಯೇ ಆಯಿತು. ಅಲ್ಲಿಗೆ ಸ್ವತಸ್ತ್ವಪರಿಷ್ಕಾರದ ಅಭಿಪ್ರಾಯ-ಪ್ರಾಮಾಣ್ಯಗ್ರಾಹಕ ಸಾಮಗ್ರಿಯು ಪ್ರಾಮಾಣ್ಯಗ್ರಾಹಕವಾಗಿದೆ, ಎಂದು. ಇದು ಎಲ್ಲರಿಗೂ ಸಮ್ಮತ. ಇದರಲ್ಲಿ ಯಾರಿಗೂ ವಿಪ್ರತಿಪತ್ತಿ ಇಲ್ಲ.

ಸ್ವ ಎಂದರೆ ಜ್ಞಾನ. ಅದರಲ್ಲಿ ಪ್ರಕಾರ=ಘಟತ್ವಾದಿಗಳು. ಪ್ರಕಾರವತ್=ಘಟಾದಿಗಳು. ತದ್ವಿಶೇಷ್ಯಕತ್ವೇನ ಜ್ಞಾನಗ್ರಾಹಕ ಸಾಮಗ್ರೀ, ಎಂದು ಮೂಲದ ಅರ್ಥ.

## ನ್ಯಾಯದೀಪ

**ತತ್‌ಪ್ರಕಾರವದಿತಿ ॥ ತತ್-ಪ್ರಕಾರವಿಶಿಷ್ಟ-ವಿಶೇಷ್ಯಕತಯಾ ಇತ್ಯರ್ಥಃ । ತದ್ವಿಷಯತ್ವಂ=ವ್ಯವಸಾಯವಿಷಯತ್ವಮ್। ವಕ್ಷ್ಯಮಾಣದೋಷ-ದಾರ್ಢ್ಯಾಯ ದಲದ್ವಯಕೃತ್ಯಂ ವ್ಯನಕ್ತಿ-ಅತ್ರ ಚೇತಿ ॥ ಏವಂ ವಿವಕ್ಷಾ-ಯಾಮ್ ಇತ್ಯರ್ಥಃ ॥**

**1. ಕಿಮೇತದ್ ವಾದಿಮತೇ 'ತದ್ವತ್ತ್ವರೂಪಂ ವೈಶಿಷ್ಟ್ಯಂ ಅನುವ್ಯವಸಾಯಸ್ಯ ವಿಷಯ ಏವ ನೇತಿ ಮತಿಃ,**

**2. ಉತ ಸ್ವಾತಂತ್ರ್ಯೇಣ ।**

**ಆದ್ಯೇ ದೋಷಮಾಹ-ತ್ವದಿತ್ಯಾದಿನಾ ।**

**ಸ್ವಪ್ರಕಾರವದಿತಿ ।। ಸ್ವಪ್ರಕಾರವಿಶಿಷ್ಟೇತ್ಯರ್ಥಃ । ಸಿದ್ಧಸಾಧನತಾಪಸಿದ್ಧಾಂತೌ ವ್ಯನಕ್ತಿ-ನ ಹೀತಿ।। ಪ್ರಾಮಾಣ್ಯಮಿತಿ।। ತದ್ವತ್ತ್ವಾದಿರೂಪಮ್ ಇತ್ಯರ್ಥಃ । ವೈಶಿಷ್ಟ್ಯಂ ಅನುವ್ಯವಸಾಯ ವಿಷಯ ಏವ ನೇತಿ ಪಕ್ಷೇ ತಾದೃಶಾನು-ವ್ಯವಸಾಯ ವಿಷಯತ್ವಮಾದಾಯ ಸಿದ್ಧಸಾಧನಾದಿದೋಷಾಭಾವೇऽಪಿ 'ಇದಂ ಜ್ಞಾನಂ ಪ್ರಮಾಣಂ, ಸಮರ್ಥ- ಪ್ರವೃತ್ತಿಜನಕತ್ವಾತ್' ಇತ್ಯನುಮಿತಿರೂಪಾ ಯಾವತೀ ತ್ವದುಕ್ತಲಕ್ಷಣಾ ಜ್ಞಾನಗ್ರಾಹಿಕಾ ಸಾಮಗ್ರೀ ತಾವತ್ಯಾಪಿ ಪ್ರಾಮಾಣ್ಯಗ್ರಹಾತ್ ಸಿದ್ಧಸಾಧನತಾ- ಪಸಿದ್ಧಾಂತೌ ಇತ್ಯರ್ಥಃ ।**

**ಅನುಮಿತಿವಿಷಯತ್ವೋಕ್ತೌ ತತ್ಸಾಮಗ್ರೀವಿಷಯತ್ವಂ ಸಿದ್ಧಮೇವ ಇತ್ಯುಪೇತ್ಯ ಅನುಮಿತೇಃ ಇತ್ಯೇವೋಕ್ತಮ್ । ನ ತು ಅನುಮಿತಿ ಸಾಮಗ್ರ್ಯಾ ಅಪೀತಿ ।**

**ಯದ್ವಾ, ತೇನ ಸಾಮಗ್ರೀ ಇತ್ಯುಕ್ತಾವಪಿ ಗ್ರಾಹಕ ಜ್ಞಾನೇತ್ಯೇವ ಯುಕ್ತಮ್, ನ ತು ಸಾಮಗ್ರೀ, ಇತ್ಯುಪೇತ್ಯ ಏವಮುಕ್ತಮ್ ।**

ತತ್ಪ್ರಕಾರ ಪ್ರಕಾರತಯಾ ತದ್ವಿಶೇಷ್ಯ-ವಿಶೇಷ್ಯಕತಯಾ ಜ್ಞಾನಗ್ರಾಹಕ-ಸಾಮಗ್ರೀ ಗ್ರಾಹ್ಯತ್ವಮ್, ಎಂದು ಸ್ವತಸ್ತ್ವವನ್ನು ಪರಿಷ್ಕಾರ ಮಾಡಿರುವ ವಾದಿಗಳಿಗೆ (ತಾರ್ಕಿಕರಾದ-ಯಜ್ಞಪತಿ ಉಪಾಧ್ಯಾಯರಿಗೆ) (1) ವಿಶೇಷ್ಯದಲ್ಲಿ ಪ್ರಕಾರವೈಶಿಷ್ಟ್ಯವು ಅನುವ್ಯವಸಾಯದಲ್ಲಿ ವಿಷಯವೇ ಆಗುವುದಿಲ್ಲ, ಆದ್ದರಿಂದ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ, ಎಂದು ಅಭಿಪ್ರಾಯವೋ?

(2) ಅಥವಾ, ಸ್ವಾತಂತ್ರ್ಯೇಣ ವಿಷಯವಲ್ಲ, ವ್ಯವಸಾಯದ್ವಾರಾ ವಿಷಯ. ಆದ್ದರಿಂದ ಅನುವ್ಯವಸಾಯವು ಪ್ರಾಮಾಣ್ಯಗ್ರಾಹಕವಲ್ಲ, ಎಂದು ಅಭಿಪ್ರಾಯವೋ?

ಮೊದಲನೆಯ ಪಕ್ಷಕ್ಕೆ ದೋಷವನ್ನು 'ತ್ವದುಕ್ತಮ್' ಎಂಬ ಮೂಲವಾಕ್ಯದಲ್ಲಿ ಹೇಳಲಾಗಿದೆ. ಅದರ ಅಭಿಪ್ರಾಯ ಹೀಗೆ-ಈ ಪಕ್ಷದಲ್ಲಿ ಅನುವ್ಯವಸಾಯಮಾದಾಯ ಸಿದ್ಧಸಾಧನತಾ ದೋಷ ವಿಲ್ಲ. ಏಕೆಂದರೆ, ಅನುವ್ಯವಸಾಯದಲ್ಲಿ ಜ್ಞಾನವು ತದ್ವದ್ವಿಶೇಷ್ಯಕತ್ವೇನ ತೋರುವುದಿಲ್ಲ. ಹಾಗೆ ಜ್ಞಾನವನ್ನು ಗ್ರಹಿಸುವ ಅನುಭವ ಅನುಮಿತಿ. ಆ ಅನುಮಿತಿಮಾದಾಯ ಸಿದ್ಧಸಾಧನತಾದೋಷ ಇದೆ. ಸ್ವತಸ್ತ್ವವಾದಿಗಳು ಸಾಧನೆ ಮಾಡಿದಾಗ ತಾರ್ಕಿಕರ ಮತದಲ್ಲಿ ಸಿದ್ಧಸಾಧನತಾ, ತಾರ್ಕಿಕರು ಇಂತಹ ಸ್ವತಸ್ತ್ವಾಭಾವವನ್ನು ಸಾಧನೆ ಮಾಡಿದಾಗ ಅಪಸಿದ್ಧಾಂತ.

## ನ್ಯಾಯದೀಪ

**ದ್ವಿತೀಯೇ-**

**2. ಅ. ಸ್ವಾತಂತ್ರ್ಯೇಣ ತದ್ವದ್ವಿಶೇಷ್ಯಕತ್ವ-ಗ್ರಾಹಕತ್ವಮಿತಿ ಮತಮ್ ।**

**2. ಆ. ಉತ ಗ್ರಾಹಕತ್ವಮಾತ್ರಮಿತಿ ।**

**2. ಅ. ಆದ್ಯೇಪ್ಯೇತದೇವೋತ್ತರಮ್–ತ್ವದುಕ್ತಮಿತ್ಯಾದಿ ।**

**2. ಆ. ದ್ವಿತೀಯೇಽಪಿ ಗ್ರಾಹ್ಯಮಿತ್ಯತ್ರ**

**2. ಆ. 1. ಗ್ರಾಹ್ಯತ್ವಮಾತ್ರಮ್ ಅಭಿಮತಮ್ ?**

**2. ಆ. 2. ಉತ ಸ್ವಾತಂತ್ರ್ಯೇಣ?**

**2. ಆ. 1. ಆದ್ಯೇ ತಾದೃಶಾನುವ್ಯವಸಾಯ ವಿಷಯತ್ವಮಾದಾಯಾಪಿ ಸಿದ್ಧಸಾಧನತಾಪಸಿದ್ಧಾಂತೌ ಸ್ಪಷ್ಟೌ।**

**2. ಆ. 2. ದ್ವಿತೀಯೇ ತು ಉಕ್ತಾನುವ್ಯವಸಾಯಂ ಪ್ರತಿ ಪ್ರಾಮಾಣ್ಯಸ್ಯ ನ್ಯಾಯಮತೇ ಸ್ವಾತಂತ್ರ್ಯೇಣ ಅವಿಷಯತಯಾ ಯಾವತೀ ಇತಿ ಜ್ಞಾನಗ್ರಾಹಕ–ಸಾಮಗ್ರೀ–ವಿಶೇಷಣೇನೈವ ಸಿದ್ಧಸಾಧನಾನಾಪತ್ತೇಃ ದೋಷಾಂತರಮಾಹ– ಅಸ್ಮಿನ್‌ಪಕ್ಷೇ ಇತಿ । ಗ್ರಾಹ್ಯಮಿತ್ಯತ್ರೈವ ಸ್ವಾತಂತ್ರ್ಯೇಣ ಗ್ರಾಹ್ಯತ್ವಮಿತಿ ಪಕ್ಷೇ ಇತ್ಯರ್ಥಃ।**

**ತಥಾ ಚ, ಅಸ್ಮಿನ್ ಪಕ್ಷೇ ಇತ್ಯಸ್ಯ ಸ್ವಾತಂತ್ರ್ಯೇಣ ತದ್ವದ್–ವಿಶೇಷ್ಯಕತ್ವಾದಿ ಗ್ರಾಹಿಕಾ, ಇತಿ ಪಕ್ಷೇ ಇತ್ಯಪ್ಯರ್ಥಮುಪೇತ್ಯ ಪ್ರಾಚೀನಪಕ್ಷೇಽಪಿ ಅಯಂ ದೋಷೋ ಬೋಧ್ಯಃ ।**

**ತದ್ವದ್–ವಿಶೇಷ್ಯಕತ್ವಗ್ರಹೇ ತದಭಾವವದ್‌ವಿಶೇಷ್ಯಕತ್ವರೂಪಾಪ್ರಾಮಾಣ್ಯ–ಗ್ರಹಾಸಂಭವೇನ ಉಕ್ತವಿವಕ್ಷಯಾ ತದ್ವಾರಣಾತ್, ಇತಿ ಭಾವಃ ।**

ವೈಶಿಷ್ಟ್ಯವು ಅನುವ್ಯವಸಾಯ ವಿಷಯ. ಆದರೂ ಅದು ವ್ಯವಸಾಯ ದ್ವಾರಾ ಅನುವ್ಯವಸಯಾಕ್ಕೆ ವಿಷಯ, ಸ್ವಾತಂತ್ರ್ಯೇಣ ವಿಷಯವಲ್ಲ ಎಂಬ ಎರಡನೆಯ ಪಕ್ಷದಲ್ಲಿಯೂ ಮತ್ತೆ ಎರಡು ವಿಕಲ್ಪಗಳು.

**2.ಅ.** ತತ್‌ಪ್ರಕಾರ–ಪ್ರಕಾರಕತಯಾ ತದ್ವದ್–ವಿಶೇಷ್ಯಕತಯಾ ವ್ಯವಸಾಯ–ಗ್ರಾಹಕ ಸಾಮಗ್ರೀ... ಎಂಬಲ್ಲಿ ತದ್ವದ್‌ವಿಶೇಷ್ಯಕತಯಾ ಸಾಕ್ಷಾತ್ ಗ್ರಾಹಕ ಎಂದು ವಿವಕ್ಷೆ ಇದೆಯೋ?

**2.ಆ.** ಸಾಕ್ಷಾತ್ ಎಂಬ ವಿವಕ್ಷೆ ಇಲ್ಲದೆ ತದ್ವದ್‌ವಿಶೇಷ್ಯಕತಯಾ ಗ್ರಾಹಕ, ಎಂದಿಷ್ಟೇ ವಿವಕ್ಷೆಯೋ?

ಮೊದಲನೆಯ ಪಕ್ಷಕ್ಕೆ (2.ಅ) ಹಿಂದೆ ಹೇಳಿದ್ದೇ ಉತ್ತರ. ತದ್ವದ್‌ವಿಶೇಷ್ಯಕತಯಾ ವ್ಯವಸಾಯವನ್ನು ಸಾಕ್ಷಾತ್ತಾಗಿ ಅನುವ್ಯವಸಾಯವು ಗ್ರಹಿಸಿದರೆ, ಆದರಲ್ಲಿ ಸ್ವಾತಂತ್ರ್ಯೇಣ ಪ್ರಾಮಾಣ್ಯ ಗ್ರಾಹಕತ್ವವೂ ಬರುವುದರಿಂದ ಸಿದ್ಧಸಾಧನತಾ–ಅಪಸಿದ್ಧಾಂತ.

**2.ಆ.** ಎರಡನೆಯ ಪಕ್ಷದಲ್ಲೂ ಮತ್ತೆರಡು ವಿಕಲ್ಪಗಳು.

**2.ಆ.1** ಯಾವತ್ ಸಾಮಗ್ರೀಗ್ರಾಹ್ಯಮ್ (ಪ್ರಾಮಾಣ್ಯಮ್) ಎಂಬಲ್ಲಿ ಗ್ರಾಹ್ಯಂ ಎಂದರೆ ಯಥಾಕಥಂಚಿತ್ ಗ್ರಾಹ್ಯತ್ವವೋ?

**2. ಆ. 2.** ಅಥವಾ ಸ್ವಾತಂತ್ರ್ಯೇಣ ಗ್ರಾಹ್ಯತ್ವವೋ?

ಇಲ್ಲಿರುವ ಎರಡನೆಯ ಪಕ್ಷದಲ್ಲಿ (2.ಆ.2) ತದ್ವದ್‌ವಿಶೇಷ್ಯಕತಯಾ ಜ್ಞಾನಗ್ರಾಹಕ ಯಾವತ್ ಸಾಮಗ್ರಿಯಲ್ಲಿ ಅನುವ್ಯವಸಾಯ ಸಾಮಗ್ರಿಯೂ ಸೇರುವುದರಿಂದ ಅಂತಹ ಸಾಮಗ್ರಿಯಿಂದ ಸ್ವಾತಂತ್ರ್ಯೇಣ ಗ್ರಾಹ್ಯತ್ವವು (ಪರತಸ್ತ್ವಪಕ್ಷದಲ್ಲಿ) ಪ್ರಾಮಾಣ್ಯಕ್ಕೆ ಇಲ್ಲದಿರುವುದರಿಂದ ಸಿದ್ಧಸಾಧನತಾ ದೋಷಕ್ಕೆ ಆಸ್ಪದವಿಲ್ಲ. ಅದಕ್ಕಾಗಿ ಆ ದೋಷವನ್ನು ಬಿಟ್ಟು 'ಅಸ್ಮಿನ್ ಪಕ್ಷೇ' ಎಂದು ಮೂಲದಲ್ಲಿ ವಿಶೇಷಣ ವೈಯರ್ಥ್ಯದೋಷಾಂತರವನ್ನು ಹೇಳಲಾಗಿದೆ.

ಇಲ್ಲಿ 'ಅಸ್ಮಿನ್ ಪಕ್ಷೇ' ಎಂದರೆ 'ತದ್ವದ್ ವಿಶೇಷ್ಯಕತಯಾ ಸಾಕ್ಷಾದ್ ಗ್ರಾಹಕ' ಎಂಬ ಎರಡನೆಯದರಲ್ಲಿ ಮೊದಲ ಪಕ್ಷ (2.ಆ.ದಲ್ಲಿ) ಎಂದೂ ಅರ್ಥ. ಆ ಪಕ್ಷದಲ್ಲೂ 'ಅಪ್ರಾಮಾಣ್ಯಾಗ್ರಾಹಕತ್ವ' ವಿಶೇಷಣವು ವ್ಯರ್ಥ.

ಅಗ್ರಾಹಕತ್ವ ವಿಶೇಷಣವು ವ್ಯರ್ಥ ಎನ್ನುವುದಕ್ಕೆ ಯುಕ್ತಿ ಹೀಗಿದೆ– ಅನುವ್ಯವಸಾಯವು ತದ್ವದ್‌ವಿಶೇಷ್ಯಕತಯಾ ಜ್ಞಾನವನ್ನು ಗ್ರಹಿಸಬೇಕು, ಎಂಬ ನಿಬಂಧನೆ ಇದೆ ಎಂದಾದರೆ ಅದು ಅಪ್ರಾಮಾಣ್ಯವನ್ನು ಗ್ರಹಿಸುವ ಪ್ರಸಕ್ತಿಯೇ ಇಲ್ಲ. ಏಕೆಂದರೆ, ತದ್ವದ್–ವಿಶೇಷ್ಯಕತ್ವವು ತದಭಾವ–ವದ್ವಿಶೇಷ್ಯಕತ್ವ ಘಟಿತವಾದ ಅಪ್ರಾಮಾಣ್ಯಕ್ಕೆ ವಿರೋಧಿ. ಆದ್ದರಿಂದ ಆ ವಿಶೇಷಣವು ವ್ಯರ್ಥ.

## ಅಧಿಕಾಶಂಕಾ–ಸಮಾಧಾನ

**ನನು ತದಭಾವವತಿ ತತ್‌ಪ್ರಕಾರಕತ್ವರೂಪಾ–ಪ್ರಾಮಾಣ್ಯಾಗ್ರಾಹಿಕಾಪಿ ತದ್ವದ್‌ವಿಶೇಷ್ಯಕತ್ವಗ್ರಾಹಿಕೈವ। ತತ್–ಪ್ರಕಾರಕತ್ವವಿತ್ತಿ–ವೇದ್ಯತ್ವಾತ್ ತದ್ವದ್– ವಿಶೇಷ್ಯಕತ್ವಸ್ಯ। ತದ್ವದ್–ವಿಶೇಷ್ಯಕತ್ವಾಭಾನೇ ತತ್–ಪ್ರಕಾರಕತ್ವ–ಗ್ರಹಣಾಯೋಗಾತ್ । ಇತಿ ಚೇತ್,**

**ತರ್ಹಿ ಅಪ್ರಾಮಾಣ್ಯಾಗ್ರಾಹತ್ವಕರೂಪ–ವಿಶೇಷಣದಾನೇಽಪಿ 'ತವ ಘಟತ್ವ ಪ್ರಕಾರಕಂ ಜ್ಞಾನಮ್' ಇತಿ ಶಬ್ದಜನ್ಯಜ್ಞಾನೇನ ಅಪ್ರಾಮಾಣ್ಯಾಗ್ರಾಹಕೇಣ ತ್ವದುಕ್ತದಿಶಾ ಪ್ರಕಾರವಿತ್ತಿವೇದ್ಯತಯಾ ತದ್ವದ್‌ವಿಶೇಷ್ಯಕತ್ವ–ಗ್ರಾಹಿಣಾಪಿ ಪ್ರಾಮಾಣ್ಯಾಗ್ರಹಣಾದ್ ಬಾಧಾಪತ್ತೇಃ।**

**ಯದಿ ಚಾತ್ರ ತದ್ವತ್ತ್ವೇನ ವಿಶೇಷ್ಯಸ್ಯ ಅಭಾನಾತ್ ನ ಬಾಧಃ ತರ್ಹಿ,**

**ಅಪ್ರಾಮಾಣ್ಯಗ್ರಾಹಕ ಸಾಮಗ್ರ್ಯಾಮಪಿ ತತ್ತುಲ್ಯಮ್ । ಅತ ಏವ ಪೂರ್ವಂ ದಲದ್ವಯಕೃತ್ಯಂ ವ್ಯಕ್ತೀಕೃತಮ್ ॥**

ಹಿಂದೆ ಪ್ರಕಾರೀಭೂತ-ಧರ್ಮವದ್-ವಿಶೇಷ್ಯಕತ್ವವು ಅನುವ್ಯವಸಾಯದಲ್ಲಿ ತೋರಿದರೆ ಅಪ್ರಾಮಾಣ್ಯವು ತೋರಲು ಸಾಧ್ಯವಿಲ್ಲ ಎನ್ನಲಾಯಿತು. ಆದರೆ, ಅಪ್ರಾಮಾಣ್ಯಜ್ಞಾನವು ತದ್ವದ್‌ವಿಶೇಷ್ಯಕತ್ವಜ್ಞಾನಕ್ಕೆ ವಿರೋಧಿಯಲ್ಲ. 'ತದಭಾವವತಿ ತತ್-ಪ್ರಕಾರಕತ್ವಂ' ಅಪ್ರಾಮಾಣ್ಯಂ. ಜ್ಞಾನದಲ್ಲಿ ಇಂತಹ ಅಪ್ರಾಮಾಣ್ಯಘಟಕವಾದ ತತ್-ಪ್ರಕಾರಕತ್ವವು ಗೃಹೀತವಾದರೆ ಆ ಪ್ರಕಾರೀಭೂತಧರ್ಮವು ವಿಶೇಷ್ಯದಲ್ಲಿ ತೋರಲೇಬೇಕು. ಏಕೆಂದರೆ, ಆ ಧರ್ಮವು ಪ್ರಕಾರವೆಂದಾಗಬೇಕಾದರೆ ಅದಕ್ಕೂ ವಿಶೇಷ್ಯಕ್ಕೂ ಸಂಬಂಧವು ತೋರಲೇಬೇಕು. ಏಕೆಂದರೆ, ಪ್ರಕಾರತ್ವಂ-ಬಾಸಮಾನ-ವೈಶಿಷ್ಟ್ಯ-ಪ್ರತಿಯೋಗಿತ್ವಂ. ಆದ್ದರಿಂದಲೇ ತದ್ವದ್-ವಿಶೇಷ್ಯಕತ್ವವು ತತ್-ಪ್ರಕಾರಕತ್ವ ವಿತ್ತಿವೇದ್ಯ. ಆದ್ದರಿಂದ ಅಪ್ರಾಮಾಣ್ಯ ಘಟಕತಯಾ ತತ್-ಪ್ರಕಾರತ್ವವು ತೋರಿದಾಗ ತದ್ವದ್-ವಿಶೇಷ್ಯಕತ್ವವೂ ತೋರುವುದರಿಂದ ತದ್ವದ್-ವಿಶೇಷ್ಯಕತಯಾ ಜ್ಞಾನಗ್ರಾಹಕ ಸಾಮಗ್ರಿಯು ಅಪ್ರಾಮಾಣ್ಯಗ್ರಾಹಕವಾಗುವ ಸಂಭವ ಇದೆ. ಅದರ ಪರಿಹಾರಕ್ಕಾಗಿ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣ ಸಾರ್ಥಕ. ಇದು ತರ್ಕತಾಂಡವದ ಮೇಲೆ ಬರುವ ಆಶಂಕಾ.

ಅದರ ಪರಿಹಾರ ಹೀಗೆ— ಹಿಂದೆ ತದ್ವದ್‌ವಿಶೇಷ್ಯಕತ್ವ ವಿಶೇಷಣಕ್ಕೆ ಕೃತ್ಯವನ್ನು ಮೂಲದಲ್ಲಿ ಹೇಳಲಾಗಿದೆ. ಆ ವಿಶೇಷಣವನ್ನು ಬಿಟ್ಟರೆ 'ತತ್-ಪ್ರಕಾರಕತ್ವೇನ ಜ್ಞಾನ ಗ್ರಾಹಕ ಯಾವತ್ ಸಾಮಗ್ರೀ ಗ್ರಾಹ್ಯತ್ವಂ ಸ್ವತಸ್ತ್ವಂ' ಎಂದಾಗುತ್ತದೆ. ಹೀಗೆ ಹೇಳಿದರೆ 'ತವ ಘಟತ್ವ ಪ್ರಕಾರಕ ಜ್ಞಾನಮಸ್ತಿ' ಎನ್ನುವ ಶಬ್ದಜನ್ಯಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲವಾದುದರಿಂದ ಬಾಧ. ಅದರ ಪರಿಹಾರಕ್ಕಾಗಿ 'ತದ್ವದ್ ವಿಶೇಷ್ಯಕತ್ವೇನ ಜ್ಞಾನಗ್ರಾಹಕ' ಎಂದು ಸಾಮಗ್ರಿಗೆ ವಿಶೇಷಣವನ್ನು ಕೊಡಬೇಕು, ಎಂದು ಹೇಳಲಾಗಿದೆ.

ಈಗ ತತ್ಪ್ರಕಾರಕತ್ವವು ತೋರಿದಾಗ ತದ್ವದ್‌ವಿಶೇಷ್ಯಕತ್ವವೂ ಅದೇ ವಿತ್ತಿವೇದ್ಯತಯಾ ತೋರುತ್ತದೆ ಎನ್ನುವುದಾದರೆ ಹಿಂದೆ ಹೇಳಿದ ಬಾಧವು ಪರಿಹಾರವಾಯಿತು. ತದ್ವದ್‌ವಿಶೇಷ್ಯಕತಯಾ ಎಂಬ ದಲ ವ್ಯರ್ಥ. ಅದಕ್ಕಾಗಿ, ಆ ಶಾಬ್ದಬೋಧದಲ್ಲಿ ವಿಶೇಷ್ಯವು ಪ್ರಕಾರೀಭೂತಧರ್ಮವತ್ತ್ವೇನ ಭಾನವಾಗುವುದಿಲ್ಲ, ಎನ್ನುವುದಾದರೆ ಅಪ್ರಾಮಾಣ್ಯದಲ್ಲೂ ತತ್‌ಪ್ರಕಾರಕತ್ವವು ಜ್ಞಾನದಲ್ಲಿ ಕಂಡರೂ ವಿಶೇಷ್ಯದಲ್ಲಿ ತದ್ವತ್ತಾಂಶವು ಕಾಣುವುದಿಲ್ಲವಾದ ಕಾರಣ ತದ್ವದ್ ವಿಶೇಷ್ಯಕತ್ವವು ತೋರುವುದಿಲ್ಲ ಎನ್ನುವ ಪರಿಹಾರ ಸಮಾನ.

ಆದ್ದರಿಂದ ತದ್ವದ್ ವಿಶೇಷ್ಯಕತ್ವಜ್ಞಾನಕ್ಕೂ ಅಪ್ರಾಮಾಣ್ಯಜ್ಞಾನಕ್ಕೂ ವಿರೋಧ ಇದೆ, ಎನ್ನುವುದು ಅನಿವಾರ್ಯ. ತದ್ವದ್ ವಿಶೇಷ್ಯಕತ್ವೇನ ಜ್ಞಾನಗ್ರಾಹಕ ಸಾಮಗ್ರಿಯು

ಅಪ್ರಾಮಾಣ್ಯಗ್ರಾಹಕವಾಗುವ ಸಂಭವ ಇಲ್ಲ. ಆದ್ದರಿಂದ ಆ ವಿಶೇಷಣ ವ್ಯರ್ಥ ಎಂದು ಮೂಲದಲ್ಲಿ ಹೇಳಿರುವುದು ಸರಿಯಾಗಿದೆ.

ಇದಕ್ಕಾಗಿಯೇ ಹಿಂದೆ ಮೂಲದಲ್ಲಿ ಆ ಎರಡೂ ದಲಗಳಿಗೆ ಕೃತ್ಯವನ್ನು ತೋರಿಸಿದ್ದಾರೆ.

## ನರಹರಿಮತ ನಿರಾಸ

**ಯದತ್ರೋಕ್ತಂ ನರಹರಿಣಾ– ಅಪ್ರಾಮಾಣ್ಯಾಗ್ರಾಹಕೇತ್ಯತ್ರ ನಞಿ ವ್ಯತ್ಯಾಸೇನ ಅಪ್ರಾಮಾಣ್ಯಾಭಾವಗ್ರಾಹಿಕೇತ್ಯರ್ಥೇ ಪ್ರಾಮಾಣ್ಯಗ್ರಾಹಿಕಾ ಇತಿ ಪರ್ಯವಸಾನಾತ್ ಪ್ರಾಮಾಣ್ಯಗ್ರಾಹಕ–ಯಾವಜ್ಜ್ಞಾನಗ್ರಾಹಕ ಗ್ರಾಹ್ಯತ್ವಂ ವಿಧಿಕೋಟ್ಯರ್ಥಃ, ಇತಿ ।**

**ತದಪಿ, ಯಾವತೀ ಪ್ರಾಮಾಣ್ಯವಿಷಯಿಕಾ ಸಾಮಗ್ರೀ ತದ್‌ಗ್ರಾಹ್ಯತ್ವಂ ಸ್ವತಸ್ತ್ವಂ ಇತ್ಯುಕ್ತಂ ಸ್ಯಾತ್, ಇತಿ ಗ್ರಂಥಕೃದುಕ್ತ್ಯೈವ ಸಿದ್ಧಸಾಧನಾದಿ ದೋಷೇಣ ನಿರಸ್ತಂ ಭವತಿ ।**

[1]ನರಹರಿ ಎಂಬ ತಾರ್ಕಿಕ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣಕ್ಕೆ ಅರ್ಥಾಂತರವನ್ನು ಮಾಡಿ ಸಾರ್ಥಕ್ಯವನ್ನು ತೋರಿಸಿದ್ದಾನೆ. 'ಅಪ್ರಾಮಾಣ್ಯಅಗ್ರಾಹಕ' ಎಂಬ ಪದದ ಎರಡನೆಯ ನಞ್‌ಗೆ (ಅಕಾರಕ್ಕೆ) ಗ್ರಾಹಕ ಪದದೊಂದಿಗೆ ಅನ್ವಯವಲ್ಲ–'ನ ಗ್ರಾಹಕಃ=ಅಗ್ರಾಹಕಃ' ಎಂದು ಅನ್ವಯವಲ್ಲ, ಅದನ್ನು ಅಪ್ರಾಮಾಣ್ಯ ಎಂಬ ಹಿಂದಿನ ಪದದೊಂದಿಗೆ ಸೇರಿಸಬೇಕು. ಆಗ 'ಅನಪ್ರಾಮಾಣ್ಯ=ಅಪ್ರಾಮಾಣ್ಯಾಭಾವ'ಎಂದು ಅರ್ಥವಾಗುತ್ತದೆ. ಅಪ್ರಾಮಾಣ್ಯಾಭಾವ ಎಂದರೆ ಪ್ರಾಮಾಣ್ಯ. ಅಲ್ಲಿಗೆ 'ಪ್ರಾಮಾಣ್ಯಗ್ರಾಹಕಯಾವತ್–ಜ್ಞಾನಗ್ರಾಹಕ–ಸಾಮಗ್ರೀಗ್ರಾಹ್ಯತ್ವಮ್' ಎಂದು ಸ್ವತಸ್ತ್ವಲಕ್ಷಣದ ಅರ್ಥವಾಗುತ್ತದೆ. ಈ ಅಭಿಪ್ರಾಯವೂ ಮೂಲೋಕ್ತಸಿದ್ಧಸಾಧನತಾ ದೋಷವಿರುವ ಪ್ರಯುಕ್ತ ಸರಿಯಲ್ಲ. ಹೇಗೆಂದರೆ, ಇದರ ಫಲಿತಾರ್ಥ ಪ್ರಾಮಾಣ್ಯಗ್ರಾಹಕವಾದ ಜ್ಞಾನಗ್ರಾಹಕ ಸಾಮಗ್ರಿಯು ಪ್ರಾಮಾಣ್ಯಗ್ರಾಹಕವಾಗಿದೆ, ಎಂದು. ಇದರಲ್ಲಿ ವಿಪ್ರಪತ್ತಿಯೇ ಇಲ್ಲ, ಸಿದ್ಧಸಾಧನತಾ.

---

1. ನರಹರಿ ಮಿಶ್ರ— ಇವನು ಹದಿನೈದನೆಯ ಶತಮಾನದಲ್ಲಿದ್ದ ತಾರ್ಕಿಕ. ಇವನ ತಂದೆ ಯಜ್ಞಪತ್ಯುಪಾಧ್ಯಾಯ. ಗುರು ಪಕ್ಷಧರಮಿಶ್ರ. ಪಕ್ಷಧರ ಮಿಶ್ರನು ತನ್ನ ಮಣಿವ್ಯಾಖ್ಯಾನದಲ್ಲಿ ನರಹರಿಮಿಶ್ರನ ತಂದೆ ಉಪಾಧ್ಯಾಯನ ಮತವನ್ನು ಖಂಡಿಸಿದ್ದಾನೆ. ತನ್ನ ತಂದೆಯ ಅಭಿಪ್ರಾಯವೇ ಸರಿ, ಎಂಬುದನ್ನು ತೋರಿಸಲು ಇವನು ಮಣಿಗ್ರಂಥಕ್ಕೆ ತನ್ನದೇ ವ್ಯಾಖ್ಯಾನವನ್ನು ಬರೆದಿದ್ದಾನೆ. ಅಲ್ಲಿ ಅವನು ಹೇಳಿದ ಮಾತು–

   ಸೂಕ್ತ್ಯಾ ಪಿತೃಚರಣಾನಾಮಧಿಗತ ಸಿದ್ಧಾಂತಾನುಸಾರೇಣ ।
   ಶ್ರೀನರಹರಿಣಾ ಕ್ರಿಯತೇ ತಾತಮತೇ ದೂಷಣೋದ್ಧಾರಃ ॥

## ನ್ಯಾಯದೀಪ

**ನ ಚ ಗ್ರಾಹ್ಯಪದೇನ ಸ್ವಾತಂತ್ರ್ಯೇಣ ಗ್ರಾಹ್ಯಮ್ ಇತ್ಯಭಿಮತತ್ವಾತ್ ಯಾವದಿತಿ–ಉಕ್ತ್ಯೈವ ಸಿದ್ಧಸಾಧನತ್ವದೋಷಾಭಾವಃ ॥ ತಥಾತ್ವೇನ ಅನುವ್ಯವಸಾಯವಿಷಯತ್ವಸ್ಯ ನ್ಯಾಯಮತೇ ಅಭಾವಾತ್, ಇತಿ ವಾಚ್ಯಮ್।**

ಸಿದ್ಧಸಾಧನತಾದೋಷ ಇಲ್ಲ. ಅನುವ್ಯವಸಾಯ ಸಾಮಗ್ರಿಯು ವ್ಯವಸಾಯ ವಿಷಯತಯಾ ಪ್ರಾಮಾಣ್ಯಗ್ರಾಹಕವಾಗಿದೆ. ಆದರಿಂದಾಗಿ ಆ ಸಾಮಗ್ರಿಯು ಸ್ವತಸ್ತ್ವ ಲಕ್ಷಣದಲ್ಲಿ ಗೃಹೀತವಾಗುತ್ತದೆ. ಆದರೆ, ಆ ಸಾಮಗ್ರಿಯು ಸಾಕ್ಷಾತ್ ಪ್ರಾಮಾಣ್ಯವನ್ನು ವಿಷಯೀಕರಿಸುತ್ತಿಲ್ಲ. ಅರ್ಥಾತ್ ಜ್ಞಾನವು ತದ್ವದ್ ವಿಶೇಷ್ಯಕ ಎಂದು ಅದು ತಿಳಿಸುತ್ತದೆ. ಅಂದರೆ, ಜ್ಞಾನವು, ಪುರೋವರ್ತಿಯು ತದ್ವತ್ ಎಂದು ತಿಳಿಸುತ್ತದೆ, ಎಂದು ಅನುವ್ಯವಸಾಯ ದಾಖಲಿಸುತ್ತದೆ. ಆದರೆ, ಬಾಹ್ಯಪದಾರ್ಥವು ತದ್ವತ್ (ಪ್ರಕಾರೀಭೂತಧರ್ಮವತ್) ಆಗಿದೆ ಎಂದು ನೇರವಾಗಿ ಹೇಳುವುದಿಲ್ಲ. ಆದ್ದರಿಂದ ಪ್ರಾಮಾಣ್ಯಕ್ಕೆ ತಾದೃಶಯಾವತ್–ಸಾಮಗ್ರೀ–ಸಾಕ್ಷಾದ್–ಗ್ರಾಹ್ಯತ್ವವನ್ನು ನೈಯಾಯಿಕರು ಅಂಗೀಕರಿಸಿಲ್ಲ. ಸಿದ್ಧಸಾಧನತಾದೋಷವಿಲ್ಲ.

ಇದಕ್ಕೆ ಮೂರು ದೋಷವನ್ನು ನ್ಯಾಯದೀಪದಲ್ಲಿ ಹೇಳಲಾಗಿದೆ. (ಈ ದೋಷಗಳನ್ನು ಶ್ರೀವಿಜಯೀಂದ್ರರು ತಮ್ಮ ವ್ಯಾಖ್ಯಾನದಲ್ಲಿ ಹೇಳಿದ್ದಾರೆ.)

## ನ್ಯಾಯದೀಪ

**ನಞಃ ಅಪ್ರಾಮಾಣ್ಯಾಭಾವಾರ್ಥಕತ್ವೇ ಪೂರ್ವಪದೇನ ಸಮಾಸಾಯೋಗಾತ್। ನಞದ್ವಯವೈಯರ್ಥ್ಯಾತ್, ತತ್ಪದ ವೈಯರ್ಥ್ಯಾಚ್ಚ ಇತಿ ಧ್ಯೇಯಮ್। ತದೇತದಾಹ "ಅಪ್ರಾಮಾಣ್ಯಅಗ್ರಾಹಕತ್ವ ವಿಶೇಷಣವೈಯರ್ಥ್ಯಮಿತಿ" ॥**

1. 'ಅಪ್ರಾಮಾಣ್ಯಾಗ್ರಾಹಕ' ಎಂಬಲ್ಲಿರುವ ನಞಗೆ (ಅಕಾರ) ಉತ್ತರ ಪದದೊಂದಿಗೆ (ಗ್ರಾಹಕ) ಸಮಾಸವಾದಾಗ ಮಾತ್ರ 'ಅಗ್ರಾಹಕ' ಎಂಬ ಪದವು ನಿರ್ದುಷ್ಟವಾಗುತ್ತದೆ. 'ನ+ಗ್ರಾಹಕ=ಅಗ್ರಾಹಕಃ' ಎಂದು ಸಮಾಸ ಮಾಡಿದಾಗ ಉತ್ತರಪದವು ಪರದಲ್ಲಿದ್ದಾಗ (ನಲೋಪೋ ನಞಃ) ನಞನ ನಕಾರಕ್ಕೆ ಲೋಪವಾಗಿ 'ಅ' ಎಂದಾಗುತ್ತದೆ. 'ನ ಅಪ್ರಾಮಾಣ್ಯಂ' ಎಂದು ಪೂರ್ವಪದದೊಂದಿಗೆ ಸಮಾಸಮಾಡಿದರೆ 'ತಸ್ಮಾನ್ನುಡಚಿ' ಎಂಬ ಸೂತ್ರದಿಂದ ನುಟ್ ಬಂದು 'ಅನಪ್ರಾಮಾಣ್ಯಂ' ಎಂದು ರೂಪವಾಗುತ್ತದೆ. ಆದ್ದರಿಂದ ನಞ ವ್ಯತ್ಯಾಸ ಮಾಡಲು ಆಗುವುದಿಲ್ಲ.

2. ಪ್ರಾಮಾಣ್ಯಗ್ರಾಹಕ ಎಂದು ಸಾಕ್ಷಾತ್ತಾಗಿಯೇ ಹೇಳಲು ಬರುವಾಗ 'ಅಪ್ರಾಮಾಣ್ಯ-ಅಗ್ರಾಹಕ' ಎಂದು ಎರಡು ನಿಷೇಧಗಳನ್ನು ಹೇಳುವುದು ವ್ಯರ್ಥ.

3. ಘಟ–ಜ್ಞಾನಾನುವ್ಯವಸಾಯವು ಆ ಜ್ಞಾನಗತ ಪ್ರಾಮಾಣ್ಯವನ್ನು ಗ್ರಹಿಸಬಹುದು. ಹೊರತು, ಜ್ಞಾನಾಂತರಗತವಾದ ಪ್ರಾಮಾಣ್ಯವನ್ನು ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ 'ತದಪ್ರಾಮಾಣ್ಯ' ಎಂಬಲ್ಲಿ 'ತತ್' ಪದ ವ್ಯರ್ಥ. (ಇಲ್ಲಿರುವ ತತ್‌ಪದಕ್ಕೆ ಸಾರ್ಥಕ್ಯವನ್ನು ಹಿಂದೆಯೇ ಹೇಳಲಾಗಿದೆ)

ಹೀಗೆ ಈ ಮೂರುದೋಷಗಳು ಇರುವುದರಿಂದ ನರಹರಿಯ ಅಭಿಪ್ರಾಯವೂ ಯುಕ್ತವಲ್ಲ.

## ಪಕ್ಷಧರ ಮಿಶ್ರೋಕ್ತ ಅಭಿಪ್ರಾಯ

**ननु यया ज्ञानग्राहकसामग्र्या ज्ञानग्रहार्थं यावदपेक्षितम् तावदेव विषयग्रहार्थमप्यपेक्ष्यते सैव सविषय - ज्ञानग्रहकसामग्री विवक्षिता । अनुव्यवसायसामग्री चैवंविधा । तया व्यवसायग्रहेऽपेक्षितस्य व्यवससायसंप्रयोगस्यैव तद्विषयघटग्रहेऽप्यपेक्षितत्वात्। घटज्ञानमिति शब्दस्तु ज्ञानग्रहे ज्ञानपदगतां शक्तिमपेक्षते । घटग्रहे तु घटपदगतां शक्तिमिति ।**

ಹಿಂದಿನ ಬಾಧ ಪರಿಹಾರಕ್ಕಾಗಿ [1]ಮಿಶ್ರರು ಈ ರೀತಿ ಪರಿಷ್ಕಾರ ಮಾಡಿದ್ದಾರೆ— ಯಾವ ಸಾಮಗ್ರಿಯು ಜ್ಞಾನವನ್ನು ಗ್ರಹಿಸಲು ಎಷ್ಟನ್ನು ಅಪೇಕ್ಷಿಸುವುದೋ ಅಷ್ಟನ್ನೇ ವಿಷಯವನ್ನು ಗ್ರಹಿಸಲೂ ಅಪೇಕ್ಷಿಸುತ್ತದೋ ಅಂದರೆ, ಅಧಿಕ ಸಾಮಗ್ರ್ಯಂತರವನ್ನು ಅಪೇಕ್ಷಿಸುವುದಿಲ್ಲವೋ ಅಂತಹ ಯಾವತ್ ಸಾಮಗ್ರೀಗ್ರಾಹ್ಯತ್ವವೇ ಸ್ವತಸ್ತ್ವ. ಅನುವ್ಯವಸಾಯ ಸಾಮಗ್ರಿಯು ಅಂದರೆ ಮನಸ್ಸು, ಆತ್ಮಮನಃ ಸಂಯೋಗ, ಜ್ಞಾನದೊಂದಿಗೆ (ವ್ಯವಸಾಯದೊಂದಿಗೆ) ಸಂಯುಕ್ತಸಮವಾಯಸನ್ನಿಕರ್ಷ ಈ ಸಾಮಗ್ರಿಗಳು ವಿಷಯವಿಶಿಷ್ಟವಾದ ಜ್ಞಾನವನ್ನೇ ಗ್ರಹಿಸುತ್ತವೆ. ಅರ್ಥಾತ್ ''ಘಟ ಜ್ಞಾನವಾನ್ ಅಹಮ್'' ಎಂದೇ ಅನುವ್ಯವಸಾಯವು ಹುಟ್ಟುತ್ತದೆ. ಆ ಸಾಮಗ್ರಿಯಲ್ಲಿ ಜ್ಞಾನಭಾಸಕ ಸಾಮಗ್ರೀ ಬೇರೆ, ವಿಷಯಭಾಸಕ ಸಾಮಗ್ರೀ ಬೇರೆ ಎಂಬ ವ್ಯತ್ಯಾಸವಿಲ್ಲ. ಅಲ್ಲಿ ಜ್ಞಾನಭಾಸಕ ಸಾಮಗ್ರೀ ಬಿಟ್ಟು ಅಧಿಕವಾದ ಬೇರೊಂದು ಸಾಮಗ್ರಿಯು ವಿಷಯಭಾನಕ್ಕೆ ಬೇಕಾಗಿಲ್ಲ.

ಆದರೆ 'ಘಟಜ್ಞಾನಮ್' ಎಂಬ ವಾಕ್ಯದಲ್ಲಿ ಘಟಪದದ ಶಕ್ತಿಯಿಂದಾಗಿ

---

1. **ಪಕ್ಷಧರಮಿಶ್ರ— ಇವನು ಮಿಥಿಲೆಯಲ್ಲಿದ್ದ ಪ್ರಸಿದ್ಧ ತಾರ್ಕಿಕ. ಶ್ರೀವ್ಯಾಸತೀರ್ಥರೂ ಇವನೊಂದಿಗೆ ಶಾಸ್ತ್ರಚರ್ಚೆಯನ್ನು ಮಾಡಿದ್ದರು. ಜಯದೇವ ಮಿಶ್ರ ಎಂದು ಇವನಿಗೆ ಇನ್ನೊಂದು ಹೆಸರು. ತತ್ತ್ವಚಿಂತಾಮಣಿಗೆ ಆಲೋಕ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.**

ತದ್-ವಾಕ್ಯಜನ್ಯವಾದ ಜ್ಞಾನದಲ್ಲಿ ವಿಷಯವು ತೋರುತ್ತದೆ. ಜ್ಞಾನಪದದ ಶಕ್ತಿಯಿಂದಾಗಿ ಜ್ಞಾನವು ತೋರುತ್ತದೆ. ಆದ್ದರಿಂದ ಜ್ಞಾನಭಾಸಕ ಸಾಮಗ್ರೀ ಬೇರೆ, ವಿಷಯಭಾಸಕ ಸಾಮಗ್ರೀ ಬೇರೆ. ಹೀಗಾಗಿ ಅಂತಹ ಸಾಮಗ್ರಿಯ ಸಂಗ್ರಹವಾಗುವುದಿಲ್ಲ. ಅನುವ್ಯವಸಾಯ ಸಾಮಗ್ರೀ ಮಾತ್ರ ಸಂಗ್ರಹವಾಗುತ್ತದೆ. ಅದು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು ಸ್ವತಸ್ತ್ವವಾದಿಗಳು ಹೇಳುತ್ತಾರೆ. ಇದರಿಂದ ಬಾಧವಿಲ್ಲ. ನೈಯಾಯಿಕರು ಆ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ ಎನ್ನುತ್ತಾರೆ-ಸಿದ್ಧಸಾಧನತಾವೂ ಇಲ್ಲ.

## ನ್ಯಾಯದೀಪ

**ಪಕ್ಷಧರೋಕ್ತಮಾಶಂಕ್ಯ ನಿರಾಹ – ನನ್ವತಿ ॥ ಸೈವೇತಿ ॥ ಜ್ಞಾನಗ್ರಾಹಕತ್ವಪ್ರಯುಕ್ತಮೇವ ಯಸ್ಯಾಂ ವಿಷಯಗ್ರಾಹಕತ್ವಂ ಸೈವೇತ್ಯರ್ಥಃ। ವ್ಯವಸಾಯ ಸಂಪ್ರಯೋಗಸ್ಯೇತಿ । ವ್ಯವಸಾಯಸ್ಯ ಮನಸಾ ಸಹ ಸಂಯುಕ್ತ ಸಮವಾಯರೂಪಸಂಬಂಧಸ್ಯೈವೇತ್ಯರ್ಥಃ। ಬಾಹ್ಯಾರ್ಥರೂಪವಿಷಯಗ್ರಹೇ ವ್ಯವಸಾಯರೂಪ-ಪ್ರತ್ಯಾಸತ್ತೇಃ ಅಪೇಕ್ಷಾಯಾ ಇವ ಅನುವ್ಯವಸಾಯಜನನೇಽಪಿ ವಿಷಯತಯಾ ವ್ಯವಸಾಯಾಪೇಕ್ಷಾಯಾಃ ತುಲ್ಯತ್ವಾದಿತಿ ಭಾವಃ ॥ ತತ್ಪದೇನೇತ್ಯುಪ-ಲಕ್ಷಣಮ್ । ತತ್ಪದಾದಿನೇತ್ಯರ್ಥಃ ।**

ಮೂಲದಲ್ಲಿ ವ್ಯವಸಾಯ ಸಂಪ್ರಯೋಗ್ಯಸ್ಯ ಎಂದರೆ, ವ್ಯವಸಾಯಕ್ಕೆ ಮನಸ್ಸಿನೊಂದಿಗೆ ಇರುವ ಸಂಯುಕ್ತ ಸಮವಾಯ ರೂಪವಾದ ಸನ್ನಿಕರ್ಷವು ಇರುವುದರಿಂದ ಎಂದು ಅರ್ಥ.

ಅನುವ್ಯವಸಾಯವು ಜ್ಞಾನದ್ವಾರಾ ಘಟಾದಿ ಬಾಹ್ಯವಸ್ತುಗಳನ್ನು ಗ್ರಹಿಸುತ್ತದೆ. ಹಾಗೆ ಗ್ರಹಿಸಲು ವ್ಯವಸಾಯವು ಜ್ಞಾನಲಕ್ಷಣಾ ಸನ್ನಿಕರ್ಷವಾಗಿ ಸಾಮಗ್ರಿಯಾಗುತ್ತದೆ. ಅದೇ ವ್ಯವಸಾಯವು ವಿಷಯವಿಧಯಾ ಜ್ಞಾನಗ್ರಹಕ್ಕೂ ಕಾರಣವಾಗಿದೆ. ಹೀಗೆ ಜ್ಞಾನಭಾಸಕ ಸಾಮಗ್ರಿಯೇ ವಿಷಯಭಾಸಕವೂ ಆಗಿದೆ.

## ಕೃತ್ಯ ಚಿಂತನೆ

**ಅಸ್ಮಿನ್ ಮತೇ ಚ, ಭ್ರಮ ಇತಿ ಪದಜನ್ಯ-ಜ್ಞಾನೇನ ಪ್ರಾಮಾಣ್ಯಾಗ್ರಹಣಾದ್ ಬಾಧವಾರಾಣಾಯ ಅಪ್ರಾಮಾಣ್ಯಾಗ್ರಾಹಕತ್ವ ವಿಶೇಷಣಂ ಅರ್ಥವತ್ ।**

**ವಿಷಯೋಪರಕ್ತಜ್ಞಾನಗ್ರಾಹಕೇಣ 'ಪ್ರಮಾ' ಇತಿ ಪದಜನ್ಯಜ್ಞಾನೇನ ಪ್ರಾಮಾಣ್ಯಗ್ರಹಣಾದ್ ಸಿದ್ಧಸಾಧನತಾವಾರಣಾಯ ಯಾವದಿತಿ**

3. ಘಟ–ಜ್ಞಾನಾನುವ್ಯವಸಾಯವು ಆ ಜ್ಞಾನಗತ ಪ್ರಾಮಾಣ್ಯವನ್ನು ಗ್ರಹಿಸಬಹುದು. ಹೊರತು, ಜ್ಞಾನಾಂತರಗತವಾದ ಪ್ರಾಮಾಣ್ಯವನ್ನು ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ 'ತದಪ್ರಾಮಾಣ್ಯ' ಎಂಬಲ್ಲಿ 'ತತ್' ಪದ ವ್ಯರ್ಥ. (ಇಲ್ಲಿರುವ ತತ್‌ಪದಕ್ಕೆ ಸಾರ್ಥಕ್ಯವನ್ನು ಹಿಂದೆಯೇ ಹೇಳಲಾಗಿದೆ)

ಹೀಗೆ ಈ ಮೂರುದೋಷಗಳು ಇರುವುದರಿಂದ ನರಹರಿಯ ಅಭಿಪ್ರಾಯವೂ ಯುಕ್ತವಲ್ಲ.

## ಪಕ್ಷಧರ ಮಿಶ್ರೋಕ್ತ ಅಭಿಪ್ರಾಯ

**ननु यया ज्ञानग्राहकसामग्र्या ज्ञानग्रहार्थं यावदपेक्षितम् तावदेव विषयग्रहार्थमप्यपेक्ष्यते सैव सविषय - ज्ञानग्रहकसामग्री विवक्षिता । अनुव्यवसायसामग्री चैवंविधा । तया व्यवसायग्रहेऽपेक्षितस्य व्यवससायसंप्रयोगस्यैव तद्विषयघटग्रहेऽप्यपेक्षितत्वात्। घटज्ञानमिति शब्दस्तु ज्ञानग्रहे ज्ञानपदगतां शक्तिमपेक्षते । घटग्रहे तु घटपदगतां शक्तिमिति ।**

ಹಿಂದಿನ ಬಾಧ ಪರಿಹಾರಕ್ಕಾಗಿ [1]ಮಿಶ್ರರು ಈ ರೀತಿ ಪರಿಷ್ಕಾರ ಮಾಡಿದ್ದಾರೆ— ಯಾವ ಸಾಮಗ್ರಿಯು ಜ್ಞಾನವನ್ನು ಗ್ರಹಿಸಲು ಎಷ್ಟನ್ನು ಅಪೇಕ್ಷಿಸುವುದೋ ಅಷ್ಟನ್ನೇ ವಿಷಯವನ್ನು ಗ್ರಹಿಸಲೂ ಅಪೇಕ್ಷಿಸುತ್ತದೋ ಅಂದರೆ, ಅಧಿಕ ಸಾಮಗ್ರ್ಯಂತರವನ್ನು ಅಪೇಕ್ಷಿಸುವುದಿಲ್ಲವೋ ಅಂತಹ ಯಾವತ್ ಸಾಮಗ್ರೀಗ್ರಾಹ್ಯತ್ವವೇ ಸ್ವತಸ್ತ್ವ. ಅನುವ್ಯವಸಾಯ ಸಾಮಗ್ರಿಯು ಅಂದರೆ ಮನಸ್ಸು, ಆತ್ಮಮನಃ ಸಂಯೋಗ, ಜ್ಞಾನದೊಂದಿಗೆ (ವ್ಯವಸಾಯದೊಂದಿಗೆ) ಸಂಯುಕ್ತಸಮವಾಯಸನ್ನಿಕರ್ಷ ಈ ಸಾಮಗ್ರಿಗಳು ವಿಷಯವಿಶಿಷ್ಟವಾದ ಜ್ಞಾನವನ್ನೇ ಗ್ರಹಿಸುತ್ತವೆ. ಅರ್ಥಾತ್ ''ಘಟ ಜ್ಞಾನವಾನ್ ಅಹಮ್'' ಎಂದೇ ಅನುವ್ಯವಸಾಯವು ಹುಟ್ಟುತ್ತದೆ. ಆ ಸಾಮಗ್ರಿಯಲ್ಲಿ ಜ್ಞಾನಭಾಸಕ ಸಾಮಗ್ರೀ ಬೇರೆ, ವಿಷಯಭಾಸಕ ಸಾಮಗ್ರೀ ಬೇರೆ ಎಂಬ ವ್ಯತ್ಯಾಸವಿಲ್ಲ. ಅಲ್ಲಿ ಜ್ಞಾನಭಾಸಕ ಸಾಮಗ್ರೀ ಬಿಟ್ಟು ಅಧಿಕವಾದ ಬೇರೊಂದು ಸಾಮಗ್ರಿಯು ವಿಷಯಭಾನಕ್ಕೆ ಬೇಕಾಗಿಲ್ಲ.

ಆದರೆ 'ಘಟಜ್ಞಾನಮ್' ಎಂಬ ವಾಕ್ಯದಲ್ಲಿ ಘಟಪದದ ಶಕ್ತಿಯಿಂದಾಗಿ

---

1. **ಪಕ್ಷಧರಮಿಶ್ರ— ಇವನು ಮಿಥಿಲೆಯಲ್ಲಿದ್ದ ಪ್ರಸಿದ್ಧ ತಾರ್ಕಿಕ. ಶ್ರೀವ್ಯಾಸತೀರ್ಥರೂ ಇವನೊಂದಿಗೆ ಶಾಸ್ತ್ರಚರ್ಚೆಯನ್ನು ಮಾಡಿದ್ದರು. ಜಯದೇವ ಮಿಶ್ರ ಎಂದು ಇವನಿಗೆ ಇನ್ನೊಂದು ಹೆಸರು. ತತ್ತ್ವಚಿಂತಾಮಣಿಗೆ ಆಲೋಕ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.**

ತದ್–ವಾಕ್ಯಜನ್ಯವಾದ ಜ್ಞಾನದಲ್ಲಿ ವಿಷಯವು ತೋರುತ್ತದೆ. ಜ್ಞಾನಪದದ ಶಕ್ತಿಯಿಂದಾಗಿ ಜ್ಞಾನವು ತೋರುತ್ತದೆ. ಆದ್ದರಿಂದ ಜ್ಞಾನಭಾಸಕ ಸಾಮಗ್ರೀ ಬೇರೆ, ವಿಷಯಭಾಸಕ ಸಾಮಗ್ರೀ ಬೇರೆ. ಹೀಗಾಗಿ ಅಂತಹ ಸಾಮಗ್ರಿಯ ಸಂಗ್ರಹವಾಗುವುದಿಲ್ಲ. ಅನುವ್ಯವಸಾಯ ಸಾಮಗ್ರೀ ಮಾತ್ರ ಸಂಗ್ರಹವಾಗುತ್ತದೆ. ಅದು ಪ್ರಾಮಾಣ್ಯವನ್ನು ಗ್ರಹಿಸುತ್ತಗೆ, ಎಂದು ಸ್ವತಸ್ತ್ವವಾದಿಗಳು ಹೇಳುತ್ತಾರೆ. ಇದರಿಂದ ಬಾಧವಿಲ್ಲ. ನೈಯಾಯಿಕರು ಆ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ, ಎನ್ನುತ್ತಾರೆ–ಸಿದ್ಧಸಾಧನತಾವೂ ಇಲ್ಲ.

## ನ್ಯಾಯದೀಪ

**ಪಕ್ಷಧರೋಕ್ತಮಾಶಂಕ್ಯ ನಿರಾಹ – ನನ್ವಿತಿ ॥ ಸೈವೇತಿ ॥ ಜ್ಞಾನಗ್ರಾಹಕತ್ವಪ್ರಯುಕ್ತಮೇವ ಯಸ್ಯಾಂ ವಿಷಯಗ್ರಾಹಕತ್ವಂ ಸೈವೇತ್ಯರ್ಥಃ। ವ್ಯವಸಾಯ ಸಂಪ್ರಯೋಗಸ್ಯೇತಿ । ವ್ಯವಸಾಯಸ್ಯ ಮನಸಾ ಸಹ ಸಂಯುಕ್ತ ಸಮವಾಯರೂಪಸಂಬಂಧಸ್ಯೈವೇತ್ಯರ್ಥಃ। ಬಾಹ್ಯಾರ್ಥರೂಪವಿಷಯಗ್ರಹೇ ವ್ಯವಸಾಯರೂಪ–ಪ್ರತ್ಯಾಸತ್ತೇಃ ಅಪೇಕ್ಷಾಯಾ ಇವ ಅನುವ್ಯವಸಾಯಜನನೇಽಪಿ ವಿಷಯತಯಾ ವ್ಯವಸಾಯಾಪೇಕ್ಷಾಯಾಃ ತುಲ್ಯತ್ವಾದಿತಿ ಭಾವಃ ॥ ತತ್ಪದೇನೇತ್ಯುಪ-ಲಕ್ಷಣಮ್ । ತತ್ಪದಾದಿನೇತ್ಯರ್ಥಃ ।**

ಮೂಲದಲ್ಲಿ ವ್ಯವಸಾಯ ಸಂಪ್ರಯೋಗ್ಯಸ್ಯ ಎಂದರೆ, ವ್ಯವಸಾಯಕ್ಕೆ ಮನಸ್ಸಿನೊಂದಿಗೆ ಇರುವ ಸಂಯುಕ್ತ ಸಮವಾಯ ರೂಪವಾದ ಸನ್ನಿಕರ್ಷವು ಇರುವುದರಿಂದ ಎಂದು ಅರ್ಥ.

ಅನುವ್ಯವಸಾಯವು ಜ್ಞಾನದ್ವಾರಾ ಘಟಾದಿ ಬಾಹ್ಯವಸ್ತುಗಳನ್ನು ಗ್ರಹಿಸುತ್ತದೆ. ಹಾಗೆ ಗ್ರಹಿಸಲು ವ್ಯವಸಾಯವು ಜ್ಞಾನಲಕ್ಷಣಾ ಸನ್ನಿಕರ್ಷವಾಗಿ ಸಾಮಗ್ರಿಯಾಗುತ್ತದೆ. ಅದೇ ವ್ಯವಸಾಯವು ವಿಷಯವಿಧಯಾ ಜ್ಞಾನಗ್ರಹಕ್ಕೂ ಕಾರಣವಾಗಿದೆ. ಹೀಗೆ ಜ್ಞಾನಭಾಸಕ ಸಾಮಗ್ರಿಯೇ ವಿಷಯಭಾಸಕವೂ ಆಗಿದೆ.

## ಕೃತ್ಯ ಚಿಂತನೆ

**ಅಸ್ಮಿನ್ ಮತೇ ಚ, ಭ್ರಮ ಇತಿ ಪದಜನ್ಯ–ಜ್ಞಾನೇನ ಪ್ರಾಮಾಣ್ಯಾಗ್ರಹಣಾದ್ ಬಾಧವಾರಣಾಯ ಅಪ್ರಾಮಾಣ್ಯಾಗ್ರಾಹಕತ್ವ ವಿಶೇಷಣಂ ಅರ್ಥವತ್ ।**

**ವಿಷಯೋಪರಕ್ತಜ್ಞಾನಗ್ರಾಹಕೇಣ 'ಪ್ರಮಾ' ಇತಿ ಪದಜನ್ಯಜ್ಞಾನೇನ ಪ್ರಾಮಾಣ್ಯಗ್ರಹಣಾದ್ ಸಿದ್ಧಸಾಧನತಾವಾರಣಾಯ ಯಾವದಿತಿ**

**ವಿಶೇಷಣಮ್ ॥ ಬಾಧಃ ಸಿದ್ಧಸಾಧನತಾ ಚ ನೇತಿ ಕ್ರಮೇಣ ವ್ಯನಕ್ತಿ– ಅನುವ್ಯವಸಾಯಸಾಮಗ್ರೀತಿ ॥ ಷಷ್ಠೀತತ್ಪುರುಷಃ। ಆತ್ಮಮನಃ ಸಂಯೋಗಾದಿರಿತ್ಯರ್ಥಃ। ಸ್ವಪ್ರಕಾಶವ್ಯವಸಾಯಸಾಮಗ್ರ್ಯಪಿ ಗ್ರಾಹ್ಯಾ।**

ಸ್ವತಸ್ತ್ವ ಪರಿಷ್ಕಾರದಲ್ಲಿ 'ತದಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣಕ್ಕೆ ''ಅಪ್ರಾಮಾಣ್ಯ ಗ್ರಾಹಕದೋಷಶಂಕಾ'' ಸಹಿತವಾದ ಜ್ಞಾನಸಾಮಗ್ರೀವಾರಣೆಯು ಫಲ, ಎಂದು ಹಿಂದೆ ಸಾರ್ಥಕ್ಯವನ್ನು ಹೇಳಲಾಗಿತ್ತು. ಆದರೆ,. ಈಗ ಆ ಕೃತ್ಯ ಹೇಳಲು ಬರುವುದಿಲ್ಲ. ನ್ಯಾಯಮತದಲ್ಲಿ ಅಪ್ರಾಮಾಣ್ಯವು ಅನುಮಾನಗ್ರಾಹ್ಯ– ''ಇದಂ ಘಟಜ್ಞಾನಂ ಅಪ್ರಮಾಣಂ, ವಿಸಂವಾದಿ ವ್ಯವಹಾರಜನಕತ್ವಾತ್'' ಎಂದು ಅನುಮಾನ. ಈ ಅನುಮಿತಿಯಲ್ಲಿ ಜ್ಞಾನವು ಧರ್ಮಿ, ಘಟವು ಧರ್ಮಿತಾವಚ್ಛೇದಕ. ಜ್ಞಾನಭಾನಕ್ಕೆ ಧರ್ಮಿತ್ವವು ಪ್ರಯೋಜಕ, ವಿಷಯಭಾನಕ್ಕೆ ಧರ್ಮಿತಾವಚ್ಛೇದಕತ್ವವು ಪ್ರಯೋಜಕ. ಹೀಗೆ ಅನುಮಿತಿ ಸಾಮಗ್ರಿಯಲ್ಲಿ ಜ್ಞಾನಭಾಸಕ ಸಾಮಗ್ರಿ ಮತ್ತು ವಿಷಯಭಾಸಕ ಸಾಮಗ್ರಿಗಳಿಗೆ ಭೇದವಿದೆ. ಆದ್ದರಿಂದ ಆ ಸಾಮಗ್ರಿಯು ಸಂಗ್ರಹ ವಾಗುವುದಿಲ್ಲ. ಅಲ್ಲಿ ಬಾಧವಾರಣೆಯು ಪ್ರಯೋಜನ ಎಂದು ಹೇಳಲು ಬರುವುದಿಲ್ಲ. ಅದಕ್ಕಾಗಿ ಆ ವಿಶೇಷಣಕ್ಕೆ ಸಾರ್ಥಕ್ಯವನ್ನು ಬೇರೆ ರೀತಿಯಾಗಿ ತೋರಿಸಲಾಗಿದೆ–

'ಭ್ರಮಃ' ಎಂಬ ಪದಕ್ಕೆ 'ತದಭಾವವತಿ ತತ್ಪ್ರಕಾರಕಂ ಜ್ಞಾನಂ' ಎಂದು ಅರ್ಥ. ಇಲ್ಲಿ 'ಭ್ರಮ' ಎಂಬ ಒಂದೇ ಪದದ ಶಕ್ತಿಯಿಂದ ಜ್ಞಾನ ಮತ್ತು ವಿಷಯ ಇವೆರಡರ ಜ್ಞಾನವೂ ಬರುತ್ತದೆ. ಹೀಗಾಗಿ ಇಲ್ಲಿ ಜ್ಞಾನಭಾಸಕ ಸಾಮಗ್ರಿಯೇ ವಿಷಯಭಾಸಕ. ಆದರೆ ಅಂತಹ ಸಾಮಗ್ರೀ ಜನ್ಯಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಬಾಧ ಬರುತ್ತದೆ. ಅದರ ಪರಿಹಾರಕ್ಕಾಗಿ ಸಾಮಗ್ರಿಯಲ್ಲಿ 'ತದಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣ ಸಾರ್ಥಕ.

ಇದೇ ರೀತಿ 'ಪ್ರಮಾ' ಎಂಬ ಒಂದೇ ಪದಶಕ್ತಿಯಿಂದ ಜ್ಞಾನ ಮತ್ತು ವಿಷಯಭಾಸವಾಗುತ್ತದೆ. ತತ್–ಪದ ಜನ್ಯ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವೆಂದು ತಾರ್ಕಿಕರಿಗೆ ಸಿದ್ಧ. ಸಿದ್ಧಸಾಧನತಾ ಪರಿಹಾರಕ್ಕಾಗಿ ಯಾವತ್ ಪದವನ್ನು ಜ್ಞಾನಗ್ರಾಹಕ ಸಾಮಗ್ರಿಗೆ ಕೊಡಬೇಕು. ಆಗ ಅನುವ್ಯವಸಾಯ ಸಾಮಗ್ರೀ ಗ್ರಾಹ್ಯತ್ವವನ್ನು ನೈಯಾಯಿಕರು ಒಪ್ಪಿಲ್ಲವಾದ ಕಾರಣ ಸಿದ್ಧಸಾಧನತಾದೋಷ ಇಲ್ಲ.

## ಮಿಶ್ರೋಕ್ತ ಲಕ್ಷಣ ನಿರಾಸ

**इति चेन्न । तथाप्येकयैव शक्त्या प्रकरणप्राप्तघटज्ञानपरामर्शकेन तत्पदेन जनितज्ञानस्य प्रामाण्याविषयकत्वेन बाधतादवस्थ्यात् ।**

ಮಿಶ್ರರು ಮಾಡಿರುವ ಈ ಪರಿಷ್ಕಾರವೂ ಸರಿಯಲ್ಲ— ''ಅಯಂ ಘಟಃ'' ಇತಿ ಜ್ಞಾನಂ

ಚಕ್ಷುಃ ಸನ್ನಿಕರ್ಷೇಣ ಜಾಯತೇ। ತಚ್ಚ ಆತ್ಮಗುಣಃ। ಈ ವಾಕ್ಯದಲ್ಲಿರುವ ತತ್ ಎಂಬ ಶಬ್ದವು ಪೂರ್ವಪ್ರಕೃತವಾದ ಘಟಜ್ಞಾನವಾಚಕ. ಒಂದೇ ಪದದ ಶಕ್ತಿಯಿಂದ ಆ ವಾಕ್ಯಜನ್ಯ ಶಾಬ್ದಬೋಧದಲ್ಲಿ ಜ್ಞಾನವೂ ಅದರ ವಿಷಯವಾದ ಘಟವೂ ತಿಳಿಯುತ್ತದೆ. ಹೀಗಾಗಿ ಆ ಸಾಮಗ್ರಿಯು ಜ್ಞಾನಭಾಸಕವೂ ಆಗಿದೆ, ವಿಷಯಭಾಸಕವೂ ಆಗಿದೆ. ಆದರೆ ತಜ್ಜನ್ಯಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲ. ಆದ್ದರಿಂದ ಬಾಧ.

## ನ್ಯಾಯದೀಪ

**ಯದತ್ರ ಮಣಿಸಾರಾದೌ ಉಕ್ತಮ್-ಅಸರ್ವನಾಮತ್ವೇನ ಗ್ರಾಹಕ ವಿಶೇಷಣಾತ್ ನ ದೋಷಃ ಇತಿ ತನ್ನ। ತದಾಪಿ ಲಕ್ಷಣಯಾ ಘಟ-ಜ್ಞಾನೋಪಸ್ಥಾಪಕೇನ ಲಾಕ್ಷಣಿಕ-ಜ್ಞಾನ-ಪದೇನ ಪ್ರಾಮಾಣ್ಯಾ ಗ್ರಹಣಾದ್ ಬಾಧಃ।**

ಮಣಿಸಾರ ಎಂಬ ಗೋಪೀನಾಥ ಠಕ್ಕುರ-ವಿರಚಿತ ತತ್ತ್ವಚಿಂತಾಮಣಿಯ ವ್ಯಾಖ್ಯಾನದಲ್ಲಿ ಹಿಂದೆ ಹೇಳಿದ ಬಾಧವನ್ನು ಹೀಗೆ ಪರಿಹರಿಸಲಾಗಿದೆ-ಸ್ವತಸ್ತ್ವ ಪರಿಷ್ಕಾರದಲ್ಲಿರುವ ಜ್ಞಾನಗ್ರಾಹಕ ಸಾಮಗ್ರಿಯಲ್ಲಿ 'ಅಸರ್ವನಾಮ' ಎಂದು ವಿಶೇಷಣವನ್ನು ಕೊಡಬೇಕು. ಜ್ಞಾನಗ್ರಾಹಕ ಸಾಮಗ್ರಿಯು ಸರ್ವನಾಮಕ್ಕಿಂತ ಭಿನ್ನವಾಗಿರಬೇಕು. ತತ್ ಶಬ್ದವು ಸರ್ವನಾಮಪದವಾದುದರಿಂದ ಅದು ಪ್ರಕೃತ ಜ್ಞಾನಗ್ರಾಹಕಸಾಮಗ್ರಿಯಲ್ಲಿ ಸೇರುವುದಿಲ್ಲ. ಆದ್ದರಿಂದ ಬಾಧ ಇಲ್ಲ.

ಆದರೂ ಬಾಧ ಇದ್ದಿದ್ದೆ- 'ಘಟ-ಚಕ್ಷುಃಸನ್ನಿಕರ್ಷೇಣ ಜ್ಞಾನಮ್ ಉತ್ಪದ್ಯತೇ'' ಈ ವಾಕ್ಯದಲ್ಲಿ ಜ್ಞಾನಪದಕ್ಕೆ ಲಕ್ಷಣಯಾ 'ಘಟಜ್ಞಾನ' ಎಂದು ಅರ್ಥ. ಇಲ್ಲಿ ಜ್ಞಾನ ಎಂಬ ಒಂದೇ ಪದವು ಲಕ್ಷಣಯಾ ಘಟ ಮತ್ತು ಜ್ಞಾನ ಉಭಯವಿಷಯಕಶಾಬ್ದಬೋಧಜನಕ. ಇಲ್ಲಿ ಜ್ಞಾನಭಾಸಕ ಸಾಮಗ್ರಿಯೇ ವಿಷಯಭಾಸಕವಾಗಿದೆ. ಆದರೆ ಅದರಿಂದ ಪ್ರಾಮಾಣ್ಯವು ಗ್ರಾಹ್ಯವಾಗಿಲ್ಲ, ಬಾಧ.

## ನ್ಯಾಯದೀಪ

**ಅಲಾಕ್ಷಣಿಕತ್ವೇನಾಪಿ ವಿಶೇಷಣೇ ''ಘಟಜ್ಞಾನೇ ಜ್ಞಾನಪದಂ ಶಕ್ತಮ್'' ಇತಿ ಭ್ರಮೇ ಸತಿ ತಾದೃಶೇನ ಜ್ಞಾನಪದೇನಾಪಿ ಪ್ರಾಮಾಣ್ಯಾಗ್ರಹಣಾದ್ ಬಾಧ ಏವ।**

ಈ ಬಾಧವನ್ನು ಪರಿಹಾರ ಮಾಡುವುದಕ್ಕಾಗಿ ಸಾಮಗ್ರಿಯಲ್ಲಿ ಲಾಕ್ಷಣಿಕ ಪದ ಭಿನ್ನ ಎಂಬ ವಿಶೇಷಣವನ್ನು ಕೊಟ್ಟರೂ ಮತ್ತೆ ಬಾಧ ಇದ್ದಿದ್ದೆ. ಒಬ್ಬನಿಗೆ ''ಜ್ಞಾನಪದಂ ಘಟಜ್ಞಾನೇ ಶಕ್ತಮ್'' ಎಂಬ ಭ್ರಮೆ ಇದೆ. ಅಂತಹವನಿಗೆ 'ಜ್ಞಾನಂ ಗುಣಃ' ಎಂಬ ವಾಕ್ಯದಿಂದ 'ಘಟಜ್ಞಾನಂ ಗುಣಃ'

ಎಂಬ ಶಾಬ್ದಬೋಧ ಬರುತ್ತದೆ. ಈ ಶಾಬ್ದಬೋಧ ಸಾಮಗ್ರಿಯಲ್ಲಿ ಸೇರಿದ 'ಜ್ಞಾನ ಪದವು' ಲಾಕ್ಷಣಿಕವಲ್ಲ. ಅದು ಜ್ಞಾನ ಮತ್ತು ವಿಷಯ ಎರಡಕ್ಕೂ ಭಾಸಕವಾಗಿದೆ. ಆದರೆ ಪ್ರಾಮಾಣ್ಯ ಭಾಸಕವಲ್ಲ. ಆದ್ದರಿಂದ ಬಾಧ.

## ನ್ಯಾಯದೀಪ

**ಭ್ರಮಾಘಟಿತತ್ವೇನಾಪಿ ವಿಶೇಷಣೇ ತು ಅಪ್ರಾಮಾಣ್ಯಾಗ್ರಾಹಕೇತಿ ಪದ ವೈಯರ್ಥ್ಯಮ್ । ಪ್ರಮಾಯಾಂ ಅಪ್ರಾಮಾಣ್ಯಾನುಮಾನಸ್ಯ ವ್ಯಾಪ್ತಿ ಪಕ್ಷಧರ್ಮತಾ–ನ್ಯತರಭ್ರಮಮೂಲತ್ವಾದೇವ ತತ್ರ ಬಾಧವಾರಣಾತ್ ॥**

'ಸಾಮಗ್ರಿಯು ಭ್ರಮಘಟಿತವಾಗಿರಬಾರದು' ಎಂಬ ನಿಬಂಧನೆಯನ್ನು ಮಾಡಿ ಹಿಂದಿನ ಬಾಧವನ್ನು ಪರಿಹರಿಸಬಹುದು. ಹಿಂದೆ ಹೇಳಿದ ಸಾಮಗ್ರಿಯು 'ಶಕ್ತಿಭ್ರಮ' ಘಟಿತವಾಗಿದೆ. ಆದ್ದರಿಂದ ಬಾಧ ಇಲ್ಲ.

ಹೀಗೆ ಹೇಳಿದರೆ ಅಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣ ವ್ಯರ್ಥ. ಗ್ರಾಹ್ಯ-ಪ್ರಾಮಾಣ್ಯಾಶ್ರಯ ಜ್ಞಾನದಲ್ಲಿ 'ಅಪ್ರಮಾಣ' ಎಂದು ಅನುಮಿತಿ ಬಂದಾಗ ಆ ಅನುಮಿತಿ ಸಾಮಗ್ರಿಯ ವಾರಣೆಗಾಗಿ ಅಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣಕ್ಕೆ ಹಿಂದೆ ಸಾರ್ಥಕ್ಯವನ್ನು ಹೇಳಲಾಗಿತ್ತು. ಆದರೆ, ಆ ಅನುಮಿತಿಯು ಭ್ರಮಾತ್ಮಕವಾದುದರಿಂದ ಅದಕ್ಕೆ ಜನಕವಾದ ವ್ಯಾಪ್ತಿಜ್ಞಾನ ಅಥವಾ ಪಕ್ಷಧರ್ಮತಾಜ್ಞಾನ ಇವೆರಡರಲ್ಲಿ ಒಂದು ಭ್ರಮೆ ಆಗಿರಲೇಬೇಕು. ಏಕೆಂದರೆ, ಪ್ರಮಾತ್ಮಕ ಪರಾಮರ್ಶದಿಂದ ಎಂದೂ ಭ್ರಮಾತ್ಮಕವಾದ ಅನುಮಿತಿಯು ಹುಟ್ಟುವುದಿಲ್ಲ. ಹೀಗೆ ಆ ಜ್ಞಾನಗ್ರಾಹಕ ಸಾಮಗ್ರಿಯು ಭ್ರಮಘಟಿತವಾದುದರಿಂದಲೇ ಅದರ ವಾರಣೆಯಾಗುತ್ತದೆ. ಅದನ್ನು ವಾರಣೆ ಮಾಡುವುದಕ್ಕಾಗಿ ಅಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣದ ಅಗತ್ಯವಿಲ್ಲ. ಅದು ವ್ಯರ್ಥವಾಗುತ್ತದೆ.

## ನರಹರಿ ಮಿಶ್ರರು ಹೇಳಿದ ಸಮಾಧಾನ ಅಯುಕ್ತ

**ಯತ್ತು, 'ಇದಂ ಜ್ಞಾನಮ್ ಅಪ್ರಮಾಣಮ್' ಇತಿ ಮನಸಾ ಅಪ್ರಾಮಾಣ್ಯಾರೋಪಸ್ಥಲೇ ಅನ್ಯತ್ರಗೃಹೀತಾಪ್ರಾಮಾಣ್ಯ–ಸ್ಮೃತಿಸಂಭವೇನ ತಯಾ ಭ್ರಮಾಘಟಿತಯಾಪಿ ಸಾಮಗ್ರ್ಯಾ ಪ್ರಾಮಾಣ್ಯಾಗ್ರಹಾದ್ ಬಾಧವಾರಣಾಯ ಅಪ್ರಾಮಾಣ್ಯಾಗ್ರಾಹಕೇತಿ ವಿಶೇಷಣಂ ಸಾರ್ಥಕಮ್ ಇತಿ ॥**

ಅಪ್ರಾಮಾಣ್ಯಾಗ್ರಾಹಕ ಪದಕ್ಕೆ ಹೀಗೆ ಸಾರ್ಥಕ್ಯವನ್ನು ಹೇಳಬಹುದು. ಜ್ಞಾನದಲ್ಲಿ

ಅಪ್ರಾಮಾಣ್ಯದ ಭ್ರಮೆ ಅನುಮಿತಿಯಿಂದಲೇ ಬರಬೇಕೆಂದೇನಿಲ್ಲ. ಮನಸ್ಸಿನಿಂದಲೂ ಬರಬಹುದು. ಹೇಗೆಂದರೆ, ಮನಸ್ಸಿನಿಂದ ಘಟ ಜ್ಞಾನದ ಅನುವ್ಯವಸಾಯ ಬಂದ ಮೇಲೆ ಇಚ್ಛಾ ಅಥವಾ ಜ್ಞಾನಾಂತರಗತವಾದ ಅಪ್ರಾಮಾಣ್ಯದ ಸ್ಮೃತಿ ಬಂದು ತದುತ್ತರ ಕ್ಷಣದಲ್ಲಿ 'ಇದಂ ಜ್ಞಾನಂ ಅಪ್ರಮಾಣಂ' ಎಂಬ ಭ್ರಮೆ ಬಂತು. ಇಲ್ಲಿ ಭ್ರಮೆಯ ಸಾಮಗ್ರಿಯು ಭ್ರಮಾಘಟಿತವಾಗಿದೆ. ಆದ್ದರಿಂದ ಅದು ವಿವಕ್ಷಿತ ಸಾಮಗ್ರೀ ಪದದಿಂದ ಸಂಗ್ರಹೀತವಾಗಿದೆ. ಆದರೆ ತಜ್ಜನ್ಯವಾದ 'ಘಟಜ್ಞಾನಮ್ ಅಪ್ರಮಾಣಮ್' ಎಂಬ ಭ್ರಮೆಯಲ್ಲಿ ಪ್ರಾಮಾಣ್ಯವು ವಿಷಯವಲ್ಲ, ಬಾಧ ಬಂತು. ಅದರ ಪರಿಹಾರಕ್ಕಾಗಿ 'ಅಪ್ರಾಮಾಣ್ಯಾಗ್ರಾಹಕ' ಎಂಬ ವಿಶೇಷಣವು ಸಾರ್ಥಕ.

**ತನ್ನ । ತತ್ರ ಜ್ಞಾನಗ್ರಾಹಕತ್ವ ಪ್ರಯುಕ್ತ-ವಿಷಯಗ್ರಾಹಕತ್ವರೂಪಸವಿಷಯ ಜ್ಞಾನಗ್ರಾಹಕತ್ವಸ್ಯ ಅಭಾವಾದೇವ ಬಾಧವಾರಣಾತ್ । ವಿಸ್ತರಸ್ತು ಗುರುಟೀಕಾಯಾಮ್ ।**

ಇದು ಸರಿಯಲ್ಲ—ಆ ಭ್ರಮಸಾಮಗ್ರಿಯಲ್ಲಿ ಜ್ಞಾನಗ್ರಾಹಕ ಸಾಮಗ್ರೀ ಮತ್ತು ವಿಷಯಗ್ರಾಹಕ ಸಾಮಗ್ರೀ ಒಂದೇ ಅಲ್ಲ. ಜ್ಞಾನ ಗ್ರಾಹಕ ಸಾಮಗ್ರೀ ಅನುವ್ಯವಸಾಯ ಸಾಮಗ್ರೀ. ಅದು ಜ್ಞಾನಕ್ಕೆ ಮಾತ್ರಗ್ರಾಹಕ, ವಿಷಯಗ್ರಾಹಕವಲ್ಲ. ಆದ್ದರಿಂದ ''ಜ್ಞಾನ ಗ್ರಾಹಕತಾ ಪ್ರಯುಕ್ತವಾಗಿ ಯಾವ ಸಾಮಗ್ರಿಯು ವಿಷಯಗ್ರಾಹಕವಾಗಿದೆಯೋ (ತದ್ ಗ್ರಾಹ್ಯತ್ವಂ)'' ಎಂಬ ಅಂಶ ಅರ್ಥಾತ್ ಸವಿಷಯಜ್ಞಾನಗ್ರಾಹಕತ್ವ ಆ ಸಾಮಗ್ರಿಯಲ್ಲಿ ಇಲ್ಲದಿರುವುದರಿಂದಲೇ ಅದರ ವಾರಣೆಯಾಗುತ್ತದೆ. ಅದಕ್ಕಾಗಿ, ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣದ ಆಗತ್ಯವಿಲ್ಲ.

## ಪ್ರಯುಕ್ತತ್ವ ವಿವಕ್ಷೆಯ ಆವಶ್ಯಕತೆ

ನ್ಯಾಯದೀಪದಲ್ಲಿ 'ಜ್ಞಾನಗ್ರಾಹಕತ್ವ ಪ್ರಯುಕ್ತ' ಎಂಬ ಹೊಸ ಅಂಶ ಸೇರಿದೆ. ಅದನ್ನು ಮಿಶ್ರರೇ ಸೇರಿಸಿದ್ದಾರೆ—

ಮಿಶ್ರೋಕ್ತ ಪರಿಷ್ಕಾರದಲ್ಲಿ ಜ್ಞಾನಜ್ಞಾನಕ್ಕೂ ವಿಷಯಜ್ಞಾನಕ್ಕೂ ಪ್ರಯೋಜಕವಾದ ಸಾಮಗ್ರಿಯು ಒಂದೇ ಆಗಿರಬೇಕೆಂದು ನಿಬಂಧನೆ ಇದೆ. ''ಘಟಜ್ಞಾನಮ್'' ಎಂಬ ವಾಕ್ಯದಿಂದ ಶಾಬ್ದಬೋಧ ಬಂದಾಗ ಅದರಲ್ಲಿ ಜ್ಞಾನವು ಭಾನವಾಗಲು ಜ್ಞಾನಪದಜ್ಞಾನ ಕಾರಣ, ವಿಷಯಭಾನಕ್ಕೆ ಘಟಪದ ಜ್ಞಾನ ಕಾರಣ. ಎರಡರ ಭಾನವೂ ಏಕ-ಪ್ರಯೋಜಕ-ಪ್ರಯೋಜ್ಯ ಅಲ್ಲ. ಆದ್ದರಿಂದ ಅದು ಸಂಗ್ರಹೀತವಾಗುವುದಿಲ್ಲ. ಆದರೆ, ಇದು ಯುಕ್ತವಲ್ಲ. ಆ ವಾಕ್ಯದಿಂದ ಘಟಾನ್ವಿತ ಜ್ಞಾನವಿಷಯಕ ಶಾಬ್ದಬೋಧ ಬರುತ್ತದೆ. ಆ ಶಾಬ್ದಬೋಧಕ್ಕೆ 'ಘಟಪದ ಸಾಕಾಂಕ್ಷ ಜ್ಞಾನಪದ ಜ್ಞಾನವು' ಕಾರಣ. ಕೇವಲ ಘಟಪದದಿಂದಾಗಲೀ, ಜ್ಞಾನಪದದಿಂದಾಗಲೀ, ಆ ಶಾಬ್ದಬೋಧ ಬರುವುದಿಲ್ಲ. ಹೀಗೆ ಶಾಬ್ದಬೋಧದಲ್ಲಿ ಘಟ ಮತ್ತು ಜ್ಞಾನ ಎರಡರ ಭಾನವೂ ಏಕ ಪ್ರಯೋಜಕ

ಪ್ರಯೋಜ್ಯವಾಯಿತು. ಆದ್ದರಿಂದ ಆ ಸಾಮಗ್ರಿಯ ಸಂಗ್ರಹವೂ ಆಗುತ್ತದೆ. ಅದರಿಂದ ಪ್ರಾಮಾಣ್ಯವು ಗ್ರಾಹ್ಯವಲ್ಲ. ಅದಕ್ಕಾಗಿ ಮಿಶ್ರರು ಅದನ್ನು ಹೀಗೆ ಪರಿಷ್ಕರಿಸಿದ್ದಾರೆ—

**ಜ್ಞಾನಗ್ರಾಹಕತಾ ಪ್ರಯುಕ್ತಮೇವ ಯಸ್ಯಾಃ ವಿಷಯಗ್ರಾಹಕತ್ವಮ್ ಇತಿ ಯಾವತ್ ।**

ಹಿಂದೆ ಹೇಳಿದ ಶಾಬ್ದಬೋಧ ಸಾಮಗ್ರಿಯಲ್ಲಿ ವಿಷಯಗ್ರಾಹಕತ್ವವು ಏನಿದೆಯೋ ಅದಕ್ಕೆ ಜ್ಞಾನಗ್ರಾಹಕತ್ವವು ಪ್ರಯೋಜಕವಲ್ಲ. 'ಜ್ಞಾನಂ ಗುಣಃ' ಎಂಬ ಶಾಬ್ದಸಾಮಗ್ರಿಯೂ ಜ್ಞಾನ ಭಾಸಕವಾಗಿದೆ. ಆದರೆ, ಅದಕ್ಕೆ ವಿಷಯಭಾಸಕತ್ವವು ಇಲ್ಲ. ''ಅಯಂ ಘಟಃ'' ಎಂಬ ಶಾಬ್ದ ಸಾಮಗ್ರಿಗೆ ವಿಷಯ ಭಾಸಕತ್ವ ಇದೆ, ಆದರೆ ಜ್ಞಾನಭಾಸಕತ್ವವು ಇಲ್ಲ. ಹೀಗೆ ಶಾಬ್ದ ಸಾಮಗ್ರಿಯಲ್ಲಿರುವ ವಿಷಯಭಾಸಕತ್ವವು ಜ್ಞಾನಭಾಸಕತ್ವ ಪ್ರಯುಕ್ತವಲ್ಲ. ಅನುವ್ಯವಸಾಯವು ವಿಷಯವನ್ನು ಬಿಟ್ಟು ಜ್ಞಾನವನ್ನು ಮಾತ್ರ ಎಂದೂ ವಿಷಯೀಕರಿಸುವುದಿಲ್ಲ. ''ಜ್ಞಾನವಾನಹಮ್'' ಎಂದಿಷ್ಟೇ ಅನುವ್ಯವಸಾಯ ಬರುವುದಿಲ್ಲ. 'ಘಟಜ್ಞಾನವಾನಹಮ್' 'ಪಟಜ್ಞಾನವಾನಹಮ್' ಎಂದೇ ಅನುವ್ಯವಸಾಯ. ಆದ್ದರಿಂದ ಅನುವ್ಯವಸಾಯ ಸಾಮಗ್ರಿಯಲ್ಲಿ ಜ್ಞಾನಗ್ರಾಹಕತಾ ಪ್ರಯುಕ್ತ ವಿಷಯಗ್ರಾಹಕತ್ವವು ಇದೆ. ಆದ್ದರಿಂದ ಅದರ ಸಂಗ್ರಹವಾಗುತ್ತದೆ. ಇದರ ತಾತ್ಪರ್ಯಾರ್ಥ–

**ಜ್ಞಾನಗ್ರಾಹಕತಾ ಪ್ರಯೋಜಕ ಸಾಮಗ್ರೀ ಪ್ರಯುಕ್ತ ವಿಷಯಗ್ರಾಹಕತಾಕತ್ವಮ್ ।**

ಯಾವ ಸಾಮಗ್ರಿಯಿಂದ ಜನ್ಯವಾದ ಜ್ಞಾನದಲ್ಲಿ ವಿಷಯ ಭಾನವು ಜ್ಞಾನಭಾನಪ್ರಯೋಜಕ ಪ್ರಯುಕ್ತವಾಗಿದೆಯೋ ಅಂತಹ ಯಾವತ್ ಸಾಮಗ್ರೀಗ್ರಾಹ್ಯತ್ವಮ್ ಸ್ವತಸ್ತ್ವಮ್. ವ್ಯವಸಾಯ ಸನ್ನಿಕರ್ಷಾದಿ ಸಾಮಗ್ರಿಯಿಂದ ಹುಟ್ಟುವ ಅನುವ್ಯವಸಾಯದಲ್ಲಿ ವಿಷಯಭಾನವು ಜ್ಞಾನಭಾನ ಪ್ರಯೋಜಕ–ಪ್ರಯುಕ್ತವಾಗಿದೆ. ಆದ್ದರಿಂದ ಅದರ ಸಂಗ್ರಹವಾಗುತ್ತದೆ. 'ಘಟಜ್ಞಾನಮ್' ಎಂಬ ವಾಕ್ಯದಿಂದ ಬರುವ ಶಾಬ್ದಬೋಧ ಸಾಮಗ್ರಿಯಲ್ಲಿ ಜ್ಞಾನವಿಷಯಕ ಜ್ಞಾನವನ್ನು ಹುಟ್ಟಿಸಲು ಪ್ರಯೋಜಕವಾದುದು ಆ ಸಾಮಗ್ರಿಯಲ್ಲಿ ಘಟಕವಾದ ಜ್ಞಾನಪದದ ಜ್ಞಾನ. ಅದು ಶಾಬ್ದಬೋಧದಲ್ಲಿ ಘಟವು ವಿಷಯವಾಗಲು ಕಾರಣವಲ್ಲ. ಅದಕ್ಕೆ ಕಾರಣವಾದುದು ಘಟಪದಜ್ಞಾನ. ಆದ್ದರಿಂದ ಆ ಸಾಮಗ್ರಿಯು ಸಂಗೃಹೀತವಾಗುವುದಿಲ್ಲ.

ಈ ಖಂಡನೆಯನ್ನು ಹೇಳಿ ನ್ಯಾಯದೀಪದಲ್ಲಿ ''ವಿಸ್ತರಸ್ತು ಗುರುಟೀಕಾಯಾಮ್'' ಎಂದಿರುತ್ತಾರೆ. ಗುರುಟೀಕಾದಲ್ಲಿರುವ ಅಂಶವನ್ನು ಮುಂದೆ ಕೊಡಲಾಗಿದೆ–

## ಶ್ರೀವಿಜಯೀಂದ್ರತೀರ್ಥರ ಟೀಕೆಯಲ್ಲಿರುವ ವಿಶೇಷ

''ಇದಂ ರಜತಂ'' ಎಂಬ ಜ್ಞಾನವು ಪ್ರಕಾರಾಂಶದಲ್ಲಿ ಭ್ರಮೆ. ಧರ್ಮಿ–ಅಂಶದಲ್ಲಿ ಪ್ರಮಾ. 'ಇದಂತ್ವವತಿ ಇದಂತ್ವ' ಪ್ರಕಾರಕ ಜ್ಞಾನವಾದುದರಿಂದ ''ಇದಂ'' ಎನ್ನುವ ಜ್ಞಾನ ಪ್ರಮಾ. ಆದರೆ

ಅದರ ಪ್ರಾಮಾಣ್ಯವನ್ನು ಗ್ರಹಿಸುವ ಅನುಮಿತಿ ಸಾಮಗ್ರಿಯು ಅಪ್ರಾಮಾಣ್ಯ ಗ್ರಾಹಕವೇ ಆಗಿದೆ. ಹೇಗೆಂದರೆ, ಆ ಅನುಮಿತಿಯಲ್ಲಿ ಪಕ್ಷ 'ಇದಂ ರಜತಂ ಇತಿ ಜ್ಞಾನ ಘಟಕ ಇದಂ ಇತಿಜ್ಞಾನಮ್' ಎಂದು. ಆಗ ಪಕ್ಷವಿಧಯಾ ಭ್ರಮರೂಪ ಜ್ಞಾನವು ಅನುಮಿತಿಸಾಮಗ್ರಿಯಲ್ಲಿ ಘಟಕವಾಯಿತು. ಅದು ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯಾಯಿತು. ಆದ್ದರಿಂದ ಆ ಪ್ರಾಮಾಣ್ಯದಲ್ಲಿ ಅಪ್ರಾಮಾಣ್ಯಾಗ್ರಾಹಕ ಜ್ಞಾನಗ್ರಾಹಕ ಸಾಮಗ್ರೀ ಗ್ರಾಹ್ಯತ್ವವು ಬರಲಿಲ್ಲ. ಅದಕ್ಕಾಗಿ ಅಪ್ರಾಮಾಣ್ಯ ಗ್ರಾಹಕ ಸಾಮಗ್ರೀ ಅಘಟಿತವಾದ ಜ್ಞಾನ-ವಿಷಯ ಉಭಯ ಗ್ರಾಹಕ ಸಾಮಗ್ರೀ ಪದದಿಂದ 'ಪ್ರಮಾ' ಎಂಬ ಶಬ್ದ ಘಟಿತ ಸಾಮಗ್ರಿಯೇ ಈ ಮತದಲ್ಲಿ ವಿವಕ್ಷಿತ. ಅಂತಹ ಯಾವತ್ ಸಾಮಗ್ರಿಯಿಂದ ಪ್ರಾಮಾಣ್ಯವು ಗೃಹೀತವಾಗಿದೆ, ಎಂದು ನೈಯಾಯಿಕರು ಒಪ್ಪಿರುತ್ತಾರೆ. ಆದ್ದರಿಂದ ಸಿದ್ಧಸಾಧನತಾ. ತದಭಾವವನ್ನು ಸಾಧನೆ ಮಾಡುವ ನೈಯಾಯಿಕರಿಗೆ ಬಾಧ. ಆದ್ದರಿಂದ ನರಹರಿಯ ಅಭಿಪ್ರಾಯ ಸರಿ ಇಲ್ಲ.

**'ಇದಂ ರಜತಮಿತಿ' ಭ್ರಮನಿಷ್ಠ-ಇದಂತ್ವವತಿ ಇದಂತ್ವ-ಪ್ರಕಾರಕತ್ವ-ರೂಪೇ ಪ್ರಾಮಾಣ್ಯೇ ವ್ಯವಸಾಯರೂಪಭ್ರಮಘಟಿತ-ಸಾಮಗ್ರೀ-ಗ್ರಾಹ್ಯತ್ವೇನ, ತದಘಟಿತಾಯಾಃ ಜ್ಞಾನಗ್ರಾಹಕತ್ವ-ಪ್ರಯುಕ್ತ-ವಿಷಯ-ಗ್ರಾಹಕಾಯಾಃ ಪ್ರಮಾದಿ ಶಬ್ದರೂಪಾಯಾ ಏವ ತತ್ರ-ವಿವಕ್ಷಿತ-ಸಾಮಗ್ರೀತ್ವೇನ, ತದ್-ಗ್ರಾಹ್ಯತ್ವಸ್ಯ ಚ ನೈಯಾಯಿಕ-ಸಮ್ಮತತ್ವೇನ ಸಿದ್ಧಸಾಧನಾತ್, ನಿಷೇಧೇ ಬಾಧಾಚ್ಚ॥ -ಶ್ರೀವಿಜಯೀಂದ್ರರು**

## ಸ್ವತಸ್ತ್ವದ ಸರ್ವಮತ ಸಮ್ಮತವಾದ ನಿರುಕ್ತಿ

**नापि, तज्ज्ञानविषयकज्ञानाजन्यज्ञानविषयत्वं स्वतस्त्वम् । अस्मिंश्च पक्षे संभवमात्रं साध्यं न तु नियमः ।**

**स्वतस्त्वपक्षेऽपि प्रामाण्यस्य तज्ज्ञानविषयकज्ञानजन्यानुमित्यापि ग्राह्यत्वेन तदजन्यज्ञानस्यैव विषय इति नियमस्य, तज्ज्ञानविषयकज्ञानाजन्येन घटज्ञानेनाप्यग्रह्यात्वेन गृह्यत एवेति नियमस्य चासंभवः, इति वाच्यम् ।**

ಇದು ತತ್ತ್ವ ಚಿಂತಾಮಣಿ ಗ್ರಂಥದ ದ್ವಿತೀಯ ವಿಪ್ರತಿಪತ್ತಿ. ಇಲ್ಲಿ ತತ್‌ಜ್ಞಾನ ಎಂದರೆ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಜ್ಞಾನ. ತದ್ವಿಷಯಕವಾದ ಜ್ಞಾನ ಗುರುಮತದಲ್ಲಿ, ಜ್ಞಾನವು ಸ್ವಪ್ರಕಾಶವಾದುದರಿಂದ, ವ್ಯವಸಾಯಾತ್ಮಕ ಜ್ಞಾನ. ಭಾಟ್ಟಮತದಲ್ಲಿ ಜ್ಞಾತತಾಲಿಂಗಕ-ಅನುಮಿತಿ. ಮಿಶ್ರಮತದಲ್ಲಿ ಮಾನಸ-ಅನುವ್ಯವಸಾಯ. ಈ ಎಲ್ಲಾ ಜ್ಞಾನಗಳಿಂದಲೂ ಅಜನ್ಯವಾದ

ಜ್ಞಾನಗಳೆಂದರೆ ಮತ್ತೆ ಆ ಆ ಮತದಲ್ಲಿ ಅದೇ ಜ್ಞಾನಗಳು. ಅವುಗಳಲ್ಲಿ ಆ ಮತೀಯರು ಪ್ರಾಮಾಣ್ಯವು ವಿಷಯ ಎಂದು ಒಪ್ಪಿರುತ್ತಾರೆ. ಅದೇ ಸ್ವತಸ್ತ್ವ.

ಆದರೆ ನೈಯಾಯಿಕಮತದಲ್ಲಿ ವ್ಯವಸಾಯವಿಷಯಕವಾದ ಅನುವ್ಯವಸಾಯದಿಂದ ಅಜನ್ಯವಾದ ಜ್ಞಾನ ಅನುವ್ಯವಸಾಯವೇ. ಅದರಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಅನುಮಿತಿಯಲ್ಲಿ ವಿಷಯ. ಆ ಅನುಮಿತಿಯಾದರೂ ಅನುವ್ಯವಸಾಯ ಜನ್ಯ. ''ಘಟಜ್ಞಾನಂ ಪ್ರಮಾಣಮ್'' ಎಂದು ಅನುಮಿತಿ. ಈ ಅನುಮಿತಿಯಲ್ಲಿ ಪಕ್ಷ ಘಟಜ್ಞಾನ. ಅನುಮಿತಿಯು ಪಕ್ಷಧರ್ಮತಾಜ್ಞಾನದಿಂದ ಜನ್ಯವಾದುದರಿಂದ ಘಟಜ್ಞಾನದ ಜ್ಞಾನದಿಂದ ಅಂದರೆ ಅನುವ್ಯವಸಾಯದಿಂದ ಜನ್ಯವೇ ಆಗಿದೆ. ತದಜನ್ಯಜ್ಞಾನವಲ್ಲ. ಆದ್ದರಿಂದ ತದಜನ್ಯ ಜ್ಞಾನಪದದಿಂದ ಅನುವ್ಯವಸಾಯ ಮಾತ್ರ ಸಂಗ್ರಹವಾಗುತ್ತದೆ, ಪ್ರಾಮಾಣ್ಯಾನುಮಿತಿಯು ಸಂಗೃಹೀತವಾಗುವುದಿಲ್ಲ. ಸಂಗೃಹೀತವಾಗುವ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಆದ್ದರಿಂದ ಸಿದ್ಧಸಾಧನತಾದೋಷ ಇಲ್ಲ.

ಈ ಪರಿಷ್ಕಾರಪಕ್ಷದಲ್ಲಿ ತದಜನ್ಯ ಜ್ಞಾನವಿಷಯತ್ವವು ಪ್ರಾಮಾಣ್ಯದಲ್ಲಿ ಇದೆ ಎಂದಿಷ್ಟೇ ಸಾಧ್ಯ.

1. ಅಂತಹ ಜ್ಞಾನದಲ್ಲಿ ಮಾತ್ರ ಪ್ರಾಮಾಣ್ಯವು ವಿಷಯ ಎಂದಾಗಲೀ

2. ಅಂತಹ ಜ್ಞಾನದಲ್ಲಿ ವಿಷಯ ಆಗಿಯೇ ಇರುತ್ತದೆ ಎಂದಾಗಲೀ ನಿಯಮವು ವಿವಕ್ಷಿತವಲ್ಲ. ಏಕೆಂದರೆ,

1. ತದಜನ್ಯ ಜ್ಞಾನದಲ್ಲಿ ಮಾತ್ರ ವಿಷಯ, ಎಂಬ ನಿಯಮವನ್ನು ಹೇಳಲು ಬರುವುದಿಲ್ಲ. ಅನುವ್ಯವಸಾಯ ಜನ್ಯವಾದ ಪ್ರಾಮಾಣ್ಯಾನುಮಿತಿಯಲ್ಲೂ ಪ್ರಾಮಾಣ್ಯವು ವಿಷಯವಾಗಿದೆ. ಆದ್ದರಿಂದ ಈ ರೀತಿ ನಿಯಮ ಮಾಡಿದರೆ ಬಾಧದೋಷ.

2. ಎರಡನೆಯ ರೀತಿಯ ನಿಯಮವೂ ಸರಿಯಲ್ಲ. ತದಜನ್ಯಜ್ಞಾನವ್ಯವಸಾಯಾತ್ಮಕವಾದ ಘಟಜ್ಞಾನವೂ ಆಗುತ್ತದೆ. ಅದೂ ಅನುವ್ಯವಸಾಯದಿಂದ ಅಜನ್ಯವಾಗಿದೆ. ಅದರಲ್ಲಿ ವ್ಯವಸಾಯಗತ ಪ್ರಾಮಾಣ್ಯವು ವಿಷಯವಲ್ಲ.

ಆದ್ದರಿಂದ ನಿಯಮವು ಈ ಲಕ್ಷಣದಲ್ಲಿ ವಿವಕ್ಷಿತವಲ್ಲ. ಅಂತಹ ಒಂದು ಜ್ಞಾನದಲ್ಲಿ ವಿಷಯವಾಗಿದೆ ಎಂಬ ಸಂಭವ ಮಾತ್ರ ವಿವಕ್ಷಿತ.

## ನ್ಯಾಯದೀಪದಲ್ಲಿ ಕೃತ್ಯವಿಚಾರ

**ಸಾಧಾರಣಂ ನಿರುಕ್ತ್ಯಂತರಮ್ ಅನೂದ್ಯ ನಿರಾಹ–ನಾಪೀತಿ ।। ತಜ್ಜ್ಞಾನಂ = ಗ್ರಾಹ್ಯಪ್ರಾಮಾಣ್ಯಾಶ್ರಯಜ್ಞಾನಂ । ತದ್ವಿಷಯಕಂ ಜ್ಞಾನಂ ಗುರುಮತೇ**

**ತದೇವ । ಭಟ್ಟಮತೇ ಜ್ಞಾತತಾಲಿಂಗಕಾನುಮಿತಿಃ । ಮಿಶ್ರಮತೇ ತದನು-ವ್ಯವಸಾಯಃ । ತದಜನ್ಯಂ ಯಜ್ಜ್ಞಾನಂ ತದೇವ । ತದ್ವಿಷಯತ್ವಮಿತ್ಯರ್ಥಃ ।**

**೧. ಅತ್ರ, ಜ್ಞಾನಾಜನ್ಯೇತ್ಯುಕ್ತ್ಯಾ ಅನುಮಿತಿ ವಿಷಯತ್ವೇನ ಸಿದ್ಧಸಾಧನತಾ ಶಂಕಾ,**

'ಅತ್ರ...ಶಂಕಾ ನಿರಸ್ತಾ' ಎಂದು ಮುಂದಿನ ಎಲ್ಲ ಕಡೆಯಲ್ಲೂ ಅನ್ವಯ. ಈ ಪರಿಷ್ಕಾರದಲ್ಲಿ 'ಜ್ಞಾನಾಜನ್ಯ' ಎಂಬ ಅಂಶವನ್ನು ಬಿಟ್ಟರೆ 'ತಜ್ಜ್ಞಾನವಿಷಯಕ ಜ್ಞಾನ ವಿಷಯತ್ವಂ ಸ್ವತಸ್ತ್ವಂ' ಎಂದಂತಾಗುತ್ತದೆ. ಇಂತಹ ಸ್ವತಸ್ತ್ವ ನೈಯಾಯಿಕರಿಗೂ ಸಿದ್ಧ. ವ್ಯವಸಾಯವಿಷಯಕ ಜ್ಞಾನ ಎಂದರೆ ತಾರ್ಕಿಕರ ಪ್ರಾಮಾಣ್ಯಾನುಮಿತಿಯೂ ಆಗುತ್ತದೆ. ಅಲ್ಲಿ ಪ್ರಾಮಾಣ್ಯವು ವಿಷಯ ಎಂದು ನೈಯಾಯಿಕರು ಒಪ್ಪಿದ್ದಾರೆ. ಆದ್ದರಿಂದ ಸಿದ್ಧಸಾಧನತಾದೋಷ. ಅದಕ್ಕಾಗಿ, 'ತಜ್ಜ್ಞಾನವಿಷಯಕ ಜ್ಞಾನ-ಅಜನ್ಯ' ಎಂದು ಹೇಳಬೇಕು. ಈಗ ಅನುಮಿತಿ ಸಂಗ್ರಹವಾಗುವುದಿಲ್ಲ. ವ್ಯವಸಾಯವು ಅನುಮಿತಿಯಲ್ಲಿ ಪಕ್ಷವಾದುದರಿಂದ ಅದು ವ್ಯವಸಾಯವಿಷಯಕ ಜ್ಞಾನದಿಂದ ಜನ್ಯವೇ ಆಗಿದೆ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

**೨. ಜ್ಞಾನವಿಷಯಕೇತ್ಯುಕ್ತ್ಯಾ ಗುರಮತೇ ಅನುಮಿತ್ಯಾದಿ ಪ್ರಾಮಾಣ್ಯಾಂಶೇ, ಭಟ್ಟಮತೇ ಮಿಶ್ರಮತೇ ಚ ಸರ್ವತ್ರ ಪ್ರಾಮಾಣ್ಯಾನುಮಿತ್ಯನುವ್ಯವಸಾಯಯೋಃ ವ್ಯಾಪ್ತಿಜ್ಞಾನ ವ್ಯವಸಾಯಾಭ್ಯಾಂ ಜನ್ಯತ್ವೇನ ಬಾಧ ಇತಿ ಶಂಕಾ,**

'ಜ್ಞಾನವಿಷಯ' ಎಂಬ ಪದವನ್ನು ಬಿಟ್ಟರೆ 'ಜ್ಞಾನಾಜನ್ಯಜ್ಞಾನ ವಿಷಯತ್ವಮ್' ಎಂದಾಗುತ್ತದೆ. ಇದು ಮೂರೂ ಮತದಲ್ಲಿ ಪ್ರಾಮಾಣ್ಯದಲ್ಲಿ ಬರುವುದಿಲ್ಲ. ಆದ್ದರಿಂದ ಬಾಧ.

ಗುರುಮತದಲ್ಲಿ–ಜ್ಞಾನಗಳೆಲ್ಲವೂ ಸ್ವಪ್ರಕಾಶ. 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಯೂ ಸ್ವಪ್ರಕಾಶ. ಅದರ ಪ್ರಾಮಾಣ್ಯವು ಅದೇ ಜ್ಞಾನದಲ್ಲಿ ವಿಷಯವಾಗುತ್ತದೆ. ಆದರೆ ಆ ಅನುಮಿತಿಯು ವ್ಯಾಪ್ತಿಜ್ಞಾನಜನ್ಯವಾಗಿದೆ. ಜ್ಞಾನಾಜನ್ಯವಾಗಿಲ್ಲ. ಅದರಿಂದಾಗಿ ಅನುಮಿತಿ ಸಂಗ್ರಹವಾಗುವುದಿಲ್ಲ. ತದ್ಗತ ಪ್ರಾಮಾಣ್ಯದಲ್ಲಿ ಸ್ವತಸ್ತ್ವ ಬರುವುದಿಲ್ಲವಾದ ಕಾರಣ ಬಾಧ.

ಭಟ್ಟಮತದಲ್ಲಿ– ಜ್ಞಾತತಾಲಿಂಗಕ ಅನುಮಿತಿಯಲ್ಲಿ ಪ್ರಾಮಾಣ್ಯವು ವಿಷಯವಾಗಬೇಕು. ಆದರೆ ಅನುಮಿತಿಯು ವ್ಯಾಪ್ತಿಜ್ಞಾನಜನ್ಯವಾದುದರಿಂದ ಜ್ಞಾನಾಜನ್ಯವಲ್ಲ. ಆದ್ದರಿಂದ ಬಾಧ.

ಮಿಶ್ರಮತದಲ್ಲಿ– ಅನುವ್ಯವಸಾಯವು ವ್ಯವಸಾಯ ಜನ್ಯವಾದುದರಿಂದ ಜ್ಞಾನಜನ್ಯವಾಗಿದೆ. ಆದ್ದರಿಂದ ಬಾಧ.

ಹೀಗೆ ಮೂರೂ ಮತದಲ್ಲಿ ಬಾಧ ಪರಿಹಾರಕ್ಕಾಗಿ 'ತಜ್ಜ್ಞಾನವಿಷಯಕ ಜ್ಞಾನಾಜನ್ಯ' ಎಂದೇ ಹೇಳಬೇಕು. ಹಿಂದೆ ಹೇಳಿದ ಪ್ರಾಮಾಣ್ಯಗ್ರಾಹಕ ಜ್ಞಾನಗಳು ಯತ್ಕಿಂಚಿತ್ ಜ್ಞಾನ ಜನ್ಯವಾದರೂ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ವ್ಯವಸಾಯ ವಿಷಯಕ ಜ್ಞಾನದಿಂದ ಜನ್ಯವಲ್ಲವಾದುದರಿಂದ

ಅವೆಲ್ಲವುದರ ಸಂಗ್ರಹವಾಗುತ್ತದೆ. ಅವುಗಳಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ. ಆದ್ದರಿಂದ ಬಾಧದೋಷವಿಲ್ಲ.

೩. **ತದಿತ್ಯುಕ್ತ್ವಾ ಪುನರಪಿ ಗುರುಮತೇ ಲಿಂಗಜ್ಞಾನಸ್ಯ ಸ್ವಪ್ರಕಾಶತಯಾ ಜ್ಞಾನವಿಷಯಕ ಜ್ಞಾನತ್ವಾತ್ ತಜ್ಜನ್ಯಾನುಮಿತಿ ಪ್ರಾಮಾಣ್ಯಾಂಶೇ ಬಾಧಃ ಇತಿ,**

**ಭಟ್ಟಮತೇ ಜ್ಞಾತತಾಲಿಂಗಕಾನುಮಿತೇಃ ಜ್ಞಾನವಿಷಯಕ ವ್ಯಾಪ್ತಿಜ್ಞಾನ ಜನ್ಯತ್ವಾತ್ ಬಾಧ ಇತಿ,**

**ಮಿಶ್ರಮತೇಽಪಿ ಅನುವ್ಯವಸಾಯಸ್ಯ ವ್ಯವಸಾಯ ವಿಷಯಕಸ್ಯ ತಜ್ಜನ್ಯತಯಾ ತನ್ನಿಷ್ಠಪ್ರಾಮಾಣ್ಯಾಂಶೇ ಬಾಧ ಇತಿ ಶಂಕಾ–ನಿರಸ್ತಾ।**

'ತಜ್ಞಾನ ವಿಷಯಕ' ಎಂಬಲ್ಲಿ ತತ್‌ಪದವನ್ನು ಬಿಟ್ಟರೆ 'ಜ್ಞಾನವಿಷಯಕ–ಜ್ಞಾನ–ಅಜನ್ಯ–ಜ್ಞಾನ ವಿಷಯತ್ವಮ್' ಎಂದು ಸ್ವತಸ್ತ್ವದ ಸ್ವರೂಪವಾಗುತ್ತದೆ. ಹೀಗೆ ಹೇಳಿದರೆ **ಗುರುಮತ**ದಲ್ಲಿ ಅನುಮಿತಿ ಪ್ರಾಮಾಣ್ಯದಲ್ಲಿ ಬಾಧ. 'ವಹ್ನಿಮಾನ್ ಪರ್ವತಃ' ಎಂಬ ಅನುಮಿತಿಯು ವ್ಯಾಪ್ತಿಜ್ಞಾನಜನ್ಯ. ವ್ಯಾಪ್ತಿಜ್ಞಾನವು ಸ್ವಪ್ರಕಾಶವಾದುದರಿಂದ ಜ್ಞಾನವಿಷಯಕ ಜ್ಞಾನ. ತಜ್ಜನ್ಯವೇ ಆಗಿದೆ ಅನುಮಿತಿ. ಅಜನ್ಯವಾಗಿಲ್ಲ. ಅನುಮಿತಿಯ ಸಂಗ್ರಹವಾಗುವುದಿಲ್ಲ. ಅದರ ಪ್ರಾಮಾಣ್ಯದಲ್ಲಿ ಸ್ವತಸ್ತ್ವ ಬರಲಿಲ್ಲ. ಆದ್ದರಿಂದ ಬಾಧ.

**ಭಟ್ಟಮತದಲ್ಲಿ–** ಜ್ಞಾತತಾಲಿಂಗಕ–ಅನುಮಿತಿಯು ಪ್ರಾಮಾಣ್ಯವಿಷಯಕ. ಆ ಅನುಮಿತಿ ವ್ಯಾಪ್ತಿಜ್ಞಾನ ಜನ್ಯವಾಗಿದೆ. ''ಯಃ ಜ್ಞಾತತಾಶ್ರಯಃ ಸಃ ಜ್ಞಾನಾಶ್ರಯಃ'' ಎಂದು ವ್ಯಾಪ್ತಿ ಜ್ಞಾನ. ಅದಕ್ಕೆ 'ಜ್ಞಾನಾಶ್ರಯಃ' ಎಂಬ ಅಂಶದಲ್ಲಿ ಜ್ಞಾನವು ವಿಷಯವಾಗಿದೆ. ಹೀಗೆ ಅನುಮಿತಿಯು ಜ್ಞಾನ ವಿಷಯಕ ಜ್ಞಾನ(ವ್ಯಾಪ್ತಿಜ್ಞಾನ)ಜನ್ಯವಾಗಿದೆ. ಅದರ ಸಂಗ್ರಹವಾಗುವುದಿಲ್ಲ. ಆದ್ದರಿಂದ ಬಾಧ.

**ಮಿಶ್ರಮತ**ದಲ್ಲಿ ಬಾಧವನ್ನು ಶ್ರೀವಿಜಯೀಂದ್ರರು ಹೀಗೆ ವಿವರಿಸಿದ್ದಾರೆ.

**ಮಿಶ್ರಮತೇ ಅನುವ್ಯವಸಾಯಪ್ರಾಮಾಣ್ಯಾಂಶೇ ಬಾಧಃ। ತಸ್ಯ ವ್ಯವಸಾಯವಿಷಯಕ ಅನುವ್ಯವಸಾಯಜನ್ಯ–ದ್ವಿತೀಯಾನುವ್ಯವಸಾಯಗೋಚರತ್ವಾತ್।**

ಇದಕ್ಕೆ ಅನುಸಾರವಾಗಿ ನ್ಯಾಯದೀಪದ ಪಂಕ್ತಿಯಲ್ಲಿ 'ತನ್ನಿಷ್ಠಪ್ರಾಮಾಣ್ಯ' ಎಂದರೆ 'ಅನುವ್ಯವಸಾಯ ನಿಷ್ಠಪ್ರಾಮಾಣ್ಯ' ಎಂದು ಅರ್ಥ.

ಅ. 'ಅಯಂ ಘಟಃ' ಎಂದು ವ್ಯವಸಾಯ.

ಆ. 'ಘಟ ಜ್ಞಾನವಾನಹಮ್' ಇದು ಅನುವ್ಯವಸಾಯ.

ಇ. 'ಘಟ ಜ್ಞಾನವಾನಹಂ ಇತಿ ಜ್ಞಾನಂ ಪ್ರಮಾಣಮ್' ಇದು ಪ್ರಾಮಾಣ್ಯ ಜ್ಞಾನ.

ಇಲ್ಲಿ ಅನುವ್ಯವಸಾಯಗತ ಪ್ರಾಮಾಣ್ಯವನ್ನು ಮೂರನೆಯ (ಇ. ಎಂಬ ಜ್ಞಾನ) ಜ್ಞಾನವು ಗ್ರಹಿಸುತ್ತದೆ. ಅದು ಎರಡನೆಯ ಜ್ಞಾನದಿಂದ (ಆ. ಎಂಬ ಜ್ಞಾನ) ಜನ್ಯವಾಗಿದೆ. ಆ ಎರಡನೆಯ ಜ್ಞಾನವು ಪ್ರಥಮಜ್ಞಾನ ವಿಷಯಕ ಜ್ಞಾನ. ಆದ್ದರಿಂದ ಪ್ರಾಮಾಣ್ಯಗ್ರಾಹಕವಾದ ಮೂರನೆಯ ಜ್ಞಾನವು ಜ್ಞಾನವಿಷಯಕ ಜ್ಞಾನದಿಂದ ಎಂದರೆ, ಎಗಡನೆಯ ಜ್ಞಾನದಿಂದ ಜನ್ಯವಾಗಿದೆ. ಅದರ ಸಂಗ್ರಹವಾಗುವುದಿಲ್ಲ. ಆದ್ದರಿಂದ ಅನುವ್ಯವಸಾಯಗತ ಪ್ರಾಮಾಣ್ಯದಲ್ಲಿ ಬಾಧ.

ಹೀಗೆ ಮೂರೂ ಮತದಲ್ಲಿ ಬಾಧ ಪರಿಹಾರಕ್ಕಾಗಿ 'ತತ್' ಪದಬೇಕು.

ತತ್‌ಪದವಿದ್ದರೆ ಗುರುಮತದಲ್ಲಿ ಬಾಧವಿಲ್ಲ. ತತ್ ಎಂದರೆ ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನ. ವ್ಯಾಪ್ತಿಜ್ಞಾನವು ಸ್ವಪ್ರಕಾಶವಾದುದರಿಂದ ಸ್ವವಿಷಯಕವಾದರೂ ಪ್ರಕೃತಗ್ರಾಹ್ಯ ಪ್ರಾಮಾಣ್ಯಾಶ್ರಯವಾದ ವ್ಯವಸಾಯ ವಿಷಯಕವಲ್ಲ. ಆದ್ದರಿಂದ ಬಾಧವಿಲ್ಲ.

ಭಾಟ್ಟಮತದಲ್ಲಿ ಜ್ಞಾತತಾಲಿಂಗಕ-ಅನುಮಿತಿಗೆ ಕಾರಣವಾದ ವ್ಯಾಪ್ತಿಜ್ಞಾನವು ಜ್ಞಾನ ವಿಷಯಕವಾದರೂ ಪ್ರಕೃತ ಜ್ಞಾನವಿಷಯಕವಲ್ಲ. ರಾಯರು ಇದನ್ನು ಹೀಗೆ ಸಮರ್ಥಿಸಿದ್ದಾರೆ-

## ನ್ಯಾಯದೀಪ

**ಭಟ್ಟಮತೇ ಸಾಮಾನ್ಯಪ್ರತ್ಯಾಸತ್ತೇಃ ಅಭಾವೇನ ವ್ಯಾಪ್ತಿಜ್ಞಾನಸ್ಯ ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನಾವಿಷಯತ್ವಾತ್ । ಮತಾಂತರೇ ತು ವ್ಯಕ್ತಮ್ ।**

ಭಾಟ್ಟರು ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯನ್ನು ಒಪ್ಪಿಲ್ಲ. ಆದ್ದರಿಂದ ಜ್ಞಾನತ್ವ ಸಾಮಾನ್ಯ ಲಕ್ಷಣಯಾ ಪ್ರಕೃತ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಜ್ಞಾನವು ವ್ಯಾಪ್ತಿಜ್ಞಾನದಲ್ಲಿ ವಿಷಯವಾಗುವುದಿಲ್ಲ. ಆದ್ದರಿಂದ ಬಾಧವಿಲ್ಲ.

ಮಿಶ್ರಮತದಲ್ಲಿ ಗ್ರಾಹ್ಯಪ್ರಾಮಾಣ್ಯವೆಂದರೆ ಅನುವ್ಯವಸಾಯನಿಷ್ಠವಾದ ಪ್ರಾಮಾಣ್ಯ. ತದಾಶ್ರಯ ಅನುವ್ಯವಸಾಯ. ತದ್ವಿಷಯಕ ಜ್ಞಾನದಿಂದ ಅನುವ್ಯವಸಾಯದ ಜ್ಞಾನವು ಜನ್ಯವಾಗಿಲ್ಲ. ಅದು ವ್ಯವಸಾಯವಿಷಯಕವಾದ ಜ್ಞಾನದಿಂದ ಜನ್ಯವಾಗಿದೆ. ಆದ್ದರಿಂದ ಬಾಧ ಇಲ್ಲ.

## ಮೂರು ಜ್ಞಾನಪದಗಳಿಗೆ ಕೃತ್ಯ

**ಅತ್ರಾದ್ಯಂ ಜ್ಞಾನಪದಂ ತತ್‌ಪದಸ್ಯ ತದ್‌ಗ್ರಂಥೇ ಪೂರ್ವನಿರ್ದಿಷ್ಟ ಪ್ರಾಮಾಣ್ಯ ಪರಾಮರ್ಶಿತಯಾ ಸಿದ್ಧಸಾಧನತ್ವವಾರಣಾಯ ।**

**ದ್ವಿತೀಯಂ ತು ವ್ಯಾಪಾರಾನುಬಂಧಿತಯಾ ತಜ್ಜ್ಞಾನವಿಷಯಕೈಃ ಆತ್ಮಾದಿಭಿಃ**

**ಪ್ರಾಮಾಣ್ಯಜ್ಞಾನಜನನಾತ್ ಅಪ್ರಸಿದ್ಧಿವಾರಣಾಯ, ಪ್ರತಿಪತ್ತ್ಯನುಬಂಧಿ-ತಯಾ ತದ್ವಿಷಯಕತ್ವಲಾಭಾರ್ಥಮ್ ।**

**ತೃತೀಯಮಪಿ ವ್ಯಾಪಾರಾನುಬಂಧಿತಯಾ ಆತ್ಮಾದಿಭಿರೇವ ಸಿದ್ಧಸಾಧನ-ತಾವಾರಣಾಯ ಪ್ರತಿಪತ್ತ್ಯನುಬಂಧಿತಯಾ ವಿಷಯತ್ವಲಾಭಾಯ ಇತ್ಯಾಹುಃ ।**

ಈ ಸ್ವತಸ್ತ್ವಪರಿಷ್ಕಾರದಲ್ಲಿ 'ತತ್-ಜ್ಞಾನವಿಷಯಕ ಜ್ಞಾನಾಜನ್ಯ' ಎಂಬಲ್ಲಿ ಮೊದಲನೆಯ ಜ್ಞಾನಪದವನ್ನು ಬಿಟ್ಟರೆ 'ತದ್ವಿಷಯಕಜ್ಞಾನಾಜನ್ಯ' ಎಂದು ಅರ್ಥವಾಗುತ್ತದೆ. 'ತತ್' ಪದಕ್ಕೆ ಪೂರ್ವಪ್ರಸ್ತುತವಾದ ಪ್ರಾಮಾಣ್ಯ, ಎಂದರ್ಥ. ಆಗ ಪ್ರಾಮಾಣ್ಯವಿಷಯಕ ಜ್ಞಾನಾಜನ್ಯ ಜ್ಞಾನವಿಷಯತ್ವಂ, ಎಂದಂತಾಗುತ್ತದೆ. ಹೀಗೆ ಹೇಳಿದರೆ ಸಿದ್ಧಸಾಧನತಾ ದೋಷ. 'ಘಟತ್ವ ಪ್ರಕಾರಕಮ್ ಇದಂ ಜ್ಞಾನಂ, ಘಟತ್ವವದ್ ವಿಶೇಷ್ಯಕಂ, ಘಟತ್ವಾಭಾವವದವಿಶೇಷ್ಯಕತ್ವೇ ಸತಿ ಸವಿಶೇಷ್ಯಕತ್ವಾತ್'' (ಈ ಅನುಮಾನವನ್ನು ಮಣಿಕಾರ ಹೇಳಿದ್ದಾನೆ) ಎಂಬ ಅನುಮಿತಿಯು ಪ್ರಾಮಾಣ್ಯವಿಷಯಕ-ಜ್ಞಾನಾಜನ್ಯವಾಗಿದೆ. ಆದರಲ್ಲಿ ಪ್ರಾಮಾಣ್ಯವು ವಿಷಯ ಎಂದು ನೈಯಾಯಿಕರು ಅಂಗೀಕರಿಸಿದ್ದಾರೆ. ಆದ್ದರಿಂದ ಸಿದ್ಧಸಾಧನತಾದೋಷ. ಜ್ಞಾನಪದವನ್ನು ಕೊಟ್ಟಾಗ ಈ ದೋಷವಿಲ್ಲ. ಆಗ ತಜ್ಞಾನ ಎಂದರೆ ಘಟಾದಿಜ್ಞಾನ. ಅನುಮಿತಿಯು ಘಟಜ್ಞಾನದಿಂದ ಜನ್ಯವೇ ಆಗಿದೆ. ಆ ಅನುಮಿತಿಯಲ್ಲಿ ಘಟತ್ವ ಪ್ರಕಾರಕ ಜ್ಞಾನವು ಪಕ್ಷವಾಗಿರುವುದರಿಂದ, ಅನುಮಿತಿಯು ಪಕ್ಷಜ್ಞಾನ ಜನ್ಯವಾದುದರಿಂದ, ತದಜನ್ಯ ಜ್ಞಾನವೆಂದರೆ ಆ ಅನುಮಿತಿ ಅಲ್ಲ.

ಈ ಅನುಮಿತಿಯಲ್ಲೇ ಸಿದ್ಧಸಾಧನತಾ ಹೇಳಬೇಕು. ''ಘಟಜ್ಞಾನಂ ಪ್ರಮಾಣಂ, ಸಮರ್ಥಪ್ರವೃತ್ತಿ ಜನಕತ್ವಾತ್'' ಎಂಬ ಅನುಮಿತಿಮಾದಾಯ ಸಿದ್ಧಸಾಧನತ್ವವನ್ನು ಹೇಳಲು ಆಗುವುದಿಲ್ಲ. ಆ ಅನುಮಿತಿಯು ಪ್ರಾಮಾಣ್ಯವಿಷಯಕ ವ್ಯಾಪ್ತಿಜ್ಞಾನ ಜನ್ಯವಾಗಿದೆ.

ಎರಡನೆಯ ಜ್ಞಾನಪದವನ್ನು ಬಿಟ್ಟರೆ 'ತಜ್ಞಾನವಿಷಯಕಾಜನ್ಯ' ಎಂದು ಅರ್ಥವಾಗುತ್ತದೆ. ಆಗ ಅಪ್ರಸಿದ್ಧಿ. ಪ್ರಾಮಾಣ್ಯಾಶ್ರಯವಾದ ವ್ಯವಸಾಯವಿಷಯಕವಾದುದು 'ಆತ್ಮಮನಃ-ಸಂಯೋಗ'. ಅದು ಅನುವ್ಯವಸಾಯ ಜ್ಞಾನ ಹುಟ್ಟಲು ಬೇಕಾದ ವ್ಯಾಪಾರವಾಗಿರುವ ಕಾರಣ ವ್ಯವಸಾಯ ವಿಷಯಕವಾಗಿದೆ. ತದಜನ್ಯ ಜ್ಞಾನವು ಅಪ್ರಸಿದ್ಧ. ಸಕಲ ಜ್ಞಾನವೂ ಆತ್ಮಮನಃ ಸಂಯೋಗ ಜನ್ಯವಾಗಿದೆ. (ವ್ಯಾಪಾರಾನುಬಂಧಿತಯಾ ತಜ್ಞಾನವಿಷಯಕ ಆತ್ಮಮನಃ ಸಂಯೋಗಾದಿಭಿಃ ಅಜನ್ಯಸ್ಯೈವಾಪ್ರಸಿದ್ಧೇಃ-ಶ್ರೀವಿಜಯೀಂದ್ರರು.)

ವಿಷಯತ್ವಂ ದ್ವಿವಿಧಂ-

1. ವ್ಯಾಪಾರನುಬಂಧಿತ್ವೇನ.
2. ಪ್ರತೀತತ್ಯನುಬಂಧಿತ್ವೇನ ।

1. ತತ್ರ ಚಕ್ಷುರಾದಿ ವಿಷಯತ್ವಂ ರೂಪಾದೇಃ ಜ್ಞಾನರೂಪ ವ್ಯಾಪಾರದ್ವಾರೇಣ ।

2. ಪ್ರತೀತ್ಯನುಬಂಧಶ್ಚ ವ್ಯಾಪಾರವ್ಯವಧಾನಂ ವಿನೈವ ಸಂಬಂಧಿತ್ವಮ್ । ತಚ್ಚ ರೂಪಾದೇಃ ಜ್ಞಾನಂ ಪ್ರತ್ಯೇವ ।

ತಥಾಚ ಜ್ಞಾನಸಂಬಂಧೇನ ಆತ್ಮನೋಽಪಿ ಜ್ಞಾನವಿಷಯಕತ್ವೇನ ಸ್ವಪ್ರಕಾಶಾನು ವ್ಯವಸಾಯಾದಿಜ್ಞಾನಾನಾಂ ತಜ್ಜನ್ಯತ್ವೇನ ಅಸಿದ್ಧಿಃ । ಇತಿ ತದ್ವಾರಣಾಯ ಜ್ಞಾನಪದಮಿತ್ಯರ್ಥಃ । (ನ್ಯಾಯಶಿಖಾಮಣಿ ಪು.151)

ಇನ್ನು, 'ತದಜನ್ಯಜ್ಞಾನವಿಷಯತ್ವಂ' ಇಲ್ಲಿ ಜ್ಞಾನಪದವನ್ನು ಬಿಟ್ಟರೆ ತದಜನ್ಯವಿಷಯತ್ವಂ ಎಂದಾಗುತ್ತದೆ. ಹಾಗೆ ಹೇಳಿದರೆ ಸಿದ್ಧಸಾಧನತಾ. ತದಜನ್ಯವಾದುದು ಆತ್ಮ, ಆತ್ಮಮನಃ ಸಯೋಗ. ಆವೆರಡಕ್ಕೆ ಅನುಮಿತಿಯಲ್ಲಿ ವಿಷಯವಾದ ಪ್ರಾಮಾಣ್ಯವೂ ವಿಷಯ. ಅದಕ್ಕಾಗಿ ಜ್ಞಾನಪದವನ್ನು ಕೊಟ್ಟಾಗ ಆತ್ಮಾದಿಗಳು ಜ್ಞಾನವಲ್ಲವಾದ ಕಾರಣ ಸಿದ್ಧಸಾಧನತಾ ಇಲ್ಲ.

(ತಜ್ಜಾನವಿಷಯಕ–ಜ್ಞಾನಾಜನ್ಯೈಃ ಆತ್ಮ–ಮನೋಯೋಗಾದಿಭಿಃ ವ್ಯಾಪಾರಾನುಬಂಧಿ ತಯಾ ಪ್ರಾಮಾಣ್ಯವಿಷಯೀಕರಣೇನ ಸಿದ್ಧಸಾಧನತಾವಾರಾಣಾಯ ।

ಮನೋಯೋಗಾದಿ ಜನ್ಯ– ಅನುಮಿತಿ ವಿಷಯಸ್ಯೈವ ವ್ಯಾಪಾರಾನುಬಂಧಿತಯಾ ತದ್ವಿಷಯಶಬ್ದಾರ್ಥತ್ವಾತ್–ಶ್ರೀವಿಜಯೀಂದ್ರರು)

ಜ್ಞಾನಪದವನ್ನು ಕೊಟ್ಟಾಗ ವ್ಯವಸಾಯವಿಷಯಕ ಜ್ಞಾನವೆಂದರೆ ಅನುವ್ಯವಸಾಯಮಾತ್ರ. ತದಜನ್ಯಜ್ಞಾನ ಅನುವ್ಯವಸಾಯವೇ ಪ್ರಸಿದ್ಧ.

ಹೀಗೆ ಮೂರು ಜ್ಞಾಪದಗಳೂ ಸಾರ್ಥಕವಾಗಿವೆ.

## ನ್ಯಾಯದೀಪ

**ಗ್ರಂಥಕರ್ತುಃ ಕುತೋ ನಿಯಮೋ ನಾಭಿಮತ ಇತ್ಯತ ಆಹ–ಸ್ವತಸ್ತ್ವೇತಿ ॥ ತಜ್ಜ್ಞಾನವಿಷಯಕಜ್ಞಾನಜನ್ಯೇತಿ ॥ ಪಕ್ಷಜ್ಞಾಜನ್ಯತ್ವಾದನುಮಿತೇಃ ಇತಿ ಭಾವಃ । ಗ್ರಾಹ್ಯತ್ವೇನ=ವಿಷಯೀಕಾರ್ಯತ್ವೇನ ಇತ್ಯರ್ಥಃ । ಅಗ್ರಾಹ್ಯತ್ವೇನ= ಅವಿಷಯೀಕಾರ್ಯತ್ವೇನ । ಗೃಹ್ಯತೇ ಏವ=ವಿಷಯೀಕ್ರಿಯತೇ ಏವ, ಇತ್ಯರ್ಥಃ ।**

## ತೃತೀಯ ಸ್ವತಸ್ತ್ವನಿರುಕ್ತಿ ಭಂಗ

**स्वतस्त्वपक्षे व्यवसायप्रामाण्यग्राहकस्यानुव्यवसायस्य व्यवसाय-**

**विषयकेश्वरज्ञानजन्यतया तदजन्यज्ञानत्वाभावेन बाधात् । परतस्त्वपक्षे तदजन्येश्वरज्ञानविषयत्वेन सिद्धसाधनाच्च ।**

ಈ ಸ್ವತಸ್ತ್ವಪರಿಷ್ಕಾರಕ್ಕೆ ಬಾಧದೋಷ ಇದೆ. ಸ್ವತಸ್ತ್ವವಾದಿಗಳ ಮತದಲ್ಲಿ ವ್ಯವಸಾಯಗತ-ವಾದ ಪ್ರಾಮಾಣ್ಯವನ್ನು ಗ್ರಹಿಸುವ ಜ್ಞಾನ ಅನುವ್ಯವಸಾಯ. ಅದು ಗ್ರಾಹ್ಯಪ್ರಾಮಾಣ್ಯಾ-ಶ್ರಯವಾದ, ಜೀವಗತವ್ಯವಸಾಯವನ್ನು ವಿಷಯೀಕರಿಸುವ ಈಶ್ವರಜ್ಞಾನದಿಂದ ಜನ್ಯವಾಗಿದೆ. ಏಕೆಂದರೆ, ಈಶ್ವರಜ್ಞಾನವು ಜನ್ಯಮಾತ್ರಂ ಪ್ರತಿ ನಿಮಿತ್ತಕಾರಣ. ಹೀಗೆ ಜ್ಞಾನವಿಷಯಕ-ಈಶಜ್ಞಾನ-ಜನ್ಯಜ್ಞಾನವಿಷಯತ್ವವೇ ಪ್ರಾಮಾಣ್ಯದಲ್ಲಿ ಬರುತ್ತದೆ. ಅಜನ್ಯಜ್ಞಾನವಿಷಯತ್ವ ಬರಲಿಲ್ಲ. ಆದ್ದರಿಂದ ಬಾಧ.

2. ಸಿದ್ಧಸಾಧನತಾದೋಷವೂ ಇದೆ-ವ್ಯವಸಾಯ ವಿಷಯಕವಾದ ಜ್ಞಾನ= ಅನುವ್ಯವಸಾಯ. ತದಜನ್ಯವಾದುದು ಈಶ್ವರಜ್ಞಾನ. ಅದು ನಿತ್ಯವಾದುದರಿಂದ ತಜ್ಜ್ಞಾನ ವಿಷಯಕ-ಜ್ಞಾನದಿಂದ ಅಜನ್ಯವಾಗಿದೆ. ತದ್ವಿಷಯತ್ವವನ್ನು ಪ್ರಾಮಾಣ್ಯಕ್ಕೆ ನೈಯ್ಯಾಯಿಕರು ಒಪ್ಪಿದ್ದಾರೆ. ಹೀಗೆ ಈಶಜ್ಞಾನಮಾದಾಯ ಪ್ರಾಮಾಣ್ಯದಲ್ಲಿ ಸಾಧ್ಯಪರ್ಯವಸಾನ ಮಾಡಬಹುದಾದ್ದರಿಂದ ಸಿದ್ಧಸಾಧನತಾ.

## ನ್ಯಾಯದೀಪ

**ಕಿಮಿದಂ ಸ್ವತಸ್ತ್ವವಾದಿಮಾತ್ರಸಾಧಾರಣಮ್, ಉತ ನಿರೀಶ್ವರಮೀಮಾಂಸಕ ಮಾತ್ರಸಾಧಾರಣಮ್ ನಿರ್ವಚನಮ್? ಆದ್ಯೇ ಆಹ- ಸ್ವತಸ್ತ್ವಪಕ್ಷೇ ಇತಿ।**

**ಸಿದ್ಧಾಂತೇ ಸಾಕ್ಷಿಶಬ್ದಿತಾನುವ್ಯವಸಾಯ-ಜ್ಞಾನಸ್ಯ ನಿತ್ಯತ್ವೇಽಪಿ ಪ್ರಾಮಾಣ್ಯ-ವಿಷಯಕತ್ವರೂಪ-ವಿಶಿಷ್ಟವೇಷೇಣ ಜನ್ಯತ್ವಾತ್ ಇತಿ ಭಾವಃ।**

**ಅಂತ್ಯೇ ಆಹ-ಪರತಸ್ತ್ವಪಕ್ಷೇ ಇತಿ ॥ ಏವಂ ರೂಪೇ ಸ್ವತಸ್ತ್ವೇ ತ್ವಾಂ ಪ್ರತಿ ಉಚ್ಯಮಾನೇ ಗ್ರಾಹ್ಯಪ್ರಾಮಾಣ್ಯಾಶ್ರಯವಿಷಯಂ ಯತ್ ಈಶ್ವರಜ್ಞಾನಂ ತದಜನ್ಯಂ ತದೇವ । ತದ್ವಿಷಯತ್ವೇನ ತ್ವಯಾ ಸಿದ್ಧಸಾಧನತಾಯಾಃ ವಕ್ತುಂ ಶಕ್ಯತ್ವಾತ್ ಇತಿ ಭಾವಃ। ಅಯಂ ಚ ದೋಷಃ ಪ್ರಾಚೀನಪಕ್ಷೇಽಪಿ ಸಮಃ।**

**ಯತ್ತು ಈಶ್ವರನಿರಾಸಾಭಿಪ್ರಾಯೇಣ ಏವಂ ಸಾಧ್ಯಸ್ಯ ಮೀಮಾಂಸಕೇನ ಉಚ್ಯಮಾನತ್ವಾತ್ ನ ಸಿದ್ಧಸಾಧನತಾ ದೋಷಃ, ಇತಿ ತನ್ನ। ಅರ್ಥಾಂತರಾನಿವಾರಣಾತ್, ಇತಿ ರುಚಿದತ್ತೇನೈವ ದೂಷಿತತ್ವಾತ್।**

ಈ ಲಕ್ಷಣವು ಸ್ವತಸ್ತ್ವವನ್ನು ಅಂಗೀಕರಿಸುವ ವೇದಾಂತಿಗಳು ಮತ್ತು ಮೀಮಾಂಸಕರು

ಎಲ್ಲರಿಗೂ ಸಾಧರಣವಾದುದು, ಎನ್ನುವ ಪಕ್ಷಧರಮಿಶ್ರನ ಅಭಿಪ್ರಾಯವಾದಲ್ಲಿ ಮೊದಲನೆಯ ಬಾಧದೋಷ. ನಿರೀಶ್ವರವಾದಿಯಾದ ಮೀಮಾಂಸಕರ ಮತದಲ್ಲಿ ಹೀಗೆ ಈಶ್ವರಜ್ಞಾನಮಾದಾಯ ಬಾಧವನ್ನು ಹೇಳಲು ಬರುವುದಿಲ್ಲ. ಆದರೂ ವೇದಾಂತಿಗಳ ಮತದಲ್ಲಿ ಬಾಧವನ್ನು ಹೇಳಬಹುದು. ಮೀಮಾಂಸಕರಿಗೆ ಮಾತ್ರವೇ ಈ ಸ್ವತಸ್ತ್ವವಾದರೆ ಬಾಧ ಇಲ್ಲ. ಆದರೂ ನ್ಯಾಯಮತದಲ್ಲಿ ಸಿದ್ಧಸಾಧನತಾ.

ಹೀಗೆ ಪಕ್ಷಭೇದೇನ ಎರಡು ದೋಷಗಳನ್ನು ಹೇಳಬೇಕು. ಈಶ್ವರನನ್ನು ನಿರಾಕರಿಸುವ ಮೂಲಕ ಈಶಜ್ಞಾನಮಾದಾಯ ಸಿದ್ಧಸಾಧನತಾದೋಷವನ್ನು ಪರಿಹರಿಸುವ ಅಭಿಪ್ರಾಯದಿಂದ ಮೀಮಾಂಸಕರು ಈ ಲಕ್ಷಣವನ್ನು ಹೇಳಿದ್ದಾರೆ. ಆದ್ದರಿಂದ ಸಿದ್ಧಸಾಧನತಾದೋಷ ಇಲ್ಲ, ಎನ್ನುವುದೂ ಸರಿಯಲ್ಲ. ಹಾಗೆ ಹೇಳಿದರೂ ಸ್ವತಸ್ತ್ವವನ್ನು ಒಪ್ಪದೆಯೂ, ಬೇರೊಂದು ರೀತಿಯಿಂದಲೂ (ಈಶ್ವರಾಂಗೀಕಾರೇಣಾಪಿ) ಈ ಲಕ್ಷಣವನ್ನು ಪ್ರಾಮಾಣ್ಯದಲ್ಲಿ ಪರ್ಯವಸಾನ ಮಾಡಬಹುದಾದ್ದರಿಂದ ಮೀಮಾಂಸಕರಿಗೆ ಅರ್ಥಾಂತರತಾ ದೋಷ ಬರುತ್ತದೆ. ಹೀಗೆಂದು ರುಚಿದತ್ತನೇ ಹೇಳಿದ್ದಾನೆ.

## [1]ಯಜ್ಞಪತ್ಯುಪಾಧ್ಯಾಯರ ಪರಿಷ್ಕಾರ

### १. नापि तज्ज्ञानविषयक-जन्यज्ञानाजन्य-जन्यज्ञानविषयत्वं वा ।

### २. तज्ज्ञानविषयक - समानाधिकरण - ज्ञानाजन्य - समानाधिकरण-ज्ञानविषयत्वं वा स्वतस्त्वम् ।

ಈ ಲಕ್ಷಣದಲ್ಲಿ ತಜ್ಜ್ಞಾನ ಎಂದರೆ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ವ್ಯವಸಾಯಾತ್ಮಕ ಜ್ಞಾನ. ತದ್ವಿಷಯಕ ಜನ್ಯಜ್ಞಾನ ಎಂದರೆ ಜೀವಗತವಾದ ಅನುವ್ಯವಸಾಯ ಮಾತ್ರ. ಈಶಜ್ಞಾನವಲ್ಲ. ಏಕೆಂದರೆ, ಅದು ಜನ್ಯಜ್ಞಾನವಲ್ಲ. ಹೀಗೆ ಜನ್ಯಪದವನ್ನು ಕೊಟ್ಟಿರುವುದರಿಂದ ಈಶಜ್ಞಾನವನ್ನು ಪರಿಗ್ರಹಿಸಲು ಸಾಧ್ಯವಿಲ್ಲವಾದುದರಿಂದ ಹಿಂದೆ ಹೇಳಿದ ಬಾಧ ಇಲ್ಲ.

ತಾದೃಶ ಜನ್ಯಜ್ಞಾನವಾದ ಅನುವ್ಯವಸಾಯದಿಂದ ಅಜನ್ಯವಾದ ಜನ್ಯಜ್ಞಾನ ಎಂದರೆ ಮತ್ತೆ ಅನುವ್ಯವಸಾಯವೇ ಆಗುತ್ತದೆ. ಇಲ್ಲಿಯೂ ಈಶಜ್ಞಾನ ಸಂಗ್ರಹವಾಗುವುದಿಲ್ಲ. ಅದು ಜನ್ಯಜ್ಞಾನ ಅಲ್ಲ. ಹೀಗೆ ಎರಡನೆಯ ಜನ್ಯಪದದಿಂದ ಈಶಜ್ಞಾನ ನಿರಾಸವಾಗುವುದರಿಂದ ಹಿಂದೆ ಹೇಳಿದ

---

1. ಯಜ್ಞಪತ್ಯುಪಾಧ್ಯಾಯ ಹದಿನೈದನೆಯ ಶತಮಾನದಲ್ಲಿದ್ದ ಪ್ರಚಂಡ ಪಂಡಿತ. ನರಹರಿಮಿಶ್ರನ ತಂದೆ. ಮಹಾಮಹೋಪಾಧ್ಯಾಯ ಬಿರುದಾಂಕಿತ. ಇವನ ಮತವನ್ನು ಮುಂದಿನವರು 'ಉಪಾಧ್ಯಾಯಮತ' ಎಂದು ಉಲ್ಲೇಖಿಸುತ್ತಾರೆ. ಶಿವಪತ್ಯುಪಾಧ್ಯಾಯ ಇವನ ತಂದೆ, ತತ್ತ್ವಚಿಂತಾಮಣಿಗೆ ಪ್ರಭಾ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಇವನು ಹಿಂದೆ ಹೇಳಿದ ದೋಷಪರಿಹಾರವಾಗುವಂತೆ ಲಕ್ಷಣವನ್ನು ಪರಿಷ್ಕರಿಸಿದ್ದಾನೆ.

ಸಿದ್ಧಸಾಧನತಾದೋಷವೂ ಇಲ್ಲ. ಅಂತಹ ಅನುವ್ಯವಸಾಯವಿಷಯತ್ವ ಸ್ವತಸ್ತ್ವಪಕ್ಷದಲ್ಲಿ ಪ್ರಾಮಾಣ್ಯಕ್ಕೆ ಇದೆ, ಪರತಸ್ತ್ವಪಕ್ಷದಲ್ಲಿ ಇಲ್ಲ. ಆದ್ದರಿಂದ ಬಾಧ-ಸಿದ್ಧಸಾಧನತಾದೋಷಗಳು ಇಲ್ಲ.

ಎರಡನೆಯ ಪರಿಷ್ಕಾರದಲ್ಲಿ ಜನ್ಯಪದದ ಸ್ಥಾನಗಳಲ್ಲಿ ಸಮಾನಾಧಿಕರಣ ಪದಗಳಿವೆ. ಇದರಿಂದಲೂ ಬಾಧ-ಸಿದ್ಧಸಾಧನತಾಗಳನ್ನು ಪರಿಹರಿಸಬಹುದು.

ತಜ್ಜ್ಞಾನ=ವ್ಯವಸಾಯ-'ಅಯಂ ಘಟಃ' ಎಂಬ ಜ್ಞಾನ. ತದ್ವಿಷಯಕವಾದ ಸಮಾನಾಧಿಕರಣ ಜ್ಞಾನವೆಂದರೆ ಜೀವಗತ ಅನುವ್ಯವಸಾಯ ಮಾತ್ರ. ಜೀವಗತವ್ಯವಸಾಯ ವಿಷಯಕವಾದ ಈಶಜ್ಞಾನವು ಜೀವಗತವಾದ ವ್ಯವಸಾಯ-ಸಮಾನಾಧಿಕರಣವಲ್ಲ, ವ್ಯಧಿಕರಣ.

ಅಂತಹ ಅನುವ್ಯವಸಾಯದಿಂದ ಅಜನ್ಯವಾದ ಹಾಗೂ ತತ್-ಸಮಾನಾಧಿಕರಣವಾದ ಜ್ಞಾನವೆಂದರೆ ಮತ್ತೆ ಅದೇ ಅನುವ್ಯವಸಾಯ. ಈಶಜ್ಞಾನವಲ್ಲ. ಅದು ಜೀವಗತವಾದ ಅನುವ್ಯವಸಾಯ ಸಮಾನಾಧಿಕರಣವಲ್ಲ. ತಾದೃಶ-ಅನುವ್ಯವಸಾಯವಿಷಯತ್ವವು ಸ್ವತಸ್ತ್ವಪಕ್ಷದಲ್ಲಿ ಪ್ರಾಮಾಣ್ಯದಲ್ಲಿ ಇದೆ, ಆದ್ದರಿಂದ ಬಾಧ ಇಲ್ಲ. ಪರತಸ್ತ್ವಪಕ್ಷದಲ್ಲಿ ಇಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

## ನ್ಯಾಯದೀಪ

**ಯಜ್ಞಪತಿನಾ ಉಕ್ತವಿವಕ್ಷಾಮನೂದ್ಯ ನಿರಾಹ-ನಾಪೀತಿ ॥ ಸರ್ವಸ್ಯಾಪಿ ಜನ್ಯಜ್ಞಾನಸ್ಯ ತಜ್ಜ್ಞಾನವಿಷಯಕೇಶ್ವರಜ್ಞಾನಜನ್ಯತ್ವೇನ ಅಪ್ರಸಿದ್ಧಿವಾರಣಾಯ ಆದ್ಯಂ ಜನ್ಯಪದಮ್ ।**

**ದ್ವಿತೀಯಂ ತು ಈಶ್ವರಜ್ಞಾನಮಾದಾಯ ಸಿದ್ಧಸಾಧನತಾನಿರಾಸಾರ್ಥಮ್ । ಏವಮಗ್ರೇ ಸಮಾನಾಧಿಕರಣ-ಪದದ್ವಯಕೃತ್ಯಂ ಧ್ಯೇಯಮ್ ।**

ಮೊದಲನೆಯ ಜನ್ಯಪದವನ್ನು ಬಿಟ್ಟರೆ ಅಪ್ರಸಿದ್ಧಿ. ಏಕೆಂದರೆ, ಜನ್ಯಜ್ಞಾನಗಳೆಲ್ಲವೂ ಈಶಜ್ಞಾನ ಜನ್ಯವಾಗಿವೆ. ಎರಡನೆಯ ಜನ್ಯಪದ ಬಿಟ್ಟರೆ ಸಿದ್ಧಸಾಧನತಾ. ಏಕೆಂದರೆ, ವ್ಯವಸಾಯ ವಿಷಯಕವಾದ ಈಶಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಎಂದು ನೈಯಾಯಿಕರಿಗೆ ಸಿದ್ಧ.

ಮುಂದಿನ ಪರಿಷ್ಕಾರದಲ್ಲಿ ಜನ್ಯಪದಸ್ಥಾನದಲ್ಲಿ ಸಮಾನಾಧಿಕರಣಪದಗಳನ್ನು ಹಾಕಲಾಗಿದೆ. ಅದರ ಕೃತ್ಯವನ್ನೂ ಹೀಗೆಯೇ ತಿಳಿಯಬೇಕು.

## ಯಜ್ಞಪತ್ಯುಪಾಧ್ಯಾಯೋಕ್ತಪರಿಷ್ಕಾರ ನಿರಾಸ

परतस्त्वपक्षेऽपि प्रामाण्यस्यैवंविधं सामान्यप्रत्यासत्तिजन्यं प्रमेयमिति यज्ज्ञानं तद्विषयत्वेन सिद्धसाधनात् ।

ಈ ಸ್ವತಸ್ತ್ವಪರಿಷ್ಕಾರವನ್ನು ಪರತಸ್ತ್ವಪಕ್ಷದಲ್ಲೂ ಸಮನ್ವಯಮಾಡಬಹುದು– 'ಅಯಂ ಘಟಃ' ಎಂಬ ವ್ಯವಸಾಯವಿಷಯಕ ಜ್ಞಾನ='ಪ್ರಮೇಯಮ್' ಎಂಬ ಜ್ಞಾನ. ಈ ಜ್ಞಾನವು ಪ್ರಮೇಯತ್ವರೂಪವಾದ ಸಾಮಾನ್ಯಲಕ್ಷಣಾ-ಪ್ರತ್ಯಾಸತ್ತಿಯಿಂದ ಜನ್ಯವಾಗಿದೆ. ಸಕಲ ಪ್ರಮೇಯಗಳೂ ಈ ಜ್ಞಾನಕ್ಕೆ ವಿಷಯ. ಆದ್ದರಿಂದ ವ್ಯವಸಾಯವೂ ವಿಷಯ. ಅಂತಹ 'ಪ್ರಮೇಯಂ' ಎಂಬ ಜ್ಞಾನದಿಂದ ಅಜನ್ಯವಾದ ಜನ್ಯಜ್ಞಾನ (ಪ್ರಥಮಪರಿಷ್ಕಾರದಂತೆ) ಅಥವಾ ತತ್ ಸಮಾನಾಧಿಕರಣವಾದ ಜ್ಞಾನ='ಪ್ರಮೇಯಮ್' ಎಂಬ ಅದೇ ಜ್ಞಾನ. ಅದಕ್ಕೆ ಸಕಲವೂ ವಿಷಯವಾದುದರಿಂದ ಪ್ರಾಮಾಣ್ಯವೂ ವಿಷಯವಾಗಿದೆ.

ಹೀಗೆ ಸ್ವತಸ್ತ್ವವನ್ನು ಅಂಗೀಕರಿಸದಯೇ ಈ ಲಕ್ಷಣವನ್ನು ಸಮನ್ವಯ ಮಾಡಬಹುದಾದ್ದರಿಂದ ಸಿದ್ಧಸಾಧನತಾದೋಷ.

## ನ್ಯಾಯದೀಪ

**ಯುಗಪದೇವ ವಿವಕ್ಷಾದ್ವಯೇಽಪಿ ದೋಷಮಾಹ–ಪರತಸ್ತ್ವೇತಿ । ಏವಂ ವಿಧಮ್ ॥ ತಜ್ಜ್ಞಾನವಿಷಯಕ–ಜನ್ಯಜ್ಞಾನಾಜನ್ಯ–ಜನ್ಯರೂಪಮ್, ತಜ್ಜ್ಞಾನವಿಷಯಕ–ಸಮಾನಾಧಿಕರಣ–ಜ್ಞಾನಾಜನ್ಯ–ಸಮಾನಾಧಿಕರಣ ರೂಪಂ ಚ, ಇತ್ಯರ್ಥಃ ।**

**ಪ್ರಮೇಯಮಿತಿ ॥ ಪ್ರಮೇಯತ್ವಪ್ರಕಾರಕಂ ಪ್ರಮೇಯವಿಶೇಷ್ಯಕಂ ಯಜ್ಜ್ಞಾನಂ ತದ್ಗ್ರಾಹ್ಯ–ಪ್ರಾಮಾಣ್ಯಾಶ್ರಯವಿಷಯಕಂ ಘಟಾದಿಜ್ಞಾನ ರೂಪ–ಜನ್ಯಜ್ಞಾನ–ಸಮಾನಾಧಿಕರಣ–ಜ್ಞಾನಾಜನ್ಯಂ ಜನ್ಯಂ, ಸಮಾನಾಧಿ-ಕರಣಂ, ಪ್ರಮೇಯತ್ವಪ್ರಕಾರೇಣ ಪ್ರಾಮಾಣ್ಯವಿಷಯಕಂ ಚ ಇತಿ ತದ್ವಿಷಯತ್ವೇನ ಸಿದ್ಧಸಾಧನಮಿತ್ಯರ್ಥಃ ।**

**ಏತಚ್ಚೋಪಲಕ್ಷಣಮ್ । ನಿರೀಶ್ವರಮತೇ ವ್ಯರ್ಥವಿಶೇಷಣತ್ವಂ ಚ ಬೋಧ್ಯಮ್। ಏತೇನ ''ನ ಸಮಾನಾಧಿಕರಣೇತಿ ವಿಶೇಷಣೀಯಮ್'' ಇತಿ ಶಿರೋಮಣಿ ಪಕ್ಷೋಽಪಿ ಪ್ರತ್ಯುಕ್ತಃ ।**

ಸಿದ್ಧಸಾಧನತಾ ದೋಷ ಉಪಲಕ್ಷಣ. ವ್ಯರ್ಥವಿಶೇಷಣತಾದೋಷವೂ ಇದೆ. ಮೀಮಾಂಸಕರು ನಿರೀಶ್ವರವಾದಿಗಳು. ಅವರ ಮತದಂತೆ ಈಶಜ್ಞಾನವಾರಕವಾದ ಎರಡು ಜನ್ಯಪದಗಳು ಮತ್ತು ಎರಡು ಸಮಾನಾಧಿಕರಣ ಪದಗಳು ಸಾಧ್ಯದಲ್ಲಿ ವ್ಯರ್ಥ.

## ಅವಾಂತರಾಕ್ಷೇಪ–ಪರಿಹಾರ

**विषयपदेन प्रकारत्वविवक्षायामपि स्वतस्त्वपक्षेऽपि प्रामाण्यस्य 'सर्वं**

**ज्ञानं गुणः' इति शब्दजन्य-व्यवसायविषयका-नुव्यवसायस्य सर्वज्ञानान्तर्भूत-स्वविषयकव्यवसायजन्यत्वेन तदजन्यत्वाभावेनांशे बाधात् । एतदभावरूप-परतस्त्वसाधनेंऽशे सिद्धसाधनाच्च ।**

ಜ್ಞಾನವಿಷಯತ್ವ ಪ್ರಾಮಾಣ್ಯದಲ್ಲಿ ಬರಬೇಕು. ಅಲ್ಲಿ ವಿಷಯತ್ವವೆಂದರೆ ಪ್ರಕಾರತಾಖ್ಯ ವಿಷಯತ್ವ. ಅಂದರೆ ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿರಬೇಕು. 'ಘಟಜ್ಞಾನಮ್ ಪ್ರಮಾಣಂ' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿ ಕಾಣುತ್ತದೆ. ಅಥವಾ 'ಇದಂ ಜ್ಞಾನಂ ಘಟತ್ವವತಿ ಘಟತ್ವ-ಪ್ರಕಾರಕಂ' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿ ತೋರುತ್ತದೆ. ಆದರೆ, 'ಪ್ರಮೇಯಂ' ಎಂಬ ಜ್ಞಾನದಲ್ಲಿ ಪ್ರಮೇಯದಲ್ಲಿ ಪ್ರಮೇಯತ್ವವು ಪ್ರಕಾರ, ಪ್ರಾಮಾಣ್ಯವು ವಿಶೇಷ್ಯವಾಗಿ ತೋರುತ್ತದೆ, ಪ್ರಕಾರವಾಗಿ ತೋರುವುದಿಲ್ಲ, ಆದ್ದರಿಂದ ಬಾಧವಿಲ್ಲ.

ಹೀಗೆ ಹೇಳಿದರೂ ಪ್ರಾಮಾಣ್ಯವಿಶೇಷದಲ್ಲಿ ಬಾಧದೋಷ ಅನಿವಾರ್ಯ– 'ಸರ್ವಂ ಜ್ಞಾನಂ ಗುಣಃ' ಎಂಬ ಶಬ್ದದಿಂದ ಸರ್ವಜ್ಞಾನವಿಷಯಕವಾದ ಶಾಬ್ದಬೋಧವು ಹುಟ್ಟುತ್ತದೆ. ಆ ಶಾಬ್ದಜ್ಞಾನವೂ ಸ್ವಯಂ ಆ ಶಾಬ್ದಬೋಧದಲ್ಲಿ ವಿಷಯವಾಗುತ್ತದೆ. ಇದರಿಂದಾಗಿ ತಜ್ಜ್ಞಾನ ವಿಷಯಕ ಜ್ಞಾನ ಎಂದರೆ ಸ್ವವಿಷಯಕವಾದ ಶಾಬ್ದಬೋಧ. ಅದು ಅದರ ಅನುವ್ಯವಸಾಯಕ್ಕೆ ವಿಷಯವಿಧಯಾ ಕಾರಣ. ಆದ್ದರಿಂದ ತಜ್ಜ್ಞಾನವಿಷಯಕಜ್ಞಾನಜನ್ಯವಾಗಿದೆ, ಅದರ ಅನುವ್ಯವಸಾಯ. ಆ ಅನುವ್ಯವಸಾಯ ಗ್ರಾಹ್ಯವಾದ ಶಾಬ್ದಬೋಧಗತ ಪ್ರಾಮಾಣ್ಯದಲ್ಲಿ ತಜ್ಜ್ಞಾನವಿಷಯಕಜ್ಞಾನಜನ್ಯಜ್ಞಾನವಿಷಯತ್ವವೇ ಇದೆ, ಅಜನ್ಯಜ್ಞಾನವಿಷಯತ್ವ ಇಲ್ಲ. ಆದ್ದರಿಂದ ಬಾಧ. ಏತಾದೃಶ ಸ್ವತಸ್ತ್ವಾಭಾವವನ್ನು ಆ ಪ್ರಾಮಾಣ್ಯದಲ್ಲಿ ನೈಯಾಯಿಕರು ಸಾಧನೆ ಮಾಡಿದಾಗ ಸ್ವತಸ್ತ್ವವಾದಿಗಳಿಗೆ ಸಿದ್ಧಸಾಧನತಾದೋಷ. ಹೀಗೆ ಈ ಪರಿಷ್ಕಾರವೂ ದೋಷಮುಕ್ತವಲ್ಲ.

## ನ್ಯಾಯದೀಪ

**ನನು ಪ್ರಮೇಯಮಿತಿ ಜ್ಞಾನೇ ವಿಶೇಷ್ಯತಯಾ ಪ್ರಾಮಾಣ್ಯಸ್ಯ ವಿಷಯತ್ವೇಽಪಿ ನ ಪ್ರಕಾರತಯಾ। ತಥಾತ್ವೇನ ವಿಷಯತ್ವಂ ಚ ನಿರುಕ್ತೌ ವಿವಕ್ಷಿತಮ್, ಇತ್ಯತ ಆಹ-ವಿಷಯೇತಿ ॥ ಪ್ರಾಮಾಣ್ಯಸ್ಯ ಇತ್ಯಸ್ಯ ಅನುವ್ಯವಸಾಯೇನ, ಇತ್ಯತ್ರಾನ್ವಯಃ। ಪ್ರಾಮಾಣ್ಯಗೋಚರಸ್ಯ, ಇತ್ಯರ್ಥಃ। ಸ್ವಪದೇನ ವ್ಯವಸಾಯಃ।**

**ಗುಣತ್ವ-ಪ್ರಕಾರಕ-ಸರ್ವಜ್ಞಾನ-ವಿಶೇಷ್ಯಕ-ಶಾಬ್ದಜ್ಞಾನನಿಷ್ಠ-ಪ್ರಾಮಾಣ್ಯ-ಗ್ರಾಹಕಃ ಅನುವ್ಯವಸಾಯಃ ವ್ಯವಸಾಯಜನ್ಯಃ। ಸ ಚ ವ್ಯವಸಾಯಃ**

**ಸರ್ವಜ್ಞಾನವಿಷಯಕಃ, ಜ್ಞಾನತ್ವೇನ ಸ್ವಾತ್ಮಾನಮಪಿ ವಿಷಯೀಕರೋತೀತಿ ತತ್-ಪ್ರಮಾಣ್ಯಸ್ಯ ತಜ್ಜ್ಞಾನವಿಷಯಕ-ಜ್ಞಾನಜನ್ಯ-ಜ್ಞಾನಪ್ರಕಾರತ್ವಮೇವ ಅಸ್ತಿ । ತದಜನ್ಯ-ಜ್ಞಾನಪ್ರಕಾರತ್ವಂ ನೇತಿ, 'ಸರ್ವಂ ಜ್ಞಾನಂ ಗುಣಃ' ಇತಿ ಜ್ಞಾನನಿಷ್ಠಪ್ರಾಮಾಣ್ಯಾಂಶೇ ಬಾಧ ಇತ್ಯರ್ಥಃ। ಸರ್ವಜ್ಞಾನಾಂತರ್ಭೂತಂ ಚ ತತ್ ಸ್ವಂ ಚ ಇತಿ ವಿಗ್ರಹಃ ।**

'ಸರ್ವಂ ಜ್ಞಾನಂ ಗುಣಃ' ಎಂಬ ಶಾಬ್ದಬೋಧದಲ್ಲಿ ಗುಣತ್ವವು ಪ್ರಕಾರ, ಸರ್ವಜ್ಞಾನಗಳೂ ವಿಶೇಷ್ಯ. ಇಂತಹ ಶಾಬ್ದಬೋಧವನ್ನು ಗ್ರಹಿಸುವ ಇದರ ಅನುವ್ಯವಸಾಯವು ಶಾಬ್ದಬೋಧಾತ್ಮಕವಾದ ವ್ಯವಸಾಯದಿಂದ ಜನ್ಯವಾಗಿದೆ. ಆ ವ್ಯವಸಾಯವು ಸಕಲಜ್ಞಾನವಿಷಯಕವಾದ ಕಾರಣ, ಜ್ಞಾನತ್ವೇನ ತನ್ನನ್ನೂ ವಿಷಯೀಕರಿಸುತ್ತದೆ. ಹೀಗೆ, ಅದು ತಜ್ಞಾನವಿಷಯಕವಾಯಿತು. ಆದ್ದರಿಂದ ಅದರ ಪ್ರಾಮಾಣ್ಯವು ತಜ್ಜ್ಞಾನವಿಷಯಕಜ್ಞಾನಜನ್ಯ ಜ್ಞಾನದಲ್ಲಿ ಪ್ರಕಾರವಾಗಿದೆ. ಹೊರತು, ತದಜನ್ಯಜ್ಞಾನದಲ್ಲಿ ಪ್ರಕಾರವಲ್ಲ. ಹೀಗಾಗಿ 'ಸರ್ವಂ ಜ್ಞಾನಂ ಗುಣಃ' ಎಂಬ ಜ್ಞಾನನಿಷ್ಠ ಪ್ರಾಮಾಣ್ಯದಲ್ಲಿ ಬಾಧ.

## ಅವಾಂತರ ಪರಿಹಾರ ಮತ್ತು ನಿರಾಸ

**न चैवंविधव्यवसायप्रामाण्यस्य अपक्षत्वान्न बाध इति वाच्यम् ।**
**सामान्ये विप्रतिपत्तौ विशेषे साध्यसाधनेऽर्थान्तरात् ।**

ಪ್ರಾಮಾಣ್ಯವನ್ನು ಪಕ್ಷಮಾಡಿ ಈ ರೀತಿಯ ಸ್ವತಸ್ತ್ವವನ್ನು ಸಾಧ್ಯಮಾಡಿದಾಗ ಬಾಧವನ್ನು ಹೇಳಬೇಕು. ಆದರೆ ಸಕಲ ಪ್ರಾಮಾಣ್ಯವೂ ಪಕ್ಷವಲ್ಲ, ಇಂತಹ ಪ್ರಾಮಾಣ್ಯವನ್ನು ಬಿಟ್ಟು ಇತರ ಪ್ರಾಮಾಣ್ಯಗಳೇ ಪಕ್ಷ. ಆದ್ದರಿಂದ ಬಾಧ ಇಲ್ಲ, ಎನ್ನುವ ಪರಿಹಾರ ಯುಕ್ತವಲ್ಲ. 'ಪ್ರಾಮಾಣ್ಯಂ ಸ್ವತಃ ಪರತೋ ವಾ' ಎಂಬ ವಿಪ್ರತಿಪತ್ತಿ ಎಲ್ಲಾ ಪ್ರಾಮಾಣ್ಯಗಳಲ್ಲಿ ಇರುವಾಗ ಅದಕ್ಕೆ ಅನುಗುಣವಾಗಿ ಸಕಲ ಪ್ರಾಮಾಣ್ಯಗಳನ್ನೇ ಪಕ್ಷವನ್ನಾಗಿ ಮಾಡಬೇಕು. ಅದನ್ನು ಬಿಟ್ಟು ಕೆಲವು ಪ್ರಾಮಾಣ್ಯಗಳನ್ನು ಮಾತ್ರ ಪಕ್ಷ ಮಾಡಿ ಏಕದೇಶದಲ್ಲಿ ಸಾಧ್ಯವನ್ನು ಸಾಧನೆ ಮಾಡಿದರೆ ಅರ್ಥಾಂತರತಾದೋಷ ಬರುತ್ತದೆ.

(ರುಚಿದತ್ತನು ತದತಿರಿಕ್ತ ಪ್ರಾಮಾಣ್ಯವೇ ಪಕ್ಷ ಎನ್ನುವುದನ್ನು ಅಂಗೀಕರಿಸಿ ಪ್ರಕಾಶ ವ್ಯಾಖ್ಯಾನದಲ್ಲಿ ದೋಷಾಂತರವನ್ನು ಹೇಳಿ ನಿರಾಕರಿಸಿರುತ್ತಾನೆ-ಪುಟ. 152)

## ನ್ಯಾಯದೀಪ

**ಕೇನಚಿದುಕ್ತ-ಸಮಾಧಿಮಾಶಂಕ್ಯ ನಿರಾಹ-ನ ಚೈವಂ ವಿಧೇತಿ॥**

**ಅರ್ಥಾಂತರಾದಿತಿ ॥ ಸಾಮಾನ್ಯಧರ್ಮಾವಚ್ಛಿನ್ನ-ಸ್ವತಸ್ತ್ವ-ಪರತಸ್ತ್ವ-ಸಂಶಯ ನಿರ್ವರ್ತನಾನು ಪಯೋಗಾತ್ ಅರ್ಥಾಂತರಾದಿತಿ ಭಾವಃ ।**

## ಪಕ್ಷಧರ ಮಿಶ್ರನ ಪರಿಷ್ಕಾರ

**एतेन तज्ज्ञानविषयक-ज्ञानाजन्य-ज्ञानविषयत्वमेव स्वतस्त्वम् । न तु जन्यपदद्वयं वा समानाधिकरणपदद्वयं वा प्रक्षेप्यम् । न चैवं पूर्वोक्तेश्वरज्ञानमादाय बाधसिद्धसाधनते स्यातामिति वाच्यम् । तव्यतिरेकप्रयुक्त-व्यतिरेकप्रतियोगित्व-रूपजन्यत्वस्य अभावरूप-मजन्यत्वं हि द्वेधा । तव्यतिरेकप्रयुक्तव्यतिरेकाप्रतियोगित्वेन वा तव्यतिरेका-प्रयुक्तव्यतिरेकप्रतियोगित्वेन वेति । तत्राद्यस्याजन्य-त्वस्येश्वरज्ञाने सत्वेऽपि मया विवक्षितस्य द्वितीयस्याभावात् । न हीश्वरज्ञानं प्रागभावरूपव्यतिरेकप्रतियोगीति निरस्तम् ।**

ಪ್ರಾರಂಭದಲ್ಲಿ ಹೇಳಿದ– ತಜ್ಜ್ಞಾನವಿಷಯಕಜ್ಞಾನಾಜನ್ಯಜ್ಞಾನವಿಷಯತ್ವಂ, ಇದೇ ಸ್ವತಸ್ತ್ವ. ಇದರಲ್ಲಿ ಹಿಂದೆ ಹೇಳಿದ ಎರಡು ಜನ್ಯಪದಗಳನ್ನಾಗಲೀ ಸಮಾನಾಧಿಕರಣ ಪದದ್ವಯಗಳನ್ನಾಗಲೀ ಕೊಡುವ ಅಗತ್ಯವಿಲ್ಲ. ಕೊಡದಿದ್ದರೆ ಹಿಂದೆ ಹೇಳಿದಂತೆ, ತಜ್ಞಾನವಿಷಯಕಜ್ಞಾನಾಜನ್ಯವಾದ ಈಶಜ್ಞಾನಕ್ಕೆ ಪ್ರಾಮಾಣ್ಯವು ವಿಷಯವಾದುದರಿಂದ ಸಿದ್ಧಸಾಧನತಾ–ಬಾಧ–ದೋಷಗಳನ್ನು ಪರಿಹಾರ ಮಾಡುವುದು ಹೇಗೆ? ಎಂದರೆ, ಹೀಗೆ ಪರಿಹಾರ ಮಾಡಬಹುದು.

ಜನ್ಯತ್ವವೆಂದರೆ ತದ್–ವ್ಯತಿರೇಕಪ್ರಯುಕ್ತ–ವ್ಯತಿರೇಕ–ಪ್ರತಿಯೋಗಿತ್ವಮ್ । ವ್ಯತಿರೇಕ ಎಂದರೆ ಪ್ರಾಗಭಾವ. ದಂಡಪ್ರಾಗಭಾವ ಪ್ರಯುಕ್ತವಾಗಿ ಘಟಪ್ರಾಗಭಾವ ಇದೆ. ಅರ್ಥಾತ್ ದಂಡ ಇಲ್ಲದಿರುವಾಗ ಘಟವು ಹುಟ್ಟುವುದಿಲ್ಲ. ರಾಸಭ ಇಲ್ಲದೆಯೂ ಘಟ ಹುಟ್ಟುತ್ತದೆ. ಘಟ ಪ್ರಾಗಭಾವವು ರಾಸಭಪ್ರಾಗಭಾವ ಪ್ರಯುಕ್ತ ಅಲ್ಲ. ದಂಡಪ್ರಾಗಭಾವ ಪ್ರಯುಕ್ತ. ಅಂತಹ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದರಿಂದ ಘಟವು ದಂಡ ಜನ್ಯ.

ಇಂತಹ ಜನ್ಯತ್ವದ ಅಭಾವವೇ ಅಜನ್ಯತ್ವ. ಅದು ಎರಡು ರೀತಿಯಿಂದ ಬರಬಹುದು– 1. 'ಅಜನ್ಯ' ಪದದ ನಿಷೇಧಾರ್ಥಕಪದವನ್ನು 'ಜನ್ಯ' ಪದದೊಂದಿಗೆ ಅನ್ವಯಮಾಡಿದರೆ–ತದ್ ವ್ಯತಿರೇಕ ಪ್ರಯುಕ್ತ ವ್ಯತಿರೇಕಾ–ಪ್ರತಿಯೋಗಿ–ಎಂಬ ಅರ್ಥ ಬರುತ್ತದೆ. 2. 'ತದ್ವಿಷಯಷಯಕ ಜ್ಞಾನಾಜನ್ಯ–ಜ್ಞಾನ' ಎಂಬಲ್ಲಿ 'ಅಜನ್ಯ' ಪದದಲ್ಲಿರುವ ನಿಷೇಧಾರ್ಥಕ ಅಕಾರವನ್ನು ಪೂರ್ವಪದದೊಂದಿಗೆ=ಜ್ಞಾನಪದದೊಂದಿಗೆ ಸೇರಿಸಿದರೆ ತಜ್ಞಾನವಿಷಯಕ 'ಜ್ಞಾನಭಿನ್ನಜನ್ಯಜ್ಞಾನ'

ಎಂದು ಅರ್ಥಬರುತ್ತದೆ. ಜನ್ಯತ್ವದ ಪರಿಷ್ಕಾರವನ್ನು ಸೇರಿಸಿ ಹೇಳಿದರೆ 'ತಜ್ಜ್ಞಾನವ್ಯತಿರೇಕಾ ಪ್ರಯುಕ್ತ ವ್ಯತಿರೇಕ ಪ್ರತಿಯೋಗಿ ಜ್ಞಾನ' ಎಂದಾಗುತ್ತದೆ. 'ವ್ಯವಸಾಯ-ವಿಷಯಕ-ಅನುವ್ಯವಸಾಯ ವ್ಯತಿರೇಕ-ಅಪ್ರಯುಕ್ತ-ವ್ಯತಿರೇಕ-ಪ್ರತಿಯೋಗಿ' ಎಂದು 'ತಜ್ಜ್ಞಾನ ವಿಷಯಕ ಜ್ಞಾನಾಜನ್ಯ' ಎನ್ನುವುದಕ್ಕೆ ಅರ್ಥ.

ಈ ಎರಡರಲ್ಲಿ ಮೊದಲನೆಯ ಅಜನ್ಯತ್ವವು ಈಶ್ವರ ಜ್ಞಾನದಲ್ಲಿ ಬರಬಹುದು. ಈಶ್ವರಜ್ಞಾನ ನಿತ್ಯವಾದುದರಿಂದ ವ್ಯತಿರೇಕ ಪ್ರತಿಯೋಗಿಯಲ್ಲ. ಆದ್ದರಿಂದ ವ್ಯತಿರೇಕ ಅಪ್ರತಿಯೋಗಿತ್ವ ಅದರಲ್ಲಿ ಬರುತ್ತದೆ.

ಆದರೆ, ಎರಡನೆಯ ಅಜನ್ಯತ್ವವು ಈಶಜ್ಞಾನದಲ್ಲಿ ಇಲ್ಲ. ಕಾರಣ ಹಿಂದಿನದೇ. ಅದು ನಿತ್ಯವಾದುದರಿಂದ ವ್ಯತಿರೇಕ (ಪ್ರಾಗಭಾವ) ಪ್ರತಿಯೋಗಿಯಲ್ಲ. ಆದ್ದರಿಂದ ಅದರಲ್ಲಿ ವ್ಯತಿರೇಕ ಪ್ರತಿಯೋಗಿತ್ವ ಬರುವುದಿಲ್ಲ.

ಹೀಗೆ ತಜ್ಜ್ಞಾನವಿಷಯಕ-ಜ್ಞಾನಾಜನ್ಯ-ಜ್ಞಾನವೆಂದರೆ ಈಶಜ್ಞಾನವಲ್ಲದ ಕಾರಣ ತದ್ವಿಷಯತ್ವವು ಪ್ರಾಮಾಣ್ಯದಲ್ಲಿ ಇದೆ, ಎಂದು ಸಿದ್ಧಸಾಧನತಾದೋಷವನ್ನು ಹೇಳಲಾಗುವುದಿಲ್ಲ.

ಅದರಂತೆ, ಬಾಧವೂ ಇಲ್ಲ. ವ್ಯವಸಾಯವಿಷಯಕವಾದ ಈಶಜ್ಞಾನದಿಂದ ನಮ್ಮ ಅನುವ್ಯವಸಾಯ ಜನ್ಯವಾಗಿದೆ. ಅದಕ್ಕೆ ವಿಷಯವಾದ ಪ್ರಾಮಾಣ್ಯದಲ್ಲಿ ಜನ್ಯಜ್ಞಾನವಿಷಯತ್ವವೇ ಬರುತ್ತದೆ, ಅಜನ್ಯಜ್ಞಾನವಿಷಯತ್ವವು ಇಲ್ಲ, ಎಂದು ಬಾಧವನ್ನು ಹೇಳಬೇಕು. ಆದರೆ, ಜನ್ಯತ್ವವೆಂದರೆ ತದ್-ವ್ಯತಿರೇಕ-ಪ್ರಯುಕ್ತ-ವ್ಯತಿರೇಕ-ಪ್ರತಿಯೋಗಿತ್ವಂ. ಈಶಜ್ಞಾನ ವ್ಯತಿರೇಕವೇ ಇಲ್ಲವಾದ ಕಾರಣ ತದ್-ವ್ಯತಿರೇಕ-ಪ್ರಯುಕ್ತ-ವ್ಯತಿರೇಕ-ಪ್ರತಿಯೋಗಿತ್ವ-ರೂಪವಾದ ಈಶಜ್ಞಾನ ಜನ್ಯತ್ವವು ನಮ್ಮ ಅನುವ್ಯವಸಾಯದಲ್ಲಿ ಇಲ್ಲ. ಹೀಗೆ ಬಾಧವೂ ಪರಿಹಾರವಾಗುತ್ತದೆ.

ಇದು ಪಕ್ಷಧರ ಮಿಶ್ರನು ಹೇಳಿದ ಪರಿಹಾರ.

## ನ್ಯಾಯದೀಪ

**ಪಕ್ಷಧರೋಕ್ತಂ ಅನೂದ್ಯ ನಿರಾಹ-ಏತೇನೇತಿ ॥ ತದ್‌ವ್ಯತಿರೇಕೇತಿ ॥ ಅತ್ರ ಉಭಯತ್ರ ವ್ಯತಿರೇಕಶಬ್ದಃ ಪ್ರಾಗಭಾವಪರಃ । ಅನ್ಯಥಾ ಆದ್ಯಸ್ಯ ಸಂಸರ್ಗಾಭಾವಮಾತ್ರ ಪರತ್ವೇ ತಜ್ಜ್ಞಾನವಿಷಯಕವ್ಯಾಪ್ತಿಜ್ಞಾನ-ಅತ್ಯಂತಾ-ಭಾವರೂಪ-ವ್ಯತಿರೇಕಾ ಪ್ರಯುಕ್ತ-ಪ್ರಾಗಭಾವ ಪ್ರತಿಯೋಗಿನೀಮ್ 'ಇದಂ ಜ್ಞಾನಂ ಪ್ರಮಾ' ಇತ್ಯನುಮಿತಿಮಾದಾಯ ಸಿದ್ಧಸಾಧನತಾಪತ್ತೇಃ ।**

**ಅಂತ್ಯಸ್ಯಾಪಿ ತತ್-ಪರತ್ವೇ ಪೂರ್ವೋಕ್ತಾನುಮಿತಿಮಾದಾಯೈವ ಸಿದ್ಧಸಾಧನ**

**ತಾಪತ್ತೇಃ । ಧ್ವಂಸರೂಪ-ತದ್‌ವ್ಯತಿರೇಕಸ್ಯ ತಜ್ಜ್ಞಾನವಿಷಯಕ-ಜ್ಞಾನವ್ಯತಿ-ರೇಕೇಣ ಕೇನಾಪಿ ಅಜನ್ಯತ್ವಾತ್ ಇತಿ ಧ್ಯೇಯಮ್ ।**

**ಯದ್ಯಪಿ ನೈತದ್ರೂಪಂ ಜನ್ಯತ್ವಮ್ । ಆಕಾಶಾದಿಜನ್ಯ-ಶಬ್ದಾದೌ ಅಭಾವಾತ್ । ತಥಾಪಿ ವ್ಯತಿರೇಕಿ-ಪದಾರ್ಥಜನ್ಯೇಷು ಭವತೀದಂ ಜನ್ಯತ್ವಮಿತಿ ಭಾವಃ ।**

**ದ್ವೇಧೇತಿ ॥ ಉತ್ತರದಲೇನ ನಞಃ ಅನ್ವಯೇನ, ಪೂರ್ವಭಾಗೇನ ನಞಃ ಅನ್ವಯೇನ ವಾ ದ್ವೇಧಾ ಇತ್ಯರ್ಥಃ ।**

**ಪ್ರಯುಕ್ತೇತಿ ॥ ತದನ್ವಯಾದ್ಯನುವಿಧಾಯಿ-ಉತ್ತರಕಾಲಸಂಬಂಧಿತ್ವಮ್ ಪ್ರಯುಕ್ತತ್ವಮ್। ತದ್ಭಿನ್ನತ್ವಮ್ ಅಪ್ರಯುಕ್ತತ್ವಮಿತ್ಯರ್ಥಃ।**

ಜನ್ಯತ್ವ ಪರಿಷ್ಕಾರದಲ್ಲಿ ಎರಡೂ ಕಡೆ ವ್ಯತಿರೇಕ ಪದದಿಂದ ಪ್ರಾಗಭಾವವೇ ವಿವಕ್ಷಿತ. ಅತ್ಯಂತಾಭಾವವಲ್ಲ. 'ತದ್ ವ್ಯತಿರೇಕ' ಎಂಬ ಮೊದಲ ವ್ಯತಿರೇಕಪದಕ್ಕೆ ಅತ್ಯಂತಾಭಾವ ಎಂಬ ಅರ್ಥ ಮಾಡಿದರೆ ಸಿದ್ಧಸಾಧನತಾದೋಷ- 'ಇದಂ ಜ್ಞಾನಂ ಪ್ರಮಾ ಸಮರ್ಥಪ್ರವೃತ್ತಿ ಜನಕತ್ವಾತ್' ಇದು ತಾರ್ಕಿಕರ ಪ್ರಾಮಾಣ್ಯಸಾಧಕಾನುಮಾನ. ಇದರಿಂದ ಬರುವ ಅನುಮಿತಿ- 'ಇದಂ ಜ್ಞಾನಂ ಪ್ರಮಾ' ಎಂದು. ಈ ಅನುಮಿತಿಯು 'ಪ್ರಮಾತ್ವವ್ಯಾಪ್ಯ-ಸಮರ್ಥ-ಪ್ರವೃತ್ತಿ-ಜನಕತ್ವವತ್ ಇದಂ ಜ್ಞಾನಮ್' ಎಂಬ ಪರಾಮರ್ಶದಿಂದ ಜನ್ಯವಾಗಿದೆ. ಆ ಪರಾಮರ್ಶವು ಪಕ್ಷೀಭೂತ ವ್ಯವಸಾಯವಿಷಯಕ ಜ್ಞಾನ. ಆದರೆ ಅತ್ಯಂತಾಭಾವ ಘಟಿತ-ಜನ್ಯತ್ವವನ್ನು ಪರಿಗ್ರಹಿಸಿದರೆ ಆ ಅನುಮಿತಿಯಲ್ಲಿ ತಜ್ಜನ್ಯತ್ವವು ಬರುವುದಿಲ್ಲ. ಏಕೆಂದರೆ, ಆ ಅನುಮಿತಿಯ ವ್ಯತಿರೇಕವು ಪರಾಮರ್ಶಾತ್ಯಂತಾಭಾವ ಪ್ರಯುಕ್ತವಲ್ಲ, ಪ್ರಾಗಭಾವ ಪ್ರಯುಕ್ತ. ಆದ್ದರಿಂದ ಉಕ್ತಜ್ಞಾನದಿಂದ-ಅಜನ್ಯವಾಯಿತು ಆ ಅನುಮಿತಿ. ತದ್ವಿಷಯತ್ವವನ್ನು ತಾರ್ಕಿಕರು ಪ್ರಾಮಾಣ್ಯದಲ್ಲಿ ಒಪ್ಪಿರುತ್ತಾರೆ, ಆದ್ದರಿಂದ ಸಿದ್ಧಸಾಧನತಾ. ಅದಕ್ಕಾಗಿ ಪ್ರಥಮವ್ಯತಿರೇಕ ಎಂದರೆ ಪ್ರಾಗಭಾವ.

ಇದಕ್ಕಾಗಿಯೇ ಎರಡನೆಯ ವ್ಯತಿರೇಕ-ಪದಕ್ಕೂ ಪ್ರಾಗಭಾವ ಎಂದೇ ಅರ್ಥ. ಇಲ್ಲದಿದ್ದರೆ ಆ ಅನುಮಿತಿಯ ಅತ್ಯಂತಾಭಾವವು ಪೂರ್ವೋಕ್ತಪರಾಮರ್ಶಪ್ರಾಗಭಾಪ್ರಯುಕ್ತವಲ್ಲದ ಕಾರಣ ಆ ಅನುಮಿತಿಯೂ ಸಂಗ್ರಹವಾಗಿ ತದ್ವಿಷಯವಾದ ಪ್ರಾಮಾಣ್ಯದಲ್ಲಿ ಸಿದ್ಧಸಾಧನತಾ ಬರುತ್ತದೆ.

ತದ್-ವ್ಯತಿರೇಕ-ಪ್ರಯುಕ್ತ-ವ್ಯತಿರೇಕ-ಪ್ರತಿಯೋಗಿತ್ವರೂಪವಾದ ಜನ್ಯತ್ವವು ನಿತ್ಯಪದಾರ್ಥದಿಂದ ಹುಟ್ಟುವ ಯಾವ ಗುಣಗಳಲ್ಲೂ ಬರುವುದಿಲ್ಲ. ಉದಾಹರಣೆಗೆ, ಆಕಾಶದಿಂದ ಶಬ್ದ, ಆತ್ಮನಿಂದ ಜ್ಞಾನ ಇವುಗಳೆಲ್ಲ ಹುಟ್ಟುತ್ತವೆ. ಆದರೆ ಅವುಗಳಿಗೆ ಜನಕವಾದ ಆಕಾಶ, ಆತ್ಮಗಳ ವ್ಯತಿರೇಕಗಳು ಅಪ್ರಸಿದ್ಧ. ಆದರೂ, ವ್ಯತಿರೇಕಿ ಪದಾರ್ಥಗಳಾದ ದಂಡಾದಿಗಳಿಂದ ಜನ್ಯವಾದ ಘಟಾದಿಗಳಲ್ಲಿ ಇಂತಹ ಜನ್ಯತ್ವವು ಬರಬಹುದು. (ಪ್ರಚಲಿತ ಪಾಠದಲ್ಲಿರುವ ನ್ಯಾಯದೀಪದಲ್ಲಿ

ವ್ಯತಿರೇಕಿ ಪದಾರ್ಥೇಷು ಎನ್ನುವುದು 'ವ್ಯತಿರೇಕಿಪದಾರ್ಥಜನ್ಯೇಷು' ಎಂದಿದ್ದರೆ ಸ್ಫುಟವಾಗುವುದು.)

## ಪಕ್ಷಧರ ಮಿಶ್ರನ ಪರಿಷ್ಕಾರದ ನಿರಾಸ

**तथापि पूर्वोक्तस्य प्रमेयमिति ज्ञानविषयत्वेन सिद्धसाधनस्य 'सर्वं ज्ञानं गुणः' इत्यादिनोक्तस्य बाधस्य चापरिहारादिति दिक् ॥**

ಹೀಗೆ ಪರಿಷ್ಕಾರ ಮಾಡಿ ಹಿಂದೆ ಸಿದ್ಧಸಾಧನತಾ ಬಾಧಗಳನ್ನು ಪರಿಹಾರ ಮಾಡಿದರೂ 'ಪ್ರಮೇಯಂ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ವಿಷಯವಾದುದರಿಂದ ಹಿಂದೆ ಹೇಳಿದ ಸಿದ್ಧಸಾಧನತಾ, ಅದನ್ನು ಪರಿಹಾರ ಮಾಡಿದರೆ 'ಸರ್ವಂ ಜ್ಞಾನಂ ಗುಣಃ' ಎಂಬ ಶಬ್ದಜನ್ಯವಾದ ಶಾಬ್ದಬೋಧಗತ ಪ್ರಾಮಾಣ್ಯದಲ್ಲಿ ಬಾಧದೋಷವು ಅಪರಿಹಾರ್ಯ.

## ನ್ಯಾಯದೀಪ

**ಸತ್ವೇಪೀತಿ ॥ ತಸ್ಯ ವ್ಯತಿರೇಕಮಾತ್ರ-ಅಪ್ರತಿಯೋಗಿತ್ವಾದಿತಿ ಭಾವಃ । ಮಯೇತಿ ॥ ಸ್ವತಸ್ತ್ವನಿರ್ವಚನಕರ್ತ್ರಾ ಇತ್ಯರ್ಥಃ । ಅಭಾವಾದಿತ್ಯೇತದ್ ವ್ಯನಕ್ತಿ-ನಹೇತಿ ॥ ತಥಾಚ ನ ಪ್ರಾಗುಕ್ತದೋಷೌ ಇತಿ ಭಾವಃ। ಏತೇನ ಇತ್ಯುಕ್ತಂ ವ್ಯನಕ್ತಿ-ತಥಾಪೀತಿ ॥ ಏವಂ ವಿವಕ್ಷಾಯಾಮಪೀತ್ಯರ್ಥಃ । ವಿಷಯಪದೇನ ಪ್ರಕಾರತ್ವವಿವಕ್ಷಾಮುಪೇತ್ಯಾಹ-ಸರ್ವಂ ಜ್ಞಾನಮಿತಿ ॥ ಬಾಧಸ್ಯೇತಿ ॥ ಏತದಭಾವರೂಪ ಪರತಸ್ತ್ವಸಾಧನೇ ಸಿದ್ಧಸಾಧನಾಚ್ಚ । ತಸ್ಯ ಅಪಕ್ಷತ್ವೇ ಚಾರ್ಥಾಂತರತಾ ।**

**'ಇದಂ ಜ್ಞಾನಂ ಪ್ರಮಾ' ಇತಿ ಸಾಮಾನ್ಯಪ್ರತ್ಯಾಸತ್ತಿಜನ್ಯಜ್ಞಾನೇ ಪ್ರಾಮಾಣ್ಯಸ್ಯ ಪ್ರಕಾರತ್ವೇನ ಸಿದ್ಧಸಾಧನಾಪರಿಹಾರಾಚ್ಚ॥**

'ಇದಂ ಜ್ಞಾನಂ ಪ್ರಮಾ' ಎಂಬ ಜ್ಞಾನದಲ್ಲಿ ಪ್ರಕಾರವಾದ ಪ್ರಮಾತ್ವರೂಪವಾದ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತಿಯಿಂದ ಹುಟ್ಟಿದ 'ಪ್ರಮಾ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು (ಪ್ರಮಾತ್ವವು) ಪ್ರಕಾರವಾಗಿರುವುದರಿಂದ ಸಿದ್ಧಸಾಧನತಾದೋಷವೂ ಅಪರಿಹಾರ್ಯ. ಇದೇರೀತಿ ಸಿದ್ಧಸಾಧನತಾ ದೋಷವನ್ನು ರುಚಿದತ್ತ ಮಣಿವ್ಯಾಖ್ಯಾನ 'ಪ್ರಕಾಶ'ದಲ್ಲಿ ಹೇಳಿದ್ದಾನೆ- ''ಪ್ರಮೇತಿ ಸಾಮಾನ್ಯಲಕ್ಷಣಾ ಜನ್ಯ ಜ್ಞಾನವಿಷಯತ್ವೇನ ಸಿದ್ಧಸಾಧನಮ್'' (ಪುಟ.155)

## ನ್ಯಾಯದೀಪ

**ಆಕ್ಷೇಪ- ನ ಚ ಸಾಮಾನ್ಯಸ್ಯ ಅಜ್ಞಾತಸ್ಯ ಪ್ರತ್ಯಾಸತ್ತಿತ್ವೇ ಅತಿಪ್ರಸಂಗೇನ**

**ಜ್ಞಾತಸ್ಯೈವ ಪ್ರತ್ಯಾಸತ್ತಿತ್ವಾತ್, ಪ್ರಮಾತ್ವಜ್ಞಾನಸ್ಯ ಚ ಅನುಮಿತ್ಯಾದಿ-ರೂಪಸ್ಯ ಪ್ರಮಾತ್ವಾಶ್ರಯರೂಪ- ಪಕ್ಷಾದಿಜ್ಞಾನಜನ್ಯತಯಾ ತಜ್ಜ್ಞಾನ-ವಿಷಯಕ-ಜ್ಞಾನಜನ್ಯತ್ವಮೇವೇತಿ ಉಕ್ತಸ್ಥಲೇ ತಜ್ಜ್ಞಾನವಿಷಯಕ-ಜ್ಞಾನಾ-ಜನ್ಯ-ಜನ್ಯಜ್ಞಾನಪ್ರಕಾರತ್ವಂ ನೇತಿ ನ ದೋಷ ಇತಿ ವಾಚ್ಯಮ್ ।**

ಸಾಮಾನ್ಯಲಕ್ಷಣಾಜನ್ಯವಾದ ಜ್ಞಾನದಲ್ಲಿ ಸಿದ್ಧಸಾಧನತಾದೋಷ ಬರುವುದಿಲ್ಲ. ಸಾಮಾನ್ಯ ಎಂದರೆ, ಜಾತ್ಯಾದಿ ಧರ್ಮಗಳು. ಅಂತಹ ಧರ್ಮಗಳು ಜ್ಞಾತವಾದಾಗ ಮಾತ್ರ ಪ್ರತ್ಯಾಸತ್ತಿಯಾಗುತ್ತವೆ. ಅಂದರೆ 'ಅಯಂ ಘಟಃ' ಎಂದು ಒಂದು ಘಟದಲ್ಲಿ ಘಟತ್ವಸಾಮಾನ್ಯವು ಜ್ಞಾತವಾದರೆ ಅದರಿಂದ ಸಕಲ ಘಟಗಳ ಜ್ಞಾನವು ಘಟತ್ವರೂಪ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತಿಯಿಂದ ಬರುತ್ತದೆ. ಜ್ಞಾತವಾಗದಿದ್ದರೂ ಅದು ಪ್ರತ್ಯಾಸತ್ತಿಯಾಗುವುದಾದಲ್ಲಿ ಸಾಮಾನ್ಯ ಸದಾ ಇರುವುದರಿಂದ ಸರ್ವದಾ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ ಜ್ಞಾನ ಬರಬೇಕಾದೀತು, ಎಂಬ ಅತಿಪ್ರಸಂಗ ಬರುತ್ತದೆ.

ಪ್ರಕೃತ ಪ್ರಮಾತ್ವವು ಜ್ಞಾತವಾಗಿ ಪ್ರತ್ಯಾಸತ್ತಿಯಾಗಬೇಕಾದರೆ ''ಇದಂ ಜ್ಞಾನಂ ಪ್ರಮಾ'' ಎಂದು ಒಂದು ಜ್ಞಾನಬರಬೇಕು. ಈ ಜ್ಞಾನ ನೈಯಾಯಿಕರ ಮತದಲ್ಲಿ ಅನುಮಿತ್ಯಾತ್ಮಕ. ಅನುಮಿತಿಯ ಹೊರತಾಗಿ ಪ್ರಥಮ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಅನುಮಿತಿಯಲ್ಲಿ ಪಕ್ಷ ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನ. ಆ ಪಕ್ಷಜ್ಞಾನದಿಂದ (ಜ್ಞಾನದ ಜ್ಞಾನ) ಜನ್ಯವಾಗಿದೆ ಅನುಮಿತಿ. ಹೀಗೆ ಅನುಮಿತಿರೂಪವಾದ ಜ್ಞಾನವು ತಜ್ಜ್ಞಾನವಿಷಯಕಜ್ಞಾನದಿಂದ (ಪಕ್ಷಜ್ಞಾನದಿಂದ) ಜನ್ಯವೇ ಆಗಿದೆ. ಅಜನ್ಯವಾಗಿಲ್ಲ. ಆದ್ದರಿಂದ ಅಂತಹ ಜ್ಞಾನವನ್ನು ಪರಿಗ್ರಹಿಸಿ ಸಿದ್ಧಸಾಧನತಾ ಹೇಳಲಾಗದು.

ಇನ್ನು, ಅಂತಹ ಅನುಮಿತಿರೂಪವಾದ ಜ್ಞಾನಕ್ಕೆ ವಿಷಯವಾದ ಪ್ರಮಾತ್ವಪ್ರತ್ಯಾಸತ್ತಿಯಿಂದ (ಸಾಮಾನ್ಯ ಜ್ಞಾನರೂಪಪ್ರತ್ಯಾಸತ್ತಿಯಿಂದ) ಹುಟ್ಟಿದ 'ಪ್ರಮಾ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ಪ್ರಕಾರವಾದುದರಿಂದ ಸಿದ್ಧಸಾಧನತಾ ಎನ್ನಲೂ ಬರುವುದಿಲ್ಲ. ಏಕೆಂದರೆ, ಆ ಜ್ಞಾನವೂ ಅನುಮಿತ್ಯಾತ್ಮಕ ಪ್ರತ್ಯಾಸತ್ತಿ ಜನ್ಯವಾಗಿದೆ. ಅನುಮಿತಿಯು ತಜ್ಜ್ಞಾನವಿಷಯಕ ಜ್ಞಾನ. ಹೀಗೆ ಎರಡೂ ಕಡೆ ಸಿದ್ಧಸಾಧನತಾ ಇಲ್ಲ.

ಈ ಆಕ್ಷೇಪವನ್ನು ಮಣಿಗ್ರಂಥ ಟಿಪ್ಪಣಿಯಲ್ಲಿ ನೋಡಬಹುದು.

(ನನು ಪ್ರಮಾತ್ವಸ್ಯ ಜ್ಞಾತಸ್ಯ ಪ್ರತ್ಯಾಸತ್ತಿತ್ವೇಽಪಿ ತಜ್ಜನ್ಯಜ್ಞಾನಸ್ಯ ಪ್ರಮಾತ್ವಾಶ್ರಯ-ಜ್ಞಾನವಿಷಯಕ-ಜ್ಞಾನಜನ್ಯತ್ವಾಭಾವಾತ್ ಸಿದ್ಧಸಾಧನ-ತಾದವಸ್ಥ್ಯಮ್ ಇತ್ಯಾಶಂಕ್ಯ, ಕಿಂ ಪ್ರಮಾತ್ವಪ್ರತ್ಯಾಸತ್ತಿ ಜನ್ಯಜ್ಞಾನಸ್ಯ ತಾದೃಶ ಜ್ಞಾನ-ಅಜನ್ಯತ್ವಂ, ಉತ ತಜ್ಜನಕಸ್ಯ ಪ್ರತ್ಯಾಸತಿ ಗೋಚರಜ್ಞಾನಸ್ಯ? ನಾದ್ಯಃ। ಆನುಮಾನಿಕ-ಪ್ರಮಾತ್ವ ಸಾಮಾನ್ಯ ಜ್ಞಾನಸ್ಯ ಅವಶ್ಯಂ ಪ್ರಮಾವ್ಯಕ್ತಿವಿಷಯಕತ್ವೇನ ತದ್ರೂಪ ಪ್ರತ್ಯಾಸತ್ತಿ ಜನ್ಯಜ್ಞಾನಸ್ಯ ತಜ್ಜ್ಞಾನವಿಷಯಕ ಜ್ಞಾನಜನ್ಯತ್ವಾತ್...॥ ನ್ಯಾಯಶಿಖಾಮಣಿ-ಪುಟ.156)

## ನ್ಯಾಯದೀಪ

**ಪರಿಹಾರ : ಇಚ್ಛಾಯಾಂ ಗೃಹೀತಂ ತದ್ವತಿ ತತ್–ಪ್ರಕಾರಕತ್ವಂ ಸ್ಮೃತಂ ತಜ್ಜ್ಞಾನತ್ವೇನ ಗೃಹ್ಯಮಾಣೇ ರೂಪ್ಯಭ್ರಮೇ ಯತ್ರಾರೋಪ್ಯತೇ, ಯತ್ರ ವಾ ರೂಪ್ಯತ್ವವತಿ ರೂಪ್ಯತ್ವ–ಪ್ರಕಾರಕತ್ವೇನ ಗೃಹ್ಯಮಾಣಾಯಾಂ ಇಚ್ಛಾಯಾಂ ಜ್ಞಾನತ್ವಮ್ ಆರೋಪ್ಯತೇ ತತ್ರೋಭಯತ್ರ ಪ್ರಮಾತ್ವಾಶ್ರಯ–ಜ್ಞಾನವಿಷಯಕ–ಜ್ಞಾನಂ ವಿನಾಪಿ ರೂಪ್ಯತ್ವವತಿ ರೂಪ್ಯತ್ವಪ್ರಕಾರಕ–ಜ್ಞಾನತ್ವರೂಪಂ ಪ್ರಮಾತ್ವಂ ಗೃಹೀತುಂ ಶಕ್ಯಮಿತಿ ಜ್ಞಾತಯಾ ತದ್ರೂಪಪ್ರತ್ಯಾಸತ್ಯಾ ಜನಿತಂ ಜ್ಞಾನಮಾದಾಯ ಸಿದ್ಧಸಾಧನತ್ವಸ್ಯ ದುರ್ವಾರತ್ವಾತ್।**

ಸಿದ್ಧಸಾಧನತಾದೋಷವು ಬಂದೇ ಬರುತ್ತದೆ–ಪ್ರಮಾತ್ವವು ಜ್ಞಾತವಾಗಿಯೇ ಪ್ರತ್ಯಾಸತ್ತಿ ಯಾದರೂ ಅದರ ಜ್ಞಾನ ಜ್ಞಾನದಲ್ಲೇ ಬರಬೇಕೆಂದೇನಿಲ್ಲ. ಅಂದರೆ 'ಇದಂ ಜ್ಞಾನಂ ಪ್ರಮಾ' ಎಂದು ಪ್ರಮಾತ್ವವು ಜ್ಞಾನದಲ್ಲೇ ಪ್ರಕಾರವಾಗಿ ತೋರಬೇಕಾಗಿಲ್ಲ. ಪ್ರಮಾತ್ವವೆಂದರೆ ತದ್ವತಿ–ತತ್–ಪ್ರಕಾರಕತ್ವ. ಅದು ಇಚ್ಛೆಯಲ್ಲೂ ಇದೆ. ಇಚ್ಛೆಯಲ್ಲಿ ಗೃಹೀತವಾದ ಅಂತಹ ಪ್ರಮಾತ್ವದ ಸ್ಮರಣೆ ಬಂತು. ಹೀಗೆ, ಸ್ಮೃತವಾದ ಪ್ರಮಾತ್ವವು ರೂಪ್ಯಭ್ರಮದಲ್ಲಿ ಆರೋಪಿತವಾಗುತ್ತದೆ. ಅಂದರೆ 'ಇದಂ ರಜತಮಿತಿ ಜ್ಞಾನಂ ಪ್ರಮಾ' ಎಂದು ಭ್ರಮೆ ಬರುತ್ತದೆ. ಈ ಭ್ರಮೆಯು ಗ್ರಾಹ್ಯಪ್ರಾಮಾಣ್ಯಾಶ್ರಯ–ಜ್ಞಾನವಿಷಯಕಜ್ಞಾನವಲ್ಲ. ಇದೇ ಸಾಮಾನ್ಯ ಲಕ್ಷಣಾಪ್ರತ್ಯಾಸತ್ತಿ. ಇಂತಹ ಪ್ರತ್ಯಾಸತ್ತಿಯಿಂದಾಗಿ 'ಪ್ರಮಾ' ಎಂಬ ಜ್ಞಾನ ಬರುತ್ತದೆ.

ಆ ಜ್ಞಾನದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿದೆ. ಹೀಗೆ ಸಿದ್ಧಸಾಧನತಾದೋಷ.

ಅಥವಾ, ಯಥಾರ್ಥವಾದ ಇಚ್ಛೆಯಲ್ಲಿ ಜ್ಞಾನತ್ವವನ್ನು ಆರೋಪಿಸುವ ಭ್ರಮೆ– 'ಪ್ರಮಾತ್ವಕಮಿದಂ(ಇಚ್ಛಾ) ಜ್ಞಾನಮ್' ಎಂಬ ಭ್ರಮೆ. ಇಲ್ಲಿಯೂ ಪೂರ್ವದಲ್ಲಿ ಜ್ಞಾನವಿಷಯಕ ಜ್ಞಾನದ ಅಗತ್ಯವಿಲ್ಲ. ಈ ಭ್ರಮೆಯು ಗ್ರಾಹ್ಯಪ್ರಾಮಾಣ್ಯಾಶ್ರಯ ಜ್ಞಾನವಿಷಯಕಜ್ಞಾನವಲ್ಲ. ಆದರಿಂದ ಜನ್ಯವಾದ, 'ಪ್ರಮಾ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿದೆ. ಆದ್ದರಿಂದ ಸಿದ್ಧಸಾಧನತಾದೋಷ.

## ರುಚಿದತ್ತನ ಸಮ್ಮತಿ

ಈರೀತಿಯ ಸಿದ್ಧಸಾಧನತಾವನ್ನು ಮಣಿವ್ಯಾಖ್ಯಾನವಾದ ಪ್ರಕಾಶದಲ್ಲಿ ರುಚಿದತ್ತನೂ ಸಮ್ಮತಿಸುತ್ತಾನೆ–

ಪ್ರಮಾತ್ವಂ ನಾಜ್ಞಾತಂ ಪ್ರತ್ಯಾಸತ್ತಿಃ। ಸಂಶಯಾನುಪಪತ್ತೇಃ। ಕಿಂತು ಜ್ಞಾತಮ್। ತಜ್ಜ್ಞಾನಂ ಚ ಪ್ರಮಾತ್ವಾಶ್ರಯಜ್ಞಾನಂ ವಿನಾ ನ ಸಂಭವತಿ। ತಸ್ಯ ಕ್ವಚಿತ್ ಪಕ್ಷತ್ವಾತ್...।

ಅತ್ರೇದಂ ಚಿಂತ್ಯಮ್–ಇಚ್ಛಾಯಾಂ ಗೃಹೀತಂ ತದ್ವತಿ ತತ್ಪ್ರಕಾರಕತ್ವಂ ಸ್ಮೃತಂ ಜ್ಞಾನತ್ವೇನ ಗೃಹ್ಯಮಾಣೇ ರಜತತ್ವಭ್ರಮೇ ಯತ್ರಾರೋಪ್ಯತೇ, ಯತ್ರ ವಾ ರಜತತ್ವವತಿ ರಜತತ್ವ ಪ್ರಕಾರಕತ್ವೇನ ಗೃಹ್ಯಮಾಣಾಯಾಂ ಇಚ್ಛಾಯಾಂ ಜ್ಞಾನತ್ವಮಾರೋಪ್ಯತೇ ತತ್ರೋಭಯತ್ರ ಪ್ರಮಾತ್ವಾಶ್ರಯಜ್ಞಾನಂ ವಿನಾಪಿ ರಜತತ್ವವತಿ ರಜತತ್ವಪ್ರಕಾರಕ ಜ್ಞಾನತ್ವರೂಪಂ ಪ್ರಾಮಾಣ್ಯಂ ಗೃಹೀತುಂ ಶಕ್ಯತೇ। ತತಶ್ಚ ಜ್ಞಾತತಯಾ ತದ್ರೂಪಸಾಮಾನ್ಯ ಪ್ರತ್ಯಾಸತ್ತ್ಯಾ ಜನಿತಂ ಜ್ಞಾನ ಮಾದಾಯ ಸಿದ್ಧಸಾಧನಂ ದುರ್ವಾರಮೇವ। (ಪುಟ.158)

## ಇನ್ನೊಂದು ರೀತಿಯಿಂದ ಸಿದ್ಧಸಾಧನತಾ

**ಕಿಂಚ, ತ್ವನ್ಮತೇ ಗಂಗಾಸ್ನಾನಾದಿ–ಸತ್ಕರ್ಮಜನ್ಯಂ ಯೋಗಿಜ್ಞಾನಂ ತಜ್ಜ್ಞಾನ–ವಿಷಯಕ ಜ್ಞಾನಾಜನ್ಯಮೇವೇತಿ ತಾದೃಶಜ್ಞಾನ ಪ್ರಕಾರತ್ವಮಾದಾಯ ಸಿದ್ಧಸಾಧನಮೇವ।**

ಇನ್ನೊಂದು ವಿಧವಾಗಿಯೂ ಸಿದ್ಧಸಾಧನತಾ ಇದೆ– ನ್ಯಾಯಸಿದ್ಧಾಂತದಲ್ಲಿ ಗಂಗಾಸ್ನಾನಾದಿ ಸತ್ಕರ್ಮದಿಂದ ಯೋಗಿಗಳಿಗೆ ಸಾಮರ್ಥ್ಯವಿಶೇಷವು ಸಿದ್ಧವಾಗಿ ಸಕಲವಸ್ತುಗಳ ಜ್ಞಾನವೂ ಬರುತ್ತದೆ. ಅದನ್ನು ಯೋಗಿಜ್ಞಾನ ಎನ್ನಲಾಗುತ್ತದೆ. ಅವರಿಗೆ 'ಇದಂ ಜ್ಞಾನಂ ಪ್ರಮಾ' ಎಂಬ ಜ್ಞಾನವೂ ಬರುತ್ತದೆ. ಈ ಜ್ಞಾನವು ತಜ್ಜ್ಞಾನವಿಷಯಕ–ಜ್ಞಾನದಿಂದ ಹುಟ್ಟಿಲ್ಲ. ಅದರಲ್ಲಿ ಪ್ರಾಮಾಣ್ಯವು ಪ್ರಕಾರವಾಗಿದೆ. ಆದ್ದರಿಂದ ಸಿದ್ಧಸಾಧನತಾದೋಷ.

## ನ್ಯಾಯದೀಪ

**ಆಕ್ಷೇಪ– ನ ಹಿ ತದಪಿ ನಿದಿಧ್ಯಾಸನ ಜನ್ಯಮ್। ಮಾನಾಭಾವಾತ್। ಯೇನ ಯೋಗಿಜ್ಞಾನಂ ತಜ್ಜ್ಞಾನವಿಷಯಕ–ಜ್ಞಾನಜನ್ಯಂ ಸ್ಯಾತ್। 'ತತ್ತತ್ಕರ್ಮಣಾಂ ತತ್ತಜ್ಜ್ಞಾನವಿಶೇಷೇ ಏವ ಜನಕತ್ವಮ್' ಇತಿ ಅನುಮಾನಖಂಡೇ ತ್ವಯೈವ ಉಕ್ತೇಃ। ಪ್ರಮಾತ್ವಸ್ಯ ಪ್ರಕಾರತ್ವಾರ್ಥಂ ಪೂರ್ವೋಪಸ್ಥಿತೇರಾವಶ್ಯಕತ್ವೇಽಪಿ ಉಕ್ತದಿಶಾ ಪ್ರಮಾತ್ವಾಶ್ರಯ ಜ್ಞಾನಂ ವಿನಾಪಿ ಪ್ರಮಾತ್ವ ಜ್ಞಾನಸಂಭವಾತ್।**

ಯೋಗಿಜ್ಞಾನವೂ ಧ್ಯಾನದಿಂದ ಜನ್ಯವಾಗಿದೆ. ಧ್ಯಾನವು ತಜ್ಜ್ಞಾನವಿಷಯಕಜ್ಞಾನ. ಆದ್ದರಿಂದ ಪ್ರಮಾತ್ವ–ಪ್ರಕಾರಕ–ಯೋಗಿಜ್ಞಾನವು ತಜ್ಜ್ಞಾನವಿಷಯಕ–ಜ್ಞಾನಜನ್ಯವಾಯಿತು, ಅಜನ್ಯವಾಗಿಲ್ಲ, ಎಂದೂ ಸಿದ್ಧಸಾಧನತಾವನ್ನು ನಿರಾಕರಿಸುವಂತಿಲ್ಲ. ಕರ್ಮವಿಶೇಷದಿಂದ ಹುಟ್ಟಿದ

ಯೋಗಿಜ್ಞಾನಕ್ಕೆ ನಿದಿಧ್ಯಾಸನವು ಕಾರಣ ಎನ್ನುವುದಕ್ಕೆ ಪ್ರಮಾಣವಿಲ್ಲ. ಅನುಮಾನ ಖಂಡದಲ್ಲಿ ಮಣಿಕಾರನೇ ಯೋಗಿಜ್ಞಾನಕ್ಕೆ ಕರ್ಮವಿಶೇಷವೇ ಕಾರಣ ಎಂದು ಹೇಳಿರುತ್ತಾನೆ.

ಯೋಗಿಜ್ಞಾನದಲ್ಲಿ ಪ್ರಮಾತ್ವವು ಪ್ರಕಾರವಾಗಿ ತೋರಬೇಕಾದರೆ ಆ ಪ್ರಮಾತ್ವದ ಜ್ಞಾನ ಮೊದಲು ಇರಬೇಕು. ಪೂರ್ವಾನುಪಸ್ಥಿತವಾದುದು ಪ್ರಕಾರವಲ್ಲ. ಪ್ರಮಾತ್ವದ ಜ್ಞಾನ ಮೊದಲಿರಬೇಕಾದರೆ ಅದಕ್ಕೆ ಆಶ್ರಯವಾದ ಜ್ಞಾನದ ಜ್ಞಾನವೂ ಇರಬೇಕು. ಆಗ ಯೋಗಿಜ್ಞಾನವೂ ತಜ್ಞ್ಞಾನವಿಷಯಕ ಜ್ಞಾನದಿಂದ ಜನ್ಯವಾಯಿತು, ಎನ್ನುವುದೂ ಸರಿಯಲ್ಲ. ಪ್ರಮಾತ್ವದ ಜ್ಞಾನ ಮೊದಲಿರಬೇಕಾದರೆ ತದಾಶ್ರಯವಾದ ಜ್ಞಾನದ ಜ್ಞಾನ ಇರಬೇಕಾದ ಆಗತ್ಯವಿಲ್ಲ. ಇಚ್ಛಾದಲ್ಲೂ ತದ್ವತಿ ತತ್ ಪ್ರಕಾರಕತ್ವರೂಪವಾದ ಪ್ರಮಾತ್ವವು ಇದೆ. ಅಲ್ಲಿ ಪ್ರಮಾತ್ವವು ಗೃಹೀತವಾಗಿ ಆಮೇಲೆ ಯೋಗಿಗೆ ಯೋಗಜಧರ್ಮಪ್ರತ್ಯಾಸತ್ತಿಯಿಂದ ಪ್ರಮಾತ್ವ ಪ್ರಕಾರಕ ಜ್ಞಾನವು ಬರಬಹುದು. ಇದನ್ನು ಹಿಂದೆಯೇ ತಿಳಿಸಲಾಗಿದೆ.

## ಅವಾಂತರ ಶಂಕಾ–ಸಮಾಧಾನ

**ಯತ್ತು ಅನಾಗತಾವಿಷಯಕೇತಿ ದ್ವಿತೀಯ–ತೃತೀಯ ಜ್ಞಾನಯೋಃ ವಿಶೇಷಣಮ್, ಅತೋ ನ ಕೋಽಪಿ ದೋಷ ಇತಿ ।**

**ತನ್ನ । ವರ್ತಮಾನ ಘಟಪ್ರಮಾತ್ವಪ್ರತ್ಯಾಸತ್ತ್ಯಾ ದೋಷತಾದವಸ್ಥ್ಯಾತ್। ಅನಾಗತ–ವೃಷ್ಟ್ಯಾದಿಜ್ಞಾನ–ಪ್ರಾಮಾಣ್ಯಾಂಶೇ ಬಾಧಾತ್। ತದನ್ಯಸ್ಯ ಪಕ್ಷತ್ವೇ ಚ ಅರ್ಥಾಂತರಾತ್ ।**

ಸಿದ್ಧಸಾಧನತಾವಾರಣೆಯನ್ನು ಹೀಗೆ ಮಾಡಬಹುದು– 'ಜ್ಞಾನಾಜನ್ಯಜ್ಞಾನ ವಿಷಯತ್ವಮ್' ಎಂಬ ಸ್ವತಸ್ತ್ವಲಕ್ಷಣದಲ್ಲಿ ಎರಡೂ ಜ್ಞಾನಗಳಲ್ಲಿ 'ಅನಾಗತ–ಅವಿಷಯಕ' ಎಂಬ ವಿಶೇಷಣವನ್ನು ಸೇರಿಸಬೇಕು. ಯೋಗಿಜ್ಞಾನ ಮತ್ತು ಸಾಮಾನ್ಯ ಲಕ್ಷಣಾಪ್ರತ್ಯಾಸತ್ತಿಯಿಂದ ಜನ್ಯವಾದ 'ಪ್ರಮಾ' ಎಂಬ ಜ್ಞಾನ ಸರ್ವವಿಷಯಕವಾದುದರಿಂದ ಅತೀತ–ಅನಾಗತ ವಿಷಯಕವಾಗಿದೆ. ಅದರ ಸಂಗ್ರವಾಗುವುದಿಲ್ಲ, ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಹೀಗೆ ಹೇಳಿದರೂ ಬೇರೆ ಜ್ಞಾನವನ್ನು ಪರಿಗ್ರಹಿಸಿ ಸಿದ್ಧಸಾಧನತಾ ಇದ್ದೇ ಇದೆ. 'ಇಯಂ ವರ್ತಮಾನ ಘಟಪ್ರಮಾ' ಎಂಬ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ 'ವರ್ತಮಾನ ಘಟಪ್ರಮಾ' ಎಂಬ ಜ್ಞಾನ ಬಂದಿದೆ. ಇದರಲ್ಲಿ ಅತೀತವಾಗಲೀ, ಅನಾಗತವಾಗಲೀ ವಿಷಯವಲ್ಲ. ಪ್ರಮಾತ್ವವು ಪ್ರಕಾರವಾಗಿದೆ. ಆದ್ದರಿಂದ ಸಿದ್ಧಸಾಧನತಾ.

ಬಾಧದೋಷವೂ ಇದೆ–ಯೋಗಿಗಳಿಗೆ 'ನಾಳೆ ಮಳೆಬರುತ್ತದೆ' ಎಂಬ ಪ್ರಮಾ ಹುಟ್ಟುತ್ತದೆ.

ಈ ಜ್ಞಾನಪ್ರಾಮಾಣ್ಯವು ಅನಾಗತವೃಷ್ಟಿ-ವಿಷಯಕ-ಜ್ಞಾನದಲ್ಲೇ ವಿಷಯ. ತದವಿಷಯಕ ಜ್ಞಾನವಿಷಯತ್ವವು ಆ ಪ್ರಾಮಾಣ್ಯದಲ್ಲಿ ಬಾಧಿತ. ಆ ಪ್ರಾಮಾಣ್ಯವನ್ನು ಬಿಟ್ಟು ಉಳಿದ ಪ್ರಾಮಾಣ್ಯವನ್ನು ಪಕ್ಷಮಾಡಿದರೆ ಅರ್ಥಾಂತರತಾದೋಷ. ಪ್ರಾಮಾಣ್ಯಸಾಮಾನ್ಯದಲ್ಲಿ ಸ್ವತಸ್ತ್ವ ಪರತಸ್ತ್ವವಿವಾದ ಪ್ರಸ್ತುತವಾದಾಗ ಪ್ರಾಮಾಣ್ಯವಿಶೇಷದಲ್ಲಿ ಸ್ವತಸ್ತ್ವ-ಸಾಧನೆ ಮಾಡಿದರೆ ಅರ್ಥಾಂತರತಾ.

## ಸಿದ್ಧಸಾಧನತಾಪರಿಹಾರ-ನಿರಾಕರಣೆ

**ಯದಪಿ, ತಜ್ಜ್ಞಾನವಿಷಯಕ-ಜ್ಞಾನ-ವ್ಯತಿರೇಕಾ-ಪ್ರಯುಕ್ತ-ವ್ಯತಿರೇಕ ಪ್ರತಿಯೋಗಿ-ತದೇಕಜ್ಞಾನ-ಮಾತ್ರವಿಷಯಕ-ಜ್ಞಾನಗ್ರಾಹ್ಯತ್ವಮ್ ಇತಿ ತದರ್ಥ ಇತಿ ।**

**ತದಪಿ ನ । ಏವಂ ಹಿ ಪೂರ್ವದಲೇನ ಪ್ರಾಮಾಣ್ಯಾನುಮಿತಿಮಾದಾಯ, ತದೇಕ-ಜ್ಞಾನಮಾತ್ರ-ವಿಶೇಷಣೇನ ಸಾಮಾನ್ಯ ಪ್ರತ್ಯಾಸತ್ತಿಜನ್ಯಜ್ಞಾನ-ಯೋಗಿಜ್ಞಾನ-ಈಶ್ವರಜ್ಞಾನಾನಿ ಆದಾಯ ಸಿದ್ಧಸಾಧನತ್ವಾಭಾವೇಽಪಿ 'ಜ್ಞಾನಂ ಗುಣಃ' ಇತ್ಯಾದಿ ಜ್ಞಾನಜ್ಞಾನಪ್ರಾಮಾಣ್ಯಾನುವ್ಯವಸಾಯಸ್ಯ ಗ್ರಾಹ್ಯ-ಪ್ರಾಮಾಣ್ಯಾಶ್ರಯ ಜ್ಞಾನಭಿನ್ನ-ಪ್ರಥಮಜ್ಞಾನವಿಷಯಕತಯಾ ತದೇಕ-ಜ್ಞಾನ- ವಿಷಯಕತ್ವಾಭಾವೇನ ತದಂಶೇ ಬಾಧಾತ್ । ತದನ್ಯಸ್ಯ ಚ ಪಕ್ಷತ್ವೇ ಚ ಅರ್ಥಾಂತರತಾ ।**

ಹಿಂದೆ ಹೇಳಿದ ಸಿದ್ಧಸಾಧನತಾ ಪರಿಹಾರಕ್ಕೆ ಲಕ್ಷಣವನ್ನು ಹೀಗೆ ಪರಿಷ್ಕಾರ ಮಾಡಬಹುದು-'ಪ್ರಾಮಾಣ್ಯವಿಷಯಕ ಜ್ಞಾನವು ಗ್ರಾಹ್ಯಪ್ರಾಮಾಣ್ಯಾಶ್ರವಾದ ವ್ಯವಸಾಯ ಮಾತ್ರ ವಿಷಯಕವಾಗಿರಬೇಕು' 'ಅಯಂ ಘಟಃ ಇತಿ ಜ್ಞಾನವಾನಹಮ್' ಎಂಬ ಅನುವ್ಯವಸಾಯ ದಲ್ಲಿ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ವ್ಯವಸಾಯ ಮಾತ್ರ ವಿಷಯವಾಗಿದೆ. ಅಂತಹ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ಎಂದು ಪರತಸ್ತ್ವವಾದಿಗಳು ಒಪ್ಪಿಲ್ಲ.

ಈ ಲಕ್ಷಣದಲ್ಲಿರುವ 'ತಜ್ಞಾನವಿಷಯಕಜ್ಞಾನ-ವ್ಯತಿರೇಕಾಪ್ರಯುಕ್ತ-ವ್ಯತಿರೇಕ ಪ್ರತಿಯೋಗಿ' ಎಂಬ ಪ್ರಥಮವಿಶೇಷಣದಿಂದ ಪ್ರಾಮಾಣ್ಯಾನುಮಿತಿಯನ್ನು ಪರಿಗ್ರಹಿಸಿ ಸಿದ್ಧಸಾಧನತಾವನ್ನು ಹೇಳುವ ಪ್ರಸಂಗ ತಪ್ಪುತ್ತದೆ. ಅನುಮಿತಿಗೆ ಪಕ್ಷಜ್ಞಾನವು ಕಾರಣ ವಾದುದರಿಂದ ವ್ಯವಸಾಯ-ವಿಷಯಕವಾದ ಅನುವ್ಯವಸಾಯ ಅಂದರೆ ಪಕ್ಷಜ್ಞಾನ, ತದ್ ವ್ಯತಿರೇಕ ಪ್ರಯುಕ್ತ-ವ್ಯತಿರೇಕ-ಪ್ರತಿಯೋಗಿಜ್ಞಾನವೇ (ಜ್ಞಾನಜನ್ಯವೇ) ಅನುಮಿತಿ ಆಗಿದೆ. ಅದು ವ್ಯತಿರೇಕ-ಅಪ್ರಯುಕ್ತ ವ್ಯತಿರೇಕ-ಪ್ರತಿಯೋಗಿಯಲ್ಲ. ಆದ್ದರಿಂದ ಅನುಮಿತಿಯ

ಸಂಗ್ರಹವಾಗುವುದಿಲ್ಲ. ಈಶಜ್ಞಾನವು ವ್ಯತಿರೇಕ ಪ್ರತಿಯೋಗಿಯೇ ಅಲ್ಲವಾದುದರಿಂದ ಅದರ ಸಂಗ್ರಹವೂ ಆಗುವುದಿಲ್ಲ. ಹೀಗಾಗಿ ಅವೆರಡನ್ನು ಪರಿಗ್ರಹಿಸಿ ಸಿದ್ಧಸಾಧನತಾ ಇಲ್ಲ.

ಹಿಂದೆ ಹೇಳಿದ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಜನ್ಯವಾದ 'ಪ್ರಮಾ' ಎಂಬ ಜ್ಞಾನದಲ್ಲಿ, ಯೋಗಿಜ್ಞಾನದಲ್ಲಿ ಅಥವಾ ಈಶಜ್ಞಾನದಲ್ಲಿ ಎಲ್ಲಾ ಜ್ಞಾನಗಳೂ ವಿಷಯವಾಗಿವೆ. ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಪ್ರಕೃತಜ್ಞಾನವು ಮಾತ್ರ ವಿಷಯವಲ್ಲ. ಆದ್ದರಿಂದ ಅಂತಹ ಜ್ಞಾನಗಳು ಸಂಗೃಹೀತವಾಗುವುದಿಲ್ಲವಾದುದರಿಂದ ಸಿದ್ಧಸಾಧನತಾ ಇಲ್ಲ.

ಇದೂ ಸರಿಯಲ್ಲ. ಹೀಗೆ, ಸಿದ್ಧಸಾಧನತಾ ಪರಿಹಾರವಾದರೆ ಬಾಧದೋಷವು ಬರುತ್ತದೆ- 'ಜ್ಞಾನಂ ಗುಣಃ' ಎಂಬ ವ್ಯವಸಾಯದ ಅನುವ್ಯವಸಾಯ 'ಜ್ಞಾನಂ ಗುಣಃ, ಇತಿ ವ್ಯವಸಾಯವಾನ್ ಅಹಮ್' ಎಂದು. ಈ ಅನುವ್ಯವಸಾಯದಲ್ಲಿ ವ್ಯವಸಾಯದ ಪ್ರಾಮಾಣ್ಯವು ಸ್ವತಸ್ತ್ವಪಕ್ಷದಲ್ಲಿ ಗೃಹೀತವಾಗಬೇಕು. ಆದರೆ ಆ ಅನುವ್ಯವಸಾಯದಲ್ಲಿ 'ಜ್ಞಾನಂ ಗುಣಃ' ಎಂಬ ವ್ಯವಸಾಯ ಮಾತ್ರವೇ ವಿಷಯವಲ್ಲ. 'ಜ್ಞಾನಂ' ಎಂದಿರುವುದರಿಂದ ಜ್ಞಾನತ್ವಾವಚ್ಛಿನ್ನವು (ಪ್ರಥಮ ಜ್ಞಾನ)ವಿಷಯವಾಗಿದೆ. ಹೀಗಾಗಿ ಈಗ ಮಾಡಿರುವ ಪರಿಷ್ಕಾರದಂತೆ, ಆ ಅನು-ವ್ಯವಸಾಯವು ಸಂಗೃಹೀತವಾಗುವುದಿಲ್ಲ. ಆದ್ದರಿಂದ 'ಜ್ಞಾನಂ ಗುಣಃ' ಎಂಬ ವ್ಯವಸಾಯಗತ ಪ್ರಾಮಾಣ್ಯದಲ್ಲಿ ಬಾಧ. ತದತಿರಿಕ್ತ ಪ್ರಾಮಾಣ್ಯವನ್ನು ಪಕ್ಷಮಾಡಿದರೆ ಅರ್ಥಾಂತರತಾದೋಷ.

## ನ್ಯಾಯದೀಪ

**ಕಿಂಚ 'ಪ್ರಮಾವಾನಯಂ, ಸಮರ್ಥಪ್ರವೃತ್ತಿಮತ್ತ್ವಾತ್' ಇತ್ಯಾದಿ ಅನುಮಿತಿ ಗ್ರಾಹ್ಯತ್ವೇನ ಅರ್ಥಾಂತರತಾ । ಮೀಮಾಂಸಕಮತೇ ಸಾಮಾನ್ಯ ಪ್ರತ್ಯಾಸತ್ಯಭಾವೇನ ಗ್ರಾಹ್ಯಪ್ರಮಾವ್ಯಕ್ತೇಃ ಅನುಮಿತಿ ಜನಕ ಜ್ಞಾನ-ಅಗೋಚರತ್ವಾತ್ । ತದನ್ಯಪ್ರಾಮಾಣ್ಯಸ್ಯ ಪಕ್ಷತ್ವಂ ತು ಸಾಮಾನ್ಯ ವಿಪ್ರತಿಪತ್ತಿ-ಅನನುಗುಣಮ್ ಇತ್ಯಾದ್ಯಭಿಪ್ರೇತ್ಯ ಆಹ-ಇತಿ ದಿಗಿತಿ ॥**

**ಯದ್ವಾ, ಏವಂ ವಿಪ್ರತಿಪತ್ಯಂತರಾಣ್ಯಪಿ ತತ್ತದ್‌ಬುದ್ಧ್ಯುತ್‌ಪ್ರೇಕ್ಷಿತಾನಿ ನಿರಸ್ಯಾನಿ ಇತಿ ಭಾವೇನಾಹ-ಇತಿ ದಿಗಿತಿ ॥ ತನ್ನಿರಾಸಶ್ಚ ಗುರುಟೀಕಾಯಾಂ ವ್ಯಕ್ತಃ ।**

ಸಿದ್ಧಸಾಧನತಾದೋಷವೂ ಇದೆ- 'ಅಯಂ(ದೇವದತ್ತಃ) ಪ್ರಮಾವಾನ್, ಸಮರ್ಥ ಪ್ರವೃತ್ತಿಮತ್ತ್ವಾತ್' ಎಂಬ ಅನುಮಿತಿಯೂ ಈ ಪರಿಷ್ಕಾರದಲ್ಲಿ ಸಂಗೃಹೀತವಾಗುತ್ತದೆ. ಈ ಅನುಮಾನದಲ್ಲಿ ಪಕ್ಷ ಒಬ್ಬ ವ್ಯಕ್ತಿ, ಜ್ಞಾನವಲ್ಲ. ಆದ್ದರಿಂದ ಈ ಅನುಮಿತಿ ಪಕ್ಷಾಂಶೇ ತಜ್ಞಾನವಿಷಯಕ-ಜ್ಞಾನಜನ್ಯವಲ್ಲ. ಇನ್ನು ವ್ಯಾಪ್ತಿಯು ತಜ್ಜ್ಞಾನವಿಷಯಕ ಜ್ಞಾನ. ಅದರಿಂದ

ಜನ್ಯವೆನ್ನಬೇಕು. ಆದರೆ ಮೀಮಾಂಸಕರು ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯನ್ನು ಅಂಗೀಕರಿಸುವುದಿಲ್ಲ ವಾದ ಕಾರಣ ವ್ಯಾಪ್ತಿಜ್ಞಾನದಲ್ಲಿ ಗ್ರಾಹ್ಯಪ್ರಾಮಾಣ್ಯಾಶ್ರಯವಾದ ಜ್ಞಾನವು ವಿಷಯವಾಗುವುದಿಲ್ಲ. ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯನ್ನು ಒಪ್ಪಿದ್ದಿದ್ದರೆ ಪ್ರಮಾವತ್ವರೂಪ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತಿಯಿಂದ ಪ್ರಕೃತ ಪ್ರಮಾವೂ ವ್ಯಾಪ್ತಿಯಲ್ಲಿ ವಿಷಯವಾಗುತ್ತಿತ್ತು. ಮೀಮಾಂಸಕರು ಅದನ್ನು ಒಪ್ಪಿಲ್ಲ. ಹೀಗೆ ವ್ಯಾಪ್ತಿಜ್ಞಾನವೂ ತಜ್ಜ್ಞಾನವಿಷಯಕ–ಜ್ಞಾನವಲ್ಲ. ಆದ್ದರಿಂದ ಆ ಅನುಮಿತಿ ಸಂಗೃಹೀತವಾಗುತ್ತದೆ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿರುವುದು ಪರತಸ್ತ್ವವಾದಿಗಳಿಗೂ ಸಮ್ಮತ. ಇದರಿಂದ ಸಿದ್ಧಸಾಧನತಾ. ಹೀಗೆ ಈ ಪರಿಷ್ಕಾರವೂ ನಿರ್ದುಷ್ಟವಲ್ಲ.

ಈ ಎಲ್ಲ ಅಂಶಗಳನ್ನೂ ಸೂಚಿಸುವುದಕ್ಕಾಗಿ ಮೂಲದಲ್ಲಿ 'ಇತಿ ದಿಕ್' ಎನ್ನಲಾಗಿದೆ.

**ಇಲ್ಲಿಗೆ ಪರೋಕ್ತಸ್ವತಸ್ತ್ವನಿರುಕ್ತಿ ಭಂಗ ಪ್ರಕರಣ ಮುಕ್ತಾಯವಾಯಿತು. ॥ ೨ ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ನೈಯಾಯಿಕರು ಮಾಡಿರುವ ಸ್ವತಸ್ತ್ವಪರಿಷ್ಕಾರಗಳನ್ನು ವಿಮರ್ಶೆ ಮಾಡಲಾಗಿದೆ. ಮೊದಲು, ಗಂಗೇಶೋಪಾಧ್ಯಾಯರು ತತ್ತ್ವಚಿಂತಾಮಣಿ ಗ್ರಂಥದಲ್ಲಿ ಮಾಡಿರುವ ಪ್ರಥಮ ಪರಿಷ್ಕಾರವನ್ನು ವಿಮರ್ಶೆಗಾಗಿ ಎತ್ತಿಕೊಳ್ಳಲಾಗಿದೆ. ಅದು ಹೀಗಿದೆ–

ತದಪ್ರಾಮಾಣ್ಯಾಗ್ರಾಹಕ–ಯಾವಜ್ಞಾನಗ್ರಾಹಕ–ಸಾಮಗ್ರೀಗ್ರಾಹ್ಯತ್ವಮ್ ।

ಇದರಲ್ಲಿ ಸಾಮಗ್ರಿಗೆ ಎರಡು ವಿಶೇಷಣಗಳು.

1. ಅಪ್ರಾಮಾಣ್ಯಾಗ್ರಾಹಕ 2. ಯಾವತ್

ಜ್ಞಾನಗ್ರಾಹಕವಾದ ಸಾಮಗ್ರೀ ಎಂದರೆ ನೈಯಾಯಿಕಮತರೀತ್ಯಾ ಅನುವ್ಯವಸಾಯ ಸಾಮಗ್ರೀ ಮತ್ತು ಅನುಮಿತಿಸಾಮಗ್ರೀ. ಅನುವ್ಯವಸಾಯ ಮನಸ್ಸಿನಿಂದ ಹುಟ್ಟುತ್ತದೆ. ಅದು ಹುಟ್ಟಬೇಕಾದರೆ ಮನಸ್ಸಿಗೂ ವ್ಯವಸಾಯಕ್ಕೂ ಸನ್ನಿಕರ್ಷವಾಗಬೇಕು. ಆ ಸನ್ನಿಕರ್ಷ ಮನಃಸಂಯುಕ್ತ– ಆತ್ಮಸಮವಾಯ. ತದ್ಘಟಿತ ಸಾಮಗ್ರೀ=ಪ್ರತ್ಯಕ್ಷಸಾಮಗ್ರೀ. ಇದರಂತೆ, ಸಫಲ ಪ್ರವೃತ್ತಿಜನಕತ್ವರೂಪ ಹೇತುವಿನಿಂದ 'ಇದಂ ಜ್ಞಾನಂ ಪ್ರಮಾಣಂ' ಎಂಬ ಪ್ರಾಮಾಣ್ಯವಿಷಯಕ ಅನುಮಿತಿ ಬರುತ್ತದೆ. ಆ ಅನುಮಿತಿಗೆ ಬೇಕಾದ ಪರಾಮರ್ಶಾದಿಗಳೂ ಜ್ಞಾನಗ್ರಾಹಕ ಸಾಮಗ್ರಿಗಳು. ಈ ಎರಡು ವಿಧದ ಸಾಮಗ್ರಿಗಳೊಂದಿಗೆ ಆ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸುವ ಸಾಮಗ್ರಿಗಳಿದ್ದರೆ ಪ್ರಾಮಾಣ್ಯಜ್ಞಾನ ಬರುವುದಿಲ್ಲ. ಆದಕ್ಕಾಗಿ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣವನ್ನು ಜ್ಞಾನಗ್ರಾಹಕಸಾಮಗ್ರಿಯಲ್ಲಿ ಕೊಡಬೇಕು. ಹೀಗೆ ಮೊದಲನೆಯ ವಿಶೇಷಣವು ಸಾರ್ಥಕ.

ಯಾವತ್ ಪದವನ್ನು ಬಿಟ್ಟರೆ ಜ್ಞಾನಗ್ರಾಹಕವಾದ ಅನುಮಿತಿಸಾಮಗ್ರೀಗ್ರಾಹ್ಯತ್ವವನ್ನು ನೈಯಾಯಿಕರು ಅಂಗೀಕರಿಸಿರುವುದರಿಂದ ಸಿದ್ಧಸಾಧನತಾದೋಷವು ಬರುತ್ತದೆ. ಯಾವತ್ ಪದವಿದ್ದಾಗ ಅನುವ್ಯವಸಾಯಸಾಮಗ್ರಿಯನ್ನೂ ತೆಗೆದುಕೊಳ್ಳುವುದು ಅನಿವಾರ್ಯವಾದುದರಿಂದ ತದ್ಗ್ರಾಹ್ಯತ್ವವನ್ನು ನೈಯಾಯಿಕರು ಅಂಗೀಕರಿಸಿಲ್ಲ, ಸಿದ್ಧಸಾಧನತಾದೋಷಪರಿಹಾರವಾಗುತ್ತದೆ. ಹೀಗೆ ಎರಡನೆಯ ವಿಶೇಷಣವೂ ಸಾರ್ಥಕ.

ನೈಯಾಯಿಕರ ಈ ಪರಿಷ್ಕಾರಕ್ಕೆ ತರ್ಕತಾಂಡವದಲ್ಲಿ ಮೊದಲು ಹೇಳಿದ ದೋಷ–ಜ್ಞಾನಗ್ರಾಹಕ ಸಾಮಗ್ರಿಗೆ ಅಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣವನ್ನು ಕೊಡಲಾಗಿದೆ. ಅಪ್ರಾಮಾಣ್ಯಶಬ್ದಕ್ಕೆ ಪ್ರಸಿದ್ಧವಾದ ಅರ್ಥ–'ತದಭಾವವತಿ ತತ್ಪ್ರಕಾರಕ ಜ್ಞಾನತ್ವ'. ಇಂತಹ ಅಪ್ರಾಮಾಣ್ಯವನ್ನು ಗ್ರಹಿಸುವ ಸಾಮಗ್ರಿಯು ಜ್ಞಾನಗ್ರಾಹಕಸಾಮಗ್ರಿಯೊಂದಿಗೆ ಇಲ್ಲದಿರ ಬಹುದು. ಆದರೆ, ಪ್ರಾಮಾಣ್ಯಾಭಾವವನ್ನು ಗ್ರಹಿಸುವ ಸಾಮಗ್ರಿಯು ಜ್ಞಾನಗ್ರಾಹಕ

ಸಾಮಗ್ರಿಯೊಂದಿಗೆ ಇದ್ದರೂ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಇದರಿಂದ ಅಪ್ರಾಮಾಣ್ಯಾಗ್ರಾಹಕ-ಜ್ಞಾನಗ್ರಾಹಕ-ಯಾವತ್-ಸಾಮಗ್ರೀಗ್ರಾಹ್ಯತ್ವವು ಪ್ರಾಮಾಣ್ಯದಲ್ಲಿ ಬರಲಿಲ್ಲವಾದ ಕಾರಣ ಬಾಧದೋಷ.

ಈ ದೋಷವನ್ನು ಪಕ್ಷಧರಮಿಶ್ರರು ಪರಿಹಾರ ಮಾಡಿದ್ದಾರೆ- 'ಅಪ್ರಾಮಾಣ್ಯ' ಪದದಲ್ಲಿರುವ ನಞ್‌ಗೆ ವಿರೋಧ ಎಂದು ಅರ್ಥ. ಆಗ ಅಪ್ರಾಮಾಣ್ಯಾಗ್ರಾಹಕ ಪದಕ್ಕೆ ಪ್ರಾಮಾಣ್ಯವಿರೋಧಿ-ಅಗ್ರಾಹಕ, ಎಂದು ಅರ್ಥವಾಗುತ್ತದೆ. ಪ್ರಾಮಾಣ್ಯವಿರೋಧಿ ಎಂದರೆ ತದಭಾವವತಿ ತತ್‌ಪ್ರಕಾರಕತ್ವ ಹಾಗೂ ತದ್ವತಿ ತತ್‌ಪ್ರಕಾರಕತ್ವಾಭಾವ ಎರಡೂ ಆಗುತ್ತವೆ. ಇವೆರಡನ್ನೂ ಗ್ರಹಿಸುವ ಸಾಮಗ್ರೀ ಇಲ್ಲದಿರುವಾಗ ಜ್ಞಾನಗ್ರಾಹಕಸಾಮಗ್ರಿಯು ಪ್ರಾಮಾಣ್ಯ ಗ್ರಾಹಕವಾಗುತ್ತದೆ. ಹೀಗೆ ಸ್ವತಸ್ತ್ವವನ್ನು ಪರಿಷ್ಕಾರ ಮಾಡಿದಾಗ ಹಿಂದೆ ಹೇಳಿದ ಬಾಧಕ್ಕೆ ಅವಕಾಶ ಇಲ್ಲ.

ಅದಕ್ಕಾಗಿ, ತರ್ಕತಾಂಡವದಲ್ಲಿ ಬೇರೆ ರೀತಿಯಿಂದ ಬಾಧದೋಷವನ್ನು ಹೇಳಲಾಗಿದೆ- ಜ್ಞಾನಗ್ರಾಹಕ ಸಾಮಗ್ರೀ ಪದದಿಂದ ಅನುವ್ಯವಸಾಯಸಾಮಗ್ರೀ, ಅನುಮಿತಿ ವಿಶೇಷಸಾಮಗ್ರೀ ಎಂದು ಎರಡನ್ನೇ ಗಮನಿಸಲಾಗಿದೆ. ಆದರೆ ಇನ್ನೂ ಕೆಲವು ಸಾಮಗ್ರಿಗಳೂ ಜ್ಞಾನಗ್ರಾಹಕವಾಗಿವೆ. 1.ಶಾಬ್ದಬೋಧಸಾಮಗ್ರೀ (2)ಸಾಮಾನ್ಯಲಕ್ಷಣಾಸನ್ನಿಕರ್ಷಘಟಿತಸಾಮಗ್ರೀ (3) ಅಯಂ ಘಟಜ್ಞಾನವಾನ್, ತದ್ವಿಷಯಕವ್ಯವಹಾರ ಕರ್ತೃತ್ವಾತ್ ಎಂಬ ಅನುಮಿತಿಸಾಮಗ್ರೀ. ಇವೆಲ್ಲವೂ ಜ್ಞಾನಗ್ರಾಹಕವಾಗಿವೆ. ಆದರೆ, ಪ್ರಾಮಾಣ್ಯಗ್ರಾಹಕವಾಗಿಲ್ಲ. ಯಾವಜ್ಜ್ಞಾನಗ್ರಾಹಕ-ಸಾಮಗ್ರೀ ಗ್ರಾಹ್ಯತ್ವವು ಪ್ರಾಮಾಣ್ಯದಲ್ಲಿ ಬರಲಿಲ್ಲ. ಆದಕಾರಣ ಬಾಧ.

ಈ ಬಾಧ ಪರಿಹಾರವನ್ನು ಮಾಡಲು ಇಬ್ಬರು ನ್ಯಾಯಮತಾನುಯಾಯಿಗಳು ಪ್ರಯತ್ನಿಸಿದ್ದಾರೆ-ಯಜ್ಞಪತ್ಯುಪಧ್ಯಾಯ ಮತ್ತು ಪಕ್ಷಧರಮಿಶ್ರ.

**ಯಜ್ಞಪತ್ಯುಪಾಧ್ಯಾಯರ ಪರಿಹಾರಕ್ರಮ ಹೀಗೆ**-ಜ್ಞಾನಗ್ರಾಹಕ ಸಾಮಗ್ರೀ ಎಂದರೆ ಯಾವುದೋ ರೀತಿಯಿಂದ ಜ್ಞಾನವನ್ನು ಗ್ರಹಿಸುವ ಸಾಮಗ್ರೀ ಅಲ್ಲ. ಜ್ಞಾನಪ್ರಕಾರ-ಪ್ರಕಾರಕತಯಾ ತದ್ವದ್ವಿಶೇಷ್ಯಕತಯಾ ಜ್ಞಾನಗ್ರಾಹಕ ಸಾಮಗ್ರೀ ವಿವಕ್ಷಿತ. ಇಂತಹ ಸಾಮಗ್ರೀವಿಶೇಷಗಳೆಲ್ಲವೂ ಪ್ರಾಮಾಣ್ಯವನ್ನು ಗ್ರಹಿಸುತ್ತವೆ, ಎಂದು ಸ್ವತಸ್ತ್ವವಾದ. ಹೀಗೆ ಪರಿಷ್ಕರಿಸಿದಾಗ 'ಘಟಜ್ಞಾನವಾನಯಂ' 'ಘಟಜ್ಞಾನಂ ಗುಣಃ' ಈ ಶಾಬ್ದಸಾಮಗ್ರಿಗಳು ಸಂಗ್ರಹವಾಗುವುದಿಲ್ಲ. 'ಘಟತ್ವಪ್ರಕಾರಕ ಘಟವಿಶೇಷ್ಯಕ-ಜ್ಞಾನವಾನ್' ಎಂಬ ಅನುವ್ಯವಸಾಯಜನಕವಾದ ಸಾಮಗ್ರೀಗಳು ಮಾತ್ರ ಸಂಗೃಹೀತವಾಗುತ್ತವೆ. ಅಂತಹ ಯಾವುದೇ ಸಾಮಗ್ರಿಯಾಗಲೀ ಅದು ಪ್ರಾಮಾಣ್ಯಗ್ರಾಹಕವಾಗುತ್ತದೆ. ಹೀಗೆ ಬಾಧವನ್ನು ಪರಿಹಾರ ಮಾಡಬಹುದು.

ಯಜ್ಞಪತ್ಯುಪಾಧ್ಯಾಯರ ಈ ಪರಿಷ್ಕಾರವನ್ನು ಶ್ರೀವ್ಯಾಸರಾಜರು ಸುಲಭವಾಗಿ ನಿರಾಕರಿಸಿದ್ದಾರೆ-ಘಟತ್ವಪ್ರಕಾರಕತ್ವೇನ, ತದ್ವದ್‌ವಿಶೇಷ್ಯಕತ್ವೇನ ಜ್ಞಾನಗ್ರಾಹಕ ಸಾಮಗ್ರಿಯಿಂದ

ಪ್ರಾಮಾಣ್ಯವು ನಿಯಮೇನ ಗೃಹೀತವಾಗುತ್ತದೆ, ಎನ್ನುವ ವಾದ ಅರ್ಥವೇ ಇಲ್ಲದ ಟೊಳ್ಳುವಾದ. ಘಟಜ್ಞಾನಗತಪ್ರಾಮಾಣ್ಯ ಎಂದರೆ ಘಟತ್ವಪ್ರಕಾರಕತ್ವ–ವಿಶಿಷ್ಟ–ಘಟತ್ವವದ್ವಿಶೇಷ್ಯಕತ್ವ. ತೇನರೂಪೇಣ ಜ್ಞಾನಗ್ರಾಹಕ ಎಂದರೆ ಪ್ರಾಮಾಣ್ಯವಿಶಿಷ್ಟತ್ವೇನ ಜ್ಞಾನಗ್ರಾಹಕ ಎಂದು ಅರ್ಥ. ಅಲ್ಲಿಗೆ, ಪ್ರಾಮಾಣ್ಯವಿಶಿಷ್ಟತಯಾ ಜ್ಞಾನಗ್ರಾಹಕ ಸಾಮಗ್ರಿಗಳೆಲ್ಲವೂ ಪ್ರಾಮಾಣ್ಯವನ್ನು ವಿಷಯೀಕರಿಸುತ್ತವೆ, ಎಂದಂತಾಯಿತು. ಇದರಲ್ಲಿ ಯಾರಿಗೂ ವಿವಾದವೇ ಇಲ್ಲ, ಇದು ಸ್ವತಸ್ತ್ವವಾದ, ಎನ್ನುವ ಹೊಸವಾದ ಹೇಗಾದೀತು?

ಈ ಪರಿಷ್ಕಾರ ಅತ್ಯಂತ ಲಘುವಾಗಿ ಕಂಡರೂ ಇದರಲ್ಲಿ ಸತ್ವ ಇದೆ, ಎಂದು ರಾಯರು ನ್ಯಾಯದೀಪದಲ್ಲಿ ತೋರಿಸಿದ್ದಾರೆ. ನೈಯಾಯಿಕ ಏಕದೇಶಿಗಳು, ಅನುವ್ಯವಸಾಯವು ವ್ಯವಸಾಯ ವನ್ನು ತದ್ವದ್ವಿಶೇಷ್ಯಕತ್ವೇನ ಗ್ರಹಣ ಮಾಡಿದರೂ ಅನುವ್ಯವಸಾಯಕ್ಕೆ ತದ್ವತ್ತಾಂಶವು ವ್ಯವಸಾಯದ್ವಾರಾ ವಿಷಯ, ಸ್ವಾತಂತ್ರ್ಯೇಣ ವಿಷಯವಲ್ಲ, ಎನ್ನುತ್ತಾರೆ. ಏಕೆಂದರೆ, ತದ್ವತ್ವವು ಬಾಹ್ಯಾಂಶ. ಅದು ಆಂತರವಾದ ಮನೋಗೋಚರವಲ್ಲ. ಹೀಗಾಗಿ ಬಾಹ್ಯೇಂದ್ರಿಯ ಗ್ರಹಿಸಿದ ತದ್ವತ್ತಾಂಶವು (ವಿಶೇಷಣ ಸಂಸರ್ಗವು) ಪುರೋವರ್ತಿಯಲ್ಲಿ ಇದೆ, ಎಂದು ಮನಸ್ಸು ನಿರ್ಧರಿಸ ಲಾರದು. ಈ ನಿರ್ಧಾರವೇ ಪ್ರಾಮಾಣ್ಯಗ್ರಹಣೆ. ಇದನ್ನು ಅನುವ್ಯವಸಾಯ ಮಾಡುವುದಿಲ್ಲ. ಹೀಗೆ ಉಕ್ತರೂಪೇಣ ಜ್ಞಾನಗ್ರಾಹಕವಾದ ಸಮರ್ಥಪ್ರವೃತ್ತಿಜನಕತ್ವ ಅನುಮಿತಿ ಸಾಮಗ್ರಿಯು ಪ್ರಾಮಾಣ್ಯಗ್ರಾಹಕವಾದರೂ ಅನುವ್ಯವಸಾಯ ಸಾಮಗ್ರಿಯು ನೈಯಾಯಿಕ ಮತದಲ್ಲಿ ಪ್ರಾಮಾಣ್ಯಗ್ರಾಹಕವಲ್ಲ. ಆದ್ದರಿಂದ ಈ ಸ್ವತಸ್ತ್ವ ಪರಿಷ್ಕಾರ ನಿರ್ದುಷ್ಟವಾಗಿದೆ. ಹೀಗೆ ರಾಯರು ನ್ಯಾಯದೀಪದಲ್ಲಿ ತಾವೇ ದೋಷಪರಿಹಾರ ಮಾಡಿ ವ್ಯಾಸರಾಜರು ಹೇಳಿದ ದೋಷಾಂತರಕ್ಕೆ ಪೀಠಿಕೆಯನ್ನು ನೀಡಿದ್ದಾರೆ.

ವ್ಯಾಸರಾಜರು ಈ ಪಕ್ಷಕ್ಕೆ ಹೇಳಿದ ದೋಷಾಂತರ–ಅಸ್ಮಿನ್ ಪಕ್ಷೇ ಅಪ್ರಾಮಾಣ್ಯಾಗ್ರಾಹಕ ವಿಶೇಷಣ ವೈಯರ್ಥ್ಯಂ ಚ–ಈ ಪಕ್ಷದಲ್ಲಿ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣ ವ್ಯರ್ಥ. ಏಕೆಂದರೆ, ತದ್ವದ್ವಿಶೇಷ್ಯಕತಯಾ ಜ್ಞಾನಗ್ರಾಹಕ ಸಾಮಗ್ರಿಯ ಜೊತೆಗೆ ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯು ಇರುವ ಸಂಭವವೇ ಇಲ್ಲ. ಏಕೆಂದರೆ, ಅಪ್ರಾಮಾಣ್ಯಶರೀರದಲ್ಲಿ ತದಭಾವ ವದ್ವಿಶೇಷ್ಯಕತ್ವವು ಸೇರಿದೆ. ಅದಕ್ಕೆ ತದ್ವದ್ವಿಶೇಷ್ಯಕತ್ವವು ವಿರುದ್ಧವಾಗಿದೆ. ಆದ್ದರಿಂದ ವಿರುದ್ಧಗ್ರಾಹಕ ಸಾಮಗ್ರಿಗಳು ಜೊತೆಗಿರುವ ಸಂಭವವೇ ಇಲ್ಲ. ಆ ವಿಶೇಷಣ ವ್ಯರ್ಥ.

**ಪಕ್ಷಧರಪಕ್ಷನಿರಾಸ**—ಹಿಂದೆ ಹೇಳಿದಂತೆ, ಶಾಬ್ದಬೋಧಸಾಮಗ್ರೀಮಾದಾಯ ಬಾಧ ದೋಷದ ಪರಿಹಾರವನ್ನು ಪಕ್ಷಧರ ಮಿಶ್ರರು ಹೀಗೆ ಮಾಡಿದ್ದಾರೆ–

ಜ್ಞಾನಗ್ರಾಹಕ ಸಾಮಗ್ರೀಪದದಿಂದ ಜ್ಞಾನದ ಜ್ಞಾನಕ್ಕೂ ವಿಷಯದಜ್ಞಾನಕ್ಕೂ ಎರಡಕ್ಕೂ ಕಾರಣವಾದ ಒಂದು ಸಾಮಗ್ರಿಯೇ ವಿವಕ್ಷಿತ. ಅನುವ್ಯವಸಾಯಸಾಮಗ್ರೀ ಮಾತ್ರ ಅಂತಹ ಸಾಮಗ್ರೀ. ಮನಸ್ಸು ಘಟಜ್ಞಾನವನ್ನು ಗ್ರಹಿಸಬೇಕಾದರೆ ಆ ಘಟಜ್ಞಾನಕ್ಕೂ ಮನಸ್ಸಿಗೂ

ಸಂಯುಕ್ತಸಮವಾಯ ಸನ್ನಿಕರ್ಷ ಕಾರಣ. ಆ ಸನ್ನಿಕರ್ಷದ ಸಹಾಯದಿಂದ ಮನಸ್ಸು ಘಟವಿಶಿಷ್ಟ ವಾದ ಜ್ಞಾನವನ್ನು ಗ್ರಹಿಸುತ್ತದೆ. ಇಲ್ಲಿ ಮನಸ್ಸು ಘಟವನ್ನೂ ಜ್ಞಾನವನ್ನೂ ಗ್ರಹಿಸಬೇಕಾದರೆ ಒಂದೇ ಸನ್ನಿಕರ್ಷಘಟಿತ ಸಾಮಗ್ರೀ ಕಾರಣ. ಬಾಹ್ಯಘಟಜ್ಞಾನಕ್ಕೆ ವ್ಯವಸಾಯವು ಜ್ಞಾನಲಕ್ಷಣಾ ಸನ್ನಿಕರ್ಷರೂಪವಾಗಿ ಕಾರಣವಾದರೆ ಅದೇ ವ್ಯವಸಾಯವು ಅನುವ್ಯವಸಾಯಕ್ಕೆ ವಿಷಯವಿಧಯಾ ಕಾರಣವಾಗುತ್ತದೆ. ಆದರೆ, ''ಮಮ ಘಟಜ್ಞಾನಮ್ ಅಸ್ತಿ'' ಎಂಬ ವಾಕ್ಯದಿಂದ ಶಾಬ್ದಬೋಧ ಬರಬೇಕಾದರೆ ಆ ವಾಕ್ಯದಲ್ಲಿ ಘಟಪದವೂ ಬೇಕು, ಜ್ಞಾನಪದವೂ ಬೇಕು. ಶಾಬ್ದಬೋಧದಲ್ಲಿ ಘಟಭಾನಕ್ಕೆ ಕಾರಣವಾದುದು ಘಟಪದದ ಶಕ್ತಿ, ಜ್ಞಾನಭಾನಕ್ಕೆ ಕಾರಣವಾದುದು ಜ್ಞಾನಪದಶಕ್ತಿ. ಹೀಗೆ ಇಲ್ಲಿ ವಿಷಯ ಮತ್ತು ಜ್ಞಾನದ ಭಾನಕ್ಕೆ ಒಂದೇ ಪ್ರಯೋಜಕವಲ್ಲ. ಆದರಿಂದಾಗಿ ಶಾಬ್ದಬೋಧಸಾಮಗ್ರೀ ಸಂಗ್ರಹವಾಗುವುದಿಲ್ಲ. ಬಾಧ ಇಲ್ಲ. ಇದು ಮಿಶ್ರರ ಅಭಿಪ್ರಾಯ.

ಇದಕ್ಕೆ ತರ್ಕತಾಂಡವದಲ್ಲಿ ಹೀಗೆ ದೋಷವನ್ನು ಹೇಳಲಾಗಿದೆ– 'ಮಮ ಘಟಜ್ಞಾನಮ್ ಉತ್ಪನ್ನಮ್, ತಚ್ಚ ಆತ್ಮವಿಶೇಷಣಗುಣಃ' ಎಂಬ ವಾಕ್ಯದಲ್ಲಿ 'ತತ್' ಎಂಬ ಶಬ್ದಕ್ಕೆ ಪೂರ್ವಪ್ರಕೃತ ವಾದ ಘಟಜ್ಞಾನ, ಎಂದು ಅರ್ಥ. ಆ ಒಂದೇ ತತ್‌ಪದಶಕ್ತಿಯಿಂದ ಘಟ ಮತ್ತು ಜ್ಞಾನಗಳ ಜ್ಞಾನ ಬಂದಿದೆ. ಈ ಶಾಬ್ದಸಾಮಗ್ರಿಯೂ ಸ್ವತಸ್ತ್ವಪರಿಷ್ಕಾರದಲ್ಲಿ ಸಂಗೃಹೀತವಾಗುತ್ತದೆ. ಆದರೆ ಅದು ಪ್ರಾಮಾಣ್ಯಗ್ರಾಹಕವಲ್ಲ. ಬಾಧದೋಷ ಅನಿವಾರ್ಯ.

**ನ್ಯಾಯದೀಪದಲ್ಲಿರುವ ವಿಶೇಷಾಂಶ–** ಇದರ ಮೇಲೆ ರಾಯರು ಕೋಟಿಕ್ರಮಗಳನ್ನು ಬೆಳೆಸಿದ್ದಾರೆ.

ಹಿಂದಿನ ಬಾಧಪರಿಹಾರಕ್ಕಾಗಿ 'ಸರ್ವನಾಮಪದ ಭಿನ್ನಜ್ಞಾನಸಾಮಗ್ರೀ ಗ್ರಾಹ್ಯತ್ವಂ' ಎಂದು ಪರಿಷ್ಕಾರ ಮಾಡಬೇಕು. 'ತತ್' ಪದವು ಸರ್ವನಾಮಪದವಾದುದರಿಂದ ತದ್‌ಘಟಿತ ಸಾಮಗ್ರೀ ಸಂಗ್ರಹವಾಗುವುದಿಲ್ಲ.

ಹೀಗೆ ಮಾಡಿದರೂ ಬಾಧ ಇದ್ದೇ ಇದೆ–'ಜ್ಞಾನ' ಎಂಬ ಪದವು ಲಕ್ಷಣಯಾ 'ಘಟಜ್ಞಾನ' ಎಂಬ ಶಾಬ್ದಬೋಧಕ್ಕೆ ಕಾರಣವಾದಾಗ ಆ ಶಾಬ್ದಬೋಧದಲ್ಲಿ ಜ್ಞಾನ–ವಿಷಯಭಾಸಕ ಸಾಮಗ್ರೀ ಒಂದೇ ಆಗಿದೆ. ಆದರೆ, ಆ ಶಾಬ್ದಬೋಧದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

ಇದರ ಪರಿಹಾರಕ್ಕಾಗಿ ಜ್ಞಾನಗ್ರಾಹಕ ಸಾಮಗ್ರಿಯಲ್ಲಿ ಅಲಾಕ್ಷಣಿಕಸಾಮಗ್ರೀ ಎಂಬ ವಿಶೇಷಣವನ್ನು ಕೊಟ್ಟರೂ ಇನ್ನೊಂದು ಕಡೆ ಬಾಧ ಬರುತ್ತದೆ. ಒಬ್ಬ ವ್ಯಕ್ತಿ ಜ್ಞಾನ ಎಂಬ ಪದಕ್ಕೆ ಘಟಜ್ಞಾನವು ಅರ್ಥ ಎಂದು ತಪ್ಪುತಿಳಿದಿದ್ದಾನೆ. ಅಂತಹವನಿಗೆ ಜ್ಞಾನ ಎಂಬ ಒಂದೇಪದದಿಂದ ವಿಷಯವಿಷ್ಟಜ್ಞಾನದ ಜ್ಞಾನವು ಬರುತ್ತದೆ. ಆ ಶಾಬ್ದಸಾಮಗ್ರಿಯು ಜ್ಞಾನಗ್ರಾಹಕವಾಗಿದೆ, ಪ್ರಾಮಾಣ್ಯಗ್ರಾಹಕವಾಗಿಲ್ಲ, ಮತ್ತೆ ಬಾಧ.

ಸಾಮಗ್ರಿಗೆ ಭ್ರಮಾಘಟಿತತ್ವವನ್ನು ವಿಶೇಷಣವನ್ನಾಗಿ ಕೊಟ್ಟು ಈ ಬಾಧವನ್ನು ಪರಿಹಾರ

ಮಾಡಿದರೆ, ತದಪ್ರಾಮಾಣ್ಯಾಗ್ರಾಹಕ, ಎಂಬ ವಿಶೇಷಣ ವ್ಯರ್ಥವಾಗುತ್ತದೆ. ಗ್ರಾಹ್ಯ ಪ್ರಾಮಾಣ್ಯಾಶ್ರಯ ಜ್ಞಾನದಲ್ಲಿ 'ಇದಂ ಜ್ಞಾನಂ ಅಪ್ರಮಾಣಂ' ಎಂಬ ಭ್ರಮೆ ಬಂದಾಗ ಆ ಜ್ಞಾನಗ್ರಾಹಕಸಾಮಗ್ರಿಯು ಪ್ರಾಮಾಣ್ಯಗ್ರಾಹಕವಲ್ಲ. ಬಾಧ ಬರುತ್ತದೆ. ಅದರ ಪರಿಹಾರಕ್ಕಾಗಿ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣವನ್ನು ಕೊಡಲಾಗಿದೆ. ಆದರೆ, ಅಂತಹ ಭ್ರಮೆ ನ್ಯಾಯಮತದಲ್ಲಿ ಅನುಮಿತಿರೂಪವಾದುದು. ಅನುಮಿತಿ ಭ್ರಮೆಯಾಗಬೇಕಾದರೆ ಅದರ ಸಾಮಗ್ರಿಯಲ್ಲಿ ಸೇರಿರುವ ವ್ಯಾಪ್ತಿಜ್ಞಾನ ಅಥವಾ ಪಕ್ಷಧರ್ಮತಾಜ್ಞಾನ ಇವೆರಡರಲ್ಲಿ ಒಂದು ಭ್ರಮೆಯಾಗಿರಲೇಬೇಕು. ಭ್ರಮಾಘಟಿತತ್ವ ಎಂಬ ವಿಶೇಷಣವನ್ನು ಸಾಮಗ್ರಿಗೆ ಕೊಟ್ಟರೆ ಅದರಿಂದಲೇ ಉಕ್ತಾನುಮಿತಿಸಾಮಗ್ರಿಯ ವ್ಯವಚ್ಛೇದವು ಆಗುವುದರಿಂದ ಅದರ ವಾರಣೆಗಾಗಿ ಪುನಃ ತದಪ್ರಾಮಾಣ್ಯಾಗ್ರಾಹಕ ಎಂಬ ವಿಶೇಷಣದ ಅಗತ್ಯವೇ ಇಲ್ಲ.

ಹೀಗೆ ರಾಯರು ನ್ಯಾಯದೀಪದಲ್ಲಿ ಕೋಟಿಕ್ರಮವನ್ನು ಬೆಳೆಸಿ ಮೂಲದಲ್ಲಿ ಹೇಳಿದ ದೋಷವನ್ನು ಅನಿವಾರ್ಯಗೊಳಿಸಿದ್ದಾರೆ.

## ದ್ವಿತೀಯ ಸ್ವತಸ್ತ್ವನಿರಾಸ

ತಜ್ಜ್ಞಾನವಿಷಯಕ-ಜ್ಞಾನಾಜನ್ಯ-ಜ್ಞಾನವಿಷಯತ್ವಮ್-ಇದು ಮಣಿಗ್ರಂಥದಲ್ಲಿ ಹೇಳಿರುವ ಇನ್ನೊಂದು ವಿಧದ ಸ್ವತಸ್ತ್ವನಿರುಕ್ತಿ. ತಜ್ಜ್ಞಾನ ಎಂದರೆ ಗ್ರಾಹ್ಯಪ್ರಾಮಾಣ್ಯಕ್ಕೆ ಆಶ್ರವಾದ ಜ್ಞಾನ. ಅಂದರೆ ಬಾಹ್ಯೇಂದ್ರಿಯದಿಂದ ಬರುವ ಘಟಾದಿಜ್ಞಾನ. ತಜ್ಜ್ಞಾನವಿಷಯಕ-ಜ್ಞಾನವೆಂದರೆ ಅನುವ್ಯವಸಾಯ. ಆದರಿಂದ ಆಜನ್ಯಜ್ಞಾನವೆಂದರೆ ಅದೇ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ, ಎನ್ನುವುದೇ ಸ್ವತಸ್ತ್ವವಾದ.

ಈ ನಿರುಕ್ತಿಗೆ ತರ್ಕತಾಂಡವದಲ್ಲಿ ಹೇಳಿದ ದೋಷ ಸಿದ್ಧಸಾಧನತಾ ಮತ್ತು ಬಾಧ. ನಮ್ಮ ಘಟಜ್ಞಾನವನ್ನು ವಿಷಯೀಕರಿಸುವ-ಜ್ಞಾನವೆಂದರೆ ಈಶ್ವರನ ಜ್ಞಾನ. ತದಜನ್ಯಜ್ಞಾನವೆಂದರೆ ಮತ್ತೆ ಅದೇ ಈಶಜ್ಞಾನ. ಅದು ಸರ್ವವಿಷಯಕವಾದುದರಿಂದ ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ. ಇದನ್ನು ಪರತಸ್ತ್ವವಾದಿಗಳಾದ ನೈಯಾಯಿಕರೂ ಒಪ್ಪಿದ್ದಾರೆ, ಸಿದ್ಧಸಾಧನತಾ.

ಬಾಧದೋಷವೂ ಇದೆ. ನಮ್ಮ ಜ್ಞಾನವನ್ನು ವಿಷಯೀಕರಿಸುವ ಈಶ್ವರಜ್ಞಾನದಿಂದ ನಮ್ಮ ಅನುವ್ಯವಸಾಯವೂ ಜನ್ಯವೇ ಆಗಿದೆ. ಏಕೆಂದರೆ, ಹುಟ್ಟುವ ಎಲ್ಲ ವಸ್ತುಗಳಿಗೂ ಈಶಜ್ಞಾನವು ಜನಕ. ಇದರಿಂದ ತಜ್ಜ್ಞಾನ ವಿಷಯಕ ಜ್ಞಾನಾಜನ್ಯಜ್ಞಾನಪದದಿಂದ ನಮಗೆ ಬರುವ ಅನುವ್ಯವಸಾಯದ ಸಂಗ್ರಹವಾಗುವುದಿಲ್ಲ. ಘಟಾದಿಜ್ಞಾನಗತಪ್ರಾಮಾಣ್ಯದಲ್ಲಿ ಸ್ವತಸ್ತ್ವಲಕ್ಷಣ ಬರುವುದಿಲ್ಲ. ಆದ್ದರಿಂದ ಬಾಧ.

ಯಜ್ಞಪತ್ಯುಪಾಧ್ಯಾಯರು ಈ ಎರಡು ದೋಷಗಳ ಪರಿಹಾರಕ್ಕಾಗಿ ಈ ಲಕ್ಷಣದಲ್ಲಿ ಪರಿಷ್ಕಾರವನ್ನು ಮಾಡಿದ್ದಾರೆ- ತಜ್ಜ್ಞಾನವಿಷಯಕ-ಜನ್ಯಜ್ಞಾನಾಜನ್ಯ-ಜನ್ಯಜ್ಞಾನವಿಷಯತ್ವಮ್,

ಎಂದು. ಮೊದಲ ಜನ್ಯಪದದಿಂದ ಬಾಧದೋಷವು ಪರಿಹಾರವಾಗುತ್ತದೆ. ಹೇಗೆಂದರೆ, ನಮ್ಮ ಜ್ಞಾನ ವಿಷಯಕ ಜ್ಞಾನಪದದಿಂದ ಈಶಜ್ಞಾನವನ್ನು ಪರಿಗ್ರಹಿಸಿ ಬಾಧವನ್ನು ಹೇಳಬೇಕು. ಆದರೆ, ಈಶಜ್ಞಾನವು ಜನ್ಯಜ್ಞಾನವಲ್ಲ. ಆದ್ದರಿಂದ ಬಾಧದೋಷವಿಲ್ಲ.

ಎರಡನೆಯ ಜ್ಞಾನಪದದಿಂದ ಈಶಜ್ಞಾನವನ್ನು ಪರಿಗ್ರಹಿಸಿ ಸಿದ್ಧಸಾಧನತಾದೋಷವನ್ನು ಹೇಳಲಾಗಿದೆ. ಆದರೆ, ಅಲ್ಲಿ ಮತ್ತೆ ಜನ್ಯಪದವಿರುವುದರಿಂದ ಈಶಜ್ಞಾನ ಸಂಗ್ರಹವಾಗುವುದಿಲ್ಲ.

ಹೀಗೆ ಯಜ್ಞಪತ್ಯುಪಾಧ್ಯಾಯರು ಎರಡು ಜನ್ಯಪದಗಳನ್ನು ಸೇರಿಸಿ ದೋಷಗಳನ್ನು ಪರಿಹಾರ ಮಾಡಿದ್ದಾರೆ. ಇದಕ್ಕೂ ವ್ಯಾಸರಾಜರು ಬಹಳ ಬುದ್ಧಿವಂತಿಕೆಯಿಂದ ದೋಷವನ್ನು ಹೇಳಿದ್ದಾರೆ.

'ಸರ್ವಂ ಜ್ಞಾನಂ ಗುಣಃ' ಎಂಬ ವಾಕ್ಯದಿಂದ ಬಂದ ಶಾಬ್ದಬೋಧವು ಪ್ರಮಾಣವಾಗಿದೆ. ಆ ಪ್ರಾಮಾಣ್ಯದಲ್ಲಿ ಸ್ವತಸ್ತ್ವವು ಬರಬೇಕು. ಆದರೆ, ಬರುವುದಿಲ್ಲ. ಏಕೆಂದರೆ, ಆ ವಾಕ್ಯದಿಂದ ಎಲ್ಲಾ ಜ್ಞಾನಗಳ ಜ್ಞಾನವೂ ಬರುತ್ತದೆ. ಆ ವಾಕ್ಯದಿಂದದ ಬರುವ ಜ್ಞಾನವೂ ಆ ವಾಕ್ಯಜನ್ಯಶಾಬ್ದಬೋಧಕ್ಕೆ ವಿಷಯ. ಹೀಗೆ ಆ ಶಾಬ್ದಬೋಧವು ಸ್ವವಿಷಯಕ. ಅಂದರೆ ತಜ್ಞಾನವಿಷಯಕಜ್ಞಾನ. ಅದರ ಅನುವ್ಯವಸಾಯವು ಇಂತಹ ತಜ್ಞಾನವಿಷಯಕ ಜ್ಞಾನರೂಪವಾದ ವ್ಯವಸಾಯದಿಂದ ಜನ್ಯವಾಗಿದೆ. ಅಜನ್ಯವಾಗಿಲ್ಲ. ಈ ಅನುವ್ಯವಸಾಯದ ಸಂಗ್ರಹವಾಗುವುದಿಲ್ಲ. ಆದ್ದರಿಂದ ತಜ್ಞಾನಗತ ಪ್ರಾಮಾಣ್ಯದಲ್ಲಿ ಅಂಶೇ ಬಾಧ.

ಹೀಗೆ ಈ ಪ್ರಕರಣದಲ್ಲಿ ನೈಯಾಯಿಕರು ಹೇಳಿರುವ ಎಲ್ಲಾ ಸ್ವತಸ್ತ್ವ ಪರಿಷ್ಕಾರಗಳಿಗೂ ದೋಷ ಹೇಳಿ ಶ್ರೀವ್ಯಾಸರಾಜರು ತಾವು ಮಾಡಿರುವ ಪರಿಷ್ಕಾರವೇ ಸರಿ ಎಂದು ಸ್ಥಾಪಿಸಿದ್ದಾರೆ.

**ಪ್ರಕರಣ ॥ ೨ ॥**

# ಪ್ರಕರಣ–3

## ಪ್ರಾಮಾಣ್ಯಸ್ವತಸ್ತ್ವೇ ಪ್ರಮಾಣಮ್

**स्वतस्त्वे प्रमाणं तु, ज्ञानप्रामाण्यं स्वतो ग्राह्यं, परतोऽगृह्यमाणत्वे सति गृह्यमाणत्वात् । यद्यदन्येनागृह्यमाणत्वे सति ग्राह्यं तत्तेन ग्राह्यम् । यथा चक्षुरन्येन अगृह्यमाणं रूपं चक्षुर्ग्राह्यम् ।।**

ಪ್ರಾಮಾಣ್ಯವು ಸ್ವತಃ ಗ್ರಾಹ್ಯ ಎನ್ನುವುದಕ್ಕೆ ಅನುಮಾನವೇ ಪ್ರಮಾಣ–

**ಅನುಮಾನ–೧**

ಜ್ಞಾನಗತ ಪ್ರಾಮಾಣ್ಯವು ಜ್ಞಾನಗ್ರಾಹಕದಿಂದಲೇ ಗ್ರಾಹ್ಯವಾಗಿದೆ. ಏಕೆಂದರೆ, ಅದು ಇತರ ಪ್ರಮಾಣಗಳಿಂದ ಅಗ್ರಾಹ್ಯವಾಗಿದ್ದು ಗ್ರಾಹ್ಯವಾಗಿದೆ.

ಯಾವುದು ಯಾವುದಕ್ಕಿಂತ ಇತರ ಅಗ್ರಾಹ್ಯವಾಗಿದ್ದು ಗ್ರಾಹ್ಯವಾಗಿದೆಯೋ ಅದು ಅದರಿಂದಲೇ ಗ್ರಾಹ್ಯ. ಉದಾಹರಣೆಗೆ ರೂಪ. ಅದು ಕಣ್ಣು ಬಿಟ್ಟು ಇತರ ಇಂದ್ರಿಯಗಳಿಂದ ಅಗ್ರಾಹ್ಯವಾಗಿದೆ, ಗ್ರಾಹ್ಯವೂ ಆಗಿದೆ. ಆದ್ದರಿಂದ ಕಣ್ಣಿನಿಂದಲೇ ಗ್ರಾಹ್ಯವಾಗಿದೆ.

ಈ ಪರಿಶೇಷಾನುಮಾನದಿಂದ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಅನುವ್ಯವಸಾಯದಿಂದ ಗ್ರಾಹ್ಯವೆಂದು ಸಿದ್ಧವಾಗುತ್ತದೆ.

## ನ್ಯಾಯದೀಪ

**ತತ್ರ ಕಿಂ ಪ್ರಮಾಣಮ್ ಇತ್ಯತ ಆಹ–ಸ್ವತಸ್ತ್ವೇ ಪ್ರಮಾಣಂ ತ್ವಿತಿ ।। ಅನುಮಾನಮ್ ಇತಿ ವಕ್ಷ್ಯಮಾಣೇನ ಅನ್ವಯಃ ।**

**ಯದ್ಯಪಿ–**

**ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ ।**

**ಇತಿ ಕಥಾಲಕ್ಷಣೋಕ್ತೇಃ, ಗ್ರಂಥಸ್ಯ ಚ ವಾದಕಥಾರೂಪೇಣ ಪ್ರವೃತ್ತೇಃ–**

**ಋಗ್ಯಜುಃ ಸಾಮಾ–ಥರ್ವಾಖ್ಯಾ ಮೂಲರಾಮಾಯಾಣಂ ತಥಾ ।**
**ಭಾರತಂ ಪಂಚರಾತ್ರಂ ಚ ವೇದಾ ಇತ್ಯೇವ ಶಬ್ದಿತಾಃ ।**
**ಪುರಾಣಾನಿ ಚ ಯಾನೀಹ ವೈಷ್ಣವಾನಿ ವಿದೋ ವಿದುಃ ।**
**ಸ್ವತಃ ಪ್ರಾಮಾಣ್ಯಮೇತೇಷಾಂ ನಾತ್ರ ಕಿಂಚಿದ್ವಿಚಾರ್ಯತೇ ।।**

**ಇತ್ಯಾದಿ ಆಗಮ ಏವ ವಕ್ತವ್ಯಃ । ತಥಾಪಿ ಹೈತುಕಸ್ಯ ತಾರ್ಕಿಕಸ್ಯ ಆಗಮೇ ಅತ್ಯಾದರಾಭಾವಾತ್ ತಂ ಪ್ರತಿ ಆಗಮಾನುಕೂಲಾಃ ನ್ಯಾಯಾಃ ಏವ ಉಚ್ಯಂತೇ ಇತ್ಯದೋಷಃ ।**

**ಜ್ಞಾನಗತಂ ಯಾಥಾರ್ಥ್ಯಂ ತದ್‌ಗ್ರಾಹಕೇಣೈವ ಗ್ರಾಹ್ಯಂ, ಗ್ರಾಹಕಾಂತರಾನುಪಪತ್ತೌ ಸತ್ಯಾಂ ಗೃಹ್ಯಮಾಣತ್ವಾತ್ । ಯತ್ ಯದನ್ಯೇನ ಅನುಪದ್ಯಮಾನಗ್ರಹಣಂ ಸತ್ ಗೃಹ್ಯತೇ ತತ್ ತೇನೈವ ಗೃಹ್ಯತೇ । ಯಥಾ ಚಕ್ಷುಷೋऽನ್ಯೇನ ಅನುಪಪದ್ಯಮಾನ ಸಾಕ್ಷಾತ್ಕಾರಂ ಸಾಕ್ಷಾತ್‌ಕ್ರಿಯಮಾಣಂ ರೂಪಾದಿ ಚಕ್ಷುಷಾ ಸಾಕ್ಷಾತ್ ಕ್ರಿಯತೇ, ಇತಿ ತತ್ವನಿರ್ಣಯಟೀಕೋಕ್ತಮ್ ಅನುಮಾನಂ ತಾತ್ಪರ್ಯತೋ ಅನುವದತಿ-ಜ್ಞಾನಪ್ರಾಮಾಣ್ಯಮಿತಿ ॥ ಯಥಾರ್ಥ್ಯರೂಪಮ್ ಇತ್ಯರ್ಥಃ । ತತ್‌ಸ್ವರೂಪಮುಕ್ತಂ ಪ್ರಾಗಸ್ಮಾಭಿಃ ।**

ಯಾವುದೇ ವಿಷಯದಲ್ಲಿ 'ಪ್ರಮಾಣ ಏನು' ಎಂಬ ಪ್ರಶ್ನೆ ಬಂದಾಗ ಮೊದಲು ಆಗಮ ಪ್ರಮಾಣವನ್ನೇ ಹೇಳಬೇಕು, ಎಂದು ಆಚಾರ್ಯರು ಕಥಾಲಕ್ಷಣದಲ್ಲಿ ಹೇಳಿದ್ದಾರೆ. ಪ್ರಕೃತ ಪ್ರಾಮಾಣ್ಯಸ್ವತಸ್ತ್ವಕ್ಕೆ ಆಗಮ ಪ್ರಮಾಣ ಇದೆ. ಋಗಾದಿ ಪ್ರಮಾಣಗ್ರಂಥಗಳನ್ನು ಉಲ್ಲೇಖಿಸಿ, ''ಸ್ವತಃ ಪ್ರಾಮಾಣ್ಯಮೇತೇಷಾಮ್'' ಎಂದು ಅವುಗಳ ಪ್ರಾಮಾಣ್ಯವು ಸ್ವತಃ ಎಂದು ತಿಳಿಸುವ ಪ್ರಮಾಣವಾಕ್ಯವೇ ಇದೆ. ಅದನ್ನೇ ಹೇಳಬಹುದಿತ್ತು. ಆದರೂ ನೈಯಾಯಿಕರು ಅನುಮಾನ ಪ್ರಿಯರು. ಅವರಿಗೆ ಆಗಮದಲ್ಲಿ ಅತ್ಯಾದರವಿಲ್ಲ. ಆದ್ದರಿಂದ ಮೂಲದಲ್ಲಿ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಅನುಮಾನವನ್ನೇ ಆಧಾರವನ್ನಾಗಿ ತೋರಿಸಲಾಗಿದೆ.

ಶ್ರೀವ್ಯಾಸರಾಜರು, ವಿಷ್ಣುತತ್ತ್ವವಿನಿರ್ಣಯದಲ್ಲಿ ಶ್ರೀಜಯತೀರ್ಥರು ಹೇಳಿದ ಅನುಮಾನ ವನ್ನೇ ಅಭಿಪ್ರಾಯದಲ್ಲಿ ಇಟ್ಟುಕೊಂಡು ಇಲ್ಲಿ ಅದರಂತಿರುವ ಅನುಮಾನವನ್ನು ಸ್ವತಸ್ತ್ವಕ್ಕೆ ಆಧಾರವನ್ನಾಗಿ ಕೊಟ್ಟಿದ್ದಾರೆ.

## ಪಕ್ಷಘಟಕ ಜ್ಞಾನಪದದ ಕೃತ್ಯ

**ಚಕ್ಷುರಾದಿರೂಪಾನುಪ್ರಮಾಣವ್ಯಾವೃತ್ತಸ್ಯ, ಸಾಕ್ಷಾತ್-ಜ್ಞೇಯವಿಷಯೀ-ಕಾರಿತ್ವಸ್ಯ ಲಾಭಾಯ ಜ್ಞಾನೇತಿ ವಿಶೇಷಣಮ್, ತತ್ತಜ್ಜ್ಞಾನಪರಮ್ । ಘಟತ್ವವತಿ ಘಟತ್ವಪ್ರಕಾರಕ-ಜ್ಞಾನತ್ವಾದಿರೂಪಂ ಪ್ರಾಮಾಣ್ಯಮ್ ಇತ್ಯರ್ಥಃ ।**

**ಯದಾ ತು ಪ್ರಾಮಾಣ್ಯಪದೇನ ಕೇವಲಪ್ರಾಮಾಣ್ಯಗ್ರಹಃ ತದಾ ಜ್ಞಾನಪದಂ**

**ಸ್ವಷ್ಟಾರ್ಥಮ್ । ಅತ ಏವ ಸುಧಾಯಾಂ 'ಪ್ರಾಮಾಣ್ಯಮ್' ಇತ್ಯೇವ ಪಕ್ಷೋಕ್ತಿಃ ।**

ಪ್ರಾಮಾಣ್ಯವೆಂದರೆ 'ಯಥಾವಸ್ಥಿತ-ಜ್ಞೇಯ-ವಿಷಯೀಕಾರಿತ್ವ'. ಇದು ಚಕ್ಷುರಾದಿ ಕರಣಗಳಲ್ಲೂ ಇದೆ, ಅವುಗಳಿಂದ ಹುಟ್ಟುವ ಜ್ಞಾನದಲ್ಲೂ ಇದೆ. ಪ್ರಕೃತ ಜ್ಞಾನಗತವಾದ ಪ್ರಾಮಾಣ್ಯ ಮಾತ್ರ ವಿವಕ್ಷಿತ. ಅದು ಸಾಕ್ಷಾತ್ ಜ್ಞೇಯವಿಷಯೀಕಾರಿತ್ವರೂಪವಾದುದು. ಅಂತಹ ಪ್ರಾಮಾಣ್ಯವೇ ಪ್ರಕೃತ ವಿವಕ್ಷಿತ ಎಂದು ತಿಳಿಸುವುದಕ್ಕಾಗಿ 'ಜ್ಞಾನ' ಎಂಬ ವಿಶೇಷಣವನ್ನು ಪ್ರಾಮಾಣ್ಯಕ್ಕೆ ಕೊಡಲಾಗಿದೆ. 'ಜ್ಞಾನಗತಂ ಪ್ರಾಮಾಣ್ಯಂ' ಎಂದರ್ಥ. ಜ್ಞಾನಪದದಿಂದ ತತ್ತತ್ ಜ್ಞಾನಗಳನ್ನು ಪ್ರತ್ಯೇಕವಾಗಿ ಪರಿಗ್ರಹಿಸಿ ಅವುಗಳಲ್ಲಿ ತತ್ತಜ್ಜ್ಞಾನಗ್ರಾಹಕ-ಗ್ರಾಹ್ಯತ್ವವನ್ನು ಸಾಧಿಸ ಬೇಕು. ಅರ್ಥಾತ್, ಘಟಜ್ಞಾನದಲ್ಲಿ-'ಘಟತ್ವವತಿ ಘಟತ್ವಪ್ರಕಾರಕತ್ವ' ಎಂಬ ಪ್ರಾಮಾಣ್ಯವು ಘಟಜ್ಞಾನಗ್ರಾಹಕ ಗ್ರಾಹ್ಯ ಹೀಗೆ.

ಒಂದುವೇಳೆ ಪ್ರಾಮಾಣ್ಯ ಪದಕ್ಕೆ ಕೇವಲಪ್ರಮಾಣದಲ್ಲಿ ಇರುವ ಪ್ರಮಾತ್ವರೂಪವಾದ ಪ್ರಾಮಾಣ್ಯವು ಅರ್ಥ, ಎನ್ನುವುದಾದರೆ ಜ್ಞಾನಪದದ ಅಗತ್ಯವಿಲ್ಲ, ಅದು ಸ್ಪಷ್ಟಾರ್ಥ. ಆದ್ದರಿಂದಲೇ ನ್ಯಾಯಸುಧಾದಲ್ಲಿ ಇದೇ ಅನುಮಾನದಲ್ಲಿ 'ಪ್ರಾಮಾಣ್ಯಮ್' ಎಂದಿಷ್ಟೇ ಪಕ್ಷವನ್ನಾಗಿ ಮಾಡಲಾಗಿದೆ.

## ಹೇತುವಿನಲ್ಲಿ ಪರತೋ ಅಗ್ರಾಹ್ಯತ್ವ ಪದದ ಅರ್ಥ

**ಸ್ವತ ಇತಿ ॥ ಗ್ರಾಹ್ಯಪ್ರಾಮಾಣ್ಯ-ವಿರೋಧ್ಯುಪಸ್ಥಾಪಕ-ಸಾಮಗ್ರ್ಯ-ಸಮವಹಿತ-ತತ್ತಜ್ಜ್ಞಾನ ವಿಷಯಕ ಸಾಕ್ಷಿವಿಷಯ ಏವ, ಇತ್ಯರ್ಥಃ । ವಿಶೇಷಣಕೃತ್ಯಂ ಪ್ರಾಗ್ವತ್ । ಸಾಕ್ಷೀ ಚ ಲೌಕಿಕಪ್ರತ್ಯಕ್ಷಾದಿ-ರೂಪಾನುವ್ಯವಸಾಯ ಏವ ।**

**ಪರತ ಇತಿ ॥ ಪ್ರಾಮಾಣ್ಯಂ, ಪರತೋ ಗ್ರಾಹ್ಯಂ, ಸಾಂಶಯಿಕತ್ವಾತ್, ಇತ್ಯಾದೌ ಯತ್ ಪರಾಭಿಮತಂ ಸಾಧ್ಯಮ್, ಉಕ್ತವಿಶೇಷಣಕ-ಸಾಕ್ಷಿಜ್ಞಾನಾತ್ ಅನ್ಯೇನೈವ ಗ್ರಾಹ್ಯತ್ವಾದಿರೂಪಂ, ತದಭಾವೇ ಸತಿ ಗ್ರಾಹ್ಯತ್ವಾತ್, ಇತ್ಯರ್ಥಃ ।**

**ತೇನ, ಅನುಮಿತ್ಯಾದಿ ಗ್ರಾಹ್ಯತ್ವೇಽಪಿ ನಾಸಿದ್ಧಿಃ। 'ಪರಸ್ಯ ಸ್ವತ್ವಾತ್ ಸ್ವಸ್ಯ ಚ ಪರತ್ವಾತ್' ಇತ್ಯಾದಿ ಮಣ್ಯುಕ್ತ-ಖಂಡನಸ್ಯಾಪಿ ಅನವಕಾಶಃ ।**

ಸ್ವತಸ್ತ್ವ ಸಾಧಕ-ಅನುಮಾನದಲ್ಲಿ 'ಪರತೋಽಗ್ರಾಹ್ಯತ್ವೇ ಸತಿ ಗ್ರಾಹ್ಯತ್ವಾತ್' ಎಂದು ಹೇತು. ಆ ಹೇತುವಿನಲ್ಲಿ 'ಪರತಃ' ಎಂದರೆ ನೈಯಾಯಿಕರು 'ಪ್ರಾಮಾಣ್ಯಂ ಪರತೋ ಗ್ರಾಹ್ಯಂ' ಎಂಬ

ಅನುಮಾನದಲ್ಲಿ ಯಾವುದನ್ನು ಸಾಧ್ಯವನ್ನಾಗಿ ಅಭಿಪ್ರಾಯ ಪಡುತ್ತಾರೋ ಅದೇ ಅರ್ಥವು ವಿವಕ್ಷಿತ. ಅರ್ಥಾತ್ ಪರತಃ ಅಗ್ರಾಹ್ಯ ಎಂದರೆ, ಅಪ್ರಾಮಾಣ್ಯಗ್ರಾಹಕ ಸಾಮಗ್ರೀ–ಅಸಮವಹಿತ ಸಾಕ್ಷಿಗಿಂತ ಬೇರೆಯಾದ ಅನುಮಾನದಿಂದಲೇ ಗ್ರಾಹ್ಯ ಎಂಬ ನಿಯಮವಿಲ್ಲ, ಎಂದು ಅರ್ಥ. ಈ ರೀತಿ ಅರ್ಥ ಮಾಡದಿದ್ದರೆ ಅಸಿದ್ಧಿದೋಷ ಬರುವ ಸಂಭವ ಇದೆ. 'ಪರತಃ' ಎಂದರೆ ಅನುಮಾನದಿಂದ, ಅಗ್ರಾಹ್ಯ ಎಂದು ನಾವು ಅಂಗೀಕರಿಸಿಲ್ಲ. ಸಾಕ್ಷಿಗ್ರಾಹ್ಯವಾದ ಪ್ರಾಮಾಣ್ಯವು ಅನುಮಾನಗ್ರಾಹ್ಯವೂ ಆಗಬಹುದು. ಹೀಗೆ ಅಸಿದ್ಧಿ. ಅದಕ್ಕಾಗಿ ಪರಾಭಿಪ್ರೇತವಾದ ಪರತೋಗ್ರಾಹ್ಯತ್ವದ (ಅನುಮಾನ ಮಾತ್ರ ಗ್ರಾಹ್ಯತ್ವದ) ಅಭಾವವೇ ಹೇತುಘಟಕ. ಈಗ ಅಸಿದ್ಧಿ ಇಲ್ಲ. 'ಅನುಮಾನದಿಂದಲೇ ಗ್ರಾಹ್ಯ' ಎನ್ನುವುದನ್ನು ಸ್ವತಸ್ತ್ವವಾದಿಗಳು ಅಂಗೀಕರಿಸುವುದಿಲ್ಲ. ಅನುಮಾನದಿಂದಲೂ ಗ್ರಾಹ್ಯ ಎಂದಷ್ಟೇ ಸ್ವತಸ್ತ್ವವಾದಿಗಳಿಗೆ, ಸಮ್ಮತ.

ಇದರಿಂದ ಚಿಂತಾಮಣಿ ಗ್ರಂಥದಲ್ಲಿ ಮಾಡಿದ ಆಕ್ಷೇಪಕ್ಕೂ ಅವಕಾಶ ಇಲ್ಲ– **'ಅನ್ಯಥಾ ಸ್ವಸ್ಯ ಪರತ್ವಾತ್, ಪರಸ್ಯ ಚ ಸ್ವತ್ವಾತ್ ತದೇತತ್ವಸ್ಯ ತದೇತದನ್ಯತ್ವಸ್ಯಚ ಸ್ವಪರಸಾಧಾರಣತ್ವಾತ್ 'ಸ್ವತಃ ಪರತೋ ವಾ' ಇತಿ ಸಂಶಯೋ ನ ಸ್ಯಾತ್'** (–ಚಿಂತಾಮಣಿ ಗ್ರಂಥ–ಪು.235)

'ಸ್ವತಃ ಎಂಬಲ್ಲಿ 'ಸ್ವ' ಎಂದರೆ ತಾನು, ಪರ ಎಂದರೆ ತನಗಿಂತ ಭಿನ್ನ. ವಿವಕ್ಷಾಭೇದೇನ ಯಾವುದು ಬೇಕಾದರೂ ಸ್ವ–ಪರ ಆಗಬಹುದು. ಇದರಿಂದಾಗಿ 'ಸ್ವತೋಗ್ರಾಹ್ಯತ್ವ–ಪರತೋಗ್ರಾಹ್ಯತ್ವಗಳು' ವಿರುದ್ಧ ಧರ್ಮಗಳೇ ಅಲ್ಲ. ವಿರುದ್ಧಧರ್ಮವಿಷಯಕಜ್ಞಾನವೇ ಸಂಶಯ. 'ಪ್ರಾಮಾಣ್ಯಂ ಸ್ವತಃ ಪರತೋ ವಾ' ಎಂಬುದು ಸಂಶಯವೇ ಆಗಲಿಕ್ಕಿಲ್ಲ. ಇದು ಮಣಿಗ್ರಂಥದ ಆಶಯ.

ಪ್ರಕೃತ, ಸ್ವ ಎಂದರೆ ಸಾಕ್ಷಿಜ್ಞಾನ. ಪರ ಎಂದರೆ ಸಾಕ್ಷೀತರಜ್ಞಾನ. ಸ್ವತೋ ಗ್ರಾಹ್ಯ ಎಂದರೆ ಸಾಕ್ಷಿಜ್ಞಾನ–ಗ್ರಾಹ್ಯತ್ವನಿಯಮ, ಪರತೋ ಗ್ರಾಹ್ಯ ಎಂದರೆ ಸಾಕ್ಷೀತರ–ಅನುಮಾನ ಗ್ರಾಹ್ಯತ್ವ ನಿಯಮ. ಇವೆರಡೂ ವಿರುದ್ಧ. ಆದ್ದರಿಂದ ಸಂದೇಹ ಉಪಪನ್ನವಾಗುತ್ತದೆ.

## ಕೇಚಿತ್ಕಾರೋಕ್ತ ಪರತೋ ಗ್ರಾಹ್ಯತ್ವ

**ಕೇಚಿತ್ತು–ಪರತೋ ಗ್ರಾಹ್ಯತ್ವಂ ನಾಮ ಉಕ್ತವಿಶೇಷಣಕ–ಉಕ್ತರೂಪ ಪ್ರತ್ಯಕ್ಷಾಗ್ರಾಹ್ಯತ್ವಮ್ । ತಚ್ಚೂನ್ಯತ್ವೇ ಸತಿ ಇತ್ಯರ್ಥಃ । ತೇನ ಸ್ವತಸ್ತ್ವವಾದೇ ಪ್ರಾಮಾಣ್ಯಸ್ಯ ಅನುಮಿತ್ಯಾದಿ ಗ್ರಾಹ್ಯತ್ವೇऽಪಿ ನ ವಿಶೇಷಣಾಸಿದ್ಧಿಃ ಇತ್ಯಾಹುಃ ॥**

ಕೆಲವರು, ಪರತೋ ಗ್ರಾಹ್ಯತ್ವವನ್ನು ಹೀಗೆ ಪರಿಷ್ಕರಿಸಿ ಅಸಿದ್ಧಿಪರಿಹಾರವನ್ನು ಮಾಡುತ್ತಾರೆ– ಪರತೋ ಗ್ರಾಹ್ಯತ್ವವೆಂದರೆ, ಅಪ್ರಾಮಾಣ್ಯಗ್ರಾಹಕ ಸಾಮಗ್ರೀ–ಅಸಮವಹಿತ ಸಾಕ್ಷಿ ಪ್ರತ್ಯಕ್ಷದಿಂದ

ಅಗ್ರಾಹ್ಯತ್ವ. 'ಪರತೋ ಅಗ್ರಾಹ್ಯತ್ವೇ ಸತಿ' ಎಂದರೆ ಈ ರೀತಿಯ 'ಪರತೋ ಗ್ರಾಹ್ಯತ್ವ ಶೂನ್ಯತ್ವ' ಅರ್ಥಾತ್ 'ಪ್ರತ್ಯಕ್ಷಾಗ್ರಾಹ್ಯತ್ವ ಶೂನ್ಯತ್ವ' ಇದು ಸ್ವತಸ್ತ್ವವಾದಿಗಳಿಗೂ ಸಮ್ಮತ.

ಹೀಗೆ ಅರ್ಥ ಹೇಳದಿದ್ದರೆ–'ಪರತೋ ಗ್ರಾಹ್ಯತ್ವ' ಎಂದರೆ ಅನುಮಾನ ಗ್ರಾಹ್ಯತ್ವ. 'ಪರತೋ ಅಗ್ರಾಹ್ಯತ್ವ' ಎಂದರೆ 'ಅನುಮಾನ ಗ್ರಾಹ್ಯತ್ವಾಭಾವ'. ಇದು ಸ್ವತಸ್ತ್ವವಾದಿಗಳಿಗೆ ಸಮ್ಮತವಲ್ಲ. ಸ್ವತಸ್ತ್ವವಾದಿಗಳು ಸಾಕ್ಷಿಗ್ರಾಹ್ಯತ್ವನಿಯಮವನ್ನು ಒಪ್ಪಿದರೂ ಅನುಮಾನ ಗ್ರಾಹ್ಯತ್ವವನ್ನು ನಿರಾಕರಿಸುವುದಿಲ್ಲ. ಆದ್ದರಿಂದ ಅಸಿದ್ಧಿ ಬಂದೀತು.

ಹೀಗೆ ಕೆಲವರು 'ಪರತೋ ಅಗ್ರಾಹ್ಯತ್ವೇ ಸತಿ' ಎಂಬ ಹೇತುಘಟಕ ವಿಶೇಷಣಕ್ಕೆ ಅರ್ಥವನ್ನು ಹೇಳುತ್ತಾರೆ.

## ಹೇತುಘಟಕ ವಿಶೇಷಣ ಕೃತ್ಯ

**ಅತ್ರ ಸತ್ಯಂತಮಾತ್ರಸ್ಯ ಅಪ್ರಯೋಜಕತ್ವಾತ್ ಗ್ರಾಹ್ಯತ್ವಾತ್ ಇತ್ಯುಕ್ತಿಃ ।**

**ಘಟಾದಿಗತಗಂಧಾದೌ ಸತ್ಯಪಿ ಗ್ರಾಹ್ಯತ್ವೇ ಸ್ವಾಶ್ರಯಗ್ರಾಹಕ–ಉಕ್ತರೂಪ ಪ್ರತ್ಯಕ್ಷಗ್ರಾಹ್ಯತ್ವಂ ನೇತಿ ವ್ಯಭಿಚಾರನಿರಾಸಾಯ ಸತ್ಯಂತಮ್ ।**

ಸ್ವತಸ್ತ್ವಸಾಧಕ ಹೇತುವಿನಲ್ಲಿ 'ಪರತೋ ಅಗೃಹ್ಯಮಾಣತ್ವಂ' ಎಂದಿಷ್ಟೇ ಹೇಳಿದರೆ ಆ ಹೇತುವು 'ಸ್ವತೋ ಗ್ರಾಹ್ಯತ್ವ'ಕ್ಕೆ ಪ್ರಯೋಜಕವಾಗುವುದಿಲ್ಲ. 'ಹೇತುರಸ್ತು ಸಾಧ್ಯಂ ಮಾಸ್ತು' ಎಂಬ ಅಪ್ರಯೋಜಕಶಂಕಾ ಮಾಡಿದಾಗ ಬಾಧಕ ತರ್ಕ ಇಲ್ಲ. ಆದಕ್ಕಾಗಿ 'ಗೃಹ್ಯಮಾಣತ್ವಾತ್' ಎಂಬ ವಿಶೇಷ್ಯಭಾಗವನ್ನು ಸೇರಿಸಬೇಕು.

ವಿಶೇಷ್ಯ ಭಾಗವನ್ನು ಮಾತ್ರ ಹೇಳಿದರೆ ಗಂಧದಲ್ಲಿ ವ್ಯಭಿಚಾರ. ಗಂಧವು ಗೃಹ್ಯಮಾಣವಾಗಿದೆ. ಆದರೆ ಸ್ವತೋಗ್ರಾಹ್ಯತ್ವವು ಅಂದರೆ ಸ್ವಾಶ್ರಯವಾದ ಘಟಗ್ರಾಹಕವಾದ ಚಕ್ಷುರ್ಗ್ರಾಹ್ಯತ್ವವು ಆದರಲ್ಲಿ ಇಲ್ಲ. ಆದಕ್ಕಾಗಿ ಸತ್ಯಂತದಲವೂ ಬೇಕು. ಗಂಧ ಪರತೋ ಗ್ರಾಹ್ಯ. ಅರ್ಥಾತ್ ಸ್ವತೋ ಗ್ರಾಹ್ಯತ್ವವು ಆದರಲ್ಲಿ ಇಲ್ಲ. ಆದ್ದರಿಂದ ವ್ಯಭಿಚಾರ. ಆದರ ಪರಿಹಾರಕ್ಕಾಗಿ ಸತ್ಯಂತದಲಬೇಕು.

## ಸ್ವತಸ್ತ್ವಸಾಧಕ ಅನುಮಾನಾಂತರಗಳು

**ಪಕ್ಷ-१ ಸುखमनुभवामीति प्रत्ययः ।**

**ಪಕ್ಷ-२. दोषशङ्काद्यकङ्कितज्ञानस्य अनुव्यवसायो वा ।**

**ಪಕ್ಷ-३. निष्कम्पप्रवृत्तिहेतुभूतज्ञानस्य अनुव्यवसायो वा ।**

पक्ष-४. प्रामाण्य विरोध्युपस्थापकसामग्र्यसमवहितोऽनुव्यवसायो वा ।

साध्य-१. स्वग्राह्यज्ञान प्रामाण्यविषयकः ।

साध्य-२. तत्प्रकारको वा ।

हेतु-१. तद्विरुद्धाविषयकत्वे सति तद्व्याप्यत्वाविषयकत्वे सति तत्संशयविरोधिप्रत्ययत्वात् ।

हेतु-२.तद्व्याप्यत्वाविषयकत्वे सति तदभावनिश्चयविरोधिनिश्चयत्वात् ।

हेतु-३. तद्विषयकव्यवहारहेतुप्रत्ययत्वात् ।

हेतु-४. तज्ज्ञानप्रकारप्रकारकतया तत्प्रकारवद्विशेष्यकतया च तद्विषयत्वाच्च ।

प्रामाण्यानुमितिवत् इत्याद्यनुमानम् ।।

(ಇಲ್ಲಿ ಅನೇಕ ಪಕ್ಷ, ಸಾಧ್ಯ, ಹೇತುಗಳನ್ನು ಮಾಡಿ ಒಟ್ಟು ಮೂವತ್ತೆರಡು ಅನುಮಾನಗಳನ್ನು ಹೇಳಲಾಗಿದೆ.)

ಪಕ್ಷ 1. 'ಸುಖಂ ಅನುಭವಾಮಿ' ಇತಿ ಪ್ರತ್ಯಯಃ ।

ಪಕ್ಷ 2. ದೋಷಶಂಕಾದ್ಯಕಲಂಕಿತ–ಜ್ಞಾನಸ್ಯ ಅನುವ್ಯವಸಾಯಃ ।

ಪಕ್ಷ 3. ನಿಷ್ಕಂಪಪ್ರವೃತ್ತಿ–ಹೇತುಭೂತ–ಜ್ಞಾನಸ್ಯ ಅನುವ್ಯವಸಾಯಃ ।

ಪಕ್ಷ 4. ಪ್ರಾಮಾಣ್ಯವಿರೋಧ್ಯುಪಸ್ಥಾಪಕ–ಸಾಮಗ್ರ್ಯಸಮವಹಿತಃ ಅನುವ್ಯವಸಾಯಃ ।

ಸಾಧ್ಯ 1. ಸ್ವಜ್ಞಾನ–ಪ್ರಾಮಾಣ್ಯ–ವಿಷಯಕಃ ।

ಸಾಧ್ಯ 2. ಸ್ವಜ್ಞಾನ ಪ್ರಾಮಾಣ್ಯ ಪ್ರಕಾರಕಃ ।

ಹೇತು 1. ತದ್ವಿರುದ್ಧಾವಿಷಯಕತ್ವೇ ಸತಿ ತದ್‌ವ್ಯಾಪ್ಯತ್ವಾವಿಷಯಕತ್ವೇ ಸತಿ ತತ್ಸಂಶಯ–ವಿರೋಧಿಪ್ರತ್ಯಯತ್ವಾತ್ ।

ಹೇತು 2.ತದ್–ವ್ಯಾಪತ್ವಾವಿಷಯಕತ್ವೇ ಸತಿ ತದಭಾವ-ನಿಶ್ಚಯವಿರೋಧಿನಿಶ್ಚಯತ್ವಾತ್।

ಹೇತು 3. ತದ್ವಿಷಯಕ ವ್ಯವಹಾರಹೇತು–ಪ್ರತ್ಯಯತ್ವಾತ್ ।

**ಹೇತು 4. ತಜ್ಜ್ಞಾನಪ್ರಕಾರ–ಪ್ರಕಾರಕತಯಾ ತತ್ ಪ್ರಕಾರವದ್–ವಿಶೇಷ್ಯಕತಯಾ ಚ ತದ್ ವಿಷಯತ್ವಾಚ್ಚ ।**

'ಸುಖಂ ಅನುಭವಾಮಿ' ಇದು ಸುಖಜ್ಞಾನದ ಅನುವ್ಯವಸಾಯ. 'ಅಹಂ ಸುಖೀ' ಇದು ಸುಖಜ್ಞಾನ (ವ್ಯವಸಾಯ). 'ಸುಖಾನುಭವವಾನಹಮ್' ಇದು ಸುಖಾನುಭವದ ಅನುಭವ–ಅಂದರೆ, ಅನುವ್ಯವಸಾಯ. ಈ ಅನುವ್ಯವಸಾಯದಲ್ಲಿ ಸುಖಾನುಭವ ಮತ್ತು ಅನುಭವದಲ್ಲಿರುವ ಪ್ರಾಮಾಣ್ಯ ಇವೆರಡೂ ವಿಷಯವಾಗಿದೆ. ಅರ್ಥಾತ್ ಸುಖ ಜ್ಞಾನ ವಿಷಯಕವಾದ ಸಾಕ್ಷಿಜ್ಞಾನವು ಸುಖಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದರ್ಥ. ಇದೇ ಸ್ವತಸ್ತ್ವ.

ಅಥವಾ, ಈ ಸಾಕ್ಷಿಯಲ್ಲಿ ಪ್ರಾಮಾಣ್ಯವು ಪ್ರಕಾರವಾಗಿ ವಿಷಯವಾಗಿದೆ. 'ಸುಖಾನುಭವಃ ಪ್ರಮಾಣಂ' ಎಂದು ಸಾಕ್ಷಿಜ್ಞಾನದ ಆಕಾರವನ್ನು ಪರಿಗಣಿಸಿದಾಗ ಸಾಕ್ಷಿಯಲ್ಲಿ ಅನುಭವವು ವಿಶೇಷ್ಯ, ಪ್ರಾಮಾಣ್ಯವು ಪ್ರಕಾರ ಇದು ಎರಡನೆಯ ಸಾಧ್ಯ.

**ಹೇತು–1.** ಆ ಅನುವ್ಯವಸಾಯದಲ್ಲಿ ಪ್ರಾಮಾಣ್ಯಕ್ಕೆ ವಿರುದ್ಧವಾದ ಪ್ರಾಮಾಣ್ಯಾಭಾವ ವಾಗಲೀ ತದ್‌ವ್ಯಾಪ್ಯತ್ವವಾಗಲೀ, ಅಪ್ರಾಮಾಣ್ಯವಾಗಲೀ ವಿಷಯವಾಗಿಲ್ಲ. ಆದರೂ ಅದು ಪ್ರಾಮಾಣ್ಯ ಸಂದೇಹಕ್ಕೆ ವಿರೋಧಿಯಾಗಿದೆ. ಆದ್ದರಿಂದಾಗಿ ಆ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿರಲೇಬೇಕು.

ಪ್ರಾಮಾಣ್ಯ ಸಂದೇಹಕ್ಕೆ ವಿರೋಧಿಯಾದ ನಿಶ್ಚಯಗಳು ಒಟ್ಟು ನಾಲ್ಕು.

1. ಪ್ರಾಮಾಣ್ಯಾಭಾವ ನಿಶ್ಚಯ.
2. ತದಭಾವವತಿ ತತ್–ಪ್ರಕಾರಕತ್ವರೂಪವಾದ ಅಪ್ರಾಮಾಣ್ಯ ನಿಶ್ಚಯ.
3. ಪ್ರಾಮಾಣ್ಯಾಭಾವ ವ್ಯಾಪ್ತವತ್ತಾ ನಿಶ್ಚಯ.
4. ಅಪ್ರಾಮಾಣ್ಯ ವ್ಯಾಪ್ತವತ್ತಾ ನಿಶ್ಚಯ.
5. ಪ್ರಾಮಾಣ್ಯ ನಿಶ್ಚಯ.

ಮೊದಲ ಎರಡು ನಿಶ್ಚಯಗಳು ಪ್ರಾಮಾಣ್ಯವಿರೋಧಿ ವಿಷಯಕ ನಿಶ್ಚಯಗಳು. ಪ್ರಕೃತ ಸುಖಾನುಭವ ವಿಷಯಕ ಸಾಕ್ಷಿಗೆ 'ತದ್ವಿರುದ್ಧಾವಿಷಯಕತ್ವೇ ಸತಿ' ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ ಆ ಸಾಕ್ಷಿಯು ಮೊದಲ ಎರಡು ರೀತಿಯ ಜ್ಞಾನವಲ್ಲ ಎಂದು ಸಿದ್ಧವಾಗುತ್ತದೆ. ತದ್‌ವ್ಯಾಪ್ಯತ್ವಾವಿಷಯಕತ್ವೇ ಸತಿ ಎಂಬ ವಿಶೇಷಣದಿಂದ ಮುಂದಿನ ಎರಡನ್ನು ನಿಷೇಧ ಮಾಡಲಾಗಿದೆ. ಅಲ್ಲಿಗೆ, ಆ ಸಾಕ್ಷಿಯು ಸಂದೇಹಕ್ಕೆ ವಿರೋಧಿಯಾಗಬೇಕಾದರೆ ಅದು ಕೊನೆಯದಾದ ಪ್ರಾಮಾಣ್ಯನಿಶ್ಚಯ ರೂಪವೇ ಆಗಿರಬೇಕು. ಇದು ಮೊದಲ ಹೇತುವಿನ ಅಭಿಪ್ರಾಯ.

**ಹೇತು 2**–ಸುಖಜ್ಞಾನದ ಸಾಕ್ಷಿಜ್ಞಾನದಲ್ಲಿ ಪ್ರಾಮಾಣ್ಯವ್ಯಾಪ್ಯವಾದ ಧರ್ಮವು ವಿಷಯ

ವಲ್ಲ. ಆದರೂ ಅದು ಪ್ರಾಮಾಣ್ಯಾಭಾವ ನಿಶ್ಚಯಕ್ಕೆ ವಿರೋಧಿಯಾಗಿದೆ. ಅಂದಮೇಲೆ ಆ ಸಾಕ್ಷಿಯಲ್ಲಿ ಪ್ರಾಮಾಣ್ಯವು ವಿಷಯವಾಗಿರಲೇಬೇಕು.

ಪ್ರಾಮಾಣ್ಯಾಭಾವನಿಶ್ಚಯಕ್ಕೆ ಅಂದರೆ 'ಇದಂ ಜ್ಞಾನಂ ಪ್ರಾಮಾಣ್ಯಾಭಾವವತ್' ಎಂಬ ನಿಶ್ಚಯಕ್ಕೆ ವಿರೋಧಿಯಾದ ನಿಶ್ಚಯಗಳು ಎರಡು.

1. ಇದಂ ಜ್ಞಾನಂ ಪ್ರಾಮಾಣ್ಯವ್ಯಾಪ್ಯ-ಗುಣಜನ್ಯತ್ವವತ್।

2. 'ಇದಂ ಜ್ಞಾನಂ' ಪ್ರಮಾಣಮ್ ।

ಹೇತುವಿನಲ್ಲಿರುವ ಸತ್ಯಂತದಿಂದ ಮೊದಲ ಅಂಶವನ್ನು ಸಾಕ್ಷಿಯಲ್ಲಿ ನಿರಾಕರಿಸಲಾಗಿದೆ. ಹೀಗಾಗಿ ಎರಡನೆಯ ಅಂಶವು ಅನಿವಾರ್ಯ.

**ಹೇತು 3**–ಸುಖಾನುಭವದ ಸಾಕ್ಷಿಜ್ಞಾನ ಬಂದಮೇಲೆ 'ಸುಖ ಜ್ಞಾನಂ ಪ್ರಮಾಣಮ್' ಎಂಬ ವಾಗ್ವ್ಯವಹಾರವನ್ನು ಮಾಡಲಾಗುತ್ತದೆ. 'ವ್ಯವಹಾರಂ ಪ್ರತಿ ವ್ಯವಹರ್ತವ್ಯಜ್ಞಾನಂ ಕಾರಣಮ್'. ಪ್ರಕೃತದಲ್ಲಿ ವ್ಯವಹರ್ತವ್ಯವಾದುದು ಪ್ರಾಮಾಣ್ಯ. ಅದರ ಜ್ಞಾನರೂಪವಾಗಿದೆ ಸಾಕ್ಷಿ, ಎಂದು ಹೇಳಿದರೆ ಮಾತ್ರ ಪ್ರಾಮಾಣ್ಯವ್ಯವಹಾರ ನಡೆಯಬಹುದು. ಹೀಗೆ ಸಾಕ್ಷಿಯು ಪ್ರಾಮಾಣ್ಯ ವ್ಯವಹಾರಕ್ಕೆ ಕಾರಣವಾಗಬೇಕಾದರೆ ಪ್ರಾಮಾಣ್ಯವಿಷಯಕವಾಗಿದೆ, ಎಂದು ಸಿದ್ಧವಾಗುತ್ತದೆ.

**ಹೇತು 4**–'ಇದಂ ಸುಖಂ' ಎಂಬ ಸುಖಜ್ಞಾನದಲ್ಲಿ ಸುಖತ್ವವು ಪ್ರಕಾರವಾಗಿದೆ. ಸುಖತ್ವವುಳ್ಳ ಸುಖವು ವಿಶೇಷ್ಯವಾಗಿದೆ. ಅಂತಹ ಸುಖಜ್ಞಾನವನ್ನು ಗ್ರಹಿಸುವ ಸಾಕ್ಷಿಯು 'ಸುಖತ್ವಪ್ರಕಾರಕ-ಸುಖತ್ವವದ್‌ವಿಶೇಷ್ಯಕ ಜ್ಞಾನವಾನ್ ಅಹಮ್' ಎಂದೇ ಆ ಜ್ಞಾನವನ್ನು ಗ್ರಹಿಸುತ್ತದೆ. ಅಂದಮೇಲೆ ಆ ಸಾಕ್ಷಿಯು ಸುಖಜ್ಞಾನದಲ್ಲಿ ಪ್ರಾಮಾಣ್ಯವನ್ನೂ ಗ್ರಹಿಸಿರಲೇಬೇಕು.

**ಪಕ್ಷ 2**–'ಅಯಂ ಘಟಃ' ಎಂದು ಮೊದಲು ಜ್ಞಾನ ಬರುತ್ತದೆ. ಆಮೇಲೆ 'ಘಟ ಜ್ಞಾನವಾನ್ ಅಹಮ್' ಎಂದು ಅನುವ್ಯವಸಾಯ ಬರುತ್ತದೆ. ಮೊದಲು ಬಂದಿರುವ ಘಟ ಜ್ಞಾನದ ಬಗ್ಗೆ ದೋಷಜನ್ಯತ್ವ ಸಂದೇಹ ಅಥವಾ ನಿಶ್ಚಯ ಹಾಗೂ ಅಪ್ರಾಮಾಣ್ಯಶಂಕಾ ಅಥವಾ ನಿಶ್ಚಯ ಇಲ್ಲ. ಅಂತಹ ವ್ಯವಸಾಯವನ್ನು ಗ್ರಹಿಸುವ ಅನುವ್ಯವಸಾಯವು ಪಕ್ಷ. ಅದು ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದು ಎರಡನೆಯ ಪಕ್ಷದ ಅಭಿಪ್ರಾಯ.

**ಪಕ್ಷ 3**–ಜಲಜ್ಞಾನ ಬಂದ ಮೇಲೆ ಕೆಲವೊಮ್ಮೆ ನಿಷ್ಕಂಪ-ಪ್ರವೃತ್ತಿ (ನೀರಿನ ಬಗ್ಗೆ ಸಂದೇಹ ಎಲ್ಲದೆ) ಮಾಡುತ್ತೇವೆ. ಈ ಪ್ರವೃತ್ತಿಯು ಜಲಜ್ಞಾನ ಬಂದು ಆಮೇಲೆ ಅದರ ಅನುವ್ಯವಸಾಯ ಬಂದಮೇಲೆ ಆಗುತ್ತದೆ. ಅಂತಹ ಅನುವ್ಯವಸಾಯ ಪಕ್ಷ.

**ಪಕ್ಷ 4**–ಪ್ರಾಮಾಣ್ಯಕ್ಕೆ ವಿರೋಧಿಯಾದುದನ್ನು ತಿಳಿಸುವ ಸಾಮಗ್ರಿಯಿಂದ ಅಸಮವಹಿತವಾದ ಅನುವ್ಯವಸಾಯ ಪಕ್ಷ.

ಮೊದಲ ಪಕ್ಷದಲ್ಲಿ ಆಂತರಿಕವಾದ ಸುಖಜ್ಞಾನ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುತ್ತದೆ, ಎಂದು ಸ್ವತಸ್ತ್ವಸಾಧನೆ. ಉಳಿದಿರುವ ಪಕ್ಷಗಳಲ್ಲಿ ಬಾಹ್ಯ-ಆಂತರ ಎರಡೂ ಜ್ಞಾನವಿಶೇಷಗಳ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುತ್ತದೆ, ಎಂದು ಸಾಧಿಸಲಾಗಿದೆ.

ಹೀಗೆ ಇಲ್ಲಿ ನಾಲ್ಕು ಪಕ್ಷ, ಎರಡು ಸಾಧ್ಯ, ನಾಲ್ಕು ಹೇತುಗಳನ್ನು ಪ್ರತ್ಯೇಕವಾಗಿ ಪರಿಗಣಿಸಿದಾಗ ಒಟ್ಟು ಮೂವತ್ತೆರಡು ಅನುಮಾನಗಳು ಸಿಗುತ್ತವೆ. (4ಪಕ್ಷ x 2 ಸಾಧ್ಯ x 4 ಹೇತುಗಳು = 32)

## ನ್ಯಾಯದೀಪ

**ಪ್ರಾಮಾಣ್ಯಸ್ಯ ಸ್ವತೋ ಗ್ರಾಹ್ಯತ್ವೇ ಕ್ವಚಿತ್ ಸಂಶಯಾದಿ- ಉಪಪಾದನಕ್ಲೇಶ-ನಿರಾಸಾಯ ವಿಶಿಷ್ಯಾಹ-ಸುಖಮಿತಿ ॥ ಸ್ವವೃತ್ತಿ-ವರ್ತಮಾನ-ಸುಖಸಾಕ್ಷಾತ್ಕಾರ ಗೋಚರಃ ಸಾಕ್ಷಿರೂಪಃ ಪ್ರತ್ಯಯಃ ಇತ್ಯರ್ಥಃ।**

ಪ್ರಾಮಾಣ್ಯವು ಜ್ಞಾನಗ್ರಾಹಕ-ಸಾಕ್ಷಿಯಿಂದಲೇ ಗ್ರಹಿಸಲ್ಪಡುವುದಾದಲ್ಲಿ ಸರ್ವತ್ರ ಪ್ರಾಮಾಣ್ಯವು ಗೃಹೀತವಾಗುವುದರಿಂದ ಯಾವ ಜ್ಞಾನದಲ್ಲೂ ಪ್ರಾಮಾಣ್ಯಸಂದೇಹವೇ ಬರಲು ಸಾಧ್ಯವಿಲ್ಲ. ಹೀಗೆ ತಾರ್ಕಿಕರು ಆಕ್ಷೇಪ ಮಾಡುತ್ತಾರೆ. ಅದಕ್ಕೆ ಉತ್ತರಿಸುವುದು ಕ್ಲೇಶದ ಕೆಲಸ. ಅದಕ್ಕಾಗಿ ಯಾವ ಜ್ಞಾನಗತ ಪ್ರಾಮಾಣ್ಯದಲ್ಲಿ ಎಂದೂ ಸಂದೇಹ ಬರುವುದಿಲ್ಲವೋ ಅಂತಹ ಪ್ರಾಮಾಣ್ಯ ವಿಶೇಷದಲ್ಲಿ ಅಂದರೆ ಸುಖಾನುಭವ ಪ್ರಾಮಾಣ್ಯದಲ್ಲಿ ಮಾತ್ರ ಮೊದಲು ಸ್ವತಸ್ತ್ವವನ್ನು ಸಾಧನೆ ಮಾಡಲಾಗಿದೆ.

ನಮ್ಮ ನಮ್ಮಲ್ಲಿರುವ ಸುಖಸಾಕ್ಷಾತ್ಕಾರವನ್ನು ವಿಷಯೀಕರಿಸುವ ಸಾಕ್ಷಿಜ್ಞಾನವು ಮೊದಲ ಪಕ್ಷ. ಅದು ತಾನು ಗ್ರಹಿಸುವ ಸುಖಸಾಕ್ಷಾತ್ಕಾರದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು ಸಾಧ್ಯ.

## ಅರ್ಥಾಂತರತಾದೋಷಕ್ಕೆ ಆಸ್ಪದವಿಲ್ಲ

**''ಜ್ಞಾನಾಂಶೇ ಲೌಕಿಕಪ್ರತ್ಯಕ್ಷಾದಿರೂಪಾನುವ್ಯವಸಾಯಃ ಪ್ರಾಮಾಣ್ಯ-ವಿಷಯಕೋ ನ ವಾ'' ಇತಿ ವಿಪ್ರತಿಪತ್ತ್ಯನುರೋಧೇನ ಏತತ್ ಪಕ್ಷಾಣಾಮ್ ಅವತಾರಃ ಇತಿ ಸಾಮಾನ್ಯ ವಿಪ್ರತಿಪತ್ತಿ-ಅನಾನುಗುಣ್ಯಾತ್ ಅರ್ಥಾಂತರತ್ವ-ಮಿತಿ ನ ಶಂಕ್ಯಮ್ ।**

'ಸುಖಾನುಭವ-ವಿಷಯಕ-ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ' ಎಂದು ಸಾಧನೆ ಮಾಡುವುದು 'ಪ್ರಾಮಾಣ್ಯ ಸಾಮಾನ್ಯವು ಸ್ವತಃ ಪರತೋ ವಾ ಗೃಹ್ಯತೇ' ಎಂಬ ವಿಪ್ರತಿಪತ್ತಿಗೆ ಅನುಗುಣವಾಗಿಲ್ಲ. ಆದರೂ ''ಜ್ಞಾನವನ್ನು ಲೌಕಿಕ ಸನ್ನಿಕರ್ಷದಿಂದ ಸಾಕ್ಷಾತ್ಕರಿಸುವ

ಅನುವ್ಯಾವಸಾಯವು ಪ್ರಾಮಾಣ್ಯವಿಷಯಕವಾಗಿದೆಯೋ ಇಲ್ಲವೋ' ಎಂಬುದೂ ಒಂದು ವಿಪ್ರತಿಪತ್ತಿವಾಕ್ಯ. ಅದಕ್ಕೆ ಅನುಗುಣವಾಗಿ 'ಸುಖಸಾಕ್ಷಾತ್ಕಾರ–ವಿಷಯಕವಾದ ಸಾಕ್ಷಿಯು ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ' ಎಂದು ಸಾಧಿಸಲಾಗಿದೆ. ಆದ್ದರಿಂದ ಅರ್ಥಾಂತರತಾ ದೋಷ ಇಲ್ಲ.

## ದ್ವಿತೀಯಾದಿ ಪಕ್ಷಗಳಲ್ಲಿ ವಿಶೇಷ

**ಬಾಹ್ಯಾಂಭ್ಯಂತರ ಸಾಧಾರಣ – ಪಕ್ಷಾಂತರಾಣಿ ಆಹ – ದೋಷೇತಿ ॥ ದುಷ್ಟಕರಣ–ಜನ್ಯತ್ವಶಂಕಾ–ತನ್ನಿಶ್ಚಯ–ಅಪ್ರಾಮಾಣ್ಯಾದಿಶಂಕಾ–ತನ್ನಿಶ್ಚಯಾದಿ–ಅನಾಸ್ಕಂದಿತ– ಘಟಾದಿ ಜ್ಞಾನಸ್ಯ ಇತ್ಯರ್ಥಃ ।**

**ನ ಚೈವಂ ಅಂತ್ಯಪಕ್ಷಾಭೇದ ಇತಿ ಶಂಕ್ಯಮ್। ತತ್ರ ಅನುವ್ಯವಸಾಯ ವಿಶೇಷಣತ್ವೇನ ಇಹ ವ್ಯವಸಾಯ ವಿಶೇಷಣತ್ವೇನ,**

**ತತ್ರ ಪ್ರಾಮಾಣ್ಯ – ವಿರೋಧ್ಯುಪಸ್ಥಾಪಕ – ಸಾಮಗ್ರೀತ್ವೇನ ಅತ್ರ ತು, ತತ್ಕಾರ್ಯ ದೋಷಶಂಕಾದಿತ್ವೇನ ಚ ಪ್ರವೇಶೇನ ಅತ್ಯಂತ ಭೇದಾತ್ ।**

ಅನುಮಾನದ ಮೊದಲನೆಯ ಪಕ್ಷ ಆಂತರವಾದ ಸುಖಾನುಭವದ ಅನುವ್ಯವಸಾಯ. ಬಾಹ್ಯ–ಆಂತರ ಎರಡೂ ಜ್ಞಾನ ವಿಷಯಕ ಅನುವ್ಯವಸಾಯವು—ಎರಡು, ಮೂರು, ಮತ್ತು ನಾಲ್ಕನೆಯ ಪಕ್ಷಗಳು.

ಎರಡನೆಯ ಪಕ್ಷದಲ್ಲಿ ಜ್ಞಾನವು ದೋಷಶಂಕಾದಿಗಳಿಂದ ಅಕಲಂಕಿತವಾಗಿರಬೇಕು ಎನ್ನಲಾಗಿದೆ. ಜ್ಞಾನದಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಲು ಪ್ರತಿಬಂಧಕಗಳೆಲ್ಲವನ್ನೂ 'ದೋಷಶಂಕಾದಿ' ಪದದಿಂದ ಪರಿಗ್ರಹಿಸಬೇಕು. ಅಂತಹ ಪ್ರತಿಬಂಧಕಗಳು ನಾಲ್ಕು—

1. ಜ್ಞಾನವು ದುಷ್ಟವಾದ ಕರಣದಿಂದ ಹುಟ್ಟಿರಬಹುದು ಎಂಬ ಸಂದೇಹ.

2. ದುಷ್ಟಕರಣದಿಂದ ಹುಟ್ಟಿದೆ ಎಂಬ ನಿಶ್ಚಯ.

3. ಜ್ಞಾನವು ಅಪ್ರಮಾಣವಾಗಿರಬಹುದು ಅಥವಾ ಜ್ಞಾನದಲ್ಲಿ ಪ್ರಾಮಾಣ್ಯ ಇಲ್ಲವೇನೋ ಎಂಬ ಸಂದೇಹ.

4. ಜ್ಞಾನವು ಅಪ್ರಮಾಣ ಅಥವಾ ಜ್ಞಾನದಲ್ಲಿ ಪ್ರಾಮಾಣ್ಯ ಇಲ್ಲ ಎಂಬ ನಿಶ್ಚಯ.

ನಾಲ್ಕು ದೋಷಗಳಿದ್ದಾಗ ಅನುವ್ಯವಸಾಯವು ಜ್ಞಾನವನ್ನು ಗ್ರಹಿಸಿದರೂ ತದ್ಗತ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅರ್ಥಾತ್ ಸಾಕ್ಷಿಯು ಈ ದೋಷಗಳು ಜ್ಞಾನದಲ್ಲಿ ಇಲ್ಲದಿದ್ದಾಗ ಪ್ರಾಮಾಣ್ಯವನ್ನು ಗ್ರಹಿಸುತ್ತದೆ.

ಎರಡನೆಯ ಈ ಪಕ್ಷಕ್ಕೂ ಕೊನೆಯ ಪಕ್ಷಕ್ಕೂ ವ್ಯತ್ಯಾಸವನ್ನು ಹೀಗೆ ತಿಳಿಯಬೇಕು–

1. ಎರಡನೆಯ ಪಕ್ಷದಲ್ಲಿ—ವ್ಯವಸಾಯದಲ್ಲಿ ದೋಷಾಭಾವವು ವಿಶೇಷಣ. ಅಂತಿಮ ಪಕ್ಷದಲ್ಲಿ–ಅನುವ್ಯವಸಾಯದಲ್ಲಿ ವಿರೋಧಿಸಾಮಗ್ರೀ ಅಸಮವಧಾನ ವಿಶೇಷಣ.

2. ಎರಡನೆಯ ಪಕ್ಷದಲ್ಲಿ—ವಿರೋಧಿ–ಸಾಮಗ್ರೀ–ಜನ್ಯವಾದ ಅಪ್ರಾಮಾಣ್ಯಜ್ಞಾನತ್ವೇನ, ದೋಷಶಂಕಾತ್ವೇನ ಪ್ರವೇಶ.

ಕೊನೆಯ ಪಕ್ಷದಲ್ಲಿ—ಪ್ರಾಮಾಣ್ಯವಿರೋಧಿ–ಉಪಸ್ಥಾಪಕ ಸಾಮಗ್ರೀತ್ವೇನ ಪ್ರವೇಶ. ಹೀಗೆ ಎರಡೂ ಪಕ್ಷಗಳಿಗೂ ವ್ಯತ್ಯಾಸ ಇದೆ.

## 'ಜ್ಞಾನಸ್ಯ' ಎಂಬಲ್ಲಿ ಜ್ಞಾನಪದಾರ್ಥ

**ಉಪಸ್ಥಾಪಕ ಸಾಮಗ್ರೀತಿ ॥ ಉಪಸ್ಥಿತಿ–ತತ್–ಸಾಮಗ್ರೀ ಇತ್ಯರ್ಥಃ ।**

**ಅತ್ರ ಸರ್ವತ್ರಾಪಿ 'ಜ್ಞಾನಸ್ಯ' ಇತ್ಯನೇನ ದೋಷಾಜನ್ಯ-ಪ್ರಮಾರೂಪಜ್ಞಾನಸ್ಯ ಅಭಿಮತತ್ವಾತ್ 'ಇದಂ ರೂಪ್ಯಮ್' ಇತ್ಯಾದಿ ಭ್ರಮಗೋಚರ–ಅನುವ್ಯವಸಾಯಸ್ಯ ಅಪಕ್ಷತಯಾ ತಸ್ಯ ತತ್ರ ಪ್ರಾಮಾಣ್ಯಾಗ್ರಾಹಕತ್ವೇಽಪಿ ನ ಬಾಧ ಇತಿ ಬೋಧ್ಯಮ್ । ತತ್ರ ಪ್ರಾಮಾಣ್ಯಗ್ರಹಣಸ್ಯ ಮಾನಸತ್ವೇನ ಸಿದ್ಧಾಂತೇಽಪಿ ಭ್ರಮಗೋಚರಾನು-ವ್ಯವಸಾಯೇನ ಪ್ರಾಮಾಣ್ಯಾಗ್ರಹಾತ್ ।**

ನಾಲ್ಕನೇ ಪಕ್ಷದಲ್ಲಿ ಅನುವ್ಯವಸಾಯಕ್ಕೆ 'ಪ್ರಾಮಾಣ್ಯ–ವಿರೋದಿ–ಉಪಸ್ಥಾಪಕ–ಸಾಮಗ್ರೀ–ಅಸಮವಹಿತ' ಎಂಬ ವಿಶೇಷಣ ಇದೆ. ಅದರ ಅಭಿಪ್ರಾಯ–ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯಾದಿಗಳ ಉಪಸ್ಥಿತಿ ಮತ್ತು ಆ ಉಪಸ್ಥಿತಿಗೆ ಬೇಕಾದ ಸಾಮಗ್ರೀ ಇವೆರಡೂ ಇಲ್ಲದಾದಾಗ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು. ಪ್ರಾಮಾಣ್ಯಗ್ರಹಣೆಗೆ ಅವೆರಡೂ ಪ್ರತಿಬಂಧಕಗಳಾದುದರಿಂದ ಆ ಅಭಿಪ್ರಾಯವನ್ನೇ ತಿಳಿಯಬೇಕು ಹೊರತು, ಸಾಮಗ್ರಿಯಿಂದ ಮಾತ್ರ ಅಸಮವಹಿತ, ಎಂದು ಯಥಾಶ್ರುತಾರ್ಥವನ್ನು ತಿಳಿಯಬಾರದು.

ಎರಡು ಮತ್ತು ಮೂರನೆಯ ಪಕ್ಷದಲ್ಲಿ 'ಜ್ಞಾನಸ್ಯ ಅನುವ್ಯವಸಾಯಃ' ಎಂದಿದೆ. ಅಲ್ಲಿ ಜ್ಞಾನಪದಕ್ಕೆ 'ದೋಷಜನ್ಯವಲ್ಲದ ಪ್ರಮಾತ್ಮಕ ಜ್ಞಾನ' ಎಂದು ಅರ್ಥ. ಅಂತಹ ಜ್ಞಾನವನ್ನು ಗ್ರಹಿಸುವ ಅನುವ್ಯವಸಾಯವೇ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ. 'ಇದಂ ರಜತಂ' ಎಂಬ ಭ್ರಮಾತ್ಮಕ ಜ್ಞಾನವನ್ನು ಗ್ರಹಿಸುವ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆದ್ದರಿಂದ ಬಾಧದೋಷ. 'ಪ್ರಮಾತ್ಮಕ ಜ್ಞಾನ ವಿಷಯಕ ಅನುವ್ಯವಸಾಯವನ್ನು' ಮಾತ್ರ ಪಕ್ಷ ಮಾಡಿದಾಗ ಭ್ರಮೆಯನ್ನು ಗ್ರಹಿಸುವ ಅನುವ್ಯವಸಾಯವು ಪಕ್ಷದಲ್ಲಿ ಸೇರುವುದಿಲ್ಲವಾದ ಕಾರಣ ಬಾಧದೋಷಕ್ಕೆ ಅವಕಾಶವಿಲ್ಲ.

ದ್ವೈತಸಿದ್ಧಾಂತದಲ್ಲೂ ಭ್ರಮೆಯನ್ನು ಪ್ರಮಾ, ಎಂದು ಅನ್ಯಥಾ ಗ್ರಹಿಸುವುದು ಸಾಕ್ಷಿಯಲ್ಲ, ಮನಸ್ಸು. ಆದ್ದರಿಂದ ಜ್ಞಾನಸಾಮಾನ್ಯವಿಷಯಕ-ಸಾಕ್ಷಿಯನ್ನು ಪಕ್ಷವನ್ನಾಗಿ ಪರಿಗಣಿಸಿದರೆ ಭ್ರಮೆಯಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ಎಂದೂ ಗ್ರಹಿಸುವುದಿಲ್ಲವಾದುದರಿಂದ ಬಾಧ ಬಂದೇ ಬರುತ್ತದೆ. ಅದಕ್ಕಾಗಿ ಪ್ರಮಾಗ್ರಾಹಕ ಸಾಕ್ಷಿಯನ್ನೇ ಪಕ್ಷ ಮಾಡಬೇಕು.

## ಪ್ರಕಾರಾಂತರದಿಂದ ಬಾಧಪರಿಹಾರ

**ಯದ್ವಾ ವಕ್ಷ್ಯಮಾಣದಿಶಾ ಅತ್ರಾಭಿಮತಾನುವ್ಯವಸಾಯತ್ವಸ್ಯ ಭ್ರಮಾನುವ್ಯವಸಾಯೇ ಅಭಾವೇನ ತಸ್ಯ ಅಪಕ್ಷತ್ವಾತ್ ನ ಬಾಧಃ ।**

**ಅತ ಏವ ಜ್ಞಾನಾಂಶೇ ಲೌಕಿಕಪ್ರತ್ಯಕ್ಷಾದಿರೂಪಸ್ಯ ಇಹ ಅನುವ್ಯವಸಾಯಸ್ಯ ಅಭಿಮತತಯಾ ಸ್ಮೃತ್ಯುಪನೀತ-ಪ್ರಾಮಾಣ್ಯವಿಷಯಕ-ಅನುವ್ಯವಸಾಯ-ಮಾದಾಯ ನ ನ್ಯಾಯಮತೇ ಸಿದ್ಧಸಾಧನಂ ಶಂಕ್ಯಮ್ ॥**

ಅಥವಾ, ಮುಂದೆ 'ತದ್ವತಿ ತತ್‌ಪ್ರಕಾರಕತ್ವೇನ ಜ್ಞಾನಗ್ರಾಹಕ-ಸಾಕ್ಷಿರೂಪವಾದ-ಅನುವ್ಯವಸಾಯ' ಎಂದು ಅನುವ್ಯವಸಾಯಕ್ಕೆ ವಿವರಣೆ ಇದೆ. ಭ್ರಮವಿಷಯಕ-ಅನುವ್ಯವಸಾಯವು ಇಂತಹ ಅನುವ್ಯವಸಾಯ ಆಗಿಲ್ಲ, ಆದ್ದರಿಂದ ಭ್ರಮೆಯನ್ನು ಗ್ರಹಿಸುವ ಅನುವ್ಯವಸಾಯವು ಪಕ್ಷದಲ್ಲಿ ಸೇರಿಲ್ಲವಾದ ಕಾರಣ ಬಾಧಕ್ಕೆ ಅವಕಾಶವಿಲ್ಲ, ಪ್ರಮಾಗ್ರಾಹಕ-ಸಾಕ್ಷಿ, ಎಂದು ಹೇಳುವ ಅಗತ್ಯವಿಲ್ಲ.

ಮುಂದೆ ಅನುವ್ಯವಸಾಯಪದಕ್ಕೆ 'ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷ' ಎಂದು ಅರ್ಥವನ್ನು ಹೇಳಲಾಗಿದೆ. ಇದರಿಂದ ತಾರ್ಕಿಕಮತದಲ್ಲಿ ಸಿದ್ಧಸಾಧನತಾದೋಷಕ್ಕೂ ಅವಕಾಶವಿಲ್ಲ.

ತಾರ್ಕಿಕರು, 'ಇದಂ ಜಲಂ' ಎಂಬ ಜ್ಞಾನದಲ್ಲಿ ಸಮರ್ಥಪ್ರವೃತ್ತಿ ಜನಕತ್ವ ಹೇತುವಿನಿಂದ ಪ್ರಾಮಾಣ್ಯಾನುಮಿತಿ ಬಂದ ಮೇಲೆ ಸ್ಮೃತ್ಯುಪನೀತವಾದ ಅದೇ ಜಲಜ್ಞಾನದಲ್ಲಿ ಮನಸ್ಸು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎನ್ನುತ್ತಾರೆ. ಹೀಗೆ ಕ್ವಚಿತ್ ಜಲಜ್ಞಾನದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವೂ ವಿಷಯ ಎಂದು ತಾರ್ಕಿಕರು ಒಪ್ಪಿರುವುದರಿಂದ ಸಿದ್ಧಸಾಧಾನತಾದೋಷ. ಅನುವ್ಯವಸಾಯವು ಜ್ಞಾನಾಂಶದಲ್ಲಿ ಲೌಕಿಕ ಸನ್ನಿಕರ್ಷಜನ್ಯವಾಗಿರಬೇಕು, ಎಂಬ ನಿಬಂಧನೆ ಇದ್ದಾಗ ಹಿಂದೆ ಹೇಳಿದ ಅನುವ್ಯವಸಾಯವು ಜ್ಞಾನಾಂಶದಲ್ಲಿ ಸ್ಮೃತಿರೂಪವಾದ ಅಲೌಕಿಕ-ಸನ್ನಿಕರ್ಷ ಜನ್ಯವಾದ ಕಾರಣ ಪಕ್ಷದಲ್ಲಿ ಸೇರುವುದಿಲ್ಲ, ಸಿದ್ಧಸಾಧದನತಾ ದೋಷವು ಇಲ್ಲ.

## ಸಾಧ್ಯಸ್ವರೂಪ ವಿವರಣೆ

**ಸ್ವಗ್ರಾಹ್ಯೇತಿ ॥ ಸ್ವೇನ=ಅನುವ್ಯವಸಾಯೇನ ಗ್ರಾಹ್ಯಂ ಯತ್ ಜ್ಞಾನಂ ಆದ್ಯೇ**

**ಸಿದ್ಧಾಂತೇ ಸುಖವಿಷಯಕಂ ಸ್ವಪ್ರಕಾಶರೂಪಂ ಸಾಕ್ಷಿಜ್ಞಾನಮೇವ । ಪರಮತೇ ಮಾನಸಂ ಸುಖವ್ಯವಸಾಯರೂಪಮ್ ।**

**ತದನ್ಯಪಕ್ಷೇ ಚ ಘಟಾದಿಗೋಚರಂ ಮನೋವೃತ್ತಿರೂಪಂ ವ್ಯವಸಾಯಾಖ್ಯಂ ಸಾಕ್ಷಿ ಜ್ಞಾನಾತ್ ಅನ್ಯತ್,**

**ತನ್ನಿಷ್ಠಂ ಯತ್ ಪ್ರಾಮಾಣ್ಯಂ 'ಸುಖತ್ವವತಿ ಸುಖತ್ವಪ್ರಕಾರಕತ್ವಾದಿರೂಪಂ, ಘಟತ್ವವತಿ ಘಟತ್ವಪ್ರಕಾರಕತ್ವಾದಿರೂಪಂ ವಾ' ತದ್ವಿಷಯಕಮ್ ಇತ್ಯರ್ಥಃ ।**

**ಘಟಾನುವ್ಯವಸಾಯಸ್ಯ ಪಟಜ್ಞಾನಪ್ರಾಮಾಣ್ಯಾವಿಷಯಕತ್ವಾತ್ ಬಾಧನಿರಾಸಾಯ ಸ್ವಗ್ರಾಹ್ಯಜ್ಞಾನೇತ್ಯುಕ್ತಮ್।**

**ಯದ್ವಾ ಪ್ರಾಮಾಣ್ಯವಿಷಯಕ ಇತ್ಯೇವೋಕ್ತೌ ಸ್ವನಿಷ್ಠಪ್ರಾಮಾಣ್ಯ ವಿಷಯಕತ್ವಮಾದಾಯ ಸಿದ್ಧಾಂತೇ ಅರ್ಥಾಂತರತ್ವ-ನಿರಾಸಾಯ-ಸ್ವಗ್ರಾಹ್ಯ ಜ್ಞಾನೇತಿ ॥ ಏವಂ ಚ ನಾರ್ಥಾಂತರತಾ ।**

"ಸ್ವಗ್ರಾಹ್ಯಜ್ಞಾನ-ಪ್ರಾಮಾಣ್ಯವಿಷಯಕಃ ಅಥವಾ ತತ್ಪ್ರಕಾರಕಃ" ಎಂದು ಎರಡು ರೀತಿಯಾದ ಸಾಧ್ಯವಿದೆ. ಅದರ ಅರ್ಥ-ಸ್ವೇನ=ಅನುವ್ಯವಸಾಯದಿಂದ ಗ್ರಾಹ್ಯ= ತಿಳಿಯಲ್ಪಡುವ ಯಾವ ಜ್ಞಾನವಿದೆಯೋ, ಆ ಜ್ಞಾನ. ಪ್ರಥಮ ಪಕ್ಷವನ್ನು ಪರಿಗಣಿಸಿದಾಗ ಸುಖಜ್ಞಾನ. ಅದು ನಮ್ಮ ಸಿದ್ಧಾಂತದಂತೆ ಸ್ವಪ್ರಕಾಶರೂಪವಾದ ಸಾಕ್ಷಿಜ್ಞಾನ. ತಾರ್ಕಿಕಮತದಲ್ಲಿ ಮನೋಜನ್ಯವಾದ ಸುಖದ ವ್ಯವಸಾಯಾತ್ಮಕ ಜ್ಞಾನ.

ಎರಡನೆಯ ಪಕ್ಷ ಮತ್ತು ಮುಂದಿನ ಸಾಧ್ಯವನ್ನು ಪರಿಗಣಿಸಿದಾಗ ಅನುವ್ಯವಸಾಯ ಗ್ರಾಹ್ಯವಾದ ಜ್ಞಾನವೆಂದರೆ ಘಟಾದಿ ಬಾಹ್ಯವಸ್ತುಗಳನ್ನು ವಿಷಯೀಕರಿಸುವ ಮನೋವೃತ್ತಿ ರೂಪವಾದ ಸಾಕ್ಷಿಭಿನ್ನವಾದ ಜ್ಞಾನ.

ಹೀಗೆ ಸುಖಜ್ಞಾನ ಮತ್ತು ಘಟಾದಿ ಜ್ಞಾನಗಳಲ್ಲಿರುವ ಯಾವ ಪ್ರಾಮಾಣ್ಯವಿದೆಯೋ, ಸುಖಜ್ಞಾನದಲ್ಲಿ 'ಸುಖತ್ವವತಿ ಸುಖತ್ವಪ್ರಕಾರಕತ್ವವೇ' ಪ್ರಾಮಾಣ್ಯ, ಘಟಜ್ಞಾನದಲ್ಲಿ 'ಘಟತ್ವವತಿ ಘಟತ್ವಪ್ರಕಾರಕತ್ವವೇ' ಪ್ರಾಮಾಣ್ಯ, ಇಂತಹ ಪ್ರಾಮಾಣ್ಯವನ್ನು ಅನುವ್ಯವಸಾಯವು ವಿಷಯೀ-ಕರಿಸುತ್ತದೆ, ಎಂದು ಸಾಧ್ಯಗಳ ಅರ್ಥ.

ಘಟಜ್ಞಾನದ ಅನುವ್ಯವಸಾಯವು ಪಟಜ್ಞಾನಗತವಾದ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆದರಿಂದ ಬಾಧ ಬಂದೀತು. ಅದಕ್ಕಾಗಿ ಸಾಧ್ಯದಲ್ಲಿ ಪ್ರಾಮಾಣ್ಯವಿಷಯಕ ಎಂದು ಸಾಮಾನ್ಯವಾಗಿ ಹೇಳದೇ 'ಸ್ವಗ್ರಾಹ್ಯ ಪ್ರಾಮಾಣ್ಯವಿಷಯಕ' ಎಂದು ವಿಶಿಷ್ಟ ಸಾಧ್ಯ ನಿರ್ದೇಶ ಮಾಡಲಾಗಿದೆ. ಘಟಜ್ಞಾನ ವಿಷಯಕವಾದ ಅನುವ್ಯವಸಾಯ ಆ ಜ್ಞಾನದ (ಸ್ವಗ್ರಾಹ್ಯಗತ) ಪ್ರಾಮಾಣ್ಯವನ್ನು

ಗ್ರಹಿಸುತ್ತದೆ, ಎಂದಿಷ್ಟೇ ಸ್ವತಸ್ತ್ವ. ಅದು ಇತರ ಜ್ಞಾನಗತ-ಪ್ರಾಮಾಣ್ಯವನ್ನು ವಿಷಯೀಕರಿಸ ಬೇಕಿಲ್ಲ.

ಅಥವಾ, ಸ್ವಗ್ರಾಹ್ಯ ಪದಕ್ಕೆ ಹೀಗೂ ಸಾರ್ಥಕ್ಯವನ್ನು ಹೇಳಬಹುದು. ಸಾಕ್ಷಿಜ್ಞಾನವು ಸ್ವಪ್ರಕಾಶವಾದುದರಿಂದ ತನ್ನನ್ನೂ ತನ್ನ ಪ್ರಾಮಾಣ್ಯವನ್ನೂ ತಾನೇ ಗ್ರಹಿಸುತ್ತದೆ. ಇದು ದ್ವೈತಸಿದ್ಧಾಂತ. ಸಾಕ್ಷಿಯು ಪ್ರಾಮಾಣ್ಯವಿಷಯಕ ಎಂದಿಷ್ಟೇ ಹೇಳಿದರೆ, ಸಿದ್ಧಾಂತದಲ್ಲಿ ಸ್ವಗತಪ್ರಾಮಾಣ್ಯವಿಷಯಕ ಎಂದು ಸಿದ್ಧವಾದುದರಿಂದ ಅರ್ಥಾಂತರತಾದೋಷ. 'ಸ್ವಗ್ರಾಹ್ಯ-ಗತ-ಪ್ರಾಮಾಣ್ಯ ವಿಷಯಕ' ಎಂದಾಗ ಸ್ವಗ್ರಾಹ್ಯವಾದ ವ್ಯವಸಾಯಗತವಾದ ಪ್ರಾಮಾಣ್ಯ ವಿಷಯಕ, ಎಂದೇ ಹೇಳಬೇಕಾಗುತ್ತದೆ. ಇದರಿಂದ ಅರ್ಥಾಂತರತಾದೋಷ ಇಲ್ಲ.

## ವ್ಯಭಿಚಾರಶಂಕಾ ಪರಿಹಾರ

**ನಚೈವಂ ಸಾಕ್ಷ್ಯಂಶೇ ಸ್ವಗ್ರಾಹ್ಯ-ವ್ಯವಸಾಯ-ಪ್ರಾಮಾಣ್ಯ-ವಿಷಯಕತ್ವಾ-ಭಾವಾತ್ ವ್ಯಭಿಚಾರಃ ಶಂಕ್ಯಃ । ಸ್ವಗ್ರಾಹ್ಯಂ ಯಾವತ್=ಸ್ವಯಮ್ ಅನ್ಯಚ್ಚ, ತಾವತಿ ಪ್ರಾಮಾಣ್ಯಗ್ರಾಹಕತ್ವಲಾಭೇನ ಸಾಕ್ಷ್ಯಂಶೇ ಹೇತೂನಾಮ್ ಅವ್ಯಭಿಚಾರಾತ್।**

**ಯದ್ವಾ ಸುಖತ್ವವದ್-ವಿಶ್ಯೇಷ್ಯಕಜ್ಞಾನತ್ವಾದಿರೂಪ ಪ್ರಾಮಾಣ್ಯಲಾಭಾಯ ಸ್ವಗ್ರಾಹ್ಯ-ಜ್ಞಾನಪ್ರಾಮಾಣ್ಯೇತ್ಯುಕ್ತಿಃ।**

ಬಾಧ-ಅರ್ಥಾಂತರತಾದಿದೋಷಗಳನ್ನು ಪರಿಹಾರ ಮಾಡಿದರೂ ವ್ಯಭಿಚಾರ ಇದೆ. ವ್ಯವಸಾಯವಿಷಯಕ ಅನುವ್ಯವಸಾಯವು ಸಾಕ್ಷಿರೂಪವಾದುದರಿಂದ ಸ್ವಪ್ರಕಾಶ. ಅದು ತನ್ನನ್ನೂ ತಾನು ಗ್ರಹಿಸುತ್ತದೆ. ಅದರಲ್ಲಿ ತಾನೂ ವಿಷಯ, ವ್ಯವಸಾಯವೂ ವಿಷಯ. ಆದರೆ ಸಾಕ್ಷಿವಿಷಯಕ ಸಾಕ್ಷಿಯು ತನಗೆ ವಿಷಯವಾದ ತನ್ನಲ್ಲಿ (ಸಾಕ್ಷ್ಯಂಶೇ) ವ್ಯವಸಾಯಗತ ಪ್ರಾಮಾಣ್ಯವನ್ನು ವಿಷಯೀಕರಿಸುತ್ತಿಲ್ಲ. (ಸಾಕ್ಷಿಯು ಸಾಕ್ಷಿಯಲ್ಲಿ 'ಘಟತ್ವವತಿ ಘಟತ್ವ ಪ್ರಕಾರಕತ್ವರೂಪ ಪ್ರಾಮಾಣ್ಯ'ವನ್ನು ವಿಷಯೀಕರಿಸುತ್ತಿಲ್ಲ.) ಆದ್ದರಿಂದ ಬಾಧ ಎಂದು ಆಶಂಕೆ.

ಇದಕ್ಕೆ ಸಮಾಧಾನ-ಸಾಕ್ಷಿಯಿಂದ ಗ್ರಾಹ್ಯವಾದುದು ಸಾಕ್ಷಿಯೂ ಆಗಿದೆ, (ಸ್ವಯಂ), ಸಾಕ್ಷಿಭಿನ್ನವಾದ ವ್ಯವಸಾಯವೂ ಆಗಿದೆ. ಅವೆರಡರಲ್ಲೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಒಂದರ ಪ್ರಾಮಾಣ್ಯವನ್ನು ಇನ್ನೊಂದರಲ್ಲಿ ಗ್ರಹಿಸದಿದ್ದರೂ ಸಾಕ್ಷಿಯು ತಾನು ಯಾವುದನ್ನು ಗ್ರಹಿಸುವುದೋ ಅದರಲ್ಲಿ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ, ಎಂಬ ಈ ವ್ಯಾಪ್ತಿಗೆ ಎಲ್ಲೂ ವ್ಯಭಿಚಾರವಿಲ್ಲ.

ಅಥವಾ ಜ್ಞಾನಪದಕ್ಕೆ ಹೀಗೂ ಸಾರ್ಥಕ್ಯವನ್ನು ಹೇಳಬಹುದು–ಜ್ಞಾನಪದವಿಲ್ಲದಿದ್ದರೆ 'ಪ್ರಾಮಾಣ್ಯವಿಷಯಕಂ' ಎಂದಿಷ್ಟೇ ಸಾಧ್ಯವಾಗುತ್ತದೆ. ಪ್ರಾಮಾಣ್ಯವೆಂದರೆ 'ಸುಖತ್ವ ವದ್ವಿಶೇಷ್ಯಕತ್ವ'. ಇದು ಇಚ್ಛಾದಲ್ಲೂ ಇದೆ. ಸುಖಜ್ಞಾನದಲ್ಲಿ ಮಾತ್ರವೇ ಇರುವ ಪ್ರಾಮಾಣ್ಯ ವೆಂದರೆ 'ಸುಖತ್ವವದ್ವಿಶೇಷ್ಯಕಜ್ಞಾನತ್ವ'. ಆದರ ಲಾಘವಕ್ಕಾಗಿ 'ಸ್ವಗ್ರಾಹ್ಯ ಜ್ಞಾನ–ಪ್ರಾಮಾಣ್ಯ' ಎಂದು ಜ್ಞಾನಪದವನ್ನು ಕೊಡಲಾಗಿದೆ.

## ಪ್ರಾಮಾಣ್ಯವಿಷಯಕತ್ವವೆಂದರೆ

**ಪ್ರಾಮಾಣ್ಯವಿಷಯಕತ್ವಂ ಚ ಸಾಧ್ಯಂ–ಯನ್ಮತೇ ವೈಶಿಷ್ಟ್ಯಮ್ ಅನುವ್ಯವಸಾಯ ವೇದ್ಯಮೇವ ನ, ತನ್ಮತೇ ಬೋಧ್ಯಮ್ । ತದ್ವೇದ್ಯಮಪಿ ಸ್ವಾತಂತ್ರ್ಯೇಣ ನ ತದ್–ವೇದ್ಯಮ್, ಇತಿ ಮತೇ ತು ಸತ್ವೇನ ಪ್ರಾಮಾಣ್ಯವಿಷಯಕತ್ವಮ್ ಅಭಿಮತಮ್ । ತೇನ ತತ್ಪಕ್ಷೇ ಸಿದ್ಧಸಾಧನತಾ ಇತಿ ಶಂಕಾನವಕಾಶಃ । ಅತ ಏವ ವಕ್ಷ್ಯತಿ 'ಸತ್ತಯಾ ತದುಲ್ಲೇಖಸ್ಯ ಸಾಧ್ಯತ್ವಾತ್' ಇತಿ ।**

ನೈಯಾಯಿಕರಲ್ಲಿ ಎರಡು ಪಕ್ಷವಿದೆ–ಅನುವ್ಯವಸಾಯವು ಪುರೋವರ್ತಿಯಲ್ಲಿ ರಜತತ್ವ ವೈಶಿಷ್ಟ್ಯವನ್ನು (ಸಂಬಂಧವನ್ನು) ಗ್ರಹಿಸುವುದಿಲ್ಲ. 'ಈ ಜ್ಞಾನವು ಪುರೋವರ್ತಿವಸ್ತು ವಿಶೇಷ್ಯಕವಾಗಿದೆ, ಇದಂತ್ವ ಮತ್ತು ರಜತತ್ವ ಪ್ರಕಾರಕವಾಗಿದೆ' ಎಂದು ಅನುವ್ಯವಸಾಯ ಹೇಳುತ್ತದೆ. ಪುರೋವರ್ತಿ ವಸ್ತುವಿನಲ್ಲಿ ರಜತತ್ವ ವೈಶಿಷ್ಟ್ಯವು ಇದೆ, ಎಂದು ಹೇಳುವ ಸಾಮರ್ಥ್ಯ ಅನುವ್ಯವಸಾಯಕ್ಕಿಲ್ಲ. ತತ್ತ್ವಚಿಂತಾಮಣಿಯಲ್ಲಿ ಈ ಪಕ್ಷವನ್ನು ತಿಳಿಸಲಾಗಿದೆ–

**'ಇದಂ ರಜತಂ ಚ ಜಾನಾಮಿ' ಇತಿ ನಾನುವ್ಯವಸಾಯಃ । ಬಹಿರ್ವಿಶೇಷ್ಯಕೇ ಮನಸೋಽಸಾಮರ್ಥ್ಯಾತ್ । ಕಿಂತು 'ಇದಂತ್ವೇನ ರಜತತ್ವೇನ ಚ ಜಾನಾಮಿ' ಇತಿ । ತತ್ರ ಇದಂತ್ವ–ರಜತತ್ವೇ ಪ್ರಕಾರತ್ವೇನ ಭಾಸೇತೇ । ತತ್ ಪ್ರಕಾರಕಜ್ಞಾನವತ್ವಂ ಚ ಆತ್ಮನಿ ಭಾಸತೇ ।' (ಪುಟ.208)**

ಇನ್ನೊಂದು, ಪಕ್ಷ–ಅನುವ್ಯವಸಾಯವು ವ್ಯವಸಾಯವನ್ನು 'ತದ್ವದ್ ವಿಶೇಷ್ಯಕತ್ವೇನ ತತ್–ಪ್ರಕಾರಕತ್ವೇನ' ಗ್ರಹಿಸುತ್ತದೆ. ಹೀಗೆ ಪ್ರಾಮಾಣ್ಯವು ವ್ಯವಸಾಯದ್ವಾರಾ ಅನುವ್ಯವಸಾಯಕ್ಕೆ ವಿಷಯವಾದರೂ ಸ್ವಾತಂತ್ರ್ಯೇಣ ವಿಷಯವಲ್ಲ. ಆದ್ದರಿಂದಲೇ ಅದು ಅರ್ಥತಥಾತ್ವಾವ ಧಾರಣವನ್ನು ಮಾಡುವುದಿಲ್ಲ. 'ಗೇಹೇ ಘಟೋಽಸ್ತೀತಿ ಶೃಣೋಮಿ' ಎಂಬ ವಾಕ್ಯದಂತೆ. ರುಚಿದತ್ತನು ಮಣಿವ್ಯಾಖ್ಯಾನ ಪ್ರಕಾಶದಲ್ಲಿ ಈ ಪಕ್ಷವನ್ನು ಉಲ್ಲೇಖಿಸಿದ್ದಾನೆ–

**"ಅನುವ್ಯವಸಾಯ ಸಾಮಗ್ರ್ಯಾಃ ತಥಾತ್ವೇಽಪಿ (ತತ್ ಪ್ರಕಾರವಿಶಿಷ್ಟಧರ್ಮಿ ವಿಶೇಷ್ಯ–**

**ಕತಯಾ ವ್ಯವಸಾಯ ಗ್ರಾಹಕತ್ವೇಽಪಿ) ತದ್ವತ್ತ್ವಸ್ಯ ಸ್ವಾತಂತ್ರ್ಯೇಣ ಅಗ್ರಹೇಣ ನೈಯಾಯಿಕಾನಾಂ ತತಃ ಪ್ರಾಮಾಣ್ಯಗ್ರಹಾಸ್ವೀಕಾರೇಣ ಸಿದ್ಧಸಾಧನಾನವಕಾಶಾತ್' (ಪುಟ.138)**

ಈ ಎರಡೂ ಪಕ್ಷಗಳಲ್ಲಿ ಪ್ರಕೃತ ಸಾಧ್ಯವನ್ನು ಹೇಗೆ ಗ್ರಹಿಸಬೇಕೆಂದು ರಾಯರು ನ್ಯಾಯದೀಪದಲ್ಲಿ ತಿಳಿಸಿದ್ದಾರೆ–

ವಿಶೇಷ್ಯದಲ್ಲಿ ಪ್ರಕಾರೀಭೂತಧರ್ಮದ ವೈಶಿಷ್ಟ್ಯವು ಅನುವ್ಯವಸಾಯದಲ್ಲಿ ವಿಷಯವೇ ಅಲ್ಲ, ಎನ್ನುವ ಮೊದಲ ಪಕ್ಷದಲ್ಲಿ ಸಾಧ್ಯವನ್ನು ಯಥಾಶ್ರುತವಾಗಿಯೇ ಗ್ರಹಿಸಬಹುದು. 'ಅನುವ್ಯವಸಾಯವು ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ' ಎಂದು.

ಆದರೆ, ಎರಡನೆಯ ಪಕ್ಷದಲ್ಲಿ ಹೀಗೆ ಹೇಳಿದರೆ ಸಿದ್ಧಸಾಧನತಾದೋಷ ಬರುತ್ತದೆ. ಅದಕ್ಕಾಗಿ 'ಅನುವ್ಯವಸಾಯವು ಸತ್ತಯಾ ಪ್ರಾಮಾಣ್ಯವಿಷಯಕ' ಎಂದು ಸಾಧ್ಯವನ್ನು ತಿಳಿಯಬೇಕು. ನೈಯಾಯಿಕರು, ಪ್ರಾಮಾಣ್ಯವು ವ್ಯವಸಾಯದ್ವಾರಾ ಅನುವ್ಯವಸಾಯ ವಿಷಯ, ಎನ್ನುತ್ತಾರೆಯೇ ಹೊರತು, ಅನುವ್ಯವಸಾಯವು ಪುರೋವರ್ತಿಯಲ್ಲಿ ಅಂತಹ ವೈಶಿಷ್ಟ್ಯವು ಇದೆ, ಎಂದೇನೂ ದೃಢೀಕರಿಸುವುದಿಲ್ಲ. ''ಮನೆಯಲ್ಲಿ ಬೆಳಕಿದೆ ಎಂದು ಅವನು ಹೇಳುತ್ತಾನೆ' ಎಂಬ ವಾಕ್ಯದಿಂದ ಮನೆಯಲ್ಲಿ ಬೆಳಕಿದೆ, ಎಂದು ಹೇಗೆ ನಿರ್ಧಾರವಾಗುವುದಿಲ್ಲವೋ ಅದರಂತೆ, 'ಜ್ಞಾನವು ರಜತತ್ವವದ್–ವಿಶೇಷ್ಯಕವಾಗಿದೆ' ಎಂದು ಅನುವ್ಯವಸಾಯ ತಿಳಿಸಿದ ಮಾತ್ರಕ್ಕೆ ವ್ಯವಸಾಯವು ರಜತತ್ವವದ್– ವಿಶೇಷ್ಯಕ (ಪ್ರಮಾಣ)ವಾಗಿರಬೇಕೆಂದೇನೂ ಇಲ್ಲ. ಇದು ನೈಯಾಯಿಕರ ವಾದ. ಆದರೆ ದ್ವಾರವನ್ನು ದ್ವಾರಿಯು ಸತ್ತ್ವೇನ ಅರ್ಥವಿಷಯಕ ಎಂದು ಗ್ರಹಿಸಿದಾಗ ದ್ವಾರಿಯೂ ಅರ್ಥಸತ್ತ್ವಗ್ರಾಹಕವಾಗುತ್ತದೆ. ಆದ್ದರಿಂದಲೇ 'ಮಮ, ಗೇಹೇ ಘಟಪ್ರಮಾ' ಎಂದು ಹೇಳಿದಾಗ ಅರ್ಥಸತ್ತ್ವಸಿದ್ಧವಾಗುತ್ತದೆ. ಇದು ಸ್ವತಸ್ತ್ವವಾದಿಗಳ ಅಭಿಪ್ರಾಯ.

ಈ ಪಕ್ಷದ ಅಭಿಪ್ರಾಯದಿಂದಲೇ ಮುಂದೆ 'ಸತ್ತಯಾ ತದುಲ್ಲೇಖಸ್ಯ ಸಾಧ್ಯತ್ವಾತ್' ಎಂದು ತರ್ಕತಾಂಡವದಲ್ಲಿ ಹೇಳಲಾಗಿದೆ.

## ಸಿದ್ಧಾಂತರೀತ್ಯಾ 'ಸತ್ತ್ವೇನ' ಎಂಬ ವಿಶೇಷಣ ಸಾರ್ಥಕ್ಯ

**ನ ಚ ವಾದಿನಃ ಸತ್ತ್ವೇನೇತಿ ವಿಶೇಷಣಂ ವ್ಯರ್ಥಮ್ । ವ್ಯಾವರ್ತ್ಯಾಸಿದ್ಧೇಃ, ಇತಿ ಶಂಕ್ಯಮ್ । ಶುಕ್ತಿರೂಪ್ಯಜ್ಞಾನೇ ಪ್ರಾಮಾಣ್ಯವಿಷಯಕಸ್ಯಾಪಿ ಮಾನಸದರ್ಶನಸ್ಯ ಸ್ವವಿಷಯಸತ್ತ್ವಾನಿರ್ಣಾಯಕಸ್ಯಾಪಿ ಸಿದ್ಧಾಂತೇ ಸತ್ತ್ವಾತ್ । ಪರಸಿದ್ಧತ್ವಮಾತ್ರೇಣ ವ್ಯಾವರ್ತ್ಯೋಪಪತ್ತೇಶ್ಚ ।**

**ಪರಾರ್ಥಾನುಮಾನೇ ಪರಂ ಪ್ರತಿ ಸಿದ್ಧಸಾಧನೋದ್ಧಾರಸ್ಯಾಪಿ ವಾದಿ-ಪ್ರಯೋಜನತ್ವಾಚ್ಚ ।**

**'ಜನ್ಯಕೃತ್ಯಜನ್ಯಾನಿ' ಇತ್ಯತ್ರ ಮೀಮಾಂಸಕಂ ಪ್ರತಿ ಜನ್ಯತ್ವಸ್ಯೇವ ಇಹಾಪಿ ವಾದಿನಂ ಪ್ರತಿ ಪ್ರಮೇಯತ್ವಾದಿವತ್ ಉಪರಂಜಕತ್ವೇನ ವಿಶೇಷಣ-ತ್ವೋಪಪತ್ತೇಶ್ಚ । ಉಕ್ತಂ ಚ ಉತ್ಪತ್ತಿಪ್ರಾಮಾಣ್ಯವಾದೇ ಮಣಾವಪಿ–**

> **''ಉಭಯಸಿದ್ಧ ವ್ಯಾವರ್ತಕತ್ವಂ ತಂತ್ರಮ್ । ನ ತು ವ್ಯಾವರ್ತ್ಯಸ್ಯ ಉಭಯಸಿದ್ಧಿಃ । ಗೌರವಾತ್'' ಇತಿ ಭಾವಃ ।**

ವಾದಿಗಳಾದ ದ್ವೈತದಾರ್ಶನಿಕರು ಸತ್ತ್ವಾಸತ್ತ್ವ–ಔದಾಸೀನ್ಯೇನ ಪ್ರತೀತಿಯನ್ನು ಒಪ್ಪಿಲ್ಲ. ಆದ್ದರಿಂದ ಸಾಕ್ಷಿಯು ಪ್ರಾಮಾಣ್ಯವನ್ನು ವಿಷಯೀಕರಿಸಿದರೆ ಸತ್ತ್ವೇನೈವ ವಿಷಯೀಕರಿಸಬೇಕು. ಆದಕಾರಣ 'ಸತ್ತ್ವೇನ' ಎಂಬ ವಿಶೇಷಣವು ವ್ಯರ್ಥವಲ್ಲವೆ? ಇಲ್ಲ, 'ಇದಂ ರಜತಮ್' ಎಂಬ ಜ್ಞಾನವನ್ನು ಮನಸ್ಸು ಪ್ರಮಾಣವೆಂದು ಗ್ರಹಿಸಿದರೂ ಆ ಜ್ಞಾನವು ವಸ್ತುತಃ ಪ್ರಮಾಣವಲ್ಲ. ಹೀಗೆ ಸ್ವವಿಷಯವಾದ ಪ್ರಾಮಾಣ್ಯಕ್ಕೆ ಸತ್ತ್ವವನ್ನು ನಿರ್ಧರಿಸದ ಜ್ಞಾನದ ಜ್ಞಾನವೂ ಇರುವುದರಿಂದ ಅಂತಹ ಜ್ಞಾನವ್ಯಾವೃತ್ತಿಗಾಗಿ 'ಸತ್ತ್ವೇನ' ಎಂಬ ವಿಶೇಷಣ ಸಾರ್ಥಕವಾಗಿದೆ.

ಅಥವಾ ಸಾಧ್ಯಘಟಕ ವಿಶೇಷಣಕ್ಕೆ ಪ್ರತಿವಾದಿಯ ಸಿದ್ಧಾಂತ ರೀತ್ಯಾ ವ್ಯಾವರ್ತ್ಯವಿದ್ದರೂ ಸಾಕು. ಅದು ಸಾರ್ಥಕವಾಗುತ್ತದೆ. ಪ್ರಕೃತ, ಪರಾರ್ಥಾನುಮಾನದಲ್ಲಿ ಪ್ರತಿವಾದಿಯ (ನೈಯಾಯಿಕರ) ಮತದಲ್ಲಿ ಅನುವ್ಯವಸಾಯಕ್ಕೆ ಪ್ರಾಮಾಣ್ಯವಿಷಯಕತ್ವ ಇದ್ದರೂ 'ಸತ್ತ್ವೇನ' ಪ್ರಾಮಾಣ್ಯವಿಷಯಕತ್ವವು ಇಲ್ಲ. ಹೀಗೆ ಪ್ರತಿವಾದಿಮತದಲ್ಲಿ ಸತ್ತ್ವೇನ ಎಂಬ ವಿಶೇಷಣಕ್ಕೆ ವ್ಯಾವರ್ತ್ಯ ಇದೆ. ಆದರಿಂದಾಗಿ ಬರುವ ಸಿದ್ಧಸಾಧನತಾ ದೋಷದ ಪರಿಹಾರವೂ ವಾದಿಗೆ ಅಭಿಲಷಿತವಾಗಿದೆ. ಅಂತಹ ಸಿದ್ಧಸಾಧನತಾ ಪರಿಹಾರಕ್ಕಾಗಿ ಕೊಟ್ಟಿರುವ 'ಸತ್ತ್ವೇನ' ಎಂಬ ವಿಶೇಷಣವೂ ಸಾರ್ಥಕವೇ ಆಗಿದೆ. ಉದಾಹರಣೆಗೆ–ಈಶ್ವರಾನುಮಾನದಲ್ಲಿ 'ಕೃತ್ಯಜನ್ಯಾನಿ ಜನ್ಯಾನಿ' ಎಂದು ಹೇಳಿದರೆ ನೈಯಾಯಿಕ ರೀತ್ಯಾ ಬಾಧದೋಷವಿದೆ. ಆದಕ್ಕಾಗಿ 'ಜನ್ಯಕೃತಿ–ಅಜನ್ಯಾನಿ' ಎಂದು ಕೃತಿಗೆ ಜನ್ಯ ಎಂಬ ವಿಶೇಷಣವನ್ನು ಕೊಡಲಾಗಿದೆ. ಆದರೆ, ಪ್ರತಿವಾದಿಯಾದ ನಿರೀಶ್ವರ ಮೀಮಾಂಸಕರ ಸಿದ್ಧಾಂತದಲ್ಲಿ ಅಜನ್ಯವಾದ ಕೃತಿಯೇ ಇಲ್ಲದಿರುವುದರಿಂದ ಈ ವಿಶೇಷಣಕ್ಕೆ ವ್ಯಾವರ್ತ್ಯ ಇಲ್ಲ. ಆದರೂ ವಾದಿಮತರೀತ್ಯಾ (ನೈಯಾಯಿಕರೀತ್ಯಾ) ಆದಕ್ಕೆ ವ್ಯಾವರ್ತ್ಯವಿದೆ. ಅವರು ಅಜನ್ಯವಾದ ಈಶ್ವರ ಕೃತಿಯನ್ನು ಒಪ್ಪಿದ್ದಾರೆ. ಆದರಂತೆ ಪ್ರಕೃತದಲ್ಲೂ ಸತ್ತ್ವೇನ ಎಂಬ ವಿಶೇಷಣಕ್ಕೆ ಪ್ರತಿವಾದಿ ಮತ (ನೈಯಾಯಿಕ) ರೀತ್ಯಾ ವ್ಯಾವರ್ತ್ಯ ಇದೆ. ವಾದಿಗಳ ರೀತ್ಯಾ ಅದು ಪ್ರಮೇಯತ್ವಾದಿಗಳಂತೆ ಉಪರಂಜಕ ವಿಶೇಷಣ. ಈ ರೀತಿಯ ವಿಶೇಷಣವನ್ನು ಮಣಿಕಾರನೂ ಪ್ರಾಮಾಣ್ಯೋತ್ಪತ್ತಿ ಸ್ವತಸ್ತ್ವವಾದದಲ್ಲಿ ಒಪ್ಪಿದ್ದಾನೆ.[1]

---

1. **ಸಂದರ್ಭ–ಪ್ರಮಾ, ಅಸಾಧಾರಣ–ಕಾರಣಜನ್ಯಾ ಜ್ಞಾನತ್ವೇ ಸತಿ ತದ್ವಿಶೇಷಾತ್ । ಈ ಅನುಮಾನಕ್ಕೆ 'ಪ್ರಮಾನ್ಯತ್ವಂ' ಉಪಾಧಿ. ಈ ಉಪಾಧಿಯು ಪಕ್ಷೇತರತ್ವರೂಪವಾಗಿದೆ ಎಂದು ಆಶಂಕಿಸಿ ಮಣಿಕಾರ, ಇದು ಪಕ್ಷಮಾತ್ರ ವ್ಯಾವರ್ತಕ**

"ವಿಶೇಷಣವು ವಾದಿ–ಪ್ರತಿವಾದಿ ಉಭಯರೀತ್ಯಾ ವ್ಯಾವರ್ತಕವಾಗಿರಬೇಕು. ಹೊರತು, ವಿಶೇಷಣದಿಂದ ವ್ಯಾವರ್ತ್ಯವೂ ಉಭಯ ಸಿದ್ಧವಾಗಬೇಕಿಲ್ಲ. ಹಾಗೆ ನಿರ್ಬಂಧಿಸುವುದು ಗೌರವ" (ಪುಟ.339)

## ದ್ವಿತೀಯ ಸಾಧ್ಯ ವಿವರಣೆ

**ಪ್ರಾಮಾಣ್ಯಂ ಅನುವ್ಯವಸಾಯ–ವಿಷಯೋಽಪಿ ಪ್ರಾಕ್ ಅನುಪಸ್ಥಿತತ್ವಾತ್ ನ ಪ್ರಕಾರತಯಾ ಇತಿ ವದಂತಂ ಪ್ರತಿ ಆಹ–ತತ್ ಪ್ರಕಾರಕೋ ವಾ ಇತಿ ॥**

**ಸ್ವಗ್ರಾಹ್ಯಜ್ಞಾನ–ಪ್ರಮಾಣ್ಯ ಪ್ರಕಾರಕೋ ವಾ ಇತ್ಯರ್ಥಃ। ವಿಶೇಷಣಜ್ಞಾನ ಹೇತುತಾಯಾಃ ನಿರ್ವಿಕಲ್ಪಕಭಂಗೇ ನಿರಸಿಷ್ಯಮಾಣತ್ವಾತ್ ಇತಿ ಭಾವಃ।**

ಪ್ರಾಮಾಣ್ಯವು ಅನುವ್ಯವಸಾಯದಲ್ಲಿ ವಿಷಯವಾದರೂ ವಿಶೇಷ್ಯತಯಾ ವಿಷಯವಾಗ ಬಹುದು. ಪ್ರಕಾರತಯಾ (ವಿಶೇಷಣವಾಗಿ) ವಿಷಯವಲ್ಲ. ಅದು ವಿಶೇಷಣವಾಗಿ ತೋರಬೇಕಾದರೆ ಮೊದಲು ಅದರ ಜ್ಞಾನವಿರಬೇಕು. "ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನವು ಕಾರಣ". ಆದರೆ, ಅನುವ್ಯವಸಾಯ ಬರುವ ಮೊದಲು ಆ ಜ್ಞಾನಗತ–ಪ್ರಾಮಾಣ್ಯದ ಜ್ಞಾನವಿಲ್ಲ. ಆದ್ದರಿಂದ ಪ್ರಾಮಾಣ್ಯವು ಪ್ರಕಾರವಾಗಿ ತೋರುವುದಿಲ್ಲ, ಎಂದು ಕೆಲವರ ವಾದ. ಅದರ ನಿರಾಸಕ್ಕಾಗಿ–ತತ್‌ಪ್ರಕಾರಕೋ ವಾ, ಎಂದು ಎರಡನೆಯ ಸಾಧ್ಯವನ್ನು ಮಾಡಲಾಗಿದೆ. ಅದರ ಅಭಿಪ್ರಾಯ–ಅನುವ್ಯವಸಾಯದಿಂದ ಗ್ರಾಹ್ಯವಾದ ಜ್ಞಾನಗತಪ್ರಾಮಾಣ್ಯವು ಅನುವ್ಯವಸಾಯ ದಲ್ಲಿ ಜ್ಞಾನಾಂಶದಲ್ಲಿ ಪ್ರಕಾರವಾಗಿ ತೋರುತ್ತದೆ, ಎಂದು. 'ನಿರ್ವಿಕಲ್ಪಕ ಜ್ಞಾನ'ವನ್ನು ನಿರಾಕರಿಸುವ ಮುಂದಿನ ಪ್ರಕರಣದಲ್ಲಿ 'ವಿಶಿಷ್ಟ ಜ್ಞಾನಕ್ಕೆ ವಿಶೇಷಣ ಜ್ಞಾನವು ಕಾರಣ' ಎನ್ನುವ ತಾರ್ಕಿಕರ ವಾದವನ್ನು ಶ್ರೀವ್ಯಾಸರಾಜರು ನಿರಾಕರಿಸಲಿದ್ದಾರೆ. ಆದ್ದರಿಂದ ಮೊದಲು ಅನುಪಸ್ಥಿತವಾದರೂ ಪ್ರಾಮಾಣ್ಯವು ಪ್ರಕಾರವಾಗಿ ತೋರಬಹುದು.

## ಪ್ರಥಮ ಹೇತು ವಿವರಣೆ

**ತದ್ವಿರುದ್ಧೇತಿ ॥ ಗ್ರಾಹ್ಯಪ್ರಾಮಾಣ್ಯವಿರುದ್ಧಂ ಯತ್ ಪ್ರಾಮಾಣ್ಯಾಭಾವ–ತದ್ ವ್ಯಾಪ್ತ–ಅಪ್ರಾಮಾಣ್ಯಾದಿ ತದವಿಷಯಕತ್ವೇ ಸತೀತ್ಯರ್ಥಃ।**

---

ಅಲ್ಲ. ಪ್ರಮಾಸಾಮಾನ್ಯವು ಪಕ್ಷವಾದರೆ ಈಶ್ವರ ಪ್ರಮಾವೂ ಪಕ್ಷದಲ್ಲಿ ಸೇರುತ್ತದೆ. ಅದು ಕಾರಣ ಜನ್ಯವಲ್ಲವಾದುದರಿಂದ ಬಾಧದೋಷ ಬರುತ್ತದೆ. ಆದ್ದರಿಂದ ಜನ್ಯಪ್ರಮಾ ಮಾತ್ರ ಇಲ್ಲಿ ಪಕ್ಷ. ಈಶಪ್ರಮಾ ಪಕ್ಷವಲ್ಲ. ಆಗ 'ಪ್ರಮಾನ್ಯತ್ವಂ' ಎಂಬ ಉಪಾಧಿಯು ಪಕ್ಷಮಾತ್ರ ವ್ಯಾವರ್ತಕವಲ್ಲ, ಅಪಕ್ಷವಾದ ಈಶ ಪ್ರಮಾ ವ್ಯಾವರ್ತಕವೂ ಆಗಿದೆ ಎಂದು ಸಮಾಧಾನಿಸಿದ್ದಾರೆ. ಈ ಸಾರ್ಥಕ್ಯವನ್ನು ಈಶ್ವರಾಂಗೀಕಾರ ಮಾಡುವ ನೈಯಾಯಿಕರ ಮತದಲ್ಲಿ ಹೇಳಬಹುದು. ಪ್ರತಿವಾದಿಗಳಾದ ಮೀಮಾಂಸಕರ ಮತದಲ್ಲಿ ಈಶ್ವರ ಪ್ರಮಾ ಇಲ್ಲವಾದ ಕಾರಣ ಅದು ವ್ಯಾವರ್ತ್ಯವಲ್ಲ. ಈ ಸಂದರ್ಭದಲ್ಲಿ ಮಣಿಕಾರ ಕೊಟ್ಟಿರುವ ಸಮರ್ಥನೆ ಇದು.

**ವಿರುದ್ಧತ್ವಂ ಚ ತಜ್ಜ್ಞಾನ ಪ್ರತಿಬಂಧಕ–ಜ್ಞಾನ–ವಿಷಯತ್ವಮ್ ।**

**ತದ್‌ವ್ಯಾಪ್ಯತ್ವೇತಿ ॥ ಸುಖಾನುಭವಾದಿನಿಷ್ಠ–ಸುಖತ್ವವದ್–ವಿಶೇಷ್ಯಕತ್ವಾದಿ ರೂಪ ಪ್ರಾಮಾಣ್ಯ ವ್ಯಾಪ್ಯತ್ವೇತ್ಯರ್ಥಃ ।**

**ತತ್–ಸಂಶಯವಿರೋಧೀತಿ ॥ ಪ್ರಾಮಾಣ್ಯಸಂಶಯವಿರೋಧಿತ್ವಂ ನಾಮ ತದನುತ್ಪತ್ತಿ–ವ್ಯಾಪ್ಯತ್ವಾದಿರೂಪಮ್ ಜ್ಞೇಯಮ್ ॥ ವಿಶೇಷಣಕೃತ್ಯಾನಿ ಅಗ್ರೇ ವ್ಯಕ್ತಾನಿ । ತದ್ವಿಷಯಕೇತಿ ॥ ಪ್ರಾಮಾಣ್ಯವಿಷಯಕೇತ್ಯರ್ಥಃ । ತಜ್ಜ್ಞಾನೇತಿ ॥ ಗ್ರಾಹ್ಯಪ್ರಾಮಾಣ್ಯಾಶ್ರಯಜ್ಞಾನೇತ್ಯರ್ಥಃ । ಸಾಧ್ಯಾ–ವೈಶಿಷ್ಟ್ಯ ನಿರಾಸೋಽಗ್ರೇ ಸ್ಫುಟಃ । ತದ್ವಿಷಯಕತ್ವಾತ್ ॥ ವ್ಯವಸಾಯ–ವಿಷಯಕತ್ವಾತ್ ಇತ್ಯರ್ಥಃ ।**

ಹೇತುವಿನಲ್ಲಿ 'ತದ್ವಿರುದ್ಧಾವಿಷಯಕತ್ವೇ ಸತಿ' ಎಂದು ಮೊದಲನೆಯ ವಿಶೇಷಣ. ತತ್ ಎಂದರೆ ಪ್ರಕೃತ ಅನುವ್ಯವಸಾಯದಿಂದ ಗ್ರಾಹ್ಯವಾದ ಪ್ರಾಮಾಣ್ಯ. ಅದಕ್ಕೆ ವಿರುದ್ಧವಾದುದು ಎರಡು–

1. ಪ್ರಾಮಾಣ್ಯಾಭಾವ 2. ಇನ್ನೊಂದು ಪ್ರಾಮಾಣ್ಯಾಭಾವಕ್ಕೆ ವ್ಯಾಪ್ಯವಾದ ಅಪ್ರಾಮಾಣ್ಯ. ಇವೆರಡೂ ಪ್ರಕೃತ ಅನುವ್ಯವಸಾಯದಲ್ಲಿ ವಿಷಯವಾಗಿಲ್ಲ, ಎಂದು ಅರ್ಥ.

ವಿರುದ್ಧ ಎಂದರೆ–ಪ್ರಾಮಾಣ್ಯವಿಷಯಕವಾದ ಯಾವ ಜ್ಞಾನವಿದೆಯೋ ಆ ಜ್ಞಾನಕ್ಕೆ ಪ್ರತಿಬಂಧಕವಾದ ಜ್ಞಾನಕ್ಕೆ ವಿಷಯ, ಎಂದು ಅರ್ಥ. 'ಇದಂ ಜ್ಞಾನಂ ಪ್ರಮಾಣಂ' ಎಂಬ ಜ್ಞಾನಕ್ಕೆ 'ಇದಂ ಜ್ಞಾನಂ ಪ್ರಾಮಾಣ್ಯಾಭಾವವತ್' ಎಂಬ ಜ್ಞಾನ ಮತ್ತು 'ಪ್ರಾಮಾಣ್ಯಾಭಾವ ವ್ಯಾಪ್ಯ–ಅಪ್ರಾಮಾಣ್ಯವತ್ ಇದಂ ಜ್ಞಾನಮ್' ಎಂಬ ಎರಡೂ ಜ್ಞಾನಗಳು ಪ್ರತಿಬಂಧಕಗಳು. ಆ ಜ್ಞಾನಗಳಿಗೆ ವಿಷಯಗಳಾದ ಅವೆರಡೂ (ಪ್ರಾಮಾಣ್ಯಾಭಾವ ಮತ್ತು ಅಪ್ರಾಮಾಣ್ಯ) ಪ್ರಾಮಾಣ್ಯಕ್ಕೆ ವಿರೋಧಿಗಳು.

ಹೇತುವಿನಲ್ಲಿರುವ ಎರಡನೆಯ ವಿಶೇಷಣ–'ತದ್–ವ್ಯಾಪ್ಯತ್ವಾವಿಷಯಕತ್ವೇ ಸತಿ' ಎಂದು. ತತ್ ಎಂದರೆ ಪ್ರಾಮಾಣ್ಯ. ಸುಖಜ್ಞಾನದಲ್ಲಿ ಪ್ರಾಮಾಣ್ಯ ಎಂದರೆ 'ಸುಖತ್ವವತಿ ಸುಖತ್ವ ಪ್ರಕಾರಕತ್ವ'. ಅಂತಹ ಪ್ರಾಮಾಣ್ಯಕ್ಕೆ ವ್ಯಾಪ್ಯವಾದ ಧರ್ಮ ಗುಣಜನ್ಯತ್ವ ಸುಖಜ್ಞಾನತ್ವಗಳು. ಅವುಗಳಲ್ಲಿ ಪ್ರಾಮಾಣ್ಯವ್ಯಾಪ್ಯತ್ವವು ಅನುವ್ಯವಸಾಯದಲ್ಲಿ ತೋರುತ್ತಿಲ್ಲ ಎಂದು ಅರ್ಥ.

ಅನುವ್ಯವಸಾಯವು ಪ್ರಾಮಾಣ್ಯಸಂದೇಹಕ್ಕೆ ವಿರೋಧಿ ಎಂದರೆ–ಅನುವ್ಯವಸಾಯವು ಪ್ರಾಮಾಣ್ಯಸಂದೇಹದ ಅನುತ್ಪತ್ತಿಗೆ ವ್ಯಾಪ್ಯವಾಗಿದೆ, ಎಂದು ಅರ್ಥ. ಅಂದರೆ, ಸುಖದ ಅನುವ್ಯವಸಾಯವು ಯಾರ್ಯಾರಿಗೆ ಇದೆಯೋ ಅವರಾರಿಗೂ 'ಸುಖಜ್ಞಾನಂ ಪ್ರಮಾಣಂ, ನ ವಾ' ಎಂಬ ಸಂದೇಹ ಬರುವುದಿಲ್ಲ, ಎಂದು ಅರ್ಥ.

ಹಿಂದೆ ವಿಷಯಗಳಿಗೆ ವಿರೋಧವನ್ನು ಹೇಳಲಾಗಿತ್ತು. ಇಲ್ಲಿ ಜ್ಞಾನಗಳಿಗೆ ವಿರೋಧವನ್ನು ಹೇಳಲಾಗಿದೆ. ತತ್-ತದಭಾವಗಳಿಗೆ ಜ್ಞಾನದ್ವಾರಾ ವಿರೋಧ. ಜ್ಞಾನಗಳಿಗೆ ಒಂದು ಇದ್ದಾಗ ಇನ್ನೊಂದು ಹುಟ್ಟದಿರುವುದೇ ವಿರೋಧ.

## ನ್ಯಾಯದೀಪದಲ್ಲಿ ದೃಷ್ಟಾಂತ ವಿವರಣೆ

**ಪ್ರಾಮಾಣ್ಯಾನುಮಿತಿವದಿತಿ ॥ ಇದಂ ಜ್ಞಾನಂ ಪ್ರಮಾಣಂ, ಸಮರ್ಥ-ಪ್ರವೃತ್ತಿಜನಕತ್ವಾತ್, ಇತಿ ಪ್ರಾಮಾಣ್ಯಾನುಮಿತೌ ಉಕ್ತಸ್ಯ ಹೇತು-ಚತುಷ್ಟಯಸ್ಯ ಸಾಧ್ಯದ್ವಯಸ್ಯ ಚ ಸತ್ತ್ವಾದಿತಿ ಭಾವಃ ॥**

ಮೂಲದಲ್ಲಿ ಪ್ರಾಮಾಣ್ಯಾನುಮಿತಿಯನ್ನು ದೃಷ್ಟಾಂತವನ್ನಾಗಿ ಕೊಡಲಾಗಿದೆ. ನೈಯಾಯಿಕರು ಅನುಮಾನದಿಂದ ಜ್ಞಾನಗತಪ್ರಾಮಾಣ್ಯವು ನಿರ್ಧಾರವಾಗುತ್ತದೆ, ಎನ್ನುತ್ತಾರೆ. 'ನೀರಿದೆ' ಎಂಬ ಜ್ಞಾನಬಂದ ಮೇಲೆ ಹತ್ತಿರಹೋಗಿ ನೀರು ಕುಡಿದ ಮೇಲೆ ಮೊದಲು ಬಂದ ಜಲಜ್ಞಾನದಲ್ಲಿ ಪ್ರಾಮಾಣ್ಯವು ತಿಳಿಯುತ್ತದೆ. ಜ್ಞಾನ ಬಂದ ವ್ಯಕ್ತಿಯು ಮಾಡಿದ ಪ್ರಯತ್ನವು ಸಫಲವಾದ ಮೇಲೆ ಪ್ರಾಮಾಣ್ಯಜ್ಞಾನ. ಇದನ್ನೇ ಸಫಲಪ್ರವೃತ್ತಿ ಜನಕತ್ವಾತ್ ಪ್ರಮಾಣಂ, ಎಂದು ಸಾಧಿಸಲಾಗುತ್ತದೆ.

'ಜಲಜ್ಞಾನಂ ಪ್ರಮಾಣಂ' ಎಂಬ ಅನುಮಿತಿಯು ಪ್ರಕೃತದಲ್ಲಿ ಉದಾಹರಣೆ. ಈ ಜ್ಞಾನದಲ್ಲಿ ಪ್ರಾಮಾಣ್ಯವು ಪ್ರಕಾರವಾಗಿದೆ. ಆದ್ದರಿಂದ ಸಾಧ್ಯಗಳು ಇವೆ, ಉಕ್ತಹೇತುಗಳೂ ಇವೆ.

## ಆದಿಪದಗ್ರಾಹ್ಯ

**ಆದಿಪದೇನ-'ಪ್ರಾಮಾಣ್ಯಂ, ಜ್ಞಾನಗ್ರಾಹಕಮಾತ್ರಗ್ರಾಹ್ಯಮ್, ಅಪ್ರಾ-ಮಾಣ್ಯೇತರ-ಜ್ಞಾನಧರ್ಮತ್ವಾತ್, ಜ್ಞಾನತ್ವವತ್'-ಇತ್ಯಾದಿ ಸುಧೋಕ್ತಾನು-ಮಾನಗ್ರಹಃ ।**

ಮೂಲದಲ್ಲಿರುವ ಆದಿಪದದಿಂದ ಸುಧಾದಲ್ಲಿ ಹೇಳಿದ ಸ್ವತಸ್ತ್ವಸಾಧಕವಾದ ಅನುಮಾನ ವನ್ನು ತೆಗೆದುಕೊಳ್ಳಬೇಕು. ಅದರ ಅಭಿಪ್ರಾಯ-ಪ್ರಾಮಾಣ್ಯವು ಜ್ಞಾನದಲ್ಲಿರುವ ಧರ್ಮ. ಜ್ಞಾನಗತ ಜ್ಞಾನತ್ವದಂತೆ ಅದೂ ಜ್ಞಾನದ ಜೊತೆಯೇ ಗ್ರಾಹ್ಯವಾಗುತ್ತದೆ. ಆದರೆ ಜ್ಞಾನಗತವಾದರೂ ಅಪ್ರಾಮಾಣ್ಯವು ಹೀಗೆ ತಿಳಿಯಲ್ಪಡುವುದಿಲ್ಲ. ಏಕೆಂದರೆ, ವ್ಯವಸಾಯ-ಅನುಪನೀತವಾದ 'ತದಭಾವ'ವು ಅಪ್ರಾಮಾಣ್ಯದಲ್ಲಿ ಸೇರಿದೆ. ಅದನ್ನು ಅನುವ್ಯವಸಾಯವು, ಸನ್ನಿಕರ್ಷಾಭಾವಾತ್ ಗ್ರಹಿಸುವುದಿಲ್ಲ. ಆದರೆ, ಪ್ರಾಮಾಣ್ಯವು ಅಂತಹ ಧರ್ಮಘಟಿತವಲ್ಲ. ಅದು ವ್ಯವಸಾಯದಿಂದ ಉಪನೀತವೂ ಆಗಿದೆ. ಅದನ್ನು ಗ್ರಹಿಸಲು ಅನುವ್ಯವಸಾಯಕ್ಕೆ ಅಲೌಕಿಕ ಸನ್ನಿಕರ್ಷ ಇದೆ.

## ಹೇತುವಿನಲ್ಲಿ ದಲಕೃತ್ಯಚಿಂತನೆ

**अत्राद्ये हेतौ तद्विरुद्धाविषयकेत्युक्तत्वात् प्रामाण्य–विरुद्धाप्रमाण्य-निश्चये, तद्व्याप्यत्वाविषयकेत्युक्तत्वाद्वह्निमत्वाविषयके, तत्संशय-विरोधिनि तद्वाप्यतया धूमनिश्चये, तत्संशयविरोधीत्युक्त-त्वाद्घटादिज्ञाने, प्रत्ययेत्युक्तत्वाद्धर्म्यज्ञाने कोट्यस्मरणे च न व्यभिचारः ।**

ಮೊದಲನೆಯ ಹೇತುವಿನಲ್ಲಿ ಎರಡು ವಿಶೇಷಣಗಳು, ಒಂದು ವಿಶೇಷ್ಯ ಹೀಗೆ ಮೂರು ಅಂಶಗಳಿವೆ.

1. ತದ್ವಿರುದ್ಧಾವಿಷಯಕತ್ವ
2. ತದ್‌ವ್ಯಾಪ್ಯತ್ವಾವಿಷಯಕತ್ವ
3. ತತ್ ಸಂಶಯವಿರೋಧಿ ಪ್ರತ್ಯಯತ್ವ.

ಮೊದಲನೆಯ ವಿಶೇಷಣವನ್ನು ಬಿಟ್ಟರೆ 'ಇದಂ ಜ್ಞಾನಂ ಅಪ್ರಮಾಣಮ್' ಎಂಬ ಸಾಕ್ಷಿಜ್ಞಾನದಲ್ಲಿ ವ್ಯಭಿಚಾರದೋಷ. ಆ ಜ್ಞಾನದಲ್ಲಿ ಪ್ರಾಮಾಣ್ಯ-ವ್ಯಾಪ್ಯತ್ವವು ವಿಷಯವಾಗಿಲ್ಲ. ಆದರೆ, ಪ್ರಾಮಾಣ್ಯ ಸಂಶಯಕ್ಕೆ ಅದು ವಿರೋಧಿಯಾಗಿದೆ. ಅಪ್ರಾಮಾಣ್ಯ ನಿಶ್ಚಯವಿದ್ದಾಗಲೂ 'ಇದಂ ಪ್ರಮಾಣಂ ನ ವಾ' ಎಂಬ ಸಂದೇಹ ಬರುವುದಿಲ್ಲ. ಹೀಗೆ ಹೇತು ಇದೆ. ಪ್ರಾಮಾಣ್ಯ ವಿಷಯಕತ್ವ ಸಾಧ್ಯ ಇಲ್ಲ. ಅದಕ್ಕಾಗಿ ಮೊದಲನೆಯ ವಿಶೇಷಣವು ಬೇಕು. ಆಗ ಆ ಸಾಕ್ಷಿಜ್ಞಾನದಲ್ಲಿ ಹೇತು ಬರುವುದಿಲ್ಲ. ಅಪ್ರಾಮಾಣ್ಯವು ಪ್ರಾಮಾಣ್ಯಕ್ಕೆ ವಿರುದ್ಧವಾದುದರಿಂದ ಆ ಸಾಕ್ಷಿಜ್ಞಾನದಲ್ಲಿ ವಿರುದ್ಧವಿಷಯಕತ್ವವೇ ಇದೆ, ಅವಿಷಯಕತ್ವ ಇಲ್ಲ.

ಎರಡನೆಯ ವಿಶೇಷಣವನ್ನು ಬಿಟ್ಟರೆ 'ವಹ್ನಿವ್ಯಾಪ್ಯಧೂಮವಾನ್' ಎಂಬ ಜ್ಞಾನದಲ್ಲಿ ಸಾಮಾನ್ಯವ್ಯಾಪ್ತಿಗೆ ಭಂಗ ಬರುತ್ತದೆ. ಇಲ್ಲಿ ಸಾಮಾನ್ಯ ವ್ಯಾಪ್ತಿ ಹೀಗೆ—'ಯತ್ ಯದ್ವಿರುದ್ಧಾವಿಷಯಕತ್ವೇ ಸತಿ ಯತ್ಸಂಶಯವಿರೋಧಿಜ್ಞಾನಂ ತತ್ ತದ್ವಿಷಯಮ್' ಎಂದು. ಯತ್ ಪದದಿಂದ ವಹ್ನಿಯನ್ನು ತೆಗೆದುಕೊಂಡಾಗ ಅದಕ್ಕೆ ವಿರುದ್ಧವಾದುದು ವಹ್ನ್ಯಭಾವ. ಅದು 'ವಹ್ನಿವ್ಯಾಪ್ಯಧೂಮವಾನ್' ಎಂಬ ಜ್ಞಾನದಲ್ಲಿ ವಿಷಯವಲ್ಲ. ಆದರೂ 'ವಹ್ನಿಮಾನ್ ವಾ ನ ವಾ' ಎಂಬ ಸಂದೇಹಕ್ಕೆ ಆ ಧೂಮಜ್ಞಾನವು ವಿರೋಧಿಯಾಗಿದೆ. ಹೇತು ಬಂತು. ಆದರೆ ಆ ಜ್ಞಾನದಲ್ಲಿ ವಹ್ನಿಯು ವಿಷಯವಲ್ಲ. ಸಾಧ್ಯ ಬರಲಿಲ್ಲ. ಆದ್ದರಿಂದ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಆ ವಿಶೇಷಣವನ್ನು ಕೊಡಬೇಕು.

ವ್ಯಾಪ್ಯಧರ್ಮ ವಿಷಯಕತ್ವವು ಸಂದೇಹಕ್ಕೆ ವಿರೋಧಿಯಲ್ಲ. ವ್ಯಾಪ್ಯಧರ್ಮವು ವ್ಯಾಪ್ಯತ್ವೇನ

ತೋರಿದಾಗ ಮಾತ್ರ ಸಂದೇಹವು ಬರುವುದಿಲ್ಲ. ಉದಾಹರಣೆಗೆ-'ಶಾಖಾದಿಮಾನ್ ಅಯಂ' ಎಂಬ ಜ್ಞಾನ ಬಂದರೂ 'ಅಯಂ ಸ್ಥಾಣುರ್ವಾ ಪುರುಷೋ ವಾ' ಎಂಬ ಸಂದೇಹವು ಬರುತ್ತದೆ. ಆದ್ದರಿಂದ, 'ವ್ಯಕ್ತತ್ವವ್ಯಾಪ್ಯತ್ವೇನ' ಶಾಖಾಜ್ಞಾನವೇ ಸಂದೇಹಕ್ಕೆ ವಿರೋಧಿ. ಅದಕ್ಕಾಗಿ 'ವ್ಯಾಪ್ಯಾವಿಷಯಕತ್ವೇ ಸತಿ' ಎಂದು ಹೇಳದೆ 'ವ್ಯಾಪ್ಯತ್ವಾವಿಷಯಕತ್ವೇ ಸತಿ' ಎಂದು ಹೇತುವಿನಲ್ಲಿ ವಿಶೇಷಣವನ್ನು ಕೊಡಲಾಗಿದೆ.

ಕೊನೆಯ ವಿಶೇಷ್ಯಭಾಗವನ್ನು ಬಿಟ್ಟರೆ 'ಅಯಂ ಘಟಃ' ಎಂಬ ಜ್ಞಾನದಲ್ಲಿ ವ್ಯಭಿಚಾರ. ಆ ಜ್ಞಾನದಲ್ಲಿ ಪ್ರಾಮಾಣ್ಯವಿರೋಧಿಯಾಗಲೀ ಪ್ರಾಮಾಣ್ಯ ವ್ಯಾಪ್ಯತ್ವವಾಗಲೀ ವಿಷಯವಲ್ಲ. ಹೇತು ಬಂತು. ಆದರೆ, ಪ್ರಾಮಾಣ್ಯವಿಷಯಕತ್ವ ಸಾಧ್ಯ ಇಲ್ಲ. ಅದಕ್ಕಾಗಿ ತತ್ಸಂಶಯವಿರೋಧಿತ್ವವನ್ನು ಕೊಡಬೇಕು. ಘಟಜ್ಞಾನವು ಪ್ರಾಮಾಣ್ಯಸಂದೇಹಕ್ಕೆ ವಿರೋಧಿಯಲ್ಲ.

ಇಲ್ಲಿ ವಿರೋಧಿತ್ವಾತ್ ಎಂದಿಷ್ಟೇ ಹೇಳಿದ್ದರೆ ಸಂದೇಹಕ್ಕೆ ಕಾರಣವಾದ ಧರ್ಮಿಜ್ಞಾನದ ಅಭಾವ, ಕೋಟಿಸ್ಮರಣೆಯ ಅಭಾವದಲ್ಲಿ ವ್ಯಭಿಚಾರ. ಅವೆರಡು ಅಭಾವಗಳಿದ್ದರೂ ಸಂದೇಹ ಹುಟ್ಟುವುದಿಲ್ಲ. ಆದ್ದರಿಂದ ಆ ಅಭಾವಗಳಲ್ಲಿ ಸಂದೇಹಾನುತ್ಪಾದ ವ್ಯಾಪ್ಯತ್ವರೂಪವಾದ ಸಂದೇಹ ಪ್ರತಿಬಂಧಕತ್ವವು ಇದೆ. ಪ್ರಾಮಾಣ್ಯವಿಷಯಕತ್ವ ಇಲ್ಲ. ಅದಕ್ಕಾಗಿ ಸಂದೇಹ-ವಿರೋಧಿ ಪ್ರತ್ಯಯತ್ವಾತ್, ಎಂದು ಹೇಳಬೇಕು. ಆ ಅಭಾವಗಳಲ್ಲಿ ಪ್ರತ್ಯಯತ್ವವು ಇಲ್ಲ. ಆದ್ದರಿಂದ ವ್ಯಭಿಚಾರ ಇಲ್ಲ.

## ನ್ಯಾಯದೀಪ

**ಆದ್ಯವಿಶೇಷಣಸ್ಯ ಯಥಾಶ್ರುತವ್ಯಾಪ್ತ್ಯಾ ಕೃತ್ಯಸಂಭವೇಽಪಿ ದ್ವಿತೀಯ-ವಿಶೇಷಣೇ ತದಸಂಭವಾತ್ 'ಯತ್ ಯದ್ವಿರುದ್ಧಾವಿಷಯಕತ್ವೇ ಸತಿ ಯದ್-ವ್ಯಾಪ್ಯತ್ವಾವಿಷಯಕತ್ವೇ ಸತಿ ಯತ್ಸಂಶಯ-ವಿರೋಧಿಜ್ಞಾನಂ ತತ್ ತದ್ವಿಷಯಕಮ್' ಇತ್ಯಾದಿ ಸಾಮಾನ್ಯವ್ಯಾಪ್ತಿಮುಪೇತ್ಯ ಕೃತ್ಯಮಾಹ-ವಹ್ನಿಮತ್ತ್ವಾವಿಷಕ ಇತಿ ॥**

'ತದ್ವಿರುದ್ಧಾವಿಷಯಕತ್ವೇ ಸತಿ' ಎಂಬ ಮೊದಲನೆಯ ವಿಶೇಷಣಕ್ಕೆ ಪ್ರಕೃತ ಸಾಧ್ಯ- ಹೇತುಗಳ ವ್ಯಾಪ್ತಿಯಲ್ಲಿ ವ್ಯಭಿಚಾರ ಪರಿಹಾರರೂಪವಾದ ಸಾರ್ಥಕ್ಯವನ್ನು ಹೇಳಿದಂತೆ ಎರಡನೆಯ ವಿಶೇಷಣಕ್ಕೆ ಸಾರ್ಥಕ್ಯವನ್ನು ಹೇಳಲು ಬರುವುದಿಲ್ಲ. ಏಕೆಂದರೆ, ಘಟತ್ವವದ್ವಿಶೇಷ್ಯಕತ್ವರೂಪ ಪ್ರಾಮಾಣ್ಯ ವ್ಯಾಪ್ಯವಾದುದು 'ಕಂಬುಗ್ರೀವಾದಿಮದ್ವಿಶೇಷ್ಯಕತ್ವ'. ತದ್ವಿಷಯಕವಾದ 'ಇದಂ ಜ್ಞಾನಂ ಕಂಬುಗ್ರೀವಾದಿಮದ್ವಿಶೇಷ್ಯಕಮ್' ಎಂಬ ನಿಶ್ಚಯವು ಪ್ರಾಮಾಣ್ಯಸಂದೇಹಕ್ಕೆ ವಿರೋಧಿಯಾಗಿದೆ. ಆ ನಿಶ್ಚಯದಲ್ಲಿ ಪ್ರಾಮಾಣ್ಯವಿಷಯತ್ವವೂ ಇದೆ. ಆದ್ದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ. ಅದಕ್ಕಾಗಿ ವಿಶೇಷವ್ಯಾಪ್ತಿಯನ್ನು ಬಿಟ್ಟು ಸಾಮಾನ್ಯವ್ಯಾಪ್ತಿಗೆ ವ್ಯಭಿಚಾರವನ್ನು ಮೂಲದಲ್ಲಿ ತೋರಿಸಲಾಗಿದೆ.

## ನ್ಯಾಯದೀಪ

**'ಅಯಂ ವಹ್ನಿಮಾನ್ ಧೂಮವತ್ತ್ವಾತ್' ಇತ್ಯತ್ರ 'ವಹ್ನಿವ್ಯಾಪ್ಯ–ದೂಮ–ವಾನಯಮ್' ಇತಿ ನಿಶ್ಚಯೇ ಸತಿ 'ಅಯಂ ವಹ್ನಿಮಾನ್ ನ ವಾ' ಇತಿ ಸಂಶಯಾನುದಯೇನ ಉಕ್ತರೂಪಹೇತುಭಾವೇಽಪಿ ವಹ್ನಿಮತ್ತ್ವ–ವಿಷಯಕತ್ವಾಭಾವೇನ ತತ್ರ ಸಾಧ್ಯಾಭಾವಾತ್ ವ್ಯಭಿಚಾರಃ ಇತಿ ಶಂಕಾ ತದ್‌ವ್ಯಾಪ್ಯತ್ವಾವಿಷಯಕತ್ವ ವಿಶೇಷಣಾತ್ ನಿರಸ್ತಾ, ಇತ್ಯರ್ಥಃ ।**

**ವಿಶಿಷ್ಯವ್ಯಾಪ್ತೌ ತು ಘಟತ್ವವದ್ವಿಶೇಷ್ಯಕತ್ವರೂಪಪ್ರಾಮಾಣ್ಯಾವಿಷಯಕೇಽಪಿ ತತ್‌ಸಂಶಯವಿರೋಧಿನಿ ತದ್–ವ್ಯಾಪ್ಯತಯಾ ಕಂಬುಗ್ರೀವಾದಿ–ಮದ್ವಿಶೇಷ್ಯಕತ್ವನಿಶ್ಚಯೇ ವ್ಯಭಿಚಾರೋ ನೇತಿ ಜ್ಞೇಯಮ್ ॥**

'ವಹ್ನಿವ್ಯಾಪ್ಯಧೂಮವಾನಯಂ' ಎಂಬ ನಿಶ್ಚಯವು ವಹ್ನಿಸಂಶಯಕ್ಕೆ ವಿರೋಧಿಯಾಗಿದೆ, ಹೇತು ಬಂತು. ಆದರೆ, ಅದರಲ್ಲಿ ವಹ್ನಿವಿಷಯಕತ್ವ ಇಲ್ಲ, ಸಾಧ್ಯ ಬರಲಿಲ್ಲ. ಹೀಗೆ ವ್ಯಭಿಚಾರ. ಅದರ ಪರಿಹಾರಕ್ಕಾಗಿ 'ವ್ಯಾಪ್ಯತ್ವಾವಿಷಯಕತ್ವೇ ಸತಿ' ಎಂಬ ವಿಶೇಷಣವನ್ನು ಕೊಡಬೇಕು. ಹೀಗೆ, ಸಾಮಾನ್ಯವ್ಯಾಪ್ತಿಯಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಆ ವಿಶೇಷಣವನ್ನು ಸೇರಿಸಲಾಗಿದೆ.

## ನ್ಯಾಯದೀಪ

**ಧರ್ಮ್ಯಜ್ಞಾನೇ=ವ್ಯವಸಾಯರೂಪಿಣೋ ಧರ್ಮಿಣಃ ಜ್ಞಾನಾಭಾವೇ ಇತ್ಯರ್ಥಃ । ಧರ್ಮಿಜ್ಞಾನಸ್ಯ ಸಂಶಯಹೇತುತಯಾ ತದಭಾವಸ್ಯ ಕಾರ್ಯಾನುತ್ಪಾದ–ವ್ಯಾಪ್ಯತ್ವೇನ ತತ್ರ ಹೇತುಸತ್ತ್ವಾತ್ ಇತಿ ಭಾವಃ ।**

**ಧರ್ಮಿಜ್ಞಾನಂ ನ ಸಂಶಯಹೇತುಃ ಇತಿ ಮತೇನ ಆಹ–ಕೋಟೀತಿ ॥ ಕೋಟಿ ಸ್ಮರಣಾಭಾವೇ ಇತ್ಯರ್ಥಃ ।**

**ಏತಚ್ಚೋಪಲಕ್ಷಣಮ್ । ಕುಂಕುಮಗಂಧಾದಿ – ಸಂಶಯ – ವಿರೋಧಿನಿ ತದಭಿವ್ಯಂಜಕ–ಗೋಘೃತಸಂಯೋಗಾದೌ ಚ ನ ವ್ಯಭಿಚಾರಃ ಇತ್ಯಪಿ ಧ್ಯೇಯಮ್ ।**

ಮೂಲದಲ್ಲಿ ಪ್ರತ್ಯಯತ್ವಾಂಶಕ್ಕೆ ಎರಡು ಕಡೆಗಳಲ್ಲಿ ವ್ಯಭಿಚಾರ ಪರಿಹಾರವು ಪ್ರಯೋಜನವೆಂದು ಹೇಳಲಾಗಿದೆ. ಅದು ಉಪಲಕ್ಷಣ. ಬೇರೆ ಕಡೆಯೂ ಸಾರ್ಥಕ್ಯವನ್ನು ತೋರಿಸಬಹುದು– ಕೇಸರಿಯಲ್ಲಿ ಗಂಧದ ಸಂದೇಹ ಬಂದಾಗ ಅದಕ್ಕೆ ಗೋಘೃತ ಸಂಯೋಗವಾದರೆ ಗಂಧವು ವ್ಯಕ್ತವಾಗಿ ಸಂದೇಹ ಪರಿಹಾರವಾಗುತ್ತದೆ. ಹೀಗೆ ಗೋಘೃತ ಸಂಯೋಗದಲ್ಲಿ ಪೂರ್ವೋಕ್ತ ಗಂಧ ಸಂದೇಹ

ವಿರೋಧಿತ್ವ ಇದೆ. ಗಂಧವಿಷಯಕತ್ವ ಇಲ್ಲ. ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ಪ್ರತ್ಯಯತ್ವವನ್ನು ಹೇತುವನ್ನಾಗಿ ಮಾಡಬೇಕು.

## ನ್ಯಾಯದೀಪದಲ್ಲಿ ಅವತಾರಿಕೆ

**ವಿಶಿಷ್ಟಸ್ಯಾಪಿ ಹೇತೋಃ ವ್ಯಭಿಚಾರಮಾಶಂಕ್ಯ ನಿರಾಹ–ನ ಚೇತಿ ॥**

ಪರಿಷ್ಕೃತಹೇತುವಿಗೂ ವ್ಯಭಿಚಾರದೋಷವನ್ನು ಹೇಳಿ ಮುಂದಿನ ಮೂಲದಲ್ಲಿ ಪರಿಹಾರವನ್ನು ನೀಡಲಾಗಿದೆ.

**न चोल्बणविषयान्तरज्ञाने व्यभिचारः। विषयान्तरे मनःसंयोगादिरूपतज्ज्ञानसामग्र्या एव तद्विरोधित्वात् ।**

ಪ್ರಾಮಾಣ್ಯಸಂದೇಹಕ್ಕೆ ಬೇಕಾದ ಎಲ್ಲ ಸಾಮಗ್ರಿಗಳು ಇದ್ದಾಗಲೂ ಮನಸ್ಸು ಉತ್ಕಟವಿಷಯಾಂತರದಲ್ಲಿ ಆಸಕ್ತವಾದಾಗ ಸಂದೇಹವು ಬರುವುದಿಲ್ಲ. ಆದ್ದರಿಂದ ಅಂತಹ ವಿಷಯಾಂತರ ಜ್ಞಾನವು ಸಂದೇಹಕ್ಕೆ ಪ್ರತಿಬಂಧಕವಾಗಿದೆ. ಆದರೆ ಅದರಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲ. ಹೀಗೆ ವ್ಯಭಿಚಾರ, ಎಂದರೆ, ಈ ವ್ಯಭಿಚಾರ ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಅನ್ಯವಿಷಯಕ ಜ್ಞಾನವು ಪ್ರತಿಬಂಧಕವಲ್ಲ, ಆ ಜ್ಞಾನಕ್ಕೆ ಬೇಕಾಗಿರುವ ಸಾಮಗ್ರಿಯೇ ಪ್ರತಿಬಂಧಕ. ಅದರಲ್ಲಿ ಪ್ರತ್ಯಯತ್ವ ಇಲ್ಲ. ಆದ್ದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ.

## ನ್ಯಾಯದೀಪ

**ವಿಶಿಷ್ಟಸ್ಯಾಪಿ ಹೇತೋಃ ವ್ಯಭಿಚಾರಮಾಶಂಕ್ಯ ನಿರಾಹ–ನಚೇತಿ ॥ ಸಾಮಗ್ರ್ಯಾ ಏವೇತಿ ॥ ತಥಾ ಚ ತತ್ರ ಪ್ರತ್ಯಯತ್ವಾಭಾವೇನ ಹೇತೋರಭಾವಾತ್ ಇತಿ ಭಾವಃ ।**

**ನ ಚ ಸಾಮಗ್ರ್ಯಾಃ ವಿರೋಧಿತ್ವೇ ತಜ್ಜನ್ಯ ಜ್ಞಾನಸ್ಯಾಪಿ ಸಾಮಗ್ರೀ–ವಿರೋಧಿತ್ವ ಪ್ರಯುಕ್ತಂ ಸಂಶಯವಿರೋಧಿತ್ವಂ ಸ್ಯಾದೇವ । ವಿರೋಧಿನಿಶ್ಚಯ–ಪ್ರತಿಬಂಧಕತ್ವಸ್ಯ ವಿರೋಧಿನಿಶ್ಚಯ – ಸಾಮಗ್ರೀ – ಪ್ರತಿಬಂಧಕತ್ವ–ಪ್ರಯುಕ್ತತ್ವದರ್ಶನಾತ್ । 'ಯದ್ಧೀಸಾಮಗ್ರೀ ಯತ್ರ ಪ್ರತಿಬಂಧಿಕಾ ತದ್ಧೀರಪಿ ತತ್ರ ಪ್ರತಿಬಂಧಿಕಾ' ಇತಿ ಪಕ್ಷಧರೋಕ್ತೇಃ, ಇತಿ ವಾಚ್ಯಮ್ ।**

**ವಿರೋಧಿನಿಶ್ಚಯಸ್ಯ ಗ್ರಾಹ್ಯಾಭಾವಾವಗಾಹಿತ್ವೇನೈವ ಪ್ರತಿಬಂಧಕತ್ವೇನ ಅನ್ಯಪ್ರಯುಕ್ತತ್ವಾಭಾವಾತ್, ಭಿನ್ನೇ ವಿಷಯೇ ಅನುಮಿತಿಸಾಮಗ್ರ್ಯಾಃ ಪ್ರತ್ಯಕ್ಷಪ್ರತಿಬಂಧಕತ್ವೇऽಪಿ ಅನುಮಿತೇಃ ತದದರ್ಶನಾತ್ ಇತಿ ಭಾವಃ ।**

ಉತ್ಕಟವಿಷಯದ-ಜ್ಞಾನಸಾಮಗ್ರಿಯು ಪ್ರತಿಬಂಧಕವಾದರೆ ಅಂತಹ ಜ್ಞಾನವೂ ಪ್ರತಿಬಂಧಕವಾಗಲೇ ಬೇಕು. ಸಾಮಗ್ರಿಯು ವಿರುದ್ಧವಾಗಿರುವ ಕಾರಣದಿಂದಾಗಿ ಆ ಸಾಮಗ್ರೀ ಜನ್ಯವಾದ ಜ್ಞಾನವೂ ವಿರುದ್ಧವಾಗಿರುತ್ತದೆ. ವಿರೋಧಿನಿಶ್ಚಯವು ಪ್ರತಿಬಂಧಕವಾಗಲು ಆ ನಿಶ್ಚಯಕ್ಕೆ ಜನಕವಾದ ಸಾಮಗ್ರಿಯು ಪ್ರತಿಬಂಧಕವಾಗಿರುವುದೇ ನಿಮಿತ್ತ. ಪಕ್ಷಧರ ಮಿಶ್ರರ ಸಮ್ಮತಿಯೂ ಇದಕ್ಕೆ ಇದೆ—'ಯಾವ ಜ್ಞಾನದ ಸಾಮಗ್ರಿಯು ಯಾವುದಕ್ಕೆ ಪ್ರತಿಬಂಧಕ ವಾಗಿರುತ್ತದೋ ಆ ಸಾಮಗ್ರಿಯಿಂದ ಜನ್ಯವಾದ ಜ್ಞಾನವೂ ಅದಕ್ಕೆ ಪ್ರತಿಬಂಧಕವಾಗುತ್ತದೆ' ಇದು ಅವರ ವಾದ. ಆದ್ದರಿಂದ ಪ್ರಕೃತ ಉತ್ಕಟ ವಿಷಯಾಂತರ ಜ್ಞಾನವೂ ಪ್ರಾಮಾಣ್ಯಸಂದೇಹಕ್ಕೆ ಪ್ರತಿಬಂಧಕವಾಗಿದೆ. ಆದರಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲ. ಆದ್ದರಿಂದ ವ್ಯಭಿಚಾರವು ಇದ್ದೇ ಇದೆ.

ಈ ಆಕ್ಷೇಪಕ್ಕೆ ಹೀಗೆ ಸಮಾಧಾನ– ವಹ್ನಿಮತ್ತಾ ನಿಶ್ಚಯಕ್ಕೆ ವಹ್ನ್ಯಭಾವವತ್ತಾ ನಿಶ್ಚಯವು ವಿರೋಧಿ. ಅದಕ್ಕೆ ಕಾರಣ– ಆ ನಿಶ್ಚಯವು ವಹ್ನಿಗೆ ವಿರುದ್ಧವಾದ ವಹ್ನ್ಯಭಾವವಿಷಯಕವಾಗಿದೆ, ಎನ್ನುವುದು. ಹೊರತು, ಆ ನಿಶ್ಚಯಸಾಮಗ್ರಿಯು ವಹ್ನಿನಿಶ್ಚಯಕ್ಕೆ ಪ್ರತಿಬಂಧಕವಾಗಿರುವುದು ಕಾರಣವಲ್ಲ. ತದಭಾವನಿಶ್ಚಯವು ಅನ್ಯನಿಮಿತ್ತದಿಂದಾಗಿ ಪ್ರತಿಬಂಧಕವಾಗುವುದಿಲ್ಲ. ಸಾಕ್ಷಾತ್ ಪ್ರತಿಬಂಧಕ. ಆದ್ದರಿಂದ ಪಕ್ಷಧರನ ಅಭಿಪ್ರಾಯ ಸಾರ್ವತ್ರಿಕವಲ್ಲ.

ಇನ್ನು ಸಾಮಗ್ರೀ ಪ್ರತಿಬಂಧಕವಾದಾಗ ಸಾಮಗ್ರೀಜನ್ಯವಾದ ಜ್ಞಾನವೂ ಪ್ರತಿಬಂಧಕವಾಗಬೇಕು, ಎನ್ನುವ ನಿರ್ಬಂಧವೇನೂ ಇಲ್ಲ. ಉದಾಹರಣೆಗೆ, ಭಿನ್ನವಿಷಯಕ ಅನುಮಿತಿ ಸಾಮಗ್ರಿಯು ಪ್ರತ್ಯಕ್ಷಕ್ಕೆ ಪ್ರತಿಬಂಧಕ. ಆದರೆ ಅನುಮಿತಿಯು ಪ್ರತಿಬಂಧಕವಲ್ಲ. ಅನುಮಿತ್ಯುತ್ತರದಲ್ಲಿ ಪ್ರತ್ಯಕ್ಷವು ಹುಟ್ಟುತ್ತದೆ. ಅದರಂತೆ, ಪ್ರಕೃತದಲ್ಲಿ ಉಲ್ಬಣವಿಷಯಾಂತರ ಜ್ಞಾನಸಾಮಗ್ರಿಯು ಪ್ರತಿಬಂಧಕವಾದರೂ ತಜ್ಜವೂ ಜ್ಞಾನವು ಪ್ರತಿಬಂಧಕವಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಸ್ಥಳಾಂತರೇऽಪಿ ವ್ಯಭಿಚಾರಮ್ ಆಶಂಕತೇ–ನನ್ವಿತಿ ॥**

ಇನ್ನೊಂದು ಕಡೆಯಲ್ಲಿ ವ್ಯಭಿಚಾರದೋಷವನ್ನು ತೋರಿಸುತ್ತಾರೆ—

**ननु तथापि व्यञ्जकस्य करचरणादेः स्वरूपेणैव ज्ञानं व्यङ्ग्यपुरुषत्वादिजातिसंशयविरोधि । न तु व्याप्यतया । करादिज्ञानस्यालोकवत् स्वरूपेणैव व्यङ्ग्यधीहेतुत्वात् । तच्च न व्यङ्ग्यविषयकमिति तत्र व्यभिचार इति चेन्मैवम् ।**

ಆದರೂ ಸ್ವತಸ್ತ್ವಸಾಧಕಹೇತುವಿಗೆ ವ್ಯಭಿಚಾರದೋಷ ಇದೆ—ಮಬ್ಬುಕತ್ತಲಲ್ಲಿ ಕೈಕಾಲುಗಳ

ಚಲನೆಯನ್ನು ನೋಡಿ 'ಇವನು ಮನುಷ್ಯ' ಎಂಬ ನಿರ್ಧಾರ ಮಾಡುತ್ತೇವೆ. ಹೀಗೆ ಕರ-ಚರಣಾದಿಗಳು ಮನುಷ್ಯತ್ವಜಾತಿಗೆ ವ್ಯಂಜಕ. ಮನುಷ್ಯತ್ವವು ವ್ಯಂಗ್ಯ. ವ್ಯಂಜಕದ ಜ್ಞಾನವು ವ್ಯಂಗ್ಯಸಂದೇಹಕ್ಕೆ ಪ್ರತಿಬಂಧಕ. ಕರ-ಚರಣಾದಿಗಳ ಜ್ಞಾನವು ಮನುಷ್ಯತ್ವಸಂದೇಹಕ್ಕೆ ಪ್ರತಿಬಂಧಕ. ಇಲ್ಲಿ ಕರಾದಿಗಳು ಮನುಷ್ಯತ್ವ ವ್ಯಾಪ್ಯತ್ವೇನ ತಿಳಿಯಲ್ಪಡಬೇಕಿಲ್ಲ. ಕರತ್ವಾದಿ ರೂಪೇಣ ತಿಳಿದರೂ ಸಾಕು. ಮನುಷ್ಯತ್ವ ಸಂದೇಹವು ಬರುವುದಿಲ್ಲ. ಹೀಗೆ 'ಅಯಂ ಕರಾದಿಮಾನ್' ಎಂಬ ಜ್ಞಾನವು ಮನುಷ್ಯತ್ವ ಸಂದೇಹಕ್ಕೆ ಪ್ರತಿಬಂಧಕವಾಗಿದೆ. ಅದು ಮನುಷ್ಯತ್ವ ವಿರೋಧಿ ವಿಷಯಕವೂ ಅಲ್ಲ, (ವ್ಯಾಪ್ಯವಿಷಯಕ ವಾದರೂ ತದ್ವ್ಯಾಪ್ಯತ್ವವಿಷಯಕವೂ ಅಲ್ಲ.) ಆದ್ದರಿಂದ ಆ ನಿಶ್ಚಯದಲ್ಲಿ ಹೇತು ಇದೆ. ಆದರೆ, ತದ್ವಿಷಯಕತ್ವ= ಮನುಷ್ಯತ್ವವಿಷಯಕತ್ವ ಇಲ್ಲ. ಹೀಗೆ ವ್ಯಭಿಚಾರ.

**ಸ್ವರೂಪೇಣೈವ=ಕರ-ಚರಣಾದಿತ್ವೇನೈವ ಇತ್ಯರ್ಥಃ। ವ್ಯಾಪ್ಯತಯಾ= ಪುರುಷತ್ವಾದಿ ವ್ಯಾಪ್ಯತಯಾ ಇತ್ಯರ್ಥಃ।**

**ಹೇತುಸತ್ವಮುಕ್ತ್ವಾ ಸಾಧ್ಯಂ ನೇತ್ಯಾಹ-ತಚ್ಚೇತಿ ॥ ಏತದಪಿ ವ್ಯಭಿಚಾರ-ಚೋದನಂ ಸಾಮಾನ್ಯವ್ಯಾಪ್ತಿಮ್ ಉಪೇತ್ಯೈವ ಇತಿ ಧ್ಯೇಯಮ್।**

ಮೂಲದಲ್ಲಿ ಸ್ವರೂಪೇಣೈವ ಎಂದರೆ ಕರಾದಿಗಳ ಜ್ಞಾನವುಕರತ್ವಾದಿರೂಪಧರ್ಮವತ್ತಯಾ ಬಂದಿದೆ, ಪುರುಷತ್ವವ್ಯಾಪ್ಯತಯಾ ಬಂದಿಲ್ಲ ಎಂದು ಅರ್ಥ. ಈ ವ್ಯಭಿಚಾರಪ್ರದರ್ಶನವೂ ಸಾಮಾನ್ಯವ್ಯಾಪ್ತಿಗೆ, ಪ್ರಕೃತ ವಿಶೇಷವ್ಯಾಪ್ತಿಗಲ್ಲ.

## ವ್ಯಭಿಚಾರ ಪರಿಹಾರ

**व्यङ्ग्यसंशयो हि द्वेधा। व्यञ्जकभूतं यज्ज्ञानकारणं तदभावेन सामग्र्यभावाद्वा यथान्धकारस्थितघटसंशयः। दूरादिदोषाद्वा। यथा स्थाणौ पुरुषसंशयः। तत्राद्ये व्यङ्ग्यनिश्चयसामग्र्येव संशयविरोधिनी। तस्यां च प्रत्ययत्वं नेति न व्यभिचारः। द्वितीये तद्व्याप्यत्वेन करादिज्ञानमेव दोषजन्यसंशयविरोधीति, तद्व्याप्यत्वाविषयकत्वं नेति न व्यभिचारः।**

ವ್ಯಂಗ್ಯವಸ್ತುವಿನ ಸಂದೇಹವು ಎರಡು ರೀತಿಯಿಂದ ಬರುತ್ತದೆ—

1. ವ್ಯಂಗ್ಯವಸ್ತುವಿಗೆ ಯಾವುದು ವ್ಯಂಜಕವೋ, ಅಂದರೆ ವ್ಯಂಗ್ಯದ ಜ್ಞಾನಕ್ಕೆ ಕಾರಣವೋ, ಅದಿಲ್ಲದ ಪ್ರಯುಕ್ತವಾಗಿ ವ್ಯಂಗ್ಯವಸ್ತುವಿನ ನಿಶ್ಚಯಕ್ಕೆ ಬೇಕಾದ ಸಾಮಗ್ರಿಯು ಇಲ್ಲವಾಗುತ್ತದೆ.

ಆದರಿಂದಾಗಿ ವ್ಯಂಗ್ಯದ ಸಂದೇಹ ಬರುತ್ತದೆ. ಉದಾಹರಣೆ—ಕತ್ತಲಕೋಣೆಯಲ್ಲಿ ಬರುವ ಘಟದ ಸಂದೇಹ—'ಇಲ್ಲಿ ಘಟ ಇದೆಯೋ ಇಲ್ಲವೋ' ಎಂದು.

ಇಲ್ಲಿ ವ್ಯಂಗ್ಯ ಘಟ. ವ್ಯಂಜಕ ದೀಪ. ದೀಪವು ಇಲ್ಲದ ಪ್ರಯುಕ್ತ ಘಟನಿಶ್ಚಯಕ್ಕೆ ಬೇಕಾದ ಸಾಮಗ್ರೀ (ಕಾರಣಕಲಾಪ) ಇಲ್ಲ. ಆದರಿಂದಾಗಿ ಘಟದ ಸಂದೇಹ ಬಂತು.

2. ಇನ್ನು ವ್ಯಂಗ್ಯವಸ್ತುವಿನ ನಿಶ್ಚಯಕ್ಕೆ ಬೇಕಾದ ಎಲ್ಲ ಸಾಮಗ್ರಿಗಳಿದ್ದಾಗ ದೂರಸ್ಥತ್ವಾದಿ ದೋಷದಿಂದಾಗಿ ಸಂದೇಹ ಬರುತ್ತದೆ. ಉದಾಹರಣೆಗೆ, ಬೆಳಕು ಇದ್ದಾಗಲೇ ದೂರದಲ್ಲಿರುವ ಕಂಬವನ್ನು ನೋಡಿ-'ಅಯಂ ಸ್ಥಾಣುರ್ವಾ ಪುರುಷೋ ವಾ' ಎಂಬ ಸಂದೇಹ ಬರುತ್ತದೆ. ಇದಕ್ಕೆ ದೋಷವು ಕಾರಣ.

ಇವೆರಡು ಸಂದೇಹ ಕ್ರಮದಲ್ಲಿ ಮೊದಲನೆಯ ಸಂದೇಹಕ್ಕೆ ವ್ಯಂಗ್ಯನಿಶ್ಚಯ ಸಾಮಗ್ರಿಯೇ ಪ್ರತಿಬಂಧಕ. ಸಾಮಗ್ರೀ ಇಲ್ಲದಿರುವುದರಿಂದಾಗಿ ಬಂದ ಸಂದೇಹವು ಸಾಮಗ್ರೀ ಇದ್ದಾಗ ಬರುವುದಿಲ್ಲ. ಉದಾಹರಣೆಗೆ, ಬೆಳಕು ಇಲ್ಲದಾಗ ಘಟಸಂದೇಹ ಬಂತು, ಬೆಳಕಿದ್ದಾಗ ಸಂದೇಹ ಬರುವುದಿಲ್ಲ. ಅದಕ್ಕೆ ಕಾರಣ, ಘಟಸಂದೇಹಕ್ಕೆ ಬೆಳಕನ್ನು ಒಳಗೊಂಡ ಘಟಪ್ರತ್ಯಕ್ಷಸಾಮಗ್ರಿಯು ಪ್ರತಿಬಂಧಕ. ಇದರಲ್ಲಿ ವ್ಯಭಿಚಾರವನ್ನು ಹೇಳುವಂತಿಲ್ಲ. ಏಕೆಂದರೆ, ಅದರಲ್ಲಿ ಸಂಶಯವಿರೋಧಿ ಜ್ಞಾನತ್ವ ಇಲ್ಲ.

ಇನ್ನು ಎರಡನೆಯ ಸಂದೇಹ ಸ್ಥಳದಲ್ಲಿ ದೂರಸ್ಥತ್ವಾದಿದೋಷಗಳು ಇದ್ದಾಗಲೂ ಸಂದೇಹ ಬರದಿದ್ದರೆ ಅದಕ್ಕೆ ಕರಚರಣಾದಿಗಳ ಸ್ವರೂಪೇಣ ಜ್ಞಾನವು ಪ್ರತಿಬಂಧಕವಲ್ಲ. ಪುರುಷತ್ವ ವ್ಯಾಪ್ಯತ್ವೇನ ಕರಾದಿ ಜ್ಞಾನವೇ ಪ್ರತಿಬಂಧಕ. ಅಂತಹ ಜ್ಞಾನದಲ್ಲಿ ವ್ಯಾಪ್ಯತ್ವವಿಷಯಕತ್ವವೇ ಇದೆ, ತದವಿಷಯಕತ್ವ ಇಲ್ಲ. ಆದ್ದರಿಂದ ಹೇತುವೇ ಇಲ್ಲ, ವ್ಯಭಿಚಾರ ಪ್ರಸಕ್ತಿ ಇಲ್ಲ.

## ನ್ಯಾಯದೀಪ

**ವಿವೇಕೇನ ಸಮಾಧಿಂ ವಕ್ತುಂ ಆಹ-ವ್ಯಂಗ್ಯೇತಿ ॥ ನಿಶ್ಚಯಸಾಮಗ್ರ್ಯಭಾವ ಪ್ರಯುಕ್ತೋ ವಾ ಸತ್ಯಾಂ ತಸ್ಯಾಂ ತತ್-ಪ್ರತಿಬಂಧಕ ದೋಷಪ್ರಯುಕ್ತೋ ವಾ ಇತಿ ಭಾವೇನ ತದ್-ದ್ವೈವಿಧ್ಯಂ ವ್ಯನಕ್ತಿ-ವ್ಯಂಜಕೇತಿ ॥ ಜ್ಞಾನೇತಿ= ನಿಶ್ಚಯೇತ್ಯರ್ಥಃ । ಸಾಮಗ್ರೀತಿ ॥ ನಿಶ್ಚಯಸಾಮಗ್ರ್ಯಭಾವಾತ್ ಇತ್ಯರ್ಥಃ । ಯಥೇತಿ ॥ ತತ್ರ ಆಲೋಕರೂಪ ವ್ಯಂಜಕಾಭಾವಾತ್ ಇತಿ ಭಾವಃ । ದೂರಾದಿತಿ ॥ ಸತ್ಯಾಂ ನಿಶ್ಚಯ ಸಾಮಗ್ರ್ಯಾಂ ಇತಿ ಭಾವಃ ।**

**ತದ್ವ್ಯಾಪ್ಯತ್ವ-ಜ್ಞಾನಮೇವೇತಿ ॥ ಅನ್ವಯವ್ಯತಿರೇಕಾಭ್ಯಾಂ ತಥಾ-**

**ವಗಮಾತ್ ಇತಿ ಭಾವಃ । ಅತ ಏವೋಕ್ತಂ ಜ್ಞಪ್ತಿಪ್ರಾಮಾಣ್ಯ-ವಾದಾಂತೇ ರುಚಿದತ್ತೇನ–**

**''ಅನುವ್ಯವಸಾಯತ್ವಸ್ಯ ಪ್ರಾಮಾಣ್ಯನಿಯತಸ್ಯಾಪಿ ತನ್ನಿಯತತ್ವೇನ ಅಗ್ರಹಾತ್ ಕಥಂ ಸಂಶಯನಿವೃತ್ತಿಃ । ನ ಹಿ ವ್ಯಾಪ್ಯಜ್ಞಾನಮಾತ್ರಾತ್ ಸಂಶಯನಿವೃತ್ತಿಃ । ಅನ್ಯಥಾ 'ತೈಲಂ ಪೃಥಿವೀ ನ ವಾ' ಇತಿ ಸಂಶಯಃ ನ ಸ್ಯಾತ್ ।'' ಇತಿ ।**

ಕರಾದಿಗಳ ಸ್ವರೂಪೇಣ ಜ್ಞಾನವು ಸಂದೇಹ ನಿವರ್ತಕವಲ್ಲ, ಪುರುಷತ್ವ ವ್ಯಾಪ್ಯತ್ವೇನ ಜ್ಞಾನವೇ ಪುರುಷತ್ವಸಂದೇಹ ನಿವರ್ತಕ. ಇದು ಅನ್ವಯ ವ್ಯತಿರೇಕ ಸಹಚಾರದಿಂದ ಸಿದ್ಧವಾದ ವಿಷಯ. ತಾರ್ಕಿಕನಾದ ರುಚಿದತ್ತಮಿಶ್ರನೇ ಜ್ಞಪ್ತೌಸ್ವತಸ್ತ್ವ ಪ್ರಕರಣದ ಕೊನೆಯಲ್ಲಿ (ಪುಟ 301) ಇದನ್ನು ದೃಷ್ಟಾಂತ ಸಹಿತವಾಗಿ ಸಮರ್ಥಿಸಿದ್ದಾನೆ—

'ಸ್ವತಸ್ತ್ವಪಕ್ಷದಲ್ಲಿ ಅನುವ್ಯವಸಾಯವು ನಿಯತಪ್ರಮಾಣ. ಅರ್ಥಾತ್ ಪ್ರಾಮಾಣ್ಯ ವ್ಯಾಪ್ಯಧರ್ಮ ಅನುವ್ಯವಸಾಯತ್ವ. ಇಂತಹ ಅನುವ್ಯವಸಾಯತ್ವಧರ್ಮವು ಸ್ವರೂಪೇಣ ಅನುವ್ಯವಸಾಯದಲ್ಲಿ ಗೃಹೀತವಾದರೂ 'ಅನುವ್ಯವಸಾಯಃ ಪ್ರಮಾಣಂ ನ ವಾ' ಎಂಬ ಸಂದೇಹವು ನಿವಾರಣೆಯಾಗುವುದಿಲ್ಲ. ಅದು ವ್ಯಾಪ್ಯತ್ವೇನ ಗೃಹೀತವಾಗಬೇಕು. ಸ್ವರೂಪೇಣ ಜ್ಞಾನವೇ ಸಂದೇಹ ಪ್ರತಿಬಂಧಕವಾಗುವುದಾದಲ್ಲಿ 'ತೈಲವು ಪೃಥಿವೀ ಹೌದೋ ಅಲ್ಲವೋ' ಎಂಬ ಸಂದೇಹ ಯಾರಿಗೂ ಬರಬಾರದು. ಏಕೆಂದರೆ, ತೈಲತ್ವವು ವಸ್ತುತಃ ಪೃಥಿವೀತ್ವ ವ್ಯಾಪ್ಯಧರ್ಮ. ಅದು ಗೃಹೀತವಾದರೂ ವ್ಯಾಪ್ಯತ್ವೇನ ಗೃಹೀತವಾಗಿಲ್ಲದ ಕಾರಣ ಸಂದೇಹ ಬರುತ್ತದೆ'. ಇದು ರುಚಿದತ್ತಮಿಶ್ರರ ಸಮರ್ಥನೆ.[1]

## ಅಸಿದ್ಧಿಶಂಕಾ ನಿರಾಸ–ನ್ಯಾಯದೀಪದಲ್ಲಿ ಅವತಾರಿಕೆ

**ನನು ಘಟತ್ವಾದಿಪ್ರಕಾರಕಾನುವ್ಯಸಾಯತ್ವಸ್ಯ ವಲ್ಮೀಕಾದೌ ಘಟತ್ವವದ್-ವಿಶೇಷ್ಯಕತ್ವಾದಿರೂಪ-ಪ್ರಾಮಾಣ್ಯವ್ಯಭಿಚಾರೇऽಪಿ ಅತ್ರ ವಿವಕ್ಷಿತ-ಸುಖಾನುಭವತ್ವಾದಿರೂಪ ವ್ಯವಸಾಯಧರ್ಮಸ್ಯ ಸುಖತ್ವವದ್ವಿಶೇಷ್ಯಕತ್ವ-ರೂಪ ಪ್ರಾಮಾಣ್ಯಾಭಿಚಾರೇಣ ತದ್-ವ್ಯಾಪ್ಯತ್ವವಿಷಯಕತ್ವಂ ತದನು-ವ್ಯವಸಾಯಸ್ಯ ಅಸ್ತ್ಯೇವ ಇತಿ ಭಾವೇನ ಶಂಕತೇ–ನಚೇತಿ ॥**

1. ಮಣಿಕಾರ ಮೂಲದಲ್ಲಿ 'ಏವಂ ಅನುವ್ಯವಸಾಯಸ್ಯ(ತ್ವಸ್ಯ) ಪ್ರಾಮಾಣ್ಯನಿಯತ್ವಾತ್ ನ ಪ್ರಾಮಾಣ್ಯಶಂಕಾ' ಎಂದಿರುತ್ತಾನೆ. ಅದರ ಮೇಲೆ ರುಚಿದತ್ತಮಿಶ್ರರು ಈ ಆಕ್ಷೇಪವನ್ನು ಮಾಡಿ ಕೊನೆಗೆ–''ಅನುಪಪನ್ನೋऽಯಂ ಗ್ರಂಥಃ, ತಸ್ಮಾದೇತತ್ ಚಿಂತ್ಯಮ್।'' 'ಮಣಿ ವಾಕ್ಯವು ತಪ್ಪು' ಎಂದು ನಿರೂಪಿಸಿದ್ದಾನೆ.

**ವ್ಯಾಪ್ಯತ್ವೇ ಸತ್ಯಪಿ ತದ್ವಿಷಯಕತ್ವಂ ನಾವಶ್ಯಕಮಿತಿ ಭಾವೇನ ಪರಿಹರತಿ– ಸುಖೇತಿ ॥ ದರ್ಶನಾದಿತಿ ॥ ವ್ಯಾಪ್ಯತ್ವಾನುಸಂಧಾನಹೀನ– ಬಾಲಮುಗ್ಧಾದೌ ಇತಿ ಭಾವಃ ।**

ವಲ್ಮೀಕವನ್ನು ನೋಡಿ 'ಅಯಂ ಘಟಃ' ಎಂಬ ಅನುಭವ ಬಂದಾಗ ಆ ಅನುಭವದಲ್ಲಿ ಘಟತ್ವಪ್ರಕಾರತ್ವ ಇದೆ, ಆದರೆ, ಘಟತ್ವವದ್ ವಿಶೇಷ್ಯಕತ್ವ ಇಲ್ಲ. ಹೀಗೆ ಘಟತ್ವಪ್ರಕಾರಕತ್ವವು ಘಟತ್ವವದ್ ವಿಶೇಷ್ಯಕತ್ವ ವ್ಯಭಿಚಾರಿಯಾಗಿದೆ. ಆದರೆ ಸುಖಾನುಭವವು ಎಂದೂ ಭ್ರಾಂತಿಯಾಗಿಲ್ಲ ವಾದ ಕಾರಣ ಸುಖತ್ವಪ್ರಕಾರಕತ್ವ ಇರುವ ಜ್ಞಾನಗಳೆಲ್ಲವೂ ಸುಖತ್ವವದ್ ವಿಶೇಷ್ಯಕವಾಗಿರುತ್ತವೆ. ಆದ್ದರಿಂದ ಸುಖತ್ವವದ್‌ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯಕ್ಕೆ ವ್ಯಾಪ್ಯವಾದ ಧರ್ಮ ಸುಖತ್ವಪ್ರಕಾರಕತ್ವ. ಅಂತಹ ಧರ್ಮವು ಸುಖಾನುಭವದ ಅನುವ್ಯವಸಾಯದಲ್ಲಿ ವಿಷಯವಾಗಿದೆ. ಆದ್ದರಿಂದ ಅದರಲ್ಲಿ 'ವ್ಯಾಪತ್ವಾವಿಷಯಕತ್ವ' ಎಂಬ ಹೇತ್ವಂಶವು ಇಲ್ಲ, ಅಸಿದ್ಧಿದೋಷ. ಈ ದೋಷವನ್ನು ಹೇಳಿ ಮೂಲದಲ್ಲಿ ಪರಿಹರಿಸಲಾಗಿದೆ.

ಈ ಆಕ್ಷೇಪಕ್ಕೆ ಮೂಲದಲ್ಲಿ ಕೊಟ್ಟಿರುವ ಸಮಾಧಾನ–ಸುಖತ್ವ ಪ್ರಕಾರಕತ್ವಧರ್ಮವು ಪ್ರಾಮಾಣ್ಯವ್ಯಾಪ್ಯವಾಗಿದ್ದರೂ ಅದನ್ನು ಮುಗ್ಧರು ವ್ಯಾಪ್ಯತ್ವೇನ ತಿಳಿದಿರಬೇಕಾಗಿಲ್ಲ. (ಆದರೆ ಅವರಿಗೂ ಪ್ರಾಮಾಣ್ಯಸಂದೇಹ ಸುಖಜ್ಞಾನದಲ್ಲಿ ಬರುವುದಿಲ್ಲ.) ಆದ್ದರಿಂದ ಅವರ ಸುಖಾನುಭವದಲ್ಲಿ ವ್ಯಾಪತ್ವಾವಿಷಯಕತ್ವ ಹೇತುವು ಅಸಿದ್ಧವಲ್ಲ.

**न च तव्याप्यत्वाविषयकत्वमसिद्धम् । सुखसाक्षात्कारत्वादेः प्रामाण्यव्याप्यत्वाग्रहणेऽसंशयर्दनात् ।**

ವ್ಯವಸಾಯ ವಿಷಯಕವಾದ ಸಾಕ್ಷಿಜ್ಞಾನವು ಪ್ರಾಮಾಣ್ಯವ್ಯಾಪ್ಯತ್ವ–ಅವಿಷಕ ಎಂದು ನಿರ್ಧರಿಸುವುದು ಹೇಗೆ? ಅರ್ಥಾತ್, ಅದು ವ್ಯಾಪ್ಯತ್ವವನ್ನು ವಿಷಯೀಕರಿಸಿದೆ, ಎಂದೇ ಹೇಳಬಹುದು. ಆದ್ದರಿಂದ ಹೇತ್ವಸಿದ್ಧಿದೋಷ.

ಹೀಗೆ ಸಂದೇಹಿಸಬಾರದು. ಮುಗ್ಧರಿಗೆ ಸುಖಸಾಕ್ಷಾರತ್ವವು ಪ್ರಾಮಾಣ್ಯವ್ಯಾಪ್ಯ, ಎಂಬ ಪರಿಜ್ಞಾನವಿರುವುದಿಲ್ಲ. ಅಂತಹವರೂ ಸುಖಜ್ಞಾನ ಪ್ರಾಮಾಣ್ಯದ ಬಗ್ಗೆ ಸಂದೇಹಿಸುವುದಿಲ್ಲ. ಆದರ ಅರ್ಥ, ಸುಖಜ್ಞಾನದಲ್ಲಿ ಪ್ರಾಮಾಣ್ಯಗೃಹೀತವಾಗಿದೆ ಎಂದು.

## ವಿಶೇಷ್ಯಾಸಿದ್ಧಿ ಶಂಕಾಪರಿಹಾರ–ನ್ಯಾಯದೀಪದಲ್ಲಿ ಅವತಾರಿಕೆ

**ವ್ಯಾಪ್ಯತ್ವಾವಿಷಯಕತ್ವಾಂಶೇ ಅಸಿದ್ಧಿಂ ನಿರಸ್ಯ, ತದ್ವಿರುದ್ಧಾವಿಷಯಕತ್ವಾಂಶೇ ವಿವಾದಾಭಾವಾತ್ ಸಂಶಯವಿರೋಧಿತ್ವಾಂಶೇ ತಾಮ್ ಆಹ–ನ ಚ**

**ಧರ್ಮೀತಿ ॥ ಕೋಟ್ಯಸ್ಮರಣ – ವಿಷಯಾಂತರಸಂಚಾರಾದಿಃ ಆದಿ-ಪದಾರ್ಥಃ ।**

ಹಿಂದೆ ಹೇತುಘಟಕವಾದ 'ವ್ಯಾಪ್ಯತ್ವಾವಿಷಯಕತ್ವವು' ಅನುವ್ಯವಸಾಯದಲ್ಲಿ ಅಸಿದ್ಧ, ಎಂಬ ಆಕ್ಷೇಪವನ್ನು ಪರಿಹಾರಮಾಡಲಾಗಿದೆ. ಅನಂತರ ಇರುವ ವಿಶೇಷಣ 'ವಿರುದ್ಧಾವಿಷಯಕತ್ವ'. ಈ ವಿಷಯದಲ್ಲಿ ವಿವಾದವೇ ಇಲ್ಲ, ಏಕೆಂದರೆ, 'ಸುಖಂ ಅನುಭವಾಮಿ' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯಕ್ಕೆ ವಿರುದ್ಧವಾದುದು ವಿಷಯವಲ್ಲ, ಎನ್ನುವುದು ಸ್ಪಷ್ಟ, ಆದಕ್ಕಾಗಿ ಅದನ್ನು ಬಿಟ್ಟು 'ಸಂಶಯವಿರೋಧಿತ್ವ' ಎಂಬ ಹೇತುಭಾಗವು ಅನುವ್ಯವಸಾಯದಲ್ಲಿ ಇಲ್ಲ, ಆದರಿಂದ ಅಸಿದ್ಧಿ, ಎಂದು ಆಕ್ಷೇಪವನ್ನು ಮೂಲದಲ್ಲಿ ಮಾಡಲಾಗಿದೆ.

ಮೂಲದಲ್ಲಿ 'ಧರ್ಮಿಜ್ಞಾನಾದಿ-ಅಭಾವ' ಎಂಬಲ್ಲಿ ಆದಿಪದದಿಂದ ಕೋಟಿಸ್ಮರಣೆ ಇಲ್ಲದಿರುವುದು, ಮನಸ್ಸು ಇತರ ವಿಷಯಗಳಲ್ಲಿ ಆಸಕ್ತಿ ತಾಳುವುದು, ಇವನ್ನು ಪರಿಗ್ರಹಿಸಬೇಕು. ಇವುಗಳೂ ಸಂದೇಹ ಬರದಿರಲು ಕಾರಣವಾಗುತ್ತವೆ ಎಂದು ಅರ್ಥ.

**न च धर्मिज्ञानाद्यभावादेवासंशयात् संशयविरोधित्वमसिद्धमिति वाच्यम् । सुखादिज्ञानरूपधर्मिज्ञाने ज्ञानत्वरूपसाधारणधर्मदर्शने दैवात् कोटिस्मरणे विषयान्तरासंचारे च सत्यप्यसंशयदर्शनात् ।**

ಸಂದೇಹ ಬರುವುದಿಲ್ಲ ಎನ್ನುವ ಕಾರಣದಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ವಿಷಯಕತ್ವವನ್ನು ಕಲ್ಪಿಸಿ ಅದು ಸಂದೇಹಕ್ಕೆ ವಿರೋಧಿಯಾಗಿದೆ ಎನ್ನುವ ಅನಿವಾರ್ಯತೆ ಇಲ್ಲ. ಸಂದೇಹಕ್ಕೆ ಬೇಕಾಗಿರುವ ಸಾಮಗ್ರಿಯು ಇಲ್ಲದಿರುವುದರಿಂದಲೇ ಸಂದೇಹವು ಬರದಿರಬಹುದು. ಆದ್ದರಿಂದ ಅನುವ್ಯವಸಾಯದಲ್ಲಿ ಸಂದೇಹ ವಿರೋಧಿತ್ವವು ಅಸಿದ್ಧ, ಎಂದು ಪ್ರಶ್ನೆ.

ಇದು ಸರಿಯಲ್ಲ, ಸಂದೇಹಕ್ಕೆ ಕಾರಣ—ಧರ್ಮಿಜ್ಞಾನ ಮತ್ತು ಕೋಟಿಸ್ಮರಣೆ. ಇವೆರಡೂ ಪ್ರಕೃತದಲ್ಲಿ ಇವೆ. 'ಸುಖಜ್ಞಾನಂ ಪ್ರಮಾಣಂ ನ ವಾ' ಎಂಬ ಸಂದೇಹದಲ್ಲಿ ಧರ್ಮಿ ಸುಖಜ್ಞಾನ. ಆ ಜ್ಞಾನವು ಅನುವ್ಯವಸಾಯದಿಂದ ಗೃಹೀತವಾಗಿದೆ. ಧರ್ಮಿಜ್ಞಾನ ಇದೆ. ಆ ಜ್ಞಾನದಲ್ಲಿ ಜ್ಞಾನತ್ವರೂಪವಾದ ಪ್ರಾಮಾಣ್ಯಾ-ಪ್ರಾಮಾಣ್ಯ-ಉಭಯಕೋಟಿ ಸಹಚರಿತ-ಸಾಧಾರಣ ಧರ್ಮಜ್ಞಾನವೂ ಇದೆ. ಇದರ ಸಹಕಾರದಿಂದ ದೈವಾತ್ ಪ್ರಾಮಾಣ್ಯ-ಅಪ್ರಾಮಾಣ್ಯ ರೂಪಕೋಟಿ ಸ್ಮರಣೆಯೂ ಇದೆ. ಹೀಗೆ ಸಂದೇಹಕ್ಕೆ ಬೇಕಾದ ಸಾಮಗ್ರಿಗಳೆಲ್ಲವೂ ಇರುವಾಗಲೂ ಸಂದೇಹ ಬರುತ್ತಿಲ್ಲ. ಆದರಿಂದ ಅನಿವಾರ್ಯವಾಗಿ ಪ್ರತಿಬಂಧಕವನ್ನೇ ಕಲ್ಪಿಸಬೇಕು. ಅಂತಹ ಪ್ರತಿಬಂಧಕ ಪ್ರಕೃತದಲ್ಲಿ ಪ್ರಾಮಾಣ್ಯನಿಶ್ಚಯಾತ್ಮಕವಾದ ಅನುವ್ಯವಸಾಯ. ಹೀಗೆ ಅನುವ್ಯವಸಾಯಕ್ಕೆ ಪ್ರತಿಬಂಧಕತ್ವವು ಪರಿಶೇಷಾತ್ ಸಿದ್ಧವಾಗುತ್ತದೆ.

## ನ್ಯಾಯದೀಪ

**ಧರ್ಮಿಜ್ಞಾನೇ ಇತಿ ॥ ಧರ್ಮಿಣಃ ಜ್ಞಾನೇ ಸತೀತ್ಯನೇನ ಅನ್ವಯಃ। ಧರ್ಮ್ಯಾಖ್ಯಜ್ಞಾನೇ ಇತಿ ವ್ಯಾಖ್ಯಾನೇ ತು ಸತಿಪದೇನ ನ ಅನ್ವಯಃ । ಅಪಿ ತು ಸಾಧಾರಣಧರ್ಮದರ್ಶನಪದೇನ ।**

**ನ ಚ ಅಸ್ಮಿನ್ ಪಕ್ಷೇ ಧರ್ಮಿಭೂತಜ್ಞಾನಾನುಕ್ತಿಃ। ಧರ್ಮಿಜ್ಞಾನಸ್ಯ ಸಾಧಾರಣಧರ್ಮ ದರ್ಶನತ್ವೇನೈವ ಹೇತುತ್ವಾತ್, ತೇನೈವ ತದುಕ್ತೇಃ ಇತಿ ॥**

ಮೂಲದಲ್ಲಿ 'ಧರ್ಮಿಜ್ಞಾನೇ' ಎಂದರೆ 'ಧರ್ಮಿಣಃ ಜ್ಞಾನೇ' ಎಂದರ್ಥ. ಅದಕ್ಕೆ 'ಸತ್ಯಪ್ಯಸಂಶಯ' ಎಂಬಲ್ಲಿರುವ 'ಸತಿ' ಪದದೊಂದಿಗೆ ಅನ್ವಯ. 'ಸುಖಜ್ಞಾನರೂಪವಾದ ಧರ್ಮಿಯ ಜ್ಞಾನ(ಅನುವ್ಯವಸಾಯ) ಇರುವಾಗ' ಎಂದು ಅರ್ಥ. ಅಥವಾ 'ಧರ್ಮಿ ಚ ತತ್ ಜ್ಞಾನಂ ಚ' ಎಂದು ಕರ್ಮಧಾರಯವನ್ನಾದರೂ ಮಾಡಬಹುದು. ಆಗ ಸಂಶಯದಲ್ಲಿ ಧರ್ಮಿಯಾಗಿರುವ 'ಸುಖ ಜ್ಞಾನದಲ್ಲಿ' ಎಂದರ್ಥ. ಹೀಗೆ ಮಾಡಿದಾಗ 'ಸತಿ' ಪದದೊಂದಿಗೆ ಅನ್ವಯವಲ್ಲ, 'ಸಾಧಾರಣ ಧರ್ಮದರ್ಶನ' ಎಂಬ ಉತ್ತರಪದದೊಂದಿಗೆ ಅನ್ವಯ. ಆಗ, 'ಸುಖಜ್ಞಾನರೂಪವಾದ ಧರ್ಮಿಯಲ್ಲಿ ಸಾಧಾರಣ ಧರ್ಮದರ್ಶನವಿದ್ದಾಗ' ಎಂದು ಭಾವ.

ಎರಡನೆಯ ಪಕ್ಷದಲ್ಲಿ ಸಾಧಾರಣಧರ್ಮಜ್ಞಾನ ಇದೆ ಎಂದು ಮಾತ್ರ ಹೇಳಿದಂತಾಯಿತು. ಧರ್ಮಿಜ್ಞಾನ ಇದೆ, ಎನ್ನುವುದನ್ನು ಹೇಳಿದಂತಾಗಿಲ್ಲ, ಎನ್ನಬಾರದು. ಸಾಧಾರಣ ಧರ್ಮಜ್ಞಾನವೇ ಧರ್ಮಿಜ್ಞಾನರೂಪವೂ ಆಗಿದೆ. 'ಸುಖಜ್ಞಾನವಾನಹಮ್' ಎಂದು ಜ್ಞಾನಬಂದಾಗ ಜ್ಞಾನತ್ವ ಜ್ಞಾನವೂ ಸುಖಜ್ಞಾನದ ಜ್ಞಾನವೂ ಬಂದಂತೆಯೇ ಆಗುತ್ತದೆ.

## ನ್ಯಾಯದೀಪ

**ಅಸಂಶಯೇತಿ ॥ ತಸ್ಯ ಪ್ರಾಮಾಣ್ಯನಿಶ್ಚಯ ನಿಬಂಧನತ್ವಾಭಾವೇ ಕದಾಚಿತ್ ಕಸ್ಯಚಿತ್ ತತ್ರ ಧರ್ಮಿಜ್ಞಾನಾದಿ–ಉದಯಸಂಭವೇನ 'ರೂಪ್ಯಜ್ಞಾನಂ ಪ್ರಮಾ ನ ವಾ' ಇತಿವತ್ 'ಸುಖಜ್ಞಾನಂ ಪ್ರಮಾ ನ ವಾ' ಇತಿ ಸಂಶಯಃ ಸ್ಯಾತ್ । ಕದಾಪಿ ತದದರ್ಶನಾತ್ ಪ್ರಾಮಾಣ್ಯನಿಶ್ಚಯನಿಮಿತ್ತ ಏವ ತದಭಾವಃ ಇತಿ ತದ್ವಿರೋಧಿತ್ವಂ ತಸ್ಯ ನಾಸಿದ್ಧಮ್ ಇತಿ ಭಾವಃ ॥**

ಸುಖಜ್ಞಾನದಲ್ಲಿ ಪ್ರಾಮಾಣ್ಯಸಂದೇಹಾಭಾವಕ್ಕೆ ಪ್ರಾಮಾಣ್ಯನಿಶ್ಚಯವು ಪ್ರತಿಬಂಧಕ ಎಂದು ಹೇಳದೇ ಇದ್ದಲ್ಲಿ ಯಾವಾಗಲೋ ಒಮ್ಮೆ, ಯಾರಾದರೊಬ್ಬರಿಗಾದರೂ ಧರ್ಮಿಜ್ಞಾನಾದಿ ಸಂದೇಹಸಾಮಗ್ರಿಗಳು ಇರುವ ಸಂಭವದಿಂದ 'ರಜತಜ್ಞಾನವು ಪ್ರಮಾ ಹೌದೋ ಅಲ್ಲವೋ' ಎಂಬ

ಸಂದೇಹ ಬರುವಂತೆ 'ಸುಖಜ್ಞಾನವು ಪ್ರಮಾ ಹೌದೋ ಅಲ್ಲವೋ' ಎಂಬ ಸಂದೇಹವೂ ಬರಬೇಕಾದೀತು. ಆದರೆ ಎಂದೂ ಯಾರಿಗೂ ಇಂತಹ ಸಂದೇಹ ಬರದಿರುವ ಕಾರಣ ಪ್ರಾಮಾಣ್ಯವು ನಿಶ್ಚಯವಾಗಿರುವುದೇ ಸಂದೇಹಾಭಾವಕ್ಕೆ ಕಾರಣ ಎಂದು ನಿರ್ಧಾರವಾಗುತ್ತದೆ. ಇದರಿಂದಾಗಿಯೇ ಸುಖಜ್ಞಾನದ ಸಾಕ್ಷಿಯು ಸಂದೇಹಕ್ಕೆ ವಿರೋಧಿ ಎಂದೂ ಸಿದ್ಧವಾಗುತ್ತದೆ. ಆದ್ದರಿಂದ ಅಸಿದ್ಧಿದೋಷ ಇಲ್ಲ.

## ಅಪ್ರಯೋಜಕತ್ವಶಂಕಾನಿರಾಸ

**नचाद्यो हेतुरप्रयोजकः । ज्ञानस्य तत्संशयविरोधित्वं हि तन्निश्चयत्वेन वा तदभावनिश्चयत्वेन वा तदभावव्याप्यनिश्चयत्वेन वा तव्द्याप्यनिश्चयत्वेन वेति चतुर्धा । तत्र द्वितीयतृतीययोस्तद्विरुद्धाविषयकत्वविशेषणेन, चतुर्थस्य तव्द्याप्यत्वाविषयकत्वविशेषणेन निरस्ततया हेतोराद्यं प्रामाण्यनिश्चयत्वरूपं साध्यं विनानुपपत्तेः ।**

ಹಿಂದಿನ ಅನುಮಾನದ ಮೊದಲನೆಯ ಹೇತುವು ಅನುವ್ಯವಸಾಯಕ್ಕೆ ಪ್ರಾಮಾಣ್ಯ ವಿಷಯಕತ್ವ ಸಾಧನೆಗೆ ಅಪ್ರಯೋಜಕ ಎಂದು ಹೇಳಬಾರದು. ಏಕೆಂದರೆ, ಒಂದು ಜ್ಞಾನವು ಸಂದೇಹಕ್ಕೆ ಪ್ರತಿಬಂಧಕವಾಗಿರುವುದಕ್ಕೆ ನಾಲ್ಕು ಕಾರಣಗಳಿವೆ.

1. ಆ ಜ್ಞಾನವು ಸಂದೇಹವಿಷಯವಾದ ವಸ್ತುವಿನ ನಿಶ್ಚಯರೂಪವಾಗಿರುವುದು.
2. ಅಥವಾ ಸಂದೇಹಾಸ್ಪದವಸ್ತುವಿನ ಅಭಾವದ ನಿಶ್ಚಯಾತ್ಮಕವಾಗಿರುವುದು.
3. ಇಲ್ಲವೆ, ಅಂತಹವಸ್ತುವಿನ ಅಭಾವವ್ಯಾಪ್ಯತ್ವವಿಷಯಕ ನಿಶ್ಚಯವಾಗಿರುವುದು.
4. ಅಥವಾ, ಆ ವಸ್ತುವಿಗೆ ವ್ಯಾಪ್ಯತ್ವವಿಷಯಕವಾದ ನಿಶ್ಚಯಾತ್ಮಕವಾಗಿರುವುದು.

ಉದಾಹರಣೆಗೆ, 'ಅಯಂ ಪುರುಷಃ ನ ವಾ' ಎಂಬ ಸಂದೇಹಕ್ಕೆ–

1. ಅಯಂ ಪುರುಷ ಏವ, ಎಂಬ ನಿಶ್ಚಯ.
2. ಅಯಂ ನೈವ ಪುರುಷಃ, ಎಂಬ ನಿಶ್ಚಯ.
3. ಅಯಂ ಪುರುಷತ್ವಾಭಾವವ್ಯಾಪ್ಯ ಶಾಖಾದಿವಾನ್, ಎಂಬ ನಿಶ್ಚಯ.
4. ಅಯಂ ಪುರುಷತ್ವವ್ಯಾಪ್ಯಕರಾದಿಮಾನ್, ಎಂಬ ನಿಶ್ಚಯ.

ಈ ನಾಲ್ಕೂ ನಿಶ್ಚಯಗಳೂ ಪ್ರತಿಬಂಧಕಗಳು.

ಪ್ರಕೃತ ಸುಖಸಾಕ್ಷಿಯು ಪ್ರಾಮಾಣ್ಯವಿಷಯಕ, ಎಂದು ಸಾಧಿಸಲು ಹೇಳಿರುವ ಹೇತುವಿನಲ್ಲಿ

'ತದ್ವಿರುದ್ಧಾವಿಷಯಕತ್ವೇ ಸತಿ' ಎಂಬ ವಿಶೇಷಣವಿರುವುದರಿಂದ ಎರಡು ಮತ್ತು ಮೂರನೆಯ ಸಂಭವಗಳನ್ನು ನಿರಾಕರಿಸಲಾಗಿದೆ. ತದಭಾವ ಮತ್ತು ತದಭಾವವ್ಯಾಪ್ಯಗಳು ತದ್ವಿರೋಧಿಗಳಾಗಿರುವುದರಿಂದ. ನಾಲ್ಕನೆಯ ಸಂಭವವನ್ನು ನೇರವಾಗಿ 'ತದ್-ವ್ಯಾಪ್ಯತ್ವಾವಿಷಯಕತ್ವೇ ಸತಿ' ಎಂಬ ವಿಶೇಷಣದಿಂದ ನಿರಾಕರಿಸಲಾಗಿದೆ. ಅಲ್ಲಿಗೆ, ಉಳಿದಿರುವುದು ಮೊದನೆಯ ಸಂಭವ ಒಂದೇ. ಆದ್ದರಿಂದ ಸಾಕ್ಷಿಗೆ ಪ್ರಾಮಾಣ್ಯ ಸಂದೇಹವಿರೋಧಿತ್ವವು ಪ್ರಾಮಾಣ್ಯವಿಷಯಕತ್ವಂ ವಿನಾ ಸಾಧ್ಯವಿಲ್ಲ. ಹೀಗೆ, ಈ ಅನುಮಾನದಲ್ಲಿ 'ಹೇತುರಸ್ತು ಸಾಧ್ಯಂ ಮಾಸ್ತು' ಎಂಬ ಅಪ್ರಯೋಜಕ ಶಂಕೆಗೆ ಆಸ್ಪದವಿಲ್ಲ.

## ನ್ಯಾಯದೀಪ

**ಏವಂ ವ್ಯಭಿಚಾರಸಿದ್ಧೀ ನಿರಸ್ಯ ವಿಪಕ್ಷೇ ಬಾಧಕಾಭಾವದೋಷಂ ಚ ನಿರಾಹ-ನ ಚಾದ್ಯ ಇತಿ ॥ ವಿಪಕ್ಷೇ ಹೇತೂಚ್ಛಿತ್ತಿಂ, ಸಂಭಾವಿತಪಕ್ಷಾನ್ ಉಕ್ತ್ವಾ ಇತರವ್ಯವಚ್ಛೇದಪೂರ್ವಕಮ್ ಆಹ – ಜ್ಞಾನಸ್ಯೇತಿ ॥ ಸ್ವತೋ ವಿರೋಧಾಭಾವಾತ್ ಸ್ವವಿಷಯಕೃತಸ್ಯೈವ ವಿರೋಧಸ್ಯ ವಾಚ್ಯತ್ವಾತ್ ಇತಿ 'ಹಿ' ಶಬ್ದಃ ॥**

ಹೀಗೆ ಸ್ವತಸ್ತ್ವಸಾಧಕಾನುಮಾನಗಳಲ್ಲಿ ವ್ಯಭಿಚಾರ ಮತ್ತು ಅಸಿದ್ಧಿದೋಷಗಳನ್ನು ಪರಿಹಾರ ಮಾಡಿ ಪಕ್ಷದಲ್ಲಿ ಹೇತುವನ್ನು ಒಪ್ಪಿಯೂ ಸಾಧ್ಯವನ್ನು ಅಂಗೀಕರಿಸದೇ ಇದ್ದರೆ ಬಾಧಕವನ್ನು ಮೂಲದಲ್ಲಿ ಹೇಳಲಾಗಿದೆ.

ಪ್ರಾಮಾಣ್ಯಸಂದೇಹ ಬರದೇ ಇರಲು ಸಂಭಾವಿತವಾದ ನಾಲ್ಕು ಪಕ್ಷಗಳನ್ನು ಹೇಳಿ ಅವುಗಳಲ್ಲಿ ಮೂರನ್ನು ನಿರಾಕರಿಸಿ ಪರಿಶೇಷಾತ್ ಸಾಧ್ಯವೇ ಪ್ರಯೋಜಕ ಎಂದು ಸಾಧಿಸಿ, ಅಂತಹ ಸಾಧ್ಯವನ್ನು ಅಂಗೀಕರಿಸದಿದ್ದಲ್ಲಿ ಹೇತುವು ಪಕ್ಷದಲ್ಲಿ ಬರಲಾರದು, ಎಂಬ ಬಾಧಕವನ್ನು ಮೂಲದಲ್ಲಿ ಹೇಳಲಾಗಿದೆ.

ಮೂಲದಲ್ಲಿ 'ಜ್ಞಾನಸ್ಯ ತತ್ಸಂಶಯವಿರೋಧಿತ್ವಂ ಹಿ' ಎಂದು ಹಿಶಬ್ದವಿದೆ. ಅದರ ಅಭಿಪ್ರಾಯ–ಜ್ಞಾನಗಳಿಗೆ ಸ್ವರೂಪತಃ ವಿರೋಧ ಇರುವುದಿಲ್ಲ. ಅವುಗಳಿಗೆ ವಿಷಯವಾದ ವಸ್ತುಗಳು ವಿರುದ್ಧವಾಗಿದ್ದರೆ ಜ್ಞಾನಗಳಿಗೂ ವಿರೋಧಬರುತ್ತದೆ, ಎಂದು.

## ದ್ವಿತೀಯ ಹೇತುವಿನಲ್ಲಿ ಅಪ್ರಯೋಜಕತ್ವ ಪರಿಹಾರ

**एतेन द्वितीयहेतावप्यप्रयोजकतोद्धृता । पक्षीकृतज्ञाने प्रामाण्य-विषयकत्वं, प्रामाण्यव्याप्यविषयकत्वं, प्रामाण्याभावविषयकत्वं,**

**प्रामाण्याभावव्याप्यविषयकत्वम्, उभयोदासीनविषयकत्वं चेति संभाविते प्रकारपञ्चके द्वितीयस्य तव्द्याप्यत्वाविषयकत्वविशेषणेन तृतीयादीनां च त्रयाणां तदभावनिश्चयविरोधिनिश्चयत्वेन निरासाद्धेतोराद्यं प्रामाण्यविषयकत्वरूपसाध्यं विनानुपपत्तेः ।**

ಪ್ರಾಮಾಣ್ಯ ವಿಷಯಕತ್ವಸಾಧಕವಾದ ಎರಡನೆಯ ಹೇತು–ತದ್–ವ್ಯಾಪ್ಯತ್ವಾವಿಷಯಕತ್ವೇ ಸತಿ ತದಭಾವನಿಶ್ಚಯವಿರೋಧಿ ನಿಶ್ಚಯತ್ವಾತ್ ಎಂದು. ಈ ಹೇತುವೂ ಅಪ್ರಯೋಜಕವಲ್ಲ, ಏಕೆಂದರೆ, ಸುಖಜ್ಞಾನದಲ್ಲಿ ಒಟ್ಟು ಐದು ಸಂಭಾವ್ಯತೆಗಳಿವೆ—

1. ಪ್ರಾಮಾಣ್ಯ ವಿಷಯಕತ್ವ
2. ಪ್ರಾಮಾಣ್ಯ ವ್ಯಾಪ್ಯವಿಷಯಕತ್ವ
3. ಪ್ರಾಮಾಣ್ಯಾಭಾವ ವಿಷಯಕತ್ವ
4. ಪ್ರಾಮಾಣ್ಯಾಭಾವ ವ್ಯಾಪ್ಯವಿಷಯಕತ್ವ
5. ಪ್ರಾಮಾಣ್ಯ–ಅಪ್ರಾಮಾಣ್ಯ–ಉಭಯಭಿನ್ನವಿಷಯಕತ್ವ

ಇವುಗಳಲ್ಲಿ 'ತದ್–ವ್ಯಾಪ್ಯ–ಅವಿಷಯಕತ್ವೇ ಸತಿ' ಎಂಬ ಹೇತುವಿಶೇಷಣದಿಂದ ಎರಡನೆಯದನ್ನು ನಿಷೇಧಿಸಲಾಗಿದೆ. 'ತದಭಾವನಿಶ್ಚಯ ವಿರೋಧಿನಿಶ್ಚಯ' ಎಂಬ ವಿಶೇಷ್ಯ ಭಾಗದಿಂದ ಮೂರು, ನಾಲ್ಕು ಮತ್ತು ಐದನೆಯ ಸಂಭಾವ್ಯತೆಗಳನ್ನು ನಿಷೇಧಿಸಲಾಗಿದೆ. ಏಕೆಂದರೆ, ಅವಾವುವೂ ಪ್ರಾಮಾಣ್ಯಾಭಾವಕ್ಕೆ ವಿರೋಧಿಗಳಲ್ಲ. ಪರಿಶೇಷಾತ್ ಮೊದಲನೆಯದಾದ ಪ್ರಾಮಾಣ್ಯವಿಷಯಕತ್ವವು ಅನಿವಾರ್ಯ. ಅದಿಲ್ಲದ ಹೊರತು ಸುಖಾನುಭವದ ಅನುವ್ಯವಸಾಯವು ತದಭಾವನಿಶ್ಚಯಕ್ಕೆ ವಿರೋಧಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಹೇತುವು ಅಪ್ರಯೋಜಕವಲ್ಲ.

## ನ್ಯಾಯದೀಪ

**ಏತೇನ ಇತ್ಯುಕ್ತಂ ವ್ಯನಕ್ತಿ–ಪಕ್ಷೀಕೃತಜ್ಞಾನೇ ಇತ್ಯಾದಿನಾ ॥ ಉಭಯೇತಿ ॥ ಪ್ರಾಮಾಣ್ಯ–ತದ್‌ವ್ಯಾಪ್ಯ, ಪ್ರಾಮಾಣ್ಯಾಭಾವ–ತದ್–ವ್ಯಾಪ್ಯ ರೂಪೋ–ಭಯ–ಉದಾಸೀನೇತ್ಯರ್ಥಃ ।**

ಮೂಲದಲ್ಲಿ ಉಭಯ–ಉದಾಸೀನ ಎಂದರೆ ಪ್ರಾಮಾಣ್ಯ–ತದ್‌ವ್ಯಾಪ್ಯ, ಪ್ರಾಮಾಣ್ಯಾಭಾವ–ತದ್‌ವ್ಯಾಪ್ಯ ಏತದುಭಯ–ಉದಾಸೀನ ಎಂದು ಅರ್ಥ.

## ದ್ವಿತೀಯ ಹೇತುವಿನಲ್ಲಿ ವಿಶೇಷಣಕೃತ್ಯ

**तत्राद्यं निश्चयपदं तदभावसंशयविरोधिनि तदभावनिश्चये, द्वितीयं तु तदभावनिश्चयविरोधिनि तदभावसंशये व्यभिचारवारकम् ।**

'ತದಭಾವನಿಶ್ಚಯ ವಿರೋಧಿ ನಿಶ್ಚಯತ್ವಾತ್' ಈ ಎರಡನೆಯ ಹೇತುವಿನಲ್ಲಿ ಮೊದಲನೆಯ ನಿಶ್ಚಯಪದವನ್ನು ಬಿಟ್ಟು 'ತದಭಾವಜ್ಞಾನವಿರೋಧಿ...' ಎಂದು ಹೇಳಿದರೆ, ತದಭಾವನಿಶ್ಚಯದಲ್ಲಿ ವ್ಯಭಿಚಾರದೋಷ. ಘಟಾಭಾವ ನಿಶ್ಚಯವೂ 'ಘಟಾಭಾವವಾನ್ ನ ವಾ' ಎಂಬ ಘಟಾಭಾವದ ಸಂದೇಹಾತ್ಮಕಜ್ಞಾನಕ್ಕೆ ವಿರೋಧಿಯಾಗಿದೆ. ಆದರೆ ಅದರಲ್ಲಿ ಘಟವಿಷಯಕತ್ವ ಇಲ್ಲ. ನಿಶ್ಚಯಪದವಿದ್ದರೆ ಸಂದೇಹವು ತದಭಾವ ನಿಶ್ಚಯಲ್ಲದ ಕಾರಣ ಅದರಲ್ಲಿ ಹೇತುವೂ ಇಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ.

ಎರಡನೆಯ ನಿಶ್ಚಯಪದ ಬಿಟ್ಟರೆ 'ತದಭಾವನಿಶ್ಚಯ ವಿರೋಧಿ-ಜ್ಞಾನತ್ವಾತ್' ಎಂದು ಹೇತುವಾಗುತ್ತದೆ. ಆಗ ಘಟಾಭಾವ ಸಂದೇಹದಲ್ಲಿ ವ್ಯಭಿಚಾರ. ಆ ಸಂದೇಹವೂ ಘಟಾಭಾವ ನಿಶ್ಚಯಕ್ಕೆ ವಿರೋಧಿಯಾಗಿದೆ. ಆದರಲ್ಲಿ ತದ್ವಿಷಯಕತ್ವ ಇಲ್ಲ. ನಿಶ್ಚಯಪದಕೊಟ್ಟಾಗ ಅದು ನಿಶ್ಚಯವಲ್ಲದ ಕಾರಣ ವ್ಯಭಿಚಾರ ಪರಿಹಾರ.

## ನ್ಯಾಯದೀಪ

**ಸಂಗತತಯಾ ಪ್ರಸಕ್ತಮ್ ಅಪ್ರಯೋಜಕತ್ವಂ ಪೂರ್ವಂ ನಿರಸ್ಯ ವಿಶೇಷಣಕೃತ್ಯಮಾಹ-ತತ್ರಾದ್ಯಮಿತಿ ॥ ತತ್ರ=ದ್ವಿತೀಯ ಹೇತೌ ಇತ್ಯರ್ಥಃ । ತದಭಾವಜ್ಞಾನ-ವಿರೋಧಿ-ಜ್ಞಾನತ್ವಾತ್ ಇತ್ಯುಕ್ತೇ ವ್ಯಭಿಚಾರಾತ್ ಉಭಯತ್ರ ನಿಶ್ಚಯಪದೇನ ತದ್ವಾರಣಮ್ ಇತ್ಯರ್ಥಃ ॥**

ದ್ವಿತೀಯಹೇತುವಿನಲ್ಲಿ ಅಪ್ರಯೋಜಕತ್ವಶಂಕಾವನ್ನು ಪರಿಹಾರ ಮಾಡಿ ಇಲ್ಲಿ ಹೇತುಘಟಕ ವಿಶೇಷಣಗಳಿಗೆ ಕೃತ್ಯವನ್ನು ಹೇಳಲಾಗಿದೆ. ಹೇತುವಿನಲ್ಲಿ ನಿಶ್ಚಯಪದಸ್ಥಾನದಲ್ಲಿ ಜ್ಞಾನಪದವನ್ನು ಹಾಕಿದರೆ 'ತದಭಾವಜ್ಞಾನ ವಿರೋಧಿಜ್ಞಾನತ್ವಾತ್' ಎಂದಿಷ್ಟೇ ಹೇಳಿದರೆ ಮೂಲದಲ್ಲಿ ಹೇಳಿದ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ನಿಶ್ಚಯಪದವನ್ನೇ ಕೊಡಬೇಕು.

## ತೃತೀಯ ಹೇತುವಿಮರ್ಶೆ

**सुखसाक्षात्कारस्य तत्प्रामाण्याभिलापस्य च मध्ये प्रामाण्यानुमित्यङ्गीकारे चानुभवविरुद्धं व्याप्तिस्मरणादि बहु कल्प्यं**

**स्यात् । सुखसाक्षात्कारस्य तत्साक्षात्काराभिलापस्य च मध्येऽपि तत्कल्प्यं स्यात्, प्रामाण्यानुमिति प्रमाण्याभिलापयोर्मध्येऽपि ज्ञानान्तरं कल्प्यं स्यादिति न तृतीयहेतुरसिद्धः । नाप्यप्रयोजकः, व्यवहर्तव्यज्ञानस्य व्यवहारहेतुत्वात् ।**

'ತದ್ವಿಷಯಕ–ವ್ಯವಹಾರಹೇತು–ಪ್ರತ್ಯಯತ್ವಾತ್' ಇದು ಮೂರನೆಯ ಹೇತು. ಸುಖಾನುಭವದ ಅನುವ್ಯವಸಾಯವು 'ಸುಖಾನುಭವಃ ಪ್ರಮಾಣಂ' ಎಂಬ ಶಬ್ದಪ್ರಯೋಗಕ್ಕೆ ಕಾರಣವಾಗಿದೆ. ಆದ್ದರಿಂದ ಅದರಲ್ಲಿ ಪ್ರಾಮಾಣ್ಯವು ವಿಷಯವಾಗಿದೆ, ಎಂದು ಅನುಮಾನದ ಅಭಿಪ್ರಾಯ.

ಇದರ ಮೇಲೆ ಹೀಗೆ ಆಕ್ಷೇಪಿಸಬಹುದು—'ಸುಖಂ ಅನುಭವಾಮಿ' ಎಂಬ ಅನುವ್ಯವಸಾಯ ಬಂದಮೇಲೆ 'ಅಯಂ ಸುಖಾನುಭವಃ ಪ್ರಮಾ ಸುಖಸಾಕ್ಷಾತ್ಕಾರತ್ವಾತ್' ಎಂಬ ಅನುಮಾನದಿಂದ ಪ್ರಾಮಾಣ್ಯಾನುಮಿತಿ ಬರುತ್ತದೆ. ಆ ಅನುಮಿತಿಯೇ ಪ್ರಾಮಾಣ್ಯವ್ಯವಹಾರಕ್ಕೆ ಕಾರಣ. ಹೊರತು, 'ಸುಖಂ ಅನುಭವಾಮಿ' ಎಂಬ ಅನುವ್ಯವಸಾಯವಲ್ಲ. ಆದ್ದರಿಂದ ಪಕ್ಷದಲ್ಲಿ ಹೇತ್ವಸಿದ್ಧಿ, ಎಂದು.

ಆದರೆ ಈ ಆಕ್ಷೇಪ ಸರಿಯಲ್ಲ. ಸುಖಸಾಕ್ಷಾತ್ಕಾರಕ್ಕೂ ಪ್ರಾಮಾಣ್ಯವಿಷಯಕವ್ಯವಹಾರಕ್ಕೂ ಮಧ್ಯದಲ್ಲಿ ಪ್ರಾಮಾಣ್ಯಾನುಮಿತಿಯನ್ನು ಕಲ್ಪಿಸಿದರೆ ಅನುಮಿತಿಗೆ ಕಾರಣವಾದ ವ್ಯಾಪ್ತಿಸ್ಮರಣೆ, ಪಕ್ಷಧರ್ಮತಾಜ್ಞಾನ ಇವುಗಳನ್ನೆಲ್ಲ ಕಲ್ಪಿಸಬೇಕಾಗುತ್ತದೆ. ಇದೆಲ್ಲ ನಮ್ಮ ಅನುಭವಕ್ಕೆ ವಿರುದ್ಧ. ಸುಖಾನುಭವ ಬಂದಕೂಡಲೇ, ವ್ಯವಧಾನ ಇಲ್ಲದೆ, 'ಈ ಅನುಭವ ಪ್ರಮಾ' ಎಂಬ ವ್ಯವಹಾರವನ್ನು ಮಾಡಲಾಗುತ್ತದೆ. ಮಧ್ಯದಲ್ಲಿ ವ್ಯಾಪ್ತ್ಯಾದಿಸ್ಮರಣೆಗಳು ಅನುಭವವಿರುದ್ಧವಾಗಿವೆ.

ಅನುಭವವಿರುದ್ಧವಾಗಿದ್ದರೂ ಅವನ್ನೆಲ್ಲಾ ಕಲ್ಪಿಸುವುದಾದಲ್ಲಿ ಸುಖಸಾಕ್ಷಾತ್ಕಾರ ಬಂದಮೇಲೆ 'ಅಹಂ ಸುಖಸಾಕ್ಷಾತ್ಕಾರವಾನ್' ಎಂಬ ವ್ಯವಹಾರ ಮಾಡಲಾಗುತ್ತದೆ. ಅವೆರಡರ ಮಧ್ಯದಲ್ಲೂ ಅನುಮಾನವನ್ನು ಕಲ್ಪಿಸಬೇಕಾದೀತು. ಆ ಅನುಮಾನದ ಕ್ರಮವನ್ನು ನ್ಯಾಯದೀಪದಲ್ಲಿ ಹೀಗೆ ನಿರೂಪಿಸಲಾಗಿದೆ– 'ಸುಖಜ್ಞಾನಮಿದಂ, (ಪಕ್ಷ) ಸಾಕ್ಷಾತ್ಕಾರಃ, (ಸಾಧ್ಯ) ಸ್ವವೃತ್ತಿ–ವರ್ತಮಾನ–ವಿಷಯಕತ್ವಾತ್' ಎಂದು. ಅದರ ಅಭಿಪ್ರಾಯ–ನನಗೆ ಬಂದಿರುವ ಈ ಸುಖಜ್ಞಾನವು ನನ್ನಲ್ಲಿ ಈಗ ಇರುವ ಸುಖವನ್ನು ವಿಷಯೀಕರಿಸುತ್ತಿರುವುದರಿಂದ ಪ್ರತ್ಯಕ್ಷಾತ್ಮಕವಾಗಿದೆ, ಎಂದು. ಈ ಅನುಮಾನದಿಂದ ಬಂದಿರುವ ಸುಖಜ್ಞಾನವು ಸಾಕ್ಷಾತ್ಕಾರ ರೂಪವಾಗಿದೆ ಎಂದು ತಿಳಿದು ಆಮೇಲೆ 'ನನಗೆ ಸುಖಸಾಕ್ಷಾತ್ಕಾರ ಇದೆ' ಎಂದು ವ್ಯವಹಾರ ಮಾಡಬೇಕಾದೀತು. ಆದರೆ, ಈ ಕ್ರಮ ಅನುಭವ ವಿರುದ್ಧ. ನಮಗೆ ಬಂದ ಜ್ಞಾನವು ಸ್ಮೃತಿಯೋ, ಸಾಕ್ಷಾತ್ಕಾರವೋ? ಎಂದು ನಿರ್ಧರಿಸಲು

ಅನುಮಾನದ ಸಹಾಯಬೇಕಾಗಿಲ್ಲ. ಅನುಭವವೇ ಜ್ಞಾನದ ಸ್ವರೂಪವನ್ನು ನಿರ್ಧರಿಸುತ್ತದೆ. ಆದರಂತೆ ಸುಖಾನುಭವದ ಅನುವ್ಯವಸಾಯ ಬಂದ ಕೂಡಲೇ 'ಸುಖಜ್ಞಾನವು ಪ್ರಮಾ' ಎಂದೂ ನಾವು ವ್ಯವಹಾರವನ್ನು ಮಾಡುತ್ತೇವೆ. ಆಗಲೂ ಮಧ್ಯದಲ್ಲಿ ಅನುಮಾನದ ಆಗತ್ಯವಿಲ್ಲ.

ಅಷ್ಟೇ ಅಲ್ಲ, 'ಜಲಜ್ಞಾನಂ ಪ್ರಮಾಣಮ್' ಎಂಬ ಅನುಮಿತಿ (ತಾರ್ಕಿಕಮತದಂತೆ) ಬಂದಮೇಲೆ ಆ ಜ್ಞಾನದಲ್ಲಿ ಪ್ರಾಮಾಣ್ಯವಹಾರ ಮಾಡುತ್ತೇವೆ. ಅಲ್ಲಿಯೂ ಅನುಮಿತಿಗೂ ವ್ಯವಹಾರಕ್ಕೂ ಮಧ್ಯದಲ್ಲಿ ಶಬ್ದಜನ್ಯವಾದ ಜ್ಞಾನಾಂತರವನ್ನು ಕಲ್ಪಿಸಬೇಕಾದೀತು!

ಆದ್ದರಿಂದ ಅನುಭವಕ್ಕೆ ವಿರುದ್ಧವಾಗಿ, ನಾವು ಕಲ್ಪಿಸಿಕೊಂಡಿರುವ ಪ್ರಕ್ರಿಯೆಯ ರಕ್ಷಣೆಗಾಗಿ, ಕುಸೃಷ್ಟಿಯನ್ನು ಮಾಡಬಾರದು. ಹೀಗೆ ಸುಖಾನುಭವವು ಪ್ರಾಮಾಣ್ಯವ್ಯವಹಾರಕ್ಕೆ ಕಾರಣವಾಗಿರುವುದರಿಂದ ಅಸಿದ್ಧಿದೋಷ ಇಲ್ಲ.

'ಹೇತುರಸ್ತು, ಸಾಧ್ಯಂ ಮಾಸ್ತು' ಎಂಬ ಅಪ್ರಯೋಜಕತಾಶಂಕೆಯೂ ಇಲ್ಲ. ಏಕೆಂದರೆ, ವ್ಯವಹಾರಕ್ಕೆ ವ್ಯವಹರ್ತವ್ಯ ಜ್ಞಾನವು ಕಾರಣ. ಪ್ರಕೃತ ಪ್ರಾಮಾಣ್ಯವ್ಯವಹಾರ ಮಾಡುವಾಗ ವ್ಯವಹರ್ತವ್ಯ ಪ್ರಾಮಾಣ್ಯ. ಅದರ ಜ್ಞಾನ ಇರಲೇಬೇಕು. ಬೇರಾವ ಜ್ಞಾನಗಳೂ ಇಲ್ಲದಿರುವುದ ರಿಂದ ಸುಖಸಾಕ್ಷಾತ್ಕಾರವೇ ಪ್ರಾಮಾಣ್ಯಜ್ಞಾನರೂಪವೂ ಆಗಿದೆ, ಎಂದು ಹೇಳಬೇಕಾಗುತ್ತದೆ. ಹೀಗೆ ಅದು ವ್ಯವಹಾರಕ್ಕೆ ಕಾರಣವಾದ ಮೇಲೆ ವ್ಯವಹರ್ತವ್ಯ ವಿಷಯಕವಾಗಿರಲೇಬೇಕು.

## ನ್ಯಾಯದೀಪ

**ತದ್ವಿಷಯವ್ಯವಹಾರ-ಹೇತುಪ್ರತ್ಯಯತ್ವಾತ್, ಇತಿ ತೃತೀಯಹೇತೌ ಕುಂಕುಮಗಂಧ – ವ್ಯಂಗ್ಯ – ವ್ಯವಹಾರಹೇತೌ ಘೃತಾದಿಸಂಯೋಗರೂಪ-ವ್ಯಂಜಕೇ, ವ್ಯಂಗ್ಯಾವಿಷಯಕೇ ವ್ಯಭಿಚಾರವಾರಕಂ ಪ್ರತ್ಯಯಪದಮ್, ಘಟಾದಿಜ್ಞಾನೇ ವ್ಯಭಿಚಾರವಾರಕಂ ತದ್ವಿಷಯಕ-ವ್ಯವಹಾರ-ಹೇತ್ವಿತಿ ಪದಂ, ಸ್ಪಷ್ಟಮಿತಿ ವಿಶೇಷಣಕೃತ್ಯಮ್ ಅನುಕ್ತ್ವಾ ಅಸಿದ್ಧಿ-ಅಪ್ರಯೋಜಕತ್ವೇ ಕ್ರಮೇಣ ನಿರಾಹ-ಸುಖೇತಿ ॥**

ಸುಖಪಕ್ಷಕಾನುಮಾನದ ಮೂರನೆಯ ಹೇತು-ತದ್ವಿಷಯಕ ವ್ಯವಹಾರ ಹೇತು ಪ್ರತ್ಯಯತ್ವಾತ್, ಎಂದು. ಈ ಹೇತುವಿನಲ್ಲಿ ಪ್ರತ್ಯಯತ್ವಾಂಶವನ್ನು ಬಿಟ್ಟರೆ 'ತದ್ವಿಷಯಕ ವ್ಯವಹಾರ ಹೇತುತ್ವಾತ್ ತದ್ವಿಷಯಕಮ್' ಎಂದು ಸಾಮಾನ್ಯವ್ಯಾಪ್ತಿಯ ಸ್ವರೂಪವಾಗುತ್ತದೆ. ಈ ವ್ಯಾಪ್ತಿಗೆ ವ್ಯಭಿಚಾರವಿದೆ-ಕುಂಕುಮ ಕೇಸರಿಯ ಗಂಧವು ವ್ಯಕ್ತವಾಗಬೇಕಾದರೆ ಗೋಘೃತಸಂಯೋಗ ವಾಗಬೇಕು. ಆ ಗಂಧವು ವ್ಯಕ್ತವಾದಾಗ ಮಾತ್ರ ಅದರ ವ್ಯವಹಾರ. ಹೀಗೆ, ಗಂಧವ್ಯವಹಾರಕ್ಕೆ ಗಂಧವ್ಯಂಜಕವಾದ ಗೋಘೃತವು ಸಹಕಾರಿಯಾಗಿದೆ. ಆದರೆ ಗೋಘೃತದಲ್ಲಿ ಗಂಧವಿಷಯಕತ್ವವು

ಇಲ್ಲ. ಅದಕ್ಕಾಗಿ ಪ್ರತ್ಯಯತ್ವವನ್ನು ಹೇತುಶರೀರದಲ್ಲಿ ಸೇರಿಸಿದರೆ ಘೃತದಲ್ಲಿ ಪ್ರತ್ಯಯತ್ವರೂಪ ಹೇತು ಇಲ್ಲದ ಕಾರಣ ವ್ಯಭಿಚಾರವು ಪರಿಹಾರವಾಗುತ್ತದೆ.

ಅದರಂತೆ 'ಯಃ ವ್ಯವಹಾರಹೇತು-ಪ್ರತ್ಯಯಃ ಸಃ ಪ್ರಾಮಾಣ್ಯವಿಷಯಕಃ' ಎಂದರೂ ಘಟಜ್ಞಾನದಲ್ಲಿ ವ್ಯಭಿಚಾರ. ಘಟಜ್ಞಾನವೂ ಘಟವ್ಯವಹಾರಕ್ಕೆ ಹೇತುವಾಗಿದೆ, ಅದು ಪ್ರಾಮಾಣ್ಯವಿಷಯಕವಲ್ಲ. ಅದರ ಪರಿಹಾರಕ್ಕಾಗಿ 'ಯಃ ಪ್ರಾಮಾಣ್ಯವಿಷಯಕ-ವ್ಯವಹಾರಹೇತುಃ ಸಃ ಪ್ರಾಮಾಣ್ಯವಿಷಯಕಃ' ಎಂದೇ ವಿಶಿಷ್ಟ ವ್ಯಾಪ್ತಿಯನ್ನು ಹೇಳಬೇಕು.

ಹೀಗೆ ತದ್ವಿಷಯಕತ್ವ, ಪ್ರತ್ಯಯತ್ವ ವಿಶೇಷಣಗಳಿಗೆ ಕೃತ್ಯವು ಸ್ಫುಟವಾದುದರಿಂದ ಅವೆರಡಕ್ಕೆ ಕೃತ್ಯವನ್ನು ಹೇಳದೆ ಅಸಿದ್ಧಿ-ಅಪ್ರಯೋಜಕತ್ವಾಶಂಕೆಗೆ ಮಾತ್ರ ಸಮಾಧಾನವನ್ನು ಹಿಂದಿನ ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**'ಸುಖಮನುಭವಾಮಿ' ಇತಿ ಪ್ರತ್ಯಯಸ್ಯ ನ ಸುಖಾನುಭವ-ಪ್ರಾಮಾಣ್ಯ-ವ್ಯವಹಾರಹೇತುತ್ವಮಸ್ತಿ । ಕಿಂತು ಸುಖಸಾಕ್ಷಾತ್ಕಾರಾನಂತರಮ್ 'ಅಯಂ ಸುಖಾನುಭವಃ, ಪ್ರಮಾ, ಸುಖಸಾಕ್ಷಾತ್ಕಾರತ್ವಾತ್, ಪೂರ್ವಸುಖ-ಸಾಕ್ಷಾತ್ಕಾರವತ್' ಇತ್ಯಾದಿ ಲಿಂಗಜನ್ಯ-ಪ್ರಾಮಾಣ್ಯಾನುಮಿತೇರೇವ, ಇತಿ ''ಅಭ್ಯಾಸದಶಾಪನ್ನಸ್ಥಲೇ ಝಟಿತಿ ಪ್ರಾಮಾಣ್ಯಾನುಮಿತಿ-ಸಾಮಗ್ರೀ ಸಮವಧಾನಂ ಸ್ವಕಾರಣಾಧೀನಮ್'' ಇತಿ ಜ್ಞಪ್ತಿ-ಪ್ರಾಮಾಣ್ಯಾಂತೇ ಮಣಿಕೃದುಕ್ತದಿಶಾ ಪ್ರಾಮಾಣ್ಯಾನುಮಿತ್ಯಂಗೀಕಾರೇ ಇತ್ಯರ್ಥಃ ॥**

ಅಭ್ಯಾಸದಶಾಪನ್ನ ಜ್ಞಾನದಿಂದ ಕೂಡಲೇ ಪ್ರವೃತ್ತಿಯಾಗುತ್ತದೆ. ಇದರಿಂದ ಜ್ಞಾನಗ್ರಾಹಕವಾದ ಸಾಕ್ಷಿಯೇ ಪ್ರವರ್ತಕ-ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎನ್ನುವ ಸ್ವತಸ್ತ್ವವಾದಿಗಳ ಯುಕ್ತಿಯನ್ನು ಮಣಿಕಾರ ನಿರಾಕರಿಸಿದ್ದಾನೆ- ವಸ್ತುತಃ ತಾರ್ಕಿಕಮತದಲ್ಲಿ ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣ. ಪ್ರಾಮಾಣ್ಯಜ್ಞಾನವಲ್ಲ. ಪ್ರಾಮಾಣ್ಯಜ್ಞಾನವು ಕಾರಣ, ಎಂದು ಒಪ್ಪಿಕೊಂಡರೂ ಅಭ್ಯಾಸದಶಾಪನ್ನವಾದ ಜ್ಞಾನದಿಂದ ಝಟಿತಿ ಪ್ರವೃತ್ತಿಯಾಗಲು ಪ್ರಾಮಾಣ್ಯದ ಪ್ರತ್ಯಕ್ಷವು ಕಾರಣವಲ್ಲ, ಅದರ ಅನುಮಿತಿಯೇ ಕಾರಣ. ಝಟಿತಿ ಪ್ರವೃತ್ತಿಯು ಝಟಿತಿ ಪ್ರಾಮಾಣ್ಯಗ್ರಹವನ್ನು ಆಕ್ಷೇಪಿಸುತ್ತದೆ, ಪ್ರಾಮಾಣ್ಯಪ್ರತ್ಯಕ್ಷವನ್ನಲ್ಲ. ಹಾಗೆ ಹೇಳಿದರೆ ಬಾಯಾರಿದವನು ನೀರಿದ್ದಲ್ಲಿ ಝಟಿತಿ ಪ್ರವೃತ್ತಿಮಾಡುವುದರಿಂದ ನೀರಿನಲ್ಲಿರುವ ಪಿಪಾಸಾನಿರಾಸಶಕ್ತಿಯೂ ಅವನಿಗೆ ಪ್ರತ್ಯಕ್ಷದಿಂದಲೇ ತಿಳಿಯುತ್ತದೆ, ಎನ್ನಬೇಕಾದೀತು. ಅದುಹೇಗೆ ಝಟಿತಿ ಅನುಮಿತಿರೂಪ ಹಾಗೂ ಆ ಅನುಮಿತಿ ಸಾಮಗ್ರಿಯೂ ಝಟಿತಿ ಸಮವಹಿತ, ಎಂದು ಕಲ್ಪಿಸುತ್ತೇವೋ ಅದರಂತೆ, ಪ್ರಕೃತ

ಪ್ರಾಮಾಣ್ಯಾನುತಿ ಮತ್ತು ತತ್-ಸಾಮಗ್ರೀ ಝಟಿತಿ ಉಪಸ್ಥಿತವಾಗುತ್ತದೆ, ಎಂದೇ ಕಲ್ಪಿಸಬೇಕು. ಇದು ಮಣಿಕಾರನ ವಾದ. ಅವನ ಗ್ರಂಥ ಹೀಗಿದೆ–

**''ಝಟಿತಿ ತತ್ಸಮವಧಾನಂ ತು ಸ್ವಕಾರಣಾಧೀನಮ್ । ನ ಹಿ ಪಿಪಾಸೂನಾಂ ಝಟಿತಿ ಪ್ರಚುರತರಾ ಸಮರ್ಥಾ ಚ ಪ್ರವೃತ್ತಿಃ ಅಂಭಸೀತಿ ಪಿಪಾಸೋಪಶಮನಶಕ್ತಿಃ ಅಸ್ಯ ಪ್ರತ್ಯಕ್ಷಾ ॥'' (ಮಣಿ.ಪುಟ.303)**

ಪ್ರಕೃತದಲ್ಲೂ ಝಟಿತಿ ಪ್ರಾಮಾಣ್ಯವ್ಯವಹಾರಕ್ಕೂ ಪ್ರಾಮಾಣ್ಯಾನುಮಿತಿಯೇ ಕಾರಣ. ಹೊರತು ''ಸುಖಂ ಅನುಭವಾಮಿ'' ಎಂಬ ಸಾಕ್ಷಿಪ್ರತ್ಯಕ್ಷವಲ್ಲ. 'ನನಗೆ ಬಂದಿರುವ ಜ್ಞಾನವು ಸುಖಾನುಭವಾತ್ಮಕವಾಗಿರುವ ಕಾರಣ ಪ್ರಮಾಣವಾಗಿದೆ' ಇದು ಸುಖಜ್ಞಾನದಲ್ಲಿ ಪ್ರಾಮಾಣ್ಯವನ್ನು ಅನುಮಾನ ಮಾಡುವ ಕ್ರಮ. ಈ ಅನುಮಾನದಿಂದ ಪ್ರಾಮಾಣ್ಯವನ್ನು ತಿಳಿದು ಪ್ರಾಮಾಣ್ಯವ್ಯವಹಾರ ಮಾಡಲಾಗುತ್ತದೆ. ಆದ್ದರಿಂದ ತೃತೀಯಹೇತು ಅಸಿದ್ಧ.

ಈ ಆಕ್ಷೇಪಕ್ಕೆ ಪರಿಹಾರವನ್ನು ಮೂಲದಲ್ಲಿ 'ವ್ಯಾಪ್ತಿಸ್ಮರಣಾದಿ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**ವ್ಯಾಪ್ತಿ ಸ್ಮರಣಾದೀತಿ ॥ ಪರಾಮರ್ಶಾನುಮಿತೀ ಆದಿಪದಾರ್ಥಃ । ಅತಿಪ್ರಸಂಗಂ ಚಾಹ–ಸುಖೇತಿ ॥ ತತ್ ಕಲ್ಪ್ಯಮಿತಿ ॥ ಜಾತಿ–ವ್ಯಕ್ತ್ಯೋಃ ಏಕವಿತ್ತಿವೇದ್ಯತ್ವನಿಯಮಮ್ ಅನುಪೇತ್ಯ ಸುಖಸಾಕ್ಷಾತ್ಕಾರ–ಸ್ವರೂಪ ಜ್ಞಾನಾನಂತರಂ ''ಸುಖಜ್ಞಾನಮಿದಂ, ಸಾಕ್ಷಾತ್ಕಾರಃ, ಸ್ವವೃತ್ತಿವರ್ತಮಾನ ವಿಷಯಕತ್ವಾತ್'' ಇತಿ ಸುಖಸಾಕ್ಷಾತ್ಕಾರತ್ವ–ಅನುಮಿತಿಮುಪೇತ್ಯ ತದ್ಧೇತು–ವ್ಯಾಪ್ತಿಸ್ಮರಣಾದಿಕಂ ಕಲ್ಪ್ಯಂ ಸ್ಯಾತ್ ಇತ್ಯರ್ಥಃ ।**

**ಜ್ಞಾನಾಂತರಂ=ಶಾಬ್ದಾದಿರೂಪಮ್ ಇತ್ಯರ್ಥಃ । ಅತ್ರಾಪಿ ಹೇತೂಚ್ಛಿತ್ತಿರೇವ ವಿಪಕ್ಷೇ ಬಾಧಿಕಾ ಇತ್ಯಾಹ–ವ್ಯವಹರ್ತವ್ಯೇತಿ ॥**

ಮೂಲದಲ್ಲಿ 'ಸುಖಾನುಭವ ಮತ್ತು ಅದರ ಅಭಿಲಾಪ ಇವುಗಳ ಮಧ್ಯದಲ್ಲಿ ಜ್ಞಾನಾಂತರವನ್ನು ಕಲ್ಪಿಸಬೇಕಾದೀತು' ಎಂದು ಆಪತ್ತಿಯನ್ನು ಮಾಡಲಾಗಿದೆ. ಅದರ ಅಭಿಪ್ರಾಯ–ವಸ್ತುತಃ ವ್ಯಕ್ತಿಯು ಯಾವ ಜ್ಞಾನದಲ್ಲಿ ವಿಷಯವಾಗುವುದೋ ಜಾತಿಯೂ ಅದೇ ಜ್ಞಾನದಲ್ಲಿ ವಿಷಯವಾಗುತ್ತದೆ. ಇದು ಅನುಭವಸಿದ್ಧವಾದ ನಿಯಮ. ಈ ನಿಯಮದಂತೆ ಸುಖಸಾಕ್ಷಾತ್ಕಾರವನ್ನು ಗ್ರಹಿಸುವ ಸಾಕ್ಷಿಯೇ ತನ್ನಿಷ್ಠವಾದ ಸಾಕ್ಷಾತ್ಕಾರತ್ವ ಜಾತಿಯನ್ನೂ ಗ್ರಹಿಸುತ್ತದೆ. ಇದನ್ನು ನಿರಾಕರಿಸಿ ಆ ಸಾಕ್ಷಾತ್ಕಾರತ್ವಜಾತಿಯು ಅನುಮಾನವೇದ್ಯ ಎನ್ನಬೇಕಾದೀತು.

ಇಲ್ಲ. ಅದಕ್ಕಾಗಿ ಪ್ರತ್ಯಯತ್ವವನ್ನು ಹೇತುಶರೀರದಲ್ಲಿ ಸೇರಿಸಿದರೆ ಘೃತದಲ್ಲಿ ಪ್ರತ್ಯಯತ್ವರೂಪ ಹೇತು ಇಲ್ಲದ ಕಾರಣ ವ್ಯಭಿಚಾರವು ಪರಿಹಾರವಾಗುತ್ತದೆ.

ಅದರಂತೆ 'ಯಃ ವ್ಯವಹಾರಹೇತು–ಪ್ರತ್ಯಯಃ ಸಃ ಪ್ರಾಮಾಣ್ಯವಿಷಯಕಃ' ಎಂದರೂ ಘಟಜ್ಞಾನದಲ್ಲಿ ವ್ಯಭಿಚಾರ. ಘಟಜ್ಞಾನವೂ ಘಟವ್ಯವಹಾರಕ್ಕೆ ಹೇತುವಾಗಿದೆ, ಅದು ಪ್ರಾಮಾಣ್ಯವಿಷಯಕವಲ್ಲ. ಅದರ ಪರಿಹಾರಕ್ಕಾಗಿ 'ಯಃ ಪ್ರಾಮಾಣ್ಯವಿಷಯಕ–ವ್ಯವಹಾರಹೇತುಃ ಸಃ ಪ್ರಾಮಾಣ್ಯವಿಷಯಕಃ' ಎಂದೇ ವಿಶಿಷ್ಟ ವ್ಯಾಪ್ತಿಯನ್ನು ಹೇಳಬೇಕು.

ಹೀಗೆ ತದ್ವಿಷಯಕತ್ವ, ಪ್ರತ್ಯಯತ್ವ ವಿಶೇಷಣಗಳಿಗೆ ಕೃತ್ಯವು ಸ್ಫುಟವಾದುದರಿಂದ ಅವೆರಡಕ್ಕೆ ಕೃತ್ಯವನ್ನು ಹೇಳದೆ ಅಸಿದ್ಧಿ–ಅಪ್ರಯೋಜಕತ್ವಾಶಂಕೆಗೆ ಮಾತ್ರ ಸಮಾಧಾನವನ್ನು ಹಿಂದಿನ ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**'ಸುಖಮನುಭವಾಮಿ' ಇತಿ ಪ್ರತ್ಯಯಸ್ಯ ನ ಸುಖಾನುಭವ–ಪ್ರಾಮಾಣ್ಯ–ವ್ಯವಹಾರಹೇತುತ್ವಮಸ್ತಿ । ಕಿಂತು ಸುಖಸಾಕ್ಷಾತ್ಕಾರಾನಂತರಮ್ 'ಅಯಂ ಸುಖಾನುಭವಃ, ಪ್ರಮಾ, ಸುಖಸಾಕ್ಷಾತ್ಕಾರತ್ವಾತ್, ಪೂರ್ವಸುಖ–ಸಾಕ್ಷಾತ್ಕಾರವತ್' ಇತ್ಯಾದಿ ಲಿಂಗಜನ್ಯ–ಪ್ರಾಮಾಣ್ಯಾನುಮಿತೇರೇವ, ಇತಿ ''ಅಭ್ಯಾಸದಶಾಪನ್ನಸ್ಥಲೇ ಝಟಿತಿ ಪ್ರಾಮಾಣ್ಯಾನುಮಿತಿ–ಸಾಮಗ್ರೀ ಸಮವಧಾನಂ ಸ್ವಕಾರಣಾಧೀನಮ್'' ಇತಿ ಜ್ಞಪ್ತಿ–ಪ್ರಾಮಾಣ್ಯಾಂತೇ ಮಣಿಕೃದುಕ್ತದಿಶಾ ಪ್ರಾಮಾಣ್ಯಾನುಮಿತ್ಯಂಗೀಕಾರೇ ಇತ್ಯರ್ಥಃ ॥**

ಅಭ್ಯಾಸದಶಾಪನ್ನ ಜ್ಞಾನದಿಂದ ಕೂಡಲೇ ಪ್ರವೃತ್ತಿಯಾಗುತ್ತದೆ. ಇದರಿಂದ ಜ್ಞಾನಗ್ರಾಹಕ ವಾದ ಸಾಕ್ಷಿಯೇ ಪ್ರವರ್ತಕ–ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎನ್ನುವ ಸ್ವತಸ್ತ್ವವಾದಿಗಳ ಯುಕ್ತಿಯನ್ನು ಮಣಿಕಾರ ನಿರಾಕರಿಸಿದ್ದಾನೆ– ವಸ್ತುತಃ ತಾರ್ಕಿಕಮತದಲ್ಲಿ ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣ. ಪ್ರಾಮಾಣ್ಯಜ್ಞಾನವಲ್ಲ. ಪ್ರಾಮಾಣ್ಯಜ್ಞಾನವು ಕಾರಣ, ಎಂದು ಒಪ್ಪಿಕೊಂಡರೂ ಅಭ್ಯಾಸದಶಾಪನ್ನವಾದ ಜ್ಞಾನದಿಂದ ಝಟಿತಿ ಪ್ರವೃತ್ತಿಯಾಗಲು ಪ್ರಾಮಾಣ್ಯದ ಪ್ರತ್ಯಕ್ಷವು ಕಾರಣವಲ್ಲ, ಅದರ ಅನುಮಿತಿಯೇ ಕಾರಣ. ಝಟಿತಿ ಪ್ರವೃತ್ತಿಯು ಝಟಿತಿ ಪ್ರಾಮಾಣ್ಯ ಗ್ರಹವನ್ನು ಆಕ್ಷೇಪಿಸುತ್ತದೆ, ಪ್ರಾಮಾಣ್ಯಪ್ರತ್ಯಕ್ಷವನ್ನಲ್ಲ. ಹಾಗೆ ಹೇಳಿದರೆ ಬಾಯಾರಿದವನು ನೀರಿದ್ದಲ್ಲಿ ಝಟಿತಿ ಪ್ರವೃತ್ತಿಮಾಡುವುದರಿಂದ ನೀರಿನಲ್ಲಿರುವ ಪಿಪಾಸಾನಿರಾಸಶಕ್ತಿಯೂ ಅವನಿಗೆ ಪ್ರತ್ಯಕ್ಷದಿಂದಲೇ ತಿಳಿಯುತ್ತದೆ, ಎನ್ನಬೇಕಾದೀತು. ಅದುಹೇಗೆ ಝಟಿತಿ ಅನುಮಿತಿರೂಪ ಹಾಗೂ ಆ ಅನುಮಿತಿ ಸಾಮಗ್ರಿಯೂ ಝಟಿತಿ ಸಮವಹಿತ, ಎಂದು ಕಲ್ಪಿಸುತ್ತೇವೋ ಅದರಂತೆ, ಪ್ರಕೃತ

ಪ್ರಾಮಾಣ್ಯಾನುತಿ ಮತ್ತು ತತ್–ಸಾಮಗ್ರೀ ಝಟಿತಿ ಉಪಸ್ಥಿತವಾಗುತ್ತದೆ, ಎಂದೇ ಕಲ್ಪಿಸಬೇಕು. ಇದು ಮಣಿಕಾರನ ವಾದ. ಅವನ ಗ್ರಂಥ ಹೀಗಿದೆ–

**''ಝಟಿತಿ ತತ್ಸಮವಧಾನಂ ತು ಸ್ವಕಾರಣಾಧೀನಮ್ । ನ ಹಿ ಪಿಪಾಸೂನಾಂ ಝಟಿತಿ ಪ್ರಚುರತರಾ ಸಮರ್ಥಾ ಚ ಪ್ರವೃತ್ತಿಃ ಅಂಭಸೀತಿ ಪಿಪಾಸೋಪಶಮನಶಕ್ತಿಃ ಅಸ್ಯ ಪ್ರತ್ಯಕ್ಷಾ ॥'' (ಮಣಿ.ಪುಟ.303)**

ಪ್ರಕೃತದಲ್ಲೂ ಝಟಿತಿ ಪ್ರಾಮಾಣ್ಯವ್ಯವಹಾರಕ್ಕೂ ಪ್ರಾಮಾಣ್ಯಾನುಮಿತಿಯೇ ಕಾರಣ. ಹೊರತು ''ಸುಖಂ ಅನುಭವಾಮಿ'' ಎಂಬ ಸಾಕ್ಷಿಪ್ರತ್ಯಕ್ಷವಲ್ಲ. 'ನನಗೆ ಬಂದಿರುವ ಜ್ಞಾನವು ಸುಖಾನುಭವಾತ್ಮಕವಾಗಿರುವ ಕಾರಣ ಪ್ರಮಾಣವಾಗಿದೆ' ಇದು ಸುಖಜ್ಞಾನದಲ್ಲಿ ಪ್ರಾಮಾಣ್ಯವನ್ನು ಅನುಮಾನ ಮಾಡುವ ಕ್ರಮ. ಈ ಅನುಮಾನದಿಂದ ಪ್ರಾಮಾಣ್ಯವನ್ನು ತಿಳಿದು ಪ್ರಾಮಾಣ್ಯವ್ಯವಹಾರ ಮಾಡಲಾಗುತ್ತದೆ. ಆದ್ದರಿಂದ ತೃತೀಯಹೇತು ಅಸಿದ್ಧ.

ಈ ಆಕ್ಷೇಪಕ್ಕೆ ಪರಿಹಾರವನ್ನು ಮೂಲದಲ್ಲಿ 'ವ್ಯಾಪ್ತಿಸ್ಮರಣಾದಿ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**ವ್ಯಾಪ್ತಿ ಸ್ಮರಣಾದೀತಿ ॥ ಪರಾಮರ್ಶಾನುಮಿತೀ ಆದಿಪದಾರ್ಥಃ। ಅತಿಪ್ರಸಂಗಂ ಚಾಹ–ಸುಖೇತಿ ॥ ತತ್ ಕಲ್ಪ್ಯಮಿತಿ ॥ ಜಾತಿ–ವ್ಯಕ್ತ್ಯೋಃ ಏಕವಿತ್ತಿವೇದ್ಯತ್ವನಿಯಮಮ್ ಅನುಪೇತ್ಯ ಸುಖಸಾಕ್ಷಾತ್ಕಾರ–ಸ್ವರೂಪ ಜ್ಞಾನಾನಂತರಂ ''ಸುಖಜ್ಞಾನಮಿದಂ, ಸಾಕ್ಷಾತ್ಕಾರಃ, ಸ್ವವೃತ್ತಿವರ್ತಮಾನ ವಿಷಯಕತ್ವಾತ್'' ಇತಿ ಸುಖಸಾಕ್ಷಾತ್ಕಾರತ್ವ–ಅನುಮಿತಿಮುಪೇತ್ಯ ತದ್ಧೇತು–ವ್ಯಾಪ್ತಿಸ್ಮರಣಾದಿಕಂ ಕಲ್ಪ್ಯಂ ಸ್ಯಾತ್ ಇತ್ಯರ್ಥಃ।**

**ಜ್ಞಾನಾಂತರಂ=ಶಾಬ್ದಾದಿರೂಪಮ್ ಇತ್ಯರ್ಥಃ। ಅತ್ರಾಪಿ ಹೇತೂಚ್ಛಿತ್ತಿರೇವ ವಿಪಕ್ಷೇ ಬಾಧಿಕಾ ಇತ್ಯಾಹ–ವ್ಯವಹರ್ತವ್ಯೇತಿ ॥**

ಮೂಲದಲ್ಲಿ 'ಸುಖಾನುಭವ ಮತ್ತು ಅದರ ಅಭಿಲಾಪ ಇವುಗಳ ಮಧ್ಯದಲ್ಲಿ ಜ್ಞಾನಾಂತರವನ್ನು ಕಲ್ಪಿಸಬೇಕಾದೀತು' ಎಂದು ಆಪತ್ತಿಯನ್ನು ಮಾಡಲಾಗಿದೆ. ಅದರ ಅಭಿಪ್ರಾಯ–ವಸ್ತುತಃ ವ್ಯಕ್ತಿಯು ಯಾವ ಜ್ಞಾನದಲ್ಲಿ ವಿಷಯವಾಗುವುದೋ ಜಾತಿಯೂ ಅದೇ ಜ್ಞಾನದಲ್ಲಿ ವಿಷಯವಾಗುತ್ತದೆ. ಇದು ಅನುಭವಸಿದ್ಧವಾದ ನಿಯಮ. ಈ ನಿಯಮದಂತೆ ಸುಖಸಾಕ್ಷಾತ್ಕಾರವನ್ನು ಗ್ರಹಿಸುವ ಸಾಕ್ಷಿಯೇ ತನ್ನಿಷ್ಠವಾದ ಸಾಕ್ಷಾತ್ಕಾರತ್ವ ಜಾತಿಯನ್ನೂ ಗ್ರಹಿಸುತ್ತದೆ. ಇದನ್ನು ನಿರಾಕರಿಸಿ ಆ ಸಾಕ್ಷಾತ್ಕಾರತ್ವಜಾತಿಯು ಅನುಮಾನವೇದ್ಯ ಎನ್ನಬೇಕಾದೀತು.

ಅನುಮಾನ ಮಾಡುವ ಕ್ರಮ ಹೀಗೆ—'ನನಗೆ ಬಂದಿರುವ ಸುಖಜ್ಞಾನವು, ಆತ್ಮನಲ್ಲಿರುವ ವರ್ತಮಾನ ಕಾಲೀನವಾದ ಸುಖವಿಷಯಕವಾದುದರಿಂದ ಪ್ರತ್ಯಕ್ಷಾತ್ಮಕವಾಗಿದೆ' ಎಂದು. ಹೀಗೆ ಈ ಅನುಮಾನದಿಂದ ಸುಖಜ್ಞಾನವು ಸಾಕ್ಷಾತ್ಕಾರವಾಗಿದೆ, ಎಂದು ತಿಳಿದ ಮೇಲೆ 'ನನಗೆ ಸುಖಸಾಕ್ಷಾತ್ಕಾರವಿದೆ' ಎಂದು ಅಭಿಲಾಪಮಾಡಬೇಕಾದೀತು. ಸುಖಾನುಭವದ ಅನುವ್ಯವಸಾಯ ಬಂದ ಕೂಡಲೇ ಅಭಿಲಾಪವನ್ನು ಮಾಡಬಾರದು, ಎಂದು ಆಪಾದನೆಯ ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ತಜ್ಜ್ಞಾನಪ್ರಕಾರೇತ್ಯಾದಿ-ಚತುರ್ಥಹೇತೌ ದಲದ್ವಯಕೃತ್ಯಂ ಪರೋಕ್ತ-ನಿರುಕ್ತಿಭಂಗೇ ವ್ಯಕ್ತಮಿತಿ ವ್ಯಭಿಚಾರಶಂಕಾನವಕಾಶಾತ್ ಸಂದಿಗ್ಧಾಸಿದ್ಧಿ-ಸ್ವರೂಪಾಸಿದ್ಧೀ ಕ್ರಮೇಣ ನಿರಾಹ-ನ ಚೇತ್ಯಾದಿನಾ ॥**

ನಾಲ್ಕನೆಯ ಹೇತುವಿನಲ್ಲಿರುವ ಎರಡು ವಿಶೇಷಣಗಳಿಗೆ ಕೃತ್ಯವನ್ನು ನೈಯಾಯಿಕರು ಹೇಳಿರುವ ಸ್ವತಸ್ತ್ವನಿರುಕ್ತಿಭಂಗಪ್ರಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಆ ಹೇತುವಿನಲ್ಲಿ ವ್ಯಭಿಚಾರ ಸಂದೇಹಕ್ಕೆ ಅವಕಾಶವಿಲ್ಲ. ಆದರೆ ಸಾಧ್ಯ-ಹೇತುಗಳು ಒಂದೇ ಆದುದರಿಂದ ಸಾಧ್ಯವು ಸಂದಿಗ್ಧವಾದುದರಿಂದ ಹೇತುವೂ ಸಂದಿಗ್ಧವಾಗುತ್ತದೆ. ಅದರಿಂದ ಸಂದಿಗ್ಧಾಸಿದ್ಧಿ. ಅಥವಾ ಹೇತುವು ಅನುವ್ಯವಸಾಯದಲ್ಲಿ ಇಲ್ಲ. ಆದರಿಂದ ಸ್ವರೂಪಾಸಿದ್ಧಿ ಎಂಬ ದೋಷವನ್ನು ಆಶಂಕೆ ಮಾಡಿ ಪರಿಹರಿಸಲಾಗಿದೆ. ಮೊದಲು ಸಂದಿಗ್ಧಾಸಿದ್ಧಿ ದೋಷವನ್ನು ಪರಿಹಾರ ಮಾಡಲಾಗಿದೆ.

## ಸಾಧ್ಯಾವೈಶಿಷ್ಟ್ಯ ಪರಿಹಾರ

**न च घटविशेष्यकत्वे सति घटत्वप्रकारकत्वस्यैव प्रामाण्यरूपत्वात् चतुर्थहेतौ साध्यावैशिष्ट्यम् । त्वयाप्यङ्गीकृतस्य प्रामाण्योल्लेखमात्रस्य हेतुत्वात् । त्वदनङ्गीकृतस्य सत्तया तदुल्लेखस्य च साध्यत्वात् । मन्मते केवलानुप्रमाणसाधारणस्य याथार्थ्यरूपप्रामाण्यविषयकत्वस्य साध्यत्वात्, केवलप्रमाणासाधारणस्योल्लेखस्य हेतुत्वाच्च ।**

'ಸ್ವತಸ್ತ್ವಸಾಧಕವಾದ ನಾಲ್ಕನೆಯ ಹೇತು-ತಜ್ಜ್ಞಾನ-ಪ್ರಕಾರ-ಪ್ರಕಾರತ್ವೇನ ತತ್-ಪ್ರಕಾರವದ್-ವಿಶೇಷ್ಯಕತ್ವೇನ ಜ್ಞಾನವಿಷಯಕತ್ವಾತ್' ಎಂದು. ಇದೇ ಪ್ರಾಮಾಣ್ಯವಿಷಯಕತ್ವ. ಹೀಗೆ ಈ ಅನುಮಾನದಲ್ಲಿ ಹೇತು ಮತ್ತು ಸಾಧ್ಯಗಳು ಒಂದೇ ಆಗಿರುವುದರಿಂದ ಸಿದ್ಧಸಾಧನತಾ ದೋಷ, ಎಂದು ಆಕ್ಷೇಪ.

ಈ ಆಕ್ಷೇಪ ಯುಕ್ತವಲ್ಲ. ತಾರ್ಕಿಕರಿಗೆ ಸಮ್ಮತವಾದ ಪ್ರಾಮಾಣ್ಯ-ಉಲ್ಲೇಖ ಮಾತ್ರ ಹೇತು. ಅವರು ಅಂಗೀಕರಿಸದ ಸತ್ತಾಯಾ ಉಲ್ಲೇಖಸಾಧ್ಯ. ಹೀಗೆ ಹೇತು-ಸಾಧ್ಯಗಳು ಒಂದೇ ಅಲ್ಲ.

ದ್ವೈತದರ್ಶನದಲ್ಲೂ, ಹೇತು-ಸಾಧ್ಯಗಳು ಒಂದೇ ಅಲ್ಲ- ಯಥಾವಸ್ಥಿತಜ್ಞೇಯ ವಿಷಯೀಕಾರಿತ್ವವು ಹೇತು. ಇದು ಕೇವಲ ಪ್ರಮಾಣ ಮತ್ತು ಅನುಪ್ರಮಾಣ-ಎರಡರಲ್ಲೂ ಇದೆ. ಆದರೆ ಸಾಧ್ಯ- ಕೇವಲ ಪ್ರಮಾಣದಲ್ಲಿ ಮಾತ್ರ ಇರುವ ಯಾಥಾರ್ಥ್ಯರೂಪವಾದ ಪ್ರಾಮಾಣ್ಯ. ನ್ಯಾಯದೀಪದಲ್ಲಿ ಇದನ್ನು ಹೀಗೆ ವಿವರಿಸಲಾಗಿದೆ-'ಪರ್ವತೋ ವಹ್ನಿಮಾನ್' ಎಂದು ವಹ್ನಿಯನ್ನು ಸಾಧ್ಯವನ್ನಾಗಿ ಮಾಡಿದರೂ ಧೂಮದಲ್ಲಿ ಪರ್ವತೀಯತ್ವವು ಸಿದ್ಧವಾದುದರಿಂದ ಪರ್ವತೀಯ ವಹ್ನಿಯೇ ಸಿದ್ಧವಾಗುತ್ತದೆ. ಅದರಂತೆ ಉಭಯ ಸಾಧಾರಣ ಯಾಥಾರ್ಥ್ಯರೂಪ ಹೇತುವು ಪ್ರಕೃತ ಜ್ಞಾನರೂಪ ಪಕ್ಷದಲ್ಲಿ ಇರುವುದರಿಂದ ಜ್ಞಾನಮಾತ್ರಗತವಾದ ತದ್ವತಿಕತತ್‌ಪ್ರಕಾರಜ್ಞಾನತ್ವರೂಪ-ಪ್ರಾಮಾಣ್ಯವು ಸಿದ್ಧವಾಗುತ್ತದೆ. ಹೀಗೆ ಹೇತುಸಾಧ್ಯಗಳಲ್ಲಿ ಭೇದವನ್ನು ತಿಳಿಯಬೇಕು.

## ನ್ಯಾಯದೀಪ

**'ಸುಖಂ ಮೇ ಭೂಯಾತ್' ಇತಿ ಇಚ್ಛಾಯಾಂ ಉಕ್ತರೂಪಪ್ರಕಾರಕತ್ವೇ ಸತ್ಯಪಿ ನ ಪ್ರಾಮಾಣ್ಯಮ್, ಇತಿ 'ತದೇವ ತತ್' ಇತಿ ಅಸಿದ್ಧಮ್, ಇತಿ ಕಶ್ಚಿತ್, ತನ್ನ । ಸುಖತ್ವವದ್-ವಿಶೇಷ್ಯಕತ್ವಾದಿರೂಪ-ಪ್ರಾಮಾಣ್ಯಸ್ಯ ಇಚ್ಛಾಯಾಮಪಿ ಸತ್ತ್ವಾತ್ ।**

**ಸುಖತ್ವವದ್-ವಿಶೇಷ್ಯಕ-ಜ್ಞಾನತ್ವಾದಿಕಂ ತತ್, ಇತ್ಯಶಕ್ಯಶಂಕಮ್ 'ಮನ್ಮತೇ' ಇತ್ಯಾದಿ-ವಕ್ಷ್ಯಮಾಣವಿರೋಧಾತ್ ।**

ಸಾಧ್ಯ-ಹೇತುಗಳ ಐಕ್ಯವನ್ನು ಕೆಲವರು ಹೀಗೆ ಪರಿಹಾರ ಮಾಡುತ್ತಾರೆ- 'ಸುಖಂ ಮೇ ಭೂಯಾತ್' ಎಂಬ ಇಚ್ಛೆಯಲ್ಲೂ ಸುಖತ್ವಪ್ರಕಾರಕತ್ವರೂಪ ಹೇತು ಇದೆ, ಆದರೆ ಅದರಲ್ಲಿ ಪ್ರಾಮಾಣ್ಯ ಇಲ್ಲ. ಹೀಗೆ ತದೇವ ತತ್=ತದ್ವದ್ ವಿಶೇಷ್ಯಕತ್ವಾದಿಗಳೇ ಪ್ರಾಮಾಣ್ಯ, ಎನ್ನುವುದು ಸರಿಯಲ್ಲ. ಆದ್ದರಿಂದ ಸಾಧ್ಯ-ಹೇತುಗಳಿಗೆ ಅಭೇದವಿಲ್ಲ.

ಇದು ಸರಿಯಲ್ಲ-ಇಚ್ಛೆಯಲ್ಲೂ ತದ್ವದ್-ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವು ಇದೆ. ಆದ್ದರಿಂದ ಅವೆರಡೂ ಒಂದೇ ಆಗಿವೆ.

ಸುಖತ್ವವದ್ ವಿಶೇಷ್ಯಕ ಜ್ಞಾನತ್ವಮ್ ಪ್ರಾಮಾಣ್ಯಮ್, ಸುಖತ್ವವದ್ ವಿಶೇಷ್ಯಕತ್ವ ಮಾತ್ರಂ ಹೇತುಃ ಹೀಗೂ ಸಾಧ್ಯ-ಹೇತುಗಳಿಗೆ ಭೇದವನ್ನು ಹೇಳುವುದು ಸರಿಯಲ್ಲ. ಅದು ಮೂಲದಲ್ಲಿರುವ ಮುಂದಿನ ವಾಕ್ಯಕ್ಕೆ ವಿರುದ್ಧ. ಮುಂದಿನ ವಾಕ್ಯದಲ್ಲಿ (ಮನ್ಮತೇ...) ಯಥಾರ್ಥ್ಯರೂಪವಾದ ಪ್ರಾಮಾಣ್ಯವು ಕೇವಲ ಪ್ರಮಾಣ-ಅನುಪ್ರಮಾಣಗಳಲ್ಲಿ ಎರಡರಲ್ಲೂ ಸಾಧಾರಣ ಎಂದು

ಹೇಳಲಾಗಿದೆ. ಪ್ರಾಮಾಣ್ಯದಲ್ಲಿ ಜ್ಞಾನತ್ವವನ್ನು ಸೇರಿಸಿದರೆ ಅದು ಅನುಪ್ರಮಾಣವಾಗಿರುವ ಇಂದ್ರಿಯಗಳಲ್ಲಿ ಬರುವುದಿಲ್ಲ. ಆಗ ಅದು ಉಭಯ ಸಾಧಾರಣವಾಗುವುದಿಲ್ಲ.

ಅದಕ್ಕಾಗಿ ಬೇರೆ ರೀತಿಯಿಂದಲೇ ಸಾಧ್ಯ-ಹೇತುಗಳಿಗೆ ಭೇದವನ್ನು ಮೂಲದಲ್ಲಿ ತೋರಿಸ ಲಾಗಿದೆ.

## ನ್ಯಾಯದೀಪ

**ಉಲ್ಲೇಖಮಾತ್ರಸ್ಯ।। ವಿಷಯತ್ವಮಾತ್ರಸ್ಯ। ಮಾತ್ರಪದೇನ ಸತ್ವವ್ಯಾವೃತ್ತಿಃ।**

**ಏತೇನ, ಯನ್ಮತೇ ತದ್ವತ್ವಮ್ ಅನುವ್ಯವಸಾಯಸ್ಯ ಸರ್ವಥೈವ ಅವಿಷಯಃ ನ ತನ್ಮತೇನಾಯಂ ಹೇತುಃ ವಕ್ಷ್ಯಮಾಣದಿಶಾ ಪ್ರಸಾಧ್ಯಾಂಗಕೋ ವಾ ಇತಿ ಸೂಚಿತಮ್ ।**

ವ್ಯವಸಾಯಗತವಾದ 'ತದ್ವದ್ ವಿಶೇಷ್ಯಕತ್ವವು' ಅನುವ್ಯವಸಾಯದಲ್ಲಿ ವಿಷಯವಾಗುತ್ತದೆ. ಆದರೆ ತದ್ವತ್ತ್ವಾಂಶ ಅಂದರೆ, ವಿಶೇಷ್ಯದಲ್ಲಿ ಜ್ಞಾನಪ್ರಕಾರೀಭೂತಾಂಶವು ಇದೆ, ಎಂದು ಅನುವ್ಯವಸಾಯ ತಿಳಿಸುವುದಿಲ್ಲ. ಅರ್ಥಾತ್ 'ತದ್ವದ್-ವಿಶೇಷ್ಯಕತ್ವವು' ಸತ್ತಯಾ ಅನುವ್ಯವಸಾಯ ವಿಷಯವಲ್ಲ, ಎಂದು ಕೆಲವರ ಮತ. ಮಣಿಕಾರ ಮಾತ್ರ ತದ್ವದ್ ವಿಶೇಷ್ಯಕತ್ವವು ಸರ್ವಥಾ ಅನುವ್ಯವಸಾಯ ವಿಷಯವಲ್ಲ, ಎಂದಿರುತ್ತಾನೆ. ಅವನ ಮತದಲ್ಲಿ ಈ ಹೇತುವು ಅಸಿದ್ಧಿದೋಷಗ್ರಸ್ತವಾದುದರಿಂದ ಸಾಧ್ಯಸಾಧಕವಲ್ಲ. ಇದನ್ನು ಮುಂದೆ ಅನುಭವದ ಆಧಾರ ನೀಡಿ ನಿರಾಕರಿಸಲಾಗಿದೆ.

## ನ್ಯಾಯದೀಪ

**ನನು ಸಿದ್ಧಾಂತೇ ಸತ್ತಾ-ಸತ್ವ-ಔದಾಸೀನ್ಯೇನ ತದ್ವಿಷಯಕತ್ವಾಭಾವಾತ್ ಸಾಧ್ಯಾವೈಶಿಷ್ಟ್ಯಂ ಸ್ಯಾತ್ ಇತ್ಯತ ಆಹ-ಮನ್ಮತೇ ಇತಿ ।। ವಾದಜಲ್ಪಯೋಃ ಪ್ರಯೋಗದಶಾಯಾಮ್ ಇತ್ಯರ್ಥಃ।**

**ವಹ್ನಿಮಾತ್ರಸಾಧನೇ ಪರ್ವತೀಯವಹ್ನಿನಾ ಪರ್ಯವಸಾನಮಿವ ಜ್ಞಾನ-ಮಾತ್ರನಿಷ್ಠ-ಪ್ರಾಮಾಣ್ಯೇನ ಪಕ್ಷಧರ್ಮತಾಬಲಾತ್ ಪರ್ಯವಸಾನಮ್ ಇತಿ ಭಾವಃ ।।**

ಧೂಮದಿಂದ ವಹ್ನಿತ್ವಾವಚ್ಛಿನ್ನವನ್ನು ಸಾಧನೆ ಮಾಡುವಾಗ ಧೂಮವು ಪರ್ವತೀಯವೆಂದು ತಿಳಿದಕಾರಣ ವಹ್ನಿಯೂ ಪರ್ವತೀಯ ಎಂದು ಪರ್ಯವಸಾನವಾಗುವಂತೆ, ಪ್ರಕೃತದಲ್ಲಿ ಜ್ಞಾನಗತವಾದ (ಕೇವಲ ಪ್ರಮಾಣಗತವಾದ) ಪ್ರಾಮಾಣ್ಯವೇ ಸಿದ್ಧವಾಗುತ್ತದೆ.

## ಕೇಚಿತ್‌ಕಾರೋಕ್ತ ಪರಿಹಾರ

**केचित्तु तथाङीकर्तव्यत्वं साध्यमिति न साध्यावैशिष्ट्यमित्याहुः ।।**

'ಪ್ರಾಮಾಣ್ಯವಿಷಯಕತ್ವೇನ ಅಂಗೀಕರ್ತವ್ಯತ್ವಂ' ಇದು ಸಾಧ್ಯ. 'ತದ್ವಿಷಯಕತ್ವವು' ಹೇತು. ಹೀಗೆ ಸಾಧ್ಯ-ಹೇತುಗಳು ಬೇರೆಯಾಗಿವೆ, ಎಂದು ಕೆಲವರ ಅಭಿಪ್ರಾಯ. (ಈ ವಾಕ್ಯ ಕೆಲವು ಪ್ರತಿಗಳಲ್ಲಿ ಇಲ್ಲ.)

## ನಾಲ್ಕನೆಯ ಹೇತುವಿಗೆ ಅಸಿದ್ಧಿಪರಿಹಾರ

**नाप्यसिद्धिः– सुखमेव सुखत्वेनानुभवामि, स्तम्भमेव स्तम्भत्वेन जानामि, इत्यनुभवात् ।**

**एतेनोक्तवक्ष्यमाणानुमानेषु बाधो निरस्तः। सुखमेव सुखत्वेनानुभवामीत्यादिज्ञाने प्रामाण्यशब्दानुल्लेखेऽपि तदर्थस्य सुखत्ववति सुखत्वप्रकारकत्वरूपस्य प्रामाण्यस्योल्लेखात् ।**

ಈ ನಾಲ್ಕನೆಯ ಹೇತುವು ಪರತಸ್ತ್ವವಾದಿಗಳಿಗೆ ಅಸಿದ್ಧ ಎನ್ನಬಾರದು. ತದ್ವದ್ ವಿಶೇಷ್ಯಕತ್ವವು ಅನುವ್ಯವಸಾಯದಿಂದ ಗೃಹೀತವಾಗುತ್ತದೆ, ಎನ್ನುವುದು ಅನುಭವ ಸಿದ್ಧವಾಗಿದೆ-'ಸುಖಮೇವ ಸುಖತ್ವೇನ ಅನುಭವಾಮಿ' 'ಸ್ತಂಭಮೇವ ಸ್ತಂಭತ್ವೇನ ಅನುಭವಾಮಿ' ಎಂದು ನಮಗೆ ಅನುಭವ ಇದೆ. ಇದರ ಅರ್ಥ-'ನಾನು ಅನುಭವಿಸುತ್ತಿರುವುದು ಸುಖವೇ ಹೊರತು ದುಃಖಾಭಾವವಲ್ಲ' 'ನಾನು ಕಂಬವನ್ನೇ ನೋಡುತ್ತಿದ್ದೇನೆ, ಮನುಷ್ಯನನ್ನಲ್ಲ' ಎಂದು. ಅರ್ಥಾತ್, ನಾನು ತಿಳಿದ ವಿಶೇಷ್ಯದಲ್ಲಿ ಸುಖತ್ವ-ಸ್ತಂಭತ್ವ ಮುಂತಾದ ಪ್ರಕಾರೀಭೂತ ಧರ್ಮಗಳು ಇವೆ, 'ಸುಖತ್ವವದ್ ವಿಶೇಷ್ಯಕ, ಸ್ತಂಭತ್ವವದ್-ವಿಶೇಷ್ಯಕ ಜ್ಞಾನವಾನಹಮ್' ಎಂಬ ಜ್ಞಾನ ನಮಗಿದೆ. ಆದ್ದರಿಂದ ಅಸಿದ್ಧಿದೋಷ ಇಲ್ಲ.

ಹೀಗೆ ಜ್ಞಾನದಲ್ಲಿ ತದ್ವದ್ ವಿಶೇಷ್ಯಕತ್ವಭಾನವು ಅನುಭವಿಸಿದ್ಧವಾದುದರಿಂದ ಸ್ವತಸ್ತ್ವಸಾಧಕ ವಾದ ಎಲ್ಲಾ ಅನುಮಾನಗಳಿಗೂ ಬಾಧ ಇಲ್ಲ. 'ತದ್ವದ್ವಿಶೇಷ್ಯಕತ್ವಭಾನವು ಅನುವ್ಯವಸಾಯದಲ್ಲಿ ಇಲ್ಲ' ಎಂಬ ಅನುಭವವೇನಾದರೂ ಇದ್ದಿದ್ದರೆ ಅದರ ಬಾಧ ಅನುಮಾನಕ್ಕೆ ಬರುತ್ತಿತ್ತು. ಹಾಗೆ ನಮಗೆ ಅನುಭವ ಇಲ್ಲ. ಆದ್ದರಿಂದ ಬಾಧದೋಷ ಇಲ್ಲ. ಈ ಅನುಭವವು 'ಇದಂ ಜ್ಞಾನಂ ಪ್ರಮಾಣಮ್' ಎನ್ನುವ ಜ್ಞಾನದಂತೆ ಪ್ರಾಮಾಣ್ಯ ಪ್ರಕಾರಕವಾಗದಿರಬಹುದು. ಆದರೆ, ಪ್ರಾಮಾಣ್ಯದ ಅರ್ಥವೇ ಆದ 'ಸುಖತ್ವವತಿ ಸುಖತ್ವಪ್ರಕಾರಕತ್ವವು' ಈ ಅನುಭವದಲ್ಲಿ ಗೋಚರವಾಗಿದೆ. ಅದು ಪ್ರಕೃತ ಸಾಧ್ಯಸಿದ್ಧಿಗೆ ಅನುಕೂಲವೇ ಆಗಿದೆ.

## ನ್ಯಾಯದೀಪ

**ಏತೇನೇತಿ ॥ ತದ್ವದ್ ವಿಶೇಷ್ಯಕತ್ವೋಲ್ಲೇಖಾದೇಃ ಅನುಭವಸಿದ್ಧತ್ವೇನ ಇತ್ಯರ್ಥಃ । ತದೇವ ವ್ಯನಕ್ತಿ–ಸುಖಮೇವೇತಿ ॥ ಅನುಲ್ಲೇಖೇಽಪೀತಿ ॥ 'ಇದಂ ಜ್ಞಾನಂ ಪ್ರಮಾಣಮ್' ಇತ್ಯನಾಕಾರೇಽಪಿ ಇತ್ಯರ್ಥಃ । ಉಲ್ಲೇಖಾತ್ ॥ ವಿಷಯೀಕರಣಾದಿತ್ಯರ್ಥಃ।**

ಮೂಲದಲ್ಲಿ ಏತೇನ, ಎಂದರೆ ತದ್ವದ್‌ವಿಶೇಷ್ಯಕತ್ವವು ಅನುವ್ಯವಸಾಯದಲ್ಲಿ ಉಲ್ಲಿಖಿತವಾಗಿರುವುದು ಅನುಭವ ಸಿದ್ಧವಾಗಿದ್ದರೂ ಎಂದರ್ಥ.

## ಸ್ವತಸ್ತ್ವ ಸಾಧಕ ಅನುಮಾನಾಂತರ

**यद्वा, विमतः प्रामाण्यविरोध्युपस्थापकसामग्र्यसमवहितोऽनुव्यवसायः स्वविषयव्यवसायप्रामाण्यविषयकः निष्कम्पप्रवृत्तिहेतुव्यवसायविषयक–अनुव्यवसायत्वात्, उक्तरूपव्यवसायांशे लौकिकप्रत्यक्षत्वाद्वा, गृहीतप्राण्येन ज्ञानेन समानविषयकस्योत्तरस्य ज्ञानान्तरस्यानुव्यवसायवत् ।।**

ಅಥವಾ, ಹೀಗೂ ಅನುಮಾನ ಮಾಡಬಹುದು–

ಪಕ್ಷ–ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯಾದಿಗಳ ಜ್ಞಾನಕ್ಕೆ ಕಾರಣವಾದ ಸಾಮಗ್ರಿಗಳಿಂದ ಜೊತೆಗೂಡಿರದ ಅನುವ್ಯಾವಸಯವು–

ಸಾಧ್ಯ–ತನಗೆ ವಿಷಯವಾದ ವ್ಯವಸಾಯದಲ್ಲಿರುವ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ.

ಹೇತು–1. ಏಕೆಂದರೆ, ಆ ಅನುವ್ಯವಸಾಯಕ್ಕೆ ವಿಷಯವಾಗಿರುವ ವ್ಯವಸಾಯವು ಅಸಂದಿಗ್ಧ ಪ್ರವೃತ್ತಿಗೆ ಕಾರಣವಾಗಿದೆ.

ಹೇತು–2. ಅಥವಾ, ಆ ಅನುವ್ಯವಸಾಯವು ವ್ಯವಸಾಯದ ಅಂಶದಲ್ಲಿ ಲೌಕಿಕ ಪ್ರತ್ಯಕ್ಷವಾಗಿದೆ.

ಉದಾಹರಣೆ–ಒಮ್ಮೆ ಜಲಜ್ಞಾನ ಬಂದು ಅದರ ಪ್ರಾಮಾಣ್ಯವು ನಿಶ್ಚತವಾಗಿದ್ದು ಮತ್ತೆ ಅದೇ ಜಲಜ್ಞಾನ ಬಂದಾಗ ಅದನ್ನು ಗ್ರಹಿಸುವ ಅನುವ್ಯವಸಾಯ. ಆ ಅನುವ್ಯವಸಾಯವು ವ್ಯವಸಾಯದಲ್ಲಿ ಸ್ಮೃತ್ಯುಪನೀತವಾದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಇದು ನೈಯಾಯಿಕರಿಗೂ ಸಮ್ಮತ.

## ನ್ಯಾಯದೀಪದಲ್ಲಿ ಅವತಾರಿಕೆ

**ಪೂರ್ವೋಕ್ತ ಹೇತುವಿಶೇಷಣೇಷು ಪ್ರತಿವಾದಿವಿಪ್ರತಿಪತ್ತೇಃ ಪ್ರಸಾಧ್ಯಾಂಗತ್ವಂ ಮನ್ವಾನಃ ಪ್ರಾಗುಕ್ತ ಪಕ್ಷತಾವಚ್ಛೇದಕೇಷು ಏಕಂ ಪಕ್ಷತಾವಚ್ಛೇದಕಂ ಕೃತ್ವಾ ಅನ್ಯಂ ಹೇತೂಕೃತ್ಯಾಹ–ಯದ್ವೇತಿ ॥**

ಹಿಂದೆ ಹೇಳಿದ ಅನುಮಾನಗಳ ಹೇತುಗಳಲ್ಲಿ ಪರತಸ್ತ್ವವಾದಿಗಳಿಗೆ ಸಮ್ಮತಿ ಇರಲಿಲ್ಲ, ವಿಪ್ರತಿಪತ್ತಿ ಇತ್ತು. ಮೊದಲನೆಯ ಹೇತು–ಪ್ರಾಮಾಣ್ಯ ಸಂಶಯವಿರೋಧಿತ್ವ. ಇದನ್ನು ಪರತಸ್ತ್ವವಾದಿಗಳು ಸುಲಭವಾಗಿ ಒಪ್ಪುವುದಿಲ್ಲ. ಒಪ್ಪಿದರೂ, ಅನುವ್ಯವಸಾಯದಲ್ಲಿ ಪ್ರಾಮಾಣ್ಯವ್ಯಾಪ್ಯತ್ವ ವಿಷಯಕತ್ವವೇ ಇದೆ, ಎಂದೆಲ್ಲ ವಿಪ್ರತಿಪತ್ತಿ ಇದೆ. ಅದನ್ನು ನಿರಾಸ ಮಾಡಿ ಆ ಹೇತುಗಳಿಂದ ಪ್ರಾಮಾಣ್ಯವಿಷಯಕತ್ವವನ್ನು ಸಾಧಿಸಬೇಕಾಗಿತ್ತು. ಈ ಅನುಮಾನಗಳಲ್ಲಿ ಅಂತಹ ಪ್ರಯಾಸವಿಲ್ಲ. ಹಿಂದಿನ ಅನುಮಾನಗಳಲ್ಲಿ ,

ಎರಡನೆಯ ಅನುಮಾನದಲ್ಲಿ ಪಕ್ಷ– 'ದೋಷಶಂಕಾದ್ಯಕಲಂಕಿತವಾದ ಅನುವ್ಯವಸಾಯ.'

ಮೂರನೆಯ ಅನುಮಾನದಲ್ಲಿ ಪಕ್ಷ– 'ನಿಷ್ಕಂಪಪ್ರವೃತ್ತಿ–ಹೇತುಭೂತ–ಜ್ಞಾನದ ಅನುವ್ಯವಸಾಯ'

ನಾಲ್ಕನೆಯ ಅನುಮಾನದಲ್ಲಿ ಪಕ್ಷ– 'ಪ್ರಾಮಾಣ್ಯವಿರೋಧ್ಯುಪಸ್ಥಾಪಕ–ಸಾಮಗ್ರ್ಯ ಸಮವಹಿತವಾದ ಅನುವ್ಯವಸಾಯ.'

ಪ್ರಕೃತಾನುಮಾನದಲ್ಲಿ—ಮೂರನೆಯ ಅನುಮಾನದ ಪಕ್ಷತಾವಚ್ಛೇದಕವು ಹೇತುವಾಗಿದೆ. ನಾಲ್ಕನೆಯ ಅನುಮಾನದ ಪಕ್ಷತಾವಚ್ಛೇದಕವೇ ಇಲ್ಲೂ ಪಕ್ಷತಾವಚ್ಛೇದಕವಾಗಿದೆ.

ಪ್ರಕೃತಾನುಮಾನದಪಕ್ಷ–ಪ್ರಾಮಾಣ್ಯವಿರೋಧ್ಯುಪಸ್ಥಾಪಕಸಾಮಗ್ರ್ಯಸಮವಹಿತವಾದ ಅನುವ್ಯವಸಾಯ.

ಹೇತು–ನಿಷ್ಕಂಪ ಪ್ರವೃತ್ತಿಹೇತು–ವ್ಯವಸಾಯ ವಿಷಯಕ–ಅನುವ್ಯವಸಾಯತ್ವಾತ್ ।

## ನ್ಯಾಯದೀಪದಲ್ಲಿ ಅವತಾರಿಕೆ

**ಯದ್ವಾ, ಪೂರ್ವಂ ಪ್ರಾಮಾಣ್ಯಂ ಕ್ವಾಪಿ ನಾನುವ್ಯವಸಾಯವೇದ್ಯಮ್ ಇತಿ ಮತಮ್ ಉಪೇತ್ಯ ಪ್ರಾಮಾಣ್ಯಾನುಮಿತಿ ದೃಷ್ಟಾಂತೇನ ಪ್ರಯೋಗಾಃ ಉಕ್ತಾಃ । ಇದಾನೀಂ ತು ಕ್ವಚಿತ್ತದ್ವೇದ್ಯಮ್ ಇತಿ ಮತಮ್ ಉಪೇತ್ಯಾಹ–ಯದ್ವೇತಿ ॥**

ಅಥವಾ, ಇದೂ ಒಂದು ವ್ಯತ್ಯಾಸವನ್ನು ಮುಂದಿನ ಅನುಮಾನಗಳಲ್ಲಿ ಗಮನಿಸಬಹುದು– ಹಿಂದಿನ ಅನುಮಾನಗಳಲ್ಲಿ ದೃಷ್ಟಾಂತ ಪ್ರಾಮಾಣ್ಯಾನುಮಿತಿ. ಅನುವ್ಯವಸಾಯದಲ್ಲಿ ಎಂದೂ

ಪ್ರಾಮಾಣ್ಯವು ವಿಷಯವಲ್ಲ, ಎಂಬ ಮತವನ್ನು ಅನುಸರಿಸಿ ಅನುಮಿತಿಯನ್ನು ದೃಷ್ಟಾಂತವನ್ನಾಗಿ ಅರಸಲಾಗಿದೆ. ಪ್ರಕೃತದಲ್ಲಿ, ಅನುವ್ಯವಸಾಯದಲ್ಲೂ ಕೆಲವೊಮ್ಮೆ ಪ್ರಾಮಾಣ್ಯವು ವಿಷಯ ವಾಗುತ್ತದೆ, ಎಂದು ಅಂಗೀಕರಿಸಿರುವ ಮತದಂತೆ ಮುಂದಿನ ಅನುಮಾನಗಳು ಪ್ರವೃತ್ತವಾಗಿವೆ.

## ಪಕ್ಷತಾವಚ್ಛೇದಕ ವಿಮರ್ಶೆ

**ವಿಮತ ಇತಿ ॥ ಪ್ರಾಮಾಣ್ಯಾಪ್ರಾಮಾಣ್ಯವಿಷಯಕತ್ವಾಭ್ಯಾಂ ವಿಪ್ರತಿಪತ್ತಿ-ವಿಷಯಃ ಇತ್ಯರ್ಥಃ । ವಿಮತೇರಪಿ ನಿಯತವಿಷಯತ್ವಾಯ ಅವಚ್ಛೇದಕಮ್ ಆವಶ್ಯಕಮೇವ । ತತ್ ಕಿಮ್ ಇತ್ಯತ ಆಹ–ಪ್ರಾಮಾಣ್ಯೇತಿ ॥ ಉಪಸ್ಥಾಪಕೇತಿ ॥ ಉಪಸ್ಥಿತಿ–ತತ್‌ಸಾಮಗ್ರೀ ಇತ್ಯರ್ಥಃ ॥**

**ನನ್ವೇವಮ್ ಉಕ್ತರೂಪಾನುವ್ಯವಸಾಯತ್ವಸ್ಯೈವ ಪಕ್ಷತಾವಚ್ಛೇದಕತ್ವ-ಸಂಭವೇ ಕಿಂ ವಿಮತ್ಯಾ ? ಇತಿ ಚೇನ್ನ ।**

**''ಯದ್ಯಪಿ ವಿಮತಿರಪಿ ನಿಯತವಿಷಯತ್ವಾಯ ಅವಚ್ಛೇದಕಸಾಪೇಕ್ಷಾ । ತಥಾಪಿ ಸಾವಯವತ್ವಸಾಧಿತೇನ ಕಾರ್ಯತ್ವೇನ ಪೃಥಿವ್ಯಾಃ ಸಕರ್ತೃಕತ್ವ-ಸಾಧನಮಿವ ಸ್ವನಿಯಾಮಕನಿಯತಯಾ ಲಘ್ವ್ಯಾ ವಿಮತ್ಯಾ ಪಕ್ಷತಾವ-ಚ್ಛೇದಕೋ ನ ವಿರುದ್ಧಃ'' ಇತಿ ನ್ಯಾಯಾಮೃತೋಕ್ತದಿಶಾ ಉಪಪತ್ತೇರಿತಿ ತಾತ್ಪರ್ಯಾತ್ ।**

ಮೂಲದಲ್ಲಿ ಬಾಧಾದಿವಾರಕವಿಶೇಷಣ–ಸಹಿತವಾದ ಅನುವ್ಯವಸಾಯತ್ವವಷ್ಟನ್ನೇ ಪಕ್ಷತಾವಚ್ಛೇಕವನ್ನಾಗಿ ಮಾಡಲು ಬರುವಾಗ 'ವಿಮತಃ' ಎಂದು ಹೇಳುವ ಮೂಲಕ ವಿಮತತ್ವವನ್ನು ಪಕ್ಷತಾವಚ್ಛೇದಕವನ್ನಾಗಿ ಮಾಡಿದ್ದು ಏಕೆ ? ಈ ಪ್ರಶ್ನೆಗೆ ನ್ಯಾಯಾಮೃತದಲ್ಲಿ ಶ್ರೀವ್ಯಾಸರಾಜರು ಹೇಳಿದ ಸಮಾಧಾನವನ್ನು ಇಲ್ಲಿ ರಾಯರು ಜ್ಞಾಪಿಸಿದ್ದಾರೆ.

''ವಿಮತತ್ವವು ಲಘುರೂಪವಾದುದರಿಂದ ಅದೇ ಪಕ್ಷತಾವಚ್ಛೇದಕ. ವಸ್ತುತಃ ವಿಮತ ಎಂದರೆ ಸಂದಿಗ್ಧ ಎಂದರ್ಥ. ಸಂದೇಹ ಅನೇಕವಿಧವಾಗಿರುತ್ತದೆ. ಪ್ರಕೃತ ಸಾಧ್ಯಗಳನ್ನು ನೋಡಿ ವಿವಕ್ಷಿತಸಂದೇಹವನ್ನು ನಿಶ್ಚಯಿಸಬೇಕಾಗುತ್ತದೆ. ಇದು ಗೌರವ. ಆದರೂ ಈ ರೀತಿಯ ವಿಧಾನವನ್ನು ಅನುಸರಿಸುವ ಕ್ರಮ ಶಾಸ್ತ್ರದಲ್ಲಿ ಇದೆ. ಉದಾಹರಣೆಗೆ– 'ಕ್ಷಿತ್ಯಂಕುರಾದಿಕಂ ಸಕರ್ತೃಕಮ್' ಎಂಬ ಅನುಮಾನದಲ್ಲಿ ಕಾರ್ಯತ್ವಾತ್, ಎಂದು ಹೇತು. ಆದರೆ, ಕಾರ್ಯತ್ವವು ಅಸಿದ್ಧ, ಎಂಬ ಶಂಕೆ ಬಂದಾಗ ಅದನ್ನು ಮತ್ತೆ ಸಾವಯವತ್ವ ಹೇತುವಿನಿಂದ ನೈಯಾಯಿಕರು ಸಾಧಿಸುತ್ತಾರೆ. ಅದರಂತೆ 'ವಿಮತಂ' ಎಂದು ಪಕ್ಷ ಮಾಡಿ ಆ ವಿಮತಿಯನ್ನು ಧರ್ಮಿ ಮತ್ತು ಸಾಧ್ಯವಿಶೇಷದಿಂದ ನಿರ್ಧರಿಸಲಾಗುತ್ತದೆ.

'ಸ್ವನಿಯಾಮಕನಿಯತಯಾ' ಎಂಬ ನ್ಯಾಯಾಮೃತದ ಪದಕ್ಕೆ ಶ್ರೀವಿಜಯೀಂದ್ರರು ಹೀಗೆ ವಿವರಣೆ ನೀಡಿದ್ದಾರೆ– ಧರ್ಮಿತಾವಚ್ಛೇದಕತಯಾ ಉಪಸ್ಥಿತಃ ಯಃ ಧರ್ಮಃ ಸ್ವನಿಯಾಮಕಃ, ತನ್ನಿಯತಯಾ=ತದುಪಸ್ಥಿತಿಕೃತ–ಅನತಿಪ್ರಸಕ್ತ ವಿಷಯತಾಕಯಾ ಇತ್ಯರ್ಥಃ।

ವಿಮತಿ ಅನೇಕ ವಿಧವಾದುದರಿಂದ ವಿಮತಿ ವಿಷಯತ್ವ ಅತಿಪ್ರಸಕ್ತಧರ್ಮ. ಆದರೂ ವಿಪ್ರತಿಪತ್ತಿಯಲ್ಲಿ ಧರ್ಮಿತಾವಚ್ಛೇದಕವನ್ನು ಗಮನಿಸಿ ಅದೇ ಧರ್ಮವನ್ನು ವಿಮತಿಯಲ್ಲೂ ಧರ್ಮಿತಾವಚ್ಛೇದಕವನ್ನಾಗಿ ಮಾಡಿದಾಗ ಅನತಿ ಪ್ರಸಕ್ತವಾದ ವಿಮತಿವಿಷಯತ್ವವು ತಿಳಿಯುತ್ತದೆ.

ತಾರ್ಕಿಕರ ಕಾರ್ಯತ್ವ ಹೇತುವಿಗೂ ಪ್ರಕೃತ ವಿಮತಿವಿಷಯತ್ವಕ್ಕೂ ಪ್ರಕೃತದಲ್ಲಿ ವಿವಕ್ಷಿತವಾದ ಸಾಮ್ಯ–'ಅನ್ಯೋಪಸ್ಥಿತ್ಯಧೀನ–ಉಪಸ್ಥಿತಿಕತ್ವಮ್'. ಅದೇ ರೀತಿಯಲ್ಲಿ ಪ್ರಕೃತದಲ್ಲಿ ವಿಮತತ್ವವನ್ನು ಪಕ್ಷತಾವಚ್ಛೇದಕವನ್ನಾಗಿ ಮಾಡಲಾಗಿದೆ.

## ಪಕ್ಷದಲ್ಲಿ ವಿಶೇಷಣಗಳಿಗೆ ಕೃತ್ಯ

**ಅತ್ರ ಪ್ರಾಮಾಣ್ಯೇತ್ಯಾದಿ ವಿಶೇಷಣೋಕ್ತ್ಯಾ ಪ್ರತಿಬದ್ಧಾನುವ್ಯವಸಾಯೇ ಬಾಧಶಂಕಾ,**

**ಅನುವ್ಯವಸಾಯೇತ್ಯುಕ್ತ್ಯಾ 'ಘಟಜ್ಞಾನಮ್' ಇತಿ ಶಾಬ್ದಜ್ಞಾನೇ ಬಾಧಶಂಕಾ ನಿರಸ್ತಾ ಇತಿ ಧ್ಯೇಯಮ್ ।**

ಪ್ರಕೃತ ಪಕ್ಷದಲ್ಲಿ 'ಪ್ರಾಮಾಣ್ಯವಿರೋಧಿ' ಇತ್ಯಾದಿ ವಿಶೇಷಣವನ್ನು ಅನುವ್ಯವಸಾಯಕ್ಕೆ ಕೊಟ್ಟಿರುವುದರಿಂದ ಪ್ರಾಮಾಣ್ಯವಿರೋಧಿಯ ಜ್ಞಾನ ಅಥವಾ ಆ ಜ್ಞಾನಸಾಮಗ್ರಿಯಿಂದ ಪ್ರತಿಬದ್ಧವಾದ ಅನುವ್ಯವಸಾಯವು ಪಕ್ಷದಲ್ಲಿ ಸೇರುವುದಿಲ್ಲ. ಅದು ಸೇರಿದ್ದರೆ ಅಂತಹ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲವಾದುದರಿಂದ ಬಾಧದೋಷ ಬರುತ್ತಿತ್ತು.

'ಅನುವ್ಯವಸಾಯ' ಎಂದಿರುವುದರಿಂದ ಜ್ಞಾನವಿಷಯಕವಾದ ಪ್ರತ್ಯಕ್ಷವೇ ಪಕ್ಷವಾಗುತ್ತದೆ. ಆದಿಲ್ಲದಿದ್ದರೆ 'ಘಟಜ್ಞಾನಮ್ ಇದಂ' ಎಂಬ ವಾಕ್ಯಜನ್ಯವಾದ, ಜ್ಞಾನವಿಷಯಕವಾದ ಶಾಬ್ದಬೋಧದಲ್ಲಿ ಪ್ರಾಮಾಣ್ಯವು ವಿಷಯವಲ್ಲದ ಕಾರಣ ಬಾಧದೋಷ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ಅನುವ್ಯವಸಾಯ ಪದವಿದೆ.

## ವಿವಕ್ಷಿತ ಅನುವ್ಯವಸಾಯ ನಿರೂಪಣೆ

**ಅತೀತಾದ್ಯವಿಷಯಕ–ಪ್ರತ್ಯಕ್ಷತ್ವಾದಿರೂಪತ್ವಾತ್ ಅನುವ್ಯವಸಾಯತ್ವಸ್ಯ ಪ್ರಥಮಜ್ಞಾನಗೋಚರಾನುವ್ಯವಸಾಯೋಽತ್ರ ಪಕ್ಷತ್ವೇನ ಪರ್ಯವಸಿತೋ ಜ್ಞೇಯಃ । ಉತ್ತರಜ್ಞಾನ ಗೋಚರಸ್ಯ ದೃಷ್ಟಾಂತತ್ವೇನ ಉಪಾದಾನಾತ್ ।**

ಅನುವ್ಯವಸಾಯ ಎಂದರೆ ಅತೀತಾದ್ಯವಿಷಯಕ ಜ್ಞಾನವಿಷಯಕ ಪ್ರತ್ಯಕ್ಷ. ಅದರ ಪರ್ಯವಸಾನ–ಪ್ರಥಮೋತ್ಪನ್ನವಾದ, ವ್ಯವಸಾಯವಿಷಯಕವಾದ ಅನುವ್ಯವಸಾಯ. ಮತ್ತೊಮ್ಮೆ ಬಂದ ಗೃಹೀತ ಪ್ರಾಮಾಣ್ಯಕ ಅದೇ ಜ್ಞಾನವನ್ನು (ಉತ್ತರಜ್ಞಾನವನ್ನು) ವಿಷಯೀಕರಿಸುವ ಅನುವ್ಯವಸಾಯವು ದೃಷ್ಟಾಂತವಾಗಿರುವುದರಿಂದ ಪರಿಶೇಷಾತ್ ಪ್ರಥಮೋತ್ಪನ್ನ ಜ್ಞಾನವಿಷಯಕ ಪ್ರತ್ಯಕ್ಷವೇ ಪಕ್ಷೀಭೂತವಾದ ಅನುವ್ಯವಸಾಯ.

## ಸಾಧ್ಯಸ್ವರೂಪವಿವೇಚನೆ

**ಸ್ವವಿಷಯೇತಿ ಸಾಧ್ಯಾಂಶಃ ಪೂರ್ವವದ್ ವ್ಯಾಖ್ಯೇಯಃ। ಪ್ರಾಮಾಣ್ಯ-ಪ್ರಕಾರಕೋ ವಾ, ಇತ್ಯಪಿ ಧ್ಯೇಯಮ್, ಪ್ರಾಗುಪಸ್ಥಿತೇಃ ಅಪ್ರಯೋಜ-ಕತಾಯಾಃ ನಿರ್ವಿಕಲ್ಪಕಭಂಗೇ ವ್ಯಕ್ತತ್ವಾತ್।**

ಹಿಂದಿನ ಅನುಮಾನಗಳಲ್ಲಿ 'ಸ್ವಗ್ರಾಹ್ಯ ಜ್ಞಾನ ಪ್ರಾಮಾಣ್ಯವಿಷಯಕಃ ತತ್–ಪ್ರಕಾರಕೋ ವಾ' ಎಂದು ಸಾಧ್ಯ. ಅಲ್ಲಿ 'ಸ್ವಗ್ರಾಹ್ಯ ಜ್ಞಾನ' ಎಂಬ ಪದವಿದೆ. ಅದರ ಬದಲು ಇಲ್ಲಿ 'ಸ್ವವಿಷಯ ವ್ಯವಸಾಯ' ಎಂಬ ಪದವಿದೆ. 'ಅನುವ್ಯವಸಾಯಕ್ಕೆ ವಿಷಯವಾದ ವ್ಯವಸಾಯಾತ್ಮಕವಾದ ತತ್ತಜ್ಞಾನ' ಎಂದು ಅಲ್ಲಿಯಂತೆಯೇ ಇಲ್ಲಿ ಅರ್ಥ. ಅಲ್ಲಿಯಂತೆಯೇ 'ವ್ಯವಾಸಾಯ ಪ್ರಾಮಾಣ್ಯ ಪ್ರಕಾರಕಃ' ಎಂದೂ ಸಾಧ್ಯವನ್ನು ಪರಿಗ್ರಹಿಸಬಹುದು. 'ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ' ಎಂಬ ನಿಬಂಧನೆಯನ್ನು ಮುಂದೆ 'ನಿರ್ವಿಕಲ್ಪಕ ಭಂಗ' ಪ್ರಕರಣದಲ್ಲಿ ನಿರಾಕರಿಸುತ್ತಾರೆ. ಆದ್ದರಿಂದ ಪೂರ್ವದಲ್ಲಿ ಅನುಪಸ್ಥಿತವಾದ ಪ್ರಾಮಾಣ್ಯವು ಅನುವ್ಯವಸಾಯದಲ್ಲಿ ಪ್ರಕಾರವಾಗುವುದು ಹೇಗೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಹೀಗಾಗಿ, ಪ್ರಾಮಾಣ್ಯ ಪ್ರಕಾರಕತ್ವವನ್ನೂ ಸಾಧ್ಯವನ್ನಾಗಿ ಪರಿಗ್ರಹಿಸಬಹುದು.

## ಹೇತುಸ್ವರೂಪವಿವೇಚನೆ

**ನಿಷ್ಕಂಪ–ಪ್ರವೃತ್ತಿ–ಹೇತ್ವಿತಿ ವ್ಯವಸಾಯ–ವಿಶೇಷಣೇನ ಸಂಶಯಾದಿ-ಗೋಚರಾನುವ್ಯವಸಾಯೇ,**

**ಅನುವ್ಯವಸಾಯೇತ್ಯುಕ್ತ್ಯಾ ತಾದೃಶಜ್ಞಾನಗೋಚರ–ಶಾಬ್ದಜ್ಞಾನೇ ಚ ನ ವ್ಯಭಿಚಾರಃ।**

ಹೇತುಶರೀರದಲ್ಲಿ 'ನಿಷ್ಕಂಪ ಪ್ರವೃತ್ತಿಹೇತು' ಎಂಬ ವಿಶೇಷಣವನ್ನು ಅನುವ್ಯವಸಾಯಕ್ಕೆ ವಿಷಯವಾದ ವ್ಯವಸಾಯಕ್ಕೆ ಕೊಡಲಾಗಿದೆ. ಇದಿಲ್ಲವೇ ಹೋದರೆ 'ವ್ಯವಸಾಯ ವಿಷಯಕಾನು-ವ್ಯವಸಾಯತ್ವಾತ್' ಎಂದಿಷ್ಟೇ ಹೇತುವಾಗುತ್ತದೆ. ಆಗ ವ್ಯವಸಾಯಪದದಿಂದ 'ಇದಂ ಜಲಂ ನ

ವಾ' ಎಂಬ ಸಂದೇಹವನ್ನು ಪರಿಗ್ರಹಿಸಿ ತದ್ವಿಷಯಕಾನುವ್ಯವಸಾಯದಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಈ ವಿಶೇಷಣ ಬೇಕು. ಆಗ, ಸಂದೇಹವು ಜಲಾರ್ಥಿಯ ನಿಃಸ್ಸಂದಿಗ್ಧ ಪ್ರವೃತ್ತಿಗೆ ಹೇತುವಲ್ಲದ ಕಾರಣ ಅದರ ಸಂಗ್ರಹವಾಗುವುದಿಲ್ಲ. ಅರ್ಥ ನಿಶ್ಚಯ ಮಾತ್ರ ಸಂಗ್ರಹವಾಗುತ್ತದೆ.

ಹೇತುವಿನಲ್ಲಿ ವ್ಯವಸಾಯ ವಿಷಯಕಜ್ಞಾನತ್ವಾತ್ ಎಂದಿಷ್ಟೇ ಇದ್ದರೆ 'ಘಟಜ್ಞಾನ-ವಾನಯಮ್' ಎಂಬ ಶಬ್ದಜನ್ಯವಾದ ಶಾಬ್ದಬೋಧವನ್ನು ಪರಿಗ್ರಹಿಸಿ ಅದರಲ್ಲಿ ಪ್ರಾಮಾಣ್ಯ ವಿಷಯಕತ್ವ ಇಲ್ಲದಿರುವುದರಿಂದ ವ್ಯಭಿಚಾರ ಬರುತ್ತಿತ್ತು. ಅನುವ್ಯವಸಾಯಪದವಿದ್ದರೆ ಅದರ ಪರಿಹಾರವಾಗುತ್ತದೆ. ಅನುವ್ಯವಸಾಯ ಎಂದರೆ ಜ್ಞಾನವಿಷಯಕ ಪ್ರತ್ಯಕ್ಷ ಮಾತ್ರ. ಶಾಬ್ದಬೋಧವಲ್ಲ. ಆದ್ದರಿಂದ ವ್ಯಭಿಚಾರವಿಲ್ಲ.

## ಅನುವ್ಯವಸಾಯವೆಂದರೆ

**ಅನುವ್ಯವಸಾಯತ್ವಂ ಚ ಅತೀತಾನಾಗತ-ಅವಿಷಯಕ ಪ್ರತ್ಯಕ್ಷತ್ವಮ್ । ನ ತು 'ತತ್-ಪಕಾರಪ್ರಕಾರಕತಯಾ ತತ್-ಪ್ರಕಾರವದ್ವಿಶೇಷ್ಯಕತಯಾ ತಜ್ಞಾನತ್ವ-ರೂಪತ್ವಮ್, ಇತಿ ಯುಕ್ತಮ್ । ನಿಷ್ಕಂಪೇತ್ಯಾದಿ-ವಿಶೇಷಣ ವೈಯರ್ಥ್ಯಾತ್ । ಪೂರ್ವೋಕ್ತ-ಹೇತು-ಸಾಂಕರ್ಯಾಚ್ಚ ।**

**ನಾಪಿ ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷತ್ವಮ್ । ಉತ್ತರ ಹೇತುಸಾಂಕರ್ಯಾತ್ ।**

**ಅತ ಏವ ಸಾಮಾನ್ಯೇತ್ಯಾದಿನಾ ವಕ್ಷ್ಯಮಾಣಜ್ಞಾನದ್ವಯೇಽಪಿ ನ ವ್ಯಭಿಚಾರಃ । ತಸ್ಯ ಅತೀತಾದಿವಿಷಯಕತ್ವಾತ್ ।**

ಅನುವ್ಯವಸಾಯವೆಂದರೆ ಅತೀತ ಅಥವಾ ಭವಿಷ್ಯತ್‌ಗಳನ್ನು ವಿಷಯೀಕರಿಸದಿರುವ (ಜ್ಞಾನದ) ಪ್ರತ್ಯಕ್ಷ. ಹಿಂದೆ ಹೇಳಿದಂತೆ, ವ್ಯವಸಾಯವಿಷಯ-ವಿಷಯಕತ್ವೇನ, ತತ್-ಪ್ರಕಾರವದ್ ವಿಶೇಷ್ಯಕತ್ವೇನ ಜ್ಞಾನವನ್ನು ವಿಷಯೀಕರಿಸುವ ಜ್ಞಾನ, ಎಂದು ಇಲ್ಲಿ ಪರಿಗ್ರಹಿಸಬಾರದು. ಅಂತಹ ಅನುವ್ಯವಸಾಯಕ್ಕೆ ವಿಷಯವಾದ ವ್ಯವಸಾಯವು ನಿಯಮೇನ ನಿಷ್ಕಂಪಪ್ರವೃತ್ತಿಗೆ ಕಾರಣವಾಗುವುದರಿಂದ ಹೇತುಘಟಕವಾದ, ವ್ಯವಸಾಯಕ್ಕೆ ಕೊಟ್ಟಿರುವ 'ನಿಷ್ಕಂಪಪ್ರವೃತ್ತಿ ಹೇತುಭೂತ' ಎಂಬ ವಿಶೇಷಣವು ವ್ಯರ್ಥವಾಗುತ್ತದೆ. ಅಲ್ಲದೆ, ಹಿಂದಿನ ಅನುಮಾನದಲ್ಲೂ ಇಂತಹ ಅನುವ್ಯವಸಾಯವೇ ಹೇತುವಾದ್ದರಿಂದ ಆ ಹೇತು ಮತ್ತು ಪ್ರಕೃತ ಹೇತು ಒಂದೇ ಆಗುತ್ತದೆ.

ಜ್ಞಾನಾಂಶದಲ್ಲಿ ಲೌಕಿಕ-ಸನ್ನಿಕರ್ಷಜನ್ಯ-ಪ್ರತ್ಯಕ್ಷ, ಎಂದೂ ಅನುವ್ಯವಸಾಯವನ್ನು ನಿರೂಪಿಸ ಬಾರದು. ಅದು ಮುಂದಿನ ಅನುಮಾನದ ಹೇತು. ಆದ್ದರಿಂದ ಮೇಲೆ ಹೇಳಿದಂತೆಯೇ ಅನುವ್ಯವಸಾಯದ ಸ್ವರೂಪವನ್ನು ನಿರೂಪಿಸಬೇಕು. ಹೀಗೆ ನಿರೂಪಿಸುವುದರಿಂದ ಮುಂದಿನ

ಹೇತುವಿನ ಕೃತ್ಯವಿಚಾರ ಮಾಡುವ ಸಂದರ್ಭದಲ್ಲಿ ಹೇಳಲಾಗುವ ಎರಡೂ ವ್ಯಭಿಚಾರಗಳೂ ಈ ಹೇತುವಿಗೆ ಬರುವುದಿಲ್ಲ.

ಮುಂದೆ ಹೇಳುವ ವ್ಯಭಿಚಾರ–1. ಜ್ಞಾನತ್ವರೂಪ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ ಹುಟ್ಟಿದ 'ಘಟಜ್ಞಾನವಾನಹಮ್' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲ, ಅನುವ್ಯವಸಾಯತ್ವ ಇದೆ. ವ್ಯಭಿಚಾರ.

ಈ ವ್ಯಭಿಚಾರ ಪ್ರಕೃತಾನುಮಾನದಲ್ಲಿ ಇಲ್ಲ. ಇಲ್ಲಿ ವಿವಕ್ಷಿತ ಅನುವ್ಯವಸಾಯ ಎಂದರೆ ಅತೀತಾನಾಗತ–ಅವಿಷಯಕ ಪ್ರತ್ಯಕ್ಷ. ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ ಜನ್ಯವಾದ ಅನುವ್ಯವಸಾಯದಲ್ಲಿ ಅತೀತಾನಾಗತ ಜ್ಞಾನಗಳೆಲ್ಲವೂ ವಿಷಯವಾಗುತ್ತವೆ. ಆದ್ದರಿಂದ ಅದರಲ್ಲಿ ಪ್ರಕೃತ ವಿವಕ್ಷಿತವಾದ ಅನುವ್ಯವಸಾಯತ್ವ ಇಲ್ಲ.

ವ್ಯಭಿಚಾರ–2 'ಲೌಕಿಕ (ಮಾನಸ) ಪ್ರತ್ಯಕ್ಷತ್ವಂ ಅನುವ್ಯವಸಾಯತ್ವಂ' ಎಂದು ಮುಂದಿನ ಅನುಮಾನದ ಹೇತುವನ್ನು ನಿರೂಪಿಸಿದರೂ ಮತ್ತೆ ಅದೇ ಅನುವ್ಯವಸಾಯದಲ್ಲಿ ವ್ಯಭಿಚಾರ. ಅದೂ ಆತ್ಮವಿಷಯದಲ್ಲಿ ಲೌಕಿಕಸನ್ನಿಕರ್ಷ ಜನ್ಯವಾಗಿದೆ. ಅದರ ಪರಿಹಾರಕ್ಕಾಗಿ 'ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷತ್ವಮ್' ಎಂದು ಮುಂದಿನ ಹೇತುವನ್ನು ಪರಿಷ್ಕರಿಸಲಾಗಿದೆ.

ಈ ವ್ಯಭಿಚಾರವೂ ಪ್ರಕೃತ ಹೇತುವಿಗೆ ಇಲ್ಲ. ಹಿಂದೆ ಹೇಳಿದಂತೆ ಆ ಅನುವ್ಯವಸಾಯವು ಅತೀತನಾಗತ ವಿಷಯಕವಾಗಿದೆ.

## ಹೇತುಪರಿಷ್ಕಾರ

**ಅತ್ರ ನಿಷ್ಕಂಪ–ಪ್ರವೃತ್ತೀತ್ಯಸ್ಯ ಸಂವಾದಿ–ಪ್ರವೃತ್ತೀತ್ಯರ್ಥಃ। ತೇನ ಶುಕ್ತಿರೂಪ್ಯಾದಿಜ್ಞಾನಗೋಚರಾನುವ್ಯವಸಾಯೇ, ಸಾಕ್ಷಿರೂಪೇ ತತ್ರ ಪ್ರಾಮಾಣ್ಯಸ್ಯ ಮಾನಸತ್ವೇನ ತನ್ನಿಷ್ಠಪ್ರಾಮಾಣ್ಯಾವಿಷಯಕೇ ನ ವ್ಯಭಿಚಾರಃ॥**

ಹೇತುಘಟಕವಾದ ವ್ಯವಸಾಯದಲ್ಲಿ 'ನಿಷ್ಕಂಪಪ್ರವೃತ್ತಿಹೇತುಭೂತ' ಎಂಬ ವಿಶೇಷಣವಿದೆ. ಅಲ್ಲಿ ನಿಷ್ಕಂಪ ಪ್ರವೃತ್ತಿ ಎಂದರೆ ಸಂವಾದಿ ಪ್ರವೃತ್ತಿ ಎಂದರ್ಥ. ಪ್ರವೃತ್ತಿ ಮಾಡಿದಾಗ ಉದ್ದೇಶಿತ ವಸ್ತು ದೊರೆತರೆ ಅದು ಸಂವಾದಿ ಪ್ರವೃತ್ತಿ, ದೊರೆಯದಿದ್ದರೆ ವಿಸಂವಾದಿ ಪ್ರವೃತ್ತಿ. ಹೀಗೆ ವಿವಕ್ಷೆ ಮಾಡದೆ ಯಥಾಶ್ರುತವಾದ ಅರ್ಥವನ್ನು ಗ್ರಹಿಸಿದರೆ 'ಇದಂ ರಜತಂ ಇತಿ ಜ್ಞಾನವಾನಹಮ್' ಎಂಬ ಭ್ರಮೆಯನ್ನು ಗ್ರಹಿಸುವ, ಅನುವ್ಯವಸಾಯದಲ್ಲಿ ವ್ಯಭಿಚಾರ ಬರುತ್ತದೆ. ಅಂತಹ ಅನುವ್ಯವಸಾಯಕ್ಕೆ ವಿಷಯವಾದ ಭ್ರಮೆಯಿಂದಲೂ ಪ್ರಾಮಾಣ್ಯ ಭ್ರಮೆಯಿಂದಾಗಿ ಅಸಂದಿಗ್ಧ ಪ್ರವೃತ್ತಿಯಾಗುತ್ತದೆ. ಆದರೆ ಆ ಜ್ಞಾನವಿಷಯಕವಾದ ಸಾಕ್ಷಿಯು ರಜತ ಭ್ರಮೆಯಲ್ಲಿ

ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅಲ್ಲಿ ಪ್ರಾಮಾಣ್ಯಗ್ರಾಹಿಯಾದುದು ಮನಸ್ಸು. ಆದ್ದರಿಂದ ವ್ಯಭಿಚಾರ. ಸಂವಾದಿ ಪ್ರವೃತ್ತಿ ಹೇತು, ಎಂದು ವಿವಕ್ಷೆ ಮಾಡಿದಾಗ, ಭ್ರಮೆಯು ವಿಸಂವಾದಿ ಪ್ರವೃತ್ತಿಹೇತುವಾದುದರಿಂದ ವ್ಯಭಿಚಾರವಿಲ್ಲ.

## ದ್ವಿತೀಯ ಹೇತುವಿಚಾರ

**ಉಕ್ತರೂಪೇತಿ ॥ ನಿಷ್ಕಂಪ ಪ್ರವೃತ್ತಿಹೇತು–ವ್ಯವಸಾಯಾಂಶೇ ಇತ್ಯರ್ಥಃ। ಲೌಕಿಕತ್ವಂ ಚ ಅಲೌಕಿಕ ಪ್ರತ್ಯಾಸತ್ತ್ಯಜನ್ಯತ್ವಮ್ । ಸಂಶಯಾದಿ-ಗೋಚರಾನುವ್ಯವಸಾಯೇ ವ್ಯಭಿಚಾರ–ನಿರಾಸಾಯ ಉಕ್ತರೂಪ ವ್ಯವಸಾಯಾಂಶೇ ಇತ್ಯುಕ್ತಿಃ।**

ಜಲಾದಿಸಂದೇಹ ವಿಷಯಕವಾದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲದಿರುವುದರಿಂದ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಉಕ್ತರೂಪ ವ್ಯವಸಾಯಾಂಶೇ, ಎಂಬ ಹೇತು ವಿಶೇಷಣವಿದೆ.

## ದೃಷ್ಟಾಂತ ವಿವರಣೆ

**ಗೃಹೀತಪ್ರಾಮಾಣ್ಯೇನೇತಿ ಬಹುವ್ರೀಹಿಃ। ಯತ್ರ ಘಟಾದಿಜ್ಞಾನೇ ಪ್ರವೃತ್ತಿ-ಸಾಮರ್ಥ್ಯಾದಿನಾ ಪ್ರಾಮಾಣ್ಯಾನುಮಿತ್ಯನಂತರಂ ತತ್ರೈವ 'ಅಯಂ ಘಟಃ' ಇತ್ಯಾದ್ಯುತ್ಪನ್ನ–ಸಮಾನಾಧಿಕರಣಜ್ಞಾನೇ ಪ್ರಾಮಾಣ್ಯಂ ತದನುವ್ಯವಸಾಯ-ವೇದ್ಯಮ್ ಇತಿ ಪ್ರಾಚೀನನ್ಯಾಯಮತೇ ಅಭ್ಯುಪಗಮಾತ್ ಇತಿ ಭಾವಃ। ಉಪಪಾದಯಿಷ್ಯತೇ ಚಾಗ್ರೇ ಗ್ರಂಥೇ ಏವ।**

ಮೂಲದಲ್ಲಿ 'ಗೃಹೀತಂ ಪ್ರಾಮಾಣ್ಯಂ ಯಸ್ಯ ತತ್' ಎಂದು ಗೃಹೀತ ಪ್ರಾಮಾಣ್ಯಕ ಶಬ್ದಕ್ಕೆ ಬಹುವ್ರೀಹಿ ಸಮಾಸ ಮಾಡಿದರೆ 'ಯಾವ ವ್ಯವಸಾಯದ ಪ್ರಾಮಾಣ್ಯವು ಈಗಾಗಲೇ ಗೃಹೀತವಾಗಿದೆಯೋ ಅಂತಹ ಜಲಾದಿಜ್ಞಾನ' ಎಂದರ್ಥ. ಒಟ್ಟಿನಲ್ಲಿ ದೃಷ್ಟಾಂತದ ಸ್ವರೂಪ ಹೀಗೆ— 'ಅಯಂ ಘಟಃ' ಎಂಬ ಜ್ಞಾನ ಬಂದು ಪ್ರವೃತ್ತಿ ಮಾಡಿದಾಗ ಘಟ ದೊರೆಯಿತು. ಆಗ 'ಘಟಜ್ಞಾನಂ ಯಥಾರ್ಥಮ್, ಸಮರ್ಥ ಪ್ರವೃತ್ತಿ ಜನಕತ್ವಾತ್' ಎಂಬ ಅನುಮಾನದಿಂದ ಘಟಜ್ಞಾನದ ಪ್ರಾಮಾಣ್ಯವೂ ಗೃಹೀತವಾಯಿತು. ಮತ್ತೆ ಅದೇ ವ್ಯಕ್ತಿಗೆ ಅಲ್ಲೇ ಘಟಜ್ಞಾನವು ಹುಟ್ಟಿತು. ಆ ಘಟಜ್ಞಾನದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಮನಸ್ಸಿನಿಂದ ಗೃಹೀತವಾಗುತ್ತದೆ. ಹೀಗೆ ಪ್ರಾಚೀನ ನೈಯಾಯಿಕರು ಅಂಗೀಕರಿಸಿರುತ್ತಾರೆ. ಅಂತಹ ಅನುವ್ಯವಸಾಯವು ದೃಷ್ಟಾಂತ ಎಂದು ಮೂಲದ ಭಾವ. ಇದನ್ನು ಶ್ರೀವ್ಯಾಸರಾಜರೇ ಮುಂದೆ ಇದೇ ಅನುಮಾನದ ದೃಷ್ಟಾಂತ ವಿವರಣೆಯಲ್ಲಿ ಸಮರ್ಥಿಸಿದ್ದಾರೆ. (ಪುಟ.195)

## ದ್ವಿತೀಯಹೇತು ಘಟಕ ವಿಶೇಷಣಕೃತ್ಯ

**अत्र द्वितीयहेतौ लौकिकपदम् सामान्यप्रत्यासत्त्यादिजन्ये व्यवसायविषयके ज्ञाने व्यभिचारवाणाय । ज्ञानांश इति विशेषणं तु स्मृत्युपनीतेऽतीतघटज्ञाने तद्विषयम् 'अहं घटज्ञानवान् आसम्' इति यज्ज्ञानम् आत्मांशे लौकिकप्रत्यक्षं तत्र व्यभिचारवारणार्थम् ।**

ಈ ಪ್ರಕರಣದಲ್ಲಿ ಎರಡನೆಯ ಹೇತು–ಉಕ್ತರೂಪ–ವ್ಯವಸಾಯಾಂಶೇ ಲೌಕಿಕ ಪ್ರತ್ಯಕ್ಷತ್ವಾತ್, ಎಂದಿದೆ. ಈ ಹೇತುವಿನಲ್ಲಿ 'ಲೌಕಿಕ' ಎಂಬ ಪದವು ವ್ಯಭಿಚಾರ ಪರಿಹಾರಕವಾಗಿದೆ. ಅದನ್ನು ಬಿಟ್ಟರೆ ವ್ಯವಸಾಯಾಂಶೇ ಸಾಮಾನ್ಯಲಕ್ಷಣಾಪತ್ಯಾಸತ್ತಿಯಿಂದ ಅಥವಾ ಯೋಗಜಧರ್ಮಜ ಪ್ರತ್ಯಾಸತ್ತಿಯಿಂದ ಹುಟ್ಟಿರುವ, ವ್ಯವಸಾಯ ವಿಷಯಕವಾದ 'ಘಟಜ್ಞಾನವಾನಹಮ್' ಎಂಬ ಅನುವ್ಯವಸಾಯದಲ್ಲಿ ವ್ಯಭಿಚಾರ. ಅದರಲ್ಲಿ ವ್ಯವಸಾಯಾಂಶೇ ಪ್ರತ್ಯಕ್ಷತ್ವರೂಪಹೇತು ಇದೆ, ಪ್ರಾಮಾಣ್ಯವಿಷಯಕತ್ವರೂಪ ಸಾಧ್ಯ ಇಲ್ಲ. ಲೌಕಿಕ ಪದವಿದ್ದಾಗ ಈ ದೋಷ ಪರಿಹಾರವಾಗುತ್ತದೆ.

ಜ್ಞಾನಾಂಶೇ ಎಂಬ ವಿಶೇಷಣವನ್ನು ಬಿಟ್ಟರೂ ಇದೇ ದೋಷ. 'ಘಟಜ್ಞಾನವಾನಹಮ್' ಎಂಬ ಅನುವ್ಯವಸಾಯವು ಆತ್ಮಾಂಶೇ ಲೌಕಿಕ ಪ್ರತ್ಯಕ್ಷವಾಗಿದೆ. ಅದರಲ್ಲಿ ಪ್ರಾಮಾಣ್ಯ ವಿಷಯಕತ್ವವಿಲ್ಲ. ಜ್ಞಾನಾಂಶೇ ಪದವಿದ್ದಾಗ, ಆ ಅನುವ್ಯವಸಾಯದಲ್ಲಿ ಜ್ಞಾನವು ಸ್ಮೃತ್ಯುಪನೀತ ವಾಗಿ ಭಾಸವಾಗುವುದರಿಂದ, ಆ ಅನುವ್ಯವಸಾಯವು ಜ್ಞಾನಾಂಶೇ ಜ್ಞಾನಲಕ್ಷಣಾತ್ಮಕವಾದ ಅಲೌಕಿಕಪ್ರತ್ಯಾಸತ್ತಿ ಜನ್ಯವಾದುದರಿಂದ ವ್ಯಭಿಚಾರ ಪರಿಹಾರವಾಗುತ್ತದೆ.

## ನ್ಯಾಯದೀಪ

**ಸಾಮಾನ್ಯಪ್ರತ್ಯಾಸತ್ಯಾದೀತಿ ॥ ಜ್ಞಾನತ್ವ ಸಾಮಾನ್ಯೇತ್ಯರ್ಥಃ । ಆದಿ-ಪದೇನ ಯೋಗಜ ಪ್ರತ್ಯಾಸತ್ತಿ–ಜ್ಞಾನಪ್ರತ್ಯಾಸತ್ತ್ಯೋಃ ಗ್ರಹಃ । ಜ್ಞಾನಾಂಶೇ ಇತಿ ॥ ಉಕ್ತರೂಪವ್ಯವಸಾಯಾಂಶೇ ಇತ್ಯುಕ್ತೈಕದೇಶಾನುವಾದಃ ।**

ಮೂಲದಲ್ಲಿ 'ವ್ಯವಸಾಯಾಂಶೇ' ಎಂದು ಹೇತುಘಟಕವಿಶೇಷಣದ ಏಕದೇಶಾನು ವಾದವನ್ನು 'ಜ್ಞಾನಾಂಶೇ' ಎಂದು ಮಾಡಲಾಗಿದೆ.

## ಪರಿಷ್ಕೃತ ಹೇತುವಿಗೆ ವ್ಯಭಿಚಾರಶಂಕಾ–ಪರಿಹಾರ

**न च तव घटज्ञानमस्तीति शब्दजन्यं यद्घटज्ञानविषयकं ज्ञानं**

**तदनुव्यवसाये व्यभिचारः शङ्क्यः । घटज्ञानांशे घटत्ववति घटत्वप्रकारकत्वरूपस्य तदीयस्य प्रामाण्यस्याग्रहणेन साध्याभावेऽपि लौकिकप्रत्यक्षत्वाभावेन हेत्वभावात् । घटज्ञानविषयकज्ञानांशे तु हेतोः सत्वेऽपि घटज्ञानत्ववति घटज्ञानत्वप्रकारकत्वरूपप्रामाण्य ग्रहणेन साध्यसद्भावात् ।**

ಪರಿಷ್ಕೃತವಾದ ದ್ವಿತೀಯ ಹೇತುವಿಗೂ ವ್ಯಭಿಚಾರ ಇದೆ– 'ತವ ಘಟಜ್ಞಾನಮ್ ಅಸ್ತಿ' ಎಂಬ ವಾಕ್ಯದಿಂದ ಬಂದಿರುವ ಶಾಬ್ದಬೋಧವನ್ನು ಗ್ರಹಿಸುವ ಅನುವ್ಯವಸಾಯ–'ತವ ಘಟಜ್ಞಾನಮಸ್ತಿ ಇತಿ ಜ್ಞಾನವಾನಹಮ್' ಎಂದು. ಈ ಅನುವ್ಯವಸಾಯವು ಶಾಬ್ದಬೋಧಾತ್ಮಕವಾದ ಜ್ಞಾನಾಂಶದಲ್ಲಿ ಲೌಕಿಕ ಪ್ರತ್ಯಕ್ಷವಾಗಿದೆ. ಹೇತು ಬಂತು. ಆದರೆ, ಆ ಅನುವ್ಯವಸಾಯವು ಘಟಜ್ಞಾನಗತವಾದ ಪ್ರಾಮಾಣ್ಯವನ್ನು ವಿಷಯೀಕರಿಸುತ್ತಿಲ್ಲ. ಆದರಿಂದಾಗಿ ಸಾಧ್ಯ ಬರಲಿಲ್ಲ, ವ್ಯಭಿಚಾರ.

ಇದರ ಪರಿಹಾರ ಹೀಗೆ— ಈ ಅನುವ್ಯವಸಾಯದಲ್ಲಿ ಸಾಕ್ಷಾತ್ ವಿಷಯವಾದುದು ಘಟಜ್ಞಾನವಿಷಯಕವಾದ ಶಾಬ್ದಬೋಧ. ಈ ಶಾಬ್ದಬೋಧದ ಮೂಲಕ ವಿಷಯವಾದುದು ಘಟಜ್ಞಾನ. ಈ ಘಟಜ್ಞಾನಗತ ಪ್ರಾಮಾಣ್ಯವೆಂದರೆ–ಘಟತ್ವವತಿ ಘಟತ್ವಪ್ರಕಾರಕತ್ವ. ಅದು ಅನುವ್ಯವಸಾಯಕ್ಕೆ ವಿಷಯವಲ್ಲ. ಸಾಧ್ಯ ಬರಲಿಲ್ಲ. ಆದರೆ ಘಟಜ್ಞಾನಾಂಶದಲ್ಲಿ ಆ ಅನುವ್ಯವಸಾಯವು ಲೌಕಿಕ ಪ್ರತ್ಯಕ್ಷವಲ್ಲ. ಅದು ಶಾಬ್ದಬೋಧಾಂಶದಲ್ಲಷ್ಟೇ ಲೌಕಿಕ ಪ್ರತ್ಯಕ್ಷ. ಹೀಗಾಗಿ ಹೇತುವೂ ಇಲ್ಲದಿರುವುದರಿಂದ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ. ಇನ್ನು ಶಾಬ್ದಬೋಧಾಂಶದಲ್ಲಿ ಅದು ಲೌಕಿಕ ಪ್ರತ್ಯಕ್ಷವಾಗಿದೆ. ಆ ಅಂಶದಲ್ಲಿ ಅದು ಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ. ಶಾಬ್ದಬೋಧದಲ್ಲಿರುವ ಪ್ರಾಮಾಣ್ಯ-ಘಟಜ್ಞಾನತ್ವವತಿ ಘಟಜ್ಞಾನತ್ವ ಪ್ರಕಾರಕತ್ವ. ಇದನ್ನು ಅನುವ್ಯವಸಾಯಸವು ಗ್ರಹಿಸುತ್ತಿರುವುದರಿಂದ ಸಾಧ್ಯವೂ ಇದೆ. ಆದ್ದರಿಂದ ವ್ಯಭಿಚಾರವಿಲ್ಲ.

## ನ್ಯಾಯದೀಪ

**ವಿಶಿಷ್ಟಸ್ಯ ಹೇತೋಃ ವ್ಯಭಿಚಾರಮಾಶಂಕ್ಯ ಸಮಾಧಿಮಾಹ–ನಚೇತ್ಯಾದಿನಾ ॥**

ಸಮಗ್ರಹೇತುವಿಗೆ ವ್ಯಭಿಚಾರದೋಷವನ್ನು ಆಶಂಕೆ ಮಾಡಿ ಮೂಲದಲ್ಲಿ ಪರಿಹಾರ ಮಾಡಲಾಗಿದೆ.

## ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಶಂಕಾ–ಪರಿಹಾರ

**न च दृष्टान्तः साध्यविकलः । उत्तरस्य ज्ञानान्तरस्य पूर्वेण**

**प्रमाण्यग्रहणेनाव्यवहितत्वे तस्यैव,व्यवहितत्वे तु प्रामाण्यस्मरणस्यैव विशेषणज्ञानतया त्वदभिप्रेताया विशेषणोपस्थिति-विशेष्येन्द्रियसान्निकर्षतदसंसर्गाग्रहरूपविशिष्टज्ञानसामग्र्याः सत्वेन ज्ञानान्तरानुव्यवसायस्य प्रामाण्यविशिष्ट-व्यववसायविषयकत्वात् ।**

ಈ ಅನುಮಾನಕ್ಕೆ ದೃಷ್ಟಾಂತ–ಗೃಹೀತಪ್ರಾಮಾಣ್ಯಕ ಜ್ಞಾನಾಂತರಾನುವ್ಯವಸಾಯ. ಅದರಲ್ಲೂ ಪ್ರಾಮಾಣ್ಯವು ವಿಷಯವಾಗುವುದಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ದೋಷ, ಎಂದು ಶಂಕೆ.

ಇದಕ್ಕೆ ಸಮಾಧಾನ— ಮೊದಲು ಘಟಜ್ಞಾನದಲ್ಲಿ ಅನುಮಾನದಿಂದ ಪ್ರಾಮಾಣ್ಯವು ನಿಶ್ಚಿತವಾಗಿದ್ದು ಕೂಡಲೇ ಮತ್ತೊಮ್ಮೆ ಅದೇ ಘಟಜ್ಞಾನವು ಬಂದಾಗ ಅದರ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರಲೇಬೇಕು. ಏಕೆಂದರೆ, ಅದು ತೋರಲು ಬೇಕಾದ ಕಾರಣ ವಿಶೇಷಣಜ್ಞಾನ. ಅಲ್ಲಿ ವಿಶೇಷಣವಾದ ಪ್ರಾಮಾಣ್ಯದ ಜ್ಞಾನವು ಪ್ರಥಮಾನುಮಿತಿ ರೂಪದಲ್ಲಿ ಇದೆ. ಹೀಗೆ, ಸಾಮಗ್ರೀ ಇರುವುದರಿಂದ ಮುಂದಿನ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಭಾಸವಾಗಲೇ ಬೇಕು.

ಒಂದುವೇಳೆ ಪ್ರಾಮಾಣ್ಯಾನುಮಿತಿಯು ನಾಶವಾಗಿ ಕಾಲಾಂತರದಲ್ಲಿ ಮತ್ತೆ ಘಟಜ್ಞಾನ ಬಂದು ಅದರ ಅನುವ್ಯವಸಾಯ ಬಂದರೆ ಆಗ ಪ್ರಾಮಾಣ್ಯರೂಪವಾದ ವಿಶೇಷಣದ ಜ್ಞಾನ ಸ್ಮೃತಿರೂಪವಾಗಿ ಇರಬಹುದು.

'ಘಟಜ್ಞಾನಂ ಪ್ರಮಾಣಮ್' ಎಂದು ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುವ ಕ್ರಮ ಹೀಗೆ– ಇದು ಪ್ರಾಮಾಣ್ಯವಿಶಿಷ್ಟವಾದ ಘಟಜ್ಞಾನದ ಜ್ಞಾನ. ವಿಶಿಷ್ಟ ಜ್ಞಾನಕ್ಕೆ (1) ವಿಶೇಷಣ ಜ್ಞಾನ (2) ವಿಶೇಷ್ಯೇಂದ್ರಿಯ ಸನ್ನಿಕರ್ಷ (3) ವಿಶೇಷ್ಯ ಮತ್ತು ವಿಶೇಷಣಗಳಿಗೆ ಅಸಂಸರ್ಗ ಅಗ್ರಹ ಈ ಮೂರು ಕಾರಣ. ಈ ಮೂರೂ ಮೇಲಿನ ಎರಡೂ ಸಂದರ್ಭದಲ್ಲಿ ಇದೆ.

1. ಮೊದಲನೆಯ ಸಂದರ್ಭದಲ್ಲಿ ಪ್ರಾಮಾಣ್ಯವಿಷಯಕವಾದ ಅನುಮಿತಿಯೇ ವಿಶೇಷಣಜ್ಞಾನ.

ಎರಡನೆಯ ಸಂದರ್ಭದಲ್ಲಿ ಪ್ರಾಮಾಣ್ಯದ ಸ್ಮರಣೆ ವಿಶೇಷಣಜ್ಞಾನ.

2. ಪ್ರಕೃತದಲ್ಲಿ ವಿಶೇಷ್ಯ ಘಟಜ್ಞಾನ. ನೈಯಾಯಿಕಮತದಲ್ಲಿ ಅದು ಆತ್ಮಗುಣ. ಅದರ ಗ್ರಾಹಕ ಇಂದ್ರಿಯ ಮನಸ್ಸು. ಮನಸ್ಸಿಗೂ ಈ ಜ್ಞಾನಕ್ಕೂ ಮನಃಸಂಯುಕ್ತ–ಆತ್ಮ–ಸಮವಾಯರೂಪವಾದ ಸನ್ನಿಕರ್ಷ ಇದೆ. ಇದು ಎರಡೂ ಪಕ್ಷಗಳಲ್ಲಿ ಸಮಾನ.

3. ವಿಶೇಷ್ಯವಾದ ಘಟಜ್ಞಾನಕ್ಕೂ ವಿಶೇಷಣವಾದ ಪ್ರಾಮಾಣ್ಯಕ್ಕೂ 'ಅಸಂಸರ್ಗ ಇದೆ' ಎಂಬ ಜ್ಞಾನ ಇಲ್ಲ. ಅಸಂರ್ಗ ಅಗ್ರಹ ಇದೆ.

ಹೀಗೆ, ಪ್ರಾಮಾಣ್ಯವಿಶಿಷ್ಟ ಘಟಜ್ಞಾನ ಬರಲು ಬೇಕಾದ ಎಲ್ಲ ಸಾಮಗ್ರಿಗಳೂ ಇರುವ ಕಾರಣ ಅದು ಬಂದೇ ತೀರಬೇಕು. ಅರ್ಥಾತ್ ಘಟಜ್ಞಾನಾಂತರ-ವಿಷಯಕವಾದ ಅನುವ್ಯವಸಾಯವು ಪ್ರಾಮಾಣ್ಯವಿಶಿಷ್ಟವಾದ ವ್ಯವಸಾಯವನ್ನು ಗ್ರಹಿಸಲೇಬೇಕು. ಆದ್ದರಿಂದ ಸಾಧ್ಯವೈಕಲ್ಯದೋಷ ಇಲ್ಲ.

## ನ್ಯಾಯದೀಪದಲ್ಲಿ ಗ್ರಂಥಾವತರಣಿಕೆ

**''ಸ್ವರ್ಗಸಾಧನಂ ಯಾಗಃ ಇತಿ ಜ್ಞಾನಸ್ಯ ಪ್ರಾಮಾಣ್ಯೇ ನಿಶ್ಚಿತೇ ತತ್ಸಮಾನವಿಷಯಕ-ಜ್ಞಾನಾಂತರೇ ಅಪ್ರಾಮಾಣ್ಯಶಂಕಾ ನ ಭವತೀತಿ ಜ್ಞಾನಾಂತರಮ್ ಅಗೃಹೀತಪ್ರಾಮಾಣ್ಯಮಪಿ'' (ಮಣಿಗ್ರಂಥ. ಪು.299)**

**ಇತ್ಯಾದಿ ಮಣಿಕೃದುಕ್ತೇಃ ಉತ್ತರಜ್ಞಾನಾನುವ್ಯವಸಾಯೇ ಪ್ರಾಮಾಣ್ಯ-ವಿಷಯಕತ್ವಂ ವಿಪ್ರತಿಪನ್ನಮ್ ಇತಿ ವದಂತಂ ಪ್ರತಿ ಸಾಧ್ಯಸತ್ವಂ ದೃಷ್ಟಾಂತೇ ವ್ಯನಕ್ತಿ-ನ ಚ ದೃಷ್ಟಾಂತ ಇತ್ಯಾದಿನಾ ॥**

ಒಮ್ಮೆ ಘಟಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾದ ಮೇಲೆ ಮತ್ತೊಮ್ಮೆ ಅದೇ ಘಟದ ಜ್ಞಾನ ಬಂದಾಗ ಅದರ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಗೃಹೀತವಾಗುತ್ತದೆ, ಎಂದು ಪ್ರಾಚೀನತಾರ್ಕಿಕರು ಅಂಗೀಕರಿಸಿದರೂ ಮಣಿಕಾರನಿಗೆ ಅದರಲ್ಲಿ ಸಮ್ಮತಿ ಇಲ್ಲ. ನ್ಯಾಯದೀಪದಲ್ಲಿ ಮಣಿವಾಕ್ಯವನ್ನು ಉಲ್ಲೇಖ ಮಾಡಿ ಅದನ್ನು ಸ್ಪಷ್ಟಪಡಿಸಲಾಗಿದೆ. ಮಣಿಗ್ರಂಥದ ಅಭಿಪ್ರಾಯ ಹೀಗಿದೆ-

ನಿಷ್ಕಂಪ-ಪ್ರವೃತ್ತಿಗೆ ಅಪ್ರಾಮಾಣ್ಯ ಶಂಕಾರಹಿತವಾದ ಅರ್ಥನಿಶ್ಚಯವೇ ಕಾರಣ. ಪ್ರಾಮಾಣ್ಯ ನಿಶ್ಚಯವು ಕಾರಣವಲ್ಲ. ಏಕೆಂದರೆ, ಅನುಮಿತ್ಯಾತ್ಮಕ ಪ್ರಾಮಾಣ್ಯನಿಶ್ಚಯ ಬರುವಾಗ ಅರ್ಥನಿಶ್ಚಯವು ನಾಶವಾಗಿರುತ್ತದೆ. ಹಾಗಾಗಿ 'ಯಾಗಃ ಸ್ವರ್ಗಸಾಧನಮ್' ಎಂಬ ಶ್ರುತಿಜನ್ಯವಾದ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯ ಬಂದಮೇಲೆ ಪೂರ್ವಜ್ಞಾನಸಮಾನಾಕಾರವಾದ 'ಯಾಗಃ ಸ್ವರ್ಗಸಾಧನಮ್' ಎಂಬ ಜ್ಞಾನಾಂತರವು ಬರುತ್ತದೆ. ಈ ಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾಗದಿದ್ದರೂ ತತ್ ಸದೃಶಪೂರ್ವಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾದುದರಿಂದ ಈ ಎರಡನೆಯ ಜ್ಞಾನದಲ್ಲಿ ಅಪ್ರಾಮಾಣ್ಯಶಂಕಾ ಬರುವುದಿಲ್ಲ. ಶಂಕಾಕಲಂಕಿತವಾದ ಅರ್ಥನಿಶ್ಚಯ ರೂಪವಾದ ಈ ಎರಡನೆಯ ಜ್ಞಾನವೇ ಪ್ರವೃತ್ತಿಗೆ ಕಾರಣ.

ಇಲ್ಲಿ ಮಣಿಕಾರ ಗೃಹೀತಪ್ರಾಮಾಣ್ಯಕ ಪ್ರಥಮ ಜ್ಞಾನಸದೃಶವಾದ ದ್ವಿತೀಯ ಜ್ಞಾನದಲ್ಲಿ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಎಂದೇ ಅಂಗೀಕರಿಸಿದ್ದಾನೆ.

ಹೀಗೆ ಪ್ರಕೃತ ದೃಷ್ಟಾಂತದಲ್ಲಿ ಸಾಧ್ಯಸತ್ವವು ವಿಪ್ರತಿಪನ್ನವಾಯಿತು. ಅದಕ್ಕಾಗಿ ಮೂಲದಲ್ಲಿ ಸಾಧ್ಯಸತ್ವವನ್ನು ಸಮರ್ಥಿಸಲಾಗಿದೆ.

## ನ್ಯಾಯದೀಪ

**ಉತ್ತರಸ್ಯೇತಿ ॥ ಅನುಮಿತ್ಯಾದಿನಾ ಗೃಹೀತಪ್ರಾಮಾಣ್ಯಕಾತ್ ಪೂರ್ವ-ಜ್ಞಾನಾತ್ ಉತ್ತರಸ್ಯ, ಇತ್ಯರ್ಥಃ । ತಸ್ಯೈ ್ವೇತಿ ॥ ವಿಶೇಷಣಜ್ಞಾನತಯಾ ಇತ್ಯನ್ವಯಃ ।**

**ಪ್ರಾಮಾಣ್ಯಾನುಮಿತೇರೇವ ಪ್ರಾಮಾಣ್ಯಘಟಕ-ಘಟತ್ವಾದಿ-ವಿಶೇಷಣ-ಜ್ಞಾನತ್ವೇನ ಪ್ರಾಮಾಣ್ಯಾನುಮಿತ್ಯನಂತರಮೇವ ಘಟ-ಘಟತ್ವನಿರ್ವಿಕಲ್ಪಕಂ ವಿನೈವ ಘಟ-ಘಟತ್ವಾದಿ ವಿಶಿಷ್ಟವ್ಯವಸಾಯೋತ್ಪತ್ತೌ ತದುತ್ತರಕಾಲೇ ವಿನಶ್ಯತ್-ಪ್ರಾಮಾಣ್ಯಜ್ಞಾನಸತ್ವಾತ್ ಇತಿ ಭಾವಃ ।**

1. ಮೊದಲು 'ಅಯಂ ಘಟಃ' ಎಂಬ ವ್ಯವಸಾಯ.

2. ಆಮೇಲೆ 'ಘಟತ್ವೇನ ಇದಂ ಜಾನಾಮಿ' ಎಂಬ ಅನುವ್ಯವಸಾಯ.

3. ಮುಂದೆ 'ಪ್ರಾಮಾಣ್ಯವ್ಯಾಪ್ಯ ಸಮರ್ಥಪ್ರವೃತ್ತಿಜನಕತ್ವವತ್ ಇದಂ ಜ್ಞಾನಮ್' ಎಂಬ ಪರಾಮರ್ಶ. (ಈ ಕ್ಷಣದಲ್ಲಿ ಘಟಜ್ಞಾನವು ನಾಶವಾಗುತ್ತದೆ.)

4. ಆಮೇಲೆ 'ಪೂರ್ವೋತ್ಪನ್ನಂ ಘಟಜ್ಞಾನಮ್ ಪ್ರಮಾಣಮ್' ಎಂಬ ಅನುಮಿತಿ.

ಈ ಅನುಮಿತಿಯಲ್ಲಿ 'ಘಟತ್ವವತಿ ಘಟತ್ವಪ್ರಕಾರಕತ್ವ' ರೂಪವಾದ ಪ್ರಾಮಾಣ್ಯಘಟಕವಾಗಿ ಘಟತ್ವ ಮತ್ತು ಘಟ ಇವೆರಡೂ ವಿಷಯವಾಗಿರುವುದರಿಂದ ಆ ಅನುಮಿತಿಯೇ ಮುಂದಿನ 'ಅಯಂ ಘಟಃ' ಎಂಬ ವ್ಯವಸಾಯಾಂತರಕ್ಕೆ ವಿಶೇಷಣ ಜ್ಞಾನರೂಪವಾಗಿದೆ. ಆದ್ದರಿಂದ,

5. 'ಅಯಂ ಘಟಃ' ಎಂಬ ಜ್ಞಾನಾಂತರದ ಉತ್ಪತ್ತಿ.

6. ಘಟಜ್ಞಾನದ ಅನುವ್ಯವಸಾಯ, ಅನುಮಿತಿ ನಾಶ.

ಈ ಎರಡನೆಯ ಅನುವ್ಯವಸಾಯವು ಪ್ರಾಮಾಣ್ಯವಿಶಿಷ್ಟವಾಗಿಯೇ ಘಟಜ್ಞಾನವನ್ನು ವಿಷಯೀಕರಿಸುತ್ತದೆ. ಪೂರ್ವದಲ್ಲಿ ಪ್ರಾಮಾಣ್ಯಾನುಮಿತಿರೂಪವಾದ ವಿಶೇಷಣಜ್ಞಾನಾದಿ ಘಟಿತವಾದ ಸಾಮಗ್ರಿಗಳು ಇವೆಯಾದ ಕಾರಣ. ಹೀಗೆ ಪ್ರಕೃತ ದೃಷ್ಟಾಂತವಾಗಿರುವ ಈ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ವಿಷಕತ್ವ ರೂಪವಾದ ಸಾಧ್ಯವಿರುವುದರಿಂದ ಸಾಧ್ಯವೈಕಲ್ಯ-ವಿಲ್ಲ. ಆದ್ದರಿಂದ ದ್ವಿತೀಯಾನುವ್ಯವಸಾಯ ಪ್ರಾಮಾಣ್ಯವಿಷಯಕವಲ್ಲ, ಎನ್ನುವ ಮಣಿಕಾರನ ವಾದ ಸರಿಯಲ್ಲ.

## ನ್ಯಾಯದೀಪದಲ್ಲಿ ಅಧಿಕಾಶಂಕಾ–ಸಮಾಧಾನ

**ನ ಚ ವಕ್ಷ್ಯಮಾಣದಿಶಾ ಪೂರ್ವೋತ್ತರಜ್ಞಾನಯೋಃ ಪ್ರಾಮಾಣ್ಯಸ್ಯ ಏಕತ್ವೇಽಪಿ ಉತ್ತರಜ್ಞಾನಗತತ್ವೇನ ಪೂರ್ವಂ ಅಭಾನಾತ್ ನ ತತ್ರ ಉಪನಯಃ ಇತಿ ಶಂಕ್ಯಮ್ ।**

**ಯದವಚ್ಛೇದೇನ ಯತ್ರ ಯದ್ ಗೃಹೀತಂ ತತ್ರ ತದ್‌ಗ್ರಹತ್ವಸ್ಯೈವ ಉಪನಯಸಾಮಗ್ರೀತ್ವಾತ್ । '(ಸುರಭಿ) ಚಂದನಖಂಡಃ' ಇತ್ಯಾದಿ ಪ್ರತ್ಯಕ್ಷೇ ತಥಾ ದರ್ಶನಾತ್ । ತಥಾ ಚ ತದ್ವಿಷಯಕತ್ವಾವಚ್ಛೇದೇನ ಪೂರ್ವಜ್ಞಾನೇ ಪ್ರಾಮಾಣ್ಯಗ್ರಹಾತ್ ತದ್ವಿಷಯಕತ್ವೇನ ಜ್ಞಾತೇ ದ್ವಿತೀಯ–ಜ್ಞಾನೇ ತದುಪನಯಃ ಭವತ್ಯೇವ ಇತಿ ಭಾವಃ ।**

ಆಕ್ಷೇಪ–ಹಿಂದೆ ಹೇಳಿದಂತೆ, ದ್ವಿತೀಯಾನುವ್ಯವಸಾಯದಲ್ಲಿ ಪ್ರಾಮಾಣ್ಯಗ್ರಹಣೆಗೆ ಅನುಮಿತಿಯಾಗಲೀ ಪ್ರಾಮಾಣ್ಯಸ್ಮೃತಿಯಾಗಲೀ ಉಪನಾಯಕವಾಗಲು ಸಾಧ್ಯವಿಲ್ಲ. ಏಕೆಂದರೆ ಯದ್ಯಪಿ ಜ್ಞಾನಭೇದೇನ ಪ್ರಾಮಾಣ್ಯಭೇದವಿಲ್ಲ ಎಂದು ಇಲ್ಲೇ ಮುಂದೆ (ಪುಟ.197) ಹೇಳಿರುವುದರಿಂದ ಪ್ರಥಮ ಘಟಜ್ಞಾನದಲ್ಲೂ ದ್ವಿತೀಯ ಘಟಜ್ಞಾನದಲ್ಲೂ ಪ್ರಾಮಾಣ್ಯವು ಒಂದೇ ಆಗಿದೆ. ಆದರೂ ಪ್ರಥಮಾನುವ್ಯವಸಾಯದಲ್ಲಿ ಆ ಪ್ರಾಮಾಣ್ಯವು ಪ್ರಥಮ ಜ್ಞಾನಗತತ್ವೇನ ಜ್ಞಾತವಾಗಿದೆ. ಉತ್ತರ ಘಟಜ್ಞಾನಗತತ್ವೇನ ಗೃಹೀತವಾಗಿಲ್ಲ. ಆದ್ದರಿಂದ ಉತ್ತರ ಜ್ಞಾನದಲ್ಲಿ ಪ್ರಾಮಾಣ್ಯೋಪಯ ಹೇಗೆ?

ಇದಕ್ಕೆ ಸಮಾಧಾನ—ಯಾವ ಧರ್ಮವು ಯದವಚ್ಛೇದೇನ ತಿಳಿಯಲ್ಪಟ್ಟಿದೆಯೋ ತದವಚ್ಛೇದೇನ ತದ್ಧರ್ಮಗ್ರಹಕ್ಕೆ ತದ್ಧರ್ಮಜ್ಞಾನವು ಉಪನಾಯಕ. ಉದಾಹರಣೆಗೆ— ಸೌರಭ್ಯ ರೂಪಧರ್ಮವು ಚಂದನಖಂಡತ್ವಾವಚ್ಛೇದೇನ ಮೊದಲು ಜ್ಞಾತವಾಗಿದ್ದರೆ ಸೌರಭ್ಯಜ್ಞಾನದಿಂದ ಮತ್ತೆ ಚಂದನ ಖಂಡತ್ವಾವಚ್ಛೇದೇನ ಚಂದನಖಂಡಾಂತರದಲ್ಲೂ ಸೌರಭ್ಯಜ್ಞಾನ ಬರುತ್ತದೆ. ಇದರ ಅಭಿಪ್ರಾಯ–ಪೂರ್ವೋತ್ತರ ಚಂದನ ಖಂಡಗಳು ಒಂದೇ ಆಗಿರಬೇಕಿಲ್ಲ. ಏಕಧರ್ಮಾವಚ್ಛಿನ್ನ ವಾಗಿದ್ದರೆ ಸಾಕು, ಎಂದು. ಪ್ರಕೃತದಲ್ಲಿ ತದ್‌ಘಟವಿಷಯಕತ್ವಾ ವಚ್ಛೇದೇನ ಪ್ರಾಮಾಣ್ಯವು ಪ್ರಥಮದಲ್ಲಿ ಗೃಹೀತವಾಗಿದೆ. ಪ್ರಾಮಾಣ್ಯಸ್ಮರಣೆಯೆಂಬ ಜ್ಞಾನ ಲಕ್ಷಣಾ ಸನ್ನಿಕರ್ಷದಿಂದ ತದ್‌ಘಟ ವಿಷಯಕವಾದ ಉತ್ತರೋತ್ಪನ್ನ ಜ್ಞಾನದಲ್ಲೂ ಪ್ರಾಮಾಣ್ಯಜ್ಞಾನ ಬರುತ್ತದೆ. ಪೂರ್ವೋತ್ತರ ಜ್ಞಾನವ್ಯಕ್ತಿಗಳು ಬೇರೆಯಾದರೂ ಆ ಜ್ಞಾನಗಳಲ್ಲಿರುವ 'ತದ್ ಘಟವಿಷಯಕತ್ವವು' ಸಮಾನವಾಗಿದೆ. ಆದ್ದರಿಂದ ಪೂರ್ವದಲ್ಲಿ ಉತ್ತರಜ್ಞಾನಗತ್ವೇನ ಪ್ರಾಮಾಣ್ಯವು ಜ್ಞಾತವಾಗಬೇಕಿಲ್ಲ. ಪೂರ್ವಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾಗಿದ್ದು 'ಉತ್ತರಜ್ಞಾನದಲ್ಲಿ ಘಟವಿಷಯಕತ್ವ ಇದೆ' ಎಂದು ತಿಳಿದ ಮಾತ್ರದಿಂದ ಅದರಲ್ಲೂ ಪ್ರಾಮಾಣ್ಯವು ಜ್ಞಾತವಾಗುತ್ತದೆ.

## ನ್ಯಾಯದೀಪ

**ಸನ್ನಿಕರ್ಷೇತಿ ॥ ಸಂಯುಕ್ತಸಮವಾಯರೂಪ ಇತ್ಯರ್ಥಃ । ತದಿತಿ ॥**

**ವಿಶೇಷಣ – ವಿಶೇಷ್ಯಯೋಃ = ಪ್ರಾಮಾಣ್ಯ – ತದಾಶ್ರಯಜ್ಞಾನಯೋಃ ಅಸಂಸರ್ಗೇತ್ಯರ್ಥಃ ॥**

ವಿಶೇಷಣ=ಪ್ರಾಮಾಣ್ಯ, ವಿಶೇಷ್ಯ=ಘಟಾದಿಜ್ಞಾನ. ಆವೆರಡಕ್ಕೆ ಅಸಂಸರ್ಗಾಗ್ರಹ, ಎಂದರ್ಥ.

## ದೃಷ್ಟಾಂತದಲ್ಲಿ ಸಾಧ್ಯವೈಕಲ್ಯಶಂಕಾ

**ननु तज्ज्ञानविषकेत्यादिस्वतस्त्वनिरुक्तौ तच्छब्देन व्यक्तिविशेषो न विवक्ष्यते । किन्तु ग्राह्यप्रामाण्याश्रयीभूतज्ञानमात्रम् । समानविशेष्यकत्वे सति समानप्रकारकयोश्च ज्ञानयोः विशेष्यप्रकारघटितं प्रामाण्यम् एकमेव । एवंचोक्तानुव्यवसायस्य ग्राह्यप्रामाण्याश्रय द्वितीयज्ञानविषयकज्ञानानपेक्षत्वेऽपि प्रथमज्ञानविषयकज्ञानसापेक्षत्वान्न स्वतस्त्वमिति साध्यवैकल्यम् ।**

ದೃಷ್ಟಾಂತದಲ್ಲಿ ಪ್ರಕಾರಾಂತರದಿಂದ ಸಾಧ್ಯವೈಕಲ್ಯ ಇದ್ದೇ ಇದೆ– ಎರಡನೆಯ ಸ್ವತಸ್ತ್ವ ನಿರುಕ್ತಿ–'ತಜ್ಜ್ಞಾನವಿಷಯಕ ಜ್ಞಾನಾಜನ್ಯ ಜ್ಞಾನವಿಷಯತ್ವಮ್' ಎಂದಿದೆ. ಈ ನಿರುಕ್ತಿಯಲ್ಲಿ 'ತತ್–ಜ್ಞಾನ' ಎಂದರೆ ಜ್ಞಾನವ್ಯಕ್ತಿವಿಶೇಷವು ವಿವಕ್ಷಿತವಲ್ಲ, ಕಿಂತು ಪ್ರಕೃತ–ಪ್ರಾಮಾಣ್ಯಾಶ್ರಯಜ್ಞಾನ. ಓಂದಿನ ಸಂದರ್ಭದಲ್ಲಿ ಪ್ರಕೃತ ಪ್ರಾಮಾಣ್ಯಾಶ್ರಯ ಜ್ಞಾನಗಳು ಎರಡಿವೆ— ಪ್ರಥಮಜ್ಞಾನ ಹಾಗೂ ಉತ್ತರಜ್ಞಾನ. ಈ ಎರಡು ಜ್ಞಾನ ವ್ಯಕ್ತಿಗಳು ಬೇರೆಯಾದರೂ ಎರಡೂ ಜ್ಞಾನಗಳಲ್ಲಿ ಘಟವೇ ವಿಶೇಷ್ಯ, ಘಟತ್ವವೇ ಪ್ರಕಾರ. ಸಮಾನವಿಶೇಷ್ಯಕ–ಸಮಾನಪ್ರಕಾರಕ ಜ್ಞಾನವ್ಯಕ್ತಿಗಳು ಬೇರೆಯಾದರೂ ಅವುಗಳಲ್ಲಿ ಇರುವ ಪ್ರಾಮಾಣ್ಯ ಒಂದೇ. ಏಕೆಂದರೆ, ಅದು, ತದ್‌ಘಟವಿಶೇಷ್ಯಕತ್ವೇ ಸತಿ ಘಟತ್ವ–ಪ್ರಕಾರಕತ್ವರೂಪವಾದುದು. ಹೀಗಿರುವಾಗ, ದ್ವಿತೀಯಾನುವ್ಯವಸಾಯವು ಈಗ ಸಂಗ್ರಹವಾಗುವುದಿಲ್ಲ. ಅದು ಪ್ರಾಮಾಣ್ಯಾಶ್ರಯ ತಜ್ಜ್ಞಾನ ವಿಷಯಕವಾದ ಪ್ರಥಮಾನುವ್ಯವಸಾಯದಿಂದ ಜನ್ಯವೇ ಆಗಿದೆ. ಪ್ರಥಮಾನುವ್ಯವಸಾಯವು ದ್ವಿತೀಯಾನುವ್ಯವಸಾಯಕ್ಕೆ ವಿಶೇಷಣ ಜ್ಞಾನವಿಧಯಾ ಕಾರಣವಾಗಿದೆ.

ಯದ್ಯಪಿ ತಜ್ಜ್ಞಾನಪದದಿಂದ ದ್ವಿತೀಯಜ್ಞಾನವನ್ನು ಪರಿಗಣಿಸಿದರೆ ದ್ವಿತೀಯಜ್ಞಾನ

ವಿಷಯಕ–ಜ್ಞಾನದಿಂದ ದ್ವಿತೀಯಾನುವ್ಯವಸಾಯವು ಜನ್ಯವಾಗಿಲ್ಲ. ಆದರೂ ಅದು ಅಂತಹ ಪ್ರಥಮಾನುವ್ಯವಸಾಯದಿಂದ ಜನ್ಯವಾಗಿದೆ. ಆದ್ದರಿಂದ ದ್ವಿತೀಯಾನುವ್ಯವಸಾಯ ಸಂಗ್ರಹ ವಾಗುವುದಿಲ್ಲ. ಅದರಲ್ಲಿ ಸಾಧ್ಯವಿಲ್ಲ, ಬಾಧದೋಷ ಇದ್ದೇ ಇದೆ.

## ಸಾಧ್ಯವೈಕಲ್ಯಪರಿಹಾರ

**इति चेन्न । व्यवसायप्रामाण्यम् अनुव्यवसायस्य विषयो न वेति विप्रतिपत्तौ अनुव्यवसायविषयत्वमात्रसाधनात् । तस्य च दृष्टान्ते सत्वात् । तज्ज्ञानविषयकेत्यादिनोक्तस्वतस्त्वस्यापि पक्षधर्मताबलात्सिद्धेश्च ।।**

ವ್ಯವಸಾಯಗತ ಪ್ರಾಮಾಣ್ಯವು ಅನುವ್ಯವಸಾಯದಲ್ಲಿ ವಿಷಯವಾಗುತ್ತದೆ, ಎಂದು ಸ್ವತಸ್ತ್ವಪಕ್ಷ, ವಿಷಯವಾಗುವುದಿಲ್ಲ, ಅನುಮಿತಿಯಲ್ಲಿ ಮಾತ್ರ ವಿಷಯವಾಗುತ್ತದೆ, ಎಂದು ಪರತಸ್ತ್ವಪಕ್ಷ. ಹೀಗೆ ವಿವಾದವಿರುವಾಗ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯ ವಾಗುತ್ತದೆ, ಎಂದಿಷ್ಟೇ ಸಾಧಿಸಿದರೂ ಸ್ವತಸ್ತ್ವವಾದ ಸಿದ್ಧವಾಗುತ್ತದೆ. 'ತಜ್ಜ್ಞಾನವಿಷಯಕ ಜ್ಞಾನಾಜನ್ಯತ್ವವನ್ನೂ' ಸಾಧ್ಯಾಂಶದಲ್ಲಿ ಸೇರಿಸಬೇಕಾದ ಅಗತ್ಯವಿಲ್ಲ. ಹೀಗಾಗಿ, ದೃಷ್ಟಾಂತ ವಾಗಿರುವ ದ್ವಿತೀಯಾನುವ್ಯವಸಾಯವು ತಜ್ಜ್ಞಾನವಿಷಯಕ ಜ್ಞಾನಜನ್ಯವಾದರೂ ಪ್ರಾಮಾಣ್ಯ ವಿಷಯಕತ್ವರೂಪವಾದ ಪ್ರಕೃತ ಸಾಧ್ಯವು ಅದರಲ್ಲಿ ಇದೆಯಾದ್ದರಿಂದ ಸಾಧ್ಯವೈಕಲ್ಯಕ್ಕೆ ಅವಕಾಶವಿಲ್ಲ.

ಪ್ರಾಮಾಣ್ಯವಿಷಯಕತ್ವ ಮಾತ್ರವನ್ನು ಸಾಧಿಸಿದರೂ ಪಕ್ಷದಲ್ಲಿ ಸಾಧ್ಯಪರ್ಯವಸಾನ ವಾದಾಗ ತಜ್ಜ್ಞಾನ–ವಿಷಯಕ–ಜ್ಞಾನಾಜನ್ಯತ್ವ–ವಿಶಿಷ್ಟ–ಪ್ರಾಮಾಣ್ಯವಿಷಯಕತ್ವ ರೂಪವಾದ ಸ್ವತಸ್ತ್ವವೂ ಸಿದ್ಧವಾಗುತ್ತದೆ. ಅದು ಪಕ್ಷಧರ್ಮತಾ ಸಾಮರ್ಥ್ಯದಿಂದ ಲಭ್ಯವಾಗುತ್ತದೆ. ಹೇಗೆಂದರೆ, ಹೇತೋಃ ಪಕ್ಷವೃತ್ತಿತ್ವಂ ಪಕ್ಷಧರ್ಮತಾ. ನಿಷ್ಕಂಪ ಪ್ರವೃತ್ತಿಹೇತುಭೂತ ವ್ಯವಸಾಯ ವಿಷಯಕಾನುವ್ಯವಸಾಯತ್ವವು ಹೇತು. ಎಲ್ಲಿ ನಿಷ್ಕಂಪ ಪ್ರವೃತ್ತಿಹೇತುವಾದ ಪ್ರಥಮ ವ್ಯವಸಾಯವು ಪ್ರಥಮಾನುವ್ಯವಸಾಯಕ್ಕೆ ವಿಷಯವಾಗಿರುತ್ತದೋ ಅಂತಹ ಅನುವ್ಯವಸಾಯವು ತಜ್ಜ್ಞಾನವಿಷಯಕ–ಜ್ಞಾನಾಜನ್ಯಜ್ಞಾನವಾಗಿರುತ್ತದೆ. ಆ ಅನುವ್ಯವಸಾಯರೂಪವಾದ ಪಕ್ಷದಲ್ಲಿ ಪ್ರಾಮಾಣ್ಯ ವಿಷಯಕತ್ವವನ್ನು ಸಾಧನೆ ಮಾಡಿದಾಗ ವಿಶಿಷ್ಟ ಸಾಧ್ಯವೂ ಸಿದ್ಧವಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಯತ್ತು, ಮಣೌ ಉಕ್ತಮ್ (ಪು.291) 'ತಜ್ಞಾನವಿಷಯಕ–**

**ಜನ್ಯಜ್ಞಾನಾಜನ್ಯ–ಜ್ಞಾನವಿಷಯತ್ವಂ ಸ್ವತಸ್ತ್ವಮ್ । ತದನ್ಯಗ್ರಾಹ್ಯತ್ವಂ ಹಿ ಪರತಸ್ತ್ವಮ್ । ಮನಸಾ ಚೈವಂ ಪ್ರಾಮಾಣ್ಯಗ್ರಹಸ್ಯ ತಜ್ಜ್ಞಾನವಿಷಯಕ ಜನ್ಯಜ್ಞಾನ–ಜನ್ಯತ್ವಾತ್ ನ ಪರತಸ್ತ್ವಹಾನಿಃ' ಇತಿ । ತತ್ ಹೃದಿಕೃತ್ವಾ ಪ್ರಕಾರಾಂತರೇಣ ಸಾಧ್ಯವೈಕಲ್ಯಮ್ ಆಶಂಕತೇ–ನನ್ವಿತಿ ॥**

**ಗ್ರಾಹ್ಯಪ್ರಾಮಾಣ್ಯಾಶ್ರಯ–ಜ್ಞಾನವಿಷಯಕ–ಜ್ಞಾನಾಜನ್ಯತ್ವೇ ಸತಿ ಸ್ವಗ್ರಾಹ್ಯ ಜ್ಞಾನಪ್ರಾಮಾಣ್ಯವಿಷಯಕತ್ವಂ ಸಾಧ್ಯಾರ್ಥಂ ಮನ್ವಾನಸ್ಯ ಇಯಂ ಸಾಧ್ಯವೈಕಲ್ಯಶಂಕಾ ಇತಿ ಧ್ಯೇಯಮ್ ।**

ಮಣಿಗ್ರಂಥವನ್ನು ಆಧರಿಸಿ ಮೂಲದಲ್ಲಿ ಪೂರ್ವಪಕ್ಷವನ್ನು ಮಾಡಲಾಗಿದೆ. ಮಣಿಗ್ರಂಥದ ಅಭಿಪ್ರಾಯ ಇದು–ಪ್ರಕೃತಪ್ರಮಾಣ್ಯಾಶ್ರಯವಾದ ಜ್ಞಾನವಿಷಯಕವಾದ ಜನ್ಯಜ್ಞಾನ ಅನುವ್ಯವಸಾಯ. ಆದರಿಂದ ಜನ್ಯವಾದ ಅನುಮಿತಿಯಲ್ಲಿ ಪ್ರಾಮಾಣ್ಯವು ವಿಷಯ, ಎಂದು ಪರತಸ್ತ್ವವಾದ. ಅಂತಹ ಅನುವ್ಯವಸಾಯದಿಂದ ಅಜನ್ಯವಾದ ಅದೇ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗುತ್ತದೆ ಎನ್ನುವುದೇ ಸ್ವತಸ್ತ್ವ. ಮನಸ್ಸಿನಿಂದ ಪ್ರಾಮಾಣ್ಯಜ್ಞಾನವು ಬಂದಾಗ ಆ ಮಾನಸ ಜ್ಞಾನವು (ದ್ವಿತೀಯಾನುವ್ಯವಸಾಯವು) ಪ್ರಾಮಾಣ್ಯಾಶ್ರಯವಾದ ವ್ಯವಸಾಯ ವಿಷಯಕವಾದ ಪ್ರಥಮಾನುವ್ಯವಸಾಯದಿಂದ ಅಥವಾ ಅನುಮಿತಿಯಿಂದ ಜನ್ಯವಾಗಿಯೇ ಇರುತ್ತದೆ. ಇದರಿಂದ ಪರತಸ್ತ್ವಕ್ಕೇನೂ ಹಾನಿಯಿಲ್ಲ, ಎಂದು.

ಈ ಮಣಿಗ್ರಂಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಪ್ರಕಾರಾಂತರದಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಮೂಲದಲ್ಲಿ ಸಂದೇಹಿಸಲಾಗಿದೆ.

ಒಟ್ಟಿನಲ್ಲಿ, ಪ್ರಕೃತ ಪ್ರಾಮಾಣ್ಯಾಶ್ರಯವಾದ ಜ್ಞಾನವಿಷಯಕ ಜ್ಞಾನದಿಂದ ಅಜನ್ಯವಾಗಿದ್ದು ಪ್ರಾಮಾಣ್ಯವಿಷವಿಷಯಕತ್ವವೇ ಸಾಧ್ಯ, ಎಂದು ಭ್ರಮಿಸಿ ಮಾಡಿರುವ ಆಕ್ಷೇಪ–ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಎಂಬುದು. ವಸ್ತುತಃ ಪ್ರಕೃತದಲ್ಲಿ ಅನುವ್ಯವಸಾಯವಿಶೇಷವಿಷಯತ್ವಮಾತ್ರ ಸಾಧ್ಯ. ಆ ಅನುವ್ಯವಸಾಯವು ತಜ್ಜ್ಞಾನವಿಷಯಕ ಜ್ಞಾನದಿಂದ ಅಜನ್ಯವಾಗಿರಬೇಕು, ಎಂಬ ನಿಬಂಧನೆ ಸಾಧ್ಯದಲ್ಲಿ ಸೇರಿಲ್ಲ. ಆದ್ದರಿಂದ ಈ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ.

## ನ್ಯಾಯದೀಪ

**ತಜ್ಜ್ಞಾನವಿಷಯಕ–ಜ್ಞಾನಸಾಪೇಕ್ಷತ್ವೋಪಪಾದನಾಯಾಹ–ತಚ್ಛಬ್ದೇನೇತಿ ॥ ಮಾತ್ರಮಿತಿ ॥ ಗ್ರಾಹ್ಯಪ್ರಾಮಾಣ್ಯಾಶ್ರಯ–ಯತ್ಕಿಂಚಿಜ್ಜ್ಞಾನಮ್, ಇತ್ಯರ್ಥಃ । ಪೂರ್ವಜ್ಞಾನಸ್ಯ ಗ್ರಾಹ್ಯಪ್ರಾಮಾಣ್ಯಾಶ್ರಯತ್ವ–ಲಾಭಾಯ ಸಾಪೇಕ್ಷತ್ವೋಪಪಾದನಾಯ ಚಾಹ–ಸಮಾನೇತಿ ॥ ಪ್ರಾಮಾಣ್ಯಸ್ಯ ಭಿನ್ನತ್ವೇ**

ತಜ್ಞಾನ (ಗ್ರಾಹ್ಯಪ್ರಾಮಾಣ್ಯಾಶ್ರಯಜ್ಞಾನ) ಸಾಪೇಕ್ಷತ್ವಾಯೋಗಾತ್ । ತತಶ್ಚ ಕಿಮಿತ್ಯತ ಆಹ–ಏವಂ ಚೇತಿ । ತತ್ಪದೇನ ಉಕ್ತರೂಪಜ್ಞಾನ ಮಾತ್ರೇ ಅಭಿಮತೇ ಸತಿ, ಪ್ರಾಮಾಣ್ಯಸ್ಯ ಏಕತ್ವೇ ಚ ಸತಿ, ಇತ್ಯರ್ಥಃ । ಸಾಪೇಕ್ಷತ್ವಾದಿತಿ ॥ ಪ್ರಾಮಾಣ್ಯರೂಪ-ವಿಶೇಷಣಲೋಪ-ನಾಯಕತ್ವೇನ, ಇತಿ ಭಾವಃ ॥

ಸಾಧ್ಯವೈಕಲ್ಯಮಿತಿ ॥ ಜ್ಞಾನಪ್ರಾಮಾಣ್ಯಂ ತಜ್ಜ್ಞಾನವಿಷಯಕ–ಜ್ಞಾನಾಜನ್ಯಜ್ಞಾನಗ್ರಾಹ್ಯಂ ನ ವೇತಿ ವಿಪ್ರತಿಪತ್ತೌ ತಾದೃಶಜ್ಞಾನ ಗ್ರಾಹ್ಯತ್ವಸ್ಯೈವ ಸ್ವತಸ್ತ್ವವಾದಿನಾ ಸಾಧ್ಯತ್ವಾತ್ । ತಸ್ಯ ಚ ದ್ವಿತೀಯಜ್ಞಾನ ಪ್ರಾಮಾಣ್ಯೇ ಅಭಾವೇನ ತದನುವ್ಯವಸಾಯೇ ತಜ್ಜ್ಞಾನವಿಷಯಕ–ಜ್ಞಾನಾಜನ್ಯತ್ವೇ ಸತಿ ಸ್ವಗ್ರಾಹ್ಯಜ್ಞಾನಪ್ರಾಮಾಣ್ಯವಿಷಯಕತ್ವರೂಪ–ಸಾಧ್ಯಸ್ಯ ಅಭಾವಾತ್, ಇತಿ ಭಾವಃ ।

ಪರೋಕ್ತ–ಸ್ವತಸ್ತ್ವೇಽಪಿ ನ ದೋಷ ಇತ್ಯಾಹ–ತಜ್ಜ್ಞಾನೇತಿ ॥ ದೃಷ್ಟಾಂತೇ ಸಾಧ್ಯಾನುಗಮಾರ್ಥಂ ಸ್ವಗ್ರಾಹ್ಯ–ಜ್ಞಾನಪ್ರಾಮಾಣ್ಯವಿಷಯಕಃ, ಇತ್ಯೇವ ಸಾಧ್ಯಕರಣೇಽಪಿ ತ್ವದಭಿಮತ–ವಿಶಿಷ್ಟಸಾಧ್ಯಸಿದ್ಧಿಃ ಹೇತೋಃ ಪಕ್ಷ ಧರ್ಮತಯಾ ಸ್ಯಾದೇವ । ನಿಷ್ಕಂಪ–ಪ್ರವೃತ್ತಿಹೇತು–ವ್ಯವಸಾಯ ವಿಷಯಕಾನುವ್ಯವಸಾಯತ್ವಾದಿರೂಪ–ಹೇತುನಾ ಪ್ರಥಮಜ್ಞಾನ–ಗೋಚರಾನುವ್ಯವಸಾಯರೂಪ–ಪಕ್ಷನಿಷ್ಠತ್ವೇನ ಪ್ರಾಮಾಣ್ಯವಿಷಯಕತ್ವಂ ಸಿದ್ಧ್ಯತ್ ಅನುವ್ಯವಸಾಯಸ್ಯ ತಜ್ಜ್ಞಾನವಿಷಯಕ–ಜ್ಞಾನಾನಪೇಕ್ಷತ್ವಾತ್ ಉಕ್ತರೂಪಮೇವ ಸಿದ್ಧ್ಯತೀತಿ ಭಾವಃ ॥

(ಈ ಭಾಗದ ನ್ಯಾಯದೀಪದ ಅಭಿಪ್ರಾಯ ಮೂಲಾನುವಾದದಲ್ಲೇ ಬಂದಿದೆ)

## ಅವತಾರಿಕೆ

ಅನುಮಿತ್ಯಾದಿಪ್ರಾಮಾಣ್ಯಂ ಸ್ವತ ಇತಿ ಪ್ರಾಚೀನಮತಾನುರೋಧೇನಾಹ–ಯದ್ವೇತಿ ॥ ಏತೇನ, ಭಿನ್ನದೃಷ್ಟಾಂತಕಥನೇನ ಮನ್ಯತೇ ಸರ್ವತ್ರ ಸ್ವತಸ್ತ್ವಮಿವ ತ್ವನ್ಮತೇ ನ ಸರ್ವತ್ರ ಪ್ರಾಮಾಣ್ಯಸ್ಯ ಪರತಸ್ತ್ವಮ್ । ಕ್ವಚಿತ್ ಸ್ವತಸ್ತ್ವಸ್ಯಾಪಿ ಅಭ್ಯುಪಗಮಾತ್ । ತಥಾಚ ಕಿಮ್ ಅರ್ಧಜರತೀಯೇನ ? ಸರ್ವತ್ರ ಸ್ವತಸ್ತ್ವಮೇವ ಉಪೇಯಮ್, ಇತಿ ಸೂಚಿತಮ್ ।

## ದೃಷ್ಟಾಂತಾಂತರಾನುಸರಣೆ

**यद्वा अनुमित्यनुव्यवसायो दृष्टान्तः । न च नवीनन्यायमते तत्रापि स्वतः प्रामाण्याभावात् साध्यवैकल्यम् । तथात्वे तत्प्रामाण्ये कदाचित्संशयविपर्ययव्यतिरेकप्रमान्यतरापातात् ।**

ಅಥವಾ, ಬೇರೆಯೇ ದೃಷ್ಟಾಂತವನ್ನು ಹೇಳಬಹುದು-ಪ್ರಾಚೀನ ನೈಯಾಯಿಕರು ಪ್ರತ್ಯಕ್ಷಜ್ಞಾನದ ಪ್ರಾಮಾಣ್ಯವು ಅನುಮಿತಿ ಗ್ರಾಹ್ಯ, ಅನುಮಿತಿ ಪ್ರಾಮಾಣ್ಯಂ ಸ್ವತಃ ಅಂದರೆ, ಅನುಮಿತಿ ಗ್ರಾಹಕವಾದ ಅನುವ್ಯವಸಾಯದಿಂದಲೇ ತದ್ಗತ ಪ್ರಾಮಾಣ್ಯವೂ ಗೃಹೀತವಾಗುತ್ತದೆ, ಎಂದು ಅಂಗೀಕರಿಸಿದ್ದಾರೆ. ಆ ಅನುವ್ಯವಸಾಯವು ಪ್ರಕೃತಾನುಮಾನಕ್ಕೆ ದೃಷ್ಟಾಂತ.

ಪ್ರಾಚೀನರಿಗೆ ಈ ದೃಷ್ಟಾಂತ ಸಮ್ಮತವಾಗಬಹುದು. ಆದರೆ ನವೀನನ್ಯಾಯದಲ್ಲಿ ಅನುಮಿತಿ ಪ್ರಾಮಾಣ್ಯವೂ ಸ್ವತಃ ಗ್ರಾಹ್ಯವಲ್ಲವಾದುದರಿಂದ ಅನುಮಿತ್ಯನುವ್ಯವಸಾಯದಲ್ಲಿ ಪ್ರಾಮಾಣ್ಯ ವಿಷಯಕತ್ವ ಇಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ಎಂದರೆ, ಹಾಗೆ ಹೇಳಬಾರದು. ಹಾಗಾದರೆ, ಅನುಮಿತಿಯು ಪ್ರಮಾಣ ಹೌದೋ ಅಲ್ಲವೋ? ಎಂಬ ಸಂದೇಹ ಅಥವಾ ಅದು ಅಪ್ರಮಾಣ, ಎಂಬ ಭ್ರಮೆ, ಇಲ್ಲವೇ ಪ್ರಮಾ ಅಲ್ಲ, ಎಂಬ ವ್ಯತಿರೇಕನಿಶ್ಚಯ ಬರಬೇಕಾದೀತು. ಏಕೆಂದರೆ, ಈ ಎಲ್ಲ ಜ್ಞಾನಗಳಿಗೆ ಪ್ರತಿಬಂಧಕವಾದುದು 'ಅನುಮಿತಿಃ ಪ್ರಮಾ' ಎಂಬ ಪ್ರಾಮಾಣ್ಯನಿಶ್ಚಯ. ಅದು ಇಲ್ಲ. ಆದ್ದರಿಂದ ಸಂಶಯಾದಿಗಳು ಬರಬೇಕಾದೀತು.

## ನ್ಯಾಯದೀಪದಲ್ಲಿ ಅವತರಣಿಕೆ

**ನನು, ಮಣೌ (ಪುಟ 299) 'ಯತ್ತು ಅನುಮಾನಸ್ಯ ನಿರಸ್ತ-ಸಮಸ್ತ-ಭ್ರಮಾಶಂಕಸ್ಯ ಸ್ವತಃ ಏವ ಪ್ರಾಮಾಣ್ಯಗ್ರಹಃ, ಇತ್ಯುಕ್ತಮ್ ಆಚಾರ್ಯೈಃ [1]ತತ್ ಧೂಮವತಿ ವಹ್ನಿಜ್ಞಾನತ್ವಮ್ ಅನುಮಿತೇಃ ಪ್ರಾಮಾಣ್ಯನಿಯತಮ್ ।**

---

1. ನ್ಯಾಯವಾರ್ತಿಕ ತಾತ್ಪರ್ಯಟೀಕಾದಲ್ಲಿ ವಾಚಸ್ಪತಿ ಮಿಶ್ರರು ಅನುಮಿತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೀಗೆ ಹೇಳಿದ್ದಾರೆ (ಚೌಖಾಂಬಾ-ಪುಟ.12)

   ''ಅನುಮಾನಸ್ಯ ತು ಪ್ರವೃತ್ತಿಸಾಮರ್ಥ್ಯಲಿಂಗಜನ್ಮನಃ ಅನ್ಯಸ್ಯ ವಾ ನಿರಸ್ತಸಮಸ್ತ-ವ್ಯಭಿಚಾರಶಂಕಸ್ಯ ಸ್ವತ ಏವ ಪ್ರಾಮಾಣ್ಯಮ್ । ಅನುಮೇಯಾವ್ಯಭಿಚಾರಿ ಲಿಂಗಸಮುತ್ಥತ್ವಾತ್ ।

   ತಸ್ಮಾತ್ ಪ್ರತ್ಯಕ್ಷಶಬ್ದಯೋಃ ನ ಸ್ವತಃ ಅವ್ಯಭಿಚಾರಗ್ರಹಃ ಇತಿ ಪ್ರವೃತ್ತಿ ಸಾಮರ್ಥ್ಯಂ ತಜ್ಜಾತೀಯತ್ವಂ ವಾ ಲಿಂಗಂ ಅರ್ಥಾವ್ಯಭಿಚಾರಾಯ ಅನುಸರಣೀಯಮ್ ।

   ಮಾನಸ ಪ್ರತ್ಯಕ್ಷಸ್ಯ ತಾದೃಶಸ್ಯ ಅದೃಷ್ಟಾವ್ಯಭಿಚಾರತಯಾ ಪರಿತೋ ನಿರಸ್ತ-ಸಮಸ್ತ-ವಿಭ್ರಮಾಶಂಕಸ್ಯ ಸ್ವತಃ ಪ್ರಾಮಾಣ್ಯಂ ಇತಿ ನಾನವಸ್ಥಾ।''

**ಅನುವ್ಯವಸಾಯೇ ಚ ಉಪನೀತಂ ತತಃ ವಿಶೇಷದರ್ಶನಾತ್, ನ ತತ್ರಾಪ್ರಾಮಾಣ್ಯಶಂಕಾ ಇತಿ, ಪ್ರಾಮಾಣ್ಯನಿಶ್ಚಯಾದಿವ ಅಪ್ರಾಮಾಣ್ಯ-ಶಂಕಾವಿರಹಾತ್ ಅರ್ಥಂ ನಿಶ್ಚಿತ್ಯ ನಿಷ್ಕಂಪ-ವ್ಯವಹಾರಃ, ಇತ್ಯಭಿ-ಪ್ರಾಯಮ್' । ಇತಿ ಪ್ರಾಚೀನಮತಸ್ಯ ಅನ್ಯಥಾ ತಾತ್ಪರ್ಯಸ್ಯ ಉಕ್ತತ್ವಾತ್ ಕಥಂ ತನ್ಮತೇ ದೃಷ್ಟಾಂತಃ, ಇತಿ ಭಾವೇನ ಆಶಂಕ್ಯ ತೇನಾಪಿ ಅಂಗೀಕಾರಯತಿ-ನಚೇತ್ಯಾದಿನಾ ॥**

ನವೀನರು ಅನುಮಿತಿ ಪ್ರಾಮಾಣ್ಯವೂ ತದನುವ್ಯವಸಾಯವೇದ್ಯ, ಎಂದು ಅಂಗೀಕರಿಸುವುದಿಲ್ಲ. ವಾಚಸ್ಪತಿ ಮಿಶ್ರರು (ಪ್ರಾಚೀನರು) ಹೇಳಿದ ಅನುಮಿತಿ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಅಭಿಪ್ರಾಯಾಂತರವನ್ನು ಮಣಿಕಾರ (ನವೀನ) ಹೀಗೆ ಹೇಳಿದ್ದಾನೆ—

''ವಾಚಸ್ಪತಿ ಮಿಶ್ರರು, ಅನುಮಿತಿಯಲ್ಲಿ ಎಂದೂ ಅಪ್ರಾಮಾಣ್ಯಜ್ಞಾನ-ಸಂದೇಹಾದಿಗಳು ಬರುವುದಿಲ್ಲ. ಆದಕಾರಣ ಅನುಮಿತಿ-ಪ್ರಾಮಾಣ್ಯಂ ಸ್ವತಃ, ಎಂದಿರುತ್ತಾರೆ. ಇದರ ಅಭಿಪ್ರಾಯ-ಅನುಮಿತಿ ಗ್ರಾಹಕ ಸಾಕ್ಷಿಯಿಂದ ಅದರ ಪ್ರಾಮಾಣ್ಯವು ಗ್ರಾಹ್ಯವಾಗುತ್ತದೆ, ಎಂದಲ್ಲ. ಹೊರತು, ಅನುವ್ಯವಸಾಯವು ಉಪನಯಮರ್ಯಾದಯಾ ಅನುಮಿತಿಯಲ್ಲಿ 'ಧೂಮವತಿ (ಪಕ್ಷೇ) ವಹ್ನಿಪ್ರಕಾರಕತ್ವ' ರೂಪವಾದ ಧರ್ಮವನ್ನು ಗ್ರಹಿಸುತ್ತದೆ. ಇದು ಪ್ರಾಮಾಣ್ಯವ್ಯಾಪ್ಯವಾದ ಧರ್ಮ. ಯಾವ ಜ್ಞಾನವು ಧೂಮವತಿ ವಹ್ನಿ ಪ್ರಕಾರಕವಾಗಿರುವುದೋ ಆ ಜ್ಞಾನವು ವಹ್ನಿಮತಿ ವಹ್ನಿಪ್ರಕಾರಕವೂ ಆಗಿರುತ್ತದೆ. ಧೂಮವತ್ತಾದ ಧರ್ಮಿಯು ವಹ್ನಿಮತ್ತಾಗಿ ಇರಲೇಬೇಕು. ಹೀಗೆ ಅನುವ್ಯವಸಾಯವು ಅನುಮಿತಿಯಲ್ಲಿ ಪ್ರಾಮಾಣ್ಯವ್ಯಾಪವಾದ ಧರ್ಮವನ್ನು ಗ್ರಹಿಸುವುದರಿಂದ, ಇದು ಏಕತರಕೋಟಿವ್ಯಾಪ್ಯವತ್ತಾದರ್ಶನವಾದ ಕಾರಣ, ಅನುಮಿತಿಯಲ್ಲಿ ಅಪ್ರಾಮಾಣ್ಯಶಂಕಾ ಬರುವುದಿಲ್ಲ. ಪ್ರಾಮಾಣ್ಯನಿಶ್ಚಯದಂತೆ ಅಪ್ರಾಮಾಣ್ಯ ಶಂಕಾದಿಂದ ಅನಾಸ್ಕಂದಿತವಾದ ವ್ಯವಸಾಯವೂ ಅರ್ಥನಿಶ್ಚಾಯಕ. ಆದರಿಂದಾಗಿ ನಿಃಶಂಕಪ್ರವೃತ್ತಿಯಾಗುತ್ತದೆ''.

ಹೀಗೆ, ಪ್ರಾಚೀನರ ವಾಕ್ಯಕ್ಕೆ ಅನ್ಯಾರ್ಥವನ್ನು ಮಾಡುವ ಮೂಲಕ ಅನುಮಿತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಮಣಿಕಾರ ನಿರಾಕರಿಸಿರುತ್ತಾನೆ. ಆದ್ದರಿಂದ ನವೀನಮತದಲ್ಲಿ ಅನುಮಿತ್ಯನು ವ್ಯವಸಾಯವು ದೃಷ್ಟಾಂತವಾಗುವುದಿಲ್ಲ.

ಆದಕ್ಕಾಗಿ, ಮಣಿಕಾರನೂ ಅನುಮಿತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸುವುದು ಅನಿವಾರ್ಯ ಎಂದು ಮೂಲದಲ್ಲಿ ತಿಳಿಸಿದ್ದಾರೆ.

---

**ಪ್ರತ್ಯಕ್ಷ ಮತ್ತು ಶಾಬ್ದಬೋಧಗಳಲ್ಲಿ ಸಮರ್ಥಪ್ರವೃತ್ತಿಜನಕತ್ವಲಿಂಗದಿಂದಲೇ ಪ್ರಾಮಾಣ್ಯ ನಿಶ್ಚಯ. ಆದರೆ ಅಂತಹ ಲಿಂಗದಿಂದ ಜನ್ಯವಾದ 'ಜಲಜ್ಞಾನಂ ಪ್ರಮಾಣಂ' ಎಂಬ ಅನುಮಿತಿಯಲ್ಲಿ ವ್ಯಭಿಚಾರಸಂದೇಹವೇ ಬರುವುದಿಲ್ಲ. ಏಕೆಂದರೆ ಆ ಅನುಮಿತಿಯು ಸಾಧ್ಯ-ವ್ಯಾಪ್ಯಹೇತುಮತ್ತಾಜ್ಞಾನ ಜನ್ಯವಾದುದರಿಂದ ಯಥಾರ್ಥವಾಗಿರಲೇಬೇಕು. ಆದ್ದರಿಂದ 'ಸ್ವತ ಏವ ಪ್ರಾಮಾಣ್ಯ' ಅನುಮಿತಿಯಲ್ಲಿ. ಇದು ವಾಚಸ್ಪತಿಮಿಶ್ರರ ಅಭಿಪ್ರಾಯ.**

## ನ್ಯಾಯದೀಪ

**ಸಂಶಯೇತಿ ।। ಅನುಮಿತಿಃ ಪ್ರಮಾ ನ ವಾ, ಇತಿ ಸಂಶಯಃ, ಅಪ್ರಮೈವ, ಇತಿ ವಿಪರ್ಯಯಃ, ಪ್ರಮಾ ನ ಭವತಿ, ಇತಿ ಪ್ರಾಮಾಣ್ಯವ್ಯತಿರೇಕ ಪ್ರಮಾ ವಾ ಸ್ಯಾತ್ । ತದ್ವಿರೋಧಿನಃ ಪ್ರಾಮಾಣ್ಯ ನಿಶ್ಚಯಸ್ಯ ಅನುದಯಾತ್, ಇತ್ಯರ್ಥಃ ।**

**ನ ಚ ಇಷ್ಟಾಪತ್ತಿಃ । ನಿರಸ್ತಸಮಸ್ತವಿಭ್ರಮೇತಿ ಉಕ್ತಿವಿರೋಧಾತ್ । ವ್ಯತಿರೇಕಪ್ರಮಾಪತ್ತೇಃ ಅನಿಷ್ಟತ್ವಾಚ್ಚ ಇತಿ ಭಾವಃ । ಅತ ಏವ ನ ಧರ್ಮ್ಯಜ್ಞಾನಾದಿನಾ ಉಪಪತ್ತಿಃ । ಕದಾಪಿ ವಿಭ್ರಮಾಭಾವೋಪಗಮಾತ್ ।**

**ಅತ್ರ ಸಂಶಯ–ವಿಪರ್ಯಯೋಃ ಏಕರಾಶೀಕರಣಾತ್ ಅನ್ಯತರೇತಿ ಸಾಧು ।।**

ಅನುಮಿತಿಯಲ್ಲಿ ಪ್ರಾಮಾಣ್ಯವು ಅನುವ್ಯವಸಾಯದಿಂದ ನಿಶ್ಚಿತವಾಗದಿದ್ದಲ್ಲಿ ಪ್ರಾಮಾಣ್ಯ ಸಂದೇಹ–ವಿಪರ್ಯಗಳು ಬರಬೇಕಾದೀತು. ಇದಕ್ಕೆ ಇಷ್ಟಾಪತ್ತಿಯನ್ನು ಹೇಳಬಾರದು. ಮಿಶ್ರರು ಅನುಮಿತಿಯಲ್ಲಿ 'ನಿರಸ್ತ ಸಮಸ್ತ–ವಿಭ್ರಮ' ಎಂಬ ವಿಶೇಷಣವನ್ನು ಕೊಡುವ ಮೂಲಕ ಸಂದೇಹಾದಿಗಳು ಬರುವುದಿಲ್ಲ, ಎಂದಿರುತ್ತಾರೆ. ಅಲ್ಲದೇ, ಪ್ರಾಮಾಣ್ಯನಿಶ್ಚಿತವಾಗದಿದ್ದರೆ ವ್ಯತಿರೇಕಪ್ರಮಾಪತ್ತಿ, (ಪ್ರಮಾ ನ ಭವತಿ ಎಂಬ ಜ್ಞಾನಾಪತ್ತಿ) ಎಂಬ ಆಪತ್ತಿಯನ್ನು ಕೊಡಲಾಗಿದೆ. ಇದನ್ನು ನೈಯಾಯಿಕರು ಎಂದೂ ಇಷ್ಟಾಪತ್ತಿ ಎನ್ನುವುದಿಲ್ಲ. ವ್ಯಾಪ್ತಿ–ಪಕ್ಷಧರ್ಮತಾ–ಉಪೇತವಾದ–ಹೇತುಜ್ಞಾನಜನ್ಯವಾದ ಅನುಮಿತಿಯು ಎಂದೂ ಅಪ್ರಮಾ ಆಗುವುದಿಲ್ಲ, ಎಂದೇ ಅವರ ಸಿದ್ಧಾಂತ.

ಧರ್ಮಿಜ್ಞಾನರೂಪವಾದ ಸಾಮಗ್ರೀ ಇಲ್ಲದಿರುವುದರಿಂದ ಪ್ರಾಮಾಣ್ಯ ಸಂಶಯಾದಿಗಳು ಅನುಮಿತಿಯಲ್ಲಿ ಬರುವುದಿಲ್ಲ, ಎಂಬ ಸಮಾಧಾನವೂ ಯುಕ್ತವಲ್ಲ. ಏಕೆಂದರೆ, ಅನುಮಿತಿಯಲ್ಲಿ ಎಂದೂ ಅಪ್ರಾಮಾಣ್ಯ ಭ್ರಮೆ ಬರುವುದಿಲ್ಲ, ಎಂದು ಉದಯನಾಚಾರ್ಯರು ಅಂಗೀಕರಿಸಿದ್ದಾರೆ. ಅಂದರೆ, ಎಂದೂ ಧರ್ಮಿಜ್ಞಾನ (ಅನುಮಿತಿಯ ಜ್ಞಾನ) ಇಲ್ಲ, ಎನ್ನಬೇಕಾಗುತ್ತದೆ. ಇದು ಅನುಭವ ವಿರುದ್ಧ.

ಮೂಲದಲ್ಲಿ 'ಸಂಶಯ–ವಿಪರ್ಯಯ–ವ್ಯತಿರೇಕ–ಪ್ರಮಾ' ಈ ಮೂರನ್ನು ಹೇಳಿರುವುದರಿಂದ 'ಅನ್ಯತಮಾಭಾವಾತ್' ಎನ್ನಬೇಕಾಗಿತ್ತು. ಆದರೂ ಸಂಶಯವಿಪರ್ಯಗಳನ್ನು ಅಪ್ರಾಮಾಣ್ಯ ವಿಷಯಕತ್ವೇನ ಒಂದನ್ನಾಗಿ ಪರಿಗಣಿಸಿದಾಗ ಒಟ್ಟು ಎರಡಾಗುತ್ತವೆ. ಆದ್ದರಿಂದ 'ಅನ್ಯತರ' ಶಬ್ದವು ಯುಕ್ತವಾಗುತ್ತದೆ.

## ಸಂಶಯಾಭಾವ ಕಾರಣಾಂತರದಿಂದ

**ननु वह्निज्ञानप्रामाण्यनियतस्य धूमवद्विशेष्यकत्वे सति वह्निप्रकारकत्वस्यानुमित्यनुव्यवसायेन ग्रहणात् तत्रासंशय इति चेन्न ।**

ಅನುಮಿತಿಯಲ್ಲಿ ಪ್ರಾಮಾಣ್ಯಸಂದೇಹ ಬರದಿರಲು ಅನುವ್ಯವಸಾಯದಿಂದ ಪ್ರಾಮಾಣ್ಯ ನಿಶ್ಚಿತವಾಗಿರುವುದು ಕಾರಣವಲ್ಲ. ವ್ಯಾಪ್ಯಧರ್ಮದರ್ಶನವು ಕಾರಣ. 'ವಹ್ನಿಮಾನ್' ಎಂಬ ಅನುಮಿತಿಯನ್ನು ಅನುವ್ಯವಸಾಯವು ದೂಮವದ್(ಪರ್ವತ) ವಿಶೇಷ್ಯಕತ್ವೇನ, ವಹ್ನಿಪ್ರಕಾರ ಕತ್ವೇನ ವಿಷಯೀಕರಿಸುತ್ತದೆ. ಅಂದರೆ, ಈ ಅನುಮಿತಿಯಲ್ಲಿ ಧೂಮವತ್ತಾದಪರ್ವತವು ವಿಶೇಷ್ಯವಾಗಿದ್ದು ವಹ್ನಿಯು ಅದರಲ್ಲಿ ಪ್ರಕಾರವಾಗಿ ಕಾಣುತ್ತದೆ, ಎಂದೇ ಅನುಮಿತಿಯನ್ನು ಅನುವ್ಯವಸಾಯವು ತಿಳಿಸಿಕೊಡುತ್ತದೆ. ಇದು ಪ್ರಾಮಾಣ್ಯವ್ಯಾಪ್ಯವಾದ ಧರ್ಮ. ವಹ್ನಿ-ಅನುಮಿತಿ ಯಲ್ಲಿ ಪ್ರಾಮಾಣ್ಯವೆಂದರೆ 'ವಹ್ನಿಮತಿ ವಹ್ನಿ ಪ್ರಕಾರಕತ್ವಮ್'. ಧೂಮವಿದ್ದಲ್ಲಿ ವಹ್ನಿ ಇದ್ದೇ ಇರುತ್ತದೆಯಾದ ಕಾರಣ, ಯಾವ ಜ್ಞಾನದಲ್ಲಿ ಧೂಮವತ್ತಾದ ಪರ್ವತ ವಿಶೇಷ್ಯಕತ್ವ ಮತ್ತು ವಹ್ನಿಪ್ರಕಾರಕತ್ವವು ಇರುತ್ತದೋ ಆ ಜ್ಞಾನದಲ್ಲಿ ವಹ್ನಿಮದ್ವಿಶೇಷ್ಯಕತ್ವೇ ಸತಿ ವಹ್ನಿ ಪ್ರಕಾರತ್ವವು ಇದ್ದೇ ಇರುತ್ತದೆ. ಹೀಗೆ ಪ್ರಾಮಾಣ್ಯವ್ಯಾಪ್ಯವಾದ ಧರ್ಮ 'ಧೂಮವದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾರಕತ್ವ'. ಇಂತಹ ವ್ಯಾಪ್ಯಧರ್ಮದರ್ಶನವಿರುವುದರಿಂದ ಅನುಮಿತಿಯಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. 'ಪುರುಷತ್ವವ್ಯಾಪ್ಯಕರಾದಿಮಾನ್' ಎಂಬ ಜ್ಞಾನವಿದ್ದಾಗ 'ಪುರುಷೋ ನ ವಾ' ಎಂಬ ಸಂದೇಹವು ಹೇಗೆ ಬರುವುದಿಲ್ಲವೋ ಹಾಗೆ.

ಹೀಗೆ ಪ್ರಾಮಾಣ್ಯ ಸ್ವತಸ್ತ್ವವನ್ನು ಅಂಗೀಕರಿಸದೆಯೂ ಸಂದೇಹಾಭಾವವನ್ನು ಅನ್ಯಥಾ ಸಮರ್ಥಿಸಬಹುದು. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಅನಿವಾರ್ಯ, ಎಂದು ಆಕ್ಷೇಪ.

## ಪ್ರಾಮಾಣ್ಯದರ್ಶನದಿಂದಲೇ ಸಂದೇಹಾಭಾವ

**अनुमितेर्वह्निमत्वमात्रविषयकत्वेन बहिरर्थस्य धूमवत्वस्योपनायका भावेन अनुव्यवसायाविषयत्वात् ।।**

ಅನುವ್ಯವಸಾಯದಲ್ಲಿ ಬಹಿರರ್ಥ ಎಂಬ ಕಾರಣದಿಂದ ವಹ್ನಿಮದ್ವಿಶೇಷ್ಯಕತ್ವವು ತೋರುವುದಿಲ್ಲ, ಎನ್ನುವ ನೈಯಾಯಿಕರು ಧೂಮವದ್ವಿಶೇಷ್ಯಕತ್ವವು ತೋರುತ್ತದೆ, ಎಂದಾದರೂ ಹೇಗೆ ಹೇಳಲು ಸಾಧ್ಯ? ಅದೂ ಬಹಿರರ್ಥವೇ ಆಗಿದೆ. ಅದು ತೋರುವುದಾದಲ್ಲಿ ವಹ್ನಿ ಮದ್ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವೇ ಏಕೆ ತೋರಬಾರದು? ಆದ್ದರಿಂದ ಆ

ವ್ಯಾಪ್ಯಧರ್ಮವೂ ಅನುವ್ಯವಸಾಯವಿಷಯವಲ್ಲ. ಪ್ರಾಮಾಣ್ಯವೇ ವಿಷಯ. ಆದ್ದರಿಂದ ಸಾಧ್ಯವೈಕಲ್ಯದೋಷ ಇಲ್ಲ.

## ನ್ಯಾಯದೀಪ

**ಮಣ್ಯುಕ್ತಮೇವ ಸಂಶಯಾದಿ ನಿವೃತ್ತಿ–ಉಪಾಯಮ್ ಆಶಂಕತೇ–ನನ್ವಿತಿ ॥**

**ನಿಯತಸ್ಯೇತಿ ॥ ಯತ್ರ ಧೂಮವದ್ವಿಶೇಷ್ಯಕತ್ವೇ ಸತಿ ವಹ್ನಿ ಪ್ರಕಾರಕತ್ವಂ ತತ್ರ ವಹ್ನಿಮದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾರಕತ್ವಂ ಇತಿ ವ್ಯಾಪ್ತೇರಿತಿ ಭಾವಃ ।**

ಮಣಿಕಾರ ಅನುಮಿತಿಯ ಅನುವ್ಯವಸಾಯ ಬಂದ ಮೇಲೆ ಪ್ರಾಮಾಣ್ಯ ಸಂದೇಹ ಬರದೇ ಇರಲು ವ್ಯಾಪ್ಯಧರ್ಮ ದರ್ಶನವು ಕಾರಣವೆಂದು ಅದೇ ವಾಕ್ಯದಲ್ಲಿ (ನ್ಯಾಯದೀಪದಲ್ಲಿ ಉದ್ಧರಿಸಿರುವ ವಾಕ್ಯದಲ್ಲಿ ತಿಳಿಸಿದ್ದಾನೆ.) ಆದೇ ಶಂಕೆಯನ್ನು ಮೂಲದಲ್ಲಿ ಮಾಡಲಾಗಿದೆ.

## ದೋಷಾಂತರ ಕಥನ

**ಕಿಂ ಧೂಮವದ್ವಿಶೇಷ್ಯಕತ್ವಮ್ ಅನುಮಿತ್ಯುಪನೀತಮೇವ ತದನುವ್ಯವಸಾಯೇನ ಗೃಹ್ಯತೇ ಇತ್ಯುಚ್ಯತೇ, ಅಥ ಪರಮರ್ಶೋಪನೀತಮಿತಿ ಹೃದಿ ವಿಕಲ್ಪ್ಯ ಆದ್ಯಂ ನಿರಾಹ–ಅನುಮಿತೇರಿತಿ ॥**

**ಉಪನಾಯಕೇತಿ ॥ ಅನುವ್ಯವಸಾಯೇ ಭಾಸಕಾಭಾವೇನ ಇತ್ಯರ್ಥಃ ।**

**ಉಪಲಕ್ಷಣಂ ಚೈತತ್ । ಪ್ರಾಮಾಣ್ಯನಿಯತಸ್ಯಾಪಿ ತತ್ತ್ವೇನ ಅಭಾನೇ ಸಂಶಯಾನಿರಾಸಾತ್ । ಧೂಮವದ್ವಿಶೇಷ್ಯಕತ್ವಾದೇಃ ವಹ್ನಿಮದ್ವಿಶೇಷ್ಯಕತ್ವ ವ್ಯಾಪ್ಯತ್ವಸ್ಯ ಬಹಿರರ್ಥಸ್ಯ ಅನುಮಿತೌ ಸರ್ವಥಾ ಭಾನಾಭಾವೇನ ತದನುವ್ಯವಸಾಯೇ ತಸ್ಯ ಉಪನಾಯಕಾಭಾವೇನ ಅನುವ್ಯವಸಾಯಾ ವಿಷಯತ್ವಾದಿತ್ಯಪಿ ಧ್ಯೇಯಮ್ ।**

**ಯತ್ತು, ಪ್ರಾಮಾಣ್ಯ–ವ್ಯಾಪ್ಯಸ್ಯ ಸ್ವರೂಪೇಣೈವ ಜ್ಞಾನಂ ಸಂಶಯಾದಿ ವಿರೋಧಿ ಇತ್ಯೇತತ್ ಇಹೈವ ಅನನ್ಯಗತ್ಯಾ ಕಲ್ಪ್ಯತೇ ಇತಿ ತನ್ನ । ಸ್ವತಸ್ತ್ವೇನಾಪಿ ಉಪಪತ್ಯಾ ಅನನ್ಯಗತೇಃ ಅಭಾವಾತ್ ।**

ಮೂಲದಲ್ಲಿ ಧೂಮವದ್ವಿಶೇಷ್ಯಕತ್ವವು ಅನುವ್ಯವಸಾಯದಲ್ಲಿ ವಿಷಯವಾಗಲು ಉಪನಾಯಕ ಸಾಮಗ್ರೀ ಇಲ್ಲ, ಎಂಬ ಒಂದು ದೋಷವನ್ನು ಹೇಳಲಾಗಿದೆ. ಅದು ಉಪಲಕ್ಷಣ. ಆದಲ್ಲದೆ ಇನ್ನೊಂದು ದೋಷವೂ ಇದೆ–

ಧೂಮವದ್ವಿಶೇಷ್ಯಕತ್ವವು ಪ್ರಾಮಾಣ್ಯವ್ಯಾಪ್ಯವಾದರೂ ಸ್ವರೂಪೇಣ ಆದರ ಜ್ಞಾನವು ಸಂದೇಹಕ್ಕೆ ವಿರೋಧಿಯಲ್ಲ, ಪ್ರಾಮಾಣ್ಯವ್ಯಾಪ್ಯತ್ವೇನ ಜ್ಞಾನವೇ ವಿರೋಧಿ. ವಹ್ನ್ಯನುಮಿತಿಯಲ್ಲಿ ಪ್ರಾಮಾಣ್ಯವೆಂದರೆ ವಹ್ನಿಮದ್ವಿಶೇಷ್ಯಕತ್ವ, ತಾದೃಶಪ್ರಾಮಾಣ್ಯವ್ಯಾಪ್ಯತ್ವವು ತೋರಲು ಬೇಕಾದ ಸಾಮಗ್ರಿಯೂ ಇಲ್ಲ. ಆದ್ದರಿಂದ ವ್ಯಾಪ್ಯತ್ವವು ಭಾನವಾಗುವುದಿಲ್ಲ. ಅದು ಭಾನವಾಗದ ಹೊರತು ಅನುವ್ಯವಸಾಯವು ಸಂದೇಹಕ್ಕೆ ವಿರೋಧಿಯಾಗಲು ಸಾಧ್ಯವಿಲ್ಲ.

ಇದಕ್ಕೆ ಹೀಗೊಂದು ಪರಿಹಾರವನ್ನು ಹೇಳಬಹುದು– ಅನುವ್ಯವಸಾಯದಲ್ಲಿ ವ್ಯಾಪ್ಯತ್ವಭಾಸಕ ಸಾಮಗ್ರಿಯು ಇಲ್ಲದಿರುವುದರಿಂದ ಪ್ರಾಮಾಣ್ಯವ್ಯಾಪ್ಯತ್ವವು ಭಾಸವಾಗಲು ಸಾಧ್ಯವೇ ಇಲ್ಲ. ಆದರಿಂದಾಗಿಯೇ ಗತ್ಯಂತರ ಇಲ್ಲದಿರುವುದರಿಂದ, ವ್ಯಾಪ್ಯವಾದ ಧೂಮವದ್ವಿಶೇಷ್ಯಕತ್ವವು ಸ್ವರೂಪೇಣೈವ ಜ್ಞಾತವಾಗಿ ಸಂದೇಹ ವಿರೋಧಿಯಾಗುತ್ತದೆ, ಎಂದು ಕಲ್ಪಿಸಬೇಕಾಗುತ್ತದೆ, ಎಂದು.

ಆದರೆ, ಅದು ಸರಿಯಲ್ಲ. ಗತ್ಯಂತರ ಇಲ್ಲದಿದ್ದಲ್ಲಿ ಹೀಗೆ ಕಲ್ಪಿಸಬಹುದಿತ್ತೇನೋ. ಆದರೆ, ಪ್ರಾಮಾಣ್ಯವು ಅನುವ್ಯವಸಾಯಕ್ಕೆ ವಿಷಯ (ಪ್ರಾಮಾಣ್ಯಂ ಸ್ವತಃ) ಎಂದು ಹೇಳುವುದರಿಂದಲೂ ಪ್ರಾಮಾಣ್ಯಸಂದೇಹಾಭಾವವನ್ನು ಸಮರ್ಥಿಸಲು ಬರುವಾಗ ಅನುಭವಕ್ಕೆ ವಿರುದ್ಧವಾಗಿ ವ್ಯಾಪ್ಯಧರ್ಮದ ಸ್ವರೂಪೇಣೈವ ಜ್ಞಾನವು ಪ್ರತಿಬಂಧಕ ಎಂದು ಕಲ್ಪಿಸುವುದು ಉಚಿತವಲ್ಲ. ಹೀಗೆ ಸಂದದೇಹಾಭಾವಸಮರ್ಥನೆಗೆ ಮಾರ್ಗಾಂತರ ಇರುವಾಗ ಗತ್ಯಂತರವಿರಹವೇ ಇಲ್ಲ.

## ಉಪನಾಯಕ ಶಂಕಾ ನಿರಾಸ

**न च लिङ्गपरामर्शस्तदुपनायकः । यत्रानुमितिद्वयेच्छा तत्र परमर्शा-नन्तरं प्रथमानुमितिरूपसाध्यसिद्धेः सत्वेप्यनुमित्साधीनपक्षतायाः सत्वेना-नुमित्यनन्तरं तदनुव्यवसायकाले उपनायकपरामर्शनाशात्। ज्ञानान्तरानुव्यवसायेन ग्रहणेऽतिप्रसङ्गाच्च । 'वह्निमनुमिनोमि' इत्यनुव्यवसायेन धूमवत्वस्यानुल्लेखात् ।**

ಧೂಮವದ್ವಿಶೇಷ್ಯಕತ್ವಭಾನಕ್ಕೆ ಉಪನಾಯಕ ಇಲ್ಲ, ಎನ್ನುವ ಸಮಸ್ಯೆ ಇಲ್ಲ. 'ವಹ್ನಿವ್ಯಾಪ್ಯ ಧೂಮವಾನ್ ಪರ್ವತಃ' ಎಂಬ ಪರಾಮರ್ಶವೇ ಉಪನಾಯಕ. ಆ ಪರಾಮರ್ಶವು 'ಧೂಮವಾನ್ ಪರ್ವತಃ' ಎಂಬ ಜ್ಞಾನಲಕ್ಷಣಾ ಸನ್ನಿಕರ್ಷರೂಪವಾಗಿ ಅನುಮಿತ್ಯನುವ್ಯವಸಾಯದಲ್ಲಿ ಧೂಮವದ್ವಿಶೇಷ್ಯಕತ್ವಭಾನಕ್ಕೆ ಕಾರಣವಾಗುತ್ತದೆ, ಎಂದು ನೈಯಾಯಿಕರು ಸಮಾಧಾನ ಹೇಳಬಹುದು. ಆದರೆ, ಎಲ್ಲ ಸಂದರ್ಭಗಳಲ್ಲೂ ಇಂತಹ ಉಪನಾಯಕ ಪರಾಮರ್ಶವು ಇದೆ, ಎನ್ನಲಾಗದು. ಉದಾಹರಣೆಗೆ ಕೆಳಗಿನ ಸಂದರ್ಭ—

1. 'ಅನುಮಿತಿ ದ್ವಯಂ ಜಾಯತಾಂ' ಎಂಬ ಇಚ್ಛೆ.

2. 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬ ಪರಾಮರ್ಶ.

3. 'ಪರ್ವತಃ ವಹ್ನಿಮಾನ್' ಎಂಬ ಒಂದು ಅನುಮಿತಿ.

4. ಮತ್ತೆ 'ಪರ್ವತಃ ವಹ್ನಿಮಾನ್' ಎಂಬ ಇನ್ನೊಂದು ಅನುಮಿತಿ.

5. ಅನುಮಿತಿಯ ಅನುವ್ಯವಸಾಯ.

ಇಲ್ಲಿ ಒಂದು ಅನುಮಿತಿ ಬಂದಮೇಲೆ ಆ ಅನುಮಿತ್ಯಾತ್ಮಕ ಸಿದ್ಧಿ ಇರುವುದರಿಂದ ಮುಂದೆ ಇನ್ನೊಂದು ಅನುಮಿತಿಯು ಬರಲು ಸಾಧ್ಯವಿಲ್ಲ. ಆದರೂ ಮೊದಲನೆಯ ಇಚ್ಛೆಯು ಉತ್ತೇಜಕವಾಗಿರುವುದರಿಂದ ಪ್ರತಿಬಂಧಕ ಇದ್ದರೂ ಅನುಮಿತಿ ಬರಬಹುದು. ಸಿಷಾಧಯಿಷಾವಿರಹ–ವಿಶಿಷ್ಟಸಿದ್ಧ್ಯಭಾವರೂಪವಾದ ಪಕ್ಷತಾ ಇದೆ.

ಇಂತಹ ಸಂದರ್ಭದಲ್ಲಿ ಐದನೆಯ ಕ್ಷಣದಲ್ಲಿ ಹುಟ್ಟುವ ಅನುವ್ಯವಸಾಯಕ್ಕಿಂತ ಪೂರ್ವಕ್ಷಣದಲ್ಲಿ ಧೂಮವದ್ವಿಶೇಷ್ಯಕತ್ವೋಪನಾಯಕವಾದ ಪರಾಮರ್ಶವು ನಾಶವಾಗಿರುತ್ತದೆ. ಹೀಗಾಗಿ ಅನುವ್ಯವಸಾಯದಲ್ಲಿ ಪ್ರಾಮಾಣ್ಯವ್ಯಾಪ್ಯವಾದ ಧೂಮವದ್ವಿಶೇಷ್ಯಕತ್ವವು ಭಾಸವಾಗಲು ಸಾಧ್ಯವಿಲ್ಲ. ಆದರೂ ಆ ಅನುಮಿತಿಯಲ್ಲಿ ಪ್ರಾಮಾಣ್ಯ ಸಂದೇಹವು ಬರುವುದಿಲ್ಲ. ಅದರಿಂದ ಅನಿವಾರ್ಯವಾಗಿ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರುತ್ತದೆ, ಎಂದು ಹೇಳಲೇಬೇಕಾಗುವುದು.

ಅಷ್ಟೇ ಅಲ್ಲ, ಪರಾಮರ್ಶಾತ್ಮಕಜ್ಞಾನದಿಂದ ಉಪನೀತವಾದ ಧೂಮವದ್ವಿಶೇಷ್ಯಕತ್ವವು 'ವಹ್ನಿಮಾನ್ ಪರ್ವತಃ' ಎಂಬ ಜ್ಞಾನಾಂತರವಾದ ಅನುಮಿತಿಯ ಅನುವ್ಯವಸಾಯದಲ್ಲಿ ತೋರಲಾರದು. ಹಾಗೆ ಭಾನವಾಗುವುದಾದಲ್ಲಿ 'ಅಯಂ ಪಟಃ' ಎಂಬ ಜ್ಞಾನದಲ್ಲಿ ಉಪನೀತವಾದ ಪಟತ್ವ ಪ್ರಕಾರಕತ್ವವು 'ಅಯಂ ಪಟಃ' ಎಂಬ ಜ್ಞಾನದ ಅನುವ್ಯವಸಾಯದಲ್ಲಿ ತೋರಬೇಕಾದೀತು.

ಪೂರ್ವಜ್ಞಾನ ಜನ್ಯವಾದ ಉತ್ತರಜ್ಞಾನದ ಅನುವ್ಯವಸಾಯದಲ್ಲಿ ಮಾತ್ರ ಪೂರ್ವಜ್ಞಾನೋಪನೀತಾಂಶವು ಭಾನವಾಗುತ್ತದೆ. ಪ್ರಕೃತದಲ್ಲಿ ಪರಾಮರ್ಶದಿಂದ ಜನ್ಯವಾಗಿದೆ ಅನುಮಿತಿ. ಆದರ ಅನುವ್ಯವಸಾಯದಲ್ಲಿ ಪರಾಮರ್ಶೋಪನೀತಾಂಶವು ಭಾನವಾಗುತ್ತದೆ. ಘಟ ಜ್ಞಾನ ಪಟಜ್ಞಾನಗಳು ಒಂದರಿಂದ ಮತ್ತೊಂದು ಜನ್ಯವಾಗಿಲ್ಲ. ಆದ್ದರಿಂದ ಪೂರ್ವಜ್ಞಾನೋಪ–ನೀತವಾದುದು ಉತ್ತರ ಜ್ಞಾನದಲ್ಲಿ ಭಾನವಾಗುವುದಿಲ್ಲ, ಎಂದು ಸಮಾಧಾನವನ್ನು ಹೇಳಿದರೂ ವಹ್ನ್ಯನುಮಿತ್ಯನುವ್ಯವಸಾಯದಲ್ಲಿ ಧೂಮವದ್ವಿಶೇಷ್ಯಕತ್ವಭಾನವು ಅನುಭವವಿರುದ್ಧ. ಅನುವ್ಯವಸಾಯದ ಉಲ್ಲೇಖ 'ವಹ್ನಿಂ ಅನುಮಿನೋಮಿ' ಎಂದು ಮಾತ್ರ. 'ಧೂಮವತಿ ವಹ್ನಿಂ ಅನುಮಿನೋಮಿ' ಎಂದಲ್ಲ. ಆದ್ದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ವ್ಯಾಪ್ಯಧರ್ಮವು ತೋರುವುದಿಲ್ಲ.

## ನ್ಯಾಯದೀಪ

**ದ್ವಿತೀಯಂ ನಿರಾಹ–ನ ಚೇತಿ ॥ ಅನುಮಿತಿದ್ವಯೇಚ್ಛೇತಿ ॥ ನನು ಪೂರ್ವಂ 'ಮಮ ಅನುಮಿತಿದ್ವಯಂ ಸ್ಯಾತ್' ಇತಿ ಇಚ್ಛಾ। ಪಶ್ಚಾತ್ ಲಿಂಗಪರಾಮರ್ಶಃ । ಪಶ್ಚಾತ್ ಅನುಮಿತಿಃ । ಅನಂತರಂ ದ್ವಿತೀಯಾನುಮಿತಿ–ಉತ್ಪತ್ತಿವೇಲಾಯಾಂ ಧೂಮವತ್ತ್ವೋಪನಾಯಕಸ್ಯ ಪರಾಮರ್ಶಸ್ಯ ಅನಾಶೇಽಪಿ ದ್ವಿತೀಯೋತ್ಪತ್ತಿ–ಸಮಯೇ ಪೂರ್ವೋತ್ಪನ್ನೇಚ್ಛಾಯಾಃ ಅಭಾವಾತ್, ಅನುಮಿತ್ಸಾಯಾಃ ಅಭಾವೇನ ದ್ವಿತೀಯಾನುಮಿತ್ಯುತ್ಪಾದ ಏವ ಅಯುಕ್ತಃ ಇತಿ ಚೇನ್ನ। ಅನುಮಿತ್ಸಾಪದೇನ ಅನುಮಿತ್ಸಾವಿಷಯ–ಸಿದ್ಧ್ಯನುಗುಣ–ಅನಂತರಿತತ್ವಸ್ಯ ವಿವಕ್ಷಿತತ್ವಾತ್। ತಥೈವ ಪಕ್ಷತಾಲಕ್ಷಣೇ ಅಭಿಧಾನಾತ್, ಇತಿ ಭಾವಃ ।**

**ಪಕ್ಷತಾಯಾಃ ಇತ್ಯುಪಲಕ್ಷಣಮ್ । ವಿನಶ್ಯದವಸ್ಥ–ಪರಾಮರ್ಶಭಾವಾತ್ ಇತ್ಯಪಿ ಧ್ಯೇಯಮ್ ।**

ಮೂಲದಲ್ಲಿ ಧೂಮವದ್ವಿಶೇಷ್ಯಕತ್ವಭಾನಕ್ಕೆ ಉಪನಾಯಕ ಇಲ್ಲ ಎನ್ನಲಾಗಿದೆ. ಅದು ದ್ವಿತೀಯವಿಕಲ್ಪ. ಅದನ್ನು 'ನಚ' ಎಂಬ ಪ್ರಥಮವಾಕ್ಯದಲ್ಲಿ ನಿರಾಕರಿಸಲಾಗಿದೆ.

ಮೂಲದಲ್ಲಿ ದ್ವಿತೀಯಾನುಮಿತಿಕಾಲದಲ್ಲೂ 'ಅನುಮಿತ್ಸಾ' (ಉತ್ತೇಜಕವಾದ ಇಚ್ಛಾ) ಇದೆ, ಎನ್ನಲಾಗಿದೆ. ಆದರೆ ಅದು ಯುಕ್ತವಲ್ಲ. ಆಗ ಇಚ್ಛಾ ಇರಲು ಸಾಧ್ಯವಿಲ್ಲ. ಜ್ಞಾನಗಳ ಕ್ರಮ ಹೀಗಿದೆ—

1. ಮೊದಲು 'ಮಮ ಅನುಮಿತಿದ್ವಯಂ ಜಾಯತಾಮ್' ಎಂಬ ಇಚ್ಛಾ
2. ಆಮೇಲೆ ಲಿಂಗಪರಾಮರ್ಶ
3. ಆಮೇಲೆ ಪ್ರಥಮಾನುಮಿತಿ
4. ಕೊನೆಯಲ್ಲಿ ಅನುಮಿತ್ಯಂತರ

ಇಲ್ಲಿ ಪ್ರಥಮಾನುಮಿತಿ ಬರುವ ಕಾಲದಲ್ಲಿ ಮೊದಲು ಹುಟ್ಟಿದ ಇಚ್ಛೆ ನಾಶವಾಗಿದೆ. ಆಗ ಇಚ್ಛಾವಿರಹವಿಶಿಷ್ಟ ಸಿದ್ಧಿಯೇ ಇದೆ. ಆದ್ದರಿಂದ ಇನ್ನೊಂದು ಅನುಮಿತಿಯು ಹುಟ್ಟುವುದೇ ಸಾಧ್ಯವಿಲ್ಲ, ಎಂದು ಆಕ್ಷೇಪ.

ಮೂಲದಲ್ಲಿ ಅನುಮಿತ್ಸಾಪದಕ್ಕೆ 'ಅನುಮಿತಿ ಇಚ್ಛಾ' ಎಂದು ಅರ್ಥವಲ್ಲ. ಅಂತಹ ಇಚ್ಛೆಯು ಪ್ರಥಮಾನುಮಿತಿ–ಕಾಲದಲ್ಲಿ ಇಲ್ಲ. 'ಅನುಮಿತ್ಸಾ–ವಿಷಯಸಿದ್ಧಿಗೆ ಅನುಗುಣವಾದ ಸಿದ್ಧಿ ಇಲ್ಲ' ಎಂದು ಅರ್ಥ.

ಪ್ರಥಮಾನುಮಿತಿ ಕಾಲದಲ್ಲಿ ಇಚ್ಛಾ ಇಲ್ಲದೇ ಹೋದರೂ ಆ ಸಿದ್ಧಿಯಿಂದ 'ಅನುಮಿತಿದ್ವಯಂ ಜಾಯತಾಂ' ಎಂಬ ಇಚ್ಛೆಯ ವಿಷಯವು ಪೂರ್ಣಸಿದ್ಧಿಯಾಗುವುದಿಲ್ಲ. ಎರಡು ಅನುಮಿತಿ ಬಂದ ಮೇಲೆಯೇ ಆ ಇಚ್ಛೆ ಪೂರ್ಣಗೊಳ್ಳುತ್ತದೆ. ಆದ್ದರಿಂದ ಅನುಗುಣಸಿದ್ಧ್ಯನಂತರಿತತ್ವ ರೂಪವಾದ ಪಕ್ಷತಾ ಇದೆ. ಅನುಮಿತ್ಯಂತರ ಹುಟ್ಟಬಹುದು. ಈ ಕ್ರಮವನ್ನು ಪಕ್ಷತಾಗ್ರಂಥದಲ್ಲಿ ನೈಯಾಯಿಕರೇ ಹೇಳಿದ್ದಾರೆ.[1]

ಮೂಲದಲ್ಲಿ ಪಕ್ಷತಾ ಇದೆ ಎನ್ನಲಾಗಿದೆ. ಅದು ಉಪಲಕ್ಷಣ. ವಿನಶ್ಯದವಸ್ಥಾಪನ್ನವಾದ ಪರಾಮರ್ಶವೂ ಇದೆ. ಆದ್ದರಿಂದ ಇನ್ನೊಂದು ಅನುಮಿತಿಯು ಹುಟ್ಟುತ್ತದೆ, ಎಂದೂ ತಿಳಿಯಬೇಕು.

## ನ್ಯಾಯದೀಪ

**ಅನುಮಿತ್ಯನಂತರಮಿತಿ ॥ ದ್ವಿತೀಯಾನುಮಿತ್ಯುತ್ಪತ್ಯನಂತರಮ್ ಇತ್ಯರ್ಥಃ । ಅನುಮಿತ್ಯಂತರಮ್, ಇತಿ ಪಾಠೇ ಜಾಯತೇ ಇತಿ ಶೇಷಃ ।**

**ನನು ತದಾ ಪರಾಮರ್ಶನಾಶೇಽಪಿ ತಜ್ಜನ್ಯಸಂಸ್ಕಾರಸಹಿತಾನು-ವ್ಯವಸಾಯಾತ್ ಅಸ್ತು ತದ್ ಗ್ರಹಣಮ್, ಇತ್ಯತ ಆಹ– ಜ್ಞಾನಾಂತರೇತಿ ॥ ಘಟಜ್ಞಾನಾನುವ್ಯವಸಾಯೇ ಪಟಜ್ಞಾನೋಪನೀತಸ್ಯ ಭಾನಾಪತ್ತೇಃ ಇತ್ಯರ್ಥಃ ।**

**ನನು ತದುಪನೀತಸ್ಯ ತಜ್ಜನ್ಯಜ್ಞಾನಾಂತರಾನುವ್ಯವಸಾಯೇನ ಗ್ರಹಣಮ್, ಇತ್ಯುಕ್ತೌ ನ ದೋಷ ಇತ್ಯತ ಆಹ–ವಹ್ನಿಮಿತಿ ॥ ಏತೇನ ಪರಾಮರ್ಶನಿಷ್ಠ–ಪ್ರಾಮಾಣ್ಯಾನುಮಿತ್ಯುಪನೀತಮ್ ಧೂಮವದ್ವಿಶೇಷ್ಯ-ಕತ್ವಮ್, ಇತಿ ಪ್ರತ್ಯುಕ್ತಮ್ ।**

---

1. ಪಕ್ಷತಾ(ಪುಟ 53 ತಿರುಪತಿ–ಕೇಂದ್ರೀಯ ವಿದ್ಯಾಪೀಠ ಗಾದಾಧರೀ ಸಹಿತ ಪ್ರಕಾಶನ)
ದೀಧಿತಿ– ಅತ್ರ ಚ ವ್ಯಾಪ್ತಿ ಸ್ಮರಣಾದಿನಾ ಪೂರ್ವಾನುಮಿತ್ಸಾನಾಶೇ
ಪರಾಮರ್ಶಕಾಲೇ ಚ ಸಿದ್ಧಿಸತ್ವೇ ಅನುಮಿತ್ಸಾಂತರೋತ್ಪತ್ತ್ಯೈವ ಅನುಮಿತಿಃ ।
ತಥೈವ ಕಾರಣೀಭೂತಸ್ಯ ವಿಶಿಷ್ಟಾಭಾವಸ್ಯ ಉಪಪತ್ತೇಃ ಇತ್ಯುಪಾಧ್ಯಾಯಾಃ ।
ಅನ್ಯೇ ತು, ದ್ವಿತ್ರಿಕ್ಷಣಾಂತರಿತಾಯಾಮಪಿ ಅನುಮಿತ್ಸಾಯಾಂ ಅನುಮಿತಿದರ್ಶನಾತ್ ಅನುಮಿತ್ಸಾಯೋಗ್ಯತಾ ವಾಚ್ಯಾ । ಸಾ ಚ ಸ್ವೋತ್ಪತ್ತ್ಯನಂತರಂ ಸ್ವವಿಷಯ ಸಿದ್ಧ್ಯನುತ್ಪಾದಃ । ...ಕಿಂತು ಅನುಮಿತ್ಸಾನಂತರಂ ಲಿಂಗದರ್ಶನಾದಿ ಕ್ರಮೇಣ ಯಾವತಾ ಕಾಲೇನ ಉತ್ಸರ್ಗತಃ ಪರಾಮರ್ಶಃ ಜಾಯತೇ ತಾವಾನೇವ ಕಾಲಃ ।
ಅಥವಾ ಅನುಮಿತ್ಸೋತ್ಪತ್ತ್ಯನಂತರಂ ಅನುಮಿತ್ಸಾ ನಾಶೇಽಪಿ ಸಿದ್ಧೌ ಸತ್ಯಾಂ ಯಾವತ್ಕಾಲಮಧ್ಯೇ, ಅನುಮಿತಿರ್ಜಾಯತೇ ತಾವಾನೇವ ಕಾಲಃ ಅನುಮಿತ್ಸಯಾ ಉಪಲಕ್ಷಿತಃ ।

ಉಳಿದಂತೆ ನ್ಯಾಯದೀಪದ ಅಭಿಪ್ರಾಯ ಸ್ಪಷ್ಟವಿದೆ. ಕೊನೆಯ ವಾಕ್ಯದ ಅಭಿಪ್ರಾಯ ಹೀಗೆ— ಧೂಮವದ್ವಿಶೇಷ್ಯಕತ್ವವು ಪರಾಮರ್ಶೋಪನೀತವಾಗಿ ಅನುಮಿತ್ಯನುವ್ಯವಸಾಯದಲ್ಲಿ ಭಾನವಾಗುವುದು ಬೇಡ. ಆದರೆ, ಪರಾಮರ್ಶದ ಪ್ರಾಮಾಣ್ಯಾನುಮಿತ್ಯುಪನೀತವಾಗಿ ಅದರ ಭಾನವಾಗಬಹುದು. 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ, ಇತಿ ಜ್ಞಾನಂ ಪ್ರಮಾಣಮ್' ಎಂದು ಪರಾಮರ್ಶಪ್ರಾಮಾಣ್ಯಾನುಮಿತಿ. ಈ ಪರಾಮರ್ಶಗತ–ಪ್ರಾಮಾಣ್ಯ ಎಂದರೆ 'ಧೂಮವದ್ವಿಶೇಷ್ಯಕತ್ವೇ ಸತಿ ಧೂಮಪ್ರಕಾರಕತ್ವ' ರೂಪವಾದುದು. ಅದು ಪರಾಮರ್ಶ–ಪ್ರಾಮಾಣ್ಯಾನುಮಿತಿಯಲ್ಲಿ ತೋರುತ್ತದೆ. ಇಂತಹ ಅನುಮಿತಿರೂಪವಾದ ಉಪನಾಯಕದಿಂದ ವಹ್ನ್ಯನುಮಿತಿಯ ಅನುವ್ಯವಸಾಯದಲ್ಲೂ ಧೂಮವದ್ವಿಶೇಷ್ಯಕತ್ವವು ಭಾನವಾಗಬಹುದು, ಎಂದು ಆಂಶಕೆ. ಈ ಆಶಂಕೆಗೂ ಉತ್ತರ–ನಮಗೆ 'ವಹ್ನಿಮ್ ಅನುಮಿನೋಮಿ' ಎಂದಿಷ್ಟೇ ಅನುವ್ಯವಸಾಯವು ಅನುಭವ ಸಿದ್ಧವಾಗಿದೆ, ಹೊರತು, 'ಧೂಮವತಿ ವಹ್ನಿಮ್ ಅನುಮಿನೋಮಿ' ಎಂಬ ಅನುವ್ಯವಸಾಯವು ಅನುಭವಸಿದ್ಧವಲ್ಲ, ಎಂದು.

## ಲಿಂಗೋಪಾದಾನಮತವೂ ಯುಕ್ತವಲ್ಲ

**एतेनैव धूमवत्त्वे परामर्शोपनीते अनन्तरं वह्निमत्त्वविषयत्वेन जायमानानुमितिः 'सुरभि चन्दनम्' इति ज्ञानवत् विशिष्टवैशिष्ट्य ज्ञानसामग्रीमहिम्ना लिङ्गोपहितलैङ्गिकविषयेति सैवोपनायकेति निरस्तम् ।**

**अनुमितेर्वह्निमत्वमात्रविषयत्वानुभवबलेन प्रत्यक्षज्ञान एव सामग्री-महिम्नः संकोचात् । असंकोचे वा धूमवति धूमप्रकारकत्वरूपस्य प्रामाण्यस्यानुमित्यनुव्यवसायेन ग्रहणे धूमवत्त्वांशेऽनुमितेः स्वतः प्रामाण्यात् दृष्टान्तसिद्धिः ।**

ಇದರಿಂದ ಇನ್ನೊಂದು ಆಕ್ಷೇಪವೂ ಪರಿಹಾರವಾಗುತ್ತದೆ—ಧೂಮವತ್ವಾಂಶವು ಪರಾಮರ್ಶದಿಂದ ಉಪನೀತವಾಗಿ ಪರಾಮರ್ಶಾನಂತರದಲ್ಲಿ ಹುಟ್ಟುವ ವಹ್ನ್ಯನುಮಿತಿಯಲ್ಲಿ ತೋರುತ್ತದೆ. ಚಂದನಖಂಡದ ಪ್ರತ್ಯಕ್ಷ ಬರುವಾಗ ಸೌರಭ್ಯವು ಉಪನಯ ಮರ್ಯಾದಯಾ ಭಾಸಮಾನವಾಗಿ 'ಸುರಭಿ ಚಂದನಮ್' ಎಂಬ ಜ್ಞಾನಬರುವಂತೆ ಅನುಮಿತಿಯೂ ಲಿಂಗೋಪಹಿತ–ಲೈಂಗಿಕ(ಸಾಧ್ಯ) ವಿಷಯಕವಾಗಿ 'ಧೂಮವಾನ್ ಪರ್ವತಃ ವಹ್ನಿಮಾನ್' ಎಂದೇ ಹುಟ್ಟುತ್ತದೆ. ಇಂತಹ ಅನುಮಿತಿಯು ಧೂಮವಿಶಿಷ್ಟವಾದ ಪರ್ವತದಲ್ಲಿ ವಹ್ನಿಯ ವೈಶಿಷ್ಟ್ಯವನ್ನು

ಅವಗಾಹನೆ ಮಾಡುತ್ತದೆ. ಇದಕ್ಕೆ 'ಧೂಮವಾನ್ ಪರ್ವತಃ' ಎಂಬ ಜ್ಞಾನವು ಕಾರಣ. ಅಂತಹ ಪರಾಮರ್ಶರೂಪವಾದ ಕಾರಣವು ಅನುಮಿತಿಯ ಪೂರ್ವದಲ್ಲಿ ಇದೆ. ಆದ್ದರಿಂದ ಅನುಮಿತಿಯು ಹುಟ್ಟಬಹುದು. ಆರೀತಿಯ ಅನುಮಿತಿ ಹುಟ್ಟಿದ ಮೇಲೆ 'ಧೂಮವತಿ ವಹ್ನಿಪ್ರಕಾರಕ ಜ್ಞಾನವಾನ್ ಅಹಮ್' ಎಂದು ಅನುವ್ಯವಸಾಯವು ಹುಟ್ಟುತ್ತದೆ, ಎಂದು ಆಕ್ಷೇಪ.

ಈ ಆಕ್ಷೇಪವೂ ಹಿಂದೆ ಹೇಳಿದ ಕಾರಣದಿಂದಲೇ ನಿರಸ್ತವಾಗುತ್ತದೆ. ಏಕೆಂದರೆ, ನಮಗೆ 'ಪರ್ವತಃ ವಹ್ನಿಮಾನ್' ಎಂದಿಷ್ಟೇ ಅನುಮಿತಿ ಹುಟ್ಟುತ್ತದೆ. 'ಧೂಮವಾನ್ ಪರ್ವತಃ ವಹ್ನಿಮಾನ್' ಎಂಬ ಅನುಮಿತಿಯು ಹುಟ್ಟುವುದಿಲ್ಲ. ಆದ್ದರಿಂದ ವಿಶಿಷ್ಟ-ವೈಶಿಷ್ಟ್ಯ- ಬೋಧಸಾಮಗ್ರಿಯು ಪ್ರತ್ಯಕ್ಷಾತ್ಮಕವಾದ ಜ್ಞಾನವನ್ನು ಮಾತ್ರ ಹುಟ್ಟಿಸುತ್ತದೆ, ಅನುಮಿತಿಯನ್ನು ಹುಟ್ಟಿಸುವುದಿಲ್ಲ. ಹೀಗೆ ಆ ಸಾಮಗ್ರಿಯನ್ನು ಪ್ರತ್ಯಕ್ಷಮಾತ್ರ ಜನಕತ್ವೇನ ಸಂಕೋಚಗೊಳಿಸಬೇಕು.

ಹೀಗೆ ಸಂಕೋಚಗೊಳಿಸದಿದ್ದರೂ ಬಾಧಕವೇನೂ ಇಲ್ಲ. 'ಧೂಮವಾನ್ ಪರ್ವತಃ ವಹ್ನಿಮಾನ್' ಎಂದು ಅನುಮಿತಿ ಬರುತ್ತದೆ. ಈ ಅನುಮಿತಿಯು ಪರ್ವತದಲ್ಲಿ ಧೂಮ ಮತ್ತು ವಹ್ನಿಗಳನ್ನು ತಿಳಿಸುತ್ತದೆ. ಇದರ ಅನುವ್ಯವಸಾಯ 'ಧೂಮವತಿ ಪರ್ವತೇ ವಹ್ನಿ ಪ್ರಕಾರಕ ಜ್ಞಾನವಾನ್ ಅಹಮ್' ಎಂದು. ಈ ಅನುವ್ಯವಾಸಯವು 'ಧೂಮವತಿ ಪರ್ವತೇ' ಎನ್ನುವ ಮೂಲಕ ಅನುಮಿತಿ ಗ್ರಹಿಸಿರುವ ಧೂಮವು ಪರ್ವತದಲ್ಲಿ ಇದೆ, ಎಂದು ತಿಳಿಸುತ್ತದೆ. ಆ ಮೂಲಕ ಧೂಮವತ್ವಾಂಶದಲ್ಲಿ ಅನುಮಿತಿಯು ಪ್ರಾಮಾಣ್ಯವನ್ನು ವಿಷಯೀಕರಿಸಿದಂತಾಯಿತು. ಆ ಅಂಶದಲ್ಲೇ ಅದು ದೃಷ್ಟಾಂತವಾಗಲಿ, ವಹ್ನಿಮತ್ವಾಂಶದಲ್ಲಿ ಆಗುವುದು ಬೇಡ. 'ಧೂಮವತ್ವಾಂಶೇ ಅನುಮಿತ್ಯನು-ವ್ಯವಸಾಯವತ್' ಎಂದೇ ನಾವು ದೃಷ್ಟಾಂತವನ್ನು ಉಲ್ಲೇಖಿಸಬಹುದು.[1]

---

1. **ಈ ಆಕ್ಷೇಪವನ್ನು ಮಣಿಗ್ರಂಥದ ವ್ಯಾಖ್ಯಾನವಾದ 'ಪ್ರಕಾಶದಲ್ಲಿ' ರುಚಿದತ್ತಮಿಶ್ರನು ಮಾಡಿ ಪರಿಹಾರ ಹೇಳಿದ್ದಾನೆ–**

**ನನು ಧೂಮವತಿ ವಹ್ನಿಜ್ಞಾನತ್ವಂ ಇತ್ಯನೇನ 'ಧೂಮಪ್ರಕಾರಕತ್ವೇ ಸತಿ ವಹ್ನಿಪ್ರಕಾರಕತ್ವಂ ವಿವಕ್ಷಿತಂ, ಧೂಮವದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾಶಕತ್ವಂ ವಾ । ನಾದ್ಯಃ । ತಸ್ಯ ಭ್ರಮರೂಪವಹ್ನ್ಯನುಮಿತೌ ಅಪಿ ಸತ್ವೇನ ಪ್ರಾಮಾಣ್ಯನಿಯತತ್ವಾಭಾವಾತ್ । ನಾಂತ್ಯಃ, ತಸ್ಯ ಅನುವ್ಯವಸಾಯ ಅಗ್ರಾಹ್ಯತ್ವಾತ್ । ತದ್ ಗ್ರಾಹ್ಯತ್ವೇ ವಾ ಧೂಮವತ್ವಾಂಶೇ ತತ್ರ ಸ್ವತಃ ಪ್ರಾಮಾಣ್ಯಗ್ರಹಾಪತ್ತೇಃ । ತತ್ರ ಚ ಇಷ್ಟಾಪತ್ತೌ ಕಿಮಪರಾದ್ಧಂ ವಹ್ನಿಮತ್ವಾಂಶೇ ಸ್ವತಃ ಪ್ರಾಮಾಣ್ಯಗ್ರಹೇಣ। (ಪುಟ.300)**

**ಅತ್ರವದಂತಿ (ಜಯದೇವಮಿಶ್ರಾಃ) ಲಿಂಗಜ್ಞಾನಾದೀನಾಂ ಪ್ರಾಮಾಣ್ಯಶಂಕಾವಿರಹೇ ತಜ್ಜನ್ಯಾನುಮಿತೌ ಉತ್ತರಕಾಲಂ ಅಪ್ರಾಮಾಣ್ಯಸಂಶಯೇ ಬಾಧಕಾಭಾವ ಏವ। ಯತ್ರ ತು ಲಿಂಗಜ್ಞಾನಸ್ಯೈವ ಅಪ್ರಾಮಾಣ್ಯಶಂಕಾಕಲಂಕೇನ ಅನುಮಿತ್ಯನುತ್ಪಾದಃ ತತ್ರ ಪ್ರಾಮಾಣ್ಯಾನುಮಿತ್ಯಾ ಲಿಂಗನಿಶ್ಚಯೇ ಸತಿ ಅನುಮಿತಿರಿತಿ ತದನುಮಿತೌ ಧೂಮವದ್ವಿಶೇಷ್ಯಕತ್ವಂ ಭಾಸಿತುಮರ್ಹತಿ, ಸಮಾನವಿಷಯಕ ಜ್ಞಾನಾಂತರವತ್, ಇತಿ ತದನುಮಿತಿ-ವಿಶೇಷಾಭಿ ಪ್ರಾಯಕೋಽಯಂ ಗ್ರಂಥಃ ಇತಿ ॥ (ಪುಟ 301)**

**ಲಿಂಗಜ್ಞಾನವು ಅನುಮಿತಿಗೆ ಕಾರಣ. ಅದರಲ್ಲಿ ಪ್ರಾಮಾಣ್ಯಸಂದೇಹವು ಇಲ್ಲದೇ ಇದ್ದು ಅದರಿಂದ ಅನುಮಿತಿ ಬಂದರೆ ಆ ಅನುಮಿತಿಯಲ್ಲಿ ಪ್ರಾಮಾಣ್ಯ ಸಂದೇಹ ಬರಬಹುದು. ಆದರೆ ಲಿಂಗಜ್ಞಾನದಲ್ಲಿ**

## ನ್ಯಾಯದೀಪ

**ಸ್ಯೈವೇತಿ ॥ ಅನುಮಿತಿರೇವ ಇತ್ಯರ್ಥಃ । ಏತೇನ್ಯೈವೇತ್ಯುಕ್ತಂ ವ್ಯನಕ್ತಿ–ಅನುಮಿತೇರಿತ್ಯಾದಿನಾ ॥ ಸ್ವತ ಇತಿ ॥ ಜ್ಞಾನಾನುವ್ಯವಸಾಯ ವೇದ್ಯ – ಪ್ರಾಮಾಣ್ಯಕತ್ವರೂಪ – ಸ್ವತಃಪ್ರಾಮಾಣ್ಯಾತ್ ಇತ್ಯರ್ಥಃ। ದೃಷ್ಟಾಂತೇತಿ ॥ ಧೂಮವತ್ತ್ವಾಂಶೇ ಅನುಮಿತ್ಯನುವ್ಯವಸಾಯವತ್, ಇತಿ ದೃಷ್ಟಾಂತೇತ್ಯರ್ಥಃ ॥**

ಮೂಲದಲ್ಲಿ 'ಧೂಮವತ್ತ್ವಾಂಶೇ ಅನುಮಿತೇಃ ಸ್ವತಃಪ್ರಾಮಾಣ್ಯಂ' ಎಂದಿದೆ. ಅಲ್ಲಿ ಅನುಮಿತಿಗೆ ಸ್ವತಃ ಪ್ರಾಮಾಣ್ಯವೆಂದರೆ 'ಅನುಮಿತ್ಯನುವ್ಯವಸಾಯ ವೇದ್ಯಪ್ರಾಮಾಣ್ಯಕತ್ವಮ್' ಅಂದರೆ, ಅನುಮಿತಿಯ ಅನುವ್ಯವಸಾಯದಿಂದಲೇ ಅದರ ಪ್ರಾಮಾಣ್ಯವೂ ಸಿದ್ಧವಾಗುತ್ತದೆ, ಎಂದು ತಾತ್ಪರ್ಯ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವೇವಂ ತತ್ರೇವ ಕ್ವಾಪಿ ವಿಪ್ರತಿಪನ್ನಪ್ರಾಮಾಣ್ಯಂ ಅನುವ್ಯವಸಾಯವೇದ್ಯಂ ನ ಸ್ಯಾತ್ । ಸಂಶಯಾದ್ಯಭಾವಸ್ಯ ಜ್ಞಾನಾನುವ್ಯಸಾಯೇ ಪ್ರಾಮಾಣ್ಯ ವ್ಯಾಪ್ಯ–ವಿಷಯತ್ವಾದೇವ ಉಪಪತ್ತೇಃ, ತತ ಏವ ನಿಷ್ಕಂಪಪ್ರವೃತ್ತಿ–ಉಪಪತ್ತೇಶ್ಚ ಇತ್ಯತ ಆಹ–ಕಿಂಚೈವಮಿತಿ ॥ ಧೂಮವತ್ತ್ವಾಂಶೇ ಸ್ವತಃ ಪ್ರಾಮಾಣ್ಯೇ ಸತೀತ್ಯರ್ಥಃ ।**

ಮೂಲದಲ್ಲಿ, ಅನುಮಿತ್ಯನುವ್ಯವಸಾಯವು 'ವಹ್ನಿಮತಿ ವಹ್ನಿಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವನ್ನು ಗ್ರಹಿಸದಿದ್ದರೂ ಧೂಮವತ್ತ್ವಾಂಶವನ್ನು ಗ್ರಹಿಸುವುದರಿಂದ ಆ ಅಂಶದಲ್ಲೇ ದೃಷ್ಟಾಂತವಾಗಬಹುದು ಎಂದು ಒಪ್ಪಿಕೊಳ್ಳಲಾಗಿದೆ. ಇದರಿಂದ ಅನುವ್ಯವಸಾಯದಲ್ಲಿ

---

ಅಪ್ರಾಮಾಣ್ಯಸಂದೇಹ ಬಂದು, ಆಮೇಲೆ ಅದರಲ್ಲಿ ಪ್ರಾಮಾಣ್ಯಾನುಮಿತಿ ಬಂದರೆ ಅಂತಹ ಅನುಮಿತಿಯಲ್ಲಿ ಧೂಮವದ್ವಿಶೇಷ್ಯಕತ್ವವು (ಪ್ರಾಮಾಣ್ಯ) ತೋರಬಹುದು. ಹೇಗೆಂದರೆ, ಅನುಮಿತಿಪೂರ್ವದಲ್ಲಿ 'ಧೂಮವಾನ್ ಪರ್ವತಃ' ಎಂಬ ಪರಾಮರ್ಶದಲ್ಲಿ ಪ್ರಾಮಾಣ್ಯಾನುಮಿತಿ ಬಂದಿದೆ. ಆ ಅನುಮಿತ್ಯುಪನೀತವಾದ ಧೂಮವದ್ವಿಶೇಷ್ಯಕತ್ವವು ವಹ್ನ್ಯನುಮಿತಿಯಲ್ಲಿ ಭಾನವಾಗುತ್ತದೆ, ಎಂದು ಜಯದೇವ ಮಿಶ್ರರು ಹೇಳಿದ ಪರಿಹಾರ.

ಹೀಗೆ ಅನುಮಿತಿ ವಿಶೇಷದಲ್ಲಿ ಧೂವವತ್ತ್ವಾಂಶವು ಭಾನವಾದರೂ ಅನುಮಿತಿಗೆ ವಹ್ನ್ಯಂಶದಲ್ಲಿ ಅಸಂದೇಹವು ವ್ಯಾಪ್ಯಧರ್ಮದ ದರ್ಶನವಿಧಯಾ ಎಂದು ಕಲ್ಪಿಸಬೇಕಾದುದರಿಂದ ಗೌರವ ಇದ್ದೇ ಇದೆ. ಆ ರೀತಿಯ ಅನುಮಿತಿಯು ಹಿಂದೆ ಹೇಳಿದಂತೆ ಅನುವ್ಯವಸಾಯಕ್ಕೆ ವಿರುದ್ಧವೂ ಆಗಿದೆ. ಇದನ್ನು ನ್ಯಾಯದೀಪದ 212 ಪುಟದಲ್ಲಿ ಹೇಳಲಾಗಿದೆ.

ವಹ್ನ್ಯನುಮಿತಿ-ಪ್ರಾಮಾಣ್ಯವು ವಿಷಯವಲ್ಲ. ಅದಕ್ಕೆ ವ್ಯಾಪ್ಯವಾದ 'ಧೂಮವತಿ ವಹ್ನಿಪ್ರಕಾರಕತ್ವವೇ' ವಿಷಯ, ಎಂದು ಹೇಳಿದಂತೆ ಆಗುತ್ತದೆ. ಹೀಗೆ ಹೇಳಿದರೆ ಎಲ್ಲಾ ಅನುವ್ಯವಸಾಯಗಳಲ್ಲೂ ತತ್ತಜ್ಞಾನಪ್ರಾಮಾಣ್ಯವ್ಯಾಪ್ಯ-ವಿಷಯಕತ್ವೇನೈವ ಪ್ರಾಮಾಣ್ಯ ಸಂಶಯಾಭಾವ, ನಿಷ್ಕಂಪಪ್ರವೃತ್ತಿಗಳನ್ನು ಸಮರ್ಥಿಸಬಹುದಾದ ಕಾರಣ ಯಾವ ಪ್ರಾಮಾಣ್ಯವೂ ಅಂದರೆ ಪಕ್ಷೀಭೂತ ಪ್ರಾಮಾಣ್ಯವೂ ಅನುವ್ಯವಸಾಯ ವೇದ್ಯವಾಗಲಿಕ್ಕಿಲ್ಲ. ಸಂಶಯಾಭಾವವನ್ನು ತದ್-ವ್ಯಾಪ್ಯ-ವಿಷಯಕತ್ವೇನೈವ ಸಮರ್ಥಿಸಬಹುದು. ಆದ್ದರಿಂದ ಹೇತುವು ಅಪ್ರಯೋಜಕವಾಗಿ ಸಾಧ್ಯಸಾಧಕವಾಗಲಿಕ್ಕಿಲ್ಲ. ಈ ಕಾರಣದಿಂದ ಮೂಲದಲ್ಲಿ ಈ ಪಕ್ಷವನ್ನು ಬಿಟ್ಟು ಪಕ್ಷಾಂತರವನ್ನು ಹೇಳಲಾಗಿದೆ—

## ಮೂಲದಲ್ಲಿ ಪರಿಹಾರಾಂತರ

**किंचैवं वह्निमत्वांशस्य साक्षादनुमित्युपनीतत्वात् वह्निमद्विशेष्यकत्वे सति वह्निप्रकारकत्वरूपं प्रामाण्यमेवानुमित्यनुव्यवसायस्य विषयोऽस्त्विति न साध्यवैकल्यम् ।**

ಅನುಮಿತ್ಯನುಸಾಯವು ಅನುಮಿತಿಯಿಂದ ಉಪನೀತವಾದ ಧೂಮವತ್ವಾಂಶವನ್ನು ಗ್ರಹಿಸುವುದಾದಲ್ಲಿ ಅದೇ ಅನುಮಿತಿಯಿಂದ ಸಾಕ್ಷಾದುಪನೀತವಾದ ವಹ್ನಿಮತ್ವಾಂಶವನ್ನೂ ಏಕೆ ಗ್ರಹಿಸಬಾರದು? ಏವಂ ಚ 'ವಹ್ನಿಮತಿ ವಹ್ನಿಪ್ರಕಾರಕತ್ವ' ರೂಪವಾದ ಅನುಮಿತಿ ಪ್ರಾಮಾಣ್ಯವು ಅನುಮಿತಿಯ ಅನುವ್ಯವಸಾಯದಲ್ಲಿ ವಿಷಯವಾದುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಪರಿಹಾರವಾಯಿತು.

## ನ್ಯಾಯದೀಪ

**ಸಾಕ್ಷಾದಿತಿ ॥ ಧೂಮವತ್ವಾಂಶೇ ಇವ ಜ್ಞಾನಾಂತರ-ನೈರಪೇಕ್ಷ್ಯೇಣ ಇತ್ಯರ್ಥಃ ।**

**'ಪ್ರಾಮಾಣ್ಯಮೇವ' ಇತಿ ಏವಕಾರೇಣ ಪ್ರಾಮಾಣ್ಯಾಂಶೇ ಏವ ಸಂಶಯಾದ್ಯಭಾವಸ್ಯ ಉಪಗಮೇನ ತತ್ರೈವ ತನ್ನಿಶ್ಚಯಸ್ವೀಕಾರಃ ಯುಕ್ತಃ । ನ ತು ವ್ಯಾಪ್ಯಾಂಶೇ ತನ್ನಿಶ್ಚಯಸ್ವೀಕಾರಃ, ಪ್ರಾಮಾಣ್ಯವ್ಯಾಪ್ಯತ್ವೇನಾಪಿ ತನ್ನಿಶ್ಚಯಾವಶ್ಯಂಭಾವಶ್ಚ ಇತ್ಯಾಚಷ್ಟೇ ॥**

ಮೂಲದಲ್ಲಿ 'ಪ್ರಾಮಾಣ್ಯಮೇವ' ಎಂಬಲ್ಲಿರುವ ಏವಕಾರದ ಭಾವ ಹೀಗೆ- ನಮಗೆ ಸಂಶಯಾಭಾವ ಇರುವುದು, ವ್ಯವಸಾಯಗತವಾದ ಪ್ರಾಮಾಣ್ಯದ ಬಗ್ಗೆ. ಅದಕ್ಕೆ ನೇರ ಪರಿಹಾರ

ಪ್ರಾಮಾಣ್ಯನಿಶ್ಚಯವಿರುವುದರಿಂದ ಪ್ರಾಮಾಣ್ಯಸಂದೇಹವಿಲ್ಲ ಎನ್ನುವುದು. ಅದನ್ನು ಬಿಟ್ಟು ವ್ಯಾಪ್ಯನಿಶ್ಚಯವಿರುವುದರಿಂದ ಸಂದೇಹವಿಲ್ಲ ಎನ್ನುವ ಉತ್ತರ ಆಗ್ರಹಮೂಲಕ. ಅಷ್ಟೇ ಅಲ್ಲ ಹಾಗೆ ಉತ್ತರಕೊಟ್ಟಾಗ ವ್ಯಾಪ್ಯವು ವ್ಯಾಪ್ಯತ್ವೇನ ಗೃಹೀತವಾಗುತ್ತದೆ, ಎಂದು ಅನುಭವವಿರುದ್ಧವಾದ ಕಲ್ಪನೆಯನ್ನೂ ಮಾಡಬೇಕಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಪ್ರಾಚೀಮತೇ ಅವಿಪ್ರತಿಪನ್ನಂ, ನವೀನಮತೇ ಪ್ರಸಾಧ್ಯಾಂಗಕಂ ದೃಷ್ಟಾಂತಮುಕ್ತ್ವಾ ಪ್ರಯೋಗಃ ಉಕ್ತಃ। ಅಧುನಾ ನವೀನಮತೇಽಪಿ ಅವಿಪ್ರತಿಪನ್ನ-ದೃಷ್ಟಾಂತಕಂ ಪ್ರಯೋಗಮಾಹ-ಯದ್ವೇತಿ ॥ ಯದ್ವಾ, ಪೂರ್ವಮ್ ಅನುವ್ಯವಸಾಯಪಕ್ಷಕಾನ್ ಪ್ರಯೋಗಾನುಕ್ತ್ವಾ ಇದಾನೀಂ ತದ್ವಿಷಯ ಪಕ್ಷಕ ಪ್ರಯೋಗೌ ಆಹ-ಯದ್ವೇತಿ ॥ ವಸ್ತುತಸ್ತು ಇತಿ ಚ ॥**

**ಯದ್ವಾ, ತದ್ವತ್ತ್ವಾದೇಃ ಬಾಹ್ಯಾರ್ಥಸ್ಯ ನಾನುವ್ಯವಸಾಯವಿಷಯತಾ ಇತ್ಯತಃ ತರ್ಹಿ ಸುಖಿತ್ವವತ್ತ್ವಾದೇಃ ಅಬಾಹ್ಯತ್ವಾತ್ ತತ್ರಾಸ್ತು ಸ್ವತೋ ವೇದ್ಯತಾ ಇತಿ ಭಾವೇನಾಹ-ಯದ್ವೇತಿ ॥**

ಈ ಹಿಂದಿನ ಅನುಮಾನಕ್ಕೆ ದೃಷ್ಟಾಂತ, ಅನುಮಿತಿಯ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ವಿಷಯ ಎಂದು, ಪ್ರಾಚೀನರು ಹೇಳುತ್ತಾರೆ. ಆದರೆ, ನವೀನರು ಒಪ್ಪುವುದಿಲ್ಲ. ಅವರನ್ನು ಒಪ್ಪಿಸಬೇಕಾಯಿತು. ಮುಂದಿನ ಅನುಮಾನದ ದೃಷ್ಟಾಂತವು ನವೀನಮತಕ್ಕೂ ಸಮ್ಮತವಾದುದು. ಅಂತಹ ದೃಷ್ಟಾಂತಪೂರ್ವಕ ಅನುಮಾನಾಂತರಗಳನ್ನು 'ಯದ್ವಾ' 'ವಸ್ತುತಸ್ತು' ಎಂದು ಮೂಲದಲ್ಲಿ ಹೇಳಲಾಗಿದೆ.

ಅಥವಾ, ತಾರ್ಕಿಕರು ಪ್ರಾಮಾಣ್ಯಘಟಕವಾದ 'ತದ್ವತ್ತ್ವಾಂಶವು' (ಧರ್ಮಿಯಲ್ಲಿ ಪ್ರಕಾರೀಭೂತ ಧರ್ಮದ ಸಂಸರ್ಗವು) ಬಾಹ್ಯಾಂಶವಾದ ಕಾರಣ ಅನುವ್ಯವಸಾಯಕ್ಕೆ ವಿಷಯ ವಾಗುವುದಿಲ್ಲ ಎನ್ನುತ್ತಾರೆ. ಹಾಗಿದ್ದರೂ, 'ಸುಖಿತ್ವವತ್ತ್ವಾಂಶವು' ಸುಖಜ್ಞಾನಪ್ರಾಮಾಣ್ಯಘಟಕ ವಾಗಿದ್ದು ಅದು ಬಾಹ್ಯವಲ್ಲ. ಆದ್ದರಿಂದ ಸುಖಜ್ಞಾನಗತ ಪ್ರಾಮಾಣ್ಯವು ಸ್ವತಃ ವೇದ್ಯವಾಗ ಬಹುದು. ಅಲ್ಲಿ ಈ ಅನುಪಪತ್ತಿಯನ್ನು ಹೇಳಲು ಬರುವುದಿಲ್ಲ. ಅದಕ್ಕಾಗಿ, ಸುಖಜ್ಞಾನಪ್ರಾಮಾಣ್ಯ ದಲ್ಲಿ ಸ್ವತಸ್ತ್ವಸಾಧಕವಾದ ಅನುಮಾನವನ್ನೇ 'ಯದ್ವಾ' ಎಂದು ಮೂಲದಲ್ಲಿ ತೋರಿಸಲಾಗಿದೆ.

## ಸುಖಜ್ಞಾನಪ್ರಾಮಾಣ್ಯ ಸ್ವತಸ್ತ್ವಸಾಧಕಾನುಮಾನ

**यद्वा, अहं सुखीति ज्ञानप्रामाण्यं तदनुव्यवसायविषयः । तस्मिन्**

**सति अप्रकाशमानत्वरहितत्वात् व्यवसायवत् । न चासिद्धिः। तथात्वे तत्प्रामाण्ये कदाचित् संशयाद्यापातात् ।**

ಅಥವಾ, 'ಅಹಂ ಸುಖೀ' ಎಂಬ ಜ್ಞಾನಗತಪ್ರಾಮಾಣ್ಯವು (ಪಕ್ಷ) 'ಸುಖಂ ಅಹಂ ಅನುಭವಾಮಿ' ಎಂಬ ಅನುವ್ಯವಸಾಯದಲ್ಲಿ ವಿಷಯವಾಗಿದೆ.(ಸಾಧ್ಯ) ಅನುವ್ಯವಸಾಯ ಇರುವಕಾಲದಲ್ಲಿ ಆ ಪ್ರಾಮಾಣ್ಯದ ಅಜ್ಞಾನ ಇಲ್ಲವಾದುದರಿಂದ. (ಹೇತು)

ಇದಕ್ಕೆ ವ್ಯವಸಾಯವು ದೃಷ್ಟಾಂತ. ಸುಖವ್ಯವಸಾಯವು ಅದರ ಅನುವ್ಯವಸಾಯಕಾಲದಲ್ಲಿ ಅಪ್ರಕಾಶಮಾನವಾಗಿರುವುದಿಲ್ಲ, ಆದ್ದರಿಂದಲೇ ಅದು ಅನುವ್ಯವಸಾಯದಲ್ಲಿ ವಿಷಯವಾಗಿದೆ. ಅದರಂತೆ ತದ್ಗತಪ್ರಾಮಾಣ್ಯ.

ಈ ಅನುಮಾನದಲ್ಲಿ ಅಸಿದ್ಧಿದೋಷವನ್ನು ಹೇಳಬಹುದು–ಸುಖಜ್ಞಾನದ ಅನುವ್ಯವಸಾಯ ವಿರುವಾಗ ಸುಖಜ್ಞಾನಗತ–ಪ್ರಾಮಾಣ್ಯವು ಅಪ್ರಕಾಶಮಾನವಾಗಿಯೇ ಏಕೆ ಇರಬಾರದು? ಎಂದು. ಆದರೆ ಈ ಆಕ್ಷೇಪ ಯುಕ್ತವಲ್ಲ. ಒಂದುವೇಳೆ ಆ ಪ್ರಾಮಾಣ್ಯವು ಅಜ್ಞಾತವಾಗಿದ್ದರೆ ಅದರ ಬಗ್ಗೆ ಸಂದೇಹ ಬರಬೇಕು. ಆದರೆ, 'ಸುಖಜ್ಞಾನವು ಪ್ರಮಾಣ ಹೌದೋ ಅಲ್ಲವೊ' ಎಂಬ ಸಂದೇಹವು ಯಾರಿಗೂ ಬರುವುದಿಲ್ಲ. ಆ ಸಂದೇಹ ಬಂದರೆ, 'ನಾನು ಅನುಭವಿಸಿರುವುದು ಸುಖ ಹೌದೋ ಅಲ್ಲವೋ' ಎಂಬ ಸಂದೇಹವೂ ಬರಬೇಕಾದೀತು. ಪ್ರಾಮಾಣ್ಯಸಂದೇಹಾತ್ ಅರ್ಥಸಂದೇಹಃ. ಅಂತಹ ಸಂದೇಹ ನಮಗೆಂದೂ ಬರುವುದಿಲ್ಲ. ಆದ್ದರಿಂದ ಅಸಿದ್ಧಿದೋಷ ಬರುವುದಿಲ್ಲ.

## ನ್ಯಾಯದೀಪ

**ವಿಷಯ ಇತಿ ॥ ಸತ್ತಯೇತ್ಯಪಿ ಧ್ಯೇಯಮ್ । ತಸ್ಮಿನ್ನಿತ್ಯನೇನ ತದನುವ್ಯವಸಾಯಪರಾಮರ್ಶಃ । ಸಾಧ್ಯಾವಿಶೇಷನಿರಾಸಾಯ ನಞ್ದ್ವಯಮ್ ।**

**ತಥಾತ್ವೇ ಇತಿ ॥ ಜ್ಞಾನಾನುವ್ಯವಸಾಯೇ ಸತಿ ತತ್ ಪ್ರಾಮಾಣ್ಯಾಪ್ರಕಾಶೇ ಇತ್ಯರ್ಥಃ । ಧರ್ಮ್ಯಜ್ಞಾನಾಭಾವಾತ್ ಕೋಟಿಸ್ಮೃತೇರಪಿ ಕದಾಚಿತ್ ಸಂಭವಾತ್ ಇತಿ ಭಾವಃ ॥**

ಸುಖಜ್ಞಾನ ಪ್ರಾಮಾಣ್ಯವು ಸತ್ತಯಾ ಸಾಕ್ಷಿವಿಷಯ, ಎಂದು ಸಾಧ್ಯ. ಹೇತುವಿನಲ್ಲಿ 'ಅಪ್ರಕಾಶಮಾನತ್ವ–ರಹಿತತ್ವಾತ್' ಎಂದು ಎರಡು ನಿಷೇಧಗಳನ್ನು ಸೇರಿಸಲಾಗಿದೆ. ಹಾಗೆ ಹೇಳದೇ 'ಪ್ರಕಾಶಮಾನತ್ವಾತ್' ಎಂದು ವಿಧಿಮುಖವಾಗಿ ಹೇಳಿದರೆ ಸಾಧ್ಯಾವೈಶಿಷ್ಟ್ಯ ಬಂದೀತು, ಸಾಧ್ಯವೂ ಹೇತುವೂ ಒಂದೇ ಆದೀತು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ''ಆಂತರ–ಪ್ರಾಮಾಣ್ಯಮಪಿ ನ ಸ್ವತಃ । ತಸ್ಯ ಸ್ವತಸ್ತ್ವೇ ವಾ ನ ಸರ್ವಸ್ಯ ತಥಾತ್ವಮ್ । ವಿಶೇಷ್ಯನಿಷ್ಠಾತ್ಯಂತಾಭಾವ – ಪ್ರತಿಯೋಗಿ – ಪ್ರಕಾರಾನವಚ್ಛಿನ್ನತ್ವಾದಿಕಂ ಪ್ರಾಮಾಣ್ಯಂ ಸ್ವತೋ ಗೃಹೀತುಮ್ ಅಶಕ್ಯಮ್ ಇತಿ ಪರತ ಏವ ಗೃಹ್ಯತೇ'' (ಪುಟ.303) ಇತಿ ಮಣಿಕೃದುಕ್ತೇಃ ಕಥಮ್ ಅನುವ್ಯವಸಾಯವೇದ್ಯತಾ–ಸಾಧನಮ್? ಇತ್ಯತಃ ತತ್‌ಸ್ವರೂಪಂ ನಿರ್ಧಾರಯನ್ನೇವ ವಿಶಿಷ್ಯಾಪ್ಯಾಹ–ವಸ್ತುತಸ್ತು ಇತಿ ॥**

''ಸುಖಾದಿಗಳು ಆಂತರ ಪದಾರ್ಥಗಳು. ಆದರೂ, ಅವುಗಳ ಜ್ಞಾನದಲ್ಲಿರುವ ಪ್ರಾಮಾಣ್ಯವೂ ಸ್ವತಃ ತಿಳಿಯಲ್ಪಡುವುದಿಲ್ಲ, ಅಂದರೆ ಅನುವ್ಯವಸಾಯಗ್ರಾಹ್ಯವಲ್ಲ. ಆ ಪ್ರಾಮಾಣ್ಯವನ್ನು ಸ್ವತಃ ಎಂದು ಒಪ್ಪಿದರೂ ಅದರಂತೆ ಎಲ್ಲಾ ಜ್ಞಾನಗಳ ಪ್ರಾಮಾಣ್ಯವನ್ನೂ ಸ್ವತಃ ಎಂದು ಹೇಳಲಾಗದು. ಏಕೆಂದರೆ, ಪ್ರಾಮಾಣ್ಯ ಎಂದರೆ ವಿಶೇಷ್ಯನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಪ್ರಕಾರೀಭೂತಧರ್ಮದಿಂದ ಅನವಚ್ಛಿನ್ನವಾದ ವಿಷಯತಾ ನಿರೂಪಕತ್ವಮ್. 'ಅಯಂ ಘಟಃ' ಎಂಬ ಜ್ಞಾನದಲ್ಲಿ ವಿಶೇಷ್ಯ ಘಟ. ತನ್ನಿಷ್ಠಾಭಾವ=ಪಟತ್ವಾಭಾವ. ಅದಕ್ಕೆ ಪ್ರತಿಯೋಗಿ ಪಟತ್ವ. ತದನವಚ್ಛಿನ್ನ ವಿಷಯತಾ ಘಟನಿಷ್ಠಾ ವಿಷಯತಾ. ತನ್ನಿರೂಪಕತ್ವ ಜ್ಞಾನದಲ್ಲಿದೆ.

ಶುಕ್ತಿಯನ್ನು ನೋಡಿ 'ಇದಂ ರಜತಮ್' ಎಂದು ಜ್ಞಾನ ಬಂದಾಗ ವಿಶೇಷ್ಯ ಶುಕ್ತಿ. ತನ್ನಿಷ್ಠಾಭಾವ=ರಜತತ್ವಾಭಾವ. ಅದಕ್ಕೆ ಪ್ರತಿಯೋಗಿ ರಜತತ್ವ. ತದವಚ್ಛಿನ್ನ ವಿಷಯತಾ ನಿರೂಪಕವಾಗಿದೆ ಜ್ಞಾನ. ಆದ್ದರಿಂದ ಆ ಜ್ಞಾನದಲ್ಲಿ ಪ್ರಾಮಾಣ್ಯ ಇಲ್ಲ.

ಇಂತಹ ಪ್ರಾಮಾಣ್ಯವು ಮನಸ್ಸಿಗೆ ಯೋಗ್ಯವಲ್ಲದ ಅನೇಕ ಉಪಾಧಿಗಳಿಂದ ಘಟಿತವಾಗಿರುವುದರಿಂದ ಅನುವ್ಯವಸಾಯಕ್ಕೆ ವಿಷಯವಾಗುವುದಿಲ್ಲ.''

ಹೀಗೆ ಮಣಿಕಾರನು ಹೇಳಿದ್ದಾನೆ. ಆದ್ದರಿಂದ ಪ್ರಾಮಾಣ್ಯವು ಅನುವ್ಯವಸಾಯ ವೇದ್ಯವಾಗುವುದು ಹೇಗೆ? ಎಂಬ ಆಕ್ಷೇಪಕ್ಕೆ ಉತ್ತರವಾಗಿ ಪ್ರಾಮಾಣ್ಯ–ಸ್ವರೂಪವನ್ನು ನಿರ್ಧರಿಸಿ ಅದಕ್ಕೆ ಸ್ವತಸ್ತ್ವ ಸಾಧಕವಾದ ಅನುಮಾನವನ್ನು ಹೇಳುತ್ತಿದ್ದಾರೆ–'ವಸ್ತುತಸ್ತು' ಎಂದು.

**वस्तुतस्तु 'तद्वति तत्प्रकारकत्वादि' रूपं याथार्थ्यमेव प्रामाण्यम् । तज्ज्ञानस्यैव प्रवर्तकत्वात् । तत्रानुव्यवसायस्य व्यवसायगतं यत्किंचिद्विशेष्यकत्वं रजतत्वप्रकारकत्वं ज्ञानत्वं च विषय इत्यत्र न**

**विवादः । किन्तु विशेष्यस्य यद्रजतत्ववैशिष्ट्यं तद्विषयकत्व एवेति तदेव साध्यते ।**

ವಸ್ತುತಸ್ತು 'ತದ್ವತಿ ತತ್-ಪ್ರಕಾರಕತ್ವವೇ' ಪ್ರಾಮಾಣ್ಯ. ಅಂದರೆ ಜ್ಞಾನದಲ್ಲಿ ಪ್ರಕಾರವಾಗಿ ಕಾಣುವ ಧರ್ಮವು ವಿಶೇಷ್ಯದಲ್ಲಿ ಇರಬೇಕು. ಇದೇ ಪ್ರಾಮಾಣ್ಯದಲ್ಲಿ ಇರಬೇಕಾದ ಮುಖ್ಯಾಂಶ. ಏಕೆಂದರೆ, ಇಂತಹ ಪ್ರಾಮಾಣ್ಯಜ್ಞಾನವೇ ಪ್ರವೃತ್ತಿಗೆ ಕಾರಣವಾಗುತ್ತದೆ. ಹೇಗೆಂದರೆ, ಪ್ರವೃತ್ತಿಗೆ ಇಷ್ಟಸಾಧನತಾಜ್ಞಾನವು ಕಾರಣ. ನನ್ನ ಮುಂದಿರುವ ಈ ವಸ್ತು ಇಷ್ಟಸಾಧನ, ಎಂದು ತಿಳಿದರೆ ಪ್ರವೃತ್ತಿ ಉಂಟಾಗುತ್ತದೆ. ಈ ಜ್ಞಾನ ಬರಬೇಕಾದರೆ ಪುರೋವೃತ್ತಿವಸ್ತುವಿನಲ್ಲಿ ಇಷ್ಟತಾವಚ್ಛೇಕವಾದ ರಜತತ್ವವು ಇದೆ ಎಂದು ನಿರ್ಧಾರವಾಗಬೇಕು. ಪ್ರಾಮಾಣ್ಯವು ಗೃಹೀತವಾದರೆ ಮಾತ್ರ ಅದು ನಿರ್ಧಾರವಾಗುತ್ತದೆ. ಆದ್ದರಿಂದ ಪ್ರಾಮಾಣ್ಯಶರೀರದಲ್ಲಿ, ಜ್ಞಾನ ಪ್ರಕಾರೀಭೂತವಾದ ಧರ್ಮವು ವಿಶೇಷ್ಯದಲ್ಲಿ ಇದೆ, ಎನ್ನುವ ಅಂಶವೇ ಪ್ರವೃತ್ತಿ ಪ್ರಯೋಜಕ. ಇಂತಹ ತದ್ವತಿ ತತ್-ಪ್ರಕಾರಕತ್ವ ರೂಪವಾದ ಪ್ರಾಮಾಣ್ಯದಲ್ಲಿ ವ್ಯವಸಾಯಗತವಾದ ತತ್ಪ್ರಕಾರಕತ್ವವು ಅನುವ್ಯವಸಾಯವೇದ್ಯ ಎಂಬ ವಿಷಯದಲ್ಲಿ ವಿವಾದವಿಲ್ಲ. ಅದರಂತೆ ಜ್ಞಾನವು ಪುರೋವೃತ್ತಿವಿಶೇಷ್ಯಕವಾಗಿದೆ, ಎಂಬ ಅಂಶವೂ ಅನುವ್ಯವಸಾಯಗಮ್ಯ ಎಂದು ಪರತಸ್ತ್ವವಾದಿಗಳೂ ಒಪ್ಪಿದ್ದಾರೆ. ಪುರೋವರ್ತಿಯಲ್ಲಿ ಪ್ರಕಾರೀಭೂತಧರ್ಮದ ವೈಶಿಷ್ಟ್ಯವು ಇದೆ ಎನ್ನುವುದು ಮಾತ್ರ ಅನುವ್ಯವಸಾಯವೇದ್ಯವಲ್ಲ, ಎಂದು ಪರತಸ್ತ್ವವಾದಿಗಳು ಹೇಳುತ್ತಾರೆ. ವಿವಾದಾಸ್ಪದವಾದ ಆ ಅಂಶವನ್ನು ಮಾತ್ರ ಅನುಮಾನ ಮಾಡಿದರೆ ಸಾಕು, ಅದರಿಂದ ಪ್ರಾಮಾಣ್ಯಸ್ವತಸ್ತ್ವ ಸಿದ್ಧವಾಗುತ್ತದೆ. ಅದನ್ನೇ ನೇರವಾಗಿ ಸಾಧನೆಮಾಡುವ ಅನುಮಾನವನ್ನು ಮುಂದೆ ಹೇಳಲಾಗಿದೆ.

## ನ್ಯಾಯದೀಪ

**ತದ್ವತೀತಿ ॥ ವಿಶೇಷ್ಯತ್ವಂ ಸಪ್ತಮ್ಯರ್ಥಃ । ತದ್ವದ್ವಿಶೇಷ್ಯಕತ್ವೇ ಸತಿ ತತ್-ಪ್ರಕಾರಕಜ್ಞಾನತ್ವರೂಪೇತ್ಯರ್ಥಃ । ತದ್ವದ್ವಿಶೇಷ್ಯಕತ್ವಮಾತ್ರಸ್ಯ ಭ್ರಮೇಽಪಿ ಸತ್ತ್ವಾತ್ ।**

ಮೂಲದಲ್ಲಿ 'ತದ್ವತಿ ತತ್ಪ್ರಕಾರಕತ್ವರೂಪಂ' ಎಂದಿದೆ. 'ತದ್ವತಿ' ಎಂಬ ಸಪ್ತಮೀ ವಿಭಕ್ತಿಗೆ ವಿಶೇಷ್ಯತಾ ಎಂದು ಅರ್ಥ. ಅದಕ್ಕೆ ನಿರೂಪಕತಾ ಸಂಬಂಧೇನ ಜ್ಞಾನದಲ್ಲಿ ಅನ್ವಯ. ಆಗ ತದ್ವದ್ವಿಶೇಷ್ಯಕತ್ವೇ ಸತಿ ತತ್ಪ್ರಕಾರಕಜ್ಞಾನತ್ವಂ, ಎಂದು ಪ್ರಾಮಾಣ್ಯದ ಸ್ವರೂಪ ಸಿದ್ಧವಾಗುತ್ತದೆ.

ಈ ಲಕ್ಷಣದಲ್ಲಿ ತದ್ವದ್ವಿಶೇಷ್ಯಕತ್ವ ಮಾತ್ರವನ್ನು ಕೊಟ್ಟರೆ ಭ್ರಮದಲ್ಲಿ ಅತಿವ್ಯಾಪ್ತಿ. ಶುಕ್ತಿಯಲ್ಲಿ 'ಇದಂ ರಜತಮ್' ಎಂದು ಜ್ಞಾನ ಬಂದರೆ ತತ್ ಪದದಿಂದ ಶುಕ್ತಿತ್ವವನ್ನು ಪರಿಗ್ರಹಿಸಿ, ತದ್ವದ್

ಶುಕ್ತಿವಿಶೇಷ್ಯಕತ್ವವು ಆ ಭ್ರಮೆಯಲ್ಲಿ ಇದೆ. ತತ್–ಪ್ರಕಾರಕತ್ವವನ್ನು ಕೊಟ್ಟಾಗ ಇದು ಪರಿಹಾರ ವಾಗುತ್ತದೆ. ಆ ಜ್ಞಾನದಲ್ಲಿ ರಜತತ್ವವು ಪ್ರಕಾರ, ಶುಕ್ತಿತ್ವವಲ್ಲ.

## ವೈಶಿಷ್ಟ್ಯವಿಷಯಕತ್ವಸಾಧಕಾನುಮಾನ

**निष्कम्पप्रवृत्तिहेतुव्यवसायविषयभूतं धर्मधर्मिवैशिष्ट्यं सत्तयानु-व्यवसायविषयः, निष्कम्पप्रवृत्तिहेतुव्यवसायविषयत्वात्, विशेष्य-वत् ।**

ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯವಾಗಿದೆ, ಎಂದು ಹೀಗೆ ಅನುಮಾನ ಮಾಡಬೇಕು–

ಪಕ್ಷ–ಅಸಂದಿಗ್ಧವಾಗಿ ಪ್ರವೃತ್ತಿಮಾಡಲು ಕಾರಣವಾದ ವ್ಯವಸಾಯದಲ್ಲಿ ವಿಷಯವಾದ ಧರ್ಮ ಮತ್ತು ಧರ್ಮಿಗಳಿಗೆ ಇರುವ ಸಂಬಂಧವು,

ಸಾಧ್ಯ–'ಇದೆ' ಎಂಬುದಾಗಿ (ಸತ್ತಯಾ) ಅನುವ್ಯವಸಾಯದಲ್ಲಿ ಭಾನವಾಗುತ್ತದೆ.

ಹೇತು–ಏಕೆಂದರೆ, ಅದು ಅಸಂದಿಗ್ಧಪ್ರವೃತ್ತಿಕಾರಣವಾದ ವ್ಯವಸಾಯಕ್ಕೆ ವಿಷಯವಾಗಿದೆ.

ಉದಾಹರಣೆ–ವಿಶೇಷ್ಯದಂತೆ. 'ಅಯಂ ಘಟಃ' ಎಂಬ ಜ್ಞಾನದಲ್ಲಿ ವಿಶೇಷ್ಯವಾದುದು ಘಟ. ಅದು ಸತ್ತಯಾ ಅನುವ್ಯವಸಾಯವಿಷಯ. ಅನುವ್ಯವಸಾಯವು ಜ್ಞಾನವನ್ನು ಗ್ರಹಿಸುವಾಗ ಆ ಜ್ಞಾನಗೋಚರವಾದ ವಿಶೇಷ್ಯವು ಸತ್–ಇದೆ, ಎಂದೂ ಗ್ರಹಿಸುತ್ತದೆ. ಒಂದುವೇಳೆ ಅನುವ್ಯವಸಾಯವು ವೈಶಿಷ್ಟ್ಯವನ್ನು ಸತ್ತಯಾ ಗ್ರಹಿಸದೇ ಹೋದರೆ ಜಲಜ್ಞಾನ ಬಂದಕೂಡಲೇ ಸಂದೇಹ ಇಲ್ಲದೆ ಪ್ರವೃತ್ತಿಯಾಗಲಾರದು, ಎಂದು ಅನುಮಾನದ ಅಭಿಪ್ರಾಯ.

## ನ್ಯಾಯದೀಪ

**ನಿಷ್ಕಂಪೇತಿ ॥ ಸಶಂಕ–ಪ್ರವೃತ್ತಿಹೇತುವಿಷಯೇ ಬಾಧನಿರಾಸಾಯ ಹೇತ್ವಂತಂ ವ್ಯವಸಾಯವಿಶೇಷಣಮ್ । ಹೇತೌ ಚ ವ್ಯಭಿಚಾರ–ನಿರಾಸಾಯ ।**

**ವೈಶಿಷ್ಟ್ಯಂ ಚ ಪರಮತೇ ಸಮವಾಯಾದಿಭಿಃ, ಸಿದ್ಧಾಂತೇ ಸ್ವರೂಪ ಸಂಬಂಧಾದಿಭಿಃ ।**

**ಯನ್ಮತೇ ವೈಶಿಷ್ಟ್ಯಂ ಅನುವ್ಯವಸಾಯವಿಷಯೋಽಪಿ ನ ಸ್ವಾತಂತ್ರ್ಯೇಣ ತದ್ವಿಷಯಃ ಇತ್ಯಭ್ಯುಪಗಮಃ ತನ್ಮತೇ ಸಿದ್ಧಸಾಧನತಾನಿರಾಸಾಯ ಸತ್ತಯೇತಿ ವಿಶೇಷಣಮ್ । ವಾದಿನಂ ಪ್ರತಿ ತತ್–ಸಾರ್ಥಕ್ಯಂ ಆದ್ಯಸಾಧ್ಯವಿವೃತೌ ಅಸ್ಮಾಭಿರುಕ್ತಂ ಧ್ಯೇಯಮ್ ।**

ಧರ್ಮ–ಧರ್ಮಿವೈಶಿಷ್ಟ್ಯವು ಪಕ್ಷ. ಅದಕ್ಕೆ 'ನಿಷ್ಕಂಪ–ಪ್ರವೃತ್ತಿಹೇತು–ವ್ಯವಸಾಯ ವಿಷಯೀಭೂತ' ಎಂಬ ವಿಶೇಷಣವನ್ನು ಕೊಡಲಾಗಿದೆ. ಆ ವಿಶೇಷಣವನ್ನು ಬಿಟ್ಟರೆ ಬಾಧದೋಷ ಬರುತ್ತದೆ. ವ್ಯವಸಾಯ ಬಂದಮೇಲೆ ಕೆಲವೆಡೆ 'ನಾನು ತಿಳಿದವಸ್ತು ಇದೆಯೋ ಇಲ್ಲವೊ' ಎಂಬ ಸಂದೇಹದಿಂದಲೇ ಪ್ರವೃತ್ತಿಯಾಗುತ್ತದೆ. ಅಂತಹ ಸಂದರ್ಭದಲ್ಲಿ ಧರ್ಮ–ಧರ್ಮಿ ಸಂಬಂಧವು ಸತ್ತಯಾ ಅನುವ್ಯವಸಾಯಕ್ಕೆ ವಿಷಯವಾಗಿರುವುದಿಲ್ಲ. ಅದು ಸತ್ತಯಾ ವಿಷಯವಾಗಿದ್ದಲ್ಲಿ ಸಂದೇಹವೇ ಬರಲಾರದು. ಹೀಗೆ ಬಾಧಪರಿಹಾರಕ್ಕಾಗಿ ಪಕ್ಷದಲ್ಲಿ ಆ ವಿಶೇಷಣ ಬೇಕು.

ಹೇತುವಿನಲ್ಲೂ ಅದೇ ವಿಶೇಷಣವಿದೆ. ಅಲ್ಲಿ ಆ ವಿಶೇಷಣವನ್ನು ಬಿಟ್ಟರೆ ವ್ಯಭಿಚಾರ ದೋಷ ಬರುತ್ತದೆ. ಆಗ ವ್ಯಾಪ್ತಿಯಸ್ವರೂಪ ಹೀಗಾಗುತ್ತದೆ – ವ್ಯವಸಾಯವಿಷಯವಾದುದು ಅನುವ್ಯವಸಾಯದಲ್ಲಿ ಸತ್ತಯಾ ವಿಷಯವಾಗುತ್ತದೆ, ಎಂದು. ಇದು ಸರಿಯಲ್ಲ. ಸಂದಿಗ್ಧಪ್ರವೃತ್ತಿಗೆ ಕಾರಣವಾದ ವ್ಯವಸಾಯಕ್ಕೆ ವಿಷಯವಾದ ವೈಶಿಷ್ಟ್ಯವು ಸತ್ತಯಾ ಅನುವ್ಯವಸಾಯಕ್ಕೆ ವಿಷಯವಾಗಿಲ್ಲ. ಅದರ ಪರಿಹಾರಕ್ಕಾಗಿ ಹೇತುವಿನಲ್ಲೂ ಆ ವಿಶೇಷಣವನ್ನು ಕೊಡಬೇಕು.

ಧರ್ಮವಾದ ರಜತತ್ವಕ್ಕೂ ಧರ್ಮಿಯಾದ ರಜತಕ್ಕೂ ವೈಶಿಷ್ಟ್ಯ ಸಮವಾಯ ಸಂಬಂಧದಿಂದ ಎಂದು ನೈಯಾಯಿಕರು ಹೇಳುತ್ತಾರೆ, ಸ್ವರೂಪಾದಿ ಸಂಬಂಧದಿಂದ ಎಂದು ನಾವು ಹೇಳುತ್ತೇವೆ.

ಸಾಧ್ಯದಲ್ಲಿ 'ಸತ್ತಯಾ ಅನುವ್ಯವಸಾಯವಿಷಯಃ' ಎಂದಿದೆ. ಇಲ್ಲಿ ಸತ್ತಯಾ ಎಂಬ ವಿಶೇಷಣವನ್ನು ಬಿಟ್ಟರೆ ಸಿದ್ಧಸಾಧನತಾದೋಷ ಬರುತ್ತದೆ–ಕೆಲವು ನೈಯಾಯಿಕರು ವೈಶಿಷ್ಟ್ಯವು ವ್ಯವಸಾಯದ್ವಾರಾ ಅನುವ್ಯವಸಾಯಕ್ಕೂ ವಿಷಯ ಎಂದು ಒಪ್ಪುತ್ತಾರೆ. ಸತ್ತಯಾ ಎಂಬ ವಿಶೇಷಣ ಕೊಟ್ಟಾಗ ಅವರ ಮತದಲ್ಲಿ ಸಿದ್ಧಸಾಧನತಾ ಪರಿಹಾರವಾಗುತ್ತದೆ. ಹೇಗೆಂದರೆ, ಅನುವ್ಯವಸಾಯವು ವ್ಯವಸಾಯದಲ್ಲಿ ವೈಶಿಷ್ಟ್ಯವು ತೋರಿದೆ, ಎಂದಿಷ್ಟೇ ತಿಳಿಸುತ್ತದೆ. ಅದು 'ಇದೆ' ಎಂದೇನೂ ಹೇಳುವುದಿಲ್ಲ. ಇದು ನೈಯಾಯಿಕ ಏಕದೇಶಿಗಳ ಅಭಿಪ್ರಾಯ. ಅರ್ಥಾತ್ ವೈಶಿಷ್ಟ್ಯವು ಸತ್ತಯಾ ಅನುವ್ಯವಸಾಯ ಗಮ್ಯ ಎಂದು ಅವರೂ ಒಪ್ಪಿಲ್ಲ. ಆದ್ದರಿಂದ ಅದನ್ನು ಸಾಧಿಸಿದಾಗ ಸಿದ್ಧಸಾಧನತಾ ಇಲ್ಲ.

ವಾದಿಗಳಾದ ನಮ್ಮ ಮತದಲ್ಲಿ 'ಸತ್ತಯಾ' ಎಂಬ ವಿಶೇಷಣದ ಸಾರ್ಥಕ್ಯವನ್ನು ಮೊದಲನೆಯ ಅನುಮಾನಗಳಲ್ಲಿ ಹೇಳಿದಂತೆ ತಿಳಿಯಬೇಕು. (ಪುಟ.158)

## ಅಪ್ರಯೋಜಕತ್ವನಿರಾಸ

**ನಚಾಪ್ರयोजकता । वैशिष्ट्यप्रतीतिसामग्र्याः वक्ष्यमाणत्वात् ।**

ಈ ಅನುಮಾನದಲ್ಲಿ 'ಹೇತುರಸ್ತು ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕತಾಶಂಕೆಯನ್ನು

ಮಾಡಬಾರದು. ಏಕೆಂದರೆ, ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ವಿಷಯವಾಗುವುದಕ್ಕೆ ಬೇಕಾದ ಸಾಮಗ್ರಿಗಳನ್ನು ಮುಂದೆ ತಿಳಿಸುತ್ತೇವೆ.

(ಮುಂದಿನ ಬಾಧೋದ್ಧಾರ ಪ್ರಕರಣದಲ್ಲಿ 'ನನ್ವೇವಂ' ಎಂಬ ಪಾಠದಲ್ಲಿ ಅದನ್ನು ಸಮರ್ಥಿಸಲಾಗಿದೆ–ವ್ಯವಸಾಯದ್ವಾರಾ ಅನುವ್ಯವಸಾಯವು ವೈಶಿಷ್ಟ್ಯವನ್ನು ವಿಷಯೀಕರಿಸುವಾಗ 'ವ್ಯವಸಾಯವು ವೈಶಿಷ್ಟ್ಯವು ಸತ್ ಎಂದು ಗ್ರಹಿಸುತ್ತದೆ' ಎಂದೇ ವಿಷಯೀಕರಿಸುತ್ತದೆ. ದ್ವಾರಿಯು ದ್ವಾರವನ್ನು ಸತ್ತ್ವೇನ ಅರ್ಥವಿಷಯಕ, ಎಂದು ಗ್ರಹಿಸಿದಾಗ ದ್ವಾರಿಗೂ ಸತ್ತ್ವೇನೈವ ಅರ್ಥವು ವಿಷಯವಾಗುತ್ತದೆ. 'ಗೇಹೇ ಮಮ ಘಟಪ್ರಮಾ' ಎಂಬ ಶಾಬ್ದಬೋಧವು ದ್ವಾರಿ. 'ಘಟಪ್ರಮಾ' ದ್ವಾರ. ಅದು ಪ್ರಮಾವಾದುದರಿಂದ ಅದನ್ನು ಪ್ರಮಾ ಎಂದು ಗ್ರಹಿಸುವ ದ್ವಾರಿಭೂತವಾದ ಶಾಬ್ದಬೋಧವು ದ್ವಾರವು ಘಟಸತ್ತ್ವವಿಷಯಕ ಎಂದು ಹೇಳುವ ಮೂಲಕ ತಾನೂ ಘಟವನ್ನು ಸತ್ತ್ವೇನೈವ ವಿಷಯೀಕರಿಸುತ್ತದೆ.)

## ನ್ಯಾಯದೀಪ

**ವೈಶಿಷ್ಟ್ಯೇತಿ ॥ ಸತ್ತಯೇತ್ಯಪಿ ಯೋಜ್ಯಮ್ । ವಕ್ಷ್ಯಮಾಣತ್ವಾದಿತಿ ॥ ಉತ್ತರಭಂಗಬಾಧೋದ್ಧಾರೇ 'ನನ್ವೇವಮ್' ಇತ್ಯಾದಿಗ್ರಂಥೇನ, ಇತ್ಯರ್ಥಃ । ತಥಾಚ ವ್ಯವಸಾಯವಿಷಯತ್ವಸ್ಯೈವ ಉಕ್ತಸಾಧ್ಯೇ ಸಾಮಗ್ರೀತ್ವೇನ ಸಾಮಗ್ರೀಮುಪೇತ್ಯ ಕಾರ್ಯಾನಭ್ಯುಪಗಮೇ ವ್ಯಾಘಾತ– ಪ್ರಸಂಗಾತ್ ನಾಪ್ರಯೋಜಕತ್ವಮ್ ಇತ್ಯರ್ಥಃ ॥**

ವ್ಯಾಘಾತ ಬರುವುದರಿಂದ ಅಪ್ರಯೋಜಕತಾಶಂಕೆಯು ಅಯುಕ್ತ. 'ವ್ಯಾಘಾತಾವಧಿ ರಾಶಂಕಾ'. ಪ್ರಕೃತದಲ್ಲಿ ಅನುವ್ಯವಸಾಯವಿಷಯತ್ವಕ್ಕೆ ಪ್ರಯೋಜಕ ವ್ಯವಸಾಯವಿಷಯತ್ವ. ಅರ್ಥಾತ್ ವ್ಯವಸಾಯಕ್ಕೆ ವಿಷಯವಾದುದು ಎಲ್ಲವೂ ಅನುವ್ಯವಸಾಯಕ್ಕೆ ವಿಷಯವಾಗುತ್ತದೆ. ಅನುವ್ಯವಸಾಯದಲ್ಲಿ ವಿಷಯವಾಗಲು ಪ್ರಯೋಜಕವಾದ ಸಾಮಗ್ರೀ ವ್ಯವಸಾಯ ವಿಷಯತ್ವ. ವಿಶೇಷ್ಯ–ಪ್ರಕಾರಗಳಂತೆ ವೈಶಿಷ್ಟ್ಯವೂ ವ್ಯವಸಾಯವಿಷಯವಾಗಿದೆ. ಅಂದರೆ, ಅನುವ್ಯವಸಾಯ ವಿಷಯತ್ವಪ್ರಯೋಜಕವಿದೆ, ಆದರೂ ಅನುವ್ಯವಸಾಯವಿಷಯವಲ್ಲ, ಹೀಗೆ ಹೇಳುವುದು ವ್ಯಾಹತ. ಆದ್ದರಿಂದ ಅಪ್ರಯೋಜಕತಾಶಂಕೆ ಸರಿಯಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ದ್ವಿತೀಯ–ನಿರುಕ್ತ್ಯನುರೋಧೇನ ಪ್ರಯೋಗ ತ್ರಯಮಾಹ–ಯದ್ವೇತಿ ॥**

ಪ್ರಾರಂಭದಲ್ಲಿ ಸ್ವಮತರೀತ್ಯಾ ಎರಡು ವಿಧವಾಗಿ ಸ್ವತಸ್ತ್ವವನ್ನು ನಿರೂಪಿಸಲಾಗಿದೆ.

ಅವುಗಳಲ್ಲಿ ಎರಡನೆಯ ನಿರುಕ್ತಿ 'ಸಾಕ್ಷಿವಿಷಯತ್ವಯೋಗ್ಯತಾ' ರೂಪವಾದುದು. ಅದಕ್ಕೆ ಅನುಗುಣವಾಗಿ ಸ್ವತಸ್ತ್ವಸಾಧಕವಾದ ಮೂರು ಅನುಮಾನಗಳನ್ನು ಮೂಲದಲ್ಲಿ ಹೇಳುತ್ತಾರೆ.

## ಯೋಗ್ಯತಾಘಟಿತ-ಸ್ವತಸ್ತ್ವಸಾಧಕಾನುಮಾನಗಳು

**यद्वा विमतोऽनुव्यवसायः, स्वग्राह्यज्ञानप्रामाण्यविषयीकरणयोग्यः । अनुव्यवसायत्वात् । गृहीतप्रामाण्यकज्ञानसमानविषकज्ञानान्तरानुव्यवसायवत् । अनुमित्यनुव्यवसायवद्वा ।**

ಪಕ್ಷ-ವಿಮತಿವಿಷಯವಾದ ಅನುವ್ಯವಸಾಯವು

ಸಾಧ್ಯ-ತಾನು ಗ್ರಹಿಸುವ ವ್ಯವಸಾಯದಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸಲು ಯೋಗ್ಯವಾಗಿದೆ.

ಹೇತು-ಅನುವ್ಯವಸಾಯವಾದುದರಿಂದ.

ದೃಷ್ಟಾಂತ-1. ಮೊದಲೊಮ್ಮೆ ಪ್ರಾಮಾಣ್ಯವು ನಿಶ್ಚಿತವಾಗಿರುವ ಜ್ಞಾನಕ್ಕೆ ಸಮಾನವಿಷಯಕವಾದ ಜ್ಞಾನಾಂತರದ ಅನುವ್ಯವಸಾಯದಂತೆ.

2. ಅಥವಾ, ಅನುಮಿತಿಯ ಅನುವ್ಯವಸಾಯದಂತೆ.

ಮೊದಲನೆಯ ದೃಷ್ಟಾಂತ ಸಕಲತಾರ್ಕಿಕರೀತ್ಯಾ. ಎರಡನೆಯದು, ಪ್ರಾಚೀನ ತಾರ್ಕಿಕರೀತ್ಯಾ. ಮೊದಲದೃಷ್ಟಾಂತದ ವಿವರಣೆ ಹಿಂದೆ ಬಂದಿದೆ. ಒಮ್ಮೆ ಒಂದು ಜ್ಞಾನದ ಪ್ರಾಮಾಣ್ಯವು ನಿಶ್ಚಿತವಾದ ಮೇಲೆ ಅದೇ ಜ್ಞಾನವು ಮತ್ತೊಮ್ಮೆ ಬಂದು ಅದರ ಅನುವ್ಯವಸಾಯ ಬಂದಾಗ ಆ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅದರಂತೆಯೇ, ಪ್ರಥಮಾನುವ್ಯವಸಾಯದಲ್ಲೂ ಪ್ರಾಮಾಣ್ಯವನ್ನು ಗ್ರಹಿಸುವ ಯೋಗ್ಯತೆ ಇದೆ. ಇದು ಅನುಮಾನದ ಅಭಿಪ್ರಾಯ.

## ನ್ಯಾಯದೀಪ

**ಯದ್ವೇತಿ ॥ ಇತಿ ಸಾಮಾನ್ಯತಃ ಸ್ವತಸ್ತ್ವಂ ಸಾಧ್ಯಮ್ ಇತ್ಯನ್ವಯಃ। ತತ್ರಾದ್ಯಂ ಅನುವ್ಯವಸಾಯಪಕ್ಷಕಮ್। ಅಂತ್ಯಂ ತನ್ನಿಷ್ಠಪ್ರಾಮಾಣ್ಯ-ಪಕ್ಷಕಮ್ ಇತಿ ವ್ಯಕ್ತಮ್।**

**ವಿಮತ ಇತಿ ॥ ಪ್ರಾಮಾಣ್ಯವಿಷಯೀಕರಣಯೋಗ್ಯತ್ವ-ತದಯೋಗ್ಯತ್ವಾ-ಭ್ಯಾಂ ವಿಮತಿವಿಷಯಃ। ವಿಮತೇರಪಿ ನಿಯತವಿಷಯತ್ವಾಯ ಅವಚ್ಛೇದಕಸ್ಯ ಅಪೇಕ್ಷಿತತ್ವಾತ್ ತದಾಹ-ಅನುವ್ಯವಸಾಯ ಇತಿ ॥**

**ವಕ್ಷ್ಯಮಾಣದಿಶಾ ತತ್ಪ್ರಕಾರ–ಪ್ರಕಾರಕತ್ವಾದಿರೂಪ–ಅನುವ್ಯವಸಾಯತ್ವೇನ ನಿಯತಾ, ಲಘ್ವೀ ವಿಮತಿರೇವ ಪಕ್ಷತಾವಚ್ಛೇದಿಕಾ ಇತ್ಯರ್ಥಃ। ಅತ ಏವ ಅಪ್ರಮಾನುವ್ಯವಸಾಯೇ ನ ಬಾಧಾದಿಃ, ವಕ್ಷ್ಯಮಾಣಾನುವ್ಯವಸಾಯತ್ವಸ್ಯ ತತ್ರ ಅಭಾವಾತ್।**

ಮೂಲದಲ್ಲಿ ಅನುವ್ಯವಸಾಯವನ್ನು ಪಕ್ಷವನ್ನಾಗಿ ಪರಿಗಣಿಸಲಾಗಿದೆ. ಅದಕ್ಕೆ 'ವಿಮತಃ' ಎಂಬ ವಿಶೇಷಣವನ್ನು ಕೊಡಲಾಗಿದೆ. ವಿಮತಿಯ ಎರಡು ಕೋಟಿಗಳು ಪ್ರಾಮಾಣ್ಯ ವಿಷಯೀಕರಣ ಯೋಗ್ಯತ್ವ ಹಾಗೂ ತದಯೋಗ್ಯತ್ವ. ಮೊದಲನೆಯ ಕೋಟಿ ಸ್ವತಸ್ತ್ವವಾದಿಗಳದು, ಎರಡನೆಯದು ಪರತಸ್ತ್ವವಾದಿಗಳದು. ಏತದ್ವಯ ಕೋಟಿಕ ವಿಮತಿಗೆ ಧರ್ಮಿತಾವಚ್ಛೇದಕವನ್ನು ತಿಳಿಸಲು– 'ಅನುವ್ಯವಸಾಯಃ' ಎನ್ನಲಾಗಿದೆ. ಆಗ 'ಅನುವ್ಯವಸಾಯಃ ಪ್ರಾಮಾಣ್ಯವಿಷಯೀಕರಣ ಯೋಗ್ಯೋ ನ ವಾ' ಎಂದು ವಿಮತಿಯ ಸ್ವರೂಪ ನಿರ್ಧಾರವಾಗುತ್ತದೆ.

ಅನುವ್ಯವಸಾಯದ ಸ್ವರೂಪವನ್ನು ಇದೇ ಪ್ರಕರಣದಲ್ಲಿ ಮುಂದೆ ಹೇಳಲಾಗಿದೆ. ಅಂತಹ ಅನುವ್ಯವಸಾಯತ್ವ ಧರ್ಮಿತಾವಚ್ಛೇದಕವಾಗಿರುವ ವಿಮತಿಯೇ ಪ್ರಕೃತ ವಿವಕ್ಷಿತ ಎಂದು ಇದರಿಂದ ನಿರ್ಧಾರವಾಗುತ್ತದೆ. ಆದ್ದರಿಂದ ಜ್ಞಾನವಿಷಯಕ ಪ್ರತ್ಯಕ್ಷವೇ ವಿಮತಿ ವಿಷಯ ಎಂದು ತಪ್ಪಾಗಿ ನಿರ್ಧರಿಸಿ 'ಇದಂ ಜ್ಞಾನಂ ಅಪ್ರಮಾ' ಎಂಬ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ವಿಷಯೀಕರಣಯೋಗ್ಯತ್ವವು ಇಲ್ಲ, ಬಾಧ, ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಅದು ಪ್ರಕೃತ ವಿವಕ್ಷಿತ ಅನುವ್ಯವಸಾಯವೇ ಅಲ್ಲವಾದ್ದರಿಂದ ಪಕ್ಷದಲ್ಲಿ ಸೇರುವುದಿಲ್ಲ. ಬಾಧಕ್ಕೆ ಅವಕಾಶವಿಲ್ಲ.

## ನ್ಯಾಯದೀಪ

**ಬಾಧನಿರಾಸಾಯ ಸ್ವಗ್ರಾಹ್ಯಜ್ಞಾನೇತಿ ಸಾಧ್ಯವಿಶೇಷಣಮ್ । ಯೋಗ್ಯತ್ವಂ ಚ ಸ್ವವಿಷಯಜ್ಞಾನದ್ವಾರಾ ಪ್ರಾಮಾಣ್ಯಾವಚ್ಛಿನ್ನ–ಸಹಜಶಕ್ತಿಕತ್ವಂ ಇತಿ ಧ್ಯೇಯಮ್ । ವಕ್ಷ್ಯಮಾಣರೂಪಾನುವ್ಯವಸಾಯತ್ವಾತ್ ಇತಿ ಹೇತ್ವರ್ಥಃ ಜ್ಞೇಯಃ । ತೇನ ಅಪ್ರಮಾಗೋಚರಾನುವ್ಯವಸಾಯೇ ನ ವ್ಯಭಿಚಾರಃ ।**

'ಪ್ರಾಮಾಣ್ಯವಿಷಯೀಕರಣಯೋಗ್ಯಃ' ಎಂದಿಷ್ಟೇ ಸಾಧ್ಯವನ್ನು ಮಾಡಿದರೆ ಸಾಕ್ಷಿಯಲ್ಲಿ ಕರಣಗತಪ್ರಾಮಾಣ್ಯವಿಷಯೀಕರಣ–ಯೋಗ್ಯತೆ ಇಲ್ಲವಾದುದರಿಂದ ಬಾಧದೋಷ ಬಂದೀತು. ಅದರ ಪರಿಹಾರಕ್ಕಾಗಿ ಪ್ರಾಮಾಣ್ಯದಲ್ಲಿ 'ಸ್ವಗ್ರಾಹ್ಯಜ್ಞಾನ' ಎಂಬ ಅಂಶವನ್ನು ಸೇರಿಸಲಾಗಿದೆ. ಸಾಕ್ಷಿಯಿಂದ ಗ್ರಾಹ್ಯವಾದ ಯಾವ ವ್ಯವಸಾಯರೂಪವಾದ ಜ್ಞಾನವಿದೆಯೋ ಅದರಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವ ಯೋಗ್ಯತೆ ಸಾಕ್ಷಿಗೆ ಇದೆ ಎಂದು ಅರ್ಥ. ಈಗ ಬಾಧಕ್ಕೆ ಅವಕಾಶವಿಲ್ಲ.

ಅನುವ್ಯವಸಾಯದಲ್ಲಿ ಪ್ರಾಮಾಣ್ಯವಿಷಯೀಕರಣಯೋಗ್ಯತೆ ಎಂದರೆ ತನಗೆ ವಿಷಯವಾದ

ಜ್ಞಾನದ (ವ್ಯವಸಾಯದ) ಮೂಲಕ ಪ್ರಾಮಾಣ್ಯಗ್ರಹಣಶಕ್ತಿ ಅನುವ್ಯವಸಾಯಕ್ಕಿದೆ, ಎಂದರ್ಥ. ಆ ಶಕ್ತಿಯು ಪ್ರಾಮಾಣ್ಯಗ್ರಹಣಶಕ್ತಿಯಾದುದರಿಂದ ಆ ಶಕ್ತಿಯಲ್ಲಿ ಅವಚ್ಛೇದಕ ಪ್ರಾಮಾಣ್ಯ. ಶಕ್ತಿಯು ತದವಚ್ಛಿನ್ನ.

'ಅನುವ್ಯವಸಾಯತ್ವಾತ್' ಎಂದು ಹೇತು. ಅನುವ್ಯವಸಾಯವೆಂದರೆ, ವ್ಯವಸಾಯ ವಿಷಯಕ ಪ್ರತ್ಯಕ್ಷ. 'ಇದಂ ಜ್ಞಾನಂ ಅಪ್ರಮಾ' ಎಂಬ ಅನುವ್ಯವಸಾಯದಲ್ಲೂ ಅಂತಹ ಅನುವ್ಯವಸಾಯತ್ವ ಹೇತು ಇದೆ. ಸಾಧ್ಯ ಇಲ್ಲ, ವ್ಯಭಿಚಾರ. ಆದಕ್ಕಾಗಿ ಮುಂದೆ ಹೇಳಲಿರುವ ಅನುವ್ಯವಸಾಯತ್ವವನ್ನೇ ಹೇತುವನ್ನಾಗಿ ಮಾಡಬೇಕು. (ವ್ಯವಸಾಯಪ್ರಕಾರ-ಪ್ರಕಾರಕತಯಾ ತದ್ವದ್ ವಿಶೇಷ್ಯಕತಯಾ ಚ ತದ್ವಿಷಯಕ ಪ್ರತ್ಯಕ್ಷತ್ವಮ್।)

## ನ್ಯಾಯದೀಪ

**ಗೃಹೀತೇತಿ ॥ ಅಯಂ ಚ ದೃಷ್ಟಾಂತಃ 'ನ ಚ ದೃಷ್ಟಾಂತಃ ಸಾಧ್ಯವಿಕಲಃ' (ಪುಟ.195) ಇತ್ಯಾದಿನಾ ಪ್ರಾಗೇವ ಸಾಧಿತಃ ಇತಿ ಭಾವಃ। ಪ್ರಾಚೀನಮತರೀತ್ಯಾ ಆಹ-ಅನುಮಿತೀತಿ ॥ ಅಯಮಪಿ ದೃಷ್ಟಾಂತಃ ನವೀನಮತೇಽಪಿ ಪ್ರಾಕ್ (ಪುಟ.204) ಸಾಧಿತಃ।**

ಈ ಅನುಮಾನದಲ್ಲಿ ಕೊಟ್ಟಿರುವ ಎರಡೂ ದೃಷ್ಟಾಂತಗಳನ್ನು ಹಿಂದೆಯೇ ವಿವರಿಸಲಾಗಿದೆ. ಎರಡನೆಯ ದೃಷ್ಟಾಂತ ಅನುಮಿತಿ ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸಿರುವ ಪ್ರಾಚೀನ ನೈಯಾಯಿಕ ಮತದಂತೆ. ಅದನ್ನು ನವೀನರೂ ಒಪ್ಪುವುದು ಅನಿವಾರ್ಯ, ಎಂದು ಹಿಂದೆಯೇ ತೋರಿಸಲಾಗಿದೆ.

## ವೈಶಿಷ್ಟ್ಯವಿಷಯಕತ್ವ ಸಾಧಕಾನುಮಾನಾಂತರ

**व्यवसायविषयभूतं धर्मधर्मिवैशिष्ट्यं वा स्वविषयव्यवसायविषयकानुव्यवसायं प्रति सत्तया विषयत्वयोग्यम्, व्यवसायविषयत्वात् विशेष्यवत् ।**

ಪಕ್ಷ-ವ್ಯವಸಾಯದಲ್ಲಿ ವಿಷಯವಾಗಿರುವ ಧರ್ಮ ಮತ್ತು ಧರ್ಮಿಗಳ ವೈಶಿಷ್ಟ್ಯವು.

ಸಾಧ್ಯ-ಅನುವ್ಯವಸಾಯದಲ್ಲಿ ಸತ್ತಯಾ ವಿಷಯವಾಗಲು ಯೋಗ್ಯವಾಗಿದೆ.

ಹೇತು-ವ್ಯವಸಾಯಕ್ಕೆ ವಿಷಯವಾಗಿರುವುದರಿಂದ.

ದೃಷ್ಟಾಂತ-ವ್ಯವಸಾಯದಲ್ಲಿ ವಿಶೇಷ್ಯವಾಗಿ ಕಾಣುವ ವಸ್ತುವಿನಂತೆ.

ಹಿಂದೆ ಇದೇರೀತಿಯ ಅನುಮಾನದಿಂದ ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯ, ಎಂದು ಸಾಧಿಸಲಾಗಿದೆ. ಇಲ್ಲಿ ಈ ಅನುಮಾನದಿಂದ ಅದು ವಿಷಯತ್ವ ಯೋಗ್ಯವಾಗಿದೆ, ಎಂದು ಸಾಧನೆ ಮಾಡಲಾಗಿದೆ.

## ನ್ಯಾಯದೀಪ

**ವ್ಯವಸಾಯೇತಿ ॥ ಪ್ರಮಾರೂಪಃ ವ್ಯವಸಾಯಃ ಅತ್ರಾಭಿಮತಃ । ವಿಶೇಷ್ಯವದಿತಿ ॥ ತದ್ವಿಶೇಷ್ಯವತ್ ಇತ್ಯರ್ಥಃ ।**

ಮೂಲದಲ್ಲಿ ವ್ಯವಸಾಯಪದಕ್ಕೆ ಪ್ರಮಾತ್ಮಕವಾದ ವ್ಯವಸಾಯ ಎಂದು ಅರ್ಥ. ಅಪ್ರಮಾದಲ್ಲಿ ಕಾಣುವ ವೈಶಿಷ್ಟ್ಯವು ಅಸತ್ಯವಾದುದರಿಂದ ಸಾಕ್ಷಿಯು ಅದನ್ನು ಗ್ರಹಿಸುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**''ಪ್ರಾಮಾಣ್ಯಂ ಜ್ಞಾನಗ್ರಾಹಕಮಾತ್ರ-ಗ್ರಾಹ್ಯಮ್, ಅಪ್ರಾಮಾಣ್ಯೇತರ ಜ್ಞಾನಧರ್ಮತ್ವಾತ್, ಜ್ಞಾನತ್ವವತ್'' ಇತಿ,**

**''ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವ''**

**ಇತ್ಯೇತದ್-ವ್ಯಾಖ್ಯಾನ-ಸುಧಾಯಾಂ ಉಕ್ತಂ ಅನುಮಾನಂ ಪರಿಷ್ಕೃತ್ಯ ಆಹ-ತತ್ತಜ್ಞಾನೇತಿ ॥**

ನ್ಯಾಯಸುಧಾದಲ್ಲಿ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಎಂಬ ಅನುವ್ಯಾಖ್ಯಾನವನ್ನು ವಿವರಿಸುವ ಸಂದರ್ಭದಲ್ಲಿ ಪ್ರಾಮಾಣ್ಯ-ಸ್ವತಸ್ತ್ವಸಾಧಕವಾದ ಅನುಮಾನವನ್ನು ಹೇಳಲಾಗಿದೆ. ಅದರ ಪರಿಷ್ಕೃತರೂಪವೇ ಮುಂದಿನ ಅನುಮಾನ.

ಸುಧಾದಲ್ಲಿ ಹೇಳಿದ ಅನುಮಾನದ ಅರ್ಥ ಹೀಗೆ-ಜ್ಞಾನದಲ್ಲಿ ಪ್ರಾಮಾಣ್ಯ-ಅಪ್ರಾಮಾಣ್ಯ ಮತ್ತು ಜ್ಞಾನತ್ವ ಈ ಮೂರು ಧರ್ಮಗಳಿವೆ. ಅವುಗಳಲ್ಲಿ ಜ್ಞಾನತ್ವಜಾತಿಯ ಜ್ಞಾನ ಜ್ಞಾನರೂಪ ವ್ಯಕ್ತಿಯನ್ನು ಗ್ರಹಿಸುವ ಅನುವ್ಯವಸಾಯದಿಂದಲೇ ಬರುತ್ತದೆ. ಅದರಂತೆ ಪ್ರಾಮಾಣ್ಯದ ಜ್ಞಾನವೂ ಅನುವ್ಯವಸಾಯದಿಂದಲೇ ಬರಬೇಕು. ಅರ್ಥಾತ್ ಅದು ಅನುಮಿತಿಯಿಂದ ಮಾತ್ರ ಗ್ರಾಹ್ಯವಾಗಬೇಕಿಲ್ಲ, ಜ್ಞಾನಗ್ರಾಹಕವಾದ ಎಲ್ಲವುಗಳಿಂದಲೂ ಗ್ರಾಹ್ಯವಾಗುತ್ತದೆ. (ಇಲ್ಲಿ ಮಾತ್ರಪದ ಕೃತ್ಸ್ನಾರ್ಥಕ.)

## ಸುಧೋಕ್ತಸ್ವತಸ್ತ್ವಸಾಧಕ-ಅನುಮಾನಾಂತರ

**तत्तज्ज्ञानप्रामाण्यं वा स्वाश्रयज्ञानविषयकानु-व्यवसायविषयत्वयोग्यं**

**तद्विषयत्वायोग्योपाध्यघटितज्ञानधर्मत्वात् तत्तज्ज्ञानत्ववदिति सामान्यतः स्वतस्त्वं साध्यम् ।**

ಘಟಪಟಾದಿ ಒಂದೊಂದು ಜ್ಞಾನದಲ್ಲೂ ಇರುವ ಪ್ರಾಮಾಣ್ಯ ಬೇರೆಬೇರೆ. ಘಟಜ್ಞಾನದಲ್ಲಿ ಪ್ರಾಮಾಣ್ಯ–ಘಟತ್ವವತಿ ಘಟತ್ವ ಪ್ರಕಾರಕತ್ವಮ್। ಪಟಜ್ಞಾನದಲ್ಲಿ–ಪಟತ್ವವತಿ ಪಟತ್ವಪ್ರಕಾರಕತ್ವಮ್। ಇವುಗಳಲ್ಲಿ ಒಂದೊಂದನ್ನೇ ಪಕ್ಷವನ್ನಾಗಿ ಮಾಡಬೇಕು. ಅಂತಹ ಪ್ರಾಮಾಣ್ಯಕ್ಕೆ ಆಶ್ರಯವಾದವುಗಳು ಆ ಆ ಜ್ಞಾನಗಳು. ಅಂತಹ ಜ್ಞಾನಗಳನ್ನು ವಿಷಯೀಕರಿಸುತ್ತವೆ ಅವುಗಳ ಅನುವ್ಯವಸಾಯಗಳು. ಅವುಗಳಲ್ಲಿ ಆ ಜ್ಞಾನಗತವಾದ ಪ್ರಾಮಾಣ್ಯವೂ ವಿಷಯವಾಗುತ್ತದೆ ಎಂದು ಸಾಧ್ಯಾಂಶ. ಏಕೆಂದರೆ, ಪ್ರಾಮಾಣ್ಯದಲ್ಲಿ ಪ್ರಕಾರ, ವಿಶೇಷ್ಯ, ಅವೆರಡರ ಸಂಬಂಧ ಇವಿಷ್ಟು ಘಟಕವಾಗಿವೆ. ಅವೆಲ್ಲವೂ ವ್ಯವಸಾಯದಲ್ಲಿ ವಿಷಯವಾಗಿವೆ. ಅಂದರೆ ಅನುವ್ಯವಸಾಯವಿಷಯತ್ವ–ಯೋಗ್ಯವಾದ ಉಪಾಧಿಗಳಾಗಿವೆ. ಅಪ್ರಾಮಾಣ್ಯ ಶರೀರದಲ್ಲಿರುವ 'ತದಭಾವಾಂಶವು' ವ್ಯವಸಾಯದಲ್ಲಿ ತೋರುವುದಿಲ್ಲ. ಆದಕಾರಣ ಆ ಧರ್ಮವು ಅನುವ್ಯವಸಾಯಕ್ಕೆ ಯೋಗ್ಯವಾದ ಉಪಾಧಿಯಲ್ಲ. ಅಂತಹ ಅಯೋಗ್ಯವಾದ ಯಾವ ಉಪಾಧಿ ಗಳೂ ಪ್ರಾಮಾಣ್ಯದಲ್ಲಿ ಸೇರಿಲ್ಲ. ಆದ್ದರಿಂದ ಜ್ಞಾನತ್ವದಂತೆ, ಪ್ರಾಮಾಣ್ಯವೂ ಅನುವ್ಯವಸಾಯ ಗ್ರಾಹ್ಯವಾಗಿದೆ.

ಒಟ್ಟಿನಲ್ಲಿ ಅನುಮಾನದ ಸ್ವರೂಪ ಹೀಗಾಗುತ್ತದೆ—

ಪಕ್ಷ–ನಿರ್ದಿಷ್ಟವಾದ ಒಂದು ಜ್ಞಾನದಲ್ಲಿರುವ ಪ್ರಾಮಾಣ್ಯವು.

ಸಾಧ್ಯ–ಆ ಪ್ರಾಮಾಣ್ಯಕ್ಕೆ ಆಶ್ರಯವಾದ ಯಾವ ಜ್ಞಾನವಿದೆಯೋ ಆ ಜ್ಞಾನವಿಷಯಕವಾದ ಅನುವ್ಯವಸಾಯಕ್ಕೆ ವಿಷಯವಾಗಲು ಯೋಗ್ಯವಾಗಿದೆ.

ಹೇತು–ಅನುವ್ಯವಸಾಯ ವಿಷಯತ್ವಾಯೋಗ್ಯವಾದ ಉಪಾಧಿಯಿಂದ ಅಘಟಿತವಾದ, ಜ್ಞಾನಗತವಾದ ಧರ್ಮವಾಗಿರುವುದರಿಂದ.

## ನ್ಯಾಯದೀಪ

**ಯೋಗ್ಯಮಿತಿ ॥ 'ಯೋಗ್ಯತ್ವಂ ಚ ಸಾಕ್ಷಿನಿಷ್ಠಾಂ ಸಹಜಾಂ ಗ್ರಹಣಶಕ್ತಿಂ ಪ್ರತಿ ಸ್ವವಿಷಯಜ್ಞಾನದ್ವಾರಾ ಅವಚ್ಛೇದಕತ್ವಮ್' ಇತಿ ಪೂರ್ವೋಕ್ತಂ ಧ್ಯೇಯಮ್ ।**

**ತದ್ವಿಷಯತ್ವಾಯೋಗ್ಯೋಪಾಧಿ – ಅಘಟಿತೇತ್ಯುಕ್ತ್ಯಾ ಸುಧಾಸ್ಥ– ಅಪ್ರಾಮಾ-**

**ಣ್ಯೇತರಪದಾರ್ಥಃ ವಿವೃತಃ । ತೇನ 'ವಿಶೇಷ್ಯಾವೃತ್ತ್ಯಪ್ರಕಾರಕತ್ವಾದಿ' ರೂಪ–ಪ್ರಾಮಾಣ್ಯೇ ವ್ಯಭಿಚಾರಃ ನಿರಸ್ತಃ ।**

**ಸಾಮಾನ್ಯತಃ ॥ ಪ್ರತಿಬದ್ಧಾಪ್ರತಿಬದ್ಧ–ಸಾಧಾರಣ್ಯೇನ ಇತಿ ವಾ, ಪ್ರಾಮಾಣ್ಯಮಾತ್ರ ಸಾಧಾರಣ್ಯೇನ ಇತಿ ವಾ, ನ ತು 'ಅಹಂ ಸುಖೀ'ತಿ ಜ್ಞಾನ ಪ್ರಾಮಾಣ್ಯಮ್, ಇತಿವತ್ ವಿಶಿಷ್ಯೇತ್ಯರ್ಥಃ ।**

'ಪ್ರಾಮಾಣ್ಯವು ಸಾಕ್ಷಿವಿಷಯತ್ವ ಯೋಗ್ಯವಾಗಿದೆ' ಎಂದು ಈ ಅನುಮಾನದ ಸಾಧ್ಯ. ಯೋಗ್ಯತೆಯನ್ನು ಪ್ರಾರಂಭದಲ್ಲೇ ಎರಡನೆಯ ಸ್ವತಸ್ತ್ವನಿರುಕ್ತಿಯ ಸಂದರ್ಭದಲ್ಲಿ ಮೂಲಕಾರರೇ ನಿರೂಪಿಸಿದ್ದಾರೆ.

ಸುಧಾದಲ್ಲಿ 'ಅಪ್ರಾಮಾಣ್ಯೇತರ ಜ್ಞಾನಧರ್ಮತ್ವಾತ್' ಎಂದು ಹೇತುವಿದೆ. ಅದರ ವಿವರಣೆ–ತದ್ವಿಷಯತ್ವಾಯೋಗ್ಯೋಪಾಧ್ಯಘಟಿತ–ಜ್ಞಾನಧರ್ಮತ್ವಾತ್, ಎಂಬ ಇಲ್ಲಿನ ಹೇತು. ಈ ವಿವರಣೆಯಿಂದಾಗಿ ವ್ಯಭಿಚಾರದೋಷವು ಪರಿಹಾರವಾಗಿದೆ. ಸುಧೋಕ್ತ–ಹೇತುವನ್ನು ಯಥಾ ಶ್ರುತವಾಗಿ ತೆಗೆದುಕೊಂಡರೆ ಪ್ರಾಮಾಣ್ಯವಿಶೇಷದಲ್ಲಿ ವ್ಯಭಿಚಾರ ಬರುತ್ತದೆ. 'ವಿಶೇಷ್ಯಾವೃತ್ತಿ–ಅಪ್ರಕಾರಕತ್ವಮ್' ಇದು ಪ್ರಾಮಾಣ್ಯ. ಭ್ರಮೆಯಲ್ಲಿ ತೋರುವ ಪ್ರಕಾರೀಭೂತಧರ್ಮವು ವಿಶೇಷ್ಯದಲ್ಲಿ ಇರುವುದಿಲ್ಲ. ಅಂತಹ ಧರ್ಮವು ಅಂದರೆ ವಿಶೇಷ್ಯದಲ್ಲಿ ಇಲ್ಲದ ಧರ್ಮವು ಯಥಾರ್ಥ ಜ್ಞಾನದಲ್ಲಿ ಪ್ರಕಾರವಾಗಿ ತೋರುವುದಿಲ್ಲ. ಅರ್ಥಾತ್, ಯಥಾರ್ಥಜ್ಞಾನದಲ್ಲಿ ಪ್ರಕಾರವಾಗಿ ತೋರುವ ಧರ್ಮವು ವಿಶೇಷ್ಯದಲ್ಲಿ ಇರುತ್ತದೆ. ಆದ್ದರಿಂದ ಪ್ರಾಮಾಣ್ಯವನ್ನು 'ವಿಶೇಷ್ಯಾವೃತ್ತ್ಯಪ್ರಕಾರಕತ್ವಮ್' ಎಂಬುದಾಗಿಯೂ ನಿರೂಪಿಸಬಹುದು. ಇಂತಹ ಧರ್ಮವು ಅಪ್ರಾಮಾಣ್ಯೇತರ ಜ್ಞಾನಧರ್ಮವಾಗಿದೆ. ಆದರೆ ಅದು ಅನುವ್ಯವಸಾಯವಿಷಯತ್ವ–ಯೋಗ್ಯ ವಲ್ಲ. ಆದ್ದರಿಂದ ವ್ಯಭಿಚಾರ. ಇಲ್ಲಿ ಕೊಟ್ಟ ವಿವರಣೆಯನ್ನು ಅಂಗೀಕರಿಸಿದಾಗ ವ್ಯಭಿಚಾರವು ಪರಿಹಾರವಾಗುತ್ತದೆ. ಹೇಗೆಂದರೆ, ಅಂತಹ ಪ್ರಾಮಾಣ್ಯಶರೀರದಲ್ಲಿ 'ಅವೃತ್ತಿ' 'ಅಪ್ರಕಾರ' ಎಂಬ ಧರ್ಮಗಳು ಸೇರಿವೆ. ಆ ಧರ್ಮಗಳು ವ್ಯವಸಾಯವಿಷಯಗಳಾಗಿಲ್ಲ. ಆದ್ದರಿಂದಲೇ ಅವುಗಳು ಸಾಕ್ಷಿವಿಷಯತ್ವ–ಯೋಗ್ಯಗಳಾದ ಉಪಾಧಿಗಳಲ್ಲ. ಅಂತಹ ಉಪಾಧಿಗಳಿಂದ ಘಟಿತವಾಗಿರುವುದ ರಿಂದ ಅದರಲ್ಲಿ ಹೇತು ಇಲ್ಲ. ಆದರಿಂದಾಗಿ ವ್ಯಭಿಚಾರದೋಷ ಇಲ್ಲ.

ಈ ಅನುಮಾನಗಳಿಂದ ಸಾಮಾನ್ಯತಃ ಸ್ವತಸ್ತ್ವವು ಸಾಧ್ಯ, ಎಂದು ಮೂಲದಲ್ಲಿ ಇದೆ. ಸಾಮಾನ್ಯತಃ ಎಂಬುದನ್ನು ಎರಡು ರೀತಿಯಿಂದ ತೋರಿಸಬಹುದು.

1. ಇಂತಹ ಸ್ವತಸ್ತ್ವವು ಪ್ರಾಮಾಣ್ಯಸಂದೇಹಾದಿರೂಪವಾದ ಪ್ರತಿಬಂಧಕ ಇದ್ದಾಗಲೂ ಇಲ್ಲದೇ ಇದ್ದಾಗಲೂ ಪ್ರಾಮಾಣ್ಯದಲ್ಲಿ ಬರುತ್ತದೆ. ಎರಡೂ ಸಂದರ್ಭಗಳಲ್ಲೂ ಪ್ರಾಮಾಣ್ಯವು ಸಾಕ್ಷಿಗ್ರಹಣಯೋಗ್ಯವಾಗಿದೆ. ಆದ್ದರಿಂದ ಇದು ಸಾಮಾನ್ಯತಃ ಸ್ವತಸ್ತ್ವ.

2. ಇಂತಹ ಸ್ವತಸ್ತ್ವ ಆಂತರ ಸುಖಜ್ಞಾನ ಪ್ರಾಮಾಣ್ಯದಲ್ಲೂ ಇದೆ, ಬಾಹ್ಯವಾದ ಘಟಾದಿಜ್ಞಾನಗಳಲ್ಲೂ ಇದೆ. 'ಅಹಂ ಸುಖೀ' ಎಂಬ ಜ್ಞಾನಗತ ಪ್ರಾಮಾಣ್ಯದಂತೆ ಅಸಾಧಾರಣ ಅಲ್ಲ.

## ಅಸಿದ್ಧಿಪರಿಹಾರ

**न चान्त्यहेतोरसिद्धिः । प्रामाण्योपाधेर्विषयसत्वस्य व्यवसायविषयत्वेन अनुव्यवसायविषयत्वयोग्यत्वात् । योग्यायोग्योपाधिघटिते प्रमाप्रमा-न्यतरत्वादौ व्यभिचारनिरासाय नञ्द्वयम् ।**

ಇಲ್ಲಿ ಹೇತು-'ಅನುವ್ಯವಸಾಯ ವಿಷಯತ್ವ-ಅಯೋಗ್ಯ-ಉಪಾಧಿಯಿಂದ ಅಘಟಿತ' ಎಂದಿದೆ. ಇದರ ಅರ್ಥ ಪ್ರಾಮಾಣ್ಯಶರೀರದಲ್ಲಿ ಸೇರಿರುವ ಉಪಾಧಿಗಳೆಲ್ಲವೂ ಅನುವ್ಯವಸಾಯ ವಿಷಯತ್ವ ಯೋಗ್ಯವಾಗಿವೆ, ಎಂದು. ಇದು ಅಸಿದ್ಧ, ಅವುಗಳು ಯೋಗ್ಯವಾಗಿಲ್ಲ, ಎಂದು ಶಂಕೆ. ಆದರೆ, ಈ ಶಂಕೆಯು ಉಚಿತವಲ್ಲ. ಪ್ರಾಮಾಣ್ಯಘಟಕ ಉಪಾಧಿ 'ತದ್ವತ್ವ' ಅಂದರೆ ವಿಷಯಸತ್ವ. ಅದು ವ್ಯವಸಾಯಕ್ಕೆ ವಿಷಯವಾಗಿದೆ. ವ್ಯವಸಾಯವು ಸತ್ವಾಸತ್ವಗಳನ್ನು ಬಿಟ್ಟು ವಸ್ತುಸ್ವರೂಪವನ್ನು ಮಾತ್ರ ಗ್ರಹಿಸುವುದಿಲ್ಲ. ಹೀಗೆ ವಿಷಯಸತ್ವವು ವ್ಯವಸಾಯೋಪನೀತವಾಗಿ ಅನುವ್ಯವಸಾಯಕ್ಕೂ ವಿಷಯವಾಗುವುದಕ್ಕೆ ಯೋಗ್ಯವಾಗಿದೆ. ಆದ್ದರಿಂದ ಅಸಿದ್ಧಿಗೆ ಅವಕಾಶವಿಲ್ಲ.

ಹೇತುವಿನಲ್ಲಿ 'ಅಯೋಗ್ಯ(ಉಪಾಧಿ) ಅಘಟಿತ' ಎಂದು ಎರಡು ನಿಷೇಧಗಳಿವೆ. ಇದನ್ನು ವಿಧಿರೂಪಕ್ಕೆ ಪರಿವರ್ತಿಸಿದರದೆ 'ಯೋಗ್ಯ-ಉಪಾಧಿ-ಘಟಿತ' ಎಂದಾಗುತ್ತದೆ. ಹೀಗೆ ಹೇಳಿದರೆ, ಪ್ರಾಮಾಣ್ಯಾಪ್ರಾಮಾಣ್ಯ-ಅನ್ಯತರತ್ವದಲ್ಲಿ ವ್ಯಭಿಚಾರ ಬರುತ್ತದೆ. ಅದರಲ್ಲೂ 'ಪ್ರಾಮಾಣ್ಯ' ಎಂಬ ಅನುವ್ಯವಸಾಯವಿಷಯತ್ವ-ಯೋಗ್ಯವಾದ ಉಪಾಧಿ ಸೇರಿದೆ. ಆದರೆ ಅಪ್ರಾಮಾಣ್ಯವು ಅಯೋಗ್ಯವಾದುದರಿಂದ ತದ್ಘಟಿತವಾದ ಅನ್ಯತರತ್ವವು ಅನುವ್ಯವಸಾಯವಿಷಯತ್ವ ಯೋಗ್ಯವಲ್ಲ. ಆದ್ದರಿಂದ ಸಾಧ್ಯ ಇಲ್ಲ, ವ್ಯಭಿಚಾರ. ಅದಕ್ಕಾಗಿ ಎರಡು ನಿಷೇಧಗಳ ಅಗತ್ಯವಿದೆ.

## ನ್ಯಾಯದೀಪ

**ವೈಶಿಷ್ಟ್ಯ ಸತ್ವವಿಷಯಕತ್ವೇ ಏವ ವಿವಾದಾದಾಹ-ವಿಷಯಸತ್ವಸ್ಯೇತಿ ॥**

**ಅನ್ಯತರತ್ವಾದೌ ಇತಿ ॥ ತದ್ವಿಷಯತ್ವ-ಯೋಗ್ಯ-ಉಪಾಧಿಘಟಿತ ಜ್ಞಾನ-ಧರ್ಮತ್ವಾತ್, ಇತ್ಯುಕ್ತೌ ಉಕ್ತಸ್ಥಲೇ ಹೇತುಸತ್ವೇಽಪಿ ಸಾಧ್ಯಾಭಾವಾತ್**

**ವ್ಯಭಿಚಾರಃ ಪ್ರಾಪ್ನೋತಿ, ಇತಿ ತನ್ನಿರಾಸಾಯ 'ತದ್ವಿಷಯತ್ವಾಯೋಗ್ಯ-ಉಪಾಧ್ಯಘಟಿತೇ'ತ್ಯುಕ್ತಿಃ ಇತ್ಯರ್ಥಃ ।**

**ವಿಶೇಷ್ಯನಿಷ್ಠಾತ್ಯಂತಾಭಾವ-ಪ್ರತಿಯೋಗಿ-ಪ್ರಕಾರಾನವಚ್ಛಿನ್ನತ್ವ-ತದ್ವತಿ ತತ್ಪ್ರಕಾರಕತ್ವಾನ್ಯತರತ್ವಾದಿಃ ಆದಿಪದಾರ್ಥಃ ।**

**'ಜ್ಞಾನಧರ್ಮತ್ವಾತ್' ಇತ್ಯೇವೋಕ್ತೌ ಅಪ್ರಮಾತ್ವಾದೌ ವ್ಯಭಿಚಾರ-ಇತಿ ಭಾವಃ ।**

ಮೂಲದಲ್ಲಿ ವ್ಯಭಿಚಾರಪ್ರದರ್ಶನ ಮಾಡುವಾಗ 'ಅನ್ಯತರತ್ವಾದೌ' ಎಂದು ಆದಿಪದವಿದೆ. ಆ ಆದಿಪದದಿಂದ ಮಣಿಕಾರ ತೋರಿಸಿದ ಪ್ರಾಮಾಣ್ಯದ ಇನ್ನೊಂದು ಪರಿಷ್ಕಾರವನ್ನು ತೆಗೆದುಕೊಳ್ಳಬೇಕು. ಅದು ಹೀಗಿದೆ-ವಿಶೇಷ್ಯನಿಷ್ಠಾತ್ಯಂತಾಭಾವ ಪ್ರತಿಯೋಗಿ-ಧರ್ಮ-ಅನವಚ್ಛಿನ್ನತ್ವಮ್, ಎಂದು. ಇದರ ತಾತ್ಪರ್ಯಾರ್ಥ-ವಿಶೇಷ್ಯದಲ್ಲಿ ಇಲ್ಲದ ಧರ್ಮವು ಪ್ರಕಾರವಾಗಿರಬಾರದು, ಎಂದು. ರಜತವನ್ನು ನೋಡಿ 'ಇದಂ ರಜತಮ್' ಎಂದು ಜ್ಞಾನ ಬಂದರೆ ಆ ಜ್ಞಾನದಲ್ಲಿ ವಿಶೇಷ್ಯ ರಜತ. ಅದರಲ್ಲಿ ಇರುವ ಅತ್ಯಂತಾಭಾವ ಶುಕ್ತಿತ್ವಾತ್ಯಂತಾಭಾವ. ಅದಕ್ಕೆ ಪ್ರತಿಯೋಗಿ ಶುಕ್ತಿತ್ವ. ಅಂತಹ ಧರ್ಮವು ರಜತಜ್ಞಾನದಲ್ಲಿ ಪ್ರಕಾರವಾಗಿಲ್ಲ. ಆದ್ದರಿಂದ ತಾದೃಶ-ಪ್ರಕಾರಾನವಚ್ಛಿನ್ನತ್ವವು ಜ್ಞಾನದಲ್ಲಿ ಇದೆ. ಇದೇ ಆ ಜ್ಞಾನಗತವಾದ ಪ್ರಾಮಾಣ್ಯ. ಇದರ ಜೊತೆಯಲ್ಲಿ ಅನುವ್ಯವಸಾಯ-ಗ್ರಾಹ್ಯವಾಗುವ ತದ್ವತಿ ತತ್ಪ್ರಕಾರಕತ್ವವನ್ನು ಸೇರಿಸಿ 'ತದನ್ಯತರತ್ವದಲ್ಲಿ' ವ್ಯಭಿಚಾರ. ಇಂತಹ ಅನ್ಯತರತ್ವವೂ ಯೋಗ್ಯ ಉಪಾಧಿಯ ಜೊತೆಗೆ ಅಯೋಗ್ಯ-ಉಪಾಧಿಯಿಂದಲೂ ಘಟಿತವಾಗಿದೆ. ಇದೂ ಅನುವ್ಯವಸಾಯಕ್ಕೆ ವಿಷಯವಲ್ಲ. ಅದರ ಪರಿಹಾರಕ್ಕಾಗಿಯೂ ನಿಷೇಧದ್ವಯಗಳು ಬೇಕು.

ಜ್ಞಾನಧರ್ಮತ್ವಾತ್, ಎಂದಿಷ್ಟೇ ಹೇತುಮಾಡಿದರೆ 'ಅಪ್ರಮಾತ್ವ'ದಲ್ಲಿ ವ್ಯಭಿಚಾರ. ಅದೂ ಜ್ಞಾನದಲ್ಲಿರುವ ಧರ್ಮವಾಗಿದೆ. ಆದರೆ, ಅನುವ್ಯವಸಾಯವಿಷಯತ್ವಯೋಗ್ಯವಲ್ಲ. ಅದರ ಪರಿಹಾರಕ್ಕಾಗಿ ಅಯೋಗ್ಯ-ಉಪಾಧಿ-ಅಘಟಿತ, ಎಂಬ ವಿಶೇಷಣ ಬೇಕು.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವತ್ರ ಸರ್ವಾನುಮಾನೇಷ್ವಭಿಮತಂ ಅನುವ್ಯವಸಾಯತ್ವಂ ಯದಿ ಜ್ಞಾನಗೋಚರಜ್ಞಾನತ್ವಂ ತದಾ 'ಜ್ಞಾನಮ್' ಇತಿ ಶಬ್ದಜಜ್ಞಾನೇ ಬಾಧಾದಿಃ ದೋಷಃ । ಸವಿಷಯಕ-ಜ್ಞಾನಗೋಚರ-ಜ್ಞಾನತ್ವೇ ತು 'ಘಟಜ್ಞಾನಮ್' ಇತಿ ಶಾಬ್ದಜ್ಞಾನೇ ದೋಷಃ । ಜ್ಞಾನಗೋಚರ-ಪ್ರತ್ಯಕ್ಷತ್ವೇ ತು ಅಪ್ರಮಾ-ಗೋಚರಾನುವ್ಯವಸಾಯೇ, ಸಾಮಾನ್ಯಪ್ರತ್ಯಾಸತ್ತಿಜನ್ಯ-ಜ್ಞಾನಗೋಚರ**

**ಪ್ರತ್ಯಕ್ಷೇ ಚ ಬಾಧಾದಿರೇವ । ಜ್ಞಾನಗೋಚರ–ನಿತ್ಯಜ್ಞಾನತ್ವೇ ತು ಈಶ್ವರ-ಜ್ಞಾನಮಾದಾಯ ಸಿದ್ಧಸಾಧನತಾ ಇತ್ಯತ ಆಹ–ಅನುವ್ಯವಸಾಯತ್ವಂ ಚೇತಿ ॥**

ಈ ಎಲ್ಲಾ ಅನುಮಾನಗಳಲ್ಲಿ ಅನುವ್ಯವಸಾಯದ ಪ್ರಸ್ತಾವ ಇದೆ. ಅನುವ್ಯವಸಾಯ ಎಂದರೇನು?

1. ಜ್ಞಾನವಿಷಯಕ ಜ್ಞಾನ ಅನುವ್ಯವಸಾಯವಾದರೆ 'ಜ್ಞಾನಮ್' ಎಂಬ ಪದದಿಂದ ಬಂದ ಶಾಬ್ದಬೋಧವೂ ಅನುವ್ಯವಸಾಯವಾಗುತ್ತದೆ. ಅದೂ 'ಪಕ್ಷ'ದಲ್ಲಿ ಸೇರುವುದರಿಂದ ಅದರಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲ. ಆದರಿಂದ ಬಾಧದೋಷ.

2. ವಿಷಯದೊಂದಿಗೆ ಜ್ಞಾನವನ್ನು ಗ್ರಹಿಸುವ ಜ್ಞಾನವು ಅನುವ್ಯವಸಾಯ ಎಂದರೂ ಮತ್ತೆ ಬಾಧ ಬಂದೇ ಬರುತ್ತದೆ. 'ಘಟಜ್ಞಾನಮ್' ಎಂಬ ಪದದಿಂದ ಘಟವಿಷಯಕ ಜ್ಞಾನದ ಜ್ಞಾನ ಬರುತ್ತದೆ. ಆದರೆ, ಅದರಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲ.

3. ಜ್ಞಾನಗೋಚರ ಪ್ರತ್ಯಕ್ಷವನ್ನು ಅನುವ್ಯವಸಾಯ, ಎಂದು ಪರಿಗಣಿಸಿದಾಗ ಶಬ್ದಜನ್ಯವಾದ ಹಿಂದಿನ ಎರಡು ಜ್ಞಾನಗಳು ಬಹಿಷ್ಕೃತವಾದರೂ 'ಇದಂ ಜ್ಞಾನಂ ಅಪ್ರಮಾ' ಎಂಬ ಪ್ರತ್ಯಕ್ಷವು ಸಂಗ್ರಹವಾಗುತ್ತದೆ. ಅದರಲ್ಲಿ ಪ್ರಾಮಾಣ್ಯವು ವಿಷಯವಲ್ಲ–ಬಾಧ.

ಅಥವಾ ಜ್ಞಾನತ್ವವೆಂಬ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ ಬಂದ 'ಜ್ಞಾನವಾನಹಮ್' ಎಂಬ ಪ್ರತ್ಯಕ್ಷವೂ ಅನುವ್ಯವಸಾಯವೆನಿಸಿ ಅದರಲ್ಲಿ ಬಾಧ.

4. ಜ್ಞಾನವಿಷಯಕವಾದ ನಿತ್ಯಜ್ಞಾನವನ್ನು ಅನುವ್ಯವಸಾಯ ಎಂದು ಪರಿಗಣಿಸಿದರೆ ಈಶಜ್ಞಾನವೂ ಸಂಗ್ರಹವಾಗುತ್ತದೆ. ಅದು ಪ್ರಾಮಾಣ್ಯವಿಷಯಕವೆಂದು ನೈಯಾಯಿಕರು ಒಪ್ಪಿರುತ್ತಾರೆ, ಈಶ ಸರ್ವಜ್ಞನಾದುದರಿಂದ. ಆದ್ದರಿಂದ ಸಿದ್ಧಸಾಧನತಾ.

ಹೀಗೆ ಆಕ್ಷೇಪಗಳು ಬಂದಾಗ ಈ ದೋಷಗಳಿಗೆ ಅವಕಾಶವಾಗದಂತೆ ಪ್ರಕೃತ ವಿವಕ್ಷಿತ ಅನುವ್ಯವಸಾಯವನ್ನು ಮುಂದಿನ ಮೂಲದಲ್ಲಿ ಹೇಳುತ್ತಾರೆ.

## ಅನುವ್ಯವಸಾಯ ನಿರೂಪಣೆ

**अनुव्यवसायत्वं च व्यवसायप्रकारप्रकारकतया तत्प्रकारवद्विशेष्यकतया च तद्विषयकप्रत्यक्षत्वं वा ज्ञानांशे लौकिकप्रत्यक्षत्वं वेति न कश्चिद्दोषः ।**

ವ್ಯವಸಾಯದಲ್ಲಿ ಯಾವ ಧರ್ಮವು ಪ್ರಕಾರವಾಗಿದೆಯೋ ತತ್ಪ್ರಕಾರಕವಾಗಿ ಹಾಗೂ ತಾದೃಶಪ್ರಕಾರೀಭೂತವಾದ ಧರ್ಮವುಳ್ಳ ವಸ್ತು ವಿಶೇಷ್ಯಕವಾಗಿ ವ್ಯವಸಾಯವನ್ನು ಗ್ರಹಿಸುವ ಜ್ಞಾನವೇ ಅನುವ್ಯವಸಾಯ. ಉದಾಹರಣೆಗೆ–ರಜತವನ್ನು ನೋಡಿ 'ಇದಂ ರಜತಮ್' ಎಂಬ ಜ್ಞಾನ ಬಂತು. ಆ ಜ್ಞಾನದಲ್ಲಿ ರಜತತ್ವವು ಪ್ರಕಾರ. ಅಂತಃಸ ಪ್ರಕಾರವತ್ತಾದ ರಜತವು ವಿಶೇಷ್ಯ. ಇಂತಹ ವ್ಯವಸಾಯವನ್ನು ರಜತತ್ವಪ್ರಕಾರಕತ್ವೇನ, ರಜತತ್ವವದ್ ವಿಶೇಷ್ಯಕತ್ವೇನ ಗ್ರಹಿಸುವ 'ರಜತತ್ವಪ್ರಕಾರಕ ರಜತತ್ವವದ್ ವಿಶೇಷ್ಯಕ ಜ್ಞಾನವಾನ್ ಅಹಂ' ಎಂಬ ಜ್ಞಾನವೇ ಅನುವ್ಯವಸಾಯ. ಇಂತಹ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರುತ್ತದೆ, ಬಾಧ ಇಲ್ಲ, ನೈಯಾಯಿಕರು ಪ್ರಾಮಾಣ್ಯವು ತೋರುತ್ತದೆ, ಎಂದು ಒಪ್ಪಿಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಅಥವಾ, ಜ್ಞಾನಾಂಶದಲ್ಲಿ ಲೌಕಿಕ ಸನ್ನಿಕರ್ಷದಿಂದ ಜನ್ಯವಾದ ಜ್ಞಾನವೇ ಅನುವ್ಯವಸಾಯ. ಸನ್ನಿಕರ್ಷಜನ್ಯ ಎಂಬ ಪದದಿಂದ ಶಾಬ್ದಬೋಧವನ್ನು ವಾರಣೆ ಮಾಡಿದಂತಾಯಿತು. (ಜ್ಞಾನಾಂಶದಲ್ಲಿ) ಲೌಕಿಕ ಸನ್ನಿಕರ್ಷಜನ್ಯ, ಎಂಬ ನಿಬಂಧನೆಯಿಂದ ಹಿಂದೆ ಹೇಳಿದ ಸಾಮಾನ್ಯ ಲಕ್ಷಣಾಪ್ರತ್ಯಾಸತ್ತಿಜನ್ಯವಾದ ಜ್ಞಾನಜ್ಞಾನವನ್ನು ವಾರಣೆ ಮಾಡಿದಂತಾಯಿತು. ಆದ್ದರಿಂದ ಈ ಪಕ್ಷದಲ್ಲೂ ಹಿಂದಿನ ದೋಷಗಳು ಇಲ್ಲ.

'ಅಯಂ ಘಟಃ' ಎಂಬ ಜ್ಞಾನಬಂದ ಮೇಲೆ 'ಘಟಜ್ಞಾನವಾನ್ ಅಹಂ' ಎಂಬ ಅನುವ್ಯವಸಾಯ ಬರುತ್ತದೆ. ಇಲ್ಲಿ 'ಘಟಜ್ಞಾನವಾನ್' ಎಂದರೆ 'ಘಟತ್ವಪ್ರಕಾರಕ–ಘಟತ್ವವದ್–ವಿಶೇಷ್ಯಕ–ಜ್ಞಾನವಾನ್ ಅಹಂ' ಎಂದು ಅರ್ಥ. ಇಂತಹ ಅನುವ್ಯವಸಾಯವು ಜ್ಞಾನಾಂಶೇ ಲೌಕಿಕಸನ್ನಿಕರ್ಷಜನ್ಯವಾಗಿದೆ. ಈ ಅನುವ್ಯವಸಾಯ ಮನಸ್ಸಿನಿಂದ ಹುಟ್ಟುತ್ತದೆ, ಎಂದು ನ್ಯಾಯಮತ. ಘಟಜ್ಞಾನವು ಆತ್ಮನಲ್ಲಿದೆ. ಅದಕ್ಕೂ ಮನಸ್ಸಿಗೂ ಸಂಯುಕ್ತ ಸಮವಾಯ ಸನ್ನಿಕರ್ಷ. ಮನಃಸಂಯುಕ್ತ ಆತ್ಮ, ಅದರಲ್ಲಿ ಸಮವಾಯ ಸಂಬಂಧೇನ ಜ್ಞಾನ ಇದೆ. ಈ ಸನ್ನಿಕರ್ಷವು ಲೌಕಿಕ ಸನ್ನಿಕರ್ಷ. ಹೀಗೆ ಈ ಅನುವ್ಯವಸಾಯವು ಜ್ಞಾನಾಂಶೇ ಲೌಕಿಕ ಸನ್ನಿಕರ್ಷಜನ್ಯವಾಗಿದೆ. ಆದ್ದರಿಂದ ಅನುಮಾನದ ಪಕ್ಷಕೋಟಿಯಲ್ಲಿ ಸೇರುತ್ತದೆ. ಅದು ಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ. ಬಾಧಾದಿದೋಷಗಳಿಗೆ ಅವಕಾಶ ಇಲ್ಲ.

## ನ್ಯಾಯದೀಪ

**ಅನುವ್ಯವಸಾಯತ್ವಂ ಚೇತಿ ॥ ಏತೇನ 'ತಾರ್ಕಿಕಾಭಿಮತ–ಅನುವ್ಯವಸಾಯ ಏವ ಅಸ್ಮಾಕಂ ಸಾಕ್ಷೀ' ಇತಿ ಪ್ರಾಗುಕ್ತಂ(ಪುಟ.13) ವಿವೃತಂ ಧ್ಯೇಯಮ್। ಅತ್ರ ದಲದ್ವಯಕೃತ್ಯಂ ಪ್ರಾಗೇವ ವ್ಯಕ್ತಮ್ । (ಪು.96)**

**ನನು ಯದಿ ವ್ಯವಸಾಯ–ಪ್ರಕಾರ–ಪ್ರಕಾರತಯಾ, ಇತ್ಯಾದಿ ರೂಪಮ್ ಅನುವ್ಯವಸಾಯತ್ವಂ ತರ್ಹಿ ಇದಮೇವ ಪ್ರಾಮಾಣ್ಯವಿಷಯಕತ್ವಮ್ ಇತಿ ಸಿದ್ಧಸಾಧನತಾ ದೋಷಃ, ಇತಿ ಚೇನ್ನ–ಸತ್ತಯಾ ಪ್ರಾಮಾಣ್ಯೋಲ್ಲೇಖಸ್ಯ ಅಸ್ಮಿನ್ ಪಕ್ಷೇ ಸಾಧ್ಯಸ್ಯ ಅಭಿಮತತ್ವಾತ್ ।**

**ಯದಾ ತು ಪ್ರಾಮಾಣ್ಯವಿಷಯಕತ್ವಮೇವ ಸಾಧ್ಯಮ್ ಇತಿ ಮತಂ ತತ್‌ಪಕ್ಷೇ ಪ್ರಕಾರಾಂತರೇಣ ಆಹ–ಜ್ಞಾನಾಂಶೇ ಇತಿ ॥**

'ವ್ಯವಸಾಯ ಪ್ರಕಾರ' ಇತ್ಯಾದಿ ರೂಪವಾಗಿ ಪ್ರಥಮಪಕ್ಷದಲ್ಲಿ ಅನುವ್ಯವಸಾಯವನ್ನು ನಿರೂಪಿಸಲಾಗಿದೆ. ಆ ಪಕ್ಷದಲ್ಲಿ 'ಘಟತ್ವಪ್ರಕಾರಕ–ಘಟತ್ವವದ್ ವಿಶೇಷ್ಯಕ ಜ್ಞಾನವಾನಹಮ್' ಎಂದೇ ಅನುವ್ಯವಸಾಯದ ಆಕಾರವಾಗುತ್ತದೆ. ಈ ಧರ್ಮಪುರಸ್ಕಾರವಾಗಿ ಅನುವ್ಯವಸಾಯವು ಜ್ಞಾನವನ್ನು ಗ್ರಹಿಸಿರಬೇಕು, ಎಂದು ನಿರ್ಬಂಧ ಮಾಡಿದರೆ, ಇದೇ ಪ್ರಾಮಾಣ್ಯರೂಪ ವಾದುದರಿಂದ 'ಪ್ರಾಮಾಣ್ಯವನ್ನು ಗ್ರಹಿಸುವ ಜ್ಞಾನದ ಜ್ಞಾನವು ಪ್ರಾಮಾಣ್ಯವಿಷಯಕವಾಗಿದೆ' ಎಂದು ಪ್ರತಿಜ್ಞಾ ಮಾಡಿದಂತಾಗುತ್ತದೆ. ಹೀಗೆ ಹೇಳಿದರೆ ಸಿದ್ಧಸಾಧನತಾ. ಏಕೆಂದರೆ, ಈ ರೀತಿ ಜ್ಞಾನವನ್ನು ಗ್ರಹಿಸುವುದು ನೈಯಾಯಿಕರ ಮತದಲ್ಲಿ ಅನುಮಿತಿ ಮಾತ್ರ. ಮನಸ್ಸಿನಿಂದ ಬರುವ ಜ್ಞಾನ 'ಪುರೋವರ್ತಿನಿ ಘಟತ್ವಪ್ರಕಾರಕ ಜ್ಞಾನವಾನಹಮ್' ಎಂದಿಷ್ಟೇ. ಅನುಮಿತಿಯು ಪ್ರಾಮಾಣ್ಯವಿಷಯಕ, ಎಂದು ತಾರ್ಕಿಕರಿಗೆ ಸಿದ್ಧವಾಗಿದೆ. ಆದ್ದರಿಂದ ಸಿದ್ಧಸಾಧನತಾದೋಷ.

ಇದಕ್ಕೆ ಪರಿಹಾರ ಹೀಗೆ–ಈ ಪಕ್ಷದಲ್ಲಿ ಕೇವಲ 'ಪ್ರಾಮಾಣ್ಯವಿಷಯಕತ್ವಮ್' ಎಂದಿಷ್ಟೇ ಸಾಧ್ಯವಲ್ಲ. 'ಸತ್ತಯಾ ಪ್ರಾಮಾಣ್ಯವಿಷಯಕತ್ವಮ್' ಎಂದೇ ಸಾಧ್ಯ. ಧರ್ಮಧರ್ಮಿವೈಶಿಷ್ಟ್ಯವು (ತದ್ವತ್ತ್ವಾಂಶ) ಕೆಲವು ನೈಯಾಯಿಕರ ಅಭಿಪ್ರಾಯದಂತೆ ಅನುವ್ಯವಸಾಯಕ್ಕೆ ವಿಷಯವಾದರೂ ಅದು ಸತ್ತಯಾ ಅನುವ್ಯವಸಾಯ ವಿಷಯ ಎಂದು ಅವರು ಒಪ್ಪುವುದಿಲ್ಲ. ಆದ್ದರಿಂದ ಸಿದ್ಧಸಾಧನತಾದೋಷ ಇಲ್ಲ. ಸತ್ತಯಾ ಎಂಬ ಅಂಶವನ್ನು ಬಿಟ್ಟು ಕೇವಲ ಪ್ರಾಮಾಣ್ಯವಿಷಯಕತ್ವವನ್ನು ಸಾಧ್ಯ ಎಂದು ಪರಿಗಣಿಸಿದಲ್ಲಿ ಪ್ರಥಮಪಕ್ಷದಲ್ಲಿ ಸಿದ್ಧಸಾಧನತಾ ಇದ್ದೇ ಇದೆ. ಅದಕ್ಕಾಗಿ ದ್ವಿತೀಯಪಕ್ಷವನ್ನು ಅನುಸರಿಸಲಾಗಿದೆ.

## ನ್ಯಾಯದೀಪ

**ಜ್ಞಾನಾಂಶೇ ಇತಿ ॥ ಲೌಕಿಕತ್ವಂ ತು ಸಾಮಾನ್ಯಪ್ರತ್ಯಾಸತ್ತ್ಯಾದ್ಯಜನ್ಯತ್ವಮ್ । ಜ್ಞಾನಾಂಶೇ ಇತಿ ವಿಶೇಷಣಂ ತು ಸ್ಮೃತ್ಯುಪನೀತ–ಅತೀತಘಟಜ್ಞಾನೇ ತದ್ವಿಷಯಕಂ 'ಅಹಂ ಘಟಜ್ಞಾನವಾನ್' ಇತಿ ಯತ್ ಜ್ಞಾನಂ, ಆತ್ಮಾಂಶೇ ಲೌಕಿಕ ಪ್ರತ್ಯಕ್ಷಂ ತತ್ರ ಬಾಧಾದಿನಿರಾಸಾಯ, ಇತಿ ಭಾವಃ ।**

'ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷತ್ವಂ ವಾ' ಎಂದು ಅನುವ್ಯವಸಾಯದ ಸ್ವರೂಪವನ್ನು ಮೂಲದಲ್ಲಿ ನಿರೂಪಿಸಲಾಗಿದೆ. ಇಲ್ಲಿ ಪ್ರತ್ಯಕ್ಷದಲ್ಲಿ ಲೌಕಿಕತ್ವವೆಂದರೆ ಸಾಮಾನ್ಯಲಕ್ಷಣಾ, ಜ್ಞಾನ ಲಕ್ಷಣಾ, ಯೋಗಜಧರ್ಮ ಈ ಪ್ರತ್ಯಾಸತ್ತಿಗಳಿಂದ ಜ್ಞಾನವು ಜನ್ಯವಾಗಿರಬಾರದು, ಎಂದು ಅರ್ಥ. ಅವುಗಳು ಅಲೌಕಿಕಸನ್ನಿಕರ್ಷಗಳು. ಅವುಗಳಿಂದ ಜನ್ಯವಾದ ಜ್ಞಾನವು ಲೌಕಿಕ ಪ್ರತ್ಯಕ್ಷವಾಗುವುದಿಲ್ಲ.

ಅದರಲ್ಲೂ 'ಜ್ಞಾನಾಂಶೇ' ಎಂಬ ವಿಶೇಷಣವನ್ನು ಬಿಟ್ಟರೆ ಬಾಧದೋಷ ಬರುತ್ತದೆ. ಹಿಂದೆ ಘಟಜ್ಞಾನ ಬಂದಿತ್ತು. ಅದರ ಸ್ಮರಣೆ (ಜ್ಞಾನದ ಸ್ಮರಣೆ) ಇಂದು ಬಂದು ಆಮೇಲೆ ''ಘಟಜ್ಞಾನವಾನ್ ಅಹಮ್'' ಎಂದು ಅನುವ್ಯವಸಾಯ ಹುಟ್ಟಿತು. ಈ ಅನುವ್ಯವಸಾಯವೂ ಆತ್ಮಾಂಶದಲ್ಲಿ ಲೌಕಿಕ ಸನ್ನಿಕರ್ಷಜನ್ಯ. ಇಂತಹ ಅನುವ್ಯವಸಾಯದಲ್ಲಿ ಘಟಜ್ಞಾನಗತವಾದ ಪ್ರಾಮಾಣ್ಯವು ವಿಷಯವಲ್ಲ. ಆದಕ್ಕಾಗಿ 'ಜ್ಞಾನಾಂಶೇ ಲೌಕಿಕ ಸನ್ನಿಕರ್ಷಜನ್ಯ' ಎನ್ನಬೇಕು. ಈ ಅನುವ್ಯವಸಾಯವು ಜ್ಞಾನಾಂಶದಲ್ಲಿ ಜ್ಞಾನಲಕ್ಷಣಾ ಸನ್ನಿಕರ್ಷಜನ್ಯ. ಏಕೆಂದರೆ, ಘಟದ ಪ್ರತ್ಯಕ್ಷ ಈಗಿಲ್ಲ. ಅದರ ಜೊತೆಯಲ್ಲಿ ಮನಸ್ಸಿಗೆ ಸ್ವಸಂಯುಕ್ತ ಸಮವಾಯರೂಪವಾದ ಲೌಕಿಕ ಸನ್ನಿಕರ್ಷವೂ ಇಲ್ಲ. ಆದ್ದರಿಂದ ಆ ಅನುವ್ಯವಸಾಯವು ಜ್ಞಾನಾಂಶೇ ಲೌಕಿಕ ಸನ್ನಿಕರ್ಷಜನ್ಯವಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವೇವಂ, ಜ್ಞಾನಧರ್ಮತ್ವ–ಬಾಹ್ಯಾರ್ಥತ್ವಯೋಃ ಅವಿಶೇಷಾತ್ ವಿಸಂವಾದ–ಸಂವಾದಾಪೇಕ್ಷತ್ವಸ್ಯ ಉಭಯತ್ರ ಸಾಮ್ಯಾತ್ ಅಪಿ ಅಪ್ರಾಮಾಣ್ಯಮಪಿ ಸ್ವತೋ ಗೃಹ್ಯೇತ, ಇತಿ ತತಃ ಕಃ ಪ್ರಾಮಾಣ್ಯಸ್ಯ ವಿಶೇಷ, ಇತ್ಯತ ಆಹ–ಅಪ್ರಾಮಾಣ್ಯಂ ತ್ವಿತಿ ॥**

ಅಪ್ರಾಮಾಣ್ಯವೂ ಸ್ವತಃ ಗ್ರಹಣೆ ಆಗಲಿ, ಎಂದು ಆಕ್ಷೇಪ. ಏಕೆಂದರೆ, ಪ್ರಾಮಾಣ್ಯ ದಂತೆಯೇ ಅದೂ ಜ್ಞಾನಗತವಾದ ಧರ್ಮ. ವಿಷಯಸತ್ವವು ಪ್ರಾಮಾಣ್ಯಘಟಕವಾಗಿದ್ದು ಅದು ಬಾಹ್ಯಾರ್ಥವಾಗಿದೆ. ಅದರಂತೆ ಅಪ್ರಾಮಾಣ್ಯಘಟಕವಾದ ವಿಷಯಾಸತ್ವವೂ ಬಾಹ್ಯವಾಗಿದೆ. ಅಪ್ರಾಮಾಣ್ಯವನ್ನು ತಿಳಿಯಬೇಕಾದರೆ ವಿಸಂವಾದದ ಸಹಾಯಬೇಕು. ಪ್ರಾಮಾಣ್ಯವನ್ನು ತಿಳಿಯಬೇಕಾದರೂ ಸಂವಾದದ ಸಹಕಾರಬೇಕು. ಹೀಗೆ, ಪ್ರಾಮಾಣ್ಯದಲ್ಲಿ ಅಪ್ರಾಮಾಣ್ಯಕ್ಕಿಂತ ವಿಶೇಷವೇನೂ ಇಲ್ಲ. ಹೀಗಿರುವಾಗ ಪ್ರಾಮಾಣ್ಯಮಾತ್ರ ಸ್ವತಃ ಏಕೆ? ಈ ಜಿಜ್ಞಾಸೆಯ ಪರಿಹಾರವನ್ನು ಮುಂದಿನ ಮೂಲಗ್ರಂಥ ಮಾಡುತ್ತದೆ.

## ಅಪ್ರಾಮಾಣ್ಯಂ ಪರತಃ

**अप्रामाण्यं तु विसंवादाद्यनुसंधाने सत्येव गृह्यत इति न**

**स्वतस्तद्ग्रहः । प्रामाण्यधीस्तु संवादाद्यनुसंधानं विनापि दृष्टेति-विशेषः ।**

ಅಪ್ರಾಮಾಣ್ಯವಾದರೋ ವಿಸಂವಾದ ಕಂಡಾಗ ಮಾತ್ರ ತಿಳಿಯಲ್ಪಡುತ್ತದೆ. ಆದ್ದರಿಂದ ಅದರ ಜ್ಞಾನವು ಸ್ವತಃ ಅಲ್ಲ, ಅಂದರೆ, ಸಾಕ್ಷಿಗೆ ಅಪ್ರಾಮಾಣ್ಯಗ್ರಹಣಶಕ್ತಿ ಸಹಜವಲ್ಲ, ಆಹಿತ. ವಿಸಂವಾದದ ಅನುಸಂಧಾನ ಇದ್ದಾಗ ಆ ಶಕ್ತಿಯು ಸಾಕ್ಷಿಗೆ ಬರುತ್ತದೆ. ಆದರೆ, ಪ್ರಾಮಾಣ್ಯಜ್ಞಾನವು ಸಂವಾದ ಜ್ಞಾನ ಸಾಪೇಕ್ಷವಲ್ಲ, ಅಭ್ಯಾಸದಶಾಪನ್ನಸ್ಥಳದಲ್ಲಿ ಸಂವಾದದ ಜ್ಞಾನ ಇಲ್ಲದೆಯೂ ಪ್ರಾಮಾಣ್ಯವು ಗೃಹೀತವಾಗುತ್ತದೆ. ಆದ್ದರಿಂದ ಸಾಕ್ಷಿಯಲ್ಲಿರುವ ಪ್ರಾಮಾಣ್ಯಗ್ರಹಣಶಕ್ತಿಯು ಆಹಿತವಲ್ಲ, ಸ್ವಾಭಾವಿಕ.

## ನ್ಯಾಯದೀಪ

**ಅಪ್ರಾಮಾಣ್ಯಂ ತ್ವಿತಿ ॥ ವಿವರಿಷ್ಯತೇ ಚ ಏತತ್ ಪ್ರಾಮಾಣ್ಯಾನುಮಿತ್ಯ-ಸಂಭವವಾದೇ । ದೃಷ್ಟೇತಿ ॥ ಅಭ್ಯಾಸದಶಾಪನ್ನಸ್ಥಲೇ ಇತಿ ಭಾವಃ ।**

ಪ್ರಾಮಾಣ್ಯವು ಅನುಮೇಯವಲ್ಲ ಎಂದು ಮುಂದೆ ಹೇಳಲಾಗಿದೆ. ಆ ಸಂದರ್ಭದಲ್ಲಿ ಸಾಕ್ಷಿಗೆ ಅಪ್ರಾಮಾಣ್ಯಗ್ರಹಣಶಕ್ತಿಯು ಸಹಜವಲ್ಲ ಎಂದು ವಿವರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಅನುವ್ಯವಸಾಯಃ, ಸ್ವಗ್ರಾಹ್ಯ–ಜ್ಞಾನ–ಅಪ್ರಾಮಾಣ್ಯ–ವಿಷಯೀಕರಣ–ಯೋಗ್ಯಃ । ಅನುವ್ಯವಸಾಯತ್ವಾತ್, ಗೃಹಿತ–ಅಪ್ರಾಮಾಣ್ಯಕ–ಜ್ಞಾನ–ಸಮಾನವಿಷಯಕ–ಜ್ಞಾನಾಂತರ–ಅನುವ್ಯವಸಾಯವತ್, ಇತಿ ಆಭಾಸ ಸಾಮ್ಯಮ್, ಇತ್ಯಾಶಂಕ್ಯ ನಿರಾಹ–ನನ್ವಿತ್ಯಾದಿನಾ ॥**

ಪ್ರಾಮಾಣ್ಯಸ್ವತಸ್ತ್ವವನ್ನು ಅನುಮಾನದಿಂದ ಸಾಧನೆ ಮಾಡಿದಂತೆ ಅಪ್ರಾಮಾಣ್ಯದ ಸ್ವತಸ್ತ್ವವನ್ನೂ ಸಾಧಿಸಬಹುದು–

ಪಕ್ಷ–ಅಪ್ರಮಾವಿಷಯಕ ಅನುವ್ಯವಸಾಯವು

ಸಾಧ್ಯ–ತಾನು ಗ್ರಹಿಸುವ ಜ್ಞಾನದಲ್ಲಿರುವ ಅಪ್ರಾಮಾಣ್ಯವನ್ನು ಗ್ರಹಿಸಲು ಯೋಗ್ಯವಾಗಿದೆ.

ಹೇತು–ಅನುವ್ಯವಸಾಯವಾದ ಕಾರಣ.

ದೃಷ್ಟಾಂತ–ಮೊದಲೊಮ್ಮೆ ಯಾವ ಜ್ಞಾನದಲ್ಲಿ ಅಪ್ರಾಮಾಣ್ಯವು ಗೃಹೀತವಾಗಿದೆಯೋ ಅದೇ ಜ್ಞಾನವು ಮತ್ತೊಮ್ಮೆ ಬಂದಾಗ ಆ ಜ್ಞಾನದಲ್ಲಿರುವ ಅಪ್ರಾಮಾಣ್ಯವನ್ನು ಗ್ರಹಿಸುವ ಅನುವ್ಯವಸಾಯದಂತೆ.

ಈ ಅನುಮಾನಕ್ಕೆ ಏನು ದೋಷವಿದೆಯೋ ಅದೇ ದೋಷ ಪ್ರಾಮಾಣ್ಯ ಸ್ವತಸ್ತ್ವ ಸಾಧಕಾನುಮಾನಕ್ಕೂ ಸಮಾನ.

ಮುಂದಿನ (ಮೂಲದಲ್ಲಿ) ಈ ಆಶಂಕೆಯನ್ನು ಮಾಡಿ ನಿರಾಸಮಾಡಿದ್ದಾರೆ.

**ननु गृहीताप्रामाण्यकज्ञानसमानविषयकज्ञानान्तराप्रामाण्ये संशयादर्शनेन तत्रानुव्यवसायवेद्यत्वे सिद्धेऽन्यत्रापि तथेत्यप्रामाण्यधीरपि स्वतः स्यादिति चेन्न। अप्रामाण्योपाधेः व्यवसायविषयाभावस्य तदनुपनीतत्वेनानुव्यवसायायोग्यत्वात् ।**

ಒಮ್ಮೆ ಒಂದು ವಸ್ತುವಿನ ಜ್ಞಾನದಲ್ಲಿ ಅಪ್ರಾಮಾಣ್ಯಜ್ಞಾನವು ಬಂತು. ಅದೇ ವಸ್ತುವಿನ ಭ್ರಮೆ ಮತ್ತೊಮ್ಮೆ ಬಂತು. ಅಂತಹ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಆದ್ದರಿಂದ ಆ ಜ್ಞಾನಗತವಾದ ಅಪ್ರಾಮಾಣ್ಯವು ಅನುವ್ಯವಸಾಯದಿಂದ ಗೃಹೀತವಾಗಿದೆ. ಈ ನಿದರ್ಶನದಿಂದ ಸರ್ವತ್ರ ಅಪ್ರಾಮಾಣ್ಯಜ್ಞಾನವೂ ಸ್ವತಃ ಆಗಲಿ. ಅರ್ಥಾತ್, ಅಪ್ರಾಮಾಣ್ಯಕ್ಕೂ ಜ್ಞಾನಗ್ರಾಹಕ-ಅನುವ್ಯವಸಾಯ ಮಾತ್ರ ಗ್ರಾಹ್ಯತ್ವ ಬರಲಿ. ಈ ಆಕ್ಷೇಪವು ಸರಿಯಲ್ಲ-ಅಪ್ರಾಮಾಣ್ಯದಲ್ಲಿ ಸೇರಿರುವ ವ್ಯವಸಾಯ ವಿಷಯದ ಅಭಾವವು ವ್ಯವಸಾಯದಲ್ಲಿ ತೋರುವುದಿಲ್ಲ. ಹೀಗಾಗಿ ತಂದಂಶದಲ್ಲಿ ವ್ಯವಸಾಯವು ಅನುವ್ಯವಸಾಯಕ್ಕೆ ಉಪನಾಯಕವಾಗಲಾರದು. ಅಂದಮೇಲೆ ಬಾಹ್ಯವಾದ ಅದರೊಂದಿಗೆ ಆಂತರವಾದ ಇಂದ್ರಿಯಕ್ಕೆ ಸನ್ನಿಕರ್ಷವೇ ಇಲ್ಲ. ಆದ್ದರಿಂದ ಅಪ್ರಾಮಾಣ್ಯವು ಅನುವ್ಯವಸಾಯಕ್ಕೆ ಯೋಗ್ಯವಲ್ಲ. ಆದರೆ ಪ್ರಾಮಾಣ್ಯಘಟಕವಾದ ಎಲ್ಲ ಉಪಾಧಿಗಳೂ ವ್ಯವಸಾಯಕ್ಕೆ ವಿಷಯವಾಗಿವೆ. ವ್ಯವಸಾಯ ರೂಪವಾದ ಸನ್ನಿಕರ್ಷದ್ವಾರಾ ಪ್ರಾಮಾಣ್ಯವು ಅನುವ್ಯವಸಾಯವಿಷಯತ್ವಯೋಗ್ಯವಾಗಿದೆ. ಇದು ಪ್ರಾಮಾಣ್ಯಕ್ಕೂ ಅಪ್ರಾಮಾಣ್ಯಕ್ಕೂ ಇರುವ ವ್ಯತ್ಯಾಸ. ಆದ್ದರಿಂದ ಅಪ್ರಾಮಾಣ್ಯ ಸ್ವತಸ್ತ್ವ ಸಾಧಕಾನುಮಾನದಲ್ಲಿ 'ತದ್‌ಗ್ರಹಣಾಯೋಗ್ಯ-ಉಪಾಧಿಘಟಿತತ್ವಮ್' ಎಂಬ ಉಪಾಧಿ ಇದೆ. ಈ ಉಪಾಧಿ ಪ್ರಾಮಾಣ್ಯ ಸ್ವತಸ್ತ್ವಾನುಮಾನಕ್ಕೆ ಇಲ್ಲ. ನ್ಯಾಯದೀಪದಲ್ಲಿ ಈ ಅನುಮಾನಕ್ಕೆ ಬಾಧದೋಷವನ್ನೂ ಹೇಳಲಾಗಿದೆ.

## ನ್ಯಾಯದೀಪ

**ವ್ಯವಸಾಯೇತಿ ।। ವ್ಯವಸಾಯೇ='ಇದಂ ರೂಪ್ಯಂ' ಇತ್ಯಾದಿ ಭ್ರಮೇ, ಅವಿಷಯಃ ಯಃ ಅಭಾವಃ=ರಜತತ್ವಾಭಾವಃ ತಸ್ಯೇತ್ಯರ್ಥಃ ।**

**'ತದಭಾವವತಿ ತತ್-ಪ್ರಕಾರಕತ್ವ' ರೂಪತ್ವಾತ್ ಅಪ್ರಾಮಾಣ್ಯಸ್ಯ ತದ್**

**ಘಟಕೋಪಾಧಿರೂಪಸ್ಯ ಅಭಾವಸ್ಯ 'ಇದಂ ರೂಪ್ಯಂ' ಇತಿ ಜ್ಞಾನೇ ಅನುಲ್ಲೇಖೇನ 'ನೇದಂ ರೂಪ್ಯಮ್' ಇತಿ ಜ್ಞಾನೇ ಏವ ಉಲ್ಲೇಖೇನ ಕಥಂ ತಸ್ಯ ಅನುವ್ಯವಸಾಯ ಯೋಗ್ಯತ್ವಮ್? ತಥಾ ಚ ಬಾಧ ಏವ ದೋಷಃ ಇತಿ ಭಾವಃ ।**

ಅಪ್ರಾಮಾಣ್ಯವೆಂದರೆ 'ತದಭಾವವತಿ ತತ್-ಪ್ರಕಾರಕತ್ವ'. ಶುಕ್ತಿಯನ್ನು ನೋಡಿ 'ಇದಂ ರಜತಂ' ಎಂಬ ಜ್ಞಾನ ಬಂದರೆ ಆ ಜ್ಞಾನದಲ್ಲಿ ಪ್ರಕಾರ ರಜತತ್ವ. ರಜತತ್ವದ ಅಭಾವವತ್ತಾದದ್ದು ಶುಕ್ತಿ. ಅದೇ ಜ್ಞಾನದಲ್ಲಿ ವಿಶೇಷ್ಯ. ಹೀಗೆ ರಜತತ್ವಾಭಾವವತ್ತಾದ ಶುಕ್ತಿಯಲ್ಲಿ ರಜತತ್ವವು ಪ್ರಕಾರವಾಗಿ ತೋರುತ್ತದೆ. ಇದೇ ಆ ಜ್ಞಾನದಲ್ಲಿರುವ ಅಪ್ರಾಮಾಣ್ಯ. ಇಂತಹ ಅಪ್ರಾಮಾಣ್ಯವು 'ಇದಂ ರಜತಂ' ಎಂಬ ಜ್ಞಾನದಲ್ಲಿ ಇದೆಯಾದರೂ ಅದು ಆ ಜ್ಞಾನದಲ್ಲಿ ತೋರುವುದಿಲ್ಲ. ಅದು ತೋರುವುದು 'ನೇದಂ ರೂಪ್ಯಂ' ಎಂಬ ಜ್ಞಾನದಲ್ಲಿ. ಈ ಜ್ಞಾನ 'ಇದಂ ರಜತಂ' ಎಂಬ ವ್ಯವಸಾಯದ ಅನುವ್ಯವಸಾಯ ಬರುವ ಕಾಲದಲ್ಲಿ ಹುಟ್ಟಿರುವುದಿಲ್ಲ. ಹೀಗೆ ಅನುವ್ಯವಸಾಯದಲ್ಲಿ ಅಪ್ರಾಮಾಣ್ಯವು ತೋರಲು ಸನ್ನಿಕರ್ಷವೇ ಇಲ್ಲ. ಆದ್ದರಿಂದ ತೋರುವುದಿಲ್ಲ. ಹೀಗೆ ಅಪ್ರಾಮಾಣ್ಯ ಸ್ವತಸ್ತ್ವ ಸಾಧಕವಾದ ಅನುಮಾನ ಬಾಧಿತ.

## ಆಚಾರ್ಯ ಸಮ್ಮತಿ

**तदुक्तं भगवत्पादैः "प्रामाण्यं च स्वत एव अन्यथानवस्थानात्" इति। ज्ञायत इति शेषः। उक्तानुमानसाध्यानि विनोक्तहेतूनां पक्षेऽवस्थित्ययोगादित्यर्थः।**

ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವವನ್ನು ಸಾಧಿಸುವ ಈ ಅನುಮಾನಗಳು ಸರಿ, ಎಂದು ಭಗವತ್ಪಾದರು ವಿಷ್ಣುತತ್ವವಿನಿರ್ಣಯದಲ್ಲಿ ಹೇಳಿದ್ದಾರೆ– "ಪ್ರಾಮಾಣ್ಯವು ಸ್ವತಃ. ಅದನ್ನು ಒಪ್ಪದಿದ್ದಲ್ಲಿ ಅನವಸ್ಥಾ ಬರುತ್ತದೆ."

ಆಚಾರ್ಯರ ವಾಕ್ಯಕ್ಕೆ ಜ್ಞಾಯತೇ ಎಂಬ ಶಬ್ದವನ್ನು ಸೇರಿಸಬೇಕು. "ಪ್ರಾಮಾಣ್ಯಂ ಸ್ವತಃ ಜ್ಞಾಯತೇ" ಎಂದು ಪ್ರತಿಜ್ಞಾಭಾಗ. ಅನ್ಯಥಾ ಎಂದರೆ ಸ್ವತಸ್ತ್ವ ಅನುಮಾನಗಳಲ್ಲಿ ಹೇಳಿದ ಸಾಧ್ಯವು ಪಕ್ಷವಾದ ಪ್ರಾಮಾಣ್ಯದಲ್ಲಿ ಇಲ್ಲದೇ ಹೋದಲ್ಲಿ ಆ ಸಾಧ್ಯವನ್ನು ಸಾಧನೆ ಮಾಡಲು ಹೇಳಿರುವ ಹೇತುಗಳು ಅನವಸ್ಥಾನಾತ್=ಪಕ್ಷದಲ್ಲಿ ಇರಲಾರವು, ಎಂದು ಅರ್ಥ. ಅರ್ಥಾತ್ ಹೇತೋಃ ಪಕ್ಷವೃತ್ತಿತ್ವಾನ್ಯಥಾನುಪಪತ್ತ್ಯಾ ಪ್ರಾಮಾಣ್ಯದಲ್ಲಿ ಸ್ವತಸ್ತ್ವರೂಪ ಸಾಧ್ಯವು ಸಿದ್ಧವಾಗುತ್ತದೆ.

## ನ್ಯಾಯದೀಪ

**ತದುಕ್ತಮಿತಿ ॥ ಸ್ವತಸ್ತ್ವೇ ಏತಾನಿ ಅನುಮಾನಾನಿ ಅನವದ್ಯಾನಿ ಇತ್ಯೇತತ್ ವಿಷ್ಣುತತ್ತ್ವವಿನಿರ್ಣಯೇ ಉಕ್ತಮಿತ್ಯರ್ಥಃ । ತತ್ ಪಠಿತ್ವಾ ಪ್ರಕೃತಾನುಗುಣಮ್ ಅರ್ಥಮಾಹ–ಪ್ರಾಮಾಣ್ಯಂ ಚೇತಿ ॥**

ಮೂಲದಲ್ಲಿ ತದುಕ್ತಂ, ಎಂದರೆ ಇದುವರೆಗೆ ಹೇಳಿರುವ ಸ್ವತಸ್ತ್ವಸಾಧಕಾನುಮಾನಗಳು ಸರಿಯಾಗಿವೆ, ಎನ್ನುವುದನ್ನು ವಿಷ್ಣುತತ್ತ್ವವಿನಿರ್ಣಯದಲ್ಲಿ ಹೇಳಲಾಗಿದೆ, ಎಂದು ಅರ್ಥ.

**ಇಲ್ಲಿಗೆ ಪ್ರಾಮಾಣ್ಯ ಸ್ವತಸ್ತ್ವೇ ಪ್ರಮಾಣ ನಿರೂಪಣ ಪ್ರಕರಣ ಮುಗಿಯಿತು. ॥ ೩ ॥**

# ಈ ಪ್ರಕರಣದ ಸಾರಾಂಶ

## ಸ್ವತಸ್ತ್ವಕ್ಕೆ ಪ್ರಮಾಣ

ಈ ಪ್ರಕರಣದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಸಾಧಿಸಲು ಅನುಮಾನ ಪ್ರಮಾಣವನ್ನು ಹೇಳಲಾಗಿದೆ. ಒಟ್ಟು ಏಳು ರೀತಿಯ ಅನುಮಾನಗಳನ್ನು ಇಲ್ಲಿ ಹೇಳಲಾಗಿದೆ.

1. ಮೊದಲು ಶ್ರೀಜಯತೀರ್ಥರು ವಿಷ್ಣುತತ್ತ್ವನಿರ್ಣಯ ಮತ್ತು ನ್ಯಾಯಸುಧಾದಲ್ಲಿ ಹೇಳಿರುವ ಅನುಮಾನವನ್ನು ಉಲ್ಲೇಖ ಮಾಡಲಾಗಿದೆ. ಅದು ಪ್ರಾಮಾಣ್ಯಪಕ್ಷಕ ಪರಿಶೇಷಾನುಮಾನ.

2. ಎರಡನೆಯದು ಆಂತರ ಸುಖಜ್ಞಾನವಿಷಯಕ ಅನುವ್ಯವಸಾಯ ಪಕ್ಷಕಾನುಮಾನ. ಬಾಹಾರ್ಥಜ್ಞಾನ ಬಂದಾಗ ಅದರ ಪ್ರಾಮಾಣ್ಯದಲ್ಲಿ ಕೆಲವೊಮ್ಮೆ ಸಂದೇಹ ಬರಬಹುದು. ಆದರೆ ಸುಖಾನುಭವದ ಅನುವ್ಯವಸಾಯ ಬಂದಮೇಲೆ ಎಂದೂ 'ನನಗೆ ಬಂದ ಸುಖದ ಅನುಭವವು ಭ್ರಾಂತಿಯೋ ಏನೋ' ಎಂದು ಸಂದೇಹ ಬರುವುದಿಲ್ಲ. ಹಾಗೆ ಸಂದೇಹ ಬರದಿರಬೇಕಾದರೆ ಆ ಅನುವ್ಯವಸಾಯವು ಸುಖಾನುಭವದಲ್ಲಿ ಸಂದೇಹವಿರೋಧಿಯಾದ ಅಪ್ರಾಮಾಣ್ಯವನ್ನೊ ಪ್ರಾಮಾಣ್ಯವ್ಯಾಪ್ಯವನ್ನೋ ಗ್ರಹಿಸಿರಬೇಕು. ಆದರೆ ಅವೆರಡೂ ಸುಖಾನುಭವದಲ್ಲಿ ವಿಷಯಗಳಲ್ಲ. ಆದ್ದರಿಂದಲೇ ಪ್ರಾಮಾಣ್ಯವು ವಿಷಯವಾಗಿದೆ, ಎಂದು ಅನುಮಾನದ ತಾತ್ಪರ್ಯ.

ಸುಖಜ್ಞಾನ ವಿಷಯಕ ಅನುವ್ಯವಸಾಯವು ಪ್ರಾಮಾಣ್ಯವನ್ನು ವಿಷಯೀಕರಿಸಿದರೆ ಜ್ಞಾನಗ್ರಾಹಕ-ಗ್ರಾಹ್ಯತ್ವವು ಬಂದುದರಿಂದ ಸ್ವತಸ್ತ್ವಸಿದ್ಧವಾದಂತೆ.

3. ಮೂರನೆಯ ಅನುಮಾನದಲ್ಲೂ ಅನುವ್ಯವಸಾಯವೇ ಪಕ್ಷ. ಆದರೆ ಬಾಹ್ಯ, ಆಂತರ ಉಭಯವಿಷಯಕವಾದ ವ್ಯವಸಾಯವಿಷಯಕವಾದ ಅನುವ್ಯವಸಾಯ ಸಾಮಾನ್ಯವು ಪಕ್ಷ. ಆಗ ಕೇವಲ ಅನುವ್ಯವಸಾಯವನ್ನು ಪಕ್ಷವನ್ನಾಗಿ ಮಾಡಲಾಗುವುದಿಲ್ಲ. ಕೆಲವು ಅನುವ್ಯವಸಾಯಗಳು ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸುತ್ತವೆ, ಮತ್ತೆ ಕೆಲವು ಮಾನಸಪ್ರಾಮಾಣ್ಯ ಸಂದೇಹರೂಪವಾಗಿರುತ್ತವೆ. ಅಂತಹ ಅನುವ್ಯವಸಾಯಗಳು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲವಾದುದರಿಂದ ಅವುಗಳು ಪಕ್ಷದಲ್ಲಿ ಸೇರಿದರೆ ಬಾಧಬರುತ್ತದೆ. ಅದಕ್ಕಾಗಿ ಅಂತಹ ಅನುವ್ಯವಸಾಯಗಳನ್ನು ಹೊರಗಿಡಲು ಮೂರು ಕ್ರಮಗಳನ್ನು ಅನುಸರಿಸಲಾಗಿದೆ—

1. ದೋಷಶಂಕಾಕ್ಕೆ ಆಸ್ಪದವಿಲ್ಲದ ಯಾವ ವ್ಯವಸಾಯವಿದೆಯೋ ಅಂತಹ ವ್ಯವಸಾಯವಿಷಯಕವಾದ ಅನುವ್ಯವಸಾಯ.

2. ಯಾವ ವ್ಯವಸಾಯ ಬಂದ ಮೇಲೆ ಸಂದೇಹವಿಲ್ಲದೆ ಪ್ರವೃತ್ತಿಯಾಗುವುದೋ ಅಂತಹ ವ್ಯವಸಾಯದ ಅನುವ್ಯವಸಾಯ.

ಇದರ ಬಗ್ಗೆ ಮಣಿಕಾರನ ಆಕ್ಷೇಪವಿದೆ. ಸುಖಜ್ಞಾನದಲ್ಲಿ ಪ್ರಾಮಾಣ್ಯವು ಸಾಕ್ಷಿಸಿದ್ಧವಲ್ಲ, ಅನುಮಾನದಿಂದಲೇ ಸಿದ್ಧವಾಗುತ್ತದೆ, ಎಂದು ಮಣಿಕಾರನ ವಾದ. ಹಿಂದೆ ಅನೇಕಬಾರಿ ಸುಖದ ಅನುಭವ ಬಂದಿದ್ದರೂ ಅವುಗಳಲ್ಲಿ ಯಾವ ಅನುಭವವೂ ಭ್ರಾಂತಿಯಾಗಿರುವುದು ಕಂಡಿಲ್ಲ. ಇದರಿಂದ ಸುಖಾನುಭವತ್ವವು ಪ್ರಾಮಾಣ್ಯ ವ್ಯಾಪ್ಯತಯಾ ಗೃಹೀತವಾಗಿದೆ. ಅಂತಹ ಧರ್ಮವು ಸುಖಾನುಭವದಲ್ಲಿ ಅನುವ್ಯವಸಾಯದಿಂದ ಗೃಹೀತವಾಗಿ ಪ್ರಾಮಾಣ್ಯಾನುಮಿತಿ ಬರುತ್ತದೆ.

ಅದರಂತೆ, ಹತ್ತಿರದಿಂದ ಜಲಜ್ಞಾನ ಬಂದಾಗಲೂ ಕೂಡಲೇ ಸಂದೇಹವಿಲ್ಲದೆ ಪ್ರವೃತ್ತಿ ಯಾಗುತ್ತದೆ. ಇಂತಹ ಸಂದರ್ಭದಲ್ಲಿ ಪ್ರಾಮಾಣ್ಯವು ಅನುವ್ಯವಸಾಯದಿಂದ ಗೃಹೀತವಾಗುತ್ತದೆ, ಎನ್ನುವುದನ್ನೂ ಮಣಿಕಾರ ಒಪ್ಪುವುದಿಲ್ಲ. ಹೊಸದಾಗಿ, ದೂರದಿಂದ ನೀರು ಕಂಡಾಗ, ಪ್ರಾಮಾಣ್ಯನಿರ್ಣಯ ಸ್ವಲ್ಪ ವಿಳಂಬವಾಗಿ ಬರುತ್ತದೆ. ಅನೇಕಬಾರಿ ನೋಡಿದ ವಿಷಯದಲ್ಲಿ ಬೇಗನೇ ಬರುತ್ತದೆ. ಇಷ್ಟೇ ವ್ಯತ್ಯಾಸ. ಹೊರತು ಅನುವ್ಯವಸಾಯದಿಂದ ಪ್ರಾಮಾಣ್ಯನಿರ್ಣಯವಾಗುವುದೇ ಇಲ್ಲ. ಕ್ಷಿಪ್ರಪ್ರವೃತಿಗೆ ಕ್ಷಿಪ್ರಪ್ರಾಮಾಣ್ಯನಿರ್ಣಯಕಾರಣ ಹೊರತು, ಪ್ರಾಮಾಣ್ಯಪ್ರತ್ಯಕ್ಷವು ಕಾರಣವೆಂದೇನೂ ನಿರ್ಧಾರವಾಗುವುದಿಲ್ಲ.

ಇದನ್ನು ಮೂಲದಲ್ಲಿ ನಿರಾಕರಿಸಲಾಗಿದೆ. ಅನುಮಿತಿ ಬರಬೇಕಾದರೆ ಹೇತುಜ್ಞಾನ, ವ್ಯಾಪ್ತಿಸ್ಮರಣೆ, ಪರಾಮರ್ಶ ಈ ಮೂರು ಜ್ಞಾನಗಳು ಕ್ರಮವಾಗಿ ಒಂದರ ನಂತರ ಒಂದು ಬರಬೇಕು. ಅದಕ್ಕೆ ಮೂರು ಕ್ಷಣಗಳಾದರೂ ವ್ಯವಧಾನಬೇಕು. ಇಷ್ಟು ವ್ಯವಧಾನವು ಕೆಲವೆಡೆ ಅನುಭವ ವಿರುದ್ಧವಾಗಿದೆ. ಜಲಜ್ಞಾನ ಬಂದ ಮರುಕ್ಷಣದಲ್ಲೇ ಪ್ರವೃತ್ತಿಯಾಗುತ್ತದೆ. ಆದ್ದರಿಂದ ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯವು ಅನುವ್ಯವಸಾಯವೇದ್ಯವೆಂದೇ ಹೇಳಬೇಕಾಗುತ್ತದೆ.

3. ಪ್ರಾಮಾಣ್ಯವಿರೋಧಿ–ಉಪಸ್ಥಾಪಕ–ಸಾಮಗ್ರೀಗಳಿಂದ ಕೂಡಿರದ ಅನುವ್ಯವಸಾಯ.

ಇಂತಹ ಅನುವ್ಯವಸಾಯ ಬಂದಮೇಲೆ ಪ್ರಾಮಾಣ್ಯದ ಬಗ್ಗೆ ಸಂದೇಹವಾಗಲೀ, ಅಪ್ರಾಮಾಣ್ಯ–ನಿಶ್ಚಯವಾಗಲೀ ಎಂದೂ ಬರುವುದಿಲ್ಲ. ಅದು ಬಾರದಿರಬೇಕಾದರೆ ಅನುವ್ಯವಸಾಯವು ಅದಕ್ಕೆ ವಿರೋಧಿಯಾದ ಪ್ರಾಮಾಣ್ಯನಿಶ್ಚಯರೂಪವಾಗಿರಬೇಕು. ಇದರಿಂದ ಪರತಸ್ತ್ವವಾದಿಗಳು ಅಂಗೀಕರಿಸದಿರುವ ಪ್ರಾಮಾಣ್ಯವಿಷಯಕತ್ವವು ಅನುವ್ಯವಸಾಯಕ್ಕೆ ಸಿದ್ಧವಾಗುತ್ತದೆ. ಹೀಗೆ ಹಿಂದಿನ ಅನುಮಾನದಲ್ಲಿ ಹೇಳಿದ ಹೇತುಗಳೇ ಈ ಅನುಮಾನದಲ್ಲಿ ಸಾಧ್ಯಸಾಧಕಗಳು.

4. ನಾಲ್ಕನೆಯ ಅನುಮಾನದಲ್ಲಿ ಪ್ರಾಮಾಣ್ಯವಿರೋಧ್ಯುಪಸ್ಥಾಪಕ ಸಾಮಗ್ರೀಗಳೊಂದಿಗೆ

ಕೂಡಿರದ ಅನುವ್ಯವಸಾಯವನ್ನು ಪಕ್ಷವನ್ನಾಗಿ ಮಾಡಿ ಪ್ರಾಮಾಣ್ಯವಿಷಯಕತ್ವವನ್ನು ಸಾಧ್ಯ ಮಾಡಲಾಗಿದೆ. ಹಿಂದಿನ ಅನುಮಾನದಲ್ಲಿ ಪಕ್ಷಘಟಕವಾದ ನಿಷ್ಕಂಪಪ್ರವೃತ್ತಿಹೇತುವಾದ ವ್ಯವಸಾಯವಿಷಯಕವಾದ ಅನುವ್ಯವಸಾಯತ್ವ ಈ ಅನುಮಾನದಲ್ಲಿ ಹೇತು. ಹೀಗೆ ಈ ಅನುಮಾನದಲ್ಲಿ ಹೇತುವು ಉಭಯ ಸಮ್ಮತವಾದ ಕಾರಣ ಅದನ್ನು ಸಮರ್ಥನೆ ಮಾಡುವ ಅಗತ್ಯವಿಲ್ಲ.

ಪ್ರಾಮಾಣ್ಯವಿಷಯಕತ್ವವನ್ನು ಸಾಧನೆ ಮಾಡುವ ಅನುಮಾನಗಳಿಗೆಲ್ಲ ದೃಷ್ಟಾಂತ–ಗೃಹೀತ ಪ್ರಾಮಾಣ್ಯಕ ಜ್ಞಾನಸಮಾನವಿಷಯಕ–ಜ್ಞಾನಾಂತರದ ಅನುವ್ಯವಸಾಯ. ಅಂದರೆ, ಮೊದಲು 'ಇದಂ ಜಲಂ' ಎಂಬ ಜ್ಞಾನ ಬಂದು, ಹತ್ತಿರ ಹೋಗಿ, ನೀರು ಕುಡಿದು 'ನನಗೆ ಬಂದ ಜಲಜ್ಞಾನವು ಪ್ರಮಾಣವಾಗಿದೆ' ಎಂಬ ನಿರ್ಧಾರವಾಗಿದೆ. ಆಮೇಲೆ ಮತ್ತೆ ಅದೇ ಜಲಜ್ಞಾನ ಬಂದು ಅದರ ಅನುವ್ಯವಸಾಯ ಬಂದಾಗ ಆ ಅನುವ್ಯವಸಾಯವು ಜಲಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಇಂತಹ ಅನುವ್ಯವಸಾಯವೇ ದೃಷ್ಟಾಂತ.

ಅಥವಾ, ಅನುಮಿತಿಯ ಅನುವ್ಯವಸಾಯವು ದೃಷ್ಟಾಂತ. ಪ್ರಾಚೀನ ತಾರ್ಕಿಕರು ಅನುಮಿತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸಿದ್ದಾರೆ. ಅದು ದೃಷ್ಟಾಂತವಾಗಬಹುದು. ನವೀನ ತಾರ್ಕಿಕರು ಅನುಮಿತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸಿಲ್ಲ, ಆದರೂ, ಅನುಮಿತಿಯಲ್ಲಿ ಎಂದೂ ಪ್ರಾಮಾಣ್ಯಸಂದೇಹವು ಬರುವುದಿಲ್ಲ, ಎನ್ನುತ್ತಾರೆ. ಹಾಗೆ ಸಂದೇಹ ಬರದೇ ಇರಲು ಕಾರಣ–'ಪರ್ವತಃ ವಹ್ನಿಮಾನ್' ಎಂಬ ಅನುಮಿತಿಯಲ್ಲಿ 'ವಹ್ನಿಮತಿ ವಹ್ನಿಪ್ರಕಾರಕತ್ವಂ' ಇದೇ ಪ್ರಾಮಾಣ್ಯ. ಈ ಪ್ರಾಮಾಣ್ಯ ವ್ಯಾಪ್ಯವಾದ ಧರ್ಮ 'ದೂಮವದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾರಕತ್ವಮ್'. ಯಾವ ಜ್ಞಾನದಲ್ಲಿ ದೂಮವತ್ತಾದ ಪರ್ವತಾದಿಗಳು ವಿಶೇಷ್ಯವಾಗಿದ್ದು ವಹ್ನಿಯು ಪ್ರಕಾರವಾಗಿರುವುದೋ ಅಂತಹ ಜ್ಞಾನವು 'ವಹ್ನಿಮತಿ ವಹ್ನಿಪ್ರಕಾರಕವಾಗಿ' ಇದ್ದೇ ಇರುತ್ತದೆ. ಹೀಗೆ, ಅನುಮಿತಿಯಲ್ಲಿ ಪ್ರಾಮಾಣ್ಯವ್ಯಾಪ್ತಧರ್ಮ ದರ್ಶನವಾಗುವುದರಿಂದ ಪ್ರಾಮಾಣ್ಯಸಂದೇಹ ಬರುವುದಿಲ್ಲ.

ಈ ಸಮಾಧಾನ ಸರಿಯಲ್ಲ–ಅನುಮಿತಿಯ ಅನುವ್ಯವಸಾಯವು ಅನುಮಿತಿಯಲ್ಲಿ, ವಹ್ನಿಮತಿ ವಹ್ನಿಪ್ರಕಾರಕತ್ವವನ್ನು ಗ್ರಹಿಸುವುದಿಲ್ಲ. ಏಕೆಂದರೆ, ವಹ್ನಿಮತ್ತ್ವಾಂಶವು ಬಾಹ್ಯಾರ್ಥ, ಆದನ್ನು ಗ್ರಹಿಸುವ ಸಾಮರ್ಥ್ಯ ಮನಸ್ಸಿಗಿಲ್ಲ ಎನ್ನುತ್ತಾರೆ ನೈಯಾಯಿಕರು. ಇದೇ ನ್ಯಾಯವನ್ನು 'ದೂಮವತಿ ವಹ್ನಿಪ್ರಕಾರಕತ್ವಾಂಶಕ್ಕೂ' ಅನ್ವಯಿಸಬೇಕಾಗುತ್ತದೆ. ಧೂಮವತ್ತ್ವಾಂಶವು ಬಹಿರರ್ಥ. ಅದನ್ನು ಗ್ರಹಿಸುವ ಸಾಮರ್ಥ್ಯವಾದರೂ ಮನಸ್ಸಿಗೆ ಹೇಗೆ? ಬಹಿರರ್ಥವಾದರೂ ಮನಸ್ಸು ಧೂಮವತ್ತ್ವಾಂಶವನ್ನು ಗ್ರಹಿಸುವುದಾದಲ್ಲಿ ವಹ್ನಿಮತ್ತ್ವಾಂಶವನ್ನೂ ಏಕೆ ಗ್ರಹಿಸಬಾರದು?

ಅಥವಾ, ವಹ್ನಿಮತ್ತ್ವಾಂಶವನ್ನು ಗ್ರಹಿಸುವುದಿಲ್ಲವೆಂದು ಆಗ್ರಹ ಮಾಡಿದರೂ ಧೂಮವತ್ತ್ವಾಂಶದಲ್ಲಿ ಅದು ಪ್ರಾಮಾಣ್ಯವನ್ನು ಗ್ರಹಿಸುವುದರಿಂದ ಆದನ್ನೇ ದೃಷ್ಟಾಂತವನ್ನಾಗಿ ಕೊಡಬಹುದು.

ಹೀಗೆ ಪ್ರಾಚೀನ-ನವೀನ ಉಭಯಮತದಲ್ಲೂ ಸ್ವತಸ್ತ್ವಸಾಧಕಾನುಮಾನಕ್ಕೆ ಅನುಮಿತಿಯ ಅನುವ್ಯವಸಾಯವೇ ದೃಷ್ಟಾಂತ.

5. ಪ್ರಾಮಾಣ್ಯದಲ್ಲಿ ಸೇರಿದ 'ತದ್ವತ್ತ್ವಾಂಶವು' ಬಾಹ್ಯವಾಗಿರುವ ಕಾರಣದಿಂದಾಗಿ ಪ್ರಾಮಾಣ್ಯವು ಮನೋಗ್ರಾಹ್ಯವಲ್ಲ, ಎನ್ನುವ ನೈಯಾಯಿಕರಿಗೆ ಈ ಆಕ್ಷೇಪಕ್ಕೆ ಅವಕಾಶವೇ ಆಗದ ಸುಖಜ್ಞಾನಗತ ಪ್ರಾಮಾಣ್ಯವನ್ನು ಪಕ್ಷವನ್ನಾಗಿ ಮಾಡಿ, ಅದು ಅನುವ್ಯವಸಾಯವಿಷಯವಾಗಿದೆ, ಎಂದು ಇನ್ನೊಂದು ಅನುಮಾನದಿಂದ ಸಾಧಿಸಲಾಗಿದೆ. ಎಲ್ಲೂ ಪ್ರಾಮಾಣ್ಯವು ಪ್ರಥಮಾನು ವ್ಯವಸಾಯವೇದ್ಯವಲ್ಲ, ಎನ್ನುವ ನೈಯಾಯಿಕರಿಗೆ ಇದು ವಿರುದ್ಧವಾಗುತ್ತದೆ. ಇಲ್ಲಿ 'ಸುಖತ್ವವತ್ತ್ವಾಂಶವು' ಬಹಿರರ್ಥ ಎಂಬ ಕಾರಣವನ್ನು ಹೇಳುವಂತಿಲ್ಲ. ಏಕೆಂದರೆ, ಸುಖ ಆಂತರವಾದುದರಿಂದ ಅದು ಮಾನಸಜ್ಞಾನಗೋಚರವಾಗುತ್ತದೆ.

6. ಅಥವಾ, ಪ್ರಾಮಾಣ್ಯವನ್ನು ಪಕ್ಷಮಾಡಿ ಅದು ಅನುವ್ಯವಸಾಯವೇದ್ಯ, ಎಂದು ಹೇಳಬೇಕಾದ್ದಿಲ್ಲ. ಪ್ರಾಮಾಣ್ಯವೆಂದರೆ, 'ತದ್ವದ್ವಿಶೇಷ್ಯಕತ್ವೇ ಸತಿ ತತ್ ಪ್ರಕಾರಕತ್ವಂ' ಇವು ಜ್ಞಾನಗತವಾದ ಎರಡು ಧರ್ಮಗಳು. ಜ್ಞಾನವು ಮನೋವೇದ್ಯ. ಆದ್ದರಿಂದ ಜ್ಞಾನಗತವಾದ ಕಿಂಚಿದ್ವಿಶೇಷ್ಯಕತ್ವ ಮತ್ತು ಘಟತ್ವ ಪ್ರಕಾರಕತ್ವಗಳು ಮನೋಗ್ರಾಹ್ಯವಾಗಿವೆ. ಇನ್ನು ಉಳಿದಿರುವುದು ಆ ವಿಶೇಷ್ಯದಲ್ಲಿ ಘಟತ್ವವತ್ತ್ವಾಂಶ ಮಾತ್ರ. ಘಟತ್ವವತ್ತ್ವ ಎಂದರೆ ಘಟತ್ವವೈಶಿಷ್ಟ್ಯ. ಅದು ಅನುವ್ಯವಸಾಯಕ್ಕೆ ವಿಷಯವಾಗುವುದಿಲ್ಲ, ಬಾಹ್ಯಾರ್ಥವಾದುದರಿಂದ, ಎಂದು ನೈಯಾಯಿಕರ ವಿವಾದ. ಅದೂ ಅನುವ್ಯವಸಾಯಯೋಗ್ಯ ಎಂದು ಸಾಧನೆ ಮಾಡಿದರೆ ಪ್ರಾಮಾಣ್ಯಸ್ವತಸ್ತ್ವ ಸಿದ್ಧವಾದಂತೆಯೆ. ಅದಕ್ಕಾಗಿ, ವೈಶಿಷ್ಟ್ಯವನ್ನಷ್ಟೇ ಪಕ್ಷವನ್ನಾಗಿ ಮಾಡಿ ಅನುವ್ಯವಸಾಯ ವಿಷಯತ್ವವನ್ನು ಸಾಧನೆ ಮಾಡುವ ಅನುಮಾನವನ್ನು ಸ್ವತಸ್ತ್ವ ಸಾಧಕವನ್ನಾಗಿ ಕೊಡಲಾಗಿದೆ.

ವೈಶಿಷ್ಟ್ಯವು ಬಾಹ್ಯಾರ್ಥವಾದುದರಿಂದ ಅದನ್ನು ಮನಸ್ಸು ಹೇಗೆ ಗ್ರಹಿಸುವುದು? ಎನ್ನುವ ಪ್ರಶ್ನೆಗೆ ಇದು ಉತ್ತರ-ಪುರೋವರ್ತಿ, ಘಟತ್ವಗಳೂ ಬಾಹ್ಯಾರ್ಥಗಳು. ಆದರೂ, ಪುರೋವರ್ತಿ ವಿಶೇಷ್ಯಕತ್ವವನ್ನು ಘಟತ್ವಪ್ರಕಾರಕತ್ವವನ್ನು ಮನಸ್ಸು ಗ್ರಹಿಸುತ್ತದೆ. ಹೇಗೆ? ಅದಕ್ಕೆ ವ್ಯವಸಾಯವು ಉಪನಾಯಕ. ಅಂದರೆ ವ್ಯವಸಾಯವು ಅವೆರಡನ್ನು ಗ್ರಹಿಸುತ್ತದೆ. ವ್ಯವಸಾಯದ ಮೂಲಕ ಅನುವ್ಯವಸಾಯವೂ ಅವನ್ನು ಗ್ರಹಿಸುತ್ತದೆ. ಇದೇ ರೀತಿಯಲ್ಲಿ ವ್ಯವಸಾಯವು ವೈಶಿಷ್ಟ್ಯವನ್ನೂ ಗ್ರಹಿಸುತ್ತದೆ. ಅದರ ಮೂಲಕ ಅನುವ್ಯವಸಾಯವೂ ಅದನ್ನು ಏಕೆ ಗ್ರಹಿಸಬಾರದು? ವಿಶಿಷ್ಟಭಾನಕ್ಕೆ

ವಿಶೇಷಣಜ್ಞಾನ, ವಿಶೇಷ್ಯೇಂದ್ರಿಯ ಸನ್ನಿಕರ್ಷ, ವಿಶೇಷ್ಯದಲ್ಲಿ ವಿಶೇಷಣದ ಅಸಂಸರ್ಗಾಗ್ರಹ ಇವಿಷ್ಟು ಕಾರಣಗಳು. ಅವೆಲ್ಲವೂ ಪ್ರಕೃತದಲ್ಲಿ ಇರುವುದರಿಂದ ಪ್ರಕಾರೀಭೂತಧರ್ಮದ ವೈಶಿಷ್ಟ್ಯವು ವಿಶೇಷ್ಯದಲ್ಲಿ ಭಾನವಾಗಲೇಬೇಕು. ಹೀಗೆ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ತೋರಲು ಯಾವ ಅನುಪಪತ್ತಿಯೂ ಇಲ್ಲ.

7. ಇದುವರೆಗಿನ ಅನುಮಾನಗಳಿಂದದ ಪ್ರಾಮಾಣ್ಯವು ಅನುವ್ಯವಸಾಯವಿಷಯ ಎಂದು ಸಾಧಿಸಲಾಗಿದೆ. ಮುಂದಿನ ಮೂರು ಅನುಮಾನಗಳಿಂದ ಅದು ಅನುವ್ಯವಸಾಯವಿಷಯತ್ವ ಯೋಗ್ಯ, ಎಂದು ಸಾಧಿಸಲಾಗಿದೆ. ಅವುಗಳಲ್ಲಿ ಮೊದಲನೆಯ ಅನುಮಾನದಲ್ಲಿ ಅನುವ್ಯವಸಾಯವು ಪಕ್ಷ. ಅದು ವ್ಯವಸಾಯಗತ ಪ್ರಾಮಾಣ್ಯವಿಷಯೀಕರಣ ಯೋಗ್ಯವಾಗಿದೆ, ಎಂದು ಸಾಧ್ಯ. ಎರಡನೆಯ ಅನುಮಾನದಲ್ಲಿ ವೈಶಿಷ್ಟ್ಯವು ಪಕ್ಷ. ಮೂರನೆಯ ಅನುಮಾನದಲ್ಲಿ ಪ್ರಾಮಾಣ್ಯವು ಪಕ್ಷ. ಅವೆರಡೂ ಅನುವ್ಯವಸಾಯ ವಿಷಯತ್ವಯೋಗ್ಯ ಎಂದು ಸಾಧ್ಯ. ಅದಕ್ಕೆ ಕಾರಣ ಇದು— ಜ್ಞಾನದಲ್ಲಿ ಜ್ಞಾನತ್ವ, ಪ್ರಾಮಾಣ್ಯ ಎಂಬ ಎರಡು ಧರ್ಮಗಳಿವೆ. ಅವುಗಳಲ್ಲಿ ಜ್ಞಾನತ್ವವು ಅನುವ್ಯವಸಾಯವೇದ್ಯ ಎನ್ನುವ ಬಗ್ಗೆ ವಿವಾದವಿಲ್ಲ. ಅಂದಮೇಲೆ ಪ್ರಾಮಾಣ್ಯದ ಬಗ್ಗೆ ಮಾತ್ರ ಏಕೆ ವಿವಾದ? ಒಂದು ವೇಳೆ ಅದರಲ್ಲಿ ಅನುವ್ಯವಸಾಯಗ್ರಹಣ ಅಯೋಗ್ಯವಾದ ಧರ್ಮಗಳು ಸೇರಿದ್ದರೆ, ಅದು ಅನುವ್ಯವಸಾಯವೇದ್ಯವಲ್ಲ, ಎನ್ನುವ ವಾದಕ್ಕೆ ಅರ್ಥವಿರುತ್ತಿತ್ತು. ಅಂತಹ ಧರ್ಮಗಳು ಪ್ರಾಮಾಣ್ಯದಲ್ಲಿ ಸೇರಿಲ್ಲ. ಆದ್ದರಿಂದ ಅದೂ ಅನುವ್ಯವಸಾಯಗ್ರಹಣ ಯೋಗ್ಯವಾಗಿದೆ.

ಹೀಗೆ ಇಲ್ಲಿ ಹೇಳಿದ ಅನೇಕ ಅನುಮಾನಗಳನ್ನು ಒಟ್ಟು ಏಳು ಗುಂಪುಗಳಲ್ಲಿ ವಿಂಗಡಿಸಬಹುದಾಗಿದೆ.

**ಅಪ್ರಾಮಾಣ್ಯಸ್ವತಃ ಏಕಲ್ಲ ?**

ಕೆಲವು ಜ್ಞಾನಗಳಲ್ಲಿ ಅಂದರೆ ಸುಖಾದಿಜ್ಞಾನಗಳಲ್ಲಿ ಪ್ರಾಮಾಣ್ಯವು ಅನುವ್ಯವಸಾಯ ವೇದ್ಯವಾಗಿದೆ ಎಂಬ ನಿದರ್ಶನದಿಂದ ಎಲ್ಲಾ ಅನುವ್ಯವಸಾಯಗಳಲ್ಲೂ ಪ್ರಾಮಾಣ್ಯವು ವಿಷಯವಾಗಿದೆ ಎಂದು ಸಾಧಿಸುವುದಾದಲ್ಲಿ ಅಪ್ರಾಮಾಣ್ಯವೂ ಹೀಗೆಯೇ ಆದೀತು. ಶುಕ್ತಿಯನ್ನು ನೋಡಿ ರಜತಜ್ಞಾನ ಬಂದು ಹತ್ತಿರ ಹೋಗಿ ಪರೀಕ್ಷಿಸಿ ಆ ಜ್ಞಾನವು ಅಪ್ರಾಮಾಣ, ಎಂದು ಮನಸ್ಸು ನಿರ್ಧರಿಸುತ್ತದೆ. ಅಲ್ಲಿ ಅನುವ್ಯವಸಾಯಕ್ಕೆ ಅಪ್ರಾಮಾಣ್ಯವು ವಿಷಯವಾದಂತೆ ಎಲ್ಲಾ ಅನುವ್ಯವಸಾಯಗಳಲ್ಲೂ ಅಪ್ರಾಮಾಣ್ಯವು ಏಕೆ ವಿಷಯವಾಗಬಾರದು?

ಈ ಪ್ರಶ್ನೆಗೆ ಉತ್ತರ ಸುಲಭ–ಮನಸ್ಸು ಯಾವುದನ್ನೇ ಗ್ರಹಿಸಬೇಕಾದರೂ ಅದಕ್ಕೆ ತಾನು ಗ್ರಹಿಸುವ ವಿಷಯದೊಂದಿಗೆ ಸನ್ನಿಕರ್ಷವಾಗಬೇಕು. ಅದು ಆತ್ಮಗತವಾದ ಜ್ಞಾನವನ್ನು ಗ್ರಹಿಸುತ್ತದೆ.

ಅದಕ್ಕೆ ಜ್ಞಾನದೊಂದಿಗೆ 'ಸಂಯುಕ್ತ ಸಮವಾಯ' ಸನ್ನಿಕರ್ಷ ಇದೆ. ಅದು ಘಟತ್ವ, ಘಟ, ಮತ್ತು ಅವುಗಳ ವೈಶಿಷ್ಟ್ಯಗಳನ್ನು ಗ್ರಹಿಸುತ್ತದೆ. ಆದಕ್ಕೆ ವ್ಯವಸಾಯ ರೂಪವಾದ ಜ್ಞಾನಲಕ್ಷಣಾ ಸನ್ನಿಕರ್ಷವಿದೆ. ಹೀಗೆ 'ಘಟತ್ವವತಿ ಘಟತ್ವಪ್ರಕಾರಕತ್ವ'ರೂಪವಾದ ಪ್ರಾಮಾಣ್ಯಶರೀರದಲ್ಲಿ ಮನಸ್ಸು ಗ್ರಹಿಸಲಾರದ ಯಾವ ಅಂಶವೂ ಇಲ್ಲ. ಆದರೆ, ಅಪ್ರಾಮಾಣ್ಯವೆಂದರೆ 'ರಜತತ್ವಾಭಾವವತಿ ರಜತತ್ವ ಪ್ರಕಾರಕತ್ವ'. ಇದರಲ್ಲಿ ಅಭಾವಾಂಶ ಸೇರಿದೆ. ಅದು ಸಾಕ್ಷಾತ್ತಾಗಲೀ ವ್ಯವಸಾಯದ್ವಾರಾ ಆಗಲೀ ಅನುವ್ಯವಸಾಯವಿಷಯವಲ್ಲ. ಭ್ರಾಂತಿರೂಪವಾದ ವ್ಯವಸಾಯವೂ ಪುರೋವರ್ತಿಯಲ್ಲಿ ರಜತತ್ವ ಇದೆ ಎಂದೇ ಗ್ರಹಿಸುತ್ತದೆ. ರಜತತ್ವಾಭಾವವನ್ನು ಗ್ರಹಿಸುತ್ತಿಲ್ಲ. ರಜತತ್ವ ಇಲ್ಲ, ಎಂದು ತಿಳಿಯುವುದು ಹತ್ತಿರ ಹೋಗಿ ಪರೀಕ್ಷಿಸಿ ನೋಡಿದಾಗ ಮಾತ್ರ. ಹೀಗೆ ಮನಸ್ಸು ಅಪ್ರಾಮಾಣ್ಯವನ್ನು ಗ್ರಹಣೆ ಮಾಡಬೇಕಾದರೆ, ಅದಕ್ಕೆ ವಿಸಂವಾದದ ಸಹಾಯಬೇಕು. ಆದ್ದರಿಂದ ಸಹಜವಾಗಿ ಮನಸ್ಸಿಗೆ ಅಪ್ರಾಮಾಣ್ಯವನ್ನು ಗ್ರಹಣೆ ಮಾಡುವ ಶಕ್ತಿ ಇಲ್ಲ, ಅದು ಆಹಿತಶಕ್ತಿ. ಆದ್ದರಿಂದ ಅಪ್ರಾಮಾಣ್ಯ ಪರತಃ ಗೃಹೀತವಾಗುತ್ತದೆ.

**ನ್ಯಾಯದೀಪದಲ್ಲಿ ವಿಶೇಷಾಂಶಗಳು–**ತರ್ಕತಾಂಡವ ಗ್ರಂಥವು ಮಣಿಗ್ರಂಥದ ವಿಮರ್ಶಾತ್ಮಕವಾದ ಕೃತಿಯಾದರೂ ಶ್ರೀವ್ಯಾಸರಾಜರು ಎಲ್ಲ ಕಡೆಯೂ ತಾವು ನಿರಾಕರಿಸುವ ಮಣಿಗ್ರಂಥದ ವಾಕ್ಯಗಳನ್ನು ಉಲ್ಲೇಖ ಮಾಡಿ ಖಂಡನೆ ಮಾಡುವುದಿಲ್ಲ. ಅಂತಹ ಸಂದರ್ಭದಲ್ಲಿ ಮಣಿಗ್ರಂಥದ ವಾಕ್ಯಗಳನ್ನು ಉಲ್ಲೇಖ ಮಾಡಿ ರಾಯರು ಈ ವಾಕ್ಯದ ವಿಮರ್ಶೆ ಇಲ್ಲಿ ನಡೆದಿದೆ ಎಂದು ತೋರಿಸುತ್ತಾರೆ. ಉದಾಹರಣೆಗೆ ಈ ಪುಸ್ತಕದ 197, 201, 204 ನೇ ಪುಟಗಳನ್ನು ನೋಡಬಹುದು.

ಇನ್ನು ಕೆಲವು ಕಡೆ ಪರತಸ್ತ್ವವಾದಕ್ಕೆ ತರ್ಕತಾಂಡವದಲ್ಲಿ ಹೇಳಿದ ದೋಷ ಮಾತ್ರವಲ್ಲದೆ, ದೋಷಾಂತರವೂ ಇದೆ, ಎಂದು ರಾಯರು ಸ್ವತಂತ್ರವಾಗಿ ಮಣಿಗ್ರಂಥಕ್ಕೆ ದೋಷವನ್ನು ಹೇಳುತ್ತಾರೆ. ಇದಕ್ಕೆ ಈ ಪುಸ್ತಕದ 205ನೇ ಪುಟವನ್ನು ನೋಡಬಹುದು.

ಕೆಲವು ಕಡೆ ಮೂಲದಲ್ಲಿ ಹೇಳಿದ ವಿಷಯದ ಮೇಲೆ ಆಕ್ಷೇಪ ಮಾಡಿ ಸಮಾಧಾನವನ್ನು ಕೊಟ್ಟು ಮೂಲವನ್ನು ಸಮರ್ಥಿಸಿದ್ದಿದೆ. ಉದಾಹರಣೆಗೆ, ಪುಟ.211.

**ಪ್ರಕರಣ ॥ ೩ ॥**

# ಪ್ರಕರಣ – 4

## ಸ್ವತಸ್ತ್ವಾನುಮಾನೇಷು ಬಾಧೋದ್ಧಾರಃ

### ನ್ಯಾಯದೀಪದಲ್ಲಿ ಅವತಾರಿಕೆ

**ನನು ಅಪ್ರಾಮಾಣ್ಯಘಟಕೋಪಾಧೇಃ ಅಭಾವಸ್ಯ ವ್ಯವಸಾಯ-ಅವಿಷಯತಯಾ ತದನುವ್ಯವಸಾಯ-ವೇದ್ಯತ್ವಮ್ ಅಪ್ರಾಮಾಣ್ಯಸ್ಯ ಬಾಧಿತಮ್ ಇತಿ ಯಥೋಚ್ಯತೇ ತಥೈವ ಪ್ರಾಮಾಣ್ಯಘಟಕೋಪಾಧೇಃ ಧರ್ಮ-ಧರ್ಮಿವೈಶಿಷ್ಟ್ಯಸ್ಯ ವ್ಯವಸಾಯ-ವಿಷಯತ್ವೇಽಪಿ ನ ತದನು-ವ್ಯವಸಾಯವಿಷಯತಾ । ತಸ್ಯ ಬಹಿರರ್ಥತ್ವಾತ್ । ಅನ್ಯಥಾ ಧರ್ಮ-ಧರ್ಮ್ಯಂಶೇ ಇವ ವೈಶಿಷ್ಟ್ಯೇ 'ಅಸ್ತಿ ನ ವಾ' ಇತಿ ಕದಾಪಿ ಸಂದೇಹೋ ನ ಸ್ಯಾತ್, ಇತಿ ಭಾವೇನ-**

**''ಅಸ್ತು ತಾವದಿದಂ ಪ್ರಾಮಾಣ್ಯಮ್ । ತಥಾಪಿ ಅನುವ್ಯವಸಾಯಾನಂತರಂ ವ್ಯವಸಾಯಸ್ಯ ಪ್ರಾಮಾಣ್ಯೇ, ಅರ್ಥಸ್ಯ ತದ್ವತ್ತ್ವೇ ಚ ಸಂಶಯಸ್ಯ ಅನುಭವಸಿದ್ಧತ್ವಾತ್ ನಾರ್ಥತದ್ವತ್ತ್ವಂ ತದ್ವಿಷಯಃ''**

**ಇತಿ ಮಣಿಕೃದುಕ್ತಂ (ಪು.207) ಹೃದಿಕೃತ್ವಾ ಶಂಕತೇ-ನನ್ವಿತಿ ॥**

ಪ್ರಾಮಾಣ್ಯವು ಅನುವ್ಯವಸಾಯಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಏಕೆಂದರೆ-ಅಪ್ರಾಮಾಣ್ಯದಲ್ಲಿ ಸೇರಿರುವ 'ಅಭಾವ' (ತದಭಾವವತಿ ಎಂಬಲ್ಲಿರುವ) ಎಂಬ ಉಪಾಧಿಯು ವ್ಯವಸಾಯದಲ್ಲಿ ಅವಿಷಯವಾದುದರಿಂದ ಅನುವ್ಯವಸಾಯದಲ್ಲೂ ಅವಿಷಯ. ಆದರಿಂದಾಗಿ ತದ್ಘಟಿತವಾದ ಅಪ್ರಾಮಾಣ್ಯವು ಅನುವ್ಯವಸಾಯವೇದ್ಯವಲ್ಲ. ಹೀಗೆ ಸ್ವತಸ್ತ್ವವಾದಿಗಳೇ ಹೇಳುತ್ತಾರೆ. ಅದರಂತೆಯೇ ಪ್ರಾಮಾಣ್ಯವೂ ಅನುವ್ಯವಸಾಯ ವೇದ್ಯವಲ್ಲ. ಪ್ರಾಮಾಣ್ಯ ಘಟಕವಾದ ಧರ್ಮ-ಧರ್ಮಿವೈಶಿಷ್ಟ್ಯವು (ತದ್ವತ್ತ್ವಾಂಶ) ವ್ಯವಸಾಯದಲ್ಲಿ ವಿಷಯವಾದರೂ ಅನುವ್ಯವಸಾಯದಲ್ಲಿ ವಿಷಯವಾಗಲು ಸಾಧ್ಯವಿಲ್ಲ. ಅದು ಬಾಹ್ಯಾರ್ಥ. ಮನಸ್ಸು ಹಾಗೂ ಸಾಕ್ಷಿಯು ಅಂತರಿಂದ್ರಿಯ. ಅದು ಒಳಗಿನ ವಸ್ತುಗಳನ್ನು ಗ್ರಹಿಸಬಹುದು. ಬಾಹ್ಯಾರ್ಥವನ್ನು ಗ್ರಹಿಸುವ ಸಾಮರ್ಥ್ಯ ಅದಕ್ಕಿಲ್ಲ. ಅಲ್ಲದೆ, ವೈಶಿಷ್ಟ್ಯವು ಸಾಕ್ಷಿವೇದ್ಯವಾದರೆ, ವಿಶೇಷ್ಯದ ಬಗ್ಗೆ ಹೇಗೆ ಸಂದೇಹವು ಬರುವುದಿಲ್ಲವೋ ಅದರಂತೆಯೇ ವೈಶಿಷ್ಟ್ಯದ ಬಗ್ಗೆಯೂ ಸಂದೇಹ ಬರಬಾರದು. ಆದರೆ, 'ನಾನು ತಿಳಿದ ರಜತತ್ವವು ಮುಂದಿರುವ ವಸ್ತುವಿನಲ್ಲಿ ಇದೆಯೋ ಇಲ್ಲವೋ' ಅರ್ಥಾತ್ 'ಪುರೋವರ್ತಿಯಲ್ಲಿ ಪ್ರಕಾರೀಭೂತಧರ್ಮದ ವೈಶಿಷ್ಟ್ಯವು ಇದೆಯೋ ಇಲ್ಲವೋ' ಎಂಬ

ಸಂದೇಹವು ಕೆಲವೊಮ್ಮೆ ಬರುತ್ತದೆ. ಇಂತಹ ಸಂದೇಹ ಅಥವಾ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಅನುಭವಸಿದ್ಧವಾಗಿದೆ. ಆದ್ದರಿಂದ ಪ್ರಾಮಾಣ್ಯವೂ ಅನುವ್ಯವಸಾಯ ಗಮ್ಯವಲ್ಲ.

ಇದು ಮಣಿಕಾರ ಮಾಡಿರುವ ಆಕ್ಷೇಪ. ಈ ಆಕ್ಷೇಪವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ ಇದೇ ಆಶಂಕೆಯನ್ನು ಮಾಡಲಾಗಿದೆ.

## ಸ್ವತಸ್ತ್ವಾನುಮಾನಗಳಲ್ಲಿ ಬಾಧಶಂಕಾಪರಿಹಾರ

**ननूक्तरूपं याथार्थ्यं न साक्षिणो अनुव्यवसायस्य वा विषयः। रजतत्वप्रकारकत्वे सन्देहादर्शनेन तस्य तद्विषयकत्वेऽपि रजतत्ववद्विशेष्यकत्वे संदेहदर्शनेन रजतत्ववत्वरूपे बहिरर्थे तस्यासामर्थ्यात्। तथाच स्वतस्त्वानुमानानि बाधितविषयाणीति चेन्न। सुखत्ववत्वादेर्बहिरर्थत्वाभावेन साक्षिवेद्यसुखादिज्ञाने स्वतः प्रामाण्याप्रतिहतेः ।**

ತದ್ವತಿ ತತ್‌ಪ್ರಕಾರಕತ್ವರೂಪವಾದ ಪ್ರಾಮಾಣ್ಯವು ಸಾಕ್ಷಿಗಾಗಲೀ ಅನುವ್ಯವಸಾಯಕ್ಕಾಗಲೀ ವಿಷಯವಲ್ಲ. ಜ್ಞಾನವು ರಜತತ್ವಪ್ರಕಾರಕ ಎಂಬ ವಿಷಯದಲ್ಲಿ ಸಂದೇಹ ಇರುವುದಿಲ್ಲ. ಆದ್ದರಿಂದ ಆ ಅಂಶವು ಸಾಕ್ಷಿಗ್ರಾಹ್ಯವಾಗಬಹುದು. ಆದರೆ ರಜತತ್ವವದ್-ವಿಶೇಷ್ಯಕತ್ವಾಂಶದಲ್ಲಿ ಕೆಲವೊಮ್ಮೆ ಸಂದೇಹ ಬರುತ್ತದೆ. 'ಇದಂ ರಜತಂ' ಎಂಬ ಜ್ಞಾನ ಬಂದ ಮೇಲೆ 'ಇಲ್ಲಿ ರಜತವು ಇದೆಯೋ ಇಲ್ಲವೋ' ಎಂದು ಸಂದೇಹ ಬರುತ್ತದೆ. ಇದರ ಅರ್ಥ-ಪುರೋವರ್ತಿಯಲ್ಲಿ ರಜತತ್ವ ವೈಶಿಷ್ಟ್ಯವು ಇದೆಯೋ ಇಲ್ಲವೋ ಅಥವಾ ಜ್ಞಾನವು ರಜತತ್ವವದ್-ವಿಶೇಷ್ಯಕವಾಗಿದೆಯೋ ಇಲ್ಲವೋ, ಎಂದು. ಒಂದುವೇಳೆ ಪ್ರಾಮಾಣ್ಯವು ಸಾಕ್ಷಿವೇದ್ಯವಾದರೆ ತದ್‌ಘಟಕವಾದ ರಜತತ್ವವೈಶಿಷ್ಟ್ಯಾಂಶವೂ ನಿಶ್ಚಿತವಾಗಿರುವುದರಿಂದ ಸಂದೇಹ ಬರಬಾರದು. ಆದರೆ, ಸಂದೇಹ ಬರುತ್ತಿದೆ. ಆದ್ದರಿಂದ ಬಹಿರರ್ಥವಾದ ಅದು ಸಾಕ್ಷಿಯೋಗ್ಯವಲ್ಲ. ಹೀಗೆ, ಸ್ವತಸ್ತ್ವ-ಸಾಧಕವಾದ ಅನುಮಾನಗಳು ಬಾಧದೋಷದಿಂದ ದುಷ್ಟವಾಗಿವೆ.

ಇದು ಸರಿಯಲ್ಲ. ರಜತತ್ವವತ್ವಾಂಶವು ಬಾಹ್ಯಾರ್ಥ, ಸಾಕ್ಷಿವಿಷಯವಲ್ಲ ಎಂದು ಒಪ್ಪಿಕೊಂಡರೂ ಸುಖಜ್ಞಾನದಲ್ಲಿರುವ ಸುಖತ್ವವದ್ವಿಶೇಷ್ಯಕತ್ವವು ಬಹಿರರ್ಥವಲ್ಲ. ಅದರಲ್ಲಿ ಸೇರಿರುವ ಸುಖತ್ವ, ಸುಖತ್ವವತ್ವ (ಸುಖತ್ವಸಂಸರ್ಗ) ಎಲ್ಲವೂ ಆಂತರ. ಆದ್ದರಿಂದ ಸುಖಜ್ಞಾನಗತವಾದ ಪ್ರಾಮಾಣ್ಯವು ಸಾಕ್ಷಿವೇದ್ಯ ಎಂದು ಅನುಮಾನ ಮಾಡಿದರೆ ಬಾಧದೋಷ ಇಲ್ಲ. ಆದರ ಪ್ರಾಮಾಣ್ಯಸ್ವತಸ್ತ್ವವು ನಿರಾಬಾಧವಾಗಿ ಸಿದ್ಧವಾಗುತ್ತದೆ.

# ಪ್ರಕರಣ – 4

## ಸ್ವತಸ್ತ್ವಾನುಮಾನೇಷು ಬಾಧೋದ್ಧಾರಃ

### ನ್ಯಾಯದೀಪದಲ್ಲಿ ಅವತಾರಿಕೆ

**ನನು ಅಪ್ರಾಮಾಣ್ಯಘಟಕೋಪಾಧೇಃ ಅಭಾವಸ್ಯ ವ್ಯವಸಾಯ-ಅವಿಷಯತಯಾ ತದನುವ್ಯವಸಾಯ-ವೇದ್ಯತ್ವಮ್ ಅಪ್ರಾಮಾಣ್ಯಸ್ಯ ಬಾಧಿತಮ್ ಇತಿ ಯಥೋಚ್ಯತೇ ತಥೈವ ಪ್ರಾಮಾಣ್ಯಘಟಕೋಪಾಧೇಃ ಧರ್ಮ-ಧರ್ಮಿವೈಶಿಷ್ಟ್ಯಸ್ಯ ವ್ಯವಸಾಯ-ವಿಷಯತ್ವೇಽಪಿ ನ ತದನು-ವ್ಯವಸಾಯವಿಷಯತಾ । ತಸ್ಯ ಬಹಿರರ್ಥತ್ವಾತ್ । ಅನ್ಯಥಾ ಧರ್ಮ-ಧರ್ಮ್ಯಂಶೇ ಇವ ವೈಶಿಷ್ಟ್ಯೇ 'ಅಸ್ತಿ ನ ವಾ' ಇತಿ ಕದಾಪಿ ಸಂದೇಹೋ ನ ಸ್ಯಾತ್, ಇತಿ ಭಾವೇನ-**

**''ಅಸ್ತು ತಾವದಿದಂ ಪ್ರಾಮಾಣ್ಯಮ್ । ತಥಾಪಿ ಅನುವ್ಯವಸಾಯಾನಂತರಂ ವ್ಯವಸಾಯಸ್ಯ ಪ್ರಾಮಾಣ್ಯೇ, ಅರ್ಥಸ್ಯ ತದ್ವತ್ವೇ ಚ ಸಂಶಯಸ್ಯ ಅನುಭವಸಿದ್ಧತ್ವಾತ್ ನಾರ್ಥತದ್ವತ್ವಂ ತದ್ವಿಷಯಃ''**

**ಇತಿ ಮಣಿಕೃದುಕ್ತಂ (ಪು.207) ಹೃದಿಕೃತ್ವಾ ಶಂಕತೇ-ನನ್ವಿತಿ ।।**

ಪ್ರಾಮಾಣ್ಯವು ಅನುವ್ಯವಸಾಯಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಏಕೆಂದರೆ-ಅಪ್ರಾಮಾಣ್ಯದಲ್ಲಿ ಸೇರಿರುವ 'ಅಭಾವ' (ತದಭಾವವತಿ ಎಂಬಲ್ಲಿರುವ) ಎಂಬ ಉಪಾಧಿಯು ವ್ಯವಸಾಯದಲ್ಲಿ ಅವಿಷಯವಾದುದರಿಂದ ಅನುವ್ಯವಸಾಯದಲ್ಲೂ ಅವಿಷಯ. ಆದರಿಂದಾಗಿ ತದ್ಘಟಿತವಾದ ಅಪ್ರಾಮಾಣ್ಯವು ಅನುವ್ಯವಸಾಯವೇದ್ಯವಲ್ಲ. ಹೀಗೆ ಸ್ವತಸ್ತ್ವವಾದಿಗಳೇ ಹೇಳುತ್ತಾರೆ. ಅದರಂತೆಯೇ ಪ್ರಾಮಾಣ್ಯವೂ ಅನುವ್ಯವಸಾಯ ವೇದ್ಯವಲ್ಲ. ಪ್ರಾಮಾಣ್ಯ ಘಟಕವಾದ ಧರ್ಮ-ಧರ್ಮಿವೈಶಿಷ್ಟ್ಯವು (ತದ್ವತ್ವಾಂಶ) ವ್ಯವಸಾಯದಲ್ಲಿ ವಿಷಯವಾದರೂ ಅನುವ್ಯವಸಾಯದಲ್ಲಿ ವಿಷಯವಾಗಲು ಸಾಧ್ಯವಿಲ್ಲ. ಅದು ಬಾಹ್ಯಾರ್ಥ. ಮನಸ್ಸು ಹಾಗೂ ಸಾಕ್ಷಿಯು ಅಂತರಿಂದ್ರಿಯ. ಅದು ಒಳಗಿನ ವಸ್ತುಗಳನ್ನು ಗ್ರಹಿಸಬಹುದು. ಬಾಹ್ಯಾರ್ಥವನ್ನು ಗ್ರಹಿಸುವ ಸಾಮರ್ಥ್ಯ ಅದಕ್ಕಿಲ್ಲ. ಅಲ್ಲದೆ, ವೈಶಿಷ್ಟ್ಯವು ಸಾಕ್ಷಿವೇದ್ಯವಾದರೆ, ವಿಶೇಷ್ಯದ ಬಗ್ಗೆ ಹೇಗೆ ಸಂದೇಹವು ಬರುವುದಿಲ್ಲವೋ ಅದರಂತೆಯೇ ವೈಶಿಷ್ಟ್ಯದ ಬಗ್ಗೆಯೂ ಸಂದೇಹ ಬರಬಾರದು. ಆದರೆ, 'ನಾನು ತಿಳಿದ ರಜತತ್ವವು ಮುಂದಿರುವ ವಸ್ತುವಿನಲ್ಲಿ ಇದೆಯೋ ಇಲ್ಲವೋ' ಅರ್ಥಾತ್ 'ಪುರೋವರ್ತಿಯಲ್ಲಿ ಪ್ರಕಾರೀಭೂತಧರ್ಮದ ವೈಶಿಷ್ಟ್ಯವು ಇದೆಯೋ ಇಲ್ಲವೋ' ಎಂಬ

ಸಂದೇಹವು ಕೆಲವೊಮ್ಮೆ ಬರುತ್ತದೆ. ಇಂತಹ ಸಂದೇಹ ಅಥವಾ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಅನುಭವಸಿದ್ಧವಾಗಿದೆ. ಆದ್ದರಿಂದ ಪ್ರಾಮಾಣ್ಯವೂ ಅನುವ್ಯವಸಾಯ ಗಮ್ಯವಲ್ಲ.

ಇದು ಮಣಿಕಾರ ಮಾಡಿರುವ ಆಕ್ಷೇಪ. ಈ ಆಕ್ಷೇಪವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ ಇದೇ ಆಶಂಕೆಯನ್ನು ಮಾಡಲಾಗಿದೆ.

## ಸ್ವತಸ್ತ್ವಾನುಮಾನಗಳಲ್ಲಿ ಬಾಧಶಂಕಾಪರಿಹಾರ

**ननूक्तरूपं याथार्थ्यं न साक्षिणो अनुव्यवसायस्य वा विषयः। रजतत्वप्रकारकत्वे सन्देहादर्शनेन तस्य तद्विषयकत्वेऽपि रजतत्व-वद्विशेष्यकत्वे संदेहदर्शनेन रजतत्ववत्वरूपे बहिरर्थे तस्या-सामर्थ्यात्। तथाच स्वतस्त्वानुमानानि बाधितविषयाणीति चेन्न। सुखत्ववत्वादेर्बहिरर्थत्वाभावेन साक्षिवेद्यसुखादिज्ञाने स्वतः प्रामाण्याप्रतिहतेः ।**

ತದ್ವತಿ ತತ್‌ಪ್ರಕಾರಕತ್ವರೂಪವಾದ ಪ್ರಾಮಾಣ್ಯವು ಸಾಕ್ಷಿಗಾಗಲೀ ಅನುವ್ಯವಸಾಯಕ್ಕಾಗಲೀ ವಿಷಯವಲ್ಲ. ಜ್ಞಾನವು ರಜತತ್ವಪ್ರಕಾರಕ ಎಂಬ ವಿಷಯದಲ್ಲಿ ಸಂದೇಹ ಇರುವುದಿಲ್ಲ. ಆದ್ದರಿಂದ ಆ ಅಂಶವು ಸಾಕ್ಷಿಗ್ರಾಹ್ಯವಾಗಬಹುದು. ಆದರೆ ರಜತತ್ವವದ್-ವಿಶೇಷ್ಯಕತ್ವಾಂಶದಲ್ಲಿ ಕೆಲವೊಮ್ಮೆ ಸಂದೇಹ ಬರುತ್ತದೆ. 'ಇದಂ ರಜತಂ' ಎಂಬ ಜ್ಞಾನ ಬಂದ ಮೇಲೆ 'ಇಲ್ಲಿ ರಜತವು ಇದೆಯೋ ಇಲ್ಲವೋ' ಎಂದು ಸಂದೇಹ ಬರುತ್ತದೆ. ಇದರ ಅರ್ಥ-ಪುರೋವರ್ತಿಯಲ್ಲಿ ರಜತತ್ವ ವೈಶಿಷ್ಟ್ಯವು ಇದೆಯೋ ಇಲ್ಲವೋ ಅಥವಾ ಜ್ಞಾನವು ರಜತತ್ವವದ್-ವಿಶೇಷ್ಯಕವಾಗಿದೆಯೋ ಇಲ್ಲವೋ, ಎಂದು. ಒಂದುವೇಳೆ ಪ್ರಾಮಾಣ್ಯವು ಸಾಕ್ಷಿವೇದ್ಯವಾದರೆ ತದ್‌ಘಟಕವಾದ ರಜತತ್ವವೈಶಿಷ್ಟ್ಯಾಂಶವೂ ನಿಶ್ಚಿತವಾಗಿರುವುದರಿಂದ ಸಂದೇಹ ಬರಬಾರದು. ಆದರೆ, ಸಂದೇಹ ಬರುತ್ತಿದೆ. ಆದ್ದರಿಂದ ಬಹಿರರ್ಥವಾದ ಅದು ಸಾಕ್ಷಿಯೋಗ್ಯವಲ್ಲ. ಹೀಗೆ, ಸ್ವತಸ್ತ್ವ-ಸಾಧಕವಾದ ಅನುಮಾನಗಳು ಬಾಧದೋಷದಿಂದ ದುಷ್ಟವಾಗಿವೆ.

ಇದು ಸರಿಯಲ್ಲ. ರಜತತ್ವವತ್ತ್ವಾಂಶವು ಬಾಹ್ಯಾರ್ಥ, ಸಾಕ್ಷಿವಿಷಯವಲ್ಲ ಎಂದು ಒಪ್ಪಿಕೊಂಡರೂ ಸುಖಜ್ಞಾನದಲ್ಲಿರುವ ಸುಖತ್ವವದ್ವಿಶೇಷ್ಯಕತ್ವವು ಬಹಿರರ್ಥವಲ್ಲ. ಅದರಲ್ಲಿ ಸೇರಿರುವ ಸುಖತ್ವ, ಸುಖತ್ವವತ್ತ್ವ (ಸುಖತ್ವಸಂಸರ್ಗ) ಎಲ್ಲವೂ ಆಂತರ. ಆದ್ದರಿಂದ ಸುಖಜ್ಞಾನಗತವಾದ ಪ್ರಾಮಾಣ್ಯವು ಸಾಕ್ಷಿವೇದ್ಯ ಎಂದು ಅನುಮಾನ ಮಾಡಿದರೆ ಬಾಧದೋಷ ಇಲ್ಲ. ಅದರ ಪ್ರಾಮಾಣ್ಯಸ್ವತಸ್ತ್ವವು ನಿರಾಬಾಧವಾಗಿ ಸಿದ್ಧವಾಗುತ್ತದೆ.

## ನ್ಯಾಯದೀಪ

**ಉಕ್ತೇತಿ ।। ತದ್ವತಿ ತತ್ಪ್ರಕಾರಕ-ಜ್ಞಾನತ್ವರೂಪಮ್ ಇತ್ಯರ್ಥಃ । ವಕ್ಷ್ಯಮಾಣೋಪಪಾದನ-ಸೌಕರ್ಯಾಯ ಏತದುಕ್ತಿಃ । ಸ್ವರೂಪಜ್ಞಾನಂ ಸಾಕ್ಷೀತಿ ಸಿದ್ಧಾಂತಾವಷ್ಟಂಭೇನ ಆಹ-ಸಾಕ್ಷಿಣ ಇತಿ ।। ಮಾನಸ ಜ್ಞಾನಾನುಭವೋ ಅನುವ್ಯವಸಾಯಃ, ಇತಿ ಮತಾವಷ್ಟಂಭೇನ ಆಹ-ಅನುವ್ಯವಸಾಯಸ್ಯವೇತಿ ।। ತದ್ವದ್-ವಿಶೇಷ್ಯಕತ್ವ-ಸಂದೇಹಸ್ಯ ತದ್ವತ್ವ ಸಂದೇಹ ಪರ್ಯವಸಾನಾತ್ ರಜತತತ್ವವತ್ವರೂಪೇತ್ಯುಕ್ತಮ್ । ತಸ್ಯೇತಿ ।। ಅನುವ್ಯವಸಾಯಸ್ಯ ಇತ್ಯರ್ಥಃ ।**

ಮೂಲದಲ್ಲಿ 'ಉಕ್ತರೂಪ ಯಾಥಾರ್ಥ್ಯಂ' ಎಂದರೆ, ತದ್ವತಿ ತತ್ಪ್ರಕಾರಕಜ್ಞಾನತ್ವ ರೂಪವಾದುದು. ಇಂತಹ ಯಾಥಾರ್ಥ್ಯವನ್ನು ಪರಿಗಣಿಸಿದಾಗ ಪೂರ್ವಪಕ್ಷ-ಸಿದ್ಧಾಂತಗಳೆರಡನ್ನೂ ಸಮರ್ಥಿಸುವುದಕ್ಕೆ ಅನುಕೂಲವಾಗುತ್ತದೆ. ಅದಕ್ಕಾಗಿ ಅದನ್ನೇ ಮೂಲಕಾರರು ಹೇಳಿದ್ದಾರೆ.

ಮೂಲದಲ್ಲಿ ರಜತತ್ವವದ್ವಿಶೇಷ್ಯಕತ್ವದಲ್ಲಿ ಸಂದೇಹ ಬರುವುದರಿಂದ ರಜತತತ್ವವತ್ವವು ಬಹಿರರ್ಥವಾದ ಕಾರಣ ಸಾಕ್ಷಿವೇದ್ಯವಲ್ಲ, ಎನ್ನುವ ಕಾರಣ ಸಂಗತವಾಗುವುದಿಲ್ಲ. ಆದರೆ ಜ್ಞಾನದಲ್ಲಿ ರಜತತ್ವವದ್ವಿಶೇಷ್ಯಕತ್ವ ಸಂದೇಹವು ಪೂರೋವರ್ತಿಯಲ್ಲಿ ರಜತತ್ವ ಸಂದೇಹದಲ್ಲೇ ಪರ್ಯವಸಾನವಾಗುತ್ತದೆ. ಆದ್ದರಿಂದ ಅದು ಸಂಗತವಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಸರ್ವಪ್ರಾಮಾಣ್ಯಸ್ಯ ಸ್ವತಸ್ತ್ವಾನಾಪತ್ತೇಃ ಆಹ-ಕಿಂಚೇತಿ ।।**

ಮೇಲೆ ಹೇಳಿದ ಸಮಾಧಾನದಿಂದ ಸುಖಜ್ಞಾನಗತವಾದ ಪ್ರಾಮಾಣ್ಯಕ್ಕೆ ಮಾತ್ರ ಸ್ವತಸ್ತ್ವ ಸಿದ್ಧಿಯಾಗುತ್ತದೆ. ಬಾಹ್ಯಾರ್ಥವಿಷಯಕ-ಜ್ಞಾನದಲ್ಲಿ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುವುದಿಲ್ಲ. ಅದಕ್ಕಾಗಿ ಸಮಾಧಾನಾಂತರವನ್ನು ಹೇಳುತ್ತಾರೆ.

**किंच किं रजतत्वादिवैशिष्ट्यम् अनुव्यवसायाविषय एव, किं वा व्यवसायविषयतया तद्विषयोऽपि स्वातन्त्र्येण तदविषयः ? नाद्यः। अनुव्यवसायस्य ससंबन्धिकव्यवसायविषयक-साक्षात्कारत्वेन संबन्धितावच्छेदक-रजतत्वादिवैशिष्ट्य-विषयकत्वनियमात् । धर्म-धर्म्यंशयोरिव तद्वैशिष्ट्यांशेऽपि व्यवसायप्रत्यासत्तेः सत्वेन तदप्रतीतौ हेत्वभावाच्च।**

**'रजतं जानामि' इत्यनुव्यवसायेऽपि रजतरजतत्वयोः स्वरूपेणैव भाने तस्य 'पुरोवर्तिरजतत्वे जानामि' इति समूहालम्बनरूपानु व्यवसायात् विषयभेदाभावापाताच्च ।**

**व्यवसायगतस्य रजतत्व-वैशिष्ट्यविषयकत्वस्यासिद्ध्यापाताच्च। नह्यनुव्यवसायादन्येन तत्सिद्धिः। न च वैशिष्ट्यमगृह्णन्ननुव्यवसायः तद्विषयकत्वग्रहणे शक्तः ।**

ವೈಶಿಷ್ಟ್ಯವು ಅನುವ್ಯವಸಾಯ ವಿಷಯವಲ್ಲ, ಎನ್ನುವ ಪೂರ್ವಪಕ್ಷದಲ್ಲಿ ಎರಡು ರೀತಿಯ ಅಭಿಪ್ರಾಯವನ್ನು ಗ್ರಹಿಸಬಹುದು–

1. ರಜತತ್ವಾದಿ ಪ್ರಕಾರೀಭೂತಧರ್ಮಗಳ ವೈಶಿಷ್ಟ್ಯವು ಸಾಕ್ಷಾದ್ವಾ ಪರಂಪರಯಾ ವಾ ಅನುವ್ಯವಸಾಯಕ್ಕೆ ಸರ್ವಥಾ ವಿಷಯವಲ್ಲ.

2. ವ್ಯವಸಾಯ ವಿಷಯತ್ವೇನ ಅನುವ್ಯವಸಾಯಕ್ಕೆ ವಿಷಯವಾದರೂ ಸಾಕ್ಷಾತ್ ವಿಷಯವಲ್ಲ.

ಇವೆರಡರಲ್ಲಿ ಮೊದಲನೆಯ ಪಕ್ಷ ಉಚಿತವಲ್ಲ. ಅನುವ್ಯವಸಾಯಕ್ಕೆ ವ್ಯವಸಾಯವು ವಿಷಯ. ವ್ಯವಸಾಯವು ಜ್ಞಾನರೂಪವಾದುದರಿಂದ ಸಸಂಬಂಧಿಕ–ಪದಾರ್ಥ. ಸಸಂಬಂಧಿಕಪದಾರ್ಥವನ್ನು ವಿಷಯೀಕರಿಸುವ ಜ್ಞಾನಗಳು ಸಂಬಂಧಿತಾವಚ್ಛೇದಕವನ್ನೂ ವಿಷಯೀಕರಿಸುತ್ತವೆ. ಸಂಯೋಗವು ಪ್ರತಿಯೋಗಿ–ಅನುಯೋಗಿಗಳ ಸಂಬಂಧಿಯಾದ ಗುಣ. ಅದರ ಜ್ಞಾನ ಬರುವಾಗ 'ಭೂತಲದಲ್ಲಿ ಘಟದ ಸಂಯೋಗ' ಎಂದೇ ಜ್ಞಾನ ಬರುತ್ತದೆ, ಕೇವಲ 'ಸಂಯೋಗಃ' ಎಂದಿಷ್ಟೇ ಜ್ಞಾನ ಬರುವುದಿಲ್ಲ, ಪ್ರಕೃತದಲ್ಲಿ 'ಇದಂ ರಜತಮ್' ಎಂಬ ವ್ಯವಸಾಯವು ರಜತಸಂಬಂಧಿಯಾದ ಜ್ಞಾನ. ವ್ಯವಸಾಯದ ಸಂಬಂಧಿ–ರಜತ. ಸಂಬಂಧಿತಾ ರಜತನಿಷ್ಠಾ. ಸಂಬಂಧಿತಾವಚ್ಛೇದಕ ರಜತತ್ವವೈಶಿಷ್ಟ್ಯ. ಅದನ್ನೂ ಅನುವ್ಯವಸಾಯವು ವಿಷಯೀಕರಿಸಬೇಕು. ಆದ್ದರಿಂದ ವೈಶಿಷ್ಟ್ಯವು ಸರ್ವಥಾ ವಿಷಯವಲ್ಲ ಎನ್ನುವುದು ಯುಕ್ತವಲ್ಲ.

ಇನ್ನೂ ಒಂದು ಕಾರಣವಿದೆ–ಅನುವ್ಯವಸಾಯದಲ್ಲಿ ಧರ್ಮವಾದ ರಜತತ್ವ, ಧರ್ಮಿಯಾದ ರಜತಗಳು ತೋರುತ್ತವೆ. ಅವುಗಳು ಬಾಹ್ಯಾರ್ಥವಾದರೂ ವ್ಯವಸಾಯದಲ್ಲಿ ವಿಷಯವಾಗಿರುವುದರಿಂದ ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದ ಅನುವ್ಯವಸಾಯಕ್ಕೂ ವಿಷಯವಾಗಿವೆ. ಇದರಲ್ಲಿ ವಿವಾದವಿಲ್ಲ. ಇದೇ ಸಮರ್ಥನೆ ವೈಶಿಷ್ಟ್ಯಕ್ಕೂ ಸಮಾನ. ಅದೂ ವ್ಯವಸಾಯದಲ್ಲಿ ವಿಷಯವಾಗಿದೆ. ವ್ಯವಸಾಯಪ್ರತ್ಯಾಸತ್ತ್ಯಾ ಅನುವ್ಯವಸಾಯಕ್ಕೂ ವಿಷಯವಾಗಬೇಕು.

ಹೀಗೆ, ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ಭಾನವಾಗುವುದಿಲ್ಲ, ಎನ್ನುವುದಕ್ಕೆ ಕಾರಣವಿಲ್ಲ.

ಇನ್ನೊಂದು ಅನುಪಪತ್ತಿಯೂ ಇದೆ– 'ರಜತಂ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತ–ರಜತತ್ವಗಳ ವೈಶಿಷ್ಟ್ಯವು ತೋರದಿದ್ದರೆ ಆ ಧರ್ಮ–ಧರ್ಮಿಗಳು ವಿಷಕಲಿತವಾಗಿ ಅಂದರೆ ಸ್ವತಂತ್ರವಾಗಿ ತೋರುತ್ತವೆ, ಎನ್ನಬೇಕಾಗುತ್ತದೆ. ಆಗ 'ಪುರೋವರ್ತಿನಂ ರಜತತ್ವಂ ಚ ಜಾನಾಮಿ' ಎಂಬ ಅನುವ್ಯವಸಾಯಕ್ಕೂ 'ರಜತಂ ಜಾನಾಮಿ' ಎಂಬ ಅನುವ್ಯವಸಾಯಕ್ಕೂ ವ್ಯತ್ಯಾಸವೇ ಇಲ್ಲವಾದೀತು. ಏಕೆಂದರೆ, ಎರಡೂ ಅನುವ್ಯವಸಾಯಗಳು ಸ್ವರೂಪೇಣೈವ ರಜತ–ರಜತತ್ವಗಳನ್ನು ವಿಷಯೀಕರಿಸುತ್ತವೆ.

ವೈಶಿಷ್ಟ್ಯವು ಅನುವ್ಯವಸಾಯವಿಷಯ ಎಂದು ಹೇಳಿದರೆ ಈ ಆಪತ್ತಿ ಇಲ್ಲ. 'ರಜತಂ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತತ್ವವಿಶಿಷ್ಟವಾದ ರಜತವು ವಿಷಯ. 'ಪುರೋವರ್ತಿ ರಜತೇ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತ–ರಜತತ್ವಗಳು ವಿಷಕಲಿತವಾಗಿ ವಿಷಯ. ವೈಶಿಷ್ಟ್ಯವು ವಿಷಯವಲ್ಲ. ಹೀಗೆ ವ್ಯತ್ಯಾಸವನ್ನು ಹೇಳಬಹುದು.

ಇನ್ನೂ ಒಂದು ಅನುಪಪತ್ತಿ ಇದೆ–ವ್ಯವಸಾಯದಲ್ಲಿ ರಜತತ್ವ–ರಜತ–ವೈಶಿಷ್ಟ್ಯ ಏತತ್ ತ್ರಿತಯ–ವಿಷಯಕತ್ವ ಇದೆ. ಅದು ವ್ಯವಸಾಯದಲ್ಲಿ ಇದೆ, ಎಂದು ಗೊತ್ತಾಗುವುದು ವ್ಯವಸಾಯದ ಸ್ವರೂಪವನ್ನು ನಿರ್ಧರಿಸುವ ಅನುವ್ಯವಸಾಯದಿಂದ. ಒಂದುವೇಳೆ ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯವೇ ಅಲ್ಲವಾದರೆ ವ್ಯವಸಾಯದಲ್ಲಿ ವೈಶಿಷ್ಟ್ಯ–ವಿಷಯಕತ್ವವೇ ಸಿದ್ಧವಾಗಲಿಕ್ಕಿಲ್ಲ. ಅನುವ್ಯವಸಾಯ ಬಿಟ್ಟು ಇತರ ಪ್ರಮಾಣಗಳಿಂದ ಅದು ಸಿದ್ಧವಾಗುವುದಿಲ್ಲ. ಅನುವ್ಯವಸಾಯಕ್ಕೆ ವೈಶಿಷ್ಟ್ಯವು ವಿಷಯವಲ್ಲ. ಅನುವ್ಯವಸಾಯವು ವೈಶಿಷ್ಟ್ಯವನ್ನು ಗ್ರಹಿಸದಿದ್ದರೆ ಅದು ವ್ಯವಸಾಯದಲ್ಲಿ ವೈಶಿಷ್ಟ್ಯವಿಷಯಕತ್ವವನ್ನೂ ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದಲೂ ವೈಶಿಷ್ಟ್ಯವು ಅನುವ್ಯವಸಾಯವಿಷಯ ಎಂದು ಹೇಳಲೇಬೇಕು.

## ನ್ಯಾಯದೀಪ

**ಕಿಂಚೇತಿ ॥ 'ನಾರ್ಥತದ್ವತ್ತ್ವಂ ತದ್ವಿಷಯಃ' (ಮಣಿ.ಪು.207) ಇತಿ ಮಣ್ಯುಕ್ತೇಃ ಉಭಯಥಾ ಸಂಭವಾತ್, ಸ್ವಾತಂತ್ರ್ಯೇಣೇತಿ ಕೈಶ್ಚಿದ್ ವ್ಯಾಖ್ಯಾನಾತ್ ಚ ದ್ವೇಧಾ ವಿಕಲ್ಪಃ। ಸಂಬಂಧಿತೇತಿ ॥ ವ್ಯವಹಾರ ಸಂಬಂಧಿನಿ ರಜತೇ ಯಾ ಸಂಬಂಧಿತಾ ತದವಚ್ಛೇದಕೇತ್ಯರ್ಥಃ। ನಿಯಮಾದಿತಿ ॥ ಸಂಯೋಗ ಪ್ರತ್ಯಕ್ಷಾದೌ ತಥಾ ದರ್ಶನಾತ್ ಇತಿ ಭಾವಃ।**

**ನಚ ಸಂಯೋಗ–ನಿರ್ವಿಕಲ್ಪಕೇ ವ್ಯಭಿಚಾರಃ। ತದಭಾವಸ್ಯ ವಕ್ಷ್ಯಮಾಣತ್ವಾತ್, ತಸ್ಯಾಪಿ ಸಂಯೋಗ್ಯಂಶೇ ಸವಿಕಲ್ಪಕತ್ವಾಚ್ಚ।**

**ಸಾಕ್ಷಾತ್ಕಾರಪದೇನ ಅಸಾಧಾರಣ–ಧರ್ಮಪ್ರಕಾರೇಣ ಸಂಬಂಧಿಸಾಕ್ಷಾತ್ಕಾರಸ್ಯ ಅಭಿಪ್ರೇತತ್ವಾಚ್ಚ । ಅತ ಏವ ಗುಣತ್ವ–ಪ್ರಮೇಯತ್ವಾದಿ–ಸಾಮಾನ್ಯ ಪ್ರತ್ಯಾತ್ತಿಜನ್ಯೇ ಸಂಯೋಗಸಾಕ್ಷಾತ್ಕಾರೇ ನ ವ್ಯಭಿಚಾರಃ ।**

**ನ ಚೈವಮಪಿ ಸಂಯೋಗತ್ವ – ಸಾಮಾನ್ಯ – ಪ್ರತ್ಯಾಸತ್ತಿಜನ್ಯೇ ಸಂಯೋಗ ಸಾಕ್ಷಾತ್ಕಾರೇ ವ್ಯಭಿಚಾರಃ । ಏವಂ ಹಿ ಲೌಕಿಕೇತ್ಯಪಿ ಸಾಕ್ಷಾತ್ಕಾರೋ ವಿಶೇಷಣೀಯಃ ।**

ಮೂಲದಲ್ಲಿ ವೈಶಿಷ್ಟ್ಯವು ಅನುವ್ಯವಸಾಯವಿಷಯವಲ್ಲ, ಎಂಬ ಪಕ್ಷವನ್ನು ನಿರಾಕರಿಸಲು ವ್ಯವಸಾಯದ್ವಾರಾ ವಿಷಯವಲ್ಲವೋ, ಸಾಕ್ಷಾತ್ ವಿಷಯವಲ್ಲವೋ ಎಂದು ಎರಡು ವಿಕಲ್ಪಗಳನ್ನು ಮಾಡಲಾಗಿದೆ. ಈ ಎರಡು ವಿಕಲ್ಪಗಳು ಅಸಂಗತಗಳೇನೂ ಅಲ್ಲ. ಆದರಿಂದ ಮಣಿಕಾರನನ್ನು ನಿರಾಸಮಾಡಲಾಗಿದೆ. 'ನಾರ್ಥ–ತದ್ವತ್ತ್ವಂ ತಸ್ಯ ವಿಷಯಃ' (ಪು.207) ಎಂದು ಮಣಿವಾಕ್ಯ. ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯವಲ್ಲ, ಎಂದು ಸಾಮಾನ್ಯವಾಗಿ ಅಲ್ಲಿ ನಿಷೇಧ ಮಾಡಲಾಗಿದೆ. ಆ ವಾಕ್ಯವನ್ನು ಉಭಯನಿಷೇಧಪರವಾಗಿಯೂ ಅರ್ಥಮಾಡಬಹುದು. ರುಚಿದತ್ತಮಿಶ್ರರು ಅದಕ್ಕೆ ಹೀಗೂ ವ್ಯಾಖ್ಯಾನ ಮಾಡಿದ್ದಾರೆ–

**''ವಿಷಯ ಇತಿ ॥ ಸ್ವಾತಂತ್ರ್ಯೇಣ ಇತಿ ಶೇಷಃ । ಜ್ಞಾನವಿಷಯತಯಾ ಅನುವ್ಯವಸಾಯಸ್ಯ ತದ್ವತ್ತ್ವಂ ವಿಷಯ ಏವ ॥''**

ಇದರ ಅಭಿಪ್ರಾಯ–''ವೈಶಿಷ್ಟ್ಯವು ಸಾಕ್ಷಾತ್ತಾಗಿ ಅನುವ್ಯವಸಾಯಕ್ಕೆ ವಿಷಯವಲ್ಲ. ವ್ಯವಸಾಯವಿಷಯತಯಾ ಅದೂ ಅನುವ್ಯವಸಾಯಕ್ಕೆ ವಿಷಯವೇ ಆಗಿದೆ'' ಎಂದು. ಆದ್ದರಿಂದ ಮೂಲದಲ್ಲಿ ಎರಡು ವಿಕಲ್ಪಗಳನ್ನು ಮಾಡಲಾಗಿದೆ.

ಸಸಬಂಧಿಕಪದಾರ್ಥದ ಪ್ರತ್ಯಕ್ಷವು ಸಂಬಂಧಿತಾವಚ್ಛೇದಕವನ್ನು ವಿಷಯೀಕರಿಸುತ್ತದೆ, ಎಂಬ ಮೂಲೋಕ್ತ–ನಿಯಮಕ್ಕೆ ಸಂಯೋಗಪ್ರತ್ಯಕ್ಷವು ನಿದರ್ಶನ. ಈ ನಿಯಮಕ್ಕೆ ಸಂಯೋಗದ ನಿರ್ವಿಕಲ್ಪಕಜ್ಞಾನದಲ್ಲಿ ವ್ಯಭಿಚಾರ ಬರುತ್ತದೆ. ಆ ಜ್ಞಾನದಲ್ಲಿ ಸಂಯೋಗಮಾತ್ರ ತೋರುತ್ತದೆ. ಸಂಯೋಗತ್ವ, ಅನುಯೋಗಿ–ಪ್ರತಿಯೋಗಿಗಳು ತೋರುವುದಿಲ್ಲ. ಆದ್ದರಿಂದ ವ್ಯಭಿಚಾರ.

ಇದಕ್ಕುತ್ತರ–ನಿರ್ವಿಕಲ್ಪಕ ಪ್ರತ್ಯಕ್ಷವನ್ನು ಮುಂದೆ ಈ ಗ್ರಂಥದಲ್ಲಿ ನಿರಾಕರಿಸಲಾಗಿದೆ. ಆದ್ದರಿಂದ ಸಂಯೋಗಪ್ರತ್ಯಕ್ಷವೂ ಸಂಯೋಗ್ಯಂಶದಲ್ಲಿ ಪ್ರಕಾರವಾಗಿ ಸಂಯೋಗವನ್ನು ವಿಷಯೀಕರಿಸುತ್ತದೆ. ವ್ಯಭಿಚಾರವಿಲ್ಲ.

ಅಥವಾ ಸಾಕ್ಷಾತ್ಕಾರ ಎಂಬ ಪದಕ್ಕೆ ಅಸಾಧಾರಣಧರ್ಮಪ್ರಕಾರಕಸಂಬಂಧಿಕ ಸಾಕ್ಷಾತ್ಕಾರ, ಎಂದು ಅರ್ಥ. ಈಗ ನಿರ್ವಿಕಲ್ಪಕ ಸಂಗ್ರಹವಾಗುವುದಿಲ್ಲ. ಹೀಗೆ ವಿವಕ್ಷೆ ಮಾಡುವುದರಿಂದ

ಇನ್ನೊಂದು ಆಕ್ಷೇಪವೂ ಪರಿಹಾರವಾಗುತ್ತದೆ– ಗುಣತ್ವ ಅಥವಾ ಪ್ರಮೇಯತ್ವರೂಪ ಸಾಮಾನ್ಯಲಕ್ಷಣಾ–ಪ್ರತ್ಯಾಸತ್ತಿಯಿಂದ ಸಂಯೋಗದ ಪ್ರತ್ಯಕ್ಷ ಬಂದಾಗ ಅದರಲ್ಲಿ ಸಂಬಂಧಿ ತಾವಚ್ಛೇದಕವು ವಿಷಯವಲ್ಲ. ವ್ಯಭಿಚಾರ ಬಂತು. ಅಸಾಧರಣ ಧರ್ಮಪ್ರಕಾರೇಣ ಸಾಕ್ಷಾತ್ಕಾರ, ಎಂದು ವಿವಕ್ಷೆ ಮಾಡಿದಾಗ ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಸಾಮಾನ್ಯಲಕ್ಷಣಾಜನ್ಯ–ಜ್ಞಾನದಲ್ಲಿ ಗುಣತ್ವೇನ, ಪ್ರಮೇಯತ್ವೇನ ಸಂಯೋಗದ ಪ್ರತ್ಯಕ್ಷ ಬರುತ್ತದೆ. ಅವುಗಳು ಸಾಧಾರಣ ಧರ್ಮಗಳು. ಸಂಯೋಗತ್ವವು ಮಾತ್ರ ಅಸಾಧಾರಣ ಧರ್ಮ. ಹೀಗೆ ಆ ಪ್ರತ್ಯಕ್ಷಗಳು ಸಂಗೃಹೀತವಾಗುವುದಿಲ್ಲ. ಅಲ್ಲಿ ವ್ಯಭಿಚಾರವಿಲ್ಲ.

ಆದರೂ ಸಂಯೋಗತ್ವರೂಪ ಸಾಮಾನ್ಯಲಕ್ಷಣಾ ಜನ್ಯವಾದ ಪ್ರತ್ಯಕ್ಷದಲ್ಲಿ ಸಂಯೋಗತ್ವೇನ ಸಂಯೋಗಮಾತ್ರ ವಿಷಯವಾಗುವುದರಿಂದ ವ್ಯಭಿಚಾರ. ಅದರ ಪರಿಹಾರಕ್ಕಾಗಿ 'ಲೌಕಿಕ ಸಾಕ್ಷಾತ್ಕಾರ' ಎಂಬ ವಿವಕ್ಷೆಯನ್ನು ಮಾಡಬೇಕು. ಆ ಸಾಕ್ಷಾತ್ಕಾರವು ಅಲೌಕಿಕಸಾಕ್ಷಾತ್ಕಾರವಾಗಿರುವು ದರಿಂದ ವ್ಯಭಿಚಾರವಿಲ್ಲ.

ಹೀಗೆ ಸಂಬಂಧಿಯಾದ ಸಂಯೋಗದ ಸಂಯೋಗತ್ವೇನ ಲೌಕಿಕ ಪ್ರತ್ಯಕ್ಷಬಂದಾಗ ಸಂಬಂಧಿ ತಾವಚ್ಛೇದಕವಾದ ಅನುಯೋಗಿ–ಪ್ರತಿಯೋಗಿಗಳ ಪ್ರತ್ಯಕ್ಷವೂ ಬರುತ್ತದೆ. ಆದ್ದರಿಂದ ನಿಯಮಕ್ಕೆ ಚ್ಯುತಿ ಇಲ್ಲ.

## ನ್ಯಾಯದೀಪ

**ಧರ್ಮೇತಿ ॥ ಬಾಹ್ಯಾರ್ಥತ್ವೇಽಪಿ ರಜತಸ್ಥಂ ರಜತತ್ವಂ, ತದಾಧಾರಭೂತಂ ವಿಶೇಷ್ಯಂ ಚ ಯಥಾ ಅನುವ್ಯವಸಾಯಸ್ಯ ವಿಷಯಃ ತಥಾ ರಜತೇ ರಜತತ್ವವೈಶಿಷ್ಟ್ಯಮಪಿ ವಿಷಯೋಽಸ್ತು । ತಯೋಃ ವ್ಯವಸಾಯೋಪನೀತತ್ವೇ ತದ್ವತ್ವಸ್ಯಾಪಿ ವ್ಯವಸಾಯೋಪನೀತತ್ವಮಸ್ತು । ನ ಹಿ ವ್ಯವಸಾಯಃ ಸ್ವವಿಷಯಮಧ್ಯೇ ಧರ್ಮ–ಧರ್ಮಿಣೋರೇವ ಉಪನಾಯಕಃ, ನ ವೈಶಿಷ್ಟ್ಯಸ್ಯ ಇತ್ಯತ್ರ ಹೇತುಃ ಅಸ್ತಿ ಇತ್ಯರ್ಥಃ ।**

**ಪ್ರತ್ಯಾಸತ್ತೇರಿತಿ ಪರರೀತ್ಯಾ ಉಕ್ತಮ್ । ವ್ಯವಸಾಯವಿಷಯತ್ವಸ್ಯ ನಿಯಾಮಕಸ್ಯ ಸತ್ತ್ವೇನ ಇತಿ ವಾ ಅರ್ಥಃ ।**

ವೈಶಿಷ್ಟ್ಯವು ಬಾಹ್ಯಾರ್ಥವಾಗಿರುವುದರಿಂದ ಅನುವ್ಯವಸಾಯಕ್ಕೆ ವಿಷಯವಲ್ಲ, ಎನ್ನುವ ವಾದ ಸರಿಯಲ್ಲ. ರಜತದಲ್ಲಿರುವ ರಜತತ್ವ, ಆ ರಜತತ್ವಕ್ಕೆ ಆಶ್ರಯವಾದ ರಜತ ಇವೆರಡು ಹೇಗೆ ಅನುವ್ಯವಸಾಯಕ್ಕೆ ವಿಷಯವಾಗಿವೆಯೋ ಅದರಂತೆ ಅವೆರಡರ ವೈಶಿಷ್ಟ್ಯವೂ ಅನುವ್ಯವಸಾಯಕ್ಕೆ ವಿಷಯವಾಗಬೇಕು. ಅವೆರಡಕ್ಕೆ ವ್ಯವಸಾಯವು ಉಪನಾಯಕವಾಗುವುದಾದಲ್ಲಿ ವೈಶಿಷ್ಟ್ಯಕ್ಕೂ

ಅದು ಉಪನಾಯಕವಾಗಲಿ. ವ್ಯವಸಾಯವು ತನಗೆ ಮೂರೂ ವಿಷಯವಾದರೂ ಮೂರರಲ್ಲಿ ಧರ್ಮ ಮತ್ತು ಧರ್ಮಿಗಳಿಗೆ ಮಾತ್ರ ಉಪನಾಯಕ, ವೈಶಿಷ್ಟ್ಯಕ್ಕೆ ಉಪನಾಯಕವಲ್ಲ ಎನ್ನುವ ಪಕ್ಷಪಾತಕ್ಕೆ ಯಾವ ಕಾರಣವೂ ಇಲ್ಲ.

ಈ ಸಂದರ್ಭದಲ್ಲಿ ವ್ಯವಸಾಯವು ಪ್ರತ್ಯಾಸತ್ತಿ=ಸನ್ನಿಕರ್ಷ, ಎಂಬ ಮಾತು ಮೂಲದಲ್ಲಿ ಬಂದಿದೆ. ಅದು ಪರಮತರೀತ್ಯಾ. ಸ್ವಮತದಲ್ಲಿ ಜ್ಞಾನಲಕ್ಷಣಾ ಪ್ರತ್ಯಾಸತ್ತಿ ಇಲ್ಲ. ಅಥವಾ, ವ್ಯವಸಾಯೋಪನೀತ ಎಂದರೆ ಅನುವ್ಯವಸಾಯದಲ್ಲಿ ಧರ್ಮ-ಧರ್ಮಿಗಳು ತೋರಲು ವ್ಯವಸಾಯವು ನಿಯಾಮಕ, ಎಂದು ಅಭಿಪ್ರಾಯ.

## ನ್ಯಾಯದೀಪ

**ನನು ಧರ್ಮ-ಧರ್ಮ್ಯಂಶಯೋಃ ಸಂಶಯೋ ನ ಕದಾಚಿತ್, ತದ್ವತ್ತ್ವಾಂಶೇ ತು ಸೋಽಸ್ತಿ ಇತಿ ಸಂಶಯ ಏವ ತದಪ್ರತೀತೌ ಹೇತುಕಲ್ಪಕಃ, ಇತಿ ಚೇನ್ನ । ತಸ್ಯ ಅನ್ಯಥೋಪಪತ್ತೇಃ ವಕ್ಷ್ಯಮಾಣತ್ವಾತ್, ಇತಿ ಭಾವಃ ।**

ಧರ್ಮ-ಧರ್ಮಿ-ವೈಶಿಷ್ಟ್ಯ ಈ ಮೂರೂ ವ್ಯವಸಾಯದಲ್ಲಿ ವಿಷಯಗಳಾದರೂ ಅನುವ್ಯವಸಾಯದಲ್ಲಿ ಧರ್ಮ-ಧರ್ಮಿಗಳು ಮಾತ್ರವೇ ವಿಷಯಗಳಾಗುತ್ತವೆ. ಆದಕ್ಕೆ ನಿಯಾಮಕವಿದೆ. ಅನುವ್ಯವಸಾಯ ಬಂದ ಮೇಲೆ ಧರ್ಮ-ಧರ್ಮಿಗಳು ಇವೆಯೋ ಇಲ್ಲವೋ ಎಂಬ ಸಂದೇಹ ಬರುವುದಿಲ್ಲ. ಆದರೆ, ವೈಶಿಷ್ಟ್ಯದ ಬಗ್ಗೆ ಸಂದೇಹ ಬರುತ್ತದೆ. ಪುರೋವರ್ತಿಯಲ್ಲಿ ವೈಶಿಷ್ಟ್ಯವು ಇದೆಯೋ ಇಲ್ಲವೋ, ಎಂದು. ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ವಿಷಯವಾಗಿದ್ದಲ್ಲಿ ಆದರ ಸಂದೇಹ ಬರುತ್ತಿರಲಿಲ್ಲ. ಹೀಗೆ ಸಂದೇಹ ತದಭಾವಗಳೇ ಭಾನಾ-ಭಾನಗಳಿಗೆ ಹೇತು.

ಇದು ಸರಿಯಲ್ಲ. ವೈಶಿಷ್ಟ್ಯವು ಉತ್ಸರ್ಗತಃ ಅನುವ್ಯವಸಾಯ ವಿಷಯವಾದರೂ ಪ್ರತಿಬಂಧಕಗಳು ಇದ್ದಾಗ ವೈಶಿಷ್ಟ್ಯವು ಸತ್ವೇನ ಅನುವ್ಯವಸಾಯಕ್ಕೆ ವಿಷಯವಾಗುವುದಿಲ್ಲ. ಆಗ ಆದರ ಬಗ್ಗೆ ಸಂದೇಹ ಬರಬಹುದು. ಆದಕ್ಕಾಗಿ ವೈಶಿಷ್ಟ್ಯವು ಅನುವ್ಯವಸಾಯವಿಷಯತ್ವ ಯೋಗ್ಯವೇ ಅಲ್ಲ, ಎಂದು ಕಲ್ಪಿಸಬೇಕಾಗಿಲ್ಲ.

## ನ್ಯಾಯದೀಪ

**ನನು ವೈಶಿಷ್ಟ್ಯಸ್ಯಾಪಿ ಭಾನೇ ಭಾಸಮಾನ ವೈಶಿಷ್ಟ್ಯ-ಪ್ರತಿಯೋಗಿತ್ವರೂಪಸ್ಯ ರಜತತ್ವಾದಿಗತಸ್ಯ ಪ್ರಕಾರತ್ವಸ್ಯಾಪಿ ಭಾನಪ್ರಸಂಗೇನ 'ಇದಂ ರಜತತ್ವೇನ ಜಾನಾಮಿ' ಇತ್ಯನುವ್ಯವಸಾಯಃ ಭವೇತ್, ನತು 'ಇದಂ ರಜತಂ ಜಾನಾಮೀತಿ'। ಇತ್ಯತ ಆಹ-ರಜತಮಿತಿ ॥ ಅಪೀತಿ ಅಭ್ಯುಪಗಮ-ವಾದಃ । ರಜತ್ವೇನ, ಇತ್ಯೇವಾಕಾರಃ, ನ ತ್ವೇವಮ್, ತಥಾಪಿ, ಇತ್ಯರ್ಥಃ ।**

**ಯದ್ವಾ ವೈಶಿಷ್ಟ್ಯಸ್ಯ ಅನುವ್ಯವಸಾಯ–ಅವಿಷಯತ್ವೇ ದೋಷಾಂತರಮಾಹ – ರಜತಮಿತಿ ।। ನ ಕೇವಲಂ ಸಮೂಹಾಲಂಬನೇ, ಇತ್ಯಪೇರರ್ಥಃ । 'ಇದಂ ರಜತಮ್' ಇತಿ ವ್ಯವಸಾಯ–ಸಮಾನಾಕಾರತಯಾ ಉತ್ಪದ್ಯ-ಮಾನೇಽಪಿ ಇತಿ ವಾ ಅರ್ಥಃ ।**

**ಸ್ವರೂಪೇಣೈವ ।। ಅಸಂಬದ್ಧತಯೈವ ಇತ್ಯರ್ಥಃ । ಅಸಿದ್ಧೇತಿ ।। ರಜತ–ರಜತತ್ವಯೋಃ ಸ್ವರೂಪೇಣೈವ ಭಾನೇ ಇತ್ಯನುಕರ್ಷಃ । ತದ್ವಿಷಯಕತ್ವೇತಿ ।। ವೈಶಿಷ್ಟ್ಯವಿಷಯಕತ್ವೇತ್ಯರ್ಥಃ ।**

ಅನುವ್ಯವಸಾಯದಲ್ಲಿ ಧರ್ಮ–ಧರ್ಮಿಗಳ ವೈಶಿಷ್ಟ್ಯವು ತೋರಿದರೆ ಇನ್ನೊಂದು ಬಾಧಕವಿದೆ–ಜ್ಞಾನದಲ್ಲಿ ಭಾಸಮಾನವಾದ ವೈಶಿಷ್ಟ್ಯಕ್ಕೆ ಯಾವುದು ಪ್ರತಿಯೋಗಿಯೋ ಅದು ಪ್ರಕಾರ. 'ಘಟವದ್ ಭೂತಲಂ' ಎಂಬ ಜ್ಞಾನದಲ್ಲಿ ಘಟಭೂತಲಗಳಿಗೆ ವೈಶಿಷ್ಟ್ಯವು ಭಾಸಮಾನವಾಗಿದೆ. ಅದಕ್ಕೆ ಪ್ರತಿಯೋಗಿ ಘಟ. ಆದ್ದರಿಂದ ಘಟವು ಆ ಜ್ಞಾನದಲ್ಲಿ ಪ್ರಕಾರ. ಅನುವ್ಯವಸಾಯದಲ್ಲಿ ವ್ಯವಸಾಯವಿಷಯತ್ವೇನ ವೈಶಿಷ್ಟ್ಯವು ಭಾನವಾಗಬೇಕು ಅಂದರೆ, ಈ ವ್ಯವಸಾಯದಲ್ಲಿ ರಜತತ್ವ–ರಜತಗಳಿಗೆ ಸಂಬಂಧವು ವಿಷಯವಾಗಿದೆ, ಆ ಸಂಬಂಧಕ್ಕೆ ಪ್ರತಿಯೋಗಿ ರಜತತ್ವ ಎಂದು ಅನುವ್ಯವಸಾಯವು ತಿಳಿಸುತ್ತದೆ, ಎಂದರ್ಥ. ಅಲ್ಲಿಗೆ, ರಜತತ್ವದಲ್ಲಿ ಭಾಸಮಾನವೈಶಿಷ್ಟ್ಯ ಪ್ರತಿಯೋಗಿತ್ವವನ್ನು ಅನುವ್ಯವಸಾಯವು ಗ್ರಹಿಸುತ್ತದೆ ಎಂದಂತಾಯಿತು. ಇದೇ ಪ್ರಕಾರತ್ವ. ಇದನ್ನು ಅನುವ್ಯವಸಾಯವು ವಿಷಯೀಕರಿಸಿದರೆ ಅದರ ಅಭಿಲಾಪಕ ಶಬ್ದದಲ್ಲಿ ಪ್ರಕಾರತಾಬೋಧಕವಾದ ತೃತೀಯಾವಿಭಕ್ತಿ ಬಂದು 'ಇದಂ ರಜತತ್ವೇನ ಜಾನಾಮಿ' ಎಂದು ಅಭಿಲಾಪ ಮಾಡಬೇಕಾದೀತು. ಇದರ ಅರ್ಥ–'ಪುರೋವರ್ತಿ ವಿಶೇಷ್ಯಕ, ರಜತತ್ವಪ್ರಕಾರಕ ಜ್ಞಾನವಾನ್ ಅಹಂ' ಎಂದು. ಹೊರತು, 'ಇದಂ ರಜತಂ ಜಾನಾಮಿ' ಎಂದು ಇರಬಾರದು. ಈ ಆಶಂಕೆಗೆ ಉತ್ತರವನ್ನು–'ರಜತಂ ಜಾನಾಮಿ' ಇತ್ಯನುವ್ಯವಸಾಯೇಽಪಿ' ಇತ್ಯಾದಿ ಮೂಲದಲ್ಲಿ ಕೊಡಲಾಗಿದೆ.

ಈ ವಾಕ್ಯದಲ್ಲಿರುವ 'ಅಪಿ' ಶಬ್ದವು 'ರಜತಂ ಜಾನಾಮಿ' ಎಂಬ ಅನುವ್ಯವಸಾಯದ ಆಕಾರವು ಅಭ್ಯುಪಗಮವಾದ ಎಂದು ಸೂಚಿಸುತ್ತದೆ. ವಸ್ತುತಃ 'ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯದ ಆಕಾರ, ಹೊರತು 'ರಜತಂ ಜಾನಾಮಿ' ಎಂದಲ್ಲ. ಆದರೂ ಈ ಆಕಾರವನ್ನು ಒಪ್ಪಿಕೊಂಡು ದೋಷವನ್ನು ಹೇಳಲಾಗುತ್ತದೆ, ಎಂದು ತಾತ್ಪರ್ಯ.

ಅಥವಾ ವೈಶಿಷ್ಟ್ಯವು ಅನುವ್ಯವಸಾಯವಿಷಯವಲ್ಲ, ಎಂದರೆ ಈ ವಾಕ್ಯದಿಂದ ದೋಷಾಂತರವನ್ನು ಹೇಳಲಾಗಿದೆ. ಈ ವ್ಯಾಖ್ಯಾನ ಮಾಡಿದಾಗ ಅಪಿ ಶಬ್ದ ಸಮುಚ್ಚಯಾರ್ಥಕ–ಸಮೂಹಾಲಂಬನದಲ್ಲಿ ಮಾತ್ರ ರಜತ–ರಜತತ್ವಗಳು ಸ್ವತಂತ್ರವಾಗಿ ತೋರುವುದಲ್ಲ, 'ರಜತಂ

ಜಾನಾಮಿ' ಎಂಬ ಜ್ಞಾನದಲ್ಲೂ ಅವುಗಳು ಸ್ವತಂತ್ರವಾಗಿ ತೋರುತ್ತವೆ, ಎನ್ನುವುದಾದಲ್ಲಿ ಎಂದು ಭಾವ.

(ಮುಂದಿನ ನ್ಯಾಯದೀಪದ ವಾಕ್ಯವು ಕೆಲವು ಹಸ್ತಪ್ರತಿಗಳಲ್ಲಿ ಇಲ್ಲ. ಅದಿಲ್ಲದಿರುವುದೇ ಸೂಕ್ತವೆನಿಸುತ್ತದೆ.)

## ವೈಶಿಷ್ಟ್ಯ ವಿಷಯತ್ವ ಪ್ರಮಾಣಾಂತರ ಗ್ರಾಹ್ಯ

**ननु वैशिष्ट्यविषयकव्यवहारादिलिङ्गकानुमित्या व्यवसाय-प्रामाण्यानुमित्या वा तत्सिद्धिः। न त्वनुव्यवसायेन। 'इदं रजतत्वेन जानामि' इति हि तदाकारो नतु 'इदं रजतम्' इति । तृतीयार्थश्च न वैशिष्ट्यम्। व्यवसायेऽपि तदर्थोल्लेखापत्तेः । किं तु व्यवसायगतं रजतत्वप्रकारकत्वम् । तस्माद्वैशिष्ट्यं नानुव्यवसायविषय इति चेत् मैवं।**

**ಪೂರ್ವಪಕ್ಷ**–ವ್ಯವಸಾಯದಲ್ಲಿ ಧರ್ಮ–ಧರ್ಮಿ–ವೈಶಿಷ್ಟ್ಯವು ಅನುವ್ಯವಸಾಯ ಸಿದ್ಧವಲ್ಲ. ಅದು ಪ್ರಮಾಣಾಂತರ ಗಮ್ಯ. ಅದಕ್ಕೆ ಪ್ರಮಾಣಗಳು ಎರಡು–

1. ಜಲಜ್ಞಾನಂ ವೈಶಿಷ್ಟ್ಯವಿಷಯಕಂ, ವೈಶಿಷ್ಟ್ಯವಿಷಯ–ವ್ಯವಹಾರ–ಜನಕತ್ವಾತ್,

'ಇದಂ ಜಲಂ' ಎಂಬ ಜ್ಞಾನ ಬಂದಮೇಲೆ ನೀರಿನ ಕಡೆ ಹೋದಾಗ ನೀರು ದೊರಕಿತು. ಆಮೇಲೆ ನೀರಿನ ಕುರಿತು ಅವನು ಮಾಡಿದ ವ್ಯವಹಾರ ಅಂದರೆ, ಶಬ್ದಪ್ರಯೋಗ ಅಥವಾ ಗಮನವು ವೈಶಿಷ್ಟ್ಯವಿಷಯಕವಾದುದರಿಂದ ವ್ಯವಸಾಯವೂ ತದ್ವಿಷಯಕ.

2. ಅಥವಾ, 'ಜಲಜ್ಞಾನಂ ಪ್ರಮಾಣಂ, ಸಫಲಪ್ರವೃತ್ತಿ–ಜನಕತ್ವಾತ್' ಎಂಬ ಅನುಮಾನ ದಿಂದ ಜಲಜ್ಞಾನದಲ್ಲಿ ಪ್ರಾಮಾಣ್ಯಸಿದ್ಧವಾಗುತ್ತದೆ. ಪ್ರಾಮಾಣ್ಯ ಎಂದರೆ ತದ್ವತಿ ತತ್‌ಪ್ರಕಾರಕತ್ವ. ತದ್ವತಿ ಎಂದರೆ ವಿಶೇಷಣವೈಶಿಷ್ಟ್ಯವತಿ, ಎಂದೇ ಅರ್ಥ. ಹೀಗೆ ಪ್ರಾಮಾಣ್ಯಾನುಮಿತಿಯಿಂದ ಜಲಜ್ಞಾನದಲ್ಲಿ ವೈಶಿಷ್ಟ್ಯವಿಷಯಕತ್ವವು ಸಿದ್ಧವಾಗುತ್ತದೆ. ಅನುವ್ಯವಸಾಯದಿಂದಲ್ಲ. ಏಕೆಂದರೆ, ಅನುವ್ಯವಸಾಯದ ಆಕಾರ 'ಇದಂ ರಜತತ್ವೇನ ಜಾನಾಮಿ' ಎಂದು. ಹೊರತು, 'ರಜತಂ ಜಾನಾಮಿ' ಎಂದಲ್ಲ. ಹೀಗಿದ್ದರೆ ಅನುವ್ಯವಸಾಯವು ವೈಶಿಷ್ಟ್ಯವಿಷಯಕವಾಗುತ್ತಿತ್ತು. ಏಕೆಂದರೆ, ರಜತಂ ಎಂದರೆ 'ರಜತತ್ವವಿಶಿಷ್ಟಂ' ಎಂದೇ ಅರ್ಥ. ಆಗ ರಜತತ್ವವೈಶಿಷ್ಟ್ಯವೂ ಅನುವ್ಯವಸಾಯಕ್ಕೆ ವಿಷಯವಾಗುತ್ತಿತ್ತು. ಅನುವ್ಯವಸಾಯ ಹಾಗೆ ಬರುವುದೇ ಇಲ್ಲ.

'ಇದಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದ ಅಭಿಲಾಪ. ಅಲ್ಲಿ ತೃತೀಯಾವಿಭಕ್ತಿಯ ಅರ್ಥ. ವೈಶಿಷ್ಟ್ಯವಲ್ಲ. ಹಾಗಿದ್ದಲ್ಲಿ ವೈಶಿಷ್ಟ್ಯವು ವ್ಯವಸಾಯದಲ್ಲಿ ವಿಷಯವಾದುದರಿಂದ 'ರಜತಂ ಇದಂ' ಎಂದಂತೆ 'ರಜತತ್ವೇನ ಇದಮ್' ಎಂದೂ ವ್ಯವಸಾಯವನ್ನು ಅಭಿಲಾಪ ಮಾಡಬೇಕಾದೀತು. ರಜತತ್ವೇನ ಎಂದರೆ 'ರಜತತ್ವವಿಶಿಷ್ಟಮ್ (ಇದಮ್)' ಎಂದರ್ಥ. ವ್ಯವಸಾಯವು 'ಪುರೋವೃತ್ತಿಯು ರಜತತ್ವವಿಶಿಷ್ಟ' ಎಂದು ವಿಷಯೀಕರಿಸುವುದರಿಂದ ಆ ಅಭಿಲಾಪವೂ ಯುಕ್ತವಾಗಬೇಕಾದೀತು. ಆದ್ದರಿಂದ ತೃತೀಯಾರ್ಥ 'ಪ್ರಕಾರಕತ್ವಮ್' 'ರಜತತ್ವಪ್ರಕಾರಕಮಿದಂ' ಎಂದರ್ಥ. ರಜತತ್ವಪ್ರಕಾರಕತ್ವವು ಇರುವುದು ವ್ಯವಸಾಯದಲ್ಲಿ. ವ್ಯವಸಾಯದಲ್ಲಿರುವ ಪ್ರಕಾರಕತ್ವವನ್ನು ಅದನ್ನು ಗ್ರಹಿಸುವ ಅನುವ್ಯವಸಾಯವು ಗ್ರಹಿಸುತ್ತದೆ. ವ್ಯವಸಾಯ ಗ್ರಹಿಸುವುದು ರಜತವನ್ನು. ಅದರಲ್ಲಿ ರಜತತ್ವವಿದೆ, ರಜತತ್ವ-ಪ್ರಕಾರಕತ್ವ ಇಲ್ಲ. ಆದ್ದರಿಂದ ವ್ಯವಸಾಯದ ಉಲ್ಲೇಖ 'ರಜತತ್ವೇನ' ಎಂದು ಬರುವುದಿಲ್ಲ.

ಹೀಗೆ 'ಇದಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯವು ಪುರೋವರ್ತಿಯಲ್ಲಿ ರಜತತ್ವ ವೈಶಿಷ್ಟ್ಯವನ್ನು ವಿಷಯೀಕರಿಸುತ್ತಿಲ್ಲ. ಆದ್ದರಿಂದ ವೈಶಿಷ್ಟ್ಯವು ಅನುವ್ಯವಸಾಯದಲ್ಲಿ ವಿಷಯವಲ್ಲ. ಅರ್ಥಾತ್ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ. ಇದು ಪೂರ್ವಪಕ್ಷ.

## ನ್ಯಾಯದೀಪ

**ವ್ಯವಹಾರಾದೀತಿ ॥ ಪ್ರವೃತ್ತಿಃ ಆದಿಪದಾರ್ಥಃ ।**

**1. ವ್ಯವಸಾಯಃ ವೈಶಿಷ್ಟ್ಯವಿಷಯಕಃ ತದ್ವಿಷಯಕವ್ಯವಹಾರ-ಪ್ರವೃತ್ತಿ-ಹೇತುತ್ವಾತ್, ಸಮ್ಮತವತ್ । ಇತ್ಯನುಮಿತ್ಯಾ,**

**2. ಇದಂ ಜ್ಞಾನಂ ಪ್ರಮಾಣಂ, ಸಮರ್ಥಪ್ರವೃತ್ತಿಹೇತುತ್ವಾತ್, ಇತಿ ಪ್ರಾಮಾಣ್ಯಾನುಮಿತ್ಯಾ ವೇತ್ಯರ್ಥಃ । ತದ್ವದ್-ವಿಶೇಷ್ಯಕತ್ವಸ್ಯ ಪ್ರಾಮಾಣ್ಯ-ರೂಪತ್ವಾತ್ ಇತಿ ಭಾವಃ ।**

**ತತ್ಸಿದ್ಧಿಃ ॥ ವ್ಯವಸಾಯೇ ವೈಶಿಷ್ಟ್ಯವಿಷಯಕತ್ವಸಿದ್ಧಿಃ ಇತ್ಯರ್ಥಃ ।**

**'ಇದಂ ರಜತಂ ಜಾನಾಮಿ' ಇತಿ ನಾನುವ್ಯವಸಾಯಾಕಾರಃ । ಬಹಿರ್ವಿಶೇಷ್ಯಕೇ ಮನಸೋಽಸಾಮರ್ಥ್ಯಾತ್ । ಕಿಂತು 'ಇದಂ (ಇದಂತ್ವೇನ) ರಜತತ್ವೇನ ಜಾನಾಮೀತಿ ॥' (ಪು.209) ಇತ್ಯಾದಿ ಮಣ್ಯುಕ್ತಮಾಹ – ಇದಂ ರಜತ್ವೇನೇತಿ ॥**

ವ್ಯವಹಾರಹೇತುಕಾನುಮಿತಿಯಿಂದಾಗಲೀ, ಪ್ರಾಮಾಣ್ಯಾನುಮಿತಿಯಿಂದಾಗಲಿ, ವ್ಯವಸಾಯಕ್ಕೆ ವೈಶಿಷ್ಟ್ಯವಿಷಯಕತ್ವವು ಸಿದ್ಧವಾಗುತ್ತದೆ. ಆ ಎರಡು ಅನುಮಾನಗಳನ್ನು ನ್ಯಾಯದೀಪದಲ್ಲಿ ತೋರಿಸಲಾಗಿದೆ.

ಮಣಿಯಲ್ಲಿ ಉಲ್ಲೇಖಮಾಡಿರುವ ಅನುವ್ಯವಸಾಯದ ಆಕಾರವನ್ನು ಮೂಲದಲ್ಲಿ ತಿಳಿಸಲಾಗಿದೆ.

## ಪ್ರಮಾಣಾಂತರಸಿದ್ಧಿ ನಿರಾಸ

**वैशिष्ट्यविषयत्वास्यानुमेयत्वेऽनुमितितः प्राक्तत्र कदाचित्संशयाद्यापातात्। भासमानवैशिष्ट्यप्रतियोगित्वादन्यस्य प्रकारत्वस्याभावेन 'इदं रजतत्वेन जानामि' इत्याकारेणैवानुव्यवसाये धर्मधर्म्यंशविषयकत्वस्येव वैशिष्ट्यविषयकत्वस्यापि भानेऽनुभवसिद्धे तत्त्यागेनान्यतस्तत्सिद्धिकल्पने धर्मधर्म्यंशविषयकत्वस्याप्यन्यतः सिद्धिकल्पनापाताच्च ।**

**न च व्यवसायस्य वैशिष्ट्यविषयकत्वमगृह्णन् धर्म्यंशादिविषयकत्वमात्रं गृह्णन्नन्योऽनुव्यवसायोऽनुभूयते ।**

ವೈಶಿಷ್ಟ್ಯವಿಷಯಕತ್ವವು ಅನುವ್ಯವಸಾಯಗಮ್ಯವಲ್ಲ, ಅನುಮೇಯವಾದರೆ ಅನುಮಿತಿ ಬರುವುದಕ್ಕೆ ಕಾಲವ್ಯವಧಾನಬೇಕಾದುದರಿಂದ ಅನುಮಿತಿ ಬರುವ ಮೊದಲು 'ವ್ಯವಸಾಯವು ರಜತತ್ವವಿಶಿಷ್ಟವಿಷಯಕವಾಗಿದೆಯೋ, ಇಲ್ಲವೋ, ಎಂಬ ಸಂದೇಹವು ಬರಬೇಕಾದೀತು. ಆದರೆ ಎಂದೂ ಅಂತಹ ಸಂದೇಹವು ಬರುವುದಿಲ್ಲ. ಆದಕಾರಣ, ವೈಶಿಷ್ಟ್ಯವಿಷಯಕತ್ವವು ವ್ಯವಸಾಯದ ದ್ವಿತೀಯಕ್ಷಣದಲ್ಲೇ ಹುಟ್ಟುವ ಅನುವ್ಯವಸಾಯಕ್ಕೆ ವಿಷಯವಾಗುತ್ತದೆ.

'ಇದಂ ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯದ ಆಕಾರವಾದರೂ ಅಲ್ಲಿರುವ ತೃತೀಯಾವಿಭಕ್ತಿಗೆ 'ಪ್ರಕಾರತ್ವಂ' ಎಂದೇ ಅರ್ಥ. ಪ್ರಕಾರತಾ ಎಂದರೆ ಭಾಸಮಾನ ವೈಶಿಷ್ಟ್ಯಪ್ರತಿಯೋಗಿತ್ವ. 'ಇದಂ ರಜತಂ' ಎಂಬ ಜ್ಞಾನದಲ್ಲಿ ರಜತತ್ವದ ವೈಶಿಷ್ಟ್ಯವು ಭಾಸಮಾನವಾಗಿದೆ. ಅಂತಹ ವೈಶಿಷ್ಟ್ಯಕ್ಕೆ ಅನುಯೋಗಿ ಧರ್ಮಿ, ಪ್ರತಿಯೋಗಿ ರಜತತ್ವ. ಹೀಗೆ ರಜತತ್ವದಲ್ಲಿ ಇರುವ ಪ್ರತಿಯೋಗಿತ್ವವೇ ಪ್ರಕಾರತಾ. ಇಂತಹ ಪ್ರಕಾರತಾಕತ್ವವು ವ್ಯವಸಾಯಗತತ್ವೇನ ಅನುವ್ಯವಸಾಯದಲ್ಲಿ ಭಾನವಾದರೆ ವೈಶಿಷ್ಟ್ಯವೂ ಭಾನವಾದಂತೆಯೇ.

ಹೀಗೆ ಅನುವ್ಯವಸಾಯದಲ್ಲಿ ರಜತತ್ವರೂಪ ಧರ್ಮವಿಷಯಕತ್ವ, ಹಾಗೂ ಇದಂತ್ವವಿಶಿಷ್ಟ ಇದಮಂಶವಿಷಯಕತ್ವ ಇವೆರಡೂ ವ್ಯವಸಾಯಗತವಾಗಿ ಭಾಸಮಾನವಾಗುವಂತೆ ರಜತತ್ವ ಮತ್ತು ಇದಮಂಶಗಳಿಗೆ ಇರುವ ವೈಶಿಷ್ಟ್ಯವಿಷಯಕತ್ವವೂ ಭಾನವಾಗುವುದು ಅನುಭವಸಿದ್ಧವಾಗಿದೆ. ಅನುಭವಸಿದ್ಧವಾದರೂ ಅದು ಅನ್ಯತಃ=ಅನುಮಾನದಿಂದ ಸಿದ್ಧ, ಎಂದು ಕಲ್ಪಿಸುವುದಾದಲ್ಲಿ ಧರ್ಮವಿಷಯಕ್ತ್ವ, ಧರ್ಮಿವಿಷಯಕತ್ವಗಳೂ ಅನ್ಯತಃ ಸಿದ್ಧ, ಎಂದು ಕಲ್ಪಿಸಬೇಕಾದೀತು. ಆದರೆ ಅವುಗಳು ಅನ್ಯತಃ ಸಿದ್ಧವಾಗಿರುವುದು ಅನುಭವ ಸಿದ್ಧವಲ್ಲ. ಏಕೆಂದರೆ, ವೈಶಿಷ್ಟ್ಯವಿಷಯಕತ್ವವನ್ನು ಗ್ರಹಿಸದ, ಧರ್ಮ-ಧರ್ಮಿವಿಷಯಕತ್ವಗಳನ್ನು ಮಾತ್ರ ಗ್ರಹಿಸುವ ಇನ್ನೊಂದು ಅನುವ್ಯವಸಾಯ ಯಾರ ಅನುಭವಕ್ಕೂ ಬರುವುದಿಲ್ಲ.

## ನ್ಯಾಯದೀಪ

**ವೈಶಿಷ್ಟ್ಯವಿಷಯಕತ್ವಸ್ಯೇತಿ ॥ ವ್ಯವಸಾಯಗತಸ್ಯ, ಇತ್ಯನುಷಂಗಃ। ಧರ್ಮ್ಯಂಶೇತಿ ॥ ಇದಂತ್ವವಿಶಿಷ್ಟೇದಮಂಶವಿಷಯಕತ್ವಸ್ಯೇವ ಇತ್ಯರ್ಥಃ। ವಿಶೇಷ್ಯಾಂಶೇತಿ ವಾರ್ಥಃ। ಅನ್ಯತ ಇತಿ ॥ ಅನುವ್ಯವಸಾಯಾದನ್ಯತಃ ವ್ಯವಹಾರಾದಿಲಿಂಗತೋ, ವ್ಯವಸಾಯಪ್ರಾಮಾಣ್ಯಾನುಮಿತಿತೋ ವೇತ್ಯರ್ಥಃ। ಸಂಶಯಾಭಾವತದ್ಭಾವೌ ತು ಅನ್ಯಥೋಪಪನ್ನೌ ಇತಿ ಭಾವಃ। ನನು ತದಂಶೇ ಅನುವ್ಯವಸಾಯಾಂತರತಃ ಸಿದ್ಧಿಃ ಅನುಭವಸಿದ್ಧಾ, ಇತ್ಯತಃ ನಿರಾಹ–ನ ಚೇತಿ ॥**

ವೈಶಿಷ್ಟ್ಯವಿಷಯಕತ್ವವು ಅನುವ್ಯವಸಾಯಗಮ್ಯವಾದರೂ ಅದರ ಬಗ್ಗೆ ಕದಾಚಿತ್ ಸಂಶಯವು ದೋಷಜನ್ಯತ್ವಸಂದೇಹದಿಂದ ಬರಬಹುದು. ಅದಕ್ಕಾಗಿ, ವೈಶಿಷ್ಟ್ಯವು ಕದಾಪಿ ಅನುವ್ಯವಸಾಯ ವಿಷಯವಲ್ಲ, ಎನ್ನಬೇಕಾಗಿಲ್ಲ.

## ಪ್ರಕಾರತ್ವಾಂತರ ನಿರಾಸ

न च व्यावर्तकत्वं वा तज्ज्ञानजनकज्ञानविषयत्वं वा विशेष्यानिष्ठो रजतत्वादिनिष्ठो ज्ञानेन सह स्वरूपसंबन्धविशेषो वा प्रकारत्वमिति वाच्यम् । बहिरर्थानां तेषां वैशिष्ट्यवत् व्यवसायविषयत्वाभावेना-नुव्यवसाये भानायोगात् ।

क्रमस्य भासमानवैशिष्ट्यप्रतियोगित्वस्य त्यागेन स्वरूपसम्बन्ध-

**विशेषकल्पनायोगाच्च । 'इदं रजतत्वविशिष्टतया जानामि' इत्यनुव्यवसायाच्च ।**

**व्यवसायस्य त्वदुक्तरजतत्वप्रकारकत्वेनैवेदं रजतमित्याकारस्य, इदं रजतमित्यभिलपनं, रजतार्थिप्रवृत्तिं च प्रति हेतुत्वस्य च सम्भवे तस्य वैशिष्ट्यविषयकत्वाभावापाताच्च ।**

ಭಾಸಮಾನ-ವೈಶಿಷ್ಟ್ಯ-ಪ್ರತಿಯೋಗಿತ್ವವೇ ಪ್ರಕಾರತಾ, ಎಂದು ಹಿಂದೆ ಹೇಳಲಾಯಿತು. ಇದನ್ನು ಬಿಟ್ಟು ಬೇರೆ ಮೂರುವಿಧವಾದ ಪ್ರಕಾರತಾಗಳನ್ನು ತೋರಿಸಿ ನಿರಾಕರಿಸುತ್ತಾರೆ–

1. **ವ್ಯಾವರ್ತಕತ್ವಂ ಪ್ರಕಾರತ್ವಮ್**–ವಿಶೇಷ್ಯದಲ್ಲಿ ಅನ್ಯವ್ಯಾವೃತ್ತಿಜ್ಞಾನಕ್ಕೆ ಕಾರಣವಾದುದು ಪ್ರಕಾರ. 'ಇದಂ ರಜತಂ' ಎಂಬ ಜ್ಞಾನದಲ್ಲಿ ವಿಶೇಷ್ಯ ಪುರೋವೃತ್ತಿ ವಸ್ತು. ಜ್ಞಾನದಲ್ಲಿ ಭಾಸಮಾನವಾಗುವ ರಜತತ್ವವು, ಪುರೋವೃತ್ತಿಯಲ್ಲಿ ಘಟಾದಿಭೇದವನ್ನು ತಿಳಿಸುತ್ತದೆ. ಆದ್ದರಿಂದ ರಜತತ್ವವು ಪ್ರಕಾರ.

2. **ತಜ್ಜ್ಞಾನಜನಕ-ಜ್ಞಾನವಿಷಯತ್ವಮ್**–ರಜತಜ್ಞಾನವು ವಿಶಿಷ್ಟಜ್ಞಾನ. ವಿಶಿಷ್ಟಜ್ಞಾನಂ ಪ್ರತಿ ವಿಶೇಷಣಜ್ಞಾನಂ ಕಾರಣಮ್. ರಜತಜ್ಞಾನಕ್ಕೆ ರಜತತ್ವಜ್ಞಾನವು ಕಾರಣ. ಅದಕ್ಕೆ ವಿಷಯ ರಜತತ್ವ. ಆದ್ದರಿಂದ ಅದು ಪ್ರಕಾರ. ರಜತ್ವದಲ್ಲಿರುವ ಜನಕಜ್ಞಾನವಿಷಯತ್ವವೇ ಪ್ರಕಾರತಾ.

3. **ವಿಶೇಷ್ಯ-ಅನಿಷ್ಠಃ ರಜತತ್ವಾದಿನಿಷ್ಠಃ ಜ್ಞಾನೇನ ಸಹ ಸ್ವರೂಪಸಂಬಂಧವಿಶೇಷಃ ।** 'ಇದಂ ರಜತಮ್' ಎಂಬ ಜ್ಞಾನದಲ್ಲಿ ಪುರೋವರ್ತಿ ಮತ್ತು ರಜತತ್ವಗಳು ವಿಷಯಗಳಾಗಿವೆ. ಒಂದು ವಿಶೇಷ್ಯ, ಇನ್ನೊಂದು ಪ್ರಕಾರ. ಇವೆರಡಕ್ಕೂ ಜ್ಞಾನದೊಂದಿಗೆ ಸಂಬಂಧ ಇದೆ. ಜ್ಞಾನ ಆಂತರ, ಇವುಗಳು ಬಾಹ್ಯ. ಆದರೂ ಅವೆರಡಕ್ಕೆ ಸ್ವರೂಪಸಂಬಂಧವಿದೆ. ಆ ಸಂಬಂಧ ತತ್ತದ್‌ವಸ್ತುಸ್ವರೂಪ. ವಿಶೇಷ್ಯದಲ್ಲಿ ಇಲ್ಲದ ರಜತತ್ವದಲ್ಲಿ ಮಾತ್ರ ಇರುವ ಆಂತಹ ಸಂಬಂಧವೇ ಪ್ರಕಾರತಾ.

ಹೀಗೆ ಪ್ರಕಾರತಾಗಳನ್ನು ಮೂರು ವಿಧವಾಗಿ ಹೇಳಬಹುದು. ಆದರೆ, ಇವೆಲ್ಲವೂ ಬಾಹ್ಯ. ಆದ್ದರಿಂದ ಇವುಗಳು ಅನುವ್ಯವಸಾಯಕ್ಕೆ ಸಾಕ್ಷಾತ್ ವಿಷಯಗಳಲ್ಲ. ಆದ್ದರಿಂದ ವ್ಯವಸಾಯದ್ವಾರಾ ಅನುವ್ಯವಸಾಯಕ್ಕೆ ವಿಷಯವಾಗಬೇಕು. ಆದರೆ, ವಿಶೇಷಣ-ವಿಶೇಷ್ಯಸಂಬಂಧವು (ವೈಶಿಷ್ಟ್ಯವು) ವ್ಯವಸಾಯಕ್ಕೆ ವಿಷಯವಾಗುವಂತೆ ಇವು ಯಾವುವೂ ವ್ಯವಸಾಯದಲ್ಲಿ ತೋರುವುದಿಲ್ಲ. ಅಂದಮೇಲೆ ಇವುಗಳು ಅನುವ್ಯವಸಾಯಕ್ಕೂ ವಿಷಯಗಳಲ್ಲ. ಅಲ್ಲದೆ, ಸಾರ್ವತ್ರಿಕವಾಗಿ ಪ್ರಕಾರತಾ ಎಂದರೆ ಕ್ಲೃಪ್ತವಾದುದು, 'ಭಾಸಮಾನ-ವೈಶಿಷ್ಟ್ಯಪ್ರತಿಯೋಗಿತ್ವಂ'. ಇದನ್ನು ಪರಿತ್ಯಾಗ ಮಾಡಿ ಸ್ವರೂಪ ಸಂಬಂಧವಿಶೇಷಃ ಪ್ರಕಾರತಾ, ಎಂದು ಹೇಳುವುದು ಅನುಚಿತ.

ನಮಗೆ 'ಇದಂ ರಜತತ್ವವಿಶಿಷ್ಟತಯಾ ಜಾನಾಮಿ' ಎಂದು ಅನುವ್ಯವಸಾಯ ಬರುತ್ತದೆ. ಈ ಅನುವ್ಯವಸಾಯದ ಅರ್ಥ-'ಪುರೋವೃತ್ತಿ ವಿಶೇಷ್ಯಕ ರಜತತತ್ವವೈಶಿಷ್ಟ್ಯ ಪ್ರಕಾರಕ-ಜ್ಞಾನವಾನ್ ಅಹಂ' ಎಂದು. ಇದರಿಂದ ಅನುವ್ಯವಸಾಯವು ರಜತತ್ವವೈಶಿಷ್ಟ್ಯಪ್ರಕಾರಕತ್ವೇನ ವ್ಯವಸಾಯವನ್ನು ಗ್ರಹಿಸುತ್ತದೆ, ಎಂದಾಗುತ್ತದೆ. ಅರ್ಥಾತ್ ವ್ಯವಸಾಯದಲ್ಲಿ ರಜತತ್ತ್ವವೈಶಿಷ್ಟವು ಶುಕ್ತಿಯಲ್ಲಿ ಪ್ರಕಾರವಾಗಿ ಕಾಣುತ್ತದೆ. ಅದನ್ನೇ ಅನುವ್ಯವಸಾಯ ವಿಷಯೀಕರಿಸುತ್ತದೆ. ಆಗ ಅನುವ್ಯವಸಾಯಕ್ಕೂ ವೈಶಿಷ್ಟ್ಯ-ವಿಷಯಕತ್ವ ಬರುತ್ತದೆ.

ಭಾಸಮಾನ ವೈಶಿಷ್ಟ್ಯಪ್ರತಿಯೋಗಿತ್ವಮ್ ಪ್ರಕಾರತ್ವಮ್, ಎಂದು ಹೇಳದಿದ್ದಲ್ಲಿ ವ್ಯವಸಾಯವು ವೈಶಿಷ್ಟ್ಯವಿಷಯಕ ಎನ್ನುವಲ್ಲಿ ಆಧಾರವೇ ಇಲ್ಲವೆಂದಾಗುತ್ತದೆ-'ಇದಂ ರಜತಂ' ಎಂಬ ಜ್ಞಾನವು ರಜತ-ರಜತತ್ವಗಳ ವೈಶಿಷ್ಟ್ಯವನ್ನು ವಿಷಯೀಕರಿಸುತ್ತದೆ, ಎಂದು ನೈಯಾಯಿಕರೂ ಅಂಗೀಕರಿಸಿದ್ದಾರೆ. ಅದಕ್ಕೆ ಆಧಾರ ಅನುವ್ಯವಸಾಯರೂಪವಾದ ವ್ಯವಸಾಯದ ಅನುಭವ. ಅನುವ್ಯವಸಾಯದ ಆಕಾರ 'ರಜತತ್ವೇನ ಇದಂ ಜಾನಾಮಿ' ಎಂದು. ಇಲ್ಲಿರುವ ತೃತೀಯಾಕ್ಕೆ ಪ್ರಕಾರತ್ವ ಎಂದು ಅರ್ಥ. ಪ್ರಕಾರತಾ ಎಂದರೆ, ಪೂರ್ವೋಕ್ತ ಸ್ವರೂಪಸಂಬಂಧ ವಿಶೇಷಾದಿಗಳು. ಹೊರತು, ವ್ಯವಸಾಯೇ ಭಾಸಮಾನಂ ಯತ್ ವೈಶಿಷ್ಟ್ಯಂ ತತ್ ಪ್ರತಿಯೋಗಿತ್ವಂ, ಅಲ್ಲ. ಅರ್ಥಾತ್, ಅನುವ್ಯವಸಾಯವು, 'ವ್ಯವಸಾಯದಲ್ಲಿ ವೈಶಿಷ್ಟ್ಯವು ವಿಷಯ, ಅದಕ್ಕೆ ರಜತತ್ವವು ಪ್ರತಿಯೋಗಿ' ಎಂದು ತಿಳಿಸಿಕೊಡುವುದಿಲ್ಲ, ಎಂದಂತಾಯಿತು. ಹಾಗಾದರೆ, ವ್ಯವಸಾಯದಲ್ಲಿ ವೈಶಿಷ್ಟ್ಯವು ಭಾನವಾಗುತ್ತದೆ, ಎನ್ನಲು ಆಧಾರ ಏನು?

ಇದಕ್ಕೆ ಹೀಗೆ ಸಮಾಧಾನಿಸಬೇಕು-ವ್ಯವಸಾಯದಲ್ಲಿ ವೈಶಿಷ್ಟ್ಯವು ವಿಷಯವಾಗದಿದ್ದರೆ ಜ್ಞಾನಕ್ಕೆ 'ಇದಂ ರಜತಂ' ಎಂಬ ಆಕಾರ ಮತ್ತು ಜ್ಞಾನ ಬಂದಮೇಲೆ 'ಇದಂ ರಜತಮ್' ಎಂಬ ವಿಶಿಷ್ಟವಾಚಕ ಶಬ್ದಪ್ರಯೋಗ ಹಾಗೂ ರಜತಾರ್ಥಿಗೆ ಪುರೋವರ್ತಿಯಲ್ಲಿ ಪ್ರವೃತ್ತಿಗಳು ಆಗಲಿಕ್ಕಿಲ್ಲ, ಎಂದು. ಆದರೆ, ಇವೆಲ್ಲವನ್ನೂ ಜ್ಞಾನದಲ್ಲಿ ರಜತತ್ವವು ಪೂರ್ವೋಕ್ತ ರೀತಿಯಿಂದ ಪ್ರಕಾರ, ಎಂದು ಹೇಳಿಯೂ ಕೂಡಿಸಬಹುದಾಗಿದೆ. ವೈಶಿಷ್ಟ್ಯವೇ ಪ್ರಕಾರತಾ, ಎಂದೇನೂ ಹೇಳುವ ಅಗತ್ಯವಿಲ್ಲ.

ಆದ್ದರಿಂದ ರಜತವ್ಯವಸಾಯಕ್ಕೆ ವೈಶಿಷ್ಟ್ಯವಿಷಯಕತ್ವ ಸಿದ್ಧವಾಗಬೇಕಾದರೆ ಪ್ರಕಾರತಾ ಎಂದರೆ ಭಾಸಮಾನ ವೈಶಿಷ್ಟ್ಯ-ಪ್ರತಿಯೋಗಿತ್ವಮ್, ಎಂದೇ ಹೇಳಬೇಕು.

## ನ್ಯಾಯದೀಪ

**ಅನ್ಯಸ್ಯ ಪ್ರಕಾರತ್ವಸ್ಯ ಅಭಾವೇನ ಇತ್ಯಸ್ಯ ಅಸಿದ್ಧಿಮಾಶಂಕ್ಯ ನಿರಾಹ-ನಚ ವ್ಯಾವರ್ತಕತ್ವಮಿತ್ಯಾದಿನಾ ।**

**1. ವಿಶೇಷ್ಯನಿಷ್ಠ-ವ್ಯಾವೃತ್ತಿಬುದ್ಧಿ-ಜನಕತ್ವಂ ವ್ಯಾವರ್ತಕತ್ವಮ್ ।**

**2. ತಜ್ಞಾನೇತಿ ॥ ವೈಶಿಷ್ಟ್ಯಜ್ಞಾನೇತ್ಯರ್ಥಃ । ವಿಶೇಷಣಜ್ಞಾನಸ್ಯ ವಿಶಿಷ್ಟಜ್ಞಾನ–ಜನಕತ್ವಾತ್ ಇತಿ ಭಾವಃ ।**

**3. ವೈಶಿಷ್ಟ್ಯಮಿತಿ ॥ ವೈಶಿಷ್ಟ್ಯಸ್ಯ ಯಥಾ ವ್ಯವಸಾಯವಿಷಯತ್ವಂ ತಥಾ ಅಭಾನೇನ ಇತ್ಯರ್ಥಃ । ವೈಶಿಷ್ಟ್ಯಸ್ಯ ಬಾಹ್ಯಾರ್ಥತ್ವೇಽಪಿ ವ್ಯವಸಾಯ–ವಿಷಯತ್ವಾತ್ ತತ್‌ಪ್ರತಿಯೋಗಿತ್ವರೂಪ–ಪ್ರಕಾರತ್ವಸ್ಯ ಅನುವ್ಯವಸಾಯೇ ಭಾನಂ ಯುಕ್ತಮ್ ಇತಿ ಭಾವಃ ।**

**4. ಜ್ಞಾನೇನ ಸಹ ಸ್ವರೂಪಸಂಬಂಧವಿಶೇಷಃ ನ ಬಹಿರರ್ಥಃ, ಇತ್ಯತ ಆಹ–ಕ್ಲೃಪ್ತಸ್ಯೇತಿ ॥ ಅತೀತಾದಿಸ್ಥಲೇ ವ್ಯಾವೃತ್ತಿಬುದ್ಧಿಜನಕತ್ವರೂಪ–ವ್ಯಾವರ್ತಕತ್ವಾಯೋಗಾತ್ । ವಿಶೇಷಣಜ್ಞಾನಾಹೇತುತ್ವಪಕ್ಷೇ ಚ ದ್ವಿತೀಯಸ್ಯ ಅಯೋಗೇನ ತತ್ರ ಭಾಸಮಾನೇತ್ಯಾದಿರೂಪಸ್ಯೈವ ಪ್ರಕಾರತ್ವಸ್ಯ ಕ್ಲೃಪ್ತ–ತ್ವಾತ್, ಇತಿ ಭಾವಃ ।**

4. ಜ್ಞಾನೇನ ಸಹ ಸ್ವರೂಪಸಂಬಂಧವಿಶೇಷಃ ಪ್ರಕಾರತ್ವಂ, ಈ ಪ್ರಕಾರತಾವು ಜ್ಞಾನಸ್ವರೂಪವೂ ಆಗಬಹುದಾದ್ದರಿಂದ ಇದು ಬಹಿರರ್ಥವಲ್ಲ. ಆದ್ದರಿಂದ ಬಹಿರರ್ಥತ್ವಾತ್ ಅನುವ್ಯವಸಾಯಕ್ಕೆ ವಿಷಯವಲ್ಲ, ಎಂಬ ಕಾರಣವು ಇದಕ್ಕೆ ಸಂಬಂಧಪಡುವುದಿಲ್ಲ. ಅದಕ್ಕಾಗಿ 'ಕ್ಲೃಪ್ತಸ್ಯ' ಎಂದು ಇನ್ನೊಂದು ದೋಷವನ್ನು ಹೇಳಲಾಗಿದೆ.

'ವ್ಯಾವೃತ್ತಿಬುದ್ಧಿಜನಕತ್ವಂ ಪ್ರಕಾರತ್ವಮ್' ಎನ್ನುವುದು ಸರಿಯಲ್ಲ. ಅತೀತವಸ್ತುವಿನ ಜ್ಞಾನ ಬಂದಾಗ ಆ ಪ್ರಕಾರವು ಈಗ ಇಲ್ಲದಿರುವುದರಿಂದ ಅದು ವ್ಯಾವೃತ್ತಿಬುದ್ಧಿ ಜನಕವಲ್ಲ. ಅದರಲ್ಲಿ ಪ್ರಕಾರತ್ವಲಕ್ಷಣ ಬರುವುದಿಲ್ಲ.

ತಜ್ಜ್ಞಾನಜನಕ–ಜ್ಞಾನವಿಷಯಕತ್ವಂ, ಎಂದು ಎರಡನೆಯ ಪ್ರಕಾರತಾಲಕ್ಷಣ. ಇದೂ ಯುಕ್ತವಲ್ಲ. ದ್ವೈತದರ್ಶನದಲ್ಲಿ ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣವೇ ಅಲ್ಲ. ಆದ್ದರಿಂದ ಈ ಲಕ್ಷಣ ಅಸಂಭವದೋಷಗ್ರಸ್ತ. ಪರಿಶೇಷಾತ್ ಭಾಸಮಾನ–ವೈಶಿಷ್ಟ್ಯಪ್ರತಿಯೋಗಿತ್ವಂ, ಎಂದೇ ಪ್ರಕಾರತ್ವವನ್ನು ನಿರೂಪಿಸಬೇಕಾಗುತ್ತದೆ. ಅದೇ ಕ್ಲೃಪ್ತ.

## ನ್ಯಾಯದೀಪ

**'ವೈಶಿಷ್ಟ್ಯವಿಷಯಕತ್ವಸ್ಯಾಪಿ ಭಾನೇ ಅನುಭವಸಿದ್ಧೇ' ಇತಿ ಪ್ರಾಗುಕ್ತಮ್ ಅಸಿದ್ಧಮ್ ಇತ್ಯತ ಆಹ – ಇದಂ ರಜತತ್ವೇತಿ ॥**

**ನನು 'ಇದಂ ವಿಶೇಷ್ಯಕ–ರಜತತ್ವವೈಶಿಷ್ಟ್ಯಪ್ರಕಾರಕ–ಜ್ಞಾನವಾನ್ ಅಹಮ್' ಇತಿ ಅನುವ್ಯವಸಾಯಾತ್ ಇತಿ ಹಿ ಅಸ್ಯಾರ್ಥಃ । ನ ಚ ವೈಶಿಷ್ಟ್ಯಂ**

**ವ್ಯವಸಾಯೇ ಪ್ರಕಾರಃ । ಪ್ರಾಕ್ ಅನುಪಸ್ಥಿತತ್ವೇನ ಸಂಸರ್ಗಮರ್ಯಾದಯೈವ ಭಾನಾತ್ ಇತಿ ಚೇನ್ನ–ವಿಶೇಷಣಜ್ಞಾನ–ಹೇತುತಾಯಾಃ ನಿರ್ವಿಕಲ್ಪಕಭಂಗೇ ನಿರಸಿಷ್ಯಮಾಣತ್ವೇನ ಪ್ರಾಕ್ ಅನುಪಸ್ಥಿತಸ್ಯಾಪಿ ವೈಶಿಷ್ಟ್ಯಸ್ಯ ವ್ಯವಸಾಯೇ ರಜತತ್ವಸ್ಯೇವ ಪ್ರಕಾರತಯಾ ಭಾನೇ ಬಾಧಕಾಭಾವಾತ್ ಇತಿ ಭಾವಃ ।**

ಹಿಂದೆ (ಪು.248) ಅನುವ್ಯವಸಾಯದಲ್ಲಿ ವೈಶಿಷ್ಟ್ಯವಿಷಯಕತ್ವವು ಭಾನವಾಗುವುದು ಅನುಭವ ಸಿದ್ಧ, ಎನ್ನಲಾಗಿದೆ. ಅಂತಹ ಅನುಭವ ಇಲ್ಲ, ಎಂಬ ಶಂಕೆಗೆ ಉತ್ತರ–ಇದಂ ರಜತತ್ವ ವಿಶಿಷ್ಟತಯಾ, ಎಂದು.

'ಇದಂ ರಜತತ್ವವಿಶಿಷ್ಟತಯಾ ಜಾನಾಮಿ' ಎಂಬ ಅನುವ್ಯವಸಾಯದಂತೆ, ರಜತಜ್ಞಾನದಲ್ಲಿ ಪ್ರಕಾರವಾದುದು 'ರಜತತ್ವವೈಶಿಷ್ಟ್ಯ' ಎನ್ನಬೇಕಾಗುತ್ತದೆ. ಏಕೆಂದರೆ, ತೃತೀಯಾವಿಭಕ್ತಿಗೆ ಪ್ರಕಾರತಾ ಅರ್ಥ. ಆಗ 'ರಜತತ್ವ ವೈಶಿಷ್ಟ್ಯಪ್ರಕಾರಕಜ್ಞಾನವಾನ್ ಅಹಮ್' ಎಂದು ಅರ್ಥವಾಗುತ್ತದೆ. ಆದರೆ 'ಇದಂ ರಜತಮ್' ಎಂಬ ಜ್ಞಾನದಲ್ಲಿ ರಜತತ್ವವು ಪ್ರಕಾರ, ವೈಶಿಷ್ಟ್ಯವು ಪ್ರಕಾರವಲ್ಲ. ಅದು ಪ್ರಕಾರವಾಗಬೇಕಾದರೆ ರಜತಜ್ಞಾನ ಬರುವ ಮೊದಲೇ ವೈಶಿಷ್ಟ್ಯದ ಜ್ಞಾನ ಇರಬೇಕಾಗುತ್ತದೆ. 'ವಿಶಿಷ್ಟಜ್ಞಾನಂ ಪ್ರತಿ ವಿಶೇಷಣಜ್ಞಾನಂ ಕಾರಣಮ್'. ಆದರೆ ವೈಶಿಷ್ಟ್ಯವು ಪೂರ್ವದಲ್ಲಿ ಅನುಪಸ್ಥಿತವಾದುದರಿಂದ ಅದು ಸಂಸರ್ಗಮರ್ಯಾದಯಾ ತೋರಬೇಕು, ಪ್ರಕಾರತಯಾ ಭಾನವಾಗಬಾರದು. ಆದ್ದರಿಂದ ರಜತಜ್ಞಾನದಲ್ಲಿ ವೈಶಿಷ್ಟ್ಯವು ಪ್ರಕಾರವಾಗುವುದು ಹೇಗೆ?

ಇದಕ್ಕೆ ಉತ್ತರ–ಮುಂದೆ ನಿರ್ವಿಕಲ್ಪಕಭಂಗ ಪ್ರಕರಣದಲ್ಲಿ ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ ಎನ್ನುವ ನಿಯಮವನ್ನು ನಿರಾಕರಿಸಲಾಗಿದೆ. ಆದ್ದರಿಂದ ಪೂರ್ವದಲ್ಲಿ ಅನುಪಸ್ಥಿತವಾದರೂ ವೈಶಿಷ್ಟ್ಯವು ಪ್ರಕಾರವಾಗಬಹುದು.

## ನ್ಯಾಯದೀಪ

**ಏವಂರೂಪಾನುವ್ಯವಸಾಯೇ ವಿಪ್ರತಿಪತ್ತಿರಿತಿ ಚೇತ್ ತರ್ಹಿ 'ಇದಂ ರಜತತ್ವೇನ ಜಾನಾಮಿ' ಇತ್ಯಾಕಾರೋಽಪಿ ವೈಶಿಷ್ಟ್ಯಾಭಾನೇಽಪಿ ಉಪಪದ್ಯತಾಮ್ ಇತಿ ಅತಿಪ್ರಸಂಗಃ ಇತ್ಯಾಹ–ವ್ಯವಸಾಯಸ್ಯೇತಿ ॥ ಇತ್ಯಾಕಾರಸ್ಯ ಹೇತುತ್ವಸ್ಯ ಚ ಸಂಭವೇ ಇತ್ಯನ್ವಯಃ ।**

'ರಜತತ್ವವಿಶಿಷ್ಟತಯಾ ಜಾನಾಮಿ' ಎಂಬ ಅನುವ್ಯವಸಾಯವೇ ಇಲ್ಲ, ಎನ್ನುವುದಾದಲ್ಲಿ ವೈಶಿಷ್ಟ್ಯವಿಷಯಕವಾದ ಅನುವ್ಯವಸಾಯವೇ ಇಲ್ಲವೆಂದಾದೀತು. ಏಕೆಂದರೆ, 'ಇದಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ಭಾನವಾಗದಿದ್ದರೂ ಬಾಧಕವೇನಿಲ್ಲ,

ಆದರಲ್ಲಿ ರಜತತ್ವವೇ ಪ್ರಕಾರವಾಗಿ ಭಾನವಾಗಬಹುದು, ಎಂಬ ಅತಿಪ್ರಸಂಗವನ್ನು ತೋರಿಸುತ್ತಾರೆ– ವ್ಯವಸಾಯಸ್ಯ ಎಂಬ ವಾಕ್ಯದಿಂದ. ಈ ವಾಕ್ಯದ ಮೊದಲ ಶಬ್ದವಾದ 'ವ್ಯವಸಾಯಸ್ಯ' ಎಂಬ ಶಬ್ದಕ್ಕೆ, 'ಇತ್ಯಾಕರಸ್ಯ, ಹೇತುತ್ವಸ್ಯ ಚ ಸಂಭವೇ' ಎಂಬಲ್ಲಿ ಅನ್ವಯ. ವ್ಯವಸಾಯದ ಆಕಾರವೂ, ಅದಕ್ಕೆ ಅಭಿಲಾಪ–ಪ್ರವೃತ್ತಿಹೇತುತ್ವವೂ ಕೂಡುತ್ತದೆ, ಎಂದು ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ವೈಶಿಷ್ಟ್ಯಸ್ಯ ತೃತೀಯಾರ್ಥತ್ವೇ ವ್ಯವಸಾಯೇಽಪಿ ತೃತೀಯಾರ್ಥೋಲ್ಲೇಖಾಪತ್ತೇಃ, ಇತಿ ಪ್ರಾಗುಕ್ತದೋಷಂ ನಿರಾಹ–ಅನುವ್ಯವಸಾಯ ಏವೇತಿ ॥**

ಹಿಂದೆ (ಪು.254) 'ವೈಶಿಷ್ಟ್ಯ ವಿಷಯಕತ್ವಸ್ಯಾಪಿ ಭಾನೇ ಅನುಭವಸಿದ್ಧೇ' ಎಂದು ವ್ಯವಸಾಯದಲ್ಲಿ ವೈಶಿಷ್ಟ್ಯವಿಷಯಕತ್ವವು ಇದೆ, ಎಂದು ಹೇಳುವ ಮೂಲಕ ವೈಶಿಷ್ಟ್ಯವು ತೃತೀಯಾರ್ಥವಾದರೂ ಬಾಧಕವಿಲ್ಲ, ಎಂದು ಹೇಳಲಾಗಿದೆ. ವೈಶಿಷ್ಟ್ಯವು ತೃತೀಯಾರ್ಥವಾದರೆ ವ್ಯವಸಾಯದಲ್ಲೂ ತೃತೀಯಾರ್ಥದ ಉಲ್ಲೇಖವಾಗಲಿ, ಎಂದು ಪೂರ್ವಪಕ್ಷದಲ್ಲಿ ಆಕ್ಷೇಪಿಸಲಾಗಿತ್ತು. ಅದಕ್ಕೆ ಸಮಾಧಾನವನ್ನು ಮುಂದಿನ ಮೂಲದಲ್ಲಿ ಕೊಡಲಾಗಿದೆ.

(ಈ ಆಕ್ಷೇಪವನ್ನು ಮಣಿಕಾರನೂ ಮಾಡಿದ್ದಾನೆ. ''ರಜತತ್ವವೈಶಿಷ್ಟ್ಯಸ್ಯ ತದರ್ಥತ್ವೇ ವ್ಯವಸಾಯೇಽಪಿ ತೃತೀಯಾರ್ಥೋಲ್ಲೇಖಾಪತ್ತೇಃ'' (ಪು.209) ಎಂದು ಮಣಿವಾಕ್ಯ. 'ಇದಂ ರಜತಂ' ಎಂದು ವ್ಯವಸಾಯದ ಅಭಿಲಾಪ. 'ಇದಂ ರಜತತ್ವೇನ' ಎಂದೂ ಅಭಿಲಾಪ ಬರಲಿ. ತೃತೀಯಾವಿಭಕ್ತಿಗೆ ವೈಶಿಷ್ಟ್ಯ ಅರ್ಥ. ರಜತತ್ವ ವಿಶಿಷ್ಟವಾದುದು ಪುರೋವೃತ್ತಿ, ಎಂದು ಅರ್ಥ. ಇದಕ್ಕೆ ಸಮಾಧಾನವನ್ನು ಮುಂದಿನ ಮೂಲದಲ್ಲಿ ಕೊಡಲಾಗಿದೆ.)

**अनुव्यवसाय एव तृतीयार्थोल्लेखस्तु तत्र वैशिष्ट्यभानेऽप्यधिकस्य रजतत्वे व्यवसायं प्रति प्रकारत्त्वस्यापि भानात् । अत एवानुव्यवसायस्य 'इदं रजतम्' इत्याकारत्वाभावोऽपि । वैशिष्ट्यस्य स्वातन्त्र्येणाभानात् ।**

ತೃತೀಯಾರ್ಥ ವೈಶಿಷ್ಟ್ಯವಾದರೂ ಅನುವ್ಯವಸಾಯದಲ್ಲಿ ಮಾತ್ರ ತೃತೀಯಾರ್ಥವಾದ ವೈಶಿಷ್ಟ್ಯದ ಉಲ್ಲೇಖ ಮಾಡಲು ಕಾರಣ ಇದು–ಅನುವ್ಯವಸಾಯದಲ್ಲಿ ವೈಶಿಷ್ಟ್ಯ ಮಾತ್ರ ಭಾನವಾಗದೆ ಅಧಿಕವಾಗಿ ಜ್ಞಾನಂ ಪ್ರತಿ ಪ್ರಕಾರತ್ವವೂ ಭಾನವಾಗುತ್ತದೆ. ರಜತತ್ವವು ವ್ಯವಸಾಯದಲ್ಲಿ ಪ್ರಕಾರವಾಗಿದೆ, ಎಂದೂ ತೃತೀಯಾವಿಭಕ್ತಿಯು ಉಲ್ಲೇಖ ಮಾಡುತ್ತದೆ. ಅರ್ಥಾತ್, ವ್ಯವಸಾಯವು ರಜತತ್ವಪ್ರಕಾರಕ, ಎಂದೂ ತೃತೀಯಾದಿಂದ ತಿಳಿಯುವ ಅರ್ಥ. ವ್ಯವಸಾಯದಲ್ಲಿ

ರಜತತ್ವವು ಪ್ರಕಾರವಾದರೂ ಪ್ರಕಾರತ್ವದ ಭಾನ ಅಲ್ಲಿಲ್ಲ. ಆದ್ದರಿಂದ ತೃತೀಯಾರ್ಥೋಲ್ಲೇಖ ಅಲ್ಲಿಲ್ಲ.

ವೈಶಿಷ್ಟ್ಯವು ವ್ಯವಸಾಯದಲ್ಲಿ ಭಾನವಾಗುತ್ತದೆ, ಅನುವ್ಯವಸಾಯದಲ್ಲೂ ಭಾನವಾಗುತ್ತದೆ. ಆದರೂ ವ್ಯವಸಾಯದ ಅಭಿಲಾಪದಂತೆ ಅನುವ್ಯವಸಾಯವನ್ನು 'ಇದಂ ರಜತಂ' ಎಂದು ಅಭಿಲಾಪ ಮಾಡಲಾಗುವುದಿಲ್ಲ. ಏಕೆಂದರೆ, ವ್ಯವಸಾಯದಲ್ಲಿ ರಜತ–ರಜತತ್ವಗಳಂತೆ ವೈಶಿಷ್ಟ್ಯವೂ ಸ್ವಾತಂತ್ರ್ಯೇಣ ಭಾನವಾಗುತ್ತದೆ. ಸ್ವಾತಂತ್ರ್ಯೇಣ ಎಂದರೆ ಜ್ಞಾನಕ್ಕೆ ವಿಶೇಷಣವಾಗದೇ ಭಾನವಾಗುತ್ತದೆ. ಆದರೆ ಅನುವ್ಯವಸಾಯದಲ್ಲಿ ಅದು 'ವೈಶಿಷ್ಟ್ಯಪ್ರಕಾರಕವಾದುದು ಜ್ಞಾನ' (ರಜತತ್ವೇನ ಜಾನಾಮಿ) ಎಂದು ಜ್ಞಾನವಿಶೇಷಣತಯಾ ಭಾನವಾಗುತ್ತದೆ. ಆದ್ದರಿಂದ ಅನುವ್ಯವಸಾಯದ ಆಕಾರ 'ಇದಂ ರಜತಂ' ಎಂದು ಅಲ್ಲ.

'ಇದಂ ರಜತಂ' ಎಂದರೆ ಪುರೋವರ್ತಿಯಲ್ಲಿ ರಜತತ್ವದ ವೈಶಿಷ್ಟ್ಯವು ಇದೆ, ಎಂದು ಅರ್ಥ. ಇಲ್ಲಿ ವೈಶಿಷ್ಟ್ಯವು ರಜತದಲ್ಲಿ ಕಾಣುತ್ತದೆ. 'ಇದಂ ರಜತತ್ವೇನ ಜಾನಾಮಿ' ಎಂದರೆ 'ಪುರೋವರ್ತಿವಿಶೇಷ್ಯಕ ರಜತತ್ವವೈಶಿಷ್ಟ್ಯಪ್ರಕಾರಕ ಜ್ಞಾನವಾನ್ ಅಹಂ' ಎಂದರ್ಥ. ಇಲ್ಲಿ 'ಇದಂ' ಎಂಬ ದ್ವಿತೀಯಾರ್ಥಕ್ಕೂ, ರಜತತ್ವೇನ ಎಂಬ ತೃತೀಯಾರ್ಥಕ್ಕೂ ಜಾನಾಮಿ ಎಂಬಲ್ಲಿರುವ ಜ್ಞಾನದಲ್ಲಿ ಅನ್ವಯ. ಅಲ್ಲಿ ಪ್ರಕಾರತಾ ಎಂದರೆ 'ಭಾಸಮಾನ ವೈಶಿಷ್ಟ್ಯ ಪ್ರತಿಯೋಗಿತ್ವ'. ಇಂತಹ ಪ್ರಕಾರತಾಂತರ್ಗತವಾಗಿ ವೈಶಿಷ್ಟ್ಯವೂ ಜ್ಞಾನವಿಶೇಷಣತಯಾ ಅನುವ್ಯವಸಾಯಕ್ಕೆ ವಿಷಯ.

## ನ್ಯಾಯದೀಪ

**ಪ್ರಕಾರತ್ವಸ್ಯೇತಿ ॥ ಭಾಸಮಾನ ವೈಶಿಷ್ಟ್ಯ ಪ್ರತಿಯೋಗಿತ್ವರೂಪಸ್ಯ ಇತ್ಯರ್ಥಃ। ವ್ಯವಸಾಯೇ ತು ಆತ್ಮಾಶ್ರಯಾಪತ್ತೇಃ ನೋಕ್ತರೂಪ ಪ್ರಕಾರತ್ವಸ್ಯ ಭಾನಮ್ ಇತಿ ಭಾವಃ।**

**ವೈಶಿಷ್ಟ್ಯಸ್ಯಾಪಿ ಭಾನೇ ವ್ಯವಸಾಯ ಸಮಾನಾಕರತಾ ಸ್ಯಾತ್ ಇತ್ಯತ ಆಹ– ಅತ ಏವೇತಿ ॥ ಅತ ಏವೇತ್ಯುಕ್ತಂ ವ್ಯನಕ್ತಿ–ವೈಶಿಷ್ಟ್ಯಸ್ಯೇತಿ ॥ ಸ್ವಾತಂತ್ರ್ಯೇಣೇತಿ ॥ ವ್ಯವಸಾಯೇ ಇವ ಜ್ಞಾನಾವಿಶೇಷಣತಯಾ ಇತ್ಯರ್ಥಃ।**

ರಜತತ್ವವೈಶಿಷ್ಟ್ಯವು ವ್ಯವಸಾಯ ಅನುವ್ಯವಸಾಯ ಈ ಎರಡರಲ್ಲೂ ತೋರುತ್ತದೆ. ವ್ಯವಸಾಯದಲ್ಲಿ ಸ್ವಾತಂತ್ರ್ಯೇಣ, ಅನುವ್ಯವಸಾಯದಲ್ಲಿ ಜ್ಞಾನವಿಶೇಷಣ–ಘಟಕತ್ವೇನ. ಆದರೆ ಪ್ರಕಾರತಾ ಅನುವ್ಯವಸಾಯದಲ್ಲಿ ಮಾತ್ರ ಭಾನವಾಗುತ್ತದೆ. ವ್ಯವಸಾಯದಲ್ಲಿ ಭಾನವಾಗುವುದಿಲ್ಲ. ಏಕೆಂದರೆ, ಪ್ರಕಾರತಾ ಎಂದರೆ, ಭಾಸಮಾನ–ವೈಶಿಷ್ಟ್ಯ ಪ್ರತಿಯೋಗಿತ್ವಮ್। ಇಲ್ಲಿ ಭಾಸಮಾನ

ಎಂದರೆ, ವ್ಯವಸಾಯೇ ಭಾಸಮಾನ ಎಂದರ್ಥ. ಹೀಗೆ ಪ್ರಕಾರತಾ ವ್ಯವಸಾಯಘಟಿತವಾಗಿದೆ. ಸ್ವಘಟಿತವಾದುದು ಸ್ವಸ್ಮಿನ್ ತೋರಿದರೆ ಆತ್ಮಾಶ್ರಯ. ಆದ್ದರಿಂದ ಅದು ವ್ಯವಸಾಯದಲ್ಲಿ ತೋರುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**'ಬಹಿರ್ವಿಶೇಷ್ಯಕೇ ಮನಸೋಽಸಾಮರ್ಥ್ಯಾತ್' ಇತಿ ಮಣೌ (ಪು.208) ವಿಶೇಷ್ಯಪದ-ಪ್ರಯೋಗ-ಸೂಚಿತಂ 'ನ ಚ ತನ್ಮಾತ್ರಂ ಪ್ರಾಮಾಣ್ಯಂ, ಭ್ರಮಸಾಧಾರಣ್ಯಾತ್ । ಕಿಂ ನಾಮ ''ರಜತತ್ವವದ್ ವಿಶೇಷ್ಯಕಂ ರಜತತ್ವ-ಪ್ರಕಾರಕಮಿದಂ ಜ್ಞಾನಮ್' ಇತ್ಯಾದಿ ಪ್ರಕ್ಷಧರೋಕ್ತಂ ಹೃದಿಕೃತ್ವಾ ಆಶಂಕತೇ-ನನ್ವಿತಿ ॥**

ಪ್ರಾಮಾಣ್ಯಗ್ರಾಹಕತ್ವ ನಿರಾಸಕ್ಕಾಗಿ ಅನುವ್ಯವಸಾಯದಲ್ಲಿ ವಿಶೇಷಣವೈಶಿಷ್ಟ್ಯವು ವಿಷಯವಲ್ಲ, ಎಂದು ಸಾಧಿಸುವಾಗ ಮಣಿಕಾರ ಹೇಳಿದ ವಿಷಯ ಇದು-ಅನುವ್ಯವಸಾಯದ ಆಕಾರ 'ಇದಂ ರಜತಮ್' ಎಂದಲ್ಲ. ಹಾಗಿದ್ದಲ್ಲಿ ರಜತತ್ವದ ವೈಶಿಷ್ಟ್ಯವೂ ಅನುವ್ಯವಸಾಯಕ್ಕೆ ವಿಷಯವಾಗುತ್ತಿತ್ತು. ಹಾಗೆ ಅನುವ್ಯವಸಾಯದ ಆಕಾರವಾಗಬೇಕಾದರೆ ಅನುವ್ಯವಸಾಯಕ್ಕೆ ವ್ಯವಸಾಯದಂತೆ ವೈಶಿಷ್ಟ್ಯವೂ ಸಾಕ್ಷಾತ್ ವಿಷಯವಾಗಬೇಕು. ಆದರೆ ವೈಶಿಷ್ಟ್ಯವು ಬಾಹ್ಯಪದಾರ್ಥ. ಬಾಹ್ಯಾರ್ಥದಲ್ಲಿ ಮನಸ್ಸಿಗೆ ಸಾಮರ್ಥ್ಯವಿಲ್ಲ. ಆದ್ದರಿಂದ 'ಇದಂ ರಜತಂ' ಎಂದು ಅನುವ್ಯವಸಾಯದ ಆಕಾರವಲ್ಲ.

ಇಲ್ಲಿ 'ಬಹಿರ್ವಿಷಯೇ' ಎನ್ನುವ ಬದಲು ಮಣಿಕಾರ 'ಬಹಿರ್ವಿಶೇಷ್ಯೇ' ಎಂದಿದ್ದಾನೆ. ಅವನ ಅಭಿಪ್ರಾಯ-ಪ್ರಾಮಾಣ್ಯವಿಷಯಕತ್ವವು ಅನುವ್ಯವಸಾಯಕ್ಕಿಲ್ಲ, ಎಂದು. ಪ್ರಾಮಾಣ್ಯವೆಂದರೆ 'ತದ್ವಿಷಯಕತ್ವೇ ಸತಿ ತತ್ ಪ್ರಕಾರಕತ್ವಮ್' ಇಷ್ಟೇ ಅಲ್ಲ. ಅದು 'ಇದಂ ರಜತಮ್' ಎಂಬ ಭ್ರಮೆಯಲ್ಲೂ ಇದೆ. ನೈಯಾಯಿಕ ಮತದಲ್ಲಿ ಆಪಣಸ್ಥ ರಜತವೇ ಭ್ರಮೆಯಲ್ಲಿ ತೋರುತ್ತದೆ. ತತ್ ಎಂದರೆ ರಜತತ್ವ. ತದ್ವತ್-ಆಪಣಸ್ಥ ರಜತ. ಅದು 'ಇದಂ ರಜತಂ' ಎಂಬ ಭ್ರಮೆಯಲ್ಲಿ ವಿಷಯವಾಗಿದೆ. ರಜತತ್ವವು ಪ್ರಕಾರವೂ ಆಗಿದೆ. ಹೀಗೆ 'ತದ್ವದ್ ವಿಷಯಕತ್ವೇ ಸತಿ ತತ್ ಪ್ರಕಾರಕತ್ವವು.' ಭ್ರಮೆಯಲ್ಲೂ ಇದೆ. ಆದ್ದರಿಂದ ಇದು ಪ್ರಾಮಾಣ್ಯದ ಸ್ವರೂಪವಲ್ಲ. 'ತದ್ವದ್ ವಿಶೇಷ್ಯಕತ್ವೇ ಸತಿ ತತ್ಪ್ರಕಾರಕತ್ವಮ್'. ಈ ಲಕ್ಷಣ ರಜತಭ್ರಮೆಯಲ್ಲಿ ಇಲ್ಲ. ಅದರಲ್ಲಿ ವಿಶೇಷ್ಯವಾದುದು ಶುಕ್ತಿ. ಅದು ತದ್ವತ್=ರಜತತ್ವವತ್ ಅಲ್ಲ. ಆದ್ದರಿಂದ ಪ್ರಾಮಾಣ್ಯದ ಸ್ವರೂಪದಲ್ಲಿ ತದ್ವದ್‌ವಿಶೇಷ್ಯಕತ್ವವೇ ಘಟಕ. ವಿಶೇಷ್ಯ ಬಾಹ್ಯ. ಆದ್ದರಿಂದ ಮಣಿಕಾರ 'ಬಹಿರ್ವಿಶೇಷ್ಯೇ' ಎಂಬ ಪದವನ್ನು ಬಳಸಿದ್ದಾನೆ. ಇದು ಪಕ್ಷಧರ ಮಿಶ್ರ ಮಾಡಿರುವ ವ್ಯಾಖ್ಯಾನ.

ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ ಆಕ್ಷೇಪಪೂರ್ವಕ-ಸಮಾಧಾನವನ್ನು ಕೊಡಲಾಗಿದೆ.

## ಅನುವ್ಯವಸಾಯದಲ್ಲಿ ಪ್ರಾಮಾಣ್ಯಭಾನ ಇಲ್ಲ

**ननु अनुव्यवसाये वैशिष्ट्यस्य व्यवसायगतस्य रजतत्व-वद्विषयकत्वस्य च भानेऽपि प्रामाण्यान्तर्गतं व्यवसायनिष्ठं रजतत्ववद्विशेष्यकत्वं न भासते । न च रजतत्ववद्विषयकत्वे सति रजतत्वप्रकारकत्वमेव प्रामाण्यम् । मन्मते भ्रमसाधारण्यादिति चेन्न ।**

ಇದುವರೆಗೆ ಹೇಳಿದಂತೆ, ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ತೋರಲಿ. ವ್ಯವಸಾಯ ಗತಧರ್ಮವಾದ 'ರಜತತ್ವವದ್ ವಿಷಯಕತ್ವವೂ' ಭಾಸಮಾನವಾಗಲಿ. ಆದರೆ ಇವೆರಡು ಮಾತ್ರ ಪ್ರಾಮಾಣ್ಯಶರೀರದಲ್ಲಿ ಸೇರಿದ್ದಲ್ಲ. ವ್ಯವಸಾಯದಲ್ಲಿರುವ 'ರಜತತ್ವವದ್ ವಿಶೇಷ್ಯಕತ್ವವೂ' ಸೇರಿದೆ. ಅದು ಅನುವ್ಯವಸಾಯದಲ್ಲಿ ಭಾನವಾಗದು. ಏಕೆಂದರೆ, ವ್ಯವಸಾಯವು ಪುರೋವರ್ತಿಯಲ್ಲಿ ರಜತತ್ವ ಇದೆ, ಎಂದು ಗ್ರಹಿಸಿದ ಮಾತ್ರಕ್ಕೆ ಅದು ರಜತತ್ವವತ್ ಆಗಬೇಕಿಲ್ಲ. ಹೀಗಿರುವಾಗ ಮನಸ್ಸು ಜ್ಞಾನವನ್ನು 'ರಜತತ್ವವದ್ ವಿಶೇಷ್ಯಕ' ಎಂದು ಹೇಗೆ ಗ್ರಹಿಸಬಲ್ಲದು? ಏಕೆಂದರೆ, ವಿಶೇಷ್ಯವಾದ ಪುರೋವರ್ತಿಯು ರಜತತ್ವವತ್ತಾಗಿದೆ, ಎಂದು ತಿಳಿಸುವ ಸಾಮರ್ಥ್ಯ ಮನಸ್ಸಿಗಿಲ್ಲ. ಭ್ರಮೆಯಾಗಿರಲಿ ಪ್ರಮಾ ಆಗಿರಲಿ, ರಜತಜ್ಞಾನ ಸಾಮಾನ್ಯದಲ್ಲಿ ರಜತತ್ವವದ್ ವಿಷಯಕತ್ವವು ನಿಯತ. ಆದ್ದರಿಂದ ರಜತತ್ವವದ್ ವಿಷಯಕತ್ವವನ್ನು ಮನಸ್ಸು ಗ್ರಹಿಸಬಹುದು. ಇದನ್ನು ಗ್ರಹಿಸಿದ ಮಾತ್ರಕ್ಕೆ ಪ್ರಾಮಾಣ್ಯ ವನ್ನು ಗ್ರಹಿಸಿದಂತಾಗುವುದಿಲ್ಲ. ಏಕೆಂದರೆ, ರಜತತ್ವವದ್ ವಿಷಯಕತ್ವೇ ಸತಿ ರಜತತ್ವಪ್ರಕಾರಕತ್ವವೇ, ಪ್ರಾಮಾಣ್ಯವಲ್ಲ. ನ್ಯಾಯಮತದಲ್ಲಿ ಆಪಣಸ್ಥರಜತವೇ ಭ್ರಮೆಯಲ್ಲಿ ಭಾನವಾಗುವುದರಿಂದ ಇಂತಹ ಪ್ರಾಮಾಣ್ಯ ಭ್ರಮಸಾಧಾರಣ. ಆದ್ದರಿಂದ 'ತದ್ವದ್ ವಿಶೇಷ್ಯಕತ್ವವೇ' ಪ್ರಾಮಾಣ್ಯ ಘಟಕ. ಅದನ್ನು (ವಿಶೇಷ್ಯವು ತದ್ವತ್ತಾಗಿದೆ) ಗ್ರಹಿಸುವ ಸಾಮಾರ್ಥ್ಯ ಮನಸ್ಸಿಗಿಲ್ಲ. ಆದ್ದರಿಂದ 'ಪ್ರಾಮಾಣ್ಯಂ ಸ್ವತಃ' ಎನ್ನುವುದು ಹೇಗೆ?

### ನ್ಯಾಯದೀಪ

**ನ ಭಾಸತೇ ಇತಿ ।। ಮನಸೋ ಬಹಿರಸಾಮರ್ಥ್ಯಾದಿತಿ ಭಾವಃ। ತದ್ವಿಷಯಕತ್ವಮೇವಾಸ್ತು ಪ್ರಾಮಾಣ್ಯಮ್। ಕಿಂ ರಜತತ್ವವದ್ ವಿಶೇಷ್ಯಕತ್ವೇನ ಇತ್ಯತ ಆಹ-ನ ಚೇತಿ ।। ಮನ್ಮತೇ ಇತಿ ।। ತಾರ್ಕಿಕಮತೇ ಇತ್ಯರ್ಥಃ ।**

**ತನ್ಮತೇ ಶುಕ್ತೌ ರಜತತ್ವಾದ್ಯಾರೋಪೇ ಸತಿ ತದಾಶ್ರಯಸ್ಯ ಸತ್ಯರಜತಸ್ಯಾಪಿ ವಿಷಯತ್ವಾತ್ ಇತಿ ಭಾವಃ ।**

ತಾರ್ಕಿಕಮತದಂತೆ, ಶುಕ್ತಿಯಲ್ಲಿ ರಜತ್ವದ ಆರೋಪ ಮಾಡಿದಾಗ ರಜತತ್ವಾಶ್ರಯವಾದ ಆಪಣಸ್ಥ ಸತ್ಯರಜತವೂ ವಿಷಯವಾಗುತ್ತದೆ.

## ಅನುವ್ಯವಸಾಯದಲ್ಲಿ ಪ್ರಾಮಾಣ್ಯಭಾನ ಇದೆ

**रजतत्वे तृतीयार्थोल्लेखबलेन प्रकारकत्वस्येव रजतेऽपि द्वितीयार्थोल्लेखबलेन विशेष्यकत्वस्य अनुव्यवसायेन गृहीततया समानसंवित्संवेद्यतया च व्यवसाये तद्विशेष्यकत्वस्यापि ग्रहणात् । अस्ति हि दोषशङ्काद्यवतारदशायाम् 'इदं रजत्वेन जानामि' इत्यनुव्यवसायेऽपि तदनवतारदशायां 'रजतं रजतत्वेन जानामि' इत्यनुव्यवसायः । तस्मान्नाद्यः ।**

'ರಜತಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತತ್ವಪದದಲ್ಲಿ ತೃತೀಯಾವಿಭಕ್ತಿ ಇದೆ. ಅದು ಪ್ರಕಾರತಾ ಎಂಬ ಅರ್ಥವನ್ನು ಹೇಳುತ್ತದೆ. ಅದರಂತೆ ರಜತಪದೋತ್ತರದಲ್ಲಿ ದ್ವಿತೀಯಾವಿಭಕ್ತಿಯು ಇರುವುದರಿಂದ ಆ ವಿಭಕ್ತಿಯಿಂದ ವಿಶೇಷ್ಯತ್ವ ಬೋಧಿತವಾಗುತ್ತದೆ. ಆದರಿಂದಾಗಿ 'ರಜತತ್ವಪ್ರಕಾರಕ–ರಜತತ್ವವದ್ ವಿಶೇಷ್ಯಕ ಜ್ಞಾನವಾನಹಮ್' ಎಂದೇ ಅನುವ್ಯವಸಾಯವು ವ್ಯವಸಾಯವನ್ನು ಗ್ರಹಿಸುತ್ತದೆ. ಇದು ಪ್ರಾಮಾಣ್ಯವೇ ಆಗಿದೆ.

ದ್ವಿತೀಯಾವಿಭಕ್ತಿಗೆ ಕರ್ಮತ್ವಂ ಅರ್ಥ. ಜ್ಞಾನಕರ್ಮತ್ವ ಎಂದರೆ ಜ್ಞಾನವಿಷಯತ್ವ. ಆದ್ದರಿಂದ ದ್ವಿತೀಯಾಕ್ಕೆ ವಿಷಯತ್ವವೇ ಅರ್ಥ ಹೊರತು ವಿಶೇಷ್ಯತ್ವ ಅಲ್ಲ ಎನ್ನುವುದಾದರೂ ಪ್ರಕಾರತ್ವ–ವಿಶೇಷ್ಯತ್ವಗಳು ಅಥವಾ ಪ್ರಕಾರಕತ್ವ–ವಿಶೇಷ್ಯಕತ್ವಗಳು ಸಮಾನ ಸಂವಿತ್ ಸಂವೇದ್ಯಗಳಾಗಿವೆ. ಒಂದು ಜ್ಞಾನದಲ್ಲಿ ಒಂದಂಶವು ಪ್ರಕಾರ ಎಂದು ತಿಳಿದಾಗ ಇನ್ನೊಂದಂಶವು ವಿಶೇಷ್ಯ ಎಂದೂ ತಿಳಿಯುತ್ತದೆ. ಆದ್ದರಿಂದ ತೃತೀಯಾದಿಂದ ಪ್ರಕಾರತಾವು ಬೋಧ್ಯವಾದಾಗ ದ್ವಿತೀಯಾದಿಂದ ವಿಷಯತಾವು ವಾಚ್ಯವಾದರೂ ಪರಿಶೇಷಾತ್ ವಿಶೇಷ್ಯತಾವೇ ತಿಳಿಯಲ್ಪಡುತ್ತದೆ.

''ಇದಂ ರಜತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ಪುರೋವರ್ತಿ ವಿಶೇಷ್ಯಕತ್ವ ರಜತತ್ವ–ಪ್ರಕಾರತ್ವ ಇಷ್ಟೇ ಭಾನವಾಗುತ್ತದೆ. ಆದರೆ, ದೋಷಶಂಕಾ ಇದ್ದಾಗ ಈ ರೀತಿಯ ಅನುವ್ಯವಸಾಯವು ಬರುತ್ತದೆ. ಅದಿಲ್ಲದಾಗ, 'ರಜತಂ ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯ ಬರುತ್ತದೆ. ಇಲ್ಲಿ ರಜತಪದೋತ್ತರದಲ್ಲಿ ದ್ವಿತೀಯಾ ಇರುವುದರಿಂದ ಈ

ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ ಆಕ್ಷೇಪಪೂರ್ವಕ-ಸಮಾಧಾನವನ್ನು ಕೊಡಲಾಗಿದೆ.

## ಅನುವ್ಯವಸಾಯದಲ್ಲಿ ಪ್ರಾಮಾಣ್ಯಭಾನ ಇಲ್ಲ

**ननु अनुव्यवसाये वैशिष्ट्यस्य व्यवसायगतस्य रजतत्व-वद्विषयकत्वस्य च भानेऽपि प्रामाण्यान्तर्गतं व्यवसायनिष्ठं रजतत्ववद्विशेष्यकत्वं न भासते । न च रजतत्ववद्विषयकत्वे सति रजतत्वप्रकारकत्वमेव प्रामाण्यम् । मन्मते भ्रमसाधारण्यादिति चेन्न ।**

ಇದುವರೆಗೆ ಹೇಳಿದಂತೆ, ಅನುವ್ಯವಸಾಯದಲ್ಲಿ ವೈಶಿಷ್ಟ್ಯವು ತೋರಲಿ. ವ್ಯವಸಾಯ ಗತಧರ್ಮವಾದ 'ರಜತತ್ವವದ್ ವಿಷಯಕತ್ವವೂ' ಭಾಸಮಾನವಾಗಲಿ. ಆದರೆ ಇವೆರಡು ಮಾತ್ರ ಪ್ರಾಮಾಣ್ಯಶರೀರದಲ್ಲಿ ಸೇರಿದ್ದಲ್ಲ. ವ್ಯವಸಾಯದಲ್ಲಿರುವ 'ರಜತತ್ವವದ್ ವಿಶೇಷ್ಯಕತ್ವವೂ' ಸೇರಿದೆ. ಅದು ಅನುವ್ಯವಸಾಯದಲ್ಲಿ ಭಾನವಾಗದು. ಏಕೆಂದರೆ, ವ್ಯವಸಾಯವು ಪುರೋವರ್ತಿಯಲ್ಲಿ ರಜತತ್ವ ಇದೆ, ಎಂದು ಗ್ರಹಿಸಿದ ಮಾತ್ರಕ್ಕೆ ಅದು ರಜತತ್ವವತ್ ಆಗಬೇಕಿಲ್ಲ. ಹೀಗಿರುವಾಗ ಮನಸ್ಸು ಜ್ಞಾನವನ್ನು 'ರಜತತ್ವವದ್ ವಿಶೇಷ್ಯಕ' ಎಂದು ಹೇಗೆ ಗ್ರಹಿಸಬಲ್ಲದು? ಏಕೆಂದರೆ, ವಿಶೇಷ್ಯವಾದ ಪುರೋವರ್ತಿಯು ರಜತತ್ವವತ್ತಾಗಿದೆ, ಎಂದು ತಿಳಿಸುವ ಸಾಮರ್ಥ್ಯ ಮನಸ್ಸಿಗಿಲ್ಲ. ಭ್ರಮೆಯಾಗಿರಲಿ ಪ್ರಮಾ ಆಗಿರಲಿ, ರಜತಜ್ಞಾನ ಸಾಮಾನ್ಯದಲ್ಲಿ ರಜತತ್ವವದ್ ವಿಷಯಕತ್ವವು ನಿಯತ. ಆದ್ದರಿಂದ ರಜತತ್ವವದ್ ವಿಷಯಕತ್ವವನ್ನು ಮನಸ್ಸು ಗ್ರಹಿಸಬಹುದು. ಇದನ್ನು ಗ್ರಹಿಸಿದ ಮಾತ್ರಕ್ಕೆ ಪ್ರಾಮಾಣ್ಯವನ್ನು ಗ್ರಹಿಸಿದಂತಾಗುವುದಿಲ್ಲ. ಏಕೆಂದರೆ, ರಜತತ್ವವದ್ ವಿಷಯಕತ್ವೇ ಸತಿ ರಜತತ್ವಪ್ರಕಾರಕತ್ವವೇ, ಪ್ರಾಮಾಣ್ಯವಲ್ಲ. ನ್ಯಾಯಮತದಲ್ಲಿ ಆಪಣಸ್ಥರಜತವೇ ಭ್ರಮೆಯಲ್ಲಿ ಭಾನವಾಗುವುದರಿಂದ ಇಂತಹ ಪ್ರಾಮಾಣ್ಯ ಭ್ರಮಸಾಧಾರಣ. ಆದ್ದರಿಂದ 'ತದ್ವದ್ ವಿಶೇಷ್ಯಕತ್ವವೇ' ಪ್ರಾಮಾಣ್ಯ ಘಟಕ. ಅದನ್ನು (ವಿಶೇಷ್ಯವು ತದ್ವತ್ತಾಗಿದೆ) ಗ್ರಹಿಸುವ ಸಾಮರ್ಥ್ಯ ಮನಸ್ಸಿಗಿಲ್ಲ. ಆದ್ದರಿಂದ 'ಪ್ರಾಮಾಣ್ಯಂ ಸ್ವತಃ' ಎನ್ನುವುದು ಹೇಗೆ?

## ನ್ಯಾಯದೀಪ

**ನ ಭಾಸತೇ ಇತಿ ॥ ಮನಸೋ ಬಹಿರಸಾಮರ್ಥ್ಯಾದಿತಿ ಭಾವಃ। ತದ್ವಿಷಯಕತ್ವಮೇವಾಸ್ತು ಪ್ರಾಮಾಣ್ಯಮ್। ಕಿಂ ರಜತತ್ವವದ್ ವಿಶೇಷ್ಯಕತ್ವೇನ ಇತ್ಯತ ಆಹ-ನ ಚೇತಿ ॥ ಮನ್ಮತೇ ಇತಿ ॥ ತಾರ್ಕಿಕಮತೇ ಇತ್ಯರ್ಥಃ।**

**ತನ್ಮತೇ ಶುಕ್ತೌ ರಜತತ್ವಾದ್ಯಾರೋಪೇ ಸತಿ ತದಾಶ್ರಯಸ್ಯ ಸತ್ಯರಜತಸ್ಯಾಪಿ ವಿಷಯತ್ವಾತ್ ಇತಿ ಭಾವಃ ।**

ತಾರ್ಕಿಕಮತದಂತೆ, ಶುಕ್ತಿಯಲ್ಲಿ ರಜತ್ವದ ಆರೋಪ ಮಾಡಿದಾಗ ರಜತತ್ವಾಶ್ರಯವಾದ ಆಪಣಸ್ಥ ಸತ್ಯರಜತವೂ ವಿಷಯವಾಗುತ್ತದೆ.

## ಅನುವ್ಯವಸಾಯದಲ್ಲಿ ಪ್ರಾಮಾಣ್ಯಭಾನ ಇದೆ

**रजतत्वे तृतीयार्थोल्लेखबलेन प्रकारकत्वस्येव रजतेऽपि द्वितीयार्थोल्लेखबलेन विशेष्यकत्वस्य अनुव्यवसायेन गृहीततया समानसंवित्संवेद्यतया च व्यवसाये तद्विशेष्यकत्वस्यापि ग्रहणात् । अस्ति हि दोषशङ्काद्यवतारदशायाम् 'इदं रजत्वेन जानामि' इत्यनुव्यवसायेऽपि तदनवतारदशायां 'रजतं रजतत्वेन जानामि' इत्यनुव्यवसायः । तस्मान्नाद्यः ।**

'ರಜತಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತತ್ವಪದದಲ್ಲಿ ತೃತೀಯಾವಿಭಕ್ತಿ ಇದೆ. ಅದು ಪ್ರಕಾರತಾ ಎಂಬ ಅರ್ಥವನ್ನು ಹೇಳುತ್ತದೆ. ಅದರಂತೆ ರಜತಪದೋತ್ತರದಲ್ಲಿ ದ್ವಿತೀಯಾವಿಭಕ್ತಿಯು ಇರುವುದರಿಂದ ಆ ವಿಭಕ್ತಿಯಿಂದ ವಿಶೇಷ್ಯತ್ವ ಬೋಧಿತವಾಗುತ್ತದೆ. ಅದರಿಂದಾಗಿ 'ರಜತತ್ವಪ್ರಕಾರಕ–ರಜತತ್ವವದ್ ವಿಶೇಷ್ಯಕ ಜ್ಞಾನವಾನಹಮ್' ಎಂದೇ ಅನುವ್ಯವಸಾಯವು ವ್ಯವಸಾಯವನ್ನು ಗ್ರಹಿಸುತ್ತದೆ. ಇದು ಪ್ರಾಮಾಣ್ಯವೇ ಆಗಿದೆ.

ದ್ವಿತೀಯಾವಿಭಕ್ತಿಗೆ ಕರ್ಮತ್ವಂ ಅರ್ಥ. ಜ್ಞಾನಕರ್ಮತ್ವ ಎಂದರೆ ಜ್ಞಾನವಿಷಯತ್ವ. ಆದ್ದರಿಂದ ದ್ವಿತೀಯಾಕ್ಕೆ ವಿಷಯತ್ವವೇ ಅರ್ಥ ಹೊರತು ವಿಶೇಷ್ಯತ್ವ ಅಲ್ಲ ಎನ್ನುವುದಾದರೂ ಪ್ರಕಾರತ್ವ–ವಿಶೇಷ್ಯತ್ವಗಳು ಅಥವಾ ಪ್ರಕಾರಕತ್ವ–ವಿಶೇಷ್ಯಕತ್ವಗಳು ಸಮಾನ ಸಂವಿತ್ ಸಂವೇದ್ಯಗಳಾಗಿವೆ. ಒಂದು ಜ್ಞಾನದಲ್ಲಿ ಒಂದಂಶವು ಪ್ರಕಾರ ಎಂದು ತಿಳಿದಾಗ ಇನ್ನೊಂದಂಶವು ವಿಶೇಷ್ಯ ಎಂದೂ ತಿಳಿಯುತ್ತದೆ. ಆದ್ದರಿಂದ ತೃತೀಯಾದಿಂದ ಪ್ರಕಾರತಾವು ಬೋಧ್ಯವಾದಾಗ ದ್ವಿತೀಯಾದಿಂದ ವಿಷಯತಾವು ವಾಚ್ಯವಾದರೂ ಪರಿಶೇಷಾತ್ ವಿಶೇಷ್ಯತಾವೇ ತಿಳಿಯಲ್ಪಡುತ್ತದೆ.

''ಇದಂ ರಜತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ಪುರೋವರ್ತಿ ವಿಶೇಷ್ಯಕತ್ವ ರಜತತ್ವ–ಪ್ರಕಾರತ್ವ ಇಷ್ಟೇ ಭಾನವಾಗುತ್ತದೆ. ಆದರೆ, ದೋಷಶಂಕಾ ಇದ್ದಾಗ ಈ ರೀತಿಯ ಅನುವ್ಯವಸಾಯವು ಬರುತ್ತದೆ. ಅದಿಲ್ಲದಾಗ, 'ರಜತಂ ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯ ಬರುತ್ತದೆ. ಇಲ್ಲಿ ರಜತಪದೋತ್ತರದಲ್ಲಿ ದ್ವಿತೀಯಾ ಇರುವುದರಿಂದ ಈ

ಅನುವ್ಯವಸಾಯವು ರಜತತ್ವವದ್ವಿಶೇಷ್ಯಕತ್ವವನ್ನೇ ಗ್ರಹಿಸುತ್ತದೆ. ಆದ್ದರಿಂದ ಅದಕ್ಕೆ ಪ್ರಾಮಾಣ್ಯ ವಿಷಯಕತ್ವ ಇದೆ.

ಹಿಂದೆ ಎರಡು ವಿಕಲ್ಪಗಳನ್ನು ಮಾಡಲಾಗಿತ್ತು. ಧರ್ಮಿ–ಧರ್ಮವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯವೇ ಅಲ್ಲವೋ, ಅಥವಾ ಸಾಕ್ಷಾತ್ ವಿಷಯವಲ್ಲವೋ, ಎಂದು. ಇವುಗಳಲ್ಲಿ ಮೊದಲನೆಯದು ಇದುವರೆಗೆ ನಿರಸ್ತವಾಯಿತು.

## ನ್ಯಾಯದೀಪ

**ದ್ವಿತೀಯಾ ವಿಷಯತ್ವರೂಪ–ಕರ್ಮತ್ವೇ ಏವ ಶಕ್ತಾ । ನತು ವಿಶೇಷ್ಯತ್ವೇ ಇತಿ ವಾದಿನಂ ಪ್ರತಿ ಆಹ–ಸಮಾನೇತಿ ॥ ಪ್ರಕಾರತ್ವ–ವಿಶೇಷ್ಯತ್ವಯೋರಿತಿ ವಾ, ಪ್ರಕಾರಕತ್ವ–ತದ್ವಿಷಯಕತ್ವಯೋರಿತಿ ವಾ ಅರ್ಥಃ ।**

**ನನ್ವೇವಂ ಭ್ರಮೇಽಪಿ ಪ್ರಾಮಾಣ್ಯಾಪತ್ತಿರಿತಿ ಚೇತ್, ಕಸ್ಯದೋಷಃ? ಮನ್ಮತೇ ಇವ ಅಸತ ಏವ ಆರೋಪಃ ಸ್ವೀಕ್ರಿಯತಾಮ್ । ತದನಧಿಕರಣ ಅವಿಶೇಷ್ಯತ್ವಾದಿಕಂ ಅಧಿಕಂ ವಾ ನಿವೇಶ್ಯತಾಮ್ ಇತಿ ಭಾವಃ ।**

ತದ್‌ವಿಷಯಕತ್ವೇ ಸತಿ ತತ್‌ಪ್ರಕಾರಕತ್ವಮ್ ಎಂದು ಪ್ರಾಮಾಣ್ಯದ ಲಕ್ಷಣವಾದಲ್ಲಿ ರಜತಭ್ರಮೆಯೂ ಪ್ರಮಾಣವಾದೀತು. ಅದರಲ್ಲೂ ಹಿಂದೆ ಹೇಳಿದಂತೆ ರಜತತ್ವವದ್ ಆಪಣಸ್ಥರಜತವಿಷಯಕತ್ವ ಮತ್ತು ರಜತತ್ವಪ್ರಕಾರಕತ್ವಗಳು ಇವೆ, ಎಂದರೆ, ಈ ಆಪತ್ತಿ ಯಾರಿಗೆ? ತಾರ್ಕಿಕರಿಗೆ. ಅದಕ್ಕಾಗಿ, ಅವರೂ ನಮ್ಮಂತೆಯೇ ಆರೋಪಿತವಾದುದು ಸರ್ವಥಾ ಅಸತ್, ಎಂದೇ ಒಪ್ಪಿಕೊಳ್ಳಲಿ. ಆಗ ಭ್ರಮೆಯು ರಜತತ್ವವದ್ ವಿಷಯಕವೇ ಆಗುವುದಿಲ್ಲ.

ಅಥವಾ ಆರೋಪಿತವು ಸತ್ಯವೆಂದೇ ಹೇಳುವುದಾದಲ್ಲಿ ಭ್ರಮಲಕ್ಷಣದಲ್ಲಿ ವಿಶೇಷಣಾಂತರ ಸೇರಿಸಿ– 'ಪ್ರಕಾರೀಭೂತ–ಧರ್ಮಾನಧಿಕರಣ ಅವಿಶೇಷ್ಯಕತ್ವಮ್' ಎಂದು. ರಜತಭ್ರಮೆಯಲ್ಲಿ ಶುಕ್ತಿಯು ವಿಶೇಷ್ಯ. ಅದು ಪ್ರಕಾರೀಭೂತವಾದ ರಜತತ್ವಕ್ಕೆ ಅನಧಿಕರಣವಾಗಿದೆ. ಆದ್ದರಿಂದ ಅತಿವ್ಯಾಪ್ತಿ ಇಲ್ಲ. ಪ್ರಮಾದಲ್ಲಿ ಪ್ರಕಾರೀಭೂತಧರ್ಮಕ್ಕೆ ವಿಶೇಷ್ಯವು ಅಧಿಕರಣವೇ ಆಗಿರುತ್ತದೆ. ಆದ್ದರಿಂದ ಅದರಲ್ಲಿ ಪ್ರಕಾರೀಭೂತ–ಧರ್ಮಾನಧಿಕರಣ–ಅವಿಶೇಷ್ಯಕತ್ವವು ಬರುತ್ತದೆ.

## ನ್ಯಾಯದೀಪ

**ರಜತೇ ದ್ವಿತೀಯಾರ್ಥೋಲ್ಲೇಖಃ ಅಸಿದ್ಧಃ ಇತ್ಯತಃ ಉಪಪಾದಯತಿ –ಅಸ್ತೀತಿ ॥**

**ನ ಚ ಬಾಹ್ಯಾರ್ಥೇ ಅನುವ್ಯವಸಾಯಸ್ಯ ಅಸಾಮರ್ಥ್ಯಮ್ । ಉಪನಾಯಕೇ ಸತಿ ಸಾಮರ್ಥ್ಯಸಂಭವಾತ್ । ನ ಚ ಉಪನೀತಂ ವಿಶೇಷಣತ್ವೇನ ಭಾತೀತಿ ನಿಯಮಃ । 'ಪರಮಾಣುಮಹಂ ಜಾನಾಮಿ' ಇತ್ಯಾದೌ ವ್ಯಭಿಚಾರಾತ್, ಇತಿ ಭಾವಃ ।**

'ಇದಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ 'ಇದಂ' ಎಂದು ದ್ವಿತೀಯಾರ್ಥದ ಉಲ್ಲೇಖವಿದೆ. ರಜತಪ್ರಮಾದ ಅನುವ್ಯವಸಾಯದಲ್ಲಿ ದ್ವಿತೀಯಾರ್ಥದ ಉಲ್ಲೇಖ ಇಲ್ಲ, ಎನ್ನುವ ಆಕ್ಷೇಪಕ್ಕೆ 'ಅಸ್ತಿ ಹಿ' ಎಂಬ ವಾಕ್ಯವು ಉತ್ತರ ಕೊಡುತ್ತದೆ.

'ರಜತಂ ಜಾನಾಮಿ' ಎಂದು ಅನುವ್ಯವಸಾಯ ಬರಲು ಸಾಧ್ಯವಿಲ್ಲ. ಹಾಗೆ ಬರಬೇಕಾದರೆ ಪುರೋವರ್ತಿಯು ರಜತವೇ ಆಗಿದೆ, ಎಂದು ನಿರ್ಧಾರವಾಗಿರಬೇಕು. ಅದನ್ನು ನಿರ್ಧರಿಸುವ ಸಾಮರ್ಥ್ಯವು ಅನುವ್ಯವಸಾಯಕ್ಕೆ ಇಲ್ಲ. ರಜತವು ಬಾಹ್ಯಾರ್ಥ. ಬಾಹ್ಯಾರ್ಥವನ್ನು ನಿರ್ಧಾರ ಮಾಡಲು ಮನಸ್ಸು ಅಸಮರ್ಥವಾಗಿದೆ, ಎಂದರೆ, ಇದಕ್ಕೆ ಸಮಾಧಾನ-ಮನಸ್ಸಿಗೆ ಬಾಹ್ಯಾರ್ಥದೊಂದಿಗೆ ಲೌಕಿಕ ಸನ್ನಿಕರ್ಷವು ಇಲ್ಲದೇ ಹೋದರೂ ಜ್ಞಾನಲಕ್ಷಣಾ ಎಂಬ ಅಲೌಕಿಕ ಸನ್ನಿಕರ್ಷ ಇದೆ. ವ್ಯವಸಾಯವೇ ಜ್ಞಾನಲಕ್ಷಣಾ. ಅದು ರಜತದಲ್ಲಿ, ರಜತತ್ವವೈಶಿಷ್ಟ್ಯವನ್ನು ವಿಷಯೀಕರಿಸಿದೆ. ಹೀಗೆ ವ್ಯವಸಾಯೋಪನೀತವಾಗಿ ರಜತವೂ ಅನುವ್ಯವಸಾಯಕ್ಕೆ ವಿಷಯವಾಗಿದೆ.

ಉಪನೀತವಾದುದು ವಿಶೇಷಣವಾಗಿ ತೋರುತ್ತದೆ. ಸೌರಭ್ಯವು ಉಪನೀತವಾದಾಗ 'ಸುರಭಿ ಚಂದನಮ್' ಎಂದು ಜ್ಞಾನ ಬರುತ್ತದೆ. ಈ ಜ್ಞಾನದಲ್ಲಿ ಸೌರಭ್ಯವು ಉಪನೀತವಾಗಿದ್ದು ವಿಶೇಷಣತಯಾ ಭಾಸವಾಗುತ್ತದೆ. ಆದರೆ, ಪ್ರಕೃತದಲ್ಲಿ ರಜತವು ವಿಶೇಷಣತಯಾ ತೋರುತ್ತಿಲ್ಲ. ಆದ್ದರಿಂದ ಅದನ್ನು ಉಪನೀತ ಎನ್ನುವುದು ಹೇಗೆ?

ಉಪನೀತವು ವಿಶೇಷಣವಾಗಿಯೇ ಭಾನವಾಗಬೇಕೆಂಬ ನಿಯಮವಿಲ್ಲ. ಉದಾಹರಣೆಗೆ-ಪರಮಾಣುವನ್ನು ಉಪದೇಶದಿಂದ ತಿಳಿದುಕೊಂಡು 'ಪರಮಾಣುಮ್ ಅಹಂ ಜಾನಾಮಿ' ಎಂದು ಅನುವ್ಯವಸಾಯ ಬರುತ್ತದೆ. ಇಲ್ಲಿ ಪರಮಾಣವು ವಿಶೇಷಣವಾಗಿ ತೋರುತ್ತಿಲ್ಲ. ಪರಮಾಣವು ನಿತ್ಯದ್ರವ್ಯವಾದುದರಿಂದ 'ಅನ್ಯತ್ರನಿತ್ಯದ್ರವ್ಯೇಭ್ಯಃ ಆಶ್ರಿತತ್ವಮ್' ಎಂಬ ನಿಯಮದಂತೆ ಪರಮಾಣುಗಳು ಅನ್ಯತ್ರ ವಿಶೇಷಣವಾಗುವ ಸಂಭವವಿಲ್ಲ. ಆದ್ದರಿಂದ ಅದು ವಿಶೇಷ್ಯವಾಗಿ ತೋರುವಂತೆ ಪ್ರಕೃತದಲ್ಲಿ ರಜತವು ಉಪನೀತವಾದರೂ ವಿಶೇಷಣವಾಗಿಯೇ ಅನುವ್ಯವಸಾಯದಲ್ಲಿ ತೋರಬೇಕಾಗಿಲ್ಲ.

## ದ್ವಿತೀಯಪಕ್ಷನಿರಾಸ

**द्वितीये सिद्धं प्रामाण्यस्य स्वतस्त्वम् । वैशिष्ट्यरूपस्य तद्वत्वस्याप्यनुव्यवसायेन ग्रहणात् ।**

ಹಿಂದಿನ ಎರಡು ವಿಕಲ್ಪಗಳಲ್ಲಿ (ಪು.245) ಮೊದಲನೆಯ ವಿಕಲ್ಪವನ್ನು ನಿರಾಕರಿಸಲಾಗಿದೆ. ಎರಡನೆಯ ವಿಕಲ್ಪ-ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವ್ಯವಸಾಯದ್ವಾರಾ ವಿಷಯವಾದರೂ ಸ್ವಾತಂತ್ರ್ಯೇಣ ವಿಷಯವಲ್ಲ, ಎಂದು. ಅದು ವಿಷಯವಾದರಷ್ಟೇ ಸಾಕು, ಪ್ರಾಮಾಣ್ಯಸ್ವತಸ್ತ್ವ ಸಿದ್ಧವಾದಂತೆ. ಸ್ವತಸ್ತ್ವದಲ್ಲಿ ಸ್ವಾತಂತ್ರ್ಯೇಣ ತದ್ವತ್ವವು ವಿಷಯವಾಗಬೇಕು ಎಂಬ ನಿಬಂಧನೆ ಇಲ್ಲ. ವೈಶಿಷ್ಟ್ಯವೆಂದರೆ ತದ್ವತ್ತ್ವ. ಅದು ವ್ಯವಸಾಯದ್ವಾರಾ ಅನುವ್ಯವಸಾಯಕ್ಕೆ ಸತ್ತ್ವೇನ ವಿಷಯವಾದರೂ ಸಾಕು. ಅನುವ್ಯವಸಾಯವು ವ್ಯವಸಾಯಗತವಾದ 'ತದ್ವತಿ ತತ್‌ಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ.

## ನ್ಯಾಯದೀಪ

**ಸಿದ್ಧಮಿತಿ ॥ ಸ್ವಾತಂತ್ರ್ಯೇಣ ಜ್ಞಾನಗ್ರಾಹಕ-ಗ್ರಾಹ್ಯತ್ವಸ್ಯ ಸ್ವತಸ್ತ್ವನಿರುಕ್ತಾ ಅಪ್ರವೇಶಾತ್, ಸತ್ತ್ವೇನ ತಥಾತ್ವಸ್ಯ ಸತ್ವಾಚ್ಚ ಇತಿ ಭಾವಃ ।**

ಸ್ವತಸ್ತ್ವನಿರುಕ್ತಿಯಲ್ಲಿ ಪ್ರಾಮಾಣ್ಯವು ಜ್ಞಾನಗ್ರಾಹಕದಿಂದ ಸ್ವಾತಂತ್ರ್ಯೇಣ ಗ್ರಾಹ್ಯ, ಎಂದೇನೂ ಸೇರಿಲ್ಲ. ಆದ್ದರಿಂದ ವ್ಯವಸಾಯದ್ವಾರಾ ವಿಷಯವಾದರೂ ಸಾಕು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಅರ್ಥಸತ್ವ-ಘಟಿತಸ್ಯೈವ ಪ್ರಾಮಾಣ್ಯರೂಪತ್ವಾತ್ ತಸ್ಯ ಅನು-ವ್ಯವಸಾಯವೇದ್ಯತಾ ನ ಪ್ರಾಪ್ತಾ, ಇತಿ ಭಾವೇನ ಶಂಕತೇ-ನನ್ವಿತಿ ॥**

ಪ್ರಾಮಾಣ್ಯವೆಂದರೆ 'ತದ್ವತಿ ತತ್‌ಪ್ರಕಾರಕತ್ವಮ್'। ತದ್ವತ್ ಎಂದರೆ ಪ್ರಕಾರೀಭೂತಧರ್ಮವತ್, ಎಂದರ್ಥ. ಇಲ್ಲಿ 'ಮತುಪ್' ಪ್ರತ್ಯಯವು ಪ್ರಕಾರೀಭೂತವಾದ ಧರ್ಮವು ವಿಶೇಷ್ಯದಲ್ಲಿ 'ಸತ್' ಇದೆ ಎನ್ನುತ್ತದೆ. ಅರ್ಥಾತ್ ಆ ಧರ್ಮವು ವಿಶೇಷ್ಯದಲ್ಲಿ ತೋರಿದರೆ ಸಾಲದು, ವಸ್ತುತಃ ಅದು ಅಲ್ಲಿರಬೇಕು. ಆಗ ಮಾತ್ರ ಜ್ಞಾನದಲ್ಲಿ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ಅರ್ಥಸತ್ವವನ್ನು ಅಂತರಿಂದ್ರಿಯವು ಗ್ರಹಿಸಲು ಸಮರ್ಥವಲ್ಲ. ಆದ್ದರಿಂದ ಅದು ಅನುವ್ಯವಸಾಯವೇದ್ಯವಲ್ಲ. ಈ ಶಂಕೆಯನ್ನು ಮುಂದಿನ ಮೂಲದಲ್ಲಿ ಮಾಡಲಾಗಿದೆ.

## ಅರ್ಥಸತ್ವವು ಅನುವ್ಯವಸಾಯ ವಿಷಯವಲ್ಲ

**नन्वेवमप्यनुव्यवसायस्य श्रुतसाक्षिवाक्यवदन्यविषयतया वैशिष्ट्य-ग्राहकत्वेऽपि तत्संशयविरोधित्वरूपं सत्तानिश्चयरूपत्वं नास्तीति न**

**तद्घटितप्रामाण्ये निश्चयरूपता। न ह्यन्यविषयतयाप्यर्थ-ग्राहकेणार्थसत्वसिद्धिः। 'गेहे घटमिच्छामि, गेहे घटसंशयः, गेहे घटज्ञानम्' इत्यादिवाक्यजन्यज्ञानेनापि घटसत्वसिध्यापातादिति चेन्न।**

ಅನುವ್ಯವಸಾಯದಿಂದ ಪ್ರಾಮಾಣ್ಯದ ನಿಶ್ಚಯ ಬರಲು ಸಾಧ್ಯವಿಲ್ಲ. ಅದು ಸಾಕ್ಷಾತ್ತಾಗಿ ತದ್ವತ್ತ್ವವನ್ನು ಗ್ರಹಿಸುತ್ತಿಲ್ಲ; ವ್ಯವಸಾಯದ್ವಾರಾ ಅದನ್ನು ಗ್ರಹಿಸುತ್ತದೆ. ಅಂದರೆ ಅದು ಹೀಗೆ ಹೇಳುತ್ತದೆ–''ವ್ಯವಸಾಯವು ಪುರೋವರ್ತಿಯಲ್ಲಿ ರಜತತ್ವ ಇದೆ ಎಂದು ಹೇಳುತ್ತದೆ. ಅದು ಅಲ್ಲಿದೆಯೋ, ಇಲ್ಲವೋ ನನಗೆ ಗೊತ್ತಿಲ್ಲ''. ಹೀಗಿದ್ದರೆ ಇದು ಸಾಕ್ಷಿವಾಕ್ಯವಾಯಿತು. ಅವನೂ ಹೀಗೆಯೇ ಹೇಳುತ್ತಾನೆ–'ಅಲ್ಲಿ ಹಾವು ಇದೆ, ಎಂದು ಕೇಳಿದ್ದೇನೆ, ಇದೆಯೋ ಇಲ್ಲವೋ ನನಗೆ ಗೊತ್ತಿಲ್ಲ'. ಇದರಿಂದ ಹಾವಿನ ನಿಶ್ಚಯ ಹೇಗೆ ಬರುವುದಿಲ್ಲವೋ, ಅದರಂತೆ ಅನುವ್ಯವಸಾಯ ದಿಂದಲೂ ಅರ್ಥ ನಿಶ್ಚಯವಾಗುವುದಿಲ್ಲ. ಅರ್ಥನಿಶ್ಚಯವಾಗದ ಹೊರತು ಅರ್ಥಸಂದೇಹ ಪರಿಹಾರವಾಗುವುದಿಲ್ಲ. ಅದು ಪರಿಹಾರವಾಗದೇ ನಿಃಶಂಕ ಪ್ರವೃತ್ತಿಯಾಗುವುದಿಲ್ಲ.

ಅನ್ಯವಿಷಯತಯಾ ಅರ್ಥವನ್ನು ಯಾವುದು ಗ್ರಹಿಸುವುದೋ ಅದರಿಂದ ಎಂದೂ ಆ ವಿಷಯವು ಸತ್ಯ ಎಂದು ನಿರ್ಣಯವಾಗುವುದಿಲ್ಲ. ಉದಾಹರಣೆಗೆ–

(1) 'ಮನೆಯಲ್ಲಿ ಶಾಂತಿ ಇರಬೇಕೆಂದು ನಾನು ಬಯಸುತ್ತೇನೆ'. ಈ ವಾಕ್ಯವು ಯಜಮಾನನ ಇಚ್ಛೆಗೆ ಶಾಂತಿಯು ವಿಷಯ ಎನ್ನುತ್ತದೆ. ಈ ವಾಕ್ಯವು ಇಚ್ಛಾವಿಷಯತಯಾ ಶಾಂತಿಯನ್ನು ತಿಳಿಸುತ್ತದೆ, ತಾನೇ ಸಾಕ್ಷಾತ್ತಾಗಿ ಶಾಂತಿ ಇದೆ, ಎಂದೇನೂ ಹೇಳುವುದಿಲ್ಲ. ಇದರಿಂದ ಆ ಮನೆಯಲ್ಲಿ ಶಾಂತಿ ಇದೆ ಎಂದೇನೂ ತೀರ್ಮಾನವಾಗುವುದಿಲ್ಲ.

(2) 'ನನಗೆ ಕಾಯಿಲೆ ಇದೆಯೋ ಏನೋ ಎಂದು ಸಂದೇಹವಿದೆ' ಎಂದು ಒಂದು ವಾಕ್ಯ. ಈ ವಾಕ್ಯವು ಕಾಯಿಲೆ ಇದೆ, ಎಂದು ಹೇಳದೆ ನನಗೆ ಸಂದೇಹ ಇದೆ, ಎಂದು ಸಂದೇಹವನ್ನಷ್ಟೇ ಖಾತ್ರಿ ಮಾಡುತ್ತದೆ. ಕಾಯಿಲೆಯ ನಿಶ್ಚಯಕ್ಕೆ ಕಾರಣವಾಗುವುದಿಲ್ಲ.

(3) 'ಅವನು ತನ್ನನ್ನು ಬುದ್ಧಿವಂತ ಎಂದು ತಿಳಿದಿದ್ದಾನೆ' ಈ ವಾಕ್ಯವೂ ಅವನಿಗೆ ಬುದ್ಧಿ ಇರುವುದನ್ನು ದೃಢೀಕರಿಸುವುದಿಲ್ಲ. ಅದು ನೇರವಾಗಿ ಹೇಳುವವಿಷಯ–'ಅವನಿಗೆ ಬುದ್ಧಿವಂತ ಎಂಬ ಜ್ಞಾನವಿದೆ' ಎಂದಿಷ್ಟೇ. ಬುದ್ಧಿ ಇದೆಯೋ ಇಲ್ಲವೋ ಎಂಬ ವಿಷಯದಲ್ಲಿ ಅದು ತನ್ನ ನಿರ್ಧಾರವನ್ನು ಕೊಡುವುದಿಲ್ಲ.

ಮೊದಲನೆಯದು ಇಚ್ಛಾದ್ವಾರಾ ಅರ್ಥವಿಷಯಕ, ಎರಡನೆಯದು ಸಂದೇಹದ್ವಾರಾ,

ಮೂರನೆಯದು ಜ್ಞಾನದ್ವಾರಾ. ಮೂರನೆಯದು ಪ್ರಕೃತಕ್ಕೆ ನೇರವಾದ ದೃಷ್ಟಾಂತ. ಅದರಂತೆ, ಪ್ರಕೃತ ಅನುವ್ಯವಸಾಯದಿಂದಲೂ ಅರ್ಥಸತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಅನುವ್ಯವಸಾಯ ಪ್ರಾಮಾಣ್ಯನಿಶ್ಚಾಯಕವಲ್ಲ, ಎಂದು ಪೂರ್ವಪಕ್ಷ.

## ನ್ಯಾಯದೀಪ

**ಶ್ರುತೇತಿ ॥ ಸಾಕ್ಷಿಣಾ ಶ್ರುತಂ=ತೇನ ಉಚ್ಚರಿತಂ ವಾಕ್ಯಂ ಸಾಕ್ಷಿವಾಕ್ಯಮ್ । ತಸ್ಯೇವ ಇತ್ಯರ್ಥಃ । 'ಗೃಹೇ ಘಟೋಽಸ್ತೀತಿ ಶೃಣೋಮಿ' ಇತ್ಯಾದಿ ಸಾಕ್ಷಿವಾಕ್ಯಸ್ಯೇವ ಇತಿ ಯಾವತ್।**

**ಅನ್ಯವಿಷಯತಯಾ=ವ್ಯವಸಾಯವಿಷಯತಯಾ ಇತ್ಯರ್ಥಃ । ವ್ಯವಸಾಯಃ 'ರಜತೇ ರಜತತ್ವಮ್ ಅಸ್ತೀತ್ಯಾಹ, ನಾಹಂ ತತ್ ಜಾನಾಮಿ ಅಸ್ತಿ ನವೇತಿ' ಏವಂರೂಪತಯಾ ಇತ್ಯರ್ಥಃ । ತದ್‌ಘಟಿತೇತಿ ॥ ವೈಶಿಷ್ಟ್ಯಸತ್ವ-ಘಟಿತೇತ್ಯರ್ಥಃ ।**

**ಅನುವ್ಯವಸಾಯಃ, ನಾರ್ಥಸತ್ವಾವಧಾರಣರೂಪಃ, ಅನ್ಯವಿಷಯತಯಾ ತದ್‌ಗ್ರಾಹಕತ್ವಾತ್, ಶ್ರುತಸಾಕ್ಷಿವಾಕ್ಯವತ್ ಇತ್ಯುಕ್ತಂ ಭವತಿ । ಹೇತೋಃ ಅಪ್ರಯೋಜಕತ್ವಂ ನಿರಾಹ–ನಹೀತಿ ॥**

ಸಾಕ್ಷಿಯಾದವನು ಉಚ್ಚರಿಸಿದವಾಕ್ಯ ಸಾಕ್ಷಿವಾಕ್ಯ. ಉದಾಹರಣೆಗೆ–'ಮಡಿಕೆ ಮನೆಯಲ್ಲಿದೆ, ಎಂದು ಕೇಳಿದ್ದೇನೆ' ಎಂಬ ವಾಕ್ಯ.

ಅನುವ್ಯವಸಾಯವು, ವ್ಯವಸಾಯವು ರಜತದಲ್ಲಿ ರಜತತ್ವ ಇದೆ. ಅದು ಅಲ್ಲಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ, ಎನ್ನುತ್ತದೆ. ಇದರಿಂದ ಅರ್ಥನಿಶ್ಚಯವಾಗುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನ್ಯವಿಷಯತಯಾ ವೈಶಿಷ್ಟ್ಯಗ್ರಹಣೇಽಪಿ ತತ್‌ಸತ್ವಾವಧಾರಣರೂಪತ್ವಮ್ ಅನುವ್ಯವಸಾಯಸ್ಯ ವಕ್ತುಂ ಸಾಮಾನ್ಯನ್ಯಾಯಂ ವದನ್ ಅತಿಪ್ರಸಂಗಂ ನಿರಾಹ–ಯತ್ರೇತಿ ॥**

ಅನುವ್ಯವಸಾಯವು ವ್ಯವಸಾಯವಿಷಯತಯಾ ವೈಶಿಷ್ಟ್ಯವನ್ನು ಗ್ರಹಣೆ ಮಾಡಿದರೂ ಆ ವೈಶಿಷ್ಟ್ಯದಲ್ಲಿ ಸತ್ವವನ್ನು ಗ್ರಹಣೆ ಮಾಡುತ್ತದೆ. ಇದನ್ನು ತಿಳಿಸುವುದಕ್ಕಾಗಿ ಎಲ್ಲಿ ಸತ್ವಾವಧಾರಣರೂಪತ್ವವಿದೆ ಎನ್ನುವುದಕ್ಕೆ ಸಾಮಾನ್ಯನಿಯಮವನ್ನು ಹೇಳಿ ಒಂದೆ ಹೇಳಿದ ಅತಿಪ್ರಸಂಗವನ್ನು ಪರಿಹಾರ ಮಾಡುತ್ತಾರೆ ಮುಂದಿನ ಗ್ರಂಥದಲ್ಲಿ.

## ಅನುವ್ಯವಸಾಯ ಅರ್ಥಸತ್ವಗ್ರಾಹಿ

**यत्र ज्ञानस्य अन्यद्वारेणार्थविषयता तत्र द्वारिणा द्वारं सत्वेनार्थविषयकमिति ग्रहणे द्वारिणोऽपि सत्वेनार्थविषयतेति दृष्टानुसारेण कल्पनेऽनतिप्रसङ्गात् । न हि द्वारमिच्छादिकं सत्वेनार्थविषयतया द्वारिणा ज्ञानेन गृहीतम् । दोषशङ्का-दिनाऽनास्कन्दितो व्यवसायस्त्वनुव्यवसायेन तथा गृहीतः । गेहे घटज्ञानं, साक्षिणा श्रुतवाक्यं च यदि सत्वेनार्थविषयतया द्वारिणा ज्ञानेन गृहीतं तदा तेनापि घटसत्वं सिध्यत्येव । यदि च सव्यवधानत्वमात्रेण सत्वानिश्चायकत्वं तर्हि 'गेहे मम घटप्रमा' इत्याप्तवाक्यजन्यज्ञानेनापि, घटसत्वं न सिध्येत् ।**

ಜ್ಞಾನಕ್ಕೆ ಅನ್ಯದ್ವಾರಾ ಅರ್ಥವಿಷಯಕತ್ವ ಇದ್ದ ಮಾತ್ರಕ್ಕೆ ಅದು ಅರ್ಥಸತ್ವನಿಶ್ಚಾಯಕವೇ ಅಲ್ಲ ಎಂದು ಹೇಳಲಾಗದು. ಅಂತಹ ಜ್ಞಾನವು 'ದ್ವಾರವು ಸತ್ವೇನ ಅರ್ಥವಿಷಯಕವಾಗಿದೆ' ಎಂದು ದ್ವಾರವನ್ನು ಗ್ರಹಿಸಿದಾಗ ದ್ವಾರಿಯಾದ ತಾನೂ ಸತ್ವೇನೈವ ಅರ್ಥವನ್ನು ವಿಷಯೀಕರಿಸುತ್ತದೆ. ಇದನ್ನು ಅನುಭವಾನುಸಾರವಾಗಿ ಕಲ್ಪಿಸಬೇಕು. ಆಗ ಹಿಂದೆ ಹೇಳಿದ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ, ಹಿಂದೆ ಹೇಳಿದ ವಾಕ್ಯಜನ್ಯವಾದ ಜ್ಞಾನವು (ದ್ವಾರಿಯು) 'ಇಚ್ಛಾದಿಗಳು ಸತ್ವೇನ ಅರ್ಥವಿಷಯಕ' ಎಂದು ಇಚ್ಛಾದಿಗಳನ್ನು ಗ್ರಹಿಸುತ್ತಿಲ್ಲ. ಆದ್ದರಿಂದ ಆ ಜ್ಞಾನದಿಂದ ಘಟಸತ್ವವು ಸಿದ್ಧವಾಗುವುದಿಲ್ಲ. ದೋಷಸಂದೇಹಾದಿಗಳು (ದುಷ್ಟಕರಣಜನ್ಯತ್ವಸಂದೇಹ–ಭ್ರಮತ್ವ ಸಂದೇಹಗಳು) ಇಲ್ಲದಿರುವ ಸನ್ನಿವೇಷದಲ್ಲಿ ಅನುವ್ಯವಸಾಯವು ವ್ಯವಸಾಯವನ್ನು ಸತ್ವೇನ ಅರ್ಥವಿಷಯಕವೆಂದೇ ಗ್ರಹಿಸುತ್ತದೆ. ಇದರಿಂದ ಅನುವ್ಯವಸಾಯವೂ 'ವೈಶಿಷ್ಟ್ಯವು ಸತ್' ಎಂದು ಗ್ರಹಿಸುತ್ತದೆ ಎಂದಂತಾಗುತ್ತದೆ. ಒಂದು ವೇಳೆ ಹಿಂದೆ ಉಲ್ಲೇಖಿಸಿರುವ ಇಚ್ಛಾದಿಗಳನ್ನು ಶಾಬ್ದಬೋಧವು ಅಥವಾ ಸಾಕ್ಷಿವಾಕ್ಯವು ಸತ್ವೇನ ಅರ್ಥವಿಷಯಕ ಎಂದು ಗ್ರಹಿಸಿದರೆ ಆಗ ಅವುಗಳಿಂದಲೂ ಅರ್ಥಸತ್ವವು ಸಿದ್ಧವಾಗುತ್ತದೆ. ಉದಾಹರಣೆಗೆ– 'ತನಗೆ ಕಾಯಿಲೆ ಇರುವುದು ರುಜುವಾತಾಗಿದೆ, ಎಂದು ಅವನು ಹೇಳುತ್ತಾನೆ' ಈ ವಾಕ್ಯದಿಂದ ಹುಟ್ಟಿದ ಶಾಬ್ದಬೋಧವು ಕಾಯಿಲೆ ಇದೆ ಎಂದೇ ಪ್ರಮಾಣಸುತ್ತದೆ. ಒಂದು ವೇಳೆ ಸಾಕ್ಷಾತ್ತಾಗಿ ಅರ್ಥಸತ್ವವಿಷಯವಾದರೆ ಮಾತ್ರ ಅರ್ಥಸಾಧಕ, ಅನ್ಯಮುಖೇನ ಅರ್ಥಸತ್ವವಿಷಯಕವಾದರೆ ಸಾಧಕವಲ್ಲ, ಎಂದು ಸಾಮಾನ್ಯ ನಿಯಮವನ್ನು ಅಂಗೀಕರಿಸಿದರೆ 'ಅಲ್ಲಿ ಹಾವು ಇದೆ, ಎಂದು ನನಗೆ ಪ್ರಮಾ ಇದೆ' ಎಂಬ

ವಾಕ್ಯದಿಂದಲೂ ಅರ್ಥನಿಶ್ಚಯವಾಗದಿರಬೇಕಾದೀತು. ಆಗ ಈ ವಾಕ್ಯವನ್ನು ಕೇಳಿಯೂ ಹಾವಿದ್ದೆಡೆ ಹೋಗಬೇಕಾದೀತು. ಯಾರೂ ಹಾಗೆ ಹೋಗುವುದಿಲ್ಲ. ಆದ್ದರಿಂದ ಅನ್ಯದ್ವಾರಾ ವೈಶಿಷ್ಟ್ಯವಿಷಯಕ ವಾದರೂ ಅನುವ್ಯವಸಾಯದಿಂದ ವೈಶಿಷ್ಟ್ಯದ ಸತ್ವವು ಸಿದ್ಧವಾಗುತ್ತದೆ.

## ನ್ಯಾಯದೀಪ

**ಪಕ್ಷೇ ತದರ್ಶಯತಿ–ದೋಷೇತಿ ॥ ದುಷ್ಟಕರಣ–ಜನ್ಯತ್ವಶಂಕಾ–ಭ್ರಮತ್ವಾದಿ ಶಂಕಾದಿನಾ ಇತ್ಯರ್ಥಃ।**

**ತರ್ಹಿ ಪೂರ್ವೋಕ್ತ ಸ್ಥಲೇಽಪಿ ಏವಂ ಸ್ಯಾತ್ ಇತ್ಯತ ಆಹ–ಗೇಹೇ ಇತಿ ॥ ಇಚ್ಛಾ–ಸಂಶಯಗ್ರಾಹಿಣೋಃ ಅಸತ್ವೇನ ಅರ್ಥವಿಷಯಕತಯಾ ದ್ವಾರಗ್ರಹಣಬಾಧಾತ್ 'ಗೇಹೇ ಘಟಜ್ಞಾನಮ್' ಇತ್ಯೇವ ಉಕ್ತಮ್।**

**ಏತೇನ, ಅನುವ್ಯವಸಾಯಃ, ಸತ್ತಯಾ ಅರ್ಥವಿಷಯಕಃ, ಸತ್ವೇನ ಅರ್ಥವಿಷಯಕತಯಾ ವ್ಯವಸಾಯವಿಷಯಕತ್ವಾತ್, ತಾದೃಶಂ ಯತ್ ಗೇಹೇ ಘಟಜ್ಞಾನಮ್ ಇತಿ ಜ್ಞಾನಮ್, ಶ್ರುತಂ ಸಾಕ್ಷಿವಾಕ್ಯಂ ಚ ತದ್ವತ್। 'ಗೇಹೇ ಘಟಸಂಶಯಃ' ಇತ್ಯಾದಿ ಜ್ಞಾನೇ ತು ಹೇತೋರಭಾವಾತ್ ನ ವ್ಯಭಿಚಾರಃ, ಇತ್ಯುಕ್ತಂ ಭವತಿ।**

**ಪೂರ್ವಪಕ್ಷ್ಯುಕ್ತೋ ಹೇತುಃ ಅಪ್ರಯೋಜಕಃ ಇತ್ಯಾಹ–ಯದಿ ಚೇತಿ ॥**

ಎರಡನೆಯ ಪಾರಾದ ಅರ್ಥ ಹೀಗೆ– ಹಿಂದೆ ಹೇಳಿದ ಇಚ್ಛಾ–ಸಂದೇಹಾದಿಗಳನ್ನು ವಿಷಯೀಕರಿಸುವ ಶಾಬ್ದಜ್ಞಾನವೂ ವಿಷಯಸತ್ವದಲ್ಲಿ ಪ್ರಮಾಣವಾಗಲೀ ಎಂದು ಆಕ್ಷೇಪಿಸಿದರೆ ಅದಕ್ಕುತ್ತರ–'ಗೇಹೇ ಘಟಜ್ಞಾನಮ್' ಎಂದು. ಹಿಂದೆ ಇಚ್ಛಾ–ಸಂದೇಹಗಳನ್ನು ಗ್ರಹಿಸುವ ಶಾಬ್ದಜ್ಞಾನಗಳೂ ಪ್ರಸ್ತುತವಾಗಿವೆ. ಆದರೂ ಈ ವಾಕ್ಯದಲ್ಲಿ ಇಚ್ಛಾ–ಸಂದೇಹಗಳನ್ನು ಬಿಟ್ಟು ಘಟಜ್ಞಾನಗ್ರಾಹಕವಾದ ಶಾಬ್ದಜ್ಞಾನವನ್ನು ಮಾತ್ರ ಉಲ್ಲೇಖಮಾಡಲಾಗಿದೆ. ಏಕೆಂದರೆ, ಇಚ್ಛಾ–ಸಂದೇಹಗಳನ್ನು ಅಸತ್ವೇನ ಅರ್ಥವಿಷಯಕತಯಾ ಶಾಬ್ದಬೋಧವು ವಿಷಯೀಕರಿಸುತ್ತವೆ. ಸತ್ವೇನ ಅರ್ಥವಿಷಯಕತಯಾ ವಿಷಯೀಕರಿಸುವುದಿಲ್ಲ. ಅದಕ್ಕಾಗಿ ಅವೆರಡನ್ನು ಬಿಡಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ವೈಷಮ್ಯಮ್ ಆಶಂಕ್ಯ ಪ್ರಕೃತೇಽಪಿ ಸಮಮ್ ಇತ್ಯಾಹ–ನನ್ವಿತ್ಯಾದಿನಾ ॥**

ಮೂಲದಲ್ಲಿ 'ಗೇಹೇ ಘಟಪ್ರಮಾ' ಎಂಬ ನಿದರ್ಶನವನ್ನು ಕೊಟ್ಟು ಅನುವ್ಯವಸಾಯವು

ಅರ್ಥಸತ್ವವಿಷಯಕ ಎನ್ನಲಾಗಿದೆ. ದೃಷ್ಟಾಂತಕ್ಕೂ ಪ್ರಕೃತ ಅನುವ್ಯವಸಾಯಕ್ಕೂ ವೈಷಮ್ಯವನ್ನು ಶಂಕೆಮಾಡಿ ಸಾಮ್ಯವನ್ನು ಮುಂದಿನ ಮೂಲದಲ್ಲಿ ಸಮರ್ಥಿಸಲಾಗಿದೆ.

**ननु तत्रार्थतथात्वघटितं प्रमात्वं गृह्णज्ज्ञानं घटसत्वं स्वातन्त्र्येणापि गृह्णातीति चेन्न । मम मतेऽनुव्यवसायस्यापि प्रामाण्यग्राहकत्वेनात्रापि स्वातन्त्र्यस्य सुवचत्वात् ।**

'ಗೇಹೇ ಮಮ ಘಟಪ್ರಮಾ' ಎಂಬ ವಾಕ್ಯಜನ್ಯ ಶಾಬ್ದಬೋಧದಲ್ಲಿ ಅರ್ಥಸತ್ವವು ಸಾಕ್ಷಾತ್ ವಿಷಯವಾಗಬಹುದು. ಏಕೆಂದರೆ, ಅದು ಘಟಜ್ಞಾನವನ್ನು 'ಪ್ರಮಾ' ಎಂದು ವಿಷಯೀಕರಿಸುತ್ತದೆ. ಪ್ರಮಾ ಎಂದರೆ, ತದ್ವತಿ ತತ್ ಪ್ರಕಾರಕ. ಇಲ್ಲಿ 'ತದ್ವತಿ' (ಪ್ರಕಾರವತಿ) ಎಂದು ವೈಶಿಷ್ಟ್ಯದ ಸತ್ವವೇ ಶಾಬ್ದಬೋಧದಲ್ಲಿ ವಿಷಯವಾಗುತ್ತದೆ. ಆದರೆ, 'ಘಟಜ್ಞಾನವಾನ್ ಅಹಮ್' ಎಂಬ ಅನುವ್ಯವಸಾಯದಲ್ಲಿ ಘಟಜ್ಞಾನ ಮಾತ್ರ ವಿಷಯ. ಅದು ಪ್ರಮಾ ಎಂದೇನೂ ಅನುವ್ಯವಸಾಯ ವಿಷಯೀಕರಿಸುತ್ತಿಲ್ಲ. ಆದ್ದರಿಂದ ಅನುವ್ಯವಸಾಯಕ್ಕೆ ಅರ್ಥಸತ್ವವು ಸಾಕ್ಷಾತ್ ವಿಷಯವಲ್ಲ.

ಈ ಆಕ್ಷೇಪ ಸರಿಯಲ್ಲ. ಸ್ವತಸ್ತ್ವವಾದಿಗಳ ಮತದಲ್ಲಿ ಅನುವ್ಯವಸಾಯವು ಪ್ರಾಮಾಣ್ಯ ಗ್ರಾಹಕವಾದುದರಿಂದ ಉಕ್ತಶಾಬ್ದಬೋಧದಂತೆ ಅದೂ ವ್ಯವಸಾಯವನ್ನು ಪ್ರಮಾ ಎಂದೇ ಗ್ರಹಿಸುತ್ತದೆ. ಆದ್ದರಿಂದ ಅದಕ್ಕೂ ಅರ್ಥಸತ್ವವು ಸಾಕ್ಷಾತ್ತಾಗಿಯೇ ವಿಷಯವಾಗಿದೆ. ಹೀಗೆ ಅವೆರಡಕ್ಕೂ ಯಾವ ವ್ಯತ್ಯಾಸವೂ ಇಲ್ಲ.

## ನ್ಯಾಯದೀಪ

**ಸ್ವಾತಂತ್ರ್ಯೇಣಾಪೀತಿ ॥ ವ್ಯವಸಾಯವತ್, ಇತಿ ಭಾವಃ। ಸುವಚತ್ವಾದಿತಿ ॥ ವ್ಯವಸಾಯನಿಷ್ಠಸ್ಯ ತದ್ವತ್ವ–ಘಟಿತ ಪ್ರಾಮಾಣ್ಯಸ್ಯ ಜ್ಞಾನತ್ವವತ್ ಸಾಕ್ಷಾದೇವ ಅನುವ್ಯವಸಾಯವಿಷಯತಾ। ನ ತು ವ್ಯವಸಾಯದ್ವಾರಾ। ಪರಂತು ತದ್ವತ್ವಸ್ಯ ತದಯೋಗ್ಯತಯಾ ಚಾಕ್ಷುಷಜ್ಞಾನೇ ಸೌರಭಸ್ಯೇವ ಉಪನೀತಸ್ಯ ಭಾನಮ್।**

**ಇಯಾಂಸ್ತು ವಿಶೇಷಃ। ಯದತ್ರ ಉಪನಾಯಕಸ್ಯಾಪಿ ಸಾಮಗ್ರೀಸದ್ಭಾವಾತ್ ಜ್ಞಾನವಿಷಯತಾ। ತತ್ರ ತು ಸಾಮಗ್ರ್ಯಭಾವಾತ್ ತದವಿಷಯತಾ ಇತಿ ಭಾವಃ।**

ಜ್ಞಾನತ್ವವು ಹೇಗೆ ಅನುವ್ಯವಸಾಯಕ್ಕೆ ವಿಷಯವೋ ಅದರಂತೆಯೇ ಸ್ವತಸ್ತ್ವವಾದದಲ್ಲಿ ವ್ಯವಸಾಯಗತ–ಪ್ರಾಮಾಣ್ಯವೂ ಅನುವ್ಯವಸಾಯಕ್ಕೆ ಸಾಕ್ಷಾತ್ ವಿಷಯ. ಪ್ರಾಮಾಣ್ಯದಲ್ಲಿ

ತದ್ವತ್ತ್ವಾಂಶವು (ವೈಶಿಷ್ಟ್ಯಾಂಶ) ಸೇರಿದೆ. ಆದ್ದರಿಂದ ಅದೂ ಅನುವ್ಯವಸಾಯಕ್ಕೆ ಸಾಕ್ಷಾತ್ ವಿಷಯ, ವ್ಯವಸಾಯದ್ವಾರಾ ವಿಷಯವಲ್ಲ. ಆದರೆ ತದ್ವತ್ತ್ವವು ಬಾಹ್ಯವಾದುದರಿಂದ ಮನಸ್ಸು ಅಥವಾ ಸಾಕ್ಷಿಗೆ ಯೋಗ್ಯವಲ್ಲ, ಆದ್ದರಿಂದ 'ಸುರಭಿ ಚಂದನಮ್' ಎಂಬ ಚಾಕ್ಷುಷಜ್ಞಾನದಲ್ಲಿ ಸೌರಭ್ಯದಂತೆ ಜ್ಞಾನಲಕ್ಷಣಾ ಸನ್ನಿಕರ್ಷದಿಂದ ತೋರುತ್ತದೆ.

'ಸುರಭಿ ಚಂದನಮ್' ಎಂಬ ಜ್ಞಾನಕ್ಕೂ ಪ್ರಕೃತ ಅನುವ್ಯವಸಾಯಕ್ಕೂ ಸ್ವಲ್ಪ ವ್ಯತ್ಯಾಸವೂ ಇದೆ–ಸೌರಭ್ಯಕ್ಕೆ ಉಪನಾಯಕ ಘ್ರಾಣದಿಂದ ಹುಟ್ಟಿದ ಸೌರಭ್ಯಜ್ಞಾನ. ಆ ಜ್ಞಾನವೇ ಚಾಕ್ಷುಷಜ್ಞಾನದಲ್ಲಿ ತೋರುವುದಿಲ್ಲ, ತದುಪನೀತವಾದ ಸೌರಭ್ಯಮಾತ್ರವೇ ತೋರುತ್ತದೆ. ಆದರೆ ಪ್ರಕೃತಾನುವ್ಯವಸಾಯದಲ್ಲಿ ಉಪನೀತವಾದ ತದ್ವತ್ತ್ವಾಂಶದಂತೆ ಉಪನಾಯಕವಾದ ವ್ಯವಸಾಯವೂ ವಿಷಯವಾಗುತ್ತದೆ. ಏಕೆಂದರೆ, ವ್ಯವಸಾಯ ಭಾಸಕವಾದ ಮನಃಸಂಯುಕ್ತ ಸಮವಾಯವೆಂಬ ಸನ್ನಿಕರ್ಷಾದಿರೂಪ ಸಾಮಗ್ರೀ ಪ್ರಕೃತದಲ್ಲಿದೆ. ಆದರೆ, ಚಾಕ್ಷುಷವಾದ ಚಂದನ ಖಂಡದ ಜ್ಞಾನವು ಬರುವಾಗ ಉಪನಾಯಕವಾದ ಸೌರಭ್ಯಜ್ಞಾನವು ಚಾಕ್ಷುಷಪ್ರತ್ಯಕ್ಷದಲ್ಲಿ ಭಾನವಾಗಲು ಬೇಕಾದ ಸಾಮಗ್ರೀ (ಸನ್ನಿಕರ್ಷ) ಇಲ್ಲ. ಈ ಅಂಶದಲ್ಲಿ ಚಂದನ ಜ್ಞಾನಕ್ಕೂ ಅನುವ್ಯವಸಾಯಕ್ಕೂ ವ್ಯತ್ಯಾಸವಿದೆ.

## ಅಧಿಕಾಶಂಕಾ ಪರಿಹಾರ

**ಏತೇನ, ಯತ್ ಕೈಶ್ಚಿದುಕ್ತಮ್–'ಘಟಜ್ಞಾನವಾನ್ ಅಹಂ' 'ಅಯಂ ಘಟಃ' ಇತ್ಯತ್ರ ವೈಲಕ್ಷಣ್ಯಸ್ಯ ಸರ್ವಸಮ್ಮತಯಾ ತನ್ನಿಯಾಮಕಸ್ಯ ಉಪನಾಯಕ-ಭಾನಸಾಮಗ್ರೀಸಮವಧಾನ–ತದಸಮವಧಾನಾದೇಃ ಅವಶ್ಯಕಲ್ಪನಾತ್ । ಯತ್ರ ಉಪನಾಯಕಮಪಿ ಭಾಸತೇ ತತ್ರ ಉಪನೇಯಾಂಶೇ ಅಸ್ವಾತಂತ್ರ್ಯಮ್ । ಅತ ಏವ 'ಸುರಭಿ ಚಂದನಮ್' ಇತ್ಯತ್ರ ಸ್ವಾತಂತ್ರ್ಯಮ್ । ಸ್ವಾತಂತ್ರ್ಯಂ ಚ ಜ್ಞಾನನಿಷ್ಠಂ ಸಂಶಯವಿರೋಧಿತಾವಚ್ಛೇದಕಮೇವ ಕಿಂಚಿತ್ ಫಲಬಲಕಲ್ಪ್ಯಮ್ । ಸ್ವರೂಪಸಂಬಂಧವಿಶೇಷವಿಷಯತ್ವಾತ್, ಇತಿ ।**

**ತನ್ನಿರಸ್ತಮ್ । ಸ್ವಾತಂತ್ರ್ಯೇಣ ಉಪನಾಯಕತ್ವೇ ಅಜ್ಞಾಯಮಾನತ್ವಸ್ಯ ಪ್ರಯೋಜಕತ್ವೇ ಗೌರವಾತ್ । 'ಗೇಹೇ ಘಟಪ್ರಮಾ' ಇತ್ಯಾದಿ ಶಬ್ದಸ್ಥಲೇ ಪ್ರಮಾತ್ವೇನ ಜ್ಞಾಯಮಾನಸ್ಯಾಪಿ ಸ್ವಾತಂತ್ರ್ಯೇಣ ಉಪನಾಯಕತ್ವಾಂಗೀ-ಕಾರೇಣ ವ್ಯಭಿಚಾರಾಚ್ಚ । ಗೃಹೀತ ಪ್ರಾಮಾಣ್ಯಕ ಜ್ಞಾನಸಮಾನವಿಷಯಕ-ಜ್ಞಾನಾನುವ್ಯವಸಾಯಸ್ಥಲೇ(ಪ್ರಮಾತ್ವೇನ) ಜ್ಞಾಯಮಾನಸ್ಯಾಪಿ ಜ್ಞಾನಸ್ಯ ಸ್ವಾತಂತ್ರ್ಯೇಣ ಉಪನಾಯಕತ್ವಾಚ್ಚ ।**

ಇದರಿಂದ ಕೆಲವರು ಮಾಡುವ ಆಕ್ಷೇಪಕ್ಕೂ ಅವಕಾಶವಿಲ್ಲ– 'ಘಟಜ್ಞಾನವಾನ್ ಅಹಂ'

ಇದು ಅನುವ್ಯವಸಾಯ. 'ಅಯಂ ಘಟಃ' ಇದು ವ್ಯವಸಾಯ. ಇವೆರಡರಲ್ಲಿ ವ್ಯತ್ಯಾಸವು ಸರ್ವಾನುಭವಸಿದ್ಧ. ಅನುವ್ಯವಸಾಯದಲ್ಲಿ ಘಟವು ವ್ಯವಸಾಯದ್ವಾರಾ ವಿಷಯ, ವ್ಯವಸಾಯ ದಲ್ಲಿ ಘಟ ಸಾಕ್ಷಾತ್ ವಿಷಯ. ಈ ವ್ಯತ್ಯಾಸವನ್ನು ಕೂಡಿಸಬೇಕಾದರೆ, ವ್ಯವಸಾಯದಲ್ಲಿ ಜ್ಞಾನಸಾಮಗ್ರಿಯು ಉಪನಾಯಕಭಾಸಕದಿಂದ ಅಘಟಿತವಾಗಿದೆ, ಅನುವ್ಯವಸಾಯ ಸಾಮಗ್ರಿಯು ಉಪನಾಯಕ(ವ್ಯವಸಾಯ) ಭಾಸಕಘಟಿತವಾಗಿದೆ, ಎಂದು ಕಲ್ಪಿಸಲೇಬೇಕು. ವ್ಯವಸಾಯವು ಚಕ್ಷುಃ ಸಂಯೋಗರೂಪ ಲೌಕಿಕ ಸನ್ನಿಕರ್ಷದಿಂದ ಘಟಭಾಸಕ. ಆ ಘಟಜ್ಞಾನದಲ್ಲಿ ಸನ್ನಿಕರ್ಷವು ವಿಷಯವಾಗುವುದಿಲ್ಲ. ಆದರೆ ಮನಸ್ಸಿಗೆ ಘಟದೊಂದಿಗೆ ಸಾಕ್ಷಾತ್ ಸನ್ನಿಕರ್ಷವು ಇಲ್ಲದಿರುವುದರಿಂದ ಜ್ಞಾನಲಕ್ಷಣಾರೂಪವಾದ ಅಲೌಕಿಕಸನ್ನಿಕರ್ಷವು ಘಟಭಾಸಕ. ತಜ್ಜನ್ಯಜ್ಞಾನದಲ್ಲಿ ಸನ್ನಿಕರ್ಷವಾದ ಜ್ಞಾನವೂ ವಿಷಯವಾಗುತ್ತದೆ.

ಯಾವ ಜ್ಞಾನದಲ್ಲಿ ಉಪನಾಯಕವಾದ ಜ್ಞಾನವೂ ವಿಷಯವಾಗುವುದೋ ಆ ಜ್ಞಾನವು ಉಪನೇಯವನ್ನು ಸ್ವಾತಂತ್ರ್ಯೇಣ ವಿಷಯೀಕರಿಸುವುದಿಲ್ಲ, ಉಪನಾಯಕವಾದ ಜ್ಞಾನದ್ವಾರಾ ಮಾತ್ರ ಉಪನೇಯವನ್ನು ವಿಷಯೀಕರಿಸುತ್ತದೆ. ಉದಾಹರಣೆಗೆ ''ನಾನು ದೇವರನ್ನು ನೋಡಿದ್ದೇನೆ, ಎಂದು ಅವನು ಹೇಳುತ್ತಾನೆ'' ಈ ವಾಕ್ಯಕ್ಕೆ ಉಪನಾಯಕ ದೇವರನ್ನು ನೋಡಿದವನ ವಾಕ್ಯ. ಅದೂ ಈ ಅನುವಾದ ವಾಕ್ಯದಲ್ಲಿ ವಿಷಯ. ಆದ್ದರಿಂದ 'ದೇವರು' ಈ ಅನುವಾದ ವಾಕ್ಯಕ್ಕೆ ಸಾಕ್ಷಾತ್ ವಿಷಯವಲ್ಲ. ಆದರೆ, 'ಸುರಭಿ ಚಂದನಮ್' ಎಂಬ ಚಾಕ್ಷುಷ ಜ್ಞಾನದಲ್ಲಿ ಉಪನಾಯಕವಾದ ಸೌರಭ್ಯಜ್ಞಾನವು ವಿಷಯವಾಗಿಲ್ಲವಾದುದರಿಂದಲೇ ಅದು ಸ್ವಾತಂತ್ರ್ಯೇಣ ಸೌರಭ್ಯವನ್ನು ವಿಷಯೀಕರಿಸುತ್ತದೆ.

ಸ್ವಾತಂತ್ರ್ಯವೆಂದರೆ ಸಂಶಯ–ವಿಪರೀತಜ್ಞಾನಾದಿ–ವಿರೋಧಿತಾವಚ್ಛೇಕ ಧರ್ಮವತ್ವಮ್। ಉಕ್ತ ಸೌರಭ್ಯಜ್ಞಾನವು ಸೌರಭ್ಯಸಂದೇಹಕ್ಕೆ, ಸೌರಭ್ಯಾಭಾವಜ್ಞಾನಕ್ಕೆ ವಿರೋಧಿಯಾಗಿದೆ. ಆದರೆ ಅನುವ್ಯವಸಾಯವು ಘಟಸಂದೇಹಕ್ಕೆ, ಘಟಾಭಾವನಿಶ್ಚಯಕ್ಕೆ ವಿರೋಧಿಯಲ್ಲ. ಆದ್ದರಿಂದ ಘಟಾಂಶದಲ್ಲಿ ಆ ಜ್ಞಾನಕ್ಕೆ ಸ್ವಾತಂತ್ರ್ಯವಿಲ್ಲ. ಹೀಗೆ ಕೆಲವರು ಹೇಳುತ್ತಾರೆ.

ಇದು ಸರಿಯಲ್ಲ–ಉಪನಾಯಕವು ಅಜ್ಞಾಯಮಾನವಾಗಿದ್ದರೆ ಮಾತ್ರ ಸ್ವಾತಂತ್ರ್ಯೇಣ ಭಾನ, ಎಂದು ಕಲ್ಪಿಸುವುದು ಗೌರವ. ಅಷ್ಟೇ ಅಲ್ಲ, ಮೇಲೆ ಹೇಳಿದಂತೆ 'ಗೇಹೇ ಘಟ ಪ್ರಮಾ' ಎಂಬ ಶಾಬ್ದಬೋಧವು ಉಪನಾಯಕವನ್ನು ಪ್ರಮಾತ್ವೇನ ವಿಷಯೀಕರಿಸುತ್ತಿದ್ದರೂ ಅದರಲ್ಲಿ ಪ್ರಮಾತ್ವ ಘಟಕತಯಾ ವೈಶಿಷ್ಟ್ಯವು ಸಾಕ್ಷಾದೇವ ವಿಷಯವಾಗಿದೆ. ಆದ್ದರಿಂದ ಮೇಲಿನ ನಿಯಮಕ್ಕೆ ವ್ಯಭಿಚಾರವಿದೆ. ಅದರಂತೆ, ಗೃಹೀತಪ್ರಾಮಾಣ್ಯಕಜ್ಞಾನಸಮಾನವಿಷಯಕವಾದ ಜ್ಞಾನಾಂತರವು ಅನುವ್ಯವಸಾಯಕ್ಕೆ ವಿಷಯವಾದಾಗ ಆ ಅನುವ್ಯವಸಾಯವು ಉಪನಾಯಕವಾದ ವ್ಯವಸಾಯ ವಿಷಯಕವಾಗಿದ್ದರೂ ಅದರಲ್ಲಿ ಬಾಹ್ಯ ವಿಷಯವೂ ಪ್ರಾಮಾಣ್ಯ ಘಟಕತಯಾ ವಿಷಯವಾಗಿದೆ. ಇಲ್ಲೂ ಪೂರ್ವೋಕ್ತನಿಯಮಕ್ಕೆ ವ್ಯಭಿಚಾರವಿದೆ.

ಆದ್ದರಿಂದ ಅನುವ್ಯವಸಾಯವೂ ಸಾಕ್ಷಾತ್ ಅರ್ಥವಿಷಯವಾಗುವುದಕ್ಕೆ ಬಾಧಕವಿಲ್ಲ.

## ಅರ್ಥಸತ್ವವು ಸ್ವಾತಂತ್ರ್ಯೇಣ ತೋರಬೇಕಾಗಿಲ್ಲ

## ನ್ಯಾಯದೀಪದಲ್ಲಿ ಅವತಾರಿಕೆ

**ನನು, ವಿಷಯಸತ್ತಾ–ನಿಯತಸತ್ತಾಕ–ಜ್ಞಾನವೃತ್ತಿ–ಧರ್ಮಾವಿಶೇಷಣತ್ವೇ ಸತಿ ಜ್ಞಾನವಿಶೇಷಣತಯಾ ಭಾನಮೇವ ಅಸ್ವಾತಂತ್ರ್ಯಮ್ । ತದಭಾವ ಏವ ಸ್ವಾತಂತ್ರ್ಯಮ್ ಇತಿ 'ಘಟಪ್ರಮಾವಾನ್ ಅಹಮ್' ಇತ್ಯಾದೌ ತಥಾ ಭಾನೇಽಪಿ 'ಘಟಜ್ಞಾನವಾನಹಮ್' ಇತ್ಯಾದೌ ನ ಸ್ವಾತಂತ್ರ್ಯೇಣ ಭಾನಮ್ । ತತ್ರ ಶುದ್ಧ ಜ್ಞಾನವಿಶೇಷಣತಯೈವ ಭಾನಾತ್ । ಅನುವ್ಯವಸಾಯಮಾತ್ರಸ್ಯ ಪ್ರಾಮಾಣ್ಯವಿಷಯಕತ್ವವಿವಾದಾತ್ । ಇತತ ಆಹ–ಅರ್ಥಸತ್ವೇತಿ ॥**

ಅನುವ್ಯವಸಾಯದಲ್ಲಿ ಅರ್ಥಸತ್ವವು ಸ್ವಾತಂತ್ರ್ಯೇಣ ಭಾನವಾಗುವುದಿಲ್ಲ. ಅಸ್ವಾತಂತ್ರ್ಯೇಣ ಭಾನದ ಸ್ವರೂಪ ಹೀಗೆ–ಯಾವ ಧರ್ಮವು ವಿಷಯಸತ್ತಾ–ನಿಯತ ಸತ್ತಾಕವಾಗಿದೆಯೋ ಅಂತಹ, ಜ್ಞಾನವೃತ್ತಿಯಾದ ಧರ್ಮದಲ್ಲಿ ವಿಶೇಷಣವಾಗದೆ, ಜ್ಞಾನದಲ್ಲಿ ಮಾತ್ರ ವಿಶೇಷಣವಾಗಿ ಭಾನವಾದರೆ ಅದು ಅಸ್ವಾತಂತ್ರ್ಯೇಣ ಭಾನ. ಉದಾಹರಣೆಗೆ–'ಘಟಜ್ಞಾನಂ ಪ್ರಮಾ' ಎಂಬಲ್ಲಿ ಘಟವು 'ಘಟಜ್ಞಾನ' ಎಂದು ಜ್ಞಾನದಲ್ಲಿ ವಿಶೇಷಣವಾಗಿಯೂ ಅನುವ್ಯವಸಾಯದಲ್ಲಿ ಭಾನವಾಗುತ್ತದೆ. ಅದರಂತೆ ಪ್ರಮಾತ್ವರೂಪ ಧರ್ಮದಲ್ಲಿ ವಿಶೇಷಣವಾಗಿಯೂ ಅದು ಭಾನವಾಗುತ್ತದೆ. ಹೀಗೆ ಭಾನವಾದರೆ ಅದು ಸ್ವಾತಂತ್ರ್ಯೇಣ ಭಾನ. ಆದರೆ, 'ಘಟಜ್ಞಾನವಾನ್ ಅಹಮ್' ಎಂಬ ಜ್ಞಾನದಲ್ಲಿ ಘಟವು ಜ್ಞಾನವಿಶೇಷಣವಾಗಿ ಮಾತ್ರ ಭಾನವಾಗುತ್ತದೆ. ಜ್ಞಾನವೃತ್ತಿಯಾದ ಪ್ರಮಾತ್ವರೂಪ ಧರ್ಮದಲ್ಲಿ ವಿಶೇಷಣವಾಗಿ ಭಾನವಾಗುತ್ತಿಲ್ಲ. ಆದ್ದರಿಂದ ಅದು ಅಸ್ವಾತಂತ್ರ್ಯೇಣ ಭಾಸಮಾನ.

ಪ್ರಮಾತ್ವವು ವಿಷಯಸತ್ತಾ ನಿಯತಸತ್ತಾಕವಾದ ಧರ್ಮ. ಯತ್ರ ಪ್ರಮಾತ್ವಸತ್ತಾ ತತ್ರ ವಿಷಯ ಸತ್ತಾ. ಜ್ಞಾನದಲ್ಲಿ ಪ್ರಮಾತ್ವವು ಇದೆ ಎಂದಾದರೆ ವಿಷಯವು ಸತ್ತಾಗಿರಲೇಬೇಕು. ಆದ್ದರಿಂದ ಪ್ರಮಾತ್ವವು ವಿಷಯಸತ್ತಾ ನಿಯತಸತ್ತಾಕ ಧರ್ಮ. ಪ್ರಮಾತ್ವದಲ್ಲಿ ವಿಶೇಷಣವಾಗಿ ವಿಷಯವು ತೋರುತ್ತದೆ. ಏಕೆಂದರೆ, 'ಘಟತ್ವವತಿ ಘಟತ್ವಪ್ರಕಾರತ್ವಂ' ಇದೇ ಪ್ರಮಾತ್ವ. ಅದರಲ್ಲಿ ಘಟವು ವಿಶೇಷಣವಾಗಿದೆ.

ಅಸ್ವಾತಂತ್ರ್ಯಪರಿಷ್ಕಾರದ ಮೇಲೆ ಹೀಗೆ ಆಕ್ಷೇಪ ಮಾಡಬಹುದು–ಸ್ವತಸ್ತ್ವಮತದಲ್ಲಿ 'ಘಟಜ್ಞಾನವಾನಹಮ್' ಇತ್ಯಾದಿ ಅನುವ್ಯವಸಾಯದಲ್ಲಿ ಪ್ರಾಮಾಣ್ಯ ಭಾನವಾಗುತ್ತದೆ. ಅದು ವಿಷಯ ಸತ್ತಾ ನಿಯತ ಧರ್ಮ. ಅದರಲ್ಲಿ ಅರ್ಥವು ವಿಶೇಷಣವಾಗಿ ತೋರುತ್ತದೆ, ಎಂದು. ಆದರೆ, ಅದು ವಿವಾದಾಸ್ಪದ ವಿಷಯ. ಇನ್ನೂ ಪ್ರಾಮಾಣ್ಯಭಾನ ನಿಶ್ಚಿತವಲ್ಲ. ಆದ್ದರಿಂದ ಅದರಲ್ಲಿ ವಿಷಯವು ಅಸ್ವಾತಂತ್ರ್ಯೇಣೈವ ಭಾನವಾಗುತ್ತದೆ. ಅದರಿಂದಾಗಿ ಅದರಲ್ಲಿ ಅರ್ಥಸತ್ವವು

ಭಾಸವಾಗುವುದಿಲ್ಲ. ಆದ್ದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ. ಈ ಆಕ್ಷೇಪಕ್ಕೆ ಮೂಲದಲ್ಲಿ 'ಅರ್ಥಸತ್ವ' ಇತ್ಯಾದಿ ವಾಕ್ಯದಿಂದ ಸಮಾಧಾನ ನೀಡಿದ್ದಾರೆ.

**अर्थसत्वनिश्चयत्वमात्रेण तद्घटितप्रामाण्यनिश्चयत्वोपपत्तौ स्वातन्त्र्यस्यानपेक्षितत्वाच्च । स्वतन्त्रादपि अनाशङ्कितदोषआन्यद्वारा ग्राहकस्य ''ऋषिभिर्बहुधा गीतं छन्दोभिर्विविधैः पृथक् ।''**

**''तदेतद् ऋचाभ्युक्तम्'' ।**

**इत्यादिवत् संवादेनाधिक्याच्च। एवंसति अनुव्यवसायस्य धर्म्यंशेऽपि प्रामाण्यनिश्चयरूपत्वाभावापातेन तत्रापि कदाचित् संदेहापाताच्च ।**

ಅನುವ್ಯವಸಾಯಕ್ಕೆ ಸ್ವಾತಂತ್ರ್ಯೇಣ ವೈಶಿಷ್ಟ್ಯವು (ಅರ್ಥಸತ್ವವು) ವಿಷಯವಾಗಬೇಕಿಲ್ಲ. ಅನ್ಯದ್ವಾರಾ ಅರ್ಥಸತ್ವವು ವಿಷಯವಾದರೂ ಸಾಕು. ಅಷ್ಟರಿಂದಲೇ ಅರ್ಥಸತ್ವಘಟಿತವಾದ ಪ್ರಾಮಾಣ್ಯವನ್ನೂ ಅದು ವಿಷಯೀಕರಿಸುತ್ತದೆ. ಸ್ವಾತಂತ್ರ್ಯಕ್ಕಿಂತಲೂ ದೋಷಸಂದೇಹವಿಲ್ಲದ ಅನ್ಯದ್ವಾರಾ 'ತದ್ವಿಷಯಕತ್ವವು' ಹೆಚ್ಚಿನದು, ಎಂದು ಭಗವದ್ಗೀತೆಯಿಂದ ಹಾಗೂ ಉಪನಿಷತ್ತುಗಳಿಂದ ತಿಳಿಯುತ್ತದೆ– ಶ್ರೀಕೃಷ್ಣ ತಾನೇ ಪ್ರಮಾಣವಾದರೂ 'ಕ್ಷೇತ್ರ–ಕ್ಷೇತ್ರಜ್ಞರ ಕುರಿತು ಋಷಿಗಳು, ಬ್ರಹ್ಮಸೂತ್ರಗಳು ತಿಳಿಸಿವೆ' ಎಂದು ಭಗವದ್ಗೀತೆಯಲ್ಲಿ (13.5) ಹೇಳಿದ್ದಾನೆ. 'ಈ ವಿಷಯವು ಋಙ್‌ಮಂತ್ರದಲ್ಲೂ ಹೇಳಲ್ಪಟ್ಟಿದೆ' ಎಂದು ಛಾಂದೋಗ್ಯಉಪನಿಷತ್ತು ಹೇಳುತ್ತದೆ. ಹೀಗೆ 'ಇದು ಪ್ರಾಮಾಣಿಕವಾದುದು' ಎಂದು ನೇರವಾಗಿ ಹೇಳುವುದಕ್ಕಿಂತಲೂ 'ಇದನ್ನು ಋಷಿಗಳು ಹೇಳಿದ್ದಾರೆ, ವೇದ ಹೇಳಿದೆ' ಎಂದು ಅನ್ಯದ್ವಾರಾ ವಿಷಯವನ್ನು ತಿಳಿಸುವುದರಿಂದ ವಿಷಯಸತ್ಯತೆಯು ದೃಢವಾಗಿ ತಿಳಿಯುತ್ತದೆ.

ಸ್ವಾತಂತ್ರ್ಯೇಣ ಅರ್ಥಸತ್ವಪ್ರತಿಪಾದಕತ್ವವೇ ಪ್ರಧಾನವಾಗುವುದಾದರೆ ಅನುವ್ಯವಸಾಯವು ಧರ್ಮಿಯನ್ನೂ ಸಾಕ್ಷಾತ್ತಾಗಿ ವಿಷಯೀಕರಿಸುವುದಿಲ್ಲವಾದ ಕಾರಣ ಧರ್ಮ್ಯಂಶದಲ್ಲಿ ಸತ್ವವು ಅನಿಶ್ಚಿತವಾಗಿ ಸಂದೇಹ ಬರಬೇಕಾದೀತು. ಆದರೆ, ಪರತಸ್ತ್ವವಾದಿಗಳು, ಸಕಲ ಜ್ಞಾನಗಳೂ ಧರ್ಮ್ಯಂಶೇ ಪ್ರಮಾ, ಎಂದೇ ಹೇಳುತ್ತಾರೆ. ಧರ್ಮಿಯು ಇದೆಯೋ ಇಲ್ಲವೋ ಎಂಬ ಸಂದೇಹ ವನ್ನು ಅವರು ಒಪ್ಪಿಲ್ಲ. ಆದ್ದರಿಂದ ಅನ್ಯದ್ವಾರಾ ಅರ್ಥವಿಷಯಕವಾದ ಜ್ಞಾನವೂ ಅರ್ಥಸತ್ವವನ್ನು ತಿಳಿಸುತ್ತದೆ.

## ನ್ಯಾಯದೀಪ

**ನನು ಸ್ವಾತಂತ್ರ್ಯೇಣ ಅಭಾನೇ ಕಥಮ್ ಅನುವ್ಯವಸಾಯಸ್ಯ**

**ಪ್ರಾಮಾಣ್ಯಸಂಶಯಾದಿವಿರೋಧಿತಾ? ಕಥಮ್ ವಾ ನಿಷ್ಕಂಪಪ್ರವೃತ್ತಿ ಹೇತುತಾ? ಇತ್ಯತ ಆಹ–ಸ್ವಾತಂತ್ರ್ಯಾದಪೀತಿ ॥**

**ಅನಾಶಂಕಿತದೋಷೇತಿ ಬಹುವ್ರೀಹಿಃ । ತದ್ರೂಪಾನ್ಯದ್ವಾರೇಣ ಇತ್ಯರ್ಥಃ ।**

**ತ್ರಯೋದಶೇ ಗೀತಾಯಾಂ ಕ್ಷೇತ್ರ–ಕ್ಷೇತ್ರಜ್ಞಸ್ವರೂಪಮ್ 'ಋಷಿಭಿಃ ಬಹುಧಾ ಗೀತಮ್' ಇತಿ ಅನಾಶಂಕಿತದೋಷ–ಋಷಿಗಾನ–ಛಂದೋರೂಪದ್ವಾರೇಣ ಅರ್ಥಗ್ರಾಹಕಸ್ಯ ಕೃಷ್ಣವಾಕ್ಯಸ್ಯ ಆಧಿಕ್ಯಮ್, ತಥಾ ನಿರ್ದೋಷ–ಋಗ್ದ್ವಾರೇಣ ಅರ್ಥಗ್ರಾಹಕಸ್ಯ ಛಾಂದೋಗ್ಯಾದ್ಯುಪನಿಷ-ದ್ವಾಕ್ಯಸ್ಯ ಯಥಾ ಆಧಿಕ್ಯಂ ತಥಾ, ಇತ್ಯರ್ಥಃ ।**

**ಸ್ವಾತಂತ್ರ್ಯಸ್ಯ ಅನಪೇಕ್ಷಿತತ್ವಾತ್ ಇತ್ಯತ್ರ ವಿಪಕ್ಷೇ ಬಾಧಕಂ ಚಾಹ–ಏವಂ ಸತೀತಿ ॥ ಅರ್ಥಸತ್ವನಿಶ್ಚಯ–ಮಾತ್ರೇಣೈವ ಸಂಶಯವಿರೋಧಿ-ತಾರೂಪ–ಪ್ರಾಮಾಣ್ಯನಿಶ್ಚಯತ್ವೋಪಪತ್ತೌ ಅಪಿ ಸ್ವಾತಂತ್ರ್ಯಾಭಾವೇನ ತದಭಾವೇ ಇತ್ಯರ್ಥಃ ।**

**ಯದ್ವಾ ಸ್ವಾತಂತ್ರ್ಯಾಭಾವೇ ಅರ್ಥಸತ್ವನಿಶ್ಚಯರೂಪತ್ವೈವ ನ ಯುಕ್ತಾ ಇತ್ಯತ ಆಹ–ಏವಂ ಸತೀತಿ ॥ ಸವ್ಯಧಾನತ್ವಮಾತ್ರೇಣ ಸತ್ವಾನಿಶ್ಚಾಯಕತ್ವೇ ಇತ್ಯರ್ಥಃ । ಧರ್ಮ್ಯಂಶೇ=ರಜತಾದಿರೂಪ ಇದಮಂಶೇ ಇತ್ಯರ್ಥಃ ।**

ಅನುವ್ಯವಸಾಯದಲ್ಲಿ ಸ್ವಾತಂತ್ರ್ಯೇಣ ಅರ್ಥಸತ್ವವು ಭಾನವಾಗದಿದ್ದರೆ ಅಂತಹ ಅನುವ್ಯವಸಾಯವು ಅರ್ಥಸಂದೇಹವಿರೋಧಿಯಾಗುವುದು ಹೇಗೆ? ಅಸಂದಿಗ್ಧಪ್ರವೃತ್ತಿಗಾದರೂ ಹೇಗೆ ಕಾರಣವಾಗುತ್ತದೆ? ಈ ಎರಡು ಆಕ್ಷೇಪಗಳಿಗೆ 'ಸ್ವಾತಂತ್ರ್ಯಾದಪಿ' ಎಂಬ ವಾಕ್ಯವು–ಸಮಾಧಾನ ನೀಡುತ್ತದೆ.

'ಏವಂ ಸತಿ' ಎಂಬ ಮೂಲಕ್ಕೆ ಎರಡು ರೀತಿಯ ಸಂಗತಿ ಇದೆ–ಜ್ಞಾನವು ವಿಷಯದಲ್ಲಿ ಸತ್ವವನ್ನು ಗ್ರಹಿಸಿದರೆ ಸಾಕು ಸ್ವಾತಂತ್ರ್ಯಬೇಕಿಲ್ಲ. ಇದನ್ನು ಒಪ್ಪದಿದ್ದಲ್ಲಿ ಬಾಧಕವನ್ನು ಆ ವಾಕ್ಯದಲ್ಲಿ ಹೇಳಲಾಗಿದೆ. ಏವಂ ಸತಿ, ಎಂದರೆ ಅನುವ್ಯವಸಾಯವು ಅನ್ಯದ್ವಾರಾ ಅರ್ಥಸತ್ವಗ್ರಾಹಿಯಾಗಿ ಪ್ರಾಮಾಣ್ಯನಿಶ್ಚಯಾತ್ಮಕವಾಗಿದ್ದರೂ ಸ್ವಾತಂತ್ರ್ಯವಿಲ್ಲ ಎಂದಿಷ್ಟೇ ಕಾರಣದಿಂದ ಸಂದೇಹಕ್ಕೆ ಕಾರಣವಾಗುವುದಾದಲ್ಲಿ (ಧರ್ಮ್ಯಂಶದಲ್ಲೂ ಸಂದೇಹ ಬಂದೀತು.) ಎಂದರ್ಥ. ಅಥವಾ ಸ್ವಾತಂತ್ರ್ಯವಿಲ್ಲದಿದ್ದಲ್ಲಿ ಅನುವ್ಯವಸಾಯವು ಅರ್ಥಸತ್ವ ನಿಶ್ಚಯರೂಪವೇ ಆಗುವುದಿಲ್ಲ ಎಂಬ ಆಕ್ಷೇಪಕ್ಕೂ ಆ ವಾಕ್ಯ ಸಮಾಧಾನ ನೀಡುತ್ತದೆ.

## ಧರ್ಮ್ಯಂಶ ದೃಷ್ಟಾಂತದಿಂದ ಪ್ರಾಮಾಣ್ಯ ಸ್ವತಸ್ತ್ವ ಸಮರ್ಥನೆ

## ನ್ಯಾಯದೀಪದಲ್ಲಿ ಅವತಾರಿಕೆ

**ಧರ್ಮ್ಯಂಶೇಽಪಿ ಸಂಶಯಾನುತ್ಪಾದಃ ನಾರ್ಥಸತ್ವಘಟಿತಪ್ರಾಮಾಣ್ಯ ನಿಶ್ಚಯರೂಪತ್ವೇನ । ''ಇದಂತ್ವ-ರಜತತ್ವವೈಶಿಷ್ಟ್ಯಂ ಪುರೋವರ್ತಿನೋ ನಾನುವ್ಯವಸಾಯವೇದ್ಯಮ್'' (ಪುಟ.210) ಇತಿ ಮಣ್ಯುಕ್ತೇಃ । ''ಸ್ವಾತಂತ್ರ್ಯೇಣ ಇತಿ ಶೇಷಃ'' ಇತಿ ಪಕ್ಷಧರೋಕ್ತೇಃ । ಕಿಂತು ಅನ್ಯಥೈವ ಇತಿ ಶಂಕತೇ-ನನ್ವಿತಿ ॥**

ಒಂದೆ ಯಾವುದೇ ಜ್ಞಾನದ ಧರ್ಮ್ಯಂಶದಲ್ಲಿ ಸಂದೇಹಾದಿಗಳು ಬರುವುದಿಲ್ಲವಾದ ಕಾರಣ 'ಧರ್ಮಿಯಲ್ಲಿ ಇದಂತ್ವಾದಿ ವೈಶಿಷ್ಟ್ಯವು ಅನ್ಯದ್ವಾರಾ ಅನುವ್ಯವಸಾಯವಿಷಯವಾದರೂ ಆ ವೈಶಿಷ್ಟ್ಯದಲ್ಲಿ ಸತ್ವಸಿದ್ಧವಾಗುತ್ತದೆ, ಎನ್ನಲಾಗಿದೆ. ಆದರೆ ಮಣಿಕಾರ ಇದನ್ನು ಒಪ್ಪುವುದಿಲ್ಲ. (ಪುಟ.210) ಮಣಿಗ್ರಂಥದಲ್ಲಿ ಧರ್ಮ್ಯಂಶದಲ್ಲಿ ಅನುವ್ಯವಸಾಯವು ಪ್ರಾಮಾಣ್ಯವಿಷಯಕ ವಾಗಿದೆ ಎಂದು ಪೂರ್ವಪಕ್ಷ ಮಾಡಿ ಹೀಗೆ ಸಮಾಧಾನಕೊಡಲಾಗಿದೆ– 'ಪುರೋವರ್ತಿಯಲ್ಲಿ ಇದಂತ್ವ ವೈಶಿಷ್ಟ್ಯವಾಗಲೀ ರಜತತ್ವ ವೈಶಿಷ್ಟ್ಯವಾಗಲೀ ಅನುವ್ಯವಸಾಯಕ್ಕೆ ವಿಷಯವಲ್ಲ' ಎಂದು. ಇದಕ್ಕೆ ಪಕ್ಷಧರ ಮಿಶ್ರರು ವ್ಯಾಖ್ಯಾನ ಮಾಡುತ್ತಾ 'ಅನುವ್ಯವಸಾಯಕ್ಕೆ ವೈಶಿಷ್ಟ್ಯವು ಸ್ವಾತಂತ್ರ್ಯೇಣ ವಿಷಯವಲ್ಲ' ಎಂದು ಹೇಳಿದ್ದಾರೆ. ಹೀಗೆ ವೈಶಿಷ್ಟ್ಯವು ಅನುವ್ಯವಸಾಯಕ್ಕೆ ಸ್ವಾತಂತ್ರ್ಯೇಣ ವಿಷಯವಾದ ಕಾರಣದಿಂದಾಗಿ ಧರ್ಮ್ಯಂಶದಲ್ಲಿ ಸಂಶಯಾಭಾವವಲ್ಲ. ಅದಕ್ಕೆ ಕಾರಣ ಬೇರೆ, ಎಂದು ಮುಂದಿನ ಮೂಲದಲ್ಲಿ ಮಣಿಕಾರನ ಮತವನ್ನು ಅವಲಂಬಿಸಿ ಆಕ್ಷೇಪ ಮಾಡಲಾಗಿದೆ–

**ननु धर्मिणस्सदेकरूपत्वात्तत्रासंशय इति चेत् । कोऽर्थः? किं साधारणधर्मज्ञानं नास्तीति, किं वा विशेषदर्शनमस्तीति? नाद्यः। प्रतीतिविषयत्वस्य सदसत्साधारण्यात् । अन्त्ये धर्मित्वस्य सदेकनिष्ठत्वेन विशेषत्वेऽपि तस्य सत्वानिश्चये कथं संशय-विरोधिता? न हि संदिग्धसत्ताकः करादिः पुरुषत्वसंशयविरोधी ।**

ಧರ್ಮಿಯ ಬಗ್ಗೆ ಸಂದೇಹ ಬರದಿರುವುದಕ್ಕೆ ಪ್ರಾಮಾಣ್ಯಜ್ಞಾನವು ಕಾರಣವಲ್ಲ. ಎಲ್ಲ ಜ್ಞಾನಗಳಲ್ಲೂ ಧರ್ಮಿಯು ಇದ್ದೇ ಇರುತ್ತದೆ. ಅರ್ಥಾತ್ ಧರ್ಮಿಸತ್ವವು ಅವ್ಯಭಿಚರಿತ. ಆದ್ದರಿಂದ ಧರ್ಮಿಯ ಬಗ್ಗೆ ಸಂದೇಹ ಬರುವುದಿಲ್ಲ.

ಹೀಗೆ ಹೇಳುವುದು ಸರಿಯಲ್ಲ-ಧರ್ಮಿಸತ್ತಾ ಅವ್ಯಭಿಚರಿತ, ಎನ್ನುವುದರ ಅಭಿಪ್ರಾಯ ವೇನು?

1. ಸಂದೇಹಕ್ಕೆ ಕಾರಣವಾದ ಉಭಯಕೋಟಿ (ಸತ್ವಾಸತ್ವ) ಸಹಚರಿತವಾದ ಸಾಧಾರಣ ಧರ್ಮಜ್ಞಾನ ಇಲ್ಲ, ಆದ್ದರಿಂದ ಸಂದೇಹ ಬರುವುದಿಲ್ಲ ಎಂದು ಅರ್ಥವೋ?

2. ಅಥವಾ, ಸತ್ವಕೋಟಿವ್ಯಾಪ್ಯಧರ್ಮದರ್ಶನ (ವಿಶೇಷದರ್ಶನ) ಇದೆ. ಆದ್ದರಿಂದ ಸತ್ವ-ಸಂದೇಹ ಬರುವುದಿಲ್ಲ, ಎಂದು ಅಭಿಪ್ರಾಯವೋ?

ಮೊದಲನೆಯ ಪಕ್ಷ ಸರಿಯಲ್ಲ, ಧರ್ಮಿಯಲ್ಲಿ ಪ್ರತೀತಿವಿಷಯತ್ವ ಎಂಬ ಸಾಧಾರಣ ಧರ್ಮವು ಅನುವ್ಯವಸಾಯದಿಂದ ಗೃಹೀತವಾಗಿದೆ. ಪ್ರತೀತಿ ವಿಷಯವಾದುದು ಕೆಲವು ಸತ್ತಾಗಿರುತ್ತವೆ, ಕೆಲವು ಅಸತ್ತಾಗಿರುತ್ತವೆ. ಹೀಗೆ ಪ್ರತೀತಿ ವಿಷಯತ್ವವು ಸತ್ವ-ಅಸತ್ವರೂಪವಾದ ಉಭಯಕೋಟಿಸಹಚರಿತವಾಗಿದೆ. ಅಂತಹ ಸಾಧಾರಣ ಧರ್ಮದರ್ಶನವು ಧರ್ಮಿಯಲ್ಲಿ ಇದೆ. ಅದಿಲ್ಲ ಎನ್ನುವುದು ಸರಿಯಲ್ಲ.

ಎರಡನೆಯ ಪಕ್ಷವೂ ಯುಕ್ತವಲ್ಲ-ಧರ್ಮಿತ್ವ ಎಂಬ ಧರ್ಮವು ಸದೇಕ ನಿಷ್ಠ, ಅಂದರೆ ಎಲ್ಲ ಜ್ಞಾನಗಳಲ್ಲೂ ಧರ್ಮಿಯು ಸತ್ಯವೇ ಆಗಿರುತ್ತದೆ. ಆದ್ದರಿಂದ ಧರ್ಮಿತ್ವರೂಪವಾದ ಧರ್ಮವು ಸತ್ವರೂಪ ಏಕತರಕೋಟಿವ್ಯಾಪ್ಯವಾದ ಧರ್ಮ. ಆದರೆ ಅಂತಹ ವ್ಯಾಪ್ಯಧರ್ಮದ ವೈಶಿಷ್ಟ್ಯವು 'ಪುರೋವರ್ತಿಯಲ್ಲಿ ಇದೆ' ಎಂದು ತಿಳಿದರೆ ಮಾತ್ರ, ಅದು ಸಂದೇಹಕ್ಕೆ ವಿರೋಧಿಯಾಗುತ್ತದೆ. ಉದಾಹರಣೆಗೆ-ಪುರುಷತ್ವ ವ್ಯಾಪ್ಯಕರಾದಿಗಳು ಪುರೋವರ್ತಿಯಲ್ಲಿ ಇವೆ, ಎಂದು ತಿಳಿದಾಗ ಮಾತ್ರ 'ಪುರುಷೋ ವಾ ನ ವಾ' ಎಂಬ ಸಂದೇಹವು ಬರುವುದಿಲ್ಲ, ಅಂತಹ ಕರಾದಿಧರ್ಮಗಳು ಪುರೋವರ್ತಿಯಲ್ಲಿ ಸಂದಿಗ್ಧವಾದರೆ ಪುರುಷತ್ವ ಸಂದೇಹವು ಪ್ರತಿಬದ್ಧವಾಗುವುದಿಲ್ಲ, ಸಂದೇಹ ಬಂದೇ ಬರುತ್ತದೆ. ಅದರಂತೆ, ಪ್ರಕೃತದಲ್ಲಿ ಸತ್ವವ್ಯಾಪ್ಯವಾದ ಧರ್ಮಿತ್ವ ಎಂಬ ಧರ್ಮದ ವೈಶಿಷ್ಟ್ಯವು (ಪ್ರಾಮಾಣ್ಯವು) ಸತ್ವೇನ ಗೃಹೀತವಾದರೆ ಮಾತ್ರ ಧರ್ಮ್ಯಂಶದಲ್ಲಿ ಸಂದೇಹವು ಬಾರದಿರಬಹುದು. ಆದರಿಂದಾಗಿ ಆ ವೈಶಿಷ್ಟ್ಯವನ್ನು ಅನುವ್ಯವಸಾಯವು ವ್ಯವಸಾಯದ್ವಾರಾ ಧರ್ಮಿಯಲ್ಲಿ ಸತ್ವೇನೈವ ಗ್ರಹಿಸುತ್ತದೆ, ಎಂದು ಹೇಳಲೇಬೇಕು. ಹೀಗೆ, ಅನ್ಯದ್ವಾರಾ ಸತ್ವಗ್ರಾಹಿ ಯಾದುದರಿಂದಲೇ ಅನುವ್ಯವಸಾಯವು ಧರ್ಮಿಯ ಬಗ್ಗೆ ಸಂದೇಹಕ್ಕೆ ಪ್ರತಿಬಂಧಕವಾಗುತ್ತದೆ.

## ನ್ಯಾಯದೀಪ

**ಸದೇಕೇತಿ ॥ ಪುರತಃ ಸನ್ನೇವ ಧರ್ಮೀ, ನ ತು ಅಸನ್ ಇತಿ ಧರ್ಮಿಣಃ ಸತ್ತಾವ್ಯಭಿಚಾರಾತ್ ನ ತತ್ರ ಸಂದೇಹಃ । ನ ತು ತದಂಶೇ ಪ್ರಾಮಾಣ್ಯನಿಶ್ಚಯ ಸತ್ವೇನ ಇತ್ಯರ್ಥಃ।**

'ಸದೇಕರೂಪತ್ವಾತ್' ಎಂದರೆ, ಜ್ಞಾನಧರ್ಮಿಯು ನಮ್ಮ ಮುಂದೆ ಇದ್ದೇ ಇರುತ್ತದೆ, ಅದು ಎಂದೂ ಸತ್ವವನ್ನು ಬಿಟ್ಟಿರುವುದಿಲ್ಲ. ಹೀಗಾಗಿ ಧರ್ಮ್ಯಂಶದಲ್ಲಿ ಸಂದೇಹ ಬರುವುದಿಲ್ಲ. ಸಂದೇಹ ಬರದೇ ಇರಲು ಇದೇ ಕಾರಣ, ಪ್ರಾಮಾಣ್ಯನಿಶ್ಚಯವಲ್ಲ.

**ಸದಸದಿತಿ ।। ಪುರತೋ ಅಸತ್ ಇತ್ಯರ್ಥಃ। ಮನ್ಮತೇ ತು ಅಸನ್ಮಾತ್ರೇತ್ಯರ್ಥಃ।**

ಪ್ರತೀತಿ ವಿಷಯತ್ವವು ಸತ್ ಅಸತ್ ಉಭಯದಲ್ಲಿ ಇದೆ, ಎನ್ನಲಾಗಿದೆ, ಮೂಲದಲ್ಲಿ. ನ್ಯಾಯಮತರೀತ್ಯಾ 'ಅಸತ್'ನಲ್ಲಿ ಪ್ರತೀತಿ ವಿಷಯತ್ವ ಎಂದರೆ ಪುರೋದೇಶದಲ್ಲಿ ಅಸತ್ತಾದ, ದೇಶಾಂತರದಲ್ಲಿ ಸತ್ತಾದ ರಜತದಲ್ಲಿ ಪ್ರತೀತಿವಿಷಯತ್ವ ಇದೆ ಎಂದು ಅರ್ಥ. ಸರ್ವಥಾ ಅಸತ್ಯವಾದುದು ನ್ಯಾಯಮತದಲ್ಲಿ ಪ್ರತೀತಿ ವಿಷಯವಾಗುವುದಿಲ್ಲ. ನಮ್ಮ ಸಿದ್ಧಾಂತದಲ್ಲಿ ಅಸತ್ತಾದ ರಜತವೇ ಪ್ರತೀತಿವಿಷಯ. ಹೀಗೆ ಪ್ರತೀತಿವಿಷಯತ್ವ ಧರ್ಮವು ಮತಭೇದೇನ ಅಸತ್ವಸಮಾನಾಧಿ-ಕರಣವಾಗುತ್ತದೆ.

**ವಿಶೇಷತ್ವೇಽಪೀತಿ ।। ತಥಾ ಚ ತದ್ದರ್ಶನಮಾತ್ರಂ ನ ವಿಶೇಷದರ್ಶನಂ, ಕಿಂತು, ತದ್ವೈಶಿಷ್ಟ್ಯ-ಸತ್ವದರ್ಶನಮೇವೇತಿ ತಸ್ಯ ಚ ತತ್ರಾಭಾವೇ ಕಥಂ ತತ್ರ ನ ಸಂಶಯಃ ಸ್ಯಾತ್, ಇತಿ ಭಾವಃ।**

ಧರ್ಮಿತ್ವ ಅಥವಾ ಪುರೋವರ್ತಿತ್ವರೂಪವಾದ ಧರ್ಮವು ಸತ್ವರೂಪ-ಏಕತರಕೋಟಿ ವ್ಯಾಪ್ಯವಾದರೂ ಸ್ವಾತಂತ್ರ್ಯೇಣ ಆ ಅಸಾಧಾರಣ-ಧರ್ಮದರ್ಶನವೇ ಸಂದೇಹಪ್ರತಿಬಂಧಕವಾದ ವಿಶೇಷ ದರ್ಶನವಲ್ಲ. ಪುರೋವರ್ತಿಯಲ್ಲಿ ತದ್ವೈಶಿಷ್ಟ್ಯದ ಸತ್ವದರ್ಶನವೇ ವಿಶೇಷದರ್ಶನ. ವೈಶಿಷ್ಟ್ಯಜ್ಞಾನವು ಬರದಿದ್ದಲ್ಲಿ ಸಂದೇಹ ಬರಲೇ ಬೇಕು, ಸಂದೇಹ ಬರದಿರಲು ಹೇಗೆ ತಾನೇ ಸಾಧ್ಯ?

**ತಸ್ಯೇತಿ ।। ಧರ್ಮಿತ್ವವೈಶಿಷ್ಟ್ಯಸ್ಯೇತ್ಯರ್ಥಃ। ತಥಾ ಚ ಧರ್ಮಿತ್ವರೂಪ-ಇದಂತ್ವವೈಶಿಷ್ಟ್ಯಾಂಶೇ ಅನುವ್ಯವಸಾಯಸ್ಯ ತತ್-ಸತ್ತಾನಿಶ್ಚಯತ್ವರೂಪ-ಪ್ರಾಮಾಣ್ಯನಿಶ್ಚಯತ್ವಾಭಾವೇ ಧರ್ಮ್ಯಂಶೇಽಪಿ ಸಂಶಯಃ ಸ್ಯಾದೇವ ಇತಿ ಭಾವಃ।**

ಧರ್ಮಿತ್ವವೇ ಇದಂತ್ವ. ಅದು ಅರ್ಥಸತ್ವವ್ಯಾಪ್ಯ. ಅದರ ವೈಶಿಷ್ಟ್ಯವು ಪುರೋವರ್ತಿಯಲ್ಲಿ ಸತ್ ಎಂದು ನಿಶ್ಚಯವಾದರೆ ಮಾತ್ರ ಧರ್ಮ್ಯಂಶದಲ್ಲಿ ಸಂದೇಹ ಬರದಿರಲು ಸಾಧ್ಯ. ತತ್ ಸತ್ತಾನಿಶ್ಚಯವಿದ್ದರೆ ತದಂಶದಲ್ಲಿ ಪ್ರಾಮಾಣ್ಯನಿಶ್ಚಯ ಬಂದಂತೆಯೇ. ಹೀಗೆ, ಪ್ರಾಮಾಣ್ಯ ನಿಶ್ಚಿತವಾಗಿಲ್ಲವೆಂದಾದರೆ ಧರ್ಮ್ಯಂಶದಲ್ಲಿ ಸಂದೇಹವು ಬರಲೇಬೇಕು.

**ಸತ್ತಾನಿಶ್ಚಯೇऽಪಿ ಸಂಶಯನಿವೃತ್ತಿಃ ಅಸ್ತು ಇತ್ಯತ ಆಹ–ನಹೀತಿ ॥ ಸಂದಿಗ್ಧಸತ್ತಾಕಃ ॥ ಅನಿಶ್ಚಿತಸತ್ತಾಕಃ ಇತ್ಯರ್ಥಃ ।**

**ಯದ್ವಾ ತತ್–ಸತ್ತಾನಿರ್ಣಯೇ ತತ್–ಸತ್ವೇऽಪಿ ಸಂದೇಹಃ ಸ್ಯಾತ್। ತತಶ್ಚ ಧರ್ಮಿಸಂದೇಹ ಇತಿ ಭಾವೇನ ಅಯಂ ಗ್ರಂಥೋ ಯೋಜ್ಯಃ ॥**

'ನ ಹಿ' ಎಂಬ ಮೂಲ ವಾಕ್ಯಕ್ಕೆ ಹೀಗೆ ಅಭಿಪ್ರಾಯವನ್ನು ಹೇಳಬೇಕು. ಪುರುಷತ್ವ ವ್ಯಾಪ್ಯವಾದ ಕರಾದಿಗಳ ವೈಶಿಷ್ಟ್ಯವು ಪುರೋವರ್ತಿಯಲ್ಲಿ ನಿಶ್ಚಯವಾಗದೇ ಹೋದಲ್ಲಿ 'ಪುರುಷೋ ವಾ ನ ವಾ' ಎಂಬ ಸಂದೇಹವು ಬಂದೇ ಬರುತ್ತದೆ. ಆದ್ದರಿಂದ ಪುರೋವರ್ತಿಯಲ್ಲಿ ಅನಿಶ್ಚಿತವಾದ ಕರಾದಿಗಳ ಜ್ಞಾನವು ವಸ್ತುತಃ ಪುರುಷತ್ವ ಸಂದೇಹಕ್ಕೆ ವಿರೋಧಿಯಲ್ಲ, ಅದೂ ವಿರೋಧಿಯಾಗ ಬೇಕಾದೀತು.

ಅಥವಾ, ಈ ಸಮಗ್ರಮೂಲದ ಅಭಿಪ್ರಾಯ ಹೀಗೆ– ಧರ್ಮಿತ್ವವು ಪುರೋವರ್ತಿಯಲ್ಲಿ ಇದೆ, ಎಂಬ ನಿರ್ಣಯ ಇಲ್ಲವಾದಲ್ಲಿ ಪುರೋವರ್ತಿಯಲ್ಲಿ ಧರ್ಮಿತ್ವಸತ್ವದ ಸಂದೇಹವು ಬರುತ್ತದೆ. ಇದರಿಂದಾಗಿ ಧರ್ಮಿತ್ವ ಸಂದೇಹವೂ ಬರುತ್ತದೆ. ಆದ್ದರಿಂದ ಪ್ರಕೃತ, ಪುರೋವರ್ತಿಯಲ್ಲಿ ಇದಂತ್ವದ ಸತ್ತ್ವವು ಅನುವ್ಯವಸಾಯದಿಂದ ಗೃಹೀತವಾಗದಿದ್ದಲ್ಲಿ ಧರ್ಮಿಸಂದೇಹವು ಬರಲೇಬೇಕು.

## ಮಣ್ಯುಕ್ತರೀತಿಯಿಂದಲೇ ಸ್ವತಸ್ತ್ವಸಮರ್ಥನೆ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಇದಂತ್ವವೈಶಿಷ್ಟ್ಯಾಂಶೇ ತತ್–ಸತ್ತಾನಿಶ್ಚಯತ್ವರೂಪಂ ಪ್ರಾಮಾಣ್ಯ–ನಿಶ್ಚಯತ್ವಮ್ ಅನುವ್ಯವಸಾಯಸ್ಯ ಧರ್ಮ್ಯಂಶೇ ಸ್ವತಃ ಪ್ರಾಮಾಣ್ಯಮ್ ಉಪಪಾದ್ಯ–**

**'ನನು ವ್ಯವಸಾಯಸ್ಯ ಇದಂತ್ವ–ರಜತತ್ವವಿಶಿಷ್ಟ–ಇದಂ ವಿಷಯಕತ್ವೇ ಅನುವ್ಯವಸಾಯ ಏವ ಮಾನಮ್' (ಮಣಿಪು.208)**

**ಇತ್ಯಾದಿನಾ ಧರ್ಮ್ಯಂಶದೃಷ್ಟಾಂತೇನ ಶಂಕಿತಸ್ವತಃ–ಪ್ರಾಮಾಣ್ಯಸ್ಯ 'ಮೈವಮ್' (ಮಣಿ.208) ಇತ್ಯಾದಿನಾ 'ನ ಸ್ವತಃ ಪ್ರಾಮಾಣ್ಯಗ್ರಹಃ' (ಮಣಿಪು.210) ಇತ್ಯಂತೇನ ಮಣ್ಯುಕ್ತಖಂಡನಂ ನಿರಸ್ಯ ಇದಾನಿಂ,**

**''ನನು ವಹ್ನಿಜ್ಞಾನಸ್ಯ ದಾಹಸಮರ್ಥವಿಷಯಕತ್ವಂ ನ 'ದಾಹ ಸಮರ್ಥೋऽಯಮ್'ಇತಿ ವ್ಯವಸಾಯಗ್ರಾಹ್ಯಮ್'' (ಮಣಿ. 289)**

**ಇತ್ಯಾದಿನಾ ಶಂಕಿತಸ್ಯ ''ಉಚ್ಯತೇ'' ಇತ್ಯಾದಿನಾ ಯತ್ ಸಮಾಧಾನಮುಕ್ತಂ ತತ್ಸಾಮಾನ್ಯನ್ಯಾಯೇನ ಅನ್ಯತ್ರಾಪಿ ಅನುವ್ಯವಸಾಯಸ್ಯ ಸ್ವತಃ ಪ್ರಾಮಾಣ್ಯಂ ವ್ಯನಕ್ತಿ–ಅಪಿ ಚೈವಮಿತಿ ॥**

ಮೂಲದಲ್ಲಿ ಇದುವರೆಗೆ 'ಜ್ಞಾನವು ಧರ್ಮ್ಯಂಶದಲ್ಲೂ ಸ್ವತಃ ಪ್ರಮಾಣವಲ್ಲ' ಎಂದು ಸಮರ್ಥಿಸಿದ ಮಣಿಗ್ರಂಥದ ಅಭಿಪ್ರಾಯವನ್ನು ನಿರಾಕರಿಸಲಾಗಿದೆ.

ಮಣಿಗ್ರಂಥದಲ್ಲಿ ಹೀಗೆ ಪೂರ್ವಪಕ್ಷವನ್ನು ಮಾಡಲಾಗಿದೆ– 'ಇದಂ ರಜತಮ್' ಎಂಬ ಜ್ಞಾನದ ಅನುವ್ಯವಸಾಯವು ಪುರೋವರ್ತಿಯಲ್ಲಿ ಇದಂತ್ವ ಎಂಬ ಧರ್ಮದ ವೈಶಿಷ್ಟ್ಯವು ಸತ್ಯ, ಎಂದು ನಿರ್ಧರಿಸುತ್ತದೆ. ಇದೇ ಪ್ರಾಮಾಣ್ಯನಿಶ್ಚಯ. ಆದ್ದರಿಂದ ಅನುವ್ಯವಸಾಯವು ಧರ್ಮ್ಯಂಶದಲ್ಲಿ ಸ್ವತಃ ಪ್ರಮಾಣವಾಗಿದೆ. ಹೀಗೆ ಪುರೋವರ್ತಿ–ಇದಂತ್ವಗಳ ವೈಶಿಷ್ಟ್ಯವು ಬಾಹ್ಯವಾದರೂ ಅದರ ಸತ್ವವನ್ನು ಅನುವ್ಯವಸಾಯವು ವಿಷಯೀಕರಿಸುವುದಾದಲ್ಲಿ ರಜತತ್ವ–ರಜತಗಳ ವೈಶಿಷ್ಟ್ಯವನ್ನು ತುಲ್ಯನ್ಯಾಯೇನ ಏಕೆ ವಿಷಯೀಕರಿಸಬಾರದು? ಹೀಗೆ ಧರ್ಮ್ಯಂಶದ ದೃಷ್ಟಾಂತದಿಂದ ಪ್ರಕಾರಾಂಶದಲ್ಲಿ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುತ್ತದೆ.

ಹೀಗೆ ಮಣಿಗ್ರಂಥದಲ್ಲಿ ಪೂರ್ವಪಕ್ಷ ಮಾಡಿ 'ಮೈವಮ್' ಎಂದು ಅದೇ ಗ್ರಂಥದಲ್ಲಿ ಪೂರ್ವಪಕ್ಷವನ್ನು ನಿರಾಕರಿಸಲಾಗಿದೆ. ಆ ಗ್ರಂಥದ ಅಭಿಪ್ರಾಯ ಹೀಗಿದೆ– ಅನುವ್ಯವಸಾಯದ ಆಕಾರ 'ಇದಂ ರಜತಂ ಜಾನಾಮಿ' (ಮುಂದಿರುವ ರಜತವನ್ನು ತಿಳಿದಿದ್ದೇನೆ) ಎಂದಲ್ಲ. ಹಾಗಿದ್ದಲ್ಲಿ ಮುಂಭಾಗದಲ್ಲಿರುವ ವಸ್ತುವಿನಲ್ಲಿ ಇದಂತ್ವ–ರಜತತ್ವಗಳ ವೈಶಿಷ್ಟ್ಯವು ಸತ್ವೇನ ಅನುವ್ಯವಸಾಯಕ್ಕೆ ವಿಷಯವಾಗುತ್ತಿತ್ತು, ಪ್ರಾಮಾಣ್ಯಂ ಸ್ವತಃ ಎಂದು ಹೇಳಬಹುದಿತ್ತು. ಆದರೆ, ಮುಂದಿರುವ ವಸ್ತು ರಜತವೆಂದು ನಿರ್ಧಾರವಾದ ಮೇಲಷ್ಟೇ ಆ ರೀತಿಯ ಅನುವ್ಯವಸಾಯ ಬರಲು ಸಾಧ್ಯ. ಅದಕ್ಕಿಂತ ಪೂರ್ವದಲ್ಲಿ 'ಪುರೋವರ್ತಿನಂ ಇದಂತ್ವೇನ ರಜತತ್ವೇನ ಚ ಜಾನಾಮಿ' ಎಂದಿಷ್ಟೇ ಅನುವ್ಯವಸಾಯ ಬರುತ್ತದೆ. ಇದರಲ್ಲಿ 'ವ್ಯವಸಾಯವು ಪುರೋವರ್ತಿವಿಶೇಷ್ಯಕ, ಇದಂತ್ವ–ರಜತತ್ವ ಉಭಯಪ್ರಕಾರಕ' ಎಂದಿಷ್ಟೇ ಭಾನವಾಗುತ್ತದೆ. ಅದು ಪುರೋವರ್ತಿಯಲ್ಲಿ ಇದಂತ್ವ ಇದೆ, ಎಂದಾಗಲೀ, ರಜತತ್ವವು ಇದೆ, ಎಂದಾಗಲೀ ತಿಳಿಸುವುದಿಲ್ಲ. ಹೀಗೆ ಧರ್ಮ್ಯಂಶದಲ್ಲೂ ಅನುವ್ಯವಸಾಯಕ್ಕೆ ಸ್ವತಃ ಪ್ರಾಮಾಣ್ಯ ಇಲ್ಲವಾದುದರಿಂದ ಅದನ್ನು ದೃಷ್ಟಾಂತವನ್ನಾಗಿ ಕೊಟ್ಟು ಪ್ರಕಾರಾಂಶದಲ್ಲಿ ಸ್ವತಃಪ್ರಾಮಾಣ್ಯವನ್ನು ಸಾಧನೆ ಮಾಡುವುದು ಸರಿ ಅಲ್ಲ.

ಮಣಿಕಾರನ ಈ ಅಭಿಪ್ರಾಯವನ್ನು ಮೂಲದಲ್ಲಿ ಇದುವರೆಗೆ ನಿರಾಕರಿಸಲಾಗಿದೆ. ಜ್ಞಾನವು ಧರ್ಮ್ಯಂಶದಲ್ಲಿ ಸ್ವತಃ ಪ್ರಮಾಣ ಎಂದು ಹೇಳದೇ ಹೋದಲ್ಲಿ 'ಪುರೋವರ್ತಿಯಲ್ಲಿ ಇದಂತ್ವ ಇದೆಯೋ ಇಲ್ಲವೋ' ಎಂಬ ಸಂದೇಹ ಬರಬೇಕಾದೀತು. ಆ ರೀತಿಯ ಸಂದೇಹ ಯಾರಿಗೂ, ಎಂದೂ ಬರುವುದಿಲ್ಲವಾದುದರಿಂದ ಧರ್ಮ್ಯಂಶದಲ್ಲಿ ಪ್ರಾಮಾಣ್ಯವು ಸ್ವತಃ. ಅದರಂತೆ

ಪ್ರಕಾರಾಂಶದಲ್ಲೂ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬೇಕು, ಎಂದು ಮಣಿಗ್ರಂಥ ಖಂಡನೆಯ ಒಟ್ಟು ಅಭಿಪ್ರಾಯ.

ಮುಂದೆ, ಮೂಲದಲ್ಲಿ ಮಣಿಗ್ರಂಥದಲ್ಲಿ ಹೇಳಿರುವ ಇನ್ನೊಂದು ಅಂಶವನ್ನು ನಿರಾಕರಿಸಲಾಗಿದೆ– 'ಪರತಃ ಪ್ರಾಮಾಣ್ಯಂ' ಎಂಬ ನೈಯಾಯಿಕರ ಮತದಲ್ಲಿ ಪ್ರಾಮಾಣ್ಯವು ಸಮರ್ಥಪ್ರವೃತ್ತಿಜನಕತ್ವಲಿಂಗದಿಂದ ಅನುಮೇಯ. ಉದಾಹರಣೆಗೆ 'ಅಯಂ ವಹ್ನಿಃ' ಎಂಬ ಜ್ಞಾನ ಬಂದು, ಪ್ರವೃತ್ತಿ ಮಾಡಿ, ವಹ್ನಿಯು ಸಿಕ್ಕಮೇಲೆ,

**ಇದಂ ವಹ್ನಿಜ್ಞಾನಮ್** (ಪಕ್ಷ)

**ವಹ್ನಿತ್ವವತಿ ವಹ್ನಿತ್ವಪ್ರಕಾರಕಮ್** (ಸಾಧ್ಯ)

**ಸಮರ್ಥಪ್ರವೃತ್ತಿಜನಕತ್ವಾತ್** (ಹೇತು)

ಎಂದು ಅನುಮಾನ ಮಾಡಬೇಕು. ಈ ಅನುಮಾನದಲ್ಲಿ 'ವಹ್ನಿತ್ವವತಿ ವಹ್ನಿತ್ವ ಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವು ಸಾಧ್ಯ. ಅನುಮಿತಿ ಬರುವ ಮೊದಲು ಸಾಧ್ಯಜ್ಞಾನಬೇಕು. ಆದರೆ, ಪ್ರಕೃತ ಪ್ರಾಮಾಣ್ಯರೂಪವಾದ ಸಾಧ್ಯವು ತಾರ್ಕಿಕಮತದಲ್ಲಿ ಅನುಮಾನಮಾತ್ರ ವೇದ್ಯವಾದುದರಿಂದ ಪ್ರಥಮಾನುಮಾನದಲ್ಲಿ ಮೊದಲು ಸಾಧ್ಯಜ್ಞಾನ ಬರುವುದು ಹೇಗೆ? ಸ್ವತಸ್ತ್ವವಾದದಲ್ಲಿಯಾದರೋ ಪ್ರಾಮಾಣ್ಯವು ಅನುವ್ಯವಸಾಯವೇದ್ಯವಾದುದರಿಂದ ಸಾಧ್ಯಜ್ಞಾನ ಬರಬಹುದು. ಆದರೆ, ಪ್ರಾಮಾಣ್ಯವು ಅನುಮಾನಮಾತ್ರವೇದ್ಯ ಎನ್ನುವ ಪರತಸ್ತ್ವಪಕ್ಷದಲ್ಲಿ ಸಾಧ್ಯಜ್ಞಾನ ಬರುವುದು ಸಾಧ್ಯವಿಲ್ಲ. ಆದ್ದರಿಂದ ಪ್ರಾಮಾಣ್ಯವು ಅನುಮಾನವೇದ್ಯ ಎಂಬ ಪರತಸ್ತ್ವವಾದ ಯುಕ್ತವಲ್ಲ.

ಸ್ವತಸ್ತ್ವವಾದಿಗಳ ಈ ಆಕ್ಷೇಪಕ್ಕೆ ಮಣಿಕಾರ ಹೀಗೆ ಸಮಾಧಾನ ಹೇಳಿದ್ದಾನೆ– ಮೊದಲು ವಹ್ನಿಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಾಧನೆ ಮಾಡುವುದೇ ಅಲ್ಲ. ಅಪ್ರಾಮಾಣ್ಯವನ್ನು ನಿಷೇಧಮಾಡುವುದು. ಉದಾಹರಣೆಗೆ–

**ಅಯಂ ವಹ್ನಿತ್ವೇನ ಅನುಭವಃ** (ಪಕ್ಷ)

**ನ ವಹ್ನಿತ್ವಾಭಾವವತಿ ವಹ್ನಿತ್ವ ಪ್ರಕಾರಕಃ** (ಸಾಧ್ಯ)

**ದಾಹಸಮರ್ಥವದ್ ವಿಶೇಷ್ಯಕತ್ವೇ ಸತಿ ವಹ್ನಿತ್ವಪ್ರಕಾರಕನಿಶ್ಚಯತ್ವಾತ್।** (ಹೇತು)

ಹೀಗೆ ಅಪ್ರಾಮಾಣ್ಯವನ್ನು ನಿಷೇಧ ಮಾಡಿದಾಗ ಅರ್ಥಾತ್ ಪ್ರಾಮಾಣ್ಯ ಸಿದ್ಧಿಯಾಗುತ್ತದೆ. ಅನುಮಾನದ ಅಭಿಪ್ರಾಯ ಇದು–'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿ ವಿಶೇಷ್ಯವಾದುದು ಸುಡಲು ಸಮರ್ಥವಾಗಿದೆ ಹಾಗೂ ಆ ಜ್ಞಾನದಲ್ಲಿ ವಹ್ನಿತ್ವವು ಪ್ರಕಾರವಾಗಿ ಭಾನವಾಗುತ್ತಿದೆ. ಒಂದು ವೇಳೆ ಅದು ವಹ್ನಿ ಅಲ್ಲದಿದ್ದರೆ ಸುಡಬಾರದು. ಹೀಗೆ ಸುಡುವ ವಸ್ತು ವಿಶೇಷ್ಯವಾಗಿದ್ದು ವಹ್ನಿತ್ವವು ಪ್ರಕಾರವಾದ್ದರಿಂದ ವಹ್ನಿಜ್ಞಾನವು ಅಪ್ರಮಾ ಅಲ್ಲ.

ಇದರ ಮೇಲೆ ಸ್ವತಸ್ತ್ವವಾದಿಗಳು ಮಾಡಬಹುದಾದ ಆಕ್ಷೇಪವನ್ನು ಮಣಿಕಾರ 'ನನು' ಎಂದು ಉಲ್ಲೇಖಮಾಡಿ 'ಉಚ್ಯತೇ' ಎಂದು ಅದಕ್ಕೆ ಉತ್ತರವನ್ನು ಕೊಟ್ಟಿದ್ದಾನೆ. ಅವನು ಆ ಉತ್ತರದಲ್ಲಿ ಹೇಳಿರುವ ನ್ಯಾಯದಂತೆ ಇತರ ಎಲ್ಲಾ ಅನುವ್ಯವಸಾಯಗಳಲ್ಲೂ ಪ್ರಾಮಾಣ್ಯ ವಿಷಯಕತ್ವ ಸಿದ್ಧವಾಗುತ್ತದೆ, ಎನ್ನುವುದನ್ನು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ—

**अपिचैवं, त्वदीये 'अयं वह्न्यनुभवः प्रमा, नाप्रमा वा, दाहसमर्थ विशेष्यकत्वे सति वह्नित्वप्रकारकनिश्चयत्वात्, व्यतिरेकेणाप्रमावत्' इति प्रामाण्यानुमाने दाहसामर्थ्यवद्विशेष्यकत्वे सतीति विशेषणस्य केन सिद्धिः? तद्धि न तावद्दाहसमर्थोऽयमिति व्यवसायेन सिद्धम् । व्यवसायविषयतया विशेष्यस्य, विशेष्यत्वस्य तदविषयत्वात् । नाप्यनुव्यवसायेन । बहिरर्थे दाहसामर्थ्ये मनसोऽसामर्थ्यात् ।**

ಪರತಸ್ತ್ವವಾದಿಗಳು ಹೀಗೆ ಪ್ರಾಮಾಣ್ಯವನ್ನು ವಹ್ನಿಜ್ಞಾನದಲ್ಲಿ ಅನುಮಾನ ಮಾಡುತ್ತಾರೆ–

**ಅಯಂ ವಹ್ನ್ಯನುಭವಃ ।** (ಪಕ್ಷ)

**ಪ್ರಮಾ, ನ ಅಪ್ರಮಾ ವಾ ।** (ಸಾಧ್ಯ)

**ದಾಹಸಾಮರ್ಥ್ಯವದ್ವಿಶೇಷ್ಯಕತ್ವೇ ಸತಿ ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್ ।** (ಹೇತು)

**ವ್ಯತಿರೇಕೇಣ ಅಪ್ರಮಾವತ್** (ವ್ಯತಿರೇಕ ದೃಷ್ಟಾಂತ)

ಈ ಅನುಮಾನದಲ್ಲಿ ಹೇತು ಘಟಕವಾದ ವಿಶೇಷಣ ದಾಹಸಾಮರ್ಥ್ಯವದ್ ವಿಶೇಷ್ಯಕತ್ವ. ಈ ಹೇತ್ವಂಶ 'ಅಯಂ ವಹ್ನಿಃ' ಎಂಬ ಪ್ರಕೃತಪಕ್ಷೀಭೂತ ವ್ಯವಸಾಯದಲ್ಲಿ ಇದೆ, ಎಂದು ಹೇಗೆ ಸಿದ್ಧವಾಗುತ್ತದೆ? ಅರ್ಥಾತ್ 'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿ ದಾಹಸಮರ್ಥವಾದ ವಸ್ತುವೇ ವಿಶೇಷ್ಯವಾಗಿದೆ, ಎಂದು ತಿಳಿಯುವುದು ಹೇಗೆ? ಇದಕ್ಕೆ ಎರಡು ಉಪಾಯಗಳನ್ನು ಹೇಳಬಹುದು–

(1) ಕೈ ಮುಟ್ಟಿದಾಗ ಸುಡುವುದನ್ನು ಅನುಭವಿಸಿ 'ಅಯಂ ದಾಹ ಸಮರ್ಥಃ' ಎಂಬ ಜ್ಞಾನ ಬರುತ್ತದೆ. ಈ ವ್ಯವಸಾಯದಿಂದಾಗಿ 'ಅಯಂ ವಹ್ನಿಃ' ಎಂಬ ಜ್ಞಾನವು ದಾಹಸಮರ್ಥವಿಶೇಷ್ಯಕ, ಎಂಬ ಅಂಶವನ್ನು ತಿಳಿಯಬೇಕು. ಆದರೆ, ಇದು ಸಾಧ್ಯವಿಲ್ಲ. ಏಕೆಂದರೆ, 'ಅಯಂ ದಾಹಸಮರ್ಥಃ' ಎಂಬ ವ್ಯವಸಾಯದಲ್ಲಿ ವಹ್ನಿಯು ವಿಶೇಷ್ಯವಾಗಿದೆ. ಆದ್ದರಿಂದಲೇ ಆ ವ್ಯವಸಾಯದಲ್ಲಿ ಸ್ವಗತವಾದ ವಿಶೇಷ್ಯಕತ್ವವು ವಿಷಯವಲ್ಲ. ಅರ್ಥಾತ್, ದಾಹಸಮರ್ಥವದ್ ವಿಶೇಷ್ಯಕತ್ವವು ವ್ಯವಸಾಯಗತವಾದ ಧರ್ಮ. ವ್ಯವಸಾಯದಲ್ಲಿ ವಿಷಯಗತವಾದ ಧರ್ಮಮಾತ್ರವೇ ವಿಷಯ. ಸ್ವಗತವಾದ ಧರ್ಮವು ವಿಷಯವಲ್ಲ. ಆದ್ದರಿಂದ ವ್ಯವಸಾಯದಲ್ಲಿ ಅದರ ಭಾನವಾಗಲು ಸಾಧ್ಯವಿಲ್ಲ.

(2) ಇನ್ನು ವ್ಯವಸಾಯವನ್ನು ಅರ್ಥಾತ್ 'ಅಯಂ ವಹ್ನಿಃ' ಎಂಬ ಜ್ಞಾನವನ್ನು ಗ್ರಹಿಸುವ ಅನುವ್ಯವಸಾಯದಿಂದ ದಾಹಸಮರ್ಥವಿಶೇಷ್ಯಕತ್ವವು ಸಿದ್ಧವಾಗುತ್ತದೆ, ಎಂದು ಹೇಳಬೇಕು. ಆದರೆ, ಅದೂ ಸಾಧ್ಯವಿಲ್ಲ. ಆ ಅನುವ್ಯವಸಾಯ ಪುರೋವರ್ತಿವಿಶೇಷ್ಯಕತ್ವವನ್ನಷ್ಟೇ ಜ್ಞಾನದಲ್ಲಿ ಗ್ರಹಿಸಬಹುದು. ಪುರೋರ್ತಿಯು ದಾಹಸಮರ್ಥವಾಗಿದೆ, ಎಂದು ತಿಳಿಸುವ ಸಾಮರ್ಥ್ಯ ಮನಸ್ಸಿಗಿಲ್ಲ. ಏಕೆಂದರೆ, ಅದು ಬಾಹ್ಯಾರ್ಥ. ಬಾಹ್ಯಾರ್ಥಗ್ರಹಣಕ್ಕೆ ಅದು ಅಸಮರ್ಥ.

ಹೀಗೆ ಹೇತುಘಟಕವಾದ ವಿಶೇಷಣಾಂಶವು ಅಸಿದ್ಧವಾದುದರಿಂದ ಈ ಅನುಮಾನ ಸರಿಯಲ್ಲ.

(ಸ್ವತಸ್ತ್ವವಾದಿಗಳು ಮಾಡುವ ಈ ಆಕ್ಷೇಪವನ್ನು ಮಣಿಗ್ರಂಥದಲ್ಲಿ 'ನನು' (ಪು.289) ಎಂದು ಅನುವಾದ ಮಾಡಲಾಗಿದೆ. ಅದನ್ನೇ ಪ್ರಕೃತ ಗ್ರಂಥದಲ್ಲಿ ಅನುವಾದ ಮಾಡಿ ಮುಂದೆ ಅದಕ್ಕೆ ಮಣಿಕಾರ ಹೇಳಿದ ಪರಿಹಾರವನ್ನೂ ಮೂಲದಲ್ಲಿ ಅನುವಾದ ಮಾಡಿದ್ದಾರೆ.)

## ನ್ಯಾಯದೀಪ

**ಅಪಿಚೈವಮಿತಿ ॥ ಸವ್ಯಧಾನತ್ವಮಾತ್ರೇಣ ಅರ್ಥಸತ್ವನಿಶ್ಚಯರೂಪತ್ವಾಭಾವೇ ಇತ್ಯರ್ಥಃ। ತ್ವದೀಯೇ ಇತಿ ॥ ಪ್ರಾಮಾಣ್ಯಾನುಮಾನೇ ಇತ್ಯನ್ವಯಃ। ಮಣಿಕೃದುಕ್ತೇ ಇತ್ಯರ್ಥಃ ॥**

**ಪ್ರಾಚೀನರೀತ್ಯಾಹ–ಪ್ರಮೇತಿ ॥ ಪ್ರಥಮಂ ಅಪ್ರಾಮಾಣ್ಯಾಭಾವ ಏವ ಪ್ರಾಮಾಣ್ಯಂ ವ್ಯತಿರೇಕಿಣಾ ಸಾಧ್ಯಮ್, ಇತಿ ಮಣಿಕೃದುಕ್ತೇಃ ಆಹ–ನಾಪ್ರಮಾವೇತಿ ॥**

ಅನುಮಾನದಲ್ಲಿ 'ಪ್ರಮಾ, ಅಪ್ರಮಾ ನ ಭವತಿ' ಎಂದು ಎರಡು ಸಾಧ್ಯಗಳಿವೆ. ಮೊದಲನೆಯದು ಪ್ರಾಚೀನಮತರೀತ್ಯಾ. ಅವರು ಧರ್ಮ್ಯಂಶದಲ್ಲಿ ಮತ್ತು ಅನುಮಿತಿಯಲ್ಲಿ ಪ್ರಾಮಾಣ್ಯವು ಅನುವ್ಯವಸಾಯಗ್ರಾಹ್ಯ ಎಂದು ಹೇಳುತ್ತಾರೆ. ಆದ್ದರಿಂದ ಸಾಧ್ಯಾಪ್ರಸಿದ್ಧಿ ಇಲ್ಲ, ಪ್ರಾಮಾಣ್ಯವನ್ನೇ ಸಾಧನೆ ಮಾಡಬಹುದು. ಆದರೆ ಮಣಿಕಾರನು ಪ್ರಾಮಾಣ್ಯವು ಪ್ರಥಮಾನುವ್ಯವಸಾಯವೇದ್ಯ ಎಂದು ಎಲ್ಲೂ ಅಂಗೀಕರಿಸಿಲ್ಲ. ಆದಕಾರಣ ಅಪ್ರಸಿದ್ಧ್ಯಾ ಪ್ರಾಮಾಣ್ಯವನ್ನು ಸಾಧನೆ ಮಾಡಲಾಗುವುದಿಲ್ಲ. ಆದಕ್ಕಾಗಿ ಎರಡನೆಯ ಸಾಧ್ಯ.

## ನ್ಯಾಯದೀಪ

**ವ್ಯವಸಾಯೇತಿ ॥ ವಿಶೇಷ್ಯಸ್ಯ ವ್ಯವಸಾಯವಿಷಯತ್ವಾತ್ ಹೇತೋಃ ವಿಶೇಷ್ಯಕತ್ವಸ್ಯ ವ್ಯವಸಾಯಾವಿಷಯತ್ವಾತ್ ಇತ್ಯರ್ಥಃ।**

**ಕ್ವಚಿತ್ ವ್ಯವಸಾಯ ವಿಷಯತಾವಿಶೇಷಸ್ಯ ವಿಶೇಷ್ಯತ್ವಸ್ಯ ಇತಿ ಪಾಠಃ । ತದಾ ತು ನ ಕ್ಲೇಶಃ । ಧರ್ಮ–ಧರ್ಮಿ–ವೈಶಿಷ್ಟ್ಯಾನಾಂ ವ್ಯವಸಾಯವಿಷಯತ್ವೇನ ಧರ್ಮೇ ವೈಶಿಷ್ಟ್ಯೇ ಚ ಅವಿದ್ಯಮಾನಃ ಧರ್ಮಿಮಾತ್ರನಿಷ್ಠಃ ವಿಷಯತ್ವವಿಶೇಷಃ ಇತ್ಯರ್ಥಃ । 'ವ್ಯವಸಾಯ–ತದ್ವಿಷಯತ್ವಯೋಃ ತದವಿಷಯತ್ವಾತ್' ಇತಿ ಮಣಿವಾಕ್ಯ ನಿಷ್ಕೃಷ್ಟಾರ್ಥಸ್ಯ ಅಯಮನುವಾದಃ ।**

'ವ್ಯವಸಾಯವಿಷಯತಯಾ ವಿಶೇಷ್ಯಸ್ಯ' ಎಂಬ ಮೂಲವಾಕ್ಯದ ಅಭಿಪ್ರಾಯ ಹೀಗೆ– ವಿಶೇಷ್ಯವಾದ ವಹ್ನಿಯು ವ್ಯವಸಾಯದಲ್ಲಿ ವಿಶೇಷ್ಯವಾಗಿರುವ ಕಾರಣದಿಂದಾಗಿ ಜ್ಞಾನನಿಷ್ಠವಾದ ವಿಶೇಷ್ಯಕತ್ವವು ವ್ಯವಸಾಯಕ್ಕೆ ವಿಷಯವಲ್ಲ. ಕೆಲವು ಮೂಲಪ್ರತಿಯಲ್ಲಿ ಹೀಗೆ ಪಾಠವಿದೆ– ವ್ಯವಸಾಯವಿಷಯತಾ ವಿಶೇಷವೇ ವಿಶೇಷ್ಯತ್ವ ಎಂದು. ಆದರ ಅಭಿಪ್ರಾಯ– ವ್ಯವಸಾಯದಲ್ಲಿ ವಹ್ನಿತ್ವಧರ್ಮ, ವಹ್ನಿರೂಪವಾದ ಧರ್ಮಿ ಮತ್ತು ಅವೆರಡರ ವೈಶಿಷ್ಟ್ಯ ಇವು ಮೂರು ವಿಷಯಗಳು. ಇವುಗಳಲ್ಲಿ ಧರ್ಮ ಮತ್ತು ವೈಶಿಷ್ಟ್ಯಗಳಲ್ಲಿ ಇಲ್ಲದಿರುವ ಧರ್ಮಿಯಲ್ಲಿ ಮಾತ್ರ ಇರುವ ಜ್ಞಾನವಿಷಯತಾವಿಶೇಷವೇ ವಿಶೇಷ್ಯತಾ, ಎಂದು. ಈ ಪಾಠದಲ್ಲಿ ಯಾವ ಕ್ಲೇಷವೂ ಇಲ್ಲ.

ಮಣಿ ಗ್ರಂಥದಲ್ಲಿ 'ವ್ಯವಸಾಯ ಹಾಗೂ ತದ್ವಿಷಯತ್ವವು ವ್ಯವಸಾಯಕ್ಕೆ ವಿಷಯವಲ್ಲ' ಎಂಬ ಅರ್ಥದ ವಾಕ್ಯವಿದೆ. (ಪು.289) ಆದರ ವಿವರಣೆಯನ್ನು ಮೇಲಿನ ಮೂಲವಾಕ್ಯದಲ್ಲಿ ಮಾಡಲಾಗಿದೆ.

## ನ್ಯಾಯದೀಪ

**ಬಹಿರರ್ಥೇ ಇತಿ ॥ ದಾಹಸಾಮರ್ಥ್ಯ ವೈಶಿಷ್ಟ್ಯರೂಪೇ ಇತ್ಯರ್ಥಃ । ಅಸಾಮರ್ಥ್ಯಾದಿತಿ ॥ ಪೂರ್ವೋಕ್ತದಿಶಾ ಸಾಮರ್ಥ್ಯವೈಶಿಷ್ಟ್ಯಗ್ರಹಣೇ ಏವ ವಾ, ವೈಶಿಷ್ಟ್ಯ ಗ್ರಹಣಶಕ್ತೌ ಅಪಿ ಸ್ವಾತಂತ್ರ್ಯೇಣ ತದ್‌ಗ್ರಹಣೇ ವಾ ಅಸಾಮಾರ್ಥ್ಯಾದಿತಿ ವಾ ಭಾವಃ ॥**

ಮೂಲದಲ್ಲಿ 'ದಾಹಸಮರ್ಥಃ ವಹ್ನಿಃ' ಎಂಬುದಾಗಿ ವಹ್ನಿಯಲ್ಲಿ ದಾಹಸಾಮರ್ಥ್ಯದ ವೈಶಿಷ್ಟ್ಯವನ್ನು ಗ್ರಹಿಸಲು ಮನಸ್ಸಿಗೆ ಸಾಮರ್ಥ್ಯ ಇಲ್ಲ, ಎಂದಿದೆ. ಈ ವಿಷಯದಲ್ಲಿ ಪ್ರಾಚೀನ–ನವೀನಮತಭೇದವನ್ನು ಹಿಂದೆಯೇ ಹೇಳಲಾಗಿದೆ. ಅನುವ್ಯವಸಾಯಕ್ಕೆ ಬಾಹ್ಯಾರ್ಥವನ್ನು ಕಥಂಚಿದಪಿ ಗ್ರಹಿಸುವ ಸಾಮರ್ಥ್ಯ ಇಲ್ಲ, ಎಂದು ಒಂದು ಸಿದ್ಧಾಂತ. ಆ ಸಿದ್ಧಾಂತದಂತೆ ಪ್ರಕೃತದಲ್ಲಿ ಬಾಹ್ಯಾರ್ಥವಾದ ದಾಹಸಾಮರ್ಥ್ಯದ ವೈಶಿಷ್ಟ್ಯವನ್ನು ಮನಸ್ಸು ಗ್ರಹಿಸುವುದೇ ಇಲ್ಲ. ಇನ್ನೊಂದು ಮತ– ಮನಸ್ಸು ವ್ಯವಸಾಯವಿಷಯತಯಾ ಅದನ್ನು ಗ್ರಹಿಸಿದರೂ ಸ್ವಾತಂತ್ರ್ಯೇಣ ಗ್ರಹಿಸುವುದಿಲ್ಲ, ಎಂದು. ಈ ಮತದ ಪ್ರಕಾರ ದಾಹಸಾಮರ್ಥ್ಯದ ವೈಶಿಷ್ಟ್ಯವನ್ನು ಮನಸ್ಸು ಸ್ವಾತಂತ್ರ್ಯೇಣ ಗ್ರಹಿಸುವುದಿಲ್ಲ, ಎಂದು ಮಣಿಕಾರನ ಆಶಯ.

**ननु स्मृत्युपनीते व्यवसाये स्मृत्युपनीतं यद्दाहसामर्थ्यं तद्वद्विशेष्यकत्वं मनसा परिच्छिद्यते । नचैवं स्मृत्युपनीते व्यवसाये स्मृत्युपनीतं यद्रजतत्वं तद्वद्विशेष्यकत्वमपि मनसा परिच्छिद्यताम्, तथा च प्रामाण्यस्य स्वतस्त्वं स्यादिति वाच्यम् । मनसा एवं प्रामाण्यग्रहेऽपि प्रथमानुव्यवसायेनागृहीततया यावज्ज्ञानग्राहकसामग्रीग्राह्यत्वस्य, तज्ज्ञानविषयकज्ञानानपेक्षज्ञानग्राह्यत्वस्य चाभावेन परतस्त्वाहानेः ।**

ಹಿಂದೆ ಮಾಡಿದ ಪ್ರಶ್ನೆಗೆ ಮಣಿಕಾರ ಹೇಳಿದ ಪರಿಹಾರ ಹೀಗಿದೆ– ಮೊದಲು 'ಅಯಂ ವಹ್ನಿಃ' ಎಂಬ ವ್ಯವಸಾಯ ಬರುತ್ತದೆ. ಕೂಡಲೇ ಆ ವ್ಯವಸಾಯದ ಅನುವ್ಯವಸಾಯ ಬರುತ್ತದೆ. ಆಮೇಲೆ ವಹ್ನಿಯನ್ನು ಮುಟ್ಟಿ 'ಅಯಂ ದಾಹಸಮರ್ಥಃ' ಎಂಬ ಜ್ಞಾನ ಬರುತ್ತದೆ. ಇದರ ಅನುವ್ಯವಸಾಯಾನಂತರ ದಾಹಸಾಮರ್ಥ್ಯದ ಸ್ಮೃತಿ ಬರುತ್ತದೆ. ಆ ಸ್ಮೃತಿಯಿಂದ ದಾಹಸಾಮರ್ಥ್ಯ ಉಪನೀತವಾದುದರಿಂದ ತದ್ವದ್ವಿಶೇಷ್ಯಕತ್ವವು, ವಹ್ನಿಜ್ಞಾನದ ಅನುವ್ಯವಸಾಯದಿಂದ ಜನ್ಯವಾದ ಸ್ಮೃತಿಯಲ್ಲಿ ಉಪನೀತವಾದ ವಹ್ನಿಜ್ಞಾನದಲ್ಲಿ, ತಿಳಿಯುತ್ತದೆ. ಅದರ ಆಕಾರ ಹೀಗೆ– 'ವಹ್ನಿರಿತ್ಯನುಭವಃ ದಾಹಸಾಮರ್ಥ್ಯವದ್ ವಿಶೇಷ್ಯಕಃ ಮಮ ಉತ್ಪನ್ನಃ' ಎಂದು. ಜ್ಞಾನಗಳ ಕ್ರಮ ಹೀಗೆ–

(1) ಅಯಂ ವಹ್ನಿಃ, ಎಂಬ ಜ್ಞಾನ.

(2) ವಹ್ನಿಜ್ಞಾನವಾನ್ ಅಹಮ್, ಅನುವ್ಯವಸಾಯ.

(3) ಅಯಂ ದಾಹಸಮರ್ಥಃ, ವ್ಯವಸಾಯ.

(4) ಅಯಂ ದಾಹಸಮರ್ಥಃ ಇತಿ ಜ್ಞಾನವಾನ್ ಅಹಮ್–ಅನುವ್ಯವಸಾಯ.

(5) ಪ್ರಥಮಾನುವ್ಯವಸಾಯಜನ್ಯವಾದ ಸ್ಮೃತಿಯಿಂದ ಉಪನೀತವಾದ ವಹ್ನಿಜ್ಞಾನದಲ್ಲಿ 'ದಾಹಸಮರ್ಥೋಽಯಂ' ಎಂಬ ಸ್ಮೃತ್ಯುಪನೀತವಾದ ದಾಹಸಾಮರ್ಥ್ಯದ ಭಾನ. 'ವಹ್ನಿರಿತ್ಯನುಭವಃ ದಾಹಸಾಮರ್ಥ್ಯವದ್ ವಿಶೇಷ್ಯಕಃ ಮಮ ವೃತ್ತಃ' ಎಂದು ಅದರ ಆಕಾರ.

ಕೊನೆಯ ಅನುವ್ಯವಸಾಯದಲ್ಲಿ, ಸ್ಮೃತಿಯಿಂದ ಉಪನೀತವಾದ ದಾಹಸಾಮರ್ಥ್ಯವತ್ವವೇನಿದೆಯೋ ತದ್ವದ್ವಿಶೇಷ್ಯಕತ್ವವು ಸ್ಮೃತ್ಯುಪನೀತ ವ್ಯವಸಾಯದಲ್ಲಿ ತೋರುತ್ತದೆ. ಹೀಗೆ ವಹ್ನಿಜ್ಞಾನದಲ್ಲಿ ದಾಹಸಾಮರ್ಥ್ಯವದ್ ವಿಶೇಷ್ಯಕತ್ವವು ಸಿದ್ಧವಾಗುತ್ತದೆ. ಆದ್ದರಿಂದ ವಿಶೇಷಣಾಸಿದ್ಧಿ ಇಲ್ಲ.

ಈ ಪರಿಹಾರವನ್ನು ಹೇಳಿ ಮತ್ತೆ ಮಣಿಕಾರ ಹೀಗೆ ಆಕ್ಷೇಪ ಮಾಡಿಕೊಂಡಿದ್ದಾನೆ–

ವಹ್ನಿಜ್ಞಾನದಲ್ಲಿ ದಾಹಸಾಮರ್ಥ್ಯವದ್–ವಿಶೇಷ್ಯಕತ್ವವು ತೋರಿದಂತೆಯೇ ರಜತಜ್ಞಾನದಲ್ಲಿ ರಜತತ್ವವದ್–ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವೂ ಪಂಚಮಾನುವ್ಯವಸಾಯದಲ್ಲಿ ತೋರಬಹುದಾದ್ದರಿಂದ ಪ್ರಾಮಾಣ್ಯಸ್ವತಸ್ತ್ವವೂ ಸಿದ್ಧವಾಗಲಿ. ಇಲ್ಲಿ ಜ್ಞಾನದ ಕ್ರಮ–

(1) ಇದಂ ರಜತಮ್–ವ್ಯವಸಾಯ

(2) ಇದಂ ರಜತಮ್‌ಇತಿ ಜ್ಞಾನವಾನಹಮ್–ಅನುವ್ಯವಸಾಯ

(3) ಹತ್ತಿರ ಹೋಗಿ ಪರೀಕ್ಷಿಸಿ 'ಪುರೋವರ್ತಿ ರಜತತ್ವತ್' ಎಂಬ ವ್ಯವಸಾಯ.

(4) ಅದರ ಅನುವ್ಯವಸಾಯಾನಂತರ ರಜತತ್ವವತ್ವಾಂಶದ ಸ್ಮೃತಿ.

(5) ಪ್ರಥಮಾನುವ್ಯವಸಾಯ ಜನ್ಯಸ್ಮೃತಿಯಲ್ಲಿ ಉಪನೀತವಾದ ರಜತಜ್ಞಾನದಲ್ಲಿ ಸ್ಮೃತ್ಯುಪನೀತವಾದ ರಜತತ್ವವತ್ವದ ಭಾನ–''ರಜತತ್ವವದ್ ವಿಶೇಷ್ಯಕಂ ಜ್ಞಾನಂ ಮಮ ಜಾತಮ್''

ಹೀಗೆ ಪ್ರಾಮಾಣ್ಯಸ್ವತಸ್ತ್ವವೂ ಸಿದ್ಧವಾಗಬಹುದು, ಎಂದು ಆಕ್ಷೇಪಿಸಿ ಮಣಿಕಾರ ಹೀಗೆ ಸಮಾಧಾನ ಹೇಳಿದ್ದಾನೆ–

ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾದ ಮಾತ್ರದಿಂದ ಪ್ರಾಮಾಣ್ಯ ಸ್ವತಸ್ತ್ವ ಸಿದ್ಧವಾಗುವುದಿಲ್ಲ. ಸ್ವತಸ್ತ್ವವನ್ನು ಹಿಂದೆ ಎರಡು ರೀತಿಯಲ್ಲಿ ಪರಿಷ್ಕರಿಸಲಾಗಿದೆ–

(1) ಯಾವಜ್ಜ್ಞಾನಗ್ರಾಹಕ ಸಾಮಗ್ರೀಗ್ರಾಹ್ಯತ್ವಮ್ ಸ್ವತಸ್ತ್ವಂ. ಜ್ಞಾನಗ್ರಾಹಕ ಸಾಮಗ್ರೀ ಜನ್ಯವಾದ ಎಲ್ಲಾ ಜ್ಞಾನಗಳಲ್ಲೂ ಪ್ರಾಮಾಣ್ಯವು ವಿಷಯವಾಗಬೇಕು. ಆದರೆ, ಅಂತಹ ಪ್ರಥಮಾನುವ್ಯವಸಾಯದಲ್ಲಿ (2ನೇ ಜ್ಞಾನ) ಪ್ರಾಮಾಣ್ಯವು ವಿಷಯವಾಗಿಲ್ಲ. ಆದ್ದರಿಂದ ಈ ಸ್ವತಸ್ತ್ವ ಪ್ರಾಮಾಣ್ಯದಲ್ಲಿ ಬರಲಿಲ್ಲ.

(2) ತಜ್ಜ್ಞಾನವಿಷಯಕ–ಜಾನಾನಪೇಕ್ಷ–ಜ್ಞಾನವಿಷಯತ್ವಮ್–ಇದು ಎರಡನೆಯ ಸ್ವತಸ್ತ್ವಪರಿಷ್ಕಾರ. ಇದೂ ಪ್ರಾಮಾಣ್ಯದಲ್ಲಿ ಸಿದ್ಧವಾಗುವುದಿಲ್ಲ. ರಜತಜ್ಞಾನವಿಷಯಕಜ್ಞಾನ–ಪ್ರಥಮಾನುವ್ಯವಸಾಯ. ತದನಪೇಕ್ಷಜ್ಞಾನ ಅದೇ ಅನುವ್ಯವಸಾಯ. ಆದರಲ್ಲಿ ಪ್ರಾಮಾಣ್ಯವು ತೋರುವುದಿಲ್ಲ. ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರಿದರೂ ಅದು ರಜತಜ್ಞಾನವಿಷಯಕವಾದ ಪ್ರಥಮಾನುವ್ಯವಸಾಯದಿಂದ ಜನ್ಯವೇ ಆಗಿದೆ. ಅಜನ್ಯಜ್ಞಾನವಲ್ಲ. ಆದ್ದರಿಂದ ತದ್ವಿಷಯತ್ವ ಪ್ರಾಮಾಣ್ಯಕ್ಕೆ ಇದ್ದರೂ ಸ್ವತಸ್ತ್ವ ಬರಲಿಲ್ಲ. ಪರತಸ್ತ್ವವಾದಕ್ಕೆ ಹಾನಿ ಇಲ್ಲ.

(ಹೀಗೆ ಮಣಿಗ್ರಂಥದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಖಂಡನೆ ಮಾಡಲಾಗಿದೆ. ಅದನ್ನು ಪ್ರಸ್ತುತ ಗ್ರಂಥದಲ್ಲಿ ಅನುವಾದ ಮಾಡಲಾಗಿದೆ. ಮುಂದೆ ಅದಕ್ಕೆ ಖಂಡನೆಯನ್ನು ಹೇಳಲಾಗಿದೆ.)

## ನ್ಯಾಯದೀಪ

**ಸ್ಮೃತೀತಿ ॥ 'ಅಯಂ ವಹ್ನಿಃ' ಇತಿ ವ್ಯವಸಾಯವಿಷಯಕಾನುವ್ಯವಸಾಯ ಜನ್ಯ–ಸ್ಮೃತ್ಯುಪನೀತೇ 'ಅಯಂ ವಹ್ನಿಃ' ಇತಿ ವ್ಯವಸಾಯೇ 'ದಾಹಸಮರ್ಥೋಽಯಮ್' ಇತಿ ವ್ಯವಸಾಯಜನ್ಯ–ಸ್ಮೃತ್ಯುಪನೀತಂ ಯತ್ ದಾಹಸಾಮರ್ಥ್ಯವತ್ತ್ವಂ, ತದ್ವದ್ವಿಶೇಷ್ಯಕತ್ವಂ 'ವಹ್ನಿರಿತಿ ಅನುಭವಃ ದಾಹಸಮರ್ಥವದ್ವಿಶೇಷ್ಯಕಃ ಮಮ ವೃತ್ತಃ' ಇತಿ ಮನಸಾ ಪರಿಚ್ಛಿದ್ಯತೇ, ಇತ್ಯರ್ಥಃ ।**

ವಹ್ನಿವಿಷಯಕ–ವ್ಯವಸಾಯದಲ್ಲಿ ದಾಹಸಾಮರ್ಥ್ಯವದ್ವಿಶೇಷ್ಯಕತ್ವಭಾನವನ್ನು ಮೂಲದಲ್ಲಿ 'ಸ್ಮೃತ್ಯುಪನೀತೇ' ಇತ್ಯಾದಿ ವಾಕ್ಯದಿಂದ ತೋರಿಸಿಕೊಡಲಾಗಿದೆ. ಆ ವಾಕ್ಯದಲ್ಲಿ 'ಸ್ಮೃತ್ಯುಪನೀತೇ ವ್ಯವಸಾಯೇ' ಎಂದರೆ 'ಅಯಂ ವಹ್ನಿಃ' ಎಂಬ ವ್ಯವಸಾಯವಿಷಯಕವಾದ ಅನುವ್ಯವಸಾಯ ವೇನಿದೆಯೋ ಅದರಿಂದ ಜನ್ಯವಾದ ಸ್ಮೃತಿಯಿಂದ ಅಂದರೆ ಅನುವ್ಯವಸಾಯದ ಸ್ಮೃತಿರೂಪ ಜ್ಞಾನದಿಂದ ಉಪನೀತವಾದುದು 'ಅಯಂ ವಹ್ನಿಃ' ಎಂಬ ವ್ಯವಸಾಯ. ಅದರಲ್ಲಿ, 'ಅಯಂ ದಾಹಸಮರ್ಥಃ' ಎಂಬ ಅನುಭವಜನ್ಯವಾದ ಸ್ಮೃತಿಯಿಂದ ಉಪನೀತವಾದ 'ದಾಹಸಾಮರ್ಥ್ಯವತ್ತ್ವ' ಎಂಬ ವಿಷಯವೇನಿದೆಯೋ ತದ್ವದ್ವಿಶೇಷ್ಯಕತ್ವವು ಮನಸ್ಸಿನಿಂದ ತಿಳಿಯುತ್ತದೆ. ಅದರ ಆಕಾರ ಹೀಗಾಗುತ್ತದೆ– 'ದಾಹಸಮರ್ಥವಾದ ವಸ್ತು(ವಹ್ನಿ) ವಿಶೇಷ್ಯಕವಾದ ವಹ್ನಿಯ ಅನುಭವ ನನಗೆ ಬಂದಿತ್ತು'. ಇದು ಮನಸ್ಸಿನಿಂದ ಆದ ನಿರ್ಧಾರ.

## ನ್ಯಾಯದೀಪ

**ತುಲ್ಯನ್ಯಾಯತ್ವಾತ್ ಪ್ರಾಮಾಣ್ಯಾಂಶೇಽಪಿ ಆಶಂಕ್ಯ ಇಷ್ಟಾಪತ್ತ್ಯಾ ನಿರಾಹ– ನಚೈವಮಿತಿ ॥ ದಾಹಸಾಮರ್ಥ್ಯವದ್ ವಿಶೇಷ್ಯಕತ್ವಗ್ರಹೇ ಇತ್ಯರ್ಥಃ । 'ಇದಂ ರಜತಮ್' ಇತಿ ವ್ಯವಸಾಯವಿಷಯಕಾನುವ್ಯವಸಾಯ– ಜನ್ಯಸ್ಮೃತ್ಯುಪನೀತೇ ತಸ್ಮಿನ್ ವ್ಯವಸಾಯೇ ಇತ್ಯಾದಿರೂಪೇಣ ಪೂರ್ವವದ್ ವ್ಯಾಖ್ಯೇಯಮ್ ।**

**ಏವಮಿತಿ ॥ ಪಂಚಮಾನುವ್ಯವಸಾಯೇನ ಇತ್ಯರ್ಥಃ । ಜ್ಞಾನಾನ– ಪೇಕ್ಷೇತಿ ॥ ಪಂಚಮಾನುವ್ಯವಸಾಯಸ್ಯ ಚ ತಾದೃಶಜ್ಞಾನ–ಸಾಪೇಕ್ಷತ್ವಾತ್ ಇತಿ ಭಾವಃ ।**

ಹೇಗೆ ಪಂಚಮಾನುವ್ಯವಸಾಯದಲ್ಲಿ ದಾಹಸಾಮರ್ಥ್ಯವದ್ ವಿಶೇಷ್ಯಕತ್ವವು ಭಾನವಾಗು

ತ್ತದೋ ಹಾಗೆಯೇ ರಜತಜ್ಞಾನದಲ್ಲೂ ಪ್ರಾಮಾಣ್ಯವು ಪಂಚಮಾನುವ್ಯವಸಾಯದಲ್ಲಿ ತೋರಲಿ, ಎಂದು ಸ್ವತಸ್ತ್ವವಾದಿಗಳು ಆಕ್ಷೇಪ ಮಾಡಿದರೆ ಅದನ್ನು ಮಣಿಕಾರ ಇಷ್ಟಾಪತ್ತಿಯನ್ನು ಹೇಳಿ ಪರಿಹರಿಸಿದ್ದಾನೆ. (ಅಂದರೆ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವು ಭಾನವಾದರೂ ಪರತಸ್ತ್ವವಾದಕ್ಕೆ ಚ್ಯುತಿ ಇಲ್ಲ, ಎಂದು ಮಣಿಕಾರನ ಅಭಿಪ್ರಾಯ.)

## ಮಣ್ಯುಕ್ತ ನಿರಾಸ

**इति चेत्, हन्तैवं पाश्चात्यस्मृत्युपनीते दाहसामर्थ्ये मानसज्ञानमिव प्राथमिकव्यवसायोपनीते रजतत्ववैशिष्ट्येऽनुव्यवसाय एव सत्तानिश्चयरूपोऽस्तु ।**

ಸ್ಮೃತ್ಯುಪನೀತವಾದ ದಾಹಸಾಮರ್ಥ್ಯವತ್ತ್ವದಲ್ಲಿ ಪಂಚಮಾನುವ್ಯವಸಾಯವು ಸತ್ತ್ವವನ್ನು ಗ್ರಹಿಸುತ್ತದೆ ಎನ್ನುವುದಾದರೆ, ಅರ್ಥಾತ್ ದಾಹಸಾಮರ್ಥ್ಯವು ಸ್ಮೃತಿಯಿಂದ ಉಪನೀತ, ವಹ್ನಿಜ್ಞಾನವೂ ಸ್ಮೃತಿಯಿಂದ ಉಪನೀತ. ಅವೆರಡರ ಸಹಾಯದಿಂದ ಪೂರ್ವದಲ್ಲಿ ಅಜ್ಞಾತವಾದ 'ದಾಹಸಾಮರ್ಥ್ಯವದ್ ವಿಶೇಷ್ಯಕತ್ವವು' ಪಂಚಮಾನುವ್ಯವಸಾಯದಿಂದ ವಹ್ನ್ಯನುಭವದಲ್ಲಿ ತಿಳಿಯುತ್ತದೆ ಎಂದು ಅಂಗೀಕರಿಸಬೇಕು. ಇದರಿಂದ, ಪಂಚಮಾನುವ್ಯವಸಾಯವು ಪುರೋವರ್ತಿಯಲ್ಲಿ ದಾಹಸಾಮರ್ಥ್ಯವೈಶಿಷ್ಟ್ಯವು ಸತ್ ಎಂದು ಗ್ರಹಿಸುತ್ತದೆ, ಎಂದಂತಾಯಿತು. ಅದರಂತೆಯೇ ಪ್ರಕೃತದಲ್ಲೂ ಪುರೋವರ್ತಿಯಲ್ಲಿ ರಜತತ್ವ-ವೈಶಿಷ್ಟ್ಯವು ವ್ಯವಸಾಯದಿಂದ ಉಪನೀತವಾಗಿದೆ. ಅದರಲ್ಲಿ ಸತ್ತ್ವನಿಶ್ಚಯವೂ ಅನುವ್ಯವಸಾಯದಿಂದಲೇ ಬರಲಿ. ಅಲ್ಲಿಗೆ ಪ್ರಥಮಾನುವ್ಯವಸಾಯವೇ ಪ್ರಾಮಾಣ್ಯವನ್ನು ಗ್ರಹಿಸಿದಂತಾಯಿತು. ನೈಯಾಯಿಕಾಭಿಮತ ಪರತಸ್ತ್ವಹಾನಿಯಾಯಿತು. ನಮಗೆ ಅಭಿಮತವಾದ ಸ್ವತಸ್ತ್ವ ಸಿದ್ಧವಾಯಿತು.

## ನ್ಯಾಯದೀಪ

**ಹಂತೇತಿ ಹರ್ಷೇ । ಪಾಶ್ಚಾತ್ಯಾ ಯಾ ಸ್ಮೃತಿಃ ತದುಪನೀತ ಇತ್ಯರ್ಥಃ । ಪಾಶ್ಚಾತ್ಯೇತಿ ಪ್ರಾಥಮಿಕೇತಿ ಚ ಹೇತುಗರ್ಭಮ್ । ದಾಹ-ಸಾಮರ್ಥ್ಯೇತಿ ॥ ದಾಹಸಾಮರ್ಥ್ಯವತ್ತ್ವೇ ಇತ್ಯರ್ಥಃ । ಮಾನಸಜ್ಞಾನ-ಮಿವೇತಿ ॥ ಅನುವ್ಯವಸಾಯ ಇವೇತ್ಯರ್ಥಃ । ಪಾರತಂತ್ರ್ಯೇಣ ತದ್ವಿಷಯತ್ವೋಪಗಮಾತ್ ಇಷ್ಟಾಪತ್ತಿನಿರಾಸಾಯಾಹ-ಸತ್ತಾನಿಶ್ಚಯೇತಿ ॥**

ಸ್ಮೃತಿದ್ವಯಗಳಿಗೆ ಪಾಶ್ಚಾತ್ಯ-ಪ್ರಾಥಮಿಕ ಎಂಬ ವಿಶೇಷಣಗಳು ಹೇತ್ವರ್ಥದಲ್ಲಿ ಇವೆ. ಆಮೇಲೆ ಬಂದ ಸ್ಮೃತಿಯಿಂದ ಉಪನೀತವಾದ ದಾಹಸಾಮರ್ಥ್ಯವತ್ತ್ವದಲ್ಲಿ ಅನುವ್ಯವಸಾಯವು

ಸತ್ತ್ವವನ್ನು ಗ್ರಹಿಸುವುದಾದರೆ ಮೊದಲು ಬಂದ ವ್ಯವಸಾಯೋಪನೀತವಾದ ರಜತತ್ವವೈಶಿಷ್ಟ್ಯದಲ್ಲಿ ಸತ್ತ್ವವನ್ನು ಗ್ರಹಿಸಲೇಬೇಕು, ಎಂದು ಭಾವ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಇಂದ್ರಿಯಸ್ಯ ಅಯಂ ಸ್ವಭಾವಃ ಯತ್ 'ಉಪನೀತಮ್ ಉಪನೀತಾಂತರ ವೃತ್ತಿತ್ವೇನೈವ ಗೃಹ್ಣಾತಿ ಇತಿ ಚೇನ್ನ । 'ಸುರಭಿ ಚಂದನಮ್' ಇತಿ ಚಾಕ್ಷುಷಜ್ಞಾನಾನುಪಪತ್ತೇಃ ।**

**ಮನಸಃ ತಥಾ ಸ್ವಭಾವ ಇತ್ಯಸ್ಯಾಪಿ ಮಾನಾಭಾವೇನ ಅಯುಕ್ತತ್ವಾತ್ ।**

**ಸಂಶಯಾನುಪಪತ್ತಿರೇವ ಮನಸಃ ತಾದೃಶಸ್ವಭಾವಕಲ್ಪಿಕಾ ಇತಿ ಚೇನ್ನ । ತಸ್ಯಾಃ ಅನ್ಯಥಾ ಉಪಪಾದಯಿಷ್ಯಮಾಣತ್ವಾತ್ । ನಿಮೀಲಿತನೇತ್ರಸ್ಯಾಪಿ 'ಅಹಂ ಗೌರಃ' ಇತ್ಯಾದಿಪ್ರತ್ಯಯಾನಾಪತ್ತೇಶ್ಚ ಇತಿ ಭಾವೇನಾಹ– ಅವಿಶೇಷಾದಿತಿ ॥**

ದಾಹಸಾಮರ್ಥ್ಯವತ್ವದ ಸತ್ತ್ವಭಾನಕ್ಕೂ ರಜತತ್ವವೈಶಿಷ್ಟ್ಯದಲ್ಲಿ ಸತ್ತ್ವಭಾನಕ್ಕೂ ವ್ಯತ್ಯಾಸವಿದೆ. ಅಲ್ಲಿ ದಾಹಸಾಮರ್ಥ್ಯವೂ ಸ್ಮೃತ್ಯುಪನೀತ, ವಹ್ನಿಜ್ಞಾನವೂ ಸ್ಮೃತ್ಯುಪನೀತ. ಸ್ಮೃತ್ಯುಪನೀತವಾದ ಒಂದರಲ್ಲಿ ಸ್ಮೃತ್ಯುಪನೀತವಾದ ಇನ್ನೊಂದರ ವೈಶಿಷ್ಟ್ಯ ಇದೆ, ಎಂದು ತೋರುತ್ತದೆ. ಆದರೆ, ಪ್ರಕೃತದಲ್ಲಿ ವೈಶಿಷ್ಟ್ಯವು ವ್ಯವಸಾಯೋಪನೀತ, ಜ್ಞಾನವು ಉಪನೀತವಲ್ಲ. ಉಪನೀತದಲ್ಲಿ ಉಪನೀತಾಂತರ ವೈಶಿಷ್ಟ್ಯವಿಷಯಕತ್ವವನ್ನು ಗ್ರಹಿಸುವುದಷ್ಟೇ ಇಂದ್ರಿಯಗಳ ಸ್ವಭಾವ. ಅನುಪನೀತ ದೊಂದಿಗೆ ಉಪನೀತ–ವೈಶಿಷ್ಟ್ಯವನ್ನು ಇಂದ್ರಿಯ ಗ್ರಹಿಸುವುದಿಲ್ಲ.

ಈ ವಾದ ಸರಿಯಲ್ಲ— ಹಾಗಿದ್ದರೆ ಕಣ್ಣಿನಿಂದ 'ಸುರಭಿ ಚಂದನಮ್' ಎಂಬ ಜ್ಞಾನ ಬರಲಿಕ್ಕಿಲ್ಲ. ಏಕೆಂದರೆ ಇಲ್ಲಿ ಸೌರಭ್ಯವು ಉಪನೀತ, ಚಂದನವು ಉಪನೀತವಲ್ಲ, ಆದರೂ ಅವೆರಡರ ವೈಶಿಷ್ಟ್ಯವನ್ನು ಚಕ್ಷುರಿಂದ್ರಿಯವು ಸತ್ತ್ವೇನ ಗ್ರಹಿಸುತ್ತದೆ. ಚಕ್ಷುರಾದಿ ಬಾಹ್ಯೇಂದ್ರಿಯಗಳು ಹಾಗೆ ಗ್ರಹಿಸಬಹುದು, ಆದರೆ ಮನಸ್ಸು ಮಾತ್ರ ಉಪನೀತಗಳ ವೈಶಿಷ್ಟ್ಯವನ್ನಷ್ಟೆ ಸತ್ಯವೆಂದು ಗ್ರಹಿಸುತ್ತದೆ. ಇದೇ ಅದರ ಸ್ವಭಾವ, ಎಂದರೆ, ಮನಸ್ಸಿಗೆ ಮಾತ್ರ ಇಂತಹ ವಿಲಕ್ಷಣ ಸ್ವಭಾವವನ್ನು ಕಲ್ಪನೆ ಮಾಡಲೂ ಆಧಾರಗಳೇನೂ ಇಲ್ಲ.

ಮನಸ್ಸಿಗೆ ಮಾತ್ರ ಅಂತಹ ಸ್ವಭಾವ ಇದೆ ಎಂದು ಕಲ್ಪನೆ ಮಾಡುವುದಕ್ಕೆ ಆಧಾರ ಇದೆ. ಒಂದುವೇಳೆ ಪ್ರಕಾರೀಭೂತಧರ್ಮವೈಶಿಷ್ಟ್ಯವು ಪುರೋವರ್ತಿಯಲ್ಲಿ ಸತ್ಯ, ಇದೆ ಎಂದು ಮನಸ್ಸು ಗ್ರಹಿಸಿದಲ್ಲಿ ಜ್ಞಾನ ಬಂದ ಮೇಲೆ ಜ್ಞಾನದ ವ್ಯವಸಾಯದಲ್ಲಿ ಪ್ರಾಮಾಣ್ಯದ ಸಂದೇಹವೇ ಬರಬಾರದು. ಆದರೆ, ಕೆಲವೆಡೆ ಪ್ರಾಮಾಣ್ಯ ಸಂದೇಹವು ಬರುತ್ತದೆ. ಆ

ಸಂದೇಹಾನ್ಯಥಾನುಪಪತ್ತ್ಯಾ ಮನಸ್ಸಿಗೆ ಅಂತಹ ಸ್ವಭಾವ ವಿಶೇಷವನ್ನು ಕಲ್ಪಿಸುತ್ತೇವೆ, ಎಂದರೆ, ಇದೂ ಸರಿಯಲ್ಲ. ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸಿದರೂ ಕೆಲವೆಡೆ ಪ್ರತಿಬಂಧಕದಿಂದಾಗಿ ಪ್ರಾಮಾಣ್ಯವು ಅಗೃಹೀತವಾದಾಗ ಸಂದೇಹವು ಬರಬಹುದು. ಇದನ್ನು ಮುಂದೆ ಸಮರ್ಥನೆ ಮಾಡಲಾಗುತ್ತದೆ. ಹೀಗೆ ಸಂದೇಹವನ್ನು ಅನ್ಯಥಾಪಿ ಸಮರ್ಥನೆ ಮಾಡಬಹುದಾದ್ದರಿಂದ ಮನಸ್ಸಿಗೆ ಇತರ ಇಂದ್ರಿಯಗಳಿಗೆ ಇಲ್ಲದ ಸ್ವಭಾವವಿಶೇಷವನ್ನು ಕಲ್ಪನೆ ಮಾಡಬಾರದು.

ಅಷ್ಟೇ ಅಲ್ಲ. ಮನಸ್ಸು ಉಪನೀತವಾದ ಎರಡುವಸ್ತುಗಳಿಗೆ ಇರುವ ವೈಶಿಷ್ಟ್ಯವನ್ನು ಮಾತ್ರ ಸತ್ಯವೆಂದು ಗ್ರಹಿಸುವುದಾದಲ್ಲಿ ಕಣ್ಣು ಮುಚ್ಚಿಕೊಂಡಾಗ 'ಅಹಂ ಗೌರಃ' ಎಂಬ ಜ್ಞಾನವೇ ಬರಬಾರದು. ಏಕೆಂದರೆ, ಇಲ್ಲಿ ಗೌರವರ್ಣದ ದೇಹ ಚಕ್ಷುರಿಂದ್ರಿಯ ಜನ್ಯಜ್ಞಾನದಿಂದ ಉಪನೀತವಾದುದು. 'ಅಹಂ' ಎಂದು ಆತ್ಮನ ಮಾನಸ ಪ್ರತ್ಯಕ್ಷ. ಅವೆರಡರ ವೈಶಿಷ್ಟ್ಯವನ್ನು ಸತ್ಯವೆಂದು ಮನಸ್ಸು ಗ್ರಹಿಸುತ್ತದೆ. ಆದ್ದರಿಂದ ಮನಸ್ಸು ಉಪನೀತಗಳ ವೈಶಿಷ್ಟ್ಯಕ್ಕೆ ಮಾತ್ರ ಸತ್ವವನ್ನು ಗ್ರಹಿಸುತ್ತದೆ, ಎನ್ನುವ ವಿಚಿತ್ರ ಸ್ವಭಾವವನ್ನು ಕಲ್ಪಿಸುವುದು ಸರಿಯಲ್ಲ.

ಈ ವಿಷಯವನ್ನು ಸೂಚಿಸುವುದಕ್ಕಾಗಿ ಮುಂದಿನ ಮೂಲ ವಾಕ್ಯವಿದೆ.

**अविशेषात् । त्वत्पक्षे व्यवसायस्य यथार्थत्वेन स्मृतितो विशेषाच्च ।**

ಮನಸ್ಸು ದಾಹಸಾಮರ್ಥ್ಯ-ವೈಶಿಷ್ಟ್ಯಕ್ಕೆ ಪುರೋವರ್ತಿಯಲ್ಲಿ ಸತ್ತಾವನ್ನು ಗ್ರಹಿಸುವುದಕ್ಕೂ ರಜತತ್ವಧರ್ಮಕ್ಕೆ ಪುರೋವರ್ತಿಯಲ್ಲಿ ವೈಶಿಷ್ಟ್ಯವು ಸತ್ ಎಂದು ಗ್ರಹಿಸುವುದಕ್ಕೂ ಯಾವ ವಿಶೇಷವೂ ಇಲ್ಲ.

ಅಷ್ಟೇ ಅಲ್ಲ. ನ್ಯಾಯಮತದಲ್ಲಿ ಸ್ಮೃತಿಯು ಅಪ್ರಮಾಣ. ಅಂತಹ ಸ್ಮೃತ್ಯುಪನೀತಗಳಿಗೆ ವೈಶಿಷ್ಟ್ಯವನ್ನು ಮನಸ್ಸು ಸತ್ಯವೆಂದು ಗ್ರಹಿಸುತ್ತದೆ. ಹೀಗಿರುವಾಗ ದೋಷದ ಸಂದೇಹವೇ ಇಲ್ಲದ, ಪ್ರಮಾಣವಾದ ಅನುಭವದಿಂದ ಉಪನೀತವಾದ ಪ್ರಕಾರೀಭೂತಧರ್ಮದ ವೈಶಿಷ್ಟ್ಯಕ್ಕೆ ಸತ್ವವನ್ನು ಗ್ರಹಿಸುವುದು ಸುತರಾಂ ಯುಕ್ತವಾಗುತ್ತದೆ.

## ನ್ಯಾಯದೀಪ

**ವೈಪರೀತ್ಯಮೇವ ಉಚಿತಮಿತ್ಯಾಹ-ತ್ವತ್‌ಪಕ್ಷೇ ಇತಿ ॥ ಅನಾಶಂಕಿತ-ದೋಷತ್ವಾತ್ ಗ್ರಾಹ್ಯಪ್ರಾಮಾಣ್ಯಾಶ್ರಯ-ವ್ಯವಸಾಯಸ್ಯೇತಿ ಭಾವಃ ॥**

ಸ್ಮೃತ್ಯುಪನೀತಗಳಿಗೆ ವೈಶಿಷ್ಟ್ಯವನ್ನು ಸತ್ವೇನ ಗ್ರಹಿಸುವುದಕ್ಕೆ ವಿಪರೀತವಾಗಿ ಅನುಭವೋಪನೀತದ ವೈಶಿಷ್ಟ್ಯವನ್ನು ಸತ್ವೇನ ಗ್ರಹಿಸುವುದು ಸೂಕ್ತ ಎಂದು 'ತ್ವತ್‌ಪಕ್ಷೇ' ಎಂಬ ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಉಪನೀತಂ ತದ್ವತ್ತ್ವಂ ಉಪನೀತವೃತ್ತಿತ್ವೇನ ಗೃಹ್ಯತೇ ಇತಿ ಕಲ್ಪ್ಯತೇ ಇತ್ಯತಃ, ಅಯಮಪಿ ನಿಯಮಃ ನ ಇತ್ಯಾಹ–ಅನುಮಿತಾವಿತಿ ॥**

ವ್ಯವಸಾಯೋಪನೀತವಾದ ಪ್ರಕಾರೀಭೂತಧರ್ಮದ ಸತ್ತಾವನ್ನು ಅನುವ್ಯವಸಾಯವು ವಿಷಯೀಕರಿಸಲು ಸಾಧ್ಯವಿಲ್ಲ. ಏಕೆಂದರೆ, ಆದಕ್ಕೆ ಒಂದೆ ಕೊಟ್ಟ ಉದಾಹರಣೆ, ಸ್ಮೃತ್ಯುಪನೀತವಾದ ದಾಹಸಾಮರ್ಥ್ಯವತ್ತ್ವವನ್ನು ಸ್ಮೃತ್ಯುಪನೀತವಾದ ಪುರೋವೃತ್ತಿಯಲ್ಲಿ ಅನುವ್ಯವಸಾಯವು ಗ್ರಹಿಸುತ್ತದೆ, ಎಂದು. ಇಲ್ಲಿ ಸ್ಮೃತ್ಯುಪನೀತ ತದ್ವತ್ತ್ವದ ವೈಶಿಷ್ಟ್ಯವು ಉಪನೀತವಾದ ಮತ್ತೊಂದರಲ್ಲಿ ಇದೆ, ಎಂದಿಷ್ಟೇ ತೋರಬಹುದು. ಆದರೆ, ಪ್ರಕೃತ ರಜತತ್ವವತ್ತಾಂಶವು ವ್ಯವಸಾಯೋಪನೀತ. ಸ್ಮೃತ್ಯುಪನೀತವಲ್ಲ. ಆದ್ದರಿಂದ, ಆದರಲ್ಲಿ ಸತ್ವವು ತಿಳಿಯುವುದಿಲ್ಲ. ಹೀಗೆ, ಆದರಲ್ಲಿ ಸತ್ವವನ್ನು ಅನುವ್ಯವಸಾಯ ಗ್ರಹಿಸಲು ಸಾಧ್ಯವಿಲ್ಲ.

ಈ ಸಮಾಧಾನವೂ ಯುಕ್ತವಲ್ಲ. ಅನುಮಿತ್ಯುಪನೀತವಾದ ಧೂಮವತ್ತಾಂಶದಲ್ಲಿ ಸತ್ತಾಗ್ರಾಹಿತ್ವವನ್ನು ಅನುವ್ಯವಸಾಯಕ್ಕೆ ಮಣಿಕಾರನೂ ಒಪ್ಪಿದ್ದಾನೆ. ಆದ್ದರಿಂದ ಎರಡೂ ಉಪನೀತವಾಗಿದ್ದಾಗ ಒಂದರ ವೈಶಿಷ್ಟ್ಯ ಮಾತ್ರ ಮತ್ತೊಂದರಲ್ಲಿ ಸತ್ವೇನ ತೋರುತ್ತದೆ, ಎಂಬ ನಿಯಮವೂ ಸರಿಯಲ್ಲ, ಎಂದು ಮುಂದಿನ ಗ್ರಂಥದಲ್ಲಿ ತೋರಿಸಲಾಗಿದೆ.

**अनुमितौ प्रामाण्यनियतस्य धूमवति वह्निमत्वज्ञानत्वस्यानुव्यवसायेन गृहीतत्वान्न तत्राप्रामाण्यशङ्केति वदता त्वया लिङ्गोपहितलैङ्गिकविषयानुमितिरूपव्यवसायोपनीते धूमवत्वेऽनुव्यवसायस्य सत्तानिश्चयरूपत्वाङ्गीकाराच्च ।**

ಪ್ರಾಚೀನ ತಾರ್ಕಿಕರು ಅನುಮಿತಿಗೆ ಸ್ವತಃ ಪ್ರಾಮಾಣ್ಯವನ್ನು ಅಂಗೀಕರಿಸಿದ್ದಾರೆ. ಆದರೆ, ಮಣಿಕಾರ ಅದನ್ನು ಒಪ್ಪುವುದಿಲ್ಲ. ಹಾಗಿದ್ದಾಗ ಅನುಮಿತಿಯಲ್ಲಿ ಪ್ರಾಮಾಣ್ಯ ಸಂದೇಹವು ಏಕೆ ಬರುವುದಿಲ್ಲ? ಎಂಬ ಪ್ರಶ್ನೆಗೆ ಮಣಿಕಾರ ಹೀಗೆ ಸಮಾಧಾನ ಹೇಳುತ್ತಾನೆ— ಅನುಮಿತಿಯ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರದೇ ಹೋದರೂ ಪ್ರಾಮಾಣ್ಯವ್ಯಾಪ್ಯವಾದ ಧೂಮವತಿ ವಹ್ನಿಪ್ರಕಾರಕತ್ವವು ಅನುವ್ಯವಸಾಯದಿಂದ ಗೃಹೀತವಾಗುತ್ತದೆ. ಆದ್ದರಿಂದ ಪ್ರಾಮಾಣ್ಯಸಂದೇಹವು ಬರುವುದಿಲ್ಲ.

ಅನುಮಿತಿಯ ಅನುವ್ಯವಸಾಯದಲ್ಲಿ ಪರ್ವತವು ಧೂಮವತ್ತಾಗಿದೆ ಎಂದು ತೋರುವುದಾದರೂ ಹೇಗೆ? ಅಂದರೆ, ಅನುಮಿತಿಯ ಆಕಾರ ಲಿಂಗೋಪಾಧಾನ ಮತದಲ್ಲಿ 'ಧೂಮವಾನ್ ಪರ್ವತಃ ವಹ್ನಿಮಾನ್' ಎಂದು. ಇಂತಹ ಅನುಮಿತ್ಯುಪನೀತವಾದ ಧೂಮವತ್ತಾಂಶವು

ಪರ್ವತದಲ್ಲಿ ಅನುವ್ಯವಸಾಯದಿಂದ ಸತ್ತಯಾ ಗೃಹೀತವಾಗುತ್ತದೆ, ಎಂದು ಸಮಾಧಾನವನ್ನು ಹೇಳಲಾಗುತ್ತದೆ. ಹೀಗೆ ಮಣಿಕಾರನೇ ಅನುಮಿತಿಯಿಂದ ಉಪನಯಮರ್ಯಾದಯಾ ಭಾಸಮಾನ ಧೂಮವತ್ತ್ವಾಂಶದಲ್ಲಿ ಅನುವ್ಯವಸಾಯವು ಸತ್ತ್ವವನ್ನು ಗ್ರಹಿಸುತ್ತದೆ, ಎಂದು ಒಪ್ಪಿದ್ದಾನೆ.★

## ನ್ಯಾಯದೀಪ

**ಅನುಮಿತೌ ಕದಾಪಿ ಪ್ರಾಮಾಣ್ಯಸಂದೇಹಾಭಾವೇನ ತತ್ರ ಪ್ರಾಮಾಣ್ಯಂ ಸ್ವತಃ ಇತಿ ಪ್ರಾಚೀನಮತಂ ದೂಷಯತಾ ಸರ್ವತ್ರ ಪರತಸ್ತ್ವವಾದಿನಾ ಮಣಿಕೃತಾ ಅನುಮಿತೌ ಪ್ರಾಮಾಣ್ಯಶಂಕಾಭಾವಃ ನ ಪ್ರಾಮಾಣ್ಯನಿಶ್ಚಯನಿಬಂಧನಃ, ಅಪಿತು ತತ್–ಪ್ರಾಮಾಣ್ಯವ್ಯಾಪ್ಯಸ್ಯ ಧೂಮವದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾರಕಜ್ಞಾನತ್ವಸ್ಯ ಯಜ್ಜ್ಞಾನಂ ತನ್ನಿಮಿತ್ತಕ ಏವ ಇತಿ, ವದತಾ ತ್ವಯಾ ಇತ್ಯರ್ಥಃ । ತತ್ ಅಭಿಯುಕ್ತವ್ಯಾಖ್ಯಾನಾನುರೋಧೇನಾಹ-ಲಿಂಗೋಪಹಿತೇತ್ಯಾದಿ ॥ ಪರಮರ್ಶೋಪನೀತ–ವ್ಯಾಪ್ಯಯುಕ್ತ–ವ್ಯಾಪಕವಿಷಯಕ 'ಧೂಮವತ್ ಪರ್ವತೋ ಅಗ್ನಿಮಾನ್' ಇತ್ಯೇವಂರೂಪೇತ್ಯರ್ಥಃ।**

ಪ್ರಾಚೀನರು ಅನುಮಿತಿ ಪ್ರಾಮಾಣ್ಯಂ ಸ್ವತಃ, ಎಂದಿದ್ದಾರೆ. ಆದ್ದರಿಂದ ಅನುಮಿತಿಯಲ್ಲಿ ಎಂದೂ ಪ್ರಾಮಾಣ್ಯ ಸಂದೇಹ ಬರುವುದಿಲ್ಲ. ಆದರೆ ಮಣಿಕಾರ ಅನುಮಿತಿಪ್ರಾಮಾಣ್ಯಕ್ಕೂ ಸ್ವತಸ್ತ್ವವನ್ನು ನಿರಾಕರಿಸುತ್ತಾನೆ. ಹಾಗಿದ್ದರೂ ಅನುಮಿತಿಯಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ, ಎಂದು ಅವನೂ ಒಪ್ಪಿದ್ದಾನೆ. ಅದಕ್ಕೆ ಅವನು ಕೊಡುವ ಕಾರಣ, ಪ್ರಾಮಾಣ್ಯವ್ಯಾಪ್ಯವಾದ 'ಧೂಮವತಿ ವಹ್ನಿಪ್ರಕಾರಕಜ್ಞಾನತ್ವ' ರೂಪವಾದ ಪ್ರಾಮಾಣ್ಯವ್ಯಾಪ್ಯಧರ್ಮವು ಅನುಮಿತಿಯಲ್ಲಿ, ಭಾನಮಾನವಾಗುತ್ತದೆ, ಎಂದು.

---

★ ಮಣಿಗ್ರಂಥ ಹೀಗಿದೆ

ಯತ್ತು 'ಅನುಮಾನಸ್ಯ ನಿರಸ್ತಸಮಸ್ತವಿಭ್ರಮಾಶಂಕಸ್ಯ ಸ್ವತ ಏವ ಪ್ರಾಮಾಣ್ಯಗ್ರಹಃ' (ತಾತ್ಪರ್ಯಟೀಕಾ) ಇತ್ಯುಕ್ತಮ್, ತತ್ ಧೂಮವತಿ ವಹ್ನಿಜ್ಞಾನತ್ವಂ ಅನುಮಿತೇಃ ಪ್ರಾಮಾಣ್ಯನಿಯತಮ್ ಅನುವ್ಯವಸಾಯೋಪನೀತಮ್ । ಅತಃ ವಿಶೇಷದರ್ಶನಾತ್ ನ ತತ್ರಾಪ್ರಾಮಾಣ್ಯಶಂಕಾ...(ಪುಟ.299-300)

ಇಲ್ಲಿ ರುಚಿದತ್ತಮಿಶ್ರರ ಪ್ರಕಾಶವ್ಯಾಖ್ಯಾನ ಹೀಗಿದೆ— ನನು ಧೂಮಮತಿ ವಹ್ನಿಜ್ಞಾನತ್ವಮ್, ಇತ್ಯನೇನ ಧೂಮಪ್ರಕಾರಕತ್ವೇ ಸತಿ ವಹ್ನಿಪ್ರಕಾರಕತ್ವಂ ವಿವಕ್ಷಿತಮ್, ಧೂಮವದ್ವಿಶೇಷ್ಯಕತ್ವೇ ಸತಿ ವಹ್ನಿಪ್ರಕಾರಕತ್ವಂ ವಾ ? ನಾದ್ಯಃ । ತಸ್ಯ ಭ್ರಮರೂಪವಹ್ನ್ಯನುಮಿತೌ ಅಪಿ ಸತ್ತ್ವೇನ ಪ್ರಾಮಾಣ್ಯನಿಯತತ್ವಾಭಾವಾತ್ । ನಾಂತ್ಯಃ । ತಸ್ಯ ಅನುವ್ಯವಸಾಯಾಗ್ರಾಹ್ಯತ್ವಾತ್ । ತದ್–ಗ್ರಾಹ್ಯತ್ವೇ ವಾ ಧೂಮವತ್ತ್ವಾಂಶೇ ತತ್ರ ಸ್ವತಃ ಪ್ರಾಮಾಣ್ಯಗ್ರಹಾಪತ್ತೇಃ । ತತ್ರ ಚ ಇಷ್ಟಾಪತ್ತೌ ಕಿಮಪರಾದ್ಧಂ ವಹ್ನಿಮತ್ತ್ವಾಂಶೇ ಸ್ವತಃ ಪ್ರಾಮಾಣ್ಯಗ್ರಹೇಣ ?

(ಹೀಗೆ ಆಶಂಕಾ ಮಾಡಿ ಪರಾಮರ್ಶಪ್ರಾಮಾಣ್ಯಾನುಮಿತಿಯಿಂದ ಉಪನೀತವಾದ ಧೂಮವತ್ತ್ವಾಂಶವು ಅನುಮಿತಿಯಲ್ಲಿ ತೋರುತ್ತದೆ, ಎಂದು ಸಮಾಧಾನವನ್ನು ಹೇಳಲಾಗಿದೆ.)

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಪಂಚಮಾನುವ್ಯವಸಾಯೇ ಪ್ರತ್ಯಾಸತ್ತಿಭೂತಾನ್ಯ-ಅವಿಷಯತಯಾ ಅರ್ಥಸ್ಯ ಭಾನೇನ ತಸ್ಯ ಅರ್ಥಸತ್ತಾ-ನಿಶ್ಚಯ-ರೂಪತ್ವೇಽಪಿ ಪ್ರಥಮಾನು-ವ್ಯವಸಾಯೇ ತಾದೃಶಾನ್ಯವಿಷಯತಯಾ ತದ್ವತ್ತ್ವರೂಪಾರ್ಥಸ್ಯ ಭಾನಾತ್ ನ ತತ್-ಸತ್ತಾನಿಶ್ಚಯರೂಪತ್ವಮ್ । ಅತಃ ಅವಿಶೇಷಾತ್ ಇತ್ಯುಕ್ತಹೇತುಃ ಅಸಿದ್ಧಃ ಇತ್ಯಾಶಂಕ್ಯ ನಿರಾಹ-ನಚೇತಿ ॥**

ಹಿಂದೆ ದಾಹಸಾಮರ್ಥ್ಯವದ್ ವಿಶೇಷ್ಯಕತ್ವದ ಭಾನಕ್ಕೂ ರಜತತ್ವವತ್ವದ ಭಾನಕ್ಕೂ ವಿಶೇಷವೇನಿಲ್ಲವಾದ ಕಾರಣ ಅರ್ಥಸತ್ವವು ಅನುವ್ಯವಸಾಯಕ್ಕೆ ವಿಷಯವಾಗುತ್ತದೆ ಎನ್ನಲಾಗಿದೆ. (ಪು.292) ಅವೆರಡಕ್ಕೂ ಅವಿಶೇಷ ಎನ್ನುವುದು ಸರಿಯಲ್ಲ, ವಿಶೇಷವಿದೆ. ಪಂಚಮಾನು ವ್ಯವಸಾಯವು ತನಗೆ ಪ್ರತ್ಯಾಸತ್ತಿರೂಪವಾದುದರಲ್ಲಿ (ಸಂಸ್ಕಾರದಲ್ಲಿ) ದಾಹಸಾಮರ್ಥ್ಯವು ವಿಷಯವಾಗಿದೆ, ಎಂದು ಗ್ರಹಿಸುವುದಿಲ್ಲ. ಆದರೆ ವ್ಯವಸಾಯದಲ್ಲಿ ಪ್ರಕಾರೀಭೂತವಾದ ಧರ್ಮವು ಪ್ರಥಮಾನುವ್ಯವಸಾಯದಲ್ಲಿ ವ್ಯವಸಾಯವಿಷಯತಯಾ ಭಾಸಮಾನವಾಗುತ್ತದೆ. ಅರ್ಥಾತ್ ಪಂಚಮಾನುವ್ಯವಸಾಯವು ಸ್ವಪ್ರತ್ಯಾಸತ್ತಿ ವಿಷಯತ್ವೇನ ದಾಹಸಾಮರ್ಥ್ಯವತ್ವವನ್ನು ವಿಷಯೀಕರಿಸುವುದಿಲ್ಲ. ಪ್ರಥಮಾನು ವ್ಯವಸಾಯವು ಸ್ವಪ್ರತ್ಯಾಸತ್ತಿಭೂತ ವ್ಯವಸಾಯ ವಿಷಯತ್ವೇನ ರಜತತ್ವವತ್ವವನ್ನು ವಿಷಯೀಕರಿಸುತ್ತದೆ. ಈ ವಿಶೇಷವಿರುವುದರಿಂದ ಪಂಚಮಾನುವ್ಯವಸಾಯದಲ್ಲಿ ದಾಹಸಮರ್ಥವದ್ ವಿಶೇಷ್ಯಕತ್ವವು ಸತ್ತಯಾ ವಿಷಯವಾದರೂ ಪ್ರಥಮಾನುವ್ಯವಸಾಯದಲ್ಲಿ ತದ್ವತ್ವಾಂಶವು ಸತ್ತಯಾ ವಿಷಯವಾಗುವುದಿಲ್ಲ.

ಈ ಆಶಂಕೆ ಮಾಡಿ ಅದಕ್ಕೆ ಮುಂದಿನ ಗ್ರಂಥದಲ್ಲಿ ಸಮಾಧಾನವನ್ನು ಹೇಳಲಾಗಿದೆ.

**न च दाहसामर्थ्ये संस्कार एव प्रत्यासत्तिः । स च निर्विषयक इति न तद्विषयतया भानम् । इह तु प्रत्यासत्तिभूतो व्यवसायः सविषयक इति वैषम्यमिति वाच्यम् । संस्कारे सत्यप्यस्मृतिदशायाम् उक्तमानसज्ञानाभावात् ।**

'ದಾಹಸಾಮರ್ಥ್ಯವದ್-ವಿಶೇಷ್ಯಕಂ ಜ್ಞಾನಂ ವೃತ್ತಮ್' ಎಂಬ ಪಂಚಮಾನು ವ್ಯವಸಾಯದಲ್ಲಿ ಸ್ಮರಣೆಯು ಸನ್ನಿಕರ್ಷವಲ್ಲ, ಅನುಭವಜನ್ಯವಾದ ಸಂಸ್ಕಾರವೇ ಸನ್ನಿಕರ್ಷ. ಸಂಸ್ಕಾರವು ನಿರ್ವಿಷಯಕ. ಆದ್ದರಿಂದ ದಾಹಸಾಮರ್ಥ್ಯವತ್ವವು ಪ್ರತ್ಯಾಸತ್ತಿ-ವಿಷಯತಯಾ ಅನುವ್ಯವಸಾಯದಿಂದ ಗ್ರಹೀತವಾಗುವುದಿಲ್ಲ. ಆದರೆ ರಜತಜ್ಞಾನಾನುವ್ಯವಸಾಯದಲ್ಲಿ ಸನ್ನಿಕರ್ಷವಾಗಿರುವುದು

ವ್ಯವಸಾಯ, ಅಂದರೆ ರಜತಜ್ಞಾನ. ಅದು ಸವಿಷಯಕ. ಹೀಗಾಗಿ ಅನುವ್ಯವಸಾಯವು ರಜತಜ್ಞಾನವಿಷಯತಯಾ ರಜತತ್ವವತ್ತ್ವಾಂಶವನ್ನು ಗ್ರಹಿಸುತ್ತದೆ. ಅಂದರೆ 'ಇದಂ ರಜತಮ್' ಎಂಬ ಜ್ಞಾನವು ರಜತತ್ವವಿಷಯಕ, ಎಂದಷ್ಟೇ ತಿಳಿಸುತ್ತದೆ. ಹೊರತು, ಆ ರಜತತ್ವಧರ್ಮವು ಪುರೋವರ್ತಿಯಲ್ಲಿ ಸತ್ ಎಂದೇನೂ ತಿಳಿಸುವುದಿಲ್ಲ, ಎಂದು ಆಕ್ಷೇಪ.

ಈ ಆಕ್ಷೇಪಕ್ಕೆ ಹೀಗೆ ಸಮಾಧಾನ–ಸಂಸ್ಕಾರಮಾತ್ರವೇ ಇದ್ದು ಆದರಿಂದ ಸ್ಮೃತಿಬರದಿದ್ದರೆ 'ದಾಹಸಮರ್ಥೇ ಮಮ ವಹ್ನಿಜ್ಞಾನಂ ವೃತ್ತಮ್' ಎಂಬ ಮಾನಸಜ್ಞಾನವು ಬರುವುದಿಲ್ಲ. ಆದ್ದರಿಂದ ಅಲ್ಲಿಯೂ ಸಂಸ್ಕಾರವು ಪ್ರತ್ಯಾಸತ್ತಿ ಅಲ್ಲ, ಸ್ಮರಣೆಯೇ ಪ್ರತ್ಯಾಸತ್ತಿ. ತದ್ವಿಷಯತಯೈವ ಅನುವ್ಯವಸಾಯವು ದಾಹಸಾಮರ್ಥ್ಯವತ್ತ್ವವನ್ನು ವಿಷಯೀಕರಿಸುತ್ತದೆ. ಆದ್ದರಿಂದ ಅಲ್ಲಿಗೂ ಇಲ್ಲಿಗೂ ವ್ಯತ್ಯಾಸವೇ ಇಲ್ಲ.

## ನ್ಯಾಯದೀಪ

**ದಾಹಸಾಮರ್ಥ್ಯೇತಿ ॥ ದಾಹಸಾಮರ್ಥ್ಯವತ್ತ್ವೇ ಇತ್ಯರ್ಥಃ । ಸಂಸ್ಕಾರ ಏವೇತಿ ॥ 'ದಾಹಸಮರ್ಥೋಽಯಮ್' ಇತಿ ಪ್ರಾಚೀನ–ವ್ಯವಸಾಯಜನ್ಯ ಸಂಸ್ಕಾರ ಏವ, ನ ತು ತಜ್ಜನ್ಯಸ್ಮೃತಿರಿತ್ಯರ್ಥಃ ॥**

**ಯದ್ಯಪಿ ಸ್ಮೃತೇಃ ಪ್ರತ್ಯಾಸತ್ತಿತ್ವೇಽಪಿ ತಸ್ಯಾಃ 'ಸುರಭಿ ಚಂದನಮ್' ಇತ್ಯಾದೌ ಸೌರಭ್ಯಾದಿ ಜ್ಞಾನಸ್ಯೇವ ತಾಟಸ್ಥ್ಯೇನೈವ ತಥಾತ್ವಾತ್ ನೈತಚ್ಚೋದ್ಯಾವಕಾಶಃ। ತಥಾಪಿ ಸವಿಷಯಕತ್ವಾತ್ ಸಂಭಾವಿತತ್ವಾಭಿಪ್ರಾಯೇಣ ಏತಚ್ಚೋದ್ಯಮಪಿ ಅಗ್ರಿಮಗ್ರಂಥೋತ್ಥಾನ ದಾರ್ಢ್ಯಾರ್ಥಂ ಕೃತಮಿತಿ ಧ್ಯೇಯಮ್ ।**

ವಸ್ತುತಃ ಸಂಸ್ಕಾರವೇ ಪ್ರತ್ಯಾಸತ್ತಿಯಾಗಲೀ, ಸ್ಮೃತಿಯು ಪ್ರತ್ಯಾಸತ್ತಿಯಾಗಲೀ ಆದರಿಂದ ಅನುವ್ಯವಸಾಯದಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಏಕೆಂದರೆ, 'ಸುರಭಿ ಚಂದನಮ್' ಎಂಬ ಚಾಕ್ಷುಷ ಜ್ಞಾನಕ್ಕೆ ಘ್ರಾಣಜನ್ಯವಾದ ಸೌರಭ್ಯಾನುಭವೋತ್ಪನ್ನ ಸ್ಮೃತಿಯು ಕಾರಣವಾದರೂ ಅದು ಅರ್ಥಸತ್ವವನ್ನು ಗ್ರಹಿಸದೆ ತಟಸ್ಥವಾಗಿಯೇ ಕಾರಣವಾದಂತೆ, ಪ್ರಕೃತದಲ್ಲಿ ದಾಹಸಾಮರ್ಥ್ಯವತ್ತ್ವದ ಸ್ಮೃತಿಯೂ ಸಂಸ್ಕಾರದಂತೆ ತಟಸ್ಥವಾಗಿಯೇ ಕಾರಣವಾಗುತ್ತದೆ. ಆದರೂ ಸಂಸ್ಕಾರಕ್ಕೂ ಸ್ಮೃತಿಗೂ ಒಂದು ವ್ಯತ್ಯಾಸ ಇದೆ. ಸಂಸ್ಕಾರವು ನಿರ್ವಿಷಯಕ, ಸ್ಮೃತಿಯು ಸವಿಷಯಕ. ಇದು ಅವೆರಡರಲ್ಲಿರುವ ವ್ಯತ್ಯಾಸ. ನಿರ್ವಿಷಯವಾದ ಸಂಸ್ಕಾರವು ಕಾರಣವಲ್ಲ, ಸವಿಷಯಸ್ಮೃತಿಯೇ ಕಾರಣ, ಎಂದು ದೃಢಪಡಿಸುವುದಕ್ಕಾಗಿ ಮೂಲದಲ್ಲಿ ಈ ಶಂಕೆಯನ್ನು ಮಾಡಲಾಗಿದೆ. ಇದರಿಂದ ಮುಂದಿನ ಆಕ್ಷೇಪಕ್ಕೆ ಅನುಕೂಲವಾಗುತ್ತದೆ. (ಅದು ಮುಂದೆ ಸ್ಪಷ್ಟವಾಗುತ್ತದೆ)

## ನ್ಯಾಯದೀಪ

**ಭಾನಮಿತಿ ॥ ಪಂಚಮಾನುವ್ಯವಸಾಯೇ ದಾಹಸಾಮರ್ಥ್ಯವತ್ತಸ್ಯ ಸಂಸ್ಕಾರ ವಿಷಯತಯಾ ನ ಭಾನಮಿತ್ಯರ್ಥಃ। ಇಹತ್ವಿತಿ ॥ ಪ್ರಥಮಾನು ವ್ಯವಸಾಯೇ ಇತ್ಯರ್ಥಃ। ಅಸ್ಮೃತಿದಶಾಯಾಮಿತಿ ॥ ಅತ ಏವ ತ್ವಯಾಪಿ 'ಪ್ರಾಗ್‌ಭವೀಯ-ಸಂಸ್ಕಾರಾತ್ ಸ್ಮೃತಂ ಪ್ರಾಮಾಣ್ಯಂ ವಹ್ನಿಜ್ಞಾನಾದೌ ಸಾಧ್ಯಮಾನಮ್' ಇತ್ಯುಕ್ತಮ್ । (ಪು.251)**

ಸಂಸ್ಕಾರವು ಸನ್ನಿಕರ್ಷವಾಗುವುದಿಲ್ಲ, ಸಂಸ್ಕಾರಜನ್ಯವಾದ ಸ್ಮೃತಿಯೇ ಸನ್ನಿಕರ್ಷ, ಎಂದು ಮಣಿಗ್ರಂಥದಲ್ಲೇ ಹೇಳಲಾಗಿದೆ-ಪ್ರಥಮಾನುಮಾನದಲ್ಲಿ ಸಾಧ್ಯವಾದ ಪ್ರಾಮಾಣ್ಯದ ಪ್ರಸಿದ್ಧಿ ಹೇಗೆ? ಎನ್ನುವ ಜಿಜ್ಞಾಸೆ, ಬಂದಾಗ ಮಣ್ಯುಕ್ತ ಪರಿಹಾರ- ''ಜನ್ಮಾಂತರದಲ್ಲಿ ಅನುಭೂತವಾದ ಪ್ರಾಮಾಣ್ಯದ ಸ್ಮರಣೆಯೇ ಅನುಮಿತಿಗೆ ಕಾರಣವಾದ ವಿಶೇಷಣಜ್ಞಾನ' ಎಂದು. ಇಲ್ಲಿ 'ಸ್ಮೃತಂ ಪ್ರಾಮಾಣ್ಯಂ ನತು ಸಂಸ್ಕಾರವಿಷಯೀಭೂತಂ ಪ್ರಾಮಾಣ್ಯಂ' ಎಂದರ್ಥ. ಇದರಿಂದ ಸ್ಮರಣೆಯೇ ಕಾರಣ ಸಂಸ್ಕಾರವಲ್ಲ, ಎಂದು ಸ್ಪಷ್ಟವಾಗುತ್ತದೆ.

## ನ್ಯಾಯದೀಪ

**ಏತಚ್ಚೋಪಲಕ್ಷಣಮ್-ಯದಸಾಧಾರಣಂ ಕಾರಣಮ್ ಆಸಾದ್ಯ ಮನಃ ಬಹಿರ್ಗೋಚರಾಂ ಪ್ರಮಾಂ ಜನಯತಿ ತನ್ಮಾನಾಂತರಮ್, ಇತಿ ವ್ಯಾಪ್ತೇಃ ಸಂಸ್ಕಾರಸ್ಯ ಮಾನಾಂತರತ್ವಾಪತ್ತೇಶ್ಚ ಇತ್ಯಪಿ ಧ್ಯೇಯಮ್ ।**

ಸಂಸ್ಕಾರವೇ ಸನ್ನಿಕರ್ಷ ಎಂದಾಗ ಮೂಲದಲ್ಲಿ ಹೇಳಿರುವ ದೋಷವು ಉಪಲಕ್ಷಣ. ದೋಷಾಂತರವೂ ಇದೆ-ಮನಸ್ಸು ಬಾಹ್ಯವಸ್ತುವಿನ ಯಥಾರ್ಥಜ್ಞಾನವನ್ನು ಉಂಟುಮಾಡಲು ಯಾವುದನ್ನು ಅಸಾಧರಣ ಸಾಧನವನ್ನಾಗಿ ಬಳಸುವುದೋ ಅದು ಪ್ರಮಾಣಾಂತರವಾಗಬೇಕು. ಪ್ರಕೃತದಲ್ಲಿ ಸಂಸ್ಕಾರವನ್ನು ಮನಸ್ಸು ಬಳಸಿದಂತಾಗಿ ಸಂಸ್ಕಾರವು ಪ್ರಮಾಣಾಂತರವಾಗ ಬೇಕಾಗುತ್ತದೆ. ಆದರೆ ಸ್ಮರಣೆಯು ಜ್ಞಾನಲಕ್ಷಣಾಸನ್ನಿಕರ್ಷವಾದುದರಿಂದ ಲೌಕಿಕ ಸನ್ನಿಕರ್ಷದಂತೆ ಅದಕ್ಕೆ ಪ್ರಮಾಣತ್ವವು ಸಿದ್ಧವಾಗಿದೆ. ಆದ್ದರಿಂದ ಸ್ಮರಣೆಯೇ ಸನ್ನಿಕರ್ಷ, ಸಂಸ್ಕಾರವಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಸ್ಮೃತೇಃ ಪ್ರತ್ಯಾಸತ್ತಿತ್ವೇಽಪಿ ಅವಿಶೇಷಾದಿತಿ ಹೇತುಃ ಅಸಿದ್ಧ, ಇತಿ ಭಾವೇನ ಶಂಕತೇ-ನನ್ವಿತಿ ॥**

ಪೂರ್ವೋಕ್ತ–ಪಂಚಮಾನುವ್ಯವಸಾಯಕ್ಕೆ ಸಂಸ್ಕಾರ ಕಾರಣವಲ್ಲ. ಸ್ಮೃತಿಯೇ ಕಾರಣ, ಎಂದು ಒಪ್ಪಿದರೂ ಮೂಲದಲ್ಲಿ ಹೇಳಿದ 'ಅವಿಶೇಷಾತ್' ಎಂಬ ಹೇತು ಅಸಿದ್ಧವೇ ಆಗುತ್ತದೆ, ಎನ್ನುವ ಆಶಂಕೆಯನ್ನು ಮುಂದಿನ ಮೂಲದಲ್ಲಿ ಮಾಡಲಾಗಿದೆ—

## ಪ್ರಥಮಾನುವ್ಯವಸಾಯ–ಪಂಚಮಾನುವ್ಯವಸಾಯಗಳಲ್ಲಿ ವಿಶೇಷಶಂಕಾ

**ननु मानसज्ञानस्य 'दाहसमर्थ एव मम वह्नित्वप्रकारकं ज्ञानं वृत्तम्' इत्याकारत्वेन तत्र दाहसामर्थ्यं वह्निनिष्ठमेव भाति । न तु स्मृतिविषयतया । स्मृतिस्तु प्रत्यासत्तिमात्रम् । अनुव्यवसायस्य तु 'पुरोवृत्तिविशेष्यकं रजतत्ववैशिष्ट्यावगाहिज्ञानं वृत्तम्' इत्याकारत्वेन ज्ञानविषयत्वेनैव वैशिष्ट्यं विषयः । न तु पुरोवृत्तिनिष्ठत्वेनेति वैषम्यमिति चेन्न ।**

ಪೂರ್ವೋಕ್ತ ಮಾನಸಜ್ಞಾನವಾದ ಪಂಚಮಾನುವ್ಯವಸಾಯದ ಆಕಾರ ಹೀಗೆ— 'ದಾಹಸಮರ್ಥೇ ಏವ ಮಮ ವಹ್ನಿತ್ವಪ್ರಕಾರಕಜ್ಞಾನಂ ವೃತ್ತಮ್'. ಈ ಜ್ಞಾನದಲ್ಲಿ ದಾಹಸಾಮರ್ಥ್ಯವತ್ತ್ವವು ವಹ್ನಿನಿಷ್ಠವಾಗಿ ಕಾಣುತ್ತದೆ. ದಾಹಸಮರ್ಥವಾದುದು ವಹ್ನಿಯೇ ಆಗಿರುವುದರಿಂದ 'ದಾಹಸಮರ್ಥೇ ಏವ' ಎಂದರೆ ದಾಹಸಮರ್ಥವಾದ ವಹ್ನಿಯಲ್ಲಿಯೇ, ಎಂದರ್ಥ. ಹೀಗೆ, ಆ ಅನುವ್ಯವಸಾಯದಲ್ಲಿ ದಾಹಸಾಮರ್ಥ್ಯವತ್ತ್ವವು ಉಪನಾಯಕವಾದ ಸ್ಮೃತಿವಿಷಯತ್ವೇನ ತೋರುವುದಿಲ್ಲ. ಸ್ಮೃತಿಯು ಆ ಮಾನಸಜ್ಞಾನ ಬರಲು ಒಂದು ಸನ್ನಿಕರ್ಷಮಾತ್ರ. ವ್ಯವಸಾಯವು ಅನುವ್ಯವಸಾಯದಲ್ಲಿ ವಿಷಯವಾದಂತೆ ಸ್ಮೃತಿಯು ಆ ಮಾನಸಜ್ಞಾನದಲ್ಲಿ ವಿಷಯವಾಗುವುದಿಲ್ಲ. ಆದರೆ, ರಜತಜ್ಞಾನ ಬಂದಮೇಲೆ ಬರುವ ಅನುವ್ಯವಸಾಯದ ಆಕಾರ ಹೀಗೆ— ಪುರೋವರ್ತಿವಿಶೇಷ್ಯಕವಾದ ರಜತತ್ವವೈಶಿಷ್ಟ್ಯವನ್ನು ವಿಷಯೀಕರಿಸುವ ಜ್ಞಾನವು ನನಗೆ ಬಂದಿದೆ—''ಪುರೋವರ್ತಿವಿಶೇಷ್ಯಕಂ, ರಜತತ್ವ ವೈಶಿಷ್ಟ್ಯಾವಗಾಹಿಜ್ಞಾನಂ ಮಮ ಜಾತಮ್''. ಈ ಅನುವ್ಯವಸಾಯದಲ್ಲಿ 'ವೈಶಿಷ್ಟ್ಯವು ವ್ಯವಸಾಯವಿಷಯವಾಗಿದೆ' ಎಂದು ತೋರುತ್ತದೆಯೇ ಹೊರತು ಪುರೋವರ್ತಿನಿಷ್ಠತ್ವೇನ ತೋರುವುದಿಲ್ಲ. 'ರತತ್ವವಿಶಿಷ್ಟೇ ಏವ ರಜತತ್ವಪ್ರಕಾರಕಜ್ಞಾನಂ ಜಾತಮ್' ಎಂದು ಅನುವ್ಯವಸಾಯ ಬಂದಿದ್ದರೆ ಹಾಗೆ ತೋರಬಹುದಿತ್ತು. ಹೀಗೆ ಈ ಎರಡು ಮಾನಸ ಜ್ಞಾನಗಳಲ್ಲಿ ವಿಶೇಷವಿದೆ. ಹಾಗಿರುವಾಗ 'ಅವಿಶೇಷಾತ್' ಎಂಬ ಹೇತು ಪ್ರಥಮಾನುವ್ಯವಸಾಯದಲ್ಲಿ ಇಲ್ಲ. ಆದರಿಂದಾಗಿಯೇ ಪ್ರಥಮಾನುವ್ಯವಸಾಯವು ವಿಶೇಷ್ಯದಲ್ಲಿ ಪ್ರಕಾರೀಭೂತಧರ್ಮದ ವೈಶಿಷ್ಟ್ಯದ ಸತ್ವವನ್ನು ವಿಷಯೀಕರಿಸುತ್ತಿಲ್ಲ. ಇದು ಪರತಸ್ತ್ವವಾದಿಗಳ ಪೂರ್ವಪಕ್ಷ.

### ವಿಶೇಷ ಶಂಕಾನಿರಾಸ

**तत्रापि दाहसमर्थ एवेति विषयसप्तम्या अतीतव्यवसायविषयत्वेनैव दाहसामर्थ्यस्य भानात् ।**

**अत्रापि सुखज्ञानस्य, दोषशङ्कादिरहितस्तम्भादिज्ञानस्य च प्राथमिक एवानुव्यवसाये 'मम सुख एव सुखत्वेन ज्ञानं वृत्तं, स्तम्भ एव स्तम्भत्वेन ज्ञानं वृत्तम्' इत्याकारदर्शनाच्च ।**

ಮಾನಸ ಅನುವ್ಯವಸಾಯದ ಅಭಿಲಾಪದಲ್ಲಿ 'ದಾಹಸಮರ್ಥೇ' ಎಂದು ಸಪ್ತಮೀ ವಿಭಕ್ತಿ ಇದೆ. ಅದು ವಿಷಯ ಸಪ್ತಮೀ. ದಾಹಸಮರ್ಥವಿಷಯಕ, ಎಂದರ್ಥ. ಆದ್ದರಿಂದ 'ಅಯಂ ದಾಹಸಮರ್ಥಃ' ಎಂಬ ಅತೀತಜ್ಞಾನದಲ್ಲಿ ದಾಹಸಾಮರ್ಥ್ಯವದ್ವಿಷಯಕತ್ವವೇ ಅಲ್ಲಿ ತಿಳಿಯುತ್ತದೆ. ಹೊರತು, ಅಲ್ಲಿಯೂ ಆ ಧರ್ಮವು ವಹ್ನಿನಿಷ್ಠತ್ವೇನ ಕಾಣುವುದಿಲ್ಲ. ಇದರಿಂದ ಆ ಮಾನಸಜ್ಞಾನವು 'ದಾಹಸಮರ್ಥವಿಷಯಕವಾದ ವಹ್ನಿತ್ವಪ್ರಕಾರಕವಾದ ಜ್ಞಾನವು ನನಗೆ ಬಂದಿದೆ' ಎಂದಿಷ್ಟೇ ತಿಳಿಸುತ್ತದೆ. ಹೀಗೆ ಆ ದಾಹಸಾಮರ್ಥವಾದುದು ವಹ್ನಿಯೇ ಆಗಿದೆ, ಎನ್ನುವಲ್ಲಿ ಆ ಅನುವ್ಯವಸಾಯವೂ ಪ್ರಮಾಣವಾಗುವುದಿಲ್ಲ.

ಅಥವಾ, ಕೆಲವೊಮ್ಮೆ ಪ್ರಥಮಾನುವ್ಯವಸಾಯವೂ ಇದೇ ರೀತಿ ಬರುವುದುಂಟು–ಸುಖ ಜ್ಞಾನ ಬಂದ ಮೇಲೆ 'ಮಮ ಸುಖೇ ಏವ ಸುಖತ್ವಪ್ರಕಾರಕ ಜ್ಞಾನಂ ವೃತ್ತಮ್' ಎಂದೇ ಅನುವ್ಯವಸಾಯ ಬರುತ್ತದೆ. ಈ ಅನುವ್ಯವಸಾಯದಲ್ಲೂ 'ಸುಖೇ=ಸುಖತ್ವವುಳ್ಳ ವಸ್ತುವಿನಲ್ಲೇ ಸುಖತ್ವವು ತಿಳಿದಿದೆ' ಎಂದು ಭಾನವಾಗುವುದರಿಂದ 'ಸುಖತ್ವವತಿ ಸುಖತ್ವಪ್ರಕಾರಕತ್ವ' ರೂಪವಾದ ಪ್ರಾಮಾಣ್ಯವು ತಿಳಿಯುತ್ತದೆ.

ಅದರಂತೆ, ನಮ್ಮ ಹತ್ತಿರದಲ್ಲೇ ಇರುವ ಎತ್ತರ–ದಪ್ಪದ ಕಂಬದ ಜ್ಞಾನ ಬಂದಾಗ ಆ ಜ್ಞಾನದಲ್ಲಿ ಯಾವ ದೋಷದ ಸಂದೇಹವೂ ಇಲ್ಲದಿರುವುದರಿಂದ ಅದರ ಅನುವ್ಯವಸಾಯವೂ ಹೀಗಿಯೇ ಬರುತ್ತದೆ–''ಮಮ ಸ್ತಂಭೇ ಏವ ಸ್ತಂಭತ್ವಪ್ರಕಾರಕಜ್ಞಾನಂ ವೃತ್ತಮ್' ಎಂದು.

ಇಂತಹ ಪ್ರಥಮ ಅನುವ್ಯವಸಾಯಕ್ಕೂ ಪೂರ್ವೋಕ್ತ ಪಂಚಮಾನುವ್ಯವಸಾಯಕ್ಕೂ ಯಾವ ವಿಶೇಷವೂ ಇಲ್ಲ. ಆದ್ದರಿಂದ ಅವಿಶೇಷಾತ್ ಎಂಬ ಹೇತು ಅಸಿದ್ಧವಲ್ಲ.

### ನ್ಯಾಯದೀಪ

**ತತ್ರಾಪೀತಿ ॥ ಪಂಚಮಾನುವ್ಯವಸಾಯೇಽಪಿ ಇತ್ಯರ್ಥಃ । ದಾಹ-**

**ಸಾಮರ್ಥ್ಯಸ್ಯ ॥ ದಾಹಸಾಮರ್ಥ್ಯವತ್ತ್ವಸ್ಯ ಇತ್ಯರ್ಥಃ। ಅತ್ರಾಪೀತ್ಯಸ್ಯೈವ ವಿವರಣಂ 'ಪ್ರಾಥಮಿಕಾನುವ್ಯವಸಾಯೇ' ಇತಿ ।**

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಕಾರಾಂತರೇಣ ವೈಷಮ್ಯಮ್ ಆಶಂಕ್ಯ ನಿರಾಕರೋತಿ – ನನು ತಥಾಪೀತಿ ॥**

ಇನ್ನೊಂದು ರೀತಿಯಿಂದ ಪಂಚಮಾನುವ್ಯವಸಾಯಕ್ಕೂ ಪ್ರಥಮಾನುವ್ಯವಸಾಯಕ್ಕೂ ವ್ಯತ್ಯಾಸವನ್ನು ಹೇಳಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**ननु तथापि तत्र यस्य व्यवसायस्य विषयतया दाहसामर्थ्यं भातं स न प्रत्यासत्तिः । या तु स्मृतिः प्रत्यासत्तिर्न तद्विषयतया तद्भाति । इह तु वैशिष्ट्यं प्रत्यासत्तीभूतव्यवसायविषयतया भातीति चेन्न । अन्यविषयतया ग्रहणे श्रुतसाक्षिवाक्यसाम्येऽविशिष्टेऽस्य वैधर्म्यमात्रत्त्वात् ।**

ಆದರೂ ಎರಡು ಅನುವ್ಯವಸಾಯಗಳಲ್ಲಿ ವಿಶೇಷವು ಇದ್ದೇ ಇದೆ– ಪಂಚಮಾನುವ್ಯವಸಾಯವು ''ಅಯಂ ದಾಹಸಮರ್ಥಃ, ಎಂಬ ವ್ಯವಸಾಯವು ದಾಹಸಾಮರ್ಥ್ಯವದ್ ವಿಷಯಕ'' ಎಂದು ಗ್ರಹಿಸುತ್ತದೆ. ಆದರೆ ಆ ವ್ಯವಸಾಯವು ಅಲ್ಲಿ ಪ್ರತ್ಯಾಸತ್ತಿಯಲ್ಲ. ಪ್ರತ್ಯಾಸತ್ತಿಯಾದುದು ತಜ್ಜನ್ಯ ಸ್ಮೃತಿ. ಆದರಲ್ಲಿ ಅನುವ್ಯವಸಾಯವು ದಾಹಸಾಮರ್ಥ್ಯವದ್ ವಿಷಯಕತ್ವವನ್ನು ವಿಷಯೀಕರಿಸುತ್ತಿಲ್ಲ. ಒಟ್ಟಿನಲ್ಲಿ ಅಲ್ಲಿ ಪ್ರತ್ಯಾಸತ್ತಿ(ಸ್ಮೃತಿ) ಬೇರೆ, ಅನುವ್ಯವಸಾಯ ಗೃಹೀತದಾಹಸಾಮರ್ಥ್ಯವದ್ವಿಷಯಕತ್ವವುಳ್ಳ ಜ್ಞಾನ(ವ್ಯವಸಾಯ) ಬೇರೆ. ಆದರೆ, ಪ್ರಕೃತವಾದ ರಜತಜ್ಞಾನಾನುವ್ಯವಸಾಯದಲ್ಲಿ ಪ್ರತ್ಯಾಸತ್ತಿಯು ವ್ಯವಸಾಯ. ಆದರಲ್ಲೇ ಅನುವ್ಯವಸಾಯವು ರಜತತ್ವವದ್–ವಿಷಯಕತ್ವವನ್ನು ಗ್ರಹಿಸುತ್ತದೆ. ಹೀಗೆ ವಿಶೇಷವಿರುವಾಗ ಅವಿಶೇಷಾತ್ ಎಂದುದು ಹೇಗೆ?

ಅವಿಶೇಷಾತ್, ಎನ್ನುವುದರ ಅಭಿಪ್ರಾಯ–ಅನುವ್ಯವಸಾಯವು ವೈಶಿಷ್ಟ್ಯದಲ್ಲಿ ಸತ್ವವನ್ನು ಗ್ರಹಿಸದೇ ಇರಲು ಪ್ರಯೋಜಕವಾದ ವಿಶೇಷಗಳು ಪ್ರಕೃತದಲ್ಲಿ ಇಲ್ಲ. ಅದನ್ನು ಗ್ರಹಿಸಲು ಬೇಕಾಗಿರುವ ಪಂಚಮಾನುವ್ಯವಸಾಯದಲ್ಲಿ ಇರುವ ಎಲ್ಲ ವಿಶೇಷಗಳೂ ಪ್ರಕೃತದಲ್ಲಿ ಇವೆ, ಎಂದು. ಅಂತಹ ವಿಶೇಷಗಳು ಎರಡು—

(1) ವೈಶಿಷ್ಟ್ಯವು ಅನ್ಯವಿಷಯತಯಾ (ಸ್ಮೃತಿ–ವ್ಯವಸಾಯ) ಎರಡೂ ಕಡೆಗಳಲ್ಲಿ ಗೃಹೀತವಾಗಿದೆ.

(2) ಎರಡೂ ಅನುವ್ಯವಸಾಯಗಳು ಶ್ರುತಸಾಕ್ಷಿ ವಾಕ್ಯದಂತೆ ಇವೆ.

ಈ ಎರಡೂ ಅಂಶಗಳು ಉಭಯತ್ರ ಸಮಾನವಾಗಿವೆ. ಹೀಗಿರುವಾಗ ಹಿಂದೆ ತೋರಿಸಿದ ವ್ಯತ್ಯಾಸ ವೈಧರ್ಮ್ಯಮಾತ್ರ. ಅದು ವೈಶಿಷ್ಟ್ಯದ ಸತ್ವಗ್ರಹಣಾಭಾವಕ್ಕೆ ಕಾರಣವಾಗುವುದಿಲ್ಲ.

## ನ್ಯಾಯದೀಪ

**ತತ್ರೇತಿ ॥ ಪಂಚಮಾನುವ್ಯವಸಾಯೇ ಇತ್ಯರ್ಥಃ । ಇಹತ್ವಿತಿ ॥ ಪ್ರಾಥಮಿಕಾನುವ್ಯವಸಾಯೇ ಇತ್ಯರ್ಥಃ । ಅವಿಶಿಷ್ಟೇ ಇತಿ ವಿಭಾಗಃ ।**

## ನಿಗಮನ

**तस्मात् प्रामाण्यग्रहणे साक्षी समर्थ इति ।**

**एतदप्युक्तं ''अन्यथे'' त्यादिना । साक्षी धर्म्यंश इव वैशिष्ट्यांशेऽपि सत्तानिश्चयरूपो न चेत् अस्य व्यवसायस्येदं वैशिष्ट्यं विषयः, इत्यादिलोकसिद्धव्यवस्थित्ययोगादित्यर्थः ।।**

ಆದ್ದರಿಂದ ಸಾಕ್ಷಿಯು ಜ್ಞಾನಗತ-ಪ್ರಾಮಾಣ್ಯವನ್ನು ಗ್ರಹಿಸಲು ಸಮರ್ಥವಾಗಿದೆ.

ಇದನ್ನೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯವು ತಿಳಿಸುತ್ತದೆ. ಅದರ ಭಾವಾರ್ಥ ಹೀಗೆ—ಸಾಕ್ಷಿಯು ಜ್ಞಾನದ ಧರ್ಮ್ಯಂಶದಲ್ಲಿ ಹೇಗೆ ಸತ್ತಾನಿಶ್ಚಯರೂಪವೋ ಅದರಂತೆ ವಿಶೇಷಣ-ವೈಶಿಷ್ಟ್ಯಾಂಶದಲ್ಲೂ ಸತ್ತಾ-ನಿಶ್ಚಯರೂಪವಾಗಿದೆ ಎಂದು ಅಂಗೀಕರಿಸದಿದ್ದಲ್ಲಿ, ಎಂದು 'ಅನ್ಯಥಾ' ಶಬ್ದದ ಅಭಿಪ್ರಾಯ. ಅನವಸ್ಥಾನಾತ್ ಎಂದರೆ, ಈ ವ್ಯವಸಾಯಕ್ಕೆ ಈ ಧರ್ಮವೈಶಿಷ್ಟ್ಯವು ವಿಷಯ, ಇನ್ನೊಂದಕ್ಕೆ ಧರ್ಮಾಂತರ ವೈಶಿಷ್ಟ್ಯವು ವಿಷಯ, ಎಂಬುದಕ್ಕೆ ನಿಯಾಮಕವೇ ಇಲ್ಲದಾದೀತು. ಏಕೆಂದರೆ ಅದನ್ನು ನಿರ್ಧರಿಸುವುದು ಜ್ಞಾನವನ್ನು ಗ್ರಹಿಸುವ ಸಾಕ್ಷಿ. ಅದು ವೈಶಿಷ್ಟ್ಯವನ್ನು ಗ್ರಹಿಸದೇ ಇದ್ದಲ್ಲಿ ನಿಯಾಮಕವಾದುದು ಬೇರಾವುದೂ ಇಲ್ಲ. ಆದ್ದರಿಂದ ಅನುವ್ಯವಸಾಯವು ವೈಶಿಷ್ಟ್ಯವನ್ನೂ ವೈಶಿಷ್ಟ್ಯದಲ್ಲಿ ಸತ್ವವನ್ನೂ ಗ್ರಹಿಸಲೇಬೇಕು. ಅದರಿಂದ ಪ್ರಾಮಾಣ್ಯಸ್ವತಸ್ತ್ವ ಸಿದ್ಧವಾಗುತ್ತದೆ.

**ಇಲ್ಲಿಗೆ ಸ್ವತಸ್ತ್ವಸಾಧಕಾನುಮಾನೇಷು**
**ಬಾಧೋದ್ಧಾರ ಪ್ರಕರಣ ಮುಗಿಯಿತು. ॥ 4 ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಪೂರ್ವೋಕ್ತ ಸ್ವತಸ್ತ್ವಾನುಮಾನಗಳಿಗೆ ಬಾಧದೋಷವನ್ನು ಆಕ್ಷೇಪಮಾಡಿ ನಿರಾಕರಿಸಲಾಗಿದೆ.

ರಜತತ್ವವತಿ ರಜತತ್ವಪ್ರಕಾರಕತ್ವವೇ 'ಇದಂ ರಜತಂ' ಎಂಬ ಪ್ರಮಾದಲ್ಲಿರುವ ಪ್ರಾಮಾಣ್ಯ. ಅನುವ್ಯವಸಾಯವು ಇಂತಹ ಪ್ರಾಮಾಣ್ಯವನ್ನು ಗ್ರಹಿಸಲು ಸಾಧ್ಯವಿಲ್ಲ. ಅದು ಹುಟ್ಟುವುದು ಸಾಕ್ಷೀಂದ್ರಿಯದಿಂದ ಅಥವಾ ಮನಸ್ಸಿನಿಂದ. ಇವೆರಡೂ ದೇಹದ ಒಳಗಿರುವ ಇಂದ್ರಿಯಗಳು. ಆ ಇಂದ್ರಿಯಗಳ ಮುಂದೆ ಆತ್ಮ, ಅಂತಃಕರಣ ಮತ್ತು ತದ್ಧರ್ಮಗಳು ಇವೆ. 'ಇದಂ ರಜತಂ' ಎಂಬ ಜ್ಞಾನ ದ್ವೈತದರ್ಶನದಲ್ಲಿ ಅಂತಃಕರಣ ಧರ್ಮ, ನ್ಯಾಯದರ್ಶನದಲ್ಲಿ ಆತ್ಮಧರ್ಮ. ಜ್ಞಾನ ಮತ್ತು ಅದರಲ್ಲಿ ಜ್ಞಾನತ್ವ, ರಜತತ್ವಪ್ರಕಾರಕತ್ವ, ಪುರೋವರ್ತಿವಿಶೇಷ್ಯಕತ್ವ ಇವುಗಳು ಸಾಕ್ಷಿ ಅಥವಾ ಮನಸ್ಸಿನಿಂದ ಗ್ರಾಹ್ಯವಾಗಬಹುದು. ಇಷ್ಟೇ ಪ್ರಾಮಾಣ್ಯವಲ್ಲ. ಪ್ರಾಮಾಣ್ಯದಲ್ಲಿ 'ಪುರೋವರ್ತಿಯಲ್ಲಿ ರಜತತ್ವ ಇದೆ' (ತದ್ವತ್ತಾಂಶ) ಎಂಬ ಅಂಶವೂ ಸೇರಿದೆ. ಅದು ಅಂತರಿಂದ್ರಿಯಕ್ಕೆ ಯೋಗ್ಯವಲ್ಲ. ಅದನ್ನು ಅಂತರಿಂದ್ರಿಯವು ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಜ್ಞಾನಬಂದಮೇಲೂ ಆ ಜ್ಞಾನವು ಪ್ರಮಾಣ ಹೌದೋ ಅಲ್ಲವೋ, ಎಂಬ ಸಂದೇಹ ಬರುತ್ತದೆ. ಪ್ರಾಮಾಣ್ಯವು ಮನಸ್ಸಿನಿಂದ ಗ್ರಾಹ್ಯವಾದರೆ, ಈ ಸಂದೇಹ ಬರಲು ಸಾಧ್ಯವಿಲ್ಲ. ಹೀಗೆ ಮನಸ್ಸು ಪ್ರಾಮಾಣ್ಯ ಸಂದೇಹಕ್ಕೆ ಕಾರಣವಾಗುವುದು ಅನುಭವಸಿದ್ಧವಾದುದರಿಂದ ಅದಕ್ಕೆ ವಿರುದ್ಧವಾಗಿ ಅದು ಪ್ರಾಮಾಣ್ಯನಿಶ್ಚಯವನ್ನು ಮಾಡುತ್ತದೆ, ಎನ್ನುವುದು ಸರಿಯಲ್ಲ.

ಇದಕ್ಕೆ ಶ್ರೀವ್ಯಾಸರಾಜರು ಮೊದಲು ಕೊಟ್ಟ ಪರಿಹಾರ–ಘಟಾದಿಜ್ಞಾನದಲ್ಲಿರುವ ಪ್ರಾಮಾಣ್ಯವು ಬಹಿರರ್ಥಘಟಿತವಾದುದರಿಂದ ಅದು ಸಾಕ್ಷಿ ಅಥವಾ ಮನೋಗ್ರಾಹ್ಯವಾಗುವುದಿಲ್ಲ, ಎಂದು ಒಪ್ಪಿಕೊಳ್ಳೋಣ. ಆದರೆ, ಸುಖಜ್ಞಾನದಲ್ಲಿರುವ ಪ್ರಾಮಾಣ್ಯದಲ್ಲಿ 'ಸುಖತ್ವವಿಶಿಷ್ಟಸುಖವು' ಘಟಕವಾಗಿದೆ. ಅದು ಬಾಹ್ಯವಲ್ಲ, ಸಾಕ್ಷಿ ಅಥವಾ ಮನೋವೇದ್ಯ. ಆ ಜ್ಞಾನಗತ ಪ್ರಾಮಾಣ್ಯವು ಅನುವ್ಯವಸಾಯಗ್ರಾಹ್ಯ ಎನ್ನಲು ಯಾವ ಬಾಧಕಗಳೂ ಇಲ್ಲ. ಅಥವಾ, ಸುಖಜ್ಞಾನದಲ್ಲಿ ಎಂದೂ ಪ್ರಾಮಾಣ್ಯಸಂದೇಹವೂ ಬರುವುದಿಲ್ಲ. ಆದ್ದರಿಂದ ಆ ಪ್ರಾಮಾಣ್ಯ ಮನೋವೇದ್ಯ ಎಂದಾಗ ಬಾಧಕ್ಕೆ ಅವಕಾಶವಿಲ್ಲ. ಅಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಲೇಬೇಕಾಗುವುದು.

ಬಾಹ್ಯವಾದ ರಜತಾದಿಗಳ ಜ್ಞಾನಗತಪ್ರಾಮಾಣ್ಯವೂ ಅನುವ್ಯವಸಾಯಕ್ಕೆ ವಿಷಯವಾಗಬಹುದು. ಅನುವ್ಯವಸಾಯಕ್ಕೆ ವ್ಯವಸಾಯವು (ರಜತಾದಿಜ್ಞಾನಗಳು) ವಿಷಯ. ವ್ಯವಸಾಯ ಸಸಂಬಧಿಕ ಪದಾರ್ಥ. ಇಂತಹ ವಸ್ತುಗಳ ಜ್ಞಾನ ಬಂದಾಗ ಸಂಬಂಧಿತಾವಚ್ಛೇದಕವೂ ಭಾನವಾಗುತ್ತದೆ. ಉದಾಹರಣೆಗೆ–ಸಂಯೋಗ ಸಸಂಬಂಧಿಪದಾರ್ಥ. ಹೇಗೆಂದರೆ, ಅದು

ಸಂಬಂಧವಾದುದರಿಂದ ಅನುಯೋಗಿ ಮತ್ತು ಪ್ರತಿಯೋಗಿಗಳು ಅದಕ್ಕೆ ಸಂಬಂಧಿಸಿದ ಎರಡು ವಸ್ತುಗಳು. ಇವುಗಳ ಜೊತೆಗೇ ಸಂಯೋಗದ ಜ್ಞಾನ ಬರುತ್ತದೆ– ನೀರು ಮತ್ತು ಪಾತ್ರೆಗಳಿಗೆ ಸಂಯೋಗ ಇದೆ, ಎಂದು. ಸಂಬಂಧಿಗಳನ್ನು ಬಿಟ್ಟು ಬರೇ ಸಂಯೋಗದ ಪ್ರತ್ಯಕ್ಷವು ಬರುವುದಿಲ್ಲ. ಅದರಂತೆ, ಜ್ಞಾನವೂ ಒಂದು ಸಸಂಬಧಿಕ ವಸ್ತುವಾದ್ದರಿಂದ ಅದು ತನಗೆ ಸಂಬಂಧಿಸಿದ ವಿಷಯದ ಜೊತೆಗೇ ತೋರುತ್ತದೆ. 'ರಜತದ ಜ್ಞಾನವು ನನಗಿದೆ' ಎಂದು ಅನುವ್ಯವಸಾಯ ಬಂದಾಗ ರಜತ, ರಜತತ್ವ ಮತ್ತು ಅವೆರಡರ ವೈಶಿಷ್ಟ್ಯ ಇವು ಮೂರೂ ಸಂಬಂಧಿತಾವಚ್ಛೇದಕಗಳಾದುದರಿಂದ ಅವುಗಳೊಂದಿಗೇ ಜ್ಞಾನದ ಭಾನವಾಗುತ್ತದೆ. ರಜತದಲ್ಲಿ ರಜತತ್ವವೈಶಿಷ್ಟ್ಯವಿಷಯಕತ್ವದ ಜ್ಞಾನವೇ ಪ್ರಾಮಾಣ್ಯಜ್ಞಾನ. ಹೀಗೆ, ಜ್ಞಾನವು ಭಾನವಾದಾಗ ಜ್ಞಾನಗತವಾದ ಈ ಪ್ರಾಮಾಣ್ಯವೂ ಅನುವ್ಯವಸಾಯಕ್ಕೆ ವಿಷಯವಾಗಬೇಕಾಗುತ್ತದೆ.

ಸಾಕ್ಷಿ ಅಥವಾ ಮನಸ್ಸಿಗೆ ಬಾಹ್ಯವಾದ, ರಜತಗತವಾದ ರಜತತ್ವವೈಶಿಷ್ಟ್ಯವು ಲೌಕಿಕ ಸನ್ನಿಕರ್ಷದ ಮೂಲಕ ವಿಷಯವಾಗದಿದ್ದರೂ ವ್ಯವಸಾಯರೂಪವಾದ ಜ್ಞಾನಲಕ್ಷಣಾಸನ್ನಿಕರ್ಷ ದ್ವಾರಾ ವಿಷಯವಾಗಬಹುದು, ಚಾಕ್ಷುಷಪ್ರತ್ಯಕ್ಷಕ್ಕೆ ಸೌರಭ್ಯವು ವಿಷಯವಾದಂತೆ. ಹೀಗೆ, ಪ್ರಾಮಾಣ್ಯವು ಅನುವ್ಯವಸಾಯದಲ್ಲಿ ಭಾನವಾಗಲು ಸಾಮಗ್ರಿಯ ತೊಡಕು ಇಲ್ಲ.

ಒಂದುವೇಳೆ 'ರಜತಂ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ರಜತತ್ವ ಮತ್ತು ರಜತ ಇವೆರಡೇ ಭಾನವಾಗಿ ವೈಶಿಷ್ಟ್ಯವು ಭಾನವಾಗದಿದ್ದಲ್ಲಿ 'ರಜತ–ರಜತತ್ವೇ ಜಾನಾಮಿ' ಎಂಬ ಅನುವ್ಯವಸಾಯಕ್ಕೂ 'ರಜತಂ ಜಾನಾಮಿ' ಎಂಬ ಅನುವ್ಯವಸಾಯಕ್ಕೂ ವ್ಯತ್ಯಾಸವೇ ಇಲ್ಲವೆಂದಾದೀತು.

ಪ್ರತ್ಯಕ್ಷ ಚಿಂತಾಮಣಿಗ್ರಂಥದಲ್ಲಿ ಗಂಗೇಶೋಪಾಧ್ಯಾಯರು ಅನುವ್ಯವಸಾಯದ ಆಕಾರದ ಬಗ್ಗೆ ಹೀಗೆ ತಿಳಿಸಿದ್ದಾರೆ— ರಜತಜ್ಞಾನ ಬಂದು, ಪ್ರವೃತ್ತಿಮಾಡಿ ನಿರ್ಣಯವಾದ ಮೇಲೆ ಮಾತ್ರ 'ರಜತಂ ಜಾನಾಮಿ' ಎಂದು ಅನುವ್ಯವಸಾಯ ಬರುತ್ತದೆ. ಅದಕ್ಕೆ ಮೊದಲು 'ಇದಂ ರಜತತ್ವೇನ ಜಾನಾಮಿ' (ನನ್ನ ಮುಂದಿರುವ ವಸ್ತುವನ್ನು ಬೆಳ್ಳಿ ಎಂದು ತಿಳಿದಿದ್ದೇನೆ) ಎಂದೇ ಅನುವ್ಯವಸಾಯ. ಇದರ ಅರ್ಥ 'ರಜತತ್ವ ವಿಶಿಷ್ಟವಾದ ಇದಂಪದಾರ್ಥದ ಜ್ಞಾನ ನನಗಿದೆ' ಎಂದಲ್ಲ, 'ಇದಂ ವಿಶೇಷ್ಯಕ ರಜತತ್ವಪ್ರಕಾರಕ ಜ್ಞಾನ ಇದೆ' ಎಂದಿಷ್ಟೇ ಅನುವ್ಯವಸಾಯದ ಅರ್ಥ. ಇಂತಹ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ತೋರುವುದಿಲ್ಲ. ಏಕೆಂದರೆ ಅನುವ್ಯವಸಾಯವು ಪುರೋರ್ತಿಯಲ್ಲಿ ರಜತತ್ವ ಇದೆ, ಎಂದೇನೂ ಹೇಳುವುದಿಲ್ಲ, ಅದು ಕೇವಲ ಜ್ಞಾನದ ವಿವರಣೆಯನ್ನಷ್ಟೇ ನೀಡುತ್ತದೆ, ಎಂದು.

ಇದನ್ನು ಶ್ರೀವ್ಯಾಸರಾಜರು ವಿಮರ್ಶಿಸಿದ್ದಾರೆ— ಮಣಿಕಾರ ಹೇಳಿದಂತೆ 'ಇದಂ ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯದ ಆಕಾರವನ್ನು ಒಪ್ಪಿಕೊಳ್ಳೋಣ. 'ರಜತತ್ವೇನ ಜಾನಾಮಿ' ಎಂದರೆ ರಜತತ್ವಪ್ರಕಾರಕಜ್ಞಾನ, ಎಂದೇ ಅರ್ಥವಾಗಲಿ. ಆದರೂ ರಜತತ್ವವೈಶಿಷ್ಟ್ಯಭಾನವು

ಅನಿವಾರ್ಯ. ರಜತತ್ವವು ಪ್ರಕಾರ ಎಂದರೆ, ಜ್ಞಾನದಲ್ಲಿ ಭಾಸವಾಗುವ ವೈಶಿಷ್ಟ್ಯಕ್ಕೆ ರಜತತ್ವವು ಪ್ರತಿಯೋಗಿ, ಎಂದರ್ಥ. 'ಇದಂ ರಜತಂ' ಎಂಬ ಜ್ಞಾನದಲ್ಲಿ ರಜತತ್ವದ ವೈಶಿಷ್ಟ್ಯವು (ಸಂಬಂಧವು) ಪುರೋವರ್ತಿಯಲ್ಲಿ ತೋರುತ್ತದೆ. ಆ ವೈಶಿಷ್ಟ್ಯಕ್ಕೆ ಪುರೋವರ್ತಿವಸ್ತು ಅನುಯೋಗಿ, ರಜತತ್ವವು ಪ್ರತಿಯೋಗಿ. ಯಾವುದು ಪ್ರತಿಯೋಗಿಯೋ ಅದೇ ಪ್ರಕಾರ. ಅನುವ್ಯವಸಾಯವು, ವ್ಯವಸಾಯದಲ್ಲಿ ರಜತತ್ವವು ಪ್ರಕಾರವಾಗಿದೆ, ಎಂದು ಗ್ರಹಿಸಿದರೆ ಅದರ ಅರ್ಥ—ವ್ಯವಸಾಯ ದಲ್ಲಿ ತೋರುವ ವೈಶಿಷ್ಟ್ಯಕ್ಕೆ ರಜತತ್ವವು ಪ್ರತಿಯೋಗಿ, ಎಂದು ವ್ಯವಸಾಯ ಗ್ರಹಿಸುತ್ತದೆ, ಎಂದು. ಅಲ್ಲಿಗೆ, ವ್ಯವಸಾಯದ್ವಾರಾ ಅನುವ್ಯವಸಾಯಕ್ಕೂ ವೈಶಿಷ್ಟ್ಯವು ವಿಷಯವಾದಂತೆ.

ಇದಕ್ಕೂ ಮಣಿಕಾರನ ಆಕ್ಷೇಪವಿದೆ—ವೈಶಿಷ್ಟ್ಯವು ಅನುವ್ಯವಸಾಯಕ್ಕೆ ವಿಷಯವಾದ ಮಾತ್ರಕ್ಕೆ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎನ್ನುವಂತಿಲ್ಲ. 'ರಜತತ್ವವಿಶಿಷ್ಟವಿಷಯಕ ರಜತತ್ವ ಪ್ರಕಾರಕ ಜ್ಞಾನವು ಪ್ರಮಾವೇ ಆಗಬೇಕೆಂದೇನಿಲ್ಲ. 'ಇದಂ ರಜತಂ' ಭ್ರಮಾತ್ಮಕ ಜ್ಞಾನದಲ್ಲಿ ಆಪಣಸ್ಥವಾದ ಸತ್ಯರಜತವೇ ತೋರುತ್ತದೆ. ಅದು ರಜತತ್ವವತ್. ಆದ್ದರಿಂದ ಆ ಭ್ರಮೆಯಲ್ಲಿ ರಜತತ್ವವದ್(ಆಪಣಸ್ಥರಜತ) ವಿಷಯಕತ್ವ ಹಾಗೂ ರಜತತ್ವಪ್ರಕಾರಕತ್ವ ಇದೆ. ಆದರೆ ಪ್ರಾಮಾಣ್ಯ ಇಲ್ಲ. ಆದ್ದರಿಂದ 'ರಜತತ್ವವದ್**ವಿಶೇಷ್ಯಕತ್ವೇ** ಸತಿ ರಜತತ್ವ ಪ್ರಕಾರಕತ್ವಮ್' ಇದೇ ಪ್ರಾಮಾಣ್ಯ. ಇಂತಹ ಪ್ರಾಮಾಣ್ಯವು 'ಇದಂ ರಜತಮ್' ಎಂಬ ಭ್ರಮಾತ್ಮಕ ಜ್ಞಾನದಲ್ಲಿ ಇಲ್ಲ. ಆ ಜ್ಞಾನದಲ್ಲಿ ವಿಶೇಷ್ಯವಾದುದು ಪುರೋವೃತ್ತಿ ಶುಕ್ತಿ. ಅದು ರಜತತ್ವವತ್ ಆಗಿಲ್ಲ. ಪ್ರಕೃತ 'ಇದಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯದಲ್ಲಿ ತೃತೀಯಾರ್ಥವಾದ ಪ್ರಕಾರತಾಘಟಕವಾಗಿ ವೈಶಿಷ್ಟ್ಯವು ಭಾಸಮಾನವಾದರೂ ರಜತತ್ವವದ್ ವಿಶೇಷ್ಯಕತ್ವರೂಪವಾದ ಪ್ರಾಮಾಣ್ಯವು ಅನುವ್ಯವಸಾಯದಲ್ಲಿ ಭಾನವಾಗುವುದಿಲ್ಲ. ಆದ್ದರಿಂದ ಅನುವ್ಯವಸಾಯ ಪ್ರಾಮಾಣ್ಯಗ್ರಾಹಕ ಅಲ್ಲ.

ಇದಕ್ಕೆ ವ್ಯಾಸರಾಜರು ಕೊಟ್ಟಿರುವ ಉತ್ತರ—ಸ್ವತಸ್ತ್ವವಾದಿಗಳು ಎಲ್ಲಾ ಅನುವ್ಯವಸಾಯದಲ್ಲೂ ಪ್ರಾಮಾಣ್ಯ ತೋರುತ್ತದೆ, ಎಂದು ಹೇಳುವುದಿಲ್ಲ. ದೋಷಶಂಕಾದಿಗಳು ಇಲ್ಲದೇ ಇದ್ದು ಸಮೀಪದಲ್ಲಿರುವ ವಸ್ತು, ಬೆಳಕಿರುವಾಗ ಕಂಡರೆ ಅಂತಹ ಜ್ಞಾನವನ್ನು ಗ್ರಹಿಸುವ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಗೃಹೀತವಾಗುತ್ತದೆ, ಎಂದೇ ನಮ್ಮ ವಾದ. ಅಂತಹ ಸಂದರ್ಭದಲ್ಲಿ ಅನುವ್ಯವಸಾಯದ ಆಕಾರ—'ರಜತಂ ರಜತತ್ವೇನ ಜಾನಾಮಿ' ಎಂದು. ಇಲ್ಲಿ ತೃತೀಯಾವಿಭಕ್ತಿಗೆ ಪ್ರಕಾರತಾ ಎಂದು ಅರ್ಥವಾದಂತೆ ದ್ವಿತೀಯಾವಿಭಕ್ತಿಗೆ ವಿಶೇಷ್ಯತಾ ಎಂದು ಅರ್ಥ. ಅಲ್ಲಿಗೆ 'ರಜತಂ' ಎಂದರೆ ರಜತತ್ವವತ್ ವಿಶೇಷ್ಯಕ, ಎಂದರ್ಥವಾಗುತ್ತದೆ. ಆಗ ಅನುವ್ಯವಸಾಯವು ವ್ಯವಸಾಯವನ್ನು 'ರಜತತ್ವವದ್ ವಿಶೇಷ್ಯಕತ್ವೇನ, ರಜತತ್ವ ಪ್ರಕಾರಕತ್ವೇನ' ಗ್ರಹಿಸಿದಂತೆ ಆಗುತ್ತದೆ. ಇದೇ ಪ್ರಾಮಾಣ್ಯ. ಹೀಗೆ ಅನುವ್ಯವಸಾಯಕ್ಕೆ ಪ್ರಾಮಾಣ್ಯಗ್ರಾಹಕತ್ವ ಬಂದೇ ಬರುತ್ತದೆ.

ಇಲ್ಲಿಗೂ ವಿವಾದ ಬಗೆಹರಿಯುವುದಿಲ್ಲ. ಅನುವ್ಯವಸಾಯವು ರಜತತ್ವಪ್ರಕಾರಕ—ರಜತತ್ವವದ್ವಿಶೇಷ್ಯಕವಾದ ಜ್ಞಾನ ನನಗಿದೆ, ಎನ್ನುತ್ತದೆ. ಇದರ ಅರ್ಥ—'ನನ್ನ ಜ್ಞಾನದಲ್ಲಿ ರಜತತ್ವವು ಪ್ರಕಾರ, ರಜತವು ವಿಶೇಷ್ಯ' ಎನ್ನುತ್ತದೆ ಅನುವ್ಯವಸಾಯ. ಆ ವಿಶೇಷ್ಯವು ರಜತವೇ ಆಗಿದೆ, ಎಂದೇನೂ ಭರವಸೆ ನೀಡುವುದಿಲ್ಲ. ಅರ್ಥಾತ್ ಪುರೋವರ್ತಿಯಲ್ಲಿ ರಜತತ್ವವು ಸತ್ತಾಗಿದೆ, ಎಂದೇನೂ ಅದು ಗ್ರಹಿಸುತ್ತಿಲ್ಲ. ಅದಕ್ಕೆ ಆ ಸಾಮರ್ಥ್ಯವೇ ಇಲ್ಲ. ಹಾಗೆ ಗ್ರಹಿಸದ ಹೊರತು ಅದು ಪ್ರಾಮಾಣ್ಯವನ್ನು ತಿಳಿಸಿದಂತೆ ಆಗುವುದಿಲ್ಲ. 'ಅಲ್ಲಿ ಹಾವಿದೆ ಎಂದು ರಾಮನು ಹೇಳುತ್ತಾನೆ' ಎನ್ನುವ ಕೃಷ್ಣನ ಮಾತಿನಿಂದ ಹಾವಿದೆ ಎನ್ನುವುದು ಹೇಗೆ ನಿಶ್ಚಯವಾಗುವುದಿಲ್ಲವೋ ಹಾಗೆಯೇ 'ವ್ಯವಸಾಯವು ರಜತತ್ವವು ವಿಶೇಷ್ಯದಲ್ಲಿ ಇದೆ, ಎಂದು ಹೇಳುತ್ತದೆ' ಎನ್ನುವ ಅನುವ್ಯವಸಾಯದಿಂದಲೂ ಇದಂ ವಸ್ತುವಿನಲ್ಲಿ ರಜತತ್ವ ಇದೆ, ಎಂದೇನೂ ಸಿದ್ಧವಾಗುವುದಿಲ್ಲ. ಆದ್ದರಿಂದ ಅನುವ್ಯವಸಾಯವು ಪ್ರಾಮಾಣ್ಯಗ್ರಾಹಕವಲ್ಲ.

ಈ ಆಕ್ಷೇಪಕ್ಕೆ ತರ್ಕತಾಂಡವದ ಉತ್ತರ ಹೀಗಿದೆ— 'ಅಲ್ಲಿ ಹಾವಿದೆ ಎಂದು ರಾಮ ಹೇಳುತ್ತಾನೆ' ಎನ್ನುವ ಕೃಷ್ಣ ಹೇಳಿದ ವಾಕ್ಯದಿಂದ ಹಾವಿನ ನಿರ್ಧಾರವಾಗದಿರಬಹುದು. ಆದರೆ, 'ಅಲ್ಲಿ ನಾನು ಹಾವು ಹರಿದಾಡಿದ್ದನ್ನು ಸರಿಯಾಗಿ ವಿಮರ್ಶಿಸಿ ಕಂಡಿದ್ದೇನೆ, ಎಂದು ರಾಮನು ಹೇಳುತ್ತಾನೆ' ಎನ್ನುವ ಕೃಷ್ಣ ಹೇಳಿದ ಮಾತಿನಿಂದ ಹಾವಿದೆ ಎಂದು ನಿರ್ಧಾರವಾಗುತ್ತದೆ. ಅದರಂತೆ 'ಗೇಹೇ ಮಮ ಘಟಪ್ರಮಾ' ಎಂಬ ವಾಕ್ಯದಿಂದ ಬರುವ ಜ್ಞಾನವು ಹೇಗೆ ಘಟಜ್ಞಾನದಲ್ಲಿ ಪ್ರಮಾತ್ವವನ್ನು ಗ್ರಹಿಸುತ್ತದೆ. ಅದರಿಂದ ಘಟಸತ್ವವು ನಿರ್ಧಾರವಾಗುತ್ತದೆ. ಅದೇರೀತಿ 'ರಜತಂ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯವೂ ವ್ಯವಸಾಯವನ್ನು ಅರ್ಥಸತ್ವ ವಿಷಯಕತ್ವೇ ಗ್ರಹಿಸಿದಾಗ ರಜತದ ಸತ್ಯತ್ವವು ನಿರ್ಧಾರವಾಗುತ್ತದೆ.

ಇಲ್ಲೂ ಪರತಸ್ತ್ವವಾದಿಗಳ ಆಕ್ಷೇಪವಿದೆ–'ಗೇಹೇ ಘಟಪ್ರಮಾ' ಎಂಬ ವಾಕ್ಯದಿಂದ ಬರುವ ಶಾಬ್ದಬೋಧವು ಅರ್ಥಸತ್ವದಲ್ಲಿ ಪ್ರಮಾಣವಾಗುತ್ತದೆ. ಏಕೆಂದರೆ, ಅದು ಘಟಜ್ಞಾನವು ಘಟಸತ್ವವಿಷಯಕ ಎಂದು ಹೇಳುವುದರ ಜೊತೆಗೆ 'ಪ್ರಮಾ' ಎಂಬ ಪದದ ಮೂಲಕ ತಾನೂ ನೇರವಾಗಿ ಘಟಸತ್ವವನ್ನು ವಿಷಯೀಕರಿಸುತ್ತದೆ. ಆದರೆ, ಪ್ರಕೃತ ಅನುವ್ಯವಸಾಯವು ವ್ಯವಸಾಯಕ್ಕೆ ಅರ್ಥಸತ್ವವು ವಿಷಯ ಎಂದಿಷ್ಟೇ ಹೇಳುತ್ತದೆ, ತಾನು ಸಾಕ್ಷಾತ್ತಾಗಿ ಅರ್ಥಸತ್ವವನ್ನು ವಿಷಯೀಕರಿಸುವುದಿಲ್ಲ, ಹೀಗಾಗಿ ಅದು ಪ್ರಾಮಾಣ್ಯಗ್ರಾಹಕವಲ್ಲ.

ಇದಕ್ಕೆ ತರ್ಕತಾಂಡವದಲ್ಲಿ ಹೇಳಿದ ಸಮಾಧಾನ—ಪರತಸ್ತ್ವವಾದಿಗಳು ಸಾಕ್ಷಾತ್ತಾಗಿ ಅರ್ಥಸತ್ವವನ್ನು ಗ್ರಹಿಸುವುದಿಲ್ಲ ಎನ್ನಲು ಕಾರಣ ಅನುವ್ಯವಸಾಯವು ವ್ಯವಸಾಯದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಎನ್ನುವ ಆಗ್ರಹ. ಸ್ವತಸ್ತ್ವವಾದಿಗಳು ಅನುವ್ಯವಸಾಯವು ವ್ಯವಸಾಯದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎನ್ನುತ್ತಾರೆ. ಅಂದರೆ, 'ರಜತಮೇವ ರಜತತ್ವೇನ ಜಾನಾಮಿ' ಎಂದೇ ಅನುವ್ಯವಸಾಯ. ಇಂತಹ ಅನುವ್ಯವಸಾಯವು ವ್ಯವಸಾಯದಲ್ಲಿ

ಪ್ರಮಾತ್ವವನ್ನು ಗ್ರಹಿಸುವ ಮೂಲಕ ಅರ್ಥಸತ್ವವನ್ನು ಸಾಕ್ಷಾತ್ತಾಗಿಯೂ ಗ್ರಹಿಸುತ್ತದೆ. ಅಲ್ಲಿಗೆ 'ಗೇಹೇ ಮಮ ಘಟಪ್ರಮಾ' ಎನ್ನುವ ಶಾಬ್ದಬೋಧಕ್ಕೂ 'ರಜತಮೇವ ರಜತತ್ವೇನ ಜಾನಾಮಿ' ಎಂಬ ಅನುವ್ಯವಸಾಯಕ್ಕೂ ವ್ಯತ್ಯಾಸವೇ ಇಲ್ಲ. ಪರತಸ್ತ್ವಾದಿಗಳು ಪ್ರಮಾತ್ವವನ್ನು ಗ್ರಹಿಸುವುದಿಲ್ಲ, ಎನ್ನುತ್ತಾರೆ, ಸ್ವತಸ್ತ್ವಾದಿಗಳು ಪ್ರಮಾತ್ವವನ್ನು ಗ್ರಹಿಸುತ್ತದೆ, ಎನ್ನುತ್ತಾರೆ. ಇದು ಮೂಲಭೂತವಾದ ವಿವಾದ. ಹೀಗಿರುವಾಗ ಪರತಸ್ತ್ವಾದಿಗಳು ಸ್ವಪಕ್ಷವನ್ನು ಇಟ್ಟುಕೊಂಡು ಅನುವ್ಯವಸಾಯವು ಸಾಕ್ಷಾತ್ ಅರ್ಥಸತ್ತಾಗ್ರಾಹಕ ಅಲ್ಲ, ಎಂದು ಹೇಳುವುದು ಸರಿ ಅಲ್ಲ.

ಯದ್ಯಪಿ ಅರ್ಥಸತ್ವವು ಬಾಹ್ಯ. ಅದು ಲೌಕಿಕ ಸನ್ನಿಕರ್ಷದ ಮೂಲಕ ಅನುವ್ಯವಸಾಯಕ್ಕೆ ವಿಷಯವಲ್ಲ. ಆದರೂ ಚಾಕ್ಷುಷಜ್ಞಾನದಲ್ಲಿ ಸೌರಭ್ಯವು ವಿಷಯವಾದಂತೆ ವ್ಯವಸಾಯರೂಪ ಜ್ಞಾನಲಕ್ಷಣಾ ಸನ್ನಿಕರ್ಷದಿಂದ ವೈಶಿಷ್ಟ್ಯಸತ್ವವೂ ಅನುವ್ಯವಸಾಯಕ್ಕೆ ವಿಷಯವಾಗುತ್ತದೆ.

ಶ್ರೀವ್ಯಾಸರಾಜರು ಹೇಳುತ್ತಾರೆ—ನೇರವಾಗಿ ಅರ್ಥಸತ್ವವನ್ನು ಗ್ರಹಿಸುವ ಪ್ರಮಾಣಕ್ಕಿಂತಲೂ ಅನ್ಯದ್ವಾರಾ ಅದನ್ನು ಗ್ರಹಿಸುವುದರಿಂದ ಹೆಚ್ಚಿನ ಮಹತ್ವವಿದೆ. ಶ್ರೀಕೃಷ್ಣ ಸ್ವಯಂ ಪರಮಾತ್ಮನೇ ಆದರೂ, ಕ್ಷೇತ್ರ–ಕ್ಷೇತ್ರಜ್ಞರ ಬಗ್ಗೆ ತಾನೇ ವಿವರವನ್ನು ಹೇಳದೆ—

ಋಷಿಭಿರ್ಬಹುಧಾ ಗೀತಂ, ಛಂದೋಭಿರ್ವಿವಿಧೈಃ ಪೃಥಕ್ ॥

ಎಂದಿರುತ್ತಾನೆ. ಅದರಂತೆ, ಅನುವ್ಯವಸಾಯವು ನೇರವಾಗಿ ಬಾಹ್ಯವಸ್ತು ಸತ್ಯ ಎನ್ನುವುದಕ್ಕಿಂತಲೂ ಬಾಹ್ಯವಸ್ತು ಸತ್ಯವೆಂದೇ ವ್ಯವಸಾಯ ಹೇಳುತ್ತದೆ, ಎನ್ನುವುದರಿಂದ ಬಾಹ್ಯಪದಾರ್ಥದಲ್ಲಿ ಹೆಚ್ಚಿನ ವಿಶ್ವಾಸ ಬರುತ್ತದೆ.

ಅನುವ್ಯವಸಾಯವು ಬಾಹ್ಯಾರ್ಥದಲ್ಲಿ ಸತ್ವಗ್ರಾಹಕ ಎನ್ನುವುದನ್ನು ಪರತಸ್ತವಾದಿಗಳೂ ಒಪ್ಪಬೇಕಾಗುತ್ತದೆ. ಏಕೆಂದರೆ, ಯಾವುದೇ ಜ್ಞಾನವಾಗಿರಲಿ ಅದರ ಧರ್ಮ್ಯಂಶದಲ್ಲಿ ಸಂದೇಹ ಬರುವುದಿಲ್ಲ. ಉದಾಹರಣೆಗೆ–'ಇದಂ ರಜತಂ' ಎಂಬ ಜ್ಞಾನ ಬಂದ ಮೇಲೆ 'ಇದು ರಜತ ಹೌದೋ ಅಲ್ಲವೋ' ಎಂದು ಸಂದೇಹ ಬರುತ್ತದೆ. ಆದರೆ, 'ಇದು ಇದು ಹೌದೋ ಅಲ್ಲವೋ' ಎಂಬ ಸಂದೇಹ ಯಾರಿಗೂ ಬರುವುದಿಲ್ಲ. ಅದಕ್ಕೆ ಕಾರಣ, ಅನುವ್ಯವಸಾಯವು 'ಪುರೋವರ್ತಿ ವಸ್ತುವಿನಲ್ಲಿ ಇದಂತ್ವವು ಇದೆ' ಎಂದು ತಿಳಿಸುತ್ತದೆ, ಆದರಿಂದಾಗಿ ಆ ಬಗ್ಗೆ ಸಂದೇಹವಿಲ್ಲ, ಎಂದು. ಹೀಗೆ ಅನುವ್ಯವಸಾಯವೂ ಬಾಹ್ಯವಾದ ಇದಂತ್ವ ವೈಶಿಷ್ಟ್ಯಕ್ಕೆ ಸತ್ವವನ್ನು ಗ್ರಹಿಸಿದಂತೆ ರಜತತ್ವವೈಶಿಷ್ಟ್ಯಕ್ಕೂ ಸತ್ವವನ್ನು ಗ್ರಹಿಸಬಹುದು. ಇದರ ಬಗ್ಗೆ ಮಣಿಕಾರನ ಆಕ್ಷೇಪವನ್ನು ತರ್ಕತಾಂಡವದಲ್ಲಿ ಅನುವಾದ ಮಾಡಿ ವಿಮರ್ಶೆಮಾಡಲಾಗಿದೆ.

ಇನ್ನೊಂದು ರೀತಿಯಿಂದ ಮನಸ್ಸು ಬಾಹ್ಯಾರ್ಥವಾದ ರಜತತ್ವವತ್ತ್ವಾಂಶವು ಸತ್ಯ, ಎಂಬುದನ್ನು ಗ್ರಹಿಸಬಹುದು ಎಂದು ತರ್ಕತಾಂಡವದಲ್ಲಿ ಸಮರ್ಥಿಸಲಾಗಿದೆ. ನೈಯಾಯಿಕರು

'ಅಯಂ ವಹ್ನಿಃ' ಎಂದು ಅನುಭವಕ್ಕೆ ಪ್ರಾಮಾಣ್ಯವನ್ನು ಹೀಗೆ ಅನುಮಾನ ಮಾಡುತ್ತಾರೆ—ಅಯಂ ವಹ್ನಿಃ ಇತ್ಯನುಭವಃ ಪ್ರಮಾ, ದಾಹಸಮರ್ಥವದ್ ವಿಶೇಷ್ಯಕತ್ವಾತ್, ಎಂದು.

ಈ ಅನುಮಾನದ ಹೇತು ಪಕ್ಷದಲ್ಲಿ ಹೇಗೆ ತಿಳಿಯುತ್ತದೆ? ಅಂದರೆ, 'ವಹ್ನಿ ಜ್ಞಾನದಲ್ಲಿ ವಿಶೇಷ್ಯವಾದ ವಸ್ತು ದಾಹಸಮರ್ಥವಾಗಿದೆ, ಎಂದು ತಿಳಿಯುವುದು ಹೇಗೆ? ಏಕೆಂದರೆ, ಅಯಂ ವಹ್ನಿಃ, ಎಂಬ ಜ್ಞಾನ ಬಂದಿದ್ದು ಕಣ್ಣಿಂದ. ಅದು ದಾಹ ಸಮರ್ಥವಾಗಿದೆ, ಎಂದು ತಿಳಿಯುವುದು ತ್ವಗಿಂದ್ರಿಯದಿಂದ. ಇವೆರಡು ಖಂಡಾನುಭವಗಳ ವಿಷಯಗಳನ್ನು ಒಂದಕ್ಕೊಂದು ಜೋಡಿಸುವುದು ಹೇಗೆ? ಈ ಸಮಸ್ಯೆಯನ್ನು ನೈಯಾಯಿಕರು ಬಗೆಹರಿಸುವ ಕ್ರಮ ಹೀಗೆ— ಈ ಎರಡೂ ಅನುಭವಗಳ ನಂತರ ಬರುವ ಒಂದು ಸ್ಮರಣೆಯಲ್ಲಿ ಮನಸ್ಸು ಮತ್ತೊಂದು ಸ್ಮರಣೆಯ ಸಹಾಯದಿಂದ 'ನನ್ನ ಜ್ಞಾನದಲ್ಲಿ ಕಂಡ ವಿಶೇಷ್ಯದಲ್ಲಿ ದಾಹಸಾಮರ್ಥ್ಯವು ಇದೆ' ಎಂಬ ಅಖಂಡವಾದ ಜ್ಞಾನವನ್ನು ತಂದುಕೊಡುತ್ತದೆ.

ಇದೇರೀತಿ, ಜ್ಞಾನದಿಂದ ಉಪನೀತವಾದ ರಜತತ್ವ ವೈಶಿಷ್ಟ್ಯದಲ್ಲಿ ಅನುವ್ಯವಸಾಯವು ಸತ್ವವನ್ನು ಗ್ರಹಿಸುತ್ತದೆ ಎಂದೂ ಹೇಳಬಹುದು. ಆಮೇಲೆ ಬಂದ ಸ್ಮೃತ್ಯುಪನೀತವಾದ ದಾಹಸಾಮರ್ಥ್ಯವತ್ವದ ಸತ್ವವನ್ನು ಮನಸ್ಸು ಪುರೋವರ್ತಿಯಲ್ಲಿ ಗ್ರಹಿಸುವುದಾದಲ್ಲಿ ಮೊದಲು ಬಂದ ವ್ಯವಸಾಯೋಪನೀತವಾದ ರಜತತ್ವ ವೈಶಿಷ್ಟ್ಯದ ಸತ್ವವನ್ನು ಪುರೋವೃತ್ತಿಯಲ್ಲಿ ಅನುವ್ಯವಸಾಯವು ಏಕೆ ಗ್ರಹಿಸಬಾರದು?

ಇದರ ಬಗ್ಗೆ ಮಣಿಕಾರನ ಆಕ್ಷೇಪಗಳಿಗೆಲ್ಲ ಸಮಾಧಾನ ನೀಡಿ ವಿಸ್ತೃತವಾದ ವಿಮರ್ಶೆಯನ್ನು ತರ್ಕತಾಂಡವದಲ್ಲಿ ಮಾಡಲಾಗಿದೆ. ರಾಯರು ನ್ಯಾಯದೀಪದಲ್ಲಿ ತರ್ಕತಾಂಡವದ ಪೂರ್ವಪಕ್ಷಗಳಿಗೆ ಆಧಾರವಾದ ಮಣಿವಾಕ್ಯಗಳನ್ನು ಉಲ್ಲೇಖಿಸಿ, ತಾವೂ ಸ್ವತಂತ್ರವಾಗಿ ಕೆಲವೆಡೆ ಅವುಗಳನ್ನು ನಿರಾಕರಿಸಿದ್ದಾರೆ.

ಹೀಗೆ ದೋಷಸಂದೇಹಕ್ಕೆ ಅವಕಾಶವೇ ಇಲ್ಲದ ಸಂದರ್ಭಗಳಲ್ಲಿ ಪ್ರಥಮಾನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅಂದರೆ ಅರ್ಥಸತ್ವವನ್ನು ತಾನೇ ಗ್ರಹಿಸುತ್ತದೆ. ಆದ್ದರಿಂದ ಹಿಂದಿನ ಪ್ರಕರಣದಲ್ಲಿ ಹೇಳಿದ ಅನುಮಾನಗಳಿಗೆ ಬಾಧದೋಷ ಇಲ್ಲ.

## ಪ್ರಕರಣ ॥ ೪ ॥

# ಪ್ರಕರಣ - 5

## ಸ್ವತಸ್ತ್ವಪಕ್ಷೇ ಸಂದೇಹ ಸಮರ್ಥನಮ್

### ನ್ಯಾಯದೀಪದಲ್ಲಿ ಅವತಾರಿಕೆ

**ಉಕ್ತಾನುಮಾನೇಷು ಪ್ರತಿಕೂಲತರ್ಕಪರಾಹತಿಂ ಮಣ್ಯಾದ್ಯುಕ್ತಾಮ್ ಆಶಂಕತೇ– ನನ್ವಿತಿ ॥**

ಹಿಂದೆ ಹೇಳಿದ ಪ್ರಾಮಾಣ್ಯಸ್ವತಸ್ತ್ವ-ಸಾಧಕವಾದ ಅನುಮಾನಗಳು ಪ್ರತಿಕೂಲತರ್ಕಗಳಿಂದ ಬಾಧಿತವಾಗಿವೆ. ಮಣಿಕಾರ, ಸ್ವತಸ್ತ್ವಸಿದ್ಧಾಂತಗ್ರಂಥದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸಿದರೆ ಸಂದೇಹಾನುಪಪತ್ತಿಯನ್ನು ಪ್ರಾರಂಭದಲ್ಲೇ ಬಾಧಕವನ್ನಾಗಿ ಹೇಳಿದ್ದಾನೆ(ಮಣಿ.ಪು.186). ಅದನ್ನು ಮೂಲದ ಮೊದಲ ಮೂರು ವಾಕ್ಯಗಳಲ್ಲಿ ಅನುವಾದ ಮಾಡಿ ನಿರಾಕರಿಸಲಾಗಿದೆ.

**ननु तथापि स्वतस्त्वेऽनभ्यासदशायां संशयो न स्यात् । ज्ञानग्रहे प्रामाण्यग्रहात् । अग्रहे च धर्मिज्ञानाभावादिति चेन्न ।**

ಪ್ರಾಮಾಣ್ಯ ಸ್ವತಸ್ತ್ವಾನುಮಾನಕ್ಕೆ ಪ್ರಬಲಪ್ರಮಾಣಗಳಿಂದ ಬಾಧರೂಪದೋಷವು ಇಲ್ಲದಿದ್ದರೂ ಪ್ರತಿತರ್ಕದ ವಿರೋಧ ಇದೆ. 'ಯದಿ ಪ್ರಾಮಾಣ್ಯಂ ಸ್ವತಃ ಗೃಹ್ಯೇತ ತರ್ಹಿ ಕದಾಪಿ ಪ್ರಾಮಾಣ್ಯಸಂದೇಹಃ ನ ಸ್ಯಾತ್'. ಪ್ರಾಮಾಣ್ಯವು ಸ್ವತಃ ಎಂದರೆ ಜ್ಞಾನವನ್ನು ಗ್ರಹಿಸುವಾಗ ಅನುವ್ಯವಸಾಯವು ಜ್ಞಾನಗತವಾದ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ, ಎಂದು ಅರ್ಥ. ಹಾಗಾದರೆ ಎಂದೂ 'ಇದಂ ಜ್ಞಾನಂ ಪ್ರಮಾಣಂ ನ ವಾ' ಎಂಬ ಸಂದೇಹವೇ ಬರಬಾರದು. ಏಕೆಂದರೆ, ಜ್ಞಾನವು ಗೃಹೀತವಾಗಿದ್ದರೆ ತದ್ಗತ ಪ್ರಾಮಾಣ್ಯವೂ ಗೃಹೀತವಾಗುವುದರಿಂದ ಪ್ರಾಮಾಣ್ಯವು ನಿಶ್ಚಿತವಾಯಿತು. ನಿಶ್ಚಿತವಾದ ವಿಷಯದಲ್ಲಿ ಸಂದೇಹ ಬರುವುದಿಲ್ಲ. ಒಂದು ವೇಳೆ ಜ್ಞಾನವೇ ಗೃಹೀತವಾಗಿಲ್ಲವಾದರೆ ಆಗಲೂ ಸಂದೇಹಕ್ಕೆ ಆಸ್ಪದವಿಲ್ಲ. ಪ್ರಾಮಾಣ್ಯ ಸಂದೇಹದಲ್ಲಿ ಧರ್ಮಿ ಘಟಾದಿ ಜ್ಞಾನಗಳು. ಸಂದೇಹಕ್ಕೆ ಧರ್ಮಿಜ್ಞಾನವು ಕಾರಣ. ಧರ್ಮಿಜ್ಞಾನವೇ ಇಲ್ಲದಿದ್ದರೆ ಕಾರಣಾಭಾವಾತ್ ಸಂದೇಹವು ಬರುವುದಿಲ್ಲ. ಆದರೆ, ಅನಭ್ಯಾಸದಶಾದಲ್ಲಿ ಪ್ರಾಮಾಣ್ಯಸಂದೇಹವು ಬರುತ್ತದೆ. ಹೊಸದಾಗಿ ಒಂದು ವಸ್ತುವಿನ ಜ್ಞಾನ ಬಂದಾಗ 'ಈ ಜ್ಞಾನವು ಪ್ರಮಾಣವೋ, ಅಪ್ರಮಾಣವೋ' ಎಂಬ ಸಂದೇಹವು ಸಹಜ. ಸ್ವತಸ್ತ್ವ ಪಕ್ಷದಲ್ಲಿ ಈ ಸಂದೇಹ ಬರಲು ಸಾಧ್ಯವಿಲ್ಲ. ಆದ್ದರಿಂದ 'ಪ್ರಾಮಾಣ್ಯಂ ಸ್ವತೋ ಜ್ಞಾಯತೇ' ಎಂಬ ಸಿದ್ಧಾಂತ ಸರಿಯಲ್ಲ. ಇದು ಮಣಿಗ್ರಂಥದಲ್ಲಿ ಮಾಡಿರುವ ಆಕ್ಷೇಪದ ಅಭಿಪ್ರಾಯ.

## ನ್ಯಾಯದೀಪ

**ತಥಾಪೀತಿ ॥ ಪ್ರಬಲಬಾಧರೂಪದೋಷಾಭಾವೇಽಪಿ ಇತ್ಯರ್ಥಃ। ಪ್ರಾಮಾಣ್ಯಗ್ರಹಾದಿತಿ ॥ ಅನ್ಯಥಾ ಸ್ವತಸ್ತ್ವ–ಭಂಗಾಪತ್ತೇಃ ಇತಿ ಭಾವಃ। ಅಗ್ರಹೇಚೇತಿ ॥ ಜ್ಞಾನಸ್ಯೇತ್ಯನುಷಂಗಃ।**

ಮೂಲದಲ್ಲಿ ತಥಾಪಿ ಎಂದರೆ ಪ್ರಬಲವಾದ ಪ್ರಮಾಣದ ಬಾಧವು ಇಲ್ಲದಿದ್ದರೂ ಎಂದು ಅರ್ಥ. ಜ್ಞಾನವು ಗೃಹೀತವಾದರೂ ಪ್ರಾಮಾಣ್ಯವು ಗೃಹೀತವಾಗದಿದ್ದಲ್ಲಿ ಸ್ವತಸ್ತ್ವಭಂಗವಾಗುತ್ತದೆ, ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ಯಥಾ ಹಿ ತ್ವನ್ಮತೇ ಜಾತಿವ್ಯಕ್ತ್ಯೋಃ ಏಕವಿತ್ತಿ–ವೇದ್ಯತ್ವನಿಯಮೇಽಪಿ ದೋಷವಶಾತ್ 'ಇದಂ ರೂಪ್ಯಮ್' ಇತಿ ಭ್ರಮಸ್ಥಲೇ ಶುಕ್ತಿಗ್ರಹೇಽಪಿ ನ ಶುಕ್ತಿತ್ವಗ್ರಹಃ ತಥಾ ಮನ್ಮತೇಽಪಿ ಜ್ಞಾನ–ಪ್ರಾಮಾಣ್ಯಯೋಃ ಏಕವಿತ್ತಿ ವೇದ್ಯತ್ವನಿಯಮೇಽಪಿ ಸಂಶಯಸ್ಥಲೇ ಜ್ಞಾನಗ್ರಹೇ ಸತ್ಯಪಿ ತೇನ ತತ್ ಪ್ರಾಮಾಣ್ಯಾಗ್ರಹೇಽಪಿ ನ ಸ್ವತಸ್ತ್ವಭಂಗಃ। ಅಸ್ಮಾಭಿರುಕ್ತಸ್ವತಸ್ತ್ವಸ್ಯ ತತ್ರಾಪಿ ಸತ್ತ್ವಾತ್, ಇತಿ ಭಾವೇನ ''ಧರ್ಮ್ಯುಪಲಬ್ಧೌ ಅಪಿ ವ್ಯಾಘಾತಾದಿದರ್ಶನೇನ ಸಾಕ್ಷಿಣಿ ಪ್ರತಿಬದ್ಧೇ ಪ್ರಾಮಾಣ್ಯವಿಷಯೇ ಮನಸಿ ಸಂಶಯೋಪಪತ್ತೇಃ'' ಇತಿ ತತ್ವನಿರ್ಣಯಟೀಕಾಂ ('ಬುದ್ಧಿದೋಷಮಾತ್ರ' ಇತಿ ವಾಕ್ಯವ್ಯಾಖ್ಯಾನ ಟೀಕಾ–ಪ್ರಾಮಾಣ್ಯಸ್ವತಸ್ತ್ವಪ್ರಕರಣಂ) ವಿವೃಣ್ವಾನಃ ಸಮಾಧತ್ತೇ–ಅಸತಿ ಪ್ರತಿ ಬಂಧೇ ಇತಿ ॥**

ಹಿಂದಿನ ಆಕ್ಷೇಪಕ್ಕೆ ತತ್ತ್ವನಿರ್ಣಯಟೀಕಾದಲ್ಲಿ ಹೇಳಿರುವ ಪರಿಹಾರವನ್ನೇ ಮೂಲದಲ್ಲಿ ಕೊಡಲಾಗಿದೆ. ಪರಿಹಾರಗ್ರಂಥದ ಭಾವಾರ್ಥ ಹೀಗಿದೆ–

ನೈಯಾಯಿಕರ ಮತದಲ್ಲಿ ಜಾತಿ–ವ್ಯಕ್ತಿಗಳು ಏಕಜ್ಞಾನವಿಷಯ, ಎಂಬ ನಿಯಮವಿದೆ. ಇದರ ಅರ್ಥ–ಯಾವ ಇಂದ್ರಿಯವು ವ್ಯಕ್ತಿಯ ಜ್ಞಾನಕ್ಕೆ ಜನಕವೋ ಅದೇ ಇಂದ್ರಿಯವು ಜಾತಿಯ ಜ್ಞಾನಕ್ಕೂ ಜನಕ. ಜಾತಿಯನ್ನು ಬಿಟ್ಟು ವ್ಯಕ್ತಿಭಾನ ಇಲ್ಲ, ಎಂದು. ಆದರೂ ಶುಕ್ತಿಯನ್ನು ನೋಡಿ 'ಇದಂ ರೂಪ್ಯಮ್' ಎಂಬ ಭ್ರಮೆ ಬರುವಾಗ 'ಇದಂ' ಎಂದು ಶುಕ್ತಿಯ ಜ್ಞಾನ ಬಂದರೂ ದೋಷವಶಾತ್ ಶುಕ್ತಿತ್ವಜ್ಞಾನ ಬರುವುದಿಲ್ಲ. ಅದರಂತೆ ಸ್ವತಸ್ತ್ವಮತದಲ್ಲೂ ಜ್ಞಾನ ಮತ್ತು ಅದರ ಪ್ರಾಮಾಣ್ಯ ಇವೆರಡೂ ಏಕಜ್ಞಾನ ವಿಷಯಗಳು. ಅರ್ಥಾತ್ ಜ್ಞಾನದ ಜ್ಞಾನ ಬಂದಾಗ

ಆದರಲ್ಲಿರುವ ಪ್ರಾಮಾಣ್ಯದ ಜ್ಞಾನವೂ ಬರುತ್ತದೆ, ಎಂಬ ನಿಯಮವಿದ್ದರೂ ಪ್ರಾಮಾಣ್ಯಸಂದೇಹ ಬರುವ ಸಂದರ್ಭದಲ್ಲಿ ಸಾಕ್ಷಿಯಿಂದ ಜ್ಞಾನದ ಜ್ಞಾನವು ಬಂದರೂ ಜ್ಞಾನಗತ ಪ್ರಾಮಾಣ್ಯದ ಜ್ಞಾನವು ಬರುವುದಿಲ್ಲ. ಇದರಿಂದ ಸ್ವತಸ್ತ್ವಭಂಗವಾಗುವುದಿಲ್ಲ. ಇದನ್ನು ತತ್ತ್ವನಿರ್ಣಯಟೀಕಾದಲ್ಲಿ ಹೀಗೆ ಹೇಳಲಾಗಿದೆ—''ಪ್ರಾಮಾಣ್ಯಸಂದೇಹದಲ್ಲಿ ಧರ್ಮಿಯಾಗಿರುವ ಜ್ಞಾನವು ಉಪಲಬ್ಧವಾದರೂ ಜ್ಞಾನಕ್ಕೆ ಜನಕವಾದ ವಾಕ್ಯದಲ್ಲಿ ವ್ಯಾಘಾತಾದಿದೋಷಗಳು ಕಂಡಾಗ ಸಾಕ್ಷಿಯು ಪ್ರಾಮಾಣ್ಯಗ್ರಹಣದಲ್ಲಿ ಪ್ರತಿಬದ್ಧವಾಗುತ್ತದೆ. ಆಗ ಪ್ರಾಮಾಣ್ಯದ ಬಗ್ಗೆ ಮನಸ್ಸಿನಿಂದ ಸಂದೇಹ ಬರುತ್ತದೆ''. ಈ ಟೀಕಾಪಂಕ್ತಿಯ ಅಭಿಪ್ರಾಯವನ್ನು ವಿವರಿಸಿ ಪ್ರತಿತರ್ಕಪರಾಹತಿಗೆ ಉತ್ತರವನ್ನು ಮುಂದಿನ ಗ್ರಂಥದಲ್ಲಿ ಕೊಡಲಾಗಿದೆ.

**असति प्रतिबन्धे साक्षिवेद्यत्वनियमो वा सक्षिवेद्यत्वयोग्यता वा स्वतस्त्वमित्युक्तम् । अप्रामाण्यसंशयस्थले च प्रामाण्यग्रहणशक्तिप्रतिबन्धिकाऽप्रामाण्यग्रहणसामग्रीसमवहितैव । अन्यथाऽप्रामाण्यसंशयायोगात् । एवं च ज्ञानं गृह्णता साक्षिणा शक्तिप्रतिबन्धात् प्रामाण्याग्रहणेऽपि अस्मदुक्तस्वतस्त्वाहान्या स्वतस्त्वपक्षेऽपि धर्मिज्ञानस्य, प्रामाण्यानिश्चयस्य च संभवेन संशयो युक्त एव । न हि ज्ञानत्वप्रमात्वग्रहणशक्तयोः एकप्रतिबन्धकप्रतिबध्यत्वमपि स्वतस्त्वान्तर्गतम् ।।**

ಪ್ರತಿಬಂಧಕಗಳು ಇಲ್ಲದಿರುವಾಗ ಮಾತ್ರ ಜ್ಞಾನದೊಂದಿಗೆ ಪ್ರಾಮಾಣ್ಯವೂ ಸಾಕ್ಷಿವೇದ್ಯವಾಗುತ್ತದೆ. ಅಥವಾ, ಪ್ರಾಮಾಣ್ಯದಲ್ಲಿ ಸಾಕ್ಷಿವೇದ್ಯತ್ವಯೋಗ್ಯತೆ ಇದೆ, ಎನ್ನುವುದೇ ಪ್ರಾಮಾಣ್ಯಸ್ವತಸ್ತ್ವ. ಅಪ್ರಾಮಾಣ್ಯಸಂದೇಹ ಬರುವ ಸಂದರ್ಭದಲ್ಲಿ ಅಪ್ರಾಮಾಣ್ಯಜ್ಞಾನ ಸಾಮಗ್ರಿಯೇ ಸಾಕ್ಷಿಗತಶಕ್ತಿಗೆ ಪ್ರಾಮಾಣ್ಯನಿಶ್ಚಯ ಮಾಡಲು ಪ್ರತಿಬಂಧಕವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಅಪ್ರಾಮಾಣ್ಯಗ್ರಹಣಸಾಮಗ್ರಿಯು ಇಲ್ಲವಾದಲ್ಲಿ ಅಪ್ರಾಮಾಣ್ಯಸಂದೇಹವೇ ಬರಲಾರದು. ಸಂದೇಹ ಬರುತ್ತಿರುವುದರಿಂದ ಆ ಸಾಮಗ್ರೀ ಇದೆ, ಎಂದು ಹೇಳಲೇಬೇಕು. ಆ ಸಾಮಗ್ರಿಯೇ ಪ್ರಾಮಾಣ್ಯಗ್ರಹಕ್ಕೆ ಪ್ರತಿಬಂಧಕ.

ಹೀಗೆ, ಜ್ಞಾನಗ್ರಾಹಕವಾದ ಸಾಕ್ಷಿಯ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾದುದರಿಂದ ಪ್ರಾಮಾಣ್ಯಜ್ಞಾನ ಬರುವುದಿಲ್ಲ. ಆದರಿಂದ ಪ್ರಾಮಾಣ್ಯಸ್ವತಸ್ತ್ವವಾದಕ್ಕೇನೂ ಹಾನಿ ಇಲ್ಲ. ಆದ್ದರಿಂದ ಸ್ವತಸ್ತ್ವಪಕ್ಷದಲ್ಲೂ ಧರ್ಮಿಜ್ಞಾನ ಹಾಗೂ ಪ್ರಾಮಾಣ್ಯದ ನಿಶ್ಚಯಾಭಾವ ಈ ಸಂದೇಹ ಸಾಮಗ್ರಿಗಳು ಇರುವ ಕಾರಣ ಪ್ರಾಮಾಣ್ಯಸಂದೇಹವು ಯುಕ್ತವೇ ಆಗಿದೆ.

ಸಾಕ್ಷಿಯಲ್ಲಿರುವ ಜ್ಞಾನಗ್ರಹಣಶಕ್ತಿ ಹಾಗೂ ಪ್ರಾಮಾಣ್ಯಗ್ರಹಣಶಕ್ತಿ ಇವೆರಡಕ್ಕೂ ಒಂದೇ ಪ್ರತಿಬಂಧಕವಾಗಿರುತ್ತದೆ, ಎನ್ನುವ ಅಂಶವು ಪ್ರಾಮಾಣ್ಯಸ್ವತಸ್ತ್ವದಲ್ಲಿ ಸೇರಿಲ್ಲ. ಆ ಅಂಶ ಸೇರಿದ್ದಲ್ಲಿ ಪ್ರಾಮಾಣ್ಯಗ್ರಹಣಶಕ್ತಿಗೆ ಪ್ರತಿಬಂಧಕವಿದ್ದಾಗ ಜ್ಞಾನಗ್ರಹಣಶಕ್ತಿಯೂ ಪ್ರತಿಬದ್ಧವಾಗುವುದರಿಂದ ಜ್ಞಾನವೂ ಗೃಹೀತವಾಗುವುದಿಲ್ಲ. ತಥಾಚ ಧರ್ಮಿಜ್ಞಾನಾಭಾವಾತ್ ಪ್ರಮಾಣ್ಯಸಂದೇಹ ಬರಬಾರದು, ಎಂಬ ಆಕ್ಷೇಪಕ್ಕೆ ಅವಕಾಶವಾಗುತ್ತಿತ್ತು. ಆದರೆ ಆ ಅಂಶ ಸ್ವತಸ್ತ್ವದಲ್ಲಿ ಸೇರಿಲ್ಲ. ಆದ್ದರಿಂದ ಸಂದೇಹ ಬರಬಹುದು.

''ಪ್ರತಿಬಂಧಕ ಇಲ್ಲದೇ ಇದ್ದಾಗ ಜ್ಞಾನವಿಷಯಕ ಸಾಕ್ಷಿಗೆ ಪ್ರಾಮಾಣ್ಯವೂ ವಿಷಯ ವಾಗುತ್ತದೆ'' ಎಂದು ಸ್ವತಸ್ತ್ವನಿಯಮ. ಇದಕ್ಕೆ ''ಪ್ರತಿಬಂಧಕವಿದ್ದಾಗ ಜ್ಞಾನವೂ ಪ್ರಾಮಾಣ್ಯವೂ ಎರಡೂ ಗೃಹೀತವಾಗುವುದಿಲ್ಲ'' ಎಂದು ಅಭಿಪ್ರಾಯವಲ್ಲ. ಪ್ರತಿಬಂಧಕವಿದ್ದಾಗ ಜ್ಞಾನವು ಗೃಹೀತವಾದರೂ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ, ಎಂದಿಷ್ಟೇ ಅರ್ಥ. ಈ ನಿಯಮದಂತೆ ಪ್ರಾಮಾಣ್ಯಸಂದೇಹವು ಬರಲು ಯಾವ ಬಾಧಕವೂ ಇಲ್ಲ.

## ನ್ಯಾಯದೀಪ

**ಪ್ರತಿಬಂಧೇ ಇತಿ ॥ ಪ್ರಾಮಾಣ್ಯ-ವಿರೋಧ್ಯುಪಸ್ಥಾಪಕ-ಸಾಮಗ್ರ್ಯಸಮವಧಾನೇ ಸತಿ, ಇತ್ಯರ್ಥಃ । ಅತ್ರ ಸರ್ವತ್ರ ಸಾಕ್ಷೀ ಪ್ರಾಗುಕ್ತರೂಪ ಏವ ಜ್ಞೇಯಃ । ಗ್ರಹಣೇತಿ ॥ ನಿಶ್ಚಯೇತ್ಯರ್ಥಃ । ಅನ್ಯಥೇತಿ ॥ ಉಕ್ತರೂಪಸಾಮಗ್ರ್ಯಭಾವೇ ಇತ್ಯರ್ಥಃ । ಅಸ್ತು ಸಾಮಗ್ರೀ, ತತಃ ಕಿಮ್, ಇತ್ಯತ ಆಹ-ಏವಂ ಚೇತಿ ॥ ಪ್ರಾಮಾಣ್ಯವಿರೋಧ್ಯುಪಸ್ಥಾಪಕ – ಸಾಮಗ್ರೀಸಮವಧಾನೇ ಸತೀತ್ಯರ್ಥಃ । ಧರ್ಮಿಜ್ಞಾನಸ್ಯೇತಿ ॥ ವ್ಯವಸಾಯರೂಪಸ್ಯ ಸಂಶಯೇ ಧರ್ಮಿಣಃ ಯತ್ ಜ್ಞಾನಂ ತಸ್ಯೇತ್ಯರ್ಥಃ । ಸಂಶಯೋ ಯುಕ್ತ ಏವೇತಿ ॥ ಮಾನಸೋಽಯಂ ಬೋಧ್ಯಃ । ನ ತು ಸಾಕ್ಷಿರೂಪಃ । ತಸ್ಯ ಸುದೃಢ-ನಿರ್ಣಯರೂಪತ್ವಾತ್ ।**

**ಅಸ್ಮದುಕ್ತ-ಸ್ವತಸ್ತ್ವಾಹಾನ್ಯಾ, ಇತ್ಯುಕ್ತಂ ವ್ಯನಕ್ತಿ-ನಹೀತಿ ॥ 'ಅಸತಿ-ಪ್ರತಿಬಂಧೇ ಜ್ಞಾನಗೋಚರ-ಸಾಕ್ಷಿವೇದ್ಯತ್ವನೈಯತ್ಯಮ್' ಇತ್ಯಸ್ಯ 'ಪ್ರತಿಬಂಧೇ ಸತಿ ಸಾಕ್ಷಿಣಾ ಜ್ಞಾನಂ ಪ್ರಾಮಾಣ್ಯಂ ಚ ಉಭಯಂ ನ ಗೃಹ್ಯತೇ' ಇತಿ ಯದ್ಯರ್ಥಃ ತದಾ ಪರಂ ಸ್ವತಸ್ತ್ವಹಾನಿಃ । ನ ಹ್ಯೇವಂ ವಿವಕ್ಷ್ಯತೇ, ಇತಿ ಭಾವಃ ॥**

ಮೂಲದಲ್ಲಿ 'ಪ್ರತಿಬಂಧೇ ಸತಿ' ಎಂದಿದೆ. ಪ್ರಾಮಾಣ್ಯಗ್ರಹಣಕ್ಕೆ ಪ್ರತಿಬಂಧಕವೆಂದರೆ ಪ್ರಾಮಾಣ್ಯವಿರೋಧಿಯಾದ ಅಪ್ರಾಮಾಣ್ಯಾದಿಗಳ ಉಪಸ್ಥಿತಿಗೆ ಕಾರಣವಾದ ಸಾಮಗ್ರೀ. ಅದು ಇದ್ದಾಗ, ಎಂದರ್ಥ.

ಮೂಲದಲ್ಲಿ ಸಾಕ್ಷೀ ಎಂದರೆ ಹಿಂದೆ ಹೇಳಿದಂತೆ ಜ್ಞಾನಾಂಶೇ ಲೌಕಿಕ ಪ್ರತ್ಯಕ್ಷರೂಪವಾದುದು ಎಂದೇ ತಿಳಿಯಬೇಕು.

ಧರ್ಮಿಜ್ಞಾನ ಎಂದರೆ ಪ್ರಾಮಾಣ್ಯ ಸಂದೇಹದಲ್ಲಿ ಧರ್ಮಿಯಾಗಿರುವ ವ್ಯವಸಾಯ ರೂಪವಾದ ಧರ್ಮಿಯ ಜ್ಞಾನ, ಎಂದರ್ಥ.

ಇಲ್ಲಿ ಪ್ರಾಮಾಣ್ಯ ಸಂದೇಹ ಮನ ಇಂದ್ರಿಯದಿಂದ ಬರುವ ಸಂದೇಹ. ಸಾಕ್ಷಿಯಿಂದ ಎಂದೂ ಸಂದೇಹ ಬರುವುದಿಲ್ಲ. ಅದು ದೃಢ ನಿರ್ಣಯಾತ್ಮಕವಾದುದು.

ಸಾಕ್ಷಿಯು ಪ್ರತಿಬದ್ಧವಾದಾಗ ಪ್ರಾಮಾಣ್ಯದ ನಿರ್ಧಾರವನ್ನು ಮಾಡದೇ ಇದ್ದರೂ ಸ್ವತಸ್ತ್ವಹಾನಿ ಇಲ್ಲ. ಏಕೆಂದರೆ, ಪ್ರತಿಬಂಧಕಗಳು ಇಲ್ಲದಿರುವಾಗ ಸಾಕ್ಷಿ ವೇದ್ಯತ್ವ ನಿಯಮವೇ ಸ್ವತಸ್ತ್ವ. ಇದರ ಭಾವಾರ್ಥ–ಪ್ರತಿಬಂಧಕ ಇದ್ದಾಗ ಜ್ಞಾನ ಮತ್ತು ಪ್ರಾಮಾಣ್ಯ ಎರಡೂ ತಿಳಿಯುವುದಿಲ್ಲ ಎಂದು ಅಲ್ಲ. ಹಾಗಿದ್ದಲ್ಲಿ ಧರ್ಮಿಜ್ಞಾನವೇ ಇಲ್ಲದುದರಿಂದ ಸಂದೇಹ ಬರುತ್ತಿರ ಲಿಲ್ಲ. ಸಂದೇಹ ಬರುತ್ತಿರುವುದರಿಂದ ಜ್ಞಾನವು ಗೃಹೀತವಾಗಿರಲೇಬೇಕು. ಆಗ ಪ್ರಾಮಾಣ್ಯವು ಗೃಹೀತವಾಗದಿರುವುದರಿಂದ ಸ್ವತಸ್ತ್ವಕ್ಕೆ ಹಾನಿಯಾಗುತ್ತಿತ್ತು. ಹಾಗೆ ಅರ್ಥವಲ್ಲವಾದುದರಿಂದ ಸ್ವತಸ್ತ್ವಕ್ಕೆ ಹಾನಿ ಇಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಜ್ಞಾನತ್ವ–ಪ್ರಮಾತ್ವಗ್ರಹಣಶಕ್ತ್ಯೋಃ ಐಕ್ಯೋಪಗಮೇ ಅನ್ಯತರಾಗ್ರಹಣೇ ದ್ವಯೋರಪ್ಯಗ್ರಹಣಮ್ ಅವರ್ಜನೀಯಮ್ । ಭೇದೇ ತು ಸ್ವತಸ್ತ್ವಹಾನಿರೇವ । ಜ್ಞಾನಗ್ರಹಣಶಕ್ತ್ಯತಿರಿಕ್ತ–ಶಕ್ತಿಗ್ರಾಹ್ಯತ್ವಾತ್ । ಅನ್ಯಥಾ ಅಪ್ರಾಮಾಣ್ಯಸ್ಯಾಪಿ ಸ್ವತಸ್ತ್ವಾಪತ್ತಿಃ ಇತ್ಯತಃ,**

**'ಮಾನಸ್ಯಾದೋಷಶಂಕಯಾ ಪ್ರಾಮಾಣ್ಯಗ್ರಹಣಶಕ್ತಿಃ ಪ್ರತಿಬದ್ಧಾ'**

**[1]ಇತಿ ಪ್ರಕೃತಿನಯ–ಸುಧಾವಾಕ್ಯೇನ ಭೇದಪಕ್ಷಸ್ಯ,**

**'ಕರಣಾನಾಂ ಜ್ಞಾನಜನನ ಶಕ್ತ್ಯೈವ ತದ್–ಯಾಥಾರ್ಥ್ಯಜನಕತ್ವಮ್ ಸ್ವತಸ್ತ್ವಂ''**

1. ('ಪರೀಕ್ಷಾದೇಶ್ಚ ಸತ್ಯತ್ವಂ' ಎಂಬ ಅನುವ್ಯಾಖ್ಯಾನ ವಿವರಣ ಪ್ರಕರಣದಲ್ಲಿ 'ಏತಾವಾನತ್ರ ವಿಶೇಷಃ' ಈ ಭಾಗದಲ್ಲಿ ಬರುವ ವಾಕ್ಯ) ಅಲ್ಲಿರುವ ಪರಿಮಳಗ್ರಂಥ–ಜ್ಞಾನಗ್ರಹಣಶಕ್ತಿ–ಪ್ರಾಮಾಣ್ಯ ಗ್ರಹಣಶಕ್ತ್ಯೋಃ ಭೇದಮ್ ಉಪೇತ್ಯೋಕ್ತಂ–ಪ್ರಾಮಾಣ್ಯಗ್ರಹಣಶಕ್ತಿಃ ಪ್ರತಿಬದ್ಧಾ ಇತಿ ।

**ಇತ್ಯಾದಿ ಜಿಜ್ಞಾಸಾನಯ–ಸುಧಾ[2]ವಾಕ್ಯೇನ ಅಭೇದಸ್ಯಚ ಪ್ರತೀತೇಃ, ಭೇದಾಭೇದ- ರೂಪಪಕ್ಷದ್ವಯೇಽಪಿ ಸಮಾಧಿಮಾಹ – ತದ್‌ಗ್ರಹಣೇತಿ ॥**

ಸಾಕ್ಷಿಗತ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾಗಿದೆ ಎನ್ನುವುದು ಸರಿಯಲ್ಲ. ಏಕೆಂದರೆ, ಸಾಕ್ಷಿಯು ಜ್ಞಾನ ಮತ್ತು ಪ್ರಾಮಾಣ್ಯ ಎರಡನ್ನೂ ಗ್ರಹಿಸುತ್ತದೆ. ಇವೆರಡನ್ನು ಗ್ರಹಿಸುವ ಸಾಕ್ಷಿಗತಶಕ್ತಿಯು ಒಂದೇ ಆದಲ್ಲಿ ಪ್ರತಿಬಂಧಕವಿದ್ದಾಗ ಎರಡೂ ಗೃಹೀತವಾಗಬಾರದು. ಜ್ಞಾನವು ಮಾತ್ರ ಗೃಹೀತವಾಗುತ್ತದೆ, ಪ್ರಾಮಾಣ್ಯವು ಗೃಹೀತವಾಗುವುದಿಲ್ಲ ಎಂಬ ವ್ಯವಸ್ಥೆ ಸರಿಯಲ್ಲ. ಪ್ರಾಮಾಣ್ಯವು ಗೃಹೀತವಾಗದಿದ್ದಲ್ಲಿ ಜ್ಞಾನವೂ ಗೃಹೀತವಾಗಬಾರದು.

ಸಾಕ್ಷಿಗತ ಶಕ್ತಿಯು ಭಿನ್ನವಾದರೆ, ಒಂದು ಶಕ್ತಿಯು ಪ್ರತಿಬದ್ಧವಾದರೂ ಇನ್ನೊಂದು ಶಕ್ತಿಯು ಅಪ್ರತಿಬದ್ಧವಾದುದರಿಂದ ಜ್ಞಾನಗೃಹೀತವಾದರೂ ಪ್ರಾಮಾಣ್ಯಗೃಹೀತವಾಗುವುದಿಲ್ಲ, ಎನ್ನುವ ವ್ಯವಸ್ಥೆಯನ್ನು ಸಮರ್ಥಿಸಬಹುದು. ಆದರೆ, ಶಕ್ತಿಗಳು ಭಿನ್ನವಾದರೆ ಪ್ರಾಮಾಣ್ಯಸ್ವತಸ್ತ್ವಕ್ಕೇ ಹಾನಿಯಾಗುತ್ತದೆ. ಆಗ ಪ್ರಾಮಾಣ್ಯವು ಜ್ಞಾನಗ್ರಾಹಕ ಶಕ್ತಿಗಿಂತ ಭಿನ್ನವಾದ ಶಕ್ತಿಯಿಂದ ಗ್ರಾಹ್ಯವಾಯಿತು. ಜ್ಞಾನಗ್ರಾಹಕ ಮಾತ್ರ ಗ್ರಾಹ್ಯತ್ವವು ಬರಲಿಲ್ಲ. ಭಿನ್ನ ಶಕ್ತಿಗ್ರಾಹ್ಯವಾದರೂ ಪ್ರಾಮಾಣ್ಯಕ್ಕೆ ಸ್ವತಸ್ತ್ವ ಬರುವುದಾದಲ್ಲಿ ಅಪ್ರಾಮಾಣ್ಯಕ್ಕೂ ಸ್ವತಸ್ತ್ವ ಬರಬೇಕಾದೀತು. ಅಪ್ರಾಮಾಣ್ಯವನ್ನೂ ಗ್ರಹಿಸುವುದು ಸಾಕ್ಷಿಯೇ. ಆದ್ದರಿಂದ ಸಾಕ್ಷಿಯಲ್ಲಿ ಅಪ್ರಾಮಾಣ್ಯ ಗ್ರಹಣಶಕ್ತಿಯೂ ಇದೆ. ತಾದೃಶ–ಶಕ್ತಿಗ್ರಾಹ್ಯತ್ವವು ಪ್ರಾಮಾಣ್ಯದಂತೆ ಅಪ್ರಾಮಾಣ್ಯದಲ್ಲೂ ಇದೆ.

ಈ ಆಕ್ಷೇಪಕ್ಕೆ, ಸಾಕ್ಷಿಗತಶಕ್ತಿಯು ಅಭಿನ್ನ ಮತ್ತು ಭಿನ್ನ ಎಂದು ಎರಡೂ ಪಕ್ಷಗಳನ್ನು ಅಂಗೀಕರಿಸಿ ಪರಿಹಾರವನ್ನು ಮೂಲದಲ್ಲಿ ಮಾಡಲಾಗಿದೆ. ಆ ಎರಡೂ ಪಕ್ಷಗಳೂ ನ್ಯಾಯಸುಧಾ ಸಮ್ಮತವಾಗಿವೆ. ಪ್ರಕೃತ್ಯಧಿಕರಣದ (1-4-9) ಸುಧಾವಾಕ್ಯದ ಅರ್ಥ ಹೀಗೆ— ಮಾನಸದೋಷ ಸಂದೇಹದಿಂದ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾಗಿದೆ–ಎಂದು. ಇದರಿಂದ ಸಾಕ್ಷಿಗತವಾದ ಜ್ಞಾನಗ್ರಹಣಶಕ್ತಿ ಬೇರೆ, ಪ್ರಾಮಾಣ್ಯಗ್ರಹಣಶಕ್ತಿ ಬೇರೆ. ಅವೆರಡರಲ್ಲಿ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾಗುತ್ತದೆ, ಎಂದು ತಿಳಿಯುತ್ತದೆ.

ಇನ್ನು, ಜಿಜ್ಞಾಸಾಧಿಕರಣ ಸುಧಾವಾಕ್ಯದ ಅರ್ಥ–ಕರಣಗಳಲ್ಲಿ ಪ್ರಾಮಾಣ್ಯ ಸ್ವತಸ್ತ್ವವೆಂದರೆ ಜ್ಞಾನಜನನ ಶಕ್ತಿಯಿಂದಲೇ ಕರಣಗಳು ಜ್ಞಾನಗತ ಯಾಥಾರ್ಥ್ಯಕ್ಕೂ ಜನಕವಾಗುತ್ತವೆ, ಎಂದು. ಇದರಿಂದ ಎರಡಕ್ಕೂ ಜನಕವಾದ ಶಕ್ತಿ ಒಂದೇ ಎಂದು ತಿಳಿಯುತ್ತದೆ. ಜನಕಶಕ್ತಿ ಒಂದೇ ಆದಂತೆ ಗ್ರಹಣಶಕ್ತಿಯೂ ಒಂದೇ ಆಗಿರಬೇಕೆಂದು ತಾತ್ಪರ್ಯಾರ್ಥ.

ಹೀಗೆ ಶಕ್ತಿಭೇದ–ಅಭೇದ ಎರಡೂ ಪಕ್ಷಗಳು ಸಿದ್ಧಾಂತ ಸಮ್ಮತವಾಗಿವೆ. ಪಕ್ಷದ್ವಯದಲ್ಲೂ ಹಿಂದೆ ಮಾಡಿರುವ ಆಕ್ಷೇಪಕ್ಕೆ ಸಮಾಧಾನವನ್ನು ಮುಂದಿನ ಮೂಲದಲ್ಲಿ ಕೊಡಲಾಗಿದೆ.

---

2. 'ಅನವಸ್ಥಾನ್ಯಥಾ ಹಿ ಸ್ಯಾತ್' ಎಂಬ ಅನುವ್ಯಾಖ್ಯಾನಕ್ಕೆ ಅವತಾರಿಕಾಕೊಡುವ ಸಂದರ್ಭದಲ್ಲಿ 'ನನು ಕಿಮಿದಂ' ಎಂದು ಪ್ರಾರಂಭವಾಗುವ ಪ್ರಕರಣ)

**तद्ग्रहणशक्त्योः भिन्नत्वेऽपि ज्ञानत्वग्रहणशक्तिवत् प्रामाण्यग्रहणशक्तिः सहजा । न त्वप्रामाण्यग्रहणशक्तिरिवाहितेत्येतावतैव प्रामाण्यस्य स्वतस्त्वात् । दृश्यते च वह्नौ दाहप्रकाशनशक्त्योः सहजत्वेऽपि प्रतिबन्धकभेदः ।।**

**अस्तु वा तयोरेकैव ग्रहणशक्तिः । तथापि तस्या 'एनं मा दह' इत्यादौ दाहशक्तेरिव विषयभेदेन प्रतिबन्धाप्रतिबन्धौ युक्तौ ।**

ಸಾಕ್ಷಿಯಲ್ಲಿರುವ ಜ್ಞಾನಗ್ರಹಣಶಕ್ತಿ ಹಾಗೂ ಪ್ರಾಮಾಣ್ಯಗ್ರಹಣಶಕ್ತಿಗಳು ಭಿನ್ನವಾದರೂ ಸ್ವತಸ್ತ್ವಹಾನಿ ಇಲ್ಲ. ಏಕೆಂದರೆ, ಅವೆರಡೂ ಸಾಕ್ಷಿಗತ ಸ್ವಾಭಾವಿಕಶಕ್ತಿಗಳು, ಆಗಂತುಕಗಳಲ್ಲ. ಆದರೆ, ಅಪ್ರಾಮಾಣ್ಯಗ್ರಹಣಶಕ್ತಿ ಆಗಂತುಕ. ದೋಷಗಳ ಸಹಾಯವಿದ್ದಾಗ ಸಾಕ್ಷಿಗೆ ಆ ಶಕ್ತಿ ಬರುತ್ತದೆ. ಇಲ್ಲವಾದರೆ ಆ ಶಕ್ತಿ ಇಲ್ಲ. ಹೀಗೆ ಶಕ್ತಿ ಭಿನ್ನವಾದರೂ ಅದು ಸಹಜವಾದುದರಿಂದ ಪ್ರಾಮಾಣ್ಯಂ ಸ್ವತಃ, ಅಪ್ರಾಮಾಣ್ಯಗ್ರಹಣ ಶಕ್ತಿಯು ಆಹಿತವಾದುದರಿಂದ 'ಅಪ್ರಾಮಾಣ್ಯಂ ಪರತಃ।'

ಸಾಕ್ಷಿಯಲ್ಲಿ ಜ್ಞಾನಗ್ರಹಣಶಕ್ತಿ ಮತ್ತು ಪ್ರಾಮಾಣ್ಯಗ್ರಹಣಶಕ್ತಿ ಎರಡೂ ಇದ್ದರೂ ಅಪ್ರಾಮಾಣ್ಯಶಂಕಾದಿ ಪ್ರತಿಬಂಧಕಗಳಿಂದಾಗಿ ಪ್ರಾಮಾಣ್ಯಗ್ರಹಣಶಕ್ತಿ ಮಾತ್ರ ಪ್ರತಿಬದ್ಧವಾಗುತ್ತದೆ, ಜ್ಞಾನಗ್ರಹಣಶಕ್ತಿಯು ಪ್ರತಿಬದ್ಧವಾಗುವುದಿಲ್ಲ. ವಹ್ನಿಯಲ್ಲಿ ದಾಹಶಕ್ತಿಯೂ ಇದೆ, ಪ್ರಕಾಶನ ಶಕ್ತಿಯೂ ಇದೆ. ಮಣಿ ಇದ್ದಾಗ ದಾಹಶಕ್ತಿ ಮಾತ್ರ ಪ್ರತಿಬದ್ಧವಾಗಿ ಪ್ರಕಾಶನಶಕ್ತಿ ಉಳಿದಿರುತ್ತದೆ. ಆವರಣ ಇದ್ದಾಗ ಪ್ರಕಾಶನಶಕ್ತಿ ಪ್ರತಿಬದ್ಧವಾಗಿ ದಾಹಶಕ್ತಿ ಉಳಿದಿರುತ್ತದೆ. ಹೀಗೆ ಒಂದೇ ವಸ್ತುವಿನಲ್ಲಿ ವಿಭಿನ್ನಶಕ್ತಿಗಳಿದ್ದು ಆ ಶಕ್ತಿಗಳಿಗೆ ಪ್ರತ್ಯೇಕವಾದ ಪ್ರತಿಬಂಧಕಗಳಿರುವುದು ಕಂಡಿದೆ. ಅದರಂತೆ ಪ್ರಕೃತದಲ್ಲಿ ಸಾಕ್ಷಿಗತವಾದ ಒಂದು ಶಕ್ತಿಯು ಮಾತ್ರ ಪ್ರತಿಬದ್ಧವಾಗುತ್ತದೆ.

ಅಥವಾ, ಜ್ಞಾನ–ಪ್ರಾಮಾಣ್ಯ ಉಭಯಗ್ರಹಣ ಶಕ್ತಿಯೂ ಒಂದೇ ಆದರೂ ಅಪ್ರಾಮಾಣ್ಯ ಸಂದೇಹವು ಆ ಶಕ್ತಿಗೆ ಪ್ರಾಮಾಣ್ಯಗ್ರಹಣಾಂಶದಲ್ಲಿ ಮಾತ್ರ ಪ್ರತಿಬಂಧಕವಾಗುತ್ತದೆ. ಇದಕ್ಕೂ ವಹ್ನಿಗತದಾಹಶಕ್ತಿಯೇ ಉದಾಹರಣೆ. ದಾಹಶಕ್ತಿಗೆ ಮಂತ್ರವು ಪ್ರತಿಬಂಧಕ. ನಿರ್ದಿಷ್ಟವ್ಯಕ್ತಿಗೆ ಮಾತ್ರ ಬೆಂಕಿ ಸುಡದಿರಲಿ, ಎಂದು ಸಂಕಲ್ಪ ಮಾಡಿ ಮಂತ್ರ ಪಠಿಸಿದಾಗ ಬೆಂಕಿಯಲ್ಲಿರುವ ದಾಹಶಕ್ತಿ ಅವನಿಗೆ ಮಾತ್ರ ಪ್ರತಿಬದ್ಧವಾಗುತ್ತದೆ. ಅದರಂತೆ ಪ್ರಕೃತಸಾಕ್ಷಿಗತ ಶಕ್ತಿಯು ಪ್ರಾಮಾಣ್ಯ ಗ್ರಹಣೆಯಲ್ಲಿ ಮಾತ್ರ ಪ್ರತಿಬದ್ಧವಾಗುತ್ತದೆ. ಜ್ಞಾನಗ್ರಹಣಾಂಶದಲ್ಲಿ ಅಪ್ರತಿಬದ್ಧವಾಗಿ ಇರುತ್ತದೆ.

ಹೀಗೆ ಶಕ್ತಿಭೇದ ಅಥವಾ ಅಭೇದ ಉಭಯಪಕ್ಷದಲ್ಲಿ ಪ್ರತಿಬಂಧಕಗಳಿದ್ದಾಗ ಪ್ರಾಮಾಣ್ಯ ಗ್ರಹಣೆ ಆಗದಿದ್ದರೂ ಸ್ವತಸ್ತ್ವಹಾನಿಯೂ ಇಲ್ಲ, ಪ್ರಾಮಾಣ್ಯಸಂದೇಹವೂ ಉಪಪನ್ನವಾಗುತ್ತದೆ.

## ನ್ಯಾಯದೀಪ

**ನತ್ವಪ್ರಾಮಾಣ್ಯಗ್ರಹಣಶಕ್ತಿರಿತಿ ॥ ಸಹಜೇತ್ಯನುಕರ್ಷಃ । ಕಿಂತು ದೋಷಾ-ಹಿತೇತ್ಯರ್ಥಃ । ಮಾ ದಹೇತೀತಿ ॥ 'ಅ ಮಾ ನೋ ನಾ ಪ್ರತಿಷೇಧೇ' ಇತಿ ನಿಷೇಧಾರ್ಥಕ ಮಾಶಬ್ದೋಽಯಮ್ । ನ ಮಾಙ್ । ತೇನ 'ಮಾಙಿ ಲುಙ್' ಇತ್ಯುಕ್ತ ಲುಙಭಾವಃ ಸಾಧುಃ।**

'ಮಾ ದಹ' ಎಂಬಲ್ಲಿ ಮಾ ಎಂಬುದು ನ ಎಂದಿರುವಂತೆ ನಿಷೇಧಾರ್ಥಕವಾದ ಒಂದು ಅವ್ಯಯ. ಅದು 'ಮಾಙ್' ಎಂಬ ಅವ್ಯಯವಲ್ಲ. ಹಾಗಿದ್ದಲ್ಲಿ 'ಮಾಙಾಲುಙ್' ಎಂಬ ನಿಯಮದಂತೆ ಲುಂಙ್‌ಲಕಾರ ಬರಬೇಕಿತ್ತು. 'ದಹ' ಎಂಬ ಲೋಟ್ ಬರಬಾರದು.

**नचैवं प्रतिबन्धकाभावरूपस्याधिकस्य हेतोरनुप्रवेशात् सिद्धसाधनम्। न्यायमतेऽप्रतिबद्धेनाप्यनुव्यवसायेन प्रामाण्याग्रहणात् ।**

**नाप्यपसिद्धान्तः। ''अप्रामाण्यग्रहणकारणाभावस्यापि प्रामाण्यग्र-हणोपयोगाङ्गीकारेऽपि न काचिदस्माकं हानिः'' इति टीकोक्तेः। ''प्रतिबन्धकाभावो न हेतुः'' इत्युत्पत्तिस्वतस्त्ववादे वक्ष्यमाण-त्वाच ।।**

ದೋಷಶಂಕಾದಿರೂಪ ಪ್ರತಿಬಂಧಕಗಳು ಇದ್ದಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದಾದರೆ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ಪ್ರತಿಬಂಧಕಗಳು ಇರಬಾರದು, ಎಂದಂತಾಯಿತು. ಇದರ ಅರ್ಥ, ಸಾಕ್ಷಿಗೆ ಪ್ರಾಮಾಣ್ಯಗ್ರಹಿಸಲು ದೋಷಾಭಾವದ ಸಹಾಯಬೇಕು, ಎಂದು. ಹೀಗೆ ಅಂಗೀಕರಿಸಿದಾಗ ಸಾಕ್ಷಿಗೆ ಪ್ರಾಮಾಣ್ಯಗ್ರಹಣೆ ಮಾಡಲು ಜ್ಞಾನಗ್ರಾಹಕ– ಅತಿರಿಕ್ತಸಾಮಗ್ರೀಸಾಪೇಕ್ಷತ್ವವು ಬಂದಂತಾಯಿತು. ಇದನ್ನು ತಾರ್ಕಿಕರೂ ಒಪ್ಪಿದ್ದಾರೆ. ಆದ್ದರಿಂದ ಸಿದ್ಧಸಾಧನತಾ ದೋಷ.

ಸಿದ್ಧಸಾಧನತಾ ಇಲ್ಲ. ದೋಷಾಭಾವ ಇದ್ದಾಗ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ತಾರ್ಕಿಕರು ಒಪ್ಪಿದ್ದರೆ ಸಿದ್ಧಸಾಧನತಾ ಬರುತ್ತಿತ್ತು. ಆದರೆ ತಾರ್ಕಿಕರು ಅಪ್ರತಿಬದ್ಧವಾದ ಅನುವ್ಯವಸಾಯವೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಎನ್ನುತ್ತಾರೆ. ಸಫಲ ಪ್ರವೃತ್ತಿಜನಕತ್ವ ಹೇತುವಿನಿಂದ ಪ್ರಾಮಾಣ್ಯವನ್ನು ಅನುಮಾನ ಮಾಡಬೇಕೆಂದೇ ಅವರ ಸಿದ್ಧಾಂತ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಇನ್ನು ಹೀಗೆ ಅಂಗೀಕರಿಸುವುದು ಸಿದ್ಧಾಂತ ಸಮ್ಮತವೇ? ಎಂದು ವಿಚಾರ ಮಾಡಬೇಕು. ಸಿದ್ಧಾಂತಕ್ಕೆ ಇದು ಅಸಮ್ಮತವಾದಲ್ಲಿ ಅಪಸಿದ್ಧಾಂತದೋಷ ಬರುತ್ತದೆ. ಈ ದೋಷವೂ ಇಲ್ಲ. ವಿಷ್ಣುತತ್ತ್ವನಿರ್ಣಯಟೀಕೆಯಲ್ಲಿ ಇದನ್ನು ಅಂಗೀಕರಿಸಲಾಗಿದೆ. ಅಲ್ಲಿರುವ ವಾಕ್ಯದ ಅಭಿಪ್ರಾಯ ಹೀಗೆ—ಸಾಕ್ಷಿಯು ಅಪ್ರಾಮಾಣ್ಯವನ್ನು ಗ್ರಹಿಸಲು ಕಾರಣ ದೋಷಗಳು. ದೋಷಾಭಾವವು ಪ್ರಾಮಾಣ್ಯಗ್ರಹಣೆಗೆ ಕಾರಣ. ಹೀಗೆ ಅಂಗೀಕಾರ ಮಾಡಿದರೂ ವೇದಾಪೌರುಷೇಯತ್ವಕ್ಕೇನೂ ಹಾನಿ ಇಲ್ಲ. ನೈಯಾಯಿಕರು ಹೇಳುವಂತೆ ಆಪ್ತೋಕ್ತತ್ವ–ಅನುಸಂಧಾನವು ಪ್ರಾಮಾಣ್ಯಗ್ರಹಣಕಾರಣ ಎಂದು ಹೇಳಿದರೆ ಮಾತ್ರ ವೇದಾಪೌರುಷೇಯತ್ವಕ್ಕೆ ತೊಂದರೆ ಬರುತ್ತದೆ. ದೋಷಾಭಾವವು ಕಾರಣವೆಂದರೆ ಈ ತೊಂದರೆ ಇಲ್ಲ. ವೇದವು ಅಪೌರುಷೇಯವಾದುದರಿಂದಲೇ ಪುರುಷದೋಷ ಪ್ರಯುಕ್ತ ದೋಷಗಳು ವೇದದಲ್ಲಿ ಇಲ್ಲ, ಎಂದು ಸಿದ್ಧವಾಗುವುದರಿಂದ ವೇದಜನಿತ ಜ್ಞಾನದಲ್ಲಿ ಪ್ರಾಮಾಣ್ಯಗ್ರಹಣೆ ಆಗುತ್ತದೆ, ಎಂದು. ತತ್ತ್ವನಿರ್ಣಯದ ಈ ವಾಕ್ಯದಿಂದ ದೋಷಾಭಾವವು ಪ್ರಾಮಾಣ್ಯಗ್ರಹಣೆಗೆ ಕಾರಣ, ಎಂದು ಸಿದ್ಧವಾಗುತ್ತದೆ.

ವಸ್ತುತಃ, ದೋಷಾಭಾವವು ಪ್ರಾಮಾಣ್ಯಗ್ರಹಣೆಗೆ ಕಾರಣವಲ್ಲ. ಅದು ಪ್ರತಿಬಂಧಕಾ ಭಾವರೂಪ. ಪ್ರತಿಬಂಧಕಾಭಾವವು ಕಾರ್ಯಕ್ಕೆ ಕಾರಣವೇ ಅಲ್ಲ, ಎಂದು ಮುಂದೆ ಇದೇ ಗ್ರಂಥದ ಪ್ರಾಮಾಣ್ಯೋತ್ಪತ್ತಿಸ್ವತಸ್ತ್ವವಾದದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**ನನು ತತ್ರ "ನ ಪ್ರಕೃತೇ ಕಾಚಿದಸ್ಮಾಕಂ ಹಾನಿಃ"[1] ಇತಿ ಹಿ ಪಾಠಃ। ತಥಾಚ, ಪ್ರಕೃತೇ=ವೇದಾಪೌರುಷೇಯತ್ವೇ, ಕಾಚಿತ್ ಹಾನಿಃ ನ, ಇತಿ ಅಭ್ಯುಪಗಮ-ವಾದೇನಾಪಿ ಉಪಪನ್ನಾ ಸಾ ಟೀಕೋಕ್ತಿಃ। ಏವಂ ಚ ಜ್ಞಾನಗ್ರಾಹಕ-ಹೇತ್ವತಿರಿಕ್ತಹೇತು–ಸಾಪೇಕ್ಷಗ್ರಾಹ್ಯತ್ವೇ ಕಥಂ ನ ಪ್ರಾಮಾಣ್ಯಸ್ಯ ಸ್ವತಸ್ತ್ವಹಾನಿಃ? ಇತ್ಯತಃ ತತ್ತ್ವನಿರ್ಣಯಟೀಕಾಸ್ಥಂ 'ನ ಹಿ ದಾಹಾಭಾವೇ ಏವ ವೇತ್ರಬೀಜಂ ವೇತ್ರಾಂಕುರಂ ಜನಯತಿ ಇತ್ಯೇತಾವತಾ ದಾಹಾಭಾವಃ ವೇತ್ರಾಂಕುರಸ್ಯ ಕಾರಣಂ ಭವತಿ। ಕಿಂತು ತತೋ ವಿಪರೀತಕಾರ್ಯಾನುತ್ಪಾದೇ ಸತಿ ವೇತ್ರಬೀಜಂ ಸ್ವಮಹಿಮ್ನೈವ ಅಂಕುರಂ ಕರೋತಿ। ಅನ್ಯಥಾ ಉತ್ಸರ್ಗಾಪವಾದೌ ಕ್ವಾಪಿ ನ ಸ್ಯಾತಾಮ್' ಇತಿ ಪೂರ್ವವಾಕ್ಯಂ[2] ಹೃದಿ ಕೃತ್ವಾ ಆಹ–ಪ್ರತಿಬಂಧಕೇತಿ ॥**

ಮೂಲದಲ್ಲಿ ಪ್ರತಿಬಂಧಕಾಭಾವವು ಕಾರಣ ಎಂದು ಮೊದಲು ಹೇಳಿ ಆಮೇಲೆ ಅದು

---

1. 'ದುಷ್ಟಬುದ್ಧೀ ನಾಮೇವ' ಎಂಬ ಮೂಲ ವ್ಯಾಖ್ಯಾನದ ಕೊನೆಯ ಟೀಕಾವಾಕ್ಯ.
2. 'ದುಷ್ಟಬುದ್ಧೀನಾಮೇವ' ಎಂಬ ಮೂಲವ್ಯಾಖ್ಯಾನಟೀಕಾ.

ಕಾರಣವಲ್ಲ ಎಂದೂ ಹೇಳಲಾಗಿದೆ. ಈ ಎರಡು ಪಕ್ಷಗಳಲ್ಲಿ ಟೀಕಾಸಮ್ಮತವಾದ ಪಕ್ಷ ಎರಡನೆಯದು ಮಾತ್ರ. ಮೊದಲನೆಯ ಪಕ್ಷ ಅಭ್ಯುಪಗಮವಾದ. ಏಕೆಂದರೆ, ದೋಷಾಭಾವವನ್ನು ಕಾರಣ, ಎಂದು ಹೇಳಿದರೂ ಪ್ರಕೃತದಲ್ಲಿ ನಮಗೇನೂ ಹಾನಿ ಇಲ್ಲ, ಎಂದು ತತ್ವನಿರ್ಣಯ ಟೀಕಾವಾಕ್ಯದ ಅರ್ಥ. ಅಲ್ಲಿ ಪ್ರಕೃತದಲ್ಲಿ ಎಂದರೆ ವೇದಾಪೌರುಷೇಯತ್ವ ವಿಷಯದಲ್ಲಿ, ಎಂದು ಅರ್ಥ. ಹೀಗೆ ವೇದಾಪೌರುಷೇಯತ್ವಕ್ಕೆ ತೊಂದರೆಯಾಗದಿರುವ ಕಾರಣ ಅದನ್ನು ಒಪ್ಪಿಕೊಳ್ಳಬಹುದು, ಎಂದಷ್ಟೇ ಟೀಕಾವಾಕ್ಯದ ಅಭಿಪ್ರಾಯ. ಆದರೆ, ಹಾಗೆ ಒಪ್ಪಿಕೊಂಡಾಗ ವೇದಾಪೌರುಷೇಯತ್ವಕ್ಕೆ ಬಾಧಕ ಇಲ್ಲದೇ ಹೋದರೂ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಹಾನಿ ಬರುತ್ತದೆ. ದೋಷಾಭಾವವು ಜ್ಞಾನಗ್ರಹಕ್ಕೆ ಕಾರಣವಲ್ಲ, ಪ್ರಾಮಾಣ್ಯಗ್ರಹಕ್ಕೆ ಕಾರಣ. ಆಗ ಪ್ರಾಮಾಣ್ಯಗ್ರಹವು ಜ್ಞಾನಗ್ರಾಹಕಾತಿರಿಕ್ತಕಾರಣ ಸಾಪೇಕ್ಷವಾಯಿತು. ಇದರಿಂದ ಸ್ವತಸ್ತ್ವಭಂಗವಾಗುತ್ತದೆ. ಅದಕ್ಕಾಗಿ ದೋಷಾಭಾವವು ಕಾರಣವೇ ಅಲ್ಲ, ಎನ್ನುವ ದ್ವಿತೀಯ ಪಕ್ಷವನ್ನು ಅವಲಂಬಿಸಲಾಗಿದೆ. ಅದು ವಿಷ್ಣುತತ್ವವಿನಿರ್ಣಯಟೀಕಾದ ಈ ವಾಕ್ಯಕ್ಕಿಂತ ಮೊದಲಿರುವ ವಾಕ್ಯದ ಅಭಿಪ್ರಾಯ–'ದಾವದಗ್ಧವಾದಾಗ ವೇತ್ರಬೀಜವು ಕದಲೀಕಾಂಡಕ್ಕೆ ಜನಕವಾಗುತ್ತದೆ. ಅದು ವೇತ್ರಾಂಕುರ ಜನಕವಾಗಬೇಕಾದರೆ ದಾವದಹನಾಭಾವ ಇರಬೇಕು. ತಾವತಾ ದಾವದಹನಾಭಾವವು ವೇತ್ರಾಂಕುರಕ್ಕೆ ಕಾರಣವಲ್ಲ. ದಾವದಗ್ಧವಾಗದಿದ್ದಾಗ ವೇತ್ರಬೀಜವು ತನ್ನ ಸಹಜ ಸಾಮರ್ಥ್ಯದಿಂದಲೇ ವೇತ್ರಾಂಕುರವನ್ನು ಹುಟ್ಟಿಸುತ್ತದೆ.' ಈ ವಾಕ್ಯದಿಂದ ದೋಷಾಭಾವವು ಪ್ರಾಮಾಣ್ಯಗ್ರಹಣೆಗೆ ಕಾರಣವಲ್ಲವೆಂದೇ ತಿಳಿಯುತ್ತದೆ.

ಪ್ರತಿಬಂಧಕಾಭಾವವನ್ನು ಕಾರಣ ಎಂದು ಪರಿಗಣಿಸಿದರೆ ಉತ್ಸರ್ಗಾಪವಾದವೇ ಇಲ್ಲವಾದೀತು. 'ಮಾ ಹಿಂಸ್ಯಾತ್ ಸರ್ವಾ ಭೂತಾನಿ–ಹಿಂಸೆಯು ಪಾಪಸಾಧನ' ಎನ್ನುವುದು ಉತ್ಸರ್ಗ. 'ಅಗ್ನೀಷೋಮೀಯಂ ಪಶುಮ್ ಆಲಭೇತ–ಯಾಗದ ಹಿಂಸೆ ಪುಣ್ಯಸಾಧನ'. ಇದು ಅಪವಾದ. ಇದನ್ನು ಹೀಗೆ ವಿಶ್ಲೇಷಿಸಬಹುದು. ಹಿಂಸೆಯು ಪಾಪಜನಕವಾಗಲು ಯಾಗಸಂಬಂಧವು ಪ್ರತಿಬಂಧಕ. ಆ ಪ್ರತಿಬಂಧಕವಿದ್ದಾಗ ಅದು ಪಾಪಸಾಧನವಾಗುವ ಬದಲು ಪುಣ್ಯಸಾಧನವಾಗುತ್ತದೆ. ಪ್ರತಿಬಂಧಕಾಭಾವವು ಕಾರ್ಯಹೇತುವಾದರೆ ಯಾಗಸಂಬಂಧಾಭಾವವೂ ಹಿಂಸೆಯಂತೆ ಪಾಪಕ್ಕೆ ಕಾರಣ ಎಂದಂತಾಗುತ್ತದೆ. ಆಗ ಯಾಗಸಂಬಂಧಾಭಾವವಿಶಿಷ್ಟ ಹಿಂಸೆ ಪಾಪಸಾಧನ ಎನ್ನಬೇಕಾಗುತ್ತದೆ. ಇದಕ್ಕೆ ಅಪವಾದವೇ ಇಲ್ಲ, ಆದ್ದರಿಂದ ಇದು ಉತ್ಸರ್ಗವಲ್ಲ. 'ಸಾಪವಾದ ನಿಯಮಃ ಉತ್ಸರ್ಗಃ'. ಹೀಗೆ ಉತ್ಸರ್ಗಾಪವಾದ ನಿಯಮವು ಭಂಗವಾಗುತ್ತದೆ. ಆದ್ದರಿಂದ ಪ್ರತಿಬಂಧಕಾಭಾವವು ಕಾರಣವಲ್ಲ ಎಂದೇ ಮೂಲದಲ್ಲಿ ಪಕ್ಷಾಂತರವನ್ನು ಅವಲಂಬಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಪ್ರತಿಬಂಧಕೇನ ಪ್ರಾಮಾಣ್ಯಾನಿಶ್ಚಯಮ್ ಉಪೇತ್ಯ ಸಂಶಯಮ್ ಉಪಪಾದ್ಯ ಕ್ವಚಿತ್ ಪ್ರಾಮಾಣ್ಯಾನಿಶ್ಚಯಮ್ ಉಪೇತ್ಯಾಪಿ ಸಂಶಯಮ್ ಉಪಪಾದಯತಿ–ಯತ್ರೇತಿ ॥**

ಹೀಗೆ ಪ್ರತಿಬಂಧಕ ಪ್ರಯುಕ್ತವಾಗಿ ಕೆಲವೊಮ್ಮೆ ಪ್ರಾಮಾಣ್ಯನಿಶ್ಚಯವು ಬರುವುದಿಲ್ಲ, ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯಸಂದೇಹವು ಬರುತ್ತದೆ ಎಂದು ಇದುವರೆಗೆ ಸ್ವತಸ್ತ್ವ-ಪಕ್ಷದಲ್ಲಿ ಸಂದೇಹವನ್ನು ಸಮರ್ಥಿಸಲಾಯಿತು. ಮುಂದೆ, ಪ್ರಾಮಾಣ್ಯನಿಶ್ಚಯ ಬಂದರೂ ಸಂದೇಹ ಬರಬಹುದು ಎಂದು ಸಮರ್ಥಿಸಲಾಗಿದೆ.

**ಯದ್ವಾ, ಅಸ್ತ್ವೇವಂ ಪ್ರಾಮಾಣ್ಯವಿರೋಧ್ಯುಪಸ್ಥಾಪಕಸಾಮಗ್ರೀಸಮವಧಾನ-ಸ್ಥಲೇ ಪ್ರಾಮಾಣ್ಯಾನಿಶ್ಚಯೇಽಪಿ ವಿವಕ್ಷಿತ-ಸ್ವತಸ್ತ್ವಾಹಾನ್ಯಾ ಸಂಶಯೋಪಪತ್ತಿಃ । ತತ್ಸಾಮಗ್ರೀಸಮವಧಾನಾತ್ ಪ್ರಾಕ್ಕಾಲೇ ತು ಕಥಮ್? ತತ್ರ ಪ್ರಾಮಾಣ್ಯಾ-ನಿಶ್ಚಯೇ ಸ್ವತಸ್ತ್ವಹಾನೇಃ । ಯಜ್ಜ್ಞಾನಂ ಯತ್ರ ಪ್ರತಿಬಂಧಕಂ ತತ್ಸಾಮಗ್ರ್ಯಪಿ ತತ್ರ ಪ್ರತಿಬಂಧಿಕಾ, ಇತ್ಯಸ್ಯ ಅಭಾವಾತ್ । ಪ್ರಾಮಾಣ್ಯನಿಶ್ಚಯೇ ವಾ ಉದೀರಿತ ಸಂದೇಹೋ ನ ಸ್ಯಾತ್, ಇತ್ಯತ ಆಹ-ಯತ್ರೇತಿ ॥**

ಅಥವಾ ಮುಂದಿನ ಗ್ರಂಥಕ್ಕೆ ಹೀಗೂ ಸಂಗತಿಯನ್ನು ಹೇಳಬಹುದು. ಹಿಂದೆ ಹೇಳಿದಂತೆ ಪ್ರಾಮಾಣ್ಯವಿರೋಧ್ಯುಪಸ್ಥಾಪಕವಾದ ದೋಷಶಂಕಾದಿ ಸಾಮಗ್ರಿಗಳಿದ್ದಾಗ ಸಾಕ್ಷಿಯಿಂದ ಜ್ಞಾನದ ಜ್ಞಾನ ಮಾತ್ರ ಬರುತ್ತದೆ, ಪ್ರಾಮಾಣ್ಯಜ್ಞಾನ ಬರುವುದಿಲ್ಲ. ಆದರೂ ಸ್ವತಸ್ತ್ವಹಾನಿ ಇಲ್ಲ. ವಿರೋಧಿ ಸಾಮಗ್ರಿಗಳು ಇಲ್ಲದಿರುವಾಗ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಇದೇ ಪ್ರಾಮಾಣ್ಯಸ್ವತಸ್ತ್ವ. ಇಂತಹ ಸ್ವತಸ್ತ್ವ ವಿರೋಧಿಸಾಮಗ್ರೀ ಇದ್ದಾಗ ಪ್ರಾಮಾಣ್ಯಗ್ರಹಣೆ ಆಗದಿದ್ದರೂ, ಹಾನಿಯಾಗುವುದಿಲ್ಲ. ಇದನ್ನು ಒಪ್ಪೋಣ.

ಆದರೆ ವಿರೋಧಿಜ್ಞಾನ ಸಾಮಗ್ರಿಯಾದ ದೋಷಸಂದೇಹ ಬರುವುದಕ್ಕೂ ಮೊದಲು ಸಾಕ್ಷಿಯು ಜ್ಞಾನವನ್ನು ಗ್ರಹಿಸಿರುವುದರಿಂದ ಆಗ ಪ್ರಾಮಾಣ್ಯವು ಗೃಹೀತವಾಗಿದೆಯೋ, ಇಲ್ಲವೋ? ಗೃಹೀತವಾಗಿಲ್ಲವಾದರೆ ಸ್ವತಸ್ತ್ವಹಾನಿ. ಏಕೆಂದರೆ, ಆ ಕಾಲದಲ್ಲಿ ವಿರೋಧಿ ಸಾಮಗ್ರ್ಯ ಸಮವಹಿತ-ಜ್ಞಾನಗ್ರಾಹಕ ಇದೆ. ಪ್ರಾಮಾಣ್ಯಗ್ರಹವು ಇಲ್ಲದಿದ್ದರೆ ಸ್ವತಸ್ತ್ವಹಾನಿಯಾದಂತೆ. ಪ್ರಾಮಾಣ್ಯ ಜ್ಞಾನವೂ ಇದೆ ಎಂದಾದರೆ ಮುಂದೆ ಪ್ರಾಮಾಣ್ಯಸಂದೇಹ ಬರಬಾರದು.

ದೋಷಸಂದೇಹ ರೂಪವಾದ ಪ್ರತಿಬಂಧಕವು ಇಲ್ಲದಿದ್ದರೂ ಆ ಸಂದೇಹಕ್ಕೆ ಕಾರಣವಾದ ಸಾಮಗ್ರೀಗಳಿವೆ. ಆದರಿಂದಾಗಿ ಸಾಕ್ಷಿಯು ಪ್ರತಿಬದ್ಧವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎನ್ನುವುದು ಸರಿಯಲ್ಲ. ಯಾವ ಜ್ಞಾನವು ಯಾವುದಕ್ಕೆ ಪ್ರತಿಬಂಧಕವೋ ಆ ಜ್ಞಾನದ ಸಾಮಗ್ರೀಯೂ ಅದಕ್ಕೆ ಪ್ರತಿಬಂಧಕವಾಗುತ್ತದೆ, ಎಂಬ ನಿಯಮವೇನಿಲ್ಲ. ಉದಾಹರಣೆಗೆ-'ಹ್ರದಃ ವಹ್ನಿಮಾನ್' ಎಂಬ ಅನುಮಿತಿಗೆ 'ಹ್ರದಃ ನ ವಹ್ನಿಮಾನ್' ಎಂಬ ಪ್ರತ್ಯಕ್ಷವು ಪ್ರತಿಬಂಧಕ. ಆದರೆ ಆ ಪ್ರತ್ಯಕ್ಷಸಾಮಗ್ರಿಗಳಾದ ಚಕ್ಷುಃಸನ್ನಿಕರ್ಷಾದಿಘಟಿತಸಾಮಗ್ರಿಯು ಅನುಮಿತಿ ಪ್ರತಿಬಂಧಕವಲ್ಲ. ಹೀಗೆ ಪ್ರತಿಬಂಧಕವಿಲ್ಲದಿರುವುದರಿಂದ ಪ್ರಾಮಾಣ್ಯದ ಗ್ರಹ ಆಗಲೇ ಬೇಕು. ಆಗದಿದ್ದರೆ ಸ್ವತಸ್ತ್ವಹಾನಿ ಅನಿವಾರ್ಯ.

ಈ ಆಕ್ಷೇಪದ ಪರಿಹಾರವನ್ನು ಮುಂದಿನ ಮೂಲವಾಕ್ಯದಲ್ಲಿ ಮಾಡಲಾಗಿದೆ.

**यत्र पूर्वं दोषशङ्कादेरभावेऽपि कारणान्तरोपनिपातात् पश्चात् तत्संशयस्तत्र पूर्वं प्रामाण्यं निश्चीयत एव । तदा प्रतिबन्धकाभावात्।**

ಯಾವ ಸಂದರ್ಭದಲ್ಲಿ ಪ್ರಾಮಾಣ್ಯನಿಶ್ಚಯಕ್ಕೆ ಪ್ರತಿಬಂಧಕವಾದ ದೋಷಶಂಕಾದಿಗಳು ಇರುವುದಿಲ್ಲವೋ ಅಂತಹ ಸಂದರ್ಭದಲ್ಲಿ ಅನುವ್ಯವಸಾಯ ಬಂದು ಅನಂತರ ಕಾರಣಾಂತರ ಗಳಿಂದ ಪ್ರಾಮಾಣ್ಯ ಸಂದೇಹ ಬಂದರೆ ಅಲ್ಲಿ ಸಂದೇಹಕ್ಕೆ ಪೂರ್ವದಲ್ಲಿ ಪ್ರಾಮಾಣ್ಯನಿಶ್ಚಯವು ಮನಸ್ಸಿನಿಂದ ಬಂದೇ ಬರುತ್ತದೆ. ಏಕೆಂದರೆ, ಆಗ ಪ್ರಾಮಾಣ್ಯನಿಶ್ಚಯವಾಗದಿರಲು ಪ್ರತಿಬಂಧಕಗಳು ಯಾವುವೂ ಇಲ್ಲ.

ಹಾಗಾದರೆ, ಪ್ರಾಮಾಣ್ಯಸಂದೇಹ ಹೇಗೆ? ಹೀಗೆ ಬಂದಿರುವ ಪ್ರಾಮಾಣ್ಯನಿಶ್ಚಯವು ನಾಶವಾದ ಮೇಲೆ ಸಂದೇಹ ಬರುತ್ತದೆ. ಅಥವಾ, ಪ್ರಾಮಾಣ್ಯನಿಶ್ಚಯದಲ್ಲಿ ಪ್ರಾಮಾಣ್ಯಸಂದೇಹ ಬಂದು ವ್ಯವಸಾಯದಲ್ಲಿ ಆಹಿತ–ಪ್ರಾಮಾಣ್ಯಸಂದೇಹ ಬರಬಹುದು.

## ನ್ಯಾಯದೀಪ

**ನಿಶ್ಚೀಯತೇ ಏವೇತಿ ॥ ಮನಸೇತಿ ಭಾವಃ। ನ ತು ಸಾಕ್ಷಿಣಾ। ತಸ್ಯ ದೃಢನಿರ್ಣಯತ್ವಾತ್ ।**

**ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ ಸಾಕ್ಷಿದರ್ಶನಮ್ । ಇತಿ ॥**

**ಮಾನಸೇ ದರ್ಶನೇ ದೋಷಾಃ, ನೈವ ಸ್ಯುಸ್ಸಾಕ್ಷಿದರ್ಶನೇ ।**

**ಯತ್ ಕ್ವಚಿದ್ ವ್ಯಭಿಚಾರಿ ಸ್ಯಾದ್ ದರ್ಶನಂ ಮಾನಸಂ ಹಿ ತತ್ ।**

**ಇತಿ ಚ ಜ್ಞಾನಪಾದೀಯಾನುವ್ಯಾಖ್ಯಾನೋಕ್ತೇಃ ಇತಿ ಜ್ಞೇಯಮ್ ।**

ಮೂಲದಲ್ಲಿ, ಸಂದರ್ಭವಿಶೇಷದಲ್ಲಿ ಪ್ರಾಮಾಣ್ಯನಿಶ್ಚಯವು ಬರುತ್ತದೆ, ಎನ್ನಲಾಗಿದೆ. ಆ ಪ್ರಾಮಾಣ್ಯನಿಶ್ಚಯ ಮನಸ್ಸಿನಿಂದ ಬರುತ್ತದೆ, ಸಾಕ್ಷಿಯಿಂದಲ್ಲ, ಎಂದು ತಿಳಿಯಬೇಕು. ಏಕೆಂದರೆ ಮುಂದೆ ಪ್ರಾಮಾಣ್ಯದ ಸಂದೇಹ ಬರುವುದರಿಂದ ಮೊದಲು ಬಂದ ಪ್ರಾಮಾಣ್ಯನಿಶ್ಚಯವು ಸಂದೇಹವಿರೋಧಿಯಾದ ದೃಢನಿರ್ಣಯವಲ್ಲ. ದೃಢನಿರ್ಣಯ ಮಾತ್ರ ಸಾಕ್ಷಿಯಿಂದ ಬರುತ್ತದೆ. ಹೀಗಾಗಿ ಆ ನಿರ್ಣಯ ಮಾನಸ. ಈ ವಿಷಯವು ಅನುವ್ಯಾಖ್ಯಾನದ ಜ್ಞಾನಪಾದದಲ್ಲಿ (3–4–6) ಬಂದಿದೆ.

## ಮಣಿಗ್ರಂಥ ವಿಮರ್ಶೆ

**ಏತೇನ, ಯದುಕ್ತಂ ಮಣೌ (ಪು.198) 'ನಿಶ್ಚಿತೇಽಪಿ ಪ್ರಾಮಾಣ್ಯೇ ದೋಷಾಂತರಾತ್ ತತ್ರ ಸಂಶಯಃ, ಇತಿ ಚೇನ್ನ। ಪ್ರವೃತ್ತಿ ಪ್ರಸಂಗಾತ್ ।' ಇತಿ, ತನ್ನಿರಸ್ತಮ್ । ಪ್ರಾಮಾಣ್ಯನಿಶ್ಚಯಕಾಲೇ ಅಪ್ರತಿಬಂಧಾತ್ ಇಷ್ಟಾಪತ್ತೇಃ, ಪಶ್ಚಾತ್ತು ತಸ್ಯ ನಾಶಾತ್, ಪ್ರತಿಬಂಧಾಚ್ಚ ಅಪ್ರವೃತ್ತ್ಯುಪಪತ್ತೇಃ ।**

ಪ್ರಕೃತ ವಿಷಯದ ಮೇಲೆ ಚಿಂತಾಮಣಿ ಗ್ರಂಥದಲ್ಲಿ ಹೀಗೆ ಆಕ್ಷೇಪ ಮಾಡಲಾಗಿದೆ– 'ದೋಷಶಂಕಾರೂಪ ಪ್ರತಿಬಂಧಕಗಳು ಇಲ್ಲದಿರುವಾಗ ಅನುವ್ಯವಸಾಯದಿಂದ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ, ಆಮೇಲೆ ದೋಷವಶಾತ್ ಸಂದೇಹ ಬರುತ್ತದೆ, ಎನ್ನುವುದೂ ಸರಿಯಲ್ಲ. ಸಂದೇಹಕ್ಕಿಂತ ಮೊದಲು ಜಲಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಿದ್ದರೆ ಜಲಾರ್ಥಿಯು ಪ್ರವೃತ್ತಿಮಾಡಬೇಕಾದೀತು' ಇದು ಮಣಿಗ್ರಂಥದ ಆಕ್ಷೇಪ.

ಈ ಆಕ್ಷೇಪವು ಸರಿಯಲ್ಲ. ಪ್ರವೃತ್ತಿಯಾಗಲಿ, ಎನ್ನುವ ಆಪಾದನೆ ಯಾವಾಗ? ಪ್ರಾಮಾಣ್ಯ ನಿಶ್ಚಯಕಾಲದಲ್ಲೋ, ಆಮೇಲೋ? ನಿಶ್ಚಯಕಾಲದಲ್ಲಿ ಪ್ರವೃತ್ತಿಗೆ ಬೇಕಾದ ಎಲ್ಲ ಕಾರಣಗಳೂ ಇರುವುದರಿಂದ ಪ್ರವೃತ್ತಿ ಆಗಿಯೇ ಆಗುತ್ತದೆ, ಇಷ್ಟಾಪತ್ತಿ. ಆಮೇಲೆ (ಸಂದೇಹ ಬಂದಾಗ) ಪ್ರವೃತ್ತಿಗೆ ಕಾರಣವಾದ ಪ್ರಾಮಾಣ್ಯನಿಶ್ಚಯವು ನಾಶವಾಗಿರುವುದರಿಂದ ಕಾರಣಾಭಾವಾತ್ ಪ್ರವೃತ್ತಿಯಾಗುವುದಿಲ್ಲ. ಅಲ್ಲದೆ, ಆಗ ಬಂದಿರುವ ಪ್ರಾಮಾಣ್ಯಸಂದೇಹವು ಪ್ರವೃತ್ತಿಗೆ ಪ್ರತಿಬಂಧಕ ವಾಗುವುದರಿಂದ ಪ್ರವೃತ್ತಿಯಾಗುವುದಿಲ್ಲ. ಆದ್ದರಿಂದ ಮಣಿಕಾರನ ಆಕ್ಷೇಪ ಸರಿಯಲ್ಲ.

## ಪ್ರಾಮಾಣ್ಯಸಂದೇಹ ಹೇಗೆ?

**ಏತೇನ ಪ್ರಾಮಾಣ್ಯನಿಶ್ಚಯೇ ಜಾಗ್ರತಿ ಕಥಂ ಸಂದೇಹಃ ಇತಿ ನಿರಸ್ತಮ್ । ಉತ್ತರಕಾಲೇ ತಸ್ಯ ನಾಶಾತ್ । ಪ್ರಾಮಾಣ್ಯನಿಶ್ಚಯೇ ಪ್ರಾಮಾಣ್ಯ-ಸಂದೇಹಾತ್ ಸಂಶಯೋಪಪತ್ತೇಶ್ಚ ।**

ಪ್ರಾಮಾಣ್ಯನಿಶ್ಚಯವು ನಾಶವಾಗುತ್ತದೆ ಎಂದು ಹೇಳಿರುವುದರಿಂದ ಇನ್ನೊಂದು ಆಕ್ಷೇಪಕ್ಕೂ ಉತ್ತರ ಸಿಗುತ್ತದೆ–ಮೊದಲು ಪ್ರಾಮಾಣ್ಯನಿಶ್ಚಯವಾದರೆ ಆಮೇಲೆ ಪ್ರಾಮಾಣ್ಯಸಂದೇಹ ಬರುವುದು ಹೇಗೆ? ನಿಶ್ಚಯವು ಸಂದೇಹಕ್ಕೆ ಪ್ರತಿಬಂಧಕವಲ್ಲವೇ? ಈ ಆಕ್ಷೇಪಕ್ಕೂ ಅವಕಾಶವಿಲ್ಲ. ಪ್ರಾಮಾಣ್ಯನಿಶ್ಚಯವು ನಾಶವಾದ ಮೇಲೆ ಸಂದೇಹ ಬರಬಹುದು. ಅಥವಾ, ಆ ಪ್ರಾಮಾಣ್ಯನಿಶ್ಚಯದಲ್ಲಿ ಪ್ರಾಮಾಣ್ಯ ಸಂದೇಹ ಬಂದು ಅದರಿಂದಾಗಿ, ವ್ಯವಸಾಯವು ಪ್ರಾಮಾಣ ಹೌದೋ ಅಲ್ಲವೋ? ಎಂದು ಸಂದೇಹ ಬರಬಹುದು.

## ಮಣಿಗ್ರಂಥ ವಿಮರ್ಶೆ

**ಯತ್ತು ''ನ ಚ ಪ್ರಾಮಾಣ್ಯಸಂಶಯಾತ್ ವಿಷಯಸಂಶಯವತ್ ಪ್ರಾಮಾಣ್ಯ-ಜ್ಞಾನೇ ಪ್ರಾಮಾಣ್ಯಸಂಶಯಾತ್ ಪ್ರಾಮಾಣ್ಯಸಂಶಯಃ ಇತಿ ವಾಚ್ಯಮ್। ಪ್ರಾಮಾಣ್ಯಜ್ಞಾನೇಽಪಿ ಸ್ವತಃ ಪ್ರಾಮಾಣ್ಯಗ್ರಹೇ ಸಂಶಯಾನುಪಪತ್ತೇಃ'' (ಪು.201) ಇತಿ ಮಣಿವಚನಮ್ ತದಪಿ ಏತೇನೈವ ನಿರಸ್ತಮ್ ಬೋಧ್ಯಮ್। ದೋಷೋಪನಿಪಾತಸ್ಥಲೇ ಮಾನಸಪ್ರಾಮಾಣ್ಯನಿಶ್ಚಯೇ ದೋಷವಶೇನ ಪ್ರಾಮಾಣ್ಯಾನಿಶ್ಚಯೇ ತತ್ಸಂಶಯೋಪಪತ್ತೇಃ, ಇತಿ ॥**

ಮಣಿಗ್ರಂಥದಲ್ಲಿ ಹಿಂದೆ ಹೇಳಿದ ಆಪಿತ ಸಂದೇಹವನ್ನು ನಿರಾಕರಿಸಲಾಗಿದೆ.-''ಇದಂ ಜಲಂ ಇತಿ ಜ್ಞಾನಂ ಪ್ರಮಾಣಂ ನವಾ, ಎಂದು ಪ್ರಾಮಾಣ್ಯಸಂದೇಹದಿಂದ 'ಇದಂ ಜಲಂ ನ ವಾ'' ಎಂಬ ವಿಷಯ ಸಂದೇಹವು ಬರುತ್ತದೆ. ಅದರಂತೆ, 'ಜಲಜ್ಞಾನಂ ಪ್ರಮಾಣಂ' ಎಂಬ ಪ್ರಾಮಾಣ್ಯ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹದಿಂದ 'ಜಲಜ್ಞಾನಂ ಪ್ರಮಾಣಂ ನ ವಾ' ಎಂಬ ಸಂದೇಹವು ಬರುತ್ತದೆ, ಹೀಗೆ ಹೇಳುವುದೂ ಸರಿಯಲ್ಲ. ಏಕೆಂದರೆ 'ಜಲಜ್ಞಾನಂ ಪ್ರಮಾಣಂ' ಎಂಬ ಜ್ಞಾನದ ಪ್ರಾಮಾಣ್ಯವೂ ಸ್ವತಸ್ತ್ವಪಕ್ಷದಲ್ಲಿ ಗೃಹೀತವಾದುದರಿಂದ ಅದರಲ್ಲೇ ಸಂದೇಹವು ಬರಲು ಸಾಧ್ಯವಿಲ್ಲ. ಅಂದಮೇಲೆ ಆ ಸಂದೇಹಪ್ರಯುಕ್ತವಾಗಿ ಜಲಜ್ಞಾನದಲ್ಲೂ ಪ್ರಾಮಾಣ್ಯ ಸಂದೇಹ ಬರಲು ಆಸ್ಪದವಿಲ್ಲ.''

ಇದು ಮಣಿಕಾರ ಮಾಡಿದ ಖಂಡನೆ. ಈ ಖಂಡನೆಯೂ ಸರಿಯಲ್ಲ. ಈ ಹಿಂದೆ ತಿಳಿಸಿದಂತೆ ಸ್ವತಸ್ತ್ವವಾದದಲ್ಲಿ ಸರ್ವತ್ರ ಪ್ರಾಮಾಣ್ಯವು ಗೃಹೀತವಾಗಿಯೇ ತೀರುತ್ತದೆ ಎಂಬ ನಿರ್ಬಂಧವಿಲ್ಲ. ದೋಷವಶಾತ್ ಕೆಲವೊಮ್ಮೆ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹ ಬಂದು ತನ್ನಿಮಿತ್ತವಾಗಿ ಜಲಜ್ಞಾನ ಪ್ರಾಮಾಣ್ಯದಲ್ಲಿ ಸಂದೇಹವು ಬರಬಹುದು. ಆದ್ದರಿಂದ ಮಣಿಕಾರನ ಖಂಡನೆ ಸರಿಯಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ-ಧರ್ಮಿಜ್ಞಾನ ಸಂದೇಹಕ್ಕೆ ಕಾರಣವಲ್ಲ

**ಏವಂ ವಾಸ್ತವಂ ಮೂಲಗ್ರಂಥಾದ್ಯುಕ್ತಂ ಸಂಶಯೋಪಪಾದನಂ ಪ್ರದರ್ಶ್ಯ, ಅಧುನಾ, ಯದುಕ್ತಂ ಮಣೌ 'ಧರ್ಮಿಜ್ಞಾನಂ ಚ ಸಂಶಯಹೇತುಃ। ಅನ್ಯಥಾ ಸಂಶಯೇ ಧರ್ಮಿನಿಯಮಃ ಕೋಟ್ಯುತ್ಕಟತ್ವಂ ಚ ನ ಸ್ಯಾತ್'' ಇತಿ ಗ್ರಂಥೇನ (ಪು.192) ಧರ್ಮಿಜ್ಞಾನಾಭಾವೇನ ಸಂಶಯಾಭಾವೋಪಪಾದನದೂಷಣಂ, ತದಪಿ ನ, ಇತಿ ಭಾವೇನ ಪ್ರೌಢ್ಯಾ ಸಮಾಧಿದ್ವಯಂ ಅನ್ಯಾಪದೇಶೇನ ಆಹ-ಕೇಚಿತ್ತು ಇತ್ಯಾದಿನಾ ॥**

ಹೀಗೆ ಪ್ರಾಮಾಣ್ಯಸ್ವತಸ್ತ್ವಪಕ್ಷದಲ್ಲಿ ಕೆಲವೊಮ್ಮೆ ಪ್ರತಿಬಂಧಕವಶಾತ್ ಪ್ರಾಮಾಣ್ಯವು ಗೃಹೀತವಾಗದಿರುವುದರಿಂದ ಪ್ರಾಮಾಣ್ಯಸಂದೇಹವು ಬರುತ್ತದೆ, ಎಂದು ಇದುವರೆಗೆ ಮೂಲದಲ್ಲಿ ಸಮರ್ಥಿಸಲಾಗಿದೆ. ಇದು ಭಾಷ್ಯಟೀಕಾದಿ ಮೂಲಗ್ರಂಥದಲ್ಲಿ ಹೇಳಿರುವ ವಾಸ್ತವ ಸಮಾಧಾನ. ಮುಂದಿನ ಗ್ರಂಥದಲ್ಲಿ ಇನ್ನೊಂದು ರೀತಿಯಿಂದ ಸಂದೇಹವನ್ನು ಸಮರ್ಥಿಸಲಾಗಿದೆ– ಅನುವ್ಯವಸಾಯವು ಜ್ಞಾನವನ್ನು ಗ್ರಹಿಸುವಾಗಲೇ ಅದರಲ್ಲಿ ಪ್ರಾಮಾಣ್ಯನಿಶ್ಚಯವನ್ನು ಮಾಡುವ ಬದಲು ಪ್ರಾಮಾಣ್ಯಸಂದೇಹಾಸ್ಕಂದಿತವಾಗಿಯೇ ವ್ಯವಸಾಯವನ್ನು ಗ್ರಹಿಸುತ್ತದೆ, ಎಂದು. ಆದರೆ ಇದಕ್ಕೆ ಮಣಿಕಾರನ ಆಕ್ಷೇಪವಿದೆ–ಸಂದೇಹಕ್ಕೆ ಧರ್ಮಿಜ್ಞಾನವೂ ಕಾರಣ. ಕೋಟಿಸ್ಮರಣಾದಿಗಳು ಮಾತ್ರ ಕಾರಣ, ಧರ್ಮಿಜ್ಞಾನವು ಕಾರಣವಲ್ಲ ಎಂದರೆ ಸಂದೇಹದಲ್ಲಿ ಧರ್ಮಿನಿಯಮ ಇರಲು ಸಾಧುವಲ್ಲ. ನಿರ್ದಿಷ್ಟವಾದ ಸಂದೇಹದಲ್ಲಿ ನಿರ್ದಿಷ್ಟವಾದ ಧರ್ಮಿಯೇ ವಿಷಯವಾಗಿರುತ್ತದೆ. ಧರ್ಮಿಜ್ಞಾನವು ಕಾರಣವಾದರೆ ಅದರಲ್ಲಿ ಯಾವುದು ವಿಷಯವೋ ಅದೇ ಸಂದೇಹದಲ್ಲಿ ಧರ್ಮಿ ಎಂದು ನಿರ್ಧರಿಸಲು ಬರುತ್ತದೆ. ಅದು ಕಾರಣವಲ್ಲವೆಂದಾಗ ಸಂದೇಹದಲ್ಲಿ ಯಾವುದು ಧರ್ಮಿ ಎನ್ನಲು ನಿಯಾಮಕ ಇಲ್ಲವಾಗುತ್ತದೆ. ಆದ್ದರಿಂದ ಧರ್ಮಿಜ್ಞಾನವು ಸಂದೇಹ ಕಾರಣ.

ಇನ್ನೊಂದು ಕಾರಣವಿದೆ–ಕೆಲವೊಮ್ಮೆ ಸಂಶಯದ ಒಂದು ಕೋಟಿಯು ಉತ್ಕಟವಾಗಿರುತ್ತದೆ. ಉದಾಹರಣೆಗೆ 'ಇದು ಮನುಷ್ಯನಾಗಿರಬೇಕು' ಎಂಬ ಸಂದೇಹ. 'ಮನುಷ್ಯನೋ ಕಂಬವೋ' ಎಂಬ ಸಂದೇಹದಲ್ಲಿ ಎರಡೂ ಕೋಟಿಗಳಿಗೆ ಸಮಾನತೆ ಇದ್ದರೆ ಈ ಸಂದೇಹದಲ್ಲಿ ಒಂದು ಕೋಟಿ ಉತ್ಕಟವಾಗಿದೆ. ಅಂದರೆ, ಪುರೋವರ್ತಿವಸ್ತುವಿನಲ್ಲಿ ಮನುಷ್ಯನಿಗೆ ಸಂಬಂಧಿಸಿದ ಅನೇಕ ಧರ್ಮಗಳು ಕಂಡಿವೆ, ಅಥವಾ ಮನುಷ್ಯತ್ವದೊಂದಿಗೆ ಅನೇಕಬಾರಿ ಸಹಚರಿತವಾಗಿ ಕಂಡ ಧರ್ಮವಿಶೇಷವು ಪುರೋವರ್ತಿಯಲ್ಲಿ ಕಾಣುತ್ತಿರುವಾಗ 'ಬಹುಶಃ ಮನುಷ್ಯನಾಗಿರಬೇಕು, ಎಂಬ ಸಂದೇಹ ಬರುತ್ತದೆ. ಇಂತಹ ಉತ್ಕಟಕೋಟಿಕ ಸಂದೇಹವನ್ನು ನಿರೂಪಿಸಬೇಕಾದರೆ ಧರ್ಮಿಜ್ಞಾನವನ್ನು ಕಾರಣ ಎಂದು ಹೇಳಲೇಬೇಕಾಗುವುದು.

ಹೀಗೆ ಈ ಎರಡು ಕಾರಣಗಳನ್ನು ಕೊಟ್ಟು ಮಣಿಕಾರ ಧರ್ಮಿಜ್ಞಾನವು ಸಂದೇಹಕ್ಕೆ ಕಾರಣ ಎಂದು ಸಮರ್ಥಿಸಿದ್ದಾನೆ. ಹೀಗೆ ಸಮರ್ಥಿಸಿ, (ಪ್ರಾಮಾಣ್ಯಸ್ವತಸ್ತ್ವ ಪಕ್ಷದಲ್ಲಿ) ಪ್ರಾಮಾಣ್ಯ ಸಂದೇಹದ ಧರ್ಮಿಯಾದ ವ್ಯವಸಾಯವು ಅನುವ್ಯವಸಾಯದಿಂದ ಗೃಹೀತವಾದರೆ ಮಾತ್ರ ಸಂದೇಹ ಬರಲು ಸಾಧ್ಯ. ವ್ಯವಸಾಯವು ಗೃಹೀತವಾದರೆ ಪ್ರಾಮಾಣ್ಯವೂ ಗೃಹೀತವಾದುದರಿಂದ ಸಂದೇಹಕ್ಕೆ ಆಸ್ಪದವೇ ಇಲ್ಲ, ಹೀಗೆ ಆಕ್ಷೇಪಿಸಿದ್ದಾನೆ.

ಈ ಪಕ್ಷದಲ್ಲಿ ಪ್ರಥಮಾನುವ್ಯವಸಾಯವೇ ಸಂದೇಹಾತ್ಮಕವಾಗಿ ಬರುತ್ತದೆ, ಎನ್ನಲಾಗದು. ಏಕೆಂದರೆ, ಅದಕ್ಕಿಂತ ಪೂರ್ವದಲ್ಲಿ ವ್ಯವಸಾಯಾತ್ಮಕ ಧರ್ಮಿಯ ಜ್ಞಾನವಿಲ್ಲ. ಅದಕ್ಕಾಗಿ ಮಣಿಕಾರನ ಅಭಿಪ್ರಾಯವನ್ನು ಮೂಲದಲ್ಲಿ 'ಕೇಚಿತ್ತು' ಎಂದು ಅನ್ಯಾಪದೇಶೇನ ಖಂಡನೆ ಮಾಡಿ ಪ್ರೌಢಿವಾದದಿಂದ (ಇದು ಸ್ವಪಕ್ಷವಲ್ಲ) ಸಂದೇಹವನ್ನು ಸಮರ್ಥಿಸಲಾಗಿದೆ.

**केचित्तु, धर्मिज्ञानस्य संशयाहेतुत्वात् संशयरूप एवानुव्यवसाय उत्पद्यते । धर्मिज्ञानस्याहेतुत्वेऽपि संशये धर्मिनियमो धर्मिज्ञान-जनकनियमादेव युक्तः। कोट्युत्कटत्वे तु कोटेर्धर्म्यसंस्पृष्टत्वेना-ज्ञातोर्ध्वत्वादिसाधारणधर्मेण भूयस्साहचर्यदर्शनमेव हेतुः। न तु संशयधर्मिनिष्ठत्वेन ज्ञातसाधारणधर्मेण भूयस्साहचर्यदर्शनम् । गौरवात् । ऊर्ध्वतादिसाधारणधर्मज्ञानं त्वनियतादृष्टादिहेतुजन्य-स्मृतिरूपमित्याहुः ।**

ಕೆಲವರು ಪ್ರಾಮಾಣ್ಯಸಂದೇಹವನ್ನು ಹೀಗೆ ಸಮರ್ಥಿಸುತ್ತಾರೆ. ಸಂಶಯಕ್ಕೆ ಧರ್ಮಿಜ್ಞಾನವು ಕಾರಣವಲ್ಲ. ಆದ್ದರಿಂದ 'ಜಲಜ್ಞಾನಂ ಪ್ರಮಾಣಂ ನವಾ' ಎಂಬ ಸಂದೇಹದಲ್ಲಿ ಧರ್ಮಿಯಾದ ಜಲಜ್ಞಾನದ ಜ್ಞಾನ ಸಂಶಯಕ್ಕಿಂತ ಪೂರ್ವದಲ್ಲಿ ಇರಬೇಕಾಗಿಲ್ಲ. ಅದು ಇರುವುದು ಅನಿವಾರ್ಯವಾದರೆ ಮಾತ್ರ ಅದರ ಜ್ಞಾನ ಬಂದಾಗ ಅದರಲ್ಲಿ ಪ್ರಾಮಾಣ್ಯವೂ ಗೃಹೀತವಾಗಿ ಸಂಶಯಾನುಪಪತ್ತಿ ಸಮಸ್ಯೆ ಬರುತ್ತದೆ. ಅದರ ಜ್ಞಾನ ಅಗತ್ಯವಿಲ್ಲವಾದುದರಿಂದ ಜಲಜ್ಞಾನ ಬಂದ ಮುಂದಿನ ಕ್ಷಣದಲ್ಲಿ ಹುಟ್ಟುವ ಅನುವ್ಯವಸಾಯವೇ ಮಾನಸ ಪ್ರಾಮಾಣ್ಯಸಂದೇಹಾತ್ಮಕವಾಗಿ ಹುಟ್ಟುತ್ತದೆ. ಹೀಗಾಗಿ ಪ್ರಾಮಾಣ್ಯಸ್ವತಸ್ತ್ವವಾದದಲ್ಲಿ ಸಂದೇಹಾನುತ್ಪಾದ ದೋಷ ಇಲ್ಲ.

ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲದೇ ಹೋದರೆ ಸಂದೇಹದಲ್ಲಿ ಧರ್ಮಿನಿಯಮ ಅಂದರೆ, ಇದೇ ಧರ್ಮಿ, ಇದಲ್ಲ ಎಂಬ ನಿಯಮ ಹೇಗೆ? ಅದಕ್ಕುತ್ತರ ಹೀಗೆ— ಎಲ್ಲ ಸಂದೇಹದಲ್ಲಿಯೂ ಧರ್ಮಿಯೊಂದು ವಿಷಯವಾಗಿರುತ್ತದೆ. ಆ ಧರ್ಮಿಯು ತೋರಬೇಕಾದರೆ ಅದರೊಂದಿಗೆ ಇಂದ್ರಿಯ ಸನ್ನಿಕರ್ಷ ಘಟಿತ ಸಾಮಗ್ರೀ ಇರಲೇಬೇಕು. ಸಂದೇಹಕ್ಕಿಂತ ಪೂರ್ವದಲ್ಲಿ ಯಾವ ಧರ್ಮಿಯೊಂದಿಗೆ ಇಂದ್ರಿಯ ಸನ್ನಿಕರ್ಷಾದಿಗಳು ಆಗುತ್ತವೋ ಅದೇ ಸಂಶಯದಲ್ಲಿ ಧರ್ಮಿಯಾಗಿ ತೋರುತ್ತದೆ, ಎಂದು ಹೇಳಬಹುದು. ಹೀಗೆ ಸಂದೇಹದಲ್ಲಿ ಧರ್ಮಿನಿಯಮಕ್ಕೆ ನಿಯಾಮಕವಿದೆ.

ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲವಾದರೆ ಕೆಲವೊಮ್ಮೆ ಸಂದೇಹವು ಒಂದು ಕೋಟಿಯ ಅಂಶದಲ್ಲಿ ಉತ್ಕಟವಾಗಿರುವುದು ಹೇಗೆ? ಅದಕ್ಕೆ ಕಾರಣ–ಸ್ಥಾಣುತ್ವ–ಪುರುಷತ್ವಕೋಟಿ ಸಹಚರಿತವಾದ ಧರ್ಮ ಊರ್ಧ್ವತ್ವ. ಆ ಊರ್ಧ್ವತ್ವ ಧರ್ಮದ ಜೊತೆಗೆ ಸ್ಥಾಣುತ್ವಕೋಟಿಯ ಸಾಹಚರ್ಯವು ಅನೇಕಬಾರಿ ಕಂಡಿದ್ದು ಅಂತಹ ಊರ್ಧ್ವತ್ವಧರ್ಮದ ಅಸಂಸರ್ಗವು ಪುರೋವರ್ತಿಯಲ್ಲಿ ಗೃಹೀತವಾಗದಿರಬೇಕು. ಅಂದರೆ, ಅಂತಹ ಧರ್ಮವು ಇಲ್ಲಿಲ್ಲ, ಎಂದು ತಿಳಿದಿರಬಾರದು. ಆಗ, 'ಪ್ರಾಯಃ ಇದು ಸ್ಥಾಣುವೇ ಆಗಿರಬೇಕು' ಎಂದು ಸ್ಥಾಣುತ್ವಾಂಶದಲ್ಲಿ

ಸಂದೇಹವು ಉತ್ಕಟವಾಗಿರುತ್ತದೆ. ಹೊರತು, ಸ್ಥಾಣುತ್ವದೊಂದಿಗೆ ಭೂಯಃ ಗೃಹೀತಸಾಹಚರ್ಯವುಳ್ಳ ಊರ್ಧ್ವತ್ವ-ಧರ್ಮವು ಸಂಶಯಧರ್ಮಿನಿಷ್ಠತ್ವೇನ ಜ್ಞಾತವಾಗಬೇಕು ಎನ್ನುವ ನಿಬಂಧನೆ ಬೇಕಾಗಿಲ್ಲ. ಅರ್ಥಾತ್, ಅಂತಹ ಧರ್ಮವು ಧರ್ಮಿಯಲ್ಲಿ ಇದೆ, ಎಂದು ತಿಳಿಯಬೇಕೆಂದಿಲ್ಲ. ಏಕೆಂದರೆ, ಅಂತಹ ಧರ್ಮದ ಜ್ಞಾನವಷ್ಟೇ ಕಾರಣ ಎನ್ನುವುದಕ್ಕಿಂತ ಅಂತಹ ಧರ್ಮಉಳ್ಳ ಧರ್ಮಿಯಜ್ಞಾನವು ಕಾರಣ ಎಂದು ಹೇಳುವುದು ಗೌರವ.

ಹೀಗೆ, ಭೂಯಃ ಗೃಹೀತಸಾಹಚರ್ಯವುಳ್ಳ ಸಾಧಾರಣಧರ್ಮಜ್ಞಾನ, ಅಂತಹ ಧರ್ಮದ ಪುರೋವರ್ತಿಯಲ್ಲಿ ಅಸಂಸರ್ಗ ಅಗ್ರಹ, ಪುರೋವರ್ತಿ ಚಕ್ಷುಃ ಸಂಯೋಗ, ಕೋಟಿದ್ವಯೋಪಸ್ಥಿತಿ, ಇಷ್ಟು ಇರುವಾಗ ಸಂದೇಹವು ಬಂದೇ ಬರುತ್ತದೆ. ಸಾಧಾರಣ ಧರ್ಮವದ್ಧರ್ಮಿಜ್ಞಾನದ ಅಗತ್ಯವಿಲ್ಲ.

ಧರ್ಮಿಯ ಜ್ಞಾನವೇ ಇಲ್ಲದೆ, ಆ ಧರ್ಮಿಯಲ್ಲಿರುವ ಊರ್ಧ್ವತ್ವರೂಪವಾದ ಸಾಧಾರಣ ಧರ್ಮಜ್ಞಾನವು ಬರುವುದು ಹೇಗೆ? ಅದು ಅದೃಷ್ಟವಶಾತ್ ಸ್ಮರಣೆಗೆ ಬರುತ್ತದೆ. ಆ ಅದೃಷ್ಟವು ನಿಯತವಲ್ಲ, ಅದು ಇದ್ದರೆ ಸಾಧಾರಣಧರ್ಮಜ್ಞಾನ, ಆದರಿಂದ ಸಂದೇಹ. ಅದಿಲ್ಲದಿದ್ದರೆ ಎರಡೂ ಇಲ್ಲ.

ಹೀಗೆ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ. ಆದ್ದರಿಂದ ಪ್ರಥಮಾನುವ್ಯವಸಾಯವೇ ಪ್ರಾಮಾಣ್ಯಸಂದೇಹಾಸ್ಕಂದಿತವಾಗಿ ಬರುತ್ತದೆ.

## ನ್ಯಾಯದೀಪ

**ಅಹೇತುತ್ವಾತ್ ಇತಿ ।। ವಿಶೇಷ್ಯೇಂದ್ರಿಯಸನ್ನಿಕರ್ಷ–ಕೋಟಿಸ್ಮೃತಿರೂಪ-ವಿಶೇಷಣಜ್ಞಾನ– ತದುಭಯಾಸಂಸರ್ಗಾಗ್ರಹಾದಿ ವಿಶಿಷ್ಟಜ್ಞಾನಸಾಮಗ್ರೀತಃ ಏವ ತದುತ್ಪತ್ತೌ ತದತಿರಿಕ್ತಾ ಸಂಶಯೇ ಧರ್ಮಿಜ್ಞಾನರೂಪಾ ವಿಶೇಷಸಾಮಗ್ರೀ ನ ಕಲ್ಪ್ಯಾ। ತಥಾ ಚ ಸಂಶಯಸ್ಥಲೇ ಧರ್ಮಿಣೋ ವ್ಯವಸಾಯಸ್ಯೈವ ಅಜ್ಞಾನೇನ ಪ್ರಾಮಾಣ್ಯಾನಿಶ್ಚಯೋಪಪತ್ತ್ಯಾ ಸ್ವತಸ್ತ್ವಾಹಾನಿಃ, ಪ್ರಾಮಾಣ್ಯಸಂಶಯಶ್ಚ ಯುಕ್ತಃ ಇತಿ ಭಾವಃ ।।**

ಸಂಶಯವು ವಿಶಿಷ್ಟಜ್ಞಾನ. ವಿಶಿಷ್ಟಜ್ಞಾನಕ್ಕೆ ವಿಶೇಷ್ಯದೊಂದಿಗೆ ಇಂದ್ರಿಯಸನ್ನಿಕರ್ಷ, ವಿಶೇಷಣಜ್ಞಾನ ಅಂದರೆ, ಪ್ರಕೃತ ಕೋಟಿದ್ವಯಗಳ ಸ್ಮೃತಿರೂಪವಾದ ಜ್ಞಾನ, ಆ ವಿಶೇಷ್ಯಕ್ಕೂ ವಿಶೇಷಣವಾದ ಕೋಟಿದ್ವಯಗಳಿಗೂ ಅಸಂಸರ್ಗ-ಅಗ್ರಹ ಇಷ್ಟು ಕಾರಣ. ಇದನ್ನು ಹೊರತು, ಅನ್ಯತ್ರ ಅಕ್ಲೃಪ್ತವಾದ ಧರ್ಮಿಜ್ಞಾನವು ಕಾರಣ ಎಂದು ಕಲ್ಪಿಸುವುದು ಅನಗತ್ಯ.

ಏವಂ ಚ, ಪ್ರಾಮಾಣ್ಯಸಂದೇಹ ಬರುವ ಸಂದರ್ಭದಲ್ಲಿ ಸಂದೇಹ ಧರ್ಮಿಯಾದ ವ್ಯವಸಾಯದ ಜ್ಞಾನವು ಪೂರ್ವದಲ್ಲಿ ಇಲ್ಲದಿರುವುದರಿಂದ ವ್ಯವಸಾಯದಲ್ಲಿ ಪ್ರಾಮಾಣ್ಯನಿಶ್ಚಯ ರೂಪ ಪ್ರತಿಬಂಧಕವು ಇರುವುದಿಲ್ಲವಾದ ಕಾರಣ ಪ್ರಾಮಾಣ್ಯಸಂದೇಹವೂ ಬರಬಹುದು. ಅಂತೆಯೇ, ಸಂದೇಹ ಬರುವ ಮೊದಲು ವ್ಯವಸಾಯವೇ ಗೃಹೀತವಾಗದಿರುವುದರಿಂದ ಪ್ರಾಮಾಣ್ಯವು ಗೃಹೀತವಾಗದಿದ್ದರೂ ಸ್ವತಸ್ತ್ವಕ್ಕೆ ಹಾನಿಯೂ ಇಲ್ಲ.

## ನ್ಯಾಯದೀಪ

**ನನು ತುರಗಾದೌ ವೇಗೇನ ಗಚ್ಛತಃ ಪುಂಸಃ ಅನೇಕವೃಕ್ಷೇಂದ್ರಿಯಸನ್ನಿಕರ್ಷೇಽಪಿ ಕ್ವಚಿದೇವ ಪನಸತ್ವಾದಿಸಂದೇಹಃ ನ ಸರ್ವತ್ರ ಇತ್ಯೇವಂವಿಧಃ ಧರ್ಮಿನಿಯಮ ಏವ ಸಂಶಯೇ ಧರ್ಮಿಜ್ಞಾನ–ಹೇತುತಾಂ ವ್ಯವಸ್ಥಾಪಯತಿ ಇತ್ಯತ ಆಹ–ಧರ್ಮಿಜ್ಞಾನಸ್ಯಾಹೇತುತ್ವೇಽಪೀತಿ ॥**

**ಧರ್ಮಿಜ್ಞಾನಜನಕೇತಿ ॥ ತ್ವಯಾಪಿ ಹಿ ಸರ್ವತ್ರ ಸನ್ನಿಕರ್ಷೇ ಅವಿಶಿಷ್ಟೇಽಪಿ ಕ್ವಚಿದೇವ ಧರ್ಮಿಜ್ಞಾನಂ ನಾನ್ಯತ್ರ ಇತ್ಯತ್ರ ವಿಷಯಮಾಹಾತ್ಮ್ಯಾದಿಕಂ ನಿಯಾಮಕಂ ವಾಚ್ಯಮ್। ತದೇವ ಸಂಶಯೇ ನಿಯಾಮಕಮಸ್ತು। 'ತದ್ಧೇತೋರೇವ ಅಸ್ತು ಹೇತುತ್ವಂ ಮಧ್ಯೇ ಕಿಂ ತೇನ' ಇತಿ ನ್ಯಾಯಾತ್। ತೇಷಾಮ್ ಅನನುಗತತ್ವೇಽಪಿ ಧರ್ಮಿಜ್ಞಾನಹೇತುತ್ವೇನ ಅನುಗಮಸಂಭವಾದಿತಿ ಭಾವಃ।**

ಇಲ್ಲಿ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣ ಎನ್ನುವುದಕ್ಕೆ ಕಾರಣವನ್ನು ಕೊಟ್ಟು ನಿರಾಕರಿಸ ಲಾಗಿದೆ—

ನಾವು ಕುದುರೆಯ ಮೇಲೆ ವೇಗದಿಂದ ಹೋಗುವಾಗ ಅನೇಕ ಮರಗಳ ಜೊತೆಗೆ ಚಕ್ಷುಃ ಸನ್ನಿಕರ್ಷವಾದರೂ ಒಂದು ಮರದ ಬಗ್ಗೆ ಮಾತ್ರ 'ಇದು ಮಾವಿನಮರವೋ ಹಲಸಿನಮರವೋ' ಎಂಬ ಸಂದೇಹ ಬರುತ್ತದೆ. ಸಂದೇಹಕ್ಕೆ ಇಂದ್ರಿಯಸನ್ನಿಕರ್ಷಾದಿಗಳೇ ಕಾರಣವಾದಲ್ಲಿ ಎಲ್ಲ ಮರಗಳಲ್ಲೂ ಈ ಸಂದೇಹ ಯಾಕೆ ಬರಲಿಲ್ಲ? ಧರ್ಮಿಜ್ಞಾನವು ಸಂದೇಹ ಕಾರಣ ಎಂದು ಹೇಳಿದಾಗ ಇದಕ್ಕೆ ಸಮಾಧಾನವನ್ನು ಕೊಡಬಹುದು. ಎಲ್ಲ ಮರಗಳ ಜೊತೆಗೆ ಸನ್ನಿಕರ್ಷವಾದರೂ ಯಾವ ಮರದ ಜ್ಞಾನ ಬರುವುದೋ ಆ ಮರದ ಜಾತಿವಿಶೇಷದ ಬಗ್ಗೆ ಸಂದೇಹ ಬರುತ್ತದೆ. ಹೀಗೆ ಸಮಾಧಾನ ಹೇಳಬಹುದು. ಹೀಗೆ ಸಂದೇಹದಲ್ಲಿ ಧರ್ಮಿನಿಯಮವೇ ಧರ್ಮಿಜ್ಞಾನವು ಕಾರಣ, ಎನ್ನುವುದಕ್ಕೆ ಸಾಧಕವಾಗುತ್ತದೆ. ಇದು ಪೂರ್ವಪಕ್ಷ. (ಮಣಿಪ್ರಕಾಶ–193)

ಇದಕ್ಕೆ ಸಮಾಧಾನವನ್ನು 'ಧರ್ಮಿಜ್ಞಾನಸ್ಯಾಹೇತುತ್ವೇऽಪಿ' ಎಂಬ ವಾಕ್ಯದಲ್ಲಿ ಹೇಳಲಾಗಿದೆ—ಧರ್ಮಿಜ್ಞಾನವು ಕಾರಣ, ಎನ್ನುವುದನ್ನು ಸಮರ್ಥಿಸಲು ಮೇಲಿನ ಸಂದರ್ಭವನ್ನು ಉದಾಹರಿಸಲಾಗಿದೆ. ಆದರೆ, ಆ ಘಟನೆಯಲ್ಲಿ ಅನೇಕ ಮರಗಳ ಜೊತೆಗೆ ಚಕ್ಷುಃ ಸನ್ನಿಕರ್ಷವಾದರೂ ನಿರ್ದಿಷ್ಟವಾದ ಒಂದು ಮರದ ಜ್ಞಾನವೇ ಏಕೆ ಬಂತು? ಅದೇ ಮರದ ಜ್ಞಾನ ಬಂದುದರಿಂದ ಅದೇ ಮರದ ಬಗ್ಗೆ ಸಂದೇಹ ಬರುತ್ತದೆ, ಎನ್ನುವುದು ಸರಿ. ಆದರೆ ಅದೇ ಮರದ ಜ್ಞಾನ ಮಾತ್ರ ಏಕೆ ಬಂತು? ಅದಕ್ಕೆ ಆ ಮರದಲ್ಲಿರುವ ಏನೋ ವಿಶೇಷವು ಕಾರಣವೆಂದು ಕಲ್ಪಿಸಲೇಬೇಕು. ಹೀಗೆ, ವಿಷಯದ ಮಹತ್ವದಿಂದಾಗಿ ನಿರ್ದಿಷ್ಟ ಮರದ ಜ್ಞಾನ ಬರುತ್ತದೆ, ಆದರಿಂದಾಗಿ ಅದೇ ಮರದ ಬಗ್ಗೆ ಸಂದೇಹ ಬರುತ್ತದೆ, ಎನ್ನಬೇಕು. ಇಲ್ಲಿ ಅದೇ ಮರದ ಜ್ಞಾನಕ್ಕೆ ಯಾವುದು ನಿಯಾಮಕವೋ ಆ ನಿಯಾಮಕದಿಂದಾಗಿಯೇ ಸಂದೇಹದಲ್ಲಿ ಧರ್ಮಿನಿಯಮ ಎಂದು ಹೇಳಲು ಬರುವಾಗ ಮಧ್ಯದಲ್ಲಿ ಧರ್ಮಿಜ್ಞಾನವು ನಿಯಾಮಕ ಎಂದು ಕಲ್ಪಿಸುವುದು ಗೌರವ.

'ತದ್ಧೇತೋರೇವ ತದ್ಧೇತುತ್ವೇ ಮಧ್ಯೇ ಕಿಂತೇನ' ಎನ್ನುವುದು ಒಂದು ನಿಯಮ. ಧರ್ಮಿಜ್ಞಾನಕ್ಕೆ ಯಾವುದು ನಿಯಾಮಕವೋ ಅದೇ ಸಂಶಯದಲ್ಲಿ ಧರ್ಮಿಭಾನಕ್ಕೆ ನಿಯಾಮಕ ಎಂದು ಹೇಳಲು ಬರುವಾಗ ಅದನ್ನು ಬಿಟ್ಟು ಮಧ್ಯದಲ್ಲಿ ಇನ್ನೊಂದು ನಿಯಾಮಕವನ್ನು ಏಕೆ ಕಲ್ಪಿಸಬೇಕು, ಎಂದು ಪ್ರಕೃತಕ್ಕೆ ಆ ನ್ಯಾಯದ ಅನ್ವಯ.

ಅನೇಕ ಮರಗಳೊಂದಿಗೆ ಇಂದ್ರಿಯ ಸಂಯೋಗವಿದ್ದರೂ ಒಂದು ಮರದ ಜ್ಞಾನ ಬರಲು ಅನೇಕ ಕಾರಣಗಳಿರಬಹುದು. ಆದರೂ ಅವೆಲ್ಲವುಗಳನ್ನೂ 'ಧರ್ಮಿಜ್ಞಾನಹೇತುತ್ವೇನ' ಅನುಗಮ ಮಾಡಬಹುದು. ಆದ್ದರಿಂದ ಧರ್ಮಿಜ್ಞಾನವು ಸಂದೇಹಕ್ಕೆ ಕಾರಣವಲ್ಲ.

## ದೀಧಿತಿ ವಿಮರ್ಶೆ

**'ಯತ್ತು ಧರ್ಮಿಜ್ಞಾನಸಾಮಗ್ರೀತ್ವೇನ ಹೇತುತ್ವೇ, ಲಾಘವಾತ್ ಧರ್ಮಿಜ್ಞಾನತ್ವೇನೈವ ಹೇತುತ್ವಮಸ್ತು' ಇತಿ ಶಿರೋಮಣಿವಚನಮ್, ತನ್ನ । ಕ್ಲೃಪ್ತಸಾಮಗ್ರ್ಯೈವೋಪಪತ್ತೌ ಅಪೂರ್ವಧರ್ಮಿಜ್ಞಾನಹೇತುತಾಕಲ್ಪನಸ್ಯ ಗುರುತ್ವಾತ್।**

ಮಣಿಗ್ರಂಥಕ್ಕೆ ದೀಧಿತಿ ಎಂಬ ವ್ಯಾಖ್ಯಾನವನ್ನು ಬರೆದಿರುವ ರಘುನಾಥಶಿರೋಮಣಿ ಮಣಿ ಗ್ರಂಥದಲ್ಲಿ ಹೀಗೆ ಆಕ್ಷೇಪಿಸಿದ್ದಾನೆ— 'ಸಂದೇಹಕ್ಕೆ ಧರ್ಮಿಜ್ಞಾನಜನಕ ಸಾಮಗ್ರಿಯು ಕಾರಣ, ಎಂದು ಹೇಳುವುದಕ್ಕಿಂತಲೂ ಧರ್ಮಿಜ್ಞಾನವೇ ಕಾರಣ, ಎಂದು ಹೇಳುವುದು ಲಾಘವ''[1] ಎಂದು.

ಇದು ಸರಿಯಲ್ಲ. 'ವಿಶಿಷ್ಟಜ್ಞಾನಂ ಪ್ರತಿ ವಿಶೇಷಣಜ್ಞಾನಂ ಕಾರಣಂ' ಎಂದು ಕ್ಲೃಪ್ತವಾದ

---

1. **ತತ್ಸಾಮಗ್ರೀತ್ವೇನ ಹೇತುತ್ವೇ ಲಾಘವಾತ್ ತೇನೈವ ಹೇತುತ್ವಮ್–ಎಂದು ದೀಧಿತಿ ವಾಕ್ಯ .**
**(ತಿರುಪತಿ ಪ್ರಕಾಶನ.ಪು.148)**

ನಿಯಮ. ವಿಶೇಷ್ಯಜ್ಞಾನವು ಕಾರಣ, ಎಂದು ಕ್ಲೃಪ್ತವಾಗಿಲ್ಲ. ಸಂಶಯವೂ ಒಂದು ವಿಶಿಷ್ಟಜ್ಞಾನ. ಎಲ್ಲ ಜ್ಞಾನಗಳಂತೆ ಅದಕ್ಕೂ ವಿಶೇಷಣ ಜ್ಞಾನವೇ ಹೇತು, ಎಂದು ಹೇಳಿ ಸಂದೇಹವನ್ನು ಸಮರ್ಥಿಸಲು ಬರುವಾಗ ಕಾರಣತ್ವೇನ ಅಸಿದ್ಧವಾದ ಧರ್ಮಿಜ್ಞಾನವು ಸಂದೇಹ ಹೇತು ಎಂದು ಕಲ್ಪಿಸುವುದು ಗೌರವ. ಆದರೆ ಆ ಧರ್ಮಿಜ್ಞಾನಕ್ಕೆ ಹೇತುವಾದ ಇಂದ್ರಿಯಸನ್ನಿಕರ್ಷವು ಜ್ಞಾನಸಾಮಾನ್ಯಕ್ಕೆ ಹೇತು ಎನ್ನುವುದು ಸರ್ವಸಮ್ಮತ. ಅದನ್ನು ಕಲ್ಪಿಸಬೇಕಾಗಿಲ್ಲ, ಆದ್ದರಿಂದ ಗೌರವ ಇಲ್ಲ.

## ನ್ಯಾಯದೀಪ

**ನನು ಧರ್ಮಿಜ್ಞಾನಸ್ಯ ಅಹೇತುತ್ವೇ ಸಂಶಯೇ ಕೋಟ್ಯುತ್ಕಟತ್ವಂ ನ ಸ್ಯಾತ್ । ತಸ್ಯ ಅವ್ಯಾಪ್ಯವೃತ್ತಿತಯಾ ಜಾತಿತ್ವಾಯೋಗೇನ ಸಂಶಯಧರ್ಮಿಣಿ ಸಂಶಯಕೋಟಿ ಸಹಚರಿತ–ಅನೇಕ ಧರ್ಮೋಪಲಂಭರೂಪಸ್ಯ ವಾ,**

**ಸಂಶಯಧರ್ಮಿವೃತ್ತಿತಯಾ ಗೃಹ್ಯಮಾಣಧರ್ಮೇಣ ಸಹ ಕೋಟೇಃ ಭೂಯಃ ಸಹಚಾರೋಪಲಂಭರೂಪಸ್ಯ ವಾ**

**ಕೋಟ್ಯುತ್ಕಟತ್ವಸ್ಯ ವಾಚ್ಯತಯಾ ತಾದೃಶಸ್ಯ ಧರ್ಮಿಜ್ಞಾನಾಹೇತುತ್ವೇ ಅನುಪಪತ್ತೇಃ ಇತ್ಯತ ಆಹ–ಕೋಟ್ಯುತ್ಕಟತ್ವೇ ತು ಇತಿ ।। ದರ್ಶನಮೇವ ಹೇತುರಿತ್ಯನ್ವಯಃ ।**

**ಧರ್ಮ್ಯಸಂಸ್ಪೃಷ್ಟತ್ವೇನ ಇತಿ ।। ಧರ್ಮ್ಯಸಂಬದ್ಧತ್ವೇನ ಇತ್ಯರ್ಥಃ । ನನು ಸಾಧಾರಣಧರ್ಮದರ್ಶನಸ್ಯ ಸಂಶಯಹೇತುತ್ವಾತ್ ಧರ್ಮಜ್ಞಾನಾರ್ಥಂ ಧರ್ಮಿಜ್ಞಾನಮ್ ಆವಶ್ಯಕಮ್ ಇತ್ಯತ ಆಹ–ಊರ್ಧ್ವತ್ವಾದಿಸಾಧಾರಣೇತಿ ।।**

ಸಂಶಯಕ್ಕೆ ಧರ್ಮಿಜ್ಞಾನವು ಕಾರಣವಾಗದಿದ್ದಲ್ಲಿ ಸಂದೇಹದಲ್ಲಿ ಕೆಲವೊಮ್ಮೆ ಬರುವ ಕೋಟ್ಯುತ್ಕಟತ್ವವು ಇರಲು ಸಾಧ್ಯವಿಲ್ಲ. ಏಕೆಂದರೆ, ಉತ್ಕಟತ್ವವು ಸಂದೇಹದಲ್ಲಿ ಇರುವ ಜಾತಿಯಲ್ಲ. 'ಪ್ರಾಯಃ ಇದು ಕಂಬವಾಗಿರಬೇಕು', ಈ ಸಂದೇಹದಲ್ಲಿ ಸ್ಥಾಣುತ್ವಾಂಶದಲ್ಲಿ ಉತ್ಕಟತ್ವವಿದೆ. ಇನ್ನೊಂದು ಅಂಶವಾದ ಪುರುಷತ್ವದಲ್ಲಿ ಆ ಉತ್ಕಟತ್ವವು ಇಲ್ಲ. ಹೀಗೆ ಉತ್ಕಟತ್ವವು ಸಂದೇಹದ ಒಂದಂಶದಲ್ಲಿ ಇದ್ದು, ಇನ್ನೊಂದು ಅಂಶದಲ್ಲಿ ಇಲ್ಲದಿರುವುದರಿಂದ ಅದು ಅವ್ಯಾಪ್ಯವೃತ್ತಿ. ಆದ್ದರಿಂದಲೇ ಅದು ಜಾತಿಯಲ್ಲ. ಹೀಗಾಗಿ ಉತ್ಕಟತ್ವವನ್ನು ನಿರ್ವಚನ ಮಾಡಬೇಕಾಗುತ್ತದೆ. ಅದನ್ನು ಎರಡು ರೀತಿಯಾಗಿ ನಿರೂಪಿಸಬಹುದು. (1)ಏಕಕೋಟಿಸಹಚರಿತಾನೇಕ ಧರ್ಮವಿಷಯಕತ್ವಂ, ಇದೇ ಸಂದೇಹದಲ್ಲಿರುವ ಉತ್ಕಟತ್ವ. (2) ಅಥವಾ, ಸಂಶಯದ ಧರ್ಮಿಯಲ್ಲಿ ಗೃಹ್ಯಮಾಣವಾದ ಧರ್ಮವು ಒಂದು ಕೋಟಿಯೊಂದಿಗೆ ಅನೇಕ ಕಡೆಗಳಲ್ಲಿ ಸಹಚರಿತವಾಗಿ ಉಪಲಬ್ಧವಾಗಿದ್ದು, ತಾದೃಶಧರ್ಮವಿಷಯಕತ್ವಂ, ಇದು ಉತ್ಕಟತ್ವ.

ಈ ಎರಡೂ ವಿಧವಾದ ಉತ್ಕಟತ್ವಗಳು ಧರ್ಮಿಜ್ಞಾನಸಾಪೇಕ್ಷವಾದುದರಿಂದ ಧರ್ಮಿ ಜ್ಞಾನವು ಸಂದೇಹಕ್ಕೆ ಕಾರಣವಲ್ಲದಿದ್ದಲ್ಲಿ ಇಂತಹ ಉತ್ಕಟತ್ವವನ್ನು ನಿರೂಪಿಸಲು ಬರುವುದಿಲ್ಲ, ಎಂದು ಆಕ್ಷೇಪ. ಇದಕ್ಕೆ 'ಕೋಟ್ಯುತ್ಕಟತ್ವೇ ತು' ಎಂದು ಮೂಲದಲ್ಲಿ ಸಮಾಧಾನವನ್ನು ಹೇಳಲಾಗಿದೆ.

## ಕೇಚಿತ್‌ಪದಸೂಚಿತ ಅಸ್ವಾರಸ್ಯ

**ಕೇಚಿದಿತ್ಯುಕ್ತಾಸ್ವಾರಸ್ಯಬೀಜಂ ತು–ವ್ಯವಸಾಯರೂಪಧರ್ಮಿಣಃ ಸುಖಾದಿವತ್ ಜ್ಞಾತೈಕಸತ್ವೇನ ಕೋಟಿಸ್ಮೃತೇಃ ಪೂರ್ವಂ ತಸ್ಯ ಸಾಕ್ಷಿಣಾ ಗ್ರಹಣೇ ಪ್ರತಿಬಂಧಾಭಾವಾತ್ ಧರ್ಮಿಜ್ಞಾನಮ್ ಆವಶ್ಯಕಮ್ ಇತಿ ಅಸ್ಮದುಕ್ತದಿಶೈವ ಸಂಶಯೋಪಪಾದನಂ ಸಾಧು । ನ ತು ಧರ್ಮಿಜ್ಞಾನಾನಭ್ಯುಪಗಮೇನ ಇತಿ, ಜ್ಞೇಯಮ್ । ಅತ ಏವ 'ಜ್ಞಾನಮ್ ಅವಶ್ಯವೇದ್ಯಮ್' ಇತಿ ವಕ್ಷ್ಯತಿ । ಅನ್ಯತ್ತು ಗುರುಟೀಕಾಯಾಮ್ ।**

ಇದುವರೆಗೆ ನಿರೂಪಿಸಿರುವ ವಿಷಯ ಗ್ರಂಥಕಾರರದಲ್ಲ, ಬೇರೆಯವರ ಅಭಿಪ್ರಾಯವನ್ನು ಅವರು ಹೇಳಿದ್ದಾರೆ. 'ಕೇಚಿತ್ತು' ಎಂದು ಹೇಳುವ ಮೂಲಕ ಆ ವಿಷಯದ ಬಗ್ಗೆ ತಮ್ಮ ಸಮ್ಮತಿ ಇಲ್ಲ. ಅದರಲ್ಲಿ ಅಸ್ವಾರಸ್ಯವಿದೆ, ಎಂದು ಗ್ರಂಥಕಾರರು ಸೂಚಿಸಿದ್ದಾರೆ. ಆ ಅಸ್ವಾರಸ್ಯ ಇದು–ಪ್ರಕೃತ ಪ್ರಾಮಾಣ್ಯಸಂದೇಹದ ಧರ್ಮಿ ವ್ಯವಸಾಯಾತ್ಮಕ ಜ್ಞಾನ. ಅದು ಸುಖಾದಿಗಳಂತೆ ಜ್ಞಾತೈಕಸತ್. ಅಂದರೆ ಸುಖವು ಹೇಗೆ ಹುಟ್ಟಿದ ಕೂಡಲೇ ಜ್ಞಾತವಾಗಲೇಬೇಕೋ, ಅಜ್ಞಾಯಮಾನವಾದ ಸುಖ ಇರುವುದಿಲ್ಲವೋ, ಅದರಂತೆ, ಜ್ಞಾನವೂ ಹುಟ್ಟಿದ ಕೂಡಲೇ ಜ್ಞಾತವಾಗಲೇಬೇಕು. ಸಂದೇಹ ಬರಬೇಕಾದರೆ ಕೋಟಿ ಸ್ಮರಣೆ ಬರಬೇಕು. ವ್ಯವಸಾಯ ಬಂದಮೇಲೆ ಅದರ ಅನುವ್ಯವಸಾಯವು ಬರಲೇಬೇಕಾದುದರಿಂದ ಕೋಟಿಸ್ಮರಣೆ ಬರುವ ಮೊದಲೇ ವ್ಯವಸಾಯವು ಅನುವ್ಯವಸಾಯದಿಂದ ಗೃಹೀತವಾಗಿ ಬಿಡುತ್ತದೆ. ಅದು ಗೃಹೀತವಾಗಲು ಯಾವುದೇ ಪ್ರತಿಬಂಧಕಗಳು ಇಲ್ಲ. ಆಮೇಲೆ ಕೋಟಿಸ್ಮರಣೆ ಬಂದು ಸಂದೇಹ ಬರಬೇಕು. ಹೀಗಿದ್ದಾಗ ನೈಯಾಯಿಕರಿಗೆ ಆಕ್ಷೇಪಕ್ಕೆ ಅವಕಾಶ ಇದ್ದೇ ಇದೆ–ಪ್ರಥಮಾನುವ್ಯವಸಾಯದಲ್ಲಿ ಜ್ಞಾನವು ಗೃಹೀತವಾದಾಗ ಪ್ರಾಮಾಣ್ಯವೂ ಗೃಹೀತವಾದುದ ರಿಂದ ಪ್ರಾಮಾಣ್ಯಸಂದೇಹ ಹೇಗೆ? ಎಂದು. ಇದಕ್ಕೆ ಉತ್ತರವನ್ನು ಹಿಂದೆ ಹೇಳಿದಂತೆ ಧರ್ಮಿಜ್ಞಾನವು ಸಂದೇಹಕ್ಕೆ ಕಾರಣವಲ್ಲವಾದುದರಿಂದ ಪ್ರಥಮಾನುವ್ಯವಸಾಯವೇ ಸಂದೇಹ ರೂಪವಾಗಿ ಬರುತ್ತದೆ, ಎಂದು ಉತ್ತರವನ್ನು ಕೊಡಲಾಗುವುದಿಲ್ಲ. ಆದ್ದರಿಂದಲೇ ಮುಂದೆ ಮೂಲದಲ್ಲಿ 'ಜ್ಞಾನಮ್ ಅವಶ್ಯವೇದ್ಯಮ್' (ಪು.348) ಎಂದು ಹೇಳಲಾಗಿದೆ.

ಹೀಗೆ ಕೇಚಿತ್ಕಾರೋಕ್ತ ಸಮಾಧಾನವು ಸಮಂಜಸವಲ್ಲ.

## ಪ್ರಕಾರಾಂತರದಿಂದ ಸಂದೇಹ ಸಮರ್ಥನೆ

**इतरे तु, अन्यत्र विपर्यये धर्मिज्ञानस्य हेतुत्वेऽपि वर्तमानव्यवसाय-धर्मिके अनुव्यवसायरूपे अप्रमायां प्रमात्वविपर्यये तस्याहेतुत्ववत् अन्यत्र संशये धर्मिज्ञानस्य हेतुत्वेऽपि प्रामाण्यसंशये तस्याहेतुत्वं युक्तम् । न च प्रागारोप्यस्य प्रामाण्यस्यानुपस्थितेर्न तदारोप इति वाच्यम् । स्वतस्त्वपक्षे प्रमायां प्रामाण्यप्रमितेरिव भ्रमे प्रामाण्यारोपस्यापि तदनपेक्षत्वादित्याहुः ।।**

ಇನ್ನು ಕೆಲವರು, ಅನ್ಯತ್ರ ಧರ್ಮಿಜ್ಞಾನವು ಸಂದೇಹಕ್ಕೆ ಕಾರಣವಾದರೂ ಪ್ರಕೃತಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ, ಎಂದು ಸಮರ್ಥಿಸುತ್ತಾರೆ—ಶುಕ್ತಿಯಲ್ಲಿ ರಜತಭ್ರಮೆ ಬರಬೇಕಾದರೆ, ಮೊದಲು, 'ಇದಂ' ಎಂದು ಪುರೋವೃತ್ತಿ ಶುಕ್ತಿಯ ಸಾಮಾನ್ಯಜ್ಞಾನಬೇಕು. ಅರ್ಥಾತ್ ಭ್ರಮೆಗೆ ಧರ್ಮಿಜ್ಞಾನವು ಕಾರಣವೆಂದು ಸಿದ್ಧವಾಗಿದೆ. ಆದರೆ, ಇದಂ ರಜತಂ, ಎಂದು ಭ್ರಾಂತಿ ಬಂದಮೇಲೆ ಆ ಜ್ಞಾನವನ್ನು ಮನಸ್ಸು 'ಇದಂ ರಜತಮ್ ಇತಿ ಜ್ಞಾನಂ ಪ್ರಮಾ' ಎಂದು ಗ್ರಹಿಸುತ್ತದೆ. ಇದು ಅಪ್ರಮಾಯಾಂ ಪ್ರಮಾತ್ವಜ್ಞಾನವಾದುದರಿಂದ ಮಾನಸಭ್ರಾಂತಿ. ಈ ಭ್ರಾಂತಿಯಲ್ಲಿ ಧರ್ಮಿ ರಜತಜ್ಞಾನ. ಆ ರಜತಜ್ಞಾನದ ಜ್ಞಾನವು ಈ ಭ್ರಾಂತಿಯ ಪೂರ್ವದಲ್ಲಿ ಇಲ್ಲ. ಹೀಗೆ, ಅನ್ಯತ್ರಭ್ರಮೆಗೆ ಧರ್ಮಿಜ್ಞಾನವು ಕಾರಣವಾದರೂ ಜ್ಞಾನಧರ್ಮಿಕ ಭ್ರಮೆಗೆ ಧರ್ಮಿಜ್ಞಾನವು ಕಾರಣವಲ್ಲ. ಅದರಂತೆ ಅನ್ಯತ್ರ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಾದರೂ ಜ್ಞಾನಧರ್ಮಿಕಸಂಶಯಕ್ಕೆ ಧರ್ಮಿಜ್ಞಾನ ಕಾರಣವಲ್ಲ. ಆದ್ದರಿಂದ ವ್ಯವಸಾಯ ಬಂದಕೂಡಲೇ ಸಂದೇಹಾತ್ಮಕವಾದ ಅನುವ್ಯವಸಾಯವು ಬರುತ್ತದೆ. ಇದು ಇನ್ನು ಕೆಲವರು ಹೇಳುವ ಸಮರ್ಥನೆ.

ಇಲ್ಲಿ ಕೊಟ್ಟಿರುವ ಉದಾಹರಣೆಯ ಬಗ್ಗೆ ಹೀಗೊಂದು ಸಂದೇಹ ಬರಬಹುದು—ಭ್ರಮೆಗೆ ಆರೋಪ್ಯಜ್ಞಾನವು ಕಾರಣ. 'ಇದಂ ರಜತಮ್' ಎಂಬ ಭ್ರಮೆ ಬರುವ ಮೊದಲು ಶುಕ್ತಿಯಲ್ಲಿ ರಜತಸಾದೃಶ್ಯಜ್ಞಾನದಿಂದಾಗಿ ರಜತದ ಸ್ಮರಣೆ ಬರುತ್ತದೆ. ಇದೇ ಆರೋಪ್ಯಜ್ಞಾನ. ಇದರಿಂದ 'ಇದಂ ರಜತಂ' ಎಂಬ ಭ್ರಮೆ ಹುಟ್ಟುತ್ತದೆ. ಹೀಗೆ, ಭ್ರಮೆಗೆ ಆರೋಪ್ಯಜ್ಞಾನ ಕಾರಣ. ಆದರೆ, ಪ್ರಕೃತದಲ್ಲಿ ಹಿಂದೆ 'ಇದಂ ರಜತಂ' ಎಂದು ವ್ಯವಸಾಯ ಬಂದ ಕೂಡಲೇ 'ಇದಂ ರಜತಮ್ ಇತಿ ಜ್ಞಾನಂ ಪ್ರಮಾ' ಎಂಬ ಭ್ರಮಾತ್ಮಕಜ್ಞಾನ ಹುಟ್ಟುತ್ತದೆ, ಎನ್ನಲಾಯಿತು. ಇಲ್ಲಿ ಆರೋಪ್ಯ ಪ್ರಮಾತ್ವ. ಅದರ ಜ್ಞಾನ ಇಲ್ಲದೆಯೇ ಭ್ರಮ ಬರುವುದು ಹೇಗೆ?

ಇದಕ್ಕೆ ಹೀಗೆ ಪರಿಹಾರ—ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ. ಆದರೂ ಪ್ರಥಮದಲ್ಲಿ ಪ್ರಮಾತ್ವರೂಪ ವಿಶೇಷಣ ಜ್ಞಾನವಿಲ್ಲದಿದ್ದರೂ ಸ್ವತಸ್ತ್ವಪಕ್ಷದಲ್ಲಿ 'ಇದಂ ಜ್ಞಾನಂ ಪ್ರಮಾ' ಎಂಬ

ಜ್ಞಾನವು ಹೇಗೆ ಬರುವುದೋ ಅದರಂತೆ ಆರೋಪ್ಯವಾದ ಪ್ರಮಾತ್ವಜ್ಞಾನ ಇಲ್ಲದೆಯೇ 'ರಜತಜ್ಞಾನಂ ಪ್ರಮಾ' ಎಂಬ ಮಾನಸಭ್ರಮೆಯು ಬರಬಹುದು. (ಸಿದ್ಧಾಂತದಲ್ಲಿ ವಿಶಿಷ್ಟಜ್ಞಾನಂ ಪ್ರತಿ ವಿಶೇಷಣ ಜ್ಞಾನವು ಕಾರಣವಲ್ಲ. ಸನ್ನಿಕರ್ಷವಶಾತ್ ವಿಶೇಷ್ಯ–ವಿಶೇಷಣ–ಅವುಗಳ ಸಂಸರ್ಗ ಈ ಮೂರರ ಜ್ಞಾನವೂ ಜೊತೆಯಲ್ಲೇ (ಯುಗಪತ್) ಬರುತ್ತದೆ.)

ಇದು ಮತ್ತೆ ಕೆಲವರು ಹೇಳುವ ಸಮಾಧಾನ.

## ನ್ಯಾಯದೀಪ

**ಅನ್ಯತ್ರೇತಿ ॥ ಶುಕ್ತಿರೂಪ್ಯಾದಿವಿಷಯಕೇ ಇತ್ಯರ್ಥಃ। ಶುಕ್ತ್ಯಾದಾವೇವ ರಜತತ್ವಾದ್ಯಾರೋಪಃ, ನಾನ್ಯತ್ರ, ಇತ್ಯೇತನ್ನಿಯಾಮಕತಯಾ ರೂಪ್ಯಾದಿನಿಷ್ಠ-ಚಾಕಚಕ್ಯಾದಿಮತ್ತಯಾ ಶುಕ್ತ್ಯಾದಿಜ್ಞಾನಸ್ಯ ತದಾರೋಪಹೇತುತ್ವಮ್ ಆವಶ್ಯಕಮ್ ಇತಿ ಭಾವಃ।**

ಭ್ರಮೆಗೆ ಧರ್ಮಿಜ್ಞಾನವು ಕಾರಣವಾಗಿದೆ. ರಜತದ ಆರೋಪ ಶುಕ್ತಿಯಲ್ಲೇ ಮಾಡಲಾಗುತ್ತದೆ. ಇತರ ಲೋಹಗಳಲ್ಲಿ ರಜತಭ್ರಮೆಯು ಬರುವುದಿಲ್ಲ. ಅದಕ್ಕೇನು ನಿಯಾಮಕ? ಶುಕ್ತಿಯಲ್ಲಿ ರಜತದಂತೆ ಹೊಳಪು ಇದೆ. ಹೀಗೆ ಅದರಲ್ಲಿ ರಜತಸಾದೃಶ್ಯಜ್ಞಾನ ಬರುವುದರಿಂದ ರಜತಭ್ರಮೆ ಬರುತ್ತದೆ. ಇತರ ವಸ್ತುಗಳಲ್ಲಿ ರಜತಸಾದೃಶ್ಯಜ್ಞಾನ ಇಲ್ಲ. ಆದ್ದರಿಂದ ರಜತಭ್ರಮೆ ಬರುವುದಿಲ್ಲ. ಹೀಗೆ ಭ್ರಮೆಯ ವ್ಯವಸ್ಥೆ ಮಾಡಬೇಕಾದರೆ ಧರ್ಮಿಜ್ಞಾನವು ಭ್ರಮೆಗೆ ಕಾರಣ ಎಂದು ಹೇಳಲೇಬೇಕು.

## ನ್ಯಾಯದೀಪ

**ವರ್ತಮಾನೇತ್ಯಾದಿ ॥ ಯಥಾ ಹಿ ಘಟಾದಿಪ್ರಮಾಯಾಂ ತದನುವ್ಯವ-ಸಾಯೇನ ವ್ಯವಸಾಯೋಪನೀತ–ತದ್ವತ್ತ್ವಾದಿ–ಘಟಿತ–ಪ್ರಾಮಾಣ್ಯಗ್ರಹಃ ತಥಾ ಶುಕ್ತಿರೂಪ್ಯಾದ್ಯಪ್ರಮಾಯಾಮಪಿ ತದನುವ್ಯವಸಾಯೇನ ತದುಪನೀತ ತದ್ವತ್ತ್ವಾದಿಘಟಿತ ಪ್ರಾಮಾಣ್ಯಂ ಧರ್ಮಿಜ್ಞಾನಂ ವಿನೈವ ತದುತ್ತರಕ್ಷಣೇ ಏವ ಪರಿಚ್ಛಿದ್ಯತೇ ಇತ್ಯುಪೇತಂ ತದ್ವದಿತ್ಯರ್ಥಃ ॥**

ಪ್ರಕೃತ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ ಎಂಬುದಕ್ಕೆ ಅಪ್ರಮಾದಲ್ಲಿ ಪ್ರಮಾತ್ವ ಭ್ರಮೆಯನ್ನು ಉದಾಹರಣೆಯಾಗಿ ಕೊಡಲಾಗಿದೆ. ಈ ದೃಷ್ಟಾಂತದ ಸಮರ್ಥನೆ ಹೀಗೆ–'ಅಯಂ ಘಟಃ' ಎಂಬ ಜ್ಞಾನದಲ್ಲಿ (ವ್ಯವಸಾಯದಲ್ಲಿ) ಘಟತ್ವ ವೈಶಿಷ್ಟ್ಯವು (ತದ್ವತ್ತಾ) ಪುರೋವರ್ತಿಯಲ್ಲಿ ತೋರುತ್ತದೆ. ತದುಪನೀತವಾಗಿ ತದ್ಘಟಿತ ಪ್ರಾಮಾಣ್ಯವೂ ಅನುವ್ಯವಸಾಯದಲ್ಲಿ ವ್ಯವಸಾಯರೂಪ

## ಪ್ರಕಾರಾಂತರದಿಂದ ಸಂದೇಹ ಸಮರ್ಥನೆ

**इतरे तु, अन्यत्र विपर्यये धर्मिज्ञानस्य हेतुत्वेऽपि वर्तमानव्यवसाय-धर्मिके अनुव्यवसायरूपे अप्रमायां प्रमात्वविपर्यये तस्याहेतुत्ववत् अन्यत्र संशये धर्मिज्ञानस्य हेतुत्वेऽपि प्रामाण्यसंशये तस्याहेतुत्वं युक्तम् । न च प्रागारोप्यस्य प्रामाण्यस्यानुपस्थितेर्न तदारोप इति वाच्यम् । स्वतस्त्वपक्षे प्रमायां प्रामाण्यप्रमितेरिव भ्रमे प्रामाण्यारोपस्यापि तदनपेक्षत्वादित्याहुः ।।**

ಇನ್ನು ಕೆಲವರು, ಅನ್ಯತ್ರ ಧರ್ಮಿಜ್ಞಾನವು ಸಂದೇಹಕ್ಕೆ ಕಾರಣವಾದರೂ ಪ್ರಕೃತಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ, ಎಂದು ಸಮರ್ಥಿಸುತ್ತಾರೆ—ಶುಕ್ತಿಯಲ್ಲಿ ರಜತಭ್ರಮೆ ಬರಬೇಕಾದರೆ, ಮೊದಲು, 'ಇದಂ' ಎಂದು ಪುರೋವೃತ್ತಿ ಶುಕ್ತಿಯ ಸಾಮಾನ್ಯಜ್ಞಾನಬೇಕು. ಅರ್ಥಾತ್ ಭ್ರಮೆಗೆ ಧರ್ಮಿಜ್ಞಾನವು ಕಾರಣವೆಂದು ಸಿದ್ಧವಾಗಿದೆ. ಆದರೆ, ಇದಂ ರಜತಂ, ಎಂದು ಭ್ರಾಂತಿ ಬಂದಮೇಲೆ ಆ ಜ್ಞಾನವನ್ನು ಮನಸ್ಸು 'ಇದಂ ರಜತಮ್ ಇತಿ ಜ್ಞಾನಂ ಪ್ರಮಾ' ಎಂದು ಗ್ರಹಿಸುತ್ತದೆ. ಇದು ಅಪ್ರಮಾಯಾಂ ಪ್ರಮಾತ್ವಜ್ಞಾನವಾದುದರಿಂದ ಮಾನಸಭ್ರಾಂತಿ. ಈ ಭ್ರಾಂತಿಯಲ್ಲಿ ಧರ್ಮಿ ರಜತಜ್ಞಾನ. ಆ ರಜತಜ್ಞಾನದ ಜ್ಞಾನವು ಈ ಭ್ರಾಂತಿಯ ಪೂರ್ವದಲ್ಲಿ ಇಲ್ಲ. ಹೀಗೆ, ಅನ್ಯತ್ರಭ್ರಮೆಗೆ ಧರ್ಮಿಜ್ಞಾನವು ಕಾರಣವಾದರೂ ಜ್ಞಾನಧರ್ಮಿಕ ಭ್ರಮೆಗೆ ಧರ್ಮಿಜ್ಞಾನವು ಕಾರಣವಲ್ಲ, ಅದರಂತೆ ಅನ್ಯತ್ರ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಾದರೂ ಜ್ಞಾನಧರ್ಮಿಕಸಂಶಯಕ್ಕೆ ಧರ್ಮಿಜ್ಞಾನ ಕಾರಣವಲ್ಲ, ಆದ್ದರಿಂದ ವ್ಯವಸಾಯ ಬಂದಕೂಡಲೇ ಸಂದೇಹಾತ್ಮಕವಾದ ಅನುವ್ಯವಸಾಯವು ಬರುತ್ತದೆ. ಇದು ಇನ್ನು ಕೆಲವರು ಹೇಳುವ ಸಮರ್ಥನೆ.

ಇಲ್ಲಿ ಕೊಟ್ಟಿರುವ ಉದಾಹರಣೆಯ ಬಗ್ಗೆ ಹೀಗೊಂದು ಸಂದೇಹ ಬರಬಹುದು—ಭ್ರಮೆಗೆ ಆರೋಪ್ಯಜ್ಞಾನವು ಕಾರಣ. 'ಇದಂ ರಜತಮ್' ಎಂಬ ಭ್ರಮೆ ಬರುವ ಮೊದಲು ಶುಕ್ತಿಯಲ್ಲಿ ರಜತಸಾದೃಶ್ಯಜ್ಞಾನದಿಂದಾಗಿ ರಜತದ ಸ್ಮರಣೆ ಬರುತ್ತದೆ. ಇದೇ ಆರೋಪ್ಯಜ್ಞಾನ. ಇದರಿಂದ 'ಇದಂ ರಜತಂ' ಎಂಬ ಭ್ರಮೆ ಹುಟ್ಟುತ್ತದೆ. ಹೀಗೆ, ಭ್ರಮೆಗೆ ಆರೋಪ್ಯಜ್ಞಾನ ಕಾರಣ. ಆದರೆ, ಪ್ರಕೃತದಲ್ಲಿ ಹಿಂದೆ 'ಇದಂ ರಜತಂ' ಎಂದು ವ್ಯವಸಾಯ ಬಂದ ಕೂಡಲೇ 'ಇದಂ ರಜತಮ್ ಇತಿ ಜ್ಞಾನಂ ಪ್ರಮಾ' ಎಂಬ ಭ್ರಮಾತ್ಮಕಜ್ಞಾನ ಹುಟ್ಟುತ್ತದೆ, ಎನ್ನಲಾಯಿತು. ಇಲ್ಲಿ ಆರೋಪ್ಯ ಪ್ರಮಾತ್ವ. ಅದರ ಜ್ಞಾನ ಇಲ್ಲದೆಯೇ ಭ್ರಮೆ ಬರುವುದು ಹೇಗೆ?

ಇದಕ್ಕೆ ಹೀಗೆ ಪರಿಹಾರ—ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ. ಆದರೂ ಪ್ರಥಮದಲ್ಲಿ ಪ್ರಮಾತ್ವರೂಪ ವಿಶೇಷಣ ಜ್ಞಾನವಿಲ್ಲದಿದ್ದರೂ ಸ್ವತಸ್ತ್ವಪಕ್ಷದಲ್ಲಿ 'ಇದಂ ಜ್ಞಾನಂ ಪ್ರಮಾ' ಎಂಬ

ಜ್ಞಾನವು ಹೇಗೆ ಬರುವುದೋ ಅದರಂತೆ ಆರೋಪ್ಯವಾದ ಪ್ರಮಾತ್ವಜ್ಞಾನ ಇಲ್ಲದೆಯೇ 'ರಜತಜ್ಞಾನಂ ಪ್ರಮಾ' ಎಂಬ ಮಾನಸಭ್ರಮೆಯು ಬರಬಹುದು. (ಸಿದ್ಧಾಂತದಲ್ಲಿ ವಿಶಿಷ್ಟಜ್ಞಾನಂ ಪ್ರತಿ ವಿಶೇಷಣ ಜ್ಞಾನವು ಕಾರಣವಲ್ಲ. ಸನ್ನಿಕರ್ಷವಶಾತ್ ವಿಶೇಷ್ಯ-ವಿಶೇಷಣ-ಅವುಗಳ ಸಂಸರ್ಗ ಈ ಮೂರರ ಜ್ಞಾನವೂ ಜೊತೆಯಲ್ಲೇ (ಯುಗಪತ್) ಬರುತ್ತದೆ.)

ಇದು ಮತ್ತೆ ಕೆಲವರು ಹೇಳುವ ಸಮಾಧಾನ.

## ನ್ಯಾಯದೀಪ

**ಅನ್ಯತ್ರೇತಿ ॥ ಶುಕ್ತಿರೂಪ್ಯಾದಿವಿಷಯಕೇ ಇತ್ಯರ್ಥಃ। ಶುಕ್ತ್ಯಾದಾವೇವ ರಜತತ್ವಾದ್ಯಾರೋಪಃ, ನಾನ್ಯತ್ರ ಇತ್ಯೇತನ್ನಿಯಾಮಕತಯಾ ರೂಪ್ಯಾದಿನಿಷ್ಠ-ಚಾಕಚಕ್ಯಾದಿಮತ್ತಯಾ ಶುಕ್ತ್ಯಾದಿಜ್ಞಾನಸ್ಯ ತದಾರೋಪಹೇತುತ್ವಮ್ ಆವಶ್ಯಕಮ್ ಇತಿ ಭಾವಃ।**

ಭ್ರಮೆಗೆ ಧರ್ಮಿಜ್ಞಾನವು ಕಾರಣವಾಗಿದೆ. ರಜತದ ಆರೋಪ ಶುಕ್ತಿಯಲ್ಲೇ ಮಾಡಲಾಗುತ್ತದೆ. ಇತರ ಲೋಹಗಳಲ್ಲಿ ರಜತಭ್ರಮೆಯು ಬರುವುದಿಲ್ಲ. ಅದಕ್ಕೇನು ನಿಯಾಮಕ? ಶುಕ್ತಿಯಲ್ಲಿ ರಜತದಂತೆ ಹೊಳಪು ಇದೆ. ಹೀಗೆ ಅದರಲ್ಲಿ ರಜತಸಾದೃಶ್ಯಜ್ಞಾನ ಬರುವುದರಿಂದ ರಜತಭ್ರಮೆ ಬರುತ್ತದೆ. ಇತರ ವಸ್ತುಗಳಲ್ಲಿ ರಜತಸಾದೃಶ್ಯಜ್ಞಾನ ಇಲ್ಲ. ಆದ್ದರಿಂದ ರಜತಭ್ರಮೆ ಬರುವುದಿಲ್ಲ. ಹೀಗೆ ಭ್ರಮೆಯ ವ್ಯವಸ್ಥೆ ಮಾಡಬೇಕಾದರೆ ಧರ್ಮಿಜ್ಞಾನವು ಭ್ರಮೆಗೆ ಕಾರಣ ಎಂದು ಹೇಳಲೇಬೇಕು.

## ನ್ಯಾಯದೀಪ

**ವರ್ತಮಾನೇತ್ಯಾದಿ ॥ ಯಥಾ ಹಿ ಘಟಾದಿಪ್ರಮಾಯಾಂ ತದನುವ್ಯವ-ಸಾಯೇನ ವ್ಯವಸಾಯೋಪನೀತ-ತದ್ವತ್ತಾದಿ-ಘಟಿತ-ಪ್ರಾಮಾಣ್ಯಗ್ರಹಃ ತಥಾ ಶುಕ್ತಿರೂಪ್ಯಾದ್ಯಪ್ರಮಾಯಾಮಪಿ ತದನುವ್ಯವಸಾಯೇನ ತದುಪನೀತ ತದ್ವತ್ತಾದಿಘಟಿತ ಪ್ರಾಮಾಣ್ಯಂ ಧರ್ಮಿಜ್ಞಾನಂ ವಿನೈವ ತದುತ್ತರಕ್ಷಣೇ ಏವ ಪರಿಚ್ಛಿದ್ಯತೇ ಇತ್ಯುಪೇತಂ ತದ್ವದಿತ್ಯರ್ಥಃ ॥**

ಪ್ರಕೃತ ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ ಎಂಬುದಕ್ಕೆ ಅಪ್ರಮಾದಲ್ಲಿ ಪ್ರಮಾತ್ವ ಭ್ರಮೆಯನ್ನು ಉದಾಹರಣೆಯಾಗಿ ಕೊಡಲಾಗಿದೆ. ಈ ದೃಷ್ಟಾಂತದ ಸಮರ್ಥನೆ ಹೀಗೆ-'ಅಯಂ ಘಟಃ' ಎಂಬ ಜ್ಞಾನದಲ್ಲಿ (ವ್ಯವಸಾಯದಲ್ಲಿ) ಘಟತ್ವ ವೈಶಿಷ್ಟ್ಯವು (ತದ್ವತ್ತಾ) ಪುರೋವರ್ತಿಯಲ್ಲಿ ತೋರುತ್ತದೆ. ತದುಪನೀತವಾಗಿ ತದ್ಘಟಿತ ಪ್ರಾಮಾಣ್ಯವೂ ಅನುವ್ಯವಸಾಯದಲ್ಲಿ ವ್ಯವಸಾಯರೂಪ

ಧರ್ಮಿಗತವಾಗಿ ಭಾನವಾಗುತ್ತದೆ. ಅದಕ್ಕೆ ಪೂರ್ವದಲ್ಲಿ ಧರ್ಮಿಯಾದ ವ್ಯವಸಾಯದ ಜ್ಞಾನವು ಬೇಕಾಗಿಲ್ಲ. ಅದರಂತೆಯೇ ರಜತಭ್ರಮೆಯಲ್ಲಿ ಪುರೋವರ್ತಿ-ಶುಕ್ತಿಗತವಾಗಿ ರಜತತ್ವವೈಶಿಷ್ಟ್ಯವು ತೋರುತ್ತದೆ. ತದುಪನೀತವಾಗಿ ತದ್‌ಘಟಿತ ಪ್ರಾಮಾಣ್ಯವೂ ಧರ್ಮಿಜ್ಞಾನವಿಲ್ಲದೆಯೂ ವ್ಯವಸಾಯೋತ್ತರಕ್ಷಣದಲ್ಲೇ ಭಾನವಾಗುತ್ತದೆ. ಈ ದೃಷ್ಟಾಂತದಂತೆ, ಪ್ರಕೃತ ಜ್ಞಾನಧರ್ಮಿಕ-ಪ್ರಾಮಾಣ್ಯಸಂದೇಹಕ್ಕೂ ಧರ್ಮಿ ಜ್ಞಾನಬೇಕಾಗಿಲ್ಲ.

## ನ್ಯಾಯದೀಪ

**ಪ್ರಾಮಾಣ್ಯಾನುಪಸ್ಥಿತೇಃ ಕಥಂ ತದಾರೋಪಃ ಇತ್ಯಾಶಂಕ್ಯ ನಿರಾಹ-ನಚೇತ್ಯಾದಿನಾ ॥ ಅತ ಏವ ಪೂರ್ವಪಕ್ಷೇ ಮಣಿಕೃತಾಪಿ ಉಕ್ತಮ್ 'ಅಪ್ರಮಾಪಿ ಪ್ರಮೇತ್ಯೇವ ಗೃಹ್ಯತೇ' (ಪುಟ. 180) ಇತ್ಯಾದಿ, ಇತಿ ಭಾವಃ।**

ಆರೋಪ್ಯವಾದ ಪ್ರಾಮಾಣ್ಯದ ಜ್ಞಾನ ಪೂರ್ವದಲ್ಲಿ ಇಲ್ಲದಿರುವುದರಿಂದ ಅಪ್ರಮಾದಲ್ಲಿ ಪ್ರಮಾತ್ವಾರೋಪ ಹೇಗೆ ಸಾಧ್ಯ ? ಇದಕ್ಕೆ ಮೂಲದ 'ನಚ' ಎಂಬ ವಾಕ್ಯದಲ್ಲಿ ಸಮಾಧಾನವಿದೆ.

ವ್ಯವಸಾಯದಲ್ಲಿ, ಪುರೋವೃತ್ತಿಯಲ್ಲಿ ರಜತತ್ವವೈಶಿಷ್ಟವು ತೋರಿರುವುದರಿಂದ ವ್ಯವಸಾಯೋಪನೀತವಾಗಿ 'ರಜತತ್ವವಿಶಿಷ್ಟವಿಶೇಷ್ಯಕತ್ವರೂಪವಾದ ಪ್ರಮಾತ್ವವು ವಿಶೇಷಣವಾಗಿ ತೋರುತ್ತದೆ'-'ರಜತಜ್ಞಾನಂ ಪ್ರಮಾ' ಎಂದು. ಇದು ಪೂರ್ವಪಕ್ಷ ಗ್ರಂಥದಲ್ಲಿ ಮಣಿಕಾರನ ಆಶಯ. ಅದರಂತೆಯೇ ಪ್ರಕೃತದಲ್ಲೂ ಪ್ರಮಾತ್ವದ ಜ್ಞಾನ ಮೊದಲು ಇರಬೇಕಾಗಿಲ್ಲ.

## ಅಸ್ವಾರಸ್ಯಕಥನ

**ಅತ್ರ ಅರುಚಿಬೀಜಂ ತು-ಜ್ಞಾನಗ್ರಹಸ್ಯ ಸಾಕ್ಷಿತ್ವಾತ್, ಪ್ರಾಮಾತ್ವಸಂದೇಹಸ್ಯ ಮಾನಸತ್ವಾತ್ ಜ್ಞಾನಗ್ರಹೇಣ ಚ ಪ್ರಾಮಾಣ್ಯಾಗ್ರಹೇಣ ಸ್ವತಸ್ತ್ವಭಂಗಾಪತ್ತಿ-ನಿರಾಸಾಯ ಪ್ರಾಗುಕ್ತರೀತೇರೇವ ಅನುಸರ್ತವ್ಯತ್ವಾತ್, ಇತಿ ಜ್ಞೇಯಮ್।**

ಈ ಪಕ್ಷವೂ ಮೂಲಕಾರರಿಗೆ ಸಮ್ಮತವಲ್ಲ. ಅದಕ್ಕೆ ಕಾರಣ-ಸಂದೇಹಕ್ಕೆ ಧರ್ಮಿಜ್ಞಾನವು ಕಾರಣವಲ್ಲ. ಏವಂ ಚ, ಪ್ರಥಮದಲ್ಲೇ ಪ್ರಾಮಾಣ್ಯಸಂದೇಹರೂಪವಾದ ಅನುವ್ಯವಸಾಯವು ಹುಟ್ಟುತ್ತದೆ, ಎಂದು ಒಪ್ಪಿದರೂ ಸ್ವತಸ್ತ್ವಭಂಗ ಈ ಪಕ್ಷದಲ್ಲಿ ಅನಿವಾರ್ಯ. ಹೇಗೆಂದರೆ, 'ಘಟಜ್ಞಾನಂ ಪ್ರಮಾಣಂ ನವಾ' ಎಂಬ ಸಂದೇಹದಲ್ಲಿ ಧರ್ಮಿಜ್ಞಾನ ಅಂದರೆ ಘಟಜ್ಞಾನದ ಜ್ಞಾನ, ಸಾಕ್ಷಿರೂಪವಾದುದು. ಸಂದೇಹ ಮಾನಸ. ಹೀಗಾಗಿ ಜ್ಞಾನಗ್ರಾಹಕವಾದ ಸಾಕ್ಷಿಯು ಇಲ್ಲಿ ಪ್ರಾಮಾಣ್ಯವನ್ನು ಗ್ರಹಿಸಿಲ್ಲವಾದ ಕಾರಣ, ಸ್ವತಸ್ತ್ವಕ್ಕೆ ಚ್ಯುತಿ ಬಂತು.

ಇದಕ್ಕೆ ಮೂಲದಲ್ಲಿ ಹೇಳಿದ ಪರಿಹಾರವನ್ನೇ ಹೇಳಬೇಕು-ಜ್ಞಾನಗೃಹೀತವಾದರೂ

ಮಾನಸಸಂದೇಹರೂಪವಾದ ಪ್ರತಿಬಂಧಕವಿದ್ದಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು. ಹೀಗೆ, ಅವಶ್ಯಾಂಗೀಕಾರ್ಯವಾದ ಈ ಪರಿಹಾರದಿಂದಲೇ ಪ್ರಾಮಾಣ್ಯಸಂದೇಹವನ್ನು ಸಮರ್ಥಿಸಬಹುದಾದ್ದರಿಂದ ಧರ್ಮಿಜ್ಞಾನಕಾರಣವಲ್ಲ, ಎನ್ನುವ ವಿವಾದಾಸ್ಪದವಾದ ಪರಿಹಾರದ ಅಗತ್ಯವಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಧರ್ಮಿಜ್ಞಾನಹೇತುತ್ವಂ ತೇನ ಪ್ರಾಮಾಣ್ಯನಿಶ್ಚಯಂ ಚೋಪೇತ್ಯ ಸಂಶಯೋಪಪಾದನಂ ಪ್ರಕಾರಾಂತರೇಣ ದರ್ಶಯತಿ–ಅನ್ಯೇ ತ್ವಿತಿ ॥**

ಸಂದೇಹವನ್ನು ಸಮರ್ಥಿಸುವ ಮೂರನೆಯ ಪ್ರಕಾರವನ್ನು ಮೂಲದಲ್ಲಿ ತೋರಿಸಲಾಗಿದೆ. ಈ ಪಕ್ಷದ ವಿಶೇಷ ಇದು–ಸಂಶಯಕ್ಕೆ ಧರ್ಮಿಜ್ಞಾನವು ಕಾರಣ, ಎಂದೂ ಈ ಪಕ್ಷದಲ್ಲಿ ಅಂಗೀಕೃತವಾಗಿದೆ. ಪ್ರಥಮಾನುವ್ಯವಸಾಯದಲ್ಲಿ ಪ್ರಾಮಾಣ್ಯನಿಶ್ಚಯವೂ ಆಗಿದೆ, ಎಂದೂ ಅಂಗೀಕರಿಸಲಾಗಿದೆ. ಆದ್ದರಿಂದ ಸ್ವತಸ್ತ್ವಹಾನಿ ಇಲ್ಲ. ಹೀಗೆ ಎರಡನ್ನೂ ಒಪ್ಪಿದಾಗ ಪ್ರಾಮಾಣ್ಯಸಂದೇಹ ಬರುವ ಕ್ರಮವನ್ನು ಈ ಪಕ್ಷದಲ್ಲಿ ಸಮರ್ಥಿಸಲಾಗಿದೆ.

**अन्ये तु, संशयस्थलेप्युक्तरीत्या सामग्रीसत्वेन आदावेवानुव्यवसायेन प्रामाण्यनिश्चयेऽपि अनुव्यवसायनाशानन्तरं स्मृत्युपनीते व्यवसाये तत्संशयो युक्त एव। नह्यनुव्यवसायकाल एव संशयो न तु तदव्यवहितोत्तरकाल इति योगादिसंपत्तिं विना ज्ञातुं शक्यम्। परमतेऽपि न प्रामाण्यसंशयकाले व्यवसायोऽस्ति। धर्मिज्ञानानन्तरभाविकोटिस्मरणकाल एव व्यवसायनाशादित्याहुः।**

ಪ್ರಾಮಾಣ್ಯಸಂದೇಹ ಬರುವ ಸಂದರ್ಭದಲ್ಲಿ, ಪೂರ್ವದಲ್ಲೇ ಅನುವ್ಯವಸಾಯವು ವ್ಯವಸಾಯಗತ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅಲ್ಲಿ ಪ್ರಾಮಾಣ್ಯವನ್ನು ಗ್ರಹಿಸಲು ಬೇಕಾಗಿರುವ ಎಲ್ಲ ಸಾಮಗ್ರಿಗಳು ಇರುವುದರಿಂದ ಪ್ರಾಮಾಣ್ಯನಿಶ್ಚಯ ಅನಿವಾರ್ಯ. ಹೀಗೆ ಸ್ವತಸ್ತ್ವವಾದಕ್ಕೆ ಇಲ್ಲೇನೂ ಚ್ಯುತಿ ಬಂದಿಲ್ಲ. ಆದರೂ ಜ್ಞಾನವು ದ್ವಿಕ್ಷಣ ಮಾತ್ರ ಇರುವುದರಿಂದ ಪ್ರಾಮಾಣ್ಯನಿಶ್ಚಯಾತ್ಮಕವಾದ ಆ ಅನುವ್ಯವಸಾಯವು ನಾಶವಾದ ಮೇಲೆ ವ್ಯವಸಾಯದ ಸ್ಮರಣೆ ಬರುತ್ತದೆ. ಸ್ಮೃತ್ಯುಪನೀತವಾದ ಆ ವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹ ಬರುತ್ತದೆ. ಆ ಸಂದೇಹವು ಅನುವ್ಯವಸಾಯದ ಅವ್ಯವಹಿತೋತ್ತರದಲ್ಲೇ ಬಂದಿರುತ್ತದೆ, ಎಂದು ನಿರ್ಧಾರಮಾಡಲು ಬರುವುದಿಲ್ಲ. ಏಕೆಂದರೆ, ಕ್ಷಣಕಾಲವು ಅತಿಸೂಕ್ಷ್ಮವಾದುದರಿಂದ ಅದನ್ನು ಹೀಗೆಯೇ ಎಂದು

ನಿರ್ಧಾರಮಾಡಿ ಹೇಳುವುದು ಸಾಧ್ಯವಿಲ್ಲ. ಅದು ಯೋಗಿಗಳಿಗೆ ಮಾತ್ರ ಸಾಧ್ಯ. ಆದ್ದರಿಂದ ಆ ಸಂದೇಹ ಅನುವ್ಯವಸಾಯ ನಾಶವಾದ ಮೇಲೆ ಬರುತ್ತದೆ, ಎಂದು ಹೇಳಿ ಪ್ರಾಮಾಣ್ಯಸ್ವತಸ್ತ್ವಕ್ಕೆ ಬಂದಿರುವ ಬಾಧಕವನ್ನು ಪರಿಹಾರ ಮಾಡಬಹುದಾಗಿದೆ.

ಪ್ರಾಮಾಣ್ಯಪರತಸ್ತ್ವವನ್ನು ಹೇಳುವ ನೈಯಾಯಿಕರಾದರೂ ಅನುವ್ಯವಸಾಯದ ಅವ್ಯಹಿತೋತ್ತರ ಕ್ಷಣದಲ್ಲೇ ಸಂದೇಹವನ್ನು ಹೇಳಲಾರರು. ಅದು ಯುಕ್ತಿವಿರುದ್ಧ. ಏಕೆಂದರೆ, ಅನುವ್ಯವಸಾಯದಲ್ಲಿ ವ್ಯವಸಾಯರೂಪವಾದ ಸಾಧಾರಣಧರ್ಮವಿಶಿಷ್ಟ ಧರ್ಮಿಯ ಭಾನವಾಗುತ್ತದೆ. ಅನಂತರ ಕೋಟಿಸ್ಮರಣೆ. ಆಗ ವ್ಯವಸಾಯರೂಪವಾದ ಜ್ಞಾನವು ನಾಶವಾಗಿರುತ್ತದೆ. ಮತ್ತೆ ಅದರ ಸ್ಮರಣೆಯನ್ನು ಒಪ್ಪಬೇಕು. ಆ ಮೇಲೆ ಸ್ಮೃತ್ಯುಪನೀತವಾದ ವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹ ಬರಬೇಕು. ಹೀಗೆ ಪರತಸ್ತ್ವವಾದಿಗಳೂ ಸ್ಮೃತ್ಯುಪನೀತ–ಜ್ಞಾನಧಾರ್ಮಿಕ ಸಂದೇಹವನ್ನೇ ಒಪ್ಪಬೇಕಾಗುತ್ತದೆ.

ಹೀಗೆ, ಪ್ರಾಮಾಣ್ಯವು ಅನುವ್ಯವಸಾಯದಿಂದ ಗೃಹೀತವಾದರೂ ಸಂದೇಹವನ್ನು ಸಮರ್ಥಿಸಬಹುದಾದ್ದರಿಂದ ಸ್ವತಸ್ತ್ವಪಕ್ಷದಲ್ಲಿ ಸಂದೇಹಾನುಪಪತ್ತಿ ಇಲ್ಲ.

## ನ್ಯಾಯದೀಪ

**ಉಕ್ತೇತಿ ॥ ಬಾಧೋದ್ಧಾರ ಗ್ರಂಥೋಕ್ತರೀತ್ಯಾ ಇತ್ಯರ್ಥಃ। ತದಾ ವ್ಯವಸಾಯಸ್ಯಾಪಿ ಧರ್ಮಿಣೋ ನಾಶಾತ್ ನ ಸಂಶಯಃ ಇತ್ಯತ ಆಹ– ಸ್ಮೃತೀತಿ ॥ ಅನುವ್ಯವಸಾಯಾಹಿತ–ಸಂಸ್ಕಾರಜನ್ಯ–ಸ್ಮೃತ್ಯುಪನೀತೇ ಇತ್ಯರ್ಥಃ। ನನು ಉಪನೀತಸ್ಯ ಕಥಂ ಸಂಶಯೇ ವಿಶೇಷ್ಯತಯಾ ಭಾನಮ್? ಇತ್ಯತ ಆಹ–ಪರಮತೇಽಪೀತಿ ॥**

ಅನುವ್ಯವಸಾಯ ನಾಶವಾದಮೇಲೆ ಸಂದೇಹವನ್ನು ಅಂಗೀಕರಿಸಿದರೆ ಸಂದೇಹಾತ್ ಪೂರ್ವದಲ್ಲಿ ಧರ್ಮಿಯಾದಜ್ಞಾನವೇ ಇಲ್ಲವಾದುದರಿಂದ ಸಂದೇಹ ಹೇಗೆ? ಅದಕ್ಕೆ 'ಸ್ಮೃತ್ಯುಪನೀತೇ' ಎಂದು ಮೂಲವಾಕ್ಯದಲ್ಲಿ ಸಮಾಧಾನವನ್ನು ಕೊಡಲಾಗಿದೆ. ಅನುವ್ಯವಸಾಯ ನಾಶವಾದರೂ ಅನುವ್ಯವಸಾಯಜನ್ಯ–ಸಂಸ್ಕಾರೋತ್ಪನ್ನವಾದ ಸ್ಮೃತಿಯಿಂದ ಉಪನೀತವಾದ ವ್ಯವಸಾಯವೇ ಧರ್ಮಿ.

## ತೃತೀಯಪಕ್ಷದಲ್ಲಿ ಅಸ್ವಾರಸ್ಯ

**ಅತ್ರಾಪಿ ಕಲ್ಪೇ ಸಂಶಯಸ್ಥಲೇ ಜ್ಞಾನಗ್ರಹಸ್ಯ ಸಾಕ್ಷಿತ್ವಾತ್ ಪ್ರಾಮಾಣ್ಯಗ್ರಹಸ್ಯ ಚ ಮಾನಸತ್ವಾತ್ ಮಾನಸ ಪ್ರಾಮಾಣ್ಯನಿಶ್ಚಯಸ್ಯ ನಾಶೇಽಪಿ ಜ್ಞಾನಗ್ರಹಸ್ಯ ಸಾಕ್ಷಿಣಃ, ಔತ್ತರಿಕಾನುಸ್ಮೃತಿಸಿದ್ಧ–ಸೌಷುಪ್ತಿಕಾತ್ಮಸ್ವರೂಪಾನುಭವರೂಪಸ್ಯ ಸದಾ ಸತ್ವೇನ**

**ತೇನ ಪ್ರಾಮಾಣ್ಯಾಗ್ರಹಣೇನ ಪ್ರಾಮಾಣ್ಯಗ್ರಹಣಮ್ ಉಪೇತ್ಯ ತನ್ನಾಶೇನ ಸಂಶಯೋಪಪಾದನಸ್ಯ ಅಶಕ್ಯತಯಾ ತದುಪಪಾದನಸ್ಯ ಪ್ರಾಗುಕ್ತದಿಶೈವ ಕಾರ್ಯತ್ವಾತ್ ಕಿಮನೇನ ಪ್ರಕಾರೇಣ ।**

ಈ ತೃತೀಯ ಕಲ್ಪದಲ್ಲೂ ಅಸ್ವಾರಸ್ಯವಿದೆ— ಪ್ರಾಮಾಣ್ಯ ಸಂದೇಹ ಬರುವ ಸಂದರ್ಭದಲ್ಲಿ, ಮೊದಲು ಪ್ರಾಮಾಣ್ಯವು ಗೃಹೀತವಾಗಿದ್ದರೂ ಅದು ಅದೃಢನಿರ್ಣಯವಾದ ಕಾರಣ ಮಾನಸ. ಆದರೆ ಜ್ಞಾನಗ್ರಹ ಸಾಕ್ಷಿರೂಪವಾದುದು. ಸ್ವತಸ್ತ್ವವನ್ನು ಯಥಾಶ್ರುತವಾಗಿ ಒಪ್ಪಿಕೊಂಡರೆ ಆ ಸಾಕ್ಷಿರೂಪವಾದ ಜ್ಞಾನಗ್ರಹವು ಪ್ರಾಮಾಣ್ಯವನ್ನು ವಿಷಯೀಕರಿಸಬೇಕು. ಆಗ ಮಾನಸ ಪ್ರಾಮಾಣ್ಯನಿಶ್ಚಯವು ಸಂದೇಹಕಾಲದಲ್ಲಿ ನಷ್ಟವಾಗಿದ್ದರೂ ಸಾಕ್ಷಿರೂಪವಾದ ಆ ಪ್ರಾಮಾಣ್ಯ ಜ್ಞಾನವು ನಾಶವಾಗಿರುವುದಿಲ್ಲ. ಏಕೆಂದರೆ, ಸಾಕ್ಷ್ಯನುಭವವು ಆತ್ಮಾನುಭವರೂಪ. ಆತ್ಮಾನುಭವ ಸುಷುಪ್ತಿಯಲ್ಲೂ ಇದೆ. ಏಕೆಂದರೆ, ಸುಷುಪ್ತಿಯಿಂದ ಎದ್ದಮೇಲೆ 'ಸುಖಮಹಂ ಅಸ್ವಾಪ್ಸಂ' ಎಂಬ ಸ್ಮರಣೆಯಿಂದಾಗಿ ಸುಷುಪ್ತಿಕಾಲದಲ್ಲೂ ಆತ್ಮಾನುಭವ ಇದೆ, ಎಂದು ಸಿದ್ಧವಾಗುತ್ತದೆ. ಹೀಗೆ ಅದು ನಿತ್ಯಾನುಭವ. ಆದರಿಂದ ಜ್ಞಾನಗ್ರಾಹಕ ಸಾಕ್ಷಿರೂಪವಾದ ಇಂದ್ರಿಯದಿಂದ ಪ್ರಾಮಾಣ್ಯ ಗ್ರಹವಾಗಿದ್ದಲ್ಲಿ ಅದು ಸದಾ ಇರುವುದರಿಂದ ಪ್ರಾಮಾಣ್ಯಸಂದೇಹವು ಬರಲು ಸಾಧ್ಯವಿಲ್ಲ. ಹೀಗೆ ಜ್ಞಾನಗ್ರಾಹಕದಿಂದ ಪ್ರಾಮಾಣ್ಯಗ್ರಹಣವಾಗಿದೆ, ಎಂದು ಅಂಗೀಕರಿಸಿ ಪ್ರಾಮಾಣ್ಯಸಂದೇಹವನ್ನು ಸಮರ್ಥಿಸಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ಸಂದರ್ಭದಲ್ಲಿ ಜ್ಞಾನಗ್ರಾಹಕವು (ಸಾಕ್ಷಿಯು) ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಎಂದು ಹೇಳಲೇಬೇಕಾಗುತ್ತದೆ. ಹಾಗೆ ಹೇಳುವುದು ಅನಿವಾರ್ಯವಾದ ಮೇಲೆ ಮಾನಸಪ್ರಾಮಾಣ್ಯನಿಶ್ಚಯವನ್ನು ಒಪ್ಪಿ, ಅದು ನಾಶವಾದ ಮೇಲೆ ಸಂದೇಹ ಬರುತ್ತದೆ, ಎಂದು ಹೇಳುವುದು ವ್ಯರ್ಥ. ಮೂಲಕಾರರು ಮಾಡಿದ ಸಿದ್ಧಾಂತದಂತೆ, ಪ್ರತಿಬಂಧಕವಶಾತ್ ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಿಲ್ಲವಾದುದರಿಂದಲೇ ಸಂದೇಹ ಬರುತ್ತದೆ, ಎಂದೇ ಹೇಳಬಹುದು.

## ನ್ಯಾಯದೀಪ

**ನ ಚ ಜ್ಞಾನಜ್ಞಾನಂ ಮಾನಸಮ್ । ತಥಾತ್ವೇ ಕದಾಚಿತ್ ತಜ್ಜ್ಞಾನತ್ವೇ ಸಂಶಯಾದ್ಯಾಪಾತಾತ್ । ಉಕ್ತಂ ಹಿ ಜ್ಞಾನಪಾದೇ–**

**ಇಚ್ಛಾ ಜ್ಞಾನಂ ಸುಖಂ ದುಃಖಂ ಭಯಾಭಯಕೃಪಾದಯಃ ।**
**ಸಾಕ್ಷಿಸಿದ್ಧಾ ನ ಕಶ್ಚಿದ್ಧಿ ತತ್ರ ಸಂಶಯವಾನ್ ಕ್ವಚಿತ್ ॥**

**ಇತ್ಯರುಚಿಬೀಜಂ ಧ್ಯೇಯಮ್ ।**

ಸಂಶಯ ಸಂದರ್ಭದಲ್ಲಿ ಸಂದೇಹವು ಮಾನಸವಾದಂತೆ ಜ್ಞಾನದ ಜ್ಞಾನವೂ ಮಾನಸವೇ ಏಕಾಗಬಾರದು? ಅದು ಸಾಕ್ಷಿರೂಪ ಏಂದೇಕೆ ಹೇಳಬೇಕು? ಎಂದರೆ, ಒಂದುವೇಳೆ ಜ್ಞಾನಜ್ಞಾನವು ಮಾನಸವಾದರೆ 'ಇದು ಜ್ಞಾನ ಹೌದೋ ಅಲ್ಲವೋ' ಎಂಬ ಸಂದೇಹವು ಕದಾಚಿತ್ ಬರಬೇಕಾದೀತು. ಆದರೆ, ಜ್ಞಾನಾದಿಸ್ವರೂಪದ ಬಗ್ಗೆ ಎಂದೂ ಸಂದೇಹವು ಬರುವುದಿಲ್ಲವಾದ ಕಾರಣ ಜ್ಞಾನಜ್ಞಾನ ಸದಾ ಸಾಕ್ಷಿರೂಪ. ಇದನ್ನು ಜ್ಞಾನಪಾದದ ಅನುವ್ಯಾಖ್ಯಾನದಲ್ಲಿ (3.4-6) ಆಚಾರ್ಯರು ಹೇಳಿದ್ದಾರೆ– 'ಇಚ್ಛಾ, ಜ್ಞಾನ, ಸುಖ, ದುಃಖ, ಭಯ, ಅಭಯ, ಕೃಪೆ ಇವೆಲ್ಲವೂ ಸಾಕ್ಷಿಸಿದ್ಧಗಳು. ಅವುಗಳ ಬಗ್ಗೆ ಎಂದೂ ಸಂದೇಹ ಬರುವುದಿಲ್ಲ' ಎಂದು.

ಹೀಗೆ ಈ ಪಕ್ಷದಲ್ಲೂ ಅಸ್ವಾರಸ್ಯ ಇದೆ.

## ನ್ಯಾಯದೀಪ

**ಸಿದ್ಧಾಂತಾನನುಗುಣಸ್ಯಾಪಿ ಏತತ್ ಪಕ್ಷತ್ರಯಸ್ಯ ತಾರ್ಕಿಕಂ ಪ್ರತಿ ದೂಷಣತಯಾ ವಕ್ತುಂ ಶಕ್ಯಮ್ ಇತಿ ಭಾವೇನ ಅತ್ರ ಉಪನ್ಯಾಸಃ ಇತಿ ಭಾವಃ ॥**

ಹಿಂದೆ ಸಂಶಯ ಸಮರ್ಥನೆಯನ್ನು ಸ್ವಪಕ್ಷದಂತೆ ಮಾಡಿ ಕೇಚಿತ್ತು, ಇತರೇ ತು, ಅನ್ಯೇ ತು ಎಂದು ಪಕ್ಷತ್ರಯಗಳನ್ನು ಹೇಳಿ ಸಂಶಯೋಪಪಾದನೆಯನ್ನು ಮಾಡಲಾಗಿದೆ. ಈ ಪಕ್ಷತ್ರಯಗಳೂ ಸಿದ್ಧಾಂತಕ್ಕೆ ಅನುಗುಣವಾಗಿರದಿದ್ದರೂ ತಾರ್ಕಿಕರಿಗೆ ಇದರಿಂದ ದೋಷವನ್ನು ಹೇಳಬಹುದು. ಅವರ ಸಿದ್ಧಾಂತವನ್ನು ಅನುಸರಿಸಿ ಸಂಶಯಸಮರ್ಥನೆಯನ್ನು ಮಾಡಬಹುದು. ಏಕೆಂದರೆ, ಅವರು ಜ್ಞಾನವು ಮನೋಗ್ರಾಹ್ಯ, ಸಾಕ್ಷಿಗ್ರಾಹ್ಯವಲ್ಲ ಎನ್ನುತ್ತಾರೆ. ಆದ್ದರಿಂದ ಅಸ್ವಾರಸ್ಯವಿದ್ದರೂ ಆ ಪಕ್ಷತ್ರಯಗಳನ್ನು ಉಲ್ಲೇಖಿಸಲಾಗಿದೆ.

## ಆಚಾರ್ಯರ ಸಮ್ಮತಿ

**एतदप्युक्तं ''अन्यथा'' इत्यादिना । प्रतिबन्धदशायां कार्याजननमात्रेण शक्तेः सहजत्वाभावे वह्न्यादौ दाहादिशक्तेः सहजत्वमिति व्यवस्थित्यनुपपत्तेरित्यर्थः ।।**

ಈ ಪ್ರಕರಣದಲ್ಲಿ ಹೇಳಿದ ವಿಷಯವು ಆಚಾರ್ಯರ 'ಅನ್ಯಥಾ ಅನವಸ್ಥಾನಾತ್' ಎಂಬ ವಾಕ್ಯದಿಂದ ಸೂಚಿತವಾಗಿದೆ.

ಅನ್ಯಥಾ=ಪ್ರಾಮಾಣ್ಯಗ್ರಹಣೆಗೆ ಪ್ರತಿಬಂಧಕ ಇರುವಾಗ ಪ್ರಾಮಾಣ್ಯನಿಶ್ಚಯ ಎಂಬ ಕಾರ್ಯವು ಉತ್ಪತ್ತಿಯಾಗಿಲ್ಲ ಎನ್ನುವ ಮಾತ್ರದಿಂದ ಸಾಕ್ಷಿಯಲ್ಲಿರುವ ಪ್ರಾಮಾಣ್ಯಗ್ರಹಣಶಕ್ತಿಯು

ಸಹಜವಲ್ಲ ಎಂದಾಗುವುದಾದಲ್ಲಿ ಅನವಸ್ಥಾನಾತ್=ವಹ್ನ್ಯಾದಿಗಳಲ್ಲಿರುವ ದಾಹಾದಿಕಾರ್ಯಜನನ ಶಕ್ತಿಯೂ ಸಹಜವಾದುದು, ಎಂಬ ವ್ಯವಸ್ಥೆಯು ಇಲ್ಲವೆಂದಾದೀತು, ಎಂದರ್ಥ.

## ನ್ಯಾಯದೀಪ

**ಏತದಪೀತಿ ಉಕ್ತರೀತ್ಯಾ ಸಂಶಯಸ್ಥಲೇ ಸ್ವತಸ್ತ್ವೋಪಪಾದನಮಪಿ, ಇತ್ಯರ್ಥಃ ॥**

ಏತದಪಿ ಎಂದರೆ ಪ್ರಾಮಾಣ್ಯಸಂದೇಹ ಬಂದಾಗಲೂ ಸ್ವತಸ್ತ್ವದ ಸಮರ್ಥನೆಯನ್ನು ಮಾಡಬಹುದು, ಎಂದು ಇದುವರೆಗೆ ಮಾಡಿದ ಸಮರ್ಥನೆಯೂ, ಎಂದರ್ಥ.

**ಇಲ್ಲಿಗೆ ಸ್ವತಸ್ತ್ವಪಕ್ಷೇ ಪ್ರಾಮಾಣ್ಯಸಂದೇಹ ಸಮರ್ಥನಂ ಪ್ರಕರಣವು ಮುಗಿಯಿತು. ॥ ೫ ॥**

# ಈ ಪ್ರಕರಣದ ಸಾರಾಂಶ

ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಪ್ರಾಮಾಣ್ಯವು ಗೃಹೀತವಾಗುತ್ತದೆ. ಇದು ಪ್ರಾಮಾಣ್ಯದ ಜಪ್ತೌ ಸ್ವತಸ್ತ್ವ. ಇದನ್ನು ಅಂಗೀಕಾರ ಮಾಡಿದರೆ ಮಣಿಕಾರ ಹಾಗೂ ಉದಯನಾಚಾರ್ಯರು ಸಂದೇಹಾನುಪಪತ್ತಿರೂಪವಾದ ಬಾಧಕವನ್ನು ಹೇಳಿದ್ದಾರೆ. ಮಣಿಕಾರ ಸ್ವತಸ್ತ್ವ ನಿರಾಕರಣೆಯ ಪ್ರಾರಂಭದಲ್ಲೇ ಸಿದ್ಧಾಂತಗ್ರಂಥದಲ್ಲಿ ಈ ಅನುಪಪತ್ತಿಯನ್ನು ಬಾಧಕವನ್ನಾಗಿ ಹೇಳಿ ದೀರ್ಘವಾಗಿ ಚರ್ಚಿಸಿದ್ದಾನೆ. ನೈಯಾಯಿಕರು ಮಾಡುವ ಆಕ್ಷೇಪ ಇದು–ಪ್ರಾಮಾಣ್ಯಸಂದೇಹವನ್ನು ಎರಡು ರೀತಿಯಿಂದ ಸಮರ್ಥಿಸಬಹುದು.

(1) ಸಾಕ್ಷಿಯು ಜ್ಞಾನವನ್ನು ಗ್ರಹಣೆ ಮಾಡಿದರೂ ಪ್ರಾಮಾಣ್ಯವನ್ನು ಗ್ರಹಣೆ ಮಾಡಿಲ್ಲ. ಆಗ ಪ್ರಾಮಾಣ್ಯನಿಶ್ಚಯ ಇಲ್ಲದಿರುವುದರಿಂದ ಪ್ರಾಮಾಣ್ಯಸಂದೇಹ ಬರುತ್ತದೆ– 'ನನಗೆ ಬಂದ ಜಲಜ್ಞಾನವು ಪ್ರಮಾಣ ಹೌದೋ ಅಲ್ಲವೋ' ಎಂದು. ಆದರೆ, ಹೀಗೆ ಹೇಳಿದರೆ ಸ್ವತಸ್ತ್ವವಾದಕ್ಕೆ ಭಂಗಬರುತ್ತದೆ. ಜ್ಞಾನದ ಜ್ಞಾನ ಬಂದಾಗ ಪ್ರಾಮಾಣ್ಯದ ಜ್ಞಾನವೂ ಬಂದೇ ಬರುತ್ತದೆ, ಎನ್ನುವುದೇ ಸ್ವತಸ್ತ್ವ. ಸಂದೇಹ ಬರುವ ಸಂದರ್ಭಲ್ಲಿ ಜ್ಞಾನ ಗೃಹೀತವಾದರೂ ಪ್ರಾಮಾಣ್ಯವು ಗೃಹೀತವಾಗದಿದ್ದರೆ ಸ್ವತಸ್ತ್ವಘಟಕ ನಿಯಮಕ್ಕೆ ಚ್ಯುತಿಬರುತ್ತದೆ. ಆದ್ದರಿಂದ ಈ ಪಕ್ಷ ಸರಿಯಲ್ಲ.

(2) ಅಥವಾ, ಸ್ವಾರಸಿಕ ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಆಹಿತಸಂದೇಹ ಬರಬಹುದು. ನೈಯಾಯಿಕರು ಆಹಿತಸಂದೇಹವನ್ನು ಕೆಲವೆಡೆ ಹೀಗೆ ಹೇಳುತ್ತಾರೆ. 'ಇದಂ ಜಲಂ' ಎಂಬ ಜ್ಞಾನದಿಂದ ಜಲವು ಇದೆ, ಎಂದು ನಿಶ್ಚಯವಾದರೂ 'ನನಗೆ ಬಂದಿರುವ ಜಲಜ್ಞಾನವು ಪ್ರಮಾಣವೋ ಅಲ್ಲವೋ' ಎಂಬ ಸಂದೇಹದಿಂದ 'ಇಲ್ಲಿ ನೀರಿದೆಯೋ ಇಲ್ಲವೋ' ಎಂಬ ಸಂದೇಹ ಬರುತ್ತದೆ. ಇದು ಸಂದೇಹದಿಂದ ಬಂದ ಸಂದೇಹ. ಆದ್ದರಿಂದಲೇ ಸಂದೇಹಾಹಿತಸಂದೇಹ. ಅರ್ಥನಿಶ್ಚಯೋತ್ತರ ಅರ್ಥಸಂದೇಹಕ್ಕೆ ಜ್ಞಾನಧರ್ಮಿಕ ಪ್ರಾಮಾಣ್ಯಸಂದೇಹವು ಕಾರಣ, ಎಂದು ನೈಯಾಯಿಕರ ವಾದ.

ಆದರಂತೆ, ಪ್ರಕೃತದಲ್ಲಿ, ಸಾಕ್ಷಿಯಿಂದ ಜ್ಞಾನವು ಗೃಹೀತವಾದಾಗ ಆದರಲ್ಲಿರುವ ಪ್ರಾಮಾಣ್ಯವೂ ಗೃಹೀತವಾಗಿದೆ. ಆದರೂ ಆ ಪ್ರಾಮಾಣ್ಯಜ್ಞಾನದಲ್ಲಿ ಅಂದರೆ 'ಇದಂ ಜಲಂ ಇತಿ ಜ್ಞಾನಂ ಪ್ರಮಾಣಂ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುತ್ತದೆ. ಇದಂ ಜಲಂ ಇತಿ ಜ್ಞಾನಂ ಪ್ರಮಾಣಂ ನ ವಾ, ಎಂದು. ಇದರಿಂದಾಗಿ 'ಜಲಜ್ಞಾನಂ ಪ್ರಮಾಣಂ ನ ವಾ' ಎಂಬ ಪ್ರಾಮಾಣ್ಯಸಂದೇಹ ಬರಬಹುದು. ಇದು ಪ್ರಾಮಾಣ್ಯಜ್ಞಾನಧರ್ಮಿಕ ಸಂದೇಹದಿಂದ ಆಹಿತವಾದ ಜಲಾದಿ ಜ್ಞಾನಧರ್ಮಿಕಪ್ರಾಮಾಣ್ಯ ಸಂದೇಹ.

ಈ ರೀತಿಯ ಸಂದೇಹಕ್ಕೂ ಆಸ್ಪದವಿಲ್ಲ. ಪ್ರಾಮಾಣ್ಯಜ್ಞಾನಧರ್ಮಿಕ ಸಂದೇಹವಾದರೂ ಏಕೆ

ಬಂತು? ಪ್ರಾಮಾಣ್ಯಜ್ಞಾನವನ್ನು ಗ್ರಹಿಸುವ ಸಾಕ್ಷಿಯು ತದ್ಗತಪ್ರಾಮಾಣ್ಯವನ್ನೂ ಗ್ರಹಿಸಿದೆ. ಇಲ್ಲದಿದ್ದಲ್ಲಿ ಸ್ವತಸ್ತ್ವಭಂಗವಾಗುತ್ತದೆ. ಅಂದಮೇಲೆ ಮೊದಲಸಂದೇಹವೇ ಇಲ್ಲ. ತದಾಹಿತ ಸಂದೇಹ ಹೇಗೆ?

ಹೀಗೆ ಎರಡೂ ರೀತಿಯಿಂದ ಪ್ರಾಮಾಣ್ಯಸಂದೇಹ ಬರಲು ಸಾಧ್ಯವಿಲ್ಲ. ಆದ್ದರಿಂದ ಸ್ವತಸ್ತ್ವಪಕ್ಷ ಯುಕ್ತವಲ್ಲ. ಇದು ನೈಯಾಯಿಕರು ಮಾಡುವ ಪ್ರಬಲ ಆಕ್ಷೇಪ.

ಈ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಜ್ಞಾನಗ್ರಾಹಕೇಣ ಪ್ರಾಮಾಣ್ಯಮಪಿ ಗೃಹ್ಯತೇ, ಎನ್ನುವ ಸ್ವತಸ್ತ್ವನಿಯಮ ಉತ್ಸರ್ಗ. ಇದಕ್ಕೆ ಅಪವಾದವಿದೆ. ಪ್ರತಿಬಂಧಕಗಳಿದ್ದಾಗ ಈ ನಿಯಮ ಭಂಗ ವಾಗುತ್ತದೆ. ಹುಟ್ಟಿದ ಜ್ಞಾನವು ದೋಷಜನ್ಯವಾಗಿದೆ ಎಂಬ ನಿರ್ಧಾರ ಅಥವಾ ಸಂದೇಹವಿದ್ದಾಗ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ತದ್ಗತ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಪ್ರಾಮಾಣ್ಯ ನಿಶ್ಚಯವಿಲ್ಲದಿರುವುದರಿಂದ ಸಹಜವಾಗಿಯೇ ಸಂದೇಹ ಬರುತ್ತದೆ. ಅಥವಾ, ಪ್ರಾಮಾಣ್ಯಜ್ಞಾನವು ಗೃಹೀತವಾದರೂ ತದ್ಗತಪ್ರಾಮಾಣ್ಯವು ಗೃಹೀತವಾಗದಿರುವಾಗ ಪ್ರಾಮಾಣ್ಯಜ್ಞಾನದಲ್ಲಿ ಸಂದೇಹ ಬಂದು ತದಾಹಿತವಾಗಿ ಜಲಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರಬಹುದು. ಹೀಗೆ ಆಹಿತ ಸಂದೇಹವೂ ಬರಬಹುದು.

ಸಾಕ್ಷಿಯು ಪ್ರತಿಬಂಧಕವಿದ್ದಾಗ ಪ್ರಾಮಾಣ್ಯವನ್ನು ಗ್ರಹಿಸದಿದ್ದರೂ ಅದರಲ್ಲಿರುವ ಪ್ರಾಮಾಣ್ಯಗ್ರಹಣಶಕ್ತಿಯು ಸಹಜವಾದುದು. ಗೋಕ್ಷುರಕದಿಂದ ಗಜಗಮನವು ಪ್ರತಿಬದ್ಧವಾದರೂ ಗಜದಲ್ಲಿ ಗಮನಶಕ್ತಿಯು ಸಹಜವಾದಂತೆ. ಸಾಕ್ಷಿಯಲ್ಲಿ ಪ್ರಾಮಾಣ್ಯಗ್ರಹಣಶಕ್ತಿ ಸಹಜ, ಎನ್ನುವುದೇ ಪ್ರಾಮಾಣ್ಯಸ್ವತಸ್ತ್ವದ ಮುಖ್ಯಾಂಶ. ದೋಷಜನ್ಯತ್ವ ನಿಶ್ಚಯ ಇದ್ದಾಗ ಮಾತ್ರ ಅದು ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹೀಗೆ ಅಪ್ರಾಮಾಣ್ಯಗ್ರಹಣಶಕ್ತಿ ಅದಕ್ಕೆ ಆಗಂತುಕವಾಗಿದೆ. ಆದ್ದರಿಂದ, ಅಪ್ರಾಮಾಣ್ಯಂ ಪರತಃ ।

ಸಾಕ್ಷಿಗತವಾದ ಜ್ಞಾನಗ್ರಹಣ ಶಕ್ತಿ ಹಾಗೂ ಪ್ರಾಮಾಣ್ಯಗ್ರಹಣಶಕ್ತಿ ಇವೆರಡೂ ಭಿನ್ನವೋ ಅಥವಾ ಅವೆರಡೂ ಒಂದೆಯೋ ಎನ್ನುವ ಬಗ್ಗೆ ಎರಡು ಅಭಿಪ್ರಾಯಗಳಿವೆ. ಬೆಂಕಿಯು ಪ್ರಕಾಶವನ್ನೂ ಕೊಡುತ್ತದೆ, ಸುಡುತ್ತದೆ ಕೂಡಾ. ಬೆಂಕಿಯಲ್ಲಿರುವ ಸುಡುವ ಹಾಗೂ ಪ್ರಕಾಶ ನೀಡುವ ಶಕ್ತಿ ಬೇರೆ ಬೇರೆ ಎಂದೂ ಪರಿಗಣಿಸಬಹುದು, ಒಂದೇ ಎಂದೂ ಪರಿಗಣಿಸಬಹುದು. ಬೇರೆ ಎಂದಾಗ ಮಣಿ ಇದ್ದಾಗ ದಾಹಶಕ್ತಿ ಮಾತ್ರ ಪ್ರತಿಬದ್ಧವಾಗುತ್ತದೆ, ಪ್ರಕಾಶನಶಕ್ತಿ ಅಪ್ರತಿಬದ್ಧವಾಗಿರುತ್ತದೆ. ಒಂದೇ ಎಂದು ಪರಿಗಣಿಸಿದಾಗ ಆ ಶಕ್ತಿಯು ದಾಹಾಂಶದಲ್ಲಿ ಪ್ರತಿಬದ್ಧವಾಗುತ್ತದೆ, ಪ್ರಕಾಶಾಂಶದಲ್ಲಿ ಅಪ್ರತಿಬದ್ಧವಾಗಿರುತ್ತದೆ. ಇದರಂತೆ ಸಾಕ್ಷಿಗತಶಕ್ತಿಯು ಭಿನ್ನ ಅಥವಾ ಅಭಿನ್ನ ಎಂದು ಎರಡೂ ಪಕ್ಷಗಳಲ್ಲೂ ದೋಷವಿದ್ದಾಗ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾಗುತ್ತದೆ. ಆಗ ಅದು ಜ್ಞಾನವನ್ನು ಮಾತ್ರ ಗ್ರಹಿಸಿ ಪ್ರಾಮಾಣ್ಯವನ್ನು ನಿರ್ಧರಿಸುವುದಿಲ್ಲ. ಇದರಿಂದ ಪ್ರಾಮಾಣ್ಯದ ಬಗ್ಗೆ ಮಾನಸಿಕ ಸಂದೇಹವು ಬರುತ್ತದೆ.

ಇದು ವ್ಯಾಸರಾಜರಿಗೆ ಸಮ್ಮತವಾದ ಸಿದ್ಧಾಂತ. ಇದಲ್ಲದೆ, ಸಂದೇಹವನ್ನು ಸಮರ್ಥಿಸುವ ಮೂರು ಪಕ್ಷಗಳನ್ನು ವ್ಯಾಸರಾಜರು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಮೊದಲನೆಯ ಪಕ್ಷ ಯಾವ ಸಂದೇಹಕ್ಕೂ ಧರ್ಮಿಜ್ಞಾನವು ಕಾರಣವೇ ಅಲ್ಲ, ಎಂದು. ಎರಡನೆಯ ಪಕ್ಷ ಇತರ ಸಂದೇಹಗಳಿಗೆ ಧರ್ಮಿಜ್ಞಾನವು ಕಾರಣವಾದರೂ ಪ್ರಾಮಾಣ್ಯಸಂದೇಹಕ್ಕೆ ಧರ್ಮಿಜ್ಞಾನ ಕಾರಣವಲ್ಲ, ಎಂದು. ಈ ಎರಡೂ ಪಕ್ಷಗಳಲ್ಲೂ ಜಲಜ್ಞಾನ ಬಂದ ಕೂಡಲೇ ಪ್ರಾಮಾಣ್ಯಸಂದೇಹಾತ್ಮಕವಾಗಿಯೇ ಅನುವ್ಯವಸಾಯವು ಬರುತ್ತದೆ. ಅದಕ್ಕಿಂತ ಪೂರ್ವದಲ್ಲಿ ಜ್ಞಾನವೇ ಗೃಹೀತವಾಗುವುದಿಲ್ಲವಾದ ಕಾರಣ, ಪ್ರಾಮಾಣ್ಯನಿಶ್ಚಯದ ಪ್ರಶ್ನೆಯೇ ಇಲ್ಲ. ಮೂರನೆಯಪಕ್ಷ– ಮನಸ್ಸಿನಿಂದ ಪ್ರಾಮಾಣ್ಯವು ಗೃಹೀತವಾದರೂ ಅದು ನಾಶವಾದ ಮೇಲೆ ಪ್ರಾಮಾಣ್ಯಸಂದೇಹವು ಬರುತ್ತದೆ, ಎಂದು. ಈ ಮೂರು ಪಕ್ಷಗಳಲ್ಲೂ ರಾಯರು ಅನುಪಪತ್ತಿಗಳನ್ನು ತೋರಿಸಿದ್ದಾರೆ–ಪ್ರಥಮ ಪಕ್ಷದಲ್ಲಿ ಸಂದೇಹಾತ್ಮಕವಾದ ಅನುವ್ಯವಸಾಯ ಬರುತ್ತದೆ ಎನ್ನಲಾಗಿದೆ. ಸಂದೇಹ ಬರಬೇಕಾದರೆ ಕೋಟಿ ಸ್ಮರಣೆ ಇರಬೇಕು. ಜಲಜ್ಞಾನವು ಬಂದಕೂಡಲೇ ಸುಖಾದಿಗಳಂತೆ ಅದರ ಜ್ಞಾನವೂ ಬರುತ್ತದೆ. ಕೋಟಿಸ್ಮರಣೆಗೆ ಅದು ಕಾಯುವುದಿಲ್ಲ, ಜ್ಞಾನವು ತೀವ್ರಸಂವೇದನ. ಆದ್ದರಿಂದ ಸಂದೇಹಾತ್ಮಕಾನು ವ್ಯವಸಾಯಕ್ಕೆ ಬೇಕಾದ ಕೋಟಿಸ್ಮೃತಿಯು ಇಲ್ಲದಿರುವುದರಿಂದ ಮೊದಲೇ ಸಂದೇಹವು ಬರುತ್ತದೆ, ಎನ್ನುವುದು ಸರಿಯಲ್ಲ.

ಎರಡನೆಯ ಪಕ್ಷದಲ್ಲಿ ಸಂದೇಹ ಮಾನಸ, ಜ್ಞಾನಗ್ರಹ ಸಾಕ್ಷಿರೂಪವಾದುದು. ಜ್ಞಾನಗ್ರಾಹಕವಾದ ಆ ಸಾಕ್ಷಿಯು ಪ್ರಾಮಾಣ್ಯಗ್ರಹಣೆ ಮಾಡಿದರೆ ಮಾನಸ ಪ್ರಾಮಾಣ್ಯಸಂದೇಹಕ್ಕೆ ಅವಕಾಶವಿಲ್ಲ. ಆದ್ದರಿಂದ ಪ್ರಾಮಾಣ್ಯಗ್ರಹವಾಗಿಲ್ಲವೆಂದೇ ಹೇಳಬೇಕು. ಆಗ ಸ್ವತಸ್ತ್ವಭಂಗ ವಾಯಿತು. ಇದೇ ದೋಷ ಮೂರನೆಯ ಪಕ್ಷದಲ್ಲೂ ಸಮಾನ.

ಹೀಗೆ ಸಂದೇಹವನ್ನು ಸಮರ್ಥಿಸಬೇಕಾದರೆ ಸಾಕ್ಷಿಯಿಂದ ಪ್ರಾಮಾಣ್ಯಗ್ರಹಣ ಔತ್ಸರ್ಗಿಕ ಎಂಬ ಸಿದ್ಧಾಂತಪಕ್ಷವನ್ನೇ ಅವಲಂಬಿಸಬೇಕು. ಇತರ ಪಕ್ಷಗಳಲ್ಲಿ ಸಿದ್ಧಾಂತ ರೀತ್ಯಾ ದೋಷಗಳು ಇವೆಯಾದರೂ ತಾರ್ಕಿಕರ ಮತದಂತೆ ನಿರ್ದುಷ್ಟವಾದುದರಿಂದ ಅವುಗಳ ಉಲ್ಲೇಖವನ್ನು ಮಾಡಲಾಗಿದೆ.

ಹೀಗೆ ಸಂದೇಹಾನುಪಪತ್ತಿರೂಪವಾದ ಬಾಧಕವು ಇಲ್ಲವಾದುದರಿಂದ ಪ್ರಾಮಾಣ್ಯ ಸ್ವತಸ್ತ್ವಾನುಮಾನಕ್ಕೆ ತರ್ಕದ ವಿರೋಧ ಇಲ್ಲ.

ಪ್ರಕರಣ ॥ 5 ॥

# ಪ್ರಕರಣ–6

## ಪ್ರಾಮಾಣ್ಯನಿಶ್ಚಯಸ್ಯ ಪ್ರವರ್ತಕತ್ವಮ್

**न चाप्रयोजकाः स्वतस्त्वहेतवः । परतस्त्वे प्रामाण्यज्ञानस्यापि प्रामाण्यं संवादादिलिङ्गजन्यानुमितिरूपेणान्येन ज्ञानेन ग्राह्यम्, एवं तत्प्रामाण्यमप्यन्येनेति फलमुख्येकानवस्था ।**

**एवं प्रामाण्यस्यानुमेयत्वे लिङ्गव्याप्त्यादिज्ञानप्रामाण्यानिश्चयेऽसिद्ध्यादिप्रसङ्गेन तन्निश्चयार्थं लिङ्गाद्यन्तरं, तज्ज्ञानप्रामाण्यनिश्चयश्च स्वीकार्यः, एवं तत्र तत्रापीति कारणमुख्यन्यापि इत्यनवस्थाद्वयापत्तेः ।।**

ಹಿಂದಿನ ಪ್ರಕರಣದಲ್ಲಿ ಪ್ರಾಮಾಣ್ಯಸ್ವತಸ್ತ್ವಸಾಧನೆಗೆ ಅನೇಕ ಹೇತುಗಳನ್ನು ಹೇಳಲಾಗಿದೆ. ಆ ಅನುಮಾನಗಳಲ್ಲಿ 'ಹೇತುರಸ್ತು ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕ ಶಂಕೆಯನ್ನು ಮಾಡಿದಾಗ ಬಾಧಕ ತರ್ಕಗಳು ಇವೆ. ಆದಕಾರಣ ಆ ಹೇತುಗಳು ಸಾಧ್ಯಸಾಧನೆಗೆ ಅಸಮರ್ಥಗಳಾಗಿಲ್ಲ. ಬಾಧಕಗಳು ಹೀಗಿವೆ—

ಪ್ರಾಮಾಣ್ಯ ಸ್ವತಸ್ತ್ವವನ್ನು ಒಪ್ಪದೆ ಪರತಸ್ತ್ವವನ್ನು ಒಪ್ಪಿದರೆ, ಜಲಾದಿಜ್ಞಾನಗಳ ಪ್ರಾಮಾಣ್ಯವನ್ನು ನಿರ್ಧರಿಸುವ ಅನುಮಿತ್ಯಾತ್ಮಕ ಪ್ರಾಮಾಣ್ಯಜ್ಞಾನದ ಪ್ರಾಮಾಣ್ಯವನ್ನು ಸಂವಾದ ರೂಪಹೇತ್ವಂತರದಿಂದ ಹುಟ್ಟಿದ ಇನ್ನೊಂದು ಅನುಮಿತಿಯಿಂದಲೇ ತಿಳಿದುಕೊಳ್ಳಬೇಕಾಗುತ್ತದೆ. ಆ ಅನುಮಿತಿ ಪ್ರಾಮಾಣ್ಯವನ್ನು ಮತ್ತೊಂದು ಅನುಮಿತಿಯಿಂದ ತಿಳಿಯಬೇಕು, ಹೀಗೆ ಫಲಮುಖೀ ಅನವಸ್ಥಾ.

ಉದಾಹರಣೆಗೆ–ಜಲಜ್ಞಾನದ ಪ್ರಾಮಾಣ್ಯವನ್ನು ಸಮರ್ಥಪ್ರವೃತ್ತಿಜನಕತ್ವರೂಪ ಹೇತುವಿನಿಂದ ಅನುಮಾನ ಮಾಡಬೇಕು. 'ಜಲಜ್ಞಾನಂ ಪ್ರಮಾಣಂ ಸಫಲಪ್ರವೃತ್ತಿಜನಕತ್ವಾತ್' ಎಂದು ಅನುಮಾನದ ಕ್ರಮ. ಈ ಅನುಮಾನದಿಂದ ಹುಟ್ಟಿದ ಅನುಮಿತಿ 'ಜಲಜ್ಞಾನಂ ಪ್ರಮಾಣಂ' ಎಂದು. ಈ ಅನುಮಿತಿಯ ಪ್ರಾಮಾಣ್ಯವನ್ನು ತಿಳಿಯಲು ಇನ್ನೊಂದು ಅನುಮಿತಿ, ಹೀಗೆ ಅನವಸ್ಥಾ. ಇದು ಫಲಮುಖೀ ಅನವಸ್ಥಾ. ಫಲ ಎಂದರೆ ಪ್ರಾಮಾಣ್ಯಜ್ಞಾನರೂಪವಾದ ಅನುಮಿತಿ. ಆ ಅನುಮಿತಿಗಳ ಆನಂತ್ಯಪ್ರಯುಕ್ತವಾದ ಅನವಸ್ಥಾ.

ಇನ್ನೊಂದು, ಕಾರಣಮುಖೀ ಅನವಸ್ಥಾ. ಅನುಮಿತಿಗೆ ಕಾರಣ ಹೇತುಜ್ಞಾನ, ವ್ಯಾಪ್ತಿಜ್ಞಾನ. ಹೇತುಮತ್ತಾಜ್ಞಾನದಲ್ಲಿ ಪ್ರಾಮಾಣ್ಯಜ್ಞಾನ ಬರದಿದ್ದರೆ ಅಸಿದ್ಧಿದೋಷ. ವ್ಯಾಪ್ತಿಜ್ಞಾನದಲ್ಲಿ ಪ್ರಾಮಾಣ್ಯ ಗೃಹೀತವಾಗದಿದ್ದರೆ ವ್ಯಾಪ್ಯತ್ವಾಸಿದ್ಧಿ. ಅದರ ಪರಿಹಾರಕ್ಕಾಗಿ ಅವುಗಳ ಪ್ರಾಮಾಣ್ಯ ಜ್ಞಾನಕ್ಕೆ ಇನ್ನೊಂದು ಅನುಮಾನ ಮಾಡಬೇಕು. ಆ ಅನುಮಾನದಲ್ಲಿ ಮತ್ತೆ ಹೇತು–ವ್ಯಾಪ್ತಿಜ್ಞಾನಗಳ ಪ್ರಾಮಾಣ್ಯವನ್ನು ಮತ್ತೊಂದು ಅನುಮಾನದಿಂದ ಸಾಧನೆ ಮಾಡಬೇಕು. ಇದು ಕಾರಣಮುಖೀ ಅನವಸ್ಥಾ.

ಹೀಗೆ 'ಯದಿ ಪ್ರಾಮಾಣ್ಯಂ ಸ್ವತಃ ನ ಜ್ಞಾಯೇತ ತರ್ಹಿ ಅನವಸ್ಥಾ ಸ್ಯಾತ್' ಎಂಬ ಬಾಧಕತರ್ಕವು ಇರುವುದರಿಂದ ಸ್ವತಸ್ತ್ವ ಸಾಧಕ ಹೇತುಗಳು ಅಪ್ರಯೋಜಕಗಳಲ್ಲ.

## ನ್ಯಾಯದೀಪ

**ಅಪ್ರಯೋಜಕಾ ಇತಿ ॥ 'ಹೇತವಃ ಸಂತು, ಸ್ವತೋ ಗ್ರಾಹ್ಯತ್ವರೂಪ–ಸಾಧ್ಯಂ ಮಾಸ್ತು' ಇತ್ಯತ್ರವಿಪಕ್ಷೇ ಬಾಧಕಸ್ಯ, ಸಾಧ್ಯಸಾಧನೇ ಅನುಕೂಲತರ್ಕಸ್ಯ ಅಭಾವಾತ್, ಇತಿ ನಚೇತ್ಯರ್ಥಃ ।**

**ಪೂರ್ವಂ ಕ್ವಚಿದ್ಧೇತೌ ಅಪ್ರಯೋಜಕತ್ವೋದ್ಧಾರಸ್ಯ ಪ್ರಾತಿಸ್ವಿಕರೂಪೇಣ ಕೃತತ್ವೇಽಪಿ ಸಾಮಾನ್ಯತೋಽಯಮ್ ಉದ್ಧಾರ ಇತಿ ಅದೋಷಃ । ಅತ ಏವ ಹೇತವ ಇತ್ಯುಕ್ತಿಃ ।**

ಹಿಂದಿನ ಸ್ವತಸ್ತ್ವಸಾಧಕಾನುಮಾನ ನಿರೂಪಣ–ಪ್ರಕರಣದಲ್ಲಿ ಪ್ರತಿಯೊಂದು ಹೇತುಗಳಿಗೂ ಸಮರ್ಥನೆಯನ್ನು ಕೊಟ್ಟು ಅಪ್ರಯೋಜಕತಾಶಂಕೆಯನ್ನು ಪರಿಹಾರ ಮಾಡಲಾಗಿದೆ. ಆದರೂ ಇಲ್ಲಿ ಎಲ್ಲ ಹೇತುಗಳಿಗೂ ಸಾಧಾರಣವಾಗಿ ಅಪ್ರಯೋಜಕತಾಶಂಕಾಪರಿಹಾರಕ–ತರ್ಕಗಳನ್ನು ಹೇಳಲಾಗಿದೆ. ಆದ್ದರಿಂದಲೇ ಈ ಪ್ರಕರಣದ ಆರಂಭದಲ್ಲಿ 'ಸ್ವತಸ್ತ್ವಸಾಧಕ ಹೇತವಃ' ಎಂದು ಬಹುವಚನವನ್ನು ಪ್ರಯೋಗ ಮಾಡಲಾಗಿದೆ.

## ನ್ಯಾಯದೀಪ

**'ತತ್–ಪ್ರಾಮಾಣ್ಯಸ್ಯಾಪಿ ಅನ್ಯೇನ ಗ್ರಹಣಾಂಗೀಕಾರೇ ಅನವಸ್ಥಾನಾತ್' ಇತಿ ಟೀಕಾಂ (ತ.ನಿ.) ವಿವೃಣ್ವಾನಃ ಮಣ್ಯಾದ್ಯುಕ್ತದಿಶೈವ ಅನವಸ್ಥಾದ್ವಯಮಾಹ –ಪರತಸ್ತ್ವೇ ಇತಿ ॥ ಜ್ಞಾನಗ್ರಾಹಕ ಸಾಕ್ಷಿವ್ಯತಿರಿಕ್ತೇನ ಯೇನ ಕೇನಾಪಿ ಗ್ರಾಹ್ಯತ್ವೇ ಇತ್ಯರ್ಥಃ ॥**

**ಫಲಮುಖೀತಿ ॥ ಫಲಂ=ಪ್ರಾಮಾಣ್ಯಜ್ಞಾನಂ ಮುಖಂ=ಉಪಸ್ಥಿತಿಹೇತುಃ ಯಸ್ಯಾಃ ಸಾ ಫಲಮುಖೀ ಇತ್ಯರ್ಥಃ ।**

ತತ್ವನಿರ್ಣಯಟೀಕಾದಲ್ಲಿ ಹೇಳಿರುವ ಅನವಸ್ಥಾವನ್ನು ಫಲಮುಖೀ-ಕಾರಣಮುಖೀ ಎಂದು ವಿಭಾಗಮಾಡಿ ವಿವರಿಸಿ, ತತ್ತ್ವಚಿಂತಾಮಣ್ಯಾದಿ ತಾರ್ಕಿಕ ಗ್ರಂಥಗಳಲ್ಲಿ ಹೇಳಿರುವ ಅನವಸ್ಥಾವನ್ನು ಮೂಲದಲ್ಲಿ ಹೇಳಲಾಗಿದೆ.

ಫಲಮುಖೀ ಅನವಸ್ಥಾ ಎಂದರೆ, ಫಲ=ಪ್ರಾಮಾಣ್ಯಜ್ಞಾನ, ಮುಖ=ಉಪಸ್ಥಿತಿ ಹೇತು. ಯಾವ ಅನವಸ್ಥಾಜ್ಞಾನಕ್ಕೆ ಪ್ರಾಮಾಣ್ಯಜ್ಞಾನವೇ ಕಾರಣವಾಗಿದೆಯೋ ಅಂತಹ ಅನವಸ್ಥಾ. ಪ್ರಾಮಾಣ್ಯಜ್ಞಾನ ಪರಂಪರಾಂಗೀಕಾರರೂಪವಾದ ಅನವಸ್ಥಾಜ್ಞಾನಕ್ಕೆ ಪ್ರಾಮಾಣ್ಯಜ್ಞಾನವೇ ಕಾರಣ.

## ನ್ಯಾಯದೀಪ

**ಕಾರಣಾಂತರಾನವಸ್ಥಾ-ಉಪಲಕ್ಷಣತಯಾ ಏಕತ್ರಾನವಸ್ಥಾನಿರ್ಧಾರಣಾಯ ವಾ ಪರಾಭ್ಯುಪಗಮಾನುರೋಧೇನ ವಾ 'ಅನುಮೇಯತ್ವೇ' ಇತಿ ಆಪಾದಕ-ನಿರ್ಧಾರಣೋಕ್ತಿಃ । ಪೂರ್ವಂ ತು ಸಾಮಾನ್ಯಮುಪೇತ್ಯ ಪರತಸ್ತ್ವೇ ಇತ್ಯಾದ್ಯೇವೋಕ್ತಮ್ । ನ ತು ವಿಶಿಷ್ಯ ಇತಿ ಧ್ಯೇಯಮ್ ।**

ಎರಡನೆಯ ಅನವಸ್ಥಾವನ್ನು ಆಪಾದನೆ ಮಾಡುವಾಗ 'ಪ್ರಾಮಾಣ್ಯಸ್ಯ ಅನುಮೇಯತ್ವೇ' ಎಂದು ಆಪಾದಕವನ್ನು ಹೇಳಲಾಗಿದೆ. ಆದರೆ, ಪ್ರಥಮಾನವಸ್ಥಾದಲ್ಲಿ 'ಪರತಸ್ತ್ವೇ' ಎಂದಿಷ್ಟೇ ಆಪಾದಕವನ್ನು ಹೇಳಲಾಗಿದೆ. ಈ ವ್ಯತ್ಯಾಸಕ್ಕೆ ಎರಡು ಅಭಿಪ್ರಾಯಗಳನ್ನು ಹೇಳಬಹುದು.

(1) ಪ್ರಾಮಾಣ್ಯಗ್ರಹಣಕ್ಕೆ ಅನುಮಾನ ಒಂದು ಸಾಧನ, ದ್ವಿತೀಯಪಕ್ಷದಲ್ಲಿ ಅದನ್ನು ಶಬ್ದತಃ ಉಲ್ಲೇಖ ಮಾಡಿದ್ದರೂ ಅದು ಉಪಲಕ್ಷಣ. ಜ್ಞಾನಗ್ರಾಹಕವಾದ ಸ್ವಪ್ರಕಾಶ ಸಾಕ್ಷಿ ಬಿಟ್ಟು ಇತರ ಪ್ರಮಾಣಗಳಿಂದ ಜ್ಞೇಯವಾದರೆ ಅನುಮಾನವೇದ್ಯತ್ವ ಪಕ್ಷದಲ್ಲಿ ಬರುವಂತೆ ಅನವಸ್ಥಾ ಬರುತ್ತದೆ, ಎಂದು ಅದರ ಒಟ್ಟು ಅರ್ಥ.

(2) ಅಥವಾ, ಪರತಸ್ತ್ವವಾದಿಗಳಾದ ನೈಯಾಯಿಕರು ಪ್ರಥಮಪ್ರಾಮಾಣ್ಯವು ಅನುಮಾನೈಕವೇದ್ಯ ಎಂದು ಅಂಗೀಕರಿಸಿರುವುದರಿಂದ 'ಅನುಮೇಯತ್ವೇ' ಎನ್ನಲಾಗಿದೆ.

ಪ್ರಥಮ ಪಕ್ಷದಲ್ಲಿ ಗ್ರಾಹಕವಿಶೇಷವನ್ನು ಉಲ್ಲೇಖಿಸದೆ ಪರತಸ್ತ್ವೇ ಎಂದಿಷ್ಟೇ ಹೇಳಲಾಗಿದೆ. ಸ್ವಪ್ರಕಾಶವಾದ ಸಾಕ್ಷೀತರ ಯಾವುದೇ ಪ್ರಮಾಣದಿಂದ ಪ್ರಾಮಾಣ್ಯವು ವೇದ್ಯವಾದರೂ ಫಲಮುಖೀ ಅನವಸ್ಥಾ, ಎಂದು ಅರ್ಥ.

## ನ್ಯಾಯದೀಪ

**ಕಾರಣಮುಖೀತಿ ॥ ಪೂರ್ವವದ್ ವ್ಯಾಖ್ಯೇಯಮ್ ।**

**ಜ್ಞಾನಾನಾಂ ಪ್ರಾಮಾಣ್ಯಮ್ ಅನುಮಿತಿಗ್ರಾಹ್ಯಮ್, ಅನುಮಿತಿ ಪ್ರಾಮಾಣ್ಯಂ ತು ಸ್ವತಃ, ಇತಿ ಪ್ರಾಚೀನಮತೇ ಫಲಮುಖಾನವಸ್ಥಾಭಾವಾತ್ ಕಾರಣಮುಖ್ಯಾಪಿ ಉಕ್ತಿರಿತ್ಯೇಕೇ ॥**

**ಅನ್ಯೇ ತು, ತನ್ಮತೇ ಕ್ವಾಪಿ ಸ್ವಪ್ರಕಾಶತ್ವಾಭಾವಾತ್ ತತ್ರಾಪಿ ಅನವಸ್ಥಾ ಅಸ್ತ್ಯೇವ । ಅತ ಏವ ಪರತಸ್ತ್ವೇ ಇತಿ ಸಾಮಾನ್ಯೋಕ್ತಿಃ । ನ ತು ಅನುಮೇಯತ್ವೇ ಇತಿ ವಿಶಿಷ್ಯೇತ್ಯಾಹುಃ ॥**

'ಫಲಮುಖೀ' ಶಬ್ದಕ್ಕೆ ಅರ್ಥಹೇಳಿದಂತೆ 'ಕಾರಣಮುಖೀ' ಶಬ್ದಕ್ಕೂ ಅರ್ಥವನ್ನು ತಿಳಿಯಬೇಕು. ಪ್ರಾಮಾಣ್ಯಜ್ಞಾನಕಾರಣದ ಉಪಸ್ಥಿತಿಹೇತುಕಾನವಸ್ಥಾ ಎಂದರ್ಥ.

ಈ ಕಾರಣಮುಖೀ ಅನವಸ್ಥಾಂತರವನ್ನು ಹೇಳಿರುವುದಕ್ಕೆ ಕೆಲವರು ಹೀಗೆ ಕಾರಣವನ್ನು ಕೊಡುತ್ತಾರೆ– ಪ್ರಾಚೀನಮತದಲ್ಲಿ ಪ್ರತ್ಯಕ್ಷಾದಿ ಜ್ಞಾನಗಳ ಪ್ರಾಮಾಣ್ಯವು ಅನುಮಾನವೇದ್ಯ. ಅನುಮಿತಿಪ್ರಾಮಾಣ್ಯದ ಜ್ಞಾನಕ್ಕೆ ಮತ್ತೆ ಅನುಮಾನಾಂತರದ ಅಗತ್ಯವಿಲ್ಲ. ಅದು ಸ್ವತಃ, ಎನ್ನುತ್ತಾರೆ ಪ್ರಾಚೀನ ತಾರ್ಕಿಕರು. ಅವರ ಪಕ್ಷದಲ್ಲಿ ಫಲಮುಖೀ ಅನವಸ್ಥಾ ಇಲ್ಲದಿದ್ದರೂ ಈ ಕಾರಣ ಮುಖೀ ಅನವಸ್ಥಾದೋಷವು ಇದ್ದೇ ಇದೆ.

ಇನ್ನು ಕೆಲವರು ಹೀಗೆ ಹೇಳುತ್ತಾರೆ– ಪ್ರಾಚೀನಮತದಲ್ಲೂ ಫಲಮುಖೀ ಅನವಸ್ಥಾ ಇದ್ದೇ ಇದೆ. ಅವರು 'ಅನುಮಿತಿ ಪ್ರಾಮಾಣ್ಯಂ ಸ್ವತಃ' ಎಂದರೂ ಅನುಮಿತಿಪ್ರಾಮಾಣ್ಯಗ್ರಾಹಕವಾದ ಸ್ವಪ್ರಕಾಶಪ್ರಮಾಣವನ್ನು ಒಪ್ಪುವುದಿಲ್ಲ. ಅಂದಮೇಲೆ ಪ್ರಾಮಾಣ್ಯಗ್ರಾಹಕ್ಕೆ ಮತ್ತೊಂದು ಗ್ರಾಹಕವನ್ನು ಒಪ್ಪಲೇಬೇಕು. ಆಗ ಫಲಮುಖೀ ಅನವಸ್ಥಾ ಇದ್ದಿದ್ದೆ. ಆದ್ದರಿಂದಲೇ ಫಲಮುಖೀ ಅನವಸ್ಥಾಪಕ್ಷದಲ್ಲಿ 'ಪರತಸ್ತ್ವೇ' ಎಂದು ಸಾಮಾನ್ಯವಾಗಿ, ಪ್ರಮಾಣ ವಿಶೇಷವನ್ನು ಉಲ್ಲೇಖಿಸದೇ ಹೇಳಿ ದ್ವಿತೀಯಪಕ್ಷದಲ್ಲಿ 'ಅನುಮೇಯತ್ವೇ' ಎಂದು ವಿಶಿಷ್ಯ ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ-ಅನವಸ್ಥಾ ಪರಿಹಾರ ಸರಿಯಲ್ಲ

**'ಯತ್ರ ತು ಪ್ರಾಮಾಣ್ಯಜ್ಞಾನೇ ಅಪ್ರಾಮಾಣ್ಯಶಂಕಯಾ ಪ್ರಾಮಾಣ್ಯಸಂಶಯಃ ತತ್ರ ಪ್ರಾಮಾಣ್ಯಜ್ಞಾನಪ್ರಾಮಾಣ್ಯನಿಶ್ಚಯಾದೇವ ಪ್ರಾಮಾಣ್ಯನಿಶ್ಚಯಃ' ಇತ್ಯಾದಿ ಮಣ್ಯುಕ್ತಮ್ (ಪು.294) ಆಶಂಕತೇ–ನ ಚ ಯತ್ರೇತಿ ॥**

ಮಣಿಗ್ರಂಥದಲ್ಲಿ ಈ ಅನವಸ್ಥಾದೋಷವನ್ನು ಪರಿಹಾರ ಮಾಡಲಾಗಿದೆ–ಸರ್ವತ್ರ ಪ್ರಾಮಾಣ್ಯಜ್ಞಾನದ ಅಗತ್ಯವಿಲ್ಲ. ಎಲ್ಲಿ ವ್ಯವಸಾಯಪ್ರಾಮಾಣ್ಯಜ್ಞಾನದಲ್ಲಿ ಅಪ್ರಾಮಾಣ್ಯ ಸಂದೇಹ ಬಂದು ಅದರಿಂದಾಗಿ, ವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹ ಬರುವುದೋ ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವು ಬೇಕಾಗುತ್ತದೆ. ಪ್ರಾಮಾಣ್ಯ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವಾದರೆ ಅದರಿಂದ ಜಲಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯ ವಾಗುತ್ತದೆ. ಇಂತಹ ಸಂದೇಹ ಬರದೇ ಇದ್ದಾಗ, ಸರ್ವತ್ರ ಪ್ರಾಮಾಣ್ಯಗ್ರಾಹಕಾಂತರವಾಗಲೀ ಪ್ರಾಮಾಣ್ಯಗ್ರಹವಾಗಲೀ ಬೇಕಾಗಿಲ್ಲ, ಆದ್ದರಿಂದ ಅನವಸ್ಥಾ ದೋಷ ಇಲ್ಲ, ಎಂದು. ಇದನ್ನೇ ಮೂಲದಲ್ಲಿ ಅನುವಾದ ಮಾಡಿ ನಿರಾಸಮಾಡಲಾಗಿದೆ.

**न च यत्र दोषशङ्कादिरूपाकाङ्क्षा तत्रैव संवादापेक्षेति नानवस्थेति वाच्यम्। तथात्वे प्रतिबन्धनिरासार्थमेव संवादापेक्षा, न तु प्रामाण्य-ग्रहार्थमिति मन्मतप्रवेशापत्तेः । उक्तं हि भगवत्पादैः "आकाङ्क्षाया एव बुद्धिदोषात्मकत्वात्" इति ।।**

ಪ್ರಾಮಾಣ್ಯವು ಸಂವಾದದಿಂದ ಅನುಮೇಯ. ಆದರೆ ಸರ್ವತ್ರ ಸಂವಾದದ ಅಗತ್ಯವಿಲ್ಲ, ದೂರದಿಂದ ನೋಡಿ ಬಂದ ಜಲಾದಿಜ್ಞಾನಗಳಲ್ಲಿ ದೋಷಜನ್ಯತ್ವ ಸಂದೇಹವಿದ್ದಾಗ ಪ್ರಾಮಾಣ್ಯ ನಿಶ್ಚಯದ ಆಕಾಂಕ್ಷಾ ಉಂಟಾಗುತ್ತದೆ. ಅಂತಹ ಸಂದರ್ಭದಲ್ಲಿ ಮಾತ್ರ ಪ್ರಾಮಾಣ್ಯನಿಶ್ಚಯಕ್ಕೆ ಸಂವಾದವು ಬೇಕಾಗುತ್ತದೆ. ಈ ಆಕಾಂಕ್ಷೆಯೇ ಎಲ್ಲಿ ಬರುವುದಿಲ್ಲವೋ ಉದಾಹರಣೆಗೆ–ಸುಖಾದಿ ಜ್ಞಾನದಲ್ಲಿ; ಅಲ್ಲಿ ಪ್ರಾಮಾಣ್ಯ ಜ್ಞಾನದ ಅಗತ್ಯವೇ ಇಲ್ಲ. ಸಂವಾದವೂ ಬೇಕಿಲ್ಲ, ಅನವಸ್ಥಾ ಇಲ್ಲ. ಇದು ತಾರ್ಕಿಕರ ಸಮಾಧಾನ.

ಹೀಗೆ ಒಪ್ಪಿದರೆ ಸ್ವತಸ್ತ್ವವಾದವನ್ನು ಒಪ್ಪಿದಂತೆಯೆ. ಏಕೆಂದರೆ, ಆಕಾಂಕ್ಷೆ ಇದ್ದಲ್ಲಿ ಮಾತ್ರ ಸಂವಾದಬೇಕು ಎನ್ನುವುದರ ಅರ್ಥ ಸಂವಾದದಿಂದ ಆಕಾಂಕ್ಷೆಯು ನಿವೃತ್ತಿಯಾಗುತ್ತದೆ. ಹಾಗಾದರೆ, ಸಂವಾದದ ಕಾರ್ಯ ಆಕಾಂಕ್ಷಾನಿವೃತ್ತಿಯೇ ಹೊರತು, ಪ್ರಾಮಾಣ್ಯಜ್ಞಾನವಲ್ಲ. ಆಕಾಂಕ್ಷಾನಿವೃತ್ತಿಯಾದಾಗ ಸಾಕ್ಷಿಯು ತನ್ನ ಸಹಜಶಕ್ತಿಯಿಂದಲೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದಂತಾಯಿತು. ಸ್ವತಸ್ತ್ವಪಕ್ಷದಲ್ಲಿ ಬುದ್ಧಿದೋಷ ನಿರಾಸಕ್ಕಾಗಿ ಸಂವಾದಾಪೇಕ್ಷಾ, ಪರತಸ್ತ್ವ ಪಕ್ಷದಲ್ಲಿ ಆಕಾಂಕ್ಷಾನಿರಾಸಾರ್ಥಂ ಸಂವಾದಾಪೇಕ್ಷಾ. ಆಕಾಂಕ್ಷೆಯೇ ಬುದ್ಧಿದೋಷ ಎಂದು ಹೇಳಿದರೆ ಈ ಎರಡೂ ಪಕ್ಷಗಳ ಭಿನ್ನಾಭಿಪ್ರಾಯವು ಪರಿಹಾರವಾದಂತೆ. ಹೀಗಾಗಿ 'ಆಕಾಂಕ್ಷಾನಿರಾಸಕ್ಕಾಗಿ ಸಂವಾದಾಪೇಕ್ಷಾ' ಎನ್ನುವ ತಾರ್ಕಿಕರು ಸ್ವತಸ್ತ್ವಮತಪ್ರವೇಶ ಮಾಡಿದಂತೆಯೇ ಆಗುತ್ತದೆ.

ಆಕಾಂಕ್ಷೆಯೇ ಬುದ್ಧಿದೋಷ ಎಂದು ಆಚಾರ್ಯರು ತತ್ತ್ವನಿರ್ಣಯದ ಪ್ರಾಮಾಣ್ಯಸ್ವತಸ್ತ್ವ ಪ್ರಕರಣದಲ್ಲಿ ಹೇಳುತ್ತಾರೆ—'ಆಕಾಂಕ್ಷಾಯಾ ಏವ ಬುದ್ಧಿದೋಷಾತ್ಮಕತ್ವಾತ್' ಎಂದು.

ಹೀಗೆ ಪರತಸ್ತವಾದಿಗಳು ಒಂದೋ ಅನವಸ್ಥಾದೋಷವನ್ನು ಒಪ್ಪಿಕೊಳ್ಳಬೇಕು. ಇಲ್ಲವೆ, ಸ್ವತಸ್ತ್ವವಾದವನ್ನು ಅಂಗೀಕರಿಸಬೇಕು.

## ನ್ಯಾಯದೀಪ

**ದೋಷೇತಿ ॥ ದುಷ್ಟಕರಣ–ಜನ್ಯತ್ವಾದಿ–ಶಂಕಾರೂಪಾ ಇತ್ಯರ್ಥಃ। 'ನ ಚ ಆಕಾಂಕ್ಷಾಯಾಮೇವ ಪ್ರಾಮಾಣಾಂತರಾಪೇಕ್ಷತ್ವಾತ್ ಅನವಸ್ಥಾಭಾವಃ' ಇತಿ ತತ್ತ್ವನಿರ್ಣಯಾದ್ಯನುಕರಣಾದಾಕಾಂಕ್ಷೇತ್ಯುಕ್ತಿಃ। ಉಕ್ತಂ ಹೀತಿ ॥ ತತ್ತ್ವ-ನಿರ್ಣಯೇ। ಆಕಾಂಕ್ಷೇತಿ, ಬುದ್ಧಿದೋಷ ಇತಿ, ಅಪ್ರಾಮಾಣ್ಯ–ಶಂಕೇತಿ ಚಾನರ್ಥಾಂತರಮ್ ॥**

ಮೂಲದಲ್ಲಿ 'ಯತ್ರ ದೋಷಶಂಕಾ' ಎಂದಿಷ್ಟೇ ಹೇಳದೆ 'ಯತ್ರ ದೋಷಶಂಕಾ ರೂಪಾಕಾಂಕ್ಷಾ' ಎಂದಿರುವುದು ತತ್ತ್ವನಿರ್ಣಯದಲ್ಲಿರುವ ಆಚಾರ್ಯರ ವಾಕ್ಯದ ಅನುಗುಣ್ಯ ಸಂಪಾದನೆ. ಅಲ್ಲಿ ಆಕಾಂಕ್ಷಾ ಎಂಬ ಪದವೇ ಇದೆ.

ಆಕಾಂಕ್ಷಾ, ಬುದ್ಧಿದೋಷ, ಅಪ್ರಾಮಾಣ್ಯ ಶಂಕಾ, ಈ ಮೂರು ಪದಗಳ ಅರ್ಥವೂ ಒಂದೇ.

## ನ್ಯಾಯದೀಪದಲ್ಲಿ ಅವತಾರಿಕೆ-ಪ್ರಾಮಾಣ್ಯ ಅವಶ್ಯವೇದ್ಯ

**ತತ್ತ್ವನಿರ್ಣಯ ಟೀಕೋಕ್ತರೀತ್ಯಾ ಪ್ರಕಾರಾಂತರೇಣ ಅನವಸ್ಥಾಭಾವಮಾಶಂಕ್ಯ ನಿರಾಹ–ನಚೇತಿ ॥**

ತತ್ತ್ವನಿರ್ಣಯ ಟೀಕೆಯಲ್ಲಿ, ತಾರ್ಕಿಕರು ಪ್ರಕಾರಾಂತರದಿಂದ ಅನವಸ್ಥಾ ದೋಷವನ್ನು ಪರಿಹಾರಮಾಡಿರುವ ಕ್ರಮವನ್ನು ಉಲ್ಲೇಖಿಸಲಾಗಿದೆ. ಅದನ್ನು ಇಲ್ಲಿಯೂ ಆಶಂಕೆ ಮಾಡಿ ಮುಂದಿನ ಗ್ರಂಥದಲ್ಲಿ ಪರಿಹರಿಸಲಾಗಿದೆ.

**न चावश्यवेद्यात्वाभावान्नानवस्था । ज्ञानमवश्यवेद्यमिति वक्ष्य-माणत्वात् कृष्यादौ सन्देहात् प्रवृत्तावपि बहुवित्तव्ययायाससाध्ये पारत्रिकफलके यागादौ निष्कम्पप्रवृत्यर्थं प्रामाण्यस्याप्यवश्य-वेद्यत्वात् ॥**

ಪ್ರವೃತ್ತಿಗೆ ಅರ್ಥನಿಶ್ಚಯವು ಕಾರಣ, ಪ್ರಾಮಾಣ್ಯನಿಶ್ಚಯವಲ್ಲ. ಆದ್ದರಿಂದ ಜಲದಲ್ಲಿ ಸಂದೇಹ ಬಂದಾಗ ಸಮರ್ಥಪ್ರವೃತ್ತಿಜನಕತ್ವ ಲಿಂಗದಿಂದ ಪ್ರಾಮಾಣ್ಯಜ್ಞಾನ ಬರುತ್ತದೆ. ಆ

ಪ್ರಾಮಾಣ್ಯಜ್ಞಾನದ ಜ್ಞಾನವು ಬರಲೇಬೇಕೆಂಬ ನಿರ್ಬಂಧವಿಲ್ಲ. ಹೀಗೆ ಪ್ರಾಮಾಣ್ಯಜ್ಞಾನರೂಪ ಧರ್ಮಿಯ ಜ್ಞಾನವೇ ಇಲ್ಲವಾದ ಕಾರಣ ಅದರಲ್ಲಿ ಪ್ರಾಮಾಣ್ಯಸಂದೇಹವೇ ಬರುವುದಿಲ್ಲ. ಅಲ್ಲಿ ಮತ್ತೆ ಪ್ರಾಮಾಣ್ಯಜ್ಞಾನದ ಅಗತ್ಯವಿಲ್ಲ. ಆದ್ದರಿಂದ ಅನವಸ್ಥಾ ದೋಷವಿಲ್ಲ.

ಪ್ರಾಮಾಣ್ಯಜ್ಞಾನವು ಅವಶ್ಯವೇದ್ಯವಲ್ಲ, ಆದ್ದರಿಂದ ಅನವಸ್ಥಾದೋಷವಿಲ್ಲ, ಎನ್ನುವುದು ಸರಿಯಲ್ಲ. ಸಾಮಗ್ರೀಗಳೆಲ್ಲವೂ ಇರುವುದರಿಂದ, ಯಾವುದೇ ಜ್ಞಾನವು ಹುಟ್ಟಿದ ಕೂಡಲೇ ಅವಶ್ಯ ತಿಳಿಯಲ್ಪಡಲೇಬೇಕು, ಎಂದು ಮುಂದಿನ ಪ್ರಕರಣದಲ್ಲಿ ಹೇಳಲಾಗುತ್ತದೆ. ಆದ್ದರಿಂದ ಪ್ರಾಮಾಣ್ಯಜ್ಞಾನದ ಜ್ಞಾನವೇ ಬಂದಿಲ್ಲ, ಎಂಬ ಕಾರಣದಿಂದ ಅನವಸ್ಥಾಪರಿಹಾರ ಮಾಡುವುದು ಯುಕ್ತವಲ್ಲ.[1]

ಜ್ಞಾನವು ಅವಶ್ಯವೇದ್ಯವಾಗಲಿ. ಆದ್ದರಿಂದ ಜಲಜ್ಞಾನದ ಜ್ಞಾನವೂ ಬರುವುದು ಅನಿವಾರ್ಯವಾದರೂ ಅದರಲ್ಲಿ ಪ್ರಾಮಾಣ್ಯವು ನಿರ್ಧಾರವಾಗಬೇಕಿಲ್ಲ. ತದ್ಗತ ಪ್ರಾಮಾಣ್ಯ ಸಂದೇಹದಿಂದಲೇ ಪ್ರವೃತ್ತಿಯಾಗಬಹುದು. ಕೃಷ್ಯಾದಿಕಾರ್ಯಗಳಲ್ಲಿ ಫಲಸಂದೇಹದಿಂದಲೂ ಪ್ರವೃತ್ತಿಯಾಗುವಂತೆ ಎಲ್ಲ ಕಡೆಯೂ ಪ್ರವೃತ್ತಿಯಾಗಬಹುದು. ಆದ್ದರಿಂದ ಪ್ರಾಮಾಣ್ಯನಿಶ್ಚಯದಲ್ಲಿ ಪ್ರಾಮಾಣ್ಯ ನಿಶ್ಚಯದ ಅಗತ್ಯವಿಲ್ಲವಾದ ಕಾರಣ ಅನವಸ್ಥಾದೋಷವಿಲ್ಲ.

ಈ ಅಭಿಪ್ರಾಯ ಸರಿಯಲ್ಲ. ಯಾವ ಕಾರ್ಯಕ್ಕೆ ಅಲ್ಪದೇಹಶ್ರಮ, ಕಡಿಮೆ ವಿತ್ತವ್ಯಯ ಸಾಕೋ ಅಂತಹ ಕಾರ್ಯದಲ್ಲಿ ಸಂದೇಹದಿಂದಲೂ ಪ್ರವೃತ್ತಿಯಾಗುತ್ತದೆ. ಆದರೆ ಬಹುವಿತ್ತವ್ಯಯ-ಆಯಾಸ ಸಾಧ್ಯವಾದ ಕಾರ್ಯದಲ್ಲಿ ನಾವು ತೊಡಗಬೇಕಾದರೆ ಆ ಕಾರ್ಯದಿಂದ ಸಿಗುವ ಫಲ

---

1. ಮಣಿಗ್ರಂಥದಲ್ಲಿ ಹೀಗೆಯೇ ಅನವಸ್ಥಾಪರಿಹಾರವನ್ನು ಮಾಡಲಾಗಿದೆ—''ಅತ ಏವಾಗೃಹೀತ ಪ್ರಾಮಾಣ್ಯಮೇವ ಜ್ಞಾನಂ ಪರಪ್ರಾಮಾಣ್ಯಂ ನಿಶ್ಚಾಯಯತಿ । ಅಪ್ರಾಮಾಣ್ಯಶಂಕಾಕಲಂಕಾಭಾವಾತ್ । ಯತ್ರ ತು ಪ್ರಾಮಾಣ್ಯ ಜ್ಞಾನೇ ಅಪ್ರಾಮಾಣ್ಯಶಂಕಯಾ ಪ್ರಾಮಾಣ್ಯಸಂಶಯಃ ತತ್ರ ಪ್ರಾಮಾಣ್ಯಜ್ಞಾನೇ ಪ್ರಾಮಾಣ್ಯನಿಶ್ಚಯಾದೇವ ಪ್ರಾಮಾಣ್ಯನಿಶ್ಚಯಃ । ಏವಂ ಯಾವದಪ್ರಾಮಾಣ್ಯಶಂಕಂ ತಜ್ಜ್ಞಾನಪ್ರಾಮಾಣ್ಯನಿಶ್ಚಯಾದೇವ ತನ್ನಿಶ್ಚಯಃ । ನಚೈವಂ ಅನವಸ್ಥಾ । ಚರಮಜ್ಞಾನ ಪ್ರಾಮಾಣ್ಯ(ಸ್ಯಜ್ಞಾನ) )ಇಲ್ಲಿ ನ್ಯಾಯದೀಪ ಸಮ್ಮತವಾದ ಮಣಿಗ್ರಂಥದ ಪಾಠ 'ಪ್ರಾಮಾಣ್ಯಜ್ಞಾನಸ್ಯ ಜ್ಞಾನಾಭಾವೇನ...'' ಎಂದು. ಇದು ಮುಂದಿನ ಪ್ರಕರಣದಿಂದ ತಿಳಿಯುತ್ತದೆ) ಜ್ಞಾನಾಭಾವೇನ, ಕೋಟಿಸ್ಮರಣಾಭಾವೇನ, ವಿಷಯಾಂತರಸಂಚಾರೇಣ ವಾ ಪ್ರಾಮಾಣ್ಯ ಸಂಶಯಾನ-ವಷ್ಕಂಭಾವಾತ್ । (ಪು.294)

(ಈ ಗ್ರಂಥಕ್ಕೆ ಪ್ರಕಾಶದಲ್ಲಿ ಫಲಮುಖೀಮ್ ಅನವಸ್ಥಾಂ ನಿರಾಕರೋತಿ । ಎಂದೇ ಅವತರಣಿಕೆಯನ್ನು ಕೊಡಲಾಗಿದೆ.)

ಜಲಜ್ಞಾನದ ಪ್ರಾಮಾಣ್ಯವನ್ನು 'ಜಲಜ್ಞಾನಂ ಪ್ರಮಾಣಂ' ಎಂಬ ಜ್ಞಾನವು ನಿರ್ಧರಿಸುತ್ತದೆ. ಈ ಪ್ರಾಮಾಣ್ಯಜ್ಞಾನದ ಪ್ರಾಮಾಣ್ಯವು ಅನಿರ್ಧಾರಿತವಾಗಿಯೇ ಇರುತ್ತದೆ. ಅರ್ಥಾತ್, ಪ್ರಾಮಾಣ್ಯಜ್ಞಾನದಲ್ಲಿ ಮತ್ತೆ ಪ್ರಾಮಾಣ್ಯಜ್ಞಾನದ ಅಗತ್ಯವೇ ಇಲ್ಲ. ಏಕೆಂದರೆ, ಅದರಲ್ಲಿ ಪ್ರಾಮಾಣ್ಯ ಸಂದೇಹವೇ ಬರುವುದಿಲ್ಲ. ಅದಕ್ಕೆ ಕಾರಣ, ಆ ಜ್ಞಾನದ ಜ್ಞಾನವೇ ಬರದಿರಬಹುದು, ಕೋಟಿಸ್ಮರಣೆ ಇಲ್ಲದಿರಬಹುದು, ಮನಸ್ಸು ವಿಷಯಾಂತರದಲ್ಲಿ ಆಸಕ್ತವಾಗಿರಬಹುದು. ಈ ಕಾರಣಗಳಿಂದಾಗಿ ಪ್ರಾಮಾಣ್ಯಜ್ಞಾನದಲ್ಲಿ ಮತ್ತೆ ಪ್ರಾಮಾಣ್ಯ ಸಂದೇಹವು ಬರುವುದಿಲ್ಲ. ಆದ್ದರಿಂದ ಅದರ ಪ್ರಾಮಾಣ್ಯಜ್ಞಾನವೇ ಬರುವುದಿಲ್ಲ, ಅನವಸ್ಥಾದೋಷವಿಲ್ಲ.

ನಿರ್ಧಾರವಾಗಿರಬೇಕು. ಸ್ವರ್ಗಸಾಧನವಾದ ಯಾಗ ಇಂತಹ ಮಹತ್ಕಾರ್ಯ. ಅಂತಹ ಕಾರ್ಯವನ್ನು ನಾವು ಮಾಡಬೇಕಾದರೆ, ಯಾಗ ಮಾಡಿದರೆ ಸ್ವರ್ಗವು ನಿಶ್ಚಿತ, ಎಂದು ಖಾತ್ರಿಯಾಗಬೇಕು. ಅದು ನಿರ್ಧಾರವಾಗಬೇಕಾದರೆ ವೇದದಿಂದ ಬಂದಿರುವ 'ಯಾಗಃ ಸ್ವರ್ಗಸಾಧನಮ್' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ಸಿದ್ಧವಾಗಬೇಕು. ಪ್ರಾಮಾಣ್ಯಸಂದೇಹವಿದ್ದಲ್ಲಿ ನಾವು ಯಾಗ ಮಾಡುವುದಿಲ್ಲ. ಅಂತಹ ಕಡೆಗಳಲ್ಲಿ ಸರ್ವತ್ರ ಅಂದರೆ, ಮುಂದಿನ ಎಲ್ಲಾ ಹಂತಗಳಲ್ಲೂ ಪ್ರಾಮಾಣ್ಯವು ಅವಶ್ಯವೇದ್ಯವಾದುದರಿಂದ ಅನವಸ್ಥಾ ಬಂದೇ ಬರುತ್ತದೆ.

## ಮಣಿಗ್ರಂಥ ವಿಮರ್ಶೆ

**ನಚೇತಿ ॥ ಜ್ಞಾನಸ್ಯೇತಿ ಶೇಷಃ। ಅವಶ್ಯವೇದ್ಯಮಿತಿ ॥ ಏತೇನ, ಚರಮಪ್ರಾಮಾಣ್ಯಜ್ಞಾನಸ್ಯ ಜ್ಞಾನಾಭಾವೇನ, ಕೋಟಿಸ್ಮರಣಾಭಾವೇನ, ವಿಷಯಾಂತರ–ಸಂಚಾರೇಣ ವಾ ಪ್ರಾಮಾಣ್ಯಸಂಶಯಾ–ನವಶ್ಯಂಭಾವಾತ್ ನಾನವಸ್ಥಾ' (ಪು.249) ಇತಿ ಮಣ್ಯಾದ್ಯುಕ್ತಂ ನಿರಸ್ತಂ ಧ್ಯೇಯಮ್ ।**

ಮೂಲದಲ್ಲಿ, ಸ್ವರ್ಗಸಾಧನವಾದ ಯಾಗದಲ್ಲಿ ಪ್ರವೃತ್ತಿ ಮಾಡಬೇಕಾದರೆ ಪ್ರಾಮಾಣ್ಯವು ಅವಶ್ಯವೇದ್ಯ ಎಂದು ಹೇಳಿರುವುದರಿಂದ ಮಣಿಕಾರನು ಹೇಳಿದ ಅನವಸ್ಥಾಪರಿಹಾರಕ್ರಮವನ್ನೂ ನಿರಾಕರಿಸಿದಂತಾಗಿದೆ.

ಮಣಿಕಾರ ಸರ್ವತ್ರ ಪ್ರಾಮಾಣ್ಯವು ಅವಶ್ಯವೇದ್ಯವಲ್ಲ, ಎನ್ನುವುದಕ್ಕೆ ಮೂರು ಸಂದರ್ಭಗಳನ್ನು ತೋರಿಸಿದ್ದಾನೆ—

(1) ಪೂರ್ವಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸುವ ಉತ್ತರಜ್ಞಾನದ ಜ್ಞಾನವೇ ಬರದಿದ್ದಾಗ ಉತ್ತರಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಏಕೆಂದರೆ, ಸಂದೇಹಕ್ಕೆ ಧರ್ಮಿಜ್ಞಾನವು ಕಾರಣ. ಪ್ರಕೃತ ಸಂದೇಹದಲ್ಲಿ ಧರ್ಮಿ ಉತ್ತರಜ್ಞಾನ. ಅದು ಅಜ್ಞಾಯಮಾನವಾಗಿದೆ. ಅದರಿಂದಾಗಿ ತಜ್ಞಾನಧರ್ಮಿಕ ಪ್ರಾಮಾಣ್ಯಸಂದೇಹ ಬರುವುದಿಲ್ಲ.

(2) ಅಥವಾ ಧರ್ಮಿಜ್ಞಾನ ಬಂದರೂ ಕೋಟಿಸ್ಮರಣೆ ಇಲ್ಲದಿರುವುದರಿಂದ ಸಂದೇಹ ಬರದಿರಬಹುದು. ಪ್ರಕೃತ ಸಂದೇಹದಲ್ಲಿ ಪ್ರಾಮಾಣ್ಯ, ಅಪ್ರಾಮಾಣ್ಯಗಳು ಕೋಟಿಗಳು. ಅವುಗಳ ಸ್ಮರಣೆ ಬರದೇ ಇರಬಹುದು. ಅದರಿಂದಾಗಿ ಸಂದೇಹಾಭಾವ.

(3) ಅಥವಾ ಮನಸ್ಸು ಕಾರ್ಯಾಂತರದಲ್ಲಿ ವ್ಯಗ್ರವಾದಾಗ ಸಕಲ ಸಾಮಗ್ರಿಗಳು ಇದ್ದರೂ ಸಂದೇಹವು ಬರದೇ ಇರಬಹುದು.

ಹೀಗೆ, ಸಂದೇಹವೇ ಬರದಿದ್ದಾಗ ಪ್ರಾಮಾಣ್ಯವು ವೇದ್ಯವಾಗುವ ಅಗತ್ಯವೇ ಇಲ್ಲ. ಆದ್ದರಿಂದ ಅನವಸ್ಥಾದೋಷವಿಲ್ಲ.

ಈ ಸಮಾಧಾನವೂ ಯುಕ್ತವಲ್ಲ. ಹಿಂದೆ ಹೇಳಿದಂತೆ ಶ್ರಮಸಾಧ್ಯವಾದ ಯಾಗದಲ್ಲಿ ಪ್ರವೃತ್ತಿ ಮಾಡಬೇಕಾದರೆ ಎಲ್ಲಾ ಹಂತಗಳಲ್ಲೂ ಪ್ರಾಮಾಣ್ಯವು ನಿಶ್ಚಿತವಾಗಬೇಕು. ಹೀಗೆ ಜಿಜ್ಞಾಸೆ ಇರುವುದ ರಿಂದ ಧರ್ಮಿಜ್ಞಾನ, ಕೋಟಿಸ್ಮರಣೆಗಳೂ ಬಂದೇ ಬರುತ್ತವೆ. ಮನಸ್ಸು ಕಾರ್ಯಾಂತರದಲ್ಲಿ ಮಗ್ನವಾದರೂ ಆ ಕಾರ್ಯ ಮುಗಿದಮೇಲೆ ಮತ್ತೆ ಪುನಃ ಹಿಂದಿನ ಜ್ಞಾನಗಳ ಪ್ರಾಮಾಣ್ಯದ ಬಗ್ಗೆ ಪರಿಶೀಲಿಸಿ, ನಿರ್ಧಾರವಾದ ಮೇಲೆಯೇ ಪ್ರವೃತ್ತಿಯಾಗಬೇಕು. ಆದ್ದರಿಂದ ಅನವಸ್ಥಾದೋಷ ಬಂದೇ ಬರುತ್ತದೆ.

## ನ್ಯಾಯದೀಪ

**ನನು ಅಸ್ತು ಜ್ಞಾನಸ್ಯ ಅವಶ್ಯವೇದ್ಯತಯಾ ಜ್ಞಾತತ್ವೇನ, ತತ್ ಪ್ರಾಮಾಣ್ಯಾ-ನಿಶ್ಚಯೇ ತತ್-ಸಂಶಯೋ ಅವರ್ಜನೀಯಃ। ತಥಾಪಿ ಕೃಷ್ಯಾದಾವಿವ ಪ್ರವೃತ್ತಿರಸ್ತು ಇತ್ಯತ ಆಹ-ಕೃಷ್ಯಾದಾವಿತಿ ॥**

ಹಿಂದೆ ಹೇಳಿದಂತೆ, ಸಾಮಗ್ರಿಗಳು ಇರುವುದರಿಂದ ಜ್ಞಾನದ ಜ್ಞಾನ ಬಂದೇ ಬರುತ್ತದೆ, ಎಂದು ಅಂಗೀಕರಿಸೋಣ. ಜ್ಞಾತವಾದ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗದಿದ್ದಲ್ಲಿ ಸಂದೇಹವು ಅನಿವಾರ್ಯ ಎಂದೂ ಒಪ್ಪೋಣ. ಆದರೂ ಪ್ರವೃತ್ತಿಯಾಗುವುದಕ್ಕೆ ಬಾಧಕವಿಲ್ಲ. 'ಕೃಷಿಯು ಧಾನ್ಯ ಸಮೃದ್ಧಿಗೆ ಕಾರಣ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಿತವಾಗಿರುವುದಿಲ್ಲ. ಏಕೆಂದರೆ, ಮಳೆ ಅನಿಶ್ಚಿತವಾದುದರಿಂದ ಆ ಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹವಿದೆ. ಆದರೂ, ರೈತ ಕೃಷಿಕಾರ್ಯದಲ್ಲಿ ಪ್ರವೃತ್ತಿ ಮಾಡುತ್ತಾನೆ. ಅದರಂತೆ 'ಯಾಗವು ಸ್ವರ್ಗಸಾಧನ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹವಿದ್ದರೂ ಪ್ರವೃತ್ತಿಯಾಗಬಹುದು.

ಈ ಆಕ್ಷೇಪಕ್ಕೆ ಉತ್ತರವನ್ನು 'ಕೃಷ್ಯಾದೌ' ಇತ್ಯಾದಿವಾಕ್ಯ ಕೊಡುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**'ಯತ್ರಾಪ್ರಾಮಾಣ್ಯಶಂಕಾ ನಾಸ್ತಿ ಕರತಲಾಮಲಕಾದಿಜ್ಞಾನೇ ತತ್ರ ವ್ಯವಸಾಯ ಏವ ಅರ್ಥನಿಶ್ಚಯಃ, ತತ ಏವ ನಿಷ್ಕಂಪ ಪ್ರವೃತ್ತಿಃ' (ಪು.294) ಇತ್ಯಾದಿ ಮಣ್ಯಾದ್ಯುಕ್ತಂ ಆಶಂಕತೇ-ನನು ತತ್ರಾಪೀತಿ ॥**

ಮಣಿಗ್ರಂಥದಲ್ಲಿ ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲ, ಅರ್ಥ ನಿಶ್ಚಯವೇ ಪ್ರವೃತ್ತಿ ಹೇತು, ಎಂದು ಸಮರ್ಥಿಸಲಾಗಿದೆ-ಅಂಗೈಯಲ್ಲಿ ಇರುವ ವಸ್ತುವಿನ (ಆಮಲಕ) ಜ್ಞಾನ ಬಂದಾಗ ಅಪ್ರಾಮಾಣ್ಯಸಂದೇಹಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಅಲ್ಲಿ ಪ್ರಾಮಾಣ್ಯನಿಶ್ಚಯ ಬಂದು ಪ್ರವೃತ್ತಿ ಯಾಗುತ್ತದೆ. ಆ ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯ ಕಾರಣ. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು

ಅಂಗೀಕರಿಸಬೇಕೆಂದು ಸ್ವತಸ್ತ್ವವಾದಿಗಳು ಕೊಡುವ ಸಮರ್ಥನೆಗೆ ಮಣಿಕಾರನ ಉತ್ತರ—ಯಾವುದೇ ಪ್ರವೃತ್ತಿಗೆ ಜ್ಞಾನಪ್ರಾಮಾಣ್ಯ ನಿಶ್ಚಯವು ಕಾರಣವಲ್ಲ. ಅರ್ಥನಿಶ್ಚಯವೇ ಕಾರಣ. ಅರ್ಥಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬಂದಾಗ ಮಾತ್ರ ಪ್ರವೃತ್ತಿಪ್ರತಿಬಂಧಕವಾದ ಆ ಸಂದೇಹವನ್ನು ಪರಿಹರಿಸುವುದಕ್ಕಾಗಿಯಷ್ಟೇ ಕೆಲವು ಕಡೆ ಪ್ರಾಮಾಣ್ಯನಿಶ್ಚಯವು ಬೇಕಾಗುತ್ತದೆ. ಸಮೀಪದಲ್ಲಿರುವ ವಸ್ತುಗಳ ಜ್ಞಾನ ಬಂದಾಗ ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲ, ಎಂದು. ಉದಯನಾಚಾರ್ಯರೂ ಇದನ್ನೇ ಹೇಳಿದ್ದಾರೆ—'ನ ತು ಪ್ರಾಮಾಣ್ಯಗ್ರಹಸ್ಯ ಕ್ವಚಿದಪ್ಯುಪಯೋಗಃ' ಎಂದು.

ಈ ಆಕ್ಷೇಪವನ್ನು ಮಾಡಿ ಅದಕ್ಕೆ ಪರಿಹಾರವನ್ನು ಮುಂದಿನ ಮೂಲದಲ್ಲಿ ಕೊಡಲಾಗಿದೆ.

## ಅರ್ಥನಿಶ್ಚಯ ಪ್ರವರ್ತಕವಲ್ಲ

**ननु तत्राप्यर्थनिश्चय एव हेतुः। समानविषयत्वात् । आवश्यकत्वाच्च । न तु प्रामाण्यनिश्चय इति चेन्न । 'पीतः शङ्खः' इत्यादावाकारान्तरार्थोल्लेखाभावेन 'शङ्खः पीतत्वेनैव भाती'त्यनुभवेन चैकाकारनियते संशयान्यज्ञानरूपे निश्चये सत्यपि पीतार्थिनोऽप्रवृत्तिदर्शनात् ।**

ಆಮುಷ್ಮಿಕಫಲಕವಾದ ಯಾಗದಲ್ಲೂ ಪ್ರವೃತ್ತಿ ಮಾಡುವುದಕ್ಕೆ ಅರ್ಥನಿಶ್ಚಯವೇ ಕಾರಣ. ಯಾಗವು ಸ್ವರ್ಗಕ್ಕೆ ಕಾರಣವಾಗಿದೆ, ಎಂಬ ನಿಶ್ಚಯವೇ ಅರ್ಥ ನಿಶ್ಚಯ. ಇದರಿಂದಾಗಿಯೇ ಯಾಗಮಾಡಲು ತೊಡಗುತ್ತೇವೆ. ಈ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣವಲ್ಲ. ಇದಕ್ಕೊಂದು ಸಮರ್ಥನೆಯೂ ಇದೆ—ಪ್ರವೃತ್ತಿವಿಷಯವಾದುದು ಯಾಗ. ಅದಕ್ಕೆ ಕಾರಣವಾದ 'ಯಾಗಃ ಸ್ವರ್ಗಸಾಧನಂ' ಎಂಬ ಜ್ಞಾನಕ್ಕೂ ವಿಷಯವಾದುದು ಯಾಗ. ಹೀಗೆ ಅರ್ಥನಿಶ್ಚಯವು ಪ್ರವೃತ್ತಿಕಾರಣವೆಂದಾಗ ಕಾರ್ಯ-ಕಾರಣಗಳಿಗೆ ಸಮಾನವಿಷಯಕತ್ವ ಬರುತ್ತದೆ. ಪ್ರಾಮಾಣ್ಯ ನಿಶ್ಚಯ ಕಾರಣವೆಂದಾಗ ಸಮಾನವಿಷಯಕತ್ವ ಇಲ್ಲ. ಅಷ್ಟೇ ಅಲ್ಲ, ಜಲಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವು ಕಾರಣ ಎಂದಾಗಲೂ ನಿಶ್ಚಿತಪ್ರಾಮಾಣ್ಯಕ-ಅರ್ಥನಿಶ್ಚಯವು ಕಾರಣ, ಎಂದೇ ಹೇಳಬೇಕು. ಹೀಗೆ ಅರ್ಥ ನಿಶ್ಚಯಕ್ಕೆ ಕಾರಣತ್ವವು ಆವಶ್ಯಕ. ಆದ್ದರಿಂದ ಪ್ರವೃತ್ತಿಗೆ ಅರ್ಥನಿಶ್ಚಯವೇ ಕಾರಣ, ಪ್ರಾಮಾಣ್ಯನಿಶ್ಚಯವಲ್ಲ. ಇದು ಮಣಿಕಾರನ ಆಕ್ಷೇಪ.

ಇದು ಸರಿಯಲ್ಲ. ಪಿತ್ತದೋಷವಿದ್ದವನಿಗೆ 'ಶಂಖವು ಹಳದಿ' ಎಂಬ ಭ್ರಮೆ ಬರುತ್ತದೆ. ಈ ಭ್ರಾಂತಿಯಲ್ಲಿ ಒಂದೇ ಪ್ರಕಾರವು ತೋರುವುದರಿಂದ ಇದು ಸಂದೇಹವಲ್ಲ, ನಿಶ್ಚಯ. ಅಷ್ಟೇ ಅಲ್ಲ 'ಶಂಖವು ಹಳದಿಯಾಗಿಯೇ ತೋರುತ್ತಿದೆ' ಎಂಬ ಅನುವ್ಯವಸಾಯದಿಂದಲೂ ಈ ವ್ಯವಸಾಯವು ನಿಶ್ಚಯಾತ್ಮಕವೆಂದು ಸಿದ್ಧವಾಗುತ್ತದೆ. ಹೀಗಾಗಿ, ಇಂತಹ ಸಂದರ್ಭದಲ್ಲಿ ಪೀತವಸ್ತುವಿನ ನಿಶ್ಚಯ

ಏದೆ, ಆದರೂ ಪೀತವಸ್ತುವನ್ನು ಬಯಸುವ ವ್ಯಕ್ತಿ ಶಂಖದಲ್ಲಿ ಪ್ರವೃತ್ತಿ ಮಾಡುವುದಿಲ್ಲ. ಆದ್ದರಿಂದ ಅರ್ಥನಿಶ್ಚಯವು ಪ್ರವೃತ್ತಿಗೆ ಕಾರಣವಲ್ಲ. ಪ್ರಾಮಾಣ್ಯನಿಶ್ಚಯವೇ ಕಾರಣ. 'ಪೀತಃ ಶಂಖಃ' ಎಂಬ ಜ್ಞಾನವು ಅಪ್ರಮಾಣ, ಎಂಬ ನಿಶ್ಚಯವಿರುವುದರಿಂದ ಪ್ರಾಮಾಣ್ಯನಿಶ್ಚಯವಿಲ್ಲ. ಆದ್ದರಿಂದ ಪ್ರವೃತ್ತಿಯಾಗುವುದಿಲ್ಲ. ಹೀಗೆ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರಣವೆಂದಾಗ ಪ್ರವೃತ್ತಿಯನ್ನು ವಾರಣೆ ಮಾಡಬಹುದು. ಆದ್ದರಿಂದ ಪ್ರವರ್ತಕಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವೇ ಪ್ರವೃತ್ತಿಕಾರಣ.

## ನ್ಯಾಯದೀಪ

**ನನು ತತ್ರಾಪೀತಿ ॥ ಪಾರಲೌಕಿಕ-ಯಾಗಾದೌ ಅಪಿ ಇತ್ಯರ್ಥಃ। ಆವಶ್ಯಕತ್ವಾಚ್ಚೇತಿ ॥ ಪ್ರಾಮಾಣ್ಯನಿಶ್ಚಯ-ಪ್ರವರ್ತಕತ್ವವಾದಿನಾಪಿ ಅರ್ಥ-ನಿಶ್ಚಯಸ್ಯ ಅಭ್ಯುಪೇಯತ್ವಾತ್ ಇತಿ ಭಾವಃ।**

ಅರ್ಥನಿಶ್ಚಯವೇ ಪ್ರವರ್ತಕ. ಪ್ರಾಮಾಣ್ಯನಿಶ್ಚಯವು ಪ್ರವರ್ತಕ ಎಂದು ಹೇಳಿದರೂ ನಿಶ್ಚಿತ ಪ್ರಾಮಾಣ್ಯಕ-ಅರ್ಥನಿಶ್ಚಯವೇ ಪ್ರವರ್ತಕ. ಹೀಗೆ ಅರ್ಥನಿಶ್ಚಯಕ್ಕೆ ಪ್ರವರ್ತಕತ್ವವು ಉಭಯಸಿದ್ಧ. ಆದ್ದರಿಂದ ಅದೇ ಪ್ರವರ್ತಕ, ಎಂದು ಮಣಿಕಾರನ ಸಮರ್ಥನೆ.

## ನ್ಯಾಯದೀಪ

**ಕಿಂ ಅರ್ಥನಿಶ್ಚಯ ಏವ ಪ್ರವರ್ತಕಃ? (2) ಉತ ಪ್ರಾಮಾಣ್ಯವಿರೋಧಿ ಜ್ಞಾನವಿರಹಸಹಕಾರಿಸಹಕೃತಃ? (3) ಅಥ ಪ್ರಾಮಾಣ್ಯವಿರೋಧಿಜ್ಞಾನ ವಿರಹಃ ನ ಸಹಕಾರೀ, ಕಿಂತು ಪ್ರವರ್ತಕತಾವಚ್ಛೇದಕಃ? (4) ಯದ್ವಾ ಅರ್ಥನಿಶ್ಚಯ ಏವ ಪ್ರವರ್ತಕಃ, ಅಪ್ರಾಮಾಣ್ಯಾದಿಜ್ಞಾನಂ ಪ್ರತಿಬಂಧಕಂ, ಪ್ರತಿಬಂಧಕಾಂತರ ಸಂಪಾದಕಂ ವಾ? ಇತಿ ವಿಕಲ್ಪಾನ್ ಹೃದಿ ಕೃತ್ವಾ, ಆದ್ಯೋ ವ್ಯಭಿಚಾರೀತ್ಯಾಹ-ಪೀತ ಇತಿ ॥ ಆಕಾರಾಂತರಾರ್ಥೇತಿ ॥ ಶುಕ್ಲೋ ವೇತ್ಯಾಕಾರಾಂತ-ರೇತ್ಯರ್ಥಃ। ಆಕಾರಾಂತರೇತಿ ಕ್ವಚಿತ್ ಪಾಠಃ।**

ಅರ್ಥನಿಶ್ಚಯವು ಪ್ರವರ್ತಕ ಎನ್ನುವ ನೈಯಾಯಿಕ ಮತವನ್ನು ಐದು ವಿಕಲ್ಪಗಳನ್ನು ಮಾಡಿ ನಿರಾಕರಿಸಲಾಗಿದೆ.

ವಿಕಲ್ಪ 1—ಕೇವಲ ಅರ್ಥನಿಶ್ಚಯವು ಪ್ರವರ್ತಕವೋ ?

ವಿಕಲ್ಪ 2—ಪ್ರಾಮಾಣ್ಯ ವಿರೋಧಿಯಾದ ಅಪ್ರಾಣ್ಯಾದಿಜ್ಞಾನಗಳ ಅಭಾವದ ಸಹಕಾರ ದಿಂದ ಸಹಿತವಾದ ಅರ್ಥನಿಶ್ಚಯವು ಪ್ರವರ್ತಕವೋ ?

ವಿಕಲ್ಪ 3—ಪ್ರಾಮಾಣ್ಯವಿರೋಧಿ ನಿಶ್ಚಯದ ಅಭಾವವು ಸಹಕಾರಿ ಅಲ್ಲ, ಅದು ಪ್ರವರ್ತಕತಾವಚ್ಛೇದಕ. ಪ್ರವರ್ತಕ ಪ್ರಾಮಾಣ್ಯವಿರೋಧಿನಿಶ್ಚಯದ-ಅಭಾವವಿಶಿಷ್ಟವಾದ ಅರ್ಥ ನಿಶ್ಚಯ. ತನ್ನಿಷ್ಠಪ್ರವರ್ತಕತಾದಲ್ಲಿ ಅವಚ್ಛೇದಕವಾದುದು ಪ್ರಾಮಾಣ್ಯನಿಶ್ಚಯಾಭಾವ.

ವಿಕಲ್ಪ 4—ಅಥವಾ, ಅರ್ಥನಿಶ್ಚಯ ಮಾತ್ರ ಪ್ರವೃತ್ತಿಗೆ ಕಾರಣ. ಅಪ್ರಾಮಾಣ್ಯಜ್ಞಾನ, ಪ್ರಾಮಾಣ್ಯಾಭಾವಜ್ಞಾನ ಇವು ಪ್ರತಿಬಂಧಕಗಳು.

ವಿಕಲ್ಪ 5—ಅಥವಾ, ಅಪ್ರಾಮಾಣ್ಯಾದಿ ಜ್ಞಾನವು ಅರ್ಥಸಂದೇಹಾದಿರೂಪ ಪ್ರತಿಬಂಧಕಾಂತರ ಸಂಪಾದಕವಾಗಿ ಪ್ರವೃತ್ತಿ ಪ್ರತಿಬಂಧಕವಾಗುತ್ತದೆ.

ಈ ಐದರಲ್ಲಿ ಮೊದಲನೆಯ ಪಕ್ಷವನ್ನು ಈ ಹಿಂದಿನ ಗ್ರಂಥದಲ್ಲಿ ನಿರಾಕರಿಸಲಾಗಿದೆ.

## 2. ದ್ವಿತೀಯ ವಿಕಲ್ಪನಿರಾಸ

**न चाप्रामाण्याज्ञानरूपसहकारिविरहादप्रवृत्तिरिति वाच्यम् । एवं तर्ह्यप्रामाण्यस्याप्यनुमेयत्वेन तदननुमितिदशायां पीतार्थिनः प्रवृत्तिः स्यात् ।**

ಇಲ್ಲಿ ದ್ವಿತೀಯವಿಕಲ್ಪವನ್ನು ನಿರಾಕರಿಸಲಾಗಿದೆ—'ಪೀತಃ ಶಂಖಃ' ಎಂಬ ಅರ್ಥನಿಶ್ಚಯ ವಿದ್ದರೂ ಪ್ರವೃತ್ತಿಯಾಗದಿರುವುದಕ್ಕೆ ಕಾರಣ ಸಹಕಾರ್ಯಂತರವಿರಹ. 'ಪೀತಃ ಶಂಖಃ' ಎಂಬ ಜ್ಞಾನವು ಪಿತ್ತದೋಷದಿಂದ ಹುಟ್ಟಿದೆ ಎಂದು ತಿಳಿದಿರುವುದರಿಂದ ಆ ಜ್ಞಾನವು ಅಪ್ರಮಾಣ ಎಂಬ ನಿಶ್ಚಯವಿದೆ. ಹೀಗಾಗಿ ಅರ್ಥನಿಶ್ಚಯವಿದ್ದರೂ ಪ್ರವೃತ್ತಿಯಾಗುವುದಿಲ್ಲ. ಅಪ್ರಾಮಾಣ್ಯ ನಿಶ್ಚಯವಿರಹವೂ ಪ್ರವೃತ್ತಿಗೆ ಸಹಕಾರಿ. ಅಂತಹ ಸಹಕಾರಿ ಪ್ರಕೃತದಲ್ಲಿ ಇಲ್ಲ. ಆದ್ದರಿಂದ ಪ್ರವೃತ್ತಿಯಾಗುವುದಿಲ್ಲ. ಹೀಗೆ ಹೇಳುವುದೂ ಸರಿಯಲ್ಲ— ಏಕೆಂದರೆ, ಪರಮತದಲ್ಲಿ ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಅನುಮೇಯ. ಅಪ್ರಾಮಾಣ್ಯ ಅನುಮಿತಿ ಬರಬೇಕಾದರೆ ಅದಕ್ಕೆ ಬೇಕಾದ ವ್ಯಾಪ್ತಿ-ಪಕ್ಷಧರ್ಮತಾ ಜ್ಞಾನಗಳು ಬರಬೇಕು. 'ಪೀತಃ ಶಂಖಃ' ಎಂಬ ಅರ್ಥನಿಶ್ಚಯವಾಗಿ ಅನೇಕ ಕ್ಷಣಗಳು ಕಳೆದ ಮೇಲೆ ಪ್ರತಿಬಂಧಕವಾದ ಅಪ್ರಾಮಾಣ್ಯಜ್ಞಾನ ಬರಬೇಕು. ಅದು ಬರುವುದಕ್ಕೂ ಮೊದಲು ಪ್ರವೃತ್ತಿ ಕಾರಣವಾದ ಅರ್ಥನಿಶ್ಚಯವೂ ಅಪ್ರಾಮಾಣ್ಯನಿಶ್ಚಯಾಭಾವರೂಪ ಸಹಕಾರಿಯೂ ಇದೆ. ಆದ್ದರಿಂದ ಪೀತಾರ್ಥಿಯು ಪ್ರವೃತ್ತಿ ಮಾಡಬೇಕಾದೀತು.

## ನ್ಯಾಯದೀಪ

**ದ್ವಿತೀಯಂ ಶಂಕತೇ–ನ ಚಾಪ್ರಾಮಾಣ್ಯೇತಿ ।। ಪ್ರಾಮಾಣ್ಯವಿರೋಧಿನಃ ನಿಶ್ಚಯಸಂಶಯ ಸಾಧಾರಣ–ಜ್ಞಾನಾಭಾವರೂಪ–ಸಹಕಾರೀತ್ಯರ್ಥಃ ।।**

ಈ ಮೂಲದಲ್ಲಿ ಎರಡನೆಯ ವಿಕಲ್ಪವನ್ನು ಶಂಕೆ ಮಾಡಿ ನಿರಾಕರಿಸಲಾಗಿದೆ. ಅಲ್ಲಿರುವ 'ಅಪ್ರಾಮಾಣ್ಯ–ಅಜ್ಞಾನರೂಪ–ಸಹಕಾರಿ–ವಿರಹ' ಎಂಬ ಪದದ ಅರ್ಥವಿವರಣೆ–ಪ್ರಾಮಾಣ್ಯಕ್ಕೆ ವಿರೋಧಿಯಾದ ಅಪ್ರಾಮಾಣ್ಯ–ಪ್ರಾಮಾಣ್ಯಾಭಾವ ಇವುಗಳ ನಿಶ್ಚಯ ಅಥವಾ ಸಂದೇಹ ಎರಡೂ ಇರಬಾರದು. ಅರ್ಥಾತ್ ಅವುಗಳ ಜ್ಞಾನಸಾಮಾನ್ಯಾಭಾವವು ಪ್ರವೃತ್ತಿಗೆ ಸಹಕಾರಿ ಕಾರಣ.

## ನ್ಯಾಯದೀಪದಲ್ಲಿ ಅವತಾರಿಕೆ

**ಇಷ್ಟಾಪತ್ತಿಮಾಶಂಕ್ಯಾಹ–ಕಿಂಚೇತಿ ।**

'ಪೀತಃ ಶಂಖಃ' ಎಂಬ ಭ್ರಮೆ ಬಂದಾಗ ಪೀತಾರ್ಥಿಯು ಪ್ರವೃತ್ತಿ ಮಾಡುತ್ತಾನೆ, ಆದ್ದರಿಂದ ಹಿಂದಿನ ಆಪತ್ತಿ ಇಷ್ಟಾಪತ್ತಿ, ಎಂದರೆ ಅದಕ್ಕೆ ಬೇರೆಯೇ ಆಪತ್ತಿಯನ್ನು ಮುಂದಿನ ವಾಕ್ಯದಲ್ಲಿ ಕೊಡಲಾಗಿದೆ.

**किञ्चाप्रामाण्याज्ञानात् प्रवृत्तौ प्रामाण्याज्ञानान्निवृत्तिः स्यात् ।**

ಅಪ್ರಾಮಾಣ್ಯಾಜ್ಞಾನವು ಪ್ರವೃತ್ತಿಗೆ ಕಾರಣ ಎಂದು ಹೇಳುವುದು ಸರಿಯೂ ಅಲ್ಲ. ಹಾಗೆ ಹೇಳಿದರೆ ತುಲ್ಯಯುಕ್ತ್ಯಾ ಪ್ರಾಮಾಣ್ಯದ ಅಜ್ಞಾನವು ನಿವೃತ್ತಿಗೆ ಕಾರಣವೆನ್ನಬೇಕಾದೀತು. ಆದ್ದರಿಂದ ಅಪ್ರಾಮಾಣ್ಯಜ್ಞಾನವೇ ನಿವೃತ್ತಿಗೆ ಕಾರಣವಾದಂತೆ ಪ್ರಾಮಾಣ್ಯಜ್ಞಾನವೇ ಪ್ರವೃತ್ತಿಗೆ ಕಾರಣ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಅಪ್ರಾಮಾಣ್ಯಜ್ಞಾನಸ್ಯ ಪ್ರತಿಬಂಧಕತ್ವಂ ಸರ್ವಸಿದ್ಧಂ ಇತ್ಯಸ್ತು ತದ್ವಿರಹಾತ್ ತತ್ರ ಪ್ರವೃತ್ತಿಃ । ಪ್ರಾಮಾಣ್ಯಜ್ಞಾನಸ್ಯ ಪ್ರವರ್ತಕತ್ವಂ ಅದ್ಯಾಪಿ ನ ಸಿದ್ಧಮ್, ಇತಿ ಕಥಂ ತದಭಾವಾತ್ ನಿವೃತ್ತಿರಾಪಾದ್ಯತೇ ಇತ್ಯತಃ ತತ್ ಸಾಧಯತಿ–ಕಿಂಚೇತಿ ।।**

ಪ್ರಾಮಾಣ್ಯ–ಅಜ್ಞಾನವು ನಿವೃತ್ತಿಕಾರಣವಾಗಲಿ, ಎಂದು ಪ್ರತಿಬಂದಿಯನ್ನು ಹೇಳುವುದು ಸರಿಯಲ್ಲ. ಅಪ್ರಾಮಾಣ್ಯ–ಅಜ್ಞಾನವು ಪ್ರವೃತ್ತಿಗೆ ಕಾರಣ, ಎಂದು ಹೇಳಲು ಒಂದು ಯುಕ್ತಿ ಇದೆ. ಅಪ್ರಾಮಾಣ್ಯಜ್ಞಾನವು ಪ್ರವೃತ್ತಿಗೆ ಪ್ರತಿಬಂಧಕ ಎನ್ನುವುದು ಸರ್ವಸಮ್ಮತ. ಆದರಿಂದಾಗಿ ಪ್ರತಿಬಂಧಕಾಭಾವವು ಕಾರ್ಯಕ್ಕೆ ಕಾರಣ. ಆದ್ದರಿಂದ ಅಪ್ರಾಮಾಣ್ಯ–ಅಜ್ಞಾನವು ಪ್ರವೃತ್ತಿಕಾರಣ.

ಆದರೆ, ಇದರಂತೆ, ಪ್ರಾಮಾಣ್ಯಜ್ಞಾನವು ಪ್ರವೃತ್ತಿಗೆ ಕಾರಣ ಎಂದು ಸಿದ್ಧವಾಗಿದ್ದಲ್ಲಿ ಅದು ನಿವೃತ್ತಿಗೆ ಪ್ರತಿಬಂಧಕವಾಗಿ ತಜ್ಞಾನಾಭಾವವು ನಿವೃತ್ತಿಗೆ ಕಾರಣವಾಗುತ್ತಿತ್ತು. ಆದರೆ, ಪ್ರಾಮಾಣ್ಯ ಜ್ಞಾನವು ಪ್ರವೃತ್ತಿಕಾರಣ ಎನ್ನುವುದು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ತದಭಾವದಿಂದ ನಿವೃತ್ತಿಯಾಗಲೀ ಎಂದು ಆಪಾದಿಸುವುದು ಸರಿಯಲ್ಲ. ಹೀಗೆ ಆಕ್ಷೇಪ ಬಂದಾಗ ಪ್ರಾಮಾಣ್ಯನಿಶ್ಚಯಕ್ಕೆ ಪ್ರವೃತ್ತಿಹೇತುತ್ವವನ್ನು ಮುಂದೆ ಸಮರ್ಥಿಸಲಾಗಿದೆ.

**किञ्च तदभाववति तत्प्रकारकत्वरूपाप्रामाण्यशङ्काद्यभावोऽनेकाभाव-घटितत्वाद् गुरुः । प्रामाण्यनिश्चयस्तु न तथेति लघुः ।**

**एवमप्रामाण्य-शङ्काद्यभाववत् तद्वति तत्प्रकारकज्ञानत्वरूपप्रामाण्या-त्यन्ताभावशङ्काद्यभावः, एवं तद्व्याप्यदोषजन्यत्वादिशङ्काद्यभावोऽपि हेतुरित्यभावा अनेके । प्रामाण्यनिश्चयस्त्वेकः । अभावानां प्रामाण्यनिश्चयविरोध्यभावत्वेनैकत्वे तु आववश्यकत्वात् लाघवाच्च प्रामाण्यनिश्चय एव सहकारी ।**

ಪ್ರಾಮಾಣ್ಯಜ್ಞಾನವು ಪ್ರವೃತ್ತಿಕಾರಣ, ಎಂದು ಹೇಳುವುದರಲ್ಲಿ ಲಾಘವವೂ ಇದೆ. ಅಪ್ರಾಮಾಣ್ಯಜ್ಞಾನಾಭಾವ ಕಾರಣ ಎಂದರೆ ಗೌರವ. ಹೇಗೆಂದರೆ, ಅಪ್ರಮಾಣ್ಯ ಎಂದರೆ ತದಭಾವವತಿ ತತ್‌ಪ್ರಕಾರಕ ಜ್ಞಾನತ್ವ. ಏತಾದೃಶಾಪ್ರಾಮಾಣ್ಯ ಶಂಕಾಭಾವ, ನಿಶ್ಚಯಾಭಾವ ಕಾರಣವೆಂದಾಗ ಆ ಕಾರಣಶರೀರದಲ್ಲಿ ಎರಡು ಅಭಾವಗಳು ಸೇರಿರುವುದರಿಂದ ಗೌರವ. ಇದಕ್ಕಿಂತ ಪ್ರಾಮಾಣ್ಯಜ್ಞಾನವು ಕಾರಣ ಎನ್ನುವುದು ಲಾಘವ. ಆಗ ಅಪ್ರಾಮಾಣ್ಯಜ್ಞಾನಾಭಾವವೂ ನಿಯತವಾಗಿ ಇದ್ದೇ ಇರುತ್ತದೆ.

ಇದರಂತೆಯೆ, ತದ್ವತಿ–ತತ್–ಪ್ರಕಾರಜ್ಞಾನತ್ವರೂಪ ಪ್ರಾಮಾಣ್ಯಾಭಾವ ಶಂಕೆಯೂ ಪ್ರವೃತ್ತಿಗೆ ಪ್ರತಿಬಂಧಕ. ಅದಕ್ಕಾಗಿ ತದಭಾವವೂ ಪ್ರವೃತ್ತಿಕಾರಣ ಎನ್ನಬೇಕಾಗುತ್ತದೆ.

ಅದರಂತೆ, ಅಪ್ರಾಮಾಣ್ಯಕ್ಕೆ ವ್ಯಾಪ್ಯವಾದ ದೋಷಜನ್ಯತ್ವದ ಶಂಕಾಭಾವವೂ ಪ್ರವೃತ್ತಿ ಕಾರಣವೆನ್ನಬೇಕು.

ಹೀಗೆ ಅನೇಕ ಅಭಾವಗಳ ಬದಲು ಪ್ರಾಮಾಣ್ಯಜ್ಞಾನವು ಕಾರಣ ಎಂದಾಗ ಆ ಮೂರರ ಅಭಾವವೂ ಇರುವುದು ಅನಿವಾರ್ಯವಾದ ಕಾರಣ, ಆ ಮೂರರ ಅಭಾವಕ್ಕೆ ಕಾರಣತ್ವವನ್ನು ಹೇಳುವ ಅಗತ್ಯವಿಲ್ಲ. ಆದ್ದರಿಂದ, ಪ್ರಾಮಾಣ್ಯಜ್ಞಾನ, ಒಂದನ್ನೇ ಪ್ರವೃತ್ತಿಕಾರಣ ಎಂದು ಹೇಳುವುದೇ ಉಚಿತ.

ಹಿಂದೆ ಹೇಳಿದ ಮೂರು ಅಭಾವಗಳನ್ನೂ ಪ್ರಾಮಾಣ್ಯ ನಿಶ್ಚಯವಿರೋಧಿ–ನಿಶ್ಚಯವಿಷಯ–ಅಭಾವತ್ವೇನ ಸಂಗ್ರಹ ಮಾಡಬಹುದು. ಆ ಮೂರು ನಿಶ್ಚಯಗಳಿದ್ದಾಗಲೂ ಪ್ರಾಮಾಣ್ಯ ನಿಶ್ಚಯ ವಿರುವುದಿಲ್ಲ. ಆದರಿಂದ ಆ ಮೂರು ಅಭಾವಗಳ ನಿಶ್ಚಯಗಳೂ ಪ್ರಾಮಾಣ್ಯ ನಿಶ್ಚಯವಿರೋಧಿಯಾಗಿವೆ. ತದ್ವಿಷಯಾಭಾವತ್ವವು ಆ ಮೂರು ಅಭಾವಗಳಲ್ಲೂ ಇವೆ. ಆದ್ದರಿಂದ ಪ್ರವೃತ್ತಿಂ ಪ್ರತಿ ಪ್ರಾಮಾಣ್ಯನಿಶ್ಚಯ–ವಿರೋಧಿ–ನಿಶ್ಚಯ–ವಿಷಯಾಭಾವವು ಕಾರಣ, ಎಂದು ಒಂದೇ ಅಭಾವವನ್ನು ಕಾರಣವನ್ನಾಗಿ ಹೇಳಬಹುದು. ಹೀಗೆ ಹೇಳುವುದೂ ಸರಿಯಲ್ಲ. ಹೀಗೆ ಹೇಳಬೇಕಾದರೆ, ಪ್ರಾಮಾಣ್ಯನಿಶ್ಚಯವು ಕಾರಣವೆಂದು ಒಪ್ಪಬೇಕಾಗುತ್ತದೆ. ಅದು ಕಾರಣವಾದಾಗ ಮಾತ್ರ ತದ್ವಿಘಟಕವಾಗಿ ಅಪ್ರಾಮಾಣ್ಯನಿಶ್ಚಯಾದಿಗಳು ಪ್ರವೃತ್ತಿಗೆ ವಿರೋಧಿಗಳಾಗುತ್ತವೆ, ಆಗ ತದಭಾವವು ಕಾರಣವಾಗುತ್ತದೆ. ಹೀಗೆ ಪ್ರಾಮಾಣ್ಯನಿಶ್ಚಯಕ್ಕೆ ಕಾರಣತ್ವವು ಆವಶ್ಯಕ. ಅಲ್ಲದೆ, ಅದು ಲಾಘವವೂ ಕೂಡಾ. ಆದ್ದರಿಂದ ಆವಶ್ಯಕತ್ವಾತ್, ಲಾಘವಾಚ್ಚ ಪ್ರಾಮಾಣ್ಯನಿಶ್ಚಯವು ಕಾರಣ, ಎಂದು ಹೇಳುವುದೇ ಉಚಿತ.

## ನ್ಯಾಯದೀಪ

**ಶಂಕಾದೀತ್ಯಾದಿಪದೇನ ನಿಶ್ಚಯಗ್ರಹಃ। ವಿರೋಧ್ಯಭಾವತ್ವೇನೇತಿ ॥ ವಿರೋಧಿನಿಶ್ಚಯ–ವಿಷಯಾಭಾವತ್ವೇನ ಇತ್ಯರ್ಥಃ ॥**

ಮೂಲದಲ್ಲಿ ಅಪ್ರಾಮಾಣ್ಯಶಂಕಾದಿ ಎಂಬ ಆದಿಪದದಿಂದ ಅಪ್ರಾಮಾಣ್ಯನಿಶ್ಚಯವು ವಿವಕ್ಷಿತ.

ಮೂಲದಲ್ಲಿ ಪ್ರಾಮಾಣ್ಯನಿಶ್ಚಯ ವಿರೋಧಿಯಾದುದು ಅಪ್ರಾಮಾಣ್ಯಾದಿಗಳು ಎನ್ನಲಾಗಿದೆ. ಆದರೆ, ವಿಷಯವು ನಿಶ್ಚಯಕ್ಕೆ ವಿರೋಧಿಯಾಗುವುದು ಜ್ಞಾನದ ಮೂಲಕ. ಆದ್ದರಿಂದ, ಪ್ರಾಮಾಣ್ಯನಿಶ್ಚವಿರೋಧಿಯಾದ ನಿಶ್ಚಯಕ್ಕೆ ವಿಷಯವಾದ ಅಭಾವತ್ವ ಎಂದು ಅದರ ತಾತ್ಪರ್ಯಾರ್ಥ.

**न चाप्रामाण्याज्ञानमप्यावश्यकम् । प्रमाण्यनिश्चयस्याप्यप्रमात्वेन ज्ञातस्याप्रवर्तकत्वादिति वाच्यम् । मन्मते तस्यापि निश्चितप्रामाण्यकस्यैव प्रवर्तकत्वात् ।**

ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವು ಆವಶ್ಯಕವಾದಂತೆ ಅಪ್ರಾಮಾಣ್ಯ–ಅಜ್ಞಾನವೂ ಅವಶ್ಯಕ. ಏಕೆಂದರೆ, 'ಜಲಜ್ಞಾನಂ ಪ್ರಮಾಣಮ್' ಎಂಬ ನಿಶ್ಚಯವಿದ್ದರೂ 'ಜಲಜ್ಞಾನಂ ಪ್ರಮಾಣಮ್ ಇತಿ ಜ್ಞಾನಮ್ ಅಪ್ರಮಾಣಮ್' ಎಂಬ ಜ್ಞಾನವಿದ್ದರೆ ಪ್ರವೃತ್ತಿಯಾಗುವುದಿಲ್ಲ. ಆದಕ್ಕಾಗಿ ಅಪ್ರಾಮಾಣ್ಯ ಜ್ಞಾನಾಭಾವವೂ ಪ್ರವೃತ್ತಿಗೆ ಕಾರಣ, ಎಂದು ಹೇಳಬೇಕು. ಇದು ಪೂರ್ವಪಕ್ಷಿಗಳ ವಾದ.

ಇದು ಸರಿಯಲ್ಲ-ಹೇಗೆ ಜಲಜ್ಞಾನವು ನಿಶ್ಚಿತಪ್ರಾಮಾಣ್ಯಕವಾದರೆ ಮಾತ್ರ ಪ್ರವರ್ತಕವೋ ಅದರಂತೆ, ಪ್ರಾಮಾಣ್ಯನಿಶ್ಚಯವೂ ನಿಶ್ಚಿತಪ್ರಾಮಾಣ್ಯಕವಾದರೆ ಮಾತ್ರ ಪ್ರವರ್ತಕ. ಪ್ರಕೃತ, ಆ ಪ್ರಾಮಾಣ್ಯನಿಶ್ಚಯವು ಅಪ್ರಮಾಣ ಎಂದು ತಿಳಿದಿರುವುದರಿಂದ ನಿಶ್ಚಿತಪ್ರಾಮಾಣ್ಯಕವಲ್ಲ. ಆದ್ದರಿಂದ ಪ್ರವೃತ್ತಿಯಾಗುವುದಿಲ್ಲ. ಹೀಗೆ ಅಪ್ರಾಮಾಣ್ಯ-ನಿಶ್ಚಯಾಭಾವಕ್ಕೆ ಕಾರಣತ್ವವು ಕ್ಲೃಪ್ತವಲ್ಲ.

## ನ್ಯಾಯದೀಪ

**ತೌಲ್ಯಮಾಶಂಕ್ಯನಿರಾಹ-ನ ಚ ಅಪ್ರಾಮಾಣ್ಯಜ್ಞಾನಮಪೀತಿ ॥ ಮನ್ಮತೇ ಇತಿ ॥ ಅನವಸ್ಥಾ ತು ನಿರಸಿಷ್ಯತೇ ಇತಿ ಭಾವಃ ॥**

ಮೂಲದಲ್ಲಿ ಪ್ರಾಮಾಣ್ಯನಿಶ್ಚಯಕ್ಕೂ ಅಪ್ರಾಮಾಣ್ಯಜ್ಞಾನಾಭಾವಕ್ಕೂ ಸಮಾನಯೋಗ ಕ್ಷೇಮತ್ವವನ್ನು ಆಶಂಕೆ ಮಾಡಿ ನಿರಾಸಮಾಡಲಾಗಿದೆ.

ನಮ್ಮ ಮತದಲ್ಲಿ ಪ್ರಾಮಾಣ್ಯನಿಶ್ಚಯವೂ ನಿಶ್ಚಿತಪ್ರಾಮಾಣ್ಯಕವಾಗಿರಬೇಕೆಂದು ಮೂಲದಲ್ಲಿ ಹೇಳಲಾಗಿದೆ. ಹಾಗೆ ಹೇಳಿದಾಗ ಅನವಸ್ಥಾದೋಷಕ್ಕೆ ಅವಕಾಶವಿದೆ. ಆದರೆ, ಆ ಅನವಸ್ಥಾ ದೋಷವನ್ನು ಸಾಕ್ಷಿಗೆ ಸ್ವಪ್ರಕಾಶತ್ವವನ್ನು ಒಪ್ಪಿ ಮುಂದೆ ಪರಿಹರಿಸಲಾಗಿದೆ.

**न चाप्रामाण्यशङ्काभावः क्लृप्तः प्रामाण्यनिश्चयस्तु कल्प्य इति वाच्यम्। गृहीतप्रामाण्यज्ञानसमानविषयकज्ञानान्तरे निष्कम्प-प्रवृत्तिजनक-ज्ञानत्वमात्रेण सामग्रीसत्वेन तत्क्लृप्तेरुक्तत्वात् । फलमुखगौरवस्य चादोषत्वात् ।**

**अन्यथानुमितौ व्याप्तिज्ञानं न हेतुः। किं तु सहचारदर्शनवतो व्यभिचाराज्ञानम् ।**

**एवं पक्षे लिङ्गज्ञानं न हेतुः। किं तु पक्षज्ञानवतः पक्षे लिङ्गासंसर्गाग्रहः ।**

**एवं प्रवृत्तौ विशिष्टज्ञानं न हेतुः । किं तु भेदाग्रहः ।**

**एवमर्थेन्द्रियादिसबन्धेऽर्थाभावाज्ञानं प्रवर्तकम् न त्वर्थनिश्चयः, इत्याद्यतिप्रसङ्गः।**

ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರಣ ಎಂದರೂ ಗೌರವದೋಷ ಇದೆ. ಅಪ್ರಾಮಾಣ್ಯ ಸಂದೇಹವಿದ್ದಾಗ ಪ್ರವೃತ್ತಿಯಾಗುವುದಿಲ್ಲವಾದುದರಿಂದ ತದಭಾವವು ಪ್ರವೃತ್ತಿಪೂರ್ವದಲ್ಲಿ ಸರ್ವತ್ರ ಇರುತ್ತದೆ. ಆದ್ದರಿಂದ ಅದಕ್ಕೆ ಕಾರಣತ್ವವು ಕ್ಲೃಪ್ತ. ಆದರೆ, ಪ್ರಾಮಾಣ್ಯನಿಶ್ಚಯಕ್ಕೆ ಕಾರಣತ್ವವು ಕ್ಲೃಪ್ತವಲ್ಲ, ಕಲ್ಪಿಸಬೇಕು. ಆದ್ದರಿಂದ ಗೌರವ.

ಹೀಗೆ ಹೇಳುವುದು ಸರಿಯಲ್ಲ-ಜ್ಞಾನದಲ್ಲಿ ಒಮ್ಮೆ ಪ್ರಾಮಾಣ್ಯವು ನಿಶ್ಚಿತವಾಗಿದ್ದು ಮತ್ತೆ ಅದೇ ಜ್ಞಾನವು ಬಂದಾಗ ಆ ಜ್ಞಾನಗತ ಪ್ರಾಮಾಣ್ಯಗ್ರಹಣೆಗೆ ಬೇಕಾದ ಸಾಮಗ್ರೀಗಳೆಲ್ಲವೂ ಇರುವುದರಿಂದ ಪ್ರಾಮಾಣ್ಯ ನಿಶ್ಚಯ ಆಗಿಯೇ ತೀರುತ್ತದೆ. ಆದರಂತೆ ನಿಷ್ಕಂಪಪ್ರವೃತ್ತಿಗೆ ಕಾರಣವಾದ ಜಲಜ್ಞಾನದಲ್ಲೂ ಪ್ರಾಮಾಣ್ಯಗ್ರಹಣ-ಸಾಮಗ್ರಿಗಳು ಇರುವುದರಿಂದ ಪ್ರಾಮಾಣ್ಯವು ನಿಶ್ಚಯವಾಗುತ್ತದೆ. ಅಂತಹ ಕಡೆಗಳಲ್ಲಿ ಪ್ರವೃತ್ತಿಪೂರ್ವದಲ್ಲಿ ಪ್ರಾಮಾಣ್ಯಜ್ಞಾನವು ನಿಶ್ಚಿತ ವಾದುದರಿಂದ ಅದಕ್ಕೆ ಕಾರಣತ್ವವನ್ನು ಕಲ್ಪಿಸಬೇಕಾಗಿಲ್ಲ, ಕ್ಲೃಪ್ತವಾಗಿದೆ. ಇದನ್ನು ಹಿಂದಿನ ಬಾಧೋದ್ಧಾರ ಪ್ರಕರಣದಲ್ಲಿ ಹೇಳಲಾಗಿದೆ.

ಅದಕ್ಕೆ ಕಾರಣತ್ವವು ಕಲ್ಪ್ಯ ಎಂದು ಒಪ್ಪಿಕೊಂಡರೂ ಅದರಿಂದ ಬರುವ ಗೌರವವು ಫಲಮುಖಗೌರವವಾದ ಕಾರಣ ಅದು ದೋಷವಲ್ಲ. ಹೇಗೆಂದರೆ- ಪ್ರವೃತ್ತಿಕಾರಣ ವಿಚಾರ ಮಾಡುವಾಗ ಪ್ರಾಮಾಣ್ಯನಿಶ್ಚಯವು ಅನುಪಸ್ಥಿತ. ಅದರ ಉಪಸ್ಥಿತಿ ಬರುವ ಕಾಲದಲ್ಲಿ ಅದು ಕಾರಣತ್ವೇನೈವ ಸಿದ್ಧವಾಗುವುದರಿಂದ ಉಪಜೀವ್ಯ-ಪ್ರಮಾಣವಿರೋಧಾತ್ ಗೌರವವು ದೋಷವಲ್ಲ. ಆದರೆ, ಅಪ್ರಾಮಾಣ್ಯಜ್ಞಾನಾಭಾವ ವಿಶಿಷ್ಟ-ಅರ್ಥ ನಿಶ್ಚಯವು ಕಾರಣ ಎಂದಾಗ ಬರುವ ಅವಚ್ಛೇಕ ಗೌರವ ಫಲಮುಖ ಗೌರವವಲ್ಲ.

ಹೀಗೆ ಪ್ರಾಮಾಣ್ಯ ನಿಶ್ಚಯಕ್ಕೆ ಕಾರಣತ್ವವು ಕ್ಲೃಪ್ತವಾಗಿದೆ, ಗೌರವದೋಷವೂ ಇಲ್ಲ. ಆದರೂ ಅದಕ್ಕೆ ಕಾರಣತ್ವವನ್ನು ನಿರಾಕರಿಸಿ ಅಪ್ರಾಮಾಣ್ಯಜ್ಞಾನಾಭಾವ ಸಹಿತ ಅರ್ಥನಿಶ್ಚಯವೇ ಕಾರಣ, ಎಂದು ಆಗ್ರಹ ಮಾಡಿದರೆ ಈ ಅನಿಷ್ಟಾಪತ್ತಿಗಳು ಬರುತ್ತವೆ.

(1) ಅನುಮಿತಿಗೆ ವ್ಯಾಪ್ತಿಜ್ಞಾನವು ಕಾರಣ. ವ್ಯಭಿಚಾರಾಭಾವವೇ ವ್ಯಾಪ್ತಿ. ಸಹಚಾರಗ್ರಹವು ವ್ಯಾಪ್ತಿಜ್ಞಾನಕ್ಕೆ ಕಾರಣ. ಇದು ವಸ್ತುಸ್ಥಿತಿ. ಇದರ ಬದಲು ಸಹಚಾರಗ್ರಹ ಇರುವ ವ್ಯಕ್ತಿಗೆ ವ್ಯಭಿಚಾರ ಜ್ಞಾನಾಭಾವ ಇದ್ದರೆ ಸಾಕು, ಅದೇ ಅನುಮಿತಿಗೆ ಕಾರಣ, ವ್ಯಾಪ್ತಿಜ್ಞಾನವು ಕಾರಣವಲ್ಲ ವೆಂದಾದೀತು.

(2) ಪಕ್ಷದಲ್ಲಿ ಹೇತು ಇದೆ, ಎಂಬ ಪಕ್ಷಧರ್ಮತಾಜ್ಞಾನವು ಅನುಮಿತಿಗೆ ಕಾರಣ. ಇದರ ಬದಲು ಪಕ್ಷಜ್ಞಾನ ಇರುವ ವ್ಯಕ್ತಿಗೆ ಪಕ್ಷದಲ್ಲಿ ಹೇತುವಿನ ಅಸಂಸರ್ಗ ಅಗ್ರಹವು ಕಾರಣ ಎನ್ನಬೇಕಾದೀತು. ಪಕ್ಷದಲ್ಲಿ ಹೇತು ಇದೆ, ಎಂಬ ಜ್ಞಾನ ಇದೆ, ಪಕ್ಷದಲ್ಲಿ ಹೇತು ಇಲ್ಲ ಎಂಬ ಜ್ಞಾನ ಇಲ್ಲ, ಎಂದರೂ ಸಮಾನ. ಇದೇ ಅಸಂರ್ಗ ಅಗ್ರಹ. ಇದೇ ಕಾರಣವಾಗಲಿ.

(3) ಇಷ್ಟವಸ್ತುವಿನಲ್ಲಿ ಪ್ರವೃತ್ತಿಗೆ 'ಇದು ನನಗೆ ಇಷ್ಟವಾದ ರಜತ' ಎಂಬ ಜ್ಞಾನವು ಕಾರಣ.

'ಇದು ರಜತ' ಎಂಬ ಈ ಜ್ಞಾನದಲ್ಲಿ ಪುರೋವರ್ತಿ ವಸ್ತುವಿನಲ್ಲಿ ರಜತಾಭೇದವು ತೋರುತ್ತದೆ. ರಜತಾಭೇದ-ಜ್ಞಾನವೂ ರಜತಭೇದದ ಅಗ್ರಹವೂ ಸಮಾನ. ಆದ್ದರಿಂದ ಪುರೋವರ್ತಿ ವಸ್ತುವಿನೊಂದಿಗೆ ರಜತಭೇದಾಗ್ರಹವೇ ರಜತಾರ್ಥಿಪ್ರವೃತ್ತಿಗೆ ಕಾರಣವಾಗಲಿ.

(4) ನೈಯಾಯಿಕರು ಪ್ರವೃತ್ತಿಗೆ ಅರ್ಥನಿಶ್ಚಯ ಕಾರಣ, ಎನ್ನುತ್ತಾರೆ. ಅರ್ಥನಿಶ್ಚಯ ಮತ್ತು ಅರ್ಥಾಭಾವದ ಅಜ್ಞಾನ ಎರಡೂ ಸಮಾನ. ರಜತಜ್ಞಾನ ಇದೆ, ರಜತಾಭಾವದ ಜ್ಞಾನ ಇಲ್ಲ, ಎರಡೂ ಸಮಾನ. ಆದ್ದರಿಂದ ಪ್ರವೃತ್ತಿಗೆ ಅರ್ಥೇಂದ್ರಿಯಸಂಬಂಧದ ಜೊತೆಗೆ ಅರ್ಥಾಭಾವದ ಜ್ಞಾನಾಭಾವವೇ ಕಾರಣವಾಗಲಿ. ಅರ್ಥಜ್ಞಾನವು ಕಾರಣವಾಗದಿರಲಿ.

ಇದೇ ಮೊದಲಾದ ಅನಿಷ್ಟಪ್ರಸಂಗಗಳು ಬಂದಾವು. ಇದು ಬರಬಾರದೆಂದಾದರೆ, ಪ್ರಾಮಾಣ್ಯನಿಶ್ಚಯವೇ ಕಾರಣ ಎಂದು ಹೇಳಬೇಕು, ಅಪ್ರಾಮಾಣ್ಯಜ್ಞಾನಾಭಾವವು ಕಾರಣ ಎಂದು ಆಗ್ರಹ ಮಾಡಬಾರದು.

## ನ್ಯಾಯದೀಪ

**ಕ್ಲೃಪ್ತ ಇತಿ ॥ ಸರ್ವತ್ರ ಸತ್ವಾದಿತಿ ಭಾವಃ। ಜ್ಞಾನಾಂತರ ಇತಿ ॥ ಕ್ಲೃಪ್ತೇರುಕ್ತತ್ವಾದಿತ್ಯನ್ವಯಃ। ಬಾಧೋದ್ಧಾರಗ್ರಂಥೇ ಇತ್ಯರ್ಥಃ ॥ ಸಾಮಗ್ರೀಸತ್ವೇನೇತಿ ॥ ಪ್ರಾಮಾಣ್ಯನಿಶ್ಚಯಸಾಮಗ್ರೀಸತ್ವೇನ ಇತ್ಯರ್ಥಃ। ಕಲ್ಪ್ಯತ್ವಮುಪೇತ್ಯಾಹ – ಫಲಮುಖೇತಿ ॥ ಕಾರಣತಾಕಲ್ಪನಾವಸರೇ ಅವಚ್ಛೇದಕಗೌರವಾದೇರಿವ, ಪ್ರಾಮಾಣ್ಯನಿಶ್ಚಯಕಲ್ಪನಸ್ಯ ಅನುಪಸ್ಥಿತತ್ವಾತ್ ಪಶ್ಚಾತ್ ತದುಪಸ್ಥಿತೌ ಉಪಜೀವ್ಯವಿರೋಧೇನ ಗೃಹೀತಕಾರಣತ್ವಾಬಾಧಕತ್ವಾತ್ ಇತಿ ಭಾವಃ।**

**ವಿಪಕ್ಷೇ ಬಾಧಕಂ ಚಾಹ-ಅನ್ಯಥೇತಿ ॥ ಏವಂ ಕ್ಲೃಪ್ತತ್ವೇ, ಗೌರವಸ್ಯ ಅದೋಷತ್ವೇ ಚ ಪ್ರಾಮಾಣ್ಯನಿಶ್ಚಯಸ್ಯ ಅಪ್ರವರ್ತಕತ್ವಮ್ ಉಪೇತ್ಯ, ಅಪ್ರಾಮಾಣ್ಯಾಜ್ಞಾನಸಹಿತ-ಅರ್ಥನಿಶ್ಚಯಸ್ಯೈವ ಪ್ರವರ್ತಕತ್ವೇ ಇತ್ಯರ್ಥಃ ॥**

ಪ್ರಾಮಾಣ್ಯನಿಶ್ಚಯಕ್ಕೆ ಕಾರಣತ್ವವು ಸಿದ್ಧವಾದರೂ ಕಾರಣತ್ವವು ಸಿದ್ಧವಲ್ಲ, ಕಲ್ಪ್ಯ ಎಂದು ಅಂಗೀಕರಿಸಿದರೂ ಗೌರವವು ದೋಷವಲ್ಲ. ಏಕೆಂದರೆ-ಪ್ರವೃತ್ತಿ ಕಾರಣವನ್ನು ವಿಮರ್ಶೆ ಮಾಡುವ ಸಂದರ್ಭದಲ್ಲಿ ಪ್ರಾಮಾಣ್ಯ ನಿಶ್ಚಯ ಇನ್ನೂ ಸಿದ್ಧವಾಗಿಲ್ಲ. ಗೌರವ ಹೇಳಲು ಬರುವುದಿಲ್ಲ. ಆಮೇಲೆ ಅದಕ್ಕೆ ಕಾರಣತ್ವವು ಸಿದ್ಧವಾಗಿದೆ. ಏಕೆಂದರೆ, ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರತ್ವೇನೈವ ಸಿದ್ಧವಾಗುತ್ತದೆ. ಆಮೇಲೆ ಮಾಡುವ, ಗೌರವದೋಷದಿಂದ ಕಾರಣವಲ್ಲ ಎನ್ನುವ ನಿರ್ಣಯವು, ಅದಕ್ಕೆ ಉಪಜೀವ್ಯವಾದ ಕಾರಣತ್ವನಿರ್ಣಯಕ್ಕೆ ವಿರುದ್ಧವಾಗುತ್ತದೆ. ಉಪಜೀವ್ಯವಿರೋಧದಿಂದಾಗಿ ಆ ನಿರ್ಣಯವು ಬಾಧಿತವಾಗುತ್ತದೆ.

## 3. ತೃತೀಯಪಕ್ಷ ನಿರಾಸ

**ತೃತೀಯ ಕಲ್ಪಂ ನಿರಾಹ–ಏತೇನೇತಿ ॥**

ಅಪ್ರಾಮಾಣ್ಯಜ್ಞಾನಾಭಾವವು ಪ್ರವರ್ತಕತಾವಚ್ಛೇದಕ, ಎಂಬ ತೃತೀಯಪಕ್ಷವನ್ನು ಮುಂದೆ ನಿರಾಕರಿಸಲಾಗಿದೆ.

**एतेन, उक्तरूपोऽर्थनिश्चय एव प्रवृत्तिहेतुः । अप्रमात्वेनाज्ञातत्वादिकं दण्डगतदार्ढ्यवत् कारणतावच्छेदकम् । तदभावात् पीतः शङ्ख इति ज्ञानात् न प्रवृत्तिरिति निरस्तम् । लाघवेन प्रमात्वेन ज्ञातत्वस्यैव तदवच्छेदकत्वौचित्यात् । अन्यथा अनुमित्यादौ सहचारादिज्ञानमेव हेतुः, व्यभिचरितत्वादिनाऽज्ञातत्वं कारणतावच्छेदकमिति स्यात् ।**

ಅತಿಪ್ರಸಂಗದ ಕಾರಣದಿಂದಾಗಿಯೇ ಈ ಪಕ್ಷವೂ ನಿರಸ್ತವಾಯಿತು–ಪ್ರವೃತ್ತಿಗೆ ಅರ್ಥ ನಿಶ್ಚಯವೇ ಕಾರಣ. ಆದರೆ ಆ ಅರ್ಥನಿಶ್ಚಯವು ಅಪ್ರಮಾತ್ವೇನ ಜ್ಞಾತವಾಗಿರಬಾರದು. ಅರ್ಥಾತ್ ಅಪ್ರಮಾತ್ವೇನ ಅಜ್ಞಾತವಾದ ಅರ್ಥನಿಶ್ಚಯವು ಪ್ರವೃತ್ತಿಹೇತು. ಹೀಗೆ ಹೇಳಿದಾಗ ದಂಡಗತ ದಾರ್ಢ್ಯವು ಘಟಕಾರಣತಾವಚ್ಛೇದಕವಾದಂತೆ ಅಪ್ರಾಮಾಣ್ಯಜ್ಞಾನಾಭಾವವು ಪ್ರವೃತ್ತಿ ಕಾರಣತಾವಚ್ಛೇಕವಾಗುತ್ತದೆ. ಇದು ತೃತೀಯ ಪಕ್ಷ. ಈ ಪಕ್ಷದಲ್ಲಿ 'ಪೀತಃ ಶಂಖಃ' ಎಂಬ ಜ್ಞಾನದಿಂದ ಪೀತಾರ್ಥಿಗೆ ಪ್ರವೃತ್ತಿಯಾಗಲಿ, ಎಂಬ ಆಪತ್ತಿ ಇಲ್ಲ. ಏಕೆಂದರೆ, 'ಆ ಜ್ಞಾನವು ಅಪ್ರಮಾ' ಎಂಬ ಜ್ಞಾನವಿರುವುದರಿಂದ ಆದು ಅಪ್ರಮಾತ್ವೇನ ಜ್ಞಾತವಾಗಿದೆ. ಅಜ್ಞಾತವಾಗಿಲ್ಲ. ಆದ್ದರಿಂದ ಪ್ರವೃತ್ತಿ ಆಗುವುದಿಲ್ಲ.

ಈ ಪಕ್ಷವೂ ಯುಕ್ತವಲ್ಲ–ಪ್ರಮಾತ್ವೇನ ಜ್ಞಾತವಾದ ಅರ್ಥನಿಶ್ಚಯವು ಕಾರಣ ಎನ್ನುವುದಕ್ಕಿಂತ ಅಪ್ರಮಾತ್ವೇನ ಅಜ್ಞಾತವಾದ–ಅರ್ಥನಿಶ್ಚಯವು ಕಾರಣ, ಎಂದು ಕಲ್ಪಿಸುವುದು ಗೌರವ. ಆದರೂ ಆಗ್ರಹ ಮಾಡುವುದಾದಲ್ಲಿ ಅನುಮಿತಿಗೆ ವ್ಯಾಪ್ತಿಜ್ಞಾನವು ಕಾರಣವಲ್ಲ. ವ್ಯಭಿಚರಿತತ್ವೇನ ಅಜ್ಞಾತ ವಾದ ಹೇತುವಿನಲ್ಲಿ ಸಹಚಾರಜ್ಞಾನವೇ ಕಾರಣವೆಂದಾದೀತು. ಅರ್ಥಾತ್, ವ್ಯಭಿಚಾರಜ್ಞಾನಾಭಾವ ಸಹಿತ ಹೇತುಸಾಧ್ಯಸಹಚಾರ ಜ್ಞಾನವು ಕಾರಣವಾದೀತು.

## ನ್ಯಾಯದೀಪ

**ಉಕ್ತೇತಿ ॥ ಅಪ್ರಾಮಾಣ್ಯ–ಜ್ಞಾನಶೂನ್ಯ–ಅರ್ಥನಿಶ್ಚಯಃ ಏವ ಇತ್ಯರ್ಥಃ । ಏತೇನ ಇತ್ಯುಕ್ತಂ ವ್ಯನಕ್ತಿ–ಲಾಘವೇನೇತ್ಯಾದಿನಾ ॥**

ಮೂಲದಲ್ಲಿ ಉಕ್ತಾರ್ಥನಿಶ್ಚಯ, ಎಂದರೆ ಅಪ್ರಾಮಾಣ್ಯಜ್ಞಾನಾನಾಸ್ಕಂದಿತವಾದ ಅರ್ಥನಿಶ್ಚಯ, ಎಂದರ್ಥ.

## 4. ಚತುರ್ಥಪಕ್ಷನಿರಾಸ

**एतेनैवार्थनिश्चय एव प्रवर्तकः । पीतः शङ्खः, इत्यादौ त्वप्रामाण्यज्ञानं प्रवृत्तिप्रतिबन्धकमिति निरस्तम् । निर्विषयस्य जातिविशेषेणैव प्रतिबन्धकस्य मण्यादेः त्वन्मते स्वाभावरूपकारणविघटनरूपतया प्रतिबन्धकत्वेऽपि मन्मते शक्तिविघटकत्वेन प्रतिबन्धकत्वेऽपि यथा जातिविशेषरहितस्य व्यभिचारादिज्ञानस्य मतद्वयेपि अनुमित्यादिजनकीभूतव्याप्त्यादिज्ञानविघटकत्वेनैव तत्प्रतिबन्धकता तथैवाप्रामाण्यज्ञानस्यापि प्रवृत्तिहेतुभूतज्ञानविघटकत्वेनैव प्रतिबन्धकतेति वक्तव्ये अर्थनिश्चयस्य पीतः शङ्ख इत्यादौ सत्वेन तद्विघटनासंभवात् तेन विघटनीयस्य प्रामाण्यज्ञानस्य हेतुत्वसिद्धेः ।**

ನಾಲ್ಕನೆಯ ಪಕ್ಷ-ಪ್ರವೃತ್ತಿಗೆ ಅರ್ಥನಿಶ್ಚಯ ಮಾತ್ರ ಕಾರಣ, ಅಪ್ರಾಮಾಣ್ಯಜ್ಞಾನವು ಪ್ರತಿಬಂಧಕ. 'ಪೀತಃ ಶಂಖಃ' ಎಂಬ ಅರ್ಥನಿಶ್ಚಯವಿದ್ದರೂ ಆ ಜ್ಞಾನವು ಪಿತ್ತದೋಷಜನ್ಯವಾಗಿದೆ, ಎಂದು ತಿಳಿದಿರುವುದರಿಂದ ಅದರಲ್ಲಿ ಅಪ್ರಾಮಾಣ್ಯನಿಶ್ಚಯವಿದೆ. ಆದ್ದರಿಂದ ಪೀತಾರ್ಥಿಯು ಪ್ರವೃತ್ತಿ ಮಾಡುವುದಿಲ್ಲ. ಈ ಪಕ್ಷವೂ ಸರಿಯಲ್ಲ.

ಕೆಲವೆಡೆ ನಿರ್ವಿಷಯವಾದ ವಸ್ತುಗಳು ಪ್ರತಿಬಂಧಕಗಳಾಗಿರುತ್ತವೆ. ಉದಾಹರಣೆಗೆ-ದಾಹಕ್ಕೆ ಮಣಿಯು ಪ್ರತಿಬಂಧಕ. ಅದು ಮಣಿತ್ವರೂಪ ಜಾತಿವಿಶೇಷರೂಪೇಣ ಪ್ರತಿಬಂಧಕವಾಗುತ್ತದೆ. ಇನ್ನು ಕೆಲವು ಕಡೆ ಸವಿಷಯವಾದ ಜ್ಞಾನವು ಪ್ರತಿಬಂಧಕವಾಗುತ್ತದೆ. ಉದಾಹರಣೆಗೆ-ವ್ಯಭಿಚಾರ ಜ್ಞಾನವು ಅನುಮಿತಿಗೆ ಪ್ರತಿಬಂಧಕ. ಅಲ್ಲಿ ಪ್ರತಿಬಂಧಕತಾವಚ್ಛೇದಕ ಜಾತಿಯಲ್ಲ. ವ್ಯಭಿಚಾರಜ್ಞಾನತ್ವ ಜಾತಿಯಲ್ಲ, ಜ್ಞಾನತ್ವವು ಜಾತಿಯಾದರೂ ಅತಿಪ್ರಸಕ್ತ. ಹೀಗಾಗಿ ಆ ಜ್ಞಾನವು ಜಾತಿರೂಪೇಣ ಪ್ರತಿಬಂಧಕವಲ್ಲ.

ಈ ಎರಡು ಪ್ರತಿಬಂಧಕಗಳಲ್ಲಿ ಮೊದಲನೆಯ ರೀತಿಯ ಪ್ರತಿಬಂಧಕ, ನ್ಯಾಯಮತದಲ್ಲಿ, ಸ್ವಾಭಾವರೂಪವಾದ ಕಾರಣ ವಿಘಟನದ್ವಾರಾ. ನ್ಯಾಯಮತದಂತೆ ಪ್ರತಿಬಂಧಕಾಭಾವವು ಕಾರ್ಯಹೇತು. ಮಣಿಯು ಪ್ರತಿಬಂಧಕವಾದುದರಿಂದ ಮಣ್ಯಭಾವವು ದಾಹಕ್ಕೆ ಕಾರಣ. ಮಣಿ

ಇದ್ದಾಗ ಮಣ್ಯಭಾವರೂಪವಾದ ಕಾರಣವು ಇರುವುದಿಲ್ಲ. ಹೀಗೆ ಮಣಿ ಕಾರಣ ವಿಘಟನ ದ್ವಾರಾ ಪ್ರತಿಬಂಧಕ. ನಮ್ಮ ಮತದಲ್ಲಿ ವಹ್ನಿಗತಶಕ್ತಿಯು ದಾಹಕ್ಕೆ ಕಾರಣ. ಮಣಿಯು ವಹ್ನಿಗತವಾದ ಆ ಶಕ್ತಿಯನ್ನು ನಾಶಮಾಡುವ ಮೂಲಕ ದಾಹಕ್ಕೆ ಪ್ರತಿಬಂಧಕವಾಗುತ್ತದೆ.

ಎರಡನೆಯ ಪ್ರತಿಬಂಧಕವೂ ಕಾರಣೀಭೂತಜ್ಞಾನವಿಘಟನದ್ವಾರಾ ಪ್ರತಿಬಂಧಕವಾಗುತ್ತದೆ. ಅನುಮಿತಿಗೆ ಕಾರಣವಾದ ಜ್ಞಾನ ವ್ಯಾಪ್ತಿಜ್ಞಾನ. ವ್ಯಭಿಚಾರಜ್ಞಾನವಿದ್ದರೆ ವ್ಯಾಪ್ತಿಜ್ಞಾನ ಬರುವುದಿಲ್ಲ. ಹೀಗೆ ವ್ಯಭಿಚಾರ ಜ್ಞಾನವು ವ್ಯಾಪ್ತಿಜ್ಞಾನವಿಘಟನದ್ವಾರಾ ಅನುಮಿತಿಗೆ ಪ್ರತಿಬಂಧಕವಾಗಿದೆ.

ಇದರಂತೆ ಪ್ರಕೃತದಲ್ಲಿ, ಅಪ್ರಾಮಾಣ್ಯಜ್ಞಾನವೂ ಪ್ರವೃತ್ತಿಕಾರಣೀಭೂತವಾದ ಜ್ಞಾನ ವಿಘಟನದ್ವಾರಾ ಪ್ರವೃತ್ತಿಪ್ರತಿಬಂಧಕವಾಗಬೇಕು. ಅಂತಹ ವಿಘಟನೀಯ ಜ್ಞಾನ ಪ್ರಾಮಾಣ್ಯ ಜ್ಞಾನವೇ ಆಗಬೇಕು. ಏಕೆಂದರೆ, ಪ್ರವೃತ್ತಿಗೆ ಕಾರಣವಾದ ಅರ್ಥನಿಶ್ಚಯಕ್ಕೆ ಅದು ವಿಘಟಕವಲ್ಲ. ಮೇಲಿನ ಉದಾಹರಣೆಯಲ್ಲಿ ಅಪ್ರಾಮಾಣ್ಯನಿಶ್ಚಯವಿದ್ದರೂ 'ಶಂಖಃ ಪೀತಃ' ಎಂಬ ಅರ್ಥ ನಿಶ್ಚಯವು ವಿಘಟಿತವಾಗಿಲ್ಲ. ಆದ್ದರಿಂದ ಪ್ರಾಮಾಣ್ಯನಿಶ್ಚಯವೇ ಆದರಿಂದ ವಿಘಟನೀಯ. ಆಗ ಪ್ರಾಮಾಣ್ಯಜ್ಞಾನವನ್ನು ಪ್ರವೃತ್ತಿಗೆ ಕಾರಣ ಎಂದು ಒಪ್ಪಲೇಬೇಕಾಗುತ್ತದೆ.

**ज्ञानं हि ज्ञानान्तरस्य विषयद्वारैव विरोधीति स्वविषयविरुद्ध-विषयकमेव ज्ञानं विघटयति। अन्यथा व्यभिचारादिज्ञानमपि स्वाभावरूपहेतुविघटकतया अनुमित्यादिप्रतिबन्धकं वा सहचारादि-ज्ञानगतशक्तिविघटकत्वेन प्रतिबन्धकं वा स्यात्। न तु व्याप्त्यादिज्ञानविघटकम्।**

**बाधादिस्तु ग्राह्याभावविषयकत्वेन साक्षाद्विरोधित्वात् स्वत एवानु-मितिप्रतिबन्धकः। ज्ञाननिष्ठाप्रामाण्यविषयकज्ञानं तु घटविषय-कप्रवृत्तेर्न साक्षाद्विरोधि।**

ಒಂದು ಜ್ಞಾನವು ಇನ್ನೊಂದು ಜ್ಞಾನಕ್ಕೆ ವಿಷಯದ ಮೂಲಕವೇ ವಿರೋಧಿಯಾಗುತ್ತದೆ. ಘಟಜ್ಞಾನವು ಘಟಾಭಾವಜ್ಞಾನಕ್ಕೆ ವಿರೋಧಿ. ಕಾರಣ, ಅವೆರಡಕ್ಕೆ ವಿಷಯಗಳಾದ ಘಟ-ತದಭಾವಗಳು ವಿರುದ್ಧಗಳು. ಇದರಿಂದಾಗಿ ಘಟಜ್ಞಾನವು ತನಗೆ ವಿಷಯವಾದ ಘಟಕ್ಕೆ ವಿರುದ್ಧ ವಾದ ಘಟಾಭಾವವಿಷಯಕವಾದ ಜ್ಞಾನಕ್ಕೆ ವಿಘಟಕವಾಗುತ್ತದೆ. ಪ್ರಕೃತ, ಅಪ್ರಾಮಾಣ್ಯಜ್ಞಾನವೂ ತನಗೆ ವಿಷಯವಾದ ಅಪ್ರಾಮಾಣ್ಯಕ್ಕೆ ವಿರುದ್ಧವಾಗಿರುವ ಪ್ರಾಮಾಣ್ಯವಿಷಯಕವಾದ ಜ್ಞಾನಕ್ಕೇ ವಿಘಟಕವಾಗುತ್ತದೆ.

ಹೀಗೆ ಒಪ್ಪದೇ, ಮಣಿಯಂತೆ ಸ್ವಾಭಾವವಿಘಟನದ್ವಾರಾ ಜ್ಞಾನವು ಪ್ರತಿಬಂಧಕ ಎಂದು ಹೇಳಿದರೆ, ವ್ಯಭಿಚಾರಜ್ಞಾನವೂ ವ್ಯಭಿಚಾರಜ್ಞಾನಾಭಾವರೂಪವಾದ ಕಾರಣವಿಘಟನದ್ವಾರಾ ಅನುಮಿತಿ ಪ್ರತಿಬಂಧಕ, ವ್ಯಾಪ್ತಿ ವಿಘಟನದ್ವಾರಾ ಅಲ್ಲ, ಎನ್ನಬೇಕಾದೀತು. ಅಥವಾ, ಸ್ವಮತದಲ್ಲಿ ಮಣಿಯು ಶಕ್ತಿವಿಘಟನೆ ಮಾಡುವಂತೆ ವ್ಯಭಿಚಾರ ಜ್ಞಾನವೂ ಸಹಚಾರ ಜ್ಞಾನಗತವಾದ ಶಕ್ತಿಯನ್ನು ನಾಶಮಾಡಿ ಆ ಮೂಲಕ ಅನುಮಿತಿ ಪ್ರತಿಬಂಧಕವಾಗಬೇಕಾದೀತು.

ಬಾಧಜ್ಞಾನವು ಅನ್ಯವಿಘಟನದ್ವಾರಾ ಪ್ರತಿಬಂಧಕವಲ್ಲ, ಸಾಕ್ಷಾತ್ ಅನುಮಿತಿಗೆ ಪ್ರತಿಬಂಧಕ ವಾಗಿದೆಯಲ್ಲವೆ? ಹೌದು. ಬಾಧಜ್ಞಾನವಿಷಯಕ್ಕೂ ಅನುಮಿತಿಗೂ ವಿಷಯವಾದುದು ಸಾಧ್ಯ-ತದಭಾವಗಳು. ಅವೆರಡು ಪರಸ್ಪರ ಭಾವಾಭಾವಗಳು. ಆದ್ದರಿಂದ ಘಟ-ತದಭಾವ ಜ್ಞಾನಗಳಂತೆ ಬಾಧಜ್ಞಾನವು ಅನುಮಿತಿಗೆ ಸಾಕ್ಷಾದ್ವಿರೋಧಿಯಾಗಬಹುದು. ಆದರೆ ಪ್ರಕತ ಅಪ್ರಾಮಾಣ್ಯಜ್ಞಾನಕ್ಕೆ ವಿಷಯವಾದುದು ಅಪ್ರಾಮಾಣ್ಯ, ಪ್ರವೃತ್ತಿಗೆ ವಿಷಯವಾದುದು ಘಟಾದಿವಸ್ತು. ಅವೆರಡಕ್ಕೆ ಭಾವಾಭಾವರೂಪವಾದ ವಿರೋಧವಿಲ್ಲ. ಹೀಗಾಗಿ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿಗೆ ಸಾಕ್ಷಾದ್ವಿರೋಧಿಯಾಗುವುದಿಲ್ಲ. ಆದ್ದರಿಂದ ಕಾರಣ ವಿಘಟನದ್ವಾರಾ ಏವ ಪ್ರತಿಬಂಧಕತ್ವವನ್ನು ಹೇಳಬೇಕು. ಆಗ ಪ್ರಾಮಾಣ್ಯಜ್ಞಾನವು ಪ್ರವೃತ್ತಿಕಾರಣ ಎಂದು ಹೇಳಲೇಬೇಕಾಗುತ್ತದೆ.

## ನ್ಯಾಯದೀಪ

**ಚತುರ್ಥಕಲ್ಪಂ ನಿರಾಹ-ಏತೇನೈವೇತಿ ॥ ಅಪ್ರಾಮಾಣ್ಯಜ್ಞಾನಂ=ಪ್ರಾಮಾಣ್ಯ ವಿರೋಧಿಜ್ಞಾನಮ್, ಇತ್ಯರ್ಥಃ। ಏತೇನೇತ್ಯುಕ್ತಂ ದುರ್ಗಮತ್ವಾದ್ ವ್ಯನಕ್ತಿ-ನಿರ್ವಿಷಯಸ್ಯೇತ್ಯಾದಿನಾ।**

**ಜಾತಿವಿಶೇಷಹೀನಸ್ಯ ಸಾಕ್ಷಾದವಿರೋಧಿನಃ ಜ್ಞಾನಸ್ಯ ಪ್ರತಿಬಂಧಕತ್ವಂ ತಜ್ಜನಕ ಜ್ಞಾನವಿಘಟಕತ್ವೇನೈವ, ಇತಿ ವ್ಯಾಪ್ತೇಃ 'ಯಥಾ' ಇತ್ಯಾದಿನಾ ವಿವಕ್ಷಿತತ್ವಾತ್ ಮಣ್ಯಾದೌ ನಿರ್ವಿಷಯೇ ವ್ಯಭಿಚಾರೋ ನ, ಇತಿ ಭಾವೇನ ನಿರ್ವಿಷಯಸ್ಯ ಇತ್ಯಾದ್ಯುಕ್ತಿಃ ॥**

ಮೂಲದಲ್ಲಿ ಅಪ್ರಾಮಾಣ್ಯಜ್ಞಾನಂ ಪ್ರವೃತ್ತಿಪ್ರತಿಬಂಧಕಂ ಎಂದಿದೆ. ಇಲ್ಲಿ ಅಪ್ರಾಮಾಣ್ಯ ಎಂದರೆ ತದಭಾವವತಿ ತತ್-ಪ್ರಕಾರಕತ್ವ ಹಾಗೂ ತದ್ವತಿ ತತ್-ಪ್ರಕಾರಕತ್ವಾಭಾವ. ಇವೆರಡರ ಜ್ಞಾನವೂ ಪ್ರವೃತ್ತಿ ಪ್ರತಿಬಂಧಕವಾಗುತ್ತದೆ.

ಮೂಲದಲ್ಲಿ ವಿರುದ್ಧಜ್ಞಾನಗಳಿಗೆ ಸಂಬಂಧಪಟ್ಟ ವ್ಯಾಪ್ತಿಯ ಸ್ವರೂಪ ಹೀಗೆ ವಿವಕ್ಷಿತ ವಾಗಿದೆ—ಜಾತಿವಿಶೇಷವಿಲ್ಲದ ಹಾಗೂ ಸಾಕ್ಷಾತ್‌ವಿರೋಧಿಯಾಗದ ಜ್ಞಾನವು ಪ್ರತಿಬಂಧಕ ವಾಗಬೇಕಾದರೆ, ಜನಕ ಜ್ಞಾನವನ್ನು ವಿಘಟನೆ ಮಾಡಲೇಬೇಕು, ಎಂದು. ಹೀಗೆ ಹೇಳಿದಾಗ

ಪ್ರತಿಬಂಧಕವಾದ ಮಣಿಯಲ್ಲಿ ವ್ಯಭಿಚಾರಕ್ಕೆ ಅವಕಾಶವಿಲ್ಲ. ಏಕೆಂದರೆ, ಅದು ಜಾತಿವಿಶೇಷ ಹೀನವಲ್ಲ, ಜ್ಞಾನವೂ ಅಲ್ಲ. ಆದ್ದರಿಂದ ಅದು ದಾಹಜನಕ ಜ್ಞಾನಕ್ಕೆ ವಿಘಟಕವಾಗಬೇಕಿಲ್ಲ. ಇದರ ಸೂಚನೆಗಾಗಿ ಮೂಲದಲ್ಲಿ ನಿರ್ವಿಷಯಸ್ಯ ಇತ್ಯಾದಿ ವಿಶೇಷಣಗಳನ್ನು ಮಣಿಗೆ ಕೊಡಲಾಗಿದೆ.

## ನ್ಯಾಯದೀಪ

**ನನು ಜ್ಞಾನಮಪಿ ಮಣ್ಯಾದಿವತ್ ಬಾಧ-ಪ್ರತಿಪಕ್ಷವಚ್ಚ ಕಾರಣೀಭೂತಸ್ವಾಭಾವ ವಿಘಟನರೂಪತಯೈವ ಅಸ್ತು ಪ್ರತಿಬಂಧಕಂ, ಕಿಂ ಕಾರಣೀಭೂತ-ಜ್ಞಾನವಿಘಟಕತಯಾ ಇತ್ಯತ ಆಹ-ಜ್ಞಾನಂ ಹೀತಿ ॥**

**ಸ್ವಮತಾವಷ್ಟಂಭೇನಾಹ-ಶಕ್ತಿವಿಘಟಕತ್ವೇನೇತಿ ॥ ಬಾಧವೈಷಮ್ಯಮಾಹ-ಬಾಧಾದಿಸ್ತ್ವಿತಿ ॥ ಅಸ್ತು ಜ್ಞಾನಂ ಹೀತ್ಯಾದಿನೋಕ್ತಂ । ಅಪ್ರಾಮಾಣ್ಯಜ್ಞಾನಂ ತು ಬಾಧಾದಿವತ್ ಸ್ಯಾತ್ ಇತ್ಯತ ಆಹ-ಜ್ಞಾನನಿಷ್ಠೇತಿ ॥**

**ಅಪ್ರಾಮಾಣ್ಯೇತಿ ॥ ಪ್ರಾಮಾಣ್ಯವಿರೋಧೀತ್ಯರ್ಥಃ । ಕಿಂತು ಪ್ರಾಮಾಣ್ಯ ನಿಶ್ಚಯಸ್ಯೈವೇತಿ ತದ್ವಿಘಟಕತಯೈವ ಪ್ರತಿಬಂಧಕಮಿತಿ ಪ್ರಾಮಾಣ್ಯಜ್ಞಾನಸ್ಯ ಹೇತುತ್ವಸಿದ್ಧಿಃ । ತದ್ವತ್ತ್ವಾಭಾವಸ್ಯ ಪ್ರವೃತ್ತಿ ವಿಷಯಭಾವತ್ವೇಽಪಿ ನ ತನ್ಮಾತ್ರಮ್ ಅಪ್ರಾಮಾಣ್ಯಮ್ ಇತಿ ಭಾವಃ ॥**

ಹೇಗೆ ಮಣಿಯು ದಾಹಕಾರಣೀಭೂತವಾದ, ಸ್ವಾಭಾವವಿಘಟಕವಾಗಿ ದಾಹಕ್ಕೆ ಪ್ರತಿಬಂಧಕವೋ ಆದರಂತೆ ಅಪ್ರಾಮಾಣ್ಯಜ್ಞಾನವೂ ಸ್ವಾಭಾವವಿಘಟಕವಾಗಿ ಪ್ರವೃತ್ತಿಪ್ರತಿಬಂಧಕ ವಾಗಲಿ. ದಾಹಕ್ಕೆ ಮಣಿಯ ಅಭಾವವು ಕಾರಣ. ಮಣಿಯು ಸ್ವಾಭಾವಕ್ಕೆ ನಾಶಕ. ಮಣಿ ಇದ್ದಾಗ ಮಣ್ಯಭಾವವು ನಾಶವಾಗುತ್ತದೆ. ಆದರಿಂದಾಗಿ ಕಾರಣಾಭಾವಾತ್ ದಾಹ ಉಂಟಾಗುವುದಿಲ್ಲ. ಇದರಂತೆ, ಅಪ್ರಾಮಾಣ್ಯಜ್ಞಾನಾಭಾವ ವಿಘಟಕತಯಾ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿಪ್ರತಿಬಂಧಕ ವಾಗುತ್ತದೆ.

ಅಥವಾ, ಬಾಧ ಸತ್‌ಪ್ರತಿಪಕ್ಷಗಳು ಹೇಗೆ ಅನುಮಿತಿಗೆ ಸಾಕ್ಷಾತ್ ಪ್ರತಿಬಂಧಕಗಳೋ ಆದರಂತೆ ಅಪ್ರಾಮಾಣ್ಯಜ್ಞಾನವೂ ಪ್ರವೃತ್ತಿ-ಪ್ರತಿಬಂಧಕವಾಗಲಿ.

ಈ ಎರಡರಲ್ಲಿ ಮೊದಲನೆಯ ಆಕ್ಷೇಪಕ್ಕೆ 'ಅನ್ಯಥಾ ವ್ಯಭಿಚಾರಜ್ಞಾನಮಪಿ' ಎಂದು ಹೇಳಿದ ಅತಿಪ್ರಸಂಗವು ಬಾಧಕ. ಎರಡನೆಯ ಪಕ್ಷಕ್ಕೆ 'ಬಾಧಾದಿಸ್ತು' ಎಂಬ ಮೂಲದಲ್ಲಿ ಹೇಳಿದ ಗ್ರಾಹ್ಯಾಭಾವವಿಷಯಕತ್ವೇನ ಎಂಬುದು ಉತ್ತರ. ಬಾಧ-ಪ್ರತಿಪಕ್ಷಗಳು ತದಭಾವವಿಷಯಕತ್ವೇನ ಅಥವಾ ತದಭಾವವ್ಯಾಪ್ಯವಿಷಯಕತ್ವೇನ ಪ್ರತಿಬಂಧಕವಾಗಬಹುದು. ಆದರೆ, ಅಪ್ರಾಮಾಣ್ಯ ಜ್ಞಾನವು ಪ್ರವೃತ್ತಿವಿಷಯಾಭಾವ ವಿಷಯಕವಲ್ಲ.

**ಆಕ್ಷೇಪ**–ಅಪ್ರಾಮಾಣ್ಯಜ್ಞಾನವೂ ಪ್ರವೃತ್ತಿವಿಷಯಾಭಾವ ವಿಷಯಕವಾಗಿದೆ. ಪುರೋವರ್ತಿಯಲ್ಲಿ ರಜತತ್ವವತ್ವವು ಪ್ರವೃತ್ತಿಗೆ ವಿಷಯ. ತದ್ವತ್ವಾಭಾವವೇ ಅಪ್ರಾಮಾಣ್ಯ. ತದ್ವಿಷಯಕವಾಗಿದೆ, ಅಪ್ರಾಮಾಣ್ಯಜ್ಞಾನ. ಆದ್ದರಿಂದ ಬಾಧದಂತೆ ಅದೂ ಸಾಕ್ಷಾತ್ ಪ್ರವತ್ತಿ ಪ್ರತಿಬಂಧಕವಾಗಲಿ ಎಂದರೆ, ಇದು ಸರಿಯಲ್ಲ. ಅಪ್ರಾಮಾಣ್ಯ ಎಂದರೆ ತದ್ವತ್ವಾಭಾವ ಅಷ್ಟೇ ಅಲ್ಲ, 'ತದ್ವತ್ವಾಭಾವವದ್ವಿಶೇಷ್ಯಕತ್ವ'. ಇದರ ಜ್ಞಾನವು ಸಾಕ್ಷಾದ್ವಿರೋಧಿವಿಷಯಕವಲ್ಲ. ಆದ್ದರಿಂದ ಅದು ಬಾಧದಂತೆ ಪ್ರತಿಬಂಧಕವಾಗುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಜನಕಜ್ಞಾನವಿಘಟಕತ್ವಮ್ ಅನುಪೇತ್ಯ ಬಾಧವತ್ ಪ್ರವೃತ್ತೌ ಸ್ವಕಾರಣೀಭೂತಾಭಾವವಿಘಟನರೂಪತ್ವೇನೈವ ಪ್ರತಿಬಂಧಕತ್ವೇ ದೋಷಾಂತರಮಾಹ–ಕಿಂಚೇತಿ ॥**

ಪ್ರತಿಬಂಧಕವು ಜನಕ ಜ್ಞಾನಕ್ಕೇ ವಿಘಟಕವಾಗಬೇಕಿಲ್ಲ, ಬಾಧವು ಅನುಮಿತಿಗೆ ಕಾರಣವಾದ ಸ್ವಾಭಾವವಿಘಟನದ್ವಾರಾ ಹೇಗೆ ಪ್ರತಿಬಂಧಕವಾಗಿದೆಯೋ ಅದರಂತೆಯೇ ಅಪ್ರಾಮಾಣ್ಯಜ್ಞಾನವೂ ಪ್ರವೃತ್ತಿಗೆ ಕಾರಣವಾದ ಸ್ವಾಭಾವವಿಘಟನದ್ವಾರಾ ಪ್ರತಿಬಂಧಕವಾಗುತ್ತದೆ. ಅರ್ಥಾತ್, ಜಲಜ್ಞಾನದಲ್ಲಿ ಅಪ್ರಾಮಾಣ್ಯಜ್ಞಾನವಿದ್ದರೆ ಪ್ರವೃತ್ತಿಯಾಗುವುದಿಲ್ಲ. ಇದನ್ನೇ ವಿಧಿಮುಖವಾಗಿ ಹೇಳಿದರೆ, ಪ್ರವೃತ್ತಿಯಾಗಬೇಕಾದರೆ ಅಪ್ರಾಮಾಣ್ಯಜ್ಞಾನ ಇರಬಾರದು. ಅಂದರೆ, ಅಪ್ರಾಮಾಣ್ಯ ಜ್ಞಾನಾಭಾವವು ಪ್ರವೃತ್ತಿಕಾರಣ. ಇದಕ್ಕೆ ಅಪ್ರಾಮಾಣ್ಯಜ್ಞಾನವು ವಿಘಟಕವಾಗಿದೆ. ಹೀಗೆ, ಅಪ್ರಾಮಾಣ್ಯಜ್ಞಾನವು ಸ್ವಾಭಾವವಿಘಟನದ್ವಾರಾ ಪ್ರವೃತ್ತಿಪ್ರತಿಬಂಧಕ. ಹೀಗೆ ಹೇಳಿದರೆ ಇನ್ನೊಂದು ದೋಷವನ್ನು 'ಕಿಂಚ' ಎಂಬ ಮೂಲದಲ್ಲಿ ಹೇಳಲಾಗಿದೆ.

**किञ्चोक्तप्रकारेणाप्रामाण्यज्ञानवत् प्रामाण्यात्यन्ताभावादिज्ञानानामपि प्रतिबन्धकत्वात् अभावकूटस्य कारणता कल्प्येत्यतिगौरवम् । ततो वरमेकः प्रामाण्यनिश्चयो हेतुः, अप्रामाण्यादिज्ञानं तु तद्विघटकमिति । मण्यादौ तु त्वन्मते तद्विघटनीयस्यैकस्याभावात् अभावकूटस्य हेतुतास्तु ।**

ಪ್ರಾಮಾಣ್ಯಜ್ಞಾನವೇ ಕಾರಣ ಎನ್ನಲು ಇನ್ನೂ ಒಂದು ಸಮರ್ಥನೆ ಇದೆ–ಪ್ರವೃತ್ತಿಗೆ ಅಪ್ರಾಮಾಣ್ಯಜ್ಞಾನದಂತೆ ಪ್ರಾಮಾಣ್ಯಾತ್ಯಂತಾಭಾವಜ್ಞಾನ, ತದುಭಯವ್ಯಾಪ್ತವತ್ತಾಜ್ಞಾನಗಳೂ ಪ್ರತಿಬಂಧಕಗಳಾಗಿವೆ. ಪ್ರತಿಬಂಧಕಾಭಾವ ಕಾರಣ ಎನ್ನುವುದಾದಲ್ಲಿ ಈ ಮೂರರ ಅಭಾವ

ಸಮೂಹವು ಪ್ರವೃತ್ತಿಕಾರಣ ಎನ್ನಬೇಕಾಗುತ್ತದೆ. ಅದಕ್ಕಿಂತ ಪ್ರಾಮಾಣ್ಯಜ್ಞಾನ ಒಂದನ್ನು ಕಾರಣ ಎಂದಾಗ ಆ ಮೂರು ಇದ್ದಾಗ ಈ ಒಂದು ಕಾರಣ ಇಲ್ಲವಾಗುವುದರಿಂದ ಪ್ರವೃತ್ತ್ಯಭಾವವನ್ನು ಸಮರ್ಥಿಸಬಹುದು. ಆ ಮೂರರ ಅಭಾವಗಳಿಗೆ ಪ್ರವೃತ್ತಿ ಕಾರಣತ್ವವನ್ನು ಹೇಳಬೇಕಾದ ಅಗತ್ಯವಿಲ್ಲ. ಹೀಗೆ, ಲಾಘವಾತ್ ಪ್ರಾಮಾಣ್ಯನಿಶ್ಚಯವೇ ಪ್ರವೃತ್ತಿಕಾರಣ.

**ಆಕ್ಷೇಪ–**ಹಾಗಾದರೆ ದಾಹಕ್ಕೂ ಮಣ್ಯಭಾವವು ಕಾರಣವಾಗಲಿಕ್ಕಿಲ್ಲ. ಮಣಿಯಂತೆ ಮಂತ್ರಾದಿಗಳೂ ಪ್ರತಿಬಂಧಕಗಳಾದುದರಿಂದ ಅವೆಲ್ಲವುಗಳ ಅಭಾವಕೂಟಕ್ಕೆ ಕಾರಣತ್ವವನ್ನು ಹೇಳ ಬೇಕಾಗುತ್ತದೆ. ಅದು ಗೌರವ. ಆದ್ದರಿಂದ ಮಣ್ಯಭಾವಾದಿ ಕೂಟಗಳೂ ದಾಹಕಾರಣವಾಗಲಿಕ್ಕಿಲ್ಲ.

**ಸಮಾಧಾನ–**ಆ ಗೌರವ ಅನಿವಾರ್ಯ. ಏಕೆಂದರೆ, ಪ್ರಕೃತದಲ್ಲಿ ಮೂರರಿಂದಲೂ ವಿಘಟನೀಯವಾದುದು ಒಂದಿದೆ. ಅದು ಪ್ರಾಮಾಣ್ಯನಿಶ್ಚಯ. ಅದೊಂದಕ್ಕೆ ಪ್ರವೃತ್ತಿಕಾರಣತ್ವ ಹೇಳಿದರೆ ಮುಗಿಯಿತು. ಮೂರು ಅಭಾವಗಳಿಗೆ ಹೇತುತ್ವವನ್ನು ಹೇಳಬೇಕಾದ ಅಗತ್ಯವಿಲ್ಲ. ಆದರೆ ದಾಹಸ್ಥಳದಲ್ಲಿ ಮಣ್ಯಾದಿಗಳೆಲ್ಲವುಗಳಿಂದ ವಿಘಟನೀಯವಾದ ಒಂದು ಶಕ್ತಿ ಇದೆ. ನೈಯಾಯಿಕರು ಈ ಶಕ್ತಿಯನ್ನು ಅಂಗೀಕರಿಸಿಲ್ಲ. ಹೀಗಾಗಿ ಮೂರರಿಂದ ವಿಘಟನೀಯವಾದುದು ಒಂದಿಲ್ಲ, ಅನಿವಾರ್ಯವಾಗಿ ಮೂರು ಅಭಾವಗಳಿಗೆ ಕಾರಣತ್ವವನ್ನು ಹೇಳಲೇಬೇಕಾಗುತ್ತದೆ.

ಹೀಗೆ ಲಾಘವಾತ್ ಪ್ರಾಮಾಣ್ಯನಿಶ್ಚಯವೇ ಪ್ರವೃತ್ತಿಕಾರಣ.

## ನ್ಯಾಯದೀಪ

**ಉಕ್ತೇತಿ ॥ 'ಏವಮ್ ಅಪ್ರಾಮಾಣ್ಯಶಂಕಾದ್ಯಭಾವವತ್' (ಪು.356) ಇತ್ಯಾದಿನಾ ಉಕ್ತಪ್ರಕಾರೇಣ ಇತ್ಯರ್ಥಃ । ಅತಿಗೌರವಮಿತಿ ॥ ಅಪ್ರಾಮಾಣ್ಯ–ಜ್ಞಾನಾಭಾವಃ ಕಾರಣಮ್, ಇತ್ಯೇತದೇವ ಪ್ರಾಮಾಣ್ಯಜ್ಞಾನಾತ್ ಗುರು । ತತ್ರಾಪಿ ಅಭಾವಕೂಟಃ ಕಾರಣಮ್ ಇತ್ಯುಕ್ತೌ ಅತಿಗೌರವಮ್, ಇತ್ಯರ್ಥಃ ॥**

ಪ್ರಾಮಾಣ್ಯಜ್ಞಾನವು ಕಾರಣ ಎನ್ನುವುದಕ್ಕಿಂತ ಅಪ್ರಾಮಾಣ್ಯಜ್ಞಾನಾಭಾವಃ ಕಾರಣಂ, ಎನ್ನುವುದೇ ಒಂದು ಗೌರವ. ಅದರ ಜೊತೆಯಲ್ಲಿ ಪ್ರಾಮಾಣ್ಯಾಭಾವಜ್ಞಾನಾಭಾವ ಇತ್ಯಾದಿ ಅನೇಕ ಅಭಾವಗಳ ಸಮೂಹವನ್ನು ಕಾರಣ, ಎಂದು ಹೇಳುವುದು ಅತಿಗೌರವ. ಇದು ಮೂಲದ ಆಶಯ.

## ನ್ಯಾಯದೀಪ

**ಶಕ್ತೇಃ ಅನಂಗೀಕಾರಾತ್ ಅನ್ಯಸ್ಯ ಪ್ರತಿಬದ್ಧ್ಯಸ್ಯ ಅಭಾವಾತ್, ಅಪ್ರಾಮಾಣ್ಯ ಜ್ಞಾನಾಭಾವಾದಿಷು ಚ ಅನುಗತಹೇತುತಾವಚ್ಛೇದಕಸ್ಯ ಅಸಂಭವಾತ್ ಅಭಾವಕೂಟಸ್ಯೈವ ಹೇತುತಾಯಾಃ ತ್ವಯಾ ವಾಚ್ಯತ್ವಾತ್, ಇತಿ ಭಾವಃ ॥**

ನೈಯಾಯಿಕರು ಶಕ್ತಿ ಎಂಬ ಪದಾರ್ಥವನ್ನೇ ಅಂಗೀಕರಿಸಿಲ್ಲ. ಅದನ್ನು ಅಂಗೀಕರಿಸಿದ್ದಿದ್ದರೆ ಅಪ್ರಾಮಾಣ್ಯಜ್ಞಾನಾದಿಗಳು ಎಲ್ಲವೂ ಆ ಒಂದು ಶಕ್ತಿಗೆ ವಿಘಟಕ ಎಂದು ಹೇಳಿ, ತಾದೃಶಶಕ್ತಿವಿಘಟಕಾಭಾವವು ಪ್ರವೃತ್ತಿಕಾರಣ ಎಂದು ಲಘುವಾಗಿ ಹೇಳಬಹುದಿತ್ತು. ಅಥವಾ, ಶಕ್ತಿಯಂತೆ ಬೇರಾವುದಾದರೂ ಅವುಗಳಿಂದ ಪ್ರತಿಬಧ್ಯವಾದುದು ಒಂದು ಇದ್ದಿದ್ದರೂ ಲಾಘವಕ್ಕೆ ಅವಕಾಶವಿರುತ್ತಿತ್ತು. ಅಂತಹ ಯಾವುದೂ ಇಲ್ಲ. (ಪ್ರಾಮಾಣ್ಯಜ್ಞಾನವನ್ನು ಬಿಟ್ಟರೆ) ಹೀಗಾಗಿ, ಆ ಮೂರರ ಅಭಾವಗಳಲ್ಲಿ ಅನುಗತವಾದ, ಪ್ರವೃತ್ತಿಕಾರಣತಾವಚ್ಛೇದಕವಾದ ಒಂದು ಧರ್ಮ ಇಲ್ಲ. ಆದ್ದರಿಂದ ತದಭಾವಕೂಟಕ್ಕೇ ಕಾರಣತ್ವವನ್ನು ಹೇಳಬೇಕಾಗುತ್ತದೆ. ಇದು ಮೂಲದ ಭಾವಾರ್ಥ.

## ನ್ಯಾಯದೀಪ

**ನನ್ವೇವಂ ಮಣ್ಯಾದ್ಯಭಾವಸ್ಥಲೇ ಮಣಿ–ಮಂತ್ರಾದ್ಯಭಾವಕೂಟಸ್ಯ ಕಾರಣತಾ ಕ್ಲೃಪ್ತಾ ಇತಿ, ಅತ್ರಾಪಿ ತಥಾ ಸ್ಯಾತ್ ಇತ್ಯತ ಆಹ–ಮಣ್ಯಾದೌತ್ವಿತಿ ॥ ಇಹ ತ್ವಸ್ತಿ ವಿಘಟನೀಯಂ ಪ್ರಾಮಾಣ್ಯಜ್ಞಾನಮ್ ಇತಿ ಕಿಮರ್ಥಮ್ ಅತಿಗೌರವಾ-ಶ್ರಯಣಮ್, ಇತಿ ಭಾವಃ ॥**

ದಾಹಸ್ಥಳದಲ್ಲಿ ಮಣ್ಯಭಾವ, ಮಂತ್ರಾಭಾವ, ಔಷಧಾಭಾವ ಇವುಗಳ ಸಮೂಹಕ್ಕೆ ಕಾರಣತ್ವವು ಸಿದ್ಧವಾದ ಕಾರಣ ಅಲ್ಲಿ ಗೌರವದೋಷವಲ್ಲ. ಅದರಂತೆಯೇ, ಪ್ರಕೃತಗೌರವವೂ ದೋಷವಲ್ಲ, ಎಂದು ಆಕ್ಷೇಪ ಮಾಡಿದರೆ ಅದಕ್ಕೆ ಮೂಲದಲ್ಲಿ 'ಮಣ್ಯಾದೌ' ಎಂಬ ವಾಕ್ಯದಿಂದ ಸಮಾಧಾನ ಕೊಡಲಾಗಿದೆ.

ಅದರ ಅಭಿಪ್ರಾಯ ಹೀಗೆ–ದಾಹಸ್ಥಳದಲ್ಲಿ ಅನೇಕದಿಂದ ವಿಘಟನೀಯವಾದ ಒಂದು ವಸ್ತು ಇಲ್ಲವಾದ ಕಾರಣ ಗೌರವವು ಅನಿವಾರ್ಯ. ಆದರೆ, ಪ್ರಕೃತದಲ್ಲಿ ಅಪ್ರಾಮಾಣ್ಯಜ್ಞಾನಾದಿಗಳಿಂದ ವಿಘಟನೀಯವಾದ ಪ್ರಾಮಾಣ್ಯಜ್ಞಾನ ಒಂದಿದೆ. ಅದು ಪ್ರವೃತ್ತಿಕಾರಣ ಎಂದು ಒಪ್ಪಿ ಈ ಮೂರೂ ಅಭಾವಗಳನ್ನೂ ಕಾರಣವೇ ಅಲ್ಲ, ಎಂದು ತಿರಸ್ಕರಿಸಿಬಿಡಬಹುದು. ಲಘುವಾದ ಈ ದಾರಿ ಇರುವಾಗ ಅತಿ ಗೌರವ ದಾರಿಯನ್ನು ಏಕೆ ಅರಸಬೇಕು?

## ನ್ಯಾಯದೀಪದಲ್ಲಿ ಅವತಾರಿಕೆ

**ಪಂಚಮಂ ಪಕ್ಷಂ ಪ್ರತ್ಯಾಚಷ್ಟೇ–ಏತೇನೈವೇತಿ ॥**

ಅಪ್ರಾಮಾಣ್ಯಾದಿಜ್ಞಾನವು ಅರ್ಥಸಂದೇಹಾದಿರೂಪವಾದ ಪ್ರತಿಬಂಧಕಾಂತರ ಸಂಪಾದಕ ವಾಗಿ ಪ್ರವೃತ್ತಿಪ್ರತಿಬಂಧಕವಾಗುತ್ತದೆ, ಎನ್ನುವ ಐದನೆಯ ಪಕ್ಷವನ್ನು ಮುಂದೆ ನಿರಾಕರಿಸಲಾಗಿದೆ.

## ಪಂಚಮವಿಕಲ್ಪ ನಿರಾಸ

**एतेनैव, उपाधिज्ञानस्य आधेयव्यभिचारज्ञानरूपानुमितिप्रतिबन्धकान्तरसम्पादनेन अनुमितिप्रतिबन्धकत्वमिव अप्रमाण्यसन्देहस्यापि मानसार्थ-संदेहरूपप्रवृत्तिप्रतिबन्धकान्तरसंपादनेन प्रवृत्तिप्रतिबन्धकत्वम् । उक्तं हि– ''अप्रामाण्यसंशयेनार्थनिश्चयं परिभूयार्थसंशयः'' इति, इति निरस्तम् ।**

ಇದರಿಂದಲೇ ಐದನೆಯ ಪಕ್ಷವೂ ನಿರಸ್ತವಾಗುತ್ತದೆ. ಐದನೆಯ ವಿಕಲ್ಪದ ಅಭಿಪ್ರಾಯ ಹೀಗಿದೆ– ಉಪಾಧಿಯು ಅನುಮಾನಕ್ಕೆ ದೋಷ. ಆದರೆ ಅದು ಸಾಕ್ಷಾತ್ ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕ ವಲ್ಲ. ವ್ಯಭಿಚಾರಜ್ಞಾನರೂಪವಾದ ಪ್ರತಿಬಂಧಕಾಂತರಕ್ಕೆ ಉನ್ನಾಯಕ. ವ್ಯಭಿಚಾರಜ್ಞಾನ ಸಂಪಾದನದ್ವಾರಾ ಉಪಾಧಿಜ್ಞಾನವು ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. ಅದರಂತೆ ಅಪ್ರಾಮಾಣ್ಯಸಂದೇಹವೂ ಪ್ರವೃತ್ತಿಗೆ ಸಾಕ್ಷಾತ್ ಪ್ರತಿಬಂಧಕವಲ್ಲ. ಜ್ಞಾನದಲ್ಲಿ ಅಪ್ರಾಮಾಣ್ಯ ಸಂದೇಹದಿಂದ ಅರ್ಥಸಂದೇಹ ಬರುತ್ತದೆ. ಅರ್ಥಸಂದೇಹದಿಂದ ಪ್ರವೃತ್ತಿಯು ಪ್ರತಿಬದ್ಧವಾಗುತ್ತದೆ. ಮಣಿಗ್ರಂಥದಲ್ಲಿ (ಪು.294) ಹೀಗೆಯೇ ಹೇಳಲಾಗಿದೆ–ಅಪ್ರಾಮಾಣ್ಯಸಂದೇಹವು ಪ್ರವೃತ್ತಿ ಕಾರಣವಾದ ಅರ್ಥನಿಶ್ಚಯವನ್ನು ಸೋಲಿಸಿ ಅರ್ಥಸಂದೇಹಕ್ಕೆ ಜನಕವಾಗಿ ಪ್ರವೃತ್ತಿಗೆ ಪ್ರತಿಬಂಧಕ ವಾಗುತ್ತದೆ, ಎಂದು.

ಹೀಗೆ ಅಪ್ರಾಮಾಣ್ಯಜ್ಞಾನವು ಪ್ರತಿಬಂಧಕಾಂತರಸಂಪಾದಕವಾಗಿ ಪ್ರವೃತ್ತಿಗೆ ಪ್ರತಿಬಂಧಕ ವಾಗಿದೆ. ಈ ಪಕ್ಷವೂ ಸರಿಯಲ್ಲ.

## ನ್ಯಾಯದೀಪ

**ಉಪಾಧೇಃ ವ್ಯಭಿಚಾರೋನ್ನಾಯಕತ್ವಪಕ್ಷಮ್ ಉಪೇತ್ಯೋಕ್ತಮ್–ಆಧೇಯ–ವ್ಯಭಿಚಾರಜ್ಞಾನೇತಿ ॥ ಸಂದೇಹನಿಶ್ಚಯಸಾಧಾರಣಜ್ಞಾನಮಾತ್ರಸ್ಯ ಪ್ರತಿ–ಬಂಧಕತ್ವಾತ್ ಜ್ಞಾನಪದ ಪ್ರಯೋಗಃ । ಉಕ್ತಂ ಹೀತಿ ॥ ಮಣೌ ಇತ್ಯರ್ಥಃ ॥**

ಉಪಾಧಿದೋಷವು ಸತ್‌ಪ್ರತಿಪಕ್ಷೋನ್ನಾಯಕ ಅಥವಾ ವ್ಯಭಿಚಾರೋನ್ನಾಯಕ, ಎಂದು ಎರಡು ಪಕ್ಷಗಳಿವೆ. ಅವುಗಳಲ್ಲಿ ವ್ಯಭಿಚಾರೋನ್ನಾಯಕತ್ವಪಕ್ಷವನ್ನು ಮೂಲದಲ್ಲಿ ಅವಲಂಬಿಸಿ 'ಆಧೇಯವ್ಯಭಿಚಾರಜ್ಞಾನ' ಎಂದು ಹೇಳಲಾಗಿದೆ. ವ್ಯಭಿಚಾರನಿಶ್ಚಯ–ಸಂದೇಹ ಎರಡೂ ವ್ಯಾಪ್ತಿ ಜ್ಞಾನಕ್ಕೆ ಪ್ರತಿಬಂಧಕವಾದುದರಿಂದ ಮೂಲದಲ್ಲಿ ತದುಭಯಸಾಧಾರಣವಾಗಿ 'ವ್ಯಭಿಚಾರಜ್ಞಾನ' ಎನ್ನಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಏತೇನೈವೇತ್ಯುಕ್ತಂ ವ್ಯನಕ್ತಿ–ಮಾನಸಾರ್ಥಸಂದೇಹಸ್ಯಾಪೀತಿ ॥**

ಮೂಲದಲ್ಲಿ 'ಏತೇನ ನಿರಸ್ತಂ=ಇದರಿಂದ ಪಂಚಮಪಕ್ಷವೂ ನಿರಾಕೃತವಾಯಿತು, ಎಂದಿದೆ. ಅದು ಹೇಗೆ, ಎನ್ನುವುದನ್ನು ಮುಂದೆ ತೋರಿಸಲಾಗಿದೆ.

**मानसार्थसन्देहस्यापि 'पीतः शङ्खः' इत्यादावुक्तरीत्या अर्थनिश्चय-सद्भावेन तद्विघटकत्वायोगेन सदर्थत्वरूपप्रामाण्यनिश्चयविघटनेनैव प्रतिबन्धकत्वस्यैव उचितत्वात् ।**

ಹಿಂದೆ ಹೇಳಿದಂತೆ 'ಪೀತಃ ಶಂಖಃ' ಎಂಬ ದೋಷಜನ್ಯಾರ್ಥನಿಶ್ಚಯವು ಅಪ್ರಾಮಾಣ್ಯ ಜ್ಞಾನವಿದ್ದಾಗಲೂ ಪ್ರತಿಬದ್ಧವಾಗಿಲ್ಲ, ಆದ್ದರಿಂದ ಅಪ್ರಾಮಾಣ್ಯಸಂದೇಹಾಹಿತ–ಮಾನಸ ಅರ್ಥ ಸಂದೇಹಾದಿಗಳು ಪ್ರಾಮಾಣ್ಯನಿಶ್ಚಯವಿಘಟಕವಾಗಿಯೇ ಪ್ರವೃತ್ತಿಪ್ರತಿಬಂಧಕವೆಂದು ಹೇಳಬೇಕು. ಪ್ರಾಮಾಣ್ಯನಿಶ್ಚಯವು ಸದರ್ಥಘಟಿತವಾಗಿದೆ. ಹೀಗಾಗಿ, ಅರ್ಥಸಂದೇಹವು ಅದಕ್ಕೆ ಪ್ರತಿಬಂಧಕ ವಾಗಬಹುದು.

ಹೀಗೆ ಅಪ್ರಾಮಾಣ್ಯಜ್ಞಾನವು ಪ್ರತಿಬಂಧಕಾಂತರ ಸಂಪಾದಕವಾಗಿ ಪ್ರವೃತ್ತಿವಿಘಟಕ, ಎಂಬ ಪಂಚಮ ಪಕ್ಷವೂ ಉಚಿತವಲ್ಲ.

## ನ್ಯಾಯದೀಪ

**ಮಾನಸಾರ್ಥಸಂದೇಹಸ್ಯಾಪೀತಿ ॥ ತದ್ವಿಘಟಕತ್ವಾಯೋಗೇನ ಇತ್ಯಾದಿನಾ ಅನ್ವಯಃ । 'ಜ್ಞಾನಂ ಹಿ' ಇತ್ಯಾದಿನಾ ಉಕ್ತರೀತ್ಯಾ ಪ್ರಾಮಾಣ್ಯನಿಶ್ಚಯ–ವಿಘಟನೇನೈವ ಪ್ರತಿಬಂಧಕತ್ವಸ್ಯ ಉಚಿತತ್ವಾತ್ ಇತ್ಯರ್ಥಃ । ಅರ್ಥಸಂದೇಹಸ್ಯ ಪ್ರಾಮಾಣ್ಯನಿಶ್ಚಯವಿರೋಧಿತ್ವಘಟನಾಯ ಸದರ್ಥರೂಪೇತ್ಯುಕ್ತಮ್ ॥**

ಮೂಲದಲ್ಲಿ 'ಮಾನಸಾರ್ಥಸಂದೇಹಸ್ಯಾಪಿ ತದ್ವಿಘಟಕತ್ವಾಯೋಗೇನ' ಎಂದು ಅನ್ವಯ. ಹಿಂದೆ, ಜ್ಞಾನವು ಮತ್ತೊಂದು ಜ್ಞಾನಕ್ಕೆ ಪ್ರತಿಬಂಧಕವಾಗಬೇಕಾದರೆ ವಿರುದ್ಧವಿಷಯಕತ್ವವು ಪ್ರಯೋಜಕ ಎಂದು ಹೇಳಲಾಗಿದೆ. ಅದರಂತೆ ಅರ್ಥಾಭಾವವಿಷಯಕವಾದ ಅರ್ಥಸಂದೇಹವು ಅರ್ಥಸತ್ವಘಟಿತಪ್ರಾಮಾಣ್ಯನಿಶ್ಚಯಕ್ಕೇ ವಿಘಟಕವಾಗುವುದು ಉಚಿತವಾಗಿದೆ. ಅರ್ಥಸಂದೇಹವು ಪ್ರಾಮಾಣ್ಯನಿಶ್ಚಯಕ್ಕೆ ಹೇಗೆ ವಿರೋಧಿಯಾಗುತ್ತದೆ, ಎಂಬುದನ್ನು ತೋರಿಸಿಕೊಡುವುದಕ್ಕಾಗಿಯೇ ಮೂಲದಲ್ಲಿ ಪ್ರಾಮಾಣ್ಯಕ್ಕೆ 'ಸದರ್ಥರೂಪ' ಎಂಬ ವಿಶೇಷಣವನ್ನು ಕೊಡಲಾಗಿದೆ.

**तस्मात् असंसर्गग्रह–व्यभिचारज्ञानादेः प्रवृत्त्यनुमित्यादिप्रतिबन्धकत्वान्यथानुपपत्त्यैव तद्विघटनीयस्य संसर्गग्रहव्याप्तिज्ञानादेः प्रवृत्त्यनुमित्यादिहेतुत्ववत् अप्रामाण्यज्ञानस्य प्रवृत्तिप्रतिबन्धकत्वान्यथानुपपत्त्यैव तद्विघटनीयस्य प्रामाण्यज्ञानस्य तद्धेतुत्वसिद्धिः ।।**

ಪುರೋವರ್ತಿ ವಸ್ತುವಿನಲ್ಲಿ ರಜತತ್ವಧರ್ಮದ ಅಸಂಸಗ್ರಜ್ಞಾನವು ರಜತಾರ್ಥಿಯ ಪ್ರವೃತ್ತಿಗೆ ಪ್ರತಿಬಂಧಕವಾಗಬೇಕಾದರೆ ರಜತತ್ವ–ಸಂಸರ್ಗಜ್ಞಾನವು ಪ್ರವೃತ್ತಿಕಾರಣವೆಂದು ಹೇಳಬೇಕಾಗುತ್ತದೆ. ಅದು ಪ್ರವೃತ್ತಿಕಾರಣವಾದರೆ ಅಸಂಸರ್ಗಜ್ಞಾನವು ಅದಕ್ಕೆ ವಿಘಟಕವಾಗುವ ಮೂಲಕ ಪ್ರವೃತ್ತಿಪ್ರತಿಬಂಧಕವಾಗುತ್ತದೆ.

ಅದರಂತೆಯೇ, ವ್ಯಭಿಚಾರಜ್ಞಾನವು ಅನುಮಿತಿಗೆ ಪ್ರತಿಬಂಧಕವಾಗಬೇಕಾದರೆ ವ್ಯಾಪ್ತಿ ಜ್ಞಾನವು ಅನುಮಿತಿಗೆ ಕಾರಣ ಎಂದು ಅಂಗೀಕರಿಸಬೇಕು. ಅದು ಅನುಮಿತಿಕಾರಣವಾದರೆ ಅದಕ್ಕೆ ವಿಘಟಕವಾಗುವ ಮೂಲಕ ವ್ಯಭಿಚಾರಜ್ಞಾನವು ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

ಇದರಂತೆ, ಪ್ರಕೃತದಲ್ಲೂ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿ ಪ್ರತಿಬಂಧಕವಾಗಬೇಕಾದರೆ ಪ್ರಾಮಾಣ್ಯಜ್ಞಾನವು ಪ್ರವೃತ್ತಿಕಾರಣ, ಎಂದು ಅಂಗೀಕರಿಸಲೇಬೇಕು. ಹೀಗೆ ಅನ್ಯಥಾನುಪಪತ್ತಿ ಪ್ರಮಾಣದಿಂದ ಪ್ರಾಮಾಣ್ಯಜ್ಞಾನಕ್ಕೆ ಪ್ರವೃತ್ತಿಕಾರಣತ್ವ ಸಿದ್ಧವಾಗುತ್ತದೆ.

## ನ್ಯಾಯದೀಪ

**ತಸ್ಮಾದಿತಿ ॥ ಅನ್ಯಸ್ಯ ವಿಘಟನೀಯಸ್ಯ ಅಭಾವಾತ್, ಜ್ಞಾನಸ್ಯ ಜ್ಞಾನಾಂತರವಿಘಟಕತ್ವಾಚ್ಚ ಇತ್ಯರ್ಥಃ ।**

**ಅನುಮಿತ್ಯಾದಿ ಇತಿ ಆದಿಪದೇನ ಲಿಂಗಪರಾಮರ್ಶಾದಿಗ್ರಹಃ । ಅಪ್ರಾಮಾಣ್ಯಜ್ಞಾನಸ್ಯ ಇತಿ ಉಪಲಕ್ಷಣಮ್, ಅರ್ಥಸಂದೇಹಸ್ಯ ಚೇತಿ ಧ್ಯೇಯಮ್ । ತದ್ಧೇತುತ್ವೇತಿ ॥ ಪ್ರವೃತ್ತಿಹೇತುತ್ವೇತ್ಯರ್ಥಃ ।**

ತಸ್ಮಾತ್ ಎಂದರೆ ವ್ಯಭಿಚಾರಜ್ಞಾನಾದಿಗಳಿಂದ ವಿಘಟನೀಯವಾದುದು ವ್ಯಾಪ್ತಿಜ್ಞಾನಾದಿಗಳ ಹೊರತು ಇನ್ನಾವುದೂ ಇಲ್ಲ, ಹಾಗೂ ಜ್ಞಾನವು ಜ್ಞಾನಾಂತರಕ್ಕೆ ಮಾತ್ರ ವಿಘಟಕ ಎಂಬ ನಿಯಮವೂ ಇದೆ, ಈ ಎರಡು ಕಾರಣಗಳಿಂದ ಎಂದು ಅರ್ಥ.

ಮೂಲದಲ್ಲಿ ಅನುಮಿತ್ಯಾದಿ ಎಂಬ ಆದಿಪದದಿಂದ ಪರಾಮರ್ಶವನ್ನು ಇಟ್ಟುಕೊಳ್ಳಬೇಕು. ಅದು ಅಸಿದ್ಧಿಜ್ಞಾನದಿಂದ ವಿಘಟನೀಯ. ಅದರಂತೆಯೇ, ಅಪ್ರಾಮಾಣ್ಯಜ್ಞಾನವು ಪ್ರವೃತ್ತಿ

ಪ್ರತಿಬಂಧಕ ಎಂದು ಮೂಲದಲ್ಲಿ ಇದೆ. ಅದು ಉಪಲಕ್ಷಣ. ಅರ್ಥಸಂದೇಹವೂ ಪ್ರತಿಬಂಧಕ ವಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಆಶುವಿನಾಶಿನೋ ಜ್ಞಾನಸ್ಯ ಪ್ರವೃತ್ತಿಕಾಲೇ ಅಭಾವಾತ್ ಕಥಂ ಪ್ರಮಾತ್ವೇನ ಜ್ಞಾತಸ್ಯ ಪ್ರವರ್ತಕತ್ವಮ್? ಉಕ್ತಂ ಚ ಮಣೌ–**

**''ಜ್ಞಾನಂ ನ ಗೃಹೀತಪ್ರಾಮಾಣ್ಯಂ ಪ್ರವರ್ತಕಮ್ । ಪ್ರಾಮಾಣ್ಯಾನುಮಿತೇಃ ಪೂರ್ವಮೇವ ತಸ್ಯ ನಾಶಾತ್ । ಕಿಂತು, ತಜ್ಜ್ಞಾನಸಮಾನವಿಷಯಕಮ್ ಅಪ್ರಾಮಾಣ್ಯಶಂಕಾಶೂನ್ಯ–ಜ್ಞಾನಾಂತರಮೇವ'' (ಮಣಿ.ಪು.299) ಇತ್ಯೇತತ್ ಚೋದ್ಯಮ್ ಅನೂದ್ಯ ಸಮಾಧಿಮಾಹ–ಯದ್ಯಪೀತಿ ॥**

ನಿಶ್ಚಿತಪ್ರಾಮಾಣ್ಯಕ ಅರ್ಥನಿಶ್ಚಯವು ಪ್ರವರ್ತಕ, ಎಂದು ಇದುವರೆಗಿನ ವಿಮರ್ಶೆಯ ಮಥಿತಾರ್ಥ. ಆದರೆ, ಇದು ಸಾಧ್ಯವಿಲ್ಲ. ಮೊದಲು 'ಇದಂ ಜಲಂ' ಎಂದು ಅರ್ಥನಿಶ್ಚಯ ಬರುತ್ತದೆ. ಆ ಮೇಲೆ ವ್ಯಾಪ್ತಿಜ್ಞಾನಾದಿಗಳು ಬಂದು ಪ್ರಾಮಾಣ್ಯಾನುಮಿತಿ ಬರುವಾಗ ಮೊದಲು ಬಂದ ಅರ್ಥನಿಶ್ಚಯವು ಕ್ಷಣಿಕವಾದುದರಿಂದ ನಾಶವಾಗಿರುತ್ತದೆ. ಆದ್ದರಿಂದ ಪ್ರಮಾಣತ್ವೇನ ಜ್ಞಾತವಾದ ಅರ್ಥನಿಶ್ಚಯವು ಪ್ರವೃತ್ತಿಗೆ ಕಾರಣವಾಗುವುದು ಹೇಗೆ?

ಮಣಿಕಾರನೂ ಇದೇ ಆಕ್ಷೇಪವನ್ನು ಮಾಡಿದ್ದಾನೆ– ''ಗೃಹೀತಪ್ರಾಮಾಣ್ಯಕವಾದ ಅರ್ಥ ಜ್ಞಾನವು ಪ್ರವರ್ತಕವಾಗುವುದು ಹೇಗೆ? ಪ್ರಾಮಾಣ್ಯಾನುಮಿತಿ ಬರುವ ಮೊದಲೇ ಅರ್ಥಜ್ಞಾನವು ನಾಶವಾಗಿರುತ್ತದೆ. ಆದರೂ ಪ್ರಾಮಾಣ್ಯಾನುಮಿತಿ ಬಂದಮೇಲೆ ಮತ್ತೆ ಪ್ರಥಮಜ್ಞಾನ ಸಮಾನವಿಷಯಕವಾದ, ಜ್ಞಾನಾಂತರವು ಹುಟ್ಟುತ್ತದೆ. ಅದು ಅಪ್ರಾಮಾಣ್ಯ ಸಂದೇಹದಿಂದ ಅನಾಸ್ಕಂದಿತವಾಗಿರುತ್ತದೆ. ಅದರಿಂದ ಪ್ರವೃತ್ತಿಯಾಗುತ್ತದೆ'' ಅಗೃಹೀತ ಅಪ್ರಾಮಾಣ್ಯಕ ಅರ್ಥನಿಶ್ಚಯವೇ ಪ್ರವರ್ತಕ, ನಿಶ್ಚಿತಪ್ರಾಮಾಣ್ಯಕ ಅರ್ಥನಿಶ್ಚಯವಲ್ಲ, ಎಂದು ಮಣಿಕಾರನ ಅಭಿಪ್ರಾಯ, ಎಂದು.

ಮಣಿಕಾರ ಮಾಡಿರುವ ಈ ಆಶಂಕೆಯನ್ನು ಮೂಲದಲ್ಲಿ ಅನುವಾದ ಮಾಡಿ ಸ್ವಮತದಲ್ಲಿ ಸಮಾಧಾನವನ್ನು ಹೇಳಲಾಗಿದೆ.

## ಸ್ವ-ಪರಮತಗಳಲ್ಲಿ ಪ್ರವರ್ತಕಭೇದ

**यद्यपि, परप्रक्रियया न निश्चितप्रामाण्यज्ञानं प्रवर्तकम् ।**

**प्रामाण्यलिङ्गज्ञानादिना अर्थज्ञानस्य नाशात् । किं तु तत्समानविषयकम् अप्रामाण्य-शङ्कारहितम् उत्तरं ज्ञानान्तरमेव । तथापि मन्मतेऽपि साक्षिरूपस्य सुखादिज्ञानस्य स्वप्रकाशत्वेन स्वस्यैव स्वप्रामाण्यनिश्चयरूपत्वात्, घटादिज्ञानस्य तु परग्राह्यत्वेऽपि तद्ग्राहकेण नित्येन साक्षिणा प्रमाणत्वेनैव ग्रहणात् तस्य च स्वप्रकाशत्वेन अनवस्थाभावात् निश्चितप्रामाण्यमेव ज्ञानं प्रवर्तकम् । किञ्च, आद्ये ज्ञाने प्रमाण्यनिश्चयेन कथं द्वितीये तच्छङ्काभावः ।**

ವಸ್ತುತಃ ನೈಯಾಯಿಕರ ಮತದಂತೆ, ನಿಶ್ಚಿತ ಪ್ರಾಮಾಣ್ಯಕ ಅರ್ಥ ನಿಶ್ಚಯವು ಪ್ರವೃತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಅವರ ಮತದಲ್ಲಿ ಪ್ರಾಮಾಣ್ಯನಿಶ್ಚಯವು ಅನುಮಿತಿರೂಪ. ಅನುಮಿತಿ ಬರಬೇಕಾದರೆ ವ್ಯಾಪ್ತಿಜ್ಞಾನ, ಪರಾಮರ್ಶಗಳು ಹುಟ್ಟಬೇಕು. ಆಮೇಲೆ ಪ್ರಾಮಾಣ್ಯಾನುಮಿತಿ ಬರುವಾಗ ದ್ವಿಕ್ಷಣಮಾತ್ರವೃತ್ತಿಯಾದ ಅರ್ಥನಿಶ್ಚಯವು ನಾಶವಾಗಿರುತ್ತದೆ. ಆದರೂ, ಮೊದಲು ಬಂದಿರುವ ಅರ್ಥಜ್ಞಾನಕ್ಕೆ ಸಮಾನಾಕಾರವಾದ ಮತ್ತೊಂದು ಅರ್ಥನಿಶ್ಚಯವು ಹುಟ್ಟುತ್ತದೆ. ಅದು ಪ್ರಾಮಾಣ್ಯನಿಶ್ಚಯೋತ್ತರದಲ್ಲಿ ಹುಟ್ಟಿರುವುದರಿಂದ ಅದರಲ್ಲಿ ಅಪ್ರಾಮಾಣ್ಯದ ಸಂದೇಹವು ಇರುವುದಿಲ್ಲ. ಹೀಗೆ ನ್ಯಾಯಮತದಲ್ಲಿ ಅಪ್ರಾಮಾಣ್ಯಸಂದೇಹಾನಾಸ್ಕಂದಿತವಾದ ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣ.

ಆದರೆ, ನಮ್ಮ ಸಿದ್ಧಾಂತದಲ್ಲಿ ಸುಖಜ್ಞಾನವು ಸಾಕ್ಷಿಜ್ಞಾನರೂಪ. ಅದು ಸ್ವಪ್ರಕಾಶ. ಆದ್ದರಿಂದ ಸುಖಜ್ಞಾನರೂಪವಾದ ಸಾಕ್ಷಿಜ್ಞಾನವೇ ಸ್ವಜ್ಞಾನಪ್ರಾಮಾಣ್ಯನಿಶ್ಚಯಾತ್ಮಕವಾಗುತ್ತದೆ. ಹೀಗೆ ವಿಷಯ(ಸುಖ) ಜ್ಞಾನವೂ ಪ್ರಾಮಾಣ್ಯಜ್ಞಾನವೂ ಒಂದೇ ಆಗುತ್ತದೆ. ಆದ್ದರಿಂದ ನಿಶ್ಚಿತ ಪ್ರಾಮಾಣ್ಯಕ ಸುಖನಿಶ್ಚಯವು ನಮ್ಮ ಸಿದ್ಧಾಂತದಲ್ಲಿ ಸುಕರ.

ಆದರೆ, ಘಟವು ಬಾಹ್ಯವಾದುದರಿಂದ ಘಟಜ್ಞಾನವೂ ಪ್ರಾಮಾಣ್ಯಜ್ಞಾನವೂ ಒಂದೇ ಅಲ್ಲ. ಹಾಗಿದ್ದರೂ, ಘಟಜ್ಞಾನಗ್ರಾಹಕವಾದ ಸಾಕ್ಷಿಯು, ಘಟಜ್ಞಾನ ಹುಟ್ಟಿದ ಮರುಕ್ಷಣದಲ್ಲೇ, ಅದರಲ್ಲಿ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಆ ಕ್ಷಣದಲ್ಲಿ ಮಾನಸ ಅರ್ಥನಿಶ್ಚಯವೂ ಇರುವುದರಿಂದ ಗೃಹೀತಪ್ರಾಮಾಣ್ಯಕ-ಅರ್ಥನಿಶ್ಚಯವು ಇದೆ. ಅದರಿಂದ ಪ್ರವೃತ್ತಿಯಾಗಬಹುದು.

ಪ್ರಾಮಾಣ್ಯಜ್ಞಾನರೂಪವಾದ ಸಾಕ್ಷಿಯು ಸ್ವಪ್ರಕಾಶವಾದುದರಿಂದ ತನ್ನನ್ನೂ, ತನ್ನಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಆದ್ದರಿಂದ ಅನವಸ್ಥಾದೋಷಕ್ಕೂ ಅವಕಾಶವಿಲ್ಲ.

ಹೀಗೆ, ನ್ಯಾಯಮತದಲ್ಲಿ ನಿಶ್ಚಿತಪ್ರಾಮಾಣ್ಯಕ ಅರ್ಥನಿಶ್ಚಯಕ್ಕೆ ಅವಕಾಶವಿಲ್ಲದಿದ್ದರೂ ನಮ್ಮ ಸಿದ್ಧಾಂತದಲ್ಲಿ ಅಂತಹ ಅರ್ಥನಿಶ್ಚಯವು ಇದೆ, ಪ್ರವೃತ್ತಿಯಾಗುತ್ತದೆ.

ನೈಯಾಯಿಕರು ಪ್ರಥಮೋತ್ಪನ್ನವಾದ ಜಲಜ್ಞಾನವು ನಾಶವಾದರೂ ದ್ವಿತೀಯೋತ್ಪನ್ನ ಜಲಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹವಿಲ್ಲ. ಅದು ಪ್ರವರ್ತಕ ಎನ್ನುತ್ತಾರೆ. ಆದರೆ, ಈ ಬಗ್ಗೆ ಒಂದು ಆಕ್ಷೇಪವಿದೆ–ಅನುವ್ಯವಸಾಯವು ಪ್ರಥಮೋತ್ಪನ್ನವಾದ ಜಲಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸಿದೆ. ತಾವತಾ ದ್ವಿತೀಯೋತ್ಪನ್ನ ಜಲಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹ ಏಕೆ ಬರಬಾರದು? ಎಂದು.

## ನ್ಯಾಯದೀಪ

**ಸ್ವಪ್ರಕಾಶತ್ವೇನೇತಿ ॥**

**ಯದಿ ಸಾಕ್ಷೀ ಸ್ವಯಂ ಭಾತೋ ನ ಮಾನಂ, ಕೇನ ಗಮ್ಯತೇ ।**

**ಅಕ್ಷಜಾದೇಶ್ಚ ಮಾನತ್ವಮ್, ಅನವಸ್ಥಾನ್ಯಥಾ ಭವೇತ್॥ (2.2.6)**

**ಇತಿ ವೈಶೇಷಿಕಾನುವ್ಯಾಖ್ಯಾನೇ, ತಥಾ–**

**ನಿಯಮೇನ ಸುಖಾದ್ಯೇಷು ಪ್ರಾಮಾಣ್ಯಂ ಸಾಕ್ಷಿಗೋಚರಮ್ ।**

**ಸ್ವಪ್ರಾಮಾಣ್ಯಂ ಸದಾ ಸಾಕ್ಷೀ ಪಶ್ಯತ್ಯೇವ ಸುನಿಶ್ಚಯಾತ್ ॥ (3.4.5,6)**

**ಇತಿ ಜ್ಞಾನಪಾದೀಯ ಅನುವ್ಯಾಖ್ಯಾನೇ ಚೋಕ್ತೇಃ ಇತಿ ಭಾವಃ ।**

ಸಾಕ್ಷಿಜ್ಞಾನವು ಸ್ವಪ್ರಕಾಶ ಎಂದು ಆಚಾರ್ಯರು ಸಮಯಪಾದದ ವೈಶೇಷಿಕಾಧಿಕರಣದಲ್ಲಿ (2.2.6) ಹೇಳಿದ್ದಾರೆ–

'ಒಂದುವೇಳೆ ಸಾಕ್ಷಿ ಎಂಬ ಇಂದ್ರಿಯವೇ ಇಲ್ಲದಿದ್ದಲ್ಲಿ ಚಕ್ಷುರಾದಿ ಇಂದ್ರಿಯಗಳಿಂದ ಹುಟ್ಟಿದ ಜ್ಞಾನದಲ್ಲಿ ಪ್ರಾಮಾಣ್ಯವು ಯಾವುದರಿಂದ ಜ್ಞಾತವಾಗಬೇಕು? ಅಂತಹ ಸಾಕ್ಷಿಯು ಸ್ವಪ್ರಕಾಶವಾಗದಿದ್ದಲ್ಲಿ ಅನವಸ್ಥಾದೋಷವೂ ಬರುತ್ತದೆ.'

ಸ್ವಪ್ರಕಾಶವಾದ ಸಾಕ್ಷಿಯು ಎಲ್ಲಾ ಪ್ರಮಾಣಗಳ ಪ್ರಾಮಾಣ್ಯವನ್ನು ನಿರ್ಧರಿಸುತ್ತದೆ. ಒಂದುವೇಳೆ ಪ್ರಾಮಾಣ್ಯವು ಸಾಕ್ಷೀತರವಾದ ಅನುಮಾನಾದಿಗಳಿಂದ ವೇದ್ಯವಾದರೆ ಅನವಸ್ಥಾದೋಷವು ಬರುತ್ತದೆ. ಘಟಾದಿಜ್ಞಾನಗಳ ಪ್ರಾಮಾಣ್ಯ ಅನುಮಿತಿವಿಷಯ, ಅನುಮಿತಿಯ ಪ್ರಾಮಾಣ್ಯ ಮತ್ತೊಂದು ಅನುಮಿತಿ ಗ್ರಾಹ್ಯ. ಹೀಗೆ ಅನವಸ್ಥಾ. ಆದರೆ, ಸಾಕ್ಷಿವೇದ್ಯವೆಂದಾಗ ಈ ಸಮಸ್ಯೆ ಇಲ್ಲ. ಸಾಕ್ಷಿಯು ಘಟಾದಿಜ್ಞಾನಗಳ ಪ್ರಾಮಾಣ್ಯವನ್ನು ಗ್ರಹಿಸುವುದು ಮಾತ್ರವಲ್ಲದೆ,

ತನ್ನನ್ನೂ ತನ್ನ ಪ್ರಾಮಾಣ್ಯವನ್ನೂ ತಾನೇ ವಿಷಯೀಕರಿಸುತ್ತದೆ. ಆದ್ದರಿಂದ, ಸಾಕ್ಷಿಯೇ ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯನ್ನೂ ಅದು ಸ್ವಪ್ರಕಾಶ ಎನ್ನುವುದನ್ನೂ ಗ್ರಹಿಸುತ್ತದೆ, ಎಂದು ಅಂಗೀಕರಿಸಬೇಕು, ಇದು ಅನುವ್ಯಾಖ್ಯಾನದ ಅಭಿಪ್ರಾಯ.

ಇದೇ ವಿಷಯವನ್ನು ಆಚಾರ್ಯರು ಜ್ಞಾನಪಾದದಲ್ಲೂ (3.4.5,6) ಹೇಳಿದ್ದಾರೆ– ಸುಖಾನುಭವದಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ನಿಯತವಾಗಿ ಗ್ರಹಿಸುತ್ತದೆ. ಸಾಕ್ಷಿಯು ಸ್ವಗತ– ಪ್ರಾಮಾಣ್ಯವನ್ನೂ ಪರೀಕ್ಷಾನಿರಪೇಕ್ಷವಾಗಿ ತಾನೇ ಗ್ರಹಿಸುತ್ತದೆ. ಹೀಗಾಗಿ ಅನವಸ್ಥಾದೋಷವಿಲ್ಲ.

## ನ್ಯಾಯದೀಪ

**ಘಟಾದಿಜ್ಞಾನಸ್ಯತು ಇತಿ ॥ ಮನೋವೃತ್ತಿರೂಪಜ್ಞಾನಸ್ಯ ಇತ್ಯರ್ಥಃ ।**

**ಇಚ್ಛಾ ಜ್ಞಾನಂ ಸುಖಂ ದುಃಖಂ ಭಯಾಭಯಕೃಪಾದಯಃ ।**
**ಸಾಕ್ಷಿಸಿದ್ಧಾಃ....॥ (3.4.5,6)**

**ಇತ್ಯುಕ್ತೇರಿತಿ ಭಾವಃ । ನಿತ್ಯೇನೇತಿ ॥ ಔತ್ತರಿಕಾನುಸ್ಮೃತಿಸಿದ್ಧ–ಆತ್ಮಸ್ವರೂಪ- ಭೂತ– ಸೌಷುಪ್ತಿಕಾನುಭವರೂಪಸ್ಯ ತಸ್ಯ ನಿತ್ಯತ್ವಾತ್ ಇತ್ಯರ್ಥಃ ॥**

ಘಟಾದಿ ಬಾಹ್ಯವಸ್ತುಗಳ ಜ್ಞಾನವು ಮನೋವೃತ್ತಿರೂಪವಾದ ಕಾರಣ ಜಡ. ಅದು ಸುಖಜ್ಞಾನದಂತೆ ಸಾಕ್ಷಿರೂಪವಲ್ಲ, ಆದರೂ ಅದು ಸಾಕ್ಷಿವೇದ್ಯ. ಹಾಗೆಂದು ಆಚಾರ್ಯರು ಜ್ಞಾನಪಾದೀಯ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆ ಘಟಜ್ಞಾನದ ಜ್ಞಾನರೂಪವಾದ ಸಾಕ್ಷಿಯು ನಿತ್ಯ. ಏಕೆಂದರೆ, ಅದು ಆತ್ಮಾನುಭವರೂಪವಾದುದು. ಆತ್ಮಾನುಭವ ಸುಷುಪ್ತಿಕಾಲದಲ್ಲೂ ಅನುವೃತ್ತವಾಗುತ್ತದೆ. ಸುಷುಪ್ತಿಯಲ್ಲೂ ಆತ್ಮಾನುಭವ ಇದೆ, ಎನ್ನುವುದು ಎದ್ದಮೇಲೆ 'ಸುಖಮ್ ಅಹಮ್ ಅಸ್ವಾಪ್ಸಮ್' ಎಂಬ ಪರಾಮರ್ಶದಿಂದ ಸಿದ್ಧವಾಗುತ್ತದೆ. ಏಕೆಂದರೆ, ಈ ಪರಾಮರ್ಶವು ಸುಷುಪ್ತಿಕಾಲದಲ್ಲಿ 'ಅಹಂ ಸುಖೀ' ಎಂಬ ಅನುಭವ ಇತ್ತು, ಎಂದು ತಿಳಿಸುತ್ತದೆ. ಹೀಗೆ ಸಾಕ್ಷ್ಯನುಭವವು ನಿರಂತರವಾದುದರಿಂದ ನಿತ್ಯವಾಗಿದೆ.

## ನ್ಯಾಯದೀಪ

**ಅನವಸ್ಥೇತಿ ॥ ಪೂರ್ವೋಕ್ತ ದ್ವಿವಿಧಾನವಸ್ಥಾಭಾವಾತ್ ಇತ್ಯರ್ಥಃ । ತಥಾಚ ಮಣೌ ಉಕ್ತೋ ದೋಷಃ ಪರೇಷಾಮೇವ । ನಾಸ್ಮಾಕಮ್ ।**

**'ಅನ್ಯಥಾ ಭಟ್ಟಮತೇ ಪ್ರಾಮಾಣ್ಯಸ್ಯ ಅನುಮಿತಿಗ್ರಾಹ್ಯತ್ವೇ ಅನವಸ್ಥಾ ಸ್ಯಾತ್ । ಗುರುಮತೇ ಪ್ರಾಮಾಣ್ಯಸ್ಯ ಸ್ವಗ್ರಾಹ್ಯತ್ವಂ ನ ಸ್ವಗ್ರಾಹ್ಯಮ್ । ಸ್ವರೂಪ–**

**ಪ್ರಾಮಾಣ್ಯಬಹಿರ್ಭೂತತ್ವಾತ್। ಕಿಂತು ಪರಗ್ರಾಹ್ಯತ್ವೇ ಅನವಸ್ಥಾನಾತ್' (ಮಣಿ.ಪು.294)**

**ಇತ್ಯಪಿ ಮಣಿಕೃದುಕ್ತೋ ದೋಷೋ ನಾಸ್ಮತ್‌ಪಕ್ಷೇ। ಸ್ವಗ್ರಾಹ್ಯತ್ವಸ್ಯಾಪಿ ಸಾಕ್ಷಿವೇದ್ಯತ್ವಾತ್ ಇತಿ ಭಾವಃ ॥**

ಪ್ರಾಮಾಣ್ಯಜ್ಞಾನ ಪ್ರವೃತ್ತಿಕಾರಣವಲ್ಲ. ಅಪ್ರಾಮಾಣ್ಯಸಂದೇಹವಿಲ್ಲದಿದ್ದರೆ ಸಾಕು, ಪ್ರವೃತ್ತಿ ಯಾಗುತ್ತದೆ. ಹೀಗಾಗಿ, ಒಂದು ಹಂತದಲ್ಲಿ ಪ್ರಾಮಾಣ್ಯಜ್ಞಾನದ ಜ್ಞಾನ ಅಜ್ಞಾಯಮಾನವಾಗಿಯೇ ಉಳಿಯುತ್ತದೆ. ಧರ್ಮಿಜ್ಞಾನ ಇಲ್ಲದಿರುವುದರಿಂದ ಅಲ್ಲಿ ಮತ್ತೆ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಆದ್ದರಿಂದ ಅನವಸ್ಥಾ ದೋಷ ಇಲ್ಲ. ಇದು ಮಣಿಕಾರಮತ. ಹೀಗೆ, ಅಂಗೀಕರಿಸದೇ ಹೋದಲ್ಲಿ ಕಾರಣಮುಖೀ ಫಲಮುಖೀ ಅನವಸ್ಥಾದೋಷ ಬರುತ್ತದೆ, ಎಂದು ಮಣಿಕಾರ ಹೇಳಿದ್ದಾನೆ. ಈ ಅನವಸ್ಥಾದ್ವಯ ದ್ವೈತದರ್ಶನದಲ್ಲಿ ಇಲ್ಲ, ಏಕೆಂದರೆ, ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯು ಸ್ವಪ್ರಕಾಶವಾಗಿದೆ.

ಮಣಿಕಾರ ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುವ ಭಟ್ಟಮತ ಮತ್ತು ಪ್ರಾಭಾಕರಮತದಲ್ಲಿ ಅನವಸ್ಥಾವನ್ನು ಹೇಳಿದ್ದಾನೆ. ಭಾಟ್ಟದರ್ಶನದಲ್ಲಿ ಜ್ಞಾನಗ್ರಾಹಕವಾದ ಜ್ಞಾತತಾಲಿಂಗಕಾನುಮಿತಿಯೇ ಜ್ಞಾನ ಮತ್ತು ತತ್-ಪ್ರಾಮಾಣ್ಯಗ್ರಾಹಕ. ಆದರೆ, ಆ ಅನುಮಿತಿಯಲ್ಲಿ ಪ್ರಾಮಾಣ್ಯಗ್ರಾಹಕವಾದುದು ಅನುಮಿತ್ಯಂತರ. ಹೀಗೆ ಅನವಸ್ಥಾ.

ಪ್ರಾಭಾಕರಮತದಲ್ಲೂ ಜ್ಞಾನಸ್ವರೂಪ ಮತ್ತು ತದ್ಗತಪ್ರಾಮಾಣ್ಯಗಳೆರಡೂ ಸ್ವಪ್ರಕಾಶವಾದ ಜ್ಞಾನವೇದ್ಯವಾದರೂ ಪ್ರಾಮಾಣ್ಯಕ್ಕೆ ಸ್ವಗ್ರಾಹ್ಯತ್ವವು, ಸ್ವತೋ ಗ್ರಾಹ್ಯವಲ್ಲ, ಅದನ್ನು ಪ್ರಮಾಣಾಂತರಗಳಿಂದ ತಿಳಿಯಬೇಕು, ಅದರ ಪ್ರಾಮಾಣ್ಯವನ್ನು ಮತ್ತೊಂದರಿಂದ ತಿಳಿಯಬೇಕು, ಹೀಗೆ ಅನವಸ್ಥಾ ಇದ್ದೇ ಇದೆ.

ಈ ಎರಡೂ ವಿಧದ ಅನವಸ್ಥಾದೋಷಗಳೂ ದ್ವೈತವಾದದಲ್ಲಿ ಇಲ್ಲ, ಏಕೆಂದರೆ, ಸಿದ್ಧಾಂತ ಮತದಲ್ಲಿ ಜ್ಞಾನವು ಅನುಮಾನವೇದ್ಯವಲ್ಲ, ಸಾಕ್ಷಿವೇದ್ಯ. ಸಾಕ್ಷಿ ಸ್ವಪ್ರಕಾಶಕ. ಆದ್ದರಿಂದ ಅನವಸ್ಥಾ ಇಲ್ಲ.

ಜ್ಞಾನವು ಸಾಕ್ಷಿವೇದ್ಯ, ತತ್-ಪ್ರಾಮಾಣ್ಯವೂ ಸಾಕ್ಷಿವೇದ್ಯ. ಅಷ್ಟೇ ಅಲ್ಲ, ಪ್ರಾಮಾಣ್ಯ ದಲ್ಲಿರುವ ಸ್ವಗ್ರಾಹ್ಯತ್ವವೂ ಸಾಕ್ಷಿವೇದ್ಯ. ಆದ್ದರಿಂದ ಗುರುಮತಕ್ಕೆ ಹೇಳಿದ ಅನವಸ್ಥಾದೋಷವೂ ಇಲ್ಲ.

## ನ್ಯಾಯದೀಪ

**ನನು ಸಮಾನವಿಷಯಕ-ಜ್ಞಾನಾಂತರೇ ಇವ ಅಪ್ರಾಮಾಣ್ಯಶಂಕಾನಿವೃತ್ತಾವೇವ**

**ಪ್ರಾಮಾಣ್ಯಜ್ಞಪ್ತೇಃ ಉಪಕ್ಷಯಾತ್ ನ ಪ್ರವೃತ್ತಿಹೇತುತಾ ಕಲ್ಪ್ಯಾ। 'ಅಪ್ರಾಮಾಣ್ಯ ಶಂಕಾ ಪ್ರತಿಬಂಧಧ್ವಾರಾ ನಿಷ್ಕಂಪಪ್ರವೃತ್ತೌ ಉಪಯುಜ್ಯತೇ ಪ್ರಾಮಾಣ್ಯಜ್ಞಾನಮ್' ಇತಿ ಮಣ್ಯುಕ್ತೇಃ, ಇತ್ಯತೋ ದ್ವಿತೀಯಜ್ಞಾನೇಽಪಿ ಪ್ರಾಮಾಣ್ಯನಿಶ್ಚಯ ಏವ ಪ್ರವರ್ತಕಃ, ಇತಿ ಭಾವೇನ ಆಹ–ಕಿಂಚೇತಿ ॥ ದ್ವಿತೀಯೇ ಇತಿ ॥ ಗೃಹೀತಪ್ರಾಮಾಣ್ಯಕ–ಜ್ಞಾನಸಮಾನವಿಷಯಕೇ ಜ್ಞಾನಾಂತರೇ ಇತ್ಯರ್ಥಃ।**

ಜಲಜ್ಞಾನದಲ್ಲಿ ಒಮ್ಮೆ ಪ್ರಾಮಾಣ್ಯನಿಶ್ಚಯವಾದರೆ ಆಮೇಲೆ ಅದೇ ಜಲಜ್ಞಾನವು ಮತ್ತೆ ಬಂದರೆ ಅಲ್ಲಿ ಪುನಃ ಪ್ರಾಮಾಣ್ಯನಿಶ್ಚಯವಾಗಬೇಕಿಲ್ಲ. ಅಪ್ರಾಮಾಣ್ಯಸಂದೇಹವು ಇಲ್ಲದಿರುವ ಕಾರಣದಿಂದಲೇ ಅದು ಪ್ರವರ್ತಕವಾಗುತ್ತದೆ, ಎಂದು ಮಣಿಕಾರನ ಸಿದ್ಧಾಂತ. ಇದರಂತೆ ಪ್ರವರ್ತಕವಾದ ಸಕಲಜ್ಞಾನದಲ್ಲೂ ಪ್ರಾಮಾಣ್ಯನಿಶ್ಚಯದ ಅನಿವಾರ್ಯತೆ ಏನೂ ಇಲ್ಲ. ಅಪ್ರಾಮಾಣ್ಯಸಂದೇಹ ಇರದಿದ್ದರೆ ಸಾಕು. ಇದನ್ನು ಮಣಿಕಾರ ಸ್ಪಷ್ಟವಾಗಿ ಹೇಳಿದ್ದಾನೆ– 'ಪ್ರವರ್ತಕಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹವು ಪ್ರವೃತ್ತಿಗೆ ಪ್ರತಿಬಂಧಕ. ಪ್ರಾಮಾಣ್ಯನಿಶ್ಚಯವು ಪ್ರತಿಬಂಧಕ ನಿರಾಸಕ. ಅದು ಪ್ರವೃತ್ತಿಗೆ ಕಾರಣವಲ್ಲ.'

ಹೀಗೆ, ಪ್ರಾಮಾಣ್ಯನಿಶ್ಚಯವು ಅನಿಯತವಾದ ಕಾರಣ, ಪರತಸ್ತ್ವವಾದದಲ್ಲಿ ಅನವಸ್ಥಾದೋಷವಿಲ್ಲ, ಎಂಬ ವಾದವನ್ನು 'ಕಿಂಚ' ಎಂಬ ಮೂಲವಾಕ್ಯದಲ್ಲಿ ನಿರಾಕರಿಸಲಾಗಿದೆ. ಆದರ ತಾತ್ಪರ್ಯ–ನಿಶ್ಚಿತಪ್ರಾಮಾಣ್ಯಕ–ಪ್ರಥಮಜ್ಞಾನ–ಸಮಾನವಿಷಯಕವಾದ ದ್ವಿತೀಯ ಜ್ಞಾನವೂ ಗೃಹೀತ ಪ್ರಾಮಾಣ್ಯಕವಾಗಿಯೇ ಪ್ರವರ್ತಕ, ಹೊರತು, ಅಪ್ರಾಮಾಣ್ಯಸಂದೇಹಾಭಾವ ಪ್ರಯುಕ್ತವಾಗಿ ಅಲ್ಲ. ಏಕೆಂದರೆ, ಪ್ರಥಮಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯ ಬಂದ ಮಾತ್ರಕ್ಕೆ ದ್ವಿತೀಯ ಜ್ಞಾನದಲ್ಲಿ ಸಂದೇಹಾಭಾವ ಹೇಗೆ? ಸಮಾನಾಧಿಕರಣವಾದ ನಿಶ್ಚಯವೇ ಸಂದೇಹಕ್ಕೆ ಪ್ರತಿಬಂಧಕ. ಆದ್ದರಿಂದ, ದ್ವಿತೀಯ ಜ್ಞಾನದಲ್ಲಿ ಸಂದೇಹಾಭಾವ ಇರಬೇಕಾದರೆ ಅದರಲ್ಲಿ ಪ್ರಾಮಾಣ್ಯನಿಶ್ಚಯವಿರಲೇಬೇಕು. ಆಗ ಪ್ರವೃತ್ತಿಪೂರ್ವದಲ್ಲಿ ಪ್ರಾಮಾಣ್ಯನಿಶ್ಚಯವು ನಿಯತ ಎನ್ನಲೇಬೇಕಾಗುತ್ತದೆ. ಪರತಸ್ತ್ವ–ಪಕ್ಷದಲ್ಲಿ ಅನವಸ್ಥಾ ಅಪರಿಹಾರ್ಯ, ಎಂದು.[1]

ननु यदीदं रजतं न स्यात्तदा रजतत्वप्रकारकप्रमाविषयो न स्यादिति

1. **ರುಚಿದತ್ತಮಿಶ್ರರು ಇದೇ ಪರಿಹಾರವನ್ನು ಪ್ರಕಾಶವ್ಯಾಖ್ಯಾನದಲ್ಲಿ ಹೇಳಿದ್ದಾರೆ– ನನು ಪ್ರಥಮಜ್ಞಾನೇ ಪ್ರಾಮಾಣ್ಯನಿಶ್ಚಯೇಽಪಿ ದ್ವಿತೀಯ ಜ್ಞಾನೇ ಕಥಂ ನಾಪ್ರಾಮಾಣ್ಯಶಂಕಾ? ತತ್ರ ವಿಶೇಷದರ್ಶನಾಭಾವಾತ್। ಇತಿ ಚೇತ್, ಅತ್ರವದಂತಿ(ಜಯದೇವಮಿಶ್ರಾಃ) –ದ್ವಿತೀಯ ಜ್ಞಾನಸ್ಯ ಯದಾ ನಾನುವ್ಯವಸಾಯಃ ತದಾ ಧರ್ಮಿಜ್ಞಾನಾಭಾವಾದೇವ ನ ತತ್ಸಂಶಯಃ। ತದನುವ್ಯವಸಾಯೇ ಪೂರ್ವಜ್ಞಾನೇ ಗೃಹೀತಸ್ಯ ಪ್ರಾಮಾಣ್ಯಸ್ಯ ಉಪನೀತಸ್ಯ ಭಾನನಿಯಮಾತ್। (ಪು.299)**

**तर्कप्रभावात् द्वितीये शङ्काभावः। तर्केण अर्थसत्वशङ्कानिवर्तनेन तद्घटिताप्रामाण्यशङ्कानिवर्तनादिति चेन्न। क्लृप्तसामग्रीकस्य लघोश्चानुव्यवसायरूपप्रामाण्यनिश्चयस्य त्यागेन अन्यस्य विपरीतस्योक्तरूपतर्कानुसन्धाननियमस्य कल्पनेऽनुभवविरोधात् ॥**

ಪ್ರಥಮ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯ ಮಾತ್ರದಿಂದ ತತ್ಸಮಾನ-ವಿಷಯಕ ದ್ವಿತೀಯ ಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹಾಭಾವವು ಹೇಗೆ? ಎನ್ನುವ ಆಕ್ಷೇಪಕ್ಕೆ ಇದು ಸಮಾಧಾನ-ತರ್ಕದಿಂದ ಅಪ್ರಾಮಾಣ್ಯಸಂದೇಹವು ಪರಿಹಾರವಾಗುತ್ತದೆ. ತರ್ಕ ಹೀಗೆ- ನನ್ನ ಮುಂದಿರುವ ವಸ್ತು ರಜತವಲ್ಲದಿದ್ದರೆ ಅದು ರಜತತ್ವಪ್ರಕಾರಕ ಜ್ಞಾನಕ್ಕೆ ವಿಷಯವಾಗಬಾರದು. ಇದರ ಅರ್ಥ-ಪುರೋವರ್ತಿಯು ರಜತವಲ್ಲದಿದ್ದಲ್ಲಿ ಅದನ್ನು ನೋಡಿ 'ಇದಂ ರಜತಂ' ಎಂಬ ಜ್ಞಾನ ಬರಲಿಕ್ಕಿಲ್ಲ, ನನಗೆ ಹಿಂದೆ, ರಜತ ಇದ್ದಿರುವ ಕಾರಣದಿಂದಲೇ ಅಂತಹ ಜ್ಞಾನ ಬಂದಿದೆ, ಎಂದು.

ಹೀಗೆ, ವಿಷಯವಿದೆ, ಎಂದು ತರ್ಕದಿಂದ ನಿರ್ಧಾರವಾದರೆ, ವಿಷಯ ಸತ್ವಾಸತ್ವಘಟಿತವಾದ ಅಪ್ರಾಮಾಣ್ಯಸಂಸದೇಹ ಬರುವುದಿಲ್ಲ, ಎಂದು ನೈಯಾಯಿಕರ ಪೂರ್ವಪಕ್ಷ. ಆದರೆ, ಇದು ಆಗ್ರಹ ಮೂಲಕ. ಸರ್ವತ್ರ ತದ್ವಿಷಯಕ ಸಂದೇಹಕ್ಕೆ ತದ್ವಿರುದ್ಧವಿಷಯಕ ನಿಶ್ಚಯವು ಪ್ರತಿಬಂಧಕ, ಎಂದು ಸಿದ್ಧವಾಗಿದೆ. ಈ ಕ್ಲೃಪ್ತನಿಯಮಕ್ಕೆ ಅನುಸಾರವಾಗಿ ಅಪ್ರಾಮಾಣ್ಯಸಂದೇಹಕ್ಕೆ ಪ್ರಾಮಾಣ್ಯ ನಿಶ್ಚಯವು ಪ್ರತಿಬಂಧಕವಾಗಬೇಕು. ಪ್ರಕೃತದಲ್ಲಿ ಪ್ರಾಮಾಣ್ಯನಿಶ್ಚಯಕ್ಕೆ ಬೇಕಾದ ಎಲ್ಲ ಸಾಮಗ್ರಿಗಳೂ ಇವೆ. ಆದರೆ, ಹಾಗೆ ಹೇಳಿದರೆ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬೇಕಾಗುತ್ತದೆ ಎಂಬ ಒಂದೇ ಕಾರಣಕ್ಕಾಗಿ ಉಕ್ತತರ್ಕವು ಸಂದೇಹಕ್ಕೆ ವಿರೋಧಿ, ಎಂದು ಕಲ್ಪಿಸುವುದು ಅನುಭವಕ್ಕೆ ವಿರುದ್ಧವಾಗಿದೆ.

## ನ್ಯಾಯದೀಪ

**ಕ್ಲೃಪ್ತೇತಿ ॥''ನ ಚ ದೃಷ್ಟಾಂತಃ ಸಾಧ್ಯವಿಕಲಃ, ಉತ್ತರಜ್ಞಾನಸ್ಯ..''(ಪುಟ.195) ಇತ್ಯಾದಿನಾ ಸ್ವತಸ್ತ್ವಾನುಮಾನಾವಸರೋಕ್ತರೀತ್ಯಾ ಕ್ಲೃಪ್ತಸಾಮಗ್ರೀಕಸ್ಯ ಇತ್ಯರ್ಥಃ।**

ಹಿಂದೆ ಸ್ವತಸ್ತ್ವಾನುಮಾನ ಪ್ರಕರಣದಲ್ಲಿ ಹೇಳಿದಂತೆ, ಜಲಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವು ಉತ್ಪತ್ತಿಯಾಗುವುದಕ್ಕೆ ಬೇಕಾದ ಎಲ್ಲ ಸಾಮಗ್ರಿಗಳೂ ಇವೆ. ಆದರೂ, ಪ್ರಾಮಾಣ್ಯನಿಶ್ಚಯವನ್ನು ಒಪ್ಪದಿರುವುದು ಅನುಭವಕ್ಕೆ ವಿರುದ್ಧ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನ್ಯತ್ರ ಕ್ಲೃಪ್ತತ್ವಾಚ್ಚ ದ್ವಿತೀಯಜ್ಞಾನಾದೌ ಅಪಿ ಪ್ರಾಮಾಣ್ಯನಿಶ್ಚಯ ಏವ ಪ್ರವರ್ತಕಃ ಇತಿ ಭಾವೇನಾಹ–ಕಿಂಚಾಪ್ರಾಮಾಣ್ಯೇತಿ ॥**

ಅಪ್ರಾಮಾಣ್ಯಸಂದೇಹವಿದ್ದಲ್ಲಿ ಪ್ರಾಮಾಣ್ಯನಿಶ್ಚಯಕ್ಕೆ ಪ್ರವೃತ್ತಿಕಾರಣತ್ವವು ಕ್ಲೃಪ್ತ ವಾಗಿರುವ ಕಾರಣದಿಂದಾಗಿಯೂ ಸರ್ವತ್ರ ಅದಕ್ಕೆ ಪ್ರವೃತ್ತಿಕಾರಣತ್ವವನ್ನು ಹೇಳುವುದೇ ಉಚಿತ ಎಂದು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**किञ्च अप्रामाण्यशङ्कानन्तरं प्रवृत्तौ प्रामाण्यनिश्चयो हेतुरिति तावदविवादम्। तत्र निश्शङ्कप्रवृत्तित्वमेव कार्यतावच्छेदकं लाघवात् । नतु शङ्कानन्तरनिश्शङ्कप्रवृत्तित्वं गौरवात् । तत्र प्रामाण्यनिश्चयोऽप्रामाण्यशङ्कानिरासोपक्षीण इति तु गौरवादिना निरस्तम् । अन्यथा व्याप्त्यादिनिश्चयोऽपि व्यभिचारादिशङ्कानिरासोपक्षीणः स्यात् ।**

ಇನ್ನೂ ಒಂದು ಕಾರಣವಿದೆ–ಜಲಾದಿ ಜ್ಞಾನಗಳಲ್ಲಿ ಅಪ್ರಾಮಾಣ್ಯಸಂದೇಹ ಬಂದಾಗ ನಿಷ್ಕಂಪಪ್ರವೃತ್ತಿಯಾಗಬೇಕಾದರೆ ಪ್ರಾಮಾಣ್ಯನಿಶ್ಚಯವು ಕಾರಣ ಎನ್ನುವುದರಲ್ಲಿ ವಿವಾದವಿಲ್ಲ. ಅಲ್ಲಿ ಪ್ರಾಮಾಣ್ಯನಿಶ್ಚಯದ ಕಾರ್ಯತಾವಚ್ಛೇದಕ ನಿಃಶಂಕಪ್ರವೃತ್ತಿತ್ವಮ್. ಹೊರತು, ಶಂಕಾನಂತರ ನಿಷ್ಕಂಪಪ್ರವೃತ್ತಿತ್ವಮ್ ಅಲ್ಲ. ಹಾಗೆ ಹೇಳುವುದು ಗೌರವ. ಏವಂಚ ಪ್ರವೃತ್ತಿತ್ವಾವಚ್ಛಿನ್ನಂ ಪ್ರತಿ ಪ್ರಾಮಾಣ್ಯನಿಶ್ಚಯವು ಕಾರಣ, ಎಂದೇ ಸಿದ್ಧವಾಗುತ್ತದೆ.

ಅಪ್ರಮಾಣ್ಯ ಶಂಕೋತ್ತರ ಪ್ರವೃತ್ತಿಗೂ ಪ್ರಾಮಾಣ್ಯನಿಶ್ಚಯವು ಕಾರಣವಲ್ಲ, ಅದು ಪ್ರತಿಬಂಧಕವಾದ ಅಪ್ರಾಮಾಣ್ಯಸಂದೇಹ ನಿವಾರಣೆಯಲ್ಲೇ ಉಪಕ್ಷೀಣ, ಎಂದು ಹೇಳುವುದು ಗೌರವದೋಷಗ್ರಸ್ತ, ಎಂದು ಈ ಹಿಂದೆಯೇ ನಿರೂಪಿಸಲಾಗಿದೆ. ಹೀಗಿದ್ದರೂ ಅದು ಪ್ರತಿಬಂಧಕ ನಿರಾಸಕ ಮಾತ್ರ ಎಂದು ಆಗ್ರಹಮಾಡಿದರೆ, ವ್ಯಾಪ್ತಿನಿಶ್ಚಯವೂ ಅನುಮಿತಿ ಪ್ರತಿಬಂಧಕವಾದ ವ್ಯಭಿಚಾರ ಸಂದೇಹನಿರಾಸೋಪಕ್ಷೀಣ, ಅನುಮಿತಿಗೆ ಕಾರಣವಲ್ಲ, ಎಂದಾದೀತು. ಆದ್ದರಿಂದ ಪ್ರಾಮಾಣನಿಶ್ಚಯವು ಪ್ರವೃತ್ತಿಗೆ ಕಾರಣ, ಎನ್ನುವುದೇ ಯುಕ್ತವಾಗುತ್ತದೆ.

## ನ್ಯಾಯದೀಪ

**ಅವಿವಾದಮಿತಿ ॥ 'ಪರತಸ್ತ್ವಪಕ್ಷೇ ಪ್ರಾಮಾಣ್ಯಗ್ರಹೋ ನ ಕ್ವಚಿತ್ ಪ್ರವರ್ತಕಃ' ಇತಿ ಮಣ್ಯುಕ್ತೇಃ (ಪು.301) ಅಸ್ತಿ ವಿವಾದಃ । ತಥಾಪಿ ''ಯತ್ರ ಚ**

**ಅನಭ್ಯಾಸದಶಾಯಾಮ್ ಅಪ್ರಾಮಾಣ್ಯಶಂಕಯಾ ಅರ್ಥನಿಶ್ಚಯಂ ಪರಿಭೂಯ ಅರ್ಥಸಂಶಯಃ ತತ್ರ ಪ್ರಾಮಾಣ್ಯನಿಶ್ಚಯಾಧೀನಜ್ಞಾನಾತ್ ಅರ್ಥಂ ನಿಶ್ಚಿತ್ಯ ನಿಷ್ಕಂಪಂ ಪ್ರವರ್ತತೇ'' (ಮಣಿ.ಪು.294) ಇತ್ಯುಕ್ತ್ವಾ ತತ್ರ ಸ್ಥಲೇ ಪ್ರಾಮಾಣ್ಯನಿಶ್ಚಯಸ್ಯ ನಿಯತ-ಪೂರ್ವವೃತ್ತಿತ್ವಾತ್ ಲಘುತ್ವಾತ್ ಹೇತುತ್ವಮ್ ಅವಶ್ಯಂ ವಾಚ್ಯಮಿತಿ ಭಾವೇನ ಏವಮುಕ್ತಿಃ। ಅನ್ಯತ್ರೋಪಕ್ಷಯಾತ್ ಕಥಂ ಹೇತುತಾ ಇತ್ಯತ ಆಹ-ತತ್ರೇತಿ ॥**

**ಗೌರವಾದಿನೇತಿ ॥ ಗೌರವ-ಅತಿಗೌರವಾದಿನಾ ಪೂರ್ವಮೇವ ನಿರಸ್ತಮ್ ಇತ್ಯರ್ಥಃ। ಅತಿ ಪ್ರಸಂಗಂ ಕಿಂಚಿದ್ವ್ಯನಕ್ತಿ-ಅನ್ಯಥೇತಿ ॥**

ಅಪ್ರಮಾಣ್ಯಸಂದೇಹವಿದ್ದಲ್ಲಿ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣ, ಎಂಬ ವಿಷಯದಲ್ಲಿ ವಿವಾದವಿಲ್ಲ, ಎಂದು ಮೂಲದಲ್ಲಿ ಹೇಳಲಾಗಿದೆ. ಆದರೆ, ಅಲ್ಲೂ ಮಣಿಕಾರನ ವಿವಾದ ಇದೆ. ಅವನು ಸ್ವಗ್ರಂಥದಲ್ಲಿ 'ಪರತಸ್ತ್ವಪಕ್ಷದಲ್ಲಿ ಪ್ರಾಮಾಣ್ಯಗ್ರಹವು ಎಲ್ಲೂ ಪ್ರವೃತ್ತಿಗೆ ಕಾರಣವಲ್ಲ' ಎಂದು ಕಂಠತಃ ಹೇಳಿದ್ದಾನೆ. ಇದರಿಂದ, ಅಂತಹ ಸಂದರ್ಭದಲ್ಲೂ ಪ್ರಾಮಾಣ್ಯ ನಿಶ್ಚಯವು ಕಾರಣ ಎಂದು ಅಂಗೀಕೃತವಾಗಿಲ್ಲ. ಆದರೂ ಅದಕ್ಕಿಂತ ಹಿಂದೆ ಮಣಿಯಲ್ಲಿ ಹೀಗೆ ಹೇಳಲಾಗಿದೆ- ಅನಭ್ಯಾಸದಶಾದಲ್ಲಿ ಅರ್ಥನಿಶ್ಚಯವಿದ್ದರೂ ಅದನ್ನು ಮೀರಿ ಅಪ್ರಾಮಾಣ್ಯ ಸಂದೇಹಪ್ರಯುಕ್ತವಾಗಿ ಅರ್ಥಸಂದೇಹವು ಬರುವುದು. ಅಂತಹ ಸಂದರ್ಭದಲ್ಲಿ ಜಲಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವಾಗಿ ತತ್ ಪ್ರಯುಕ್ತವಾಗಿ ಅರ್ಥವನ್ನು ನಿರ್ಧರಿಸಿ ಪ್ರವೃತ್ತಿಯಾಗುತ್ತದೆ, ಎಂದು. ಮಣಿಕಾರನ ಈ ಮಾತಿನಿಂದ ಪ್ರಾಮಾಣನಿಶ್ಚಯವು ಪ್ರವೃತ್ತಿಗೆ ನಿಯತಪೂರ್ವವೃತ್ತಿ ಯಾಗಿದೆ ಹಾಗೂ ಲಘುರೂಪವೂ ಆಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಅದಕ್ಕೆ ಪ್ರವೃತ್ತಿಕಾರಣತ್ವವನ್ನು ಅವನಿಗೆ ಒಪ್ಪಿಸಿ ಅವಿವಾದಾತ್, ಎಂದು ಹೇಳಲಾಗಿದೆ.

ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯನಿಶ್ಚಯವು ಅಪ್ರಾಮಾಣ್ಯಸಂದೇಹನಿರಾಸದಲ್ಲೇ ಉಪಕ್ಷೀಣ, ಅದು ಪ್ರವೃತ್ತಿಗೆ ಹೇತುವಲ್ಲ, ಎಂಬ ಆಶಂಕೆಗೆ ಹಿಂದೆ ಮೂಲದಲ್ಲಿ ಕೊಟ್ಟಿರುವ ಉತ್ತರ-ಹಾಗೆ ಹೇಳುವುದರಿಂದ ಗೌರವದೋಷ ಬರುತ್ತದೆ, ಎಂದು. ಇದನ್ನು ಹಿಂದೆಯೇ ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಯದಪಿ ಮಣೌ (ಪು.299) 'ನನ್ವೇವಂ ಬಹುವಿತ್ತವ್ಯಯಾಯಾಸಸಾಧ್ಯೇ'' ಇತ್ಯಾದಿನಾ ಪ್ರಾಮಾಣ್ಯಜ್ಞಾನಸ್ಯ ಅನುಪಯೋಗಮಾಶಂಕ್ಯ ಅಪ್ರಾಮಾಣ್ಯ-ಶಂಕಾನಿವರ್ತಕತ್ವೇನ ಉಪಯೋಗಕಥನಂ, ತದಪ್ಯಯುಕ್ತಮ್ ಇತ್ಯಾಹ-ಕಿಂ ಚ ಪ್ರಾಮಾಣ್ಯೇತಿ ॥**

ಮಣಿಗ್ರಂಥದಲ್ಲಿ ಅರ್ಥನಿಶ್ಚಯವೇ ಪ್ರವೃತ್ತಿಕಾರಣ, ಪ್ರಾಮಾಣ್ಯನಿಶ್ಚಯವಲ್ಲ, ಎಂದು ಸಿದ್ಧಾಂತ ಮಾಡಿ ಹೀಗೆ ಆಕ್ಷೇಪ ಮಾಡಲಾಗಿದೆ– ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣವಲ್ಲವೆಂದಾದರೆ ಬಹುವಿತ್ತವ್ಯಯ-ಆಯಾಸಸಾಧ್ಯವಾದ ಯಾಗಾದಿಗಳಲ್ಲಿ ಪ್ರವೃತ್ತಿ ಮಾಡಲು ಪ್ರಾಮಾಣ್ಯನಿಶ್ಚಾಯಕವನ್ನು ಅನ್ವೇಷಣೆ ಮಾಡುವ ಕ್ಲೇಶ ಏಕೆ?, ಎಂದು. ಈ ಆಕ್ಷೇಪಕ್ಕೆ ಮಣಿಕಾರ ಕೊಟ್ಟ ಸಮಾಧಾನ–ಪ್ರವರ್ತಕವಾದ ಅರ್ಥನಿಶ್ಚಯವು ಅಪ್ರಾಮಾಣ್ಯ ಜ್ಞಾನಾನಾಸ್ಕಂದಿತ ವಾಗಿರಬೇಕು. 'ಯಾಗಃ ಸ್ವರ್ಗಸಾಧನಮ್' ಎಂಬ ವೇದಜನ್ಯವಾದ ಪ್ರವರ್ತಕ ಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹ ಬಂದಾಗ ನಿಷ್ಕಂಪಪ್ರವೃತ್ತಿಯಾಗುವುದಿಲ್ಲ. ಆ ಸಂದೇಹ ನಿವಾರಣೆಗಾಗಿ ಮಾತ್ರ ಪ್ರಾಮಾಣ್ಯಜ್ಞಾನಬೇಕು, ಎಂದು. ಈ ಸಮಾಧಾನವು ಯುಕ್ತವಲ್ಲ, ಎಂದು ಮುಂದಿನ ವಾಕ್ಯದಲ್ಲಿ ಹೇಳಲಾಗಿದೆ.

**किञ्च, प्रामाण्यनिश्चयस्याप्रामाण्यशङ्कानिवर्तकत्वेन उपक्षये त्वत्पक्षे प्रामाण्यस्यानुमेयत्वेन आवश्यकेन प्रामाण्यव्याप्यतया लिङ्गज्ञानेनैव अप्रामाण्यशङ्का निवृत्तिसम्भवात् अप्रामाण्यज्ञानस्य प्रवृत्तावनुपयोगात् तद्ग्रहणचिन्ता व्यर्था ।**

ಪ್ರಾಮಾಣ್ಯನಿಶ್ಚಯವು ಅಪ್ರಾಮಾಣ್ಯಸಂದೇಹ ನಿವಾರಣೆಗೆ ಮಾತ್ರ ಉಪಯೋಗಿ, ಪ್ರವೃತ್ತಿಗೆ ಅದು ಕಾರಣವಲ್ಲ ಎಂದು ಹೇಳಿದರೆ ಇನ್ನೂ ಒಂದು ದೋಷವಿದೆ. ನ್ಯಾಯಮತದಲ್ಲಿ ಪ್ರಾಮಾಣ್ಯನಿಶ್ಚಯವು ಅನುಮಿತ್ಯಾತ್ಮಕ. ಪ್ರಾಮಾಣ್ಯಾನುಮಿತಿ ಬರಬೇಕಾದರೆ ಪ್ರಾಮಾಣ್ಯ ವ್ಯಾಪ್ತವತ್ತಾನಿಶ್ಚಯರೂಪವಾದ ಪರಾಮರ್ಶ ಇರಲೇಬೇಕು. ಅದರಿಂದಲೇ ಅಪ್ರಾಮಾಣ್ಯ ಸಂದೇಹವು ಪರಿಹಾರವಾಗುತ್ತದೆ. ಏಕೆಂದರೆ, ಆ ಪರಾಮರ್ಶವು ತದಭಾವವ್ಯಾಪ್ಯವತ್ತಾಜ್ಞಾನ ರೂಪವಾದುದರಿಂದ ಅಪ್ರಾಮಾಣ್ಯಸಂದೇಹಕ್ಕೆ ವಿರೋಧಿಯಾಗಿದೆ. ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲ. ಹೀಗಾಗಿ, ಪ್ರವೃತ್ತಿ ಪೂರ್ವದಲ್ಲಿ ಪ್ರಾಮಾಣ್ಯನಿಶ್ಚಯ ಬರುವುದು ಹೇಗೆ? ಎಂಬ ವಿಚಾರವೇ ಅಪ್ರಸ್ತುತವಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಅಪ್ರಾಮಾಣ್ಯಶಂಕಾ ನಿವೃತ್ತಿಸ್ಥಳೇ ವ್ಯವಸಾಯಸ್ಯ ನಾಶೇನ ಪ್ರವೃತ್ತಿಕಾಲೇ ಅಭಾವಾತ್ ಕಥಂ ಪ್ರಮಾತ್ವೇನ ಜ್ಞಾತಂ ಜ್ಞಾನಂ ಪ್ರವೃತ್ತಿಹೇತುಃ? ಇತ್ಯಾಶಂಕ್ಯ ದ್ವೇಧಾ ಸಮಾಧಿಮಾಹ-ಯದ್ಯಪೀತ್ಯಾದಿನಾ ॥**

ಸ್ವತಸ್ತ್ವಸಿದ್ಧಾಂತದಲ್ಲಿ ನಿಶ್ಚಿತಪ್ರಾಮಾಣ್ಯಕ ಅರ್ಥಜ್ಞಾನವು ಪ್ರವೃತ್ತಿಗೆ ಕಾರಣ. ಅಪ್ರಾಮಾಣ್ಯ ಸಂದೇಹಸ್ಥಲದಲ್ಲಿ ಪರೀಕ್ಷೆಯಿಂದ ಅಪ್ರಾಮಾಣ್ಯಸಂದೇಹವು ಪರಿಹಾರವಾದಾಗ ಮೊದಲು ಬಂದ ಅರ್ಥಜ್ಞಾನವು ನಾಶವಾಗಿರುತ್ತದೆ. ಆದ್ದರಿಂದ ನಿಶ್ಚಿತಪ್ರಾಮಾಣ್ಯಕ ಅರ್ಥನಿಶ್ಚಯವು ಪ್ರವೃತ್ತಿಗೆ ಕಾರಣವಾಗುವುದು ಹೇಗೆ? ಈ ಪ್ರಶ್ನೆಗೆ ಮುಂದಿನ ಮೂಲದಲ್ಲಿ ಎರಡು ರೀತಿಯಲ್ಲಿ ಉತ್ತರವನ್ನು ಕೊಡಲಾಗಿದೆ.

**यद्यपि व्यवसायः शङ्कानिवर्तकपरीक्षाकाले नास्ति । तथापि स्मृत्युपनीतस्य व्यवसायस्य प्रामाण्यनिश्चय एव प्रवर्तकः ।**

**यद्वा त्वन्मते गृहीतप्रामाण्येन ज्ञानेन समानशीलत्वादप्रमाण्य-शङ्कारहितं ज्ञानान्तरमिव मन्मते निरस्तप्रतिबन्धेन साक्षिणा गृहीतप्रामाण्यं ज्ञानान्तरमेव प्रवर्तकम् ।**

ಯದ್ಯಪಿ ಪ್ರವರ್ತಕಜ್ಞಾನದಲ್ಲಿ ಪರೀಕ್ಷೆಯಿಂದ ಅಪ್ರಾಮಾಣ್ಯ ಸಂದೇಹ ನಿವೃತ್ತಿಯಾಗುವ ಕಾಲದಲ್ಲಿ ಅರ್ಥಜ್ಞಾನಾತ್ಮಕವಾದ ವ್ಯವಸಾಯವು ನಾಶವಾಗಿರುತ್ತದೆ. ಆದರೂ ಸಂದೇಹ ನಿವೃತ್ತಿಯಾದ ಬಳಿಕ ಹಿಂದೆ ಹುಟ್ಟಿದ ವ್ಯವಸಾಯದ ಸ್ಮರಣೆ ಬರುತ್ತದೆ. ಸ್ಮೃತ್ಯುಪನೀತವಾದ ಆ ವ್ಯವಸಾಯದಲ್ಲಿ ಸಾಕ್ಷಿಯಿಂದ ಪ್ರಾಮಾಣ್ಯನಿಶ್ಚಯವಾಗುತ್ತದೆ. ಅದರಿಂದಾಗಿ ಪ್ರವೃತ್ತಿಯಾಗುತ್ತದೆ.

ಅಥವಾ, ನ್ಯಾಯಮತದಲ್ಲಿ ಅನುಮಾನದಿಂದ ಯಾವ ವ್ಯವಸಾಯದಲ್ಲಿ ಪ್ರಾಮಾಣ್ಯವು ಗೃಹೀತವಾಯಿತೋ ತತ್ಸಮಾನ ವಿಷಯಕವಾದ ಜ್ಞಾನಾನಂತರವು ಪುನಃ ಹುಟ್ಟುತ್ತದೆ. ಆದರೆ, ಅದು ಅಪ್ರಾಮಾಣ್ಯಸಂದೇಹದಿಂದ ಅನಾಸ್ಕಂದಿತವಾಗಿರುತ್ತದೆ. ಅದರಂತೆ, ಸ್ವತಸ್ತ್ವಮತದಲ್ಲೂ ಪರೀಕ್ಷಾ ಸಹಕಾರದಿಂದ ಅಪ್ರಾಮಾಣ್ಯಸಂದೇಹಾತ್ಮಕವಾದ ಪ್ರತಿಬಂಧಕದಿಂದ ಮುಕ್ತವಾದ ಸಾಕ್ಷಿಯು ಪ್ರಾಮಾಣ್ಯವಿಶಿಷ್ಟವಾದ ಅರ್ಥನಿಶ್ಚಯವನ್ನು ಗ್ರಹಿಸುತ್ತದೆ, ಆದರಿಂದ ಪ್ರವೃತ್ತಿಯಾಗುತ್ತದೆ.

## ನ್ಯಾಯದೀಪ

**ಸ್ಮೃತೀತಿ ॥ ಪರರೀತ್ಯಾ ಇದಮ್ । ಯದ್ವಾ ಸಿದ್ಧಾಂತೇ ಸಾಕ್ಷಿರೂಪ-ನಿತ್ಯಜ್ಞಾನ-ವಿಷಯಸ್ಯಾಪಿ ಸ್ಮೃತ್ಯುಪನೀತತ್ವ-ಪ್ರಕಾರಃ ಜಿಜ್ಞಾಸಾನಯಭಾಷ್ಯ- ಟೀಕಾಭಾವ-ದೀಪೇ ಅಸ್ಮಾಭಿರುಕ್ತೋ ಧ್ಯೇಯಃ ।**

ವ್ಯವಸಾಯವು ಸ್ಮೃತ್ಯುಪನೀತವೆಂದು ಮೂಲದಲ್ಲಿ ಹೇಳಿರುವುದು ನ್ಯಾಯಮತರೀತ್ಯಾ. ಅವರ ಮತದಲ್ಲಿ ವ್ಯವಸಾಯದ ಜ್ಞಾನವು ಮಾನಸಾನುವ್ಯವಸಾಯಾತ್ಮಕ. ಅದು ಅನಿತ್ಯ. ಅವರ

ಸ್ಮರಣೆ ಬರಬಹುದು. ಆದರೆ, ಸಿದ್ಧಾಂತದಲ್ಲಿ ಅನುವ್ಯವಸಾಯವು ಸಾಕ್ಷಿರೂಪವಾದ ಕಾರಣ ನಿತ್ಯವಾಗಿದೆ. ಅದಕ್ಕೆ ನಾಶವಿಲ್ಲ. ಆದ್ದರಿಂದ ವ್ಯವಸಾಯದ ಸ್ಮರಣೆ ಎನ್ನುವುದು ಯುಕ್ತವಲ್ಲ.

ಅಥವಾ, ಸಾಕ್ಷಿರೂಪವಾದ ನಿತ್ಯಜ್ಞಾನವಿಷಯವೂ ಸ್ಮೃತಿಯಿಂದ ಉಪನೀತವಾಗಬಹುದು ಎಂದು ನಾವು (ರಾಯರು) ಜಿಜ್ಞಾಸಾಧಿಕರಣ ಭಾಷ್ಯ ಟೀಕಾಭಾವದೀಪದಲ್ಲಿ ಸಮರ್ಥಿಸಿದ್ದೇವೆ.

## ಭಾವದೀಪದಲ್ಲಿ ಸ್ಮರಣಾತ್ಮಕಜ್ಞಾನ ನಿರೂಪಣೆ

ಭಾವದೀಪದಲ್ಲಿ ಸಾಕ್ಷ್ಯನುಭವವಿಷಯವಾದ ವಸ್ತುವಿನ ಸ್ಮರಣೆಯನ್ನು ಮತಭೇದೇನ ಮೂರು ರೀತಿಯಲ್ಲಿ ಸಮರ್ಥನೆ ಮಾಡಲಾಗಿದೆ.

1. ಸಾಕ್ಷಿಜ್ಞಾನವು (ಸುಷುಪ್ತಿಯ ಸುಖಾನುಭವ) ನಿತ್ಯವಾದರೂ ಅತೀತ ಸುಷುಪ್ತಿಕಾಲ ವಿಷಯಕವಾದುದರಿಂದ ಎದ್ದಮೇಲೆ ಬರುವ 'ಸುಖಮಹಂ ಅಸ್ವಾಪ್ಸಂ' ಎಂಬ ಅನುಭವಾತ್ಮಕ ಜ್ಞಾನವನ್ನೇ ಸ್ಮರಣೆ ಎಂದು ಹೇಳಲಾಗುವುದು. ಛಾಂದೋಗ್ಯೋಪನಿಷತ್ತಿನಲ್ಲಿ ಮುಕ್ತರ ಸ್ವರೂಪಭೂತಜ್ಞಾನವನ್ನೂ, ಇದೇ ಪ್ರಕಾರವನ್ನು ಅನುಸರಿಸಿ, ಸ್ಮರಣೆ ಎಂದು ಹೇಳಲಾಗಿದೆ–

ಆಜನ್ಮಮರಣಂ ಸ್ಮೃತ್ವಾ ಮುಕ್ತಾ ಹರ್ಷಮವಾಪ್ನುಯುಃ ।

ಮನೋಜನ್ಯವಾದ ಜ್ಞಾನ ಅನಿತ್ಯವಾದುದರಿಂದ ಅದರಿಂದ ಜನ್ಯವಾದ ಸಂಸ್ಕಾರದಿಂದ ಮಾನಸಸ್ಮರಣೆ ಬರಬಹುದು. ಆತ್ಮರೂಪವಾದ ಜ್ಞಾನವು ನಿತ್ಯವಾದುದರಿಂದ ಸ್ಮೃತಿಬರಲು ಸಾಧ್ಯವಿಲ್ಲ.

2. ಇನ್ನು ಕೆಲವರು ಹೀಗೆ ಹೇಳುತ್ತಾರೆ–ಸಾಕ್ಷ್ಯನುಭವದಿಂದ ಸಂಸ್ಕಾರ ಹುಟ್ಟಿ ಆ ಸಂಸ್ಕಾರ ದಿಂದ ನಿತ್ಯಸಾಕ್ಷಿಜ್ಞಾನವು ವ್ಯಕ್ತವಾಗುತ್ತದೆ. ಇದೇ ಸ್ಮರಣೆ, ಎಂದು.

3. ಮತ್ತೆ ಕೆಲವರು–ಸಂಸಾರಾವಸ್ಥೆಯಲ್ಲಿ ಸ್ವರೂಪೇಂದ್ರಿಯ ಮಿಶ್ರವಾದ ಜಡವಾದ ಮನೋ ಇಂದ್ರಿಯವೇ ಸ್ವರೂಪೇಂದ್ರಿಯದಲ್ಲಿ ಹುಟ್ಟಿದ ಸಂಸ್ಕಾರದ ಸಹಾಯದಿಂದ ಸ್ಮರಣೆಯನ್ನು ಹುಟ್ಟಿಸುತ್ತದೆ. ಇದು ಮಾನಸಸ್ಮರಣೆ, ಎಂದು.

**एतदप्युक्तम् ''अन्यथा'' इत्यादिना । प्रामाण्यनिश्चयस्याप्रवर्तकत्वे व्याप्त्यादिनिश्चयोऽनुमित्यादिहेतुरिति व्यवस्थायोगादित्यर्थः ।।**

ಈ ಪ್ರಕರಣದಲ್ಲಿ ಹೇಳಿದ ವಿಷಯವೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯದ ಅಭಿಪ್ರಾಯವೇ ಆಗಿದೆ.

ಅನ್ಯಥಾ=ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರಣವಲ್ಲ, ಅಪ್ರಾಮಾಣ್ಯ ಸಂದೇಹರೂಪವಾದ ಪ್ರತಿಬಂಧ ನಿರಾಸಕ ಎಂದಾದಲ್ಲಿ ಅನವಸ್ಥಾನಾತ್=ವ್ಯಾಪ್ತಿನಿಶ್ಚಯವೂ ಅನುಮಿತಿಹೇತು ಎಂಬ ವ್ಯವಸ್ಥೆಯು ಭಗ್ನವಾದೀತು. ಅದೂ ವ್ಯಭಿಚಾರ ಜ್ಞಾನರೂಪ ಪ್ರತಿಬಂಧ ನಿರಾಸದಲ್ಲೇ ಉಪಕ್ಷೀಣ, ಎನ್ನಬೇಕಾದೀತು.

## ನ್ಯಾಯದೀಪ

**ಏತದಪೀತಿ ॥ ಪ್ರಾಮಾಣ್ಯನಿಶ್ಚಯಸ್ಯ ಅಪ್ರವರ್ತಕತ್ವೇ ಅತಿಪ್ರಸಂಗಃ ಇತ್ಯೇತದಪೀತ್ಯರ್ಥಃ ।**

ಏತದಪಿ ಎಂದರೆ ಪ್ರಾಮಾಣ್ಯನಿಶ್ಚಯವು ಪ್ರವರ್ತವಲ್ಲ ಎಂದು ಹೇಳಿದಾಗ ಈ ಪ್ರಕರಣದಲ್ಲಿ ತೋರಿಸಿರುವ ಅತಿಪ್ರಸಂಗ, ಎಂದರ್ಥ.

**ಇಲ್ಲಿಗೆ ಪ್ರಾಮಾಣ್ಯನಿಶ್ಚಯಸ್ಯ ಪ್ರವರ್ತಕತ್ವ ಪ್ರಕರಣ ಮುಗಿಯಿತು. ॥ ೬ ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಹಿಂದೆ ಹೇಳಿರುವ ಸ್ವತಸ್ತ್ವಸಾಧಕವಾದ ಅನುಮಾನಗಳಲ್ಲಿ ಅಪ್ರಯೋಜಕತಾಶಂಕೆಯನ್ನು ಬಾಧಕವನ್ನು ಹೇಳಿ ನಿವಾರಣೆ ಮಾಡಲಾಗಿದೆ. ಪ್ರಾಮಾಣ್ಯ ಸ್ವತಸ್ತ್ವವನ್ನು ಒಪ್ಪದಿದ್ದಲ್ಲಿ ಅನವಸ್ಥಾದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಪ್ರಾಮಾಣ್ಯ ಸ್ವತಸ್ತ್ವವನ್ನು ಅಂಗೀಕರಿಸಬೇಕು, ಇದೇ ಬಾಧಕ ತರ್ಕ.

ಪ್ರಾಮಾಣ್ಯವು ಸಫಲಪ್ರವೃತ್ತಿಜನಕತ್ವರೂಪವಾದ ಅನುಮಾನದಿಂದಲೇ ವೇದ್ಯ, ಎಂಬ ಪರತಸ್ತ್ವಪಕ್ಷದಲ್ಲಿ ಎರಡು ರೀತಿಯ ಅನವಸ್ಥಾ ಇದೆ–

1.ಫಲಮುಖೀ ಅನವಸ್ಥಾ 2.ಕಾರಣಮುಖೀ ಅನವಸ್ಥಾ. ಫಲ ಎಂದರೆ ಪ್ರಾಮಾಣ್ಯಜ್ಞಾನ. ಪ್ರಾಮಾಣ್ಯಜ್ಞಾನ ಹೇತುಕವಾದ ಅನವಸ್ಥಾ ಫಲಮುಖೀ ಅನವಸ್ಥಾ. ಜಲಜ್ಞಾನದಲ್ಲಿ ಪ್ರಾಮಾಣ್ಯವು ಅನುಮಿತಿಯಿಂದ ತಿಳಿಯುತ್ತದೆ. ಅನುಮಿತಿ ಪ್ರಾಮಾಣ್ಯವು ಅನುಮಿತ್ಯಂತರದಿಂದ. ಹೀಗೆ ಫಲಮುಖೀ ಅನವಸ್ಥಾ.

ಕಾರಣ ಎಂದರೆ ಅನುಮಿತಿಗೆ ಕಾರಣವಾದ ಪಕ್ಷಧರ್ಮತಾಜ್ಞಾನ ಮತ್ತು ವ್ಯಾಪ್ತಿಜ್ಞಾನ. ಅವೆರಡರಲ್ಲೂ ಪ್ರಾಮಾಣ್ಯಜ್ಞಾನವಿದ್ದರೆ ಮಾತ್ರ ಅನುಮಿತಿ ಬರುತ್ತದೆ. ಅವುಗಳಲ್ಲಿ ಪ್ರಾಮಾಣ್ಯ ಜ್ಞಾನಕ್ಕಾಗಿ ಇನ್ನೊಂದು ಅನುಮಾನ ಮಾಡಬೇಕು. ಅಲ್ಲಿ ಮತ್ತೆ ಪಕ್ಷಧರ್ಮತಾಜ್ಞಾನಾದಿಗಳಲ್ಲಿ ಪ್ರಾಮಾಣ್ಯಜ್ಞಾನಕ್ಕಾಗಿ ಮತ್ತೊಂದು ಅನುಮಾನ. ಹೀಗೆ ಕಾರಣಮುಖೀ ಅನವಸ್ಥಾ.

ನೈಯಾಯಿಕರು ಅನವಸ್ಥಾದೋಷವನ್ನು ಹೀಗೆ ಪರಿಹಾರ ಮಾಡುತ್ತಾರೆ– ಪ್ರಾಮಾಣ್ಯ ಜ್ಞಾನವು ಸರ್ವತ್ರ ಅವಶ್ಯವೇದ್ಯವಾದರೆ ಮಾತ್ರ ಅನವಸ್ಥಾದ್ವಯಗಳು ಬರುತ್ತವೆ. ಆದರೆ, ನೈಯಾಯಿಕರು ಪ್ರಾಮಾಣ್ಯವೂ ಅದಕ್ಕೆ ಆಶ್ರಯವಾದ ಜ್ಞಾನವೂ ಅವಶ್ಯವೇದ್ಯವಲ್ಲ, ನಿಷ್ಕಂಪಪ್ರವೃತ್ತಿಯಾಗಬೇಕಾದರೆ ಅರ್ಥನಿಶ್ಚಯವು ಅಗತ್ಯ. ಅಲ್ಲಿ ನೀರು ಇದ್ದೇ ಇದೆ, ಎಂದು ನಿರ್ಧಾರವಾದರೆ ನಿಷ್ಕಂಪಪ್ರವೃತ್ತಿಯಾಗುತ್ತದೆ. ಅಂದರೆ, ಕೆರೆಯ ಕಟ್ಟೆಯಮೇಲೆ, ಬೆಳಗಿನ ಹೊತ್ತಿನಲ್ಲಿ ನಿಂತಿರುವಾಗ 'ಇಲ್ಲಿ ನೀರಿದೆ' ಎಂದು ಜ್ಞಾನ ಬಂದರೆ ನಿಷ್ಕಂಪಪ್ರವೃತ್ತಿಯಾಗುತ್ತದೆ. ಮಬ್ಬು ಬೆಳಕಿನಲ್ಲಿ, ಅಥವಾ ಉರಿಬಿಸಿಲಿನಲ್ಲಿ ದೂರದಿಂದ ನೀರಿನ ಜ್ಞಾನ ಬಂದರೆ ಬಂದ ಜ್ಞಾನವು ಪ್ರಮೆಯೋ, ಭ್ರಮೆಯೋ ಎಂದು ಸಂದೇಹ ಬರುತ್ತದೆ. ಇಂತಹ ಸಂದರ್ಭದಲ್ಲಿ ಮಾತ್ರ ಪ್ರವರ್ತಕ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವು ಬೇಕಾಗುತ್ತದೆ. ಹೀಗೆ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣವಲ್ಲ, ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣ. ಅರ್ಥನಿಶ್ಚಯದಲ್ಲಿ ಬರುವ ಅಪ್ರಾಮಾಣ್ಯ ನಿಶ್ಚಯ ಅಥವಾ ಸಂದೇಹಗಳು ಪ್ರವೃತ್ತಿ ಪ್ರತಿಬಂಧಕಗಳು. ಈ ಪ್ರತಿಬಂಧಕ ನಿರಾಸಕ್ಕಾಗಿ ಪ್ರಾಮಾಣ್ಯ ನಿಶ್ಚಯವು ಕೆಲವೊಮ್ಮೆ ಬೇಕಾಗುತ್ತದೆ. ಹೀಗೆ ಹೇಳಿದಾಗ ಪೂರ್ವೋಕ್ತವಾದ ಫಲಮುಖೀ ಅನವಸ್ಥಾ ಇಲ್ಲ. ಜಲಜ್ಞಾನದಲ್ಲಿ ಅನುಮಿತಿಯಿಂದ ಪ್ರಾಮಾಣ್ಯ ನಿಶ್ಚಯವಾಗುತ್ತದೆ.

ಅನುಮಿತಿಯಲ್ಲಿ ಅಪ್ರಾಮಾಣ್ಯಸಂದೇಹಾದಿಗಳು ಇಲ್ಲದಿರುವಾಗ ಅದರ ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲ. ಆದ್ದರಿಂದ ಮೊದಲ ಅನವಸ್ಥಾ ದೋಷವಿಲ್ಲ. ಹೀಗೆಯೇ ಹೇತುಜ್ಞಾನಾದಿಗಳಲ್ಲೂ ಪ್ರಾಮಾಣ್ಯನಿಶ್ಚಯವು ಬೇಕಾಗಿಲ್ಲವಾದ ಕಾರಣ ಎರಡನೆಯ ಅನವಸ್ಥಾದೋಷವೂ ಇಲ್ಲ.

ಪರತಸ್ತ್ವವಾದಿಗಳ ಈ ವಾದದ ನಿರಾಸಕ್ಕಾಗಿ ಈ ಪ್ರಕರಣದಲ್ಲಿ ಅರ್ಥನಿಶ್ಚಯವು ಪ್ರವರ್ತಕವಲ್ಲ, ಪ್ರಾಮಾಣ್ಯನಿಶ್ಚಯವೇ ಪ್ರವರ್ತಕ, ಎಂದು ಸಾಧಿಸಲಾಗಿದೆ. ಅದನ್ನು ಸಾಧಿಸಲು, ತರ್ಕತಾಂಡವದಲ್ಲಿ 'ಪೀತಃ ಶಂಖಃ'' ಎಂಬ ಭ್ರಮೆಯನ್ನು ಉಲ್ಲೇಖಿಸಲಾಗಿದೆ. ಈ ಭ್ರಮೆ ನಿಶ್ಚಯಾತ್ಮಕವಾಗಿದೆ. ಆದರೂ ಈ ಪೀತರೂಪನಿಶ್ಚಯದಿಂದ ಪೀತಾರ್ಥಿಗೆ ಪ್ರವೃತ್ತಿಯಾಗುವುದಿಲ್ಲ. ಏಕೆ? ಆ ನಿಶ್ಚಯವು ಭ್ರಮೆ ಎಂಬ ನಿಶ್ಚಯವಿದೆ. ಅದರಲ್ಲಿ ಪ್ರಮಾತ್ವನಿಶ್ಚಯವು ಇಲ್ಲದಿರುವುದರಿಂದ ಪ್ರವೃತ್ತಿಯಾಗುವುದಿಲ್ಲ. ಇದೇ ಕಾರಣವನ್ನು ಹೇಳಬೇಕು. ಹೀಗೆ ಹೇಳಿದಾಗ ಪ್ರಮಾತ್ವನಿಶ್ಚಯವೇ ಪ್ರವೃತ್ತಿಕಾರಣ, ಎಂದು ಒಪ್ಪಿದಂತಾಗುತ್ತದೆ.

ಇದರ ಬಗ್ಗೆ ಪರತಸ್ತ್ವವಾದಿಗಳ ಆಕ್ಷೇಪವಿದೆ–ಪ್ರವೃತ್ತಿಗೆ ಅಪ್ರಾಮಾಣ್ಯಜ್ಞಾನಾನಾಸ್ಕಂದಿತವಾದ ಅರ್ಥನಿಶ್ಚಯವು ಕಾರಣ. 'ಪೀತಃ ಶಂಖಃ' ಎಂಬ ನಿಶ್ಚಯವು ಅಪ್ರಾಮಾಣ್ಯ ಜ್ಞಾನದಿಂದ ಆಸ್ಕಂದಿತವಾಗಿದೆ. ಆದ್ದರಿಂದ, ಆ ಜ್ಞಾನವು ಪೀತಾರ್ಥಿಪ್ರವೃತ್ತಿಗೆ ಕಾರಣವಾಗುವುದಿಲ್ಲ. ಯಾವ ಜ್ಞಾನದಲ್ಲಿ ಅಪ್ರಾಮಾಣ್ಯಜ್ಞಾನವಾಗಲೀ, ಪ್ರಾಮಾಣ್ಯನಿಶ್ಚಯವಾಗಲೀ ಇರುವುದಿಲ್ಲವೋ ಅಂತಹ ಅರ್ಥನಿಶ್ಚಯದಿಂದಲೂ ಪ್ರವೃತ್ತಿಯಾಗುತ್ತದೆ. ಆ ನಿಶ್ಚಯದಲ್ಲಿ ಪ್ರಾಮಾಣ್ಯಜ್ಞಾನವು ಇರಲೇಬೇಕೆಂಬ ನಿರ್ಬಂಧವೇನಿಲ್ಲ. ಹೀಗೆ, ಪ್ರಾಮಾಣ್ಯನಿಶ್ಚಯವು ಅನಿಯತವಾದುದರಿಂದ ಅದು ಪ್ರವೃತ್ತಿಗೆ ಕಾರಣವೇ ಅಲ್ಲ.

ಈ ಆಕ್ಷೇಪಕ್ಕೆ ನಾಲ್ಕು ರೀತಿಯಲ್ಲಿ ಉತ್ತರವನ್ನು ತರ್ಕತಾಂಡವದಲ್ಲಿ ಕೊಟ್ಟಿದ್ದಾರೆ. ಅದನ್ನು ರಾಯರು ಕಲ್ಪಭೇದೇನ ವ್ಯವಸ್ಥೆ ಮಾಡಿದ್ದಾರೆ.

1.ಪ್ರವರ್ತಕವಾದ ಅರ್ಥನಿಶ್ಚಯಕ್ಕೆ ಅಪ್ರಾಮಾಣ್ಯಜ್ಞಾನಾಭಾವವು ಸಹಕಾರಿ. ಅಂತಹ ಸಹಕಾರಿಯು 'ಪೀತಃ ಶಂಖಃ' ಎಂಬ ನಿಶ್ಚಯದ ಜೊತೆಯಲ್ಲಿ ಇಲ್ಲದಿರುವುದರಿಂದ ಪ್ರವೃತ್ತಿಯಾಗುವುದಿಲ್ಲ, ಎನ್ನುವ ಸಮಾಧಾನವು ಮೊದಲನೆಯದು. ಇದು ಯುಕ್ತವಲ್ಲ. ಏಕೆಂದರೆ, ಪರತಸ್ತ್ವಮತದಲ್ಲಿ ಅಪ್ರಾಮಾಣ್ಯವೂ ಅನುಮೇಯ. ಅಪ್ರಾಮಾಣ್ಯದ ಅನುಮಿತಿ ಬರಬೇಕಾದರೆ ಮೊದಲು ಪಕ್ಷಧರ್ಮತಾಜ್ಞಾನ ಆಮೇಲೆ ವ್ಯಾಪ್ತಿಜ್ಞಾನಗಳು ಬರಬೇಕು. 'ಪೀತಃ ಶಂಖಃ' ಎಂಬ ಅರ್ಥನಿಶ್ಚಯಕ್ಕೂ ಅಪ್ರಾಮಾಣ್ಯಾನುಮಿತಿಗೂ ಕಾಲವ್ಯವಧಾನ ಇದೆ. ಹೀಗಾಗಿ, ಕೆಲವು ಕ್ಷಣಗಳವರೆಗೆ ಅಪ್ರಾಮಾಣ್ಯಜ್ಞಾನ–ಅನಾಸ್ಕಂದಿತವಾದ ಅರ್ಥನಿಶ್ಚಯವು ಇರುವುದರಿಂದ ಪರತಸ್ತ್ವಮತದಲ್ಲಿ ಪ್ರವೃತ್ತಿಯಾಗಬೇಕಾದೀತು. ಇದಕ್ಕೆ ಇಷ್ಟಾಪತ್ತಿಯ ಸಮಾಧಾನವನ್ನು ಕೊಟ್ಟರೂ ಇನ್ನೊಂದು ದೋಷವಿದೆ. ಅಪ್ರಾಮಾಣ್ಯಜ್ಞಾನವು ಪ್ರವೃತ್ತಿಗೆ ಪ್ರತಿಬಂಧಕ, ನಿವೃತ್ತಿಗೆ ಕಾರಣ.

ಆದ್ದರಿಂದ ತದಭಾವವು ಪ್ರವೃತ್ತಿಗೆ ಕಾರಣವಾಗುವುದಾದಲ್ಲಿ 'ಇದಂ ರಜತಂ' ಇತ್ಯಾದಿ ಭ್ರಮೆಯಲ್ಲಿ ಪ್ರಾಮಾಣ್ಯನಿಶ್ಚಯವು ಇದ್ದರೆ ನಿವೃತ್ತಿಯಾಗುವುದಿಲ್ಲ. ಪ್ರವೃತ್ತಿಯಾಗುತ್ತದೆ. ಆದ್ದರಿಂದ, ತುಲ್ಯನ್ಯಾಯೇನ ಪ್ರಾಮಾಣ್ಯನಿಶ್ಚಯಾಭಾವವು ನಿವೃತ್ತಿಕಾರಣವಾಗಬೇಕಾದೀತು.

ಇದಕ್ಕೂ ಸಮಾಧಾನವನ್ನು ಹೇಳಬಹುದು. ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಗೆ ಕಾರಣ ಎಂದು ಇನ್ನೂ ನಿರ್ಧಾರವಾಗಿಲ್ಲ. ಆದ್ದರಿಂದ, ತದಭಾವವು ನಿವೃತ್ತಿಕಾರಣ, ಎಂದು ಆಪಾದನೆ ಮಾಡುವುದು ಉಚಿತವಲ್ಲ, ಎಂದು. ಅದಕ್ಕಾಗಿ ಇನ್ನೊಂದು ದೋಷವನ್ನು ಹೇಳಲಾಗಿದೆ. ಅಪ್ರಾಮಾಣ್ಯ ಎಂದರೆ, ತದಭಾವವತಿ ತತ್ಪ್ರಕಾರಕತ್ವ. ಇದರ ಅಭಾವ ಕಾರಣ ಎನ್ನುವುದಕ್ಕಿಂತಲೂ ತದ್ವತಿ ತತ್ಪ್ರಕಾರಕತ್ವರೂಪವಾದ ಪ್ರಾಮಾಣ್ಯನಿಶ್ಚಯವು ಕಾರಣ ಎಂದು ಹೇಳುವುದು ಲಾಘವ. ಹಾಗಿದ್ದರೂ, ಅಪ್ರಾಮಾಣ್ಯಜ್ಞಾನಾಭಾವವೇ ಪ್ರವೃತ್ತಿಕಾರಣ ಎಂದು ಆಗ್ರಹಮಾಡುವುದಾದಲ್ಲಿ ಸರ್ವಾಂಗೀಕೃತ ಸೈದ್ಧಾಂತಿಕ ವ್ಯವಸ್ಥೆಯೇ ಕುಸಿದು ಹೋದೀತು. ಅನುಮಿತಿಗೆ ವ್ಯಾಪ್ತಿಜ್ಞಾನವು ಕಾರಣ. ವ್ಯಾಪ್ತಿಜ್ಞಾನಕ್ಕೆ ಸಹಚಾರ ಜ್ಞಾನವು ಕಾರಣ. ವ್ಯಾಪ್ತಿಜ್ಞಾನ ಇದ್ದಾಗ ವ್ಯಭಿಚಾರ ಜ್ಞಾನಾಭಾವವು ಇರುತ್ತದೆ. ಇದು ಸರ್ವಸಮ್ಮತ ಸಿದ್ಧಾಂತ. ಪ್ರಕೃತ ಅಪ್ರಾಮಾಣ್ಯಜ್ಞಾನಾಭಾವವೇ ಪ್ರವೃತ್ತಿಕಾರಣವಾದರೆ ಸಹಚಾರ ಜ್ಞಾನ ಇರುವ ವ್ಯಕ್ತಿಗೆ ವ್ಯಭಿಚಾರ ಜ್ಞಾನಾಭಾವ ಇದ್ದರೆ ಸಾಕು, ಅನುಮಿತಿ ಬರುತ್ತದೆ. ವ್ಯಾಪ್ತಿಜ್ಞಾನದ ಅಗತ್ಯವೇ ಇಲ್ಲ, ಎನ್ನಬೇಕಾದೀತು. ಇಂತಹ ನಾಲ್ಕು ವಿಧದ ಅನಿಷ್ಟಾಪಾದನೆಗಳನ್ನು ತರ್ಕತಾಂಡವದಲ್ಲಿ ಮಾಡಿ ಪ್ರಾಮಾಣ್ಯನಿಶ್ಚಯಕ್ಕೆ ಪ್ರವೃತ್ತಿಹೇತುತ್ವವನ್ನು ಸಮರ್ಥನೆ ಮಾಡಲಾಗಿದೆ.

2. ಪರತಸ್ತ್ವವಾದಿಗಳು ಹೇಳಬಹುದಾದ ಇನ್ನೊಂದು ಸಮಾಧಾನ–ದಂಡಗತದಾರ್ಢ್ಯವು ಘಟಕಾರಣತಾವಚ್ಛೇದಕವಾದಂತೆ ಅಪ್ರಾಮಾಣ್ಯಜ್ಞಾನಾಭಾವವು ಪ್ರವರ್ತಕತಾವಚ್ಛೇದಕ ಎಂದು. ಇದೂ ಗೌರವ. ಅಗೃಹೀತಾಪ್ರಾಮಾಣ್ಯಕ–ಅರ್ಥನಿಶ್ಚಯವು ಪ್ರವರ್ತಕ ಎನ್ನುವುದಕ್ಕಿಂತ ಗೃಹೀತ ಪ್ರಾಮಾಣ್ಯಕ–ಅರ್ಥನಿಶ್ಚಯವು ಪ್ರವರ್ತಕ ಎಂದು ಹೇಳುವುದು ಲಾಘವ. ಇಲ್ಲದಿದ್ದರೆ, ಅನುಮಿತಿಗೆ ಸಹಚಾರ ಜ್ಞಾನವೇ ಹೇತು, ಆ ಜ್ಞಾನವು ವ್ಯಭಿಚಾರಜ್ಞಾನಾಭಾವ ಸಹಿತವಾಗಿರಬೇಕು ಎಂದೇ ಹೇಳಬಹುದಾದ್ದರಿಂದ ವ್ಯಾಪ್ತಿಜ್ಞಾನಕ್ಕೂ ಅನುಮಿತಿ ಕಾರಣತ್ವವು ಭಗ್ನವಾಗಬೇಕಾದೀತು.

3. ಇನ್ನೊಂದು ಪರಿಹಾರ–ಅರ್ಥನಿಶ್ಚಯವೇ ಪ್ರವರ್ತಕ. ಅದರಲ್ಲಿ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿ ಪ್ರತಿಬಂಧಕ. 'ಪೀತಃ ಶಂಖಃ' ಎಂಬ ಜ್ಞಾನದಲ್ಲಿ ಅಪ್ರಾಮಾಣ್ಯನಿಶ್ಚಯವು ಇರುವುದರಿಂದ ಪ್ರವೃತ್ತಿಯಾಗುವುದಿಲ್ಲ, ಎಂದು. ಆದರೆ, ಇದೂ ಸರಿಯಲ್ಲ. ಒಂದು ಜ್ಞಾನವು ವಿರೋಧಿ ವಿಷಯಕವಲ್ಲದ ಮತ್ತೊಂದಕ್ಕೆ ಪ್ರತಿಬಂಧಕವಾಗಬೇಕಾದರೆ ಜನಕಜ್ಞಾನಕ್ಕೆ ವಿಘಟಕವಾಗಬೇಕು. ಉದಾಹರಣೆಗೆ– ವ್ಯಭಿಚಾರ ಜ್ಞಾನವು ಅನುಮಿತಿ ಜನಕವಾದ ವ್ಯಾಪ್ತಿಜ್ಞಾನಕ್ಕೆ ವಿಘಟಕವಾಗುವ

ಮೂಲಕ ಅನುಮಿತಿ ಪ್ರತಿಬಂಧಕವಾಗುತ್ತದೆ. ಅದರಂತೆ, ಪ್ರಕೃತದಲ್ಲಿ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿ ಕಾರಣವಾದ ಪ್ರಾಮಾಣ್ಯನಿಶ್ಚಯಕ್ಕೆ ವಿಘಟಕವಾಗಿ ಪ್ರವೃತ್ತಿಗೆ ಪ್ರತಿಬಂಧಕವಾಗಬೇಕು. ಹೀಗಾಗಬೇಕಾದರೆ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರಣ ಎಂದು ಹೇಳಲೇಬೇಕಾಗುತ್ತದೆ.

4. ಹೀಗೂ ಒಂದು ಪರಿಹಾರವನ್ನು ಪರತಸ್ತ್ವವಾದಿಗಳು ಹೇಳಬಹುದು–ಉಪಾಧಿ ದೋಷವು ವ್ಯಾಪ್ತಿಜ್ಞಾನಕ್ಕೆ ಸಾಕ್ಷಾತ್ ಪ್ರತಿಬಂಧಕವಲ್ಲದಿದ್ದರೂ ವ್ಯಭಿಚಾರಜ್ಞಾನರೂಪವಾದ ಪ್ರತಿ ಬಂಧಕಾಂತರ ಸಂಪಾದಕವಾಗಿ ವ್ಯಾಪ್ತಿಜ್ಞಾನ ಪ್ರತಿಬಂಧಕವೆನಿಸುತ್ತದೆ. ಅದರಂತೆ, ಜಲಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹಾದಿಗಳು ಬಂದರೆ ಜಲದ ಬಗ್ಗೆ ಸಂದೇಹ ಬರುತ್ತದೆ. ಹೀಗೆ ಅರ್ಥಸಂದೇಹ ರೂಪವಾದ ಪ್ರತಿಬಂಧಕಾಂತರ ಸಂಪಾದಕವಾಗಿ ಅಪ್ರಾಮಾಣ್ಯಸಂದೇಹವು ನಿಷ್ಕಂಪ ಪ್ರವೃತ್ತಿಗೆ ಪ್ರತಿಬಂಧಕವಾಗುತ್ತದೆ, ಎಂದು. ಆದರೆ, ಇದೂ ಸರಿಯಲ್ಲ. ಹೀಗೆ ಹೇಳುವುದು ಅನುಭವವಿರುದ್ಧ. ಅಪ್ರಾಮಾಣ್ಯಜ್ಞಾನವಿದ್ದರೂ 'ಪೀತಃ ಶಂಖಃ' ಎಂಬ ಅರ್ಥನಿಶ್ಚಯಕ್ಕೇನೂ ಚ್ಯುತಿಯಾಗಿಲ್ಲ. ಆದ್ದರಿಂದ ಅಪ್ರಾಮಾಣ್ಯಜ್ಞಾನವು ಅರ್ಥಸಂದೇಹಕ್ಕೆ ಕಾರಣವಾಗುತ್ತದೆ, ಎನ್ನುವ ವಾದವೇ ಯುಕ್ತವಲ್ಲ.

ಹೀಗೆ ಯಾವ ರೀತಿಯಿಂದಲೂ ಅಪ್ರಾಮಾಣ್ಯಜ್ಞಾನಾಭಾವಕ್ಕೆ ಪ್ರವೃತ್ತಿಕಾರಣತ್ವವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಪರಿಶೇಷಾತ್ ಪ್ರಾಮಾಣ್ಯಜ್ಞಾನವು ಪ್ರವೃತ್ತಿಕಾರಣ, ತದ್ವಿಘಟಕತ್ವೇನೈವ ಅಪ್ರಾಮಾಣ್ಯಜ್ಞಾನಕ್ಕೆ ಪ್ರತಿಬಂಧಕತ್ವವನ್ನು ಹೇಳಬೇಕು.

ಅಥವಾ, ಹೀಗೂ ಪ್ರಾಮಾಣ್ಯನಿಶ್ಚಯಕ್ಕೆ ಪ್ರವೃತ್ತಿಹೇತುತ್ವವನ್ನು ಸಾಧಿಸಬಹುದು. ಅರ್ಥನಿಶ್ಚಯವಿದ್ದಲ್ಲಿ ಆ ಅರ್ಥನಿಶ್ಚಯವು ಅಪ್ರಮಾಣ ಎಂದು ತಿಳಿದಾಗ ಪ್ರವೃತ್ತಿಯಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರವೃತ್ತಿಯಾಗಬೇಕಾದರೆ ಪ್ರಾಮಾಣ್ಯನಿಶ್ಚಯವು ಅನಿವಾರ್ಯ ಎನ್ನುವುದು ಉಭಯ ಸಮ್ಮತ. ಅಲ್ಲಿ ಪ್ರಾಮಾಣ್ಯನಿಶ್ಚಯದ ಕಾರ್ಯ ನಿಷ್ಕಂಪಪ್ರವೃತ್ತಿ ಎಂದು ಸಿದ್ಧವಾದ ಮೇಲೆ ಸರ್ವತ್ರ ಪ್ರವೃತ್ತಿಗೂ ಪ್ರಾಮಾಣ್ಯನಿಶ್ಚಯವೇ ಕಾರಣ, ಎಂದು ನಿರ್ಣಯವಾಗುತ್ತದೆ.

ಪ್ರಾಮಾಣ್ಯಪರತಸ್ತ್ವವಾದದಲ್ಲಿ ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲದಾದೀತು, ಎಂಬ ಆಪಾದನೆಯನ್ನೂ ತರ್ಕತಾಂಡವದಲ್ಲಿ ಮಾಡಲಾಗಿದೆ. ನ್ಯಾಯಮತದಲ್ಲಿ ಪ್ರಾಮಾಣ್ಯಜ್ಞಾನವು ಅನುಮಿತ್ಯಾತ್ಮಕ. 'ಇದಂ ಜ್ಞಾನಂ ಪ್ರಮಾಣಮ್' ಎಂದು ಅನುಮಿತಿ ಬರಬೇಕಾದರೆ 'ಪ್ರಾಮಾಣ್ಯವ್ಯಾಪ್ಯ ಸಫಲಪ್ರವೃತ್ತಿ ಜನಕಮ್ ಇದಂ ಜ್ಞಾನಮ್' ಎಂಬ ಪರಾಮರ್ಶ ಬರಲೇಬೇಕು. ಆ ಪರಾಮರ್ಶವೇ ತದಭಾವ ವ್ಯಾಪ್ಯವತ್ತಾ ಮುದ್ರಯಾ ಅಪ್ರಾಮಾಣ್ಯಜ್ಞಾನಕ್ಕೆ ಪ್ರತಿಬಂಧಕ. ಅದರಿಂದಲೇ ಪ್ರವೃತ್ತಿ ಪ್ರತಿಬಂಧಕವಾದ ಅಪ್ರಾಮಾಣ್ಯಜ್ಞಾನದ ನಾಶವು ಆಗಿರುವುದರಿಂದ ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲ. ಆದ್ದರಿಂದ ಅದು ಎಲ್ಲಿಯೂ ಪ್ರವೃತ್ತಿಪೂರ್ವವೃತ್ತಿ ಆಗಲಿಕ್ಕಿಲ್ಲ.

ಹೀಗೆ ನಿಷ್ಕಂಪ ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವು ಕಾರಣ. ಬಹುವಿತ್ತವ್ಯಯ-ಆಯಾಸ ಸಾಧ್ಯವಾದ ಯಜ್ಞ-ಯಾಗಾದಿಗಳಲ್ಲಿ ಪ್ರವೃತ್ತಿ ಮಾಡಬೇಕಾದರೆ, ಎಲ್ಲಾ ಹಂತಗಳಲ್ಲೂ ಪ್ರಾಮಾಣ್ಯನಿಶ್ಚಯವಾಗಲೇಬೇಕು. ಆದ್ದರಿಂದ ಅವಶ್ಯವೇದ್ಯತ್ವಾಭಾವಾತ್ ನಾನವಸ್ಥಾ, ಎಂದು ಅನವಸ್ಥಾದೋಷವನ್ನು ಪರಿಹಾರ ಮಾಡಲಾಗುವುದಿಲ್ಲ. ಉಭಯವಿಧಾನವಸ್ಥಾ ಇದ್ದೇ ಇದೆ.

ಸ್ವತಸ್ತ್ವಪಕ್ಷದಲ್ಲಿ ಈ ಎರಡೂ ಅನವಸ್ಥಾಗಳೂ ಇಲ್ಲ. ಜ್ಞಾನಗಳ ಪ್ರಾಮಾಣ್ಯವನ್ನು ಸಾಕ್ಷಿಗ್ರಹಿಸುತ್ತದೆ. ಆ ಸಾಕ್ಷಿಯು ಚೈತನ್ಯ ರೂಪವಾದುದರಿಂದ ತನ್ನನ್ನೂ ಸ್ವಗತಪ್ರಾಮಾಣ್ಯವನ್ನೂ ತಾನೇ ಗ್ರಹಿಸುತ್ತದೆ. ತದ್ಗತ ಪ್ರಾಮಾಣ್ಯಗ್ರಾಹಕಾಂತರದ ಅಗತ್ಯವಿಲ್ಲ. ಆದ್ದರಿಂದ ಫಲಮುಖಿಕಾನವಸ್ಥಾವಾಗಲೀ, ಕಾರಣಮುಖಾನವಸ್ಥಾ ಆಗಲೀ ಇಲ್ಲ.

**ಪ್ರಕರಣ ॥ 6 ॥**

# ಪ್ರಕರಣ - 7

## ಪರತಸ್ತ್ವೇ ಅನವಸ್ಥೋಕ್ತಿಃ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಪ್ರಾಮಾಣ್ಯನಿಶ್ಚಯಸ್ಯ ಪ್ರವರ್ತಕತ್ವಸಾಧನೇನ ತನ್ನಿಶ್ಚಯಸ್ಯ ಪರತೋ ಜಾಯಮಾನತ್ವೇ ಅನವಸ್ಥಾದ್ವಯಮ್ ಉಕ್ತ್ವಾ ಅಪ್ರಾಮಾಣ್ಯಶಂಕಾಶೂನ್ಯಸ್ಯ ಅರ್ಥನಿಶ್ಚಯಸ್ಯ ಪ್ರವರ್ತಕತ್ವೇಽಪಿ ತದರ್ಥಮೇವ ಪ್ರಾಮಾಣ್ಯನಿಶ್ಚಯಸ್ಯ ಆವಶ್ಯಕತ್ವಾತ್ ಅನವಸ್ಥಾದ್ವಯಂ ದುರ್ವಾರಮೇವ ಪರತಸ್ತ್ವಪಕ್ಷೇ ಇತ್ಯಾಹ – ಕಿಂಚೇತಿ ॥**

ಹಿಂದಿನ ಪ್ರಕರಣದಲ್ಲಿ ಪ್ರಮಾಣ್ಯನಿಶ್ಚಯವೇ ಪ್ರವರ್ತಕ. ಆ ನಿಶ್ಚಯವು ಪರತಃ ಎಂದು ಹೇಳಿದರೆ ಫಲಮುಖೀ ಅನವಸ್ಥಾ ಹಾಗೂ ಕಾರಣಮುಖೀ ಅನವಸ್ಥಾ ಎಂದು ಅನವಸ್ಥಾದ್ವಯವು ಬರುತ್ತದೆ ಎಂದು ಹೇಳಲಾಗಿದೆ.

ಈ ಪ್ರಕರಣದಲ್ಲಿ ನೈಯಾಯಿಕರು ಹೇಳುವಂತೆ, ಅಪ್ರಾಮಾಣ್ಯ ಸಂದೇಹಾನಾಸ್ಕಂದಿತವಾದ ಅರ್ಥನಿಶ್ಚಯವೇ ಪ್ರವರ್ತಕ ಎಂದು ಒಪ್ಪಿಕೊಂಡರೂ ಈ ಅನವಸ್ಥಾದ್ವಯವು ಅನಿವಾರ್ಯ, ಎಂದು ಹೇಳಲಾಗಿದೆ. ಏಕೆಂದರೆ, ಅಪ್ರಾಮಾಣ್ಯಸಂದೇಹವು ಬಾರದಿರಬೇಕಾದರೆ ಪ್ರಾಮಾಣ್ಯನಿಶ್ಚಯವು ಬೇಕೇ ಬೇಕು.

**ಯದ್ವಾ–ಪ್ರಾಮಾಣ್ಯನಿಶ್ಚಯಸ್ಯ ಪ್ರವರ್ತಕತ್ವೇ, ತಸ್ಯ ಅವಶ್ಯವೇದ್ಯತ್ವೇಽಪಿ ಅಪ್ರಾಮಾಣ್ಯ – ಶಂಕಾಶೂನ್ಯಾರ್ಥನಿಶ್ಚಯಸ್ಯ ಪ್ರವರ್ತಕತ್ವಪಕ್ಷೇ ತದನಾವಶ್ಯಕತ್ವಾತ್ ನಾನವಸ್ಥಾ ಇತ್ಯತ ಆಹ–ಕಿಂಚೇತಿ ॥**

ಅಥವಾ, ಮುಂದಿನ ಪ್ರಕರಣಕ್ಕೆ ಹೀಗೂ ಸಂಗತಿಯನ್ನು ಹೇಳಬಹುದು– ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವು ಕಾರಣ. ಅದು ಅವಶ್ಯವೇದ್ಯ ಎಂದು ಹೇಳಿದರೆ ಅನವಸ್ಥಾದ್ವಯವು ಬರಬಹುದು. ಆದರೆ, ನೈಯಾಯಿಕರು ಅಪ್ರಾಮಾಣ್ಯಶಂಕಾರಹಿತವಾದ ಅರ್ಥನಿಶ್ಚಯವೇ ಪ್ರವರ್ತಕ ಎಂದು ಹೇಳುತ್ತಾರೆ. ಹಾಗೆ ಹೇಳಿದಾಗ ಪ್ರಾಮಾಣ್ಯನಿಶ್ಚಯವು ಅನಿವಾರ್ಯವಲ್ಲವಾದ ಕಾರಣ ಅನವಸ್ಥಾಕ್ಕೆ ಆಸ್ಪದವಿಲ್ಲ, ಎನ್ನುವ ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಮುಂದಿನ ಈ ಪ್ರಕರಣ ಹೊರಟಿದೆ.

**किञ्चाप्रामाण्यशङ्काभावस्य प्रपर्तकत्वेऽपि तदर्थमेव प्रामाण्यनिश्चयो वाच्यः ।**

[1]ವಸ್ತುತಃ ಪ್ರಾಮಾಣ್ಯನಿಶ್ಚಯವೇ ಪ್ರವರ್ತಕ. ನೈಯಾಯಿಕರು ಹೇಳಿದಂತೆ ಅಪ್ರಾಮಾಣ್ಯಸಂದೇಹಾಭಾವವೇ ಪ್ರವರ್ತಕವೆಂದು ಅಂಗೀಕರಿಸಿದರೂ ಆ ಸಂದೇಹಾಭಾವ ಸಿದ್ಧಿಗಾಗಿ ಪ್ರಾಮಾಣ್ಯನಿಶ್ಚಯವನ್ನು ಒಪ್ಪಲೇಬೇಕಾಗುವುದು. ಆಗ ಅನವಸ್ಥಾ ಬಂದೇ ತೀರುತ್ತದೆ.

## ನ್ಯಾಯದೀಪ

**ಪ್ರವರ್ತಕತ್ವೇऽಪೀತಿ ।। ಪ್ರವರ್ತಕ ನಿಶ್ಚಯ ಸಹಕಾರಿತ್ವೇऽಪಿ ಇತ್ಯರ್ಥಃ ।**

**ಯದ್ಯಪಿ ಸಿದ್ಧಾಂತೇ ಪರೀಕ್ಷಯಾ ಅಪ್ರಾಮಾಣ್ಯಶಂಕಾನಿವೃತ್ತಾವೇವ ಸಾಕ್ಷಿಣಾ ಪ್ರಾಮಾಣ್ಯನಿಶ್ಚಯೇನ ಪ್ರಾಮಾಣ್ಯನಿಶ್ಚಯಸ್ಯ ಅಪ್ರಾಮಾಣ್ಯಶಂಕಾಭಾವಾರ್ಥತ್ವಂ ನಾಸ್ತಿ ।**

**''ಸಾ ಚ ಬುದ್ಧಿದೋಷಮಾತ್ರಂ ನಿರಸ್ಯತಿ । ತಸ್ಮಿನ್ನಿರಸ್ತೇ ಸಾಕ್ಷೀ ಸ್ವಮಹಿಮ್ನೈವ ಪ್ರಾಮಾಣ್ಯಂ ಗೋಚರಯತಿ''**

**ಇತಿ ತತ್ವನಿರ್ಣಯಟೀಕಾದ್ಯುಕ್ತೇಃ । ತಥಾಪಿ, ''ಯತ್ರ ಪ್ರಾಮಾಣ್ಯಜ್ಞಾನೇ ಅಪ್ರಾಮಾಣ್ಯಶಂಕಯಾ ಪ್ರಾಮಾಣ್ಯಸಂಶಯಃ ತತ್ರ ಪ್ರಾಮಾಣ್ಯಜ್ಞಾನೇ ಪ್ರಾಮಾಣ್ಯನಿಶ್ಚಯಾದೇವ ಪ್ರಾಮಾಣ್ಯನಿಶ್ಚಯಃ ।।''**

**ಇತಿ ಮಣ್ಯುಕ್ತೇಃ (ಪು.294) ತಂ ಪ್ರತ್ಯೇತದಾಪಾದನಮ್ ಇತ್ಯದೋಷಃ ।।**

ಮೂಲದಲ್ಲಿ 'ಅಪ್ರಾಮಾಣ್ಯಸಂದೇಹಾಭಾವವು ಪ್ರವರ್ತಕ' ಎಂದಿದೆ. ಆದರೆ, ಅದು ಸ್ವತಂತ್ರವಾಗಿ ಪ್ರವರ್ತಕ ಎಂದು ನೈಯಾಯಿಕರು ಒಪ್ಪಿಲ್ಲ. ಅರ್ಥನಿಶ್ಚಯವು ಪ್ರವರ್ತಕ, ಅದಕ್ಕೆ ಸಹಕಾರಿಯಾದುದು ಅಪ್ರಾಮಾಣ್ಯಸಂದೇಹಾಭಾವ, ಎಂದೇ ಅವರ ವಾದ. ಆದ್ದರಿಂದ 'ಪ್ರವರ್ತಕತ್ವೇऽಪಿ' ಎಂಬ ಮೂಲಕ್ಕೆ 'ಪ್ರವರ್ತಕ ಸಹಕಾರಿತ್ವೇऽಪಿ' ಎಂದು ಅಭಿಪ್ರಾಯ.

ದ್ವೈತಸಿದ್ಧಾಂತದಲ್ಲೂ, ಅಪ್ರಾಮಾಣ್ಯಸಂದೇಹವು ಸಾಕ್ಷಿಯಿಂದ ಪ್ರಾಮಾಣ್ಯನಿರ್ಧಾರ ಮಾಡಲು ಪ್ರತಿಬಂಧಕವಾಗಿದೆ. ಅದರ ನಿರಾಸ 'ಪರೀಕ್ಷೆ'ಯಿಂದಾಗುತ್ತದೆ. ಆಮೇಲೆ ಸಾಕ್ಷಿಯಿಂದ ಪ್ರಾಮಾಣ್ಯನಿಶ್ಚಯವಾಗುತ್ತದೆ. ಹೊರತು, ಶಂಕಾನಿವೃತ್ತಿ ಪ್ರಾಮಾಣ್ಯ ನಿಶ್ಚಯದಿಂದ ಅಲ್ಲ. ಇದನ್ನು ತತ್ತ್ವನಿರ್ಣಯ ಟೀಕಾದಿಗಳಲ್ಲಿ ಹೇಳಲಾಗಿದೆ– 'ಪರೀಕ್ಷೆಯು ಬುದ್ಧಿದೋಷವನ್ನಷ್ಟೇ (ಅಪ್ರಾಮಾಣ್ಯಸಂದೇಹವನ್ನು) ದೂರಮಾಡುತ್ತದೆ. ಆ ಬುದ್ಧಿದೋಷವು ನಿರಸ್ತವಾದಾಗ ಸಾಕ್ಷಿಯು ತನ್ನ ಸಹಜ ಸಾಮರ್ಥ್ಯದಿಂದಲೇ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ' ಎಂದು.

---

1. **ವಸ್ತುತಃ ಈ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಏಕೆಂದರೆ, ಹಿಂದಿನ ಪ್ರಕರಣದಲ್ಲಿ ಅರ್ಥನಿಶ್ಚಯವು ಪ್ರವರ್ತಕವಲ್ಲ, ಪ್ರಾಮಾಣ್ಯನಿಶ್ಚಯವೇ ಪ್ರವರ್ತಕ, ಎಂದು ನಿರ್ಣಯಿಸಲಾಗಿದೆ. ಆದ್ದರಿಂದ, ಈ ಎರಡನೆಯ ಅವತಾರಿಕೆ ಅಷ್ಟು ಸಂಗತವಲ್ಲ. ಹೀಗಾಗಿ, ಈ ಎರಡನೆಯ ಅವತರಣಿಕಾ ಭಾಗವನ್ನು ಕೆಲವು ಪ್ರತಿಗಳಲ್ಲಿ ಬ್ರಾಕೇಟನಲ್ಲಿ ಸೇರಿಸಲಾಗಿದೆ.**

ಇದರಿಂದಾಗಿ ತಿಳಿಯಬಹುದಾದ ಅಂಶ–ಅಪ್ರಾಮಾಣ್ಯಸಂದೇಹ ನಿರಾಸಕ್ಕೆ ಪ್ರಾಮಾಣ್ಯ ನಿಶ್ಚಯದ ಅಗತ್ಯವೇನಿಲ್ಲ. ಆದ್ದರಿಂದ ಸಂದೇಹನಿರಾಸಕ್ಕಾಗಿ ಪ್ರಾಮಾಣ್ಯನಿಶ್ಚಯವು ಅನಿವಾರ್ಯ, ಎಂದು ನಿರ್ಬಂಧಿಸುವುದು ಯುಕ್ತವಲ್ಲ. ಆದರೂ, ನೈಯಾಯಿಕರು ಹಾಗೆ ಅಂಗೀಕರಿಸಿದ್ದಾರೆ. ಮಣಿಕಾರನ ಅಭಿಪ್ರಾಯ ಹೀಗಿದೆ– ''ಜಲಜ್ಞಾನ ಬಂದು, ಆ ಜ್ಞಾನದಲ್ಲಿ 'ಇದಂ ಜ್ಞಾನಂ ಪ್ರಮಾಣಮ್' ಎಂದು ಪ್ರಾಮಾಣ್ಯನಿಶ್ಚಯ ಬಂದಾಗ ಆ ಪ್ರಾಮಾಣ್ಯಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬಂದು ಅದರಿಂದ ಜಲಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬಂದರೆ, ಅದರ ನಿರಾಸ 'ಜಲಜ್ಞಾನಂ ಪ್ರಮಾಣಂ ಇತಿ ಜ್ಞಾನಂ ಪ್ರಮಾಣಮ್' ಎಂಬ ಪ್ರಾಮಾಣ್ಯ ನಿಶ್ಚಯದಿಂದ ಆಗುತ್ತದೆ'' ಎಂದು. ಹೀಗೆ ಮಣಿಕಾರನ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ ಪ್ರಾಮಾಣ್ಯನಿಶ್ಚಯದಿಂದ ಅಪ್ರಾಮಾಣ್ಯಸಂದೇಹವು ಪರಿಹಾರವಾಗುತ್ತದೆ, ಎನ್ನಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ತಚ್ಛಂಕಾಭಾವಃ ಪ್ರಾಮಾಣ್ಯನಿಶ್ಚಯರೂಪ–ಪ್ರತಿಬಂಧಾದಿವ ಸ್ವಹೇತ್ವಭಾವಾದಪಿ ಸಂಭವತೀತಿ ಭಾವೇನ–**

**''ಪ್ರಾಮಾಣ್ಯಜ್ಞಾನಸ್ಯ ಜ್ಞಾನಾಭಾವೇನ, ಕೋಟಿಸ್ಮರಣಾಭಾವೇನ, ವಿಷಯಾಂತರ ಸಂಚಾರೇಣ ವಾ ಪ್ರಾಮಾಣ್ಯನಿಶ್ಚಯಾನವಶ್ಯಂಭಾವಾತ್'' (ಮಣಿ 294)**

**ಇತಿ ಮಣ್ಯಾದ್ಯುಕ್ತಮ್ ಆಶಂಕತೇ–ನನ್ವಿತಿ ॥**

ಅಪ್ರಾಮಾಣ್ಯ ಸಂದೇಹಾಭಾವವು ಪ್ರವೃತ್ತಿಕಾರಣವಾದ ಅರ್ಥನಿಶ್ಚಯಕ್ಕೆ ಸಹಕಾರಿ ಎಂದು ಹೇಳುವ ನೈಯಾಯಿಕ ಮತದಲ್ಲೂ ಸಂದೇಹಾಭಾವ ಇರಬೇಕಾದರೆ ಪ್ರಾಮಾಣ್ಯನಿಶ್ಚಯವು ಅನಿವಾರ್ಯ, ಎಂದು ಮೂಲದಲ್ಲಿ ಹೇಳಲಾಗಿದೆ. ಆದರೆ ಸಂದೇಹಾಭಾವಕ್ಕೆ ಪ್ರಾಮಾಣ್ಯನಿಶ್ಚಯದ ಅನಿವಾರ್ಯತೆ ಇಲ್ಲ, ಎಂದಿರುತ್ತಾನೆ ಮಣಿಕಾರ–''ಧರ್ಮಿಜ್ಞಾನ, ಕೋಟಿಸ್ಮರಣೆ ಮತ್ತು ಮನಸ್ಸಿನ ವಿಷಯಾಂತರ ಸಂಚಾರಾಭಾವ ಇವುಗಳು ಸಂದೇಹಕ್ಕೆ ಕಾರಣಗಳು. ಇವುಗಳಲ್ಲಿ ಯಾವುದೇ ಒಂದು ಇಲ್ಲದಿರುವ ಕಾರಣದಿಂದಲೂ ಸಂದೇಹ ಬರದೇ ಇರಬಹುದು. ವಿರೋಧಿಯಾದ ಪ್ರಾಮಾಣ್ಯನಿಶ್ಚಯವೇ ಇರಬೇಕೆಂಬ ಅಗತ್ಯವಿಲ್ಲ'' ಎಂದು. ಮಣಿಕಾರ ಮಾಡಿರುವ ಈ ಆಶಂಕೆಯನ್ನು ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ಮೂಲದಲ್ಲಿ ಕೊಡಲಾಗಿದೆ.

**ननु धर्म्यज्ञानादिनापि शङ्काभावो युक्तः । न हि ज्ञानं ज्ञातं सदेव प्रवर्तकम् । सत्यप्यर्थज्ञाने तदज्ञानेन अप्रवृत्त्यदर्शनादिति चेन्न ।**

ಅಪ್ರಾಮಾಣ್ಯಸಂದೇಹಾಭಾವವು ಧರ್ಮಿಜ್ಞಾನ-ಕೋಟಿಸ್ಮರಣೆಗಳು ಇಲ್ಲದಿರುವ ಕಾರಣದಿಂದಲೂ ಬರಬಹುದು. ಪ್ರವೃತ್ತಿ ಆಗಬೇಕಾದರೆ ಅರ್ಥಜ್ಞಾನ ಇದ್ದರೆ ಸಾಕು, ಆ ಅರ್ಥಜ್ಞಾನವು ಜ್ಞಾತವಾಗಬೇಕಿಲ್ಲ. ಜ್ಞಾನವು ಸ್ವರೂಪೇಣೈವ ಪ್ರವೃತ್ತಿಹೇತು, ಜ್ಞಾತವಾಗಿ ಅಲ್ಲ. ಒಂದುವೇಳೆ ಅರ್ಥಜ್ಞಾನವಿದ್ದರೂ ಆ ಅರ್ಥಜ್ಞಾನದ ಜ್ಞಾನವು ಇಲ್ಲದಿರುವ ಕಾರಣದಿಂದ ಪ್ರವೃತ್ತಿ ಆಗದಿದ್ದಲ್ಲಿ ಆ ಜ್ಞಾನದ ಜ್ಞಾನವೂ ಪ್ರವೃತ್ತಿ ಕಾರಣವಾಗುತ್ತಿತ್ತು. ಹಾಗೆಂದೂ ಆಗುವುದಿಲ್ಲ. ಆದ್ದರಿಂದ ಅರ್ಥಜ್ಞಾನ ಮಾತ್ರ ಪ್ರವೃತ್ತಿಕಾರಣ. ಆ ಜ್ಞಾನದ ಜ್ಞಾನ ಬರಬೇಕಾಗಿಲ್ಲ. ಹೀಗೆ ಧರ್ಮಿಜ್ಞಾನ (ಅರ್ಥ ಜ್ಞಾನದ ಜ್ಞಾನ) ಇಲ್ಲದಿರುವುದರಿಂದಲೂ ಸಂದೇಹಾಭಾವವು ಇರಬಹುದು, ಪ್ರಾಮಾಣ್ಯಜ್ಞಾನವೇ ಇರಬೇಕಾಗಿಲ್ಲ. ಇದು ಮಣಿಕಾರ ಮಾಡಿರುವ ಆಕ್ಷೇಪ.

## ನ್ಯಾಯದೀಪ

**ನನ್ವಿತಿ ॥ ತಥಾತ್ವೇ ಪ್ರವೃತ್ತಿಃ ನ ಸ್ಯಾತ್ ಇತ್ಯತ ಆಹ-ನ ಹೀತಿ ॥**

ಅರ್ಥಜ್ಞಾನವಿದ್ದು ಅದರ ಜ್ಞಾನ ಇಲ್ಲದಿದ್ದಲ್ಲಿ ಅಂದರೆ ಆ ಜ್ಞಾನದ ಜ್ಞಾನ ಇಲ್ಲದಿದ್ದರೆ ಪ್ರವೃತ್ತಿ ಆಗುವುದಾದರೂ ಹೇಗೆ? ಅದಕ್ಕುತ್ತರ-'ನಹಿ' ಎಂಬ ಮೂಲವಾಕ್ಯದಲ್ಲಿದೆ.

## ಅವತಾರಿಕೆ

**'ಜ್ಞಾನಂ ಹಿ ಅಬುಭುತ್ಸಿತಗ್ರಾಹ್ಯತಯಾ ತೀವ್ರಸಂವೇದನಮ್' ಇತ್ಯಾದಿ ಪ್ರಥಮಪಾದೀಯಸುಧಾವಾಕ್ಯಂ (ಜಿಜ್ಞಾಸಾಧಿಕರಣಂ) ವಿವೃಣ್ವನ್ ಆಹ –ನ ತಾವದಿತಿ ॥**

ಮಣಿಕಾರನು ಸಂದೇಹಾಭಾವಕ್ಕೆ ಹೇಳಿದ ಮೊದಲನೆಯ ಕಾರಣ- ಧರ್ಮಿಜ್ಞಾನಾಭಾವ. ಅಂದರೆ, ಅರ್ಥಜ್ಞಾನದ ಜ್ಞಾನವಿಲ್ಲ, ಎಂದು. ಇದನ್ನು ನ್ಯಾಯಸುಧಾದ ಪ್ರಥಮಪಾದದಲ್ಲಿ ನಿರಾಕರಿಸಲಾಗಿದೆ-''ಜ್ಞಾನವು ಅಬುಭುತ್ಸಿತಗ್ರಾಹ್ಯ. ಅಂದರೆ ಜ್ಞಾನ ಬಂದಾಗ 'ಆ ಜ್ಞಾನದ ಜ್ಞಾನವೂ ನನಗೆ ಬರಲಿ' ಎಂಬ ಇಚ್ಛೆ ಇದ್ದಾಗ ಮಾತ್ರ ಅದು ಗ್ರಾಹ್ಯ ಎಂಬ ನಿಯಮವಿಲ್ಲ. ಇಚ್ಛೆ ಇಲ್ಲದಿದ್ದರೂ, ಹುಟ್ಟಿದ ಜ್ಞಾನದ ಜ್ಞಾನವು ಬಂದೇ ತೀರುತ್ತದೆ''. ಆದ್ದರಿಂದ ಅರ್ಥಜ್ಞಾನ ಬಂದ ಕೂಡಲೇ ಆ ಅರ್ಥಜ್ಞಾನದ ಜ್ಞಾನವೂ ಬರುವುದರಿಂದ ಧರ್ಮಿಜ್ಞಾನ ಇಲ್ಲ, ಎನ್ನುವ ಕಾರಣ ಸರಿಯಲ್ಲ. ಇದನ್ನೇ ಮೂಲದಲ್ಲಿ 'ನ ತಾವತ್' ಇತ್ಯಾದಿಯಾಗಿ ಹೇಳಲಾಗಿದೆ.

**न तावद्धर्म्यज्ञानं युक्तम् । योग्यस्य धर्मिणो ज्ञानस्य मनस्संयुक्तात्मसमवायरूप-सम्प्रयोगवत्वेनैवोत्पत्या ज्ञानत्वेन ज्ञानज्ञानसामग्र्याः सत्वात् ।**

**न च ज्ञानज्ञाने बुभुत्सा हेतुः, सा च न सार्वत्रिकीति वाच्यम् । ज्ञानस्य सुखादिवत् योग्यात्मविशेषगुणत्वेन अबुभुत्सितग्राह्यत्वात् । बुभुत्साया ज्ञानरूपधर्मिज्ञानसाध्यत्वेन अनवस्थानाच्च । वर्तमान-स्वीयज्ञाने बुभुत्साया अदर्शनाच्च ।**

ಅಪ್ರಾಮಾಣ್ಯಸಂದೇಹಕ್ಕೆ ಬೇಕಾಗುವ ಧರ್ಮಿಜ್ಞಾನ ಇಲ್ಲ, ಎನ್ನುವ ಕಾರಣ ಸರಿಯಲ್ಲ. ಏಕೆಂದರೆ, ಪ್ರಕೃತದಲ್ಲಿ ಸಂದೇಹದ ಧರ್ಮಿ ಜಲಾದಿಜ್ಞಾನ. ಅದು ಮಾನಸಪ್ರತ್ಯಕ್ಷಯೋಗ್ಯವಾಗಿದೆ. ಅದರೊಂದಿಗೆ ಮನಸ್ಸಿಗೆ ಸಂಯುಕ್ತಸಮವಾಯರೂಪವಾದ ಸನ್ನಿಕರ್ಷವೂ ಇದೆ. ಮನಸ್ಸಿನಿಂದ ಸಂಯುಕ್ತವಾದುದು ಆತ್ಮ. ಆ ಆತ್ಮನಲ್ಲಿ ಸಮವಾಯ ಸಂಬಂಧದಿಂದ ಜ್ಞಾನವು ಇದೆ. ಹೀಗೆ, ಮನಸ್ಸಿಗೂ ಜ್ಞಾನಕ್ಕೂ ಸಂಯುಕ್ತಸಮವಾಯವು ಸನ್ನಿಕರ್ಷ. ಜ್ಞಾನವು ಹುಟ್ಟುವಾಗಲೇ ಇಂತಹ ಸನ್ನಿಕರ್ಷ ಸಹಿತವಾಗಿಯೇ ಹುಟ್ಟುತ್ತದೆ. ಅದರಂತೆ, ಜ್ಞಾನದ ಜ್ಞಾನವು ಬರುವಾಗ ಸಂದೇಹಕಾರಣವಾದ ಜ್ಞಾನತ್ವರೂಪ ಸಾಧಾರಣ ಧರ್ಮಜ್ಞಾನವೂ ಬರುತ್ತದೆ. ಆದ್ದರಿಂದ ಜ್ಞಾನತ್ವೇನ ಅರ್ಥಜ್ಞಾನದ ಜ್ಞಾನವು ಹುಟ್ಟಲು ಬೇಕಾದ ಸಾಮಗ್ರಿಗಳೆಲ್ಲವೂ ಇವೆ. ಇವಿಷ್ಟೂ ಇದ್ದರೂ ಅರ್ಥಜ್ಞಾನವನ್ನು ತಿಳಿಯಬೇಕೆಂಬ ಇಚ್ಛೆಯು (ಬುಭುತ್ಸಾ) ಇಲ್ಲದಿರುವುದರಿಂದ ಅರ್ಥಜ್ಞಾನದ ಜ್ಞಾನವು ಬರುವುದಿಲ್ಲ ಎನ್ನಬೇಕು. ಆದರೆ, ಜ್ಞಾನಜ್ಞಾನ ಬರಲು ಬುಭುತ್ಸಾ (ಬೋದ್ಧುಂ ಇಚ್ಛಾ) ಕಾರಣವೇ ಅಲ್ಲ. ಸುಖವು ಆತ್ಮನಲ್ಲಿರುವ ಯೋಗ್ಯವಾದ ವಿಶೇಷಗುಣ. ಅದರ ಪ್ರತ್ಯಕ್ಷವು ನಮ್ಮ ಇಚ್ಛೆಯನ್ನು ಕಾಯುವುದಿಲ್ಲ. ಅದು ಹುಟ್ಟಿದರೆ ಸಾಕು, ಅದರ ಪ್ರತ್ಯಕ್ಷ ಬಂದೇ ತೀರುತ್ತದೆ. ಅದರಂತೆಯೇ ಜ್ಞಾನ. ಅದೂ ಅಬುಭುತ್ಸಿತ ಗ್ರಾಹ್ಯ.

ಅಷ್ಟೇ ಅಲ್ಲ. ಬುಭುತ್ಸಾ ಎಂದರೆ ತಿಳಿಯಬೇಕೆಂಬ ಇಚ್ಛೆ. ಇಚ್ಛೆ ಬರಬೇಕಾದರೆ ಧರ್ಮಿಜ್ಞಾನ ಇರಬೇಕು. ಪ್ರಕೃತ 'ಅರ್ಥಜ್ಞಾನಸ್ಯ ಜ್ಞಾನಂ ಮೇ ಭವತು' ಎಂಬ ಇಚ್ಛೆಯಲ್ಲಿ ಧರ್ಮಿ, ಅರ್ಥಜ್ಞಾನ. ಅದರ ಜ್ಞಾನ ಇದ್ದರೆ ಈ ಇಚ್ಛೆಯು ಹುಟ್ಟುತ್ತದೆ. ಅದರ ಜ್ಞಾನ (ಜ್ಞಾನದ ಜ್ಞಾನ) ಬರಬೇಕಾದರೆ ಮತ್ತೆ ಹಿಂದಿನಂತಹ ಇಚ್ಛೆಬೇಕು. ಆ ಇಚ್ಛೆಗೆ ಕಾರಣವಾಗಿ ಜ್ಞಾನದ ಜ್ಞಾನ ಬೇಕು. ಹೀಗೆ, ಅನವಸ್ಥಾ. ಆದ್ದರಿಂದ ಧರ್ಮಿಜ್ಞಾನ ಇಲ್ಲದಿರುವುದರಿಂದ ಸಂದೇಹವಿಲ್ಲ, ಎನ್ನಲಾಗದು.

[1]ಜ್ಞಾನವು ಬುಭುತ್ಸಿತ ಗ್ರಾಹ್ಯವಲ್ಲ ಎನ್ನಲು ಇನ್ನೊಂದು ಕಾರಣವೂ ಇದೆ– ನಮಗೆ ಭಾವಿಜ್ಞಾನವನ್ನು ತಿಳಿಯುವ ಕುತೂಹಲವಿರಬಹುದು. ಆದರೆ, ವರ್ತಮಾನ ಕಾಲದಲ್ಲಿ

1. **'ವರ್ತಮಾನ ಸ್ವೀಯಜ್ಞಾನೇ ಬುಭುತ್ಸಾಯಾಃ ಅದರ್ಶನಾನ್' ಎಂಬ ವಾಕ್ಯಕ್ಕೆ ವಿಜಯೀಂದ್ರರು ಕೊಟ್ಟಿರುವ ಅವತಾರಿಕೆ ಹೀಗಿದೆ– ಭವಿಷ್ಯಾದೌ ಸ್ವಜ್ಞಾನೇ ಪರಜ್ಞಾನೇ ಚ ಸಂಶಯಾದಿ ದರ್ಶನೇನ ಬುಭುತ್ಸಾಯಾಃ ಸತ್ತ್ವೇಽಪಿ ಸ್ವವೃತ್ತಿ ವರ್ತಮಾನ ಜ್ಞಾನೇ ಬುಭುತ್ಸಾ ಅನನುಭವಪರಾಹತಾ ಇತ್ಯಾಹ–ವರ್ತಮಾನೇತಿ ॥ ಇದರಿಂದ 'ಸ್ವೀಯಜ್ಞಾನ' ಎಂಬ ಮೂಲಪದಕ್ಕೆ ಸ್ವವೃತ್ತಿಜ್ಞಾನ ಎಂದು ಅರ್ಥ ತಿಳಿಯುತ್ತದೆ.**

ನಮ್ಮಲ್ಲಿರುವ ಜ್ಞಾನವನ್ನು ತಿಳಿಯಬೇಕೆಂಬ ಇಚ್ಛೆಯೇ ಇರುವುದಿಲ್ಲ. ಆದರೂ ಆ ಜ್ಞಾನದ ಜ್ಞಾನವು ಬಂದೇ ತೀರುತ್ತದೆ. ಈ ನಿದರ್ಶನದಿಂದ ಎಲ್ಲ ಜ್ಞಾನಗಳೂ ಅಬುಭುತ್ಸಿತಗ್ರಾಹ್ಯ ಎಂದೇ ನಿರ್ಧರಿಸಬಹುದು.

## ನ್ಯಾಯದೀಪ

**ನ ತಾವದಿತಿ ॥ ಕೋಟ್ಯಸ್ಮರಣಂ ಚಾಯುಕ್ತಂ, ಇತಿ ಕಲ್ಪಾಪೇಕ್ಷಯಾ ತಾವಚ್ಛಬ್ದಃ ।**

**ಅಜ್ಞಾನಂ ಹಿ ತದರ್ಥಯೋಗ್ಯತ್ವಾಭಾವೇನ ವಾ, ಸನ್ನಿಕರ್ಷಾದಿ ಸಾಮಗ್ರ್ಯಭಾವೇನ ವಾ, ಸಹಕಾರಿವಿರಹಪ್ರಯುಕ್ತ-ಸಾಮಗ್ರ್ಯಭಾವೇನ ವಾ, ಪ್ರತಿಬಂಧೇನ ವಾ ಇತಿ ಚತುರ್ಧಾ । ಆದ್ಯದ್ವಯಂ ನ ಪ್ರಕೃತೇ ಇತ್ಯಾಹ-ಯೋಗ್ಯಸ್ಯೇತ್ಯಾದಿನಾ ।**

ಮೂಲದಲ್ಲಿ ಮುಂದೆ 'ಕೋಟ್ಯಸ್ಮರಣೆಯಿಂದಾಗಿ ಸಂದೇಹಾಭಾವವು ಯುಕ್ತವಲ್ಲ' ಎಂದು ನಿರೂಪಿಸಲಾಗುವುದು. ಅದಕ್ಕಿಂತ ಪೂರ್ವದಲ್ಲಿ 'ಧರ್ಮ್ಯಜ್ಞಾನದಿಂದಾಗಿ ಸಂದೇಹಾಭಾವ' ಎಂಬ ಕಲ್ಪದ ನಿರಾಕರಣೆಯನ್ನು ಪ್ರಕೃತದಲ್ಲಿ ಮಾಡುತ್ತಿರುವುದರಿಂದ 'ತಾವತ್'(ಮೊದಲನೆಯದಾಗಿ) ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ.

ಧರ್ಮಿಯ ಅಜ್ಞಾನಕ್ಕೆ ನಾಲ್ಕು ಕಾರಣಗಳಿರಬಹುದು-

1. ಧರ್ಮಿಯು ಅಯೋಗ್ಯವಾಗಿರುವುದು.
2. ಧರ್ಮಿಯೊಂದಿಗೆ ಸನ್ನಿಕರ್ಷ ಇಲ್ಲದಿರುವುದು.
3. ಧರ್ಮಿಯ ಜ್ಞಾನಕ್ಕೆ ಬೇಕಾಗಿರುವ ಒಂದು ಸಹಕಾರಿಯು ಇಲ್ಲದಿರುವ ಪ್ರಯುಕ್ತ ಸಾಮಗ್ರೀವಿರಹ.
4. ಧರ್ಮಿಯ ಜ್ಞಾನ ಬರಲು ಪ್ರತಿಬಂಧಕಗಳಿರುವುದು.

ಈ ನಾಲ್ಕು ಕಾರಣಗಳಲ್ಲಿ ಮೊದಲೆರಡು ಕಾರಣಗಳನ್ನು 'ಯೋಗ್ಯಸ್ಯ' ಎಂಬ ಮೂಲವಾಕ್ಯದಲ್ಲಿ ನಿರಾಕರಿಸಲಾಗಿದೆ.

## ನ್ಯಾಯದೀಪ

**ಮನಃಸಂಯುಕ್ತೇತಿ ಪರರೀತ್ಯಾ । ಸಿದ್ಧಾಂತೇ ತು ಆತ್ಮಸಂಯುಕ್ತ-ಮನಃಸಮವಾಯೇತ್ಯರ್ಥಃ । ಸಮವಾಯಃ ತಾದಾತ್ಮ್ಯಂ ಜ್ಞೇಯಮ್ । ಸುಖಾದ್ಯನುಭವರೂಪ-ಸಾಕ್ಷ್ಯಾಶಯೇನ ವಾಯಂ ಗ್ರಂಥಃ ಸಿದ್ಧಾಂತೇ ಯೋಜ್ಯಃ ।**

**ಸತ್ಯಪಿ ಧರ್ಮಿಜ್ಞಾನೇ ಸಾಧಾರಣಧರ್ಮಾದರ್ಶನಾತ್ ಅಸಂದೇಹಃ ಇತಿ ಶಂಕಾಪನೋದಾಯ ಉಕ್ತಮ್– ಜ್ಞಾನತ್ವೇನ ಜ್ಞಾನಜ್ಞಾನೇತಿ ॥**

ಮೂಲದಲ್ಲಿ ಜ್ಞಾನದೊಂದಿಗೆ ಮನಃಸಂಯುಕ್ತಾತ್ಮಸಮುವಾಯವು ಸನ್ನಿಕರ್ಷ ಎಂದಿರುವುದು ತಾರ್ಕಿಕಮತರೀತ್ಯಾ. ನಮ್ಮ ಸಿದ್ಧಾಂತದಲ್ಲಿ ಅರ್ಥಜ್ಞಾನವು ಆತ್ಮಗುಣವಲ್ಲ, ಮನೋವೃತ್ತಿ. ಆದ್ದರಿಂದ ಆತ್ಮಸಂಯುಕ್ತ ಮನಃಸಮವಾಯವು ಸಾಕ್ಷೀಂದ್ರಿಯಕ್ಕೂ ವೃತ್ತಿಜ್ಞಾನಕ್ಕೂ ಇರುವ ಸಂಬಂಧ. ಅದರಲ್ಲೂ ಸಮವಾಯವನ್ನು ಒಪ್ಪದಿರುವ ಕಾರಣ ಸಮವಾಯ ಎಂದರೆ ತಾದಾತ್ಮ್ಯ.

ಅಥವಾ, ಸುಖಾನುಭವವು ಧರ್ಮಿ ಎಂದು ಪರಿಗಣಿಸಿದಾಗ ವೃತ್ತಿಸುಖದ ಜ್ಞಾನವು ಸಾಕ್ಷ್ಯನುಭವರೂಪ. ಅದರಲ್ಲಿ ಪ್ರಾಮಾಣ್ಯಸಂದೇಹ ಮಾನಸ. ಮನಸ್ಸಿಗೆ ಸುಖಾನುಭವ ದೊಂದಿಗಿರುವ ಸಂಬಂಧ ಮನಃಸಂಯುಕ್ತ–ಆತ್ಮಸಮವಾಯ(ತಾದಾತ್ಮ್ಯ).

ಧರ್ಮಿಜ್ಞಾನ ಇದ್ದರೂ ಸಾಧರಣಧರ್ಮದರ್ಶನ ಇಲ್ಲದಿರುವುದರಿಂದ ಸಂದೇಹ ಬರುವುದಿಲ್ಲ ಎಂಬ ಆಕ್ಷೇಪದ ಪರಿಹಾರಕ್ಕಾಗಿ ಮೂಲದಲ್ಲಿ 'ಜ್ಞಾನತ್ವೇನ ಜ್ಞಾನಜ್ಞಾನ' ಎನ್ನಲಾಗಿದೆ. ಜ್ಞಾನತ್ವರೂಪವಾದ ಸಾಧಾರಣಧರ್ಮಜ್ಞಾನವೂ ಬರುತ್ತದೆ, ಎಂದರ್ಥ.

## ನ್ಯಾಯದೀಪ

**ನ ಚ ಜ್ಞಾನತ್ವನಿರ್ವಿಕಲ್ಪಕವಿಲಂಬಾತ್ ತದಭಾವಃ । ನಿರ್ವಿಕಲ್ಪಕಸ್ಯಾಪಿ ಅನುತ್ಪತ್ತೌ ಬೀಜಾಭಾವಾತ್, ನಿರಸಿಷ್ಯಮಾಣತ್ವಾದ್ವಾ ಇತಿ ಭಾವಃ । ಏತೇನ,**

**'ಸುಖಾದಿವತ್ ಸತ್ಯಾಂ ಸಾಮಗ್ರ್ಯಾಂ ವೇದ್ಯತ್ವಾಪರಿಹಾರಾತ್' ಇತಿ ತತ್ತ್ವನಿರ್ಣಯಟೀಕಾ ವಿವೃತಾ ।**

ಜ್ಞಾನತ್ವದ ನಿರ್ವಿಕಲ್ಪಕಜ್ಞಾನವು ವಿಲಂಬವಾಗಿ ಹುಟ್ಟಿ ತನ್ನಿಮಿತ್ತ ಜ್ಞಾನದ ಸವಿಕಲ್ಪಕಜ್ಞಾನವೂ ವಿಲಂಬವಾಗಿ ಹುಟ್ಟಿತು. ಹೀಗೆ ಧರ್ಮಿಜ್ಞಾನಾಭಾವಾತ್ ಸಂದೇಹಾಭಾವವೆಂದೇ ಹೇಳಬಹುದು, ಎನ್ನುವ ಆಕ್ಷೇಪವೂ ಸರಿಯಲ್ಲ. ಸಾಮಗ್ರಿಗಳು ಇರುವಾಗ ನಿರ್ವಿಕಲ್ಪಕವಾದರೂ ಏಕೆ ವಿಲಂಬವಾಗಿ ಹುಟ್ಟುತ್ತದೆ? ಎನ್ನುವ ಪ್ರಶ್ನೆ ಅಲ್ಲೂ ಬರುತ್ತದೆ. ಅಲ್ಲದೆ ನಿರ್ವಿಕಲ್ಪಕಜ್ಞಾನದ ಕಲ್ಪನೆಯೇ ಸರಿಯಲ್ಲ, ಎಂದು ಮುಂದೆ ಇದೇ ಗ್ರಂಥದಲ್ಲಿ ನಿರಾಕರಿಸಲಾಗಿದೆ.

ತತ್ತ್ವನಿರ್ಣಯ ಟೀಕಾದಲ್ಲಿರುವ ಒಂದು ವಾಕ್ಯದ ವಿವರಣೆಯನ್ನು ಇದುವರೆಗೆ ಮಾಡಿದಂತಾಗಿದೆ.

## ನ್ಯಾಯದೀಪ

**ಸಹಕಾರ್ಯಂತರವಿರಹಾತ್ ನ ಜ್ಞಾನಜ್ಞಾನಮ್ ಇತಿ ತೃತೀಯಮಾಶಂಕ್ಯ ನಿರಾಹ–**

**ನ ಚೇತಿ ॥ ಅನವಸ್ಥಾನಾಚ್ಚೇತಿ ॥ ಬುಭುತ್ಸಾ ಹಿ ಇಚ್ಛಾವಿಶೇಷಃ। ತಸ್ಯಾಃ ಸ್ವವಿಷಯಜ್ಞಾನಸಾಧ್ಯತ್ವಾತ್, ಬುಭುತ್ಸಾಹೇತುಜ್ಞಾನಸ್ಯ ಧರ್ಮಿಜ್ಞಾನವಿಷಯಕಸ್ಯ ತದ್ವಿಷಯ–ಬುಭುತ್ಸಾಸಾಧ್ಯತ್ವಾತ್, ಸಾ ಚ ತದ್ವಿಷಯ–ಜ್ಞಾನಸಾಧ್ಯಾ ಇತಿ ಪೂರ್ವಪೂರ್ವಜ್ಞಾನವ್ಯಕ್ತಿ–ಬುಭುತ್ಸಾವ್ಯಕ್ತಿ–ಪರಂಪರಯಾ ಅನವಸ್ಥಾನಾಚ್ಚ ಇತ್ಯರ್ಥಃ।**

ಹಿಂದೆ ಮಾಡಿರುವ ನಾಲ್ಕು ವಿಕಲ್ಪಗಳಲ್ಲಿ ಮೊದಲ ಎರಡು ವಿಕಲ್ಪಗಳನ್ನು ನಿರಾಕರಿಸಿ ಮೂರನೆಯ ವಿಕಲ್ಪವಾದ, ಸಹಕಾರ್ಯಂತರವಿರಹಾತ್ ಧರ್ಮಿಜ್ಞಾನಾಭಾವಃ, ಎಂಬುದನ್ನು 'ನಚ' ಎಂಬ ಮೂಲವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಮೂಲದಲ್ಲಿ ಜ್ಞಾನದ ಜ್ಞಾನವು ಬುಭುತ್ಸಾಗ್ರಾಹ್ಯವೆಂದು ಹೇಳಿದರೆ ಅನವಸ್ಥಾದೋಷವನ್ನು ಹೇಳಲಾಗಿದೆ. ಅದನ್ನು ಹೀಗೆ ತಿಳಿಯಬೇಕು– ಬುಭುತ್ಸಾ ಎಂದರೆ 'ಜ್ಞಾನಂ ಜಾನೀಯಾಂ' ಎಂಬ ಇಚ್ಛಾ ವಿಶೇಷ. ಈ ರೀತಿಯ ಇಚ್ಛೆಯು ಸ್ವವಿಷಯವಾದ ಜ್ಞಾನದ ಜ್ಞಾನವು ಇದ್ದರೆ ಮಾತ್ರ ಬರುತ್ತದೆ. ಜ್ಞಾನದ ಜ್ಞಾನವು ಜ್ಞಾನ ವಿಷಯಕ ಇಚ್ಛಾ(ಬುಭುತ್ಸಾ) ಇದ್ದರೆ ಮಾತ್ರ ಬರುವುದು. ಆ ಇಚ್ಛೆ ಬರಬೇಕಾದರೆ ಹಿಂದಿನಂತೆ ಮತ್ತೆ ಜ್ಞಾನವಿಷಯಕಜ್ಞಾನ ಬರಬೇಕು. ಹೀಗೆ ಜ್ಞಾನವ್ಯಕ್ತಿ ಮತ್ತು ಬುಭುತ್ಸಾವ್ಯಕ್ತಿಗಳ ಪರಂಪರೆಯನ್ನೇ ಅಂಗೀಕರಿಸಬೇಕಾಗುತ್ತದೆ. ಆದ್ದರಿಂದ ಅನವಸ್ಥಾದೋಷ.

## ನ್ಯಾಯದೀಪ

**ಭವಿಷ್ಯದಾದಿಜ್ಞಾನೇ ಕಥಂಚಿತ್ ಬುಭುತ್ಸಾಸಂಭವೇಽಪಿ ನ ವರ್ತಮಾನೇ। ತಥಾಚ ತತ್ರ ವ್ಯಭಿಚಾರಾತ್ ನ ಕ್ವಾಪಿ ಸಾ ಜ್ಞಾನಹೇತುಃ ಇತ್ಯಾಹ–ವರ್ತಮಾನೇತಿ ॥**

**ಸ್ವೀಯೇತಿ ॥ ಯದ್ಯಪಿ 'ಸ್ವಸ್ಯ ಇದಂ' ಇತ್ಯರ್ಥೇ 'ಅಣಿ' ಕೃತೇ ಸ್ವಶಬ್ದಸ್ಯ ದ್ವಾರಾದಿಷು ಪಾಠೇನ 'ದ್ವಾರಾದೀನಾಂ ಚ' ಇತಿ ಸೂತ್ರೇಣ ವಕಾರಾತ್ ಪೂರ್ವಂ ಐಚಾಗಮೇನ ಔಕಾರೇ ಸತಿ 'ಸೌವ' ಇತಿ ಭಾವ್ಯಮ್, ತಥಾಪಿ 'ಸ್ವಸ್ಮೈ ಹಿತಮ್' ಇತ್ಯರ್ಥೇ 'ಪ್ರಾಕ್ ಕ್ರೀತಾತ್ ಛಃ' ಇತಿ ಛಪ್ರತ್ಯಯೇ ಸ್ವೀಯೇತಿ ಸಾಧ್ವಿತಿ ಜ್ಞೇಯಮ್ ॥**

ಮುಂದೆ ಹುಟ್ಟಲಿರುವ ಜ್ಞಾನದ ಜ್ಞಾನದಲ್ಲಿ ಬುಭುತ್ಸೆ ಉಂಟಾಗಬಹುದಾದರೂ ಈಗಲೇ ತನ್ನಲ್ಲಿ ಇರುವ ಜ್ಞಾನದ ಬಗ್ಗೆ ಬುಭುತ್ಸೆಯು ಬರಲಾರದು. ಹೀಗೆ ಬುಭುತ್ಸೆ ಇಲ್ಲದೆಯೂ ಕ್ವಚಿತ್ ಜ್ಞಾನವು ಗ್ರಾಹ್ಯವಾದುದರಿಂದ ವ್ಯಭಿಚಾರ ಬರುತ್ತದೆ. ಆದ್ದರಿಂದ ಬುಭುತ್ಸೆಯು ಜ್ಞಾನದ ಜ್ಞಾನಕ್ಕೆ ಹೇತುವಲ್ಲ.

ಮೂಲದಲ್ಲಿ ಮಾಡಿರುವ 'ಸ್ವೀಯ' ಎಂಬ ಪ್ರಯೋಗವು ಆಪಾತತಃ ಸರಿಯಲ್ಲ. 'ಸ್ವ' ಎಂಬ ಶಬ್ದಕ್ಕೆ 'ಸ್ವಸ್ಯ ಇದಂ' ಎಂಬ ಅರ್ಥದಲ್ಲಿ 'ಅಣ್' ಪ್ರತ್ಯಯವನ್ನು ಮಾಡಬೇಕು. ಈ ಸ್ವಶಬ್ದವು ದ್ವಾರಾದಿಗಣದಲ್ಲಿ ಸೇರಿದೆ. ಆದಕಾರಣ 'ದ್ವಾರಾದೀನಾಂ ಚ' ಎಂಬ ಸೂತ್ರದಿಂದ 'ಸ್ವ' ಶಬ್ದದಲ್ಲಿರುವ ವಕಾರಕ್ಕಿಂತ ಪೂರ್ವಕ್ಕೆ 'ಐಚ್' ಆಗಮ ಬಂದರೆ (ಐಚ್ ಅಂದರೆ ಐ ಮತ್ತು ಔ. ಪ್ರಕೃತ ಔ) 'ಸ್+ಔ+ವ=ಸೌವ' ಎಂದು ರೂಪವಾಗಬೇಕು. ಆದರೂ ಸ್ವೀಯ ಎಂಬ ರೂಪವೂ ತಪ್ಪಲ್ಲ. 'ಸ್ವಸ್ಮೈ ಹಿತಂ' ಎಂಬ ಅರ್ಥದಲ್ಲಿ 'ಛ' ಪ್ರತ್ಯಯ ಬರುತ್ತದೆ. ಅದಕ್ಕೆ 'ಈಯ' ಆದೇಶ ಬಂದು ಅಕಾರಲೋಪವಾದರೆ 'ಸ್ವೀಯ' ಎಂದೂ ರೂಪವು ನಿಷ್ಪನ್ನವಾಗುತ್ತದೆ.

**न च धर्म्यज्ञानरूपफलबलात् सुखादिसामग्री तज्ज्ञानसामग्री वा ज्ञान-प्रतिबन्धिका कल्प्यत इति वाच्यम् । धर्म्यज्ञानस्याद्याप्यसिद्ध्या अन्योन्याश्रयात् । ज्ञानस्याज्ञाने तत्र कदाचित् संशयाद्यापाताच्च ।**

ಪ್ರವರ್ತಕಜ್ಞಾನದ ಜ್ಞಾನವು ಬರದಿರುವುದಕ್ಕೆ ಹೀಗೊಂದು ಕಾರಣವನ್ನು ಕಲ್ಪಿಸಬಹುದು. ಆ ಜ್ಞಾನದ ಜ್ಞಾನವು ಬರುವುದಿಲ್ಲವಾದುದರಿಂದಲೇ ಹೀಗೆ ಕಲ್ಪನೆ ಮಾಡಬಹುದು– ಸುಖೋತ್ಪಾದಕ ಸಾಮಗ್ರೀ ಅಥವಾ ಸುಖಜ್ಞಾನಸಾಮಗ್ರಿಯು ಅರ್ಥಜ್ಞಾನದ ಜ್ಞಾನ ಬರುವುದಕ್ಕೆ ಪ್ರತಿಬಂಧಕ. ಅರ್ಥಜ್ಞಾನದಿಂದ ಒಂದೋ ಸುಖ ಇಲ್ಲವೇ ದುಃಖ ಇವೆರಡರಲ್ಲಿ ಒಂದು ಆಗಬೇಕು. ಆದ್ದರಿಂದ, ಆ ಸುಖ ಅಥವಾ ದುಃಖ ಹುಟ್ಟಲು ಬೇಕಾದ ಸಾಮಗ್ರಿಯೇ ಅರ್ಥಜ್ಞಾನದ ಜ್ಞಾನಕ್ಕೆ ಪ್ರತಿಬಂಧಕ. ಅಥವಾ ಸುಖ ಹುಟ್ಟಿದ ಕೂಡಲೇ ಅದು ಜ್ಞಾತವಾಗಬೇಕು. ಆ ಸುಖಜ್ಞಾನ ಸಾಮಗ್ರಿಯು ಪ್ರತಿಬಂಧಕ. ಹೀಗೆ ಪ್ರತಿಬಂಧಕವಿರುವ ಕಾರಣ ಅರ್ಥಜ್ಞಾನದ ಜ್ಞಾನ ಬರುವುದಿಲ್ಲ. ಧರ್ಮಿಜ್ಞಾನಾಭಾವಾತ್ ಸಂದೇಹವೂ ಬರುವುದಿಲ್ಲ. ಇದು ತಾರ್ಕಿಕರ ವಾದ.

ಈ ವಾದ ಸರಿಯಲ್ಲ. ಈ ಕಲ್ಪನೆಗೆ ಆಧಾರ ಧರ್ಮಿಜ್ಞಾನ ಬರುವುದಿಲ್ಲ ಎನ್ನುವ ನಿರ್ಧಾರ. ಧರ್ಮಿಜ್ಞಾನ (ಪ್ರವರ್ತಕ ಅರ್ಥಜ್ಞಾನದ ಜ್ಞಾನ) ಇದೆ ಎಂದೇ ನಮ್ಮ ಪ್ರತಿವಾದವಾಗಿರುವಾಗ ಅದಿಲ್ಲ ಎಂಬ ನಿರ್ಧಾರ ಮಾಡಿ ಈ ರೀತಿಯ ಕಲ್ಪನೆ ಮಾಡುವುದೇ ಸರಿಯಲ್ಲ. ಇದು ಅನ್ಯೋನ್ಯಾಶ್ರಯಕ್ಕೆ ಆಸ್ಪದ ನೀಡುತ್ತದೆ. ಧರ್ಮಿಜ್ಞಾನ ಇಲ್ಲ ಎಂದು ನಿರ್ಧಾರವಾದರೆ ಅದರಿಂದಾಗಿ ಪ್ರತಿಬಂಧಕ ಸಿದ್ಧಿ. ಪ್ರತಿಬಂಧಕ ಸಿದ್ಧವಾದರೆ ಧರ್ಮಿಜ್ಞಾನಾಭಾವ. ಹೀಗೆ ಅನ್ಯೋನ್ಯಾಶ್ರಯ. ಅಲ್ಲದೆ ಪ್ರವರ್ತಕವಾದ ವ್ಯವಸಾಯವು ಕದಾಚಿತ್ ಅಜ್ಞಾತವಾದರೆ 'ಈ ಜ್ಞಾನವು ನನಗೆ ಬಂತೋ ಇಲ್ಲವೋ' ಎಂಬ ಸಂದೇಹ ಬರಬೇಕು. ಆದರೆ, ಇಂತಹ ಸಂದೇಹ ಎಂದೂ ಬರುವುದಿಲ್ಲ.

## ನ್ಯಾಯದೀಪ

**ಚತುರ್ಥಂ ನಿರಾಹ– ನ ಚ ಧರ್ಮ್ಯಜ್ಞಾನೇ ಇತಿ ॥ ವ್ಯವಸಾಯರೂಪ**

**ಧರ್ಮಿಣೋ ಅಜ್ಞಾನೇ ಇತ್ಯರ್ಥಃ। ಜ್ಞಾನಸ್ಯಾಜ್ಞಾನೇ ಇತಿ ॥ ಅನನುವ್ಯವಸಾಯೇ ಇತ್ಯರ್ಥಃ। ಸಂಶಯೇಽತಿ ॥ 'ಜ್ಞಾನಂ ವೃತ್ತಂ ನ ವಾ' ಇತ್ಯೇವಂ ಸಂಶಯೇತ್ಯರ್ಥಃ। ಏತೇನ,**

**'ನಚ ಜಿಜ್ಞಾಸಾಯಾಮೇವ ಅನುಭವೋಽನುಭೂಯತೇ' ಇತ್ಯಾದಿ ಭಾಷ್ಯ ಟೀಕಾ (1.3.8) ವಿವೃತಾ ಧ್ಯೇಯಾ ॥**

ನಾಲ್ಕನೆಯ ವಿಕಲ್ಪ-ಪ್ರತಿಬಂಧಕವಿರುವ ಕಾರಣ ಧರ್ಮಿಜ್ಞಾನ ಬರುವುದಿಲ್ಲ, ಎಂದು. ಇದೂ ಸರಿಯಲ್ಲ ಎಂದು ಪ್ರಕೃತ ಮೂಲದಲ್ಲಿ ನಿರಾಕರಿಸಲಾಗಿದೆ.

ಧರ್ಮಿ-ಅಜ್ಞಾನೇ ಎಂಬಲ್ಲಿ ಧರ್ಮಿ ಎಂದರೆ ಪ್ರಾಮಾಣ್ಯ ಸಂದೇಹದಲ್ಲಿ ಧರ್ಮಿಯಾಗಿರುವ ವ್ಯವಸಾಯ ಅಂದರೆ ರಜತಾದಿಜ್ಞಾನ. ಅದು ತಿಳಿಯದಿದ್ದಲ್ಲಿ, ಎಂದರ್ಥ.

ಜ್ಞಾನಜ್ಞಾನ ಎಂದರೆ ವ್ಯವಸಾಯದ ಜ್ಞಾನ=ಅನುವ್ಯವಸಾಯ. 'ಸಂಶಯ ಬಂದೀತು' ಎಂದಿದೆ ಮೂಲದಲ್ಲಿ. ಆ ಸಂಶಯದ ಆಕಾರ- 'ಜ್ಞಾನ ಹುಟ್ಟಿದೆಯೋ ಇಲ್ಲವೋ?' ಎಂದು.

ಮೇಲಿನ ಮೂಲದಲ್ಲಿ ಸೂತ್ರಭಾಷ್ಯಟೀಕಾದ 'ನಚ' ಎಂಬ ವಾಕ್ಯದ ವಿವರಣೆ ಬಂದಿದೆ.

**कोट्यस्मरणं चायुक्तम् । ज्ञानत्वरूपसाधारणधर्मदर्शनस्य, यागादौ निष्कम्पप्रवृत्यर्थं प्रामाण्यादिरूपविशेषबुभुत्सायाश्च सत्वेन तत्स्मरणसामग्र्याः सत्वात् ।**

ಸಂದೇಹಕ್ಕೆ ಕಾರಣವಾದ ಪ್ರಾಮಾಣ್ಯಾಪ್ರಾಮಾಣ್ಯರೂಪವಾದ ಕೋಟಿಗಳ ಸ್ಮರಣೆ ಬಂದಿಲ್ಲ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ, ಕೋಟಿಸ್ಮರಣೆಗೆ ಒಂದು ಕಾರಣ, ಸಾಧಾರಣ ಧರ್ಮದರ್ಶನ. ಪ್ರಕೃತದಲ್ಲಿ ಜ್ಞಾನತ್ವವೇ ಸಾಧಾರಣ ಧರ್ಮ. ಜ್ಞಾನದ ಜ್ಞಾನ ಬಂದಾಗ ಆ ಜ್ಞಾನದಲ್ಲಿರುವ ಜ್ಞಾನತ್ವರೂಪವಾದ ಸಾಧಾರಣಧರ್ಮದ ಜ್ಞಾನವೂ ಬರುತ್ತದೆ. ಅಂತಹ ಜ್ಞಾನತ್ವವು ಪ್ರಾಮಾಣ್ಯಾಪ್ರಾಮಾಣ್ಯರೂಪ-ಉಭಯಕೋಟಿ ಸಹಚರಿತವಾದುದರಿಂದ ಆ ಎರಡು ಕೋಟಿಗಳ ಸ್ಮರಣೆಯೂ ಬರುತ್ತದೆ.

ಕೋಟಿದ್ವಯ ಸ್ಮರಣೆಗೆ ಇನ್ನೊಂದು ಕಾರಣ, ವಿಶೇಷ ಬುಭುತ್ಸಾ. ಜ್ಞಾನವು ತಿಳಿದ ಮೇಲೆ ಆ ಜ್ಞಾನವು ಪ್ರಮಾಣವಾಗಿದೆ, ಎಂದು ತಿಳಿಯುವ ಇಚ್ಛೆಯೇ ವಿಶೇಷ ಬುಭುತ್ಸಾ. ಈ ಬುಭುತ್ಸಾವೂ ಇದೆ. ಏಕೆಂದರೆ 'ಯಾಗವು ಸರ್ಗಕ್ಕೆ ಕಾರಣ' ಎಂಬ ಜ್ಞಾನವು ವೇದದಿಂದ ಬಂದ ಮೇಲೆ ಕ್ಲೇಶಕರವಾದ ಯಾಗವನ್ನು ಮಾಡಬೇಕಾದರೆ ಆ ಜ್ಞಾನವು ಪ್ರಮಾಣ, ಎಂದು ನಿರ್ಧಾರವಾಗಬೇಕು. ಅಂದರೆ ಆ ಜ್ಞಾನದಲ್ಲಿ ಪ್ರಾಮಾಣ್ಯರೂಪವಾದ ವಿಶೇಷಧರ್ಮದ,

ಬುಭುತ್ಸಾ ಇದೆ. ಹೀಗೆ ಕೋಟಿಸ್ಮರಣೆಗೆ ಬೇಕಾದ ಎರಡೂ ಕಾರಣಗಳೂ (ಸಾಮಗ್ರೀ) ಇರುವುದರಿಂದ ಕೋಟಿಸ್ಮರಣೆಯೂ ಬಂದೇ ತೀರುತ್ತದೆ.

## ನ್ಯಾಯದೀಪ

**ಕೋಟ್ಯಸ್ಮರಣಂ ನೇತ್ಯಾಹ–ಕೋಟ್ಯಸ್ಮರಣಂ ಚೇತಿ ॥**

**'ಜ್ಞಾನೇ ಹಿ ಜ್ಞಾತೇ ತತ್–ಪ್ರಾಮಾಣ್ಯಾನುಪಲಬ್ಧೌ ಕಥಂ ಸಂಶಯೋ ನ ಸ್ಯಾತ್'**

**ಇತಿ ತತ್ತ್ವನಿರ್ಣಯಟೀಕಾಂ ವಿವೃಣ್ವಾನಃ ಆಹ–ಜ್ಞಾನತ್ವೇತಿ ॥**

ಸಂದೇಹಕ್ಕೆ ಬೇಕಾದ ಕೋಟಿಯ ಸ್ಮರಣೆಯು ಇಲ್ಲ, ಎನ್ನುವುದನ್ನು 'ಕೋಟ್ಯಸ್ಮರಣಂ ಚಾಯುಕ್ತಂ' ಇತ್ಯಾದಿ ಮೂಲಗ್ರಂಥದಲ್ಲಿ ನಿರಾಕರಿಸಲಾಗಿದೆ.

'ಜ್ಞಾನತ್ವರೂಪ' ಇತ್ಯಾದಿ ಮುಂದಿನ ಮೂಲವಾಕ್ಯದಲ್ಲಿ 'ಜ್ಞಾನೇ ಹಿ ಜ್ಞಾತೇ' ಇತ್ಯಾದಿ ತತ್ತ್ವನಿರ್ಣಯಟೀಕಾದ ಅಭಿಪ್ರಾಯವನ್ನೇ ವಿವರಿಸಲಾಗಿದೆ.

**न च विषयान्तरसञ्चारादसंदेह इति युक्तम् । यागादौ निष्कम्पप्रवृत्तिहेत्वसंदेहप्रयोजकविशेषावधारणाय विषयान्तरसञ्चारस्यैव निरोद्धव्यत्वात् । न हि प्रेक्षावन्तो बहुवित्तव्ययाससाध्ये साधनत्वानिश्चयेऽपि विषयान्तरसञ्चारसम्पादितासन्देहमात्रेण चैत्यवन्दनादौ प्रवर्तन्ते ।**

ಸಂದೇಹಕ್ಕೆ ಬೇಕಾದ ಸಾಮಗ್ರೀಗಳಿದ್ದರೂ ಮನಸ್ಸು ಬೇರೆ ಕಡೆ ಆಸಕ್ತಿ ತಾಳುವುದರಿಂದ ಪ್ರಾಮಾಣ್ಯಸಂದೇಹ ಬರುವುದಿಲ್ಲ, ಎನ್ನುವ ಕಾರಣವೂ ಸರಿಯಲ್ಲ. ಸ್ವರ್ಗದಲ್ಲಿ ಅಭಿಲಾಷೆ ಇರುವವನು ಸ್ವರ್ಗಕ್ಕೆ ಸಾಧನವಾದ ಯಾಗದಲ್ಲಿ ಪ್ರವೃತ್ತಿ ಮಾಡಬೇಕು. ಪ್ರವೃತ್ತಿಮಾಡಬೇಕಾದರೆ ಯಾಗವು ಸ್ವರ್ಗಸಾಧನ ಎಂಬ ಜ್ಞಾನದಲ್ಲಿ ಪ್ರಾಮಾಣ್ಯ ನಿರ್ಣಯ ಆಗಲೇಬೇಕು. ಆಗ ಮಾತ್ರ ಯಾಗದಲ್ಲಿ ಅಸಂದಿಗ್ಧ ಪ್ರವೃತ್ತಿ ಆಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಮನಸ್ಸು ಬೇರೆ ಕಡೆ ಚಲಿಸುವುದನ್ನು ತಡೆಯಲಾಗುತ್ತದೆಯೇ ಹೊರತು, ಮನಸ್ಸು ಬೇರೆ ಕಡೆ ಚಲಿಸಿದ ನೆಪ ಒಡ್ಡಿ ಅಸಂದೇಹ, ಅದರಿಂದ ಪ್ರಾಮಾಣ್ಯನಿರ್ಣಯಗಳನ್ನು ಯಾರೂ ಕೈಬಿಡುವುದಿಲ್ಲ. ಚೈತ್ಯವಂದನೆಯು ಶ್ರೇಯಸ್ಸಿಗೆ ಕಾರಣ ಎಂದು ತಿಳಿದಾಗ, ಮನಸ್ಸು ವಿಷಯಾಂತರದಲ್ಲಿ ಆಸಕ್ತವಾದುದರಿಂದ ಸಂದೇಹವೇ ಬರಲಿಲ್ಲ ಎಂಬ ಕಾರಣದಿಂದ, ಆಯಾಸಸಾಧ್ಯವಾದ ಚೈತ್ಯವಂದನ ಕಾರ್ಯದಲ್ಲಿ

ಪ್ರೇಕ್ಷಾವಂತರು ಪ್ರವೃತ್ತಿ ಮಾಡುವುದಿಲ್ಲ. ಕಿಂತು ತಾವು ತಿಳಿದ ವಿಷಯದ ಬಗ್ಗೆ ವಿಮರ್ಶೆಮಾಡಿ ಪ್ರಾಮಾಣ್ಯ ನಿರ್ಣಯವಾದ ಮೇಲೆಯೇ ಪ್ರವೃತ್ತಿ ಮಾಡುವುದು ಪ್ರೇಕ್ಷಾವಂತರ ಸ್ವಭಾವ. ಆದ್ದರಿಂದ ವಿಷಯಾಂತರ ಸಂಚಾರದಿಂದಾಗಿ ಅಸಂದೇಹ ಎನ್ನುವುದೂ ಯುಕ್ತವಲ್ಲ.

## ನ್ಯಾಯದೀಪ

**ಮಣ್ಯುಕ್ತಮಪಿ ನಿರಾಹ— ನ ಚೇತಿ ।।**

ಮಣಿಗ್ರಂಥದಲ್ಲಿ ಸಂದೇಹಾಭಾವಕ್ಕೆ ವಿಷಯಾಂತರ ಸಂಚಾರವನ್ನೂ ಕಾರಣವನ್ನಾಗಿ ಕೊಡಲಾಗಿದೆ—''....ವಿಷಯಾಂತರ ಸಂಚಾರೇಣ ವಾ ಪ್ರಾಮಾಣ್ಯಸಂಶಯಾನವಶ್ಯಂಭಾವಾತ್'' (ಪು.294) ಎಂದು. ಅದನ್ನು ಮೇಲಿನ ಗ್ರಂಥದಲ್ಲಿ ನಿರಾಕರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಪರಕೀಯ ಪ್ರವೃತ್ತಿಹೇತುಭೂತಃ ಶಂಕಾಭಾವಃ ಪ್ರಾಮಾಣ್ಯ ನಿಶ್ಚಯ ಹೇತುಕ ಏವ, ನ ತು ವಿಷಯಾಂತರಸಂಚಾರಹೇತುಕ ಇತಿ ದುರ್ಜ್ಞಾನಮ್ ಇತ್ಯತ ಆಹ—ಕಿಂಚೋಕ್ತರೀತ್ಯಾ ಇತಿ ।।**

ಪ್ರವೃತ್ತಿ ಮಾಡುವವರು ಇನ್ನೊಬ್ಬರು. ಅವರಿಗೆ ಪ್ರವೃತ್ತಿಕಾರಣವಾದ ಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹವಿಲ್ಲ. ಆ ಸಂದೇಹಾಭಾವವು ಪ್ರಾಮಾಣ್ಯನಿಶ್ಚಯವಿರುವ ಕಾರಣದಿಂದಲೇ ಆಗಿದೆ, ಮನಸ್ಸಿನ ವಿಷಯಾಂತರ ಸಂಚಾರದಿಂದ ಆಗಿಲ್ಲ, ಎಂದು ನಾವು ನಿರ್ಧಾರ ಮಾಡುವುದು ಹೇಗೆ? ಅದಕ್ಕೆ ಉತ್ತರವನ್ನು 'ಕಿಂಚ' ಎಂಬ ಮೂಲದಲ್ಲಿ ಹೇಳಲಾಗಿದೆ.

**किञ्चोक्तरीत्या सम्पन्नसामग्रीकेण क्लृप्तेन प्रामाण्यनिश्चये-नैवासन्देहसम्भवे कथं विषयान्तरसञ्चारादिकल्पनम् ।**

ಒಂದೆ ನಾಲ್ಕನೆಯ 'ಬಾದೋದ್ಧಾರ' ಪ್ರಕರಣದಲ್ಲಿ ಪ್ರಾಮಾಣ್ಯ ನಿಶ್ಚಯಕ್ಕೆ ಬೇಕಾಗಿರುವ ಎಲ್ಲ ಸಾಮಗ್ರೀಗಳೂ ಇವೆ, ಪ್ರಾಮಾಣ್ಯ ನಿಶ್ಚಯವೇ ಪ್ರವರ್ತಕ ಎಂದು ನಿರ್ಧರಿಸಲಾಗಿದೆ. ಆದರಿಂದಾಗಿಯೇ ಪ್ರವರ್ತಕ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ, ಎಂದು ಹೇಳಲು ಸಾಧ್ಯವಿರುವಾಗ ಮನಸ್ಸು ವಿಷಯಾಂತರದಲ್ಲಿ ಆಸಕ್ತವಾಗಿರುವುದರಿಂದ ಅಸಂದೇಹ ಎಂದು ಏಕೆ ಕಲ್ಪನೆ ಮಾಡಬೇಕು? ಆದ್ದರಿಂದ ವಿಷಯಾಂತರ ಸಂಚಾರವು ಸಂದೇಹಾಭಾವಕ್ಕೆ ಕಾರಣವಲ್ಲ.

## ನ್ಯಾಯದೀಪ

**ಬಾಧೋದ್ಧಾರಗ್ರಂಥೋಕ್ತರೀತ್ಯಾ ಸಂಪನ್ನಸಾಮಗ್ರೀಕೇಣ, ಪ್ರಾಮಾಣ್ಯ-ನಿಶ್ಚಪ್ರವರ್ತಕತ್ವವಾದೋಕ್ತರೀತ್ಯಾ ಕ್ಲೃಪ್ತೇನ ಇತ್ಯರ್ಥಃ ।**

ಮೂಲದಲ್ಲಿ ಪ್ರಾಮಾಣ್ಯ ನಿಶ್ಚಯವು ಸಂಪನ್ನಸಾಮಗ್ರೀಕ ಹಾಗೂ ಪ್ರವೃತ್ತಿಕಾರಣತಯಾ ಕ್ಲೃಪ್ತ ಎಂದು ಹೇಳಲಾಗಿದೆ. ಸಂಪನ್ನಸಾಮಗ್ರೀಕ ಎಂದರೆ ಪ್ರಾಮಾಣ್ಯ ನಿಶ್ಚಯಕ್ಕೆ ಬೇಕಾದ ಎಲ್ಲ ಸಾಮಗ್ರೀಗಳೂ ಇವೆ, ಎಂದು ಅರ್ಥ. ಅದನ್ನು ಹಿಂದಿನ ಬಾಧೋದ್ಧಾರ ಗ್ರಂಥದಲ್ಲಿ ಹೇಳಲಾಗಿದೆ. ಪ್ರಾಮಾಣ್ಯಘಟಕವಾದ ತದ್ವತ್ತಾಂಶವು ವ್ಯವಸಾಯದಿಂದ ಉಪನೀತವಾದುದರಿಂದ ಅನುವ್ಯವಸಾಯವು ವ್ಯವಸಾಯಗತಪ್ರಾಮಾಣ್ಯವನ್ನು ಗ್ರಹಿಸಲು ಬೇಕಾದ ಎಲ್ಲ ಸಾಮಗ್ರೀಗಳೂ ಇವೆ, ಎಂದು ಆ ಪ್ರಕರಣದಲ್ಲಿ ಹೇಳಲಾಗಿದೆ.

ಎರಡನೆಯದು, ಪ್ರಾಮಾಣ್ಯನಿಶ್ಚಯ ಪ್ರವೃತ್ತಿಕಾರಣತ್ವೇನ ಕ್ಲೃಪ್ತ, ಎಂಬುದು. ಅದನ್ನೂ ಹಿಂದಿನ ಪ್ರಕರಣದಲ್ಲಿ ಸಾಧನೆ ಮಾಡಲಾಗಿದೆ. ನೈಯಾಯಿಕರು ಅಪ್ರಾಮಾಣ್ಯನಿಶ್ಚಯವು ಪ್ರವೃತ್ತಿ ಪ್ರತಿಬಂಧಕ, ಅದು ಇಲ್ಲದಿದ್ದರೆ ಸಾಕು, ಪ್ರವೃತ್ತಿಯಾಗುತ್ತದೆ. ಪ್ರಾಮಾಣ್ಯನಿಶ್ಚಯ ಬೇಕಾಗಿಲ್ಲ, ಎನ್ನುತ್ತಾರೆ. ಇದನ್ನು ಹಿಂದಿನ ಪ್ರಕರಣದಲ್ಲಿ ನಿರಾಕರಿಸಲಾಗಿದೆ. ಅಪ್ರಾಮಾಣ್ಯ ನಿಶ್ಚಯವು ಪ್ರಾಮಾಣ್ಯನಿಶ್ಚಯವಿಘಟನದ್ವಾರಾ ಪ್ರತಿಬಂಧಕವಾಗಬೇಕು. ಆಗ ಪ್ರಾಮಾಣ್ಯನಿಶ್ಚಯವು ಪ್ರವೃತ್ತಿಕಾರಣ, ಎಂದು ಒಪ್ಪಿದಂತೆಯೇ ಆಗುತ್ತದೆ. ಇದು ಹಿಂದಿನ ಪ್ರಕರಣದ ಒಂದು ಸಮರ್ಥನೆ. ಹೀಗೆ ಪ್ರಾಮಾಣ್ಯನಿಶ್ಚಯವು ಕ್ಲೃಪ್ತ.

## ನ್ಯಾಯದೀಪದಲ್ಲಿ ಅವತಾರಿಕೆ

**ವ್ಯಭಿಚಾರಾಚ್ಚ ಅಸಂದೇಹಹೇತುರೇವಾಯಂ ನ ಭವತಿ ಇತ್ಯಾಹ–ಅಪಿಚೇತಿ ॥**

ವಿಷಯಾಂತರಸಂಚಾರವು ವ್ಯಭಿಚಾರಿಯಾದ ಕಾರಣ ಸಂದೇಹಾಭಾವಕ್ಕೆ ಕಾರಣವಲ್ಲ, ಎಂದು ಮುಂದಿನ ಭಾಗದಲ್ಲಿ ಹೇಳಲಾಗಿದೆ.

**अपि च विषयान्तरासञ्चारेऽपि सुखादिज्ञानप्रामाण्ये नियमेनासन्देहो दृश्यत इति नासावसन्देहहेतुः । अन्यथा, सुखदिकमपि सुखत्वादिना नावश्यवेद्यम् । तत्रासन्देहस्तु धर्म्यज्ञानादिनेति स्यात् । तत्र सामग्रीसत्वादवश्यवेद्यतेति चेत् समं प्रामाण्येऽपि ।**

ಸುಖ ಅಥವಾ ದುಃಖದ ಸಂವೇದನೆ ಬಂದಾಗಲೆಲ್ಲ ಮನಸ್ಸು ನಿಯಮೇನ ವಿಷಯಾಂತರದಲ್ಲಿ ಸಂಚಾರ ಮಾಡುತ್ತಿರುವುದಿಲ್ಲ. ಆದರೂ ಸುಖಾದಿ ಜ್ಞಾನಪ್ರಾಮಾಣ್ಯದಲ್ಲಿ ಸರ್ವದಾ ಅಸಂದಿಗ್ಧತೆ ಇದೆ, ಸಂದೇಹವೇ ಇಲ್ಲ. ಅದಕ್ಕೆ ಕಾರಣ ಸುಖಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾಗಿರುವುದು. ಹೀಗೆ ಈ ಸಂದರ್ಭದಲ್ಲಿ ಅಸಂದೇಹ ಇದೆ. ಸದಾ ವಿಷಯಾಂತರಾಸಕ್ತಿ

ಇಲ್ಲ, ಕಾರಣ ಇಲ್ಲದೆಯೂ ಕಾರ್ಯ ಇದೆ, ವ್ಯತಿರೇಕ ವ್ಯಭಿಚಾರ. ಆದ್ದರಿಂದ ವಿಷಯಾಂತರ ಸಂಚಾರವು ಅಸಂದೇಹಕ್ಕೆ ಹೇತುವಲ್ಲ, ಪ್ರಾಮಾಣ್ಯ ನಿಶ್ಚಯವೇ ಹೇತು.[1]

ಹೀಗೆ ಅಸಂದೇಹ–ಹೇತುತ್ವವು ಪ್ರಾಮಾಣ್ಯನಿಶ್ಚಯಕ್ಕೆ ಕ್ಲೃಪ್ತವಾಗಿದ್ದರೂ ಅದನ್ನು ಬಿಟ್ಟು ಧರ್ಮ್ಯಜ್ಞಾನ, ಕೋಟ್ಯಸ್ಮರಣೆ ಎಂದು ಅಕ್ಲೃಪ್ತಕಾರಣಗಳನ್ನು ಕಲ್ಪಿಸಿದರೆ ಅತಿಪ್ರಸಂಗ ಬಂದೀತು. ಮನಸ್ಸಿನಿಂದ ಸುಖವು ಸುಖತ್ವೇನ ಜ್ಞಾತವಾಗಿದೆ. ಆದರಿಂದಾಗಿ ಸುಖಜ್ಞಾನ ಬಂದಮೇಲೆ 'ಇದು ಸುಖ ಹೌದೋ ಅಲ್ಲವೋ' ಎಂಬ ಸಂದೇಹ ಬರುವುದಿಲ್ಲ. ಇಲ್ಲಿ ಅಸಂದೇಹಕ್ಕೆ ಸುಖತ್ವಜ್ಞಾನವು ಕಾರಣ, ಎಂದು ಕ್ಲೃಪ್ತವಾಗಿದೆ. ಅದನ್ನು ಬಿಟ್ಟು ಧರ್ಮಿಯ (ಸುಖದ) ಅಜ್ಞಾನಾದಿಗಳೇ ಅಸಂದೇಹಹೇತು ಎಂದು ಕಲ್ಪಿಸಬೇಕಾದೀತು.

ಸುಖಜ್ಞಾನ ಬಂದಾಗ ಸುಖತ್ವಜ್ಞಾನಕ್ಕೆ ಬೇಕಾದ ಸಾಮಗ್ರಿಯೂ ನಿಯಮೇನ ಇರುತ್ತದೆ. ವ್ಯಕ್ತಿಭಾಸಕಸಾಮಗ್ರಿಯು ಜಾತಿಭಾಸಕವೂ ಆಗಿರುತ್ತದೆ. ಹೀಗಾಗಿ ಅಲ್ಲಿ ಸುಖತ್ವಜ್ಞಾನವೇ ಅಸಂದೇಹಕ್ಕೆ ಕಾರಣ, ಎನ್ನುವುದಾದರೆ ಪ್ರಕೃತದಲ್ಲೂ ಇದೇ ಸಮರ್ಥನೆ ಸಮಾನವಾಗಿದೆ. ಪ್ರವರ್ತಕಜ್ಞಾನಭಾಸಕ ಸಾಮಗ್ರಿಯೇ ಪ್ರಾಮಾಣ್ಯಭಾಸಕವಾದುದರಿಂದ ಪ್ರಾಮಾಣ್ಯಜ್ಞಾನವೇ ಅಸಂದೇಹ ಹೇತು.

## ನ್ಯಾಯದೀಪ

**ಅನ್ಯಥೇತಿ ॥ ಕ್ಲೃಪ್ತಾಸಂದೇಹಹೇತುತ್ಯಾಗೇನ ಅಕ್ಲೃಪ್ತಹೇತುಕಲ್ಪನೇ ಇತ್ಯರ್ಥಃ। ಸಮಮಿತಿ ॥ ಅತ್ರಾಪಿ ಸಾಮಗ್ರ್ಯಾಃ ಬಾಧೋದ್ಧಾರಗ್ರಂಥೇ ಉಪಪಾದಿತತ್ವಾತ್ ಇತಿ ಭಾವಃ ॥**

ಮೂಲದಲ್ಲಿ 'ಅನ್ಯಥಾ' ಎಂದರೆ ಅಸಂದೇಹಕ್ಕೆ ಕಾರಣವೆಂದು ನಿಶ್ಚಿತವಾಗಿರುವುದನ್ನು ಬಿಟ್ಟು ಕಾರಣತ್ವೇನ ಅಸಿದ್ಧವಾದ ಧರ್ಮಿಜ್ಞಾನಭಾವಾದಿಗಳನ್ನು ಕಲ್ಪಿಸಿದರೆ, ಎಂದು ಅರ್ಥ.

'ಸಮಮ್' ಎಂದರೆ ಪ್ರಕೃತದಲ್ಲೂ ಜ್ಞಾನಗ್ರಾಹಕ ಸಾಮಗ್ರೀ ಇದ್ದಾಗ ನಿಯಮೇನ ಪ್ರಾಮಾಣ್ಯಗ್ರಾಹಕ ಸಾಮಗ್ರಿಯೂ ಇರುತ್ತದೆ, ಎಂದು ಹಿಂದಿನ ಬಾಧೋದ್ಧಾರ ಗ್ರಂಥದಲ್ಲಿ ಸಮರ್ಥಿಸಲಾಗಿದೆ, ಎಂದರ್ಥ.

---

1. ಇಲ್ಲಿ ಮುದ್ರಿತ ಪುಸ್ತಕದ ಎಲ್ಲಾ ಪ್ರತಿಗಳಲ್ಲೂ ವಿಷಯಾಂತರ ಸಂಚಾರೇಽಪಿ ಎಂದೇ ಪಾಠ ಇದೆ. ಆದರೆ, ರಾಯರು 'ವ್ಯಭಿಚಾರಾಚ್ಚ' ಎಂದು ಅವತಾರಿಕೆಯಲ್ಲಿ ಹೇಳಿರುವುದರಿಂದ ವಿಷಯಾಂತರ ಸಂಚಾರಕ್ಕೆ ಅಸಂದೇಹದೊಂದಿಗೆ ವ್ಯಭಿಚಾರವನ್ನು ತೋರಿಸಬೇಕಾಗುತ್ತದೆ. ಅದಕ್ಕಾಗಿ 'ವಿಷಯಾಂತರ+ಅಸಂಚಾರೇಽಪಿ' ಎಂಬ ಬದಲಾವಣೆಯನ್ನು ಊಹಿಸಲಾಗಿದೆ.
   ಇದಕ್ಕೆ ವಿಜಯೀಂದ್ರ ಸ್ವಾಮಿಗಳು ಹೀಗೆ ಅವತಾರಿಕೆ ಕೊಟ್ಟಿದ್ದಾರೆ— 'ಸುಖಾದಿಜ್ಞಾನೇ ನಿಯತಸ್ಯ ಅಪ್ರಾಮಾಣ್ಯಾಸಂದೇಹಸ್ಯ ನಿಯತಪ್ರಾಮಾಣ್ಯ–ನಿಶ್ಚಯಪ್ರಯೋಜ್ಯತ್ವಮೇವ ಯುಕ್ತಂ, ನತು ನಿಯತ ವಿಷಯಾಂತರ ಸಂಚಾರಪ್ರಯೋಜ್ಯತ್ವಮ್ ಇತ್ಯಾಹ–ಅಪಿಚೇತಿ॥

## ನ್ಯಾಯದೀಪದಲ್ಲಿ ಅವತಾರಿಕೆ

**ಯದಪಿ, ವಿಶೇಷದರ್ಶನಾತ್ ನ ತತ್ರಾಪ್ರಾಮಾಣ್ಯಶಂಕಾ (ಮಣಿಪು.300) ಇತಿ ಮಣಿವಚನಂ ತದ್ವಿವರಣಪೂರ್ವಂ ತದಪಿ ನೇತ್ಯಾಹ–ಏತೇನೇತಿ ॥**

ಮಣಿಗ್ರಂಥದಲ್ಲಿ ಅಸಂದೇಹವನ್ನು ಹೀಗೆ ಸಮರ್ಥಿಸಲಾಗಿದೆ– ಅನುಮಿತಿಯಲ್ಲಿ ಎಂದೂ ಪ್ರಾಮಾಣ್ಯ ಸಂದೇಹವು ಬರುವುದಿಲ್ಲ. ಅದಕ್ಕೆ ಅನುಮಿತಿಯಲ್ಲಿ ಪ್ರಾಮಾಣ್ಯನಿಶ್ಚಯವಾಗಿರುವುದು ಕಾರಣವಲ್ಲ. ಪ್ರಾಮಾಣ್ಯವ್ಯಾಪ್ಯವಾದ 'ಧೂಮವತಿ ವಹ್ನಿ–ಜ್ಞಾನತ್ವಂ' ಎಂಬ ಧರ್ಮವು ಅನುಮಿತಿಯಲ್ಲಿ ಗೃಹೀತವಾಗುತ್ತದೆ. ಅದು ಪ್ರಾಮಾಣ್ಯ ಸಂದೇಹಕ್ಕೆ ವ್ಯಾಪ್ಯಧರ್ಮದರ್ಶನ ವಿಧಯಾ ಪ್ರತಿಬಂಧಕವಾಗುತ್ತದೆ, ಎಂದು. ಈ ಮಣಿವಾಕ್ಯದ ವಿವರಣೆಯನ್ನು ಮಾಡಿ ಮೂಲದಲ್ಲಿ ನಿರಾಕರಿಸಲಾಗಿದೆ.

**एतेन शङ्काविश्रान्तिभूमौ सुखादिज्ञाने प्रामाण्यव्याप्यस्य सुखज्ञानत्वादेर्विशेषस्य दर्शनादेवासंशय इति निरस्तम् । प्रामाण्यव्याप्यतया सुखज्ञानत्व-दुःखज्ञानत्वादिज्ञानादपि प्रामाण्यज्ञानस्य लघुत्वात् । सुखज्ञानत्वादेः प्रामाण्यव्याप्यत्वाग्रहेऽपि असंशयदर्शनाच्च । जन्मान्तरीयव्याप्तिग्रहकल्पनस्य च अतिप्रसङ्गित्वात् । तस्मात् प्रामाण्यस्यावश्यवेद्यत्वा-दनवस्थाद्वयं दुष्परिहरम् ।**

ಇದರಿಂದ ವ್ಯಾಪ್ಯಧರ್ಮದರ್ಶನದಿಂದಾಗಿ ಅಸಂದೇಹ ಎಂಬ ಸಮಾಧಾನವೂ ನಿರಸ್ತವಾಯಿತು—ಸುಖಾದಿಜ್ಞಾನವು ಪ್ರಾಮಾಣ್ಯಸಂದೇಹಕ್ಕೆ ವಿಶ್ರಾಂತಿಭೂಮಿ. ದೂರದಿಂದ ಬಂದ ಜಲಜ್ಞಾನ, ಹತ್ತಿರ ಹೋಗಿ ನೋಡಿದ ಜ್ಞಾನ, ಅನುಮಾನದಿಂದ ಹುಟ್ಟಿದ ಜಲಜ್ಞಾನ ಇವೆಲ್ಲವುಗಳಲ್ಲೂ ಪ್ರಾಮಾಣ್ಯಸಂದೇಹ ಬರಬಹುದು. ಆದರೆ, ನೀರನ್ನು ಕುಡಿದ ಮೇಲೆ ಬರುವ ಸುಖಜ್ಞಾನದಲ್ಲಿ ಎಂದೂ ಸಂದೇಹಬರುವುದಿಲ್ಲ. ಏಕೆಂದರೆ, ಸುಖಜ್ಞಾನದಲ್ಲಿ ಸುಖಜ್ಞಾನತ್ವ ಎಂಬ ಧರ್ಮವು ಗೃಹೀತವಾಗುತ್ತದೆ. ಅದು ಪ್ರಾಮಾಣ್ಯವ್ಯಾಪ್ಯಧರ್ಮ. ಹೀಗೆ ವಿಶೇಷದರ್ಶನವು ಪ್ರತಿಬಂಧಕವಾಗಿರುವುದರಿಂದ ಸುಖಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಇದು ಮಣಿಗ್ರಂಥದಲ್ಲಿ ಹೇಳಿರುವ ಸಮಾಧಾನ.

ಆದರೆ, ಇದೂ ಸರಿಯಲ್ಲ. ಪ್ರಾಮಾಣ್ಯವ್ಯಾಪ್ಯವಾದ ಸುಖಜ್ಞಾನತ್ವ, ದುಃಖಜ್ಞಾನತ್ವ ಗ್ರಹವು ಪ್ರತಿಬಂಧಕ ಎನ್ನುವುದಕ್ಕಿಂತಲೂ ಪ್ರಾಮಾಣ್ಯಜ್ಞಾನವು ಪ್ರತಿಬಂಧಕ, ಎಂದು ಹೇಳುವುದು ಲಾಘವ. ಅಷ್ಟೇ ಅಲ್ಲ, ಸುಖಜ್ಞಾನತ್ವವು ಪ್ರಾಮಾಣ್ಯವ್ಯಾಪ್ಯ ಎಂದು ತಿಳುವಳಿಕೆ ಇಲ್ಲದವರಿಗೂ

ಸುಖಜ್ಞಾನದಲ್ಲಿ ಅಸಂದೇಹವು ಇರುತ್ತದೆ. ಅಂತಹವರಿಗೂ ಜನ್ಮಾಂತರದಲ್ಲಿ ಸಿದ್ಧವಾದ ವ್ಯಾಪ್ತಿಯು ಸ್ಮರಣೆಗೆ ಬರುತ್ತದೆ ಎಂದು ಕಲ್ಪಿಸಿದಲ್ಲಿ ಅತಿಪ್ರಸಂಗ ಬಂದೀತು. ಆದ್ದರಿಂದ ಪ್ರಾಮಾಣ್ಯಸಂದೇಹಾಭಾವ ಇರಬೇಕಾದರೆ ಪ್ರಾಮಾಣ್ಯನಿಶ್ಚಯವೇ ಇರಬೇಕು. ಹೀಗೆ ಪ್ರಾಮಾಣ್ಯವು ಅವಶ್ಯವೇದ್ಯವಾದುದರಿಂದ ಕಾರಣಮುಖ ಮತ್ತು ಫಲಮುಖವಾದ ಅನವಸ್ಥಾದ್ವಯಗಳನ್ನು ಪರಿಹಾರ ಮಾಡುವುದು ಸಾಧ್ಯವಿಲ್ಲ.

## ನ್ಯಾಯದೀಪ

**ವ್ಯಾಪ್ಯತಯೇತಿ ॥ ಸ್ವರೂಪಜ್ಞಾನಮಾತ್ರಸ್ಯ ಅಪ್ರಯೋಜಕತ್ವಾತ್ ಇತಿ ಭಾವಃ। ಪ್ರಾಮಾಣಿಕಂ ಗೌರವಂ ನ ದೋಷಾವಹಂ ಇತ್ಯಾಹ-ಸುಖಜ್ಞಾನತ್ವಾದೇರಿತಿ ॥ ಯದ್ವಾ ವ್ಯಭಿಚಾರಾತ್ ನಾಯಂ ಅಸಂಶಯಹೇತುಃ ಇತ್ಯಾಹ–ಸುಖೇತಿ। ವ್ಯಭಿಚಾರಾಸಿದ್ಧಿಮಾಶಂಕ್ಯ ನಿರಾಹ–ಜನ್ಮೇತಿ ॥ ಅತಿಪ್ರಸಂಗಿತ್ವಾದಿತಿ ॥ ಜ್ಞಾನಹೇತುಕತ್ವ ವ್ಯಭಿಚಾರಸ್ಥಲೇ ಸರ್ವತ್ರೈವಂ ಪರಿಹಾರ ಸಂಭವಾತ್ ಇತಿ ಭಾವಃ। ಯದ್ವಾ, ನಾರಿಕೇಲದ್ವೀಪವಾಸಿನಃ ವಹ್ನ್ಯನುಮಾನಾಪತ್ತೇಃ ಇತಿ ಭಾವಃ।**

ಮೂಲದಲ್ಲಿ ಸುಖಜ್ಞಾನತ್ವ ಪ್ರಾಮಾಣ್ಯವ್ಯಾಪ್ಯತಯಾ ಜ್ಞಾತವಾದಾಗ ಅಸಂಶಯ, ಎಂದಿದೆ. ಅದರ ಅಭಿಪ್ರಾಯ–ಸುಖಜ್ಞಾನತ್ವವು ಸ್ವರೂಪೇಣ ಜ್ಞಾತವಾದರೆ ಸಂದೇಹ ನಿವಾರಣೆಯಾಗುವುದಿಲ್ಲವಾದುದರಿಂದ ಆ ರೀತಿಯ ಜ್ಞಾನ ಅಪ್ರಯೋಜಕ, ಎಂದು.

ಪ್ರಾಮಾಣಿಕವಾದರೆ ಗೌರವ ಬಂದರೂ ಅದು ದೋಷಕ್ಕೆ ಕಾರಣವಾಗುವುದಿಲ್ಲ. ಅದಕ್ಕಾಗಿ ವ್ಯಾಪ್ಯತಯಾ ಜ್ಞಾನವು ಸಂದೇಹಕಾರಣ ಎನ್ನುವುದು ಪ್ರಾಮಾಣಿಕವಲ್ಲ ಎಂದು ಸುಖಜ್ಞಾನತ್ವಾದೇಃ, ಎಂಬ ವಾಕ್ಯದಿಂದ ತೋರಿಸಲಾಗಿದೆ.

ಅಥವಾ, ವ್ಯಭಿಚಾರವಿರುವ ಕಾರಣ ವ್ಯಾಪ್ಯತ್ವಜ್ಞಾನವು ಅಸಂದೇಹಕ್ಕೆ ಕಾರಣವೇ ಅಲ್ಲ, ಎಂದು ಸುಖಜ್ಞಾನತ್ವಾದೇಃ, ಎಂಬ ವಾಕ್ಯದಲ್ಲಿ ಹೇಳಲಾಗಿದೆ.

ಈ ಜನ್ಮದಲ್ಲಿ ವ್ಯಾಪ್ತಿಗ್ರಹ ಇಲ್ಲದಿದ್ದರೂ ಜನ್ಮಾಂತರದಲ್ಲಿ ಗೃಹೀತವಾದ ವ್ಯಾಪ್ತಿಯ ಸ್ಮರಣೆ ಈ ಜನ್ಮದಲ್ಲಿ ಬರುತ್ತದೆ. ಆದ್ದರಿಂದ ವ್ಯಭಿಚಾರ ಇಲ್ಲ, ಎನ್ನುವ ಸಮಾಧಾನವನ್ನು 'ಅತಿಪ್ರಸಂಗಾತ್' ಎಂದು ನಿರಾಕರಿಸಲಾಗಿದೆ. ಜ್ಞಾನವು ಕಾರಣ, ಎಂದಾಗ ಬರುವ ವ್ಯಭಿಚಾರಗಳನ್ನೆಲ್ಲ ಹೀಗೆ ಜನ್ಮಾಂತರೀಯ ಜ್ಞಾನವನ್ನು ಕಲ್ಪಿಸಿ ಪರಿಹರಿಸಬಹುದು. ಆದ್ದರಿಂದ ಜ್ಞಾನವು ಎಲ್ಲೂ ವ್ಯಭಿಚಾರಿಯೇ ಅಲ್ಲ ಎಂದಾಗಬೇಕಾದೀತು, ಎಂಬ ಅತಿಪ್ರಸಂಗ ಬರುತ್ತದೆ. ಅಥವಾ, ನಾರಿಕೇಲ ದ್ವೀಪವಾಸಿಗೆ ವಹ್ನಿಯ ಪರಿಚಯವೇ ಇಲ್ಲದಿರುವುದರಿಂದ ವಹ್ನಿವ್ಯಾಪ್ತಿಜ್ಞಾನ ಇಲ್ಲ.

ಅಂತಹವನಿಗೂ ಜನ್ಮಾಂತರೀಯ ವ್ಯಾಪ್ತಿಸ್ಮರಣೆಯಿಂದ ಅನುಮಿತಿ ಬರಲಿ, ಎಂಬ ಅತಿಪ್ರಸಂಗ ಬಂದೀತು.

## ನ್ಯಾಯದೀಪ

**ಏವಂ ಇಯತಾ ಗ್ರಂಥೇನ—**

**'ಅವಶ್ಯವೇದ್ಯತ್ವಾಭಾವಾತ್ ನಾನವಸ್ಥಾ ಇತ್ಯಭಿಪ್ರಾಯಃ, ಇತಿ ಚೇನ್ನ । ನಿಃಶಕಂ ಪ್ರವೃತ್ತೌ ಅವಶ್ಯವೇದ್ಯತ್ವಾತ್ ।'**

**ಇತಿ ತತ್ತ್ವನಿರ್ಣಯಟೀಕಾವಾಕ್ಯೋಕ್ತಂ ನಿಃಶಕಂಪ್ರವೃತ್ತ್ಯರ್ಥಂ, ತದ್ಧೇತು-ಅಪ್ರಾಮಾಣ್ಯಶಂಕಾಭಾವಾರ್ಥಂ ಚ ಅವಶ್ಯವೇದ್ಯಮ್, ಇತಿ ಅತೀತವಾದ ತ್ರಯೇ ಚ ಉಪಪಾದ್ಯ ಉಪಸಂಹರತಿ–ತಸ್ಮಾದಿತಿ ॥ ಅತೀತವಾದೋಕ್ತದಿಶಾ ನಿಃಶಂಕಪ್ರವೃತ್ತ್ಯರ್ಥಂ, ಅತ್ರ ವಾದೇ ಉಕ್ತದಿಶಾ ಧರ್ಮ್ಯಜ್ಞಾನಾದಿನಾ ಶಂಕಾಭಾವಾಯೋಗೇನ ಅಪ್ರಾಮಾಣ್ಯಶಂಕಾಭಾವಾರ್ಥಂ ಚ ಪ್ರಾಮಾಣ್ಯನಿಶ್ಚಯಸ್ಯ ಅಪೇಕ್ಷಿತತ್ವಾತ್ ಇತ್ಯರ್ಥಃ ।**

ಇದುವರೆಗಿನ ಗ್ರಂಥಭಾಗದಲ್ಲಿ ತತ್ವನಿರ್ಣಯಟೀಕಾ ವಾಕ್ಯದಲ್ಲಿ ಹೇಳಿರುವ 'ಪ್ರಾಮಾಣ್ಯವು ಅವಶ್ಯವೇದ್ಯ' ಎಂಬುದನ್ನು ಸಮರ್ಥಿಸಲಾಗಿದೆ. ಇದುವರೆಗಿನ ಗ್ರಂಥ ಎಂದರೆ ಈ ಪ್ರಕರಣ ಮತ್ತು ಹಿಂದಿನ ಎರಡು ಪ್ರಕರಣಗಳು. ಹಿಂದಿನ ಎರಡು ಪ್ರಕರಣಗಳಲ್ಲಿ ನಿಃಶಂಕಪ್ರವೃತ್ತಿಗಾಗಿ ಪ್ರಾಮಾಣ್ಯವೇ ಅವಶ್ಯವೇದ್ಯ, ಅರ್ಥನಿಶ್ಚಯವಲ್ಲ, ಎಂದು ಸಮರ್ಥಿಸಲಾಗಿದೆ. ಈ ಪ್ರಕರಣದಲ್ಲಿ, ನೈಯಾಯಿಕರೇ ಪ್ರವೃತ್ತಿಪ್ರಯೋಜಕತಯಾ ಅಂಗೀಕರಿಸಿರುವ ಅಪ್ರಾಮಾಣ್ಯಸಂದೇಹಾಭಾವವು ಧರ್ಮ್ಯಜ್ಞಾನಾದಿ ಕಾರಣಗಳಿಂದ ಬರಲು ಸಾಧ್ಯವಿಲ್ಲ, ಪ್ರಾಮಾಣ್ಯನಿಶ್ಚಯಪ್ರಯುಕ್ತವಾಗಿಯೇ ಬರಬೇಕು, ಎಂದು ಸಮರ್ಥಿಸಲಾಗಿದೆ. ಅಂತೂ ಪ್ರವೃತ್ತಿಗಿಂತ ಮೊದಲು ಪ್ರಾಮಾಣ್ಯನಿಶ್ಚಯ ಇರಲೇಬೇಕು, ಎನ್ನುವುದು ಮೂರು ಪ್ರಕರಣಗಳ ಅಭಿಪ್ರಾಯ. ಇದನ್ನು 'ತಸ್ಮಾತ್' ಎಂಬ ವಾಕ್ಯದಲ್ಲಿ ಉಪಸಂಹಾರ ಮಾಡಲಾಗಿದೆ.

**एतदप्युक्तं ''अन्यथा'' इत्यादिना । परतस्त्वे उक्तानवस्थाद्वयापत्तेः इत्यर्थः ।**

ಈ ಪ್ರಕರಣದಲ್ಲಿ ಹೇಳಿದ ವಿಷಯವೂ 'ಅನ್ಯಥಾನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯದಲ್ಲಿ ಉಕ್ತವಾಗಿದೆ. ಅಲ್ಲಿ ಅನ್ಯಥಾ ಎನ್ನುವುದಕ್ಕೆ ಪ್ರಾಮಾಣ್ಯ ನಿಶ್ಚಯವು ಪರತಃ ಎಂದು ಹೇಳಿದರೆ, (ಅನವಸ್ಥಾ) ಎಂದರ್ಥ.

## ನ್ಯಾಯದೀಪ

**ಏತದಪೀತಿ ।। ಪರತಸ್ತ್ವೇ ಪ್ರಾಮಾಣ್ಯಜ್ಞಾನಸ್ಯಾಪಿ ಇತ್ಯಾದಿನಾ ಉಕ್ತಮಪಿ, ಇತ್ಯರ್ಥಃ ।**

ಮೂಲದಲ್ಲಿ ಏತದಪಿ ಎಂದರೆ ಹಿಂದಿನ ಪ್ರಕರಣದಲ್ಲಿ 'ಪ್ರಾಮಾಣ್ಯಜ್ಞಾನಸ್ಯಾಪಿ' ಎಂದು ಮುಂತಾಗಿ ಹೇಳಿದ ಅನವಸ್ಥಾಪ್ರಸಂಗ ಎಂದು ಅರ್ಥ.

**ननु त्वन्मते यद्यपि प्रामाण्यग्रहणार्थं संवादविसंवादभावाभावरूपपरीक्षा नापेक्षिता । तथापि दोषशङ्कादिरूपप्रतिबन्धनिरासार्थं साऽपेक्षितैव । तथा च तत्रापि दोषशङ्कायां तन्निरासाय परीक्षान्तरमित्यनवस्था तुल्यैवेति चेन्न । साक्षिवेद्यसुखदुःखदिज्ञाने दोषशङ्काया अभावेन परीक्षानवस्थाभावात् । उक्तं हि भगवत्पादैः ।**

**''न परीक्षानवस्था स्यात् साक्षिसिद्धे त्वसंशयात्'' इति ।।**

**ಇಲ್ಲಿಗೆ ಈ ಪ್ರಕರಣ ಮುಗಿಯಿತು. ।।7।।**

ನೈಯಾಯಿಕರು ಸ್ವತಸ್ತ್ವವಾದಿಗಳ ಮೇಲೆ ಹೀಗೆ ಆಕ್ಷೇಪಮಾಡಬಹುದು. ಸ್ವತಸ್ತ್ವವಾದಿಗಳಿಗೆ ಪ್ರಾಮಾಣ್ಯಗ್ರಹಣೆಗೆ ಸಂವಾದಭಾವ, ವಿಸಂವಾದಾಭಾವದ ಅಪೇಕ್ಷೆ ಇಲ್ಲದಿದ್ದರೂ ಪ್ರಾಮಾಣ್ಯಗ್ರಹಕ್ಕೆ ಪ್ರತಿಬಂಧಕವಾದ ದೋಷಶಂಕಾನಿರಾಸಕ್ಕಾಗಿ ಅದರ ಅಪೇಕ್ಷೆ ಇದ್ದೇ ಇದೆ. ಆಗ ಅನವಸ್ಥಾದೋಷ ಬಂದೇ ಬರುತ್ತದೆ. ಜಲಜ್ಞಾನದಲ್ಲಿ ದೋಷ ಸಂದೇಹ ಬಂದಾಗ ಅದರ ನಿರಾಸಕ್ಕಾಗಿ ಸಂವಾದ. ಆ ಸಂವಾದದಲ್ಲಿ ದೋಷಸಂದೇಹನಿವಾರಣೆಗಾಗಿ ಮತ್ತೊಂದು ಸಂವಾದ. ಹೀಗೆ ಅನಸ್ಥಾ ಅನಿವಾರ್ಯ, ಎಂದು.

ಆದರೆ, ಈ ರೀತಿಯ ಅನವಸ್ಥಾಕ್ಕೆ ಅವಕಾಶವಿಲ್ಲ—ಜಲಜ್ಞಾನ, ಜಲಪಾನ, ಅದರಿಂದ ಸುಖಾನುಭವ ಆಗುತ್ತದೆ. ಈ ಸುಖಾನುಭವದಲ್ಲಿ ದೋಷಶಂಕಾವು ಬರುವುದಿಲ್ಲ. ಅದು ಸಾಕ್ಷ್ಯನುಭವವಾದ್ದರಿಂದ ಎಂದೂ ಅಪ್ರಮಾಣವಾಗುವುದಿಲ್ಲ. ಆದ್ದರಿಂದ ಅಲ್ಲಿ ಸಂವಾದದ ಅಪೇಕ್ಷೆ ಇಲ್ಲವಾದುದರಿಂದ ಅನಸ್ಥಾಕ್ಕೆ ಅವಕಾಶವಿಲ್ಲ. ಇದನ್ನು ಜ್ಞಾನಪಾದದ ಅನುವ್ಯಾಖ್ಯಾನದಲ್ಲಿ 'ನ ಪರೀಕ್ಷಾನಸ್ಥಾ ಸ್ಯಾತ್' ಎಂಬ ಗ್ರಂಥದಲ್ಲಿ ಆಚಾರ್ಯರು ಹೇಳಿದ್ದಾರೆ.

## ನ್ಯಾಯದೀಪ

**'ಅವಶ್ಯಂ ತತ್ ಸ್ವತಃ ಪ್ರಾಮಾಣ್ಯಗ್ರಹಣವಾದಿನಾಪಿ ಅಂಗೀಕರ್ತವ್ಯಮ್'**

**ಇತ್ಯಾದಿ ಟೀಕಾರ್ಥಂ ನಿಷ್ಕೃಷ್ಯ ವಕ್ತುಂ ಸ್ವಮತೇ ಅನವಸ್ಥಾದೋಷಂ ಶಂಕಾಪೂರ್ವಂ ಉದ್ಧರತಿ–ನನ್ವಿತ್ಯಾದಿನಾ ॥**

**ಉಕ್ತಂ ಹೀತಿ ॥ ಜ್ಞಾನಪಾದೀಯಾನುವ್ಯಾಖ್ಯಾನೇ, ಇತ್ಯರ್ಥಃ ।**

ತತ್ವನಿರ್ಣಯ ಟೀಕಾವಾಕ್ಯದ ಸರಿಯಾದ ಭಾವವನ್ನು ತಿಳಿಸುವ ಉದ್ದೇಶದಿಂದ ನಮ್ಮ ಮತದಲ್ಲೂ ಬರಬಹುದಾದ ಅನವಸ್ಥಾದ್ವಯವನ್ನು ತೋರಿಸಿ ಪರಿಹರಿಸಲಾಗಿದೆ.

**ಇಲ್ಲಿಗೆ ಪರತಸ್ತ್ವೇ ಅನವಸ್ಥೋಕ್ತಿ ಪ್ರಕರಣ ಮುಗಿಯಿತು. ॥ 7 ॥**

# ಈ ಪ್ರಕರಣದ ಸಾರಾಂಶ

ಹಿಂದಿನ ಪ್ರಕರಣದಲ್ಲಿ, ಪ್ರವೃತ್ತಿಗೆ ಪ್ರಾಮಾಣ್ಯಜ್ಞಾನವು ಕಾರಣ ಎಂದು ಸಮರ್ಥಿಸಿ, ಅಂತಹ ಪ್ರಾಮಾಣ್ಯಜ್ಞಾನವು ಅನುಮಾನದಿಂದ ಬರುವುದಾದಲ್ಲಿ ಕಾರಣಮುಖೀ ಅನವಸ್ಥಾ ಹಾಗೂ ಫಲಮುಖಾನವಸ್ಥಾವನ್ನು ಹೇಳಲಾಗಿದೆ. ಈ ಪ್ರಕರಣದಲ್ಲೂ ಪ್ರವೃತ್ತಿಪೂರ್ವದಲ್ಲಿ ಪ್ರಾಮಾಣ್ಯಜ್ಞಾನವು ಇರಲೇಬೇಕು ಎಂದು ಸಾಧಿಸಲಾಗಿದೆ. ಆದರೆ ಅದನ್ನು ಸಾಧಿಸಿದ ಕ್ರಮ ವಿಭಿನ್ನವಾಗಿದೆ. ನೈಯಾಯಿಕರು ಅಂಗೀಕರಿಸಿರುವ ಅಂಶವನ್ನು ಪರಿಗಣಿಸಿಯೇ ಅದನ್ನು ಸಾಧಿಸಲಾಗಿದೆ. ನಾವು ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವು ಕಾರಣ ಎಂದರೆ ನೈಯಾಯಿಕರು ಅರ್ಥನಿಶ್ಚಯವು ಕಾರಣ ಎನ್ನುತ್ತಾರೆ. ಇವೆರಡರಲ್ಲಿ ಸ್ವಲ್ಪ ವ್ಯತ್ಯಾಸವಿದೆ. ನೈಯಾಯಿಕರ ರೀತಿಯಿಂದ ನೀರಿದೆ, ಎಂದು ನಿಶ್ಚಯವಾದರೆ ಬಾಯಾರಿದವನು ಪ್ರವೃತ್ತಿ ಮಾಡುತ್ತಾನೆ. ನಮ್ಮ ಸಿದ್ಧಾಂತರೀತ್ಯಾ ನೀರಿದೆ ಎಂಬ ನಿಶ್ಚಯವು ಪ್ರಮಾಣ, ಎಂದು ನಿರ್ಧಾರವಾದರೆ ಮಾತ್ರ ಪ್ರವೃತ್ತಿ. ಇದು ನಮ್ಮ ಸಿದ್ಧಾಂತಕ್ಕೂ ನೈಯಾಯಿಕರ ಸಿದ್ಧಾಂತಕ್ಕೂ ಇರುವ ವ್ಯತ್ಯಾಸ. ಆದರೆ, ನೈಯಾಯಿಕರ ಸಿದ್ಧಾಂತದಂತೆ 'ನೀರಿದೆ ಎಂಬ ನಿಶ್ಚಯವು ಅಪ್ರಮಾಣ' ಎಂದು ತಿಳಿದರೆ ಪ್ರವೃತ್ತಿಯಾಗುವುದಿಲ್ಲ. ಆದ್ದರಿಂದ ಪ್ರವೃತ್ತಿಯಾಗಬೇಕಾದರೆ ಅರ್ಥನಿಶ್ಚಯದೊಂದಿಗೆ ಅಪ್ರಾಮಾಣ್ಯಜ್ಞಾನಾಭಾವವೂ ಬೇಕು. ಈ ಅಪ್ರಾಮಾಣ್ಯಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹವೂ ಸೇರುತ್ತದೆ. ಅಲ್ಲಿಗೆ ಅಪ್ರಾಮಾಣ್ಯ ಸಂದೇಹವೂ ಅರ್ಥನಿಶ್ಚಯದಲ್ಲಿ ಇರಬಾರದು. ಆ ಸಂದೇಹವು ಇಲ್ಲದೇ ಇರುವುದಕ್ಕೆ ಕಾರಣ ಪ್ರಾಮಾಣ್ಯನಿಶ್ಚಯ. ಜಲಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವಿರುವುದರಿಂದ ಅಪ್ರಾಮಾಣ್ಯ ಸಂದೇಹ ಇಲ್ಲ, ಆದರಿಂದ ಪ್ರವೃತ್ತಿಯಾಗುತ್ತದೆ. ಅಲ್ಲಿಗೆ, ನೈಯಾಯಿಕರ ಮತದಲ್ಲೂ ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವೂ ಕಾರಣವಾಗಿದೆ.

ಇದರ ಮೇಲೆ ಆಕ್ಷೇಪಕ್ಕೆ ಅವಕಾಶವಿದೆ— ಸಂದೇಹವು ಬರದಿರಲು ಅನೇಕ ಕಾರಣಗಳಿವೆ. ಉದಾಹರಣೆಗೆ ಕತ್ತಲಲ್ಲಿ ಹಗ್ಗವನ್ನು ಕಂಡು 'ಇದು ಹಾವೋ ಹಗ್ಗವೋ' ಎಂಬ ಸಂದೇಹ ಬರುತ್ತದೆ. ಈ ಸಂದೇಹ ಬರಲು ಸಂದೇಹದಲ್ಲಿ ಧರ್ಮಿಯಾದ(ಇದು) ವಸ್ತುವಿನ ಜ್ಞಾನವು ಕಾರಣ. ಆ ವಸ್ತುವಿನಲ್ಲಿ ಹಗ್ಗ ಮತ್ತು ಹಾವಿನಲ್ಲಿ ಸಾಧಾರಣವಾದ ಕೆಲವು ಧರ್ಮಗಳ ಜ್ಞಾನವೂ ಕಾರಣ. ಆದರಿಂದಾಗಿ ಹಗ್ಗ-ಹಾವುಗಳ ಸ್ಮರಣೆ ಬರುತ್ತದೆ. ಅದೂ ಕಾರಣ. ಇವಿಷ್ಟು ಕಾರಣಗಳಿದ್ದರೆ ಸಂದೇಹ ಬರುತ್ತದೆ. ಈ ಕಾರಣಗಳಲ್ಲಿ ಯಾವುದೇ ಒಂದು ಕಾರಣವು ಇಲ್ಲವಾದರೆ ಸಂದೇಹ ಬರುವುದಿಲ್ಲ. ಅಂತೆಯೇ 'ಇದು ಹಗ್ಗ' ಎಂದು ನಿಶ್ಚಯವಾದರೂ ಸಂದೇಹ ಬರುವುದಿಲ್ಲ.

ಪ್ರಕೃತದಲ್ಲಿ 'ಇದಂ ಜಲಂ' ಎಂಬ ಜ್ಞಾನದಲ್ಲಿ ಅಪ್ರಾಮಾಣ್ಯಸಂದೇಹವು ಬರದಿರಬೇಕಾದರೆ ಪ್ರಾಮಾಣ್ಯನಿಶ್ಚಯವೇ ಇರಬೇಕೆಂದೇನಿಲ್ಲ. ಸಂದೇಹದಲ್ಲಿ ಧರ್ಮಿಯಾದ ಜಲಜ್ಞಾನದ ಜ್ಞಾನವೇ ಬರದಿರಬಹುದು. ಅದು ಬಂದರೂ ಅವರಲ್ಲಿ ಸಾಧಾರಣಧರ್ಮವು ತೋರದಿರಬಹುದು.

ಕೋಟಿಸ್ಮರಣೆ ಬರದಿರಬಹುದು. ಹೀಗೆ ಅಸಂದೇಹಕ್ಕೆ ಅನೇಕ ಕಾರಣಗಳಿರುವಾಗ ಪ್ರಾಮಾಣ್ಯಜ್ಞಾನ ಇರುವುದರಿಂದಲೇ ಅಸಂದೇಹ, ಎಂದು ನಿರ್ಧರಿಸುವುದು ಹೇಗೆ?

ಈ ಆಕ್ಷೇಪಕ್ಕೆ ಸಮಂಜಸವಾದ ಉತ್ತರವನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ— ಪ್ರಕೃತ ಸಂದೇಹ ಬರದಿರಲು ಸಂದೇಹಕ್ಕೆ ಬೇಕಾದ ಸಾಮಾಗ್ರಿಗಳು ಇಲ್ಲದಿರುವುದು ಕಾರಣವಲ್ಲ, ಸಂದೇಹಕ್ಕೆ ಪ್ರತಿಬಂಧಕವಾದ ಪ್ರಾಮಾಣ್ಯನಿಶ್ಚಯವೇ ಕಾರಣ. ಹೇಗೆಂದರೆ, 'ಜಲಜ್ಞಾನಂ ಪ್ರಮಾಣಂ ನವಾ' ಎಂಬ ಸಂದೇಹದಲ್ಲಿ ಧರ್ಮಿ ಜಲಜ್ಞಾನ. ಆ ಧರ್ಮಿಯ ಜ್ಞಾನ ಇರುವುದು ಅನಿವಾರ್ಯ. ಏಕೆಂದರೆ, ನಮಗೆ ಯಾವುದೇ ಜ್ಞಾನ ಬಂದರೂ ಅದು ಬಂದಕೂಡಲೇ ಬಂದಿದೆ, ಎಂದು ತಿಳಿದೇ ತಿಳಿಯುತ್ತದೆ. ಹೊರಗಿನ ವಸ್ತುಗಳು ಇದ್ದರೂ ಕಣ್ಣು ಆ ಕಡೆ ಹೋಗದಿದ್ದರೆ ತಿಳಿಯದೇ ಇರಬಹುದು. ಆದರೆ, ಜ್ಞಾನ ಒಳಗಿನ ವಸ್ತು. ಅದನ್ನು ಗ್ರಹಿಸುವ ಇಂದ್ರಿಯ ಮನಸ್ಸು. ಅದು ನಿರಂತರ ಆತ್ಮನ ಸಂಪರ್ಕದಲ್ಲಿರುತ್ತದೆ. ಆತ್ಮನಲ್ಲಿ ಯಾವುದೇ ಯೋಗ್ಯ ಗುಣಗಳು ಬಂದರೂ ಕೂಡಲೇ ಅದು ಗ್ರಹಿಸುತ್ತದೆ. ನಮಗೆ ಬೇಕಾಗಿರಲಿ, ಬೇಡವಾಗಿರಲಿ. ಜ್ಞಾನ ಹುಟ್ಟಿದ ಕೂಡಲೇ ಆ ಜ್ಞಾನವನ್ನು ಮನಸ್ಸು ಅರಿಯುತ್ತದೆ. ಇದನ್ನೇ ಶಾಸ್ತ್ರೀಯಭಾಷೆಯಲ್ಲಿ ಜ್ಞಾನವು ಅಬುಭುತ್ಸಿತಗ್ರಾಹ್ಯ ಎನ್ನಲಾಗುತ್ತದೆ. ಜ್ಞಾನದ ಜ್ಞಾನ ಬರಬೇಕಾದರೆ ನಮಗೆ ಇಚ್ಛೆ ಇರಬೇಕೆಂದಿಲ್ಲ. ಇಚ್ಛೆ ಇರಲಿ, ಇಲ್ಲದಿರಲಿ ಜ್ಞಾನವು ಗೃಹೀತವಾಗುತ್ತದೆ. ಜ್ಞಾನವು ಗೃಹೀತವಾದಾಗ ಅದರಲ್ಲಿ ಜ್ಞಾನತ್ವಧರ್ಮವೂ ತಿಳಿಯಲ್ಪಡುತ್ತದೆ. ಆ ಧರ್ಮ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಉಭಯಸಹಚರಿತವಾಗಿದೆ. ಅಲ್ಲಿಗೆ ಸಾಧಾರಣ ಧರ್ಮವೂ ತಿಳಿದಿದೆ. ಹೀಗೆ, ಸಂದೇಹಕ್ಕೆ ಬೇಕಾದ ಸಾಧಾರಣ ಧರ್ಮಜ್ಞಾನ, ಧರ್ಮಿಜ್ಞಾನ ಎರಡೂ ಇದೆ. ಇವೆರಡು ಇದ್ದ ಮೇಲೆ ಪ್ರಾಮಾಣ್ಯ ಅಪ್ರಾಮಾಣ್ಯರೂಪ ಕೋಟಿ ಸ್ಮರಣೆಯೂ ಅನಿವಾರ್ಯ. ಅಂದಮೇಲೆ ಸಂದೇಹ ಏಕೆ ಬರುವುದಿಲ್ಲ?

ಹೀಗೊಂದು ಕಾರಣ ಹೇಳಬಹುದು- ಎಲ್ಲಾ ಸಾಮಗ್ರಿಗಳು ಸೇರಿದಾಗ ಮನಸ್ಸು ವಿಚಲಿತವಾಯಿತು. ಅದು ಇನ್ನೊಂದು ವಿಷಯದಲ್ಲಿ ಆಸಕ್ತಿ ತಾಳಿತು. ಆದ್ದರಿಂದ ಸಂದೇಹ ಬರಲಿಲ್ಲ, ಎಂದು. ಆದರೆ ಇದು ಸಾಧ್ಯವೆ? ಒಬ್ಬನು ತುಂಬಾ ದಣಿದಿದ್ದಾನೆ, ನೀರಡಿಕೆಯಾಗಿದೆ. ದೂರದಲ್ಲಿ ನೀರಿದೆ, ಎಂದು ತಿಳಿದಿದೆ. ಆ ಜ್ಞಾನದಲ್ಲಿ ಸಂದೇಹಕ್ಕೆ ಬೇಕಾದ ಸಾಮಗ್ರಿಗಳಿವೆ. ಆದರೂ ಸಂದೇಹ ಬಂದು, ಅದರ ನಿರ್ಧಾರಕ್ಕೆ ಅವಕಾಶಕೊಡದೆ ತನ್ನ ಮನಸ್ಸು ಬೇರೆ ಕಡೆ ಹರಿಯಿತು ಎನ್ನುವ ಕಾರಣದಿಂದ ಸಂದೇಹಿಸದೇ ಸುಮ್ಮನಿರುತ್ತಾನೆ ಎಂದು ಕಲ್ಪಿಸಬಹುದೆ?

ಅದರಂತೆ, 'ಈ ಭೂಮಿಯ ಅಡಿಯಲ್ಲಿ ನಿಧಿ ಇದೆ' ಎಂದು ಯಾರಾದರೂ ಹೇಳಿದರೆ ಆ ಜ್ಞಾನದಲ್ಲಿ ಸಂದೇಹಕ್ಕೆ ಬೇಕಾದ ಕಾರಣಗಳಿದ್ದರೂ ಮನಸ್ಸು ಬೇರೆ ಕಡೆ ಆಸಕ್ತವಾಯಿತು, ಎನ್ನುವ ಕಾರಣದಿಂದ ಸಂದೇಹ ಬರದಿದ್ದಾಗ ಅದನ್ನು ನಂಬಿ ಭೂಮಿಯನ್ನು ಅಗೆಯುವ ಸಾಹಸಕ್ಕೆ ಇಳಿಯುವುದಿದೆಯೆ? ಮನಸ್ಸು ಆ ಕ್ಷಣದಲ್ಲಿ ವಿಚಲಿತವಾದರೂ ಅದನ್ನು ಈ ಕಡೆ ಎಳೆತಂದು ಸಂದೇಹಿಸಿ, ನಿರ್ಣಯವಾದ ಮೇಲೆಯೇ ಪ್ರವೃತ್ತಿಯಾಗುತ್ತದೆ. ಇದು ಎಲ್ಲರ ಅನುಭವ. ಹೀಗೆ,

ಪ್ರವರ್ತಕ ಜ್ಞಾನದಲ್ಲಿ ಪ್ರಾಮಾಣ್ಯದ ಅಸಂದೇಹವಿದ್ದರೆ ಅದು ಸಂದೇಹಕಾರಣಾಭಾವ ಪ್ರಯುಕ್ತವಲ್ಲ; ಪ್ರಾಮಾಣ್ಯನಿರ್ಣಯ ಪ್ರಯುಕ್ತ. ಆದ್ದರಿಂದ ಪ್ರವೃತ್ತಿಪೂರ್ವದಲ್ಲಿ ಪ್ರಾಮಾಣ್ಯನಿಶ್ಚಯವು ಇರಲೇಬೇಕು.

ಗಂಗೇಶೋಪಾಧ್ಯಾಯ ಮಣಿಗ್ರಂಥದಲ್ಲಿ ಅಸಂದೇಹಕ್ಕೆ ಪ್ರಾಮಾಣ್ಯನಿರ್ಣಯದ ಅನಿವಾರ್ಯತೆ ಇಲ್ಲ, ಎನ್ನುವುದನ್ನು ಸಮರ್ಥನೆ ಮಾಡಿದ್ದಾನೆ. ನೀರು ಕುಡಿದ ಮೇಲೆ ಬಾಯಾರಿಕೆ ಪರಿಹಾರವಾಗಿ ಸುಖದ ಅನುಭವ ಬರುತ್ತದೆ. ಈ ಅನುಭವದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಏಕೆ? ಪ್ರಾಮಾಣ್ಯನಿಶ್ಚಯವಾದುದರಿಂದ ಅಲ್ಲ; ಪ್ರಾಮಾಣ್ಯವ್ಯಾಪ್ಯಧರ್ಮದರ್ಶನ ದಿಂದ. ಕತ್ತಲಿನಲ್ಲಿ ಉದ್ದನೆಯ ವಸ್ತುವನ್ನು ನೋಡಿದಾಗ 'ಕಂಬವೋ ಮನುಷ್ಯನೋ' ಎಂಬ ಸಂದೇಹ ಬರದೆಯೂ ಇರಬಹುದು. ಏಕೆಂದರೆ, ಅಲ್ಲಿ ಕೊಂಬೆ, ಎಲೆಗಳು ಕಂಡಾಗ 'ಇದು ಮರ' ಎಂದು ನಿರ್ಧಾರವಾಗುತ್ತದೆ. ಇಲ್ಲಿ ಅಸಂದೇಹಕ್ಕೆ ಕಾರಣ ವೃಕ್ಷತ್ವವ್ಯಾಪ್ಯಶಾಖಾದಿದರ್ಶನ. ಆದರಂತೆ ಸುಖಜ್ಞಾನವು ಸರ್ವದಾ ಪ್ರಮಾಣವಾಗಿರುವುದರಿಂದ ಸುಖಜ್ಞಾನತ್ವವು ಪ್ರಾಮಾಣ್ಯವ್ಯಾಪ್ತ ಧರ್ಮ. ಅಂತಹ ಧರ್ಮವು ಸುಖಜ್ಞಾನದಲ್ಲಿ ತಿಳಿದಿರುವುದರಿಂದ ಅಲ್ಲಿ ಸಂದೇಹ ಬರುವುದಿಲ್ಲ. ಇದು ಮಣಿಗ್ರಂಥದ ವಾದ. ಇದನ್ನು ಶ್ರೀವ್ಯಾಸರಾಜರು ನಿರಾಕರಿಸಿದ್ದಾರೆ. ಪ್ರಾಮಾಣ್ಯ ವ್ಯಾಪ್ಯಧರ್ಮಜ್ಞಾನದಿಂದ ಅಸಂದೇಹ ಎನ್ನುವುದಕ್ಕಿಂತಲೂ ಪ್ರಾಮಾಣ್ಯ ನಿಶ್ಚಯವಿರುವುದರಿಂದ ಅಸಂದೇಹ ಎನ್ನುವುದೇ ಯುಕ್ತವಲ್ಲವೆ? ಮಕ್ಕಳಿಗೆ ಈ ರೀತಿಯ ವ್ಯಾಪ್ತಿಯ ಕಲ್ಪನೆಯೇ ಇರುವುದಿಲ್ಲ. ಆದರೂ ಅವುಗಳಿಗೆ ಸುಖಜ್ಞಾನದ ಪ್ರಾಮಾಣ್ಯದ ಬಗ್ಗೆ ಸಂದೇಹ ಬರುವುದಿಲ್ಲ. ಇದರಿಂದ ಪ್ರಾಮಾಣ್ಯನಿಶ್ಚಯವೇ ಅಸಂದೇಹಕಾರಣ ಎಂದು ನಿರ್ಧರಿಸಬಹುದು.

ಪ್ರಾಮಾಣ್ಯವು ಸರ್ವಜ್ಞಾನಗಳಲ್ಲಿ ಅವಶ್ಯವೇದ್ಯವಾದುದರಿಂದ ಪರತಸ್ತ್ವಪಕ್ಷದಲ್ಲಿ ಅನವಸ್ಥಾದ್ವಯ ಅಪರಿಹಾರ್ಯ. ಇದು ಈ ಪ್ರಕರಣದ ಮುಖ್ಯಾಂಶ. ಆದರೆ, ಈ ಅನವಸ್ಥಾದೋಷ ಸ್ವತಸ್ತ್ವಪಕ್ಷದಲ್ಲೂ ಸಮಾನವಲ್ಲವೆ? ಪರರಿಗೆ ಪೂರ್ವಪೂರ್ವಜ್ಞಾನದ ಪ್ರಾಮಾಣ್ಯನಿರ್ಣಯಕ್ಕಾಗಿ ಉತ್ತರೋತ್ತರ ಜ್ಞಾನಗಳು ಬೇಕು. ನಮಗೆ ಪೂರ್ವಪೂರ್ವಜ್ಞಾನದಲ್ಲಿ ಅಪ್ರಾಮಾಣ್ಯ ಸಂದೇಹಪರಿಹಾರಕ್ಕಾಗಿ ಉತ್ತರೋತ್ತರ ಪ್ರಮಾಣಗಳು ಬೇಕು. ಪ್ರಮಾಣದ ಪರಂಪರೆಯಂತೂ ಉಭಯಮತ ಸಾಧಾರಣ. ಅದೇ ಅನವಸ್ಥಾಕ್ಕೆ ಮೂಲ. ಅಂದಮೇಲೆ, ಸ್ವತಸ್ತ್ವಪಕ್ಷದಲ್ಲೂ ಅನವಸ್ಥಾ ಬರಬೇಕಲ್ಲವೆ?

ಈ ಪ್ರಶ್ನೆಗೆ ಹೀಗೆ ಸಮಾಧಾನ— ಪ್ರಾಮಾಣ್ಯನಿರ್ಣಯಕ್ಕೆ ಕೊನೆಯಿಲ್ಲ. ಎಲ್ಲಾ ಜ್ಞಾನಗಳಲ್ಲೂ ಮತ್ತೊಂದು ಜ್ಞಾನದಿಂದಲೇ ಪ್ರಾಮಾಣ್ಯನಿರ್ಣಯವಾಗಬೇಕು. ಆ ಪರಂಪರೆಯನ್ನು ನಿಲ್ಲಿಸಬೇಕಾದರೆ ಪ್ರಾಮಾಣ್ಯಸ್ವತಸ್ತ್ವವನ್ನೇ ಅಂಗೀಕರಿಸಬೇಕು. ಸ್ವತಸ್ತ್ವವನ್ನು ಅಂಗೀಕರಿಸಿದಾಗ ಆ ಜ್ಞಾನದ ಪ್ರಾಮಾಣ್ಯನಿರ್ಣಯಕ್ಕೆ ಮತ್ತೊಂದು ಜ್ಞಾನದ ಅಗತ್ಯವಿಲ್ಲ. ತನ್ನ ಪ್ರಾಮಾಣ್ಯವನ್ನು ತಾನೇ ನಿರ್ಧರಿಸುತ್ತದೆ. ಇದರಿಂದ ಜ್ಞಾನಪರಂಪರೆ ಕೊನೆಗೊಳ್ಳುತ್ತದೆ. ಅನವಸ್ಥಾ

ಪರಿಹಾರವಾಗುತ್ತದೆ. ಆದರೆ ಸಂದೇಹ ಪರಿಹಾರಕ್ಕಾಗಿ ಪ್ರಮಾಣಾಂತರ ಎನ್ನುವಾಗ ಸಂದೇಹ ಸಾರ್ವತ್ರಿಕವಲ್ಲ. ಅದಕ್ಕೊಂದು ವಿಶ್ರಾಂತಿಭೂಮಿ ಇದೆ. ಸುಖಜ್ಞಾನವೇ ಕೊನೆ. ಅದರಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಅಲ್ಲಿ ಸಂದೇಹ ಪರಿಹಾರಕ್ಕಾಗಿ ಪ್ರಮಾಣಾಂತರದ ಅಗತ್ಯವಿಲ್ಲ. ಹೀಗೆ ಸ್ವತಸ್ತ್ವಪಕ್ಷದಲ್ಲಿ ಅನವಸ್ಥಾದೋಷವನ್ನು ನಿವಾರಣೆ ಮಾಡಬಹುದು.

**ರಾಯರ ಟಿಪ್ಪಣಿಯಲ್ಲಿ ವಿಶೇಷಾಂಕ**

ನಾವು 'ನನ್ನದು' ಎಂಬ ಅರ್ಥದಲ್ಲಿ ಸ್ವೀಯ (ಸ್ವಸ್ಯ ಇದಂ) ಎಂದು ಶಬ್ದವನ್ನು ಪ್ರಯೋಗ ಮಾಡುತ್ತೇವೆ. ಆದರೆ 'ಸ್ವಸ್ಮೈಹಿತಂ' ಎಂಬ ಅರ್ಥದಲ್ಲಿ ಮಾತ್ರ, 'ಸ್ವೀಯ' ಪದದ ಪ್ರಯೋಗ ಸಾಧು. ನನ್ನದು ಎಂಬ ಅರ್ಥದಲ್ಲಿ 'ಸೌವ' ಎಂದೇ ಪ್ರಯೋಗ. ಇದನ್ನು ರಾಯರು ಸಾಧಾರವಾಗಿ ಸಾಧಿಸಿದ್ದಾರೆ.

**ಪ್ರಕರಣ ॥ 7 ॥**

# ಪ್ರಕರಣ – 8

## ಪರತಸ್ತ್ವೇ ಪ್ರಥಮಪ್ರಾಮಾಣ್ಯಾನುಮಿತ್ಯಸಂಭವಃ

### ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಪರತಸ್ತ್ವೇ ಅನವಸ್ಥಾದ್ವಯೋಕ್ತ್ಯಾ ಸ್ವತಸ್ತ್ವಹೇತೂನಾಮ್ ಅಪ್ರಯೋಜಕತ್ವಂ ನಿರಸ್ಯ, ವಿಪಕ್ಷೇ ಅನುಮಿತ್ಯಸಂಭವರೂಪ– ಬಾಧಕಾಂತರಾದಪಿ ನಾಪ್ರಯೋಜಕಾಃ ಸ್ವತಸ್ತ್ವಹೇತವಃ ಇತಿಭಾವೇನಾಹ– ಕಿಂಚೇತಿ ॥**

ಇದುವರೆಗೆ ಪ್ರಾಮಾಣ್ಯವು ಪರತಃ ಗ್ರಾಹ್ಯವಾದರೆ ಎರಡು ರೀತಿಯ ಅನವಸ್ಥಾದೋಷಗಳನ್ನು ಹೇಳಿ ಆ ಮೂಲಕ ಸ್ವತಸ್ತ್ವಸಾಧಕ ಹೇತುಗಳು 'ಅಪ್ರಯೋಜಕಗಳು' ಎಂಬ ಆಶಂಕೆಯನ್ನು ನಿರಾಕರಿಸಲಾಗಿದೆ. 'ಯದಿ ಪ್ರಾಮಾಣ್ಯ ಸ್ವತಃ ನ ಸ್ಯಾತ್ ತರ್ಹಿ ಅನವಸ್ಥಾ ಸ್ಯಾತ್' ಇದೇ ಅಪ್ರಯೋಜಕತ್ವ ನಿರಾಸಕವಾದ ಬಾಧಕತರ್ಕ. ಇದನ್ನು ಹಿಂದಿನ ಪ್ರಕರಣಗಳಲ್ಲಿ ಹೇಳಲಾಯಿತು.

ಈ ಪ್ರಕರಣದಲ್ಲಿ ಇನ್ನೊಂದು ಬಾಧಕತರ್ಕವನ್ನು ಹೇಳುತ್ತಾರೆ. 'ಯದಿ ಪ್ರಾಮಾಣ್ಯಂ ಸ್ವತಃ ನ ಗೃಹ್ಯೇತ ತರ್ಹಿ ಪ್ರಥಮಪ್ರಾಮಾಣ್ಯಾನುಮಿತಿಃ ನ ಸ್ಯಾತ್'. ಇದು ಈ ಪ್ರಕರಣದಲ್ಲಿ ಹೇಳಲಾಗುವ ಬಾಧಕತರ್ಕ. ಇದರಿಂದಲೂ, ಸ್ವತಸಸ್ತ್ವಸಾಧಕ ಹೇತುಗಳು ಅಪ್ರಯೋಜಕಗಳಲ್ಲ ಎಂದು ತಿಳಿಯಬೇಕು.

**किञ्च प्रामाण्यमनुमेयं चेत् कथं प्राथमिकं तज्ज्ञानम्। अप्रसिद्ध-विशेषणत्वेनानुमानाप्रवृत्तेः । प्रवृत्तिगतसंवादरूपवैचित्र्येण तद्धेतु-ज्ञाने वैचित्र्यानुमानेऽपि वह्न्यर्थिप्रवृत्तिहेतोर्वह्नित्ववति वाह्नित्व-प्रकारकत्वादिरूपप्रामाण्यस्य विशिष्यासिद्धेः ।।**

ಪ್ರಾಮಾಣ್ಯವು ಅನುವ್ಯವಸಾಯಕ್ಕೆ ವಿಷಯವಲ್ಲ, ಅದನ್ನು ಸಮರ್ಥಪ್ರವೃತ್ತಿಜನಕತ್ವರೂಪ ಹೇತುವಿನಿಂದ ಅನುಮಾನ ಮಾಡಿ ತಿಳಿದುಕೊಳ್ಳಬೇಕು, ಎನ್ನುವುದಾದರೆ ಪ್ರಥಮ ಪ್ರಾಮಾಣ್ಯಾನುಮಾನ ಹೇಗೆ? 'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿರುವ ವಹ್ನಿತ್ವವತಿ ವಹ್ನಿತ್ವ ಪ್ರಕಾರಕತ್ವರೂಪವಾದ ಪ್ರಾಮಾಣ್ಯವು ಪ್ರತ್ಯಕ್ಷಾದಿ ಇತರ ಪ್ರಮಾಣಗಳಿಂದ ತಿಳಿಯಲ್ಪಡುವುದಿಲ್ಲ. ಅನುಮಾನದಿಂದಲೇ ಅದನ್ನು ತಿಳಿಯಬೇಕು. ಮೊದಲು ಅನುಮಾನ ಮಾಡುವಾಗ ಅದರ ಜ್ಞಾನವು

ಇಲ್ಲದಿರುವುದರಿಂದ ಅದನ್ನು ಸಾಧನೆ ಮಾಡುವುದು ಹೇಗೆ? ಅನುಮಾನ ಮಾಡಬೇಕಾದರೆ ಸಾಧ್ಯಜ್ಞಾನ ಇರಬೇಕು. ಅದಿಲ್ಲದಿದ್ದರೆ ಅಪ್ರಸಿದ್ಧವಿಶೇಷಣತಾದೋಷವು ಬರುತ್ತದೆ. ಆ ಕಾರಣದಿಂದಾಗಿ ಪ್ರಾಮಾಣ್ಯಾನುಮಾನದ ಪ್ರವೃತ್ತಿಯೇ ಆಗುವುದಿಲ್ಲ.

ಪ್ರಾಮಾಣ್ಯವನ್ನು ಹೀಗೆ ಪ್ರಸಿದ್ಧಿ ಮಾಡಬಹುದು– 'ಅಯಂ ವಹ್ನಿಃ' ಎಂಬ ಭ್ರಮೆಗೆ ಪ್ರವೃತ್ತಿ ಸಂವಾದ ಇಲ್ಲ, ಆದರೆ ಪ್ರಮೆಗೆ ಪ್ರವೃತ್ತಿ ಸಂವಾದ ಇದೆ. ಹೀಗೆ ಪ್ರವೃತ್ತಿಸಂವಾದ ಇರುವುದರಿಂದ ಪ್ರಮೆಯಲ್ಲಿ ಭ್ರಮೆಗಿಂತ ವಿಶೇಷವಿದೆ. ಆ ವಿಶೇಷವೇ ಪ್ರಾಮಾಣ್ಯ. ಹೀಗೆ ಪ್ರಾಮಾಣ್ಯದ ಜ್ಞಾನವು ಇರಬಹುದಾದ್ದರಿಂದ ಅಪ್ರಸಿದ್ಧ ವಿಶೇಷಣತಾದೋಷ ಇಲ್ಲ.

ಹೀಗೆ ಹೇಳುವುದು ಸರಿಯಲ್ಲ. ಮೇಲಿನ ಅನುಮಾನದಿಂದ ವಹ್ನಿ ಪ್ರಮಾದಲ್ಲಿ ಭ್ರಮೆಗಿಂತಲೂ ಏನೋ ಒಂದು ವೈಲಕ್ಷಣ್ಯ ಇದೆ, ಎಂದಷ್ಟೇ ಸಿದ್ಧವಾಗುತ್ತದೆ, ಹೊರತು, ವಹ್ನಿತ್ವವತಿ ವಹ್ನಿತ್ವ ಪ್ರಕಾರಕತ್ವವೇ ಆ ವೈಲಕ್ಷಣ್ಯ, ಎಂದು ವಿಶಿಷ್ಯ ತಿಳಿಯುವುದಿಲ್ಲ. ಪ್ರಾಮಾಣ್ಯಾನುಮಾನದಲ್ಲಿ ಇಂತಹ ಪ್ರಾಮಾಣ್ಯವೇ ಸಾಧ್ಯ. ಏಕೆಂದರೆ, ವಹ್ನಿಜ್ಞಾನ ಬಂದಮೇಲೆ ವಹ್ನ್ಯರ್ಥಿಯು ಪ್ರವೃತ್ತಿ ಮಾಡಬೇಕಾದರೆ ಇಂತಹ ಪ್ರಾಮಾಣ್ಯವೇ ಸಿದ್ಧವಾಗಬೇಕು. ಆ ರೀತಿಯ ಸಾಧ್ಯದ ಜ್ಞಾನ ಪೂರ್ವದಲ್ಲಿ ಇಲ್ಲ. ಆದ್ದರಿಂದ ಅಪ್ರಸಿದ್ಧವಿಶೇಷಣತಾದೋಷ ಇದ್ದೇ ಇದೆ.

## ನ್ಯಾಯದೀಪ

**ನನು ಉಕ್ತಮತ್ರ ಮಣೌ—**

**''ಪ್ರಥಮಂ ಚ ಪ್ರಾಮಾಣ್ಯಜ್ಞಾನಂ ವ್ಯತಿರೇಕಿಣಾ'' (ಪು.243) ಇತಿ । ತತ್ರಾಹ—ಅಪ್ರಸಿದ್ಧೇತಿ ॥ ಸಾಧ್ಯಾಪ್ರಸಿದ್ಧೌ ತನ್ನಿರೂಪಿತ–ವ್ಯಾಪ್ಯಜ್ಞಾನಾತ್ ಇತಿ ಭಾವಃ ॥**

**ನನು 'ಸಂವಾದಪ್ರವೃತ್ತಿಃ ವಿಸಂವಾದ–ಪ್ರವೃತ್ತಿವಿಲಕ್ಷಣಹೇತುಸಾಧ್ಯಾ, ತದ್ವಿಲಕ್ಷಣಕಾರ್ಯತ್ವಾತ್' ಇತ್ಯನುಮಾನೇನ ಸಿದ್ಧ್ಯತ್–ವೈಲಕ್ಷಣ್ಯಂ ಪ್ರಾಮಾಣ್ಯರೂಪಮೇವ ಸೇತ್ಸ್ಯತಿ, ಇತ್ಯತ ಆಹ—ಪ್ರವೃತ್ತೀತಿ ॥ ದಾಹಸಮರ್ಥ – ವಿಶೇಷ್ಯವೃತ್ತಿ ಪ್ರಕಾರಕತ್ವಾದಿಃ ಆದಿಪದಾರ್ಥಃ ॥**

ಪ್ರಾಮಾಣ್ಯಸಾಧ್ಯಕ–ಪ್ರಥಮಾನುಮಾನದಲ್ಲಿ ಸಾಧ್ಯಪ್ರಸಿದ್ಧಿ ಕೇವಲವ್ಯತಿರೇಕಿ ಅನುಮಾನ ದಿಂದ, ಎಂದು ಮಣಿಗ್ರಂಥದಲ್ಲಿ ಹೇಳಲಾಗಿದೆ. ಅಂದರೆ, ವಹ್ನಿಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಾಧನೆ ಮಾಡುವಾಗ ಅನ್ವಯ ದೃಷ್ಟಾಂತವನ್ನು ಹೇಳಲು ಆಗುವುದಿಲ್ಲ. ಏಕೆಂದರೆ, ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವರೂಪವಾದ ಪ್ರಾಮಾಣ್ಯ ಅದುವರೆಗೆ ಎಲ್ಲೂ ಪ್ರಸಿದ್ಧವಾಗಿಲ್ಲ. ಆದರೆ, ವ್ಯತಿರೇಕ ದೃಷ್ಟಾಂತವನ್ನು ಹೇಳಬಹುದು. ಘಟದಲ್ಲಿ ಪ್ರಾಮಾಣ್ಯಾಭಾವ ಇರುವುದರಿಂದ ಅದೇ

ದೃಷ್ಟಾಂತವಾಗುತ್ತದೆ, ಎಂದು ಮಣಿಗ್ರಂಥದ ಅಭಿಪ್ರಾಯ. ಆದರೆ, ಸಾಧ್ಯವು ಅಪ್ರಸಿದ್ಧವಾದರೆ ಸಾಧ್ಯದ ವ್ಯಾಪ್ತಿಯನ್ನು ಹೇತುವಿನಲ್ಲಿ ತಿಳಿಯಲು ಆಗುವುದಿಲ್ಲ. ವ್ಯಾಪ್ತಿ ಸಾಧ್ಯ–ಹೇತುಗಳ ಸಂಬಂಧ. ಅದರ ಜ್ಞಾನಬರಬೇಕಾದರೆ ಸಂಬಂಧಿಗಳಾದ ಸಾಧ್ಯ ಮತ್ತು ಹೇತು ಇವೆರಡರ ಜ್ಞಾನವೂ ಬೇಕು. ಸಾಧ್ಯವು ಅಪ್ರಸಿದ್ಧವಾದರೆ ಅದರ ವ್ಯಾಪ್ತಿಯ ಜ್ಞಾನ ಹೇತುವಿನಲ್ಲಿ ಬರಲು ಸಾಧ್ಯವಿಲ್ಲ.

ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವರೂಪವಾದ ಪ್ರಾಮಾಣ್ಯದ ವಿಶಿಷ್ಟ ಜ್ಞಾನವಿಲ್ಲದಿದ್ದರೂ ಸಾಮಾನ್ಯರೂಪೇಣ ಜ್ಞಾನ ಇದೆ—ವಹ್ನಿಜ್ಞಾನ ಬಂದ ಮೇಲೆ ಪ್ರವೃತ್ತಿಮಾಡಿದಾಗ ಕೆಲವೊಮ್ಮೆ ವಹ್ನಿ ಸಿಗುತ್ತದೆ, ಮತ್ತೆ ಕೆಲವೊಮ್ಮೆ ಸಿಗುವುದಿಲ್ಲ. ಸಿಕ್ಕಿದರೆ ಸಂವಾದ ಪ್ರವೃತ್ತಿ, ಸಿಗದಿದ್ದರೆ ವಿಸಂವಾದ ಪ್ರವೃತ್ತಿ. ಈ ಪ್ರವೃತ್ತಿಗಳು ವಹ್ನಿಜ್ಞಾನದ ಕಾರ್ಯಗಳು. ಕಾರ್ಯಗಳಲ್ಲಿ ವೈಲಕ್ಷಣ್ಯವಿರಬೇಕಾದರೆ ಕಾರಣದಲ್ಲೂ ವೈಲಕ್ಷಣ್ಯಬೇಕು. ವಿಸಂವಾದಿಪ್ರವೃತ್ತಿಗಿಂತ ವಿಲಕ್ಷಣವಾದ ಸಂವಾದಿ ಪ್ರವೃತ್ತಿಗೆ ವಹ್ನಿಜ್ಞಾನವು ಕಾರಣವಾದರೆ ಆ ಜ್ಞಾನದಲ್ಲಿ ಭ್ರಮೆಗಿಂತ ಒಂದು ವಿಶೇಷವಿರಬೇಕು. ಆ ವಿಶೇಷವೇ ಪ್ರಾಮಾಣ್ಯ. ಹೀಗೆ ಪ್ರಾಮಾಣ್ಯವನ್ನು ಸಾಮಾನತಃ ತಿಳಿಯಬಹುದಾದ್ದರಿಂದ ಸಾಧ್ಯಾಪ್ರಸಿದ್ಧಿ ಇಲ್ಲ. ಇದು ಪೂರ್ವಪಕ್ಷ.[1] ಇದನ್ನು ಮೂಲದಲ್ಲಿ 'ಪ್ರವೃತ್ತಿಗತ' ಇತ್ಯಾದಿ ವಾಕ್ಯದಲ್ಲಿ ನಿರಾಕರಿಸಲಾಗಿದೆ. ಪ್ರವೃತ್ತಿ ಪ್ರಯೋಜಕವಾದ ಪ್ರಾಮಾಣ್ಯವನ್ನೇ ಅನುಮಾನದಿಂದ ಸಾಧನೆ ಮಾಡಬೇಕು. ವಹ್ನಿಜ್ಞಾನದಲ್ಲಿರುವ ಅಂತಹ ಪ್ರಾಮಾಣ್ಯವೆಂದರೆ 'ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವ'. ಅದು ಸಿದ್ಧವಲ್ಲ. ಆದ್ದರಿಂದ ಅಪ್ರಸಿದ್ಧವಿಶೇಷಣತಾದೋಷ ಇದ್ದದ್ದೆ.

ಮೂಲದಲ್ಲಿ 'ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವಾದಿ' ಎಂದು ಆದಿಪದವನ್ನು ಪ್ರಯೋಗಿಸ ಲಾಗಿದೆ. ಆ ಆದಿಪದದಿಂದ 'ದಾಹಸಮರ್ಥವಿಶೇಷ್ಯವೃತ್ತಿಪ್ರಕಾರಕತ್ವವನ್ನು' ತೆಗೆದುಕೊಳ್ಳಬೇಕು. 'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿ ಪ್ರಕಾರವಾಗಿ ಕಾಣುವ ವಹ್ನಿತ್ವವು ದಾಹಸಮರ್ಥವಾದ ವಿಶೇಷ್ಯದಲ್ಲಿ ಇದೆ, ಎಂದು ತಿಳಿದರೂ ವಹ್ನ್ಯರ್ಥಿಯು ಪ್ರವೃತ್ತಿಮಾಡುತ್ತಾನೆ. ಆದ್ದರಿಂದ ಅದೂ ಆದಿಪದಗ್ರಾಹ್ಯವಾಗಬಹುದು.

**न च प्रामाण्यमात्रनिषेधे व्याघातदण्डभयेन विशेष्यवृत्तिप्रकारकत्वरूपं प्रामाण्यं सामान्यत एव प्रसिद्धं वह्निज्ञाने साध्यमानं पक्षधर्मताबलाद्वह्नित्ववति वह्नित्वप्रकारकत्वादौ पर्यवस्यति । एवं च नाप्रसिद्धविशेषणत्वं नाप्यसाधारण्यमिति वाच्यम् ।**

**ಆಕ್ಷೇಪ**—ಪ್ರಾಮಾಣ್ಯವು ಅನುಮಾನಕ್ಕಿಂತ ಪೂರ್ವದಲ್ಲಿ ಸಾಮಾನ್ಯತಃ ಪ್ರಸಿದ್ಧ ಎಂದು ಅಂಗೀಕರಿಸಲೇಬೇಕು. ಪ್ರತಿವಾದಿಯು 'ಪ್ರಮಾ ನಾಸ್ತಿ' ಎಂದು ನಿಷೇಧ ಮಾಡಿದಾಗ ವಾದಿಯು

---

1. ಮಣಿಕಾರನೂ ಇದನ್ನು ಪೂರ್ವಪಕ್ಷರೂಪದಲ್ಲಿ ಉಲ್ಲೇಖಿಸಿದ್ದಾನೆ. ''ಪ್ರವೃತ್ತಿಸಂವಾದ–ವಿಸಂವಾದಾಭ್ಯಾಂ ತದ್ಧೇತುಜ್ಞಾನವೈಚಿತ್ರ್ಯಾನುಮಾನೇಽಪಿ ಯಥೋಕ್ತಪ್ರಾಮಾಣ್ಯಸ್ಯವಿಶಿಷ್ಯಾಪ್ರತೀತೇಃ'' (ಪು.250)

ಅನುಮಾನದಿಂದ ಪ್ರಾಮಾಣ್ಯವನ್ನು ಸಾಧಿಸಬೇಕು. ಪ್ರತಿವಾದಿ ನಿಷೇಧ ಮಾಡಬೇಕಾದರೆ ಪ್ರಮಾದ ಸಾಮಾನ್ಯಜ್ಞಾನ ಇರಬೇಕು. 'ನಿಷೇಧಂ ಪ್ರತಿ ಪ್ರತಿಯೋಗಿಜ್ಞಾನಂ ಕಾರಣಮ್'. ಸಾಮಾನ್ಯಜ್ಞಾನವೇ ಇಲ್ಲದೆ ನಿಷೇಧ ಮಾಡಲಾಗುವುದಿಲ್ಲ. ಅದಕ್ಕಾಗಿ ಪ್ರಮಾದ ಜ್ಞಾನ ಇದೆ ಎಂದು ಹೇಳಿದರೂ, ಪ್ರಮಾವನ್ನು ಒಪ್ಪಿಕೊಂಡು ಮತ್ತೆ ನಿಷೇಧಮಾಡಿದರೆ ವ್ಯಾಹತಿ. ಆದ್ದರಿಂದ ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವರೂಪವಾದ ಪ್ರಾಮಾಣ್ಯಜ್ಞಾನವು ಅನುಮಾನ ಮಾತ್ರ ವೇದ್ಯವಾದರೂ ಅನುಮಾನಾತ್ ಪೂರ್ವದಲ್ಲಿ 'ವಿಶೇಷ್ಯವೃತ್ತಿ–ಪ್ರಕಾರಕತ್ವರೂಪವಾದ', ಸಕಲ ಜ್ಞಾನಸಾಧಾರಣ ವಾದ ಪ್ರಾಮಾಣ್ಯದ ಸಾಮಾನ್ಯಜ್ಞಾನವು ಪ್ರತಿವಾದಿಗೂ ಇದೆ. ಇಂತಹ ಸಾಮಾನ್ಯಪ್ರಾಮಾಣ್ಯವನ್ನು 'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿ ಸಾಧನೆಮಾಡಿದಾಗ, ಈ ಜ್ಞಾನದಲ್ಲಿ ವಹ್ನಿ ವಿಶೇಷ್ಯ ವಾದುದರಿಂದ ವಿಶೇಷ್ಯವೃತ್ತಿಪ್ರಕಾರವೆಂದರೆ ವಹ್ನಿತ್ವ. ಆದ್ದರಿಂದ ಸಾಧ್ಯವಾದ ಸಾಮಾನ್ಯ ಪ್ರಾಮಾಣ್ಯವು 'ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವ' ರೂಪ ವಿಶೇಷದಲ್ಲಿ ಪರ್ಯವಸಾನವಾಗುತ್ತದೆ. ಇದರಿಂದ ಅಪ್ರಸಿದ್ಧವಿಶೇಷಣತಾದೋಷವು ಪರಿಹಾರವಾಗುತ್ತದೆ. ಹೀಗೆ, ಸಾಧ್ಯದ ಸಾಮಾನ್ಯತಃ ಪ್ರಸಿದ್ಧಿ ಇದೆ. ಇನ್ನು ಸಾಧ್ಯವು ಎಲ್ಲಿ ಪ್ರಸಿದ್ಧವೋ ಅಲ್ಲಿ ಪ್ರಕೃತ ಹೇತು ಇಲ್ಲದಿರುವುದರಿಂದ ಸಪಕ್ಷವ್ಯಾವೃತ್ತತ್ವಾತ್ ಅಸಾಧಾರಣ್ಯವನ್ನು ಹೇಳಬೇಕು. ಆದರೆ, ಸಾಧ್ಯವು ಸಾಮಾನ್ಯತಃ ಪ್ರಸಿದ್ಧವಾದುದರಿಂದ, ಅಂದರೆ, ಜ್ಞಾನವ್ಯಕ್ತಿವಿಶೇಷದಲ್ಲಿ ಪ್ರಾಮಾಣ್ಯವು ನಿರ್ಧಾರವಾಗಿಲ್ಲ ವಾದುದರಿಂದ ಸಪಕ್ಷವೇ ಇಲ್ಲ. ಆದಕಾರಣ ಅಸಾಧಾರಣ್ಯದೋಷವೂ ಇಲ್ಲ.

## ನ್ಯಾಯದೀಪ

**ಪ್ರಕಾರಾಂತರೇಣ ಪ್ರಸಿದ್ಧಿಮ್ ಆಶಂಕ್ಯ ನಿರಾಹ—ನ ಚೇತಿ ॥ 'ವಿಶೇಷ್ಯವೃತ್ತಿ ಪ್ರಕಾರಕಂ ಜ್ಞಾನಂ ನಾಸ್ತಿ, ಪ್ರಮಾ ನಾಸ್ತಿ' ಇತ್ಯಾದಿನಿಷೇಧಸ್ಯ ಕ್ವಚಿತ್ ಪ್ರಾಮಾ ಪ್ರಸಿದ್ಧಿಂ ವಿನಾ ಅನುಪಪತ್ತೇಃ ತದರ್ಥಂ ತತ್‌ಪ್ರಸಿದ್ಧ್ಯಭ್ಯುಪಗಮೇ ವ್ಯಾಘಾತರೂಪದಂಡ–ಪ್ರಸಂಗಾತ್ ತದ್ಭಯೇನ ಕ್ವಚಿತ್ ಪ್ರಸಿದ್ಧೇಃ ಅವಶ್ಯವಾಚ್ಯತ್ವಾತ್– 'ಸಾಮಾನ್ಯತಃ ಪ್ರಸಿದ್ಧಮ್' ಇತ್ಯುಕ್ತಮ್ ।**

**ಸಾಧ್ಯಮಾನಮಿತಿ ॥ ವಹ್ನಿಜ್ಞಾನಂ ವಿಶೇಷ್ಯವೃತ್ತಿ ಪ್ರಕಾರಕಂ, ಸಮರ್ಥ ಪ್ರವೃತ್ತಿಹೇತುತ್ವಾತ್, ಇತಿ ವ್ಯತಿರೇಕಿಣಾ ಸಾಧ್ಯಮಾನಮ್, ಇತ್ಯರ್ಥಃ ।**

**ನಾಪ್ಯಸಾಧಾರಣ್ಯಮಿತಿ ॥ ವ್ಯಕ್ತಿವಿಶೇಷೇ ಸಾಧ್ಯಸ್ಯ ಅನಿಶ್ಚಯೇನ ಸಪಕ್ಷಾನಿರ್ಣಯಾದಿತಿ ಭಾವಃ ।**

ಇನ್ನೊಂದು ವಿಧದಿಂದ ಸಾಧ್ಯಪ್ರಸಿದ್ಧಿಯನ್ನು ಆಶಂಕೆ ಮಾಡಿ ನಿಷೇಧ ಮಾಡುವುದಕ್ಕಾಗಿ 'ನ ಚ' ಇತ್ಯಾದಿ ಮೂಲಗ್ರಂಥ ಇದೆ. ಮೂಲದಲ್ಲಿ 'ವ್ಯಾಘಾತದಂಡಭಯೇನ ಸಾಮಾನ್ಯತಃ ಪ್ರಸಿದ್ಧಂ'

ಎಂದಿದೆ. ಅದರ ಅಭಿಪ್ರಾಯ– 'ವಿಶೇಷ್ಯವೃತ್ತಿ ಪ್ರಕಾರಕಂ ಜ್ಞಾನಂ ನಾಸ್ತಿ, ಪ್ರಮಾ ನಾಸ್ತಿ' ಎಂದು ಪ್ರತಿವಾದಿಯು ನಿಷೇಧ ಮಾಡಿದಾಗ ವಾದಿಯು ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು. ಆದರೆ, ಪ್ರಮಾಣ್ಯವು ಎಲ್ಲೂ ಪ್ರಸಿದ್ಧವಾಗಿರದಿದ್ದರೆ ಅಪ್ರಸಕ್ತವಾದುದರಿಂದ ನಿಷೇಧವೇ ಕೂಡುವುದಿಲ್ಲ. ಆದಕ್ಕಾಗಿ, ಎಲ್ಲಾದರೂ ಒಂದು ಕಡೆ ಪ್ರಸಿದ್ಧ ಎಂದು ಹೇಳಿದರೆ, ಪ್ರಸಿದ್ಧವಾದುದನ್ನು ನಿಷೇಧ ಮಾಡುವುದು ವ್ಯಾಹತ. ಈ ವ್ಯಾಹತಿಯ ಪರಿಹಾರಕ್ಕಾಗಿ ಪ್ರಾಮಾಣ್ಯವು ಸಾಮಾನ್ಯತಃ ಪ್ರಸಿದ್ಧ ಎಂದು ಅಂಗೀಕರಿಸಬೇಕಾಗುತ್ತದೆ. ಆಗ ಅಪ್ರಸಿದ್ಧ ವಿಶೇಷಣತಾದೋಷ ಪರಿಹಾರವಾಗುತ್ತದೆ.

ಮೂಲದಲ್ಲಿ 'ಸಾಧ್ಯಮಾನಂ' ಎಂದಿದೆ. ಸಾಧನೆ ಮಾಡುವ ಕ್ರಮ ಹೀಗೆ— ''ಅಯಂ ವಹ್ನಿಃ'' ಎಂಬ ಜ್ಞಾನದಲ್ಲಿ ವಿಶೇಷ್ಯವಾದ ವಹ್ನಿಯಲ್ಲಿ ಇರುವ ಧರ್ಮವೇ ಪ್ರಕಾರವಾಗಿ ತೋರುತ್ತಿದೆ, ಏಕೆಂದರೆ, ಆ ಜ್ಞಾನ ಬಂದ ಮೇಲೆ ನಾವು ಅಲ್ಲಿ ಹೋಗಿ, ಬೆಂಕಿಯಿಂದ ನಡೆಯಬೇಕಾದ ಕೆಲಸವನ್ನು ಮಾಡುತ್ತೇವೆ. ಇದು ಅನುಮಾನದ ಕ್ರಮ.

ಹೀಗೆ ಸಾಮಾನ್ಯತಃ ಸಾಧ್ಯಪ್ರಸಿದ್ಧವಾದುದರಿಂದ ಅಪ್ರಸಿದ್ಧವಿಶೇಷಣತಾ ಪರಿಹಾರ ವಾಯಿತು. ಆದರೆ ಸಾಧ್ಯವಿದ್ದಲ್ಲಿ ಹೇತು ಇಲ್ಲದಿರುವುದರಿಂದ ಅಸಾಧಾರಣ್ಯದೋಷ ಬಂತು ಎಂಬ ಆಕ್ಷೇಪವನ್ನು ಮೂಲದಲ್ಲಿ 'ನಾಪಿ ಅಸಾಧಾರಣ್ಯಮ್' ಎಂದು ಪರಿಹರಿಸಲಾಗಿದೆ. ಸಾಧ್ಯವು ಪ್ರಸಿದ್ಧವಾದರೂ ನಿರ್ದಿಷ್ಟವಾದ ಒಂದು ಜ್ಞಾನದಲ್ಲಿ ಪ್ರಸಿದ್ಧವಾಗಿಲ್ಲ, ಹಾಗಿದ್ದಿದ್ದರೆ ಅದರಲ್ಲಿ ಹೇತುವು ಇಲ್ಲದಿರುವುದರಿಂದ ಅಸಾಧಾರಣ್ಯದೋಷ ಬರುತ್ತಿತ್ತು, ಎಂದು ಮೂಲದ ಅಭಿಪ್ರಾಯ.

**प्रथमे स्वार्थानुमाने परकीयस्य प्रामाण्यनिषेधस्याभावेन व्याघातानुपस्थितेः । स्वयं निषेधस्य च तद्धीपूर्वकत्वात् ।**

ಹೀಗೆ ಹೇಳುವುದೂ ಸರಿಯಲ್ಲ, ಪರಾರ್ಥಾನುಮಾನದಲ್ಲಿ ಪ್ರತಿವಾದಿ ನಿಷೇಧ ಮಾಡಿದಾಗ ವ್ಯಾಘಾತ ಬರಬಹುದು. ಆದರೆ, ಮೊದಲು ನಾವು ಪ್ರಾಮಾಣ್ಯವನ್ನು ತಿಳಿಯಲು ಸ್ವಾರ್ಥಾನುಮಾನ ಮಾಡಿದಾಗ ವ್ಯಾಘಾತದ ಪ್ರಸಕ್ತಿ ಇಲ್ಲ. ಅಲ್ಲಿ ಅಪ್ರಸಿದ್ಧವಿಶೇಷಣತಾವನ್ನು ಪರಿಹಾರ ಮಾಡುವುದು ಹೇಗೆ?

[1]ಸ್ವಾರ್ಥಾನುಮಾನದಲ್ಲೂ 'ಪ್ರಮಾ ನಾಸ್ತಿ' ಎಂದು ತಾನೇ ನಿಷೇಧ ಮಾಡಿ ವಹ್ನಿಜ್ಞಾನದಲ್ಲಿ

---

1. **ಈ ಅಂಶವೂ ಮಣಿಯ ಪೂರ್ವಪಕ್ಷಭಾಗದಲ್ಲಿ ಇದೆ—**
**'ತರ್ಹಿ ಪ್ರಥಮಂ ಕಸ್ಯಾಪಿ ಸ್ವಾರ್ಥಂ ಪ್ರಾಮಾಣ್ಯಾನುಮಾನಂ ನ ಸ್ಯಾತ್। ಪ್ರಾಮಾಣ್ಯನಿಷೇಧರೂಪಸ್ಯ ಪರಕೀಯವ್ಯಾಘಾತಸ್ಯ ತದಾನುಪಸ್ಥಿತೇಃ। ಸ್ವಯಂಪ್ರಾಮಾಣ್ಯ ನಿಷೇಧಸ್ಯ ತದ್ಧೀಪೂರ್ವಕತ್ವಾತ್ ॥ (ಪು.250) ಸ್ವಾರ್ಥಾನುಮಾನದಲ್ಲಿ ನಿಷೇಧಪೂರ್ವಕ ಸಾಧನೆ ಮಾಡುವ ಸಂದರ್ಭ ಇಲ್ಲ. ಆದ್ದರಿಂದ ಅನುಮಾನಾತ್ ಪೂರ್ವದಲ್ಲಿ ಪ್ರಾಮಾಣ್ಯೋಪಸ್ಥಿತಿ ಇಲ್ಲದಿರುವುದರಿಂದ ಪ್ರಾಮಾಣ್ಯಸಾಧಕಾನುಮಾನದಲ್ಲಿ ಅಪ್ರಸಿದ್ಧ ವಿಶೇಷಣತಾ ದೋಷವಿದೆ. ಈ ಮಣಿವಾಕ್ಯದಲ್ಲಿ ನಿಷೇಧರೂಪಸ್ಯ ವ್ಯಾಘಾತಸ್ಯ ಎಂದರೆ ನಿಷೇಧೇನ ರೂಪ್ಯತೇ=ಜ್ಞಾಪ್ಯತೇ ಯಃ ವ್ಯಾಘಾತಃ, ಎಂದು ಅರ್ಥ.**

ಪ್ರಾಮಾಣ್ಯವನ್ನು ಸಾಧನೆ ಮಾಡಿದರೆ ಹಿಂದೆ ಹೇಳಿದಂತೆ ಆ ನಿಷೇಧ ಅಯುಕ್ತವೇ ಆಗುತ್ತದೆ. ಆದ್ದರಿಂದ ಸ್ವಾರ್ಥಾನುಮಾನದಲ್ಲಿ ಅಪ್ರಸಿದ್ಧವಿಶೇಷಣತಾ ಬಂದೇ ತೀರುತ್ತದೆ.

## ನ್ಯಾಯದೀಪ

**ನನು ಸ್ವಾರ್ಥಾನುಮಾನೇ ಪರಕೀಯವ್ಯಾಘಾತಾನವಾತಾರೇऽಪಿ ಸ್ವಕೀಯ ಪ್ರಾಮಾಣ್ಯನಿಷೇಧಾನುಪಪತ್ತ್ಯೈವ ತತ್ಸಿದ್ಧಿಃ ಸ್ಯಾತ್ ಇತ್ಯತ ಆಹ–ಸ್ವಯಮಿತಿ ॥ ತಥಾ ಚ ಸಾ ಧೀರೇವ ಕಥಂ ಸ್ಯಾದಿತಿ ಮೃಗ್ಯತೇ ಇತಿ ಭಾವಃ ॥**

ಸ್ವಾರ್ಥಾನುಮಾನಕ್ಕಿಂತ ಮೊದಲು ಸ್ವಯಂ ಪ್ರಾಮಾಣ್ಯನಿಷೇಧವನ್ನು ಮಾಡಿದಲ್ಲಿ ಅಲ್ಲಿ ಸಾಧ್ಯಪ್ರಸಿದ್ಧಿ ಇಲ್ಲದಿರುವುದರಿಂದ ಆ ನಿಷೇಧಕ್ಕೆ ಪ್ರತಿಯೋಗಿಯಾದ ಸಾಧ್ಯದ ಜ್ಞಾನ ಹೇಗೆ ಬಂತು, ಎಂದು ಅಲ್ಲೂ ವಿಚಾರ ಮಾಡಲೇಬೇಕಾಗುತ್ತದೆ, ಎಂದು ಮೂಲದ ಭಾವ.

## ನ್ಯಾಯದೀಪದಲ್ಲಿ ಅವತಾರಿಕೆ

**''ಪ್ರಾಗ್‌ಭವೀಯ ಸಂಸ್ಕಾರಾತ್ ವಿಶೇಷ್ಯಾವೃತ್ತ್ಯಪ್ರಕಾರಕತ್ವಂ, ತದ್ವತಿ ತತ್‌ಪ್ರಕಾರಕತ್ವಂ ವಾ ತತ್‌ಪ್ರಾಮಾಣ್ಯಂ, ತನ್ಮಾತ್ರಂ ಸ್ಮೃತಂ ವಹ್ನಿಜ್ಞಾನಾದೌ ಸಾಧ್ಯಮಾನಂ'' (ಮಣಿಪು.251)**

**ಇತ್ಯಾದಿನಾ ಮಣಿಕೃದುಕ್ತಂ ತತ್‌ಸಂಪ್ರದಾಯವಿದಾಂ ಮತಮನೂದ್ಯ ನಿರಾಹ- ನಚ ತತ್ರೇತಿ ॥ ಪ್ರಥಮಪ್ರಾಮಾಣ್ಯಾನುಮಿತಿಸ್ಥಲೇ ಇತ್ಯರ್ಥಃ ।**

ಪ್ರಥಮ ಪ್ರಾಮಾಣ್ಯಾನುಮಿತಿಯಲ್ಲಿ ಸಾಧ್ಯಪ್ರಸಿದ್ಧಿ ಪರತಸ್ತ್ವಪಕ್ಷದಲ್ಲಿ ಹೇಗೆ, ಎಂದು ಪೂರ್ವಪಕ್ಷ ಮಾಡಿ ಮಣಿಗ್ರಂಥದಲ್ಲಿ 'ಉಚ್ಯತೇ' ಎಂದು ಸಿದ್ಧಾಂತ ಮಾಡಲಾಗಿದೆ. ಅಲ್ಲಿ ಮಣಿಕಾರ ತನ್ನ ಮತವನ್ನು ಆಮೇಲೆ ಹೇಳಿ ಮೊದಲು ಪ್ರಾಚೀನ ನೈಯಾಯಿಕರ ಮತವನ್ನು ಹೀಗೆ ಹೇಳಿದ್ದಾನೆ— ಹಿಂದಿನ ಜನ್ಮದಲ್ಲಿ ಅನುಭೂತವಾದ ಪ್ರಾಮಾಣ್ಯದ ಸ್ಮರಣೆ ಈ ಜನ್ಮದಲ್ಲಿ ಬರುತ್ತದೆ. ಸಾಧ್ಯ ಪ್ರಸಿದ್ಧಿಯಾಗುತ್ತದೆ. ಪ್ರಾಥಮಿಕ ಪ್ರಾಮಾಣ್ಯಾನುಮಾನ ಮಾಡಬಹುದು, ಎಂದು ಅವರ ಸಮಾಧಾನ. ಪ್ರಾಮಾಣ್ಯ ಎಂದರೆ ವಿಶೇಷ್ಯದಲ್ಲಿ ಇಲ್ಲದಿರುವ ಧರ್ಮವು ಪ್ರಕಾರವಾಗಿ ಭಾನವಾಗದಿರುವುದು. ವಹ್ನಿಯನ್ನು ನೋಡಿ 'ಅಯಂ ವಹ್ನಿಃ' ಎಂದು ಜ್ಞಾನ ಬಂದರೆ ಆ ಜ್ಞಾನದಲ್ಲಿ ವಿಶೇಷ್ಯ ವಹ್ನಿ. ಪ್ರಕಾರ ವಹ್ನಿತ್ವ. ಅದು ವಹ್ನಿಯಲ್ಲಿ ಇದೆ. ಹೀಗೆ ವಿಶೇಷ್ಯದಲ್ಲಿ ಇರುವ ಧರ್ಮವೇ ಆ ಜ್ಞಾನದಲ್ಲಿ ಪ್ರಕಾರವಾಗಿದೆ. ಆದ್ದರಿಂದ ಅದು ಪ್ರಮಾಣ.

ಅಥವಾ 'ತದ್ವತಿ ತತ್‌ಪ್ರಕಾರಕತ್ವಂ' ಇದೇ ಪ್ರಾಮಾಣ್ಯ. ಪ್ರಕಾರೀಭೂತಧರ್ಮವು ಇರುವ ವಸ್ತುವೇ ವಿಶೇಷ್ಯವಾಗಿದ್ದಲ್ಲಿ ಆ ಜ್ಞಾನ ಪ್ರಮಾಣವಾಗುತ್ತದೆ.

ಈ ಎರಡು ವಿಧದ ಪ್ರಾಮಾಣ್ಯದ ಸ್ಮರಣೆ ಬಂದು ಅದನ್ನು ವಹ್ನಿಜ್ಞಾನದಲ್ಲಿ ಸಾಧನೆ ಮಾಡಬೇಕು, ಎಂದು ಮಣಿಯಲ್ಲಿ ಮಾಡಿದ ಪ್ರಾಚೀನ ಮತದ ಅನುವಾದ. ಅದನ್ನು ಮೂಲದಲ್ಲಿ 'ನಚ' ಎಂದು ಅನುವಾದ ಮಾಡಿ ನಿರಾಕರಿಸಲಾಗಿದೆ.

**न च तत्र प्राग्भवीयसंस्कारजन्या स्मृतिरूपा तत्प्रसिद्धिः । प्रथमप्रामाण्यज्ञानस्य प्रामाण्यस्वतस्त्वेनैवोपपत्तौ तत्कल्पकाभावात्।**

ಪ್ರಾಥಮಿಕಪ್ರಾಮಾಣ್ಯಾನುಮಾನದಲ್ಲಿ, ಹಿಂದಿನ ಜನ್ಮದ ಪ್ರಾಮಾಣ್ಯಾನುಭವಜನ್ಯವಾದ ಸಂಸ್ಕಾರದಿಂದ ಹುಟ್ಟಿದ ಸ್ಮೃತಿಯೇ ಸಾಧ್ಯಪ್ರಸಿದ್ಧಿ ಎನ್ನುವುದು ಯುಕ್ತವಲ್ಲ. ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸಿ ಜ್ಞಾನದ ಜೊತೆಯಲ್ಲಿ ಪ್ರಾಮಾಣ್ಯವೂ ಮನಸ್ಸಿನಿಂದಲೇ ತಿಳಿಯುತ್ತದೆ. ಅದೇ ಪ್ರಥಮಪ್ರಾಮಾಣ್ಯಜ್ಞಾನ ಎಂದು ಸುಲಭವಾಗಿ ಹೇಳಲು ಬರುವಾಗ ಜನ್ಮಾಂತರದ ಸ್ಮೃತಿಯನ್ನು ಕಲ್ಪನೆ ಮಾಡಲು ಆಧಾರವೇ ಇಲ್ಲ.

## ನ್ಯಾಯದೀಪ

**ಉಪಪತ್ತಾವಿತಿ ।। ತದುಪಪತ್ತಿ–ಪ್ರಕಾರಶ್ಚ ಬಾಧೋದ್ಧಾರಗ್ರಂಥೇ, ಸಂಶಯೋಪಪಾದನ ಗ್ರಂಥಾದೌ ಚ ಉಕ್ತಃ ಇತಿ ಭಾವಃ ।।**

ಪ್ರಾಮಾಣ್ಯ ಸ್ವತಸ್ತ್ವದ ಸಮರ್ಥನೆಯನ್ನು ಹಿಂದಿನ ಬಾಧೋದ್ಧಾರ ಗ್ರಂಥದಲ್ಲಿ ಹಾಗೂ ಪ್ರಾಮಾಣ್ಯವು ಸ್ವತಃ ಆದರೆ ಕದಾಚಿತ್ ಪ್ರಾಮಾಣ್ಯಸಂದೇಹ ಹೇಗೆ ಬರುತ್ತದೆ, ಎನ್ನುವುದನ್ನು ಸಮರ್ಥನೆ ಮಾಡುವ ಸಂದರ್ಭದಲ್ಲಿ ಹಿಂದೆಯೇ ತಿಳಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**''ವಯಂ ತು ಬ್ರೂಮಃ–ಪ್ರಥಮಮ್ ಅಪ್ರಾಮಾಣ್ಯಾಭಾವ ಏವ ಪ್ರಾಮಾಣ್ಯಂ ವ್ಯತಿರೇಕಿಣಾ ಸಾಧ್ಯಮ್'' (ಮಣಿ.ಪು.253) ಇತ್ಯಾದಿನಾ ಉಕ್ತಂ ಮಣಿಕೃದಭಿಮತಂ ಪಕ್ಷಮಾಶಂಕತೇ—ಅಥೇತಿ ।।**

ಪ್ರಥಮಪ್ರಾಮಾಣ್ಯಾನುಮಾನದ ಬಗ್ಗೆ ಪ್ರಾಚೀನ ನೈಯಾಯಿಕರ ಅಭಿಪ್ರಾಯವನ್ನು ಹೇಳಿ ಮಣಿಕಾರ 'ವಯಂ ತು ಬ್ರೂಮಃ' ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ— ಪ್ರಥಮಾನುಮಾನದಿಂದ ಅಪ್ರಾಮಾಣ್ಯದ ಅಭಾವವನ್ನು ಕೇವಲ ವ್ಯತಿರೇಕ್ಯನುಮಾನದಿಂದ ಸಾಧಿಸ ಬೇಕು. ಅಪ್ರಾಮಾಣ್ಯದ ಅಭಾವವೇ ಪ್ರಾಮಾಣ್ಯವಾದುದರಿಂದ ಅನುಮಾನದಿಂದ ಪ್ರಾಮಾಣ್ಯವನ್ನೇ ಸಾಧಿಸಿದಂತಾಗುತ್ತದೆ. ಇದು ಮಣಿಗ್ರಂಥದ ಆಶಯ. ಇದನ್ನು ಮೂಲದಲ್ಲಿ 'ಅಥ' ಎಂದು ಪೂರ್ವಪಕ್ಷರೂಪದಲ್ಲಿ ಹೇಳಲಾಗಿದೆ.

**अथ प्रथमं 'अयं वह्नित्वेनानुभवो, वह्नित्वप्रकारकत्वे सति वह्नित्वाभाववद्विशेष्यको न, समर्थप्रवृत्तिजनकत्वात्, व्यतिरेकेणाप्रमावत्' इत्यनुमानेन अप्रामाण्याभाव एवानुमेयः। तत एव निष्कम्पप्रवृत्तेः। न च तत्रापि साध्याप्रसिद्धिर्दोषः। अभावसाध्यके व्यतिरेकिणि साध्यप्रसिद्धिं विनैव साध्याभावरूपस्य भावस्य हेत्वभावव्याप्यत्वग्रहात्।**

ಸಾಧ್ಯಾಪ್ರಸಿದ್ಧಿಪರಿಹಾರಕ್ಕಾಗಿ ಮೊದಲು ಹೀಗೆ ಅನುಮಾನ ಮಾಡಬೇಕು. ''ಅಯಂ ವಹ್ನಿತ್ವೇನ ಅನುಭವಃ, ವಹ್ನಿತ್ವಪ್ರಕಾರಕತ್ವೇ ಸತಿ ವಹ್ನಿತ್ವಾಭಾವವದ್ವಿಶೇಷ್ಯಕಃ ನ, ಸಮರ್ಥಪ್ರವೃತ್ತಿಜನಕತ್ವಾತ್'' ಎಂದು. ಇದರ ಅರ್ಥ— ''ಅಯಂ ವಹ್ನಿಃ'' ಎಂಬ ಅನುಭವವು ವಹ್ನಿತ್ವಪ್ರಕಾರಕತ್ವವಿಶಿಷ್ಟ ವಹ್ನಿತ್ವಾಭಾವವದ್ವಿಶೇಷ್ಯಕವಲ್ಲ. ಅರ್ಥಾತ್, ಆ ಜ್ಞಾನದಲ್ಲಿ ತದಭಾವವತಿ ತತ್‌ಪ್ರಕಾರಕತ್ವರೂಪವಾದ ಅಪ್ರಾಮಾಣ್ಯ ಇಲ್ಲ, ಎಂದು ಸಾಧ್ಯದ ಅರ್ಥ. ಒಂದುವೇಳೆ ಆ ಜ್ಞಾನವು ಅಪ್ರಮಾಣವಾಗಿದ್ದಿದ್ದರೆ, ಹತ್ತಿರ ಹೋದಾಗ ವಹ್ನಿ ಸಿಗಬಾರದಿತ್ತು. ಅರ್ಥಾತ್, ವಹ್ನಿಜ್ಞಾನವು ಸಮರ್ಥಪ್ರವೃತ್ತಿಜನಕ ಆಗಬಾರದಿತ್ತು. ಆದರೆ, ಅದು ಸಮರ್ಥಪ್ರವೃತ್ತಿ ಜನಕವಾಗಿದೆ. ಆದ್ದರಿಂದ ಆ ಅನುಭವವು ಅಪ್ರಮಾಣ ಅಲ್ಲ.

ಇಲ್ಲಿ ಅನ್ವಯವ್ಯಾಪ್ತಿ ಇಲ್ಲವಾದುದರಿಂದ ವ್ಯತಿರೇಕಿ ಉದಾಹರಣೆಯನ್ನೇ ಕೊಡಬೇಕು. ಉದಾಹರಣೆಗೆ—'ಗುಂಜಾಪುಂಜವನ್ನು ನೋಡಿ ಬಂದಿರುವ ವಹ್ನಿಯ ಭ್ರಮೆ'.

ಹೀಗೆ ವಹ್ನಿಯ ಅನುಭವದಲ್ಲಿ ಅಪ್ರಾಮಾಣ್ಯ ಇಲ್ಲ, ಎಂದು ಅನುಮಾನದಿಂದ ಸಿದ್ಧವಾಗುವುದರಿಂದಲೇ ನಿಷ್ಕಂಪಪ್ರವೃತ್ತಿಯಾಗುತ್ತದೆ. ಪ್ರಾಮಾಣ್ಯದ ಜ್ಞಾನ ಬೇಕಾಗಿಲ್ಲ.

ಈ ಅನುಮಾನದಲ್ಲೂ ಸಾಧ್ಯಾಪ್ರಸಿದ್ಧಿ ದೋಷ, ಎಂದು ಹೇಳಲಾಗದು. ಇದು ಅಭಾವಸಾಧ್ಯಕ ವ್ಯತಿರೇಕ್ಯನುಮಾನ. ವ್ಯತಿರೇಕಿ ಅನುಮಾನವಾಗಿರುವುದರಿಂದ ಸಾಧ್ಯವು ಅಪ್ರಸಿದ್ಧವಾದರೂ ಸಾಧ್ಯಾಭಾವದಲ್ಲಿ ವ್ಯಾಪ್ತಿಜ್ಞಾನ ಬರಬಹುದು. ಅಭಾವ ಸಾಧ್ಯಕವಾದುದರಿಂದ ಸಾಧ್ಯಜ್ಞಾನ ಇಲ್ಲದೆಯೂ ಸಾಧ್ಯಾಭಾವಜ್ಞಾನವೂ ಬರಬಹುದು. ಅಪ್ರಾಮಾಣ್ಯಾಭಾವ ಸಾಧ್ಯ. ಸಾಧ್ಯಾಭಾವ ಎಂದರೆ ಅಪ್ರಾಮಾಣ್ಯಾಭಾವಾಭಾವ, ಅಂದರೆ ಅಪ್ರಾಮಾಣ್ಯ. ಅದು ಭಾವ ರೂಪ. ಅದರ ಜ್ಞಾನಕ್ಕೆ ಸಾಧ್ಯದ ಅಂದರೆ, ಅಪ್ರಾಮಾಣ್ಯಾಭಾವದ ಜ್ಞಾನದ ಅಗತ್ಯವಿಲ್ಲ. ಹೀಗೆ ಸಾಧ್ಯಾಪ್ರಸಿದ್ಧಿ ಬಾಧಕವೇ ಅಲ್ಲ.

## ನ್ಯಾಯದೀಪ

**ಭ್ರಮವ್ಯಾವೃತ್ತ್ಯರ್ಥಂ ಅಯಮಿತ್ಯುಕ್ತಿಃ। ದ್ರವ್ಯತ್ವಾದಿನಾ ವಹ್ನ್ಯನುಭವೇ**

**ಅಬಾಧಾಯ ವಹ್ನಿತ್ವೇನ ಇತ್ಯುಕ್ತಿಃ । 'ವಹ್ನಿತ್ವಾಭಾವವತಿ ವಹ್ನಿತ್ವಪ್ರಕಾರಕೋ ನ' ಇತಿ ಮಣ್ಯುಕ್ತಸಾಧ್ಯಸ್ಯ ಯಜ್ಞಪತಿಟೀಕಾನುರೋಧೇನ ಅರ್ಥೋಕ್ತಿಃ ವಹ್ನಿತ್ವ ಪ್ರಕಾರಕತ್ವೇ ಸತಿ, ಇತ್ಯಾದಿ ಸತ್ಯಂತಂ ನ ನಞರ್ಥಭೂತಾಭಾವ ವಿಶೇಷಣಮ್ । ಏವಂ ಚ 'ಅತ್ರ ವಹ್ನಿತ್ವಮ್' ಇತಿ ಜ್ಞಾನೇ ವಹ್ನಿತ್ವಾಭಾವವದ್–ವಹ್ನಿತ್ವವಿಶೇಷ್ಯಕತ್ವ ಸತ್ವೇಽಪಿ ವಿಶೇಷಣಾಭಾವಪ್ರಯುಕ್ತ–ವಿಶಿಷ್ಟಾಭಾವರೂಪ–ಸಾಧ್ಯಸತ್ವಾತ್ ನ ವ್ಯಭಿಚಾರಃ ।**

ಮಣಿಕಾರ ಹೇಳಿದ ಅನುಮಾನದಲ್ಲಿ 'ಅಯಂ ವಹ್ನಿತ್ವೇನ ಅನುಭವಃ' ಎಂದು ಪಕ್ಷನಿರ್ದೇಶವಿದೆ. 'ಅಯಂ' ಎಂಬ ಅಂಶವನ್ನು ಬಿಟ್ಟು 'ವಹ್ನಿತ್ವೇನ ಅನುಭವಃ' ಎಂದು ಇಷ್ಟೇ ಪಕ್ಷನಿರ್ದೇಶ ಮಾಡಿದರೆ ಗುಂಜಾಪುಂಜವನ್ನು ನೋಡಿ ಬಂದಿರುವ 'ಅಯಂ ವಹ್ನಿಃ' ಎಂಬ ಭ್ರಮೆಯೂ ಪಕ್ಷದಲ್ಲಿ ಸೇರುತ್ತಿತ್ತು. ಅದರಲ್ಲಿ ಸಾಧ್ಯ ಮತ್ತು ಹೇತುಗಳು ಇಲ್ಲ. ಆದಕ್ಕಾಗಿ 'ಅಯಂ' ಎಂಬ ಅಂಶವನ್ನೂ ಸೇರಿಸಲಾಗಿದೆ. 'ಅಯಂ' ಎಂದರೆ ವಿವಕ್ಷಿತವಾದ ವಹ್ನ್ಯನುಭವ, ಎಂದು ಅರ್ಥ. ಅಂದರೆ ಪ್ರಮಾತ್ಮಕವಾದ ಅನುಭವ. ಅದೇ ಪಕ್ಷ.

ಇನ್ನು 'ಅಯಂ ವಹ್ನ್ಯನುಭವಃ' ಎಂದು ಪಕ್ಷನಿರ್ದೇಶಮಾಡಿದರೆ ವಹ್ನಿಯನ್ನು ನೋಡಿ ಬಂದಿರುವ 'ಇದಂ ದ್ರವ್ಯಂ' ಎಂಬ ಅನುಭವವೂ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಸಾಧ್ಯ ಇಲ್ಲ. ಏಕೆಂದರೆ, ಆ ಜ್ಞಾನದಲ್ಲಿ ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವ ಎಂಬ ಸಾಧ್ಯಾಂಶ ಇದ್ದರೂ 'ವಹ್ನಿತ್ವಪ್ರಕಾರಕತ್ವ' ಎಂಬ ವಿಶೇಷಣಾಂಶ ಇಲ್ಲ. ಅದು ದ್ರವ್ಯತ್ವಪ್ರಕಾರಕ. ಆದ್ದರಿಂದ ಬಾಧ. ಆದಕ್ಕಾಗಿ 'ವಹ್ನಿತ್ವೇನ ಅನುಭವಃ' ಎಂದು ಪಕ್ಷ ನಿರ್ದೇಶ ಮಾಡಲಾಗಿದೆ. ''ಇದಂ ದ್ರವ್ಯಂ'' ಎಂಬುದು ದ್ರವ್ಯತ್ವೇನ ಅನುಭವ, ವಹ್ನಿತ್ವೇನ ಅನುಭವ ಅಲ್ಲ, ಆದ್ದರಿಂದ ಅದು ಪಕ್ಷದಲ್ಲಿ ಸೇರುವುದಿಲ್ಲ.

ಮಣಿಗ್ರಂಥದಲ್ಲಿ 'ನ ವಹ್ನಿತ್ವಾಭಾವವತಿ ವಹ್ನಿತ್ವಪ್ರಕಾರಕಃ' ಎಂದು ಸಾಧ್ಯವನ್ನು ನಿರ್ದೇಶಮಾಡಲಾಗಿದೆ. ಇದಕ್ಕೆ ಯಜ್ಞಪತಿ ಉಪಾಧ್ಯಾಯರು ಮಾಡಿರುವ ಅರ್ಥ–ವಹ್ನಿತ್ವಪ್ರಕಾರಕತ್ವೇ ಸತಿ ವಹ್ನಿತ್ವಾಭಾವವದ್ವಿಶೇಷ್ಯಕಃ ನ' ಎಂದು. ಅದನ್ನು ಪ್ರಕೃತದಲ್ಲಿ ಅನುಸರಿಸಲಾಗಿದೆ. ಇಲ್ಲಿ ಸತ್ಯಂತವು ಅಂದರೆ ವಹ್ನಿತ್ವಪ್ರಕಾರಕತ್ವವು ನಞರ್ಥವಾದ ಅಭಾವದಲ್ಲಿ ವಿಶೇಷಣವಲ್ಲ. ಅದು ವಿಶೇಷ್ಯಕತ್ವದಲ್ಲಿ ವಿಶೇಷಣ. ಆಗ, ವಹ್ನಿತ್ವಪ್ರಕಾರಕತ್ವ ವಿಶಿಷ್ಟವಹ್ನ್ಯಭಾವವದ್ವಿಶೇಷ್ಯಕತ್ವಾಭಾವವು ಸಾಧ್ಯ, ಎಂದಾಗುತ್ತದೆ. ಆದ್ದರಿಂದ ವಹ್ನಿಯನ್ನು ನೋಡಿ ಬಂದ 'ಅತ್ರ ವಹ್ನಿತ್ವಂ' ಎಂಬ ಅನುಭವದಲ್ಲೂ ಈ ಸಾಧ್ಯವು ಬರುತ್ತದೆ. ಆ ಅನುಭವದಲ್ಲಿ ಪ್ರಕೃತಸಾಧ್ಯಘಟಕವಾದ ವಹ್ನಿತ್ವಾಭಾವವದ್ವಿಶೇಷ್ಯಕತ್ವವು ಇದೆ. ಏಕೆಂದರೆ, ಅಲ್ಲಿ ವಿಶೇಷ್ಯ ವಹ್ನಿತ್ವ. ಅದು ವಹ್ನಿತ್ವಾಭಾವವತ್ ಆಗಿದೆ. ಹೀಗೆ, ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವರೂಪ ಸಾಧ್ಯವು ಆ ಜ್ಞಾನದಲ್ಲಿ ಇಲ್ಲ. ಆದರೆ, ಸಮರ್ಥ ಪ್ರವೃತ್ತಿಜನಕತ್ವರೂಪ ಹೇತು, ಇದೆ. ವ್ಯಭಿಚಾರ ಬಂತು. ಆದರ

ಪರಿಹಾರಕ್ಕಾಗಿ ವಹ್ನಿತ್ವಪ್ರಕಾರಕತ್ವವನ್ನು ಸಾಧ್ಯದಲ್ಲಿ ವಿಶೇಷಣವನ್ನಾಗಿ ಕೊಟ್ಟಾಗ ಆ ಜ್ಞಾನವು ವಹ್ನಿತ್ವಪ್ರಕಾರಕವಲ್ಲವಾದ ಕಾರಣ 'ವಿಶೇಷಣಾಭಾವಾತ್ ವಿಶಿಷ್ಟಾಭಾವಃ' ಎಂಬ ನ್ಯಾಯದಿಂದ ಸಾಧ್ಯವೂ ಬರುತ್ತದೆ, ವ್ಯಭಿಚಾರಪರಿಹಾರವಾಗುತ್ತದೆ.

(ಮಣಿವ್ಯಾಖ್ಯಾನ 'ಪ್ರಕಾಶದಲ್ಲಿ' ರುಚಿದತ್ತನು ಹೇತುವಿನಲ್ಲಿ ವಹ್ನಿತ್ವಪ್ರಕಾರಕತ್ವವನ್ನು ಕೊಡಬೇಕಾಗಿಲ್ಲ ಮಣ್ಯುಕ್ತಹೇತು 'ಅತ್ರ ವಹ್ನಿತ್ವಂ' ಎಂ ಜ್ಞಾನದಲ್ಲಿ ಇಲ್ಲ, ಎಂದು ಹೇಳಿದ್ದಾನೆ. ಆದರೆ, ರಾಯರು ತರ್ಕತಾಂಡವೋಕ್ತವಾದ ಹೇತುವಿಗೆ 'ಅತ್ರ ವಹ್ನಿತ್ವಂ' ಎಂಬ ಜ್ಞಾನದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ಆ ವಿಶೇಷಣ ಬೇಕು, ಎಂದು ಹೇಳಿದ್ದಾರೆ.)

## ನ್ಯಾಯದೀಪ

**ಅತ ಏವ ಮಣೌ—**

**''ದಾಹಸಮರ್ಥವಿಷಯಕ–ಪ್ರಯತ್ನಜನಕತ್ವೇ ಸತಿ**

**ವಹ್ನಿತ್ವಪ್ರಕಾರಕನಿಶ್ಚಯತ್ವಾತ್'' (ಮಣಿ.ಪು.257)**

**ಇತ್ಯಾದಿ ಹೇತೂಕ್ತೌ ಅಪಿ–**

**''ವಹ್ನಿತ್ವಾಭಾವವತಿ ವಹ್ನಿತ್ವಪ್ರಕಾರತ್ವಾದಿ–ಸಮರ್ಥ-**

**ಪ್ರವೃತ್ತಿಜನಕತ್ವಾ ಭಾವಯೋಃ'' (ಮಣಿ.ಪು.266)**

**ಇತ್ಯಗ್ರೇ ತದೀಯಗ್ರಂಥಾನುರೋಧಾತ್ ಸಮರ್ಥೇತ್ಯಾದಿ ಹೇತೂಕ್ತಿಃ। ಅನ್ಯಥಾ ಸಾಧ್ಯೇ ವಿಶೇಷಣ–ವೈಯರ್ಥ್ಯಾತ್॥**

ಪ್ರಕೃತ ಹೇತು ಮಣಿಕಾರನಿಗೂ ಸಮ್ಮತ ಎಂದು ಇಲ್ಲಿ ತೋರಿಸಲಾಗಿದೆ–

ವಸ್ತುತಃ ಮಣಿಕಾರನು ಹೇಳಿದ ಮೊದಲಹೇತು—ದಾಹಸಮರ್ಥವಿಷಯಕ ಪ್ರಯತ್ನ-ಜನಕತ್ವೇ ಸತಿ ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್, ಎಂದು. ಈ ಹೇತು 'ಅತ್ರ ವಹ್ನಿಃ' ಎಂಬ ಜ್ಞಾನದಲ್ಲಿ ಇಲ್ಲದಿರುವುದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ. ಎರಡನೆಯ ಹೇತುವಿನಲ್ಲೂ ವಹ್ನಿತ್ವಪ್ರಕಾರಕ ನಿಶ್ಚಯತ್ವವು ಸೇರಿದೆ. ಹೀಗೆ, ಕಂಠೋಕ್ತವಾದ ಎರಡೂ ಹೇತುಗಳಿಗೆ 'ಅತ್ರ ವಹ್ನಿಃ ಎಂಬ ಪ್ರಮಾದಲ್ಲಿ ವ್ಯಭಿಚಾರವಿಲ್ಲ. ('ಅತ್ರ ವಹ್ನಿತ್ವಂ' ಎಂಬ ಜ್ಞಾನದಲ್ಲಿ ಹೇತುಘಟಕವಾದ ವಹ್ನಿತ್ವಪ್ರಕಾರಕತ್ವ ಅಂಶ ಇಲ್ಲ.) ಆದರೂ, ಸಮರ್ಥಪ್ರವೃತ್ತಿಜನಕತ್ವವೂ ಇದೇ ಅನುಮಾನದಲ್ಲಿ ಒಂದು ಹೇತು. ಆ ಹೇತು 'ಅತ್ರ ವಹ್ನಿಃ' ಎಂಬ ಜ್ಞಾನದಲ್ಲಿ ಇದೆ. ಹೀಗಾಗಿ ವ್ಯಭಿಚಾರಪ್ರಸಕ್ತಿ ಇದೆ. ಅದರ ಪರಿಹಾರಕ್ಕಾಗಿ ಸಾಧ್ಯಘಟಕವಾದ 'ವಹ್ನಿತ್ವ ಪ್ರಕಾರಕತ್ವೇ ಸತಿ' ಎಂಬ ವಿಶೇಷಣಾಂಶ ಅಗತ್ಯವಾಗಿದೆ. ಕಂಠತಃ ಹೇಳದಿದ್ದರೂ ಈ ಹೇತುವೂ ಮಣಿಕಾರನಿಗೆ ಅಭಿಮತವಾಗಿದೆ. ಆದ್ದರಿಂದಲೇ, ಮಣಿಕಾರ ಮುಂದೆ

ವ್ಯತಿರೇಕವ್ಯಾಪ್ತಿಯನ್ನು ಪ್ರದರ್ಶನ ಮಾಡುವಾಗ 'ಸಮರ್ಥಪ್ರವೃತ್ತಿಜನಕತ್ವಾಭಾವಯೋಃ' ಎಂಬ ಹೇತುವನ್ನೇ ಉಲ್ಲೇಖಿಸಿದ್ದಾನೆ. ಇದನ್ನು ಹೇತುವನ್ನಾಗಿ ಪರಿಗಣಿಸದಿದ್ದಲ್ಲಿ ಸಾಧ್ಯದಲ್ಲಿ 'ವಹ್ನಿತ್ವಪ್ರಕಾರಕತ್ವೇ ಸತಿ' ಎಂಬ ವಿಶೇಷಣವೂ ವ್ಯರ್ಥವೇ ಆಗುತ್ತದೆ. ಆದ್ದರಿಂದ ಪ್ರಕೃತ ಮೂಲದಲ್ಲಿ ಹೇಳಿದ ಹೇತು ಮಣಿಕಾರನಿಗೆ ಸಮ್ಮತವಾಗಿದೆ.[1]

## ನ್ಯಾಯದೀಪ

**ವಹ್ನಿವಿಷಯಕೇತಿ ಸಮರ್ಥಪ್ರವೃತ್ತಿಃ ವಿಶೇಷಣೀಯಾ । ತೇನ ನ ಘಟಾದಿಜ್ಞಾನೇ ವ್ಯಭಿಚಾರಃ ।**

**ಏವಮಪಿ 'ಅತ್ರ ವಹ್ನಿತ್ವಮ್' ಇತಿ ಜ್ಞಾನೇ ವ್ಯಭಿಚಾರ ಇತಿ ಚೇತ್, ಏವಂ ಸತಿ ವಹ್ನಿತ್ವಪ್ರಕಾರಕತ್ವೇ ಸತೀತಿ ವಿಶೇಷಣೀಯಮ್ ।**

ಮೂಲದಲ್ಲಿ 'ಸಮರ್ಥಪ್ರವೃತ್ತಿ ಜನಕತ್ವಾತ್' ಎಂದಿಷ್ಟೇ ಹೇತು ಇದೆ. ಇದಕ್ಕೆ 'ವಹ್ನಿವಿಷಯಕ' ಎಂಬ ಅಂಶವನ್ನು ಸೇರಿಸಬೇಕು. ಆಗ 'ವಹ್ನಿವಿಷಯಕ ಸಮರ್ಥಪ್ರವೃತ್ತಿ ಜನಕತ್ವಾತ್' ಎಂದು ಹೇತುವಾಗುತ್ತದೆ. ಈ ವಿಶೇಷಣವನ್ನು ಸೇರಿಸದಿದ್ದಲ್ಲಿ 'ಅಯಂ ಘಟಃ' ಎಂಬ ಜ್ಞಾನದಲ್ಲಿ ವ್ಯಭಿಚಾರ ಬರುತ್ತದೆ. ಆ ಜ್ಞಾನವೂ ಸಮರ್ಥಪ್ರವೃತ್ತಿ ಜನಕವಾಗಿದೆ. ಆದರೆ, ಪ್ರಕೃತಸಾಧ್ಯ ಇಲ್ಲ. ಆ ಅಂಶವನ್ನು ಹೇತುವಿನಲ್ಲಿ ಸೇರಿಸಿದಾಗ ಘಟಜ್ಞಾನದಲ್ಲಿ ವಹ್ನಿವಿಷಯಕ ಪ್ರವೃತ್ತಿಜನಕತ್ವ ಇಲ್ಲವಾದುದರಿಂದ ವ್ಯಭಿಚಾರ ಪರಿಹಾರವಾಗುತ್ತದೆ.

(ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವ ಮಾತ್ರ ಸಾಧ್ಯ ಎಂದು ಪರಿಗಣಿಸಿದಾಗ) 'ಅತ್ರ ವಹ್ನಿತ್ವಂ'[2] ಎಂಬ ಜ್ಞಾನದಲ್ಲಿ ವಹ್ನಿವಿಷಯಕ ಸಮರ್ಥಪ್ರವೃತ್ತಿಜನಕತ್ವ ಇರುವುದರಿಂದ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ಹೇತುವಿನಲ್ಲೂ ವಹ್ನಿತ್ವ ಪ್ರಕಾರಕತ್ವೇ ಸತಿ ಎಂಬ ವಿಶೇಷಣವನ್ನು ಸೇರಿಸಬೇಕು. ಅಂತಹ ವಿಶೇಷಣ ವಿಶಿಷ್ಟವಾದ ಹೇತು 'ಅತ್ರ ವಹ್ನಿಃ' ಎಂಬ ಜ್ಞಾನದಲ್ಲಿ ಇಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ.)

## ನ್ಯಾಯದೀಪ

**ನನು ಪ್ರಾಮಾಣ್ಯನಿಶ್ಚಯಾಭಾವೇ ಕಥಂ ಪ್ರವೃತ್ತಿಃ? ಇತ ಆಹ–ತತಏವೇತಿ ॥**

---

1. ವ್ಯಾಪ್ತಿಪ್ರದರ್ಶಕ ಮಣಿವಾಕ್ಯದಲ್ಲಿ 'ವಹ್ನಿತ್ವಪ್ರಕಾರಕತ್ವಾದಿ' ಎಂಬ ಆದಿಪದದಿಂದ ಮಣಿಕಾರ ಹೇಳಿದ ಇತರ ಸಾಧ್ಯಗಳು ಸಂಗೃಹೀತವಾಗುತ್ತದೆ.
2. ನ್ಯಾಯದೀಪದ ಈ ಕೊನೆಯ ಅಂಶ 'ಅತ್ರವಹ್ನಿತ್ವಂ' ಎಂಬ ಜ್ಞಾನದಲ್ಲಿ ವಹ್ನಿತ್ವಪ್ರಕಾರಕತ್ವರೂಪ ವಿಶೇಷಣಾಂಶವು ಇಲ್ಲದಿರುವುದರಿಂದ ಸಾಧ್ಯವೂ ಇದೆ, ವ್ಯಭಿಚಾರ ಇಲ್ಲ, ಎಂಬ ಮೊದಲು ಹೇಳಿದ ವಿಷಯಕ್ಕೆ ವಿರುದ್ಧವಾಗಿದೆ. ಆದ್ದರಿಂದಲೇ ಮೊದಲ ವಾಕ್ಯ ಕೆಲವು ಮೂಲ ಪ್ರತಿಗಳಲ್ಲಿ ಇಲ್ಲ.

**ಅಪ್ರಾಮಾಣ್ಯಾಭಾವಜ್ಞಾನತ ಏವ ಇತ್ಯರ್ಥಃ । ಪ್ರಾಮಾಣ್ಯನಿಶ್ಚಯಸ್ಯಾಪಿ ತನ್ಮತೇ ತತ್ರೈವ ಉಪಯೋಗಾತ್ ಇತಿ ಭಾವಃ ।**

**ಅಭಾವಸಾಧ್ಯಕೇತಿ ॥ ವ್ಯಾಪ್ತಿಜ್ಞಾನಾರ್ಥಾ ಹಿ ಸಾಧ್ಯಪ್ರಸಿದ್ಧಿಃ । ವ್ಯಾಪ್ತಿಶ್ಚ ಸಾಧ್ಯಾಭಾವ-ಹೇತ್ವಭಾವಯೋರೇವ । ತಥಾ ಚ ತಯೋರೇವ ಜ್ಞಾನಮ್ ಆವಶ್ಯಕಮ್ । ತತ್ರ ಸಾಧ್ಯಾಭಾವೋ ಅಪ್ರಾಮಾಣ್ಯಮೇವ । ತಚ್ಚ ಭಾವರೂಪಂ ಸಾಧ್ಯಭೂತ-ಸ್ವಾಭಾವರೂಪ-ಪ್ರತಿಯೋಗಿಜ್ಞಾನಂ ನಾಪೇಕ್ಷತೇ ಇತಿ ತದಪ್ರಸಿದ್ಧೌ ಅಪಿ 'ಯತ್ರ ಅಪ್ರಾಮಾಣ್ಯಂ ತತ್ರ ಸಮರ್ಥಪ್ರವೃತ್ತಿಜನಕತ್ವಾಭಾವಃ' ಇತಿ ಹೇತ್ವಭಾವೇನ ವ್ಯಾಪ್ಯತ್ವಗ್ರಹಸಂಭವಾತ್ ಇತಿ ಭಾವಃ ।**

ಈ ಅನುಮಾನದಿಂದ ವಹ್ನಿಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವೇ ಆಗದಿದ್ದಲ್ಲಿ ವಹ್ನಿಯಲ್ಲಿ ಪ್ರವೃತ್ತಿಯಾಗುವುದು ಹೇಗೆ? ಅದಕ್ಕೆ ಮೂಲದಲ್ಲಿ 'ತತ ಏವ' ಎಂದು ಉತ್ತರ. ತತ ಏವ ಎಂದರೆ ವಹ್ನಿಜ್ಞಾನದಲ್ಲಿ ಅನುಮಾನದಿಂದ ಬಂದ ಅಪ್ರಾಮಾಣ್ಯಾಭಾವಜ್ಞಾದಿಂದಲೇ ಪ್ರವೃತ್ತಿ ಎಂದರ್ಥ. ನ್ಯಾಯಮತದಲ್ಲಿ ಪ್ರಾಮಾಣ್ಯಜ್ಞಾನವು ಪ್ರವೃತ್ತಿಗೆ ಉಪಯೋಗಿಯಲ್ಲ. ಅಪ್ರಾಮಾಣ್ಯಾಭಾವ ಜ್ಞಾನವೇ ಪ್ರವೃತ್ತಿಗೆ ಸಹಕಾರಿ. ಪ್ರಾಮಾಣ್ಯಜ್ಞಾನವು ಅಪ್ರಾಮಾಣ್ಯಾಭಾವಜ್ಞಾನವನ್ನು ತಂದುಕೊಡಲು ಸಹಕಾರಿ ಮಾತ್ರ. ಆದ್ದರಿಂದ ಪ್ರಾಮಾಣ್ಯಜ್ಞಾನದ ಅಗತ್ಯವಿಲ್ಲ.

ಮೂಲದಲ್ಲಿ ಅಭಾವಸಾಧ್ಯಕ ವ್ಯತಿರೇಕಿ ಅನುಮಾನದಲ್ಲಿ ಸಾಧ್ಯಜ್ಞಾನಬೇಕಾಗಿಲ್ಲ ಎಂದಿದೆ. ಅದನ್ನು ಹೀಗೆ ಸಮರ್ಥನೆ ಮಾಡಬೇಕು-ಸಾಧ್ಯಜ್ಞಾನವು ವ್ಯಾಪ್ತಿಜ್ಞಾನಕ್ಕಾಗಿ ಬೇಕು. ವ್ಯತಿರೇಕ್ಯನುಮಾನದಲ್ಲಿ ವ್ಯಾಪ್ತಿ ಇರುವುದು ಸಾಧ್ಯ-ಹೇತುಗಳಿಗೆ ಅಲ್ಲ, ಸಾಧ್ಯಾಭಾವ- ಹೇತ್ವಭಾವ ಗಳಿಗೆ. ಅವುಗಳ ಜ್ಞಾನ ಇದ್ದರೆ ಸಾಕು. ಪ್ರಕೃತದಲ್ಲಿ ಸಾಧ್ಯಾಭಾವ ಎಂದರೆ ಅಪ್ರಾಮಾಣ್ಯ. ಅದು ತದಭಾವವತಿ ತತ್‌ಪ್ರಕಾರಕತ್ವರೂಪವಾದುದರಿಂದ ಭಾವಾತ್ಮಕ. ಆದ್ದರಿಂದ ಅದಕ್ಕೆ ಪ್ರತಿಯೋಗಿ ಜ್ಞಾನವು ಕಾರಣ ಅಲ್ಲ. ಹೀಗಾಗಿ ಸಾಧ್ಯಜ್ಞಾನವು ಪ್ರತಿಯೋಗಿ ಜ್ಞಾನರೂಪವಾದುದರಿಂದ ಸಾಧ್ಯಾಭಾವಜ್ಞಾನಕ್ಕೆ ಕಾರಣ ಎಂದು ಹೇಳುವಂತೆಯೂ ಇಲ್ಲ. ಅಪ್ರಾಮಾಣ್ಯಾಭಾವವೇ ಸಾಧ್ಯರೂಪ. ಅಪ್ರಾಮಾಣ್ಯಾಭಾವಾಭಾವ-ಅರ್ಥಾತ್ ಅಪ್ರಾಮಾಣ್ಯವು ಸಾಧ್ಯಾಭಾವ. ಭಾವರೂಪವಾದ ಆ ಅಪ್ರಾಮಾಣ್ಯಕ್ಕೆ ಸಾಧ್ಯವೇ ಪ್ರತಿಯೋಗಿ. ಅಂತಹ ಪ್ರತಿಯೋಗಿಜ್ಞಾನ ಪ್ರಕೃತದಲ್ಲಿ ಬೇಕಾಗಿಲ್ಲ. ಅದರ ಜ್ಞಾನ ಇಲ್ಲದೆಯೂ 'ಯತ್ರ ಅಪ್ರಾಮಾಣ್ಯಂ ತತ್ರ ಸಮರ್ಥ ಪ್ರವೃತ್ತಿಜನಕತ್ವಾಭಾವಃ' ಎಂದು ವ್ಯಾಪ್ತಿಜ್ಞಾನ ಬರುತ್ತದೆ. ಹೀಗೆ ಸಾಧ್ಯಾಭಾವವು ಹೇತ್ವಭಾವಕ್ಕೆ ವ್ಯಾಪ್ಯ ಎಂಬ ಜ್ಞಾನ ಬರಲು ತೊಂದರೆ ಇಲ್ಲ. ಆದ್ದರಿಂದ ಈ ಅನುಮಾನದಲ್ಲಿ ಸಾಧ್ಯ ಪ್ರಸಿದ್ಧಿಬೇಕಾಗಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ವಹ್ನಿತ್ವಪ್ರಕಾರಕತ್ವೇ ಸತಿ ಇತಿ ವಿಶೇಷಣವೈಯರ್ಥ್ಯಂ ಮನ್ವಾನಃ ಪಕ್ಷಧರಾದ್ಯುಕ್ತ-ಸಾಧ್ಯನಿಷ್ಕರ್ಷಮಾಹ—ಯದ್ವೇತಿ ॥**

ಪೂರ್ವೋಕ್ತಾನುಮಾನದಲ್ಲಿ ಸಾಧ್ಯ 'ವಹ್ನಿತ್ವಪ್ರಕಾರಕತ್ವ ವಿಶಿಷ್ಟವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವ' ಈ ಸಾಧ್ಯದಲ್ಲಿ ವಹ್ನಿತ್ವಪ್ರಕಾರಕತ್ವರೂಪ ವಿಶೇಷಣಾಂಶ ವ್ಯರ್ಥ. 'ಅತ್ರ ವಹ್ನಿತ್ವಂ' ಎಂಬ ಜ್ಞಾನದಲ್ಲಿ ವಹ್ನಿತ್ವಾಭಾವವತ್ ವಿಶೇಷ್ಯಕತ್ವವೇ ಇದೆ, ಸಾಧ್ಯಾಭಾವ ಬಂತು. ಅಲ್ಲಿ ಹೇತು ಇದೆ, ಆದ್ದರಿಂದ ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ 'ವಹ್ನಿತ್ವಪ್ರಕಾರಕತ್ವೇ ಸತಿ' ಎಂಬ ವಿಶೇಷಣಾಂಶವನ್ನು ಸೇರಿಸಬೇಕು. ಆ ಅಂಶ 'ಅತ್ರ ವಹ್ನಿತ್ವಂ' ಎಂಬ ಜ್ಞಾನದಲ್ಲಿ ಇಲ್ಲ. ಸಾಧ್ಯವೇ ಬಂತು, ತದಭಾವ ಇಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ, ಎಂದು ಹೇಳಬೇಕು. ಆದರೆ ಮಣಿಕಾರ ಈ ಅನುಮಾನದಲ್ಲಿ ಎರಡು ಹೇತುಗಳನ್ನು ಮಾಡಿದ್ದಾನೆ. ಎರಡರಲ್ಲೂ ವಹ್ನಿತ್ವಪ್ರಕಾರಕತ್ವವನ್ನು ಸೇರಿಸಿದ್ದಾನೆ. ಹೀಗಾಗಿ ಆ ಹೇತುಗಳು 'ಅತ್ರ ವಹ್ನಿತ್ವಂ' ಎಂಬ ಜ್ಞಾನದಲ್ಲಿ ಬರುವುದಿಲ್ಲ, ವ್ಯಭಿಚಾರಪ್ರಸಕ್ತಿಯೇ ಇಲ್ಲ. ಸಾಧ್ಯದಲ್ಲಿ ವಿಶೇಷಣ ವ್ಯರ್ಥ. ಹೀಗೆ ವಾದಮಾಡಿ ಪಕ್ಷಧರ ಮಿಶ್ರರು ಸಾಧ್ಯಾಂತರವನ್ನು ಹೇಳಿದ್ದಾರೆ. ಅದನ್ನು 'ಯದ್ವಾ' ಎಂಬ ಮೂಲದಲ್ಲಿ ತೋರಿಸಲಾಗಿದೆ.

**यद्वा वह्नित्वाभाववद्विशेष्यको नेत्येव साध्यम् । पक्षधर्मतावलादप्रामाण्याभावसिद्धिः। न च घटादिरूपात् सपक्षाद्व्यावृत्या असाधारण्यम् । तस्यानित्यदोषत्वादिति चेत् ।**

ಅಥವಾ, ಅಯಂ ವಹ್ನಿತ್ವಪ್ರಕಾರಕಃ ಅನುಭವಃ, ವಹ್ನಿತ್ವಾಭಾವವದ್ವಿಶೇಷ್ಯಕಃ ನ' ಎಂದು ಇಷ್ಟೇ ಸಾಧ್ಯ. ಸಾಧ್ಯಶರೀರದಲ್ಲಿ ವಹ್ನಿತ್ವ ಪ್ರಕಾರಕತ್ವೇ ಸತಿ, ಎಂಬ ವಿಶೇಷಣದ ಅಗತ್ಯವಿಲ್ಲ.

ಇಷ್ಟನ್ನೇ ಸಾಧ್ಯವನ್ನಾಗಿ ಮಾಡಿದರೆ 'ಅವಹ್ನಿತ್ವಾಭಾವವದ್ವಿಶೇಷ್ಯಕತ್ವೇ ಸತಿ ವಹ್ನಿತ್ವಪ್ರಕಾರಕತ್ವ ರೂಪ' ಅಪ್ರಾಮಾಣ್ಯದ ಅಭಾವ ಸಿದ್ಧವಾಗುವುದು ಹೇಗೆ? ಅದು ಪಕ್ಷಧರ್ಮತಾಬಲಾತ್ ಸಿದ್ಧವಾಗುತ್ತದೆ. ಸಮರ್ಥಪ್ರವೃತ್ತಿ ಜನಕತ್ವರೂಪ ಹೇತುವು ಪಕ್ಷದಲ್ಲಿ ಇದೆ ಎಂದಾದರೆ ಅದರಲ್ಲಿ ವಹ್ನಿತ್ವಾಭಾವವದ್ವಿಶೇಷ್ಯಕತ್ವ ಇರಲು ಸಾಧ್ಯವಿಲ್ಲ. ಅರ್ಥಾತ್, ಆ ಜ್ಞಾನದ ವಿಶೇಷ್ಯವು ವಹ್ನಿತ್ವಾಭಾವವತ್ ಎಂದಾದಲ್ಲಿ ಅದು ವಹ್ನಿ ಅಲ್ಲ, ಗುಂಜಾಪುಂಜ, ಎಂದಂತಾಗುತ್ತದೆ. ಹಾಗಿದ್ದಲ್ಲಿ ಆ ಜ್ಞಾನವು ಸಮರ್ಥಪ್ರವೃತ್ತಿಜನಕವಾಗಲಾರದು. ಅಂದಮೇಲೆ ಜ್ಞಾನವಿಶೇಷ್ಯದಲ್ಲಿ ವಹ್ನಿತ್ವಾಭಾವ ಇಲ್ಲ. ಆದರಿಂದಾಗಿ ಜ್ಞಾನದಲ್ಲೂ ವಹಿತ್ವಾಭಾವವದ್ವಿಶೇಷ್ಯಕತ್ವ ಇಲ್ಲ. ವಹ್ನಿತ್ವಪ್ರಕಾರಕತ್ವ ಇದೆ, ಎನ್ನುವುದು ಪಕ್ಷದಲ್ಲೇ ಸೇರಿದೆ. ಹೀಗೆ, ಅರ್ಥಾತ್ ಅಪ್ರಾಮಾಣ್ಯದ ಅಭಾವ ಸಿದ್ಧವಾಗುತ್ತದೆ.

ಆದರೂ ಈ ಅನುಮಾನ ದುಷ್ಟ. ಘಟವು ನಿರ್ವಿಷಯವಾದುದರಿಂದ ಅದರಲ್ಲಿ

ವಹ್ನಿತ್ವವದ್ವಿಶೇಷ್ಯಕತ್ವ ಇಲ್ಲ, ಸಾಧ್ಯನಿಶ್ಚಿತವಾಗಿದೆ. ಅದು ಸಪಕ್ಷವಾಯಿತು. ಆದರಲ್ಲಿ ವಹ್ನಿವಿಷಯಕ ಪ್ರವೃತ್ತಿ ಜನಕತ್ವ ಹೇತು ಇಲ್ಲ. ಹೀಗೆ ಹೇತು ಸಪಕ್ಷವ್ಯಾವೃತ್ತವಾದುದರಿಂದ ಅಸಾಧಾರಣ್ಯ ದೋಷವಿದೆ.

ಇಲ್ಲ. ಅಸಾಧಾರಣ್ಯವು ಅನಿತ್ಯದೋಷ. ಅನುಕೂಲತರ್ಕ ಇದ್ದಲ್ಲಿ ಅದು ದೋಷವಲ್ಲ. ಪ್ರಕೃತದಲ್ಲಿ ಸಾಧ್ಯಕ್ಕೆ ಹೇತುವು ಪ್ರಯೋಜಕವಾಗಿದೆ, ಎಂದು ಸಾಧಿಸಲು ಅನುಕೂಲತರ್ಕ ಇದೆ. ಅಸಾಧಾರಣ್ಯವೆಂದರೆ ಸಾಧ್ಯವಿದ್ದಲ್ಲಿ ಹೇತು ಇಲ್ಲದಿರುವುದು. ಇದರಿಂದಾಗಿ, ಸಾಧ್ಯಕ್ಕೆ ಹೇತುವು ಪ್ರಯೋಜಕವಲ್ಲ, ಎಂದು ಹೇಳಬೇಕು. ಆದರೆ, ಪ್ರಕೃತದಲ್ಲಿ ಅನುಕೂಲತರ್ಕ ಇರುವುದರಿಂದ ಹಾಗೆ ಹೇಳಲು ಬರುವುದಿಲ್ಲ.

ಹೀಗೆ, ಈ ಪ್ರಾಥಮಿಕಾನುಮಾನದಿಂದ ಅಪ್ರಾಮಾಣ್ಯಾಭಾವ ಮಾತ್ರ ಸಿದ್ಧವಾಗುತ್ತದೆ. ಪ್ರಾಮಾಣ್ಯಸಿದ್ಧವಾಗಬೇಕಿಲ್ಲ.

## ನ್ಯಾಯದೀಪ

**ಕಥಂ ತರ್ಹಿ ತದಭಾವವತಿ ತತ್ಪ್ರಕಾರಕತ್ವರೂಪಾಪ್ರಾಮಾಣ್ಯಸ್ಯಾಭಾವಃ ಸಿದ್ಧ್ಯತಿ, ಇತ್ಯತ ಆಹ–ಪಕ್ಷೇತಿ ॥ ಉಕ್ತಹೇತೋಃ ವಹ್ನಿತ್ವಪ್ರಕಾರಕಾನುಭವ ರೂಪಪಕ್ಷೇ ವಹ್ನಿತ್ವಪ್ರಕಾರಕತ್ವವಿಶಿಷ್ಟ–ವಹ್ನಿತ್ವಾಭಾವವದ್ವಿಶೇಷ್ಯಕತ್ವರೂಪಾ ಪ್ರಾಮಾಣ್ಯನಿಷೇಧೇ ವಿಶೇಷಣಾಭಾವೇ ಬಾಧಾತ್, ವಿಶೇಷ್ಯಾಭಾವ-ಮಾದಾಯೈವ ವಿಶಿಷ್ಟನಿಷೇಧೇ ಪರ್ಯವಸ್ಯತೀತಿ ತನ್ಮಾತ್ರಾಭಾವಸಾಧನೇ ವಿಶಿಷ್ಟಾಭಾವಃ ಸಿದ್ಧ್ಯತೀತಿ ಅರ್ಥಃ । ಅತ್ರಾಪಿ ಪೂರ್ವವತ್ ಹೇತುವಿಶೇಷಣಂ ಧ್ಯೇಯಮ್ । ತೇನ ನ ಪ್ರಾಗುಕ್ತವ್ಯಭಿಚಾರಃ ॥**

**ಘಟಾದಿರೂಪಸಪಕ್ಷಾದಿತಿ ॥ ತಸ್ಯನಿರ್ವಿಷಯಕತ್ವೇನ ತತ್ರ ಸಾಧ್ಯಸತ್ವ-ನಿಶ್ಚಯಾತ್, ಇತಿ ಭಾವಃ । ಅನಿತ್ಯೇತಿ ॥ ಅನುಕೂಲತರ್ಕಾಭಾವವೇ-ಲಾಯಾಮೇವ ದೋಷತ್ವಾತ್। ಇಹ ಚ ಹೇತೂಚ್ಛಿತ್ತಿರೂಪ–ವಿಪಕ್ಷಬಾಧಕಸ್ಯ ಅನುಕೂಲತರ್ಕಸ್ಯ ಸತ್ವೇನ ಅದೋಷತ್ವಾತ್ ಇತ್ಯರ್ಥಃ ॥**

ವಹ್ನಿತ್ವಪ್ರಕಾರಕಜ್ಞಾನದಲ್ಲಿ ವಹ್ನಿತ್ವಪ್ರಕಾರಕತ್ವವಿಶಿಷ್ಟ–ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವವನ್ನು ಸಾಧನೆ ಮಾಡಿದಾಗ ಅಪ್ರಾಮಾಣ್ಯಾಭಾವ ಸಿದ್ಧವಾಗುವುದು ಹೇಗೆ ಎಂದರೆ, ಪಕ್ಷಧರ್ಮತಾ ಬಲಾತ್. ವಹ್ನಿತ್ವಪ್ರಕಾರಕ ಜ್ಞಾನಪಕ್ಷ. ಅದರಲ್ಲಿ ಉಕ್ತವಿಶಿಷ್ಟವನ್ನು ನಿಷೇಧ ಮಾಡಿದರೆ ವಹ್ನಿತ್ವಪ್ರಕಾರಕತ್ವ ಇಲ್ಲದ ಪ್ರಯುಕ್ತ ವಿಶಿಷ್ಟಾಭಾವರೂಪಸಾಧ್ಯವನ್ನು ಪರ್ಯವಸಾನ ಮಾಡಲು ಬರುವುದಿಲ್ಲ. ಏಕೆಂದರೆ, ವಹ್ನಿತ್ವಪ್ರಕಾರಕ ಅನುಭವದಲ್ಲಿ ವಹ್ನಿತ್ವಪ್ರಕಾರಕತ್ವಾಭಾವವು ಬಾಧಿತ.

ಆದ್ದರಿಂದ ವಿಶೇಷ್ಯಾಭಾವಾತ್ ಸಾಧ್ಯವನ್ನು ಪರ್ಯವಸಾನ ಮಾಡಬೇಕು. ಇದರಿಂದ, ಆ ಅನುಭವದಲ್ಲಿ ವಹ್ನಿತ್ವಾಭಾವವದ್ವಿಶೇಷ್ಯಕತ್ವ ಇಲ್ಲ, ಅರ್ಥಾತ್ ಅಪ್ರಾಮಾಣ್ಯ ಇಲ್ಲ, ಎಂದೇ ಸಿದ್ಧವಾಗುತ್ತದೆ.[1]

ಈ ಅನುಮಾನದಲ್ಲೂ ಹಿಂದಿನ ಅನುಮಾನದಂತೆ ಹೇತುವಿನಲ್ಲಿ ವಹ್ನಿ ನಿಶ್ಚಯತ್ವಾತ್, ಎಂಬ ವಿಶೇಷಣವನ್ನು ಕೊಡಬೇಕು. ಅದರಿಂದ ಹಿಂದೆ ಹೇಳಿದಂತೆ ಘಟಜ್ಞಾನದಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ.

ಮೂಲದಲ್ಲಿ ಹೇತುವು ಘಟರೂಪಸಪಕ್ಷದಲ್ಲಿ ಇಲ್ಲ, ಎಂದಿದೆ. ಘಟವು ನಿರ್ವಿಷಯಕವಾದುದರಿಂದ ವಹ್ನಿತ್ವಾಭಾವವದ್ ವಿಶೇಷ್ಯಕತ್ವಾಭಾವ ಅದರಲ್ಲಿದೆ. ಹೀಗೆ ಅದು ಸಪಕ್ಷವಾಗುತ್ತದೆ.

ಅಸಾಧಾರಣ್ಯವು ಸರ್ವತ್ರ ದೋಷವಲ್ಲ. ಅನುಕೂಲತರ್ಕ ಇಲ್ಲದಿದ್ದರೆ ಮಾತ್ರ ಅದು ದೋಷವಾಗುತ್ತದೆ. ಪ್ರಕೃತಾನುಮಾನದಲ್ಲಿ ಸಾಧ್ಯವಿಲ್ಲದಿದ್ದರೆ ಅಂದರೆ, ಜ್ಞಾನದಲ್ಲಿ ಅಪ್ರಾಮಾಣ್ಯಾಭಾವ ಇಲ್ಲದಿದ್ದರೆ ಸಫಲಪ್ರವೃತ್ಯನುಪಪತ್ತಿರೂಪವಾದ ಅನುಕೂಲತರ್ಕ ಇದೆ. ಹಾಗಾಗಿ ಅಸಾಧಾರಣ್ಯವು ದೋಷವಲ್ಲ.

**मैवम् । प्रथमस्य प्रामाण्यग्रहणस्य उपाये पृष्टेऽप्रामाण्याभावग्रहणोपायकथनस्य व्यधिकरणत्वात् । न चोक्तव्यतिरेक्येव पक्षधर्मताबलाद्वह्नित्ववद्विशेष्यकत्वरूपं प्रामाण्यं गृह्णातीति वाच्यम् । व्याप्त्या व्यापकतावच्छेदकावच्छिन्नत्वेन उपस्थापितस्य अपूर्वस्य व्यक्तिविशेषस्यैव पक्षधर्मतया पक्षसम्बन्धसिध्या तथानुपस्थापितस्य उक्तरूपप्रामाण्यस्य पक्षसम्बन्धबोधने तस्या असामर्थ्यात् ।**

ಮಣಿಕಾರನ ಈ ಸಮಾಧಾನ ಸರಿಯಲ್ಲ. ನಾವು ಕೇಳಿರುವ ಪ್ರಶ್ನೆ–ಪ್ರಾಥಮಿಕ–ಪ್ರಾಮಾಣ್ಯಗ್ರಹ ಹೇಗೆ? ಎಂದು. ನೀವು ಕೊಟ್ಟ ಉತ್ತರ– ಅಪ್ರಾಮಾಣ್ಯಾಭಾವಗ್ರಹ ಹೇಗಾಗುತ್ತವೆ, ಎಂದು. ಈ ಉತ್ತರ ವ್ಯಧಿಕರಣ. ಪ್ರಶ್ನೆಗೆ ಸಮಾನಾಧಿಕರಣವಲ್ಲ.

**ಆಕ್ಷೇಪ**–ಉತ್ತರವು ವ್ಯಧಿಕರಣವಲ್ಲ–ವಹ್ನಿತ್ವಪ್ರಕಾರಕಜ್ಞಾನವು ವಹ್ನ್ಯರ್ಥಿಯ ಪ್ರವೃತ್ತಿಗೆ ಕಾರಣವಾದುದರಿಂದ ವಹ್ನಿತ್ವಾಭಾವವದ್ವಿಶೇಷ್ಯಕವಲ್ಲ, ಎಂದು ಸಾಧಿಸಿದಾಗ ಆ ಜ್ಞಾನವು

---

1. **ಮಣಿವ್ಯಾಖ್ಯಾನದಲ್ಲಿ ರುಚಿದತ್ತನೂ ಈ ಆಕ್ಷೇಪವನ್ನು ಮಾಡಿಕೊಂಡು ಹೀಗೆ ಸಮಾಧಾನಿಸಿದ್ದಾನೆ. ನಚೈವಮ್ ಅಪ್ರಾಮಾಣ್ಯಾಭಾವೋ ನ ಸಿದ್ಧ ಇತಿ ವಾಚ್ಯಮ್। ವಹ್ನಿತ್ವಪ್ರಕಾರಕಾನುಭವೇ ವಹ್ನಿತ್ವಾಭಾವವದ್ವಿಶೇಷ್ಯಕತ್ವಸ್ಯೈವ ಅಪ್ರಾಮಾಣ್ಯತಯಾ ತದಭಾವಸಿದ್ಧೌ ತತ್ಸಿದ್ಧಿಪರ್ಯವಸಾನಾತ್।**

ವಹ್ನಿತ್ವವದ್ವಿಶೇಷ್ಯಕತ್ವ ಇಲ್ಲ, ಸಾಧ್ಯನಿಶ್ಚಿತವಾಗಿದೆ. ಅದು ಸಪಕ್ಷವಾಯಿತು. ಅದರಲ್ಲಿ ವಹ್ನಿವಿಷಯಕ ಪ್ರವೃತ್ತಿ ಜನಕತ್ವ ಹೇತು ಇಲ್ಲ. ಹೀಗೆ ಹೇತು ಸಪಕ್ಷವ್ಯಾವೃತ್ತವಾದುದರಿಂದ ಅಸಾಧಾರಣ್ಯ ದೋಷವಿದೆ.

ಇಲ್ಲ, ಅಸಾಧಾರಣ್ಯವು ಅನಿತ್ಯದೋಷ. ಅನುಕೂಲತರ್ಕ ಇದ್ದಲ್ಲಿ ಅದು ದೋಷವಲ್ಲ. ಪ್ರಕೃತದಲ್ಲಿ ಸಾಧ್ಯಕ್ಕೆ ಹೇತುವು ಪ್ರಯೋಜಕವಾಗಿದೆ, ಎಂದು ಸಾಧಿಸಲು ಅನುಕೂಲತರ್ಕ ಇದೆ. ಅಸಾಧಾರಣ್ಯವೆಂದರೆ ಸಾಧ್ಯವಿದ್ದಲ್ಲಿ ಹೇತು ಇಲ್ಲದಿರುವುದು. ಇದರಿಂದಾಗಿ, ಸಾಧ್ಯಕ್ಕೆ ಹೇತುವು ಪ್ರಯೋಜಕವಲ್ಲ, ಎಂದು ಹೇಳಬೇಕು. ಆದರೆ, ಪ್ರಕೃತದಲ್ಲಿ ಅನುಕೂಲತರ್ಕ ಇರುವುದರಿಂದ ಹಾಗೆ ಹೇಳಲು ಬರುವುದಿಲ್ಲ.

ಹೀಗೆ, ಈ ಪ್ರಾಥಮಿಕಾನುಮಾನದಿಂದ ಅಪ್ರಾಮಾಣ್ಯಾಭಾವ ಮಾತ್ರ ಸಿದ್ಧವಾಗುತ್ತದೆ. ಪ್ರಾಮಾಣ್ಯಸಿದ್ಧವಾಗಬೇಕಿಲ್ಲ.

## ನ್ಯಾಯದೀಪ

**ಕಥಂ ತರ್ಹಿ ತದಭಾವವತಿ ತತ್ಪ್ರಕಾರಕತ್ವರೂಪಾಪ್ರಾಮಾಣ್ಯಸ್ಯಾಭಾವಃ ಸಿದ್ಧ್ಯತಿ, ಇತ್ಯತ ಆಹ–ಪಕ್ಷೇತಿ ॥ ಉಕ್ತಹೇತೋಃ ವಹ್ನಿತ್ವಪ್ರಕಾರಕಾನುಭವ ರೂಪಪಕ್ಷೇ ವಹ್ನಿತ್ವಪ್ರಕಾರಕತ್ವವಿಶಿಷ್ಟ–ವಹ್ನಿತ್ವಾಭಾವವದ್ವಿಶೇಷ್ಯಕತ್ವರೂಪಾ ಪ್ರಾಮಾಣ್ಯನಿಷೇಧೇ ವಿಶೇಷಣಾಭಾವೇ ಬಾಧಾತ್, ವಿಶೇಷ್ಯಾಭಾವ-ಮಾದಾಯೈವ ವಿಶಿಷ್ಟನಿಷೇಧೇ ಪರ್ಯವಸ್ಯತೀತಿ ತನ್ಮಾತ್ರಾಭಾವಸಾಧನೇ ವಿಶಿಷ್ಟಾಭಾವಃ ಸಿದ್ಧ್ಯತೀತಿ ಅರ್ಥಃ । ಅತ್ರಾಪಿ ಪೂರ್ವವತ್ ಹೇತುವಿಶೇಷಣಂ ಧ್ಯೇಯಮ್ । ತೇನ ನ ಪ್ರಾಗುಕ್ತವ್ಯಭಿಚಾರಃ ॥**

**ಘಟಾದಿರೂಪಸಪಕ್ಷಾದಿತಿ ॥ ತಸ್ಯನಿರ್ವಿಷಯಕತ್ವೇನ ತತ್ರ ಸಾಧ್ಯಸತ್ವ-ನಿಶ್ಚಯಾತ್, ಇತಿ ಭಾವಃ । ಅನಿತ್ಯೇತಿ ॥ ಅನುಕೂಲತರ್ಕಾಭಾವವೇ-ಲಾಯಾಮೇವ ದೋಷತ್ವಾತ್। ಇಹ ಚ ಹೇತೂಚ್ಛಿತ್ತಿರೂಪ–ವಿಪಕ್ಷಬಾಧಕಸ್ಯ ಅನುಕೂಲತರ್ಕಸ್ಯ ಸತ್ವೇನ ಅದೋಷತ್ವಾತ್ ಇತ್ಯರ್ಥಃ ॥**

ವಹ್ನಿತ್ವಪ್ರಕಾರಕಜ್ಞಾನದಲ್ಲಿ ವಹ್ನಿತ್ವಪ್ರಕಾರಕತ್ವವಿಶಿಷ್ಟ–ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವವನ್ನು ಸಾಧನೆ ಮಾಡಿದಾಗ ಅಪ್ರಾಮಾಣ್ಯಾಭಾವ ಸಿದ್ಧವಾಗುವುದು ಹೇಗೆ ಎಂದರೆ, ಪಕ್ಷಧರ್ಮತಾ ಬಲಾತ್. ವಹ್ನಿತ್ವಪ್ರಕಾರಕ ಜ್ಞಾನಸಪಕ್ಷ. ಅದರಲ್ಲಿ ಉಕ್ತವಿಶಿಷ್ಟವನ್ನು ನಿಷೇಧ ಮಾಡಿದರೆ ವಹ್ನಿತ್ವಪ್ರಕಾರಕತ್ವ ಇಲ್ಲದ ಪ್ರಯುಕ್ತ ವಿಶಿಷ್ಟಾಭಾವರೂಪಸಾಧ್ಯವನ್ನು ಪರ್ಯವಸಾನ ಮಾಡಲು ಬರುವುದಿಲ್ಲ. ಏಕೆಂದರೆ, ವಹ್ನಿತ್ವಪ್ರಕಾರಕ ಅನುಭವದಲ್ಲಿ ವಹ್ನಿತ್ವಪ್ರಕಾರಕತ್ವಾಭಾವವು ಬಾಧಿತ.

ಆದ್ದರಿಂದ ವಿಶೇಷ್ಯಾಭಾವಾತ್ ಸಾಧ್ಯವನ್ನು ಪರ್ಯವಸಾನ ಮಾಡಬೇಕು. ಇದರಿಂದ, ಆ ಅನುಭವದಲ್ಲಿ ವಹ್ನಿತ್ವಾಭಾವವದ್ವಿಶೇಷ್ಯಕತ್ವ ಇಲ್ಲ, ಅರ್ಥಾತ್ ಅಪ್ರಾಮಾಣ್ಯ ಇಲ್ಲ, ಎಂದೇ ಸಿದ್ಧವಾಗುತ್ತದೆ.[1]

ಈ ಅನುಮಾನದಲ್ಲೂ ಹಿಂದಿನ ಅನುಮಾನದಂತೆ ಹೇತುವಿನಲ್ಲಿ ವಹ್ನಿ ನಿಶ್ಚಯತ್ವಾತ್, ಎಂಬ ವಿಶೇಷಣವನ್ನು ಕೊಡಬೇಕು. ಆದರಿಂದ ಹಿಂದೆ ಹೇಳಿದಂತೆ ಘಟಜ್ಞಾನದಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ.

ಮೂಲದಲ್ಲಿ ಹೇತುವು ಘಟರೂಪಸಪಕ್ಷದಲ್ಲಿ ಇಲ್ಲ, ಎಂದಿದೆ. ಘಟವು ನಿರ್ವಿಷಯಕವಾದುದರಿಂದ ವಹ್ನಿತ್ವಾಭಾವವದ್ ವಿಶೇಷ್ಯಕತ್ವಾಭಾವ ಅದರಲ್ಲಿದೆ. ಹೀಗೆ ಅದು ಸಪಕ್ಷವಾಗುತ್ತದೆ.

ಅಸಾಧಾರಣ್ಯವು ಸರ್ವತ್ರ ದೋಷವಲ್ಲ, ಅನುಕೂಲತರ್ಕ ಇಲ್ಲದಿದ್ದರೆ ಮಾತ್ರ ಅದು ದೋಷವಾಗುತ್ತದೆ. ಪ್ರಕೃತಾನುಮಾನದಲ್ಲಿ ಸಾಧ್ಯವಿಲ್ಲದಿದ್ದರೆ ಅಂದರೆ, ಜ್ಞಾನದಲ್ಲಿ ಅಪ್ರಾಮಾಣ್ಯಾಭಾವ ಇಲ್ಲದಿದ್ದರೆ ಸಫಲಪ್ರವೃತ್ತ್ಯನುಪಪತ್ತಿರೂಪವಾದ ಅನುಕೂಲತರ್ಕ ಇದೆ. ಹಾಗಾಗಿ ಅಸಾಧಾರಣ್ಯವು ದೋಷವಲ್ಲ.

**मैवम् । प्रथमस्य प्रामाण्यग्रहणस्य उपाये पृष्टेऽप्रामाण्याभावग्रहणोपायकथनस्य व्यधिकरणत्वात् । न चोक्तव्यतिरेक्येव पक्षधर्मताबलाद्वह्नित्ववद्विशेष्यकत्वरूपं प्रामाण्यं गृह्णातीति वाच्यम् । व्याप्त्या व्यापकतावच्छेदकावच्छिन्नत्वेन उपस्थापितस्य अपूर्वस्य व्यक्तिविशेषस्यैव पक्षधर्मतया पक्षसम्बन्धसिध्या तथानुपस्थापितस्य उक्तरूपप्रामाण्यस्य पक्षसम्बन्धबोधने तस्या असामर्थ्यात् ।**

ಮಣಿಕಾರನ ಈ ಸಮಾಧಾನ ಸರಿಯಲ್ಲ. ನಾವು ಕೇಳಿರುವ ಪ್ರಶ್ನೆ-ಪ್ರಾಥಮಿಕ-ಪ್ರಾಮಾಣ್ಯಗ್ರಹ ಹೇಗೆ? ಎಂದು. ನೀವು ಕೊಟ್ಟ ಉತ್ತರ- ಅಪ್ರಾಮಾಣ್ಯಾಭಾವಗ್ರಹ ಹೇಗಾಗುತ್ತದೆ, ಎಂದು. ಈ ಉತ್ತರ ವ್ಯಧಿಕರಣ. ಪ್ರಶ್ನೆಗೆ ಸಮಾನಾಧಿಕರಣವಲ್ಲ.

**ಆಕ್ಷೇಪ**-ಉತ್ತರವು ವ್ಯಧಿಕರಣವಲ್ಲ-ವಹ್ನಿತ್ವಪ್ರಕಾರಕಜ್ಞಾನವು ವಹ್ನ್ಯರ್ಥಿಯ ಪ್ರವೃತ್ತಿಗೆ ಕಾರಣವಾದುದರಿಂದ ವಹ್ನಿತ್ವಾಭಾವವದ್ವಿಶೇಷ್ಯಕವಲ್ಲ, ಎಂದು ಸಾಧಿಸಿದಾಗ ಆ ಜ್ಞಾನವು

---

1. **ಮಣಿವ್ಯಾಖ್ಯಾನದಲ್ಲಿ ರುಚಿದತ್ತನೂ ಈ ಆಕ್ಷೇಪವನ್ನು ಮಾಡಿಕೊಂಡು ಹೀಗೆ ಸಮಾಧಾನಿಸಿದ್ದಾನೆ. ನಚೈವಮ್ ಅಪ್ರಾಮಾಣ್ಯಾಭಾವೋ ನ ಸಿದ್ಧ ಇತಿ ವಾಚ್ಯಮ್। ವಹ್ನಿತ್ವಪ್ರಕಾರಕಾನುಭವೇ ವಹ್ನಿತ್ವಾಭಾವವದ್ವಿಶೇಷ್ಯಕತ್ವಸ್ಯೈವ ಅಪ್ರಾಮಾಣ್ಯತಯಾ ತದಭಾವಸಿದ್ಧೌ ತತ್ಸಿದ್ಧಿಪರ್ಯವಸಾನಾತ್।**

ಅರ್ಥಾತ್ ವಹ್ನಿತ್ವವದ್ವಿಶೇಷ್ಯಕವೆಂದೇ ತಿಳಿಯುತ್ತದೆ. ವಹ್ನಿತ್ವಪ್ರಕಾರಕಜ್ಞಾನದಲ್ಲಿ ಇರಬಹುದಾದ ಧರ್ಮಗಳು ವಹ್ನಿತ್ವವದ್ವಿಶೇಷ್ಯಕತ್ವ ಮತ್ತು ವಹ್ನಿತ್ವಾಭಾವವದ್ವಿಶೇಷ್ಯಕತ್ವ. ಗುಂಜಾಪುಂಜವವನ್ನು ನೋಡಿ ವಹ್ನಿತ್ವಪ್ರಕಾರಕಜ್ಞಾನ ಬಂದರೆ, ಅದು ವಹ್ನಿತ್ವಾಭಾವವದ್ವಿಶೇಷ್ಯಕವಾಗುತ್ತದೆ. ವಹ್ನಿಯನ್ನೇ ನೋಡಿ ವಹ್ನಿತ್ವ ಪ್ರಕಾರಕ ಜ್ಞಾನ ಬಂದರೆ ಅದು ವಹ್ನಿತ್ವವದ್ವಿಶೇಷ್ಯಕವಾಗಿರುತ್ತದೆ. ಹೀಗೆ ಎರಡೇ ಪ್ರಕಾರಗಳು ಸಂಭಾವಿತಗಳು. ಅವುಗಳಲ್ಲಿ ಸಮರ್ಥಪ್ರವೃತ್ತಿ ಜನಕತ್ವ–ಹೇತುವು ವಹ್ನಿತ್ವ ಪ್ರಕಾರಕಜ್ಞಾನದಲ್ಲಿ ಇರಬೇಕಾದರೆ ಅರ್ಥಾತ್ ಆ ಜ್ಞಾನವು ಸಫಲಪ್ರವೃತ್ತಿಗೆ ಕಾರಣವಾಗಬೇಕಾದರೆ (ಆ ಜ್ಞಾನವು) ವಹ್ನಿತ್ವಾಭಾವವತ್ (ಗುಂಜಾಪುಂಜ) ವಿಶೇಷ್ಯಕವಾಗಿರಲು ಸಾಧ್ಯವಿಲ್ಲ. ಅದನ್ನು ನಿರಾಕರಿಸಿದಾಗ ಉಳಿದಿರುವುದು ಇನ್ನೊಂದೇ–ವಹ್ನಿತ್ವವದ್ವಿಶೇಷ್ಯಕತ್ವ. ಇದೇ ಪ್ರಾಮಾಣ್ಯ. ಆದ್ದರಿಂದ ಪ್ರಾಮಾಣ್ಯಜ್ಞಾನ ಹೇಗೆ? ಎಂಬ ಪ್ರಶ್ನೆಗೆ ಅನುಗುಣವಾಗಿಯೇ ನಮ್ಮ ಉತ್ತರ ಇದೆ. ಇದನ್ನೇ ಪಕ್ಷಧರ್ಮತಾಬಲಲಭ್ಯ ಎಂದು ಹೇಳಲಾಗುತ್ತದೆ. ಹೀಗೆ ನೈಯಾಯಿಕರು ಸಮಾಧಾನ ಹೇಳುತ್ತಾರೆ.

ಆದರೆ, ಇದು ಸರಿಯಲ್ಲ, 'ಹೇತೋಃ ಪಕ್ಷವೃತ್ತಿತ್ವಂ ಪಕ್ಷಧರ್ಮತಾ'. ಪಕ್ಷಧರ್ಮತಾ ಬಲದಿಂದ ವ್ಯಾಪಕತಾವಚ್ಛೇದಕಧರ್ಮವುಳ್ಳ ಅಪೂರ್ವವ್ಯಕ್ತಿಯ ಲಾಭವಾಗುತ್ತದೆ, ಹೊರತು ಇತರ ಧರ್ಮಾವಚ್ಛಿನ್ನವು ಸಿದ್ಧವಾಗುವುದಿಲ್ಲ. ಉದಾಹರಣೆಗೆ–ವಹ್ನಿಯು ಧೂಮಕ್ಕೆ ವ್ಯಾಪಕ. ವ್ಯಾಪಕತಾವಚ್ಛೇದಕ ವಹ್ನಿತ್ವ. ಧೂಮವು ಪರ್ವತೀಯವಾದ ಕಾರಣ ವಹ್ನಿತ್ವಾಶ್ರಯವಾದ ಪರ್ವತೀಯವಹ್ನಿಯು ಸಿದ್ಧವಾಗುತ್ತದೆ. ಹೀಗೆ ಹೇತುವಿಗೆ ಪಕ್ಷಸಂಬಂಧಪ್ರಯುಕ್ತವಾಗಿ ಇದುವರೆಗೆ ಅಸಿದ್ಧವಾದ ಸಾಧ್ಯವ್ಯಕ್ತಿವಿಶೇಷಕ್ಕೆ ಪಕ್ಷಸಂಬಂಧವು ಸಿದ್ಧವಾಗುತ್ತದೆ. ಪ್ರಕೃತದಲ್ಲಿ ವ್ಯಾಪಕ ವಹ್ನಿತ್ವಪ್ರಕಾರಕತ್ವೇ ಸತಿ ವಹ್ನಿತ್ವಾಭಾವವದ್ವಿಶೇಷ್ಯಕತ್ವಾಭಾವ. ವ್ಯಾಪಕತಾವಚ್ಛೇದಕ ತಾದೃಶಾಭಾವತ್ವ. ತದವಚ್ಛಿನ್ನವಾದ ಜ್ಞಾನವಿಶೇಷಗತವಾದ, ಅಪೂರ್ವ ಸಾಧ್ಯವಿಶೇಷವು ಸಿದ್ಧವಾಗಬಹುದು. ಹೊರತು ವಹ್ನಿತ್ವವತಿ ವಹ್ನಿತ್ವಪ್ರಕಾರಕತ್ವರೂಪ ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಪ್ರಶ್ನೆಯು ವ್ಯಧಿಕರಣ, ಎಂಬ ದೋಷವು ಇದ್ದೇ ಇದೆ.

## ನ್ಯಾಯದೀಪ

**ವ್ಯಧಿಕರಣತ್ವಾದಿತಿ ॥ ಅರ್ಥಾಂತರತ್ವರೂಪನಿಗ್ರಹಸ್ಥಾನಾಪತ್ತೇಃ ಇತಿ ಭಾವಃ । 'ಇದಂ ಪ್ರಮೇಯಂ' ಇತ್ಯಾದೌ ಪ್ರಮೇಯತ್ವಾಭಾವಾಪ್ರಸಿದ್ಧ್ಯಾ ತದ್‌ಘಟಿತಾಪ್ರಮಾಣ್ಯಾಭಾವಾನುಮಾನಾಸಂಭವಾಚ್ಚ ಇತ್ಯಪಿ ಧ್ಯೇಯಮ್ ।**

ಉತ್ತರವು ವ್ಯಧಿಕರಣವೆಂದಾದರೆ ವಾದದಲ್ಲಿ ಅರ್ಥಾಂತರತ್ವರೂಪ–ನಿಗ್ರಹಸ್ಥಾನದೋಷವು ಬರುತ್ತದೆ.

ಅಷ್ಟೇ ಅಲ್ಲ, ವಹ್ನಿತ್ವಪ್ರಕಾರಕ ಜ್ಞಾನದಲ್ಲಿ ಮಣಿಕಾರ ಹೇಳಿದಂತೆ, ಅಪ್ರಾಮಾಣ್ಯಾಭಾವವನ್ನು ಸಾಧನೆ ಮಾಡಬಹುದು. ಆದರೆ, ಇದಂ ಪ್ರಮೇಯಂ, ಎಂಬ ಜ್ಞಾನದಲ್ಲಿ ಅದನ್ನೂ ಸಾಧನೆ ಮಾಡಲಾಗುವುದಿಲ್ಲ. ಆ ಜ್ಞಾನದಲ್ಲಿ ಅಪ್ರಾಮಾಣ್ಯ ಎಂದರೆ, ಪ್ರಮೇಯತ್ವಾಭಾವವದ್ವಿಶೇಷ್ಯಕತ್ವ. ಪ್ರಮೇಯತ್ವವು ಕೇವಲಾನ್ವಯಿಯಾದುದರಿಂದ ತದಭಾವವು ಅಪ್ರಸಿದ್ಧವಾಗಿದೆ.

## ನ್ಯಾಯದೀಪ

**ನನು ವಿರುದ್ಧಪ್ರಕಾರದ್ವಯೇ ತದಭಾವವದ್ವಿಶೇಷ್ಯಕತ್ವಾಭಾವೇ ತದ್ವದ್ವಿಶೇಷ್ಯಕತ್ವಮಾದಾಯೈವ ಪರ್ಯವಸಾನಮ್ । ಅನ್ಯಥಾ ಹೇತೋಃ ಪಕ್ಷಸಂಬಂಧೋ ನ ಘಟತೇ । ಇತ್ಯಾಶಯೇನ–**

**'ತದಭಾವವತಿ ತತ್ಪ್ರಕಾರಕತ್ವವ್ಯತಿರೇಕಃ ಸಿದ್ಧ್ಯನ್ ತದ್ವತಿ-ತತ್ಪ್ರಕಾರಕತ್ವಮಾದಾಯ ಸಿದ್ಧ್ಯತಿ । ತೃತೀಯಪ್ರಕಾರಾಭಾವಾತ್ ।'' (ಪು.268)**

**ಇತಿ ಮಣ್ಯುಕ್ತಮ್ ಆಶಂಕ್ಯ ನಿಷೇಧತಿ–ನ ಚೇತಿ ।।**

ಉತ್ತರವು ವ್ಯಧಿಕರಣವಲ್ಲ–ಒಂದು ಜ್ಞಾನದಲ್ಲಿ ಎರಡು ವಿರುದ್ಧ ಪ್ರಕಾರಗಳು ಸಂಭಾವಿತ. ತದ್ವದ್ವಿಶೇಷ್ಯಕತ್ವ ಮತ್ತು ತದಭಾವವದ್ವಿಶೇಷ್ಯಕತ್ವ. ಅವೆರಡರಲ್ಲಿ ಪ್ರಕೃತಾನುಮಾನದಿಂದ ತದಭಾವವದ್ವಿಶೇಷ್ಯಕತ್ವವನ್ನು ನಿಷೇಧಮಾಡಿದಾಗ ತದ್ವದ್ವಿಶೇಷ್ಯಕತ್ವದಲ್ಲೇ ಸಾಧ್ಯವು ಪರ್ಯವಸಾನವಾಗುತ್ತದೆ. ಅದೂ ಜ್ಞಾನದಲ್ಲಿ ಇಲ್ಲದಿದ್ದರೆ ಸಮರ್ಥಪ್ರವೃತ್ತಿಜನಕತ್ವಹೇತುವಿಗೆ ಪಕ್ಷವೃತ್ತಿತ್ವ ಸಾಧ್ಯವಿಲ್ಲ. ಇದನ್ನೇ ಮಣಿಕಾರನೂ ಹೇಳಿದ್ದಾನೆ—

''ತದಭಾವವತಿ ತತ್ಪ್ರಕಾರಕತ್ವದ ಅಭಾವವು(ಅಪ್ರಾಮಾಣ್ಯದ ಅಭಾವವು) ತದ್ವತಿ ತತ್ ಪ್ರಕಾರಕತ್ವದಲ್ಲೇ ಪರ್ಯವಸಾನಗೊಳ್ಳುತ್ತದೆ (ಪ್ರಾಮಾಣ್ಯದಲ್ಲೇ). ಏಕೆಂದರೆ, ಅವೆರಡನ್ನು ಬಿಟ್ಟು ಇನ್ನೊಂದು ಪ್ರಕಾರ ಇಲ್ಲ''.

ಈ ಮಣ್ಯುಕ್ತ–ಆಕ್ಷೇಪವನ್ನು 'ನ ಚ' ಎಂದು ನಿಷೇಧಿಸಲಾಗಿದೆ.

## ನ್ಯಾಯದೀಪ

**ವ್ಯಾಪ್ತ್ಯೇತಿ ।। ಯದ್ಧರ್ಮಾವಚ್ಛಿನ್ನನಿರೂಪಿತವ್ಯಾಪ್ತಿಃ ಯದ್ಧರ್ಮಾವಚ್ಛಿನ್ನಸ್ಯ ಗೃಹೀತಾ ತದ್ಧರ್ಮಾವಚ್ಛಿನ್ನಸ್ಯ ಪಕ್ಷಧರ್ಮತಯಾ ತದ್ಧರ್ಮಾವಚ್ಛಿನ್ನಸ್ಯೈವ ಸಿದ್ಧಿಃ ಸ್ಯಾತ್ । ನ ತು ಪ್ರಾಮಾಣ್ಯಸ್ಯ ಇತ್ಯರ್ಥಃ ।**

ವಹ್ನಿತ್ವಾವಚ್ಛಿನ್ನವಾದ ವಹ್ನಿನಿರೂಪಿತ ವ್ಯಾಪ್ತಿಯು ಧೂಮತ್ವಾವಚ್ಛಿನ್ನದಲ್ಲಿ ಗೃಹೀತವಾದರೆ ಅಂತಹ ಧೂಮತ್ವಾವಚ್ಛಿನ್ನವು ಪಕ್ಷದಲ್ಲಿದ್ದರೆ, ಆದರಿಂದ ವಹ್ನಿತ್ವಾವಚ್ಛಿನ್ನವು ಸಿದ್ಧವಾಗುತ್ತದೆ.

ಪ್ರಕೃತದಲ್ಲಿ ಅಪ್ರಾಮಾಣ್ಯಾಭಾವಸಾಧ್ಯ, ಸಮರ್ಥಪ್ರವೃತ್ತಿಜನಕತ್ವ ಹೇತು. ಅಪ್ರಾಮಾಣ್ಯಾಭಾವತ್ವಾವಚ್ಛಿನ್ನದ ವ್ಯಾಪ್ತಿಯು ಸಮರ್ಥಪ್ರವೃತ್ತಿಜನಕತ್ವಾವಚ್ಛಿನ್ನದಲ್ಲಿ ಗೃಹೀತವಾಗಿದೆ. ಹೀಗಾಗಿ, ಆ ಹೇತುವು ಪಕ್ಷದಲ್ಲಿ ಅಂದರೆ ವಹ್ನಿತ್ವಪ್ರಕಾರಕಜ್ಞಾನದಲ್ಲಿ ಇದ್ದರೆ ಅಪ್ರಾಮಾಣ್ಯಾಭಾವವು ಸಿದ್ಧವಾಗುತ್ತದೆ. ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಪ್ರಥಮಪ್ರಾಮಾಣ್ಯಗ್ರಹ ಹೇಗೆ?, ಎಂಬ ಪ್ರಶ್ನೆಗೂ ಪ್ರಥಮತಃ ಅಪ್ರಾಮಾಣ್ಯಾಭಾವವು ಗೃಹೀತವಾಗುತ್ತದೆ, ಎಂಬ ಉತ್ತರಕ್ಕೂ ಸಾಮಾನಾಧಿಕರಣ್ಯ ಇಲ್ಲ.

**ನಚಾಯಂ ನಿಯಮಃ ಅನ್ವಯನಿ ಹೇತೌ, ನ ವ್ಯತಿರೇಕಿಣಿ, ಇತಿ ಶಂಕ್ಯಮ್। ವ್ಯತಿರೇಕಸಹಚಾರೇಣ ಅನ್ವಯವ್ಯಾಪ್ತಿಃ ಗೃಹ್ಯತೇ ಇತಿ ಮತಾಭಿಪ್ರಾಯೇಣ ವಾ ಹೇತ್ವಭಾವ-ವ್ಯಾಪ್ಯಾಭಾವ-ವಿಷಯತ್ವನ್ಯೈಯತ್ಯಾಭಿಪ್ರಾಯೇಣ ವಾ ಏವಮುಕ್ತಿಃ।**

ಈ ನಿಯಮ ಅನ್ವಯವ್ಯಾಪ್ತಿ ಇರುವ ಹೇತುವಿಗೆ ಮಾತ್ರ ಅನ್ವಯಿಸುತ್ತದೆ. ಪ್ರಕೃತ ಇದು ವ್ಯತಿರೇಕ್ಯನುಮಾನ. ಈ ಅನುಮಾನದಲ್ಲಿ ವ್ಯಾಪ್ತಿ ಇರುವುದು ಸಾಧ್ಯಾಭಾವ-ಹೇತ್ವಭಾವಗಳಲ್ಲಿ. ಅದರಿಂದಾಗಿ, ಸಿದ್ಧವಾಗುವುದು ಹೇತುವಿನಿಂದ ಸಾಧ್ಯ. ಆದ್ದರಿಂದ ಪ್ರಾಮಾಣ್ಯವೇ ಸಿದ್ಧವಾಗುತ್ತದೆ, ಎಂದು ಆಕ್ಷೇಪ.

ವ್ಯತಿರೇಕ್ಯನುಮಾನದಲ್ಲೂ ಸಾಧ್ಯಾಭಾವ-ಹೇತ್ವಭಾವಗಳ ವ್ಯಾಪ್ತಿಯಿಂದ ಸಾಧ್ಯ-ಹೇತುಗಳ ವ್ಯಾಪ್ತಿಯೇ ಸಿದ್ಧವಾಗುತ್ತದೆ. ಅದರಿಂದ ಸಾಧ್ಯಸಿದ್ಧವಾಗುತ್ತದೆ. ಆದ್ದರಿಂದ ವ್ಯತಿರೇಕ್ಯನುಮಾನವೂ ಅನ್ವಯಿ ಅನುಮಾನವೇ.

ಅಥವಾ, ವ್ಯತಿರೇಕ್ಯನುಮಾನದಲ್ಲಿ ಸಾಧ್ಯಾಭಾವವು ಹೇತ್ವಭಾವವ್ಯಾಪ್ಯತ್ವೇನ ತಿಳಿಯುವುದರಿಂದ 'ತಾದೃಶ ಸಾಧ್ಯಾಭಾವಪ್ರತಿಯೋಗಿ ಸಾಧ್ಯವಾನ್ ಪಕ್ಷಃ' ಎಂದೇ ಅನುಮಿತಿ ಬರುತ್ತದೆ. ಪ್ರಕೃತ, ಸಾಧ್ಯ ಅಪ್ರಾಮಾಣ್ಯಾಭಾವ. ತದ್ವಾನ್ ಪಕ್ಷಃ, ಎಂದೇ ಅನುಮಿತಿ ಬರಬೇಕು.

ಹೀಗೆ, ಈ ಎರಡೂ ಮತಗಳಂತೆ ವಹ್ನಿಜ್ಞಾನದಲ್ಲಿ ಪ್ರಾಮಾಣ್ಯಾನುಮಿತಿಯು ಹುಟ್ಟುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**'ಇದಂ ವಹ್ನಿತ್ವಪ್ರಕಾರಕಂ ಜ್ಞಾನಂ, ವಹ್ನಿತ್ವವದ್ವಿಷಯಕಂ' ಇತ್ಯಾದಿನಾ ಮಣ್ಯುಕ್ತಂ ಪಕ್ಷಾಂತರಂ ನಿರಾಹ—ಏತೇನೇತಿ ॥**

ಮಣಿಗ್ರಂಥದಲ್ಲಿ ಪ್ರಥಮಪ್ರಾಮಾಣ್ಯಸಾಧಕವಾದ ಅನುಮಾನವನ್ನು ಹೀಗೆ ಹೇಳಲಾಗಿದೆ- ವಹ್ನಿಯನ್ನು ನೋಡಿ ಬಂದಿರುವ ವಹ್ನಿತ್ವಪ್ರಕಾರಕಜ್ಞಾನವು(ಪಕ್ಷ) ವಹ್ನಿತ್ವವದ್(ವಹ್ನಿ) ವಿಶೇಷ್ಯಕವಾಗಿದೆ. ಏಕೆಂದರೆ, ಆ ಜ್ಞಾನದಲ್ಲಿ ವಹ್ನಿತ್ವಾಭಾವವತ್ತಾದ ಯಾವ ವಸ್ತುಗಳೂ ವಿಶೇಷ್ಯ

ಗಳಾಗಿಲ್ಲ, ಆದರೆ ಆ ಜ್ಞಾನವು ಸವಿಷಯಕವಾಗಿದೆ. ಹೀಗೆ ಈ ಅನುಮಾನದಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಬಹುದು, ಎಂದು. ಇದನ್ನೂ ಮುಂದಿನ 'ಏತೇನ' ಎಂಬ ಗ್ರಂಥದಿಂದ ನಿರಾಕರಿಸಲಾಗಿದೆ.

**एतेन, अप्रामाण्याभावानुमित्यनन्तरं 'अयं वह्नित्वेनानुभवो, वह्नित्ववद्विशेष्यकः, अवन्ह्यविशेष्यकत्वे सति सविशेष्यकत्वात्' इति व्यतिरेक्यन्तरेण तत्सिद्धिरिति निरस्तम् । वैशिष्ट्यमनुव्यवसाया-वेद्यमिति परतः पक्षे साध्याप्रसिद्धेः ।।**

ಇದರಿಂದ ಮಣ್ಯುಕ್ತವಾದ ಪ್ರಾಮಾಣ್ಯಸಾಧಕಾನುಮಾನವೂ ನಿರಸ್ತವಾಯಿತು. ಹಿಂದಿನ ಅಪ್ರಾಮಾಣ್ಯಾಭಾವಸಾಧಕಾನುಮಾನದಿಂದ ವಹ್ನಿತ್ವಪ್ರಕಾರಕ ಜ್ಞಾನದಲ್ಲಿ ಅಪ್ರಾಮಾಣ್ಯ ಇಲ್ಲ ಎಂದು ಸಿದ್ಧವಾಗುತ್ತದೆ. ಆಮೇಲೆ ಅದೇ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು. ಅನುಮಾನದ ರೀತಿ ಹೀಗೆ ''ಅಯಂ ವಹ್ನಿತ್ವೇನ ಅನುಭವಃ, ವಹಿತ್ವವದ್ವಿಶೇಷ್ಯಕಃ, ಅವಹ್ನಿ-ಅವಿಶೇಷ್ಯಕತ್ವೇ ಸತಿ ಸವಿಶೇಷ್ಯಕತ್ವಾತ್॥''

ಈ ಅನುಮಾನವೂ ಕೇವಲವ್ಯತಿರೇಕಿ. ಸಾಧ್ಯವು ಅಪ್ರಸಿದ್ಧವಾದುದರಿಂದ ಸಾಧ್ಯಾಭಾವ-ಹೇತ್ವಭಾವಗಳಿಗೇ ವ್ಯಾಪ್ತಿಯನ್ನು ಹೇಳಬೇಕು. ಈ ಅನುಮಾನವೂ ಯುಕ್ತವಲ್ಲ. ಪ್ರಾಮಾಣ್ಯವು ಅನುವ್ಯವಸಾಯವೇದ್ಯವಲ್ಲ ಎಂದು ಪರತಸ್ತ್ವಪಕ್ಷ. ಅಂದಮೇಲೆ ವಹ್ನಿತ್ವವದ್ವಿಶೇಷ್ಯಕತ್ವವು ಅನುಮಾನಾತ್ಪೂರ್ವದಲ್ಲಿ ಜ್ಞಾತವಲ್ಲ. ಆದ್ದರಿಂದ ಸಾಧ್ಯವು ಅಪ್ರಸಿದ್ಧ.

## ನ್ಯಾಯದೀಪ

**ಏತೇನೇತಿ ।। ವಿಷಯಪದಂ ವಿಶೇಷ್ಯಪರಮ್, ಇತಿ ತದೀಯವ್ಯಾಖ್ಯಾನೋಕ್ತೇಃ ವಿಶೇಷ್ಯಕ ಇತ್ಯುಕ್ತಮ್ ।**

**ಸಾಧ್ಯಾಪ್ರಸಿದ್ಧೇರಿತಿ ।। ನ ಚ ಪ್ರಾಗ್‌ಭವೀಯ-ಸಂಸ್ಕಾರಾನುಸರಣಾತ್ ಅದೋಷ ಇತಿ ಶಂಕ್ಯಮ್ । ನಿರಸ್ತತ್ವಾತ್ । ಆದಾವೇವ ಏವಮ್ ಅನುಮಾನಸಂಭವೇ ಪ್ರಥಮಂ ಅಪ್ರಮಾಣ್ಯಾಭಾವಾನುಮಾನಸ್ಯ ವ್ಯರ್ಥತ್ವಾಚ್ಚ ಇತ್ಯಪಿ ಧ್ಯೇಯಮ್ ।**

ಮಣ್ಯುಕ್ತಾನುಮಾನದಲ್ಲಿ 'ವಹ್ನಿತ್ವವದ್-ವಿಷಯಕಂ' ಎಂದು ಸಾಧ್ಯನಿರ್ದೇಶ ಮಾಡಲಾಗಿದೆ. ಮೂಲದಲ್ಲಿ 'ವಿಶೇಷ್ಯಕಂ' ಎಂದು ಅನುವಾದ ಮಾಡಲಾಗಿದೆ. ಮಣಿವ್ಯಾಖ್ಯಾನ ದಲ್ಲಿ ರುಚಿದತ್ತಮಿಶ್ರಾದಿಗಳು ವಿಷಯಪದಕ್ಕೆ ವಿಶೇಷ್ಯ ಎಂದು ವ್ಯಾಖ್ಯಾನ ಮಾಡಿದ್ದಾರೆ- 'ಅತ್ರ

ಸಾಧ್ಯೇ ಹೇತೌ ಚ ವಿಷಯಪದಂ ವಿಶೇಷ್ಯಪರಮ್ ।' ಅದಕ್ಕೆ ಅನುಗುಣವಾಗಿ ಮೂಲದಲ್ಲಿ ವಿಶೇಷ್ಯಪದವನ್ನೇ ಬಳಸಲಾಗಿದೆ.

ಈ ಜನ್ಮದಲ್ಲಿ ವಹ್ನಿತ್ವವದ್ವಿಶೇಷ್ಯಕತ್ವವು ತಿಳಿಯದಿದ್ದರೂ ಹಿಂದಿನ ಜನ್ಮದ ಸಂಸ್ಕಾರದಿಂದಾಗಿ ಅದರ ಸ್ಮರಣೆ ಇದೆ, ಸಾಧ್ಯಾಪ್ರಸಿದ್ಧಿ ಇಲ್ಲ, ಎನ್ನುವುದನ್ನು (ಇದು ಪ್ರಾಚೀನಮತ) ಪ್ರಾರಂಭದಲ್ಲೇ ನಿರಾಸಮಾಡಲಾಗಿದೆ. ಅಷ್ಟೇ ಅಲ್ಲ, ಸಾಧ್ಯವು ಅಪ್ರಸಿದ್ಧವಾದರೂ ಅನುಮಾನ ಮಾಡುವುದಾದಲ್ಲಿ ಮೊದಲೇ ಈ ಅನುಮಾನವನ್ನು ಮಾಡಬಹುದು. ಅಪ್ರಾಮಾಣ್ಯಾಭಾವವನ್ನು ಸಾಧನೆ ಮಾಡಿ ಈ ರೀತಿಯ ಅನುಮಾನ ಮಾಡುವ ಪ್ರಯಾಸ ವ್ಯರ್ಥ. ಈ ದೋಷವೂ ಇದೆ.[1]

## ನ್ಯಾಯದೀಪದಲ್ಲಿ ಅವತಾರಿಕೆ

**ಅಪ್ರಾಮಾಣ್ಯಾಭಾವಾನುಮಾನೇಽಪಿ ವ್ಯತಿರೇಕವ್ಯಾಪ್ಯಪ್ರಸಿದ್ಧ್ಯಾ ವ್ಯಾಪ್ಯಸಿದ್ಧಿಃ ಇತಿ ಭಾವೇನಾಹ–ಕಿಂಚೇತಿ ॥**

ಮಣಿಕಾರ ಹೇಳುವಂತೆ ಮೊದಲು ಅಪ್ರಾಮಾಣ್ಯಾಭಾವವನ್ನೂ ವ್ಯತಿರೇಕ್ಯನುಮಾನದಿಂದ ಸಾಧನೆಮಾಡಲು ಸಾಧ್ಯವಿಲ್ಲ. ಏಕೆಂದರೆ, ನ್ಯಾಯಮತದಲ್ಲಿ ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಮನೋಗ್ರಾಹ್ಯವಲ್ಲ. ಆದ್ದರಿಂದ 'ಯತ್ರ ಅಪ್ರಾಮಾಣ್ಯಾಭಾವಾಭಾವಃ ಅರ್ಥಾತ್ ಅಪ್ರಾಮಾಣ್ಯಮ್' ಎಂದು ವ್ಯಾಪ್ತಿಜ್ಞಾನ ಬರಲು ಸಾಧ್ಯವಿಲ್ಲ. ವ್ಯಾಪ್ಯಸಿದ್ಧಿದೋಷ ಬರುತ್ತದೆ. ಇದನ್ನು ಕಿಂಚ ಎಂಬ ಮೂಲದಿದಂದ ಹೇಳಲಾಗಿದೆ–

**किञ्चाप्रामाण्यमपि यद्यनुमेयं तर्हि कथं तत्प्रसिद्धिः । येनाप्रामाण्याभावसाधकहेतौ साध्याभावरूपाप्रामाण्यव्यापकाभावप्रतियोगित्वज्ञानम् ।**

ಅಷ್ಟೇ ಅಲ್ಲ, ನಿಮ್ಮ ಮತದಲ್ಲಿ ಅಪ್ರಾಮಾಣ್ಯವೂ ಅನುಮೇಯ, ಮನೋಗ್ರಾಹ್ಯವಲ್ಲ. ಹಾಗಿದ್ದಮೇಲೆ ಹಿಂದೆ ಹೇಳಿದ, ವಹ್ನಿಜ್ಞಾನದಲ್ಲಿ ಅಪ್ರಾಮಾಣ್ಯಾಭಾವ ಸಾಧಕವಾದ ಹೇತುವಿನಲ್ಲಿ ಸಾಧ್ಯಾಭಾವರೂಪವಾದ ಅಪ್ರಾಮಾಣ್ಯಕ್ಕೆ ವ್ಯಾಪಕವಾದ ಅಭಾವಕ್ಕೆ ಹೇತುವು ಪ್ರತಿಯೋಗಿಯಾಗಿದೆ, ಎಂಬ ವ್ಯಾಪ್ತಿಜ್ಞಾನ ಬರುವುದಾದರೂ ಹೇಗೆ?

---

1. ಈ ದೋಷವನ್ನು ಮಣಿವ್ಯಾಖ್ಯಾನದಲ್ಲಿ ರುಚಿದತ್ತನೂ ಹೇಳಿದ್ದಾನೆ. (16ನೇ ಶತಮಾನ)

ಅತ್ರಾಪಿ ವಹ್ನಿತ್ವವದ್ವಿಶೇಷ್ಯಕತ್ವಂ ಸಾಧ್ಯಂ ಅಪ್ರಸಿದ್ಧಮ್ । ಪ್ರಾಗ್ಭವೀಯ ಸಂಸ್ಕಾರೇಣ ಮನಸಾ ವಾ ಕಥಂಚಿತ್ ತತ್ಪ್ರಸಿದ್ಧೌ ದಾಹಸಮರ್ಥೇತ್ಯಾದಿ ಹೇತುನಾ ವಹ್ನಿತ್ವಪ್ರಕಾರಕಾನುಭವೇ ತದೇವ ಸಾಧ್ಯತಾಮ್ । ಕಿಂ ಅಪ್ರಾಮಾಣ್ಯಾಭಾವಾನುಮಾನೇನ ।

ವ್ಯತಿರೇಕಿ ಅನುಮಾನದಲ್ಲಿ ಯತ್ರ ಸಾಧ್ಯಾಭಾವಃ ತತ್ರ ಹೇತ್ವಭಾವಃ ಎಂದು ವ್ಯಾಪ್ತಿಯನ್ನು ಹೇಳಬೇಕು. ಪ್ರಕೃತದಲ್ಲಿ, ಯತ್ರ ಅಪ್ರಾಮಾಣ್ಯಾಭಾವಾಭಾವಃ ಅಂದರೆ ಅಪ್ರಾಮಾಣ್ಯಂ ತತ್ರ ಹೇತ್ವಭಾವಃ ಎಂದು ವ್ಯಾಪ್ತಿಯನ್ನು ಹೇಳಬೇಕು. ಈ ವ್ಯಾಪ್ತಿಯಲ್ಲಿ ಸಾಧ್ಯಾಭಾವವು ಅಂದರೆ ಅಪ್ರಾಮಾಣ್ಯವು ವ್ಯಾಪ್ಯ, ಹೇತ್ವಭಾವ ಎಂದರೆ ಸಮರ್ಥಪ್ರವೃತ್ತಿಜನಕತ್ವಾಭಾವವು ವ್ಯಾಪಕ. ಇಲ್ಲಿ ವ್ಯತಿರೇಕಿಪರಾಮರ್ಶ ಅಪ್ರಾಮಾಣ್ಯವ್ಯಾಪಕೀಭೂತಾಭಾವ ಪ್ರತಿಯೋಗಿ ಹೇತುಮಾನ್ ಪಕ್ಷಃ, ಎಂದು ಬರಬೇಕು. ಈ ರೀತಿಯ ಪರಾಮರ್ಷಬರಬೇಕಾದರೆ ಅಪ್ರಾಮಾಣ್ಯಜ್ಞಾನವು ಬೇಕು. ಆ ಜ್ಞಾನ ಇಲ್ಲದಿರುವ ಕಾರಣ ಈರೀತಿಯ ಪರಾಮರ್ಶವೂ ಬರುವುದಿಲ್ಲ.[1]

## ನ್ಯಾಯದೀಪದಲ್ಲಿ ಅವತಾರಿಕೆ

**ದ್ವಿತೀಯಾನುವ್ಯವಸಾಯೇನ ಅಪ್ರಾಮಾಣ್ಯಂ ಪ್ರಸಿದ್ಧಮ್ ಇತ್ಯಾಶಂಕತೇ– ಯದಿತ್ವಿತಿ ॥**

ಅಪ್ರಾಮಾಣ್ಯವು ಅಪ್ರಸಿದ್ಧವಲ್ಲ. ದ್ವಿತೀಯಾನುವ್ಯವಸಾಯದಲ್ಲಿ ಅದು ಭಾನವಾಗುತ್ತದೆ, ಎಂದು ಸ್ಮೃತೀತ್ಯಾದಿ ಮುಂದಿನ ವಾಕ್ಯದಲ್ಲಿ ಶಂಕೆ ಮಾಡಲಾಗಿದೆ.

**यदि तु, बाधानन्तरं स्मृत्युपनीते भ्रमे 'वह्नित्वाभाववति वह्नित्वेन ज्ञानं मम वृत्तम्' इत्यप्रामाण्यं मनसा परिच्छिद्यते तर्हि प्रवृत्ति-सामर्थ्यानन्तरं स्मृत्युपनीते व्यवसाये स्मृत्युपनीतं वह्नित्ववैशिष्ट्य विषयकत्वमेव मनसा परिच्छिद्यताम् । आदावेव वा व्यवसायगतं तदुपनीतवह्नित्ववैशिष्ट्यविषयकत्वम् अनुव्यवसायेनैव परिच्छिद्य-ताम्, किमनया कुसृष्ट्या ॥**

'ಅಯಂ ವಹ್ನಿಃ' ಎಂಬ ಭ್ರಮೆ ಬಂದು, ಅದರ ಅನುವ್ಯವಸಾಯ ಬಂದು ಆಮೇಲೆ 'ಅಯಂ ನ ವಹ್ನಿಃ' ಎಂದು ಬಾಧ ಬರುತ್ತದೆ. ಆಮೇಲೆ 'ಅಯಂ ವಹ್ನಿಃ' ಎಂಬ ಭ್ರಮೆಯ ಸ್ಮರಣೆ ಬರುತ್ತದೆ. ಆಮೇಲೆ ಬಾಧರೂಪವಾದ ಅನುಭವದಿಂದಾಗಿ ತದ್ವತ್ವಾಭಾವದ ಸ್ಮರಣೆ ಬರುತ್ತದೆ. ಕೊನೆಯಲ್ಲಿ ಸ್ಮೃತ್ಯುಪನೀತ ವಹ್ನಿಭ್ರಮೆಯಲ್ಲಿ ಸ್ಮೃತ್ಯುಪನೀತವಾದ ಅಪ್ರಾಮಾಣ್ಯವು

1. **ಈ ದೋಷವನ್ನು ರುಚಿದತ್ತ ಹೇಳುತ್ತಾನೆ— ಕಿಂಚ ಅಪ್ರಸಿದ್ಧಾಭಾವೋಽಪಿ ಪ್ರತಿಯೋಗಿಪ್ರಸಿದ್ಧ್ಯಾ ವ್ಯಾಪ್ತಿಗ್ರಹೇ ಸತಿ ಸಿದ್ಧ್ಯೇತ್ । ನ ಚಾಪ್ರಮಾಣ್ಯಂ ಪ್ರಸಿದ್ಧಮ್ । ಪ್ರಾಮಾಣ್ಯವತ್ ತಸ್ಯಾಪಿ ಅತೀಂದ್ರಿಯತ್ವಾತ್ । ತದರ್ಥಂ ಪ್ರಾಗ್ಭವೀಯ ಸಂಸ್ಕಾರಾನುಸರಣೇ ಚ ಪ್ರಾಮಾಣ್ಯಾನುಮಾನಾರ್ಥಮೇವ ತದನುಸರಣಮ್ ಅರ್ಹತಿ ಲಾಘವಾತ್, ಆವಶ್ಯಕತ್ವಾಚ್ಚ । 'ಪ್ರಮೇಯಂ' ಇತ್ಯಾದಿ ಜ್ಞಾನೇ ಚ ಅಪ್ರಮಾಣ್ಯಾಭಾವಾನುಮಾನಾಸಂಭವಾತ್ ಕಥಂ ಪ್ರಾಮಾಣ್ಯಾನುಮಾನಮ್?**

ಪಂಚಮಾನುವ್ಯವಸಾಯದಲ್ಲಿ ತೋರುತ್ತದೆ–ವಹ್ನಿತ್ವಾಭಾವವತಿ ವಹ್ನಿತ್ವಜ್ಞಾನಂ ಮಮ ವೃತ್ತಮ್, ಎಂದು. ಹೀಗೆ, ಅಪ್ರಾಮಾಣ್ಯವು ಪಂಚಮಾನುವ್ಯವಸಾಯದಿಂದ ಜ್ಞಾತವಾದುದರಿಂದ ತದಭಾವವನ್ನು ವ್ಯತಿರೇಕ್ಯನುಮಾನದಿಂದ ಸಾಧಿಸಬಹುದು, ಎನ್ನುವುದಾದಲ್ಲಿ ಪ್ರಾಮಾಣ್ಯವೂ ಇದೇ ರೀತಿ ಪಂಚಮಾನುವ್ಯವಸಾಯದಿಂದಲೇ ಏಕೆ ವೇದ್ಯವಾಗಬಾರದು? ಮೊದಲು ವಹ್ನಿಜ್ಞಾನ. ಆಮೇಲೆ ಅದರ ಅನುವ್ಯವಸಾಯ. ಆಮೇಲೆ ಸಫಲಪ್ರವೃತ್ತಿಯಿಂದ ಪುರೋವರ್ತಿಯಲ್ಲಿ ವಹ್ನಿತ್ವ ವೈಶಿಷ್ಟ್ಯಜ್ಞಾನ. ನಂತರ ವ್ಯವಸಾಯದ ಸ್ಮೃತಿ. ಆಮೇಲೆ ವೈಶಿಷ್ಟ್ಯದ ಸ್ಮರಣೆ. ಕೊನೆಯಲ್ಲಿ ಸ್ಮೃತ್ಯುಪನೀತವಾದ ವೈಶಿಷ್ಟ್ಯವಿಷಯಕತ್ವವು ಸ್ಮೃತ್ಯುಪನೀತವಾದ ವ್ಯವಸಾಯದಲ್ಲಿ ತೋರುತ್ತದೆ– ವಹ್ನಿತ್ವವತಿ ಪುರೋವರ್ತಿನಿ ವಹ್ನಿತ್ವಪ್ರಕಾರಕಂ ಜ್ಞಾನಂ ಮಮ ವೃತ್ತಮ್, ಎಂದು. ಹೀಗೆ ಮನಸ್ಸೇ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯವನ್ನೂ ಗ್ರಹಿಸಲಿ, ಅಪ್ರಾಮಾಣ್ಯಾಭಾವಾನುಮಾನದ ಅಗತ್ಯವೇನು?

ಅಷ್ಟೇ ಅಲ್ಲ; ಪಂಚಮಾನುವ್ಯವಸಾಯದಲ್ಲಿ ಉಪನೀತವಾಗಿ ವೈಶಿಷ್ಟ್ಯವಿಷಯಕತ್ವವು ಭಾನವಾಗುವುದಾದರೆ, ವ್ಯವಸಾಯದಿಂದ ಉಪನೀತವಾದ ವಹ್ನಿತ್ವವೈಶಿಷ್ಟ್ಯವು ಪ್ರಥಮಾನು ವ್ಯವಸಾಯದಲ್ಲೇ ಏಕೆ ತೋರಬಾರದು? ಅಪ್ರಾಮಾಣ್ಯಾಭಾವವನ್ನು ಸಾಧನೆ ಮಾಡಿ ಆಮೇಲೆ ಅರ್ಥಾತ್ ಪ್ರಾಮಾಣ್ಯವನ್ನು ತಿಳಿಯಬೇಕು, ಎನ್ನುವ ಈ ಕುಸೃಷ್ಟಿಯ ಅಗತ್ಯವೇನು?

## ನ್ಯಾಯದೀಪ

**ಯದಿತ್ವಿತಿ ॥ ನಾಯಂ ವಹ್ನಿರಿತಿ ಬಾಧಾನಂತರಂ ಇತ್ಯರ್ಥಃ। ಸ್ಮೃತೀತಿ ॥ ವಹ್ನಿಭ್ರಮಾನುವ್ಯವಸಾಯಜನ್ಯಸ್ಮೃತೀತ್ಯರ್ಥಃ। ಅಪ್ರಾಮಾಣ್ಯಮಿತಿ ॥ ಬಾಧರೂಪಾನುಭವಜನ್ಯ ಸ್ಮೃತ್ಯುಪನೀತಮ್, ಇತ್ಯರ್ಥಃ।**

ಮೂಲದಲ್ಲಿರುವ ಬಾಧಾನಂತರಂ ಎಂಬುದಕ್ಕೆ 'ಇದು ಬೆಂಕಿಯಲ್ಲ' ಎಂಬ ಬಾಧ ಬಂದಮೇಲೆ ಎಂದರ್ಥ. ವ್ಯವಸಾಯವು ಸ್ಮೃತ್ಯುಪನೀತ ಎಂದರೆ ವಹ್ನಿಭ್ರಮೆಯ ನಂತರ ಬಂದಿರುವ ಭ್ರಮೆಯ ಅನುವ್ಯವಸಾಯದಿಂದ ಹುಟ್ಟಿದ ಸ್ಮೃತಿಯಿಂದ ಉಪನೀತ ಎಂದು ಅರ್ಥ. ವ್ಯವಸಾಯದ ಸ್ಮೃತಿಯಿಂದ ಉಪನೀತವಾದ ವ್ಯವಸಾಯದಲ್ಲಿ ಬಾಧಾನುಭವದಿಂದ ಹುಟ್ಟಿದ ಸ್ಮೃತಿಯಿಂದ ಉಪನೀತವಾದ ಅಪ್ರಾಮಾಣ್ಯವು ಪಂಚಮಾನುವ್ಯವಸಾಯದಲ್ಲಿ ತೋರುತ್ತದೆ, ಎಂದು ಅರ್ಥ.

## ನ್ಯಾಯದೀಪ

**ಪ್ರಾಮಾಣ್ಯಸ್ಯಾಪಿ ಪಂಚಮಾನುವ್ಯವಸಾಯವೇದ್ಯತ್ವಮ್ ಅಸ್ತು ಇತ್ಯಾಹ–ತರ್ಹೀತಿ ॥ ತಥಾಚ ಪಂಚಮಾನುವ್ಯವಸಾಯಮಾದಾಯ**

**ಸಾಧ್ಯಪ್ರಸಿದ್ಧ್ಯಾ ಪ್ರಾಮಾಣ್ಯಾನುಮಾನಸ್ಯೈವ ಪ್ರಾಥಮಿಕತ್ವಸಂಭವೇ ಕಿಂ ಪ್ರಾಮಾಣ್ಯಾಭಾವಾನುಮಾನೇನ? ಇತಿ ಭಾವಃ ।**

**ಅಭ್ಯುಪೇತ್ಯ ಚ ಇದಮುಕ್ತಮ್ । ವಸ್ತುತಸ್ತು ಪ್ರಾಮಾಣ್ಯಾನುಮಾನಮೇವ ಅಯುಕ್ತಮ್ । ಪಂಚಮಾನುವ್ಯವಸಾಯವೇದ್ಯತ್ವೋಪಗಮೇ ಚ ಪ್ರಥಮಾನುವ್ಯವಸಾಯವೇದ್ಯತ್ವಸ್ಯ ಸುತರಾಮ್ ಉಪೇಯತ್ವಸ್ಯ ಉಪಪಾದಿತತ್ವಾತ್ ಇತಿ ಭಾವೇನಾಹ–ಆದಾವೇವೇತಿ ॥**

**ಕುಸೃಷ್ಟ್ಯೇತಿ ॥ ಪೂರ್ವಂ ಅಪ್ರಾಮಾಣ್ಯಾಭಾವಾನುಮಾನಂ, ಪಶ್ಚಾತ್ ಪ್ರಾಮಾಣ್ಯಾನುಮಾನಮ್, ಅಪ್ರಾಮಾಣ್ಯಪ್ರಸಿದ್ಧ್ಯರ್ಥಂ ಪಂಚಮಾನು-ವ್ಯವಸಾಯಾನುಸರಣಮ್ ಇತ್ಯಾದಿರೂಪಕುಸೃಷ್ಟ್ಯಾ ಇತ್ಯರ್ಥಃ ॥**

ಅಪ್ರಾಮಾಣ್ಯವು ಪಂಚಮಾನುವ್ಯವಸಾಯವೇದ್ಯವಾದಂತೆ ಪ್ರಾಮಾಣ್ಯವೂ ಪಂಚಮಾನುವ್ಯವಸಾಯದಿಂದಲೇ ವೇದ್ಯವಾಗಲೀ ಎಂದು 'ತರ್ಹಿ' ಎಂಬ ಮೂಲದಲ್ಲಿ ಹೇಳಲಾಗಿದೆ. ಹೀಗೆ ಪ್ರಾಮಾಣ್ಯವೇ ಪಂಚಮಾನುವ್ಯವಸಾಯ ವೇದ್ಯವಾಗುವಾಗ ಪ್ರಾಮಾಣ್ಯರೂಪವಾದ ಸಾಧ್ಯವೇ ಪ್ರಸಿದ್ಧವಾಗುವುದರಿಂದ ಪ್ರಥಮಾನುಮಾನದಿಂದ ಪ್ರಾಮಾಣ್ಯವನ್ನೇ ಸಾಧಿಸಲು ಬರುವಾಗ ಅಪ್ರಾಮಾಣ್ಯಾಭಾವಾನುಮಾನದ ಅಗತ್ಯವಾದರೂ ಏನು?

ವಸ್ತುತಸ್ತು ಪ್ರಾಮಾಣ್ಯವನ್ನೇ ಪ್ರಥಮಾನುಮಾನದಿಂದ ಸಾಧನೆ ಮಾಡಬಹುದು, ಎಂಬುದು ಅಭ್ಯುಪಗಮವಾದ. ಅನುಮಾನದ ಅಗತ್ಯವೇ ಇಲ್ಲ. ಪ್ರಾಮಾಣ್ಯವು ಪಂಚಮಾನುವ್ಯವಸಾಯದಲ್ಲಿ ಉಪನಯಮರ್ಯಾದಯಾ ಭಾನವಾಗುವುದಾದಲ್ಲಿ ವ್ಯವಸಾಯೋಪನೀತವಾಗಿ ಪ್ರಥಮಾನುವ್ಯವಸಾಯದಲ್ಲೇ ಭಾನವಾಗಬಹುದು. ಇದನ್ನು ಬಾಧೋದ್ಧಾರ ಪ್ರಕರಣದಲ್ಲಿ ಸಮರ್ಥಿಸಲಾಗಿದೆ.

ಮೂಲದಲ್ಲಿ ಹೇಳಿದ ಕುಸೃಷ್ಟಿ ಎಂದರೆ–ನೈಯಾಯಿಕರು ಹೇಳಿದಂತೆ ಮೊದಲು ಅಪ್ರಾಮಾಣ್ಯಾಭಾವಾನುಮಾನ, ಆಮೇಲೆ ಪ್ರಾಮಾಣ್ಯಾನುಮಾನ, ಮೊದಲು ಅಪ್ರಾಮಾಣ್ಯಾಭಾವಾನುಮಾನದಲ್ಲಿ ಅಪ್ರಾಮಾಣ್ಯದ ಪ್ರಸಿದ್ಧಿಗಾಗಿ ಪಂಚಮಾನುವ್ಯವಸಾಯದ ಅನುಸರಣೆ, ಇವೆಲ್ಲ ಕುಸೃಷ್ಟಿಗಳು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು 'ವಹ್ನಿತ್ವವತಿ ವಹ್ನಿತ್ವೇನ ಇಚ್ಛಾವಾನ್ ಅಹಮ್' ಇತ್ಯನುವ್ಯವಸಾಯೇನ ಇಚ್ಛೋಪನೀತಂ ತದ್ವತ್ವಂ ಇಚ್ಛಾಯಾಂ ಗೃಹ್ಯತೇ। ಏವಂ ದ್ವೇಷಾದೌ, ಇತಿ**

**ತತ್ರಪ್ರಸಿದ್ಧಂ ವಹ್ನಿಜ್ಞಾನೇ ಸಾಧ್ಯತಾಮ್। ಏವಂ ಚ ನಾಪ್ರಸಿದ್ಧಿಃ ಇತ್ಯತ ಆಹ–ಏತೇನೇತಿ ॥**

ವಹ್ನಿಜ್ಞಾನದಲ್ಲಿ ಪ್ರಥಮತಃ ವಹ್ನಿತ್ವವದ್‌ವಿಶೇಷ್ಯಕತ್ವವನ್ನೇ ಸಾಧಿಸಬಹುದು. ಆ ವಹ್ನಿತ್ವವದ್ ವಿಶೇಷ್ಯಕತ್ವವು ಇಚ್ಛೆಯಲ್ಲಿ ಸಿದ್ಧವಾಗಿದೆ. ಮೊದಲು ವಹ್ನಿವಿಷಯಕವಾದ ಇಚ್ಛಾ ಹುಟ್ಟುತ್ತದೆ. ಆಮೇಲೆ 'ವಹ್ನಿತ್ವವತಿ ವಹ್ನಿತ್ವಪ್ರಕಾರಕ ಇಚ್ಛಾವಾನ್ ಅಹಮ್' ಎಂದು ಅನುವ್ಯವಸಾಯ ಬರುತ್ತದೆ. ಈ ಅನುವ್ಯವಸಾಯದಲ್ಲಿ ವ್ಯವಸಾಯೋಪನೀತವಾದ ವಹ್ನಿತ್ವವದ್ ವಿಶೇಷ್ಯಕತ್ವವು ಇಚ್ಛಾದಲ್ಲಿ ಭಾನವಾಗುತ್ತದೆ. ಇದರಂತೆ ದ್ವೇಷಾದಿಗಳ ಅನುವ್ಯವಸಾಯದಲ್ಲೂ ವಹ್ನಿತ್ವವದ್ ವಿಶೇಷ್ಯಕತ್ವವು ಗೃಹೀತವಾಗುತ್ತದೆ. ಇಚ್ಛೆಯಲ್ಲಿ ಪ್ರಸಿದ್ಧವಾದ ಅದನ್ನು ವಹ್ನಿಜ್ಞಾನದಲ್ಲಿ ಸಾಧನೆ ಮಾಡಬಹುದು. ಆಗ ಸಾಧ್ಯಾಪ್ರಸಿದ್ಧಿ ಇಲ್ಲ, ಎಂದರೆ ಅದಕ್ಕೆ ಸಮಾಧಾನವನ್ನು 'ಏತೇನ' ಎಂಬ ಮೂಲದಲ್ಲಿ ಹೇಳಲಾಗಿದೆ.

**एतेन वह्नित्वद्विशेष्यकत्वमिच्छादौ मनसा प्रसिद्धमिति निरस्तम् । तथात्वे उक्तरीत्या प्रामाण्यस्यैव मनसा परिच्छेदसम्भवात् ।।**

ಇದರಿಂದಾಗಿ ಇನ್ನೊಂದು ಆಕ್ಷೇಪವೂ ಸರಿಯಲ್ಲ, ಎಂದು ತಿಳಿಯುತ್ತದೆ. 'ವಹ್ನಿತ್ವವದ್ ವಿಶೇಷ್ಯಕತ್ವವು' ಇಚ್ಛಾನುವ್ಯವಸಾಯದಲ್ಲಿ ಮನಸ್ಸಿನಿಂದ ಗೃಹೀತವಾಗುತ್ತದೆ. ಆದ್ದರಿಂದ ಅದು ಪ್ರಸಿದ್ಧವಾಯಿತು. ಅದನ್ನು ವಹ್ನಿಜ್ಞಾನದಲ್ಲಿ ಸಾಧನೆ ಮಾಡಬಹುದು.

ಈ ಸಮಾಧಾನವೂ ಯುಕ್ತವಲ್ಲ. ಇಚ್ಛೆಯಲ್ಲಿ ವಹ್ನಿತ್ವವದ್ವಿಶೇಷ್ಯಕತ್ವವನ್ನು ಮನಸ್ಸು ಗ್ರಹಿಸುವಂತೆ ಜ್ಞಾನದಲ್ಲೂ ಮನಸ್ಸು ಅದನ್ನು ಅನುವ್ಯವಸಾಯದಿಂದ ಗ್ರಹಿಸಬಹುದು. ಇದನ್ನು ಬಾಧೋದ್ಧಾರಪ್ರಕರಣದಲ್ಲಿ ತಿಳಿಸಲಾಗಿದೆ.

## ನ್ಯಾಯದೀಪ

**ಉಕ್ತರೀತ್ಯೇತಿ ॥ ಬಾಧೋದ್ಧಾರಗ್ರಂಥೋಕ್ತರೀತ್ಯಾ ವ್ಯವಸಾಯೋಪನೀತಸ್ಯ ಇತ್ಯರ್ಥಃ।**

ಬಾಧೋದ್ಧಾರಗ್ರಂಥದಲ್ಲಿ ವ್ಯವಸಾಯೋಪನೀತವಾದ ವೈಶಿಷ್ಟ್ಯವನ್ನು ಮನಸ್ಸು ಜ್ಞಾನಗತತ್ವೇನ ಅನುವ್ಯವಸಾಯದಲ್ಲಿ ಗ್ರಹಿಸಬಹುದು ಎಂದು ಸಾಧಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಮ್ ಅನುಮೇಯತ್ವಪಕ್ಷೇ ಪ್ರಾಮಾಣ್ಯಸ್ಯ ಅಪ್ರಾಮಾಣ್ಯಸ್ಯ ಚ**

**ಅಪ್ರಸಿದ್ಧ್ಯುಕ್ತ್ಯಾ ತನ್ನಿರೂಪಿತ–ವ್ಯಾಪ್ಯಸಿದ್ಧಿಮುಕ್ತ್ವಾ ಹೇತೋಃ ಪ್ರಮಿತ್ಯ ಸಿದ್ಧಿಮಾಹ— ಕಿಂಚೇತಿ ॥**

ಇದುವರೆಗೆ ಪ್ರಾಮಾಣ್ಯ ಅಥವಾ ಅಪ್ರಮಾಣ್ಯವು ಅನುಮೇಯ ಎಂಬ ಪಕ್ಷದಲ್ಲಿ ಅವೆರಡೂ ಅಜ್ಞಾತವಾದುದರಿಂದ ತನ್ನಿರೂಪಿತವಾದ ವ್ಯಾಪ್ತಿಯನ್ನು ತಿಳಿಯಲಾಗುವುದಿಲ್ಲ. ಇದರಿಂದ ಅನುಮಾನಕ್ಕೆ ವ್ಯಾಪ್ಯಸಿದ್ಧಿ ದೋಷವನ್ನು ಹೇಳಲಾಯಿತು. ಮುಂದಿನ ಗ್ರಂಥದಲ್ಲಿ ಹೇತುವಿನ ಪ್ರಮಿತಿಯೂ ಇಲ್ಲವಾದುದರಿಂದ ಹೇತ್ವಸಿದ್ಧಿದೋಷವನ್ನು ಅನುಮಾನಕ್ಕೆ ಹೇಳಲಾಗಿದೆ.

**किञ्च प्रमासमर्थप्रवृत्त्योः कार्यकारणभावो नियमगर्भः । नियमश्चानन्त्यव्यभिचाराभ्यां न व्यक्त्योरेव । किन्तु प्रमात्वावच्छेदेनेति प्रमात्वे ज्ञाते प्रवृत्तिकारणत्वज्ञानं तेनैव च प्रमात्वज्ञानम् इत्यन्योन्याश्रयः ॥**

ಈ ಅನುಮಾನದ ಹೇತು ಸಫಲಪ್ರವೃತ್ತಿಜನಕತ್ವ. 'ಅಯಂ ವಹ್ನಿಃ' ಎಂಬ ಜ್ಞಾನವು ಸಫಲ ಪ್ರವೃತ್ತಿಗೆ ಕಾರಣವಾಗಿದೆ, ಎಂದರ್ಥ. ಪ್ರಮಾಕ್ಕೂ ಸಫಲಪ್ರವೃತ್ತಿಗೂ ಕಾರ್ಯಕಾರಣಭಾವದಲ್ಲಿ ನಿಯಮವು ಸೇರಿದೆ. ಪ್ರವೃತ್ತಿ–ನಿಯತಪೂರ್ವವೃತ್ತಿಯಾಗಿದೆ ಪ್ರಮಾ ಎಂದು ತಿಳಿಯುವುದೇ ಕಾರ್ಯಕಾರಣಗ್ರಹ. ಇಲ್ಲಿ 'ನಿಯತ' ಎಂಬ ಪದದ ಅರ್ಥದಲ್ಲಿ ಸೇರಿರುವ ನಿಯಮವೆಂದರೆ 'ಯಾ ಪ್ರಮಾ ಸಾ ಪ್ರವೃತ್ತಿಪೂರ್ವಭಾವಿನೀ' ಎಂದು. ಈ ನಿಯಮವನ್ನು ಪ್ರಮಾ ಮತ್ತು ಪ್ರವೃತ್ತಿ ವ್ಯಕ್ತಿಗಳಿಗೆ ತಿಳಿಯಲು ಸಾಧ್ಯವಿಲ್ಲ. ಏಕೆಂದರೆ, ಅವೆರಡೂ ಅನಂತವಾಗಿವೆ. ಅವುಗಳನ್ನು ಒಂದೊಂದಾಗಿ ತಿಳಿಯಲು ನಮ್ಮ ಆಯುಷ್ಯವೇ ಸಾಲದು. ಹೊಸದಾಗಿ ಆಗುವ ವಹ್ನಿವಿಷಯಕ ಪ್ರವೃತ್ತಿಪೂರ್ವದಲ್ಲಿ ಈಗಾಗಲೇ ಘಟಪ್ರವೃತ್ತಿಗೆ ಕಾರಣವಾಗಿ ತಿಳಿದ ಘಟವಿಷಯಕ ಪ್ರಮಾ ಇಲ್ಲ. ಹೀಗೆ ವ್ಯಭಿಚಾರವೂ ಇದೆ. ಆದ್ದರಿಂದ, ಪ್ರಮಾತ್ವಾವಚ್ಛೇದೇನ ಪ್ರಮಾದಲ್ಲಿ ಪ್ರವೃತ್ತಿಕಾರಣತ್ವಜ್ಞಾನ ಬರಬೇಕು. 'ಪ್ರವೃತ್ತಿತ್ವಾವಚ್ಛಿನ್ನಂ ಪ್ರತಿ ಪ್ರಮಾತ್ವಾವಚ್ಛಿನ್ನಂ ಕಾರಣಮ್' ಎಂದು. ಹೀಗೆ ಪ್ರಮಾಕ್ಕೆ ಪ್ರವೃತ್ತಿಕಾರಣತ್ವವನ್ನು ತಿಳಿಯ ಬೇಕಾದರೆ ಪ್ರಮಾತ್ವಜ್ಞಾನಬೇಕು. ಸಫಲಪ್ರವೃತ್ತಿ ಕಾರಣತ್ವ ರೂಪವಾದ ಹೇತುವಿನ ಜ್ಞಾನದಿಂದ ಪ್ರಮಾತ್ವಜ್ಞಾನ ಎಂದು ನೈಯಾಯಿಕರು ಸಾಧನೆ ಮಾಡುತ್ತಾರೆ. ಹೀಗೆ ಮಾಡಿದಾಗ ಅನ್ಯೋನ್ಯಾಶ್ರಯದೋಷ ಬರುತ್ತದೆ.

## ನ್ಯಾಯದೀಪ

**ನಿಯಮೇತಿ ॥ ಯಾ ಪ್ರಮಾ ಸಾ ಸಮರ್ಥಪ್ರವೃತ್ತಿ–ಪೂರ್ವಭಾವಿನೀ । ಇತ್ಯೇವಂ–ರೂಪನಿಯಮೇತ್ಯರ್ಥಃ । ವ್ಯಭಿಚಾರಾಭ್ಯಾಮಿತಿ ॥ ಏತತ್ ಪ್ರಮಾವ್ಯಕ್ತ್ಯಭಾವೇऽಪಿ ವ್ಯಕ್ತ್ಯಂತರೇಣ ಪ್ರವೃತ್ತಿದರ್ಶನಾತ್ ಇತ್ಯರ್ಥಃ ।**

**''ನಿಯಮಶ್ಚ ನ ವ್ಯಕ್ತ್ಯೋರೇವ, ವ್ಯಭಿಚಾರಾತ್ ಅತಿಪ್ರಸಂಗಾಚ್ಚ'' (ಪು.322)**
**ಇತಿ ಉತ್ಪತ್ತಿಪ್ರಾಮಾಣ್ಯೇ ತ್ವಯೈವೋಕ್ತೇಃ ಇತಿ ಭಾವಃ ॥**

**ಅನ್ಯೋನ್ಯಾಶ್ರಯ ಇತಿ ॥ ಯದಿ ಕ್ವಚಿತ್ ಮನಸಾ ಪ್ರಾಮಾಣ್ಯೋಪಗಮೇನ ತತ್ರ ಪ್ರವೃತ್ತಿಕಾರಣತ್ವ-ಗ್ರಹಾತ್ ನಾನ್ಯೋನ್ಯಾಶ್ರಯಃ ತರ್ಹಿ ಪ್ರಥಮಮೇವ ಪ್ರಾಮಾಣ್ಯಂ ಮನಸಾ ಗೃಹ್ಯತಾಮ್ । ಕಿಮ್ ಅನುಮಾನೇನ ಇತಿ ಭಾವಃ ।**

**ಏತಚ್ಚ ಪ್ರಾಮಾಣ್ಯಜ್ಞಾನಂ ಪ್ರವೃತ್ತಿಕಾರಣಂ, ಇತ್ಯುಪೇತ್ಯ ಉಕ್ತಮ್। ಅಪ್ರಾಮಾಣ್ಯಾಭಾವಜ್ಞಾನಮೇವ ಪ್ರವೃತ್ತಿಕಾರಣಮ್ ಇತಿ ಪಕ್ಷೇ ಪ್ರಮಾತ್ವ ಪದಮ್ ಅಪ್ರಮಾತ್ವಾಭಾವಪರಂ ಜ್ಞೇಯಮ್ ।**

ಕಾರ್ಯಕಾರಣಭಾವವು ನಿಯಮಘಟಿತ, ಎಂದಿದೆ ಮೂಲದಲ್ಲಿ. ಆ ನಿಯಮದ ಸ್ವರೂಪ-ಯಾವುದು ಪ್ರಮಾ ಆಗಿದೆಯೋ ಅದು ಪ್ರವೃತ್ತಿಗಿಂತ ಪೂರ್ವದಲ್ಲಿ ಇರುತ್ತದೆ, ಎಂದು.

ತತ್ತದ್‌ವ್ಯಕ್ತಿಗಳಿಗೆ ಕಾರ್ಯಕಾರಣಭಾವ ಹೇಳಿದರೆ ವ್ಯಭಿಚಾರ ಬರುತ್ತದೆ, ಎಂದಿದೆ ಮೂಲದಲ್ಲಿ. ವ್ಯಭಿಚಾರ ಹೇಗೆಂದರೆ, ಚೈತ್ರೀಯ ಪ್ರಮಾ ಇಲ್ಲದೆಯೂ ಮೈತ್ರನಿಗೆ ಪ್ರವೃತ್ತಿ ಯಾಗುತ್ತದೆ, ಎಂದು. ಮಣಿಕಾರನೇ ಪ್ರಾಮಾಣ್ಯೋತ್ಪತ್ತಿಪರತಸ್ತ್ವವಾದದಲ್ಲಿ ದೋಷಾಭಾವ ಮತ್ತು ಗುಣಕ್ಕೆ ಪ್ರಮಾದೊಂದಿಗೆ ವ್ಯಕ್ತಿಶಃ ಕಾರ್ಯಕಾರಣಭಾವ ಹೇಳಿದರೆ ಇದೇ ರೀತಿಯಾಗಿ, ಆನಂತ್ಯ-ವ್ಯಭಿಚಾರಗಳನ್ನು ಹೇಳಿದ್ದಾನೆ.

ಮೂಲದಲ್ಲಿ ಅನ್ಯೋನ್ಯಾಶ್ರಯವನ್ನು ಹೇಳಲಾಗಿದೆ. ಅದರ ಪರಿಹಾರಕ್ಕಾಗಿ ಕ್ವಚಿತ್ ಮನಸ್ಸಿನಿಂದಲೇ ಪ್ರಾಮಾಣ್ಯಜ್ಞಾನ ಬಂದು, ಪ್ರಮಾ ಪ್ರವೃತ್ತಿಕಾರಣ ಎಂದು ತಿಳಿಯುತ್ತದೆ, ಎಂದು ಹೇಳಬೇಕು. ಹೀಗೆ ಹೇಳುವುದಾದಲ್ಲಿ ಪ್ರಥಮಪ್ರಾಮಾಣ್ಯವೇ ಮನಸ್ಸಿನಿಂದ ಗೃಹೀತವಾಗಲಿ, ಅದಕ್ಕಾಗಿ, ಅನುಮಾನ ಮಾಡುವ ಪ್ರಯಾಸ ವ್ಯರ್ಥ ಎಂದು ಹಿಂದಿನ ದೋಷವನ್ನೇ ಹೇಳಬೇಕು.

ಮೂಲದಲ್ಲಿ ಪ್ರಮಾತ್ವ ಮತ್ತು ಸಫಲಪ್ರವೃತ್ತಿ ಇವೆರಡರ ಜ್ಞಾನಗಳಿಗೆ ಪರಸ್ಪರ ಅವಲಂಬನೆ ಇರುವುದರಿಂದ ಅನ್ಯೋನ್ಯಾಶ್ರಯವನ್ನು ಹೇಳಲಾಗಿದೆ. ಈ ಅನ್ಯೋನ್ಯಾಯ ಹೇಳಬೇಕಾದರೆ ಪ್ರವೃತ್ತಿಂ ಪ್ರತಿ ಪ್ರಾಮಾಣ್ಯಜ್ಞಾನಂ ಕಾರಣಂ (ಪ್ರಮಾ ಕಾರಣಮ್) ಎಂಬ ಕಾರ್ಯಕಾರಣ ಭಾವವನ್ನು ಒಪ್ಪಿರಬೇಕಾಗುತ್ತದೆ. ಆದರೆ, ನೈಯಾಯಿಕರು 'ಅರ್ಥನಿಶ್ಚಯಃ ಪ್ರವೃತ್ತಿಕಾರಣಮ್'. ಅದರಲ್ಲಿ ಅಪ್ರಾಮಾಣ್ಯನಿಶ್ಚಯ ಇರಬಾರದು, ಎಂದು ಹೇಳುತ್ತಾರೆ. ಅವರಿಗೆ ಪ್ರಾಮಾಣ್ಯಜ್ಞಾನದ ಅಗತ್ಯವೇ ಇಲ್ಲ. ಈ ಪಕ್ಷದಲ್ಲಿ ಮೂಲದಲ್ಲಿರುವ ಪ್ರಮಾತ್ವಪದಕ್ಕೆ ಅಪ್ರಮಾತ್ವಾಭಾವ ಎಂದರ್ಥ. 'ಪ್ರಮಾತ್ವೇ ಜ್ಞಾತೇ ಪ್ರವೃತ್ತಿಕಾರಣತ್ವ ಜ್ಞಾನಂ' ಎಂಬ ಮೂಲಕ್ಕೆ 'ಅಪ್ರಮಾತ್ವಾಭಾವೇ ಜ್ಞಾತೇ' ಎಂದು ಅರ್ಥ.

## ನ್ಯಾಯದೀಪ

**ಯದ್ವಾ, "ತದಭಾವವತಿ ತತ್ಪ್ರಕಾರಕತ್ವವ್ಯತಿರೇಕಃ ಸಿದ್ಧ್ಯನ್ ತದ್ವತಿ ತತ್ಪ್ರಕಾರತಾಮಾದಾಯ ಪರ್ಯವಸ್ಯತಿ । ತೃತೀಯ ಪ್ರಕಾರಾಭಾವೇನ ತೇನ ವಿನಾ ಸಾಧ್ಯಸ್ಯ ಉಪಸಂಹರ್ತುಂ ಅಶಕ್ಯತ್ವಾತ್ ।" (ಮಣಿ.ಪು.268)**

**ಇತಿ ಗ್ರಂಥೇನ ಅಪ್ರಾಮಾಣ್ಯಾಭಾವಾನುಮಾನಮೇವ ಪ್ರಾಮಾಣ್ಯಾನು-ಮಾನಮ್ ಇತ್ಯುಕ್ತತ್ವಾತ್ ಪ್ರಮಾತ್ವಪದಪ್ರಯೋಗಃ ।**

ಅಥವಾ, ಪ್ರಮಾತ್ವಪದಕ್ಕೆ ಪ್ರಾಮಾಣ್ಯ ಎಂದೇ ಅರ್ಥ. ಅಪ್ರಾಮಾಣ್ಯಾಭಾವವೇ ಪ್ರಮಾತ್ವ ಎಂದು ಮಣಿಕಾರನೇ ಹೇಳಿದ್ದಾನೆ. 'ವಹ್ನಿಜ್ಞಾನದಲ್ಲಿ ತದಭಾವವತಿ ತತ್ಪ್ರಕಾರಕತ್ವರೂಪವಾದ ಅಪ್ರಾಮಾಣ್ಯದ ಅಭಾವವನ್ನು ಅನುಮಾನದಿಂದ ಸಾಧನೆ ಮಾಡಿದಾಗ ಅದು ತದ್ವತಿ ತತ್ಪ್ರಕಾರಕತ್ವರೂಪ ಪ್ರಾಮಾಣ್ಯದಲ್ಲೇ ಪರ್ಯವಸಾನವಾಗುತ್ತದೆ. ಪ್ರಾಮಾಣ್ಯಾ ಪ್ರಾಮಾಣ್ಯ ಗಳನ್ನು ಬಿಟ್ಟು ತೃತೀಯಪ್ರಕಾರವಿಲ್ಲವಾದ್ದರಿಂದ ಪ್ರಾಮಾಣ್ಯಂ ವಿನಾ ಸಾಧ್ಯವನ್ನು ಪಕ್ಷದಲ್ಲಿ ಉಪಸಂಹಾರ ಮಾಡಲು ಆಗುವುದಿಲ್ಲ' ಎಂದು.

ಈ ಗ್ರಂಥದಿಂದ ಅಪ್ರಾಮಾಣ್ಯಾಭಾವಾನುಮಾನವೇ ಪ್ರಾಮಾಣ್ಯಾನುಮಾನ ಎಂದು ಹೇಳಿರುವುದರಿಂದ ಪ್ರಮಾತ್ವ ಎಂಬ ಮೂಲದ ಪದಕ್ಕೆ ಮುಖ್ಯಾರ್ಥವನ್ನೇ ಹೇಳಬಹುದು.

## ನ್ಯಾಯದೀಪ

**ಏತೇನ, ದಾಹಸಮರ್ಥವಿಷಯಕ-ಪ್ರಯತ್ನಜನಕತ್ವೇ ಸತಿ ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್, ಇತ್ಯಪಿ ಹೇತುಃ ಪರಾಸ್ತಃ। ಪ್ರಥಮಂ ಜನಕತ್ವಸ್ಯ ದುರ್ಜ್ಞಾನತ್ವಾತ್ । ದಾಹಸಮರ್ಥವಿಶೇಷ್ಯಕ-ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್ ಇತ್ಯಾದಿರಪಿ, ದಾಹಸಮರ್ಥವಿಶೇಷ್ಯಕತ್ವಸ್ಯ ಆದೌ ದುರ್ಜ್ಞಾನತ್ವಸ್ಯ ಪ್ರಾಗೇವೋಕ್ತತ್ವಾತ್ ನಿರಸ್ತಪ್ರಾಯಃ । ದಾಹಸಮರ್ಥೇತ್ಯೇವಮಾದಿ ಹೇತೂನಾಂ ಪ್ರಮಾತ್ವಸಾಮಾನ್ಯಾನನುಮಾಪಕತ್ವಾಚ್ಚ ।**

ಮಣಿಗ್ರಂಥದಲ್ಲಿ ವಹ್ನಿಜ್ಞಾನದಲ್ಲಿ ಅಪ್ರಾಮಾಣ್ಯಾಭಾವಸಾಧನೆಗಾಗಿ ಎರಡು ಹೇತುಗಳನ್ನು ಹೇಳಲಾಗಿದೆ. ಮೊದಲನೆಯದು, ದಾಹಸಮರ್ಥವಿಷಯಕ-ಪ್ರಯತ್ನಜನಕತ್ವೇ ಸತಿ ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್ ಎಂದು. ಇದೂ ನಿರಸ್ತವಾಯಿತು. ಪ್ರಮಾತ್ವಜ್ಞಾನವಿಲ್ಲದೆ, ಹಿಂದೆ ಹೇಳಿದಂತೆ, ಜನಕತ್ವಜ್ಞಾನವು ಬರಲು ಸಾಧ್ಯವಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯ.

ಇನ್ನೊಂದು ಹೇತು, ದಾಹಸಮರ್ಥವಿಷಯಕ-ವಹ್ನಿತ್ವಪ್ರಕಾರಕ ನಿಶ್ಚಯತ್ವಾತ್, ಎಂದು.

ಮೊದಲನೆಯ ಹೇತುವಿನಲ್ಲಿ ದಾಹಸಮರ್ಥವಿಷಯಕವಾದುದು ಪ್ರಯತ್ನ. ಆದಕ್ಕೆ ಜನಕ ವಹ್ನಿಜ್ಞಾನ. ಎರಡನೆಯ ಹೇತುವಿನಲ್ಲಿ ದಾಹಸಮರ್ಥ ವಿಷಯಕವಾದುದು ವಹ್ನಿಜ್ಞಾನ. 'ಅಯಂ ವಹ್ನಿಃ' ಎಂಬ ಜ್ಞಾನದಲ್ಲಿ ದಾಹಸಮರ್ಥವಾದುದು ವಿಷಯವಾಗಿದೆ, ಎಂದರೆ, ವಹ್ನಿಯೇ ವಿಷಯವಾಗಿದೆ, ಎಂದರ್ಥ. ಅಂದಮೇಲೆ ಆ ಜ್ಞಾನವು ಅಪ್ರಮಾ ಆಗಿರಲು ಸಾಧ್ಯವಿಲ್ಲ. ಈ ಹೇತುವೂ ಸರಿಯಿಲ್ಲ. ಹಿಂದೆ ಬಾಧೋದ್ಧಾರಪ್ರಕರಣದಲ್ಲಿ ವಹ್ನಿಜ್ಞಾನದಲ್ಲಿ ದಾಹಸರ್ಮವಾದುದೇ ವಿಶೇಷ್ಯವಾಗಿದೆ, ಎಂದು ನಿರ್ಧಾರಮಾಡಲು ಬರುವುದಿಲ್ಲ, ಎಂದು ಹೇಳಲಾಗಿದೆ. ಆದ್ದರಿಂದ ಈ ಹೇತುವೂ ಅಸಿದ್ಧ.

ಈ ಎರಡೂ ಹೇತುಗಳು ಎಲ್ಲಾ ಪ್ರಮಾಗಳಲ್ಲೂ ಇಲ್ಲದಿರುವುದರಿಂದ ಇವು ಪ್ರಮಾತ್ವಸಾಮಾನ್ಯಕ್ಕೆ ಅನುಮಾಪಕಗಳಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಮಾತ್ವಸಮನಿಯತ–ಧರ್ಮಾವಚ್ಛೇದೇನ ಅಸ್ತು ತದ್ಗ್ರಹಃ ಇತ್ಯಾಶಂಕ್ಯನಿರಾಹ–ನ ಚೇತಿ ॥**

ನಿಯಮವನ್ನು ಪ್ರಮಾತ್ವಾವಚ್ಛೇದೇನೈವ ತಿಳಿಯಬೇಕಾಗಿಲ್ಲ, ಪ್ರಮಾತ್ವ ಸಮನಿಯತವಾದ ಧರ್ಮಾಂತರಾವಚ್ಛೇದೇನ ತಿಳಿಯಬಹುದು, ಅನ್ಯೋನ್ಯಾಶ್ರಯ ಇಲ್ಲ, ಎಂಬ ಆಶಂಕೆಯನ್ನು 'ನಚ' ಎಂಬ ಗ್ರಂಥದಿಂದ ನಿರಾಕರಿಸುತ್ತಾರೆ—

**न च गुणजन्यत्वाद्यवच्छेदेन नियमः । जन्यतावच्छेदकस्य प्रमात्वस्याज्ञाने गुणजन्यत्वस्यैव दुर्ज्ञानत्वात् ।**

ಸಮರ್ಥಪ್ರವೃತ್ತಿಗೂ ಪ್ರಮಾಕ್ಕೂ ನಿಯಮವನ್ನು ಸಕಲಪ್ರಮಾದಲ್ಲಿಯೂ ಇರುವ ಗುಣಜನ್ಯತ್ವಾವಚ್ಛೇದೇನ ತಿಳಿಯಲೂ ಸಾಧ್ಯವಿಲ್ಲ. ಆಗಲೂ 'ಪ್ರಮಾ ಗುಣಜನ್ಯಾ' ಎಂಬ ಜ್ಞಾನಬೇಕಾಗುತ್ತದೆ. ಗುಣಜನ್ಯತಾವಚ್ಛೇದಕವಾದ ಒಂದು ಧರ್ಮದ ಜ್ಞಾನವಿಲ್ಲದೆ ಗುಣಜನ್ಯತ್ವಜ್ಞಾನವು ಬರಲು ಸಾಧ್ಯವಿಲ್ಲ. ಆ ಧರ್ಮ ಮತ್ತೆ ಪ್ರಮಾತ್ವವೇ. ಹೀಗೆ ಪ್ರಮಾತ್ವಜ್ಞಾನ ಪರಂಪರಯಾ ನಿಯಮಜ್ಞಾನಕ್ಕೆ ಬೇಕೇಬೇಕು.

## ನ್ಯಾಯದೀಪ

**ನ ಚೇತಿ ॥ ಆದಿಪದೇನ ದೋಷಾಭಾವಜನ್ಯತ್ವ, ಅದುಷ್ಟಕರಣಜನ್ಯತ್ವಾದಿ ಪರಿಗ್ರಹಃ । ಪ್ರಮಾತ್ವಸ್ಯೇತಿ ॥ ಅನಿತ್ಯಜ್ಞಾನನಿಷ್ಠಸ್ಯೇತ್ಯರ್ಥಃ ।**

ಮೂಲದಲ್ಲಿರುವ ಆದಿಪದದಿಂದ ದೋಷಾಭಾವಜನ್ಯತ್ವ, ಅದುಷ್ಟಕರಣಜನ್ಯತ್ವ ಎಂಬ

ಎರಡು ಧರ್ಮಗಳನ್ನು ಪರಿಗ್ರಹಿಸಬೇಕು. ಪ್ರಮಾ ಹುಟ್ಟಬೇಕಾದರೆ ಗುಣ, ದೋಷಗಳ ಅಭಾವ, ಅಥವಾ ಅದುಷ್ಟವಾದ ಕರಣಗಳು ಇರಬೇಕು. ಆದ್ದರಿಂದ ಆ ಎರಡು ಧರ್ಮಗಳೂ ಪ್ರಮಾತ್ವ ಸಮನಿಯತಗಳು.

ಮೂಲದಲ್ಲಿ ಗುಣಜನ್ಯತಾವಚ್ಛೇದಕ ಪ್ರಮಾತ್ವ ಎಂದಿದೆ. ಆದರೆ, ಅದು ಈಶ್ವರ ಜ್ಞಾನದಲ್ಲೂ ಇದೆ. ಈಶಜ್ಞಾನ ಗುಣಜನ್ಯವಲ್ಲ. ಅದಕ್ಕಾಗಿ ಅನಿತ್ಯ ಪ್ರಮಾತ್ವವೇ ಜನ್ಯತಾವಚ್ಛೇದಕ ಎಂದು ತಿಳಿಯಬೇಕು.

## ನ್ಯಾಯದೀಪದಲ್ಲಿ ಅವತಾರಿಕೆ

**ಯುಕ್ತಿಪಾದೀಯ ಸುಧೋಕ್ತದಿಶಾ, ವಾದಾವಲ್ಯುಕ್ತದಿಶಾ ಚ ಪ್ರಾಮಾಣ್ಯಾನುಮಾಪಕ–ಸಪ್ತಹೇತೂನ್ ಅಪಾಕರೋತಿ–ಕಿಂಚೇತಿ ॥**

ಸುಧಾಗ್ರಂಥದ ಯುಕ್ತಿಪಾದದಲ್ಲಿ ಮತ್ತು ವಾದವಲೀ ಗ್ರಂಥದಲ್ಲಿ ಶ್ರೀಜಯತೀರ್ಥರು ಪ್ರಾಮಾಣ್ಯಸಾಧಕವಾದ ಏಳು ಹೇತುಗಳನ್ನು ಉಲ್ಲೇಖಿಸಿದ್ದಾರೆ. ಅವುಗಳನ್ನೂ ಮುಂದಿನ ಗ್ರಂಥದಲ್ಲಿ ನಿರಾಕರಿಸುತ್ತಾರೆ–

**किञ्च न प्रवृत्तिसामर्थ्येन प्रामाण्यानुमानम् । चन्द्रतारादिज्ञाने तदभावात् । प्रवृत्तेः प्रामाण्यज्ञानाधीनत्वेनान्योन्याश्रयाच्च । मणिप्रभायां मणिभ्रमे व्यभिचाराच्च ।**

**नापि संवादेन । ज्ञानान्तरसंवादस्य व्यभिचारात् । प्रमासंवादस्याद्याप्यसिद्धेः ।**

**विसंवादाभावस्य चानुपसञ्जातबाधभ्रमेऽपि सत्वात् ।**

**विसंवादयोग्यत्वाभावस्य च प्रमात्वाज्ञाने दुर्ज्ञानत्वात् ।**

**गुणजन्यत्वस्य दोषाभावजन्यत्वस्य दोषाजन्यत्वस्य च प्रमारूपकार्यकल्प्यत्वेन जन्यतावच्छेदकप्रमात्वाज्ञाने गुणजन्यत्वादेर्दुर्ज्ञानत्वेन चान्योन्याश्रयात् ॥**

1. ಸಮರ್ಥಪ್ರವೃತ್ತಿಜನಕತ್ವ ಹೇತುವಿನಿಂದಲೂ ಪ್ರಾಮಾಣ್ಯವನ್ನು ಅನುಮಾನ

ಮಾಡಲಾಗುವುದಿಲ್ಲ. ಚಂದ್ರಜ್ಞಾನ, ನಕ್ಷತ್ರಗಳ ಜ್ಞಾನ ಬಂದ ಮೇಲೆ ಯಾವ ಪ್ರವೃತ್ತಿಯೂ ಆಗುವುದಿಲ್ಲ. ಅಲ್ಲಿ ಪ್ರಾಮಾಣ್ಯಸಿದ್ಧವಾಗುವುದು ಹೇಗೆ? ಅಲ್ಲದೆ, ಪ್ರವೃತ್ತಿಮಾಡುವುದಕ್ಕೆ ಪ್ರಾಮಾಣ್ಯಜ್ಞಾನವು ಕಾರಣ. ಆಗ ಅನ್ಯೋನ್ಯಾಶ್ರಯದೋಷ ಬರುತ್ತದೆ. ಪ್ರಾಮಾಣ್ಯಜ್ಞಾನ ಬಂದರೆ ಪ್ರವೃತ್ತಿ, ಪ್ರವೃತ್ತಿ ಸಫಲವಾದರೆ ಪ್ರಾಮಾಣ್ಯಜ್ಞಾನ. ಹೀಗೆ ಅನ್ಯೋನ್ಯಾಶ್ರಯ. ಸಮರ್ಥಪ್ರವೃತ್ತಿಜನಕತ್ವಹೇತುವು ಪ್ರಾಮಾಣ್ಯವ್ಯಭಿಚಾರಿಯೂ ಆಗಿದೆ. ಮಣಿಯ ಪ್ರಭೆಯನ್ನು ನೋಡಿ 'ಅದೇ ಮಣಿ' ಎಂದು ಭ್ರಾಂತಿ ಬಂತು. ತೆಗೆಯಲು ಹೋದಾಗ ಮಣಿ ಸಿಕ್ಕಿತು. ಇಲ್ಲಿ ಸಫಲ ಪ್ರವೃತ್ತಿಜನಕತ್ವವು ಭ್ರಾಂತಿಗೂ ಇದೆ. ಹೀಗೆ ಈ ಹೇತುವಿಗೆ ಮೂರು ದೋಷಗಳಿವೆ.

2. ಸಂವಾದವಿರುವುದರಿಂದ ಪ್ರಮಾ, ಎಂದೂ ಅನುಮಾನ ಮಾಡಲು ಆಗುವುದಿಲ್ಲ. ಧಾರಾವಾಹಿಕ ಭ್ರಮೆಯಲ್ಲಿ ಪ್ರಥಮಜ್ಞಾನಕ್ಕೆ ದ್ವಿತೀಯಜ್ಞಾನವು ಸಂವಾದಿಯಾಗಿದೆ. ಆದರೆ, ಪ್ರಮಾತ್ವ ಇಲ್ಲ, ವ್ಯಭಿಚಾರ.

ಪ್ರಮಾಸಂವಾದ ಇದ್ದರೆ ಪ್ರಮಾ, ಎಂದೂ ಅನುಮಾನ ಸರಿಯಲ್ಲ. ಸಂವಾದಕವಾದ ಪ್ರಥಮ ಜ್ಞಾನವು ಪ್ರಮಾ ಎಂದು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ಅಸಿದ್ಧಿದೋಷ.

3. ವಿಸಂವಾದಾಭಾವದಿಂದ ಪ್ರಮಾತ್ವಾನುಮಾನವೂ ಸರಿಯಲ್ಲ. ಅನುಪಸಂಜಾತಬಾಧ ವಿರುವ ಭ್ರಮೆಯಲ್ಲಿ ವಿಸಂದವಾದ ಇಲ್ಲ. ತಾವತಾ ಅದು ಪ್ರಮಾ ಅಲ್ಲ.

4. ವಿಸಂವಾದ ಯೋಗ್ಯತ್ವಾಭಾವವೂ ಪ್ರಮಾತ್ವಸಾಧಕವಲ್ಲ. ಹುಟ್ಟಿದ ಜ್ಞಾನವು ಪ್ರಮಾ ಎಂದು ನಿಶ್ಚಯವಾಗದ ಹೊರತು, ಅದು ವಿಸಂವಾದಯೋಗ್ಯವಲ್ಲ ಎಂದು ತಿಳಿಯಲಾಗದು. ಆದ್ದರಿಂದ ಅನ್ಯೋನ್ಯಾಶ್ರಯ.

5,6,7 ಗುಣಜನ್ಯತ್ವ ದೋಷಾಭಾವಜನ್ಯತ್ವ ದೋಷಾಜನ್ಯತ್ವ ಈ ಮೂರೂ ಹೇತುಗಳು ಪ್ರಮಾ ಎಂಬ ವಿಲಕ್ಷಣ ಕಾರ್ಯವು ನಿಶ್ಚಿತವಾದಾಗ ಮಾತ್ರ ತಿಳಿಯುವ ಧರ್ಮಗಳು. ಅಲ್ಲದೆ, ಅವುಗಳಲ್ಲಿ ಜನ್ಯತ್ವವು ಘಟಕವಾಗಿರುವುದರಿಂದ ಜನ್ಯತಾವಚ್ಛೇದಕವಾದ ಪ್ರಮಾತ್ವದ ಜ್ಞಾನಬೇಕು. ಆದ್ದರಿಂದ ಅನ್ಯೋನ್ಯಾಶ್ರಯ ದೋಷವೂ ಇದೆ.

## ನ್ಯಾಯದೀಪ

**ಸಾಮರ್ಥ್ಯೇನ=ವಿಷಯಲಾಭರೂಪೇಣ । ತದನ್ಯಸ್ಯ ಅಸ್ತು ಪಕ್ಷತಾ ಇತಿ ವಾದಿನಂ ಪ್ರತಿ ಆಹ–ಪ್ರವೃತ್ತೇರಿತಿ ॥ ಪ್ರಾಮಾಣ್ಯಜ್ಞಾನಾಧೀನತ್ವೇ-ನೇತಿ ॥ ಸಾಧಿತತ್ವಾತ್, ಪರಮತೇಽಪಿ ಅಪ್ರಾಮಾಣ್ಯಜ್ಞಾನಾಭಾವಾರ್ಥಂ ಅಪಿ ಅಪೇಕ್ಷಿತತ್ವಾತ್, ಇತಿ ಭಾವಃ । ಮನ್ಮತೇ ಪ್ರವೃತ್ತಿಮಾತ್ರಂ ನ**

**ಪ್ರಾಮಾಣ್ಯಜ್ಞಾನಾಧೀನಮ್ ಇತಿ ವದಂತಂ ಪ್ರತಿ ಆಹ—ಮಣೀತಿ ॥ ವ್ಯಭಿಚಾರಾದಿತಿ ॥ ಭ್ರಮಾಂತರಸಂವಾದಿಭ್ರಮೇ ಇತಿ ಭಾವಃ ।**

ಪ್ರವೃತ್ತಿಸಾಮರ್ಥ್ಯೇನ ಪ್ರಾಮಾಣ್ಯಾನುಮಾನಮ್ ಎಂಬಲ್ಲಿ ಪ್ರವೃತ್ತಿಸಾಮರ್ಥ್ಯ ಎಂದರೆ ಪ್ರವೃತ್ತಿಮಾಡಿದ ಮೇಲೆ ವಿಷಯಪ್ರಾಪ್ತಿ. ಅರ್ಥಾತ್ ಸಫಲಪ್ರವೃತ್ತಿ, ಎಂದರ್ಥ.

ಚಂದ್ರ-ತಾರಕಾದಿಜ್ಞಾನಗಳನ್ನು ಬಿಟ್ಟು ಇತರ ಜ್ಞಾನಗಳನ್ನು ಪಕ್ಷಮಾಡಿ ಅವುಗಳಲ್ಲಿ ಪ್ರವೃತ್ತಿಸಾಮರ್ಥ್ಯದಿಂದ ಪ್ರಾಮಾಣ್ಯವನ್ನು ಅನುಮಾನ ಮಾಡೋಣ, ಎಂದರೆ ಅದಕ್ಕುತ್ತರ- 'ಪ್ರವೃತ್ತೇಃ' ಎಂಬ ವಾಕ್ಯದಲ್ಲಿದೆ. ಪ್ರವೃತ್ತಿಗೆ ಪ್ರಾಮಾಣ್ಯಜ್ಞಾನವೇ ಕಾರಣ, ಎಂದು ಹಿಂದಿನ ಪ್ರಕರಣದಲ್ಲಿ ಸಾಧಿಸಲಾಗಿದೆ. ನ್ಯಾಯಮತದಲ್ಲೂ ಪ್ರವೃತ್ತಿಸಹಕಾರಿಯಾದ ಅಪ್ರಾಮಾಣ್ಯಾಭಾವ ಜ್ಞಾನಕ್ಕಾಗಿ ಪ್ರಾಮಾಣ್ಯಜ್ಞಾನವು ಬೇಕು. ಆದ್ದರಿಂದ ಮೂಲದಲ್ಲಿ, ಪ್ರವೃತ್ತಿಯು ಪ್ರಾಮಾಣ್ಯಜ್ಞಾನಾಧೀನ ಎಂದಿರುವುದು ಯುಕ್ತವಾಗಿದೆ.

ನಮ್ಮ ಮತದಲ್ಲಿ ಎಲ್ಲಾ ಪ್ರವೃತ್ತಿಗೂ ಪ್ರಾಮಾಣ್ಯಜ್ಞಾನದ ಅಗತ್ಯ ಇಲ್ಲ, ಪ್ರಾಮಾಣ್ಯ ಸಂದೇಹ ಬಂದಲ್ಲಿ ಮಾತ್ರ, ಅದರ ನಿರಾಸಕ್ಕಾಗಿ ಪ್ರಾಮಾಣ್ಯಜ್ಞಾನವು ಬೇಕಾಗುತ್ತದೆ ಎಂದು ತಾರ್ಕಿಕರು ಹೇಳಿದರೆ ಇನ್ನೊಂದು ಕಡೆ ವ್ಯಭಿಚಾರವನ್ನು ತೋರಿಸಲಾಗಿದೆ- 'ಮಣಿಪ್ರಭಾಯಾಂ' ಎನ್ನುವ ವಾಕ್ಯದಲ್ಲಿ.

ಮೂಲದಲ್ಲಿ ಜ್ಞಾನಾಂತರ ಸಂವಾದವು ಪ್ರಮಾತ್ವ ವ್ಯಭಿಚಾರಿ ಎಂದಿದೆ. ಮೊದಲ ಭ್ರಮೆಗೆ ಇನ್ನೊಂದು ಭ್ರಮೆಯ ಸಂವಾದ ಇದ್ದಾಗ ವ್ಯಭಿಚಾರ ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಭವನ್ಮತೇಽಪಿ ಅಪ್ರಾಮಾಣ್ಯಸ್ಯ ಪರತಸ್ತ್ವಾತ್ ಸಾಧ್ಯಾಪ್ರಸಿದ್ಧಿಃ ತದನುಮಾನೇ ಸ್ಯಾತ್ । ತತ್ರ ಜನ್ಮಾಂತರೀಯ-ಸಂಸ್ಕಾರಾನುಸರಣಸ್ಯ ವಾ ಪ್ರಥಮಂ ಪ್ರಾಮಾಣ್ಯಾಭಾವದ್ವಾರಾನುಸರಣಸ್ಯವಾ ಪಂಚಮಾನುವ್ಯವಸಾಯ-ಪ್ರಸಿದ್ಧತ್ವಾನುಸರಣಾದೇರ್ವಾ ಕಾರ್ಯತ್ವೇ ಮಮಾಪಿ ಸಾಮ್ಯಾದಿತ್ಯತ ಆಹ-ಮನ್ಮತೇತ್ವಿತಿ ॥**

ನೈಯಾಯಿಕರು ಮಾಡುವ ಆಕ್ಷೇಪ—''ನಿಮ್ಮ (ಸ್ವತಸ್ತ್ವವಾದಿಗಳ) ಮತದಲ್ಲೂ ಅಪ್ರಾಮಾಣ್ಯಂ ಪರತಃ, ಅಂದರೆ ಅನುಮಾನದಿಂದ ಅಪ್ರಾಮಾಣ್ಯವನ್ನು ತಿಳಿಯಬೇಕು. ಆಗ ಪ್ರಥಮಾನುಮಾನದಲ್ಲಿ ಸಾಧ್ಯಾಪ್ರಸಿದ್ಧಿಯು ನಿಮಗೂ ಸಮಾನ. ಅದಕ್ಕೆ ನೀವೂ ಜನ್ಮಾಂತರದ ಸಂಸ್ಕಾರವನ್ನೋ, ಅಥವಾ ಮೊದಲು ಜ್ಞಾನದಲ್ಲಿ ಪ್ರಾಮಾಣ್ಯಾಭಾವವನ್ನು ಸಾಧನೆಮಾಡಿ ಅದರ ಮೂಲಕ ಅಪ್ರಾಮಾಣ್ಯಸಾಧನೆಯ ಕ್ರಮವನ್ನೋ, ಇಲ್ಲವೇ ಪಂಚಮಾನುವ್ಯವಸಾಯದಿಂದ

ಅಪ್ರಾಮಾಣ್ಯಸಿದ್ಧಿಯನ್ನೂ ಅನುಸರಿಸಲೇಬೇಕು. ಅದು ನನಗೂ ಸಮಾನ. ನೀವು ಅನುಸರಿಸುವ ಕ್ರಮವನ್ನೇ ನಾನೂ ಅನುಸರಿಸುತ್ತೇನೆ'' ಈ ಆಕ್ಷೇಪಕ್ಕೆ ಮುಂದಿನ ಗ್ರಂಥ ಸಮಾಧಾನ ನೀಡುತ್ತದೆ.

**मन्मते तु उत्सर्गतः प्रामाण्यं गृह्णन्नपि साक्षी बाधानन्तरमुक्तरीत्या विसंवादलक्षणात् अपवादात् अप्रामाण्यमपि गृह्णाति । उक्तं हि सुधायाम्- 'साक्षी अपवादकसद्भावेऽप्रामाण्यमपि गृह्णाति' इति ॥**

ತಪ್ಪುಗ್ರಹಿಕೆಯಿಂದ ಈ ಆಕ್ಷೇಪ ಮಾಡಲಾಗಿದೆ. ನಮ್ಮ ಮತದಲ್ಲಿ ಅಪ್ರಾಮಾಣ್ಯಂ ಪರತಃ ಎಂದರೆ ಅಪ್ರಾಮಾಣ್ಯವು ಅನುಮಾನವೇದ್ಯ ಎಂದು ಅಭಿಪ್ರಾಯವಲ್ಲ. ತನ್ನ ಸಹಜಶಕ್ತಿಯಿಂದಲೇ ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿಯು 'ನೇದಂ ರಜತಂ' ಎಂಬ ಬಾಧ ಬಂದ ಮೇಲೆ ಪ್ರವೃತ್ತಿ ವಿಸಂವಾದರೂಪವಾದ ಅಪವಾದದಿಂದ ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಅಲ್ಲಿಗೆ ಅಪ್ರಾಮಾಣ್ಯವೂ ಸಾಕ್ಷಿವೇದ್ಯ. ಆದರೆ, ಸಾಕ್ಷಿಗೆ ಅಪ್ರಾಮಾಣ್ಯಗ್ರಹಣಶಕ್ತಿಯು ಸ್ವಾಭಾವಿಕವಲ್ಲ, ಆಹಿತ. ಅದರಿಂದಾಗಿ 'ಅಪ್ರಾಮಾಣ್ಯಂ ಪರತಃ' ಎನ್ನಲಾಗುತ್ತದೆ. ಸುಧಾದಲ್ಲಿ ಇದನ್ನೇ ಹೇಳಲಾಗಿದೆ-ಸಾಕ್ಷಿಯು ದೋಷಾದಿ ಅಪವಾದಕಗಳಿದ್ದಾಗ ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು.

## ನ್ಯಾಯದೀಪ

**ಉತ್ಸರ್ಗತಃ ॥ ಸ್ವ-ಸ್ವಭಾವಸಾಮರ್ಥ್ಯತಃ ಇತ್ಯರ್ಥಃ । ಸ್ವತ ಏವಾಸ್ತು, ಕಿಂ ವಿಸಂವಾದೇನ ಇತ್ಯತ ಆಹ—ಉಕ್ತರೀತ್ಯೇತಿ ॥ ''ಅಪ್ರಾಮಾಣ್ಯಂ ತು ವಿಸಂವಾದಾದ್ಯನುಸಂಧಾನೇ ಏವ ಗೃಹ್ಯತೇ' ಇತ್ಯಾದಿನಾ ಸ್ವತೋಽಪ್ರಾಮಾಣ್ಯಗ್ರಹೇ ಅಸಾಮರ್ಥ್ಯಾತ್, ಇತ್ಯಾದೇಃ ಸ್ವತಸ್ತ್ವಾನುಮಾನವಾದೇ ಉಕ್ತತ್ವಾತ್, ತತ್ರ ಉಕ್ತರಿತ್ಯಾ ಇತ್ಯರ್ಥಃ । ಉಕ್ತಂ ಹೀತಿ ॥ ಆದ್ಯಪಾದೇ—**

**ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯಹಿ ।**
**ಅನವಸ್ಥಾನ್ಯಥಾ ಹಿ ಸ್ಯಾತ್, ಅಪ್ರಾಮಾಣ್ಯಂ ತಥಾನ್ಯತಃ ॥**

**ಇತ್ಯೇತದ್ವ್ಯಾಖ್ಯಾವಸರೇ ಇತ್ಯರ್ಥಃ । ಸುಧಾವಾಕ್ಯಸ್ಯ ಅರ್ಥತೋ ಅನುವಾದಃ-ಸಾಕ್ಷೀತ್ಯಾದಿ ॥**

ಸಾಕ್ಷಿಯು ಉತ್ಸರ್ಗತಃ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂಬಲ್ಲಿ ಉತ್ಸರ್ಗತಃ ಎಂದರೆ ತನ್ನ ಸಹಜಸಾಮರ್ಥ್ಯದಿಂದ, ಎಂದರ್ಥ.

ಪ್ರಾಮಾಣ್ಯದಂತೆ, ಅಪ್ರಾಮಾಣ್ಯವನ್ನೂ ಸಾಕ್ಷಿಯು ಸಹಜಶಕ್ತಿಯಿಂದಲೇ ಗ್ರಹಿಸಲಿ, ವಿಸಂವಾದದ ಅಗತ್ಯವೇನು? ಅದಕ್ಕುತ್ತರ ಉಕ್ತರೀತ್ಯಾ, ಎಂದು. ಇದೇ ಗ್ರಂಥದ ಸ್ವತಸ್ತ್ವಾನುಮಾನ

ಪ್ರಕರಣದಲ್ಲಿ (ಪ್ರ.2) ಸಾಕ್ಷಿಗೆ ಸ್ವತಃ ಅಂದರೆ ಸಹಾಯವಿಲ್ಲದೆ ಅಪ್ರಾಮಾಣ್ಯವನ್ನು ಗ್ರಹಿಸುವ ಸಾಮರ್ಥ್ಯವಿಲ್ಲ ಎಂದು ಹೇಳಲಾಗಿದೆ.

ಪ್ರಥಮಾಧ್ಯಾಯದ ಪ್ರಥಮಪಾದ ಜಿಜ್ಞಾಸಾಧಿಕರಣದಲ್ಲಿರುವ ಸುಧಾವಾಕ್ಯದ ಅರ್ಥಾನುವಾದವನ್ನು ಮೂಲದಲ್ಲಿ ಮಾಡಲಾಗಿದೆ. ಅಲ್ಲಿ ಸುಧಾವಾಕ್ಯ ಹೀಗಿದೆ— ಪ್ರವೃತ್ತ್ಯಸಾಮರ್ಥ್ಯಾದಿನಾ ಅಪವಾದಕಸ್ಯ ಸದ್ಭಾವೇ ಅಪ್ರಾಮಾಣ್ಯಮಪಿ ಗೃಹ್ಣಾತ್ಯೇವ। (ಜಿಜ್ಞಾಸಾಧಿಕರಣ)

**या तु विष्णुतत्वनिर्णयटीकायां ''अनुमेयमेवाप्रामाण्यं'' इत्युक्तिः सा साक्षिणोऽप्रामाण्यग्रहणे विसंवादापेक्षा नियतेत्यभिप्रेत्य । अत एव तत्रैव ''न पुनर्ज्ञानग्राहकमात्रग्राह्यत्वं'' इत्युक्तम् । वादावल्यां च ''अप्रामाण्यस्यानुमेयत्वावसायात्'' इत्युक्त्वा ''न चाप्रामाण्यं क्वापि निरपेक्षेण साक्षिणा निश्चितचरं'' इत्युक्तम् ।।**

ಅಪ್ರಾಮಾಣ್ಯವೂ ಸಾಕ್ಷಿವೇದ್ಯ ಎಂದೇ ನಮ್ಮ ಸಿದ್ಧಾಂತ. ಆದರೂ, ವಿಷ್ಣುತತ್ತ್ವನಿರ್ಣಯಟೀಕಾದಲ್ಲಿ ಹೀಗೊಂದು ವಾಕ್ಯವಿದೆ. (ಅದರ ಅರ್ಥ) 'ಅಪ್ರಾಮಾಣ್ಯವು ಅನುಮೇಯ' ಎಂದು. ಅದರ ಅಭಿಪ್ರಾಯ ಸಾಕ್ಷಿಗೆ ಅಪ್ರಾಮಾಣ್ಯವನ್ನು ಗ್ರಹಿಸಲು ನಿಯಮೇನ ವಿಸಂವಾದದ ಸಹಾಯಬೇಕು, ಎಂದು. ಆದ್ದರಿಂದಲೇ ಅದೇ ತತ್ತ್ವನಿರ್ಣಯದಲ್ಲಿ 'ದುಷ್ಟಬುದ್ಧೀನಾಮೇವ' ಎಂಬ ಮೂಲವಾಕ್ಯದ ಟೀಕೆಯಲ್ಲಿ 'ಅಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಮಾತ್ರದಿಂದ ಗ್ರಾಹ್ಯವಲ್ಲ' ಎಂದಿದೆ. ಇಲ್ಲಿ ಮಾತ್ರಪದಿಂದ ಇತರ ಸಹಾಯಯುಕ್ತವಾದ ಸಾಕ್ಷಿಗ್ರಾಹ್ಯ, ಕೇವಲ ಸಾಕ್ಷಿಯಿಂದ ಗ್ರಾಹ್ಯವಲ್ಲ, ಎಂದು ಅಭಿಪ್ರಾಯ ಸ್ಫುಟವಾಗಿದೆ.

ವಾದಾವಲೀ ಗ್ರಂಥದಲ್ಲೂ ಮೊದಲು 'ಅಪ್ರಾಮಾಣ್ಯವು ಅನುಮೇಯ' ಎಂದು ಹೇಳಿ 'ಅಪ್ರಾಮಾಣ್ಯವು ಎಂದೂ ನಿರಪೇಕ್ಷಸಾಕ್ಷಿಗ್ರಾಹ್ಯವಲ್ಲ' ಎಂದಿದೆ. ಇದರಿಂದ 'ಅನುಮೇಯಂ' ಎಂಬ ಪದಕ್ಕೆ ವಿಸಂವಾದ ಸಾಪೇಕ್ಷ ಗ್ರಾಹ್ಯ ಎಂದೇ ಅರ್ಥ.

## ನ್ಯಾಯದೀಪ

**ಉಕ್ತಮಿತಿ ।। 'ದುಷ್ಟಬುದ್ಧೀನಾಮೇವ ಅಪ್ರಾಮಾಣ್ಯಶಂಕಾ' ಇತ್ಯೇತದ್-ವ್ಯಾಖ್ಯಾವಸರೇ ಇತ್ಯರ್ಥಃ ।**

ತತ್ತ್ವನಿರ್ಣಯದಲ್ಲಿ 'ದುಷ್ಟಬುದ್ಧೀನಾಮೇವ' ಇತ್ಯಾದಿ ಮೂಲವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ 'ನ ಪುನಃ' ಎಂಬ ಟೀಕಾವಾಕ್ಯವಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವೇವಂ, ಇದಂ ಅಪ್ರಮಾಣಂ ನ ವಾ, ಇತಿ ಸಂದೇಹಾದಿರಪಿ ಸಾಕ್ಷೀ, ಕಿಮ್? ನೇತ್ಯಾಹ—ಅಪ್ರಾಮಾಣ್ಯೇತಿ ।।**

ಪ್ರಾಮಾಣ್ಯ, ಅಪ್ರಾಮಾಣ್ಯ ಎರಡೂ ಸಾಕ್ಷಿವೇದ್ಯವಾದರೆ 'ಇದಂ ಜ್ಞಾನಂ ಪ್ರಮಾಣಂ ನವಾ' ಎಂಬ ಸಂದೇಹವೂ ಸಾಕ್ಷಿರೂಪವೇ? ಅಲ್ಲ ಎನ್ನುತ್ತಾರೆ ಮುಂದಿನ ಗ್ರಂಥದಲ್ಲಿ.

**अप्रामाण्यशङ्कादिकं तु मानसमेव । उक्तं हि भगवत्पादैः ।**

**''यत्कचिद्व्यभिचारि स्याद्दर्शनं मानसं हि तत्'' इति ।**

**''सुदृढो निर्णयो यत्र ज्ञेयं तत्साक्षिदर्शनम्'' इति च ।**

**तस्मात् प्रामाण्यस्य परतस्त्वे प्राथमिकं तज्ज्ञानमेव न सम्भवतीति ।**

ಅಪ್ರಾಮಾಣ್ಯಸಂದೇಹ, ಭ್ರಮೆ ಮುಂತಾದವು ಸಾಕ್ಷಿ ರೂಪಗಳಲ್ಲ, ಮಾನಸ ವೃತ್ತಿರೂಪಗಳು. ಭಗವತ್ಪಾದರು ಅದನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. (ಅನು. 3.4.143) ಅಷ್ಟೇ ಅಲ್ಲ, ದೃಢವಾದ ನಿರ್ಣಯವೇ ಸಾಕ್ಷಿದರ್ಶನ ಎಂದೂ ಅವರ ಮಾತಿದೆ. (ಅನು.3.4.142) ಆದ್ದರಿಂದ ಒಟ್ಟು ಈ ಪ್ರಕರಣದ ವಿಷಯ ಪ್ರಾಮಾಣ್ಯಂ ಪರತಃ, ಎಂದರೆ ಪ್ರಾಥಮಿಕ ಪ್ರಾಮಾಣ್ಯಜ್ಞಾನವು ಬರಲಿಕ್ಕಿಲ್ಲ.

## ನ್ಯಾಯದೀಪ

**ಉಕ್ತಂ ಹೀತಿ—ಜ್ಞಾನಪಾದೇ ।**

ಜ್ಞಾನಪಾದದಲ್ಲಿ (3.4.2 ಅಧಿ.) ಸಂದೇಹಾದಿಗಳು ಮಾನಸ, ಎಂದು ಹೇಳಲಾಗಿದೆ.

**एतदप्युक्तं ''अन्यथा'' इत्यादिना । परतस्त्वे प्राथमिक प्रामाण्यानुमितेरेवासम्भवेन, इयं प्रमा, इयं त्वप्रमा, इति व्यवस्थित्यसम्भवादित्यर्थः ।।**

ಈ ಪ್ರಕರಣದಲ್ಲಿ ಹೇಳಿರುವ ವಿಷಯವನ್ನೂ ಭಗವತ್ಪಾದರು 'ಅನವಸ್ಥಾನ್ಯಥಾ ಹಿ ಸ್ಯಾತ್' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದರ ಅಭಿಪ್ರಾಯ ಪರತಸ್ತ್ವವನ್ನು ಒಪ್ಪಿದರೆ ಪ್ರಾಥಮಿಕ ಪ್ರಾಮಾಣ್ಯಾನುಮಿತಿಯೇ ಬರಲಿಕ್ಕಿಲ್ಲ. ಇದರಿಂದ 'ಅನವಸ್ಥಾ' ಎಂದರೆ ಇದು ಪ್ರಮಾ, ಇದು ಅಪ್ರಮಾ ಎಂಬ ವ್ಯವಸ್ಥೆಯೇ ಇಲ್ಲವಾದೀತು, ಎಂದು.

**ಇಲ್ಲಿಗೆ ಪರತಸ್ತ್ವೇ ಪ್ರಥಮಪ್ರಾಮಾಣ್ಯಾನುಮಿತ್ಯ ಸಂಭವ ಪ್ರಕರಣ ಮುಗಿಯಿತು. ।। 8 ।।**

## ಈ ಪ್ರಕರಣದ ಸಾರಾಂಶ

ನೈಯಾಯಿಕರು ಪ್ರಾಮಾಣ್ಯಂ ಪರತಃ ಎನ್ನುತ್ತಾರೆ. ಪರತಃ ಎಂದರೆ ಜ್ಞಾನಗ್ರಾಹಕವಾದ ಮನಸ್ಸಿನಿಂದ ಪ್ರಾಮಾಣ್ಯದ ಜ್ಞಾನ ಬರುವುದಲ್ಲ. ಜ್ಞಾನಗತ ಪ್ರಾಮಾಣ್ಯವನ್ನು ಸಫಲಪ್ರವೃತ್ತಿಜನಕತ್ವ ಹೇತುವಿನಿಂದ ಅನುಮಾನ ಮಾಡಬೇಕು, ಎಂದು ಅವರ ಅಭಿಪ್ರಾಯ. ಇದಕ್ಕೆ ದೋಷವನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ.

''ಪರ್ವತಃ ವಹ್ನಿಮಾನ್' ಎಂದು ವಹ್ನಿಯನ್ನು ಸಾಧನೆ ಮಾಡಬೇಕಾದರೆ ವಹ್ನಿಯು ಬೇರೆ ಕಡೆ ಪ್ರಸಿದ್ಧವಾಗಿರಬೇಕು. ವಹ್ನಿಯನ್ನೇ ನೋಡದ ವ್ಯಕ್ತಿ ವಹ್ನಿಯನ್ನು ಅನುಮಾನ ಮಾಡಲಾರ. ಏಕೆಂದರೆ, ಅವನಿಗೆ 'ಧೂಮ ಇದ್ದಲ್ಲಿ ವಹ್ನಿ ಇರುತ್ತದೆ' ಎಂಬ ವ್ಯಾಪ್ತಿಜ್ಞಾನವೇ ಇಲ್ಲ. ಆದ್ದರಿಂದ ಅನುಮಾನಾತ್ ಪೂರ್ವದಲ್ಲಿ ಸಾಧ್ಯಪ್ರಸಿದ್ಧಿ ಇರಬೇಕು. ಪ್ರಕೃತ, ವಹ್ನಿಜ್ಞಾನದಲ್ಲಿ ಇದು ಮೊದಲಾಗಿ 'ವಹ್ನಿತ್ವವತಿ ವಹಿತ್ವ ಪ್ರಕಾರಕತ್ವಂ' ಎಂಬ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕಾದರೆ ಆ ಪ್ರಾಮಾಣ್ಯವು ಕ್ವಚಿತ್ ಪ್ರಸಿದ್ಧವಾಗಬೇಕು. ಸ್ವತಸ್ತ್ವಮತದಲ್ಲಿ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುವುದರಿಂದ ಪ್ರಾಮಾಣ್ಯವು ಸಿದ್ಧವಾಗಬಹುದು. ಪ್ರತ್ಯಕ್ಷದಿಂದ ಜ್ಞಾನಬರಬೇಕಾದರೆ ಅದು ಪೂರ್ವದಲ್ಲಿ ಜ್ಞಾತವಾಗಿರಬೇಕಾಗಿಲ್ಲ. ಅನೇಕ ಹೊಸ ಹೊಸ ವಸ್ತುಗಳನ್ನು ನಾವು ಪ್ರತ್ಯಕ್ಷದಿಂದ ತಿಳಿದುಕೊಳ್ಳುತ್ತೇವೆ. ಹೀಗೆ ಅನುವ್ಯವಸಾಯವು ಪ್ರಥಮಪ್ರಾಮಾಣ್ಯಗ್ರಹಣೆ ಮಾಡುವುದಕ್ಕೆ ಬಾಧಕವೇನಿಲ್ಲ. ಆದರೆ, ಅನುಮೇಯತ್ವಪಕ್ಷದಲ್ಲಿ ಅದರ ಜ್ಞಾನ ಅನುಮಾನಕ್ಕಿಂತ ಮೊದಲು ಹೇಗೆ? ಈ ಪ್ರಶ್ನೆಯನ್ನು ಮಣಿಕಾರನೇ ಮಾಡಿಕೊಂಡು ಅದಕ್ಕೆ ಪರಿಹಾರವನ್ನು ಕೊಟ್ಟಿದ್ದಾನೆ. ಅದರ ವಿಮರ್ಶೆಯನ್ನು ಈ ಪ್ರಕರಣದಲ್ಲಿ ಮಾಡಲಾಗಿದೆ.

**ಪ್ರಾಚೀನ ನೈಯಾಯಿಕರ ಸಮಾಧಾನ ವಿಮರ್ಶೆ**—ಇದಕ್ಕೆ ಪ್ರಾಚೀನ ನೈಯಾಯಿಕರು ಹೀಗೆ ಸಮಾಧಾನ ಹೇಳುತ್ತಾರೆ— ಜನ್ಮಾಂತರದಲ್ಲಿ ಅನುಭೂತವಾದ ಪ್ರಾಮಾಣ್ಯದ ಸ್ಮರಣೆ ಈ ಜನ್ಮದಲ್ಲಿ ಬರುತ್ತದೆ, ಅದನ್ನು ಈ ಜನ್ಮದಲ್ಲಿ 'ಅಯಂ ವಹ್ನಿಃ' ಎಂಬ ಅನುಭವದಲ್ಲಿ ಸಮರ್ಥಪ್ರವೃತ್ತಿ ಜನಕತ್ವ ಹೇತುವಿನಿಂದ ಸಾಧನೆ ಮಾಡಬಹುದು, ಎಂದು.

ಇದು ಹಾಸ್ಯಾಸ್ಪದವಾದ ವಿಚಾರ. ಪ್ರಾಮಾಣ್ಯದಂತಹ ಕ್ಷುಲ್ಲಕ ವಿಷಯ ಜನ್ಮಾಂತರದಲ್ಲಿ ಅನುಭೂತವಾದುದು ಸ್ಮರಣೆಗೆ ಬರುವುದಾದಲ್ಲಿ ಇತರ ಅನೇಕ ವಿಷಯಗಳೂ ಏಕೆ ಸ್ಮರಣೆಗೆ ಬರುವುದಿಲ್ಲ? ಅಲ್ಲದೆ, ಅನಿವಾರ್ಯ ಸಂದರ್ಭಗಳಲ್ಲಿ ಹೀಗೆ ಜನ್ಮಾಂತರದ ಸ್ಮರಣೆಯನ್ನು ಹೇಳಬಹುದು. ಪ್ರಕೃತ 'ಪ್ರಾಮಾಣ್ಯಂ ಸ್ವತಃ' ಎಂದು ಹೇಳಿಯೂ ಸಮಾಧಾನಿಸಲು ಬರುವಾಗ ಈ ಕಲ್ಪನೆಗೆ ಆಧಾರವೇ ಇಲ್ಲ.

**ಮಣಿಕಾರೋಕ್ತ ಪ್ರಥಮ ಸಮಾಧಾನದ ವಿಮರ್ಶೆ**—ಇದಕ್ಕೆ ಮಣಿಕಾರ ಹೀಗೆ ಸಮಾಧಾನವನ್ನು ಹೇಳಿದ್ದಾನೆ. ವಹ್ನಿಜ್ಞಾನದಲ್ಲಿ ಮೊದಲು ಪ್ರಾಮಾಣ್ಯವನ್ನು ಸಾಧನೆ ಮಾಡುವುದೇ

ಇಲ್ಲ, ಅಪ್ರಾಮಾಣ್ಯದ ಅಭಾವವನ್ನು ಸಾಧನೆ ಮಾಡಬೇಕು. 'ಅಯಂ ವಹ್ನಿಃ' ಎಂಬ ಜ್ಞಾನ ಬಂದ ಮೇಲೆ ಪ್ರವೃತ್ತಿ ಮಾಡಿದಾಗ, ವಹ್ನಿಯು ಸಿಕ್ಕು ಆದರಿಂದಾಗಬೇಕಾದ ಕೆಲಸವನ್ನು ಪೂರೈಸಿದ ಮೇಲೆ 'ನನಗೆ ಬಂದ ವಹ್ನಿಜ್ಞಾನವು ಅಪ್ರಮಾಣ ಅಲ್ಲ' ಎಂದು ಅನುಮಾನ ಮಾಡಬೇಕು. ಇಲ್ಲಿ ಅಪ್ರಾಮಾಣ್ಯಾಭಾವವು ಸಾಧ್ಯವಾದರೂ ಅದರ ಪ್ರಸಿದ್ಧಿಯ ಅಗತ್ಯವಿಲ್ಲ, ಏಕೆಂದರೆ, ಇದು ವ್ಯತಿರೇಕ್ಯನುಮಾನ. ಇಲ್ಲಿ 'ಯತ್ರ ಹೇತುಃ, ತತ್ರ ಸಾಧ್ಯಮ್' ಎಂದು ವ್ಯಾಪ್ತಿಜ್ಞಾನದ ಅಗತ್ಯವಿಲ್ಲ, 'ಯತ್ರ ಸಾಧ್ಯಾಭಾವಃ ತತ್ರ ಹೇತ್ವಭಾವಃ' ಎಂಬ ವ್ಯತಿರೇಕವ್ಯಾಪ್ತಿಜ್ಞಾನ ಇದ್ದರೆ ಸಾಕು. ಇತರ ವ್ಯತಿರೇಕ್ಯನುಮಾನಗಳಲ್ಲಿ ಸಾಧ್ಯಾಭಾವದ ಜ್ಞಾನ ಬರಬೇಕಾದರೆ ಸಾಧ್ಯಜ್ಞಾನವು ಇರಬೇಕು. ಆದರೆ, ಈ ಅನುಮಾನ ಅಭಾವಸಾಧ್ಯಕವ್ಯತಿರೇಕಿ. ಇಲ್ಲಿ ಸಾಧ್ಯ 'ಅಪ್ರಾಮಾಣ್ಯಾಭಾವ'. ಅದರ ಅಭಾವ ಅಪ್ರಾಮಾಣ್ಯರೂಪವಾಗಿದೆ. ಸಾಧ್ಯಜ್ಞಾನ ಇಲ್ಲದೆಯೂ 'ಯತ್ರ ಅಪ್ರಾಮಾಣ್ಯಂ ತತ್ರ ಸಫಲಪ್ರವೃತ್ತಿಜನಕತ್ವಾಭಾವಃ' ಎಂದು ವ್ಯಾಪ್ತಿಯನ್ನು ತಿಳಿಯಬಹುದು. ಹೀಗೆ ಸಾಧನೆ ಮಾಡಿದಾಗ ಸಾಧ್ಯಾಪ್ರಸಿದ್ಧಿಯು ದೋಷವಾಗುವುದಿಲ್ಲ. ಹೀಗೆ ಅನುಮಾನದಿಂದ ವಹ್ನಿಜ್ಞಾನದಲ್ಲಿ ಅಪ್ರಾಮಾಣ್ಯ ಇಲ್ಲ, ಎಂದು ತಿಳಿದರೆ ಸಾಕು. ಪ್ರವೃತ್ತಿಯಾಗುತ್ತದೆ. ಪ್ರವೃತ್ತಿಗೆ ನ್ಯಾಯಮತದಲ್ಲಿ ಅಗೃಹೀತಾಪ್ರಾಮಾಣ್ಯಕ ಅರ್ಥನಿಶ್ಚಯ ಕಾರಣ. ಪ್ರಾಮಾಣ್ಯನಿಶ್ಚಯಬೇಕಾಗಿಲ್ಲ.

ಇದು ಮಣಿಕಾರ ಮಾಡಿದ ತಾಂತ್ರಿಕ ಸಮರ್ಥನೆ. ಇದನ್ನು ತರ್ಕತಾಂಡವದಲ್ಲಿ 'ವ್ಯಧಿಕರಣ ಉತ್ತರ' ಎಂದು ಹೇಳಿ ನಿರಾಕರಿಸಲಾಗಿದೆ. ನಾವು ಮಾಡಿರುವ ಪ್ರಶ್ನೆ—ಮೊದಲು ಪ್ರಾಮಾಣ್ಯಗ್ರಹ ಹೇಗೆ? ಎಂದು. ಅದಕ್ಕೆ ಮಣಿಕಾರನ ಉತ್ತರ 'ಅಪ್ರಾಮಾಣ್ಯಾಭಾವವನ್ನು ತಿಳಿಯಬಹುದು' ಎಂದು. ಇದು ಪ್ರಶ್ನೆಗೆ ಅನುಗುಣವಾದ ಉತ್ತರ ಅಲ್ಲ. ಇದಕ್ಕೆ ಮಣಿಕಾರನ ಸಮಾಧಾನ ಹೀಗಿದೆ—ಜ್ಞಾನದಲ್ಲಿ ಸಂಭಾವಿತವಾದ ಧರ್ಮಗಳು ಎರಡು ಮಾತ್ರ. ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ. ಅಪ್ರಾಮಾಣ್ಯವನ್ನು ನಿಷೇಧ ಮಾಡಿದಾಗ ಪ್ರಾಮಾಣ್ಯವೇ ಸಿದ್ಧವಾಗಬೇಕು. ಅದು ಬಿಟ್ಟು ಬೇರೊಂದು ವಿಕಲ್ಪವೇ ಇಲ್ಲ.

ಇದು ಶಾಸ್ತ್ರೀಯ ಉತ್ತರ ಅಲ್ಲ. ಅಪ್ರಾಮಾಣ್ಯಾಭಾವ ಇದ್ದಲ್ಲಿ ಪ್ರಾಮಾಣ್ಯ ಇರಬಹುದು. ಆದರೆ, ಅದು ಅಪ್ರಾಮಾಣ್ಯಾಭಾವಸಾಧಕವಾದ ಅನುಮಾನದಿಂದ ಬಂದಿರುವ ಅನುಮಿತಿ ಅಲ್ಲ, ಅರ್ಥಾತ್ ಸಿದ್ಧವಾದುದು. ಹಾಗೆ ಸಿದ್ಧವಾದಾಗ ಅದನ್ನು ಅನುಮಾನ ಸಿದ್ಧ, ಎಂದು ಹೇಳುವಂತಿಲ್ಲ.

ಇದಕ್ಕೂ ಹೀಗೆ ಸಮಾಧಾನ ಹೇಳಬಹುದು—ವಹ್ನಿಜ್ಞಾನದಲ್ಲಿ ಅಪ್ರಾಮಾಣ್ಯ ಇಲ್ಲ, ಎಂದು ಪ್ರಥಮಾನುಮಾನದಿಂದ ನಿಷೇಧ ಮಾಡಿದ ಮೇಲೆ ಇನ್ನೊಂದು ಅನುಮಾನ ಮಾಡಬೇಕು—ಈ ವಹ್ನಿಜ್ಞಾನವು ಅಪ್ರಮಾಣವಲ್ಲವಾದ ಕಾರಣ ಪ್ರಮಾಣವಾಗಿದೆ, ಎಂದು. ಈ ಎರಡನೆಯ ಅನುಮಾನದಿಂದ ಪ್ರಥಮಪ್ರಾಮಾಣ್ಯವು ಸಿದ್ಧವಾಗುತ್ತದೆ, ಎಂದು.

ಆದರೆ, ಇದು ಸರಿಯಲ್ಲ. ವಹ್ನಿಜ್ಞಾನದಲ್ಲಿ ಪ್ರಾಮಾಣ್ಯ ಎಂದರೆ ವಹ್ನಿತ್ವವದ್ವಿಶೇಷ್ಯಕತ್ವ.

ಇದು ಅನುವ್ಯವಸಾಯವೇದ್ಯವಲ್ಲ. 'ವಹ್ನಿತ್ವವತ್' ಎಂದು ಹೇಳಲಾಗುವ, ಪ್ರಾಮಾಣ್ಯ ಘಟಕವಾದ ವಹ್ನಿತ್ವವೈಶಿಷ್ಟ್ಯವನ್ನು ಅನುವ್ಯವಸಾಯ ಗ್ರಹಿಸುವುದಿಲ್ಲ, ಎನ್ನುತ್ತಾರೆ ತಾರ್ಕಿಕರು. ಆಗ ದ್ವಿತೀಯಾನುಮಾನದಲ್ಲಿ ಸಾಧಿಸಲಾಗುವ ಪ್ರಾಮಾಣ್ಯವು ಅಪ್ರಸಿದ್ಧವಾಯಿತು. ಅಪ್ರಸಿದ್ಧ ವಿಶೇಷಣತಾ ದೋಷ ಅನುಮಾನಕ್ಕೆ ಬರುತ್ತದೆ.

**ಇನ್ನೊಂದು ದೋಷವೂ ಇದೆ**—ನ್ಯಾಯಮತದಲ್ಲಿ ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಅನುಮಾನವೇದ್ಯ. ಪ್ರಥಮಾನುಮಾನದಲ್ಲಿ ಅಪ್ರಾಮಾಣ್ಯಾಭಾವವನ್ನು ಸಾಧನೆ ಮಾಡಬೇಕಾದರೂ ಅಪ್ರಾಮಾಣ್ಯದ ಜ್ಞಾನಬೇಕು. ಆ ಜ್ಞಾನ ಹೇಗೆ ಬಂತು?

**ಅದಕ್ಕೆ ಮಣಿಗ್ರಂಥ ಹೀಗೆ ಉತ್ತರಿಸುತ್ತದೆ**— ಮೊದಲು ಗುಲಗುಂಜಿಯ ರಾಶಿಯನ್ನು ನೋಡಿ ವಹ್ನಿಭ್ರಮೆ ಬರುತ್ತದೆ. ಹತ್ತಿರ ಹೋಗಿ ನೋಡಿದಾಗ ಅದು ವಹ್ನಿ ಅಲ್ಲ, ಎನ್ನುವ ಬಾಧಜ್ಞಾನ ಬರುತ್ತದೆ. ಆಗ, ಹಿಂದೆ ಬಂದ ವಹ್ನಿಜ್ಞಾನದ ಸ್ಮರಣೆ ಬರುತ್ತದೆ. ಕೂಡಲೇ 'ವಹ್ನಿ ಅಲ್ಲ' ಎಂಬ ಜ್ಞಾನದಲ್ಲಿ ಅನುಭೂತವಾದ ಅಪ್ರಾಮಾಣ್ಯದ, ವಹ್ನಿತ್ವ ವೈಶಿಷ್ಟ್ಯಾಭಾವದ ಸ್ಮರಣೆ ಬರುತ್ತದೆ. ಕೊನೆಯಲ್ಲಿ 'ನನಗೆ ಹುಟ್ಟಿದ ವಹ್ನಿಜ್ಞಾನ ಅಪ್ರಮಾಣ' ಎಂಬ ಜ್ಞಾನ ಬರುತ್ತದೆ. ಇದೇ ಪಂಚಮಾನುವ್ಯವಸಾಯ. ಹೀಗೆ ಅಪ್ರಾಮಾಣ್ಯವು ಪಂಚಮಾನುವ್ಯವಸಾಯದಿಂದ ಜ್ಞಾತವಾದುದರಿಂದ ಅದರ ಅಭಾವವನ್ನು ಅನುಮಾನದಿಂದ ಸಾಧಿಸಬಹುದು, ಎಂದು.

**ಇದಕ್ಕೆ ವ್ಯಾಸರಾಜರು ಮಾಡಿದ ಖಂಡನೆ**—ಈ ದ್ರಾವಿಡ ಪ್ರಾಣಾಯಾಮ ಏಕೆ? ಅಪ್ರಾಮಾಣ್ಯಾಭಾವವನ್ನು ಸಾಧಿಸಿ ಪ್ರಾಮಾಣ್ಯವನ್ನು ಏಕೆ ಸಾಧನೆ ಮಾಡಬೇಕು? ನೇರವಾಗಿ ವಹ್ನಿಜ್ಞಾನದಲ್ಲಿ ಪ್ರಾಮಾಣ್ಯವನ್ನೇ ಸಾಧಿಸಬಹುದು. ಪ್ರಾಮಾಣ್ಯವು ಅಪ್ರಸಿದ್ಧ, ಎನ್ನುವ ಪ್ರಶ್ನೆ ಬಂದರೆ ಅಪ್ರಾಮಾಣ್ಯದಂತೆ ಅದೂ ಪಂಚಮಾನುವ್ಯವಸಾಯ ಸಿದ್ಧ, ಎಂದರಾಯಿತು. ಮೊದಲು ವಹ್ನಿಜ್ಞಾನ ಬರುತ್ತದೆ. ಆಮೇಲೆ ಪ್ರವೃತ್ತಿ ಮಾಡಿ ಆ ಪ್ರವೃತ್ತಿಯು ಸಫಲವಾದಾಗ 'ವಹ್ನಿಯಲ್ಲಿ ವಹ್ನಿತ್ವ' ಇದೆ, ಎಂದು ತಿಳಿಯುತ್ತದೆ. ನಂತರ ವಹ್ನಿಜ್ಞಾನದ ಸ್ಮರಣೆ, ವಹ್ನಿತ್ವ ವೈಶಿಷ್ಟ್ಯದ ಸ್ಮರಣೆ. ಕೊನೆಯಲ್ಲಿ 'ನನಗೆ ಬಂದ ವಹ್ನಿಜ್ಞಾನಪ್ರಮಾಣ' ಎಂದು ಪಂಚಮಾನುವ್ಯವಸಾಯದಿಂದ ಪ್ರಾಮಾಣ್ಯಜ್ಞಾನವೇ ಬರುತ್ತದೆ. ಹೀಗೆ, ನೇರವಾಗಿ ಪ್ರಾಮಾಣ್ಯವನ್ನೇ ತಿಳಿಯಲು ಬರುವಾಗ ಅಪ್ರಾಮಾಣ್ಯಾಭಾವಜ್ಞಾನದ ಮೂಲಕ ಪ್ರಾಮಾಣ್ಯವನ್ನು ತಿಳಿಯುವುದು ಅಪ್ರಾಯೋಗಿಕ.

ವಸ್ತುತಃ ವಿಚಾರ ಮಾಡಿದಾಗ ಈ ಪಂಚಮಾನುವ್ಯವಸಾಯಪರ್ಯಂತ ನಿರೀಕ್ಷೆಯ ಅಗತ್ಯವೇ ಇಲ್ಲ. ಸಮರ್ಥಪ್ರವೃತ್ತಿಯಿಂದಾಗಿ ವಹ್ನಿಯಲ್ಲಿ ತಿಳಿದ ವಹ್ನಿತ್ವವೈಶಿಷ್ಟ್ಯವು ಪಂಚಮಾನುವ್ಯವಸಾಯದಿಂದ ವ್ಯವಸಾಯದಲ್ಲಿ ಗೃಹೀತವಾಗುವುದಾದಲ್ಲಿ ವ್ಯವಸಾಯದಲ್ಲಿ ತೋರಿದ ವೈಶಿಷ್ಟ್ಯವೇ ಪ್ರಥಮಾನುವ್ಯವಸಾಯದಲ್ಲಿ ವಹ್ನಿಗತವಾಗಿ ತೋರಲು ಏನು ತೊಡಕು? ಇದನ್ನು ಈ ಹಿಂದೆ ಸಮರ್ಥಿಸಲಾಗಿದೆ.

ನೈಯಾಯಿಕರ ಪ್ರಾಮಾಣ್ಯಾನುಮಾನಕ್ಕೆ ಅನ್ಯೋನ್ಯಾಶ್ರಯ ದೋಷವನ್ನೂ ಈ ಪ್ರಕರಣದಲ್ಲಿ ಹೇಳಲಾಗಿದೆ. ಸಮರ್ಥಪ್ರವೃತ್ತಿಗೆ ಜನಕವಾದ ಕಾರಣ ವಹ್ನಿಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಾಧಿಸಬೇಕು. (ಪ್ರಾಮಾಣ್ಯವೆಂದರೂ ಪ್ರಮಾತ್ವ ಎಂದರೂ ಎರಡೂ ಒಂದೆ.) ಇಲ್ಲಿ ಪ್ರವೃತ್ತಿಜನಕವಾದುದು ಪ್ರಮಾತ್ಮಕ ಜ್ಞಾನ. ಜನಕ ಎಂದರೆ ಪ್ರವೃತ್ತಿ ನಿಯತಪೂರ್ವವೃತ್ತಿ. ಪೂರ್ವವೃತ್ತಿತಾವಚ್ಛೇದಕ ಜ್ಞಾನತ್ವ ಅಲ್ಲ, ಅದು ವಿಫಲ ಪ್ರವೃತ್ತಿಗೆ ಕಾರಣವಾದ ಭ್ರಮೆಯಲ್ಲೂ ಇದೆ. ಆದ್ದರಿಂದ ಜನಕತಾವಚ್ಛೇದಕವಾದ ಧರ್ಮ ಪ್ರಮಾತ್ವ, ಎಂದೇ ಹೇಳಬೇಕು. ಆಗ ಪ್ರಮಾತ್ವಜ್ಞಾನವು ಸಫಲಪ್ರವೃತ್ತಿಜನಕತ್ವ ಜ್ಞಾನಕ್ಕೆ ಕಾರಣ ಎಂದಾಗುತ್ತದೆ. ಸಫಲ ಪ್ರವೃತ್ತಿಜನಕತ್ವಜ್ಞಾನದಿಂದಾಗಿಯೇ ಪ್ರಾಮಾಣ್ಯ(ಪ್ರಮಾತ್ವ) ಜ್ಞಾನ. ಅಲ್ಲಿಗೆ ಪ್ರಮಾತ್ವ ಜ್ಞಾನವಿದ್ದರೆ ಜನಕತ್ವಜ್ಞಾನ. ಜನಕತ್ವಜ್ಞಾನದಿಂದ ಪ್ರಮಾತ್ವಜ್ಞಾನ. ಹೀಗೆ ಅನ್ಯೋನ್ಯಾಶ್ರಯದೋಷ.

ಇದರ ಮೇಲೆ ಒಂದು ಆಕ್ಷೇಪವನ್ನು ಮಾಡಿ ಈ ಪ್ರಕರಣದಲ್ಲಿ ಸಮಾಧಾನವನ್ನು ಹೇಳಲಾಗಿದೆ—ನಮ್ಮ ಸಿದ್ಧಾಂತದಲ್ಲಿ ಅಪ್ರಾಮಾಣ್ಯಂ ಪರತಃ. ಪರತಃ ಎಂದರೆ ಅನುಮಾನವೇದ್ಯ ಎಂದು ಅರ್ಥ. ಆಗ, ಅಪ್ರಾಮಾಣ್ಯವನ್ನು ಪ್ರಥಮತಃ ತಿಳಿದುಕೊಳ್ಳುವುದು ಹೇಗೆ?

ಇದು ತಪ್ಪು ಕಲ್ಪನೆಯಿಂದ ಮಾಡಿದ ಆಕ್ಷೇಪ. 'ಅಪ್ರಾಮಾಣ್ಯಂ ಪರತಃ' ಎಂದರೆ ಅದು ಅನುಮಾನವೇದ್ಯ, ಎಂದು ಅರ್ಥವಲ್ಲ, ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಸಾಕ್ಷಿಯಿಂದಲೇ ವೇದ್ಯ. ಆದರೆ, ಅಪ್ರಾಮಾಣ್ಯದಲ್ಲಿ ಸಾಕ್ಷಿಗೆ ಅಯೋಗ್ಯವಾದ ತದಭಾವಾಂಶವು ಸೇರಿದೆ. ಆದ್ದರಿಂದ ಅದನ್ನು ಗ್ರಹಿಸುವ ಸ್ವಾಭಾವಿಕಶಕ್ತಿ ಸಾಕ್ಷಿಗೆ ಇಲ್ಲ, ಆದಕ್ಕಾಗಿ ಸಾಕ್ಷಿಯು ವಿಸಂವಾದದ ಸಹಾಯವನ್ನು ಪಡೆಯುತ್ತದೆ. ಹೀಗೆ ಅಪ್ರಾಮಾಣ್ಯಗ್ರಹಣ ಶಕ್ತಿ ಸಾಕ್ಷಿಯಲ್ಲಿ ಆಹಿತ. ಆದರೆ, ಹೀಗೆ ಪ್ರಾಮಾಣ್ಯವನ್ನು ಗ್ರಹಿಸಲು ಸಾಕ್ಷಿಗೆ ಬೇರೆ ಸಹಾಯದ ಅಗತ್ಯವಿಲ್ಲ, ಅದು ಸಹಜ ಶಕ್ತಿಯಿಂದಲೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಆದ್ದರಿಂದ ಅಪ್ರಾಮಾಣ್ಯವು ಅನುಮೇಯವಲ್ಲದ ಕಾರಣ ಪ್ರಥಮದಲ್ಲಿ ಅಪ್ರಾಮಾಣ್ಯಗ್ರಹ ಹೇಗೆ? ಎನ್ನುವ ಪ್ರಶ್ನೆಗೆ ಅವಕಾಶವಿಲ್ಲ.

**ರಾಯರ ಟಿಪ್ಪಣಿಯ ವಿಶೇಷ—** ತರ್ಕತಾಂಡವ ಮೂಲದಲ್ಲಿ ವಹ್ನಿಜ್ಞಾನಪ್ರಾಮಾಣ್ಯ ಸಾಧನೆಗೆ ಸಮರ್ಥಪ್ರವೃತ್ತಿಜನಕತ್ವವನ್ನು ಹೇತುವನ್ನಾಗಿ ಹೇಳಲಾಗಿದೆ. ಆದರೆ, ಮಣಿಯಲ್ಲಿ ಬೇರೆಯೇ ಎರಡು ಹೇತುಗಳನ್ನು ಹೇಳಲಾಗಿದೆ. ಆದ್ದರಿಂದ ತರ್ಕತಾಂಡವದಲ್ಲಿ ಹೇಳಿದ ಅನುಮಾನವು ಅಸಂಗತವಾಗಿರುವಂತೆ ಕಾಣುತ್ತದೆ. ಅದನ್ನು ನ್ಯಾಯದೀಪದಲ್ಲಿ ಸುಸಂಗತಗೊಳಿಸಲಾಗಿದೆ. ಮಣಿಕಾರ ಅನುಮಾನ ಮಾಡುವ ಸಂದರ್ಭದಲ್ಲಿ ಆ ಹೇತುವನ್ನು ಉಲ್ಲೇಖ ಮಾಡದಿದ್ದರೂ ಮುಂದೆ ವ್ಯತಿರೇಕವ್ಯಾಪ್ತಿ ಪ್ರದರ್ಶನ ಮಾಡುವಾಗ ತಾನು ಹೇಳಿದ ಎರಡೂ ಹೇತುಗಳನ್ನು ಬಿಟ್ಟು ಸಮರ್ಥಪ್ರವೃತ್ತಿಜನಕತ್ವಾಭಾವವನ್ನು ಉಲ್ಲೇಖ ಮಾಡಿದ್ದಾರೆ. ಆದ್ದರಿಂದ ವ್ಯಾಸರಾಜರು ಮಣಿಗ್ರಂಥದಲ್ಲಿ ಹೇಳದ ಹೇತುವನ್ನು ಪ್ರದರ್ಶನ ಮಾಡಿದ್ದಲ್ಲ, ಎಂದು ರಾಯರು ಸಮರ್ಥನೆ ಮಾಡಿದ್ದಾರೆ.

ಆದರಂತೆ 'ಅಯಂ ವಹ್ನಿತ್ವೇನ ಅನುಭವಃ ವಹ್ನಿತ್ವವದ್ವಿಷಯಕಃ' ಎಂದು ಮಣಿಗ್ರಂಥದಲ್ಲಿ ಅನುಮಾನದ ಆಕಾರವನ್ನು ತೋರಿಸಿದರೆ ತರ್ಕತಾಂಡವದಲ್ಲಿ 'ವಹ್ನಿತ್ವವದ್ವಿಶೇಷ್ಯಕಃ' ಎಂದು ಅನುವಾದ ಮಾಡಲಾಗಿದೆ. ಇಲ್ಲೂ ರಾಯರು ಕೊಟ್ಟ ವಿವರಣೆ— 'ವಿಷಯಪದಂ ವಿಶೇಷ್ಯಪರಂ, ಇತಿ ತದೀಯವ್ಯಾಖ್ಯಾನೋಕ್ತೇಃ ವಿಶೇಷ್ಯಕ ಇತ್ಯುಕ್ತಮ್॥'

ತರ್ಕತಾಂಡವದಲ್ಲಿ 'ಉಕ್ತಂ ಹಿ ಸುಧಾಯಾಂ' ಎಂದು ಹೇಳಿ 'ಸಾಕ್ಷೀ ಅಪವಾದಕಸದ್ಭಾವೇ ಅಪ್ರಾಮಾಣ್ಯಮಪಿ ಗೃಹ್ಣಾತಿ' ಎಂದು ಸುಧಾವಾಕ್ಯವನ್ನು ಉದಾಹರಿಸಿದ್ದಾರೆ. ಆದರೆ, ಹೀಗೆ ಯಥಾವತ್ತಾಗಿ ಸುಧಾವಾಕ್ಯ ಇಲ್ಲ. ಇದಕ್ಕೆ ರಾಯರ ಅವತಾರಿಕೆ— 'ಸುಧಾವಾಕ್ಯಸ್ಯ ಅರ್ಥತೋ ಅನುವಾದಃ' ಎಂದು.

ಇವುಗಳಿಂದ ರಾಯರ ಗ್ರಂಥೋಪಸ್ಥಿತಿಯ ನಿಷ್ಕೃಷ್ಟತೆ ಅರಿವಾಗುತ್ತದೆ.

ಪ್ರಕರಣ ॥ 8 ॥

# ಪ್ರಕರಣ–9

## ಜ್ಞಪ್ತೌ ಪರತಸ್ತ್ವಾನುಮಾನಭಂಗಃ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಸ್ವತಸ್ತ್ವಾನುಮಾನಾನಾಂ ಬಾಧಂ, ವಿಪಕ್ಷೇ ಅನವಸ್ಥಾದ್ವಯಸ್ಯ ಅನುಮತ್ಯ–ಸಂಭವಸ್ಯ ಚ ಉಕ್ತ್ವಾ ಅಪ್ರಯೋಜಕತ್ವಂ ಚ ಉದ್ಧೃತ್ಯ, ಪರೋಕ್ತಾನುಮಾನ ವಿರೋಧನಿರಾಸಾಯ ತಾನಿ ದೂಷಯಿತುಂ ಅನುವದತಿ–ಯಚ್ಚೋತಿ॥**

ಇದುವರೆಗೆ ಸ್ವತಸ್ತ್ವಸಾಧಕವಾದ ಅನುಮಾನಗಳಿಗೆ ಬಾಧದೋಷವನ್ನು ಮತ್ತು ಅಪ್ರಯೋಜಕತ್ವವನ್ನು ನಿರಾಸಮಾಡಲಾಗಿದೆ. ಅಪ್ರಯೋಜಕತ್ವವನ್ನು, ಮೊದಲನೆಯ ಪ್ರಕರಣದಲ್ಲಿ ಅನವಸ್ಥಾದ್ವಯಗಳನ್ನು ಹೇಳುವ ಮೂಲಕ ಮತ್ತು ಎರಡನೆಯ ಪ್ರಕರಣದಲ್ಲಿ ಪ್ರಾಮಾಣ್ಯಾನುಮಿತಿ–ಅಸಂಭವ ಎಂದು ಹೇಳುವ ಮೂಲಕ, ನಿರಾಸ ಮಾಡಲಾಗಿದೆ. ಈ ಪ್ರಕರಣದಲ್ಲಿ ನೈಯಾಯಿಕರು ಹೇಳುವ ಪ್ರಾಮಾಣ್ಯಪರತಸ್ತ್ವಸಾಧಕವಾದ ಅನುಮಾನಗಳಿಂದ ಸ್ವತಸ್ತ್ವಸಾಧಕಾನುಮಾನಗಳಿಗೆ ಬರಬಹುದಾದ ವಿರೋಧಪರಿಹಾರಕ್ಕಾಗಿ ಅವುಗಳಲ್ಲಿ ದೋಷವನ್ನು ಹೇಳುವ ಉದ್ದೇಶದಿಂದ ಮೊದಲು ಆ ಅನುಮಾನಗಳನ್ನು ಅನುವಾದ ಮಾಡುತ್ತಿದ್ದಾರೆ.

## ಸ್ವತಸ್ತ್ವನಿರಾಸಕ ಪ್ರಥಮಾನುಮಾನ

**यच्चोक्तं, स्वाश्रयविषयकनिश्चयावधिकतृतीयक्षण-वृत्तिसमानाधिकरणसंशयविषयीभूतं ज्ञानप्रामाण्यं, ग्राह्यज्ञानप्रकारप्रकारकतया तद्विशेष्यविशेष्यकतया च स्वाश्रयग्राहकयावज्ज्ञानाग्राह्यम् । तज्ज्ञानविषयक-समानाधिकरण-ज्ञानाजन्य-समानाधिकरण-ज्ञानाप्रकारो वा । स्वाश्रयविषयक-निश्चयावधिक-तृतीयक्षणवृत्तिसमानाधिकरणसंशय-कोटित्वात् । स्वाश्रयविषयक-निश्चयसमानकालीनसामग्रीजन्यसंशयविषयत्वात्। स्वाश्रयविषयक-किञ्चिन्निश्चयधर्मिक-प्रामाण्यसंशयजन्य-संशयाविषयत्वाच्च । अप्रामाण्यवत् ॥**

ಇಲ್ಲಿ ಒಂದು ಪಕ್ಷ, ಎರಡು ಸಾಧ್ಯಗಳು, ಮೂರು ಹೇತುಗಳನ್ನು ಹೇಳಲಾಗಿದೆ. ಒಟ್ಟು ಆರು ಅನುಮಾನಗಳಾಗುತ್ತವೆ.

**ಪಕ್ಷ**–ಸ್ವಾಶ್ರಯವಿಷಯಕ–ನಿಶ್ಚಯಾವಧಿಕ–ತೃತೀಯಕ್ಷಣವೃತ್ತಿ–ಸಮಾನಾಧಿಕರಣ–ಸಂಶಯ ವಿಷಯೀಭೂತಂ ಜ್ಞಾನಪ್ರಾಮಾಣ್ಯಮ್॥

ಇಲ್ಲಿ ಸ್ವ=ಪ್ರಾಮಾಣ್ಯ. ಅದಕ್ಕೆ ಆಶ್ರವಾದುದು=ವ್ಯವಸಾಯ ಅಂದರೆ ಜಲಾದಿಜ್ಞಾನ. ತದ್ವಿಷಯಕ ನಿಶ್ಚಯ=ಅನುವ್ಯವಸಾಯ ಅಂದರೆ 'ಜಲಜ್ಞಾನವಾನ್ ಅಹಂ' ಎಂಬ ಮಾನಸ(ಸಾಕ್ಷಿ) ಜ್ಞಾನ. ಅಂತಹ ಅನುವ್ಯವಸಾಯದ ತೃತೀಯಕ್ಷಣದಲ್ಲಿರುವ ಸಮಾನಾಧಿಕರಣ ಸಂಶಯ= ಅನುವ್ಯವಸಾಯ ಬಂದಿರುವ ವ್ಯಕ್ತಿಗೇ ಉಂಟಾಗುವ 'ಜಲಜ್ಞಾನಂ ಪ್ರಮಾಣಂ ನ ವಾ'' ಎಂಬ ಸಂಶಯ. ಅದಕ್ಕೆ ವಿಷಯೀಭೂತವಾದ ಪ್ರಾಮಾಣ್ಯವು ಪಕ್ಷ. ಅರ್ಥಾತ್, ಅನುವ್ಯವಸಾಯದ ತೃತೀಯಕ್ಷಣದಲ್ಲಿ ಉಂಟಾದ ಸಂದೇಹಾಸ್ಪದವಾದ ಪ್ರಾಮಾಣ್ಯ.

(ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸಿದ್ದಲ್ಲಿ ಅದರ ತೃತೀಯಕ್ಷಣದಲ್ಲಿ ಆ ಪ್ರಾಮಾಣ್ಯದ ಸಂದೇಹವು ಬರಲು ಸಾಧ್ಯವಿಲ್ಲ. ಸಂದೇಹ ಬಂದಿದೆ ಎಂದರೆ ಪ್ರಾಮಾಣ್ಯವು ಅನುವ್ಯವಸಾಯಕ್ಕೆ ವಿಷಯವಲ್ಲ, ಎಂದರ್ಥ. ಪ್ರಥಮ ಕ್ಷಣದಲ್ಲಿ ಅನುವ್ಯವಸಾಯ. ಅದು ಜ್ಞಾನತ್ವರೂಪ ಸಾಧಾರಣ–ಧರ್ಮವದ್ಧರ್ಮಿಜ್ಞಾನ. ದ್ವಿತೀಯಕ್ಷಣದಲ್ಲಿ ಕೋಟಿಸ್ಮರಣೆ. ತೃತೀಯ ಕ್ಷಣದಲ್ಲಿ ಸಂದೇಹ.)

**ಸಾಧ್ಯ 1.** ಜ್ಞಾನಪ್ರಕಾರ–ಪ್ರಕಾರಕತಯಾ ತದ್ವಿಶೇಷ್ಯಕತಯಾ ಚ ಸ್ವಾಶ್ರಯಗ್ರಾಹಕ–ಯಾವದ್‌ಜ್ಞಾನ–ಅಗ್ರಾಹ್ಯಮ್ ।

ಜಲಜ್ಞಾನ ಪ್ರಕಾರಕತಯಾ ಜಲವಿಶೇಷ್ಯಕತಯಾ ಚ ಜ್ಞಾನವನ್ನು ಗ್ರಹಿಸುವ ಯಾವತ್ ಜ್ಞಾನಗಳು ಎಂದರೆ 'ಜಲಜ್ಞಾನವಾನಹಮ್' ಎಂಬ ಅನುವ್ಯವಸಾಯ. ಆದರಿಂದ ಪೂರ್ವೋಕ್ತ ಪ್ರಾಮಾಣ್ಯವು ಗ್ರಾಹ್ಯವಲ್ಲ.

**ಹೇತು 1.** ಸ್ವಾಶ್ರಯವಿಷಯಕ–ನಿಶ್ಚಯಾವಧಿಕ–ತೃತೀಯಕ್ಷಣವೃತ್ತಿ–ಸಮಾನಾಧಿಕರಣ–ಸಂಶಯಕೋಟಿತ್ವಾತ್ ।

ಪ್ರಾಮಾಣ್ಯಾಶ್ರಯವಾದ ವ್ಯವಸಾಯವಿಷಯಕನಿಶ್ಚಯರೂಪವಾಗಿರುವ ಅನುವ್ಯವಸಾಯ ಕ್ಕಿಂತ ಮೂರನೆಯ ಕ್ಷಣದಲ್ಲಿ ಹುಟ್ಟಿರುವ ಸಂದೇಹದಲ್ಲಿ ಆ ಪ್ರಾಮಾಣ್ಯವೂ ಒಂದು ಕೋಟಿಯಾಗಿರುವುದರಿಂದ.

**ಹೇತು 2.** ಸ್ವಾಶ್ರಯವಿಷಯಕ – ನಿಶ್ಚಯಸಮಾನಕಾಲೀನ – ಸಾಮಗ್ರೀಜನ್ಯ – ಸಂಶಯ ವಿಷಯತ್ವಾತ್ ।

ಪ್ರಾಮಾಣ್ಯಾಶ್ರಯವಾದ ವ್ಯವಸಾಯ ವಿಷಯಕನಿಶ್ಚಯವಾಗಿರುವ ಅನುವ್ಯವಸಾಯದ ಕಾಲದಲ್ಲೇ ಇರುವ (ಪ್ರಾಮಾಣ್ಯ) ಸಂದೇಹಸಾಮಗ್ರೀಗಳಿಂದ ಹುಟ್ಟಿದ ಸಂದೇಹಕ್ಕೆ ಆ ಪ್ರಾಮಾಣ್ಯವು ವಿಷಯವಾಗಿರುವುದರಿಂದ.

(ಅನುವ್ಯವಸಾಯದ ಮೂರನೇ ಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರಬೇಕಾದರೆ ಎರಡನೆಯ ಕ್ಷಣದಲ್ಲೇ ಸಂದೇಹಸಾಮಗ್ರೀ ಇರಬೇಕು. ಅನುವ್ಯವಸಾಯವು ಪ್ರಾಮಾಣ್ಯ ನಿಶ್ಚಯಾತ್ಮಕವಾಗಿದ್ದರೆ ಅಂತಹ ನಿಶ್ಚಯಾಭಾವರೂಪವಾದ ಸಂದೇಹ ಕಾರಣವು ಇಲ್ಲದಿರುವುದರಿಂದ ದ್ವಿತೀಯಕ್ಷಣದಲ್ಲಿ ಸಂದೇಹಸಾಮಗ್ರೀ ಇರಲು ಸಾಧ್ಯವಿಲ್ಲ. ಆದ್ದರಿಂದ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯಾತ್ಮಕ ಅಲ್ಲ.)

**ಹೇತು 3.** ಸ್ವಾಶ್ರಯವಿಷಯಕ-ಕಿಂಚಿನ್ನಿಶ್ಚಯಧರ್ಮಿಕ-ಪ್ರಾಮಾಣ್ಯಸಂಶಯಜನ್ಯ-ಸಂಶಯ ಅವಿಷಯತ್ವಾತ್ ।

ಪ್ರಾಮಾಣ್ಯಾಶ್ರಯವಾದ ವ್ಯವಸಾಯ, ತದ್ವಿಷಯಕ ಕಿಂಚಿನ್ನಿಶ್ಚಯ ಅನುವ್ಯವಸಾಯ, ತದ್ಧರ್ಮಿಕ ಪ್ರಾಮಾಣ್ಯಸಂಶಯದಿಂದ ಜನ್ಯವಾದ ಸಂಶಯಕ್ಕೆ ವ್ಯವಸಾಯಗತವಾದ ಪ್ರಾಮಾಣ್ಯವು ವಿಷಯವಾಗಿಲ್ಲ. ಆದಕಾರಣ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ.

(ಅನುವ್ಯವಸಾಯದಲ್ಲಿ ವ್ಯವಸಾಯಗತವಾದ ಪ್ರಾಮಾಣ್ಯವು ಭಾನವಾದರೆ 'ಅನುವ್ಯವಸಾಯಃ ಪ್ರಮಾಣಂ ನವಾ' ಎಂಬ ಪ್ರಾಮಾಣ್ಯಸಂದೇಹ ಬಂದಾಗ ಅದರಿಂದ 'ವ್ಯವಸಾಯಃ ಪ್ರಮಾಣಂ ನವಾ' ಎಂಬ ಆಹಿತ ಸಂದೇಹ ಬರುತ್ತಿತ್ತು. ಆದರೆ, ಆ ರೀತಿಯ ಸಂದೇಹ ಬರುವುದಿಲ್ಲ. ಏಕೆಂದರೆ, ಅನುವ್ಯವಸಾಯವು ನಿಯತ ಪ್ರಮಾಣ. ಆದ್ದರಿಂದ ತದ್ಧರ್ಮಿಕ-ಸಂದೇಹಜನ್ಯಸಂದೇಹ-ಅವಿಷಯತ್ವವು ಪ್ರಾಮಾಣ್ಯದಲ್ಲಿ ಇರಬೇಕಾದರೆ ಅನುವ್ಯವಸಾಯವು ವ್ಯವಸಾಯಗತವಾದ ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ. ಎಂದು ಹೇಳಲೇಬೇಕು.)

**ಸಾಧ್ಯ 2.** ತಜ್ಞಾನವಿಷಯಕ-ಸಮಾನಾಧಿಕರಣ-ಜ್ಞಾನಾಜನ್ಯ-ಸಮಾನಾಧಿಕರಣ-ಜ್ಞಾನಾ ಪ್ರಕಾರಃ ।

ತಜ್ಞಾನ=ವ್ಯವಸಾಯವಿಷಯಕವಾದ, ಸಮಾನಾಧಿಕರಣ=ವ್ಯವಸಾಯ ಇರುವವನಿಗೇ ಬರುವ ಜ್ಞಾನ=ಅನುವ್ಯವಸಾಯ. ಅದರಿಂದ ಅಜನ್ಯವಾದ ಸಮಾನಾಧಿಕರಣಜ್ಞಾನ ಅಂದರೆ ಅದೇ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ಪ್ರಕಾರವಲ್ಲ. ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗುವುದಿಲ್ಲ. ಎಂದು ಅರ್ಥ.

ಈ ಸಾಧ್ಯಕ್ಕೂ ಹಿಂದಿನ ಮೂರೇ ಹೇತುಗಳು.

ಮೊದಲನೆಯ ಅನುಮಾನದ ಅಭಿಪ್ರಾಯ-ಅನುವ್ಯವಸಾಯದ ತೃತೀಯ ಕ್ಷಣದಲ್ಲಿ ಪ್ರಾಮಾಣ್ಯ ಸಂದೇಹ ಬರುವುದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಭಾನವಾಗುವುದಿಲ್ಲ. ಒಂದುವೇಳೆ, ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಭಾನವಾಗಿದ್ದರೆ ಅದು ನಿಶ್ಚಿತವಾದುದರಿಂದ ಅದರ ಬಗ್ಗೆ ಸಂದೇಹಬರಲು ಸಾಧ್ಯವಿಲ್ಲ.

ಎರಡನೆಯ ಅನುಮಾನದ ಅಭಿಪ್ರಾಯ–ಅನುವ್ಯವಸಾಯದ ತೃತೀಯಕ್ಷಣದಲ್ಲಿ ಸಂದೇಹ ಬರಬೇಕಾದರೆ ದ್ವಿತೀಯಕ್ಷಣದಲ್ಲಿ ಆ ಸಂದೇಹಕ್ಕೆ ಬೇಕಾದ ಸಾಮಗ್ರೀ ಇರಬೇಕು. ಪ್ರಾಮಾಣ್ಯ ಸಂದೇಹಕ್ಕೆ ಪ್ರಾಮಾಣ್ಯನಿಶ್ಚಯಾಭಾವವೂ ಒಂದು ಕಾರಣ. ಒಂದುವೇಳೆ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಿದ್ದಲ್ಲಿ, ಜ್ಞಾನವು ದ್ವಿಕ್ಷಣಾವಸ್ಥಾಯಿಯಾದುದರಿಂದ ಆ ನಿಶ್ಚಯವು ಅನುವ್ಯವಸಾಯ ದ್ವಿತೀಯ ಕ್ಷಣದಲ್ಲೂ ಇರುತ್ತದೆ. ಆಗ ಸಂದೇಹಕ್ಕೆ ಬೇಕಾದ ಪ್ರಾಮಾಣ್ಯ ನಿಶ್ಚಯಾಭಾವರೂಪವಾದ ಕಾರಣ ಇಲ್ಲದಿರುವುದರಿಂದ ಸಂದೇಹಸಾಮಗ್ರೀ ಇರಲು ಸಾಧ್ಯವಿಲ್ಲ. ಆದ್ದರಿಂದ ಅನುವ್ಯವಸಾಯದಿಂದ ಪ್ರಾಮಾಣ್ಯನಿಶ್ಚಯ ಬಂದಿಲ್ಲ.

ಮೂರನೆಯ ಅನುಮಾನದ ಅಭಿಪ್ರಾಯ– ವ್ಯವಸಾಯ ವಿಷಯಕವಾದ ಕಿಂಚಿದ್ಧರ್ಮಿಕವಾದ ಪ್ರಾಮಾಣ್ಯಸಂದೇಹದಿಂದ ಜನ್ಯವಾದ ಸಂದೇಹಕ್ಕೆ ವ್ಯವಸಾಯ ಪ್ರಾಮಾಣ್ಯವು ಅವಿಷಯವಾಗಿದೆ, ಎಂದು ಈ ಅನುಮಾನದ ಹೇತು. ಆ ಕಿಂಚಿದ್ಧರ್ಮಿ ಎಂದರೆ ವ್ಯವಸಾಯಗತ ಪ್ರಾಮಾಣ್ಯವನ್ನು ಗ್ರಹಿಸುವ ಅನುಮಿತಿಯೇ ಆಗಿರಬೇಕು. ತದ್ಧರ್ಮಿಕ ಪ್ರಾಮಾಣ್ಯಸಂದೇಹದಿಂದ 'ವ್ಯವಸಾಯಃ ಪ್ರಮಾಣಂ ನ ವಾ' ಎಂಬ ಆಹಿತ ಸಂದೇಹ ಬರುತ್ತದೆ. ಆದ್ದರಿಂದ, ಪ್ರಾಮಾಣ್ಯದಲ್ಲಿ ಆಹಿತ ಸಂದೇಹಾ ವಿಷಯತ್ವವು ಬರಬೇಕಾದರೆ, ಕಿಂಚಿದ್ಧರ್ಮಿ ಅನುವ್ಯವಸಾಯವೇ ಆಗಿರಬೇಕು. ಅದು ನಿಯತಪ್ರಮಾಣ ವಾದುದರಿಂದ ತದ್ಧರ್ಮಿಕಪ್ರಾಮಾಣ್ಯ ಸಂದೇಹವೇ ಇಲ್ಲ. ಆದರಿಂದ ತದ್ಧರ್ಮಿಕ ಸಂದೇಹಜನ್ಯವಾದ ಸಂದೇಹ ಎಂದರೆ ಪ್ರಾಮಾಣ್ಯ ಸಂದೇಹವಲ್ಲ, ಸಂದೇಹಾಂತರ. ಅದಕ್ಕೆ ಅವಿಷಯವಾಗುತ್ತದೆ, ಪ್ರಾಮಾಣ್ಯ . ಇದರಿಂದ ಅಂತಿಮವಾಗಿ ಅನುವ್ಯವಸಾಯವು ಪ್ರಾಮಾಣ್ಯ ವಿಷಯಕವಲ್ಲ, ಎಂದು ಸಿದ್ಧವಾಗುತ್ತದೆ.

ಇದು ಮೊದಲನೆಯ ಸಾಧ್ಯವನ್ನು ಇಟ್ಟುಕೊಂಡಾಗ ಮೂರು ಹೇತುಗಳಿಂದ ಸಿಗುವ ಪ್ರತ್ಯೇಕ ಅಭಿಪ್ರಾಯ.

ಎರಡನೆಯ ಸಾಧ್ಯಾನುಸಾರವಾಗಿ–ಇದೇ ಮೂರು ಕಾರಣಗಳಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಪ್ರಕಾರವಲ್ಲ ಎಂದು ಸಾಧಿಸಲಾಗಿದೆ. ಮೊದಲ ಸಾಧ್ಯದಲ್ಲಿ ಅನುವ್ಯವಸಾಯವನ್ನು ವ್ಯವಸಾಯ ಗ್ರಾಹಕತಯಾ ವಿವಕ್ಷೆಮಾಡಲಾಗಿದೆ. ಎರಡನೆಯ ಸಾಧ್ಯದಲ್ಲಿ ಜ್ಞಾನವಿಷಯಕ ಜ್ಞಾನಾಜನ್ಯತ್ವೇನ ವಿವಕ್ಷೆ ಮಾಡಲಾಗಿದೆ. ಇದರಿಂದಾಗಿ, ಪ್ರಾಮಾಣ್ಯವಿಷಯಕವಾದ ಅನುಮಿತಿ ಯನ್ನು ಹೊರಗಿಟ್ಟಂತಾಗಿದೆ. ಅದು ಜ್ಞಾನವಿಷಯಕ ಜ್ಞಾನದಿಂದ (ಪಕ್ಷಜ್ಞಾನದಿಂದ) ಜನ್ಯವೇ ಆಗಿದೆ. ಮೊದಲ ಸಾಧ್ಯದಲ್ಲಿ ವ್ಯವಸಾಯವಿಷಯಕವಾದ ಯಾವತ್ ಜ್ಞಾನಗಳಿಂದ ಅಗ್ರಾಹ್ಯ, ಎಂದುದರಿಂದ ಅನುವ್ಯವಸಾಯದಿಂದ ಅಗ್ರಾಹ್ಯ, ಅನುಮಿತಿಯಿಂದ ಗ್ರಾಹ್ಯ ಎಂಬ ಪರತಸ್ತ್ವಸಿದ್ಧಾಂತವನ್ನು ರಕ್ಷಿಸಲಾಗಿದೆ.

ಮೊದಲು (ಪ್ರಕರಣ-2) ಪ್ರಾಮಾಣ್ಯಸ್ವತಸ್ತ್ವವನ್ನು ಎರಡು ರೀತಿಯಿಂದ ಪರಿಷ್ಕಾರ ಮಾಡಿರುವುದರಿಂದ ಅದಕ್ಕೆ ಅನುಗುಣವಾಗಿ ಸಾಧ್ಯವನ್ನೂ ಎರಡು ವಿಧವಾಗಿ ಮಾಡಲಾಗಿದೆ.

## ನ್ಯಾಯದೀಪ

**ಪರೋಕ್ತಸ್ವತಸ್ತ್ವನಿರುಕ್ತಿಭಂಗೇನ, ಸಂಶಯಸ್ಯ ಅನ್ಯಥಾ ಉಪಪಾದನೇನ ಚ ಪರೋಕ್ತಹೇತೂನಾಮ್ ಅಪ್ರಯೋಜಕತ್ವಾದ್ಯುಕ್ತಾವಪಿ ಪ್ರಬಲದೋಷೋಕ್ತ್ಯರ್ಥಂ ಪುನರಾರಂಭಃ ।**

ವಸ್ತುತಃ ಈ ಅನುಮಾನಗಳನ್ನು ಈಗಾಗಲೇ ನಿರಾಸಮಾಡಲಾಗಿದೆ. ಪರತಸ್ತ್ವವಾದಿಗಳು ಹೇಳಿದ ಎರಡು ವಿಧದ ಸ್ವತಸ್ತ್ವಪರಿಷ್ಕಾರಕ್ಕೆ ಅನುಗುಣವಾಗಿ ಈ ಎರಡು ಅನುಮಾನಗಳ ಸಾಧ್ಯಗಳಿವೆ. ಆ ಎರಡೂ ಸ್ವತಸ್ತ್ವಗಳಿಗೆ ಎರಡನೆಯ ಪ್ರಕರಣದಲ್ಲಿಯೇ ದೋಷವನ್ನು ಹೇಳಲಾಗಿದೆ. ಆ ದೋಷಗಳು ಈ ಅನುಮಾನಕ್ಕೂ ಇವೆ. ಹೇತುಗಳೂ ಅಪ್ರಯೋಜಕಗಳು. ಎರಡೂ ಹೇತುಗಳ ಒಟ್ಟು ಅಭಿಪ್ರಾಯ ಪ್ರಾಮಾಣ್ಯವು ಅನುವ್ಯವಸಾಯದಿಂದ ನಿಶ್ಚಿತವಾಗಿದ್ದಲ್ಲಿ ಅನುವ್ಯವಸಾಯದ ತೃತೀಯಕ್ಷಣದಲ್ಲಿ ಸಂದೇಹ ಬರಲು ಸಾಧ್ಯವಿಲ್ಲ, ಎಂದು. ಇದಕ್ಕೂ ಸಮಾಧಾನವನ್ನು ಕೊಡಲಾಗಿದೆ. ಅನುವ್ಯವಸಾಯದಿಂದ ಪ್ರಾಮಾಣ್ಯಗ್ರಹಣ ಔತ್ಸರ್ಗಿಕ. ಪ್ರತಿಬಂಧಕಗಳಿದ್ದಾಗ ಪ್ರಾಮಾಣ್ಯಗ್ರಹ ಆಗುವುದಿಲ್ಲ. ಆಗ ಸಂದೇಹ ಬರಬಹುದು. ಆದ್ದರಿಂದ ಹೇತುಗಳೆರಡೂ ಅಪ್ರಯೋಜಕಗಳು. ಹೀಗೆ ಈ ಅನುಮಾನಗಳ ದುಷ್ಟತ್ವ ಈಗಾಗಲೇ ತಿಳಿದಿದೆ. ಆದರೂ, ಪ್ರಬಲದೋಷಾಂತರಗಳನ್ನು ಹೇಳುವ ಸಲುವಾಗಿ ಮತ್ತೆ ಅನುವಾದ ಮಾಡಲಾಗಿದೆ.

## ನ್ಯಾಯದೀಪ

**''ವಿವಾದಪದಂ, ನ ಯಾವತ್ ಸ್ವಗ್ರಾಹಕ ಗ್ರಾಹ್ಯಮ್, ಸ್ವಾಶ್ರಯನಿಶ್ಚಯೇ ಸತ್ಯಪಿ ತದುತ್ತರ–ತೃತೀಯಕ್ಷಣೇ, ಅಪ್ರಾಮಾಣ್ಯಸಂಶಯಂ ವಿನಾ, ಸಂದಿಹ್ಯಮಾನತ್ವಾತ್ ಅಪ್ರಾಮಾಣ್ಯವತ್'' (ಮಣಿ.ಪು.211)**

**ಇತಿ ಮಣ್ಯುಕ್ತಾ ಅಪಿ, 'ವಿಪ್ರತಿಪತ್ತೌ ಯಥಾ ಸಾಧ್ಯಮುಕ್ತಂ ತದಭಾವ ಏವ ಸಾಧ್ಯಂ ಜ್ಞೇಯಮ್' ಇತಿ ಪಕ್ಷಧರಾದಿ–ತದೀಯ–ಟೀಕೋಕ್ತರೀತ್ಯಾ ಪರಿಷ್ಕಾರ ಪೂರ್ವಕಂ ತದೀಯ ಪ್ರಯೋಗಾನುವಾದಂ ಕರೋತಿ–ಸ್ವಾಶ್ರಯೇತಿ ॥ ಕಿಮವಚ್ಛೇದೇನ ವಿವಾದವಿಷಯಃ ಇತ್ಯಜ್ಞಾನಾತ್ ತದಭಿಮತಂ ವಿವಾದನಿಯಾಮಕಂ ಪಕ್ಷತಾವಚ್ಛೇದಕಂ ಟೀಕಾದ್ಯನುಕ್ತಮಪಿ ಸ್ವಯಂ ವ್ಯಕ್ತೀಕೃತವಾನ್, ಇತಿ ಜ್ಞೇಯಮ್ ।**

ತರ್ಕತಾಂಡವದಲ್ಲಿ ಹೇಳಿರುವ ಪರತಸ್ತ್ವಸಾಧಕಗಳಾದ ಅನುಮಾನಗಳು ಮಣಿಗ್ರಂಥದಲ್ಲಿ ಹೇಳಲ್ಪಟ್ಟಿಲ್ಲ. ಅಲ್ಲಿರುವ ಅನುಮಾನ ಹೀಗಿದೆ—

(ಅಭಿಪ್ರಾಯಾನುವಾದ)–ಪ್ರಾಮಾಣ್ಯವು, ಸ್ವಾಶ್ರಯವಾದ ವ್ಯವಸಾಯಕ್ಕೆ ಗ್ರಾಹಕವಾದ ಎಲ್ಲ ಜ್ಞಾನಗಳಿಂದಲೂ ಗ್ರಾಹ್ಯವಲ್ಲ. ಅಂತಹ ಅನುಮಿತಿಯಿಂದ ಮಾತ್ರ ಗ್ರಾಹ್ಯ. ಅನುವ್ಯವಸಾಯದಿಂದ ಗ್ರಾಹ್ಯವಲ್ಲ. ಏಕೆಂದರೆ, ಅನುವ್ಯವಸಾಯದ ತೃತೀಯಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರುತ್ತದೆ. ಆ ಸಂದೇಹ ಅನುವ್ಯವಸಾಯ ಧರ್ಮಿಕ ಪ್ರಾಮಾಣ್ಯಸಂದೇಹದಿಂದ ಆಹಿತವಾದ ಸಂದೇಹವಲ್ಲ, ಸ್ವಾರಸಿಕ ಸಂದೇಹ. ಅಂತಹ ಸಂದೇಹ ಬರಬೇಕಾದರೆ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಿರಲು ಸಾಧ್ಯವಿಲ್ಲ. ಇದಕ್ಕೆ ದೃಷ್ಟಾಂತ ಅಪ್ರಾಮಾಣ್ಯ. 'ಅಪ್ರಾಮಾಣ್ಯಂ ಪರತಃ' ಎಂದು ಉಭಯಸಮ್ಮತವಾದುದರಿಂದ ಅದು ದೃಷ್ಟಾಂತವಾಗುತ್ತದೆ. ಇದು ಮಣ್ಯುಕ್ತವಾದ ಅನುಮಾನ. ತರ್ಕತಾಂಡವದಲ್ಲಿ ಹೇಳಿರುವ ಅನುಮಾನ ಮತ್ತು ಮಣ್ಯುಕ್ತವಾದ ಅನುಮಾನಗಳ ತತ್ತ್ವವು ಒಂದೇ ಆದರೂ ಸ್ವರೂಪದಲ್ಲಿ ವ್ಯತ್ಯಾಸವಿದೆ. ಈ ವ್ಯತ್ಯಾಸವನ್ನು ಶ್ರೀವ್ಯಾಸರಾಜರು ಮಣಿಟೀಕೆಯಲ್ಲಿ ಪಕ್ಷಧರ ಮಿಶ್ರರು ಹೇಳಿದ ಅಭಿಪ್ರಾಯಕ್ಕೆ ಅನುಗುಣವಾಗಿ ಮಾಡಿದ್ದಾರೆ. ಪಕ್ಷಧರ ಮಿಶ್ರರು ಹೀಗೆ ಅಭಿಪ್ರಾಯಪಟ್ಟಿದ್ದಾರೆ– ವಿಪ್ರತಿಪತ್ತಿಯಲ್ಲಿ ಸಾಧ್ಯವನ್ನು ಹೇಗೆ ನಿರ್ದೇಶ ಮಾಡಲಾಗಿದೆಯೋ ಅದೇ ಸಾಧ್ಯದ ಅಭಾವವನ್ನು ಅನುಮಾನದಲ್ಲಿ ಸಾಧನೆ ಮಾಡಬೇಕು, ಎಂದು. ಅದಕ್ಕಾಗಿ, ಪ್ರಥಮ–ದ್ವಿತೀಯ ವಿಪ್ರತಿಪತ್ತಿಗಳಲ್ಲಿ ನಿರ್ದೇಶಮಾಡಿರುವ ಸ್ವತಸ್ತ್ವದ ಅಭಾವವನ್ನೆ ಶ್ರೀವ್ಯಾಸರಾಜರು ಸಾಧ್ಯವನ್ನಾಗಿ ತೋರಿಸಿದ್ದಾರೆ. ಅದು ಪಕ್ಷಧರಮಿಶ್ರರ ಅಭಿಪ್ರಾಯಕ್ಕೆ ಅನುಗುಣವಾಗಿದೆ.

ಆದರೆ, ಪಕ್ಷಧರ ಮಿಶ್ರರು ಪಕ್ಷವನ್ನು ವಿಪ್ರತಿಪತ್ತಿಗೆ ಅನುಗುಣವಾಗಿ ನಿರ್ದೇಶ ಮಾಡಿಲ್ಲ. ಆದರಿಂದಾಗಿ ಯಾವ ಧರ್ಮವನ್ನು ಧರ್ಮಿತಾವಚ್ಛೇಕವನ್ನಾಗಿ ಮಾಡಿ ವಿವಾದ ಹೊರಟಿದೆ, ಎಂದು ತಿಳಿಯಲಾಗುವುದಿಲ್ಲ. ಅದಕ್ಕಾಗಿ, ಶ್ರೀವ್ಯಾಸರಾಜರು, ವಿವಾದನಿಯಾಮಕವಾದ ಪಕ್ಷತಾವಚ್ಛೇದಕ-ವನ್ನು ಟೀಕೆಯಲ್ಲಿ ಹೇಳಿರದಿದ್ದರೂ, ತಾವು ನಿರ್ದೇಶಮಾಡಿದ್ದಾರೆ.

## ನ್ಯಾಯದೀಪ

**ಸ್ವಸ್ಯ=ಪ್ರಾಮಾಣ್ಯಸ್ಯ ಆಶ್ರಯಃ ವ್ಯವಸಾಯಃ, ತದ್ವಿಷಯಕನಿಶ್ಚಯಃ= ಅನುವ್ಯವಸಾಯಃ, ತದುತ್ಪತ್ತಿಕ್ಷಣಾವಧಿಕಃ ಯಃ ತೃತೀಯಕ್ಷಣಃ, ತದ್ವರ್ತೀ, ಸ್ವಾಶ್ರಯ–ನಿಶ್ಚಯಸಮಾನಾಧಿಕರಣಃ ಯಃ ಸಂಶಯಃ ತದ್ವಿಷಯೀಭೂತಂ ಜ್ಞಾನಪ್ರಾಮಾಣ್ಯಮ್ ಇತ್ಯರ್ಥಃ।**

**ಸಂಶಯಾವಿಷಯೇ ಪ್ರಾಮಾಣ್ಯೇ, ತಥಾ ನಿಶ್ಚಿತೇ, ವ್ಯಧಿಕರಣಸಂಶಯವಿಷಯೇ, ತಥಾ ಚತುರ್ಥಕ್ಷಣವರ್ತಿಸಂಶಯವಿಷಯೇ, ಯತ್ಕಿಂಚಿದವಧಿಕ–ತೃತೀಯ-ಕ್ಷಣವರ್ತಿಸಂಶಯವಿಷಯೇ ಚ ಅಸಿದ್ಧಿರಿತ್ಯತೋ ವಿಶೇಷಣಾನಿ ॥**

ಪಕ್ಷದಲ್ಲಿ ಸೇರಿರುವ ಪದಗಳಿಗೆ ಅನ್ವಯ ಮತ್ತು ಅರ್ಥಗಳನ್ನು ಹೇಳಿ ಇಲ್ಲಿ ಕೃತ್ಯವನ್ನು ತೋರಿಸಲಾಗಿದೆ–ಸ್ವ ಎಂದರೆ ಪ್ರಾಮಾಣ್ಯ. ಅದಕ್ಕೆ ಆಶ್ರಯವಾದುದು ವ್ಯವಸಾಯ, ತದ್ವಿಷಯಕ ನಿಶ್ಚಯವೆಂದರೆ ಅನುವ್ಯವಸಾಯ. ಆ ಅನುವ್ಯವಸಾಯ ಹುಟ್ಟಿದ ಕ್ಷಣವನ್ನು ಆರಂಭಿಸಿ ಯಾವ ಮೂರನೆಯ ಕ್ಷಣವಿದೆಯೋ ಆ ಕ್ಷಣದಲ್ಲಿರುವ ಮತ್ತು ವ್ಯವಸಾಯ ಸಮಾನಾಧಿಕರಣವಾದ (ವ್ಯವಸಾಯ ಯಾರಿಗೆ ಬಂದಿದೆಯೋ ಅದೇ ವ್ಯಕ್ತಿಗೆ ಹುಟ್ಟಿರುವ) ಯಾವ ಸಂದೇಹವಿದೆಯೋ ಅಂತಹ ಸಂದೇಹಕ್ಕೆ ವಿಷಯವಾದ ಪ್ರಾಮಾಣ್ಯವು ಪಕ್ಷ. ಇಲ್ಲಿ ಪ್ರಾಮಾಣ್ಯಕ್ಕೆ ಒಂದು ವಿಶೇಷಣವನ್ನು ಸಂದೇಹಕ್ಕೆ ಮೂರು ವಿಶೇಷಣಗಳನ್ನೂ ಕೊಡಲಾಗಿದೆ.

1. ಸಂಶಯವಿಷಯೀಭೂತಂ–ಪ್ರಾಮಾಣ್ಯಮ್.
2. ನಿಶ್ಚಯ ಸಮಾನಾಧಿಕರಣ–ಸಂಶಯ.
3. ತೃತೀಯಕ್ಷಣವೃತ್ತಿ–ಸಂಶಯ.
4. ನಿಶ್ಚಯಾವಧಿಕ ತೃತೀಯಕ್ಷಣವರ್ತಿ–ಸಂಶಯ.

1. ಮೊದಲ ವಿಶೇಷಣದಿಂದ, ಎರಡು ರೀತಿಯಿಂದ ಬರಬಹುದಾದ ಅಸಿದ್ಧಿಯು ನಿರಾಸವಾಗುತ್ತದೆ. ಪ್ರಾಮಾಣ್ಯ ಮಾತ್ರವನ್ನು ಪಕ್ಷಮಾಡಿದರೆ ಸಂದೇಹಕ್ಕೆ ವಿಷಯವಾಗದ ಅಥವಾ ನಿಶ್ಚಿತವಾದ ಪ್ರಾಮಾಣ್ಯವೂ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಸಂದೇಹವಿಷಯತ್ವರೂಪ ಹೇತು ಇಲ್ಲ. ಅದಕ್ಕಾಗಿ ಸಂದೇಹ ವಿಷಯವಾದ ಪ್ರಾಮಾಣ್ಯವನ್ನೇ ಪಕ್ಷವನ್ನಾಗಿ ಮಾಡಲಾಗಿದೆ.

2. ರಾಮನಿಗೆ ಸಂದೇಹವಿಷಯವಾಗಿರುವ ಪ್ರಾಮಾಣ್ಯವೇ ಕೃಷ್ಣನಿಗೆ ನಿಶ್ಚಿತವಾಗಿದೆ. ಅಲ್ಲಿ ಹೇತು ಬರುವುದಿಲ್ಲ, ಏಕೆಂದರೆ, ಹೇತು ಸ್ವಾಶ್ರಯವಿಷಯಕನಿಶ್ಚಯಾವಧಿಕ ತೃತೀಯ ಕ್ಷಣವೃತ್ತಿಸಮಾನಾಧಿಕರಣ ಸಂಶಯ ವಿಷಯತ್ವ. ಪ್ರಕೃತ ಅನುವ್ಯವಸಾಯ ಕೃಷ್ಣನಿಗೆ ಬಂದಿದೆ, ಸಂದೇಹ ರಾಮನಿಗೆ ಬಂದಿದೆ. ಹೀಗಾಗಿ ಆ ಪ್ರಾಮಾಣ್ಯದಲ್ಲಿ ಸಮಾನಾಧಿಕರಣ ಸಂದೇಹವಿಷಯತ್ವ ಬರಲಿಲ್ಲ. ಅಸಿದ್ಧಿ ಬಂತು. ಅದರ ಪರಿಹಾರಕ್ಕಾಗಿ ಅನುವ್ಯವಸಾಯ ಸಮಾನಾಧಿಕರಣ ಸಂದೇಹ ಎಂಬ ವಿಶೇಷಣವನ್ನು ಪಕ್ಷದಲ್ಲೂ ಕೊಡಲಾಗಿದೆ. ರಾಮನ ಪ್ರಾಮಾಣ್ಯಸಂದೇಹ ಕೃಷ್ಣನಿಗೆ ಬಂದಿರುವ ಅನುವ್ಯವಸಾಯ ಸಮಾನಾಧಿಕರಣವಲ್ಲ. ಅದು ಪಕ್ಷದಲ್ಲಿ ಸೇರುವುದಿಲ್ಲ.

3.ತೃತೀಯ ಕ್ಷಣವೃತ್ತಿ ಎಂಬ ವಿಶೇಷಣವನ್ನು ಕೊಡದಿದ್ದರೆ ಮತ್ತೆ ಅಸಿದ್ಧಿ. ಅನುವ್ಯವಸಾಯ ದಲ್ಲಿ ಪ್ರಾಮಾಣ್ಯ ನಿಶ್ಚಯವಾಗಿದ್ದರೂ ಅದು ಎರಡೇ ಕ್ಷಣಕಾಲ ಇರುವುದರಿಂದ ಮೂರನೆಯ ಕ್ಷಣದಲ್ಲಿ ಸಂಶಯಸಾಮಗ್ರೀ ಸಂಪನ್ನವಾಗಿ, ನಾಲ್ಕನೆಯ ಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರಬಹುದು. ಆ ಪ್ರಾಮಾಣ್ಯದಲ್ಲಿ ಹೇತು ಇಲ್ಲ. ಅದಕ್ಕಾಗಿ ಸಂದೇಹದಲ್ಲಿ 'ತೃತೀಯಕ್ಷಣವರ್ತಿ' ಎಂಬ ವಿಶೇಷಣ ಕೊಡಬೇಕು.

4. ಯತ್ಕಿಂಚಿದವಧಿಕ – ತೃತೀಯಕ್ಷಣವೃತ್ತಿ – ಸಂದೇಹವಿಷಯವಾದ ಪ್ರಾಮಾಣ್ಯವೂ

ಪಕ್ಷಪ್ರವಿಷ್ಟವಾಗುತ್ತದೆ. ಅದರಲ್ಲಿ ಅನುವ್ಯವಸಾಯಾವಧಿಕ–ತೃತೀಯಕ್ಷಣವೃತ್ತಿಸಂದೇಹ ವಿಷಯತ್ವ ರೂಪವಾದ ಹೇತು ಇಲ್ಲ. ಅಸಿದ್ಧಿ. ಅದಕ್ಕಾಗಿ ಅನುವ್ಯವಸಾಯಾವಧಿಕ–ತೃತೀಯಕ್ಷಣ ವೃತ್ತಿ ಎಂಬ ವಿಶೇಷಣವನ್ನು ಕೊಡಬೇಕು.

## ನ್ಯಾಯದೀಪ

**ಜ್ಞಾನಪ್ರಾಮಾಣ್ಯಾಂಶಸ್ಯ ಅಧಿಕಸ್ಯಅತ್ರ ಪ್ರವೇಶಾತ್ ನ ಹೇತು-ಪಕ್ಷತಾವಚ್ಛೇದ-ಕೈಕ್ಯನಿಮಿತ್ತಂ ಸಿದ್ಧಸಾಧನಂ ಶಂಕ್ಯಮ್ ।**

**ಅಪ್ರಾಮಾಣ್ಯೇನ ಸಿದ್ಧಸಾಧನತಾನಿರಾಸಾಯ ಜ್ಞಾನಪ್ರಾಮಾಣ್ಯಮಿತ್ಯುಕ್ತಿಃ ।**

**ತಾದೃಶಾನುಮಿತ್ಯಾದಿಗ್ರಾಹ್ಯತ್ವೇನ ಬಾಧನಿರಾಸಾಯ ಸಾಧ್ಯೇ ಯಾವದಿತ್ಯುಕ್ತಿಃ । ಜ್ಞಾನಂ, ಘಟಜ್ಞಾನಂ ಇತ್ಯಾದಿ ಶಬ್ದಜನ್ಯಜ್ಞಾನ–ಅಗ್ರಾಹ್ಯತ್ವಸ್ಯ ಸ್ವತಸ್ತ್ವೇಽಪಿ ಸತ್ತ್ವಾತ್ ಗ್ರಾಹ್ಯಜ್ಞಾನಪ್ರಕಾರೇತ್ಯಾದ್ಯುಕ್ತಿಃ । ದಲದ್ವಯಕೃತ್ಯಮಪಿ ಪ್ರಾಗೇವ ವ್ಯಕ್ತಮ್ ।**

ಪ್ರಕೃತಾನುಮಾನದಲ್ಲಿ ಸಂಶಯ ವಿಷಯೀಭೂತ ಪ್ರಾಮಾಣ್ಯವು ಪಕ್ಷ, ಅದೇ ಹೇತು. ಹೀಗಾಗಿ ಪಕ್ಷತಾವಚ್ಛೇದಕ–ಹೇತುಗಳಿಗೆ ಐಕ್ಯವಿರುವುದರಿಂದ ಸಿದ್ಧಸಾಧನತಾದೋಷವನ್ನು ಹೇಳಬಾರದು. ಪಕ್ಷತಾವಚ್ಛೇದಕ ಸಂಶಯವಿಷಯೀಭೂತ ಜ್ಞಾನಪ್ರಾಮಾಣ್ಯತ್ವ. ಹೇತು ಸಂಶಯ ವಿಷಯತ್ವ ಮಾತ್ರ. ಪಕ್ಷತಾವಚ್ಛೇದಕದಲ್ಲಿ ಅಧಿಕ ಪ್ರವೇಶ ಇದೆ. ಹೇತುಪಕ್ಷತಾವಚ್ಛೇದಕಗಳು ಒಂದೇ ಅಲ್ಲ.

ಸಂಶಯವಿಷಯೀಭೂತಂ ಎಂದಿಷ್ಟೇ ಪಕ್ಷಮಾಡಿದರೆ ಸಂದೇಹಕ್ಕೆ ವಿಷಯವಾದ ಅಪ್ರಾಮಾಣ್ಯವೂ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಅನುವ್ಯವಸಾಯವಿಷಯತ್ವಾಭಾವವು ಸ್ವತಸ್ತ್ವ ವಾದಿಗಳಿಗೆ ಸಿದ್ಧವಾದುದರಿಂದ ಸಿದ್ಧಸಾಧನತಾದೋಷ ಬರುತ್ತದೆ. ಆದಕ್ಕಾಗಿ ಜ್ಞಾನಪ್ರಾಮಾಣ್ಯಂ, ಎಂದು ಪಕ್ಷನಿರ್ದೇಶವನ್ನು ಮಾಡಲಾಗಿದೆ.

ಸಾಧ್ಯದಲ್ಲಿ 'ಯಾವಜ್ಜ್ಞಾನಾಗ್ರಾಹ್ಯಂ' ಎಂದಿದೆ. ಅಲ್ಲಿ ಯಾವತ್ ಪದವನ್ನು ಬಿಟ್ಟರೆ ವ್ಯವಸಾಯವಿಷಯಕವಾದ ಅನುಮಿತಿಯಿಂದ ಪ್ರಾಮಾಣ್ಯವು ಗ್ರಾಹ್ಯವಾದುದರಿಂದ ಅಗ್ರಾಹ್ಯತ್ವ ಬರುವುದಿಲ್ಲ. ಪರತಸ್ತ್ವಸಿದ್ಧಾಂತದಲ್ಲಿ ಬಾಧ ಬರುತ್ತದೆ. ಅದಕ್ಕಾಗಿ ಯಾವತ್ ಪದ. ಅದಿದ್ದರೆ ಅಂತಹ ಯಾವದ್ಗ್ರಹವಾದ ಅನುವ್ಯವಸಾಯದಿಂದ ಪ್ರಾಮಾಣ್ಯವು ಅಗ್ರಾಹ್ಯವಾಗಿರುವುದರಿಂದ ಬಾಧ ಇಲ್ಲ.

ವ್ಯವಸಾಯವಿಷಯಕವಾದ ಜ್ಞಾನದಿಂದ ಪ್ರಾಮಾಣ್ಯವು ಅಗ್ರಾಹ್ಯವಾಗಿರಬೇಕು ಎಂದಿಷ್ಟೇ ಸಾಧ್ಯವಾದರೆ ಸಿದ್ಧಸಾಧನತಾದೋಷ. ಸ್ವತಸ್ತ್ವವಾದಿಗಳು 'ಜ್ಞಾನಂ, ಘಟಜ್ಞಾನಂ' ಇತ್ಯಾದಿ

ಪದಗಳಿಂದ ಜನ್ಯವಾದ ಜ್ಞಾನವಿಷಯಕವಾದ ಶಾಬ್ದಬೋಧದಿಂದ ಪ್ರಾಮಾಣ್ಯವು ಅಗ್ರಾಹ್ಯ ಎಂದು ಅಂಗೀಕರಿಸಿದ್ದಾರೆ. ಅದಕ್ಕಾಗಿ ವ್ಯವಸಾಯಪ್ರಕಾರಪ್ರಕಾರಕತಯಾ, ತದ್ವದ್ ವಿಶೇಷ್ಯಕತಯಾ ಚ ಜ್ಞಾನಗ್ರಾಹಕ–ಅಗ್ರಾಹ್ಯಂ, ಎಂದು ಹೇಳಲಾಗಿದೆ. ಜ್ಞಾನಂ, ಎಂಬ ಪದದಿಂದ ಬರುವ ಬೋಧದಲ್ಲಿ ಜ್ಞಾನವು ಜ್ಞಾನತ್ವೇನ ತೋರುತ್ತದೆ, ಕಿಂಚಿತ್ ಪ್ರಕಾರಕತ್ವೇನ ತೋರುವುದಿಲ್ಲ. ಆದ್ದರಿಂದ ಆ ಬೋಧ ಸಂಗ್ರಹವಾಗುವುದಿಲ್ಲ. 'ಘಟತ್ವಪ್ರಕಾರಕ–ಘಟವಿಶೇಷ್ಯಕ ಜ್ಞಾನವಾನ್ ಅಹಮ್' ಎಂಬ ಅನುವ್ಯವಸಾಯವೇ ಅಂತಹ ಜ್ಞಾನವಿಷಯಕಜ್ಞಾನ. ಅದರಲ್ಲಿ ಪ್ರಾಮಾಣ್ಯವು ವಿಷಯವಲ್ಲ, ಎಂದು ನೈಯಾಯಿಕರು ಸಾಧನೆ ಮಾಡುತ್ತಾರೆ. ಅದನ್ನು ನಾವು ಒಪ್ಪಿಲ್ಲ. ಸಿದ್ಧಸಾಧನತಾ ಇಲ್ಲ. ಇಲ್ಲಿರುವ ಎರಡು ವಿಶೇಷಣಗಳಿಗೆ ಕೃತ್ಯವನ್ನು ದ್ವಿತೀಯಪ್ರಕರಣದಲ್ಲಿ ತಿಳಿಸಲಾಗಿದೆ.

## ನ್ಯಾಯದೀಪ

**ಅತ್ರ ಮಣ್ಯುಕ್ತಂ ಏಕಸಾಧ್ಯಂ ವಿಪ್ರತಿಪತ್ತೌ ಉಕ್ತಸಾಧ್ಯಾಂತರಸ್ಯಾಪಿ ಉಪಲಕ್ಷಣಂ ಮತ್ವಾ ದೂಷಣಸೌಕರ್ಯಾಯ ಸ್ವಯಮಾಹ–ತಜ್ಜ್ಞಾನೇತಿ ॥ ತದರ್ಥಃ, ವಿಶೇಷಣಕೃತ್ಯಂ ಚ ಪರೋಕ್ತಸ್ವತಸ್ತ್ವನಿರುಕ್ತಿಭಂಗೇ ವ್ಯಕ್ತಮ್ ।**

**ಮತದ್ವಯೇಽಪಿ ಈಶ್ವರಜ್ಞಾನಸತ್ವಾತ್ ಕ್ರಮೇಣ ಅಪ್ರಸಿದ್ಧಿ–ಬಾಧವಾರಣಾಯ ಸಮಾನಾಧಿಕರಣಪದದ್ವಯಮ್ । ನಿಶ್ಚಯಾವಧಿಕೇತಿ ॥ ನಿಶ್ಚಯೋತ್ಪತ್ತಿ-ಕ್ಷಣಾವಧಿಕೇತ್ಯರ್ಥಃ । ತೇನ ಸ್ವಾಶ್ರಯವಿಷಯಕ–ನಿಶ್ಚಯ ಸ್ಥಿತಿಕ್ಷಣಾವಧಿಕ-ತೃತೀಯಕ್ಷಣವೃತ್ತಿ–ಸಂಶಯಕೋಟೌ ಅರ್ಥೇ ವ್ಯಭಿಚಾರೋ ನ ಶಂಕ್ಯಃ ।**

ಈ ಅನುಮಾನದಲ್ಲಿ ಎರಡು ಸಾಧ್ಯಗಳನ್ನು ಉಲ್ಲೇಖಿಸಲಾಗಿದೆ. ಅವುಗಳಲ್ಲಿ ಎರಡನೆಯ ಸಾಧ್ಯವನ್ನು ಮಾತ್ರ ಮಣಿಯಲ್ಲಿ (ಪು.214) ಹೇಳಲಾಗಿದೆ. ಮೊದಲನೆಯ ಸಾಧ್ಯ ದ್ವಿತೀಯ ವಿಪ್ರಪತಿಪತ್ತಿಯಲ್ಲಿ ಇದೆ. ಅದಕ್ಕೂ ಮಣ್ಯುಕ್ತ ಸಾಧ್ಯವು ಉಪಲಕ್ಷಣ. ಅರ್ಥಾತ್, ಮಣಿಯಲ್ಲಿ ಆ ಸಾಧ್ಯವೂ ವಿವಕ್ಷಿತ. ಆದ್ದರಿಂದ ಎರಡನ್ನೂ ಹೇಳಿದರೆ ಒಂದೇ ದೋಷದಿಂದ ಎರಡನ್ನೂ ನಿರಾಸಮಾಡಬಹುದು. ಆ ಸೌಕರ್ಯಕ್ಕಾಗಿ ಶ್ರೀವ್ಯಾಸರಾಜರು ಆ ಸಾಧ್ಯವನ್ನೂ ಉಲ್ಲೇಖಿಸಿದ್ದಾರೆ. ಆ ಸಾಧ್ಯದ ಅರ್ಥ ಹಾಗೂ ವಿಶೇಷಣಗಳಿಗೆ ಕೃತ್ಯವನ್ನು ಪರೋಕ್ತಸ್ವತಸ್ತ್ವಭಂಗ ಪ್ರಕರಣದಲ್ಲಿ ತಿಳಿಸಲಾಗಿದೆ.

ದ್ವಿತೀಯ ಸಾಧ್ಯದಲ್ಲಿ ಎರಡು ಸಮಾನಾಧಿಕರಣ ಪದಗಳಿವೆ. ಮೊದಲನೆಯ ಸಮಾನಾಧಿ-ಕರಣಪದವನ್ನು ಬಿಟ್ಟರೆ ಸಾಧ್ಯಾಪ್ರಸಿದ್ಧಿ. ಹೇಗೆಂದರೆ, ನೈಯಾಯಿಕರು ಮತ್ತು ನಾವು ಇಬ್ಬರೂ ಈಶ್ವರನನ್ನು ಅಂಗೀಕರಿಸಿದ್ದೇವೆ. ಆದ್ದರಿಂದ ನಮ್ಮ ವ್ಯವಸಾಯವಿಷಯಕವಾದ

ಜ್ಞಾನ=ಈಶ್ವರಜ್ಞಾನ. ಆದರಿಂದ ನಮ್ಮ ಅನುವ್ಯವಸಾಯವು ಜನ್ಯವೇ ಆಗಿದೆ. ಅಜನ್ಯವಾದ ಅನುವ್ಯವಸಾಯ ಅಪ್ರಸಿದ್ಧ. ಸಮಾನಾಧಿಕರಣಪದ ಕೊಟ್ಟಾಗ ನಮ್ಮ ವ್ಯವಸಾಯಕ್ಕೆ ಈಶಜ್ಞಾನವು ವ್ಯಧಿಕರಣವಾದುದರಿಂದ ಅದನ್ನು ತೆಗೆದುಕೊಳ್ಳಲಾಗುವುದಿಲ್ಲ. ನಮ್ಮಲ್ಲಿರುವ ಅನುವ್ಯವಸಾಯವನ್ನೇ ತೆಗೆದುಕೊಳ್ಳಬೇಕು. ಆದರಿಂದ ಅದು ಅಜನ್ಯವಾಗಿದೆ. ಅಪ್ರಸಿದ್ಧಿ ಇಲ್ಲ.

ಎರಡನೆಯ ಸಮಾನಾಧಿಕರಣಪದವನ್ನು ಬಿಟ್ಟರೆ ಬಾಧ. ನಮ್ಮ ಅನುವ್ಯವಸಾಯದಿಂದ ಅಜನ್ಯವಾದ ಜ್ಞಾನ ಈಶಜ್ಞಾನ. ಅದು ಸರ್ವವಿಷಯಕವಾದುದರಿಂದ ಅದಕ್ಕೆ ಪ್ರಾಮಾಣ್ಯವು ವಿಷಯವೇ ಆಗಿದೆ. ಹೀಗೆ ಬಾಧ. ಸಮಾನಾಧಿಕರಣಪದವಿದ್ದರೆ ಈಶಜ್ಞಾನವು ನಮ್ಮಲ್ಲಿರುವ ಅನುವ್ಯವಸಾಯಸಮಾನಾಧಿಕರಣವಲ್ಲವಾದುದರಿಂದ ಅದರ ಸಂಗ್ರಹವಾಗುವುದಿಲ್ಲ. ಬಾಧ ದೋಷ ಇಲ್ಲ.

ಮೂಲದಲ್ಲಿ 'ನಿಶ್ಚಯಾವಧಿಕ ತೃತೀಯಕ್ಷಣವೃತ್ತಿ ಸಂದೇಹ' ಎಂದು ಸಂದೇಹಕ್ಕೆ ವಿಶೇಷಣವನ್ನು ಕೊಡಲಾಗಿದೆ. ಅಲ್ಲಿ ನಿಶ್ಚಯಾವಧಿಕ ತೃತೀಯ ಕ್ಷಣ ಎಂದರೆ ನಿಶ್ಚಯ ಇರುವ ತೃತೀಯಕ್ಷಣವಲ್ಲ, ನಿಶ್ಚಯದ ಉತ್ಪತ್ತಿ ಕ್ಷಣಕ್ಕಿಂತ ತೃತೀಯ ಕ್ಷಣ ಎಂದು ಅರ್ಥ. ಸ್ಥಿತಿಕ್ಷಣವನ್ನು ಇಟ್ಟುಕೊಂಡರೆ ಸಾಮಾನ್ಯವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ. ಜಲನಿಶ್ಚಯ ಹುಟ್ಟಿದ ನಾಲ್ಕನೆಯ ಕ್ಷಣವೂ ತಾದೃಶನಿಶ್ಚಯ ತೃತೀಯ ಕ್ಷಣವಾಗುತ್ತದೆ. ಹೇಗೆಂದರೆ, ಜಲನಿಶ್ಚಯವು ಎರಡು ಕ್ಷಣ ಇರುತ್ತದೆ. ಎರಡನೆಯ ಕ್ಷಣದಿಂದ ಲೆಕ್ಕ ಹಾಕಿದರೆ ನಾಲ್ಕನೆಯ ಕ್ಷಣವೂ ತೃತೀಯಕ್ಷಣ. ಅಲ್ಲಿ ಜಲಸಂದೇಹ ಬರುತ್ತದೆ. ಆ ಸಂದೇಹಕ್ಕೆ ಜಲವು ವಿಷಯವಾಗಿದೆ. ಆದಕ್ಕಾಗಿ ಉತ್ಪತ್ತಿ ತೃತೀಯ ಕ್ಷಣವನ್ನು ಪರಿಗಣಿಸಬೇಕು. ಆ ಕ್ಷಣದಲ್ಲಿ ಜಲಸಂದೇಹ ಬರುವುದಿಲ್ಲ. ಏಕೆಂದರೆ, ಅದರ ಪೂರ್ವಕ್ಷಣದಲ್ಲಿ ಜಲನಿಶ್ಚಯವಿದೆ. ನಿಶ್ಚಯವು ಸಂದೇಹಕ್ಕೆ ಪ್ರತಿಬಂಧಕ.

## ನ್ಯಾಯದೀಪ

**'ಸ್ವಾಶ್ರಯನಿಶ್ಚಯೇ ಸತ್ಯಪಿ ತದುತ್ತರತೃತೀಯಕ್ಷಣೇ ಸಂದಿಹ್ಯಮಾನತ್ವಾತ್' ಇತಿ ಮಣ್ಯುಕ್ತಹೇತೋಃ (ಪು.214) ಸತಿ ಸಪ್ತಮೀಬಲೇನ ಸಾಮಾನಾಧಿಕರಣ್ಯ ಲಾಭರೂಪಂ ತಟ್ಟೀಕೋಕ್ತಮೇಕಮರ್ಥಮ್ ಉಪೇತ್ಯ ಏಕೋ ಹೇತುರುಕ್ತಃ। ಸಮಾನಕಾಲೀನತಾರೂಪಮ್ ಅರ್ಥಾಂತರಂ ಚೋಪೇತ್ಯ ಹೇತ್ವಂತರಮಾಹ– ಸ್ವಾಶ್ರಯವಿಷಯಕೇತ್ಯಾದಿ ॥ ಸಂಶಯವಿಷಯತ್ವಾದಿತ್ಯಸ್ಯ ಪೂರ್ವವತ್ ಸಂಶಯಕೋಟಿತ್ವಾದಿತ್ಯರ್ಥಃ। ತೇನ, ಅತ್ರ ಪೂರ್ವತ್ರ ಚ ನ ವ್ಯವಸಾಯೇ ವ್ಯಭಿಚಾರಃ।**

ಮಣಿಗ್ರಂಥದಲ್ಲಿ ಒಂದೇ ಹೇತುವನ್ನು ಹೇಳಲಾಗಿದೆ. ಇಲ್ಲಿ ಎರಡು ಹೇತುಗಳನ್ನು

ಹೇಳಿದ್ದಾರೆ. ಎರಡನೆಯ ಹೇತುವಿನ ಲಾಭವೂ ಮಣಿವಾಕ್ಯದಿಂದಲೇ ಆಗುತ್ತದೆ. ಮಣಿಯಲ್ಲಿ 'ನಿಶ್ಚಯೇ ಸತಿ' ಎಂಬ ಸತಿ ಸಪ್ತಮಿಯಿಂದಾಗಿ 'ವ್ಯವಸಾಯವಿಷಯಕ ನಿಶ್ಚಯವಿದ್ದಾಗ' ಎಂಬ ಅರ್ಥ ಬರುತ್ತದೆ. 'ಇದ್ದಾಗ ಇರುವ ಸಂದೇಹ' ಎಂದರೆ ಅನುವ್ಯವಸಾಯಕ್ಕೂ ಸಂದೇಹಕ್ಕೂ ಸಾಮಾನಾಧಿಕರಣ್ಯ ತಿಳಿಯುತ್ತದೆ. ಅದು ದೈಶಿಕ ಸಾಮಾನಾಧಿಕರಣ್ಯ ಎಂದು ಮಣಿವ್ಯಾಖ್ಯಾನದಲ್ಲಿದೆ– ''ಸತಿಸಪ್ತಮೀಮಹಿಮ್ನಾ ಚ ಸ್ವಾಶ್ರಯಸಾಮಾನಾಧಿಕರಣ್ಯಂ ಸಂಶಯವಿಶೇಷಣಂ ಲಭ್ಯತೇ'' (ಪು.214) ಅದಕ್ಕನುಗುಣವಾಗಿ ಮೊದಲ ಹೇತು ಇದೆ. ಕಾಲಿಕ ಸಾಮಾನಾಧಿಕರಣ್ಯರೂಪ ಅರ್ಥಾಂತರವನ್ನು ಪರಿಗ್ರಹಿಸಿ ಎರಡನೆಯ ಹೇತುವನ್ನು ಇಲ್ಲಿ ಹೇಳಲಾಗಿದೆ. ಈ ಎರಡನೆಯ ಹೇತುವಿನಲ್ಲಿ 'ಸಂಶಯವಿಷಯತ್ವಾತ್' ಎಂದಿದೆ. ಅದಕ್ಕೆ ಮೊದಲನೆಯ ಹೇತುವಿನಂತೆಯೇ 'ಸಂಶಯಕೋಟಿತ್ವಾತ್' ಎಂದೇ ಅರ್ಥ. ವಿಷಯಶಬ್ದ ಇದ್ದರೆ ಆಗ ವಿಶೇಷ್ಯತಯಾ ಪ್ರಾಮಾಣ್ಯ ಸಂಶಯವಿಷಯತ್ವವು ವ್ಯವಸಾಯರೂಪ ಧರ್ಮಿಯಲ್ಲೂ ಇದೆ. ಅದರಲ್ಲಿ ಸಾಧ್ಯವಿಲ್ಲ. ಎರಡೂ ಹೇತುಗಳಿಗೂ ವ್ಯಭಿಚಾರ ಬರುತ್ತಿತ್ತು. ಅದಕ್ಕಾಗಿ, ಸಂಶಯಕೋಟಿತ್ವಾತ್ ಎಂದೇ ಹೇತು.[1]

## ನ್ಯಾಯದೀಪ

**'ಸ್ವಾಶ್ರಯನಿಶ್ಚಯೇ ಸತಿ ಅಪ್ರಾಮಾಣ್ಯಸಂಶಯಂ ವಿನಾ ಸಂದಿಹ್ಯಮಾನತ್ವಾತ್' ಇತಿ ಮಣ್ಯುಕ್ತ್ಯಭಿಮತಂ (ಪು.229) ಹೇತುಂ ವ್ಯನಕ್ತಿ–ಸ್ವಾಶ್ರಯವಿಷಯಕ ಕಿಂಚಿದಿತ್ಯಾದಿ ।।**

**ಸ್ವಾಶ್ರಯ ವಿಷಯಕನಿಶ್ಚಯಶಬ್ದೇನ ಯಾವನ್ನಿಶ್ಚಯೋ ಮಣಿಕೃತೋ ನಾಭಿಮತಃ । ಪ್ರಾಮಾಣ್ಯಾನುಮಿತೇರಪಿ ಪ್ರಾಮಾಣ್ಯಾಶ್ರಯವಿಷಯಕನಿಶ್ಚಯತ್ವೇನ ತದ್ಧರ್ಮಿಕಪ್ರಾಮಾಣ್ಯಸಂಶಯಜನ್ಯ–ಸಂಶಯವಿಷಯತ್ವೇನ ಅಸಿದ್ಧ್ಯಾಪತ್ತೇಃ । ಕಿಂತು ಯತ್ಕಿಂಚಿದನುವ್ಯವಸಾಯ–ವಿಷಯಕ–ನಿಶ್ಚಯ ಏವ ಅಭಿಮತಃ, ಇತಿ ಭಾವೇನ ಕಿಂಚಿನ್ನಿಶ್ಚಯಧರ್ಮಿಕ ಇತ್ಯುಕ್ತಮ್ ।**

**ಅಪ್ರಾಮಾಣ್ಯವದಿತಿ ।। ಪಕ್ಷೀಭೂತಪ್ರಾಮಾಣ್ಯಸಂಶಯ–ಕೊಟೀಭೂತಾಪ್ರಾಮಾಣ್ಯವದಿತ್ಯರ್ಥಃ । ಮತದ್ವಯೇಽಪಿ ತಸ್ಯ ಪರತಸ್ತ್ವೇನ ಸಾಧ್ಯಹೇತೂ ಸಮ್ಮತೌ ಇತಿ ಭಾವಃ ।।**

---

1. ಮಣಿಯಲ್ಲಿ 'ಸ್ವಾಶ್ರಯನಿಶ್ಚಯೇ' ಎಂಬ ಅಂಶವು ಹೇತುವಿನಲ್ಲಿ ಸೇರಿಲ್ಲ. 'ಸ್ವಾಶ್ರಯೇ ಸತ್ಯಪಿ' ಎಂದೇ ಅಲ್ಲಿನ ಪಾಠ. ಅದು ಪ್ರಾಭಾಕರಮತದ ನಿರಾಸ ಮಾಡುವ ಅನುಮಾನ. ಪ್ರಾಭಾಕರ ಮತದಲ್ಲಿ ಜ್ಞಾನವು ಸ್ವಪ್ರಕಾಶ. ಪ್ರಾಮಾಣ್ಯಾಶ್ರಯವಾದ ಜ್ಞಾನವೇ ಸ್ವವಿಷಯಕ ನಿಶ್ಚಯರೂಪ. ಆದ್ದರಿಂದ 'ಜ್ಞಾನವಿಷಯಕ ಜ್ಞಾನವಿದ್ದರೂ' ಎಂದೇ ಅದಕ್ಕೆ ಅರ್ಥ.

ಮಣಿಗ್ರಂಥದಲ್ಲಿ ಹೇಳಿರುವ ಹೇತುವಿಗೆ ಸಮ್ಮತವಾದ, ಅದೇ ರೀತಿಯ ಇನ್ನೊಂದು ಹೇತುವನ್ನು 'ಸ್ವಾಶ್ರಯವಿಷಯಕ' ಎಂದು ಹೇಳಲಾಗಿದೆ.

ಈ ಹೇತುವಿನಲ್ಲಿ ಸ್ವಾಶ್ರಯ(ಪ್ರಾಮಾಣ್ಯಾಶ್ರಯ) ವಿಷಯಕ ನಿಶ್ಚಯ ಎಂದರೆ ವ್ಯವಸಾಯ ವಿಷಯಕವಾದ ಎಲ್ಲಾ ನಿಶ್ಚಯಗಳೂ ವಿವಕ್ಷಿತವಲ್ಲ. ಹಾಗಿದ್ದಲ್ಲಿ ಅಸಿದ್ಧಿದೋಷ ಬರುತ್ತದೆ. ಏಕೆಂದರೆ, ನೈಯಾಯಿಕರು ವ್ಯವಸಾಯಪ್ರಾಮಾಣ್ಯವು ಅನುಮಿತಿಗ್ರಾಹ್ಯ, ಎಂದು ಹೇಳುತ್ತಾರೆ. ಆ ಅನುಮಿತಿಯೂ ಸ್ವಾಶ್ರಯವ್ಯವಸಾಯ ವಿಷಯಕವೇ ಆದ್ದರಿಂದ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಪ್ರಾಮಾಣ್ಯಸಂದೇಹ ಬಂದರೆ ವ್ಯವಸಾಯದ ಪ್ರಾಮಾಣ್ಯದಲ್ಲೂ ಸಂದೇಹವು ಬರುತ್ತದೆ. ತಾದೃಶ ಆಹಿತಸಂದೇಹವಿಷಯತ್ವವೇ ಪ್ರಾಮಾಣ್ಯದಲ್ಲಿ ಬರುತ್ತದೆ. ಆದ್ದರಿಂದ ಅಸಿದ್ಧಿ. ಅದಕ್ಕಾಗಿ ವ್ಯವಸಾಯವಿಷಯಕವಾದ ಕಿಂಚಿದ್ಧರ್ಮಿಕ ಅಂದರೆ ಅನುವ್ಯವಸಾಯಧರ್ಮಿಕ ಸಂದೇಹಾಹಿತ ಸಂದೇಹವಿಷಯತ್ವಾಭಾವವೇ ಹೇತು. ನ್ಯಾಯಮತದಲ್ಲಿ ಅನುವ್ಯವಸಾಯವು ಪ್ರಾಮಾಣ್ಯ ವಿಷಯಕವಲ್ಲ. ಆದ್ದರಿಂದ ತದ್ಧರ್ಮಿಕ ಸಂದೇಹದಿಂದಾಗಿ ವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಅದಕ್ಕಾಗಿ ಈ ಹೇತುವಿನಲ್ಲಿ ಕಿಂಚಿದ್ಧರ್ಮಿಕ ಎಂಬ ಪದವಿದೆ.

'ಅಪ್ರಾಮಾಣ್ಯವತ್' ಎಂದು ದೃಷ್ಟಾಂತ. ಪ್ರಾಮಾಣ್ಯವು ಪಕ್ಷ ತದ್ವಿಷಯಕ ಸಂಶಯದಲ್ಲಿ ಒಂದು ಕೋಟಿ ಅಪ್ರಾಮಾಣ್ಯ. ಅದು ಉಭಯಮತದಲ್ಲೂ ಪರತಃ ಗ್ರಾಹ್ಯ. ಆದ್ದರಿಂದ ಅದರಲ್ಲಿ ಎಲ್ಲಾ ಸಾಧ್ಯಗಳೂ ಎಲ್ಲಾ ಹೇತುಗಳೂ ಇವೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಹೇತು–ಪಕ್ಷತಾವಚ್ಛೇದಕೈಕ್ಯ–ನಿಬಂಧನ–ಸಿದ್ಧಸಾಧನತಾ–ಶಂಕಾಪಿ ಯಥಾ ನ ಭವತಿ ತಥಾ ಪಕ್ಷಾಂತರಮಾಹ–ಯದ್ವಾ ಇತಿ ।**

ಹಿಂದಿನ ಅನುಮಾನಗಳಲ್ಲಿ ಹೇತು ಮತ್ತು ಪಕ್ಷತಾವಚ್ಛೇದಕಗಳು ಒಂದೇ ಆಗಿರುವ ನಿಮಿತ್ತದಿಂದಾಗಿ ಸಿದ್ಧಸಾಧನತಾ ಸಂದೇಹಕ್ಕೆ ಅವಕಾಶವಿತ್ತು. ಆದರೆ, ಆ ಸಂದೇಹಕ್ಕೆ ಅವಕಾಶವೇ ಇಲ್ಲದಿರುವ ಇನ್ನೊಂದು ಅನುಮಾನವನ್ನು 'ಯದ್ವಾ' ಎಂದು ಹೇಳಲಾಗಿದೆ.

**यद्वा उक्तहेतुत्रयमध्ये एकं पक्षतावच्छेदकं कृत्वाऽन्यौ हेतूकर्तव्यौ ।।**

ಅಥವಾ ಹಿಂದೆ ಹೇಳಿರುವ ಮೂರು ಹೇತುಗಳಲ್ಲಿ ಒಂದನ್ನು ಪಕ್ಷತಾವಚ್ಛೇದಕವನ್ನಾಗಿ ಮಾಡಿ ಉಳಿದೆರಡನ್ನು ಹೇತುಗಳನ್ನಾಗಿ ಮಾಡಬೇಕು.

## ನ್ಯಾಯದೀಪ

**ಆದ್ಯಂ, ದ್ವಿತೀಯಂ ವಾ ಪಕ್ಷತಾವಚ್ಛೇದಕೀಕೃತ್ಯ ದ್ವಿತೀಯ–ತೃತೀಯೌ ವಾ ಆದ್ಯತೃತೀಯೌ ವಾ ಹೇತೂಕರ್ತವ್ಯೌ ಇತ್ಯರ್ಥಃ ॥**

ಒಟ್ಟು ಮೂರು ಹೇತುಗಳಿವೆ. ಅವುಗಳಲ್ಲಿ ಮೊದಲ ಅಥವಾ ಎರಡನೆಯ ಹೇತುವನ್ನು ಪಕ್ಷತಾವಚ್ಛೇದಕವನ್ನಾಗಿ ಮಾಡಿ ಎರಡನೆಯ ಮತ್ತು ಮೂರನೆಯದನ್ನಾಗಲೀ, ಮೊದಲು ಮತ್ತು ಎರಡನೆಯನ್ನಾಗಲೀ ಹೇತುಗಳನ್ನಾಗಿ ಮಾಡಬೇಕು.

## ದ್ವಿತೀಯಾನುಮಾನ

## ನ್ಯಾಯದೀಪದಲ್ಲಿ ಅವತಾರಿಕೆ

**'ಯದ್ವಾ ಅನಭ್ಯಾಸದಶಾಪನ್ನ-ಏತಜ್ಞಾನಪ್ರಾಮಾಣ್ಯಂ' (ಮಣಿ.ಪು.232) ಇತ್ಯಾದಿನಾ ಮಣ್ಯುಕ್ತಂ ಪಕ್ಷಾಂತರಂ ಚಾಹ-ಯದ್ವಾ ಏತಜ್ಞಾನ ಪ್ರಾಮಾಣ್ಯಮಿತಿ ॥**

ಮಣಿಗ್ರಂಥದಲ್ಲಿ 'ಅನಭ್ಯಾಸದಶಾಪನ್ನ' ಇತ್ಯಾದಿಯಾಗಿ ಹೇಳಿರುವ ಇನ್ನೊಂದು ಪಕ್ಷವನ್ನು 'ಯದ್ವಾ'ಎಂದು ಹೇಳುತ್ತಾರೆ.

**यद्वा एतज्ज्ञानप्रामाण्यम्, एतज्ज्ञानप्रामाण्यसंशयपूर्वकालीनैतन्निश्चयाविषयः । एतज्ज्ञानविषयकनिश्चयावधिकेत्याद्युक्तहेतुत्रयात् । अप्रामाण्यवत् ।।**

ಅಥವಾ, ಅನುವ್ಯವಸಾಯದ ತೃತೀಯಕ್ಷಣದಲ್ಲಿ ಸಂದೇಹವಿಷಯವಾದ ಪ್ರಾಮಾಣ್ಯವನ್ನು 'ಈ ಪ್ರಾಮಾಣ್ಯವು' ಎಂದು ಪಕ್ಷಮಾಡಬೇಕು.

ಸಾಧ್ಯ-ಇಂತಹ ಪ್ರಾಮಾಣ್ಯ-ಸಂದೇಹಪೂರ್ವಕಾಲದಲ್ಲಿರುವ ಈ ನಿಶ್ಚಯಕ್ಕೆ (ಅನುವ್ಯವಸಾಯಕ್ಕೆ) ವಿಷಯವಲ್ಲ.

ಪ್ರಥಮಾನುಮಾನದಲ್ಲಿ ಪ್ರಾಮಾಣ್ಯವು ಅನುವ್ಯವಸಾಯೋತ್ತರಕಾಲೀನ ಸಂದೇಹಕ್ಕೆ ವಿಷಯವಲ್ಲ, ಎಂದು ಸಾಧಿಸಲಾಗಿದೆ. ಈ ಅನುಮಾನದಲ್ಲಿ ಸಂದೇಹಪೂರ್ವಕಾಲೀನ ನಿಶ್ಚಯಕ್ಕೆ ವಿಷಯವಲ್ಲ, ಎಂದು ಸಾಧಿಸಲಾಗಿದೆ. ಈ ಅನುಮಾನದಲ್ಲೂ ಹಿಂದೆ ಹೇಳಿದ ಮೂರೇ ಹೇತುಗಳು.

## ನ್ಯಾಯದೀಪ

**ವಸ್ತುತಃ ಯದನುವ್ಯವಸಾಯಾನಂತರಂ ತೃತೀಯಕ್ಷಣೇ ಸಂಶಯ-ವಿಷಯೀಭೂತಂ ಪ್ರಾಮಾಣ್ಯಂ ತದ್ವ್ಯಕ್ತೇರೇವ ಏತತ್‌ಪದೇನ ಗ್ರಹಣಮ್ । ಅತಃ ನಾಸಿದ್ಧಿಃ ಹೇತೂನಾಂ ಇತಿ ಭಾವಃ । ಬಾಧವಾರಣಾಯ ಕಾಲೀನೇತ್ಯಂತಂ, ಪೂರ್ವೇತಿ=ಅವ್ಯವಹಿತಪೂರ್ವಕಾಲೀನ ಇತ್ಯರ್ಥಃ । ಏತಜ್ಞಾನ ನಿಶ್ಚಯಾನಂತರಂ ಸಂದಿಹ್ಯಮಾನತ್ವಾತ್ ಇತ್ಯುಕ್ತಹೇತುಮ್ ಉಪಲಕ್ಷಣಂ ಮತ್ವಾ ಆಹ-ಹೇತುತ್ರಯಾದಿತಿ ॥**

ವಾಸ್ತವಿಕವಾಗಿ ಯಾವ ಅನುವ್ಯವಸಾಯೋತ್ತರದ ತೃತೀಯಕ್ಷಣದಲ್ಲಿ ಯಾವ ಪ್ರಾಮಾಣ್ಯವು ಸಂದೇಹಾಸ್ಪದವಾಗಿದೆಯೋ ಆ ಪ್ರಾಮಾಣ್ಯವನ್ನೇ ಪಕ್ಷದಲ್ಲಿರುವ 'ಏತತ್' ಪದದಿಂದ ವಿವಕ್ಷೆ ಮಾಡಲಾಗಿದೆ. ಇದರಿಂದ ಆ ಪ್ರಾಮಾಣ್ಯದಲ್ಲಿ ಸಂದೇಹವಿಷಯತ್ವ ಇದೆಯೋ ಇಲ್ಲವೋ ಎಂದು ಹೇತ್ವಸಿದ್ಧಿಯ ಶಂಕೆಗೆ ಅವಕಾಶವೇ ಇಲ್ಲ.

ಸಾಧ್ಯದಲ್ಲಿ ಕೇವಲ 'ನಿಶ್ಚಯಾವಿಷಯಃ' ಎಂದಿಷ್ಟೇ ಇದ್ದರೆ ಬಾಧದೋಷಕ್ಕೆ ಆಸ್ಪದವಾಗುತ್ತದೆ. ಅದಕ್ಕಾಗಿ ಸಂದೇಹಪೂರ್ವಕಾಲೀನ ನಿಶ್ಚಯಕ್ಕೆ ವಿಷಯವಲ್ಲ, ಎಂದು ಸಾಧ್ಯವನ್ನು ಮಾಡಲಾಗಿದೆ. ಇಲ್ಲಿ ಪೂರ್ವಕಾಲ ಎಂದರೆ ಅವ್ಯವಹಿತ-ಪೂರ್ವಕಾಲ ಎಂದೇ ಅರ್ಥ.

ಮಣಿಯಲ್ಲಿ 'ಏತತ್-ಜ್ಞಾನನಿಶ್ಚಯಾನಂತರಂ ಸಂದಿಹ್ಯಮಾನತ್ವಾತ್' ಎಂದು ಒಂದೇ ಹೇತು ಇದೆ. ಅದು ಉಪಲಕ್ಷಣ, ಹಿಂದೆ ಹೇಳಿರುವ ಮೂರೂ ಹೇತುಗಳನ್ನು ಮಾಡಬಹುದು, ಎಂದು ಮೂಲದಲ್ಲಿ ಹೇಳಲಾಗಿದೆ.

## ತೃತೀಯಾನುಮಾನ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಸ್ವತಸ್ತ್ವವಾದಿಮತತ್ರಯ-ಸಾಧಾರಣಂ ವಾ ಗುರುಭಿನ್ನಸ್ವತಸ್ತ್ವವಾದಿ ಸಾಧಾರಣಂ ವಾ ದ್ವೇಧಾಪ್ರಯೋಗಂ ಮಣ್ಯಭಿಮತಂ ಪ್ರದರ್ಶ್ಯ ಅನಭ್ಯಾಸದಶಾಪನ್ನ-ಜ್ಞಾನಪ್ರಾಮಾಣ್ಯಂ ನ ಸ್ವಾಶ್ರಯಗ್ರಾಹ್ಯಂ, ಇತಿ ಗುರುಮತಾಸಾಧಾರಣ್ಯೇನ ಪ್ರಯೋಗೋಕ್ತಿಮ್ ಉಪಲಕ್ಷಣಮ್ ಅಭಿಪ್ರೇತ್ಯ ಸಿದ್ಧಾಂತವಿರೋಧಿಪ್ರಯೋಗಾಂತರಮಾಹ-ವಿಮತಮಿತಿ ॥**

ಈ ಅನುಮಾನಗಳಲ್ಲಿ 'ಏತಜ್ಜ್ಞಾನಪ್ರಾಮಾಣ್ಯಂ' ಎಂಬ ಅನುಮಾನ ಮೀಮಾಂಸಕಮತತ್ರಯ ಸಾಧಾರಣವಾದುದು. 'ಸ್ವಾಶ್ರಯಗ್ರಾಹಕ-ಯಾವಜ್ಜ್ಞಾನಾಗ್ರಾಹ್ಯಂ' ಎಂಬ ಮೊದಲ ಅನುಮಾನ ಗುರುಭಿನ್ನ ಭಟ್ಟ-ಮಿಶ್ರಮತ ಸಾಧಾರಣವಾದುದು. ಏಕೆಂದರೆ, ಗುರುಮತದಲ್ಲಿ ಪ್ರಾಮಾಣ್ಯಾಶ್ರಯವಾದ ವ್ಯವಸಾಯವು ಸ್ವಪ್ರಕಾಶ. ಆದ್ದರಿಂದ 'ಸ್ವಾಶ್ರಯಗ್ರಾಹಕ ಯಾವಜ್ಜ್ಞಾನ' ಎನ್ನುವುದು ಗೌರವ. 'ಸ್ವಾಶ್ರಯಯಾವಜ್ಜ್ಞಾನಗ್ರಾಹ್ಯಂ' ಎಂದಿಷ್ಟೇ ಹೇಳಿದರೆ ಸಾಕು.[1]

1. **ಮಣಿಪ್ರಕಾಶದಲ್ಲಿ 'ವಿವಾದಪದಂ, ಯಾವತ್ ಸ್ವಾಶ್ರಯ ಗ್ರಾಹಕಗ್ರಾಹ್ಯಂ' ಎಂಬ ಮಣಿವಾಕ್ಯಕ್ಕೆ ಹೀಗೆ ಅವತಾರಿಕೆ ಇದೆ-'ಭಟ್ಟ-ಮಿಶ್ರಮತೇ ಸ್ವತಸ್ತ್ವಂ ನಿರಾಕರೋತಿ-ವಿವಾದೇತಿ'। ಎಂದು. ಪ್ರಕಾಶದಲ್ಲಿರುವ ಈ ವಾಕ್ಯಕ್ಕೆ ನ್ಯಾಯಶಿಖಾಮಣಿ ವ್ಯಾಖ್ಯಾನದಲ್ಲಿ ಅವತಾರಿಕೆ-ನನು ಗುರುಮತೇ ಸಾಧ್ಯೇ ಗ್ರಾಹಕಪದವೈಯರ್ಥ್ಯಂ ಇತ್ಯಾಶಂಕ್ಯ ತತ್ರೋಪಾಧ್ಯಾಯಮತಮಾಹ-ಭಟ್ಟೇತಿ ॥**

ಮಣಿಯಲ್ಲಿ ಗುರುಮತದಲ್ಲಿ ಮಾತ್ರ ಬರಬಹುದಾದ ಸ್ವತಸ್ತ್ವದ ನಿರಾಕರಣೆಯನ್ನು 'ಅನಭ್ಯಾಸದಶಾಪನ್ನಂ ಜ್ಞಾನಪ್ರಾಮಾಣ್ಯಂ ನ ಸ್ವಾಶ್ರಯಗ್ರಾಹ್ಯಂ' ಎಂದು ಮಾಡಲಾಗಿದೆ. ಇದು ಗುರುಮತ ಬಿಟ್ಟು ಭಟ್ಟ-ಮಿಶ್ರಮತಗಳಿಗೆ ಅನ್ವಯಿಸುವುದಿಲ್ಲ. ಅವರಲ್ಲಿ ಪ್ರಾಮಾಣ್ಯವು ಸ್ವಾಶ್ರಯಗ್ರಾಹ್ಯವಲ್ಲ. ಸ್ವಾಶ್ರಯವ್ಯವಸಾಯವಿಷಯಕ ಅನುವ್ಯವಸಾಯಗ್ರಾಹ್ಯ. ಗುರುಮತದಲ್ಲಿ ಜ್ಞಾನವು ಸ್ವಪ್ರಕಾಶವಾದುದರಿಂದ ಸ್ವಗತಪ್ರಾಮಾಣ್ಯ ಸ್ವಾಶ್ರಯವಾದ ವ್ಯವಸಾಯದಿಂದಲೇ ಗ್ರಾಹ್ಯ. ಅದನ್ನು ನಿರಾಕರಿಸುತ್ತಿರುವುದರಿಂದ ಈ ಅನುಮಾನ ಗುರುಮತಕ್ಕೆ ಮಾತ್ರ ಪ್ರತಿಪಕ್ಷ. ಮಣ್ಯುಕ್ತವಾದ ಈ ಅನುಮಾನ ಉಪಲಕ್ಷಣ. ಆದ್ದರಿಂದ ನಮ್ಮ ಸಿದ್ಧಾಂತಕ್ಕೂ ವಿರುದ್ಧವಾಗುವ ಅನುಮಾನಾಂತರವನ್ನು 'ವಿಮತಂ' ಎಂದು ಮೂಲದಲ್ಲಿ ಹೇಳಲಾಗಿದೆ.

**विमतं व्यवसायप्रामाण्यं, न तदनुव्यवसायवेद्यम् । तदवधिकतृतीयेत्याद्युक्तहेतुत्रयात्, अप्रामाण्यवदिति विशिष्य प्रयोक्तव्यम् । तस्मादनुमानविरुद्धानि स्वतस्त्वानुमानानि ॥**

ವ್ಯವಸಾಯಪ್ರಾಮಾಣ್ಯವು ಅನುವ್ಯವಸಾಯಾವಧಿಕ ತೃತೀಯಕ್ಷಣದಲ್ಲಿ ಸಂದೇಹವಿಷಯವಾದುದರಿಂದ ಅನುವ್ಯವಸಾಯವೇದ್ಯವಲ್ಲ. ಅಪ್ರಾಮಾಣ್ಯದಂತೆ. ಈ ಅನುಮಾನದಲ್ಲಿ ಪ್ರಥಮಾನುಮಾನೋಕ್ತ ಮೂರೂ ಹೇತುಗಳನ್ನು ಪ್ರಯೋಗಿಸಬಹುದು. ಅಲ್ಲದೆ, ಈ ಅನುಮಾನದಿಂದ ಪ್ರಾಮಾಣ್ಯದಲ್ಲಿ ಸಾಕ್ಷಾತ್ತಾಗಿ ಅನುವ್ಯವಸಾಯವಿಷಯತ್ವಾಭಾವವನ್ನೇ ವಿಶಿಷ್ಯ ಸಾಧಿಸಲಾಗಿದೆ.

ಹೀಗೆ ಈ ಅನುಮಾನಗಳಿಗೆ ಸ್ವತಸ್ತ್ವಸಾಧಕಾನುಮಾನಗಳು ವಿರುದ್ಧವಾಗಿವೆ. ಆದ್ದರಿಂದ ಅಪ್ರಮಾಣಗಳು.

## ನ್ಯಾಯದೀಪ

**ವಿಮತಮಿತಿ ॥ ಯದ್ವೇತ್ಯನುಷಂಗಃ । ಉಕ್ತರೂಪ ಸಂಶಯವಿಷಯೀಭೂತ ಪ್ರಾಮಾಣ್ಯಸ್ಯೈವ ವ್ಯವಸಾಯಪ್ರಾಮಾಣ್ಯಪದೇನ ಗ್ರಹಣಮಿತಿ ದ್ಯೋತನಾಯ ವಿಮತಮಿತ್ಯುಕ್ತಿಃ । ತಸ್ಮಾದಿತಿ ॥ ಉಕ್ತರೀತ್ಯಾ ಪ್ರಯೋಗಸಂಭವಾದಿತ್ಯರ್ಥಃ ।**

**ಸ್ವತಸ್ತ್ವೇತಿ ॥ ಸಾಮಾನ್ಯತಃ ಪ್ರಾಗುಕ್ತಸ್ವತಸ್ತ್ವಸಾಧಕಾನುಮಾನಾನಿ ಇತ್ಯರ್ಥಃ । ನತು ಸಂಶಯಾನವತಾರಸ್ಥಲೀಯ-ಪಕ್ಷಕಾನುಮಾನಾನಿ । ಮಣ್ಯಾದ್ಯುಕ್ತಾನಾಂ ಸಂಶಯ ಸ್ಥಲೀಯಪಕ್ಷಕಾಣಾಂ ಭಿನ್ನವಿಷಯತಯಾ ವಿರೋಧಾಭಾವಾತ್ ।**

**ಯದ್ವಾ, ಸಂಶಯಸ್ಥಲೇ ತಥಾತ್ವಸಿದ್ಧೌ ಅನ್ಯತ್ರಾಪಿ ತಥಾತ್ವಮೇವ ಕಲ್ಪ್ಯಮ್ । ನ ವೈರೂಪ್ಯಮ್, ಇತ್ಯಾಶಯೇನ ಸರ್ವಾನುಮಾನಾನಿ ಇತ್ಯರ್ಥಃ ।**

ಮೂಲದಲ್ಲಿ ಹಿಂದಿನಂತೆಯೇ 'ಯದ್ವಾ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. 'ವಿಮತಂ' ಎಂದರೆ 'ಸಂದೇಹವಿಷಯೀಭೂತಂ' (ಪ್ರಾಮಾಣ್ಯಂ) ಎಂದು ಅರ್ಥ. ವ್ಯವಸಾಯಪ್ರಾಮಾಣ್ಯಕ್ಕೆ ಈ ವಿಶೇಷಣವನ್ನು ಕೊಟ್ಟಿರುವುದರಿಂದ ಅನುವ್ಯವಸಾಯ ತೃತೀಯಕ್ಷಣದಲ್ಲಿ ಸಂದೇಹಕ್ಕೆ ವಿಷಯವಾದ ಪ್ರಾಮಾಣ್ಯವೇ ಪಕ್ಷ, ಎಂದು ತಿಳಿಯುತ್ತದೆ. ತಸ್ಮಾತ್ ಎಂದರೆ ಹೀಗೆ ಅನುಮಾನ ಮಾಡಬಹುದಾದ್ದರಿಂದ (ನಿಮ್ಮ ಸ್ವತಸ್ತ್ವಸಾಧಕಗಳು ಇವಕ್ಕೆ ವಿರುದ್ಧವಾಗಿವೆ) ಎಂದರ್ಥ.

ಸ್ವತಸ್ತ್ವಸಾಧಕಾನುಮಾನಗಳು ಈ ಅನುಮಾನಗಳಿಗೆ ವಿರುದ್ಧ ಎಂದರೆ ಎಲ್ಲವೂ ವಿರುದ್ಧಗಳಲ್ಲ. ಸ್ವತಸ್ತ್ವಸಾಧಕಾನುಮಾನಗಳಲ್ಲಿ ಎರಡು ಪ್ರಕಾರಗಳಿವೆ. 'ಜ್ಞಾನಪ್ರಾಮಾಣ್ಯಂ ಸ್ವತೋ ಗ್ರಾಹ್ಯಂ' ಎಂದು ಸಾಮಾನ್ಯತಃ ಎಲ್ಲ ಪ್ರಾಮಾಣ್ಯಗಳಿಗೂ ಸ್ವತಸ್ತ್ವವನ್ನು ಸಾಧಿಸುವ ಕೆಲವು ಅನುಮಾನಗಳಿವೆ. 'ಸುಖಂ ಅನುಭವಾಮಿ ಇತಿ ಪ್ರತ್ಯಯಃ' ಎಂದು ಮುಂತಾದ ಸಂದೇಹಾವಿಷಯವಾದ ಪ್ರಾಮಾಣ್ಯಗಳಿಗೆ ಸ್ವತಸ್ತ್ವವನ್ನು ಸಾಧಿಸುವ ಅನುಮಾನಗಳೂ ಇವೆ. ಅವುಗಳಲ್ಲಿ ಮೊದಲನೆಯ ವಿಧದ ಅನುಮಾನಗಳು ಪ್ರಕೃತಾನುಮಾನಗಳಿಗೆ ವಿರುದ್ಧವಾಗುತ್ತವೆ. ಆದರೆ, ಅಸಂದಿಗ್ಧ ಪ್ರಾಮಾಣ್ಯಗಳಿಗೆ ಸ್ವತಸ್ತ್ವವನ್ನು ಸಾಧಿಸುವ ಅನುಮಾನಗಳಿಗಿಂತ ಸಂದಿಗ್ಧ ಪ್ರಾಮಾಣ್ಯಗಳಿಗೆ ಪರತಸ್ತ್ವವನ್ನು ಸಾಧಿಸುವ ಪ್ರಕೃತಾನುಮಾನಗಳು ಭಿನ್ನ ವಿಷಯಕಗಳಾದುದರಿಂದ ವಿರೋಧಿಗಳಲ್ಲ.

ಅಥವಾ, ಹಿಂದಿನ ಎಲ್ಲಾ ಅನುಮಾನಗಳಿಗೂ ಪ್ರಕೃತ ಸ್ವತಸ್ತ್ವ ಸಾಧಕಾನುಮಾನಗಳು ವಿರುದ್ಧಗಳೇ ಆಗುತ್ತವೆ. ಸಂದೇಹವಿಷಯವಾದ ಪ್ರಾಮಾಣ್ಯಗಳು ಜ್ಞಾನಗ್ರಾಹಕ ಗ್ರಾಹ್ಯಗಳಲ್ಲವಾದುದರಿಂದ ಆ ದೃಷ್ಟಾಂತದಿಂದ ಸಕಲಪ್ರಾಮಾಣ್ಯಗಳೂ ಜ್ಞಾನಗ್ರಾಹಕ ಗ್ರಾಹ್ಯಗಳಲ್ಲ, ಎಂದು ಸಾಧಿಸುವುದೇ ಇಲ್ಲಿನ ಉದ್ದೇಶ. ಅದಕ್ಕೆ ಹಿಂದಿನ ಎಲ್ಲಾ ಅನುಮಾನಗಳೂ ವಿರುದ್ಧವಾಗುತ್ತವೆ.

## ನ್ಯಾಯದೀಪದಲ್ಲಿ ಅವತಾರಿಕೆ

**ದೂಷಣಸುಜ್ಞಾನತಾಯೈ ಪದಕೃತ್ಯಂ ವಿವೇಚಯತಿ–ಅತ್ರ ಸಾಧ್ಯೇತ್ಯಾದಿನಾ ॥**

ಈ ಅನುಮಾನಕ್ಕೆ ಹೇಳುವ ದೋಷಗಳ ಸರಿಯಾದ ಜ್ಞಾನಕ್ಕಾಗಿ ಪದಗಳಿಗೆ ಕೃತ್ಯವನ್ನು ಮುಂದೆ ಹೇಳುತ್ತಾರೆ.

## ಹೇತುವಿಶೇಷಣಕೃತ್ಯ

**अत्र साध्यविशेषणप्रयोजनं स्वतस्त्वनिरुक्तौ उक्तप्रायम् । आद्यहेतौ रजतत्वादिरूपेऽर्थेऽपि किंचिदवधिकतृतीयक्षण–वृत्तिसंशयविषयत्वस्य, तथा स्वाश्रयनिश्चयावधिकचतुर्थक्षणवृत्तिसंशयविषयत्वस्य,**

**तथा चैत्रीयस्वाश्रयनिश्चयावधिकतृतीयक्षणवृत्तिमैत्री-यसंशयविषयत्वस्य च सत्वात् तत्र व्यभिचारः। तद्वारणाय क्रमेण स्वाश्रयनिश्चयावधिकत्वेन, तृतीयक्षणवृत्तित्वेन, समानाधिकरणत्वेन च संशयो विशेषितः ।।**

ಮೊದಲ ಅನುಮಾನದಲ್ಲಿ ಹಿಂದೆ ನೈಯಾಯಿಕರು ನಿರುಕ್ತಿ ಮಾಡಿರುವ ಸ್ವತಸ್ತ್ವಗಳ ಅಭಾವವೇ ಸಾಧ್ಯ. ಅಲ್ಲಿರುವ ವಿಶೇಷಣಗಳಿಗೆ ಕೃತ್ಯವನ್ನು ಸ್ವತಸ್ತ್ವನಿರುಕ್ತಿಯಲ್ಲಿ ಹೇಳಿದಂತೆ ಆಗಿದೆ.

ಮೂರು ಹೇತುಗಳಲ್ಲಿ ಮೊದಲನೆಯ ಹೇತುವಿನಲ್ಲಿರುವ ವಿಶೇಷಣಗಳು ಮೂರು–

1. ಸ್ವಾಶ್ರಯನಿಶ್ಚಯಾವಧಿಕ–ಇದು ತೃತೀಯ ಕ್ಷಣಕ್ಕೆ ವಿಶೇಷಣ (ಪರಂಪರಯಾ ಸಂದೇಹಕ್ಕೆ)

2. ತೃತೀಯಕ್ಷಣವೃತ್ತಿ–ಸಂದೇಹಕ್ಕೆ ವಿಶೇಷಣ.

3. ಸಮಾನಾಧಿಕರಣ – ಸಂದೇಹಕ್ಕೆ ವಿಶೇಷಣ.

ಸ್ವಾಶ್ರಯಾವಧಿಕ – ತೃತೀಯಕ್ಷಣ –ವೃತ್ತಿ–ಸಮಾನಾಧಿಕರಣ–ಸಂಶಯಕೋಟಿತ್ವಾತ್, ಇದು ಪ್ರಥಮ ಹೇತು.

1. ಮೊದಲ ವಿಶೇಷಣ ಬಿಟ್ಟರೆ ಸಾಮಾನ್ಯವ್ಯಾಪ್ತಿಗೆ ರಜತತ್ವದಲ್ಲಿ ವ್ಯಭಿಚಾರ. 'ಇದಂ ರಜತಂ' ಎಂದು ರಜತತ್ವದ ನಿಶ್ಚಯ ಬಂದು ಅನೇಕ ಕ್ಷಣಗಳ ನಂತರ 'ಇದಂ ರಜತಂ ನ ವಾ' ಎಂಬ ಸಂದೇಹ ಬರುತ್ತದೆ. ಆ ಸಂದೇಹವೂ ಯಾವುದೊ ಒಂದು ಜ್ಞಾನಕ್ಕಿಂತ ಮೂರನೆಯ ಕ್ಷಣದಲ್ಲಿ, ನಿಶ್ಚಯವಿರುವ ವ್ಯಕ್ತಿಗೆ ಬಂದಿರುವ ಸಮಾನಾಧಿಕರಣವಾದ ಸಂದೇಹ. ಅಂತಹ ಸಂದೇಹ ವಿಷಯತ್ವ ರಜತತ್ವದಲ್ಲಿ ಇದೆ. ಆದರೆ ವ್ಯವಸಾಯ ಅಗ್ರಾಹ್ಯತ್ವ ಅದರಲ್ಲಿ ಇಲ್ಲ. ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ಮೊದಲ ವಿಶೇಷಣ.

2. ಎರಡನೆಯ ವಿಶೇಷಣ ಬಿಟ್ಟರೂ ರಜತತ್ವದಲ್ಲೇ ವ್ಯಭಿಚಾರ. ಏಕೆಂದರೆ, ರಜತತ್ವ ನಿಶ್ಚಯೋತ್ತರ ಚತುರ್ಥಕ್ಷಣದಲ್ಲಿ ರಜತತ್ವಸಂದೇಹ ಬರುತ್ತದೆ. ಅದಕ್ಕಾಗಿ ಎರಡನೆಯ ವಿಶೇಷಣ.

3. ಚೈತ್ರನಿಗೆ ರಜತತ್ವಪ್ರಕಾರಕ ನಿಶ್ಚಯದ ತೃತೀಯಕ್ಷಣದಲ್ಲಿ ಮೈತ್ರನಿಗೆ 'ಇದಂ ರಜತಂ ನ ವಾ' ಎಂಬ ಸಂದೇಹ ಬರುತ್ತದೆ. ಅದರ ಪರಿಹಾರಕ್ಕಾಗಿ ಸಮಾನಾಧಿಕರಣ–ಎಂಬ ವಿಶೇಷಣವಿದೆ.

## ನ್ಯಾಯದೀಪ–ಸಾಧ್ಯವಿಶೇಷಣಕೃತ್ಯ

**ಸ್ವತಸ್ತ್ವನಿರುಕ್ತೌ ಇತಿ ।। ಪರೋಕ್ತಸ್ವತಸ್ತ್ವನಿರುಕ್ತಿ–ಭಂಗಪ್ರಸ್ತಾವೇ ಇತ್ಯರ್ಥಃ।**

**ಆದ್ಯೇ ಪೂರ್ವದಲದ್ವಯೇನ 'ತವ ಘಟತ್ವಪ್ರಕಾರಕಂ ಜ್ಞಾನಮ್' 'ತವ ಘಟತ್ವವದ್ ವಿಶೇಷ್ಯಕಂ ಜ್ಞಾನಮ್' ಇತಿ ಶಾಬ್ದಜ್ಞಾನಯೋಃ ಸಿದ್ಧಸಾಧನನಿರಾಸಃ। ಯಾವದಿತ್ಯುಕ್ತ್ಯಾ ನ್ಯಾಯಮತೇ ಪಂಚಮಾನುವ್ಯವಸಾಯಾದೌ ಬಾಧನಿರಾಸಃ ಫಲಮ್।**

ಹಿಂದಿನ ಪರೋಕ್ತ ಸ್ವತಸ್ತ್ವನಿರುಕ್ತಿಭಂಗ ಪ್ರಕರಣದಲ್ಲಿ (ಪ್ರಕರಣ-2) ಸಾಧ್ಯಘಟಕ ವಿಶೇಷಗಳಿಗೆ ಪ್ರಯೋಜನವನ್ನು ಹೇಳಿದೆ.

ವ್ಯವಸಾಯಪ್ರಕಾರ ಪ್ರಕಾರಕತ್ವೇನ, ತಾದೃಶಪ್ರಕಾರವದ್ವಿಶೇಷ್ಯಕತ್ವೇನ ಸ್ವಾಶ್ರಯಗ್ರಾಹಕ-ಯಾವದ್ ಜ್ಞಾನಾಗ್ರಾಹ್ಯಮ್, ಇದು ಮೊದಲನೆಯ ಸಾಧ್ಯ.

1. ಇಲ್ಲಿ ವ್ಯವಸಾಯವನ್ನು ತತ್‌ಪ್ರಕಾರಕತ್ವೇನ, ತದ್ವದ್ವಿಶೇಷ್ಯಕತ್ವೇನ ಅನುವ್ಯವಸಾಯವು ಗ್ರಹಣ ಮಾಡಬೇಕು ಎಂಬುದು ಮೊದಲ ವಿಶೇಷಣ. ಈ ವಿಶೇಷಣದಲ್ಲಿ ತದ್ವದ್ವಿಶೇಷ್ಯಕತ್ವೇನ, ಎಂಬ ನಿಬಂಧನೆಯನ್ನು ಬಿಟ್ಟರೆ 'ತವ ಘಟತ್ವಪ್ರಕಾರಕಂ ಜ್ಞಾನಮ್ ಅಸ್ತಿ' ಎಂಬ ಶಾಬ್ದಜ್ಞಾನವೂ ಸಂಗ್ರಹವಾಗುತ್ತದೆ. ತದ್‌ಗ್ರಾಹ್ಯತ್ವಾಭಾವವು ಘಟಪ್ರಾಮಾಣ್ಯಕ್ಕೆ ಸಿದ್ಧವಾಗಿದೆ, ಸಿದ್ಧಸಾಧನತಾ ದೋಷ.

ತತ್‌ಪ್ರಕಾರಕತ್ವೇನ ಎಂಬ ಅಂಶವನ್ನು ಬಿಟ್ಟರೆ 'ಘಟತ್ವವದ್ ವಿಶೇಷ್ಯಕಂ ಜ್ಞಾನಂ ತವ ಅಸ್ತಿ' ಎಂಬ ಶಾಬ್ದಬೋಧದಲ್ಲಿ ಘಟಪ್ರಾಮಾಣ್ಯವಿಷಯಕತ್ವಾಭಾವವು ಸಿದ್ಧವಾದುದರಿಂದ ಸಿದ್ಧಸಾಧನತಾ.

2. ಯಾವದ್-ಜ್ಞಾನಗ್ರಾಹ್ಯಮ್-ಎಂದು ಜ್ಞಾನಕ್ಕೆ ಯಾವತ್ವವಿಶೇಷಣವನ್ನು ಕೊಡದಿದ್ದರೆ ನ್ಯಾಯಮತದಲ್ಲಿ ವ್ಯವಸಾಯ ಗ್ರಾಹಕವಾದ ಪಂಚಮಾನುವ್ಯವಸಾಯದಲ್ಲಿ ಪ್ರಾಮಾಣ್ಯ ವಿಷಯಕತ್ವವನ್ನು ಅಂಗೀಕರಿಸಿದ್ದಾರೆ. ತದಭಾವವನ್ನು ಸಾಧನೆ ಮಾಡಿದರೆ ಬಾಧ. ಯಾವತ್ ಪದವಿದ್ದರೆ ತಾದೃಶಯಾವದ್‌ಜ್ಞಾನದಲ್ಲಿ ಸೇರಿರುವ ಪ್ರಥಮಾನುವ್ಯವಸಾಯದಲ್ಲಿ ಪ್ರಾಮಾಣ್ಯವಿಷಯಕತ್ವ ಇಲ್ಲದಿರುವುದರಿಂದ ಬಾಧ ಇಲ್ಲ.

## ನ್ಯಾಯದೀಪ-ದ್ವಿತೀಯ ಸಾಧ್ಯವಿಶೇಷಣಕೃತ್ಯ

**ದ್ವಿತೀಯೇ 1. ಆದ್ಯೇನ ಜ್ಞಾನಪದೇನ ತತ್‌ಪದಸ್ಯ ಪ್ರಾಮಾಣ್ಯಪರಾಮರ್ಶಿತಾ-ಪತ್ತ್ಯಾ ಬಾಧನಿರಾಸಃ (ಫಲಮ್)**

**2. ದ್ವಿತೀಯೇನ ತು ವ್ಯಾಪಾರಾನುಬಂಧಿತಯಾ ತಾದೃಶಾತ್ಮಾದಿನಾ ಅಪ್ರಸಿದ್ಧಿ ನಿರಾಸಃ ಫಲಮ್।**

**3. ತೃತೀಯೇನಾಪಿ ವ್ಯಾಪಾರಾನುಬಂಧಿತಯಾ ಆತ್ಮಾದಿಗ್ರಾಹ್ಯತಯಾ ಬಾಧ ನಿರಾಸಃ ಫಲಮ್ ।**

**4. ಸಮಾನಾಧಿಕರಣ-ಪದದ್ವಯೇನ ತಾದೃಶೇಶ್ವರಜ್ಞಾನಗ್ರಾಹ್ಯತಯಾ ತದಗ್ರಾಹ್ಯತ್ವಾಭಾವಾತ್ ಬಾಧನಿರಾಸಃ ಫಲಮ್, ಇತಿ ಉಕ್ತಪ್ರಾಯಮ್ ಇತ್ಯರ್ಥಃ ।**

ಎರಡನೆಯ ಸಾಧ್ಯ-ತಜ್ಜ್ಞಾನವಿಷಯಕ-ಸಮಾನಾಧಿಕರಣ-ಜ್ಞಾನಾಜನ್ಯ-ಸಮಾನಾಧಿ ಕರಣ-ಜ್ಞಾನಾಪ್ರಕಾರೋ ವಾ, ಎಂದು.

1. ಇದರಲ್ಲಿ ಮೊದಲನೆಯ ಜ್ಞಾನಪದವನ್ನು ಬಿಟ್ಟರೆ-'ತದ್ವಿಷಯಕ' ಎಂದಾಗುತ್ತದೆ. ಪಕ್ಷತ್ವೇನ ಪೂರ್ವಪ್ರಕೃತವಾದುದು ಪ್ರಾಮಾಣ್ಯವಾದುದರಿಂದ ಅದೇ ತತ್‌ಪದಗ್ರಾಹ್ಯವಾಗುತ್ತದೆ. ಆಗ ಪ್ರಾಮಾಣ್ಯವಿಷಯಕಜ್ಞಾನಾಜನ್ಯ ಜ್ಞಾನ ಎಂದರೆ ಪ್ರಾಮಾಣ್ಯಜ್ಞಾನ. ಅದರಲ್ಲಿ ಪ್ರಾಮಾಣ್ಯವು ಪ್ರಕಾರವಲ್ಲ ಎಂದು ಸಾಧಿಸಿದರೆ ಬಾಧ. ಜ್ಞಾನಪದವಿದ್ದರೆ ತಜ್ಜ್ಞಾನ ಎಂದರೆ ಜಲಜ್ಞಾನ. ತದ್ವಿಷಯಕಜ್ಞಾನ ಎಂದರೆ ಜಲಜ್ಞಾನದ ಅನುವ್ಯವಸಾಯ. ಅದರಲ್ಲಿ ಪ್ರಾಮಾಣ್ಯವು ಅವಿಷಯ ಎಂದಂತಾಗುತ್ತದೆ. ಬಾಧವಿಲ್ಲ.

2. ಎರಡನೆಯ ಜ್ಞಾನಪದ ಬಿಟ್ಟರೆ-ತಜ್ಜ್ಞಾನವಿಷಯಕ-ಸಮಾನಾಧಿಕರಣಾಜನ್ಯ ಎಂದಾಗು ತ್ತದೆ. ಆಗ ಅಪ್ರಸಿದ್ಧಿ. ಜಲಜ್ಞಾನವಿಷಯಕನಾದವನು, ವ್ಯಾಪಾರಾನುಬಂಧಿತಯಾ ಆತ್ಮನೂ ಆಗಿದ್ದಾನೆ. ತದಜನ್ಯವಾದ ಜ್ಞಾನ ಅಪ್ರಸಿದ್ಧ. ಜ್ಞಾನಪದವನ್ನು ಕೊಟ್ಟರೆ, ಜಲಜ್ಞಾನವಿಷಯಕ ಜ್ಞಾನವೆಂದರೆ ಜಲಜ್ಞಾನದ ಅನುವ್ಯವಸಾಯ. ಅದರಿಂದ ಅಜನ್ಯವಾದುದು ಆದೆ. ಅಪ್ರಸಿದ್ಧಿ ಇಲ್ಲ.

3. ಮೂರನೆಯ ಜ್ಞಾನಪದ ಬಿಟ್ಟರೂ ಅಪ್ರಸಿದ್ಧಿ. ತಾದೃಶಾನುವ್ಯವಸಾಯದಿಂದ ಅಜನ್ಯನಾದವನು ಆತ್ಮ. ವ್ಯಾಪಾರಾನುಬಂಧಿತಯಾ ಆತ್ಮನಿಂದ ಪ್ರಾಮಾಣ್ಯವು ಗ್ರಾಹ್ಯವೇ ಆಗಿದೆ. ಅದರ ಪರಿಹಾರಕ್ಕಾಗಿ ಜ್ಞಾನಪದಬೇಕು.

4. ಸಾಧ್ಯದಲ್ಲಿ ಸಮಾನಾಧಿಕರಣ ಪದಗಳು ಎರಡಿವೆ. ಮೊದಲನೆಯದನ್ನು ಬಿಟ್ಟರೆ ನಮ್ಮ ವ್ಯವಸಾಯ ವಿಷಯಕವಾದ ಈಶಜ್ಞಾನದಿಂದ ಜನ್ಯವಾದುದರಿಂದ ಅನುವ್ಯವಸಾಯದ ಸಂಗ್ರಹವಾಗಲಿಕ್ಕಿಲ್ಲ.

ಎರಡನೆಯ ಸಮಾನಾಧಿಕರಣಪದ ಬಿಟ್ಟರೆ ನಮ್ಮ ಅನುವ್ಯವಸಾಯದಿಂದ ಅಜನ್ಯವಾದ ಈಶಜ್ಞಾನದಿಂದ ಪ್ರಾಮಾಣ್ಯವು ಗ್ರಾಹ್ಯವಾದುದರಿಂದ ಬಾಧ. ಅದಕ್ಕಾಗಿ ಎರಡೂ ಸಮಾನಾಧಿ ಕರಣ ಪದಗಳು ಬೇಕು.

ಹೀಗೆ ಈ ಕೃತ್ಯಗಳು ಹಿಂದೆ ಎರಡನೆಯ ಪ್ರಕರಣದಲ್ಲಿ ಉಕ್ತಪ್ರಾಯ.

## ನ್ಯಾಯದೀಪದಲ್ಲಿ ಅವತಾರಿಕೆ

**ಉಕ್ತಾರ್ಥಪರಿಜ್ಞಾನಾಯ ಪಕ್ಷಧರಾದ್ಯುಕ್ತತದೀಯಪ್ರಕ್ರಿಯಾಮಾಹ– ಪ್ರಥಮಮಿತಿ ॥**

ಅನುಮಾನದ ಸೂಕ್ಷ್ಮಾಂಶದ ಪರಿಜ್ಞಾನಕ್ಕಾಗಿ ಮಣಿವ್ಯಾಖ್ಯಾನಕಾರರಾದ ಪಕ್ಷಧರ ಮಿಶ್ರರು ಹೇಳಿರುವ ನ್ಯಾಯಪ್ರಕ್ರಿಯೆಯನ್ನು ಮುಂದೆ ಹೇಳುತ್ತಾರೆ.

**प्रथमं व्यवसायः, अनन्तरं ज्ञानत्वनिर्विकल्पकं विना ज्ञानांशे निर्विकल्पकस्य, घटांशे सविकल्पकस्य नरसिंहाकारस्य धर्मिज्ञानरूपस्यानुव्यवसायस्योत्पत्तिः, अनन्तरं द्वितीये तदनुव्यवसायस्य स्थितिक्षणे कोटिस्मरणम्, अनन्तरं तृतीयक्षणे प्रामाण्यसंदेहः, तदनन्तरं चतुर्थक्षणेऽर्थसंदेह इति स्थितिः ॥**

ಜಲಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹ ಬರುವ ಕ್ರಮ ಹೀಗೆ–

1. ಮೊದಲು–ವ್ಯವಸಾಯ. ಅಂದರೆ, ಇದಂ ಜಲಂ, ಎಂಬ ಜ್ಞಾನ.

2. ಆಮೇಲೆ–'ಜಲಜ್ಞಾನವಾನಹಂ' ಎಂಬ ಅನುವ್ಯವಸಾಯ.

ಈ ಅನುವ್ಯವಸಾಯದಲ್ಲಿ, ಜಲಜ್ಞಾನವೂ ಘಟತ್ವಪ್ರಕಾರಕತ್ವೇನ, ಪುರೋವೃತ್ತಿ ವಿಶೇಷ್ಯಕತ್ವೇನ ವಿಷಯ. ಆದರೆ ಜ್ಞಾನತ್ವೇನ ವಿಷಯವಲ್ಲ. ಆದ್ದರಿಂದ ಅನುವ್ಯವಸಾಯವು ಜಲತ್ವಪ್ರಕಾರಕತ್ವ–ಪುರೋವೃತ್ತಿ ವಿಶೇಷ್ಯಕತ್ವಾಂಶೇ ಸವಿಕಲ್ಪಕ. ಇಲ್ಲಿ ಜ್ಞಾನವು ಜ್ಞಾನತ್ವೇನ ವಿಷಯ ಅಲ್ಲ, ಏಕೆಂದರೆ, ಅನುವ್ಯವಸಾಯಕ್ಕಿಂತ ಮೊದಲು ಜ್ಞಾನತ್ವದ ನಿರ್ವಿಕಲ್ಪಕಾತ್ಮಕವಾದ ವಿಶೇಷಣಜ್ಞಾನ ಇಲ್ಲ. ಆದ್ದರಿಂದ ಅನುವ್ಯವಸಾಯವು ಒಂದಂಶದಲ್ಲಿ ನಿರ್ವಿಕಲ್ಪಕ. ನರಸಿಂಹದೇವ ನರನೂ ಸಿಂಹನೂ ಆದಂತೆ ಈ ಜ್ಞಾನವು ಅಂಶಭೇದೇನ ನಿರ್ವಿಕಲ್ಪಕವೂ ಸವಿಕಲ್ಪಕವೂ ಆಗಿದೆ.

ಜಲಜ್ಞಾನವು ಮುಂದೆ ಬರುವ ಪ್ರಾಮಾಣ್ಯಸಂದೇಹದಲ್ಲಿ ಧರ್ಮಿಯಾದುದರಿಂದ ಈ ಅನುವ್ಯವಸಾಯವು ಸಂದೇಹಕ್ಕೆ ಕಾರಣವಾದ ಧರ್ಮಿಜ್ಞಾನರೂಪವಾಗಿದೆ.

3. ಮೂರನೆಯ ಕ್ಷಣದಲ್ಲಿ ಅಂದರೆ, ಅನುವ್ಯವಸಾಯದ ಎರಡನೆಯ ಕ್ಷಣದಲ್ಲಿ ಪ್ರಾಮಾಣ್ಯಾ, ಪ್ರಾಮಾಣ್ಯರೂಪವಾದ ಕೋಟಿದ್ವಯಗಳ ಸ್ಮರಣೆ. ಆಗ ದ್ವಿಕ್ಷಣಾವಸ್ಥಾಯಿಯಾದುದರಿಂದ ಅನುವ್ಯವಸಾಯವೂ ಇದೆ. ಆದ್ದರಿಂದ ಸಂದೇಹಕ್ಕೆ ಬೇಕಾದ ಸಾಮಗ್ರೀ ಸಂಪನ್ನವಾಯಿತು.

4. ನಾಲ್ಕನೆಯ ಅರ್ಥಾತ್, ಅನುವ್ಯವಸಾಯಾಪೇಕ್ಷಯಾ ಮೂರನೆಯ ಕ್ಷಣದಲ್ಲಿ 'ಜಲಜ್ಞಾನಂ ಪ್ರಮಾಣಂ ನ ವಾ' ಎಂಬ ಸಂದೇಹ ಹುಟ್ಟುತ್ತದೆ.

5. ಅನುವ್ಯವಸಾಯದ ನಾಲ್ಕನೆಯ ಕ್ಷಣದಲ್ಲಿ 'ಇದಂ ಜಲಂ ನ ವಾ' ಎಂಬ ಅರ್ಥ ಸಂದೇಹ ಹುಟ್ಟುತ್ತದೆ. ಈ ಅರ್ಥಸಂದೇಹವು ಅನುವ್ಯವಸಾಯಗತಪ್ರಾಮಾಣ್ಯಸಂದೇಹ ಆಧೀನ ವಾದುದು.

ಹೀಗೆ ಅನುವ್ಯವಸಾಯದ ತೃತೀಯಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರುತ್ತದೆ. ಒಂದುವೇಳೆ ಸ್ವತಸ್ತ್ವವಾದಿಗಳು ಹೇಳುವಂತೆ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಿದ್ದಿದ್ದರೆ, ಈ ಸಂದೇಹ ಬರಲಾರದು. ಆದ್ದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯಭಾನ ಇಲ್ಲ.

## ನ್ಯಾಯದೀಪ

**ನಿರ್ವಿಕಲ್ಪಕಸ್ಯೇತಿ ॥ ಜ್ಞಾನತ್ವವೈಶಿಷ್ಟ್ಯಾವಿಷಯಕಸ್ಯೇತ್ಯರ್ಥಃ । ಸವಿಕಲ್ಪಕ ಸ್ಯೇತಿ ॥ ಘಟತ್ವಪ್ರಕಾರಕತ್ವ–ಪುರೋವೃತ್ತಿವಿಶೇಷ್ಯಕತ್ವವಿಷಯಕಸ್ಯ ಇತ್ಯರ್ಥಃ । ಸಂಶಯಹೇತುತ್ವೋಪಪಾದನಾಯ ಏವಮುಕ್ತಿಃ । ಘಟಾಂಶೇಽಪಿ ನಿರ್ವಿಕಲ್ಪಕಸ್ಯ ತದಯೋಗಾತ್ ।**

**ಕೋಟೀತಿ ॥ ಕೋಟಿದ್ವಯಸ್ಮರಣಂ ಸಮೂಹಾಲಂಬನರೂಪಮ್ ಇತ್ಯರ್ಥಃ । ಸಾಧಾರಣಧರ್ಮದರ್ಶನರೂಪ – ಧರ್ಮಿಜ್ಞಾನಸ್ಯ ಉಭಯಕೋಟಿ ಸಾಧಾರಣ್ಯಾತ್ ಇತಿ ಭಾವಃ ।**

**ಅರ್ಥೇತಿ ॥ 'ಇದಂ ರಜತಂ ನ ವಾ' ಇತ್ಯೇವಂರೂಪೇಣ ಅರ್ಥಸಂದೇಹಃ ಇತ್ಯರ್ಥಃ । ಅರ್ಥಘಟಿತ–ಪೂರ್ವಭಾವಿ–ಪ್ರಾಮಾಣ್ಯಸಂದೇಹಸ್ಯೈವ ಕೋಟಿಸ್ಮೃತಿರೂಪತ್ವಾತ್ ಚತುರ್ಥಕ್ಷಣೇ ಅರ್ಥಸಂದೇಹಃ, ಇತಿ ಭಾವಃ ।**

ಅನುವ್ಯವಸಾಯವು ಜ್ಞಾನಾಂಶದಲ್ಲಿ ನಿರ್ವಿಕಲ್ಪಕ ಹೊರತು ಸರ್ವಥಾ ನಿರ್ವಿಕಲ್ಪಕವಲ್ಲ. ಜ್ಞಾನತ್ವವೈಶಿಷ್ಟ್ಯವು ಅದರಲ್ಲಿ ತೋರುವುದಿಲ್ಲ. ಆದಕಾರಣ ಅದು ನಿರ್ವಿಕಲ್ಪಕ. ಅದೇ ಜ್ಞಾನಾಂಶ ದಲ್ಲಿ ಘಟತ್ವಪ್ರಕಾರಕತ್ವ ಮತ್ತು ಪುರೋವೃತ್ತಿವಿಶೇಷ್ಯಕತ್ವಗಳ ವೈಶಿಷ್ಟ್ಯವು ತೋರುವುದರಿಂದ ಅದು ಸವಿಕಲ್ಪಕ. ಹೀಗೆ, ಸವಿಕಲ್ಪಕತ್ವವನ್ನು ಸಮರ್ಥಿಸಿರುವುದು ಅನುವ್ಯವಸಾಯಕ್ಕೆ ಸಂದೇಹ ಹೇತುತ್ವವನ್ನು ಉಪಪಾದನೆ ಮಾಡುವುದಕ್ಕಾಗಿ, ಸಂದೇಹಕ್ಕೆ ಸವಿಕಲ್ಪಕಧರ್ಮಿಜ್ಞಾನವೇ ಹೇತು. (ನಿಷ್ಪ್ರಕಾರಕಂ ಧರ್ಮಿಜ್ಞಾನಂ ನ ಸಂಶಯ ಹೇತುಃ, ಕಿಂತು ಸಪ್ರಕಾರಕಮೇವ–ರುಚಿದತ್ತಮಿಶ್ರ) ಆದ್ದರಿಂದ, ಅನುವ್ಯವಸಾಯವು ಘಟಾಂಶೇಽಪಿ ನಿರ್ವಿಕಲ್ಪಕವಾದಲ್ಲಿ ಅದು ಸಂದೇಹಕ್ಕೆ ಕಾರಣವೇ ಆಗಲಿಕ್ಕಿಲ್ಲ.

ಅನಂತರ ಬರುವ ಪ್ರಾಮಾಣ್ಯ–ಅಪ್ರಾಮಾಣ್ಯಗಳ ಸ್ಮರಣೆಯು ಸಮೂಹಾಲಂಬನಾತ್ಮಕ ವಾದುದು. ಏಕೆಂದರೆ, ಜ್ಞಾನತ್ವರೂಪ ಸಾಧಾರಣಧರ್ಮದ ದರ್ಶನವು ಎರಡು ಕೋಟಿಗಳ

ಸ್ಮರಣೆಗೂ ಸಮಾನವಾಗಿ ಕಾರಣವಾಗಿದೆ. (ಇಲ್ಲಿ ಕೋಟಿ ಸಹಚರಿತತ್ವಾಂಶದಲ್ಲಿ ಜ್ಞಾನತ್ವವು ಧರ್ಮಿಯಾದ್ದರಿಂದ ಸಾಧಾರಣಧರ್ಮರೂಪ ಧರ್ಮಿಜ್ಞಾನ ಎಂದು ನ್ಯಾಯದೀಪದಲ್ಲಿ ಹೇಳಲಾಗಿದೆ. ಅದು ಅನುವ್ಯವಸಾಯದಲ್ಲಿ ಜ್ಞಾನದಲ್ಲಿ ಧರ್ಮವಾಗಿ ತೋರುವುದಿಲ್ಲ, ಸ್ವಯಂ ಧರ್ಮಿಯಾಗಿ ತೋರುತ್ತದೆ)

ಕೊನೆಯಲ್ಲಿ ಅರ್ಥಸಂದೇಹ ಬರುತ್ತದೆ– ''ಇದಂ ರಜತಂ ನ ವಾ'' ಎಂದು. ಈ ಅರ್ಥಸಂದೇಹಕ್ಕೆ ರಜತತ್ವ–ರಜತತ್ವಾಭಾವಕೋಟಿಗಳ ಸ್ಮರಣೆ ಕಾರಣ. ಮೊದಲು ಬಂದಿರುವ ಪ್ರಾಮಾಣ್ಯಸಂದೇಹವೇ ಆ ಕೋಟಿಸ್ಮರಣಾತ್ಮಕ. ಪ್ರಾಮಾಣ್ಯಸಂದೇಹದ ವಿಧಿಕೋಟಿಯಲ್ಲಿ (ರಜತತ್ವವತಿ ರಜತತ್ವಪ್ರಕಾರಕತ್ವ) ರಜತತ್ವ ಸೇರಿದೆ. ನಿಷೇಧಕೋಟಿಯಲ್ಲಿ (ರಜತತ್ವಾಭಾವವತಿ ರಜತತ್ವಪ್ರಕಾರಕತ್ವ) ರಜತತ್ವಾಭಾವ ಸೇರಿದೆ. ಹೀಗೆ ಕೋಟಿಸ್ಮೃತಿ ಇರುವುದರಿಂದ ಅರ್ಥಸಂದೇಹ ಬರಬಹುದು.

**द्वितीयहेतावपि तृतीये प्रमाण्यसंदेहक्षणेऽनुव्यवसायनाशात् प्रामाण्य-संशयघटिता याऽर्थसंदेहसामग्री तस्या अनुव्यवसायसमकालीनत्वं नास्तीति नार्थे व्यभिचारः । नतु स्वाश्रयविषयकनिश्चय-समानकालीनसंशयविषयत्वं हेतुः । प्रामाण्यसंशयोत्पत्तिक्षणेऽनुव्यव-सायस्य नाशेनासिद्धेः ।**

ಎರಡನೆಯ ಹೇತು – ಸ್ವಾಶ್ರಯವಿಷಯಕ – ನಿಶ್ಚಯಸಮಾನಕಾಲೀನ – ಸಾಮಗ್ರೀಜನ್ಯ ಸಂಶಯವಿಷಯತ್ವಾತ್।

ಈ ಹೇತುವಿಗೆ ಅರ್ಥಸಂದೇಹದಲ್ಲಿ ವ್ಯಭಿಚಾರಶಂಕೆಯನ್ನು ಮೂಲದಲ್ಲಿ ಪರಿಹಾರ ಮಾಡಲಾಗಿದೆ. ಚತುರ್ಥಕ್ಷಣದಲ್ಲಿ ಅರ್ಥಸಂದೇಹ ಬರಬೇಕಾದರೆ ತೃತೀಯಕ್ಷಣದಲ್ಲಿ ಆ ಸಂದೇಹಕ್ಕೆ ಬೇಕಾದ ಸಾಮಗ್ರೀ ಇರಬೇಕು. ಆ ಸಾಮಗ್ರಿಯು ಅರ್ಥನಿಶ್ಚಯ ಸಮಕಾಲೀನವಾಗಿರಬಾರದು. ಅನುವ್ಯವಸಾಯವು ಅರ್ಥನಿಶ್ಚಯಾತ್ಮಕವೂ ಆಗಿದೆ. ಆದರೆ, ಅದು ದ್ವಿಕ್ಷಣಾವಸ್ಥಾಯಿ ಯಾದುದರಿಂದ ಪ್ರಾಮಾಣ್ಯಸಂದೇಹ ಕಾಲದಲ್ಲಿ ನಾಶವಾಗಿದೆ. ಆದ್ದರಿಂದ ಅರ್ಥಸಂದೇಹ ಸಾಮಗ್ರಿಯು ಅರ್ಥನಿಶ್ಚಯ ಸಮಾನಕಾಲೀನವಲ್ಲವಾದ ಕಾರಣ ಅರ್ಥಸಂದೇಹದಲ್ಲಿ ಪ್ರಕೃತ ಹೇತು ಇಲ್ಲ, ವ್ಯಭಿಚಾರ ಇಲ್ಲ.

ಇದರ ಮೇಲೆ ಪ್ರಶ್ನೆ– ಸಂದೇಹಸಾಮಗ್ರಿಯು ನಿಶ್ಚಯ–ಸಮಾನಕಾಲೀನ ಎಂದೇಕೆ ಹೇಳಬೇಕು? ಸಂದೇಹವೇ ನಿಶ್ಚಯಸಮಾನಕಾಲೀನ ಎಂದು ಹೇಳಿ ತಾದೃಶ ಸಂದೇಹಾವಿಷಯತ್ವಂ ಎಂದು ಹೇತು ಮಾಡಬಹುದಲ್ಲ? ಏವಂಚ, ಹೇತುವಿನಲ್ಲಿ ಸಾಮಗ್ರೀಜನ್ಯತ್ವವಿಶೇಷಣ ವ್ಯರ್ಥ, ಎಂದು. ಹೀಗೆ ಮಾಡಿದರೆ ಪ್ರಾಮಾಣ್ಯದಲ್ಲಿ ಹೇತು ಬರದೆ ಅಸಿದ್ಧಿದೋಷ ಬರುತ್ತದೆ. ಹಿಂದೆ

ತೋರಿಸಿರುವ ಕ್ರಮದಲ್ಲಿ ಪ್ರಾಮಾಣ್ಯ ಸಂದೇಹಕಾಲದಲ್ಲಿ ಸ್ವತಸ್ತ್ವವಾದಿಗಳು ಪ್ರಾಮಾಣ್ಯ ನಿಶ್ಚಯಾತ್ಮಕ ಎಂದು ಹೇಳುವ ಅನುವ್ಯವಸಾಯವು ನಾಶವಾಗಿದೆ. ಹೀಗಾಗಿ ಈ ಸಂದೇಹವು ಪ್ರಾಮಾಣ್ಯ ನಿಶ್ಚಯಕಾಲೀನವಲ್ಲ. ನಿಶ್ಚಯಕಾಲೀನ ಸಂದೇಹವಿಷಯತ್ವವು ಪ್ರಾಮಾಣ್ಯದಲ್ಲಿ ಬರಲಿಲ್ಲ, ಅಸಿದ್ಧಿ. ಆದ್ದರಿಂದ ಸಂದೇಹ ಸಾಮಗ್ರಿಯೇ ನಿಶ್ಚಯ ಸಮಾನಕಾಲೀನ, ಎಂದು ಹೇಳಬೇಕು.

## ನ್ಯಾಯದೀಪ

**ಪ್ರಾಮಾಣ್ಯಸಂಶಯಘಟಿತೇತಿ ॥ ಕೋಟಿಸ್ಮೃತಿರೂಪತ್ವಾತ್ ತಸ್ಯ ತದ್‌ಘಟಿತಾ ಮನಃಸಂಯೋಗಾದಿರೂಪಾ ಯಾ ಸಾಮಗ್ರೀ ಇತ್ಯರ್ಥಃ ।**

**ಸಾಮಗ್ರೀಜನ್ಯೇತಿ ವಿಶೇಷಣಂ ವ್ಯರ್ಥಂ, ಏವಂಚ ನಾರ್ಥೇಽನೈಕಾಂತ್ಯಂ ಇತ್ಯಾಶಂಕ್ಯ ತತ್‌ಸಾರ್ಥಕ್ಯಂ ವಕ್ತುಮಾಹ–ನತ್ವಿತಿ ॥ ದ್ವಿತೀಯಹೇತುಃ; ಮಣಿಕೃದಭಿಮತ ಏವ ಉತ್‌ಪ್ರೇಕ್ಷಿತಃ, ನ ಸಾಕ್ಷಾದುಕ್ತಃ ಇತಿ ಏವಮೇವ ತಸ್ಯಾಭಿಮತಿಃ, ಕಿಂ ಸಾಮಗ್ರೀಪದಪ್ರಕ್ಷೇಪೇಣ ಇತ್ಯತೋ ಅಸಿದ್ಧಿರೂಪ ಬಾಧಕೋಪದರ್ಶನಂ ಏತತ್‌ಕೃತಮ್ । ಅಸಿದ್ಧಿವಾರಕತ್ವೇಽಪಿ ಯಥೋಕ್ತ–ವಿಶೇಷಣ–ವಿಶೇಷ್ಯಭಾವೇ ನ ವೈಯರ್ಥ್ಯಂ ಇತಿ ಭಾವಃ ।**

ಚತುರ್ಥಕ್ಷಣದಲ್ಲಿ ಬರುವ ಅರ್ಥಸಂದೇಹಕ್ಕೆ ಪ್ರಾಮಾಣ್ಯಸಂದೇಹಘಟಿತವಾದ ಸಾಮಗ್ರಿಯು ಕಾರಣ ಎಂದು ಮೂಲದಲ್ಲಿದೆ. ಪ್ರಾಮಾಣ್ಯಸಂದೇಹವು ಕೋಟಿ–ಸ್ಮೃತಿರೂಪ ವಾದುದರಿಂದ ಅರ್ಥ–ಸಂದೇಹಕ್ಕೆ ಅದೊಂದು ಕಾರಣ. ತದ್ಘಟಿತವಾದ ಮನಃಸಂಯೋಗಾದಿ ರೂಪವಾದ ಸಾಮಗ್ರಿಯು ಅರ್ಥಸಂದೇಹಕ್ಕೆ ಕಾರಣ, ಎಂದರ್ಥ.

ಅರ್ಥಸಂದೇಹ ಸಾಮಗ್ರೀಕಾಲದಲ್ಲಿ ಅರ್ಥನಿಶ್ಚಯಾತ್ಮಕವಾದ ಅನುವ್ಯವಸಾಯವು ನಾಶವಾಗಿರುವುದರಿಂದ ವ್ಯಭಿಚಾರ ಇಲ್ಲ, ಎಂದು ಮೂಲದಲ್ಲಿ ಇದೆ. ಆದರೆ, ಹೇತುವಿನಲ್ಲಿ ಸಾಮಗ್ರೀಜನ್ಯ ಎಂಬ ವಿಶೇಷಣದ ಅಗತ್ಯವಿಲ್ಲ. ಆದ್ದರಿಂದ ಅರ್ಥದಲ್ಲಿ ವ್ಯಭಿಚಾರದ ಪ್ರಸಕ್ತಿಯೇ ಇಲ್ಲ, ಎಂಬ ಆಶಂಕೆಗೆ 'ನತು' ಎನ್ನುವ ವಾಕ್ಯದಲ್ಲಿ ಸಮಾಧಾನ ಇದೆ. ಅದನ್ನು ಬಿಟ್ಟರೆ ನಿಶ್ಚಯ ಸಮಾನಕಾಲೀನ ಸಂದೇಹವಿಷಯತ್ವಂ, ಎಂದು ಹೇತುವಾಗುತ್ತದೆ. ಈ ಹೇತು ಅಸಿದ್ಧ, ಎಂದು ಆ ವಾಕ್ಯದ ಅರ್ಥ.

ಈ ಎರಡನೆಯ ಹೇತುವನ್ನು ಮಣಿಕಾರ ಹೇಳಿಲ್ಲ. ಅವನಿಗೆ ಅಭಿಮತವಾಗಿದೆ ಎಂದು ಊಹಿಸಿ ಈ ಹೇತುವನ್ನು ಮೂಲದಲ್ಲಿ ಹೇಳಲಾಗಿದೆ. ಮಣ್ಯುಕ್ತ ಹೇತುವಿನಲ್ಲಿ 'ಸ್ವಾಶ್ರಯನಿಶ್ಚಯೇ ಸತ್ಯಪಿ' ಎಂಬ ಸತಿ ಸಪ್ತಮಿಗೆ ಕಾಲಿಕ ಸಾಮಾನಾಧಿಕರಣ್ಯ ಎಂಬ ಅರ್ಥವನ್ನು ಮಾಡಿ ಆ ಹೇತುವನ್ನು

ಹೇಳಲಾಗಿದೆ. ಹೀಗಿರುವಾಗ ಮಣಿಕಾರನ ಅಭಿಪ್ರಾಯ ನಿಶ್ಚಯಸಮಕಾಲೀನತ್ವವು ಸಾಮಗ್ರೀ ವಿಶೇಷಣತಯೈವ ಅಭಿಮತ, ಸಂದೇಹವಿಶೇಷಣತ್ವೇನ ಅಲ್ಲ, ಎಂದು ನಿರ್ಧರಿಸುವುದು ಹೇಗೆ? 'ನಿಶ್ಚಯೇ ಸತ್ಯಪಿ ಸಂದಿಹ್ಯಮಾನತ್ವಾತ್' ಎಂದು ಮಣ್ಯುಕ್ತ–ಹೇತುವಿನಲ್ಲಿ ಇಲ್ಲದ ಸಾಮಗ್ರೀಪದವನ್ನು ಏಕೆ ಸೇರಿಸಬೇಕು? ಈ ಆಕ್ಷೇಪದ ಪರಿಹಾರಕ್ಕಾಗಿ ಅಸಿದ್ಧಿಯನ್ನು ತೋರಿಸಿ ಸಾಮಗ್ರೀಪದದ ಅನಿವಾರ್ಯತೆಯನ್ನು ಮೂಲದಲ್ಲಿ ತೋರಿಸಲಾಗಿದೆ. ಆ ವಿಶೇಷಣವು ಅಸಿದ್ಧಿವಾರಕವಾದರೂ ಹೇತುವಿನಲ್ಲಿರುವ ವಿಶೇಷಣವಿಶೇಷ್ಯಭಾವಕ್ಕೆ ವೈಯರ್ಥ್ಯ–ಪರಿಹಾರ ವಾದಂತೆ, ಎಂದು ಒಟ್ಟು ಅಭಿಪ್ರಾಯ.

## ತೃತೀಯಹೇತುವಿನ ವಿಶೇಷಣಕೃತ್ಯ

**तृतीयहेतावपि घटविषयकनिश्चयधर्मिकप्रामाण्यसंशयजन्यसंशयाविषयत्वं पटेऽप्यस्तीत्यर्थे व्यभिचारः । तद्वारणाय ग्राह्याप्रामाण्याश्रयविषयकत्वेन निश्चयो विशेषितः ।**

**तथापि व्यवसायप्रामाण्यस्य, स्वाश्रयविषयिका या प्रामाण्यानुमितिः तद्धर्मिकप्रमाण्यसंशयजन्यसंशय-विषयत्वादसिद्धिः । तद्वारणाय किञ्चिदिति विशेषणम् । एवंच नासिद्धिः । अनुमितिप्रामाण्यसंशयेन व्यवसायप्रामाण्यसंशयेऽपि अनुव्यवसायप्रामाण्यसंशयेन तत्संशयाभावात् ।**

ಮೂರನೆಯ ಹೇತು–ಸ್ವಾಶ್ರಯವಿಷಯಕ–ಕಿಂಚಿನ್ನಿಶ್ಚಯಧರ್ಮಿಕ–ಪ್ರಾಮಾಣ್ಯ–ಸಂಶಯ ಜನ್ಯ ಸಂಶಯಾವಿಷಯತ್ವಾತ್ ।

ಅನುವ್ಯವಸಾಯಧರ್ಮಿಕ – ಪ್ರಾಮಾಣ್ಯ – ಸಂದೇಹದಿಂದ ವ್ಯವಸಾಯಪ್ರಾಮಾಣ್ಯ ಸಂದೇಹವು ಬರುವುದಿಲ್ಲವಾದ ಕಾರಣ ಅನುವ್ಯವಸಾಯವು ವ್ಯವಸಾಯಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಎಂದು ಹೇತುವಿನ ಅರ್ಥ.

ಈ ಹೇತುವಿನಲ್ಲಿ ಕಿಂಚಿನ್ನಿಶ್ಚಯದಲ್ಲಿ ಪ್ರಾಮಾಣ್ಯಾಶ್ರಯ(ಸ್ವಾಶ್ರಯ) ವಿಷಯಕ, ಎಂದು ವಿಶೇಷಣವನ್ನು ಕೊಡಲಾಗಿದೆ. ಅದನ್ನು ಬಿಟ್ಟರೆ ಪಟರೂಪ ಅರ್ಥದಲ್ಲಿ ವ್ಯಭಿಚಾರ–ಕಿಂಚಿನ್ನಿಶ್ಚಯ ಎಂದರೆ ಘಟನಿಶ್ಚಯ. ತದ್ಧರ್ಮಿಕವಾದ ಪ್ರಾಮಾಣ್ಯಸಂದೇಹದಿಂದ ಪಟಸಂದೇಹ ಬರುವುದಿಲ್ಲವಾದ ಕಾರಣ ತಾದೃಶಸಂದೇಹಾವಿಷಯತ್ವವು ಪಟದಲ್ಲಿ ಇದೆ. ಹೇತು ಬಂತು. ಆದರೆ,

ಆದರಲ್ಲಿ ಅನುವ್ಯವಸಾಯ ವಿಷಯತ್ವಾಭಾವರೂಪ ಸಾಧ್ಯ ಇಲ್ಲ, ವ್ಯಭಿಚಾರ ಬಂತು. ಅದರ ಪರಿಹಾರಕ್ಕಾಗಿ ಸ್ವಾಶ್ರಯವಿಷಯಕ ಎಂಬ ವಿಶೇಷಣವನ್ನು ಸೇರಿಸಬೇಕು. ಘಟವಿಷಯಕ ನಿಶ್ಚಯವು ಗ್ರಾಹ್ಯಪ್ರಾಮಾಣ್ಯಾಶ್ರಯ–ವ್ಯವಸಾಯವಿಷಯಕ ನಿಶ್ಚಯವಲ್ಲ. ಪಟದಲ್ಲಿ ಪ್ರಾಮಾಣ್ಯಾಶ್ರಯ–ಪಟಜ್ಞಾನವಿಷಯಕ – ಅನುವ್ಯವಸಾಯ – ಧರ್ಮಿಕ – ಪ್ರಾಮಾಣ್ಯಸಂದೇಹಜನ್ಯ – ಸಂದೇಹ ವಿಷಯತ್ವವೇ ಇದೆ. ಏಕೆಂದರೆ, ಅನುವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹ ಬಂದರೆ ಅದರಿಂದಾಗಿ ವ್ಯವಸಾಯವಿಷಯವಾದ ಪಟದ ಸಂದೇಹವು ಬರುತ್ತದೆ. ಆದ್ದರಿಂದ ಹೇತುವೂ ಇಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ.

ಈ ವಿಶೇಷಣ ಕೊಟ್ಟರೂ ಅಸಿದ್ಧಿ ಇದೆ. ಪ್ರಾಮಾಣ್ಯಾಶ್ರಯ ವ್ಯವಸಾಯ ವಿಷಯಕ ನಿಶ್ಚಯ ಎಂದರೆ ನೈಯಾಯಿಕರು ಅಂಗೀಕರಿಸಿರುವ ಸಮರ್ಥ–ಪ್ರವೃತ್ತಿಜನಕತ್ವ–ಹೇತುವಿನಿಂದ ಹುಟ್ಟಿದ ಅನುಮಿತಿ. ತದ್ಧರ್ಮಿಕ ಪ್ರಾಮಾಣ್ಯಸಂದೇಹದಿಂದ ವ್ಯವಸಾಯಪ್ರಾಮಾಣ್ಯ ಸಂದೇಹ ಬರುತ್ತದೆ. ತದ್ವಿಷಯತ್ವವು ಪ್ರಾಮಾಣ್ಯದಲ್ಲಿ ಇದೆ, ಅವಿಷಯತ್ವ ಇಲ್ಲ, ಅಸಿದ್ಧಿ. ಆದಕ್ಕಾಗಿ, ಕಿಂಚನ್ನಿಶ್ಚಯ ಧರ್ಮಿಕ, ಎಂಬ ವಿಶೇಷಣವಿದೆ. ವ್ಯವಸಾಯ–ವಿಷಯಕವಾದ ಯಾವುದೋ ಒಂದು ನಿಶ್ಚಯ ಧರ್ಮಿಕ–ಸಂದೇಹ–ಜನ್ಯಸಂದೇಹಾವಿಷಯತ್ವ ಬಂದರೂ ಸಾಕು, ಹೇತು ಬರುತ್ತದೆ. ಪ್ರಕೃತ, ವ್ಯವಸಾಯ–ವಿಷಯಕವಾದ ಅನುವ್ಯವಸಾಯಧರ್ಮಿಕ–ಪ್ರಾಮಾಣ್ಯ–ಸಂದೇಹಜನ್ಯ–ಸಂದೇಹ–ಅವಿಷಯತ್ವವು ಪ್ರಾಮಾಣ್ಯದಲ್ಲಿ ಇರುವುದರಿಂದ ಅಸಿದ್ಧಿ ಪರಿಹಾರವಾಗುತ್ತದೆ. ಅನುಮಿತಿ ಧರ್ಮಿಕ ಪ್ರಾಮಾಣ್ಯಸಂದೇಹಜನ್ಯಸಂದೇಹಾವಿಷಯತ್ವ ಇಲ್ಲದಿದ್ದರೂ ತೊಂದರೆ ಇಲ್ಲ.

## ನ್ಯಾಯದೀಪ

**ಪಟೇಽಪೀತಿ ॥ ಪಟಜ್ಞಾನಸ್ಯಾಪಿ ಗ್ರಾಹ್ಯಪ್ರಾಮಾಣ್ಯಾಶ್ರಯತಯಾ, ತದ್–ಗ್ರಾಹಕಾನುವ್ಯವಸಾಯಗ್ರಾಹ್ಯತ್ವೇನ ಸಾಧ್ಯಾಭಾವಾತ್, ಇತಿ ಭಾವಃ ।**

**ವಿಶೇಷಿತ ಇತಿ ॥ ತಥಾಚ ತಸ್ಯಾಪಿ ಅನುವ್ಯವಸಾಯಗ್ರಾಹ್ಯತಯಾ ತದ್ಧರ್ಮಿಕ–ಪ್ರಾಮಾಣ್ಯಸಂಶಯಜನ್ಯ–ಸಂಶಯಯೋಗ್ಯತ್ವೇನ ಹೇತ್ವಭಾವಾತ್ ನ ವ್ಯಭಿಚಾರಃ, ಇತಿ ಭಾವಃ ।**

**ನಾಸಿದ್ಧಿರಿತಿ ॥ ಅಖಂಡಾಭಾವತ್ವಾತ್ ನಾಸಿದ್ಧಿವಾರಕತ್ವಂ ದೋಷಃ, ಇತಿ ಭಾವಃ । ಅನುವ್ಯವಸಾಯೇತಿ ॥ ತಸ್ಯ ಪ್ರಾಮಾಣ್ಯನಿಯಮೇನ ಕದಾಪಿ ತತ್ರ ಸಂದೇಹಾಭಾವಾದಿತಿ ಭಾವಃ ॥**

ಮೂಲದಲ್ಲಿ ಪಟದಲ್ಲಿ ವ್ಯಭಿಚಾರಪ್ರದರ್ಶನ ಮಾಡುವಾಗ ಹೇತುಸತ್ವವನ್ನು ಹೇಳಲಾಗಿದೆ. ಸಾಧ್ಯಾಭಾವವನ್ನು ಹೀಗೆ ತಿಳಿಯಬೇಕು. ಸ್ವಾಶ್ರಯಗ್ರಾಹಕ–ಯಾವಜ್ಜ್ಞಾನಾಗ್ರಾಹ್ಯತ್ವವು ಸಾಧ್ಯ.

ಸ್ವ ಎಂದರೆ, ಪ್ರಾಮಾಣ್ಯ. ತದಾಶ್ರಯ ಪಟಜ್ಞಾನ. ತದ್‌ಗ್ರಾಹಕ ಪಟಜ್ಞಾನದ ಅನುವ್ಯವಸಾಯ. ತದ್‌ಗ್ರಾಹ್ಯತ್ವ ಪಟದಲ್ಲಿ ಇದೆ. ಅಗ್ರಾಹ್ಯತ್ವ ಇಲ್ಲ. ಆದ್ದರಿಂದ ಸಾಧ್ಯಾಭಾವ ಬಂತು.

ಪಟದಲ್ಲಿ ವ್ಯಭಿಚಾರ-ಪರಿಹಾರಕ್ಕಾಗಿ ಹೇತುಶರೀರಘಟಕ ನಿಶ್ಚಯದಲ್ಲಿ ಗ್ರಾಹ್ಯಪ್ರಾಮಾಣ್ಯಾಶ್ರಯ ವಿಷಯಕ, ಎಂದು ವಿಶೇಷಣವನ್ನು ಕೊಡಲಾಗಿದೆ. ಆಗ ಪಟದಲ್ಲಿ ಹೇತು ಬರುವುದಿಲ್ಲ. ಪಟವೂ ಅನುವ್ಯವಸಾಯ-ಗ್ರಾಹ್ಯವಾದುದರಿಂದ ಅನುವ್ಯವಸಾಯ ಧರ್ಮಿಕಪ್ರಾಮಾಣ್ಯಸಂದೇಹ ಬಂದರೆ ಪಟಸಂದೇಹ ಬರುತ್ತದೆಯಾದ್ದರಿಂದ ಪ್ರಾಮಾಣ್ಯಸಂದೇಹ ಜನ್ಯ-ಸಂದೇಹವಿಷಯತ್ವವೇ ಪಟದಲ್ಲಿದೆ, ಅವಿಷಯತ್ವರೂಪ-ಹೇತು ಇಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ.

'ನಾಸಿದ್ಧಿಃ' ಎಂದು, ಕಿಂಚಿತ್ ಎಂಬ ವಿಶೇಷಣಕ್ಕೆ ಅಸಿದ್ಧಿವಾರಕತ್ವರೂಪ ಪ್ರಯೋಜನವನ್ನು ಹೇಳಲಾಗಿದೆ. ಆದರೆ, ಹೇತುಘಟಕವಿಶೇಷಣಗಳಿಗೆ ವ್ಯಭಿಚಾರವಾರಕತ್ವೇನೈವ ಸಾರ್ಥಕ್ಯಮ್. ಆದರೂ, ಕಿಂಚಿತ್‌ವಿಶೇಷಣಘಟಿತವಾದ ವಿಷಯತ್ವಾಭಾವರೂಪ ಹೇತುವು ತದಘಟಿತವಾದ ವಿಷಯತ್ವಾಭಾವಕ್ಕಿಂತ ಭಿನ್ನವಾದ ಒಂದು ಅಖಂಡಾಭಾವ. ಅವೆರಡಕ್ಕೆ ಘಟಿತ-ಘಟಕಭಾವ ಇಲ್ಲ. ಆದ್ದರಿಂದ ತದ್ಘಟಿತವಾದ ವಿಷಯತ್ವಾಭಾವವು ಲಘುರೂಪವಾದ ಅಭಾವಾಂತರದಿಂದ ಅಘಟಿತವಾದುದರಿಂದ ಅದು ಹೇತ್ವಂತರವಾಯಿತು. ಹೇತೋಃ ಹೇತ್ವಂತರೇಣ ನ ವೈಯರ್ಥ್ಯಂ.

ಮೂಲದಲ್ಲಿ ಅನುವ್ಯವಸಾಯ-ಪ್ರಾಮಾಣ್ಯಸಂದೇಹಾಹಿತ-ಸಂದೇಹ-ವಿಷಯತ್ವ ವ್ಯವಸಾಯ ಪ್ರಾಮಾಣ್ಯದಲ್ಲಿ ಇಲ್ಲ, ಎಂದಿದೆ. ಆದಕ್ಕೆ ಕಾರಣ-ಅನುವ್ಯವಸಾಯವು ನಿಯತಪ್ರಮಾಣ ವಾದುದರಿಂದ ಅದರಲ್ಲಿ ಪ್ರಾಮಾಣ್ಯಸಂದೇಹವೇ ಇಲ್ಲ, ಎಂದು.

**ननु प्रामाण्यसंशयाजन्यसंशयविषयत्वं हेतुः। अर्थस्यापि तदजन्यसंशयं प्रत्यपि विषयत्वेन व्यभिचारात्।**

ಅನುವ್ಯವಸಾಯ ಧರ್ಮಿಕ ಪ್ರಾಮಾಣ್ಯ ಸಂಶಯಜನ್ಯ-ಸಂಶಯಾವಿಷಯತ್ವವು ಹೇತು. ಇದರ ಇನ್ನೊಂದು ಅರ್ಥ-ಅನುವ್ಯವಸಾಯಧರ್ಮಿಕಸಂಶಯಾಜನ್ಯ ಸಂಶಯವಿಷಯತ್ವಂ, ಎಂದು. ಅದು ಹೇತುವಲ್ಲ. ಅದನ್ನು ಹೇತುವನ್ನಾಗಿ ಮಾಡಿದರೆ ಘಟಾದಿಅರ್ಥಗಳಲ್ಲಿ ವ್ಯಭಿಚಾರ ಬರುತ್ತದೆ. ದೂರಸ್ಥತ್ವಾದಿದೋಷದಿಂದಾಗಿಯೂ ಅರ್ಥಸಂದೇಹ ಬರುತ್ತದೆ. ಅಂತಹ ಅರ್ಥಸಂದೇಹವು ಸಂದೇಹಾಜನ್ಯಸಂದೇಹ. ತದ್ವಿಷಯತ್ವ ಘಟದಲ್ಲಿ ಇದೆ. ಆದರೆ, ಅನುವ್ಯವಸಾಯಾವಿಷಯತ್ವ ಎಂಬ ಸಾಧ್ಯ ಇಲ್ಲ. ವ್ಯಭಿಚಾರ ಬರುತ್ತದೆ.

## ಅಪ್ರಯೋಜಕತಾಶಂಕೆ ಸಲ್ಲದು

**अत्र सर्वत्र विपक्षे हेतूच्छित्तिरेव बाधिका। स्वतस्त्वपक्षेऽनु-**

**व्यवसायस्यैव प्रामाण्यनिश्चयरूपत्वात् द्वितीये तत्स्थितिक्षणे तदभावघटिता या संशयसामग्री तदभावेन तृतीयक्षणे प्रामाण्यसंशयानुपपत्तेः ॥**

ಈ ಎಲ್ಲಾ ಅನುಮಾನಗಳಲ್ಲೂ 'ಹೇತುರಸ್ತು ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕತಾ ಶಂಕೆಯನ್ನು ಮಾಡಿದರೆ 'ಸಾಧ್ಯ ಇಲ್ಲದಿದ್ದರೆ ಹೇತುವೂ ಇರಲು ಸಾಧ್ಯವಿಲ್ಲ' ಎಂಬ ಹೇತೂಚ್ಛಿತ್ತಿಯೇ ಬಾಧಕವಾಗುತ್ತದೆ. ಹೇಗೆಂದರೆ– ಸ್ವತಸ್ತ್ವಪಕ್ಷದಲ್ಲಿ ಅನುವ್ಯವಸಾಯವು ವ್ಯವಸಾಯಗತವಾದ ಪ್ರಾಮಾಣ್ಯವನ್ನು ನಿಶ್ಚಯಮಾಡುತ್ತದೆ. ಆಗ ಅನುವ್ಯವಸಾಯ ಹುಟ್ಟಿದ ದ್ವಿತೀಯಕ್ಷಣದಲ್ಲಿ ಪ್ರಾಮಾಣ್ಯನಿಶ್ಚಯವಿರುವುದರಿಂದ ಪ್ರಾಮಾಣ್ಯನಿಶ್ಚಯಾಭಾವಘಟಿತವಾದ ಪ್ರಾಮಾಣ್ಯಸಂದೇಹಸಾಮಗ್ರಿಯು ಇರಲು ಸಾಧ್ಯವಿಲ್ಲ. ಆದರಿಂದಾಗಿ ತೃತೀಯಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರಲಾರದು. (ಸಂದೇಹ ಬರುತ್ತಿದೆಯಾದಕಾರಣ ಅನುವ್ಯವಸಾಯದಿಂದ ಪ್ರಾಮಾಣ್ಯನಿಶ್ಚಯವಾಗಿಲ್ಲ.)

## ನ್ಯಾಯದೀಪ

**ಹೇತೂಚ್ಛಿತ್ತಿಂ ವ್ಯನಕ್ತಿ–ಸ್ವತಸ್ತ್ವೇತ್ಯಾದಿನಾ ॥ ಪ್ರಾಮಾಣ್ಯನಿಶ್ಚಯೇತಿ ॥ ತಥಾಚ ವಿಶೇಷದರ್ಶನೇ ಕಥಂ ಸಂದೇಹ, ಇತಿ ಭಾವಃ । ತದಭಾವೇತಿ ॥ ಪ್ರಾಮಾಣ್ಯನಿಶ್ಚಯರೂಪವಿಶೇಷದರ್ಶನಾಭಾವೇತ್ಯರ್ಥಃ ।**

ದ್ವಿತೀಯಕ್ಷಣದಲ್ಲಿ ಪ್ರಾಮಾಣ್ಯನಿಶ್ಚಯವಿದ್ದರೆ ವಿಶೇಷದರ್ಶನ ಇದೆ, ಎಂದರ್ಥ. ವಿಶೇಷದರ್ಶನವು (ಏಕಕೋಟಿ ನಿಶ್ಚಯ) ಸಂದೇಹಕ್ಕೆ ಪ್ರತಿಬಂಧಕ. ಪ್ರತಿಬಂಧಕವಿದ್ದಾಗ ಸಂದೇಹ ಬರುವುದಾದರೂ ಹೇಗೆ?

## ದ್ವಿತೀಯ ಹೇತುವೂ ಅಪ್ರಯೋಜಕವಲ್ಲ

**अत एव द्वितीये प्रामाण्यनिश्चयस्थितिक्षणे तदभावघटितसंशयसा-मग्र्यभावेन प्रामाण्यस्य स्वाश्रयनिश्चयसमानकालीनसामग्रीजन्य-संशयविषयत्वायोगात् ।**

ಪ್ರಾಮಾಣ್ಯನಿಶ್ಚಯವು ವಿಶೇಷ ನಿಶ್ಚಯರೂಪವಾದುದರಿಂದ ಸಂದೇಹಕ್ಕೆ ಪ್ರತಿಬಂಧಕ ವಾಗಿರುವುದರಿಂದಲೇ ದ್ವಿತೀಯ ಹೇತುವೂ ಅಪ್ರಯೋಜಕವಲ್ಲ. ಅನುವ್ಯವಸಾಯ ದ್ವಿತೀಯ ಕ್ಷಣದಲ್ಲಿ ಪ್ರಾಮಾಣ್ಯನಿಶ್ಚಯವೇ ಇದೆ. ಸಂದೇಹಕ್ಕೆ ತದಭಾವವು ಕಾರಣ. ಆಗ ತದ್ಘಟಿತವಾದ ಸಂದೇಹ

ಸಾಮಗ್ರೀ ಇಲ್ಲ. ಆದ್ದರಿಂದ ಸ್ವಾಶ್ರಯವ್ಯವಸಾಯ-ವಿಷಯಕ-ನಿಶ್ಚಯವಾಗಿರುವ ಅನುವ್ಯವಸಾಯ-ನಿಶ್ಚಯಕಾಲೀನ-ಸಾಮಗ್ರಿಯಿಂದ ಪ್ರಾಮಾಣ್ಯಸಂದೇಹ ಬರಲು ಸಾಧ್ಯವಿಲ್ಲ. ಏಕೆಂದರೆ, ಅನುವ್ಯವಸಾಯ ನಿಶ್ಚಯ ಎಂದರೆ ಸ್ವತಸ್ತ್ವಪಕ್ಷದಲ್ಲಿ ಪ್ರಾಮಾಣ್ಯನಿಶ್ಚಯ. ಅದಿರುವಾಗ ಸಂದೇಹಸಾಮಗ್ರಿಯೇ ಇಲ್ಲ. ಅಂತಹ ಸಾಮಗ್ರೀಜನ್ಯಸಂದೇಹವಿರುವುದಾದರೆ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯಾತ್ಮಕ ಎಂದು ಹೇಳಬಾರದು.

## ನ್ಯಾಯದೀಪ

**ಅತ ಏವ ॥ ಪ್ರಾಮಾಣ್ಯನಿಶ್ಚಯಸ್ಯ ತನ್ನಿಶ್ಚಯತ್ವಾದೇವ । ದ್ವಿತೀಯೇ ಇತ್ಯಸ್ಯ ವಿವರಣಂ ಸ್ಥಿತಿಕ್ಷಣೇ ಇತಿ ।**

ಅತ ಏವ ಎಂದರೆ ಪ್ರಾಮಾಣ್ಯನಿಶ್ಚಯವೇ ಅನುವ್ಯವಸಾಯನಿಶ್ಚಯವಾಗಿರುವ ಕಾರಣದಿಂದ, ಎಂದರ್ಥ. ದ್ವಿತೀಯೇ ಎಂಬುದರ ವಿವರಣೆ ಪ್ರಾಮಾಣ್ಯನಿಶ್ಚಯವು ಇರುವ ಅನುವ್ಯವಸಾಯ ದ್ವಿತೀಯಕ್ಷಣದಲ್ಲಿ, ಎಂದು.

## ನ್ಯಾಯದೀಪದಲ್ಲಿ ಅವತಾರಿಕೆ

**ತೃತೀಯೇ ಹೇತೂಚ್ಛಿತ್ತಿಂ ವ್ಯನಕ್ತಿ-ಅನುವ್ಯವಸಾಯಸ್ಯೇತಿ ॥**

ಮೂರನೆಯ ಹೇತುವಿನಲ್ಲಿ ಹೇತೂಚ್ಛಿತ್ತಿರೂಪವಾದ ಬಾಧಕತರ್ಕವನ್ನು ಅನುವ್ಯವಸಾಯಸ್ಯ ಎಂಬ ಮೂಲದಲ್ಲಿ ತೋರಿಸಲಾಗಿದೆ.

**अनुव्यवसायस्य प्रामाण्यग्राहकत्वे ग्राहकप्रामाण्यसन्देहे ग्राह्यसन्देहनियमेन व्यवसायप्रामाण्यानुमितेः प्रामाण्यसन्देहेनेव अनुव्यवसायप्रामाण्यसन्देहेनापि कदाचित् व्यवसायप्रामाण्यसन्देहापातात् । नचेष्टापत्तिः । अनुव्यवसायस्य प्रामाण्यनियमादिति ।।**

ಅನುವ್ಯವಸಾಯವು ವ್ಯವಸಾಯಪ್ರಾಮಾಣ್ಯಗ್ರಾಹಕವಾದಲ್ಲಿ ಗ್ರಾಹಕವಾದ ಅನುವ್ಯವಸಾಯದಲ್ಲಿ ಪ್ರಾಮಾಣ್ಯಸಂದೇಹವಿದ್ದಲ್ಲಿ ಗ್ರಾಹ್ಯವಾದ ವ್ಯವಸಾಯ ಪ್ರಾಮಾಣ್ಯದಲ್ಲೂ ಸಂದೇಹವು ನಿಯತವಾಗಿ ಬರಬೇಕು. ಹೇಗೆ ವ್ಯವಸಾಯಪ್ರಾಮಾಣ್ಯಾನುಮಿತಿಯಲ್ಲಿ ಅಂದರೆ 'ಜಲಜ್ಞಾನಂ ಪ್ರಮಾಣಂ, ಸಮರ್ಥಪ್ರವೃತ್ತಿಜನಕತ್ವಾತ್' ಎಂಬ ಅನುಮಿತಿಯಲ್ಲಿ ಪ್ರಾಮಾಣ್ಯ ಸಂದೇಹ ಬಂದರೆ (ಅನುಮಿತಿಃ ಪ್ರಮಾಣಂ ನ ವಾ) ಜಲಜ್ಞಾನಪ್ರಾಮಾಣ್ಯದಲ್ಲೂ 'ಜಲಜ್ಞಾನಂ ಪ್ರಮಾಣಂ ನವಾ' ಎಂದು ಸಂದೇಹ ಬರುವುದೋ ಹಾಗೆ ಅನುವ್ಯವಸಾಯ-ಪ್ರಾಮಾಣ್ಯ

ಸಂದೇಹದಿಂದಲೂ ವ್ಯವಸಾಯ–ಪ್ರಾಮಾಣ್ಯಸಂದೇಹವು ಬರಬೇಕಾದೀತು. ಸ್ವತಸ್ತ್ವವಾದಿಗಳು ಇದಕ್ಕೆ ಇಷ್ಟಾಪತ್ತಿ ಎಂದು ಸಮಾಧಾನ ಹೇಳುವಂತಿಲ್ಲ. ಏಕೆಂದರೆ, ಅವರ ಸಿದ್ಧಾಂತದಲ್ಲಿ ಅನುವ್ಯವಸಾಯವು ನಿಯಮೇನ ಪ್ರಮಾಣ, ಅಪ್ರಮಾಣವಾಗುವುದೇ ಇಲ್ಲ. ಆದ್ದರಿಂದ ಅದರಲ್ಲಿ ಪ್ರಾಮಾಣ್ಯಸಂದೇಹವೇ ಬರುವುದಿಲ್ಲ.

## ಸ್ವತಸ್ತ್ವಾಭಾವಸಾಧಕಾನುಮಾನ ನಿರಾಸ

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರತಿಜ್ಞಾದೋಷಾನ್ ತಾವದಾಹ–ಆದ್ಯೇ ಸಾಧ್ಯೇ ಇತ್ಯಾದಿನಾ ।**

ಪ್ರತಿಪಕ್ಷಾನುಮಾನಗಳ ಪ್ರತಿಜ್ಞಾಭಾಗಕ್ಕೆ ಮೊದಲು ದೋಷವನ್ನು ಹೇಳುತ್ತಾರೆ–

**आद्ये साध्येऽपसिद्धान्तो बाधो व्याघातश्च ।**

ಪ್ರಾಮಾಣ್ಯಂ ಸ್ವಾಶ್ರಯಗ್ರಾಹಕಾಗ್ರಾಹ್ಯಮ್, ಎಂದು ಮೊದಲನೆಯ ಸಾಧ್ಯದ ಪ್ರತಿಜ್ಞಾ ವಾಕ್ಯ. ಇದು ಪರತಸ್ತ್ವವಾದಿಗಳ ಸಿದ್ಧಾಂತಕ್ಕೆ ವಿರುದ್ಧ. ಇದಕ್ಕೆ ಬಾಧ ಮತ್ತು ವ್ಯಾಘಾತದೋಷಗಳೂ ಇವೆ.

## ನ್ಯಾಯದೀಪ

**1. ಅಪಸಿದ್ಧಾಂತ–ಉಕ್ತರೂಪೇಣ ಸ್ವಾಶ್ರಯಗ್ರಾಹಕತ್ವಸ್ಯ ಪ್ರಾಮಾಣ್ಯಗ್ರಾಹಕತ್ವ ರೂಪತಯಾ ತಾದೃಶೇನ ಅನುಮಿತ್ಯಾದಿನಾ ಗ್ರಾಹ್ಯತ್ವಸ್ಯ ಪರಮತೇಽಪಿ ಸಿದ್ಧತ್ವಾತ್ ತದಭಾವಸಾಧನೇ ಅಪಸಿದ್ಧಾಂತಃ ।**

'ಗ್ರಾಹ್ಯಜ್ಞಾನಪ್ರಕಾರಪ್ರಕಾರತಯಾ ತದ್ವದ್–ವಿಶೇಷ್ಯಕತಯಾ ಚ ಸ್ವಾಶ್ರಯಾಗ್ರಾಹಕ ಯಾವಜ್ಜ್ಞಾನಾಗ್ರಾಹ್ಯಮ್' ಎಂದು ಸಾಧ್ಯ. ಜಲತ್ವಪ್ರಕಾರಕತಯಾ ಜಲವಿಶೇಷ್ಯಕತಯಾ ಜಲಜ್ಞಾನವನ್ನು ಗ್ರಹಿಸುತ್ತದೆ ಜ್ಞಾನ ಎಂದು ಹೇಳುವ ಮೂಲಕ ಪ್ರಾಮಾಣ್ಯಗ್ರಾಹಕ ಎಂದು ಅಂಗೀಕರಿಸಿದಂತೆ. ಏಕೆಂದರೆ, ಜ್ಞಾನದಲ್ಲಿರುವ ಜಲತ್ವಪ್ರಕಾರಕತ್ವ, ಜಲವಿಶೇಷ್ಯಕತ್ವವೇ ಪ್ರಾಮಾಣ್ಯ. ತಾದೃಶ ಧರ್ಮವಿಶಿಷ್ಟತಯಾ ಜ್ಞಾನಗ್ರಾಹಕತ್ವವೇ ಪ್ರಾಮಾಣ್ಯಗ್ರಾಹಕತ್ವ. ಸಮರ್ಥಪ್ರವೃತ್ತಿಜನಕತ್ವ ಹೇತುವಿನಿಂದ ಹುಟ್ಟುವ ಅನುಮಿತಿಯಲ್ಲೂ ನೀನು ಒಪ್ಪಿರುವ ಪ್ರಾಮಾಣ್ಯಗ್ರಾಹಕತ್ವ ಎಂದರೆ ಇದೇ. ಇಂತಹ ಪ್ರಾಮಾಣ್ಯಗ್ರಾಹಕತ್ವವನ್ನು ಅನುವ್ಯವಸಾಯಕ್ಕೆ ಅಂಗೀಕರಿಸಿ ಅದನ್ನು ನಿಷೇಧ ಮಾಡಿದರೆ ಅಪಸಿದ್ಧಾಂತ.

**2.3. ಬಾಧ–ವ್ಯಾಘಾತ–ಪ್ರಾಮಾಣ್ಯಗ್ರಾಹಕೇಣ ಪ್ರಾಮಾಣ್ಯಂ ನ ಗ್ರಾಹ್ಯಮ್ ಇತ್ಯುಕ್ತೇ ಬಾಧೋ ವ್ಯಾಘಾತಶ್ಚ ಸ್ಫುಟ ಏವ । ಸ್ವಾತಂತ್ರ್ಯೇಣ ಇತ್ಯುಕ್ತೌ ಅಪಿ ಬಾಧೋದ್ಧಾರ ಗ್ರಂಥೋಕ್ತರೀತ್ಯಾ ಬಾಧ ಏವ । ಉಕ್ತರೂಪ ಸಾಧ್ಯಸ್ಯ ಅರ್ಥೇऽಪಿ ಸತ್ವೇನ ವ್ಯಭಿಚಾರಾಪ್ರಸಕ್ತ್ಯಾ ತದ್‌ವಾರಕ–ಹೇತುವಿಶೇಷಣವೈಯ್ಯರ್ಥ್ಯಾಚ್ಚ ಇತಿ ಭಾವಃ ।**

ಉಕ್ತರೂಪೇಣ ವ್ಯವಸಾಯಗ್ರಾಹಕವು ಪ್ರಾಮಾಣ್ಯಗ್ರಾಹಕವಾಗಿರಲೇಬೇಕಾದುದರಿಂದ ಸ್ವಾಶ್ರಯಗ್ರಾಹಕ ಗ್ರಾಹ್ಯತ್ವಾಭಾವವನ್ನು ಸಾಧನೆ ಮಾಡಿದರೆ ತದ್‌ಗ್ರಾಹಕತ್ವವನ್ನು ಹೇಳಿ ಪುನಃ ಪ್ರಾಮಾಣ್ಯಅಗ್ರಾಹಕತ್ವವನ್ನು ಹೇಳುವುದು ಅರ್ಥಾತ್ ಹೇಳಿದ್ದನ್ನೇ ಶಬ್ದಾಂತರದಿಂದ ನಿರಾಕರಿಸುವುದು ವ್ಯಾಹತ.

ಇದರ ಪರಿಹಾರಕ್ಕಾಗಿ ಸ್ವಾತಂತ್ರ್ಯೇಣ ಪ್ರಾಮಾಣ್ಯಗ್ರಾಹಕತ್ವಾಭಾವವನ್ನು ಸಾಧ್ಯದಲ್ಲಿ ಸೇರಿಸಿದರೂ ಬಾಧಗ್ರಂಥದಲ್ಲಿ (ಪ್ರಕರಣ 4) ಹಿಂದೆ ಹೇಳಿದಂತೆ ಬಾಧವೇ ಬರುತ್ತದೆ. (ಆ ಪ್ರಕರಣದಲ್ಲಿ 'ಸಿದ್ಧಂ ಪ್ರಾಮಾಣ್ಯಸ್ವತಸ್ತ್ವಂ' ವ್ಯವಸಾಯದ್ವಾರಾ ವೈಶಿಷ್ಟ್ಯವು ವಿಷಯವಾದರೂ ಪ್ರಾಮಾಣ್ಯಕ್ಕೆ ಸ್ವತಸ್ತ್ವವು ಸಿದ್ಧವಾದಂತೆ, ಎಂದಿದೆ. ಪು.269) ಸ್ವಾತಂತ್ರ್ಯೇಣ ಅವಿಷಯತ್ವಂ' ಎಂದು ಸಾಧ್ಯಮಾಡಿದಾಗ ಜಲಾದಿರೂಪ ಅರ್ಥದಲ್ಲೂ ಈ ಸಾಧ್ಯವು ಬರುವುದರಿಂದ ಆದರಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ಹೇತುಗಳಲ್ಲಿ ಕೊಟ್ಟಿರುವ ವಿಶೇಷಣಗಳು ವ್ಯರ್ಥ.

**द्वितीये अंशे सिद्धसाधनम् । उपपादितं चैतत् परोक्तस्वतस्त्व-निरुक्तिभङ्गे ।।**

ಎರಡನೆಯ ಸಾಧ್ಯ–ತಜ್ಞಾನವಿಷಯಕ–ಸಮಾನಾಧಿಕರಣ–ಜ್ಞಾನಾಜನ್ಯ–ಸಮಾನಾಧಿಕರಣಜ್ಞಾನ–ಅಪ್ರಕಾರೋ ವಾ, ಎಂದು. ಇದನ್ನು ಸಾಧ್ಯಮಾಡಿದಾಗ 'ಸರ್ವಂ ಜ್ಞಾನಂ ಗುಣಃ' ಎಂಬ ಶಬ್ದಜನ್ಯಶಾಬ್ದಬೋಧದಲ್ಲಿ ಸಿದ್ಧಸಾಧನತಾದೋಷ. ಈ ಶಾಬ್ದಬೋಧದಲ್ಲಿ ಸರ್ವಜ್ಞಾನವೂ ವಿಷಯವಾದುದರಿಂದ ಈ ಶಾಬ್ದಬೋಧವೂ ವಿಷಯ. ಆದ್ದರಿಂದ ಅದು ತಜ್ಞಾನವಿಷಯಕವಾಗಿದೆ. ಆದರಲ್ಲಿ ಪ್ರಾಮಾಣ್ಯವು ಪ್ರಕಾರವಾಗಿಲ್ಲ, ಎನ್ನುವುದು ಸಿದ್ಧ. ಇದನ್ನು ಪರೋಕ್ತ ಸ್ವತಸ್ತ್ವಭಂಗ ಪ್ರಕರಣದಲ್ಲಿ (ಪ್ರಕರಣ 2) ಸಮರ್ಥಿಸಲಾಗಿದೆ.

## ನ್ಯಾಯದೀಪ

**ಅಂಶ ಇತಿ ।। 'ಸರ್ವಂ ಜ್ಞಾನಂ ಗುಣಃ' ಇತಿ ಶಬ್ದಜನ್ಯಜ್ಞಾನಪ್ರಾಮಾಣ್ಯಾಂಶೇ ಇತ್ಯರ್ಥಃ । ತತ್‌ಪಕ್ಷೀಕರಣಸ್ಯಾಪಿ ಪ್ರಾಗುಕ್ತತ್ವಾತ್ ಇತಿ ಭಾವಃ । ಅತ**

**ಏವಾಹ–ಉಪಪಾದಿತಂ ಚೈತದಿತಿ ॥ ಬಾಧ–ವ್ಯಾಘಾತಯೋಃ ಕಂಠತೋ ಅನುಕ್ತೌ ಅಪಿ ಉಪಪಾದಿತಪ್ರಾಯತ್ವಾತ್ ಉಪಪಾದಿತಮಿತ್ಯುಕ್ತಮ್ ।**

'ಸರ್ವಂ ಜ್ಞಾನಂ ಗುಣಃ' ಎಂಬ ವಾಕ್ಯಜನ್ಯಜ್ಞಾನಗತ ಪ್ರಾಮಾಣ್ಯಾಂಶದಲ್ಲಿ ಸಿದ್ಧಸಾಧನತಾ. ಸಕಲಪ್ರಾಮಾಣ್ಯವೂ ವಿಪ್ರತಿಪತ್ತಿವಿಷಯವಾಗಿರುವಾಗ ಈ ಜ್ಞಾನಗತ ಪ್ರಾಮಾಣ್ಯವನ್ನು ಪಕ್ಷದಲ್ಲಿ ಸೇರಿಸುವುದಿಲ್ಲ, ಎನ್ನುವಂತಿಲ್ಲ, ಎಂದು ಹಿಂದೆಯೇ ಹೇಳಿದ್ದೇವೆ. ಇದನ್ನೇ 'ಉಪಪಾದಿತಂ ಚೈತತ್' ಎಂದು ಮೂಲದಲ್ಲಿ ಹೇಳಲಾಗಿದೆ. ವಸ್ತುತಃ ಇಲ್ಲಿ ಹೇಳಿದ ಬಾಧ–ವ್ಯಾಘಾತಗಳನ್ನು ಹಿಂದೆ ಕಂಠತಃ ಹೇಳಿಲ್ಲ; ಆದರೂ ಹೇಳಿದಂತೆ ಆಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ದೃಷ್ಟಾಂತ–ಹೇತುದೋಷೌ ಪಕ್ಷಭೇದೇನಾಹ–ಕಿಂಚೇತಿ ॥**

ಸಾಧ್ಯದಲ್ಲಿ ವಿಕಲ್ಪಗಳನ್ನು ಮಾಡಿ ಆ ಮೂಲಕ ಪಕ್ಷಭೇದೇನ ದೃಷ್ಟಾಂತದೋಷವನ್ನು ಒಂದು ಪಕ್ಷದಲ್ಲೂ ಹೇತುದೋಷವನ್ನು ಇನ್ನೊಂದು ಪಕ್ಷದಲ್ಲೂ ಹೇಳುತ್ತಾರೆ.

**किञ्च, साध्ये स्वशब्दः किं पक्षीकृतप्रामाण्यमात्रपरः किं वा समभिव्याहृतपरः ? नाद्यः । अप्रामाण्यस्याप्रामाण्यवत्यप्रामाण्य-प्रकारकत्वरूपप्रामाण्याश्रयग्राहकेण ज्ञानेन ग्राह्यतया तदग्राह्यत्वरूप-साध्यस्याप्रामाण्यरूपे दृष्टान्तेऽभावात् । नान्त्यः । घटरूपेऽर्थे व्यभिचाराप्रसक्त्या हेतौ तृतीयपदस्य व्यर्थत्वात् ।**

**अस्मिन् पक्षे हि समभिव्याहृतो घट एव स्वशब्दार्थः । घटे च घटाश्रयीभूतकपालग्राहकयावज्ज्ञानाग्राह्यत्वरूपं साध्यमस्त्येवेति कथं तत्र व्यभिचारप्रसक्तिः ?**

ಈ ಅನುಮಾನದ ಸಾಧ್ಯದಲ್ಲಿ 'ಸ್ವ' ಶಬ್ದವಿದೆ. ಸ್ವಶಬ್ದವು ಈ ಅನುಮಾನದ ಪಕ್ಷವಾದ ಪ್ರಾಮಾಣ್ಯವಾಚಕವೋ, ಅಥವಾ ತನ್ನ ಜೊತೆಯಲ್ಲಿ ಪ್ರಸ್ತುತವಾದ ಇತರ ವಾಚಕವೋ? ಪ್ರಾಮಾಣ್ಯವಾಚಕವಾದರೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಬರುತ್ತದೆ.

ಈ ಅನುಮಾನಕ್ಕೆ ದೃಷ್ಟಾಂತ ಅಪ್ರಾಮಾಣ್ಯ. ಅದರಲ್ಲಿ ಅನುವ್ಯವಸಾಯ ವಿಷಯತ್ವಾಭಾವ ರೂಪಸಾಧ್ಯವು ಬರಬೇಕು. ಆದರೆ ಬರುವುದಿಲ್ಲ. ಶುಕ್ತಿಯಲ್ಲಿ 'ಇದಂ ರಜತಂ' ಎಂದು ಭ್ರಮೆ

ಬಂತು. ಪರಿಶೀಲಿಸಿದಾಗ 'ಇದಂ ರಜತಂ ಇತಿ ಜ್ಞಾನಂ ಅಪ್ರಮಾ' ಎಂಬ ಜ್ಞಾನ ಬಂತು. ಈ ಜ್ಞಾನ ಅನುವ್ಯವಸಾಯ. ಇದರಲ್ಲಿರುವ ಪ್ರಾಮಾಣ್ಯ 'ಅಪ್ರಾಮಾಣ್ಯವತಿ ಜ್ಞಾನೇ ಅಪ್ರಾಮಾಣ್ಯ ಪ್ರಕಾರಕತ್ವ'. ಈ ಪ್ರಾಮಾಣ್ಯವನ್ನೂ ಪಕ್ಷಮಾಡಿ ಅದಕ್ಕೆ ತಜ್ಜ್ಞಾನಗ್ರಾಹಕ ಗ್ರಾಹ್ಯತ್ವಾಭಾವವನ್ನು ಸಾಧಿಸಬೇಕು. ಅಲ್ಲೂ ದೃಷ್ಟಾಂತ ಅಪ್ರಾಮಾಣ್ಯ. ಅದರಲ್ಲಿ ಪ್ರಕೃತ ಸಾಧ್ಯ ಬರುವುದಿಲ್ಲ. ಸ್ವ ಎಂದರೆ ಇಲ್ಲಿ 'ಇದಂ ಜ್ಞಾನಮ್ ಅಪ್ರಮಾ' ಎಂಬ ಜ್ಞಾನದಲ್ಲಿ ಇರುವ ಪ್ರಾಮಾಣ್ಯ. ಅದು, ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವರೂಪವಾದುದು. ತದಾಶ್ರಯ 'ಇದಂ ಜ್ಞಾನಮ್ ಅಪ್ರಮಾ' ಎಂಬ ಜ್ಞಾನ. ತದ್‌ಗ್ರಾಹಕ ಅದರ ಅನುವ್ಯವಸಾಯ. ತಾದೃಶಾನುವ್ಯವಸಾಯದಲ್ಲಿ ಪ್ರಾಮಾಣ್ಯ–ಘಟಕತಯಾ ಅಪ್ರಾಮಾಣ್ಯವು ವಿಷಯವೇ ಆಗಿದೆ. ಅವಿಷಯತ್ವ ಇಲ್ಲ. ಹೀಗೆ ಸ್ವಪದದಿಂದ ಪಕ್ಷೀಭೂತಪ್ರಾಮಾಣ್ಯವನ್ನು ತೆಗೆದುಕೊಂಡಾಗ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬರುತ್ತದೆ.

ಇನ್ನು ಸ್ವಪದವು ಸಮಭಿವ್ಯಾಹೃತಪರ ಎಂದಾದರೆ ಹೇತುವಿನಲ್ಲಿ 'ತೃತೀಯಕ್ಷಣ' ಎಂಬಲ್ಲಿ ತೃತೀಯಪದವ್ಯರ್ಥ. ಜ್ಞಾನವಿಷಯವಾದ ಅರ್ಥದಲ್ಲಿ ಅನುವ್ಯವಸಾಯಾವಧಿಕ–ಚತುರ್ಥ ಕ್ಷಣದಲ್ಲಿ ಸಂದೇಹವಿಷಯತ್ವ ಇದೆ. ಅದರಲ್ಲಿ ಅನುವ್ಯವಸಾಯ–ಅವಿಷಯತ್ವ–ಸಾಧ್ಯ ಇಲ್ಲ. ಹೀಗೆ, ವ್ಯಭಿಚಾರ. ಅದರ ಪರಿಹಾರಕ್ಕಾಗಿ ತೃತೀಯಪದವಿದೆ. ಸ್ವಪದವು ಸಮಭಿವ್ಯಾಹೃತಪರವಾದರೆ ಈ ವ್ಯಭಿಚಾರಕ್ಕೆ ಅವಕಾಶವಿಲ್ಲ. ಆಗ, ಸ್ವ ಎಂದರೆ ಘಟ. ಸ್ವಾಶ್ರಯ ಕಪಾಲ. ಕಪಾಲಗ್ರಾಹಕ ಯಾವತ್ ಜ್ಞಾನ ಎಂದರೆ 'ಅಯಂ ಕಪಾಲಃ' ಎಂಬ ಜ್ಞಾನ. ತಜ್ಜ್ಞಾನದಲ್ಲಿ ಘಟವು ವಿಷಯವಲ್ಲ. ಹೀಗೆ, ಸಾಶ್ರಯವಿಷಯಕ–ಯಾವಜ್ಜ್ಞಾನಾಗ್ರಾಹ್ಯತ್ವರೂಪವಾದ ಸಾಧ್ಯವೇ ಘಟದಲ್ಲಿದೆ, ಸಾಧ್ಯಾಭಾವ ಇಲ್ಲ. ವ್ಯಭಿಚಾರದ ಪ್ರಸಕ್ತಿಯೇ ಇಲ್ಲ. ಅದರ ಪರಿಹಾರಕ್ಕಾಗಿ 'ತೃತೀಯ' ಎಂಬ ವಿಶೇಷಣ ವ್ಯರ್ಥ.

## ನ್ಯಾಯದೀಪ

**ಅಪ್ರಾಮಾಣ್ಯಸ್ಯೇತಿ ॥ ಶುಕ್ತೌ ರೂಪ್ಯಭ್ರಮಾನಂತರಂ ಬಾಧಾವತಾರಾತ್ 'ಇದಂ ಜ್ಞಾನಮ್ ಅಪ್ರಮಾ' ಇತ್ಯನುವ್ಯವಸಾಯೇ ಯತ್ ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವರೂಪಂ, ಪ್ರಾಮಾಣ್ಯಂ ತಸ್ಯಾಪಿ ಪಕ್ಷತ್ವೇನ, ತತ್ ಪ್ರಾಮಾಣ್ಯಾಶ್ರಯಗ್ರಾಹಕೇಣ ತದ್‌ಘಟಕೀಭೂತಾಪ್ರಾಮಾಣ್ಯಸ್ಯ ಗ್ರಾಹ್ಯತಯಾ ತತ್ರ ಸಾಧ್ಯವೈಕಲ್ಯಮ್ ಇತ್ಯರ್ಥಃ ।**

**ಅಪ್ರಾಮಾಣ್ಯವತ್ ಇತ್ಯಸ್ಯ ಪಕ್ಷೀಭೂತಪ್ರಾಮಾಣ್ಯಸಂಶಯಕೋಟಿಭೂತಾ ಪ್ರಾಮಾಣ್ಯವತ್, ಇತ್ಯರ್ಥಸ್ಯ ತಟ್ಟೀಕೋಕ್ತಾವಪಿ ತಾದೃಶಪ್ರಾಮಾಣ್ಯ ಘಟಕಸ್ಯಾಪಿ ತಥಾತ್ವಾತ್, ಇತಿ ಭಾವಃ ।**

ಮೂಲದಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಹೇಳಲಾಗಿದೆ. ಅದನ್ನು ಹೀಗೆ ತಿಳಿಯಬೇಕು–ಶುಕ್ತಿಯಲ್ಲಿ ರಜತಭ್ರಮೆ ಬಂದು ಆಮೇಲೆ ಬಾಧ ಬರುತ್ತದೆ. ಆಗ 'ಇದಂ ಜ್ಞಾನಂ ಅಪ್ರಮಾ' ಎಂದು ಅನುವ್ಯವಸಾಯ ಬರುತ್ತದೆ. ಈ ಅನುವ್ಯವಸಾಯದಲ್ಲಿ 'ಅಪ್ರಾಮಾಣ್ಯವತಿ ಅಪ್ರಾಮಾಣ್ಯಪ್ರಕಾರಕತ್ವವೇ' ಪ್ರಾಮಾಣ್ಯ. ಇಂತಹ ಪ್ರಾಮಾಣ್ಯವು ಪರೋಕ್ತಪರತಸ್ತ್ವ ಸಾಧಾಕಾನುಮಾನದಲ್ಲಿ ಪಕ್ಷವಾಗಿದೆ. ಆ ಪ್ರಾಮಾಣ್ಯವನ್ನು ಗ್ರಹಿಸುವ ಜ್ಞಾನವು ಪ್ರಾಮಾಣ್ಯ ಘಟಕತಯಾ ಅಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ. ಆದ್ದರಿಂದ ಆ ಅಪ್ರಾಮಾಣ್ಯದಲ್ಲಿ ಪಕ್ಷೀಭೂತಪ್ರಾಮಾಣ್ಯಾಶ್ರಯಗ್ರಾಹಕಗ್ರಾಹ್ಯತ್ವವೇ ಬಂತು. ಅಗ್ರಾಹ್ಯತ್ವರೂಪಸಾಧ್ಯ ಬರಲಿಲ್ಲ. ಆದ್ದರಿಂದ ಸಾಧ್ಯವೈಕಲ್ಯದೋಷ.

ವಸ್ತುತಃ ಮಣಿವ್ಯಾಖ್ಯಾನದಲ್ಲಿ 'ಅಪ್ರಾಮಾಣ್ಯವತ್' ಎಂಬ ದೃಷ್ಟಾಂತವನ್ನು ಪಕ್ಷೀಭೂತ-ಪ್ರಾಮಾಣ್ಯ–ಸಂದೇಹದಲ್ಲಿ ಕೋಟಿಯಾದ ಅಪ್ರಾಮಾಣ್ಯದಂತೆ, ಎಂದು ಹೇಳಲಾಗಿದೆ. ಆದರೂ ತುಲ್ಯನ್ಯಾಯೇನ ಪಕ್ಷೀಭೂತಪ್ರಾಮಾಣ್ಯಘಟಕವಾದ ಅಪ್ರಾಮಾಣ್ಯವೂ ದೃಷ್ಟಾಂತವಾಗಿದೆ. ಅದರಲ್ಲಿ ಸಾಧ್ಯವೈಕಲ್ಯವು ಬರುತ್ತದೆ.

## ನ್ಯಾಯದೀಪ

**ವ್ಯಭಿಚಾರಾಪ್ರಸಕ್ತಿಂ ವ್ಯನಕ್ತಿ–ಅಸ್ಮಿನ್ ಪಕ್ಷೇ ಇತಿ ॥**

**ನನು, ಗ್ರಾಹ್ಯಜ್ಞಾನಪ್ರಕಾರೇತ್ಯತ್ರ ಗ್ರಾಹ್ಯಜ್ಞಾನ ಶಬ್ದಸ್ಯಾಪಿ ಸ್ವಾಶ್ರಯಪರತಯಾ ಘಟಾಶ್ರಯಕಪಾಲಸ್ಯ ನಿಷ್ಪ್ರಕಾರಕತಯಾ ಘಟಾಶ್ರಯಪ್ರಕಾರ–ಪ್ರಕಾರಕತಯಾ ತದ್ವದ್‌ವಿಶೇಷ್ಯಕತಯಾ ಘಟಾಶ್ರಯ ಗ್ರಾಹಕ ಯಾವಜ್ಜ್ಞಾನಮ್ ಅಪ್ರಸಿದ್ಧಮ್ ಇತಿ ಚೇನ್ನ। ತಾದೃಶಜ್ಞಾನಾಪ್ರಸಿದ್ಧೇರೇವ ತದ್‌ಗ್ರಾಹ್ಯತ್ವಂ ನೇತಿ ತದಭಾವರೂಪಸಾಧ್ಯಸತ್ತ್ವಾತ್ । ಅತ ಏವ 'ಸಾಧ್ಯಮಸ್ತ್ಯೇವ' ಇತ್ಯುಕ್ತಮ್ ।**

ಮೂಲದಲ್ಲಿ ಹೇಳಿದ ವ್ಯಭಿಚಾರವನ್ನು ಹೀಗೆ ಸಮರ್ಥನೆ ಮಾಡಬಹುದು–ಸಾಧ್ಯದಲ್ಲಿ 'ಗ್ರಾಹ್ಯಜ್ಞಾನಪ್ರಕಾರ ಪ್ರಕಾರಕತಯಾ...ಸ್ವಾಶ್ರಯಗ್ರಾಹಕ' ಎಂದಿದೆ. ಅಲ್ಲಿ 'ಗ್ರಾಹ್ಯಜ್ಞಾನ' ಶಬ್ದದ ಬದಲು 'ಸ್ವಾಶ್ರಯಜ್ಞಾನ...' ಎಂದು ಹಾಕಿದಾಗ ಸಾಧ್ಯವು ಬರುವುದಿಲ್ಲ. ಸ್ವಪದದಿಂದ ಘಟವನ್ನು ತೆಗೆದುಕೊಂಡಾಗ ಸ್ವಾಶ್ರಯ=ಕಪಾಲ. ಅದು ನಿಷ್ಪ್ರಕಾರಕ. ಹೀಗಾಗಿ ಸ್ವಾಶ್ರಯಪ್ರಕಾರವೇ ಇಲ್ಲ. ಆದ್ದರಿಂದ ಸ್ವಾಶ್ರಯ–ಪ್ರಕಾರ–ಪ್ರಕಾರಕತಯಾ... ಇತ್ಯಾದಿ ವಿಶೇಷಣ ವಿಶಿಷ್ಟಘಟಾಶ್ರಯಗ್ರಾಹಕ ಜ್ಞಾನವೇ ಅಪ್ರಸಿದ್ಧವಾಯಿತು. ಆದ್ದರಿಂದ ವ್ಯಭಿಚಾರಕ್ಕೆ ಅವಕಾಶ ಇದೆ, ಎಂದರೆ, ಅಂತಹ ಜ್ಞಾನವು ಅಪ್ರಸಿದ್ಧವಾದುದರಿಂದಲೇ ತದಗ್ರಾಹ್ಯತ್ವರೂಪ ಸಾಧ್ಯವು ಘಟದಲ್ಲಿ ಸುಲಭವಾಗಿ ಬರುತ್ತದೆ. ವ್ಯಭಿಚಾರ ಹೇಗೆ? ಈ ಅಭಿಪ್ರಾಯದಿಂದಲೇ ಮೂಲದಲ್ಲಿ 'ಸಾಧ್ಯಂ ಅಸ್ತ್ಯೇವ' ಎನ್ನಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು, ಕಪಾಲವಿಷಯತಾದೃಶಜ್ಞಾನಾಪ್ರಸಿದ್ಧೇರೇವ ತದ್ವಿಷಯತ್ವರೂಪ ಫಲಾಭಾವಃ ಘಟೇ ನ ಸಿದ್ಧಃ। ಯೇನ ತತ್ರ ವ್ಯಭಿಚಾರಪ್ರಸಕ್ತಿಃ ನ ಸ್ಯಾತ್ ಇತ್ಯರುಚೇರಾಹ–ಕಿಂಚೇತಿ ॥**

ಘಟದಲ್ಲಿ ವ್ಯಭಿಚಾರ–ಪ್ರಸಕ್ತಿ ಇದ್ದೇ ಇದೆ. 'ಸ್ವಾಶ್ರಯ–ಪ್ರಕಾರ–ಪ್ರಕಾರತಯಾ' ಎಂಬ ಸಾಧ್ಯಾಂಶದಲ್ಲಿ ಘಟಾಶ್ರಯ ಕಪಾಲರೂಪವಾದ ಜ್ಞಾನವು ಅಪ್ರಸಿದ್ಧವಾಗಿರುವ ಕಾರಣದಿಂದಾಗಿ ತತ್‌ಪ್ರಕಾರಕತ್ವೇನ ಕಪಾಲಗ್ರಾಹಕ ಜ್ಞಾನವು ಅಪ್ರಸಿದ್ಧ. ಆದ್ದರಿಂದ ತದ್ವಿಷಯತ್ವ–ವಿಷಯತ್ವಾಭಾವ ಎಲ್ಲವೂ ಅಪ್ರಸಿದ್ಧವೇ. ಅಪ್ರಸಿದ್ಧವಾಗಿರುವಾಗ ಘಟದಲ್ಲಿ ಸಾಧ್ಯ ಬರುವುದು ಹೇಗೆ? ಆದ್ದರಿಂದ ವ್ಯಭಿಚಾರಪ್ರಸಕ್ತಿ ಇದೆ, ಅದರ ಪರಿಹಾರಕ್ಕಾಗಿ ಹೇತುವಿನಲ್ಲಿ 'ತೃತೀಯಕ್ಷಣ' ಎಂಬ ವಿಶೇಷಣ ಅಗತ್ಯ. ಹೀಗೆ ಹಿಂದಿನ ದೋಷದಲ್ಲಿ ಅಸ್ವಾರಸ್ಯ ತಿಳಿದು ಇನ್ನೊಂದು ದೋಷವನ್ನು ಹೇಳುತ್ತಾರೆ—

**किञ्च एतैरनुमानैः प्रामाण्यस्य किं साक्षिग्रहणयोग्यत्वाभावः साध्यते निश्चयरूपफलाभावो वा। नाद्यः । धर्म्यंश इव वैशिष्ट्यांशेऽपि त्वन्मते व्यवसायोपनीतत्वरूपा, मन्मते व्यवसायोपनीते तस्मिन् साक्षिणः सहजशक्तिरूपा योग्यताऽस्तीत्युक्तत्वेन बाधात् । संशयस्य निश्चयरूपफलाभावेनैवोपपत्त्या योग्यत्वाभावसाधनेऽप्रयोजकत्वाच्च ।**

**अन्त्येऽपि फलाभावसाधनं किं दोषशङ्कादिरूपेण प्रमाण्यविरोध्युपस्थापकसामग्रीसमवधानेन अप्रतिबन्धदशायाम् उत प्रतिबन्धदशायाम् । नाद्यः । तदा प्रामाण्ये संशयाभावेन आश्रयासिद्धेः । स्वरूपासिद्धेश्च । नान्त्यः । इष्टापत्तेः ।**

ತಾರ್ಕಿಕರು ಮಾಡಿದ ಹಿಂದಿನ ಅನುಮಾನಗಳಲ್ಲಿ ಉದ್ದೇಶವಾದ ಸಾಧ್ಯ ಯಾವುದು?

1. ವ್ಯವಸಾಯಗ್ರಾಹಕ–ಸಾಕ್ಷಿವಿಷಯತ್ವ ಯೋಗ್ಯತ್ವಾಭಾವವೋ?

2. ಅಥವಾ, ವ್ಯವಸಾಯಗ್ರಾಹಕ–ಸಾಕ್ಷಿರೂಪ ಪ್ರಾಮಾಣ್ಯನಿಶ್ಚಯಾಭಾವವೋ?

(ಅರ್ಥಾತ್, ಸಾಕ್ಷಿಯು ಪ್ರಾಮಾಣ್ಯನಿಶ್ಚಯರೂಪವಲ್ಲ ಎಂದು ಸಾಧ್ಯದ ಅಭಿಪ್ರಾಯ)

ಮೊದಲನೆಯ ಸಾಧ್ಯ ಯುಕ್ತವಲ್ಲ. ನ್ಯಾಯಮತದಲ್ಲಿ ವ್ಯವಸಾಯದಲ್ಲಿ ಧರ್ಮಿಯಾದ

ಘಟಾದಿಗಳು ವ್ಯವಸಾಯೋಪನೀತವಾದ ಕಾರಣ ಸಾಕ್ಷಿವಿಷಯತ್ವ ಯೋಗ್ಯವಾಗಿರುವಂತೆ ಧರ್ಮ-ಧರ್ಮಿವೈಶಿಷ್ಟ್ಯರೂಪವಾದ ಪ್ರಾಮಾಣ್ಯವೂ ವ್ಯವಸಾಯೋಪನೀತವಾದುದರಿಂದ ಸಾಕ್ಷಿವಿಷಯತ್ವಯೋಗ್ಯವಾಗಿದೆ. ತದಭಾವವನ್ನು ಸಾಧನೆ ಮಾಡಿದರೆ ಬಾಧ.

ನಮ್ಮ ಮತದಲ್ಲಿ ವ್ಯವಸಾಯೋಪನೀತವಾದ ಉಕ್ತಪ್ರಾಮಾಣ್ಯವಿಷಯಕವಾದ ಸಾಕ್ಷಿಗತ ಸಹಜಶಕ್ತಿಯೇ ಸಾಕ್ಷಿಗ್ರಹಣ ಯೋಗ್ಯತ್ವ. ಅದು ಇದೆಯಾದ್ದರಿಂದ ತದಭಾವಸಾಧನೆ ಮಾಡಿದರೆ ಬಾಧ.

ಅಷ್ಟೇ ಅಲ್ಲ, ಯೋಗ್ಯತ್ವಾಭಾವವನ್ನು ಸಾಧನೆ ಮಾಡುವ ಸಾಮರ್ಥ್ಯ ಹೇತುವಿಗೆ ಇಲ್ಲವಾದುದರಿಂದ ಅಪ್ರಯೋಜಕತ್ವವು ಬರುತ್ತದೆ. ತೃತೀಯ ಕ್ಷಣದಲ್ಲಿ ಬರುವ ಸಂದೇಹವು ಹೇತು. ಸಂದೇಹ ಬರುವುದರಿಂದ ಅದಕ್ಕೆ ವಿರೋಧಿಯಾದ ಪ್ರಾಮಾಣ್ಯನಿಶ್ಚಯವಿಲ್ಲ ಎಂದಾಗಬಹುದೇ ಹೊರತು, ಪ್ರಾಮಾಣ್ಯಗ್ರಹಣ ಯೋಗ್ಯತೆಯೇ ಸಾಕ್ಷಿಗೆ ಇಲ್ಲ, ಎಂದೇನೂ ಸಿದ್ಧವಾಗುವುದಿಲ್ಲ.

2. ಎರಡನೆಯ ಸಾಧ್ಯದಲ್ಲೂ ಮತ್ತೆರಡು ಪ್ರಶ್ನೆಗಳು.

2ಎ. ಪ್ರಾಮಾಣ್ಯನಿಶ್ಚಯರೂಪ ಫಲಾಭಾವವನ್ನು ಪ್ರಾಮಾಣ್ಯವಿರೋಧ್ಯುಪಸ್ಥಾಪಕ-ಸಾಮಗ್ರಿಯಿಂದ ಪ್ರತಿಬಂಧ ಇಲ್ಲದಿರುವಾಗ ಸಾಧನೆ ಮಾಡಲಾಗುವುದೋ?

2ಬಿ. ಅಥವಾ, ಅಂತಹ ಸಾಮಗ್ರಿಯ ಪ್ರತಿಬಂಧ ಇರುವಾಗಲೋ?

2ಎ. ಮೊದಲ ಪಕ್ಷದಲ್ಲಿ ಪ್ರಾಮಾಣ್ಯಸಂದೇಹಕ್ಕೆ ಅವಕಾಶವೇ ಇಲ್ಲ. ಅಪ್ರತಿಬದ್ಧವಾದ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧಾರ ಮಾಡಿಬಿಡುತ್ತದೆ. ಆದ್ದರಿಂದ ಅನುಮಾನಕ್ಕೆ ಹೇತ್ವಸಿದ್ಧಿದೋಷ. ಆಶ್ರಯಾಸಿದ್ಧಿಯೂ ಇದೆ. 'ಸಂಶಯ ವಿಷಯೀಭೂತಂ ಪ್ರಾಮಾಣ್ಯಮ್' ಎಂಬ ಪಕ್ಷವೇ ಆಗ ಅಸಿದ್ಧ.

2ಬಿ. ಎರಡನೆಯ ಪಕ್ಷದಲ್ಲಿ ಇಷ್ಟಾಪತ್ತಿ. ಸ್ವತಸ್ತ್ವವಾದಿಗಳಾದ ನಾವು ಪ್ರಾಮಾಣ್ಯವು ಸರ್ವದಾ ಸಾಕ್ಷಿಗ್ರಾಹ್ಯ ಎಂದು ಹೇಳುವುದಿಲ್ಲ. ಪ್ರತಿಬಂಧಕ ಇಲ್ಲದಿರುವಾಗ ಸಾಕ್ಷಿಗ್ರಾಹ್ಯತ್ವ ನಿಯಮವೇ ಸ್ವತಸ್ತ್ವ. ಪ್ರತಿಬಂಧಕವಿದ್ದಾಗ ಸಾಕ್ಷಿಗ್ರಾಹ್ಯವಲ್ಲ, ಎಂಬಲ್ಲಿ ನಮಗೆ ವಿಪ್ರತಿಪತ್ತಿಯೇ ಇಲ್ಲ. ಆದ್ದರಿಂದ, ಸಿದ್ಧಸಾಧನತಾದೋಷ.

ಹೀಗೆ ಈ ಅನುಮಾನಗಳು ದುಷ್ಟವಾಗಿವೆ.

## ನ್ಯಾಯದೀಪ

**ಕಿಂಚೇತಿ ॥ ಧರ್ಮ್ಯಂಶೇ ಇತ್ಯುಪಲಕ್ಷಣಮ್ । ಧರ್ಮ-ಧರ್ಮ್ಯಂಶಯೋಃ ಇವ, ಇತ್ಯರ್ಥಃ। ಅಸ್ಮಿನ್ನಿತಿ ॥ ವೈಶಿಷ್ಟ್ಯಾಂಶವಿಷಯೇ ಇತ್ಯರ್ಥಃ।**

**ಉಕ್ತತ್ವೇನೇತಿ ॥ ಬಾಧೋದ್ಧಾರಗ್ರಂಥೇ। ಅಪ್ರತಿಬಂಧೇತಿ ॥ ಸಾಧ್ಯೇ 'ಸಂಶಯವೇಲಾಯಾಂ ಅಗ್ರಾಹ್ಯಂ' ಇತ್ಯನುಕ್ತೇಃ ವಿಕಲ್ಪದ್ವಯಾವಕಾಶಃ, ಇತಿ ಭಾವಃ। ಇಷ್ಟಾಪತ್ತೇರಿತಿ ॥ ಅಪ್ರತಿಬದ್ಧಸಾಕ್ಷಿವೇದ್ಯತ್ವಸ್ಯ, ಸಾಕ್ಷಿಯೋಗ್ಯತ್ವಸ್ಯ ವಾ ಸ್ವತಸ್ತ್ವಸ್ಯ ಅಸ್ಮದಭಿಮತಸ್ಯ ಅನಪಾಯಾತ್, ಇತಿ ಭಾವಃ।**

ಮೂಲದಲ್ಲಿ ಧರ್ಮ್ಯಂಶದಲ್ಲಿ ಸಾಕ್ಷ್ಯುಪನೀತತ್ವದ ಜೊತೆಗೆ ಧರ್ಮಾಂಶದಲ್ಲೂ ಸಾಕ್ಷ್ಯುಪನೀತತ್ವವನ್ನು ದೃಷ್ಟಾಂತವನ್ನಾಗಿ ತೆಗೆದುಕೊಳ್ಳಬೇಕು.

ದ್ವಿತೀಯ ಪಕ್ಷದಲ್ಲಿ ಎರಡು ವಿಕಲ್ಪಗಳನ್ನು ಮಾಡಲಾಗಿದೆ. ವಸ್ತುತಃ ಸಂದೇಹ ಬರುವ ಸಂದರ್ಭದಲ್ಲಿ ಸಾಕ್ಷಿಗ್ರಾಹ್ಯತ್ವಾಭಾವವು ಸಾಧ್ಯವೆಂದಾದಾಗ ಪ್ರತಿಬಂಧಕದ ಅಭಾವ ಇರುವ ಸಂಭವವೇ ಇಲ್ಲವಾದುದರಿಂದ ಪ್ರತಿಬಂಧಕವಿದ್ದಾಗಲೋ ಇಲ್ಲದಾಗಲೋ? ಎಂಬ ವಿಕಲ್ಪಕ್ಕೆ ಅವಕಾಶವೇ ಇಲ್ಲ. ಆದರೆ, ಸಾಕ್ಷಿವಿಷಯತ್ವಾಭಾವ ಮಾತ್ರ ಪರಾನುಮಾನದಲ್ಲಿ ಸಾಧ್ಯ. ಸಂಶಯದ ಶಾಯಂ, ಎಂಬ ಅಂಶ ಸಾಧ್ಯದಲ್ಲಿ ಸೇರಿಲ್ಲ. ಆಗ, ಈ ವಿಕಲ್ಪಕ್ಕೆ ಅವಕಾಶವಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಫಲಾಭಾವೇನ ಯೋಗ್ಯತ್ವಾಭಾವಾನುಮಾನಾತ್ ಸ್ವತಸ್ತ್ವಹಾನಿರೇವ ಇತ್ಯತ ಆಹ–ನಚೇತಿ ॥**

ಪ್ರಾಮಾಣ್ಯನಿಶ್ಚಯರೂಪವಾದ ಫಲ ಇಲ್ಲದ ಕಾರಣದಿಂದ ಸಾಕ್ಷಿಗೆ ಪ್ರಾಮಾಣ್ಯಗ್ರಹಣಯೋಗ್ಯತೆಯೇ ಇಲ್ಲವೆಂದು ಸಾಧಿಸುತ್ತೇವೆ. ನಿಮಗೆ ಇಷ್ಟಾಪತ್ತಿ ಹೇಗೆ? ಅದಕ್ಕೆ 'ನಚ' ಎಂದು ಉತ್ತರ.

**नच फलाभावेनैव योग्यत्वाभावः सिध्यति । बाधस्योक्तत्वात् । बह्नौ दाहशक्तेरिव साक्षिणि प्रामाण्यग्रहणशक्तेः सहजत्वेऽपि मण्यादिप्रतिबन्धेन अदाहस्येव, दोषशङ्कादिप्रतिबन्धेन प्रामाण्याग्रहणस्योपपत्तेश्च। उक्तं हि टीकाकारैः। ''नहि गोक्षुरकापसर्पणसापेक्षत्वेन गजस्य गमनशक्तिः परतन्त्रा'' इति ।**

''ದ್ವಿತೀಯಪಕ್ಷದಲ್ಲಿ ಇಷ್ಟಾಪತ್ತಿಗೆ ಅವಕಾಶವಿಲ್ಲ. ಸಂಶಯರೂಪ ಫಲಾಭಾವದಿಂದ ಸಾಕ್ಷಿಗೆ ಪ್ರಾಮಾಣ್ಯಗ್ರಹಣ ಯೋಗ್ಯತ್ವಾಭಾವವನ್ನು ಸಾಧನೆ ಮಾಡುವುದೇ ನಮ್ಮ ಉದ್ದೇಶ'' ಎನ್ನುವುದು ಯುಕ್ತವಲ್ಲ. ಹೀಗೆ ಸಾಧನೆ ಮಾಡಿದರೆ ಇಲ್ಲೇ ಹಿಂದೆ ಬಾಧವನ್ನು ಹೇಳಲಾಗಿದೆ. ಹೇಗೆಂದರೆ,

ವಹ್ನಿಯಲ್ಲಿ ದಾಹಶಕ್ತಿಯು ಸಹಜವಾದರೂ ಮಣಿ-ಮಂತ್ರಾದಿರೂಪವಾದ ಪ್ರತಿಬಂಧಕವಿದ್ದಾಗ ದಾಹರೂಪ ಫಲಾಭಾವ ಇರುತ್ತದೆ. ತಾವತಾ ವಹ್ನಿಗೆ ದಾಹಯೋಗ್ಯತೆಯೇ ಇಲ್ಲವೆಂದೇನೂ ಆಗುವುದಿಲ್ಲ. ಅದರಂತೆ, ಸಾಕ್ಷಿಯು ದೋಷಸಂದೇಹಾದಿರೂಪ ಪ್ರತಿಬಂಧಕಗಳಿದ್ದಾಗ ಪ್ರಾಮಾಣ್ಯ ನಿಶ್ಚಯವನ್ನು ಉಂಟುಮಾಡುವುದಿಲ್ಲ ಅನ್ನುವುದರಿಂದ ಸಾಕ್ಷಿಗೆ ಪ್ರಾಮಾಣ್ಯಗ್ರಹಣಯೋಗ್ಯತೆಯೇ ಇಲ್ಲವೆಂದಾಗುವುದಿಲ್ಲ, ಆ ಶಕ್ತಿಯು ಸಹಜವಾದರೂ ಪ್ರತಿಬಂಧಕವಶಾತ್ ಪ್ರಾಮಾಣ್ಯ ನಿಶ್ಚಯವಾಗುವುದಿಲ್ಲ, ಎಂದು ಹೇಳಬಹುದು.

ಶ್ರೀಮಜ್ಜಯತೀರ್ಥರು ವಾದಾವಲಿಯಲ್ಲಿ ಗಜದೃಷ್ಟಾಂತ ಕೊಟ್ಟು ಇದನ್ನು ಸಮರ್ಥನೆ ಮಾಡಿದ್ದಾರೆ- ''ಗೋಕ್ಷುರಕ ಎಂಬ ಮುಳ್ಳು ಎದುರಾದರೆ ಆನೆ ನಿಲ್ಲುತ್ತದೆ. ಅದನ್ನು ತೆಗೆದಾಗ ಆನೆ ಮುಂದಕ್ಕೆ ನಡೆಯುತ್ತದೆ. ಇದರಿಂದ ಆನೆಯ ಗಮನಶಕ್ತಿಯು ಪರಾಧೀನ, ಎಂದೇನೂ ಆಗುವುದಿಲ್ಲ.''

## ನ್ಯಾಯದೀಪ

**ಬಾಧಸ್ಯ ಉಕ್ತತ್ವಾದಿತಿ ॥ ತ್ವನ್ಮತೇ ಇತ್ಯಾದಿನಾ ಇತ್ಯರ್ಥಃ । ಶಕ್ತಿರೂಪಯೋಗ್ಯತ್ವಸತ್ವೇ ತದಗ್ರಹೋ ಅಯುಕ್ತಃ ಇತ್ಯತ ಆಹ-ವಹ್ನೌ ಇತಿ ॥ ಪ್ರತಿಬಂಧಾಭಾವಸಾಪೇಕ್ಷತ್ವೇ ಕಥಂ ನ ಸ್ವತಸ್ತ್ವಹಾನಿಃ? ಇತ್ಯತ ಆಹ-ಉಕ್ತಂ ಹೀತಿ ॥ ವಾದಾವಲ್ಯಾಮ್ ಇತ್ಯರ್ಥಃ ।**

ಸಾಕ್ಷಿಯಲ್ಲಿ ಪ್ರಾಮಾಣ್ಯಗ್ರಹಣಶಕ್ತಿ ಇದ್ದಮೇಲೆ ಅದು ಕೆಲವೊಮ್ಮೆ ಪ್ರಾಮಾಣ್ಯವನ್ನು ಗ್ರಹಿಸದಿರುವುದು ಹೇಗೆ? ಅದಕ್ಕೆ ಮೂಲದಲ್ಲಿ ವಹ್ನಿಯ ಉದಾಹರಣೆಯನ್ನು ಕೊಡಲಾಗಿದೆ. ಸಾಕ್ಷಿಯು ಪ್ರತಿಬಂಧಕಗಳು ಇಲ್ಲದಿರುವಾಗ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದರೆ ಅದು ಪ್ರತಿಬಂಧಾಭಾವಸಾಪೇಕ್ಷವಾಗಿ ಪ್ರಾಮಾಣ್ಯಗ್ರಾಹಕ ಎಂದಂತಾಗುತ್ತದೆ. ಇದರಿಂದ ಸ್ವತಸ್ತ್ವಕ್ಕೆ ಹಾನಿಯಾಗುವುದಿಲ್ಲವೇ? ಎಂಬ ಆಕ್ಷೇಪಕ್ಕೆ ವಾದಾವಲಿಯ ವಾಕ್ಯವನ್ನು ಉದಾಹರಿಸಲಾಗಿದೆ.

**किञ्चोक्तेन अनवस्थारूपेण, प्रथमस्य प्रामाण्यग्रहणस्यानुपपत्तिरूपेण च तर्केण पराहतिः ।**

ಈ ಪ್ರತಿಪಕ್ಷಾನುಗಳು ಎರಡು ತರ್ಕಗಳಿಂದ ಪರಾಹತಗಳಾಗಿವೆ-

ತರ್ಕ 1. ಯದಿ ಪ್ರಾಮಾಣ್ಯಂ ಜ್ಞಾನಗ್ರಾಹಕೇಣ ನ ಗೃಹ್ಯೇತ ತರ್ಹಿ ಅನವಸ್ಥಾ ಸ್ಯಾತ್ ।

ತರ್ಕ 2. ಯದಿ ಪ್ರಾಮಾಣ್ಯಂ ಅನುಮಾನಗ್ರಾಹ್ಯಂ ಸ್ಯಾತ್ ತರ್ಹಿ ಪ್ರಥಮ ಪ್ರಾಮಾಣ್ಯಗ್ರಹಃ ನ ಸ್ಯಾತ್ ॥

(ಇವೆರಡನ್ನೂ ಹಿಂದಿನ ಪ್ರಕರಣಗಳಲ್ಲಿ ಸಮರ್ಥಿಸಲಾಗಿದೆ.)

**अपि च उपाधेर्व्यभिचारोन्नायकत्वपक्षे, अनुव्यवसायविषयत्वयोग्यतारहितोपाधिघटितत्ववम् उपाधिः। तदग्राह्योपाधिघटितत्वं च तदग्राह्यत्वं विनाऽनुपपन्नम्। प्रत्यक्षाग्राह्यगुरुत्वघटितगुरुत्ववत्त्वादौ तथा दर्शनात्। त्वदीयो हेतुस्तु तद्ग्राह्यत्वेऽपि ग्रहणरूपफलाभावेनैव उपपन्नः इत्युपाधिः साध्यव्यापकः।**

ಪರತಸ್ತ್ವಸಾಧಕಾನುಮಾನಗಳಿಗೆ ಉಪಾಧಿದೋಷವೂ ಇದೆ. ಆದರೆ, ಉಪಾಧಿಯು ಪ್ರತಿಪಕ್ಷೋನ್ನಾಯಕ ಎಂದು ತಿಳಿದರೆ ಅದು ದೋಷವಾಗುವುದಿಲ್ಲ. ಏಕೆಂದರೆ, ಪರತಸ್ತ್ವಸಾಧಕಾನುಮಾನಗಳು ಪ್ರತಿಪಕ್ಷಾನುಮಾನಗಳು. ಪ್ರತಿಪಕ್ಷಾನುಮಾನಕ್ಕೆ ಈಗಾಗಲೇ ಸ್ವಪಕ್ಷಾನುಮಾನಗಳು ಪ್ರತಿಪಕ್ಷವಾಗಿರುವುದರಿಂದ ಪ್ರತಿಪಕ್ಷಕ್ಕೆ ಮತ್ತೆ ಪ್ರತಿಪಕ್ಷ ವ್ಯರ್ಥ. ಆದ್ದರಿಂದ ಮಣಿಕಾರ ಹೇಳಿದಂತೆ ಉಪಾಧಿಯು ವ್ಯಭಿಚಾರೋನ್ನಾಯಕ, ಎಂಬ ಪಕ್ಷವನ್ನು ಅವಲಂಬಿಸಿ ಉಪಾಧಿ ದೋಷವನ್ನು ಹೇಳಬೇಕು.

'ಪ್ರಾಮಾಣ್ಯದಲ್ಲಿ ಅನುವ್ಯವಸಾಯವಿಷಯತ್ವಯೋಗ್ಯತೆ ಇಲ್ಲದಿರುವ ಯಾವುದೇ ಧರ್ಮಗಳು ಸೇರಿಲ್ಲ' ಇದೇ ಉಪಾಧಿ. ಇಂತಹ ಉಪಾಧಿಯೆ ಅನುವ್ಯವಸಾಯ ಗ್ರಾಹ್ಯತ್ವಾಭಾವ ಎಂಬ ಸಾಧ್ಯಕ್ಕೆ ಪ್ರಯೋಜಕ. ಏಕೆಂದರೆ, ತದಿಂದ್ರಿಯದಿಂದ ಅಗ್ರಾಹ್ಯವಾದ ಧರ್ಮದಿಂದ ಘಟಿತವಾದುದು ತದಿಂದ್ರಿಯಗ್ರಾಹ್ಯವಾಗುವುದಿಲ್ಲ. ಉದಾಹರಣೆ-ಗುರುತ್ವ ಎಂಬ ಗುಣವು ಅತೀಂದ್ರಿಯವಾದ ಕಾರಣ ಚಕ್ಷುರಿಂದ್ರಿಯ-ಅಗ್ರಾಹ್ಯ. ಆದ್ದರಿಂದ ಗುರುತ್ವಘಟಿತವಾದ 'ಗುರುತ್ವವತ್ವ' ಧರ್ಮವೂ ಚಕ್ಷುರಯೋಗ್ಯ. ಆದರೆ, ಪ್ರಕೃತದಲ್ಲಿ ಪ್ರಾಮಾಣ್ಯ ಶರೀರದಲ್ಲಿ ಸಾಕ್ಷಿಗ್ರಹಣಾಯೋಗ್ಯವಾದ ಯಾವುದೇ ಧರ್ಮ ಸೇರಿಲ್ಲ. ಧರ್ಮ, ಧರ್ಮಿ, ಅವೆರಡರ ವೈಶಿಷ್ಟ್ಯಗಳು ಪ್ರಾಮಾಣ್ಯಘಟಕಗಳು. ಅವೆಲ್ಲವೂ ವ್ಯವಸಾಯೋಪನೀತವಾದುದರಿಂದ ಸಾಕ್ಷಿಗ್ರಹಣ ಯೋಗ್ಯಗಳೇ ಆಗಿವೆ.

ಪರೋಕ್ತ ಹೇತುವು ಸಾಧ್ಯಕ್ಕೆ ಪ್ರಯೋಜಕವಲ್ಲ. ತೃತೀಯಕ್ಷಣದಲ್ಲಿ ಸಂದೇಹಬರುವುದರಿಂದ ಪ್ರಾಮಾಣ್ಯವು ಅನುವ್ಯವಸಾಯಗ್ರಾಹ್ಯವಲ್ಲ, ಎಂದು ಪರೋಕ್ತ ಸಾಧ್ಯ-ಸಾಧನಭಾವ. ಆದರೆ, ಪ್ರಾಮಾಣ್ಯವು ಸಾಕ್ಷಿಗ್ರಾಹ್ಯವಾದರೂ ಪ್ರತಿಬಂಧವಶಾತ್ ಸಾಕ್ಷಿಯಿಂದ ಗ್ರಹಣವಾಗದಿದ್ದಾಗ ಸಂದೇಹವು ಬರಬಹುದು. ಆದ್ದರಿಂದ ಅದು ಸಾಧ್ಯಪ್ರಯೋಜಕವಲ್ಲ.

ಹೀಗೆ, ಸಾಧ್ಯಕ್ಕೆ ಪ್ರಕೃತ ಉಪಾಧಿಯು ಪ್ರಯೋಜಕವಾದುದರಿಂದ ಸಾಧ್ಯವ್ಯಾಪಕವಾಗುತ್ತದೆ. ಅದರಲ್ಲಿ ಉಪಾಧಿಯ ಲಕ್ಷಣ ಬರುತ್ತದೆ.

## ನ್ಯಾಯದೀಪ

**ನನು ಮಣ್ಯುಕ್ತಹೇತೂನಾಂ ಸ್ವೋಕ್ತಹೇತುಪ್ರತಿಪಕ್ಷತ್ವೇನ ಅತ್ರ ಉಪನ್ಯಾಸಾತ್, ಉಪಾಧೇಃ ಪ್ರತಿಪಕ್ಷೋನ್ನಾಯಕತ್ವಪಕ್ಷೇ ಪ್ರತಿಪಕ್ಷೇ ಪ್ರತಿಪಕ್ಷಾಂತರವತ್, ಉಪಾಧ್ಯುದ್ಭಾವನಂ ವ್ಯರ್ಥಮ್, ಇತ್ಯತೋ ಮಣಿಕೃನ್ಮತಾವಷ್ಟಂಭೇನಾಹ- ಉಪಾಧೇರ್ವ್ಯಭಿಚಾರೇತ್ಯಾದಿ ॥**

ಮಣಿಕಾರ ಪರತಸ್ತ್ವಸಾಧನೆಗಾಗಿ ಹೇಳಿದ ಹೇತುಗಳು ಪ್ರಾಮಾಣ್ಯಸ್ವತಸ್ತ್ವಸಾಧಕವಾಗಿ ನಾವು ಹೇಳಿದ ಹೇತುಗಳಿಗೆ ಪ್ರತಿಪಕ್ಷಗಳಾಗಿವೆ. ಆ ಹೇತುಗಳಿಗೆ ಉಪಾಧಿದೋಷವನ್ನು ಹೇಳಿದರೆ, ಉಪಾಧಿಯು ಪ್ರತಿಪಕ್ಷೋನ್ನಾಯಕ ಎನ್ನುವ ಪಕ್ಷದಲ್ಲಿ, ಆ ದೋಷ ವ್ಯರ್ಥ. ಪ್ರತಿಪಕ್ಷಕ್ಕೆ ಈಗಾಗಲೇ ಸ್ವೋಕ್ತ ಹೇತುಗಳು ಪ್ರತಿಪಕ್ಷಗಳಾಗಿವೆ. ಮತ್ತೊಂದು ಪ್ರತಿಪಕ್ಷವನ್ನು ಹೇಳುವುದು ವ್ಯರ್ಥ. ಅದಕ್ಕಾಗಿ ಈ ಉಪಾಧಿದೋಷವನ್ನು, ಉಪಾಧಿಯು ವ್ಯಭಿಚಾರೋನ್ನಾಯಕ, ಎಂಬ ಮಣಿಕಾರನ ಪಕ್ಷದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**ಧರ್ಮ-ಧರ್ಮಿವತ್ ವೈಶಿಷ್ಟ್ಯಾಂಶೇಽಪಿ ಯೋಗ್ಯತಾಯಾಃ ಉಪಪಾದಿತತ್ವೇನ ಅನುವ್ಯವಸಾಯ-ಯೋಗ್ಯತಾರಹಿತ-ಉಪಾಧಿಘಟಿತತ್ವಂ ಪಕ್ಷೀಭೂತ-ಪ್ರಾಮಾಣ್ಯೇ ಸಾಧನವತಿ ನೇತಿ ಸಾಧನಾವ್ಯಾಪಕತ್ವಂ ಸ್ಪಷ್ಟಮ್। ಸಾಧ್ಯವ್ಯಾಪಕತ್ವಂ ಕಥಮ್? ಇತ್ಯತಃ, ಸಾಧ್ಯಂ ಪ್ರತಿ ಪ್ರಯೋಜಕತ್ವಮ್ ಅಸ್ಯ ವ್ಯನಕ್ತಿ-ತದ್‌ಗ್ರಾಹ್ಯೇತಿ ॥ ಪೂರ್ವೋಕ್ತೋಪಾಧೇಃ ನಿಷ್ಪ್ರತ್ಯೂಹಾನುವಾದೋಽಯಮ್ ॥**

ವ್ಯವಸಾಯದಲ್ಲಿ ತೋರುವ ಧರ್ಮ ಮತ್ತು ಧರ್ಮಿಗಳಂತೆ ಅವೆರಡಕ್ಕಿರುವ ವೈಶಿಷ್ಟ್ಯವೂ ಸಾಕ್ಷಿಗ್ರಹಣಯೋಗ್ಯವಾಗಿದೆ ಎಂದು ಓಂದೆ ಉಪಪಾದನೆ ಮಾಡಲಾಗಿದೆ. ಇದರಿಂದ ಪಕ್ಷೀಭೂತಪ್ರಾಮಾಣ್ಯದಲ್ಲಿ ಅನುವ್ಯವಸಾಯಕ್ಕೆ ಯೋಗ್ಯವಲ್ಲದ ಉಪಾಧಿಗಳು ಸೇರಿಲ್ಲ ಎಂದು ತಿಳಿಯಿತು. ಅಲ್ಲಿಗೆ ಉಪಾಧಿಯು ಪ್ರಾಮಾಣ್ಯದಲ್ಲಿ ಇಲ್ಲ, ಹೇತು ಇದೆ. ಇದರಿಂದ ಉಪಾಧಿಗೆ ಸಾಧನಾವ್ಯಾಪಕತ್ವವು ಸ್ಫುಟವಾಯಿತು. ಇನ್ನು ಸಾಧ್ಯವ್ಯಾಪಕತ್ವವು ಬರಬೇಕು. ಅದನ್ನು ಮೂಲದಲ್ಲಿ ಸಮರ್ಥನೆ ಮಾಡಲಾಗಿದೆ. ಸಾಧ್ಯಕ್ಕೆ ಉಪಾಧಿಯೇ ಪ್ರಯೋಜಕ ಎಂದು ಸಮರ್ಥನೆ ಮಾಡುವ ಮೂಲಕ ಮೂಲದಲ್ಲಿ ಸಾಧ್ಯವ್ಯಾಪಕತ್ವವನ್ನು ತೋರಿಸಲಾಗಿದೆ.

## ನ್ಯಾಯದೀಪ

**ಹೇತೋಃ ಅಪ್ರಯೋಜಕತ್ವಮಾಹ–ತ್ವದೀಯಂ ಇತಿ ॥ ತದ್‌ಗ್ರಾಹ್ಯತ್ವೇಽಪಿ–ತದ್‌ಗ್ರಹಣ ಯೋಗ್ಯತ್ವೇಽಪಿ, ಇತ್ಯರ್ಥಃ। ಏವಂಚ ಉಪಾಧಿ–ಹೇತ್ವೋಃ ಅನುಕೂಲತರ್ಕಭಾವಾಭಾವೋಕ್ತ್ಯಾ,**

**ಅನುಕೂಲೇನ ತರ್ಕೇಣ ಸನಾಥೇ ಸತಿ ಸಾಧನೇ ।**
**ಸಾಧ್ಯವ್ಯಾಪಕತಾಭಂಗಾತ್ ಪಕ್ಷೇ ನೋಪಾಧಿಸಂಭವಃ ॥**

**ಇತ್ಯಸ್ಯಾನವಕಾಶಃ ಇತಿ ಭಾವೇನಾಹ–ಸಾಧ್ಯವ್ಯಾಪಕ ಇತಿ ॥**

ಪರೋಕ್ತ ಪರತಸ್ತ್ವಸಾಧಕ ಹೇತುವು ಅಪ್ರಯೋಜಕ ಎನ್ನುವುದನ್ನು 'ತ್ವದೀಯ' ಎಂಬ ವಾಕ್ಯದಲ್ಲಿ ಹೇಳಿದ್ದಾರೆ. ಮೂಲದಲ್ಲಿ ತದ್‌ಗ್ರಾಹ್ಯತ್ವೇಽಪಿ ಎಂದರೆ ಅನುವ್ಯವಸಾಯ ಜನ್ಯ–ಗ್ರಹವಿಷಯತ್ವೇಽಪಿ ಎಂದು ಅರ್ಥವಲ್ಲ, ಅನುವ್ಯವಸಾಯಕ್ಕೆ ಯೋಗ್ಯವಾದರೂ, ಎಂದರ್ಥ.

ಈ ಮೂಲದಲ್ಲಿ ಉಪಾಧಿಗೆ ಅನುಕೂಲ ತರ್ಕ ಇದೆ, ಪರೋಕ್ತ ಹೇತುವಿಗೆ ವ್ಯಾಪ್ತಿಗ್ರಾಹಕ ಅನುಕೂಲತರ್ಕ ಇಲ್ಲ, ಎಂದು ಹೇಳಲಾಗಿದೆ. ಇದರಿಂದಾಗಿ, ಹೇತುವಿಗೆ ಸಾಧ್ಯವ್ಯಾಪ್ತಿಗ್ರಾಹಕವಾದ ಅನುಕೂಲತರ್ಕ ಇದ್ದಾಗ ಪಕ್ಷದಲ್ಲಿ ಸಾಧ್ಯನಿಶ್ಚಯವಾಗುತ್ತದೆ. ಅಲ್ಲಿ ಉಪಾಧಿ ಇಲ್ಲ, ಎನ್ನುವುದು ನಿಶ್ಚಿತ. ಹೀಗೆ ಉಪಾಧಿಗೆ ಪಕ್ಷದಲ್ಲೇ ಸಾಧ್ಯವ್ಯಾಪಕತ್ವಭಂಗ ಬಂತು. ಆದ್ದರಿಂದ ಅದು ಉಪಾಧಿಯಾಗುವುದಿಲ್ಲ, ಎಂಬ ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಇದನ್ನು 'ಉಪಾಧಿಃ ಸಾಧ್ಯವ್ಯಾಪಕಃ' ಎಂದು ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಸಾಕ್ಷಿಣೋ ಜ್ಞಾನಗೋಚರಸ್ಯ ಜ್ಞಾನತ್ವಾಂಶೇಽಪಿ ಸವಿಕಲ್ಪಕತ್ವಾತ್ ತತ್‌ಸಿದ್ಧ್ಯರ್ಥಂ ಪರೋಕ್ತಂ ನಿರಾಹ–ಕಿಂಚೇತಿ ॥**

ಹಿಂದೆ (ಪು.471) ಸಾಕ್ಷಿಯು ವ್ಯವಸಾಯವನ್ನು ವಿಷಯೀಕರಿಸುವಾಗ ಅದು ಜ್ಞಾನತ್ವಾಂಶದಲ್ಲಿ ನಿರ್ವಿಕಲ್ಪಕ ಎಂದು ಹೇಳಲಾಗಿದೆ. ಆದರೆ ಅದು ಜ್ಞಾನತ್ವಾಂಶದಲ್ಲಿ ಸವಿಕಲ್ಪಕ ಎಂದು ಹೇಳಿ, ನೈಯಾಯಿಕರು ಹೇಳಿದ್ದು ಸರಿ ಇಲ್ಲ ಎಂದು ಮುಂದೆ 'ಕಿಂಚ' ಎಂದು ಹೇಳಲಾಗಿದೆ.

**किञ्चानुव्यवसायस्य नरसिंहाकारत्वे 'घटविषयकं प्रमाणं न वा' इत्येव संशयः स्यात् । नतु घटविषयकं ज्ञानं प्रमाणं न वेति । ज्ञानत्वस्य धर्मितावच्छेदकत्वेनाज्ञानात् ।**

ನೈಯಾಯಿಕರು ಹೇಳಿದಂತೆ ಅನುವ್ಯವಸಾಯವು ಜ್ಞಾನತ್ವಾಂಶದಲ್ಲಿ ನಿರ್ವಿಕಲ್ಪಕ, ಘಟವಿಷಯಕತ್ವಾಂಶದಲ್ಲಿ ಸವಿಕಲ್ಪಕವಾದರೆ ಅದು ಜ್ಞಾನನಿಷ್ಠ-ಧರ್ಮಿತಾವಚ್ಛೇದಕತಯಾ ಘಟವಿಷಯಕತ್ವವನ್ನು ಗ್ರಹಿಸುತ್ತದೆ. ಜ್ಞಾನತ್ವವನ್ನು ತದವಚ್ಛೇದಕತಯಾ ಗ್ರಹಿಸುವುದಿಲ್ಲ ಎಂದಂತಾಯಿತು. ಆಗ ಮುಂದೆ ಹುಟ್ಟುವ ಸಂದೇಹದ ಆಕಾರ 'ಘಟವಿಷಯಕಂ ಪ್ರಮಾಣಂ ನವಾ' ಎಂದಾಗಬೇಕು. 'ಘಟವಿಷಯಕಂ ಜ್ಞಾನಂ ಪ್ರಮಾಣಂ ನ ವಾ' ಎಂದಾಗಬಾರದು.

## ನ್ಯಾಯದೀಪ

**ಅಜ್ಞಾನಾದಿತಿ ॥ ಏವಂಚ, ತದರ್ಥಂ ಜ್ಞಾನತ್ವವೈಶಿಷ್ಟ್ಯ-ಜ್ಞಾನಾಂತರಾಂಗೀಕಾರೇ ಚ ಸ್ವಾಶ್ರಯನಿಶ್ಚಯಾವಧಿಕ-ತೃತೀಯ ಕ್ಷಣವೃತ್ತಿತ್ವಮ್ ಅಸಿದ್ಧಮ್ ಇತಿ ಭಾವಃ ।**

ಘಟವಿಷಯಕಂ ಜ್ಞಾನಂ ಪ್ರಮಾಣಂ ನವಾ, ಎಂಬ ಸಂದೇಹದ ಆಕಾರವನ್ನು ಕೂಡಿಸಬೇಕಾದರೆ ವ್ಯವಸಾಯದಲ್ಲಿ ಜ್ಞಾನತ್ವವೈಶಿಷ್ಟ್ಯವೂ ಅನುವ್ಯವಸಾಯದಿಂದ ಗ್ರಹೀತ ವಾಗುತ್ತದೆ, ಎನ್ನಬೇಕು. ಹಾಗೆ ಗ್ರಹೀತವಾಗಬೇಕಾದರೆ ಅನುವ್ಯವಸಾಯಾನಂತರದಲ್ಲಿ ಜ್ಞಾನತ್ವವೈಶಿಷ್ಟ್ಯವನ್ನು ಜ್ಞಾನದಲ್ಲಿ ಗ್ರಹಿಸುವ ಜ್ಞಾನಾಂತರವನ್ನು ಅಂಗೀಕರಿಸಬೇಕು. ಆಗ ಅದಕ್ಕಾಗಿ ಒಂದು ಕ್ಷಣ ವಿಲಂಬವಾದುದರಿಂದ ಸಂದೇಹವು ಅನುವ್ಯವಸಾಯಕ್ಕಿಂತ ಮೂರನೆಯ ಕ್ಷಣದಲ್ಲಿ ಇರಲು ಸಾಧ್ಯವಿಲ್ಲ, ಏವಂಚ ಹೇತ್ವಸಿದ್ಧಿ, ಎಂದು ಮೂಲದ ಭಾವಾರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ನಿಶ್ಚಯಪದೇನ ಸವಿಕಲ್ಪಕ ಏವ ವಿವಕ್ಷ್ಯತೇ ಇತ್ಯತ ಆಹ-ಕಿಂಚೇತಿ ॥**

ಸ್ವಾಶ್ರಯವಿಷಯಕ ನಿಶ್ಚಯಪದದಿಂದ ಜ್ಞಾನತ್ವಪ್ರಕಾರಕ-ಜ್ಞಾನವಿಷಯಕ-ನಿಶ್ಚಯವೇ ವಿವಕ್ಷಿತ. ಜ್ಞಾನತ್ವ-ನಿರ್ವಿಕಲ್ಪಕದ ಅನಂತರ ಬರುವ ಅನುವ್ಯವಸಾಯ ಜ್ಞಾನತ್ವಪ್ರಕಾರಕ ನಿಶ್ಚಯವಾಗಿರುತ್ತದೆ. ಅದರ ನಂತರ ತೃತೀಯಕ್ಷಣದಲ್ಲಿ ಬರುವ ಸಂದೇಹ 'ಘಟಜ್ಞಾನಂ ಪ್ರಮಾಣಂ ನ ವಾ' ಎಂದಾಗಿರುತ್ತದೆ. ಇದರಿಂದ ಹಿಂದೆ ಹೇಳಿದ ಆಕ್ಷೇಪವಿಲ್ಲ. ಹೀಗೆ ಹಿಂದಿನ ದೋಷವನ್ನು ಪರಿಹರಿಸಿಕೊಂಡರೂ ದೋಷಾಂತರವನ್ನು 'ಕಿಂಚ' ಎಂದು ಹೇಳಲಾಗಿದೆ.

## ಅನುಮಾನಗಳಿಗೆ ಅಸಾಧಾರಣದೋಷ

## ನ್ಯಾಯದೀಪ

**ಯದ್ವಾ ಏವಂ ಹೇತುದ್ವಯ ಸಾಧಾರಣದೋಷಾನ್ ಉಕ್ತ್ವಾ ಪ್ರಾತಿಸ್ವಿಕರೂಪೇಣಾಪಿ ದೋಷಮಾಹ-ಕಿಂಚಾದ್ಯೇ ಇತಿ ॥**

ಅಥವಾ, ಕಿಂಚ, ಎಂಬ ಮುಂದಿನ ಗ್ರಂಥಕ್ಕೆ ಹೀಗೂ ಸಂಗತಿಯನ್ನು ಹೇಳಬಹುದು– ಇದುವರೆಗೆ ಪರತಸ್ತ್ವಸಾಧಕವಾದ ಎರಡೂ ಹೇತುಗಳಿಗೂ ಸಾಧಾರಣವಾದ ದೋಷವನ್ನು ಹೇಳಲಾಯಿತು. ಮುಂದೆ ಒಂದೊಂದೇ ಹೇತುವಿಗೆ ವಿಶಿಷ್ಟ ದೋಷವನ್ನು ಹೇಳುತ್ತಾರೆ.

**किञ्चाद्ये हेतौ संशयस्य तृतीयक्षणवृत्तित्वम् असिद्धम् । असर्वज्ञेनातीन्द्रियातिसूक्ष्मक्षणेयत्ताया निश्चेतुमशक्यत्वेन स्वाश्रयनिश्चयावधिकतृतीयक्षण एव संशयो नतु चतुर्थादाविति निर्णेतुमशक्यत्वात् ।**

ಅನುವ್ಯವಸಾಯಾವಧಿಕ ತೃತೀಯಕ್ಷಣ ವೃತ್ತಿ ಸಂಶಯಕೋಟಿತ್ವಾತ್, ಎಂಬ ಮೊದಲ ಹೇತು ಅಸಿದ್ಧ. ಪ್ರಾಮಾಣ್ಯವಿಷಯಕ ಸಂದೇಹವು ಅನುವ್ಯವಸಾಯದ ತೃತೀಯಕ್ಷಣದಲ್ಲೇ ಹುಟ್ಟಿದೆ. ಚತುರ್ಥಕ್ಷಣದಲ್ಲಿ ಅಲ್ಲ, ಎನ್ನುವುದನ್ನು ನಿರ್ಧಾರ ಮಾಡಲಾಗುವುದಿಲ್ಲ. ಏಕೆಂದರೆ, ಕ್ಷಣಗಳು ಅತಿಸೂಕ್ಷ್ಮವಾಗಿದ್ದು ಅತೀಂದ್ರಿಯವಾಗಿವೆ. ಅವುಗಳನ್ನು ಅಸರ್ವಜ್ಞರಾದ ನಾವು ನಿರ್ಧಾರವಾಗಿ ಹೇಳಲಾಗುವುದಿಲ್ಲ, ಆದ್ದರಿಂದ ಪ್ರಾಮಾಣ್ಯಸಂದೇಹವು, ಅನುವ್ಯವಸಾಯಾತ್ಮಕವಾದ ಪ್ರಾಮಾಣ್ಯನಿಶ್ಚಯವು ನಾಶವಾದ ಮೇಲೆ ಚತುರ್ಥಕ್ಷಣದಲ್ಲೇ ಬಂದಿರಬಹುದು. ಅದು ತೃತೀಯಕ್ಷಣದಲ್ಲೇ ಬಂದಿದೆ ಎಂದು ನಿಖರವಾಗಿ ಹೇಳಲಾಗದು. ಹೀಗೆ ಹೇತುಸ್ವರೂಪವು ಸಂದೇಹಾಸ್ಪದವಾಗಿದೆ.

## ನ್ಯಾಯದೀಪ

**ಅಸಿದ್ಧಮಿತಿ ॥ ಸಂದಿಗ್ಧಾಸಿದ್ಧಮಿತ್ಯರ್ಥ ।**

ಮೂಲದಲ್ಲಿ ಹೇಳಿದ ಅಸಿದ್ಧಿ ಎಂದರೆ ಹೇತುವಿನ ಸ್ವರೂಪದ ಸಂದೇಹ-ಪ್ರಯುಕ್ತವಾದ ಸಂದಿಗ್ಧಾಸಿದ್ಧಿ.

**यदित्वनुव्यवसायस्य प्रामाण्यनिश्चयरूपत्वाभावात् द्वितीयक्षणे तन्निश्चयाभावविशिष्टकोटिस्मरणरूपसंशयसामग्र्याः सत्वेन संशयस्य तृतीयक्षणवर्तित्वकल्पनं तर्हि संशयस्य तृतीयक्षणवृत्तित्वेनानुव्यवसायस्य प्रामाण्यनिश्चयरूपत्वाभावरूपं परतस्त्वं त्वया साध्यत इत्यन्योन्याश्रयः ।**

ಸಂದೇಹವು ತೃತೀಯಕ್ಷಣದಲ್ಲೇ ಇದೆ, ಎನ್ನುವುದನ್ನು ಹೀಗೆ ನಿರ್ಧರಿಸಬಹುದು—

ಅನುವ್ಯವಸಾಯವು ವ್ಯವಸಾಯವಿಷಯಕವಾದ ಧರ್ಮಿಜ್ಞಾನರೂಪವಾಗಿದೆ. ಅದು ಪ್ರಾಮಾಣ್ಯ ನಿಶ್ಚಯರೂಪವೂ ಅಲ್ಲ. ಅದರ ದ್ವಿತೀಯಕ್ಷಣದಲ್ಲಿ ಕೋಟಿಸ್ಮರಣೆಯೂ ಇದೆ, ಪ್ರಮಾಣ್ಯನಿಶ್ಚಯಾ ಭಾವವೂ ಇದೆ. ಹೀಗೆ ಸಂಶಯಸಾಮಗ್ರಿಗಳೆಲ್ಲವೂ ಸಂಪನ್ನವಾಗಿರುವುದರಿಂದ ತೃತೀಯಕ್ಷಣದಲ್ಲೇ ಪ್ರಾಮಾಣ್ಯಸಂದೇಹ ಬರುತ್ತದೆ, ಎಂದೇ ಕಲ್ಪಿಸಬಹುದು. ಇದು ನೈಯಾಯಿಕರ ವಾದ.

ಆದರೆ, ಇದು ಅನ್ಯೋನ್ಯಾಶ್ರಯಕ್ಕೆ ಕಾರಣವಾಗುತ್ತದೆ. ಈ ಕಲ್ಪನೆಗೆ ಮೂಲ ಆಧಾರ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯರೂಪವಲ್ಲ ಎಂಬ ಕಲ್ಪನೆ. ಅದು ಇನ್ನೂ ನಿರ್ಧಾರವಾಗಿಲ್ಲ. ಆದ್ದರಿಂದಲೇ ಅದು ತೃತೀಯಕ್ಷಣದಲ್ಲಿ ಬರುವ ಪ್ರಾಮಾಣ್ಯಸಂದೇಹದಿಂದಾಗಿ ಸಾಧ್ಯಮಾನವಾಗುತ್ತದೆ. ಹೀಗೆ ತೃತೀಯಕ್ಷಣದಲ್ಲಿ ಸಂದೇಹವು ನಿರ್ಧಾರವಾದರೆ ಅದರ ಆಧಾರದಿಂದ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ, ಎಂದು ನಿರ್ಧಾರವಾಗುತ್ತದೆ. ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ ಎಂದು ನಿರ್ಧಾರವಾದರೆ ಅದರಿಂದಾಗಿ ತೃತೀಯಕ್ಷಣದಲ್ಲಿ ಸಂದೇಹವು ನಿರ್ಧಾರವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

## ನ್ಯಾಯದೀಪ

**ಅನ್ಯೋನ್ಯಾಶ್ರಯ ಇತಿ ॥ ಸಿದ್ಧೇ ಚ ಅನುವ್ಯವಸಾಯಸ್ಯ ಪ್ರಾಮಾಣ್ಯನಿಶ್ಚಯತ್ವಾಭಾವೇ ಸಂಶಯಸ್ಯ ತೃತೀಯಕ್ಷಣವೃತ್ತಿತ್ವಸಿದ್ಧಿಃ । ತತ್ಸಿದ್ಧೌ ಚ ತತ್ಸಿದ್ಧಿಃ ಇತ್ಯರ್ಥಃ ।**

ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯರೂಪವಲ್ಲ ಎಂದು ಸಿದ್ಧವಾದರೆ ಸಂದೇಹವು ತೃತೀಯಕ್ಷಣದಲ್ಲೇ ಹುಟ್ಟಿದೆ ಎಂದು ಸಿದ್ಧವಾಗುತ್ತದೆ. ಅದು ಸಿದ್ಧವಾದರೆ ಅನುವ್ಯವಸಾಯಕ್ಕೆ ಪ್ರಾಮಾಣ್ಯನಿಶ್ಚಯರೂಪತ್ವಾಭಾವವು ಸಿದ್ಧವಾಗುತ್ತದೆ, ಹೀಗೆ ಅನ್ಯೋನ್ಯಾಶ್ರಯ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಮಾಸ್ತು ಹೇತುನಿಶ್ಚಯಃ । ಚತುರ್ಥಾದಿಕ್ಷಣವೃತ್ತಿ ಸಂಶಯ ವಿಷಯತ್ವೇನಾಪಿ ಉಕ್ತಸಾಧ್ಯಸಿದ್ಧಿರಸ್ತು, ಇತ್ಯತಃ, ಪ್ರಥಮಕ್ಷಣೇ ಧರ್ಮಿಜ್ಞಾನರೂಪಾನು-ವ್ಯವಸಾಯೇನ ಪ್ರಾಮಾಣ್ಯೇ ನಿಶ್ಚಿತೇऽಪಿ ಚತುರ್ಥಕ್ಷಣಾದೌ ಸಂಶಯಃ ನಾನುಪಪನ್ನಃ ಇತಿ ಅಪ್ರಯೋಜಕೋ ಹೇತುರಿತ್ಯಾಹ–ನಚೇತ್ಯಾದಿನಾ ।**

**ಪೂರ್ವಪಕ್ಷ**–ಸಂದೇಹವು ಮೂರನೆಯ ಕ್ಷಣದಲ್ಲೋ ನಾಲ್ಕನೆಯ ಕ್ಷಣದಲ್ಲೋ ಎಂಬ ನಿಶ್ಚಯವಾಗದಿದ್ದರೂ ಸಂದೇಹವಂತೂ ಇದೆ. ಅದು ನಾಲ್ಕನೆಯ ಕ್ಷಣದಲ್ಲಿದ್ದರೂ ಅನುವ್ಯವಸಾಯವು ಪ್ರಾಮಾಣ್ಯವಿಷಯಕವಲ್ಲ, ಎಂದು ಸಾಧನೆ ಮಾಡಬಹುದು.

**ಸಿದ್ಧಾಂತ**—ಇದು ಸರಿಯಲ್ಲ. ಸಂದೇಹವು ನಾಲ್ಕನೆಯ ಕ್ಷಣದಲ್ಲಿದ್ದರೆ ಅದು ಸಾಧ್ಯಸಾಧಕ ವಾಗುವುದಿಲ್ಲ, ಅಪ್ರಯೋಜಕವಾಗುತ್ತದೆ. ಧರ್ಮಿಜ್ಞಾನರೂಪವಾದ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯರೂಪವಾದರೂ ನಾಲ್ಕನೆಯ ಕ್ಷಣದಲ್ಲಿ ಸಂದೇಹ ಬರುವುದಕ್ಕೇನೂ ಬಾಧಕವಿಲ್ಲ. ಇದನ್ನೇ ಮೂಲದಲ್ಲಿ ಹೇಳಲಾಗಿದೆ–

**नच चतुर्थादिक्षणवर्त्तिनापि संशयेन परतस्त्वसिद्धिः । दितीयक्षणोत्पन्नेन कोटिस्मरणेन प्रामाण्यनिश्चयरूपप्रतिबन्धकवशात् तृतीयक्षणे संशयानुत्पादेऽपि तृतीयक्षणोत्पन्नेन प्रतिबन्धकध्वंसेन विशिष्टं तत्क्षणे तिष्ठत् यत्संशयसामग्रीरूपं कोटिस्मरणं तेन चतुर्थक्षणे संशयोत्पादन-सम्भवात् ।**

ಪ್ರಾಮಾಣ್ಯಸಂದೇಹವು ನಾಲ್ಕನೆಯ ಕ್ಷಣದಲ್ಲಿದ್ದರೂ ಅದರಿಂದ ಪ್ರಾಮಾಣ್ಯಕ್ಕೆ ಪರತಸ್ತ್ವಸಿದ್ಧಿ (ಅನುವ್ಯವಸಾಯ ವಿಷಯತ್ವಾಭಾವಸಿದ್ಧಿ) ಆಗುವುದಿಲ್ಲ. ಏಕೆಂದರೆ, ಅನುವ್ಯವಸಾಯದ ದ್ವಿತೀಯಕ್ಷಣದಲ್ಲಿ ಕೋಟಿಸ್ಮರಣೆ ಬಂದರೂ ಅನುವ್ಯವಸಾಯಾತ್ಮಕ–ಪ್ರಾಮಾಣ್ಯನಿಶ್ಚಯರೂಪವಾದ ಪ್ರತಿಬಂಧಕ ಇರುವ ಕಾರಣದಿಂದಾಗಿ ತೃತೀಯಕ್ಷಣದಲ್ಲಿ ಸಂದೇಹಕ್ಕೆ ಅವಕಾಶವಿಲ್ಲ. ಆದರೂ ತೃತೀಯಕ್ಷಣದಲ್ಲಿ ಆ ಅನುವ್ಯವಸಾಯವು ನಾಶವಾಗುತ್ತದೆ. ಪ್ರತಿಬಂಧಕ ಧ್ವಂಸವಾದುದರಿಂದ ನಿಶ್ಚಯಾಭಾವವಿಶಿಷ್ಟವಾದ ಕೋಟಿ ಸ್ಮರಣೆ ರೂಪವಾದ ಸಾಮಗ್ರಿಯು ಇರುವುದರಿಂದ ಅನುವ್ಯವಸಾಯದ ಚತುರ್ಥಕ್ಷಣದಲ್ಲಿ ಸಂದೇಹ ಬರಬಹುದು.

1. 'ಇದಂ ಜಲಂ' – ವ್ಯವಸಾಯ.
2. 'ಇದಂ ಜಲಂ ಇತಿ ಜ್ಞಾನವಾನಹಂ' – ಅನುವ್ಯವಸಾಯ+ಪ್ರಾಮಾಣ್ಯನಿಶ್ಚಯ.
3. ಪ್ರಾಮಾಣ್ಯಾಪ್ರಾಮಾಣ್ಯರೂಪ ಕೋಟಿಸ್ಮರಣೆ+ಪ್ರಾಮಾಣ್ಯನಿಶ್ಚಯ.
4. ಪ್ರಾಮಾಣ್ಯಸಂದೇಹಾಭಾವ+ಪ್ರಾಮಾಣ್ಯನಿಶ್ಚಯನಾಶ+ಕೋಟಿಸ್ಮರಣೆ.
5. 'ಇದಂ ಜಲಂ' ಇತಿ ಜ್ಞಾನಂ ಪ್ರಮಾಣಂ ನವಾ'–ಸಂದೇಹ.

## ನ್ಯಾಯದೀಪ

**ದ್ವಿತೀಯೇತಿ ॥ ಅನುವ್ಯವಸಾಯಸ್ಥಿತಿಕ್ಷಣೋತ್ಪನ್ನೇನ ಇತ್ಯರ್ಥಃ । ಪ್ರಾಮಾಣ್ಯನಿಶ್ಚಯರೂಪೇತಿ ॥ ಪೂರ್ವತನ–ಧರ್ಮಿಜ್ಞಾನಾಖ್ಯಪ್ರಾಮಾಣ್ಯನಿಶ್ಚಯ ರೂಪೇತ್ಯರ್ಥಃ । ತತ್ಕ್ಷಣೇತಿ ॥ ತೃತೀಯಕ್ಷಣೇ ಇತ್ಯರ್ಥಃ ।**

**ಸಾಮಗ್ರೀರೂಪಮಿತಿ ॥ ತದಾ ತನ್ಮತೇ ಧರ್ಮಿಜ್ಞಾನಸ್ಯ ನಾಶೇऽಪಿ ತಸ್ಯ ಕೋಟಿಸ್ಮರಣೇ ಏವ ಉಪಯೋಗೇನ ತದಭಾವಸ್ಯ ಅದೋಷತ್ವಾತ್ । ತಸ್ಯ ನಾಶೇऽಪಿ ಸ್ಮೃತ್ಯುಪನೀತೇ ತಸ್ಮಿನ್ 'ಜ್ಞಾನಂ ಪ್ರಮಾಣಂ ನ ವಾ' ಇತಿ ಸಂಶಯೋಪಪತ್ತೇಶ್ಚ ।**

**ನಚ ತಸ್ಯ ಪ್ರಮಾಣತ್ವೇನೈವ ಸ್ಮೃತ್ಯಾ ಉಪನಯಃ । ತಥೈವ ಪ್ರಾಗನುಭವಾತ್ ಇತಿ ವಾಚ್ಯಮ್ । ದೋಷೇಣ ಪ್ರಾಮಾಣ್ಯಾಂಶ-ಪ್ರತಿಬಂಧ-ಸಂಭವಾತ್ । ವಸ್ತುತಸ್ತು ಮನ್ಮತೇ ದೋಷಸ್ಥಲೇ ವ್ಯವಸಾಯಸ್ಯ ಸಾಕ್ಷಿವೇದ್ಯತ್ವಾತ್, ತತ್ಪ್ರಾಮಾಣ್ಯಸ್ಯ ಚ ಮಾನಸತ್ವಾತ್ ತನ್ಮಾತ್ರೋಪನಯಃ ನ ವಿರುದ್ಧಃ, ಇತಿ ಭಾವಃ ॥**

ಮೂಲದಲ್ಲಿ ಅನುವ್ಯವಸಾಯಚತುರ್ಥಕ್ಷಣದಲ್ಲಿ ಪ್ರಾಮಾಣ್ಯಸಂದೇಹ ಬರಲು ತೊಂದರೆ ಇಲ್ಲ, ಎಂದಿದೆ. ಆದರೆ ತತ್ಪೂರ್ವಕ್ಷಣದಲ್ಲಿ ಅನುವ್ಯವಸಾಯರೂಪವಾದ ಧರ್ಮಿಜ್ಞಾನವು ನಾಶವಾಗಿರುವುದರಿಂದ ಸಂಶಯ ಹೇಗೆ? ಇದಕ್ಕುತ್ತರ-ಸಾಧಾರಣ ಧರ್ಮವದ್ಧರ್ಮಿಜ್ಞಾನವು ಕೋಟಿಸ್ಮರಣೆಗಷ್ಟೇ ಕಾರಣ, ಸಂದೇಹಕ್ಕಲ್ಲ, ಆದ್ದರಿಂದ, ಅದಿಲ್ಲದೆಯೂ ಸಂದೇಹ ಬರಬಹುದು.

ಅಥವಾ, ಅನುವ್ಯವಸಾಯವು ನಾಶವಾದರೂ ವ್ಯವಸಾಯದ ಸ್ಮರಣಾತ್ಮಕವಾದ ಧರ್ಮಿಜ್ಞಾನ ಬಂದು ಅದರಿಂದ ಸಂದೇಹ ಬರಬಹುದು.

ಕೇವಲ ವ್ಯವಸಾಯದ ಸ್ಮರಣೆ ಬರುವುದು ಹೇಗೆ? ಏಕೆಂದರೆ, ಪೂರ್ವಾನುವ್ಯವಸಾಯದಲ್ಲಿ ಪ್ರಾಮಾಣ್ಯವಿಶಿಷ್ಟವಾದ ವ್ಯವಸಾಯವೇ ಜ್ಞಾತವಾಗಿದೆ. ಅನುಭವಾನುಸಾರವಾಗಿ ಸ್ಮರಣೆಯೂ ಪ್ರಾಮಾಣ್ಯವಿಶಿಷ್ಟವಾದ ವ್ಯವಸಾಯದ್ದೇ ಬರಬೇಕು. ಆಗ ಪ್ರಾಮಾಣ್ಯನಿಶ್ಚಯರೂಪವಾದ ಪ್ರತಿಬಂಧಕವು ಇರುವುದರಿಂದ ಮತ್ತೆ ಸಂದೇಹಕ್ಕೆ ಅವಕಾಶ ಹೇಗೆ?

ಇದಕ್ಕುತ್ತರ ಪ್ರಾಮಾಣ್ಯವಿಶಿಷ್ಟ-ವ್ಯವಸಾಯದ ಅನುಭವ ಬಂದಿದ್ದರೂ ಸಂದೇಹ ಕಾರಣವಾದ ದೋಷದಿಂದಾಗಿ ಕೇವಲ ವ್ಯವಸಾಯದ ಸ್ಮರಣೆ ಬರುತ್ತದೆ. ಅದರಿಂದ ಸಂದೇಹ ಬರಬಹುದು.

ವಸ್ತುತಸ್ತು ನಮ್ಮ ಸಿದ್ಧಾಂತದಲ್ಲಿ ದೋಷವಿದ್ದಾಗ ಸಾಕ್ಷಿಯು ವ್ಯವಸಾಯವನ್ನು ಮಾತ್ರ ಗ್ರಹಿಸುತ್ತದೆ. ಅದರಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದು ಮನಸ್ಸು. ಹೀಗೆ ಜ್ಞಾನಜ್ಞಾನ ಮತ್ತು ಪ್ರಾಮಾಣ್ಯಜ್ಞಾನಗಳು ವಿಭಿನ್ನವಾದುದರಿಂದ ಪ್ರಕೃತ ದೋಷವಶಾತ್ ವ್ಯವಸಾಯ ಮಾತ್ರ ಸ್ಮರಣೆಗೆ ಬರುತ್ತದೆ, ಪ್ರಾಮಾಣ್ಯದ ಸ್ಮರಣೆ ಬರುವುದಿಲ್ಲ. ಇದರಿಂದ ಪ್ರಾಮಾಣ್ಯ ಸಂದೇಹ ಬರಬಹುದು.

## ದ್ವಿತೀಯ ಹೇತುದೋಷ

**द्वितीयहेतावप्यनुव्यवसायस्य प्रामाण्याविषयकत्वे सिद्धे द्वितीयेऽनुव्यवसायस्य स्थितिक्षणे प्रामाण्यनिश्चयाभावविशिष्टकोटिस्मरणरूपसंशयसामग्र्याः सत्वेन तस्या अनुव्यवसायरूपनिश्चयसमानकालीनत्वसिद्धिः । सिद्धे च तस्मिन्नुक्तरूपसामग्रीजन्यसंशयविषयत्वेन प्रामाण्यस्यानुव्यवसायाविषयत्वसिद्धिरित्यन्योन्याश्रयः ।**

ಎರಡನೆಯ ಹೇತುವಿಗೂ ಅನ್ಯೋನ್ಯಾಶ್ರಯ ದೋಷವಿದೆ—

ಸ್ವಾಶ್ರಯವಿಷಯಕ ನಿಶ್ಚಯ ಸಮಾನಕಾಲೀನ–ಸಾಮಗ್ರೀಜನ್ಯ–ಸಂಶಯವಿಷಯತ್ವಾತ್, ಇದು ದ್ವಿತೀಯ ಹೇತು.

ಪ್ರಾಮಾಣ್ಯಸಂದೇಹಕ್ಕೆ ಬೇಕಾದ ಸಾಮಗ್ರಿಯು ವ್ಯವಸಾಯವಿಷಯಕನಿಶ್ಚಯರೂಪವಾದ ಅನುವ್ಯವಸಾಯದ ಜೊತೆಗಿದೆ. ಇದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ ಎಂದು ತಾರ್ಕಿಕರ ವಾದ. ಆದರೆ, ಸಂದೇಹಕ್ಕೆ ಪ್ರಾಮಾಣ್ಯನಿಶ್ಚಯಾಭಾವವೂ ಒಂದು ಕಾರಣ. ಈ ಕಾರಣವನ್ನು ಒಳಗೊಂಡ ಸಂದೇಹಸಾಮಗ್ರಿಯು ಅನುವ್ಯವಸಾಯದ ಜೊತೆಯಲ್ಲಿದೆ ಎಂದು ನಿರ್ಧಾರವಾಗಬೇಕಾದರೆ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯರೂಪವಲ್ಲ ಎಂದು ಮೊದಲೇ ಸಿದ್ಧವಾಗಬೇಕು. ಅದು ಸಿದ್ಧವಾಗುವುದು ಈ ಹೇತುವಿನಿಂದಲೇ. ಹೀಗೆ ಸಂದೇಹಸಾಮಗ್ರಿಯು ನಿಶ್ಚಯಕಾಲೀನ ಎಂದು ಸಿದ್ಧವಾದರೆ ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯರೂಪವಲ್ಲ ಎಂದು ಸಿದ್ಧವಾಗುತ್ತದೆ. ಅದು ಸಿದ್ಧವಾದರೆ ಸಂಶಯಸಾಮಗ್ರಿಯು ನಿಶ್ಚಯಕಾಲೀನ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯ.

## ನ್ಯಾಯದೀಪ

**ದ್ವಿತೀಯಹೇತಾವಪೀತಿ ।। ಸ್ವಾಶ್ರಯನಿಶ್ಚಯ–ಸಮಾನಕಾಲೀನತ್ವಂ ಸಂಶಯ–ಸಾಮಗ್ರ್ಯಾಮ್ ಅಸಿದ್ಧಮ್ ಇತಿ ಯೋಜ್ಯಮ್ ।**

**ನನು ಧರ್ಮಿನಿಶ್ಚಯರೂಪಾನುವ್ಯವಸಾಯಸ್ಯ ಪ್ರಾಮಾಣ್ಯಾವಿಷಯಕತ್ವಾದೇವ ವಿಶೇಷಾದರ್ಶನವಿಶಿಷ್ಟಾ ಕೋಟಿಸ್ಮರಣಾದಿಸಾಮಗ್ರೀ ತತ್ಕಾಲೀನೇತಿ ಜ್ಞಾಯತೇ ಇತ್ಯತೋ ದುರ್ಜ್ಞಾನಮೇತದಿತ್ಯಾಹ–ಅನುವ್ಯವಸಾಯಸ್ಯೇತ್ಯಾದಿನಾ ।। ದ್ವಿತೀಯ ಇತ್ಯಸ್ಯಾರ್ಥೋ ಅನುವ್ಯವಸಾಯಸ್ಯ ಸ್ಥಿತಿ ಕ್ಷಣೇ ಇತಿ ।।**

ಮೂಲದ ಹೇತಾವಪಿ ಎಂಬುದಕ್ಕೆ 'ನಿಶ್ಚಯ ಸಮಾನಕಾಲೀನತ್ವಂ ಸಂಶಯಸಾಮಗ್ರ್ಯಾಂ ಅಸಿದ್ಧಂ' ಎಂಬ ಅಧ್ಯಾಹೃತದೊಂದಿಗೆ ಅನ್ವಯ.

ಸಂದೇಹ ಸಾಮಗ್ರಿಯು ಅನುವ್ಯವಸಾಯರೂಪವಾದ ನಿಶ್ಚಯ ಸಮಕಾಲೀನ ಎಂಬುದು ಸಿದ್ಧವಾಗುವುದಿಲ್ಲ, ಎನ್ನುವುದು ಹೇಗೆ? ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲವಾದುದರಿಂದಲೇ ಅನುವ್ಯವಸಾಯವೂ, ವಿಶೇಷದರ್ಶನ ಅಂದರೆ ಪ್ರಾಮಾಣ್ಯನಿಶ್ಚಯದ ಅಭಾವ, ತದ್‌ವಿಶಿಷ್ಟವಾದ ಕೋಟಿಸ್ಮರಣಾದಿ ಸಂದೇಹಸಾಮಗ್ರೀಯೂ ಸಮಾನಕಾಲದಲ್ಲಿ ಇರಬಹುದು, ಎಂದು ಶಂಕೆ ಮಾಡಿದರೆ, ಈ ಊಹೆಗೆ ಮೂಲವಾದ 'ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯ ರೂಪವಲ್ಲ' ಎಂಬ ನಿರ್ಧಾರವನ್ನೇ ಮಾಡಲು ಸಾಧ್ಯವಿಲ್ಲ ಎಂದು 'ಅನುವ್ಯವಸಾಯಸ್ಯ' ಎಂಬ ಮೂಲದಲ್ಲಿ ಹೇಳಲಾಗಿದೆ.

## ತೃತೀಯ ಹೇತುದೋಷ

**एवं तृतीयहेतौ अपि अनुव्यवसायस्य प्रामाण्यनियमे सिद्धे 'किं प्रमैव प्रमात्वेन गृहीता अप्रमैव वा' इति संशयस्य प्रामाण्यानुमिति-धर्मिकत्वमेव नत्वनुव्यवसायधर्मिकत्वमित्यस्यार्थस्य सिद्ध्या व्यवसायप्रामाण्यस्य अनुव्यवसायधर्मिकप्रामाण्यसंशयजन्यसंशया-विषयत्वसिद्धिः, सिद्धे तस्मिन् अनुव्यवसायस्य प्रामाण्यनियमसिद्धिः इत्यन्योन्याश्रय एव ।**

ಮೂರನೆಯ ಹೇತುವಿನಲ್ಲೂ ಅನುವ್ಯವಸಾಯಧರ್ಮಿಕ–ಪ್ರಾಮಾಣ್ಯಸಂಶಯಜನ್ಯ–ಸಂಶಯಾವಿಷಯತ್ವವನ್ನು ಪ್ರಾಮಾಣ್ಯದಲ್ಲಿ ನಿರ್ಧಾರಮಾಡಲು ಸಾಧ್ಯವಿಲ್ಲ. ಹೇಗೆಂದರೆ, ಅನುವ್ಯವಸಾಯವು ನಿಯತಪ್ರಮಾಣ ಎಂದು ಸಿದ್ಧವಾದರೆ ಆಗ 'ನಾನು ಜಲಾದಿ ಪ್ರಮಾವನ್ನೇ ಪ್ರಮಾ ಎಂದು ತಿಳಿದೆನೋ ಅಥವಾ ಜಲಭ್ರಮೆಯನ್ನು ಪ್ರಮಾ ಎಂದು ತಿಳಿದೆನೋ' ಎನ್ನುವ ಸಂದೇಹಕ್ಕೆ ಅನುವ್ಯವಸಾಯವು ಧರ್ಮಿಯಾಗಲು ಸಾಧ್ಯವಿಲ್ಲ. ಏಕೆಂದರೆ, ಅದು ಸರ್ವದಾ ಪ್ರಮಾತ್ಮಕ ಎಂಬ ನಿಯಮವಿರುವುದರಿಂದ 'ಭ್ರಮೆಯೋ ಪ್ರಮೆಯೋ' ಎಂಬ ಸಂದೇಹ ಅದರಲ್ಲಿ ಬರಲಾರದು. ಹೀಗಾಗಿ ಆ ಸಂದೇಹ ಜಲಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವ ಅನುಮಿತಿ ಧರ್ಮಿಕ ಎಂದು ಸಿದ್ಧವಾಗುತ್ತದೆ. ಅಪ್ರಮಾತ್ವಸಂದೇಹವು ಅನುಮಿತಿಧರ್ಮಿಕವೇ ಎಂದು ನಿರ್ಧಾರವಾದರೆ ಆಗ ವ್ಯವಸಾಯಪ್ರಾಮಾಣ್ಯ ಎಂಬ ಪ್ರಕೃತ ಅನುಮಾನದ ಪಕ್ಷದಲ್ಲಿ ಅನುವ್ಯವಸಾಯಧರ್ಮಿಕ–ಪ್ರಾಮಾಣ್ಯಸಂದೇಹಜನ್ಯ–ಸಂದೇಹಾವಿಷಯತ್ವರೂಪ–ಹೇತು

ಸಿದ್ಧಿಯಾಗುತ್ತದೆ. ಆ ಹೇತು ಸಿದ್ಧವಾದರೆ ಅನುವ್ಯವಸಾಯವು ನಿಯಮೇನ ಪ್ರಾಮಾಣ್ಯಾವಿಷಯಕ ಎಂದು ಸಿದ್ಧವಾಗುತ್ತದೆ. ಹೀಗೆ, ಅನುವ್ಯವಸಾಯ ನಿಯತಪ್ರಮಾಣವಾದರೆ ಹೇತುಸಿದ್ಧಿ, ಹೇತುಸಿದ್ಧವಾದರೆ ಅನುವ್ಯವಸಾಯಕ್ಕೆ ಪ್ರಾಮಾಣ್ಯಾನಿಯಮಸಿದ್ಧಿ ಎಂದು ಅನ್ಯೋನ್ಯಾಶ್ರಯ.

## ನ್ಯಾಯದೀಪ

**ತೃತೀಯಹೇತಾವಪೀತಿ ॥ ಅನುವ್ಯವಸಾಯಧರ್ಮಿಕ-ಪ್ರಾಮಾಣ್ಯ-ಸಂಶಯಜನ್ಯ-ಸಂಶಯಾವಿಷಯತ್ವಂ ದುರ್ಜ್ಞಾನಮ್ ಇತಿ ಯೋಜ್ಯಮ್ । ಅನುವ್ಯವಸಾಯಸ್ಯ ಪ್ರಾಮಾಣ್ಯನಿಯಮಾದೇವ ತತ್ಸುಜ್ಞಾನಮ್ ಇತ್ಯತ ಆಹ-ಅನುವ್ಯವಸಾಯಸ್ಯೇತಿ ॥ ಸಿದ್ಧೇ ಚ ತಸ್ಮಿನ್ನಿತಿ ॥ ವ್ಯವಸಾಯ ಪ್ರಾಮಾಣ್ಯಸ್ಯ ಇತ್ಯಾದಿಪರಾಮರ್ಶಃ । ಸಿದ್ಧಾಂತೇಽಪಿ ಸಂಶಯಾದಿ-ಸ್ಥಲೀಯಪ್ರಾಮಾಣ್ಯಾನುವ್ಯವಸಾಯಸ್ಯ ಪ್ರಮಾತ್ವಾನಿಯಮಾತ್ ಇತಿ ಭಾವಃ ।**

ಮೂಲದಲ್ಲಿ ತೃತೀಯಹೇತೌ ಅಪಿ ಎಂಬ ಶಬ್ದಕ್ಕೆ ಅನ್ವಯಯೋಗ್ಯವಾದ ಸಂಶಯ ಜನ್ಯಸಂಶಯಾವಿಷಯತ್ವವು ದುರ್ಜ್ಞಾನ, ಎಂಬ ಪದವನ್ನು ಅಧ್ಯಾಹಾರ ಮಾಡಬೇಕು.

ಅನುವ್ಯವಸಾಯವು ನಿಯತ ಪ್ರಮಾಣವಾದುದರಿಂದಲೇ ಉಕ್ತಹೇತುವು ಸುಜ್ಞಾನ ಎಂದರೆ ಅದಕ್ಕೆ ಸಮಾಧಾನ- ಅನುವ್ಯವಸಾಯಸ್ಯ ಎಂಬ ವಾಕ್ಯ.

ಪ್ರಾಮಾಣ್ಯಸ್ವತಸ್ತ್ವಸಿದ್ಧಾಂತದಲ್ಲೂ ಪ್ರಾಮಾಣ್ಯಸಂದೇಹಸ್ಥಲದಲ್ಲಿ 'ಇದಂ ಜ್ಞಾನಂ ಪ್ರಮಾಣಂ' ಎಂಬ ಪ್ರಾಮಾಣ್ಯಾನುವ್ಯವಸಾಯವು ಮಾನಸವಾದುದರಿಂದ ಅಪ್ರಮಾಣವಾಗ ಬಹುದು. ಆದ್ದರಿಂದ ಪ್ರಾಮಾಣ್ಯಾನುವ್ಯವಸಾಯಕ್ಕೆ ಪ್ರಮಾತ್ವನಿಯಮವಿಲ್ಲ.

## ಉದಯನೋಕ್ತಾನುಮಾನ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಮಣ್ಯುಕ್ತಾನುಮಾನಾನಿ ನಿರಸ್ಯ ದ್ವಿತೀಯಸ್ತಬಕೇ ಕುಸುಮಾಂಜಲೌ ಉದಯನೋಕ್ತಂ, ಸುಧಾಯಾಂ ಆಶಂಕಿತಮ್ ಅನುಮಾನಂ ಚ ನಿರಾಹ -ಏತೇನೇತಿ ॥**

ಇದುವರೆಗೆ ಮಣಿಗ್ರಂಥದಲ್ಲಿ ಹೇಳಿದ ಪರತಸ್ತ್ವಸಾಧಕವಾದ ಅನುಮಾನಗಳನ್ನು ನಿರಾಸಮಾಡಲಾಯಿತು. ಮುಂದೆ ಉದಯನಾಚಾರ್ಯರು ತಮ್ಮ ಗ್ರಂಥ ನ್ಯಾಯ

ಮೂಲದ ಹೇತಾವಪಿ ಎಂಬುದಕ್ಕೆ 'ನಿಶ್ಚಯ ಸಮಾನಕಾಲೀನತ್ವಂ ಸಂಶಯಸಾಮಗ್ರ್ಯಾಂ ಅಸಿದ್ಧಂ' ಎಂಬ ಅಧ್ಯಾಹೃತದೊಂದಿಗೆ ಅನ್ವಯ.

ಸಂದೇಹ ಸಾಮಗ್ರಿಯು ಅನುವ್ಯವಸಾಯರೂಪವಾದ ನಿಶ್ಚಯ ಸಮಕಾಲೀನ ಎಂಬುದು ಸಿದ್ಧವಾಗುವುದಿಲ್ಲ, ಎನ್ನುವುದು ಹೇಗೆ? ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಾಗಿಲ್ಲ ವಾದುದರಿಂದಲೇ ಅನುವ್ಯವಸಾಯವೂ, ವಿಶೇಷದರ್ಶನ ಅಂದರೆ ಪ್ರಾಮಾಣ್ಯನಿಶ್ಚಯದ ಅಭಾವ, ತದ್‌ವಿಶಿಷ್ಟವಾದ ಕೋಟಿಸ್ಮರಣಾದಿ ಸಂದೇಹಸಾಮಗ್ರೀಯೂ ಸಮಾನಕಾಲದಲ್ಲಿ ಇರಬಹುದು, ಎಂದು ಶಂಕೆ ಮಾಡಿದರೆ, ಈ ಊಹೆಗೆ ಮೂಲವಾದ 'ಅನುವ್ಯವಸಾಯವು ಪ್ರಾಮಾಣ್ಯನಿಶ್ಚಯ ರೂಪವಲ್ಲ' ಎಂಬ ನಿರ್ಧಾರವನ್ನೇ ಮಾಡಲು ಸಾಧ್ಯವಿಲ್ಲ ಎಂದು 'ಅನುವ್ಯವಸಾಯಸ್ಯ' ಎಂಬ ಮೂಲದಲ್ಲಿ ಹೇಳಲಾಗಿದೆ.

## ತೃತೀಯ ಹೇತುದೋಷ

**एवं तृतीयहेतौ अपि अनुव्यवसायस्य प्रामाण्यनियमे सिद्धे 'किं प्रमैव प्रमात्वेन गृहीता अप्रमैव वा' इति संशयस्य प्रामाण्यानुमिति-धर्मिकत्वमेव नत्वनुव्यवसायधर्मिकत्वमित्यस्यार्थस्य सिद्ध्या व्यवसायप्रामाण्यस्य अनुव्यवसायधर्मिकप्रामाण्यसंशयजन्यसंशया-विषयत्वसिद्धिः, सिद्धे तस्मिन् अनुव्यवसायस्य प्रामाण्यनियमसिद्धिः इत्यन्योन्याश्रय एव ।**

ಮೂರನೆಯ ಹೇತುವಿನಲ್ಲೂ ಅನುವ್ಯವಸಾಯಧರ್ಮಿಕ-ಪ್ರಾಮಾಣ್ಯಸಂಶಯಜನ್ಯ-ಸಂಶಯಾವಿಷಯತ್ವವನ್ನು ಪ್ರಾಮಾಣ್ಯದಲ್ಲಿ ನಿರ್ಧಾರಮಾಡಲು ಸಾಧ್ಯವಿಲ್ಲ. ಹೇಗೆಂದರೆ, ಅನುವ್ಯವಸಾಯವು ನಿಯತಪ್ರಮಾಣ ಎಂದು ಸಿದ್ಧವಾದರೆ ಆಗ 'ನಾನು ಜಲಾದಿ ಪ್ರಮಾವನ್ನೇ ಪ್ರಮಾ ಎಂದು ತಿಳಿದೆನೋ ಅಥವಾ ಜಲಭ್ರಮೆಯನ್ನು ಪ್ರಮಾ ಎಂದು ತಿಳಿದೆನೋ' ಎನ್ನುವ ಸಂದೇಹಕ್ಕೆ ಅನುವ್ಯವಸಾಯವು ಧರ್ಮಿಯಾಗಲು ಸಾಧ್ಯವಿಲ್ಲ. ಏಕೆಂದರೆ, ಅದು ಸರ್ವದಾ ಪ್ರಮಾತ್ಮಕ ಎಂಬ ನಿಯಮವಿರುವುದರಿಂದ 'ಭ್ರಮೆಯೋ ಪ್ರಮೆಯೋ' ಎಂಬ ಸಂದೇಹ ಅದರಲ್ಲಿ ಬರಲಾರದು. ಹೀಗಾಗಿ ಆ ಸಂದೇಹ ಜಲಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವ ಅನುಮಿತಿ ಧರ್ಮಿಕ ಎಂದು ಸಿದ್ಧವಾಗುತ್ತದೆ. ಅಪ್ರಮಾತ್ವಸಂದೇಹವು ಅನುಮಿತಿಧರ್ಮಿಕವೇ ಎಂದು ನಿರ್ಧಾರವಾದರೆ ಆಗ ವ್ಯವಸಾಯಪ್ರಾಮಾಣ್ಯ ಎಂಬ ಪ್ರಕೃತ ಅನುಮಾನದ ಪಕ್ಷದಲ್ಲಿ ಅನುವ್ಯವಸಾಯಧರ್ಮಿಕ-ಪ್ರಾಮಾಣ್ಯಸಂದೇಹಜನ್ಯ-ಸಂದೇಹಾವಿಷಯತ್ವರೂಪ-ಹೇತು

ಸಿದ್ಧಿಯಾಗುತ್ತದೆ. ಆ ಹೇತು ಸಿದ್ಧವಾದರೆ ಅನುವ್ಯವಸಾಯವು ನಿಯಮೇನ ಪ್ರಾಮಾಣ್ಯಾವಿಷಯಕ ಎಂದು ಸಿದ್ಧವಾಗುತ್ತದೆ. ಹೀಗೆ, ಅನುವ್ಯವಸಾಯ ನಿಯತಪ್ರಮಾಣವಾದರೆ ಹೇತುಸಿದ್ಧಿ, ಹೇತುಸಿದ್ಧವಾದರೆ ಅನುವ್ಯವಸಾಯಕ್ಕೆ ಪ್ರಾಮಾಣ್ಯಾನಿಯಮಸಿದ್ಧಿ ಎಂದು ಅನ್ಯೋನ್ಯಾಶ್ರಯ.

## ನ್ಯಾಯದೀಪ

**ತೃತೀಯಹೇತಾವಪೀತಿ ॥ ಅನುವ್ಯವಸಾಯಧರ್ಮಿಕ–ಪ್ರಾಮಾಣ್ಯ-ಸಂಶಯಜನ್ಯ–ಸಂಶಯಾವಿಷಯತ್ವಂ ದುರ್ಜ್ಞಾನಮ್ ಇತಿ ಯೋಜ್ಯಮ್। ಅನುವ್ಯವಸಾಯಸ್ಯ ಪ್ರಾಮಾಣ್ಯನಿಯಮಾದೇವ ತತ್ಸುಜ್ಞಾನಮ್ ಇತ್ಯತ ಆಹ–ಅನುವ್ಯವಸಾಯಸ್ಯೇತಿ ॥ ಸಿದ್ಧೇ ಚ ತಸ್ಮಿನ್ನಿತಿ ॥ ವ್ಯವಸಾಯ ಪ್ರಾಮಾಣ್ಯಸ್ಯ ಇತ್ಯಾದಿಪರಾಮರ್ಶಃ। ಸಿದ್ಧಾಂತೇಽಪಿ ಸಂಶಯಾದಿ-ಸ್ಥಲೀಯಪ್ರಾಮಾಣ್ಯಾನುವ್ಯವಸಾಯಸ್ಯ ಪ್ರಮಾತ್ವಾನಿಯಮಾತ್ ಇತಿ ಭಾವಃ।**

ಮೂಲದಲ್ಲಿ ತೃತೀಯಹೇತೌ ಅಪಿ ಎಂಬ ಶಬ್ದಕ್ಕೆ ಅನ್ವಯಯೋಗ್ಯವಾದ ಸಂಶಯ ಜನ್ಯಸಂಶಯಾವಿಷಯತ್ವವು ದುರ್ಜ್ಞಾನ, ಎಂಬ ಪದವನ್ನು ಅಧ್ಯಾಹಾರ ಮಾಡಬೇಕು.

ಅನುವ್ಯವಸಾಯವು ನಿಯತ ಪ್ರಮಾಣವಾದುದರಿಂದಲೇ ಉಕ್ತಹೇತುವು ಸುಜ್ಞಾನ ಎಂದರೆ ಅದಕ್ಕೆ ಸಮಾಧಾನ– ಅನುವ್ಯವಸಾಯಸ್ಯ ಎಂಬ ವಾಕ್ಯ.

ಪ್ರಾಮಾಣ್ಯಸ್ವತಸ್ತ್ವಸಿದ್ಧಾಂತದಲ್ಲೂ ಪ್ರಾಮಾಣ್ಯಸಂದೇಹಸ್ಥಲದಲ್ಲಿ 'ಇದಂ ಜ್ಞಾನಂ ಪ್ರಮಾಣಂ' ಎಂಬ ಪ್ರಾಮಾಣ್ಯಾನುವ್ಯವಸಾಯವು ಮಾನಸವಾದುದರಿಂದ ಅಪ್ರಮಾಣವಾಗ ಬಹುದು. ಆದ್ದರಿಂದ ಪ್ರಾಮಾಣ್ಯಾನುವ್ಯವಸಾಯಕ್ಕೆ ಪ್ರಮಾತ್ವನಿಯಮವಿಲ್ಲ.

### ಉದಯನೋಕ್ತಾನುಮಾನ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಮಣ್ಯುಕ್ತಾನುಮಾನಾನಿ ನಿರಸ್ಯ ದ್ವಿತೀಯಸ್ತಬಕೇ ಕುಸುಮಾಂಜಲೌ ಉದಯನೋಕ್ತಂ, ಸುಧಾಯಾಂ ಆಶಂಕಿತಮ್ ಅನುಮಾನಂ ಚ ನಿರಾಹ –ಏತೇನೇತಿ ॥**

ಇದುವರೆಗೆ ಮಣಿಗ್ರಂಥದಲ್ಲಿ ಹೇಳಿದ ಪರತಸ್ತ್ವಸಾಧಕವಾದ ಅನುಮಾನಗಳನ್ನು ನಿರಾಸಮಾಡಲಾಯಿತು. ಮುಂದೆ ಉದಯನಾಚಾರ್ಯರು ತಮ್ಮ ಗ್ರಂಥ ನ್ಯಾಯ

ಕುಸುಮಾಂಜಲಿಯ ಎರಡನೆಯ ಸ್ತಬಕದಲ್ಲಿ ಹೇಳಿರುವ ಅನುಮಾನವನ್ನು ವಿಮರ್ಶೆ ಮಾಡಲಾಗಿದೆ. ಇದೇ ಅನುಮಾನವನ್ನು ನ್ಯಾಯಸುಧಾದಲ್ಲೂ ಉಲ್ಲೇಖ ಮಾಡಿ ನಿರಾಸಮಾಡಲಾಗಿದೆ.

**एतेन, प्रामाण्यं परतो ज्ञायते, अनभ्यासदशायां सांशयिकत्वात् अप्रामाण्यवत् । परतस्त्वं च यत्प्रतिवादिना निषिध्यते तदेव साध्यते ।**

**अत्रच भागासिद्धिर्न दोषः । उद्देश्यस्य पक्षतावच्छेदकधर्मसमानाधिकरणसाध्यप्रतीतिरूपस्य फलस्य तत्समानाधिकरणसाधनप्रतीतिरूपस्य करणस्य चाविघातात् । यत्र सर्वत्र पक्षे साध्यप्रतीतिरुद्देश्या तत्रैव सा दोषः। अत्रच न काचन कुसृष्टिः । नापि सामान्यविप्रतिपत्त्यनानुगुण्यम् इति निरस्तम् ।**

ಮಣ್ಯುಕ್ತ ಅನುಮಾನಗಳಿಗೆ ಹೇಳಿದ ದೋಷವು ಉದಯನೋಕ್ತವಾದ ಅನುಮಾನಕ್ಕೂ ಇರುವುದರಿಂದ ಆ ಅನುಮಾನವೂ ಸರಿಯಲ್ಲ.

ಉದಯನೋಕ್ತಾನುಮಾನ–ಅನಭ್ಯಾಸದಶಾದಲ್ಲಿ ಸಂದೇಹ ಬರುವ ಕಾರಣದಿಂದಾಗಿ ಪ್ರಾಮಾಣ್ಯವು ಅನುವ್ಯವಸಾಯದಿಂದ ಗ್ರಾಹ್ಯವಲ್ಲ. ನೋಡಿದ್ದನ್ನೇ ಮತ್ತೆ ಮತ್ತೆ ತಿಳಿಯುವುದು ಅಭ್ಯಾಸದಶಾ. ಹೊಸದಾಗಿ ಬರುವ ಜ್ಞಾನ ಅನಭ್ಯಾಸದಶಾಪನ್ನಜ್ಞಾನ. ಅಂತಹ ಸಂದರ್ಭಗಳಲ್ಲಿ ಬಂದ ಜ್ಞಾನವು ಪ್ರಮಾಣ ಹೌದೋ ಅಲ್ಲವೋ, ಎಂಬ ಸಂದೇಹ ಬರುತ್ತದೆ. ಪ್ರಾಮಾಣ್ಯಸ್ವತಸ್ತ್ವಸಿದ್ಧಾಂತದಲ್ಲಿ ಪ್ರಾಮಾಣ್ಯವು ಅನುವ್ಯವಸಾಯದಿಂದ ನಿಶ್ಚಿತವಾಗಿರುವುದರಿಂದ ಸಂದೇಹಕ್ಕೆ ಅವಕಾಶವಿಲ್ಲ, ಎಂದು ಈ ಅನುಮಾನದ ಅಭಿಪ್ರಾಯ.

ಇಲ್ಲಿ 'ಪರತೋ ಜ್ಞಾಯತೇ' ಎಂದು ಸಾಧ್ಯಾಂಶ. ಇದು ಸ್ವತಸ್ತ್ವವಾದಿಗಳಿಗೂ ಸಮ್ಮತವಾಗಿದೆ. ಜ್ಞಾನಗ್ರಾಹಕ–ಸಾಕ್ಷಿಯಿಂದಲೇ ಪ್ರಾಮಾಣ್ಯವೂ ಗ್ರಾಹ್ಯವಾದರೂ ಆ ಸಾಕ್ಷಿಯು ಇಂದ್ರಿಯಾಂತರಾಪೇಕ್ಷಯಾ ಪರ=ಅನ್ಯವಾಗಿದೆ. ಆದ್ದರಿಂದ ಪರತಃ ಗ್ರಾಹ್ಯತ್ವವು ಬಂದೇ ಬರುತ್ತದೆ. ಹೀಗೆ, ಸಿದ್ಧಸಾಧನತಾ, ಎಂದು ಆಕ್ಷೇಪಮಾಡಬಹುದು. ಈ ಆಕ್ಷೇಪ ಯುಕ್ತವಲ್ಲ. ಏಕೆಂದರೆ, ಸ್ವತಸ್ತ್ವವಾದಿಗಳು ಪರತಸ್ತ್ವವನ್ನು ಪ್ರಾಮಾಣ್ಯಕ್ಕೆ ನಿಷೇಧ ಮಾಡುತ್ತಾರೆ. ಅವರು ನಿಷೇಧಮಾಡುವ ಅರ್ಥಾತ್ ಅವರಿಗೆ ಅಸಮ್ಮತವಾದ ಅನುವ್ಯವಸಾಯ–ಅಗ್ರಾಹ್ಯತ್ವವನ್ನು ಈ ಅನುಮಾನದಿಂದ ಸಾಧನೆ ಮಾಡಲಾಗುತ್ತದೆ. ಅದು ಸ್ವತಸ್ತ್ವವಾದಿಗಳಿಗೆ ಸಮ್ಮತವಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಈ ಅನುಮಾನದಲ್ಲಿ ಭಾಗಾಸಿದ್ಧಿದೋಷವನ್ನು ಹೇಳಬಹುದು. ಸಕಲ ಪ್ರಾಮಾಣ್ಯವೂ ಇಲ್ಲಿ

ಪಕ್ಷ. ಆದರೆ ಅಭ್ಯಾಸದಶಾಪನ್ನ-ಪ್ರಾಮಾಣ್ಯದಲ್ಲಿ ಮತ್ತು ಅನಭ್ಯಾಸದಶಾಪನ್ನವಾದರೂ ಕೆಲವು ಜ್ಞಾನಪ್ರಾಮಾಣ್ಯದಲ್ಲಿ ಸಂದೇಹವಿರುವುದಿಲ್ಲ. ಸಾಂಶಯಿಕತ್ವಹೇತು ಅದರಲ್ಲಿ ಇಲ್ಲ. ಹೀಗೆ ಭಾಗಾಸಿದ್ಧಿ. ಈ ದೋಷ ಪ್ರಕೃತಾನುಮಾನಕ್ಕೆ ಬರುವುದಿಲ್ಲ. ಏಕೆಂದರೆ, ಈ ಅನುಮಾನದಲ್ಲಿ ಸಕಲ ಪ್ರಾಮಾಣ್ಯವೂ ಪರತಃ ಜ್ಞಾಯತೇ ಎಂದು ಸಾಧಿಸುವ ಉದ್ದೇಶ ನೈಯಾಯಿಕರಿಗೆ ಇಲ್ಲ. ಸಂದಿಗ್ಧವಾದ ಪ್ರಾಮಾಣ್ಯದಲ್ಲಿ ಮಾತ್ರ ಪರತಸ್ತ್ವವನ್ನು ಸಾಧಿಸುವುದಷ್ಟೇ ಅವರ ಉದ್ದೇಶ. ಆದ್ದರಿಂದ ಎಲ್ಲಾ ಪ್ರಾಮಾಣ್ಯಗಳಲ್ಲಿ ಹೇತು ಬರದಿದ್ದರೆ ಅದರಿಂದ ಈ ಉದ್ದೇಶಕ್ಕೇನೂ ಬಾಧಕವಿಲ್ಲ. ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧಿಯು ಉದ್ದೇಶವಾಗಿದ್ದಾಗ ಮಾತ್ರ ಭಾಗಾಸಿದ್ಧಿ ದೋಷವಾಗುತ್ತದೆ. ಪ್ರಕೃತದಲ್ಲಿ ಆ ಉದ್ದೇಶವಿಲ್ಲ.

ಹಿಂದಿನ ಅನುಮಾನಗಳಂತೆ ಇಲ್ಲಿ ಪಕ್ಷತಾವಚ್ಛೇಕ-ಹೇತುಗಳ ಐಕ್ಯದೋಷ, ಪಕ್ಷತಾವಚ್ಛೇದಕವು ವಿವಕ್ಷಿತ-ಪ್ರಾಮಾಣ್ಯದಲ್ಲಿ ಮಾತ್ರ ಬರುವಂತೆ ಪರಿಷ್ಕರಿಸುವ ಕ್ಲೇಶ, ಅನುವ್ಯವಸಾಯ ನರಸಿಂಹಾಕಾರ ಎಂದು ಕಲ್ಪನೆ ಮಾಡುವ ಕುಸೃಷ್ಟಿ ಈ ಅನುಮಾನಕ್ಕಿಲ್ಲ.

ಪ್ರಾಮಾಣ್ಯ ಸಾಮಾನ್ಯದಲ್ಲಿ ಸ್ವತಸ್ತ್ವ-ಪರತಸ್ತ್ವ ವಿಪ್ರತಿಪತ್ತಿ ಇರುವಾಗ ಪ್ರಾಮಾಣ್ಯ ವಿಶೇಷದಲ್ಲಿ ಪರತಸ್ತ್ವವನ್ನು ಸಾಧನೆ ಮಾಡುವುದು ವಿಪ್ರಪತ್ತಿಗೆ ಅನುಗುಣವಾಗುವುದಿಲ್ಲ, ಎಂಬ ಆಕ್ಷೇಪವೂ ಇಲ್ಲ. ಏಕೆಂದರೆ, ಈ ಅನುಮಾನದಲ್ಲಿ ಪ್ರಾಮಾಣ್ಯಸಾಮಾನ್ಯವೇ ಪಕ್ಷವಾಗಿದೆ.

## ನ್ಯಾಯದೀಪ

**ಏತೇನೇತಿ ।। ನಿರಸ್ತಮ್, ಇತ್ಯನೇನಾನ್ವಯಃ ।**

**ನನು ಪರತಸ್ತ್ವಸ್ಯ ಅನ್ಯತ್ವರೂಪಸ್ಯ ಕೇವಲಾನ್ವಯಿತ್ವೇನ ಸ್ವತಸ್ತ್ವೇಽಪಿ ಉಪಪತ್ತ್ಯಾ ಅರ್ಥಾಂತರಮ್, ಇತ್ಯತಃ ತತ್ ಪರಿಷ್ಕರೋತಿ–ಪರತಸ್ತ್ವಂ ಚೇತಿ ।। ತತ್ಪ್ರಕಾರ-ಪ್ರಕಾರೇತ್ಯಾದಿನಾ ಪ್ರಾಗುಕ್ತರೂಪಜ್ಞಾನಾಗ್ರಾಹ್ಯತ್ವಂ ನಿಷಿಧ್ಯತೇ, ಇತಿ ತದೇವ ಇತ್ಯರ್ಥಃ। ತಥಾಚ 'ಸ್ವಗ್ರಾಹ್ಯತ್ವೇಽಪಿ ಕದಾಚಿತ್ ಪರಗ್ರಾಹ್ಯತ್ವಾತ್, ಸ್ವಸ್ಯಾಪಿ ಅನ್ಯಾಪೇಕ್ಷಯಾ ಪರತ್ವಾತ್' (ಪುಟ.210) ಇತ್ಯಾದಿ ಮಣ್ಯುಕ್ತ ಖಂಡನಾನವಕಾಶಃ ಇತಿ ಭಾವಃ ।**

'ಪ್ರಾಮಾಣ್ಯವು ಪರತಃ ಗ್ರಾಹ್ಯ' ಎಂದು ಈ ಅನುಮಾನದಿಂದ ಸಾಧನೆ ಮಾಡಿದರೆ ಸ್ವತಸ್ತ್ವವಾದಿಗಳಿಗೆ ಸಿದ್ಧಸಾಧನತಾದೋಷ. ಸ್ವತಸ್ತ್ವವಾದಿಗಳು ಪ್ರಾಮಾಣ್ಯವು ಸಾಕ್ಷಿಗ್ರಾಹ್ಯ ಎಂದು ಹೇಳುತ್ತಾರೆ. ಆ ಸಾಕ್ಷಿಯು 'ಪರವೂ' ಆಗಬಹುದು. ಪರ ಎಂದರೆ ಅನ್ಯ. ಅನ್ಯತ್ವ ಕೇವಲಾನ್ವಯಿ. ಸಾಕ್ಷಿಯೂ ಅನ್ಯ. ಸಾಕ್ಷಿಗ್ರಾಹ್ಯತ್ವ ಬಂದರೂ ಪರತಃ ಗ್ರಾಹ್ಯತ್ವವು ಬರುತ್ತದೆ. ಆದ್ದರಿಂದ ಸಿದ್ಧಸಾಧನತಾ. ಅದನ್ನು 'ಪರತಸ್ತ್ವಂ ಚ' ಎಂಬ ಮೂಲದಲ್ಲಿ ಪರಿಹರಿಸಲಾಗಿದೆ. ಈ

ಅನುಮಾನದಲ್ಲಿ ಹಿಂದೆ ಹೇಳಿದ ವ್ಯವಸಾಯಪ್ರಕಾರ ಪ್ರಕಾರಕತ್ವೇನ, ತದ್ವದ್ವಿಶೇಷ್ಯಕತ್ವೇನ ವ್ಯವಸಾಯ-ಗ್ರಾಹಕ-ಅಗ್ರಾಹ್ಯರೂಪವಾದ ಯಾವ ಪರತಸ್ತ್ವವನ್ನು ಸ್ವತಸ್ತ್ವವಾದಿಗಳು ನಿರಾಕರಿಸುತ್ತಾರೋ ಅದೇ ಸಾಧ್ಯ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಇದರಿಂದ ಮಣಿಕಾರ ಮಾಡಿಕೊಂಡಿರುವ ಆಕ್ಷೇಪಕ್ಕೂ ಅವಕಾಶವಿಲ್ಲ. ಅವನು ಹೀಗೆ ಆಕ್ಷೇಪಿಸಿದ್ದಾನೆ– 'ಪ್ರಾಮಾಣ್ಯವು ಸ್ವತೋ ಗ್ರಾಹ್ಯ ಎಂದು ಹೇಳುವವರಿಗೂ ಅದು ಅನುಮಾನದಿಂದ (ಪರತಃ) ಗ್ರಾಹ್ಯ ಎನ್ನುವುದು ಸಮ್ಮತವೇ ಆಗಿದೆ. ಆದ್ದರಿಂದ ಪರತಃ ಗ್ರಾಹ್ಯತ್ವವನ್ನು ಸಾಧನೆ ಮಾಡಿದರೆ ಸಿದ್ಧಸಾಧನತಾ. ಅದರಂತೆ, ಸ್ವಪ್ರಾ(ಸಾಕ್ಷಿಯೂ) ಅನ್ಯಾಪೇಕ್ಷಯಾ ಪರವೇ ಆದುದರಿಂದ ಸಾಕ್ಷಿಗ್ರಾಹ್ಯತ್ವಪಕ್ಷದಲ್ಲೂ ಪರತೋಗ್ರಾಹ್ಯತ್ವವು ಅಂಗೀಕೃತವಾಗಿದೆ. ಆದ್ದರಿಂದಲೂ ಸಿದ್ಧಸಾಧನತಾ' ಎಂದು. ಈ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಸ್ವತಸ್ತ್ವವಾದಿಗಳು ನಿರಾಕರಿಸುವ ಪರತಸ್ತ್ವವನ್ನೇ ಈ ಅನುಮಾನದಿಂದ ಸಾಧನೆ ಮಾಡಲಾಗಿದೆ.

## ನ್ಯಾಯದೀಪ

**ನನು 'ಅನಭ್ಯಾಸದಶಾಯಾಂ ಇತಿ ಭಾಗಾಸಿದ್ಧಿವಾರಣಾರ್ಥಮ್' ಇತಿ ವರ್ಧಮಾನೋಕ್ತೇಃ ಕಥಂ ಭಾಗಾಸಿದ್ಧಿಶಂಕಾ? ಇತಿ ಚೇನ್ನ । ಪ್ರಾಮಾಣ್ಯಮಾತ್ರಸ್ಯ ಪಕ್ಷತ್ವೇನ ಸಾಂಶಯಿಕತ್ವಾತ್ ಇತ್ಯುಕ್ತ್ಯಾ ಕ್ವಚಿದಸಿದ್ಧೇಃ, ಅನಭ್ಯಾಸದಶಾಯಾಮ್ ಇತ್ಯುಕ್ತ್ಯಾ ಅಭ್ಯಾಸದಶೋತ್ಪನ್ನೇ ಜ್ಞಾನಪ್ರಾಮಾಣ್ಯೇ ಪಕ್ಷೈಕದೇಶೇ, ಅನಭ್ಯಾಸದಶೋತ್ಪನ್ನೇಽಪಿ ಸರ್ವತ್ರ ಸಂದೇಹಾಭಾವೇನ ಭಾಗಾಸಿದ್ಧಿಶಂಕಾಯಾಂ ಪ್ರಾಚೀನ-ಮತಾಭಿಪ್ರೇತ-ಅದೋಷೋಕ್ತಿರಿತಿ ಜ್ಞೇಯಮ್ ।**

ವರ್ಧಮಾನೋಪಾಧ್ಯಾಯ[1] ನ್ಯಾಯಕುಸುಮಾಂಜಲಿ ವ್ಯಾಖ್ಯಾನದಲ್ಲಿ 'ಅನಭ್ಯಾಸದಶಾಯಾಂ ಎಂಬ ಹೇತುವಿಶೇಷಣವು ಭಾಗಾಸಿದ್ಧಿವಾರಣೆಗಾಗಿ ಇದೆ' ಎಂದು ಹೇಳಿದ್ದಾನೆ. ಆದರೆ, ಪ್ರಕೃತ ಗ್ರಂಥದಲ್ಲಿ ಆ ವಿಶೇಷಣ ಇದ್ದರೂ ಭಾಗಾಸಿದ್ಧಿದೋಷವನ್ನೇ ಹೇಳಲಾಗಿದೆ. ಇದು ವಿರುದ್ಧವಲ್ಲವೆ? ಇದಕ್ಕೆ ಉತ್ತರ-ಸಕಲ ಪ್ರಾಮಾಣ್ಯವೂ ಪಕ್ಷವಾದರೆ ಸುಖಾದಿಜ್ಞಾನ ಪ್ರಾಮಾಣ್ಯದಲ್ಲಿ ಸಾಂಶಯಿಕತ್ವವು ಇಲ್ಲವಾದುದರಿಂದ ಅಸಿದ್ಧಿ. ಅದಕ್ಕಾಗಿ, 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂದರೆ, ಪ್ರಾಮಾಣ್ಯವು ಪರೀಕ್ಷಾನಂತರದಲ್ಲಿ ನಿಶ್ಚಿತವಾದರೂ ಅದೇ ಪ್ರಾಮಾಣ್ಯವು ಅನಭ್ಯಾಸದಶಾದಲ್ಲಿ ಸಾಂಶಯಿಕವಾಗಬಹುದು. ಅಸಿದ್ಧಿ

1. **ವರ್ಧಮಾನೋಪಾಧ್ಯಾಯ ಗಂಗೇಶೋಪಾಧ್ಯಾಯನ ಮಗ. ಹದಿನಾಲ್ಕನೆಯ ಶತಮಾನದಲ್ಲಿದ್ದವನು. ನ್ಯಾಯಕುಸುಮಾಂಜಲಿ ಗ್ರಂಥಕ್ಕೆ ವ್ಯಾಖ್ಯಾನ ಬರೆದಿರುತ್ತಾನೆ. ತತ್ತ್ವಚಿಂತಾಮಣಿಗೂ 'ಪ್ರಕಾಶ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ, ಎಂದು ಊಹೆ ಇದೆ.**

ಇಲ್ಲ. ಆದರೂ ಭಾಗಾಸಿದ್ಧಿಗೆ ಅವಕಾಶವಿದೆ. ಅಭ್ಯಾಸದಶಾಪನ್ನ ಜ್ಞಾನಪ್ರಾಮಾಣ್ಯದಲ್ಲಿ ಸಂದೇಹ ಇಲ್ಲ, ಅಷ್ಟೇ ಅಲ್ಲ, ಅನಭ್ಯಾಸದಶಾದಲ್ಲೂ ಸಮೀಪದಿಂದ ವಸ್ತುವಿನ ಜ್ಞಾನ ಬಂದಾಗ ಪ್ರಾಮಾಣ್ಯಸಂದೇಹ ಬರುವುದಿಲ್ಲ. ಆದ್ದರಿಂದ ಎರಡೂಕಡೆ ಭಾಗಾಸಿದ್ಧಿ. ಅದರ ಪರಿಹಾರವನ್ನು ಪ್ರಾಚೀನರು ಮಾಡಿದ ಕ್ರಮದಲ್ಲಿ ಮೂಲದಲ್ಲಿ ಮಾಡಲಾಗಿದೆ.

## ನ್ಯಾಯದೀಪ

**ಉದ್ದೇಶ್ಯಸ್ಯೇತಿ ॥ ಯಥಾ ಭೋಗಾಯತನತ್ವಾದಿರೂಪಾವ್ಯಾಪ್ತಶರೀರಾದಿ ಲಕ್ಷಣೇನಾಪಿ ಕೇವಲವ್ಯತಿರೇಕಿಣಾ ಇತರಭೇದಾದಿಸಾಧನಮ್, ಅನ್ಯಥಾ ತನ್ನ ಸ್ಯಾತ್ । ತಥಾ ಇಹಾಪಿ ಯಾವತಿ ಹೇತುರಸ್ತಿ ತಾವತಿ ಪಕ್ಷೇ ಪಕ್ಷತಾವಚ್ಛೇಕ-ಸಾಮಾನಾಧಿಕರಣ್ಯೇನ ಸಾಧ್ಯಸಿದ್ಧಿಸಂಭವಾತ್ । ತಾವತ ಏವ ಉದ್ದೇಶ್ಯತ್ವಾತ್ । ಉದ್ದೇಶ್ಯಸಿದ್ಧಿ ಫಲಕತ್ವಾತ್ ಅನುಮಾನಸ್ಯ ಇತ್ಯರ್ಥಃ ।**

**ತರ್ಹಿ ಸಃ ದೋಷ ಏವ ನ ಸ್ಯಾತ್, ಇತ್ಯತ ಆಹ–ಯತ್ರ ತ್ವಿತಿ ॥ ತಥಾಚ ಮಣೌ ಯತ್, ಅನಭ್ಯಾಸೇತಿ ಉದಯನೋಕ್ತಹೇತು–ವಿಶೇಷಣಂ ಭಂಕ್ತ್ವಾ ಪಕ್ಷವಿಶೇಷಣಂ ಕೃತಂ, ತತ್ ಅಸಿದ್ಧಿವಾರಕಂ ವ್ಯರ್ಥಮ್ ಇತ್ಯುಪೇತ್ಯ, ಇತಿ ಜ್ಞೇಯಮ್ ।**

ಆತ್ಮಭೋಗಾಯತನತ್ವವು ಶರೀರದ ಲಕ್ಷಣ. ಈ ಲಕ್ಷಣ ಮೃತ ಶರೀರದಲ್ಲಿ ಇಲ್ಲ. ಆದರೂ 'ಶರೀರಂ ಇತರಭಿನ್ನಂ ಭೋಗಾಯತನತ್ವಾತ್' ಎಂಬ ಅನುಮಾನದಿಂದ ಇತರ ಭೇದವನ್ನು ಸಾಧನೆ ಮಾಡಲಾಗುತ್ತದೆ. ಇದು ಕೇವಲವ್ಯತಿರೇಕಿ ಅನುಮಾನ. ಈ ಅನುಮಾನದಲ್ಲಿ ಮೃತಶರೀರದಲ್ಲಿ ಭಾಗಾಸಿದ್ಧಿದೋಷ ಇದೆ. ಆದರೂ ಅಂತಹ ಅನುಮಾನಗಳನ್ನು ಪ್ರಯೋಗ ಮಾಡಲಾಗುತ್ತದೆ. ಏಕೆಂದರೆ, ಪಕ್ಷದ ಎಲ್ಲೆಡೆ ಹೇತು ಇಲ್ಲದಿದ್ದರೂ ಹೇತು ಇರುವ ಪಕ್ಷಗಳಲ್ಲಿ ಸಾಧ್ಯವು ಸಿದ್ಧವಾದರೂ ಸಾಕು, ಎನ್ನುವ ಉದ್ದೇಶ ಅನುಮಾನ ಪ್ರಯೋಗಿಸುವ ವ್ಯಕ್ತಿಗೆ ಇದೆ. ಆ ಉದ್ದೇಶ ಈಡೇರಲು ಬಾಧಕವಿಲ್ಲ. ಆದ್ದರಿಂದ ಅಂತಹ ಅನುಮಾನಗಳು ನಿರ್ದುಷ್ಟವಾಗುತ್ತವೆ. ಹಾಗಾದರೆ ಭಾಗಾಸಿದ್ಧಿ ದೋಷವೇ, ಅಲ್ಲವೇ? ಹೌದು. ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧಿ ಉದ್ದೇಶವಾದಾಗ ಭಾಗಾಸಿದ್ಧಿದೋಷ.

ಉದಯನಾಚಾರ್ಯರು ಅನಭ್ಯಾಸದಶಾಯಾಂ ಎಂಬ ವಿಶೇಷಣವನ್ನು ಹೇತುಶರೀರದಲ್ಲಿ ಸೇರಿಸಿದರೆ ಮಣಿಕಾರ ಅದನ್ನು ಪಕ್ಷದಲ್ಲಿ ಸೇರಿಸಿ–'ಅನಭ್ಯಾಸದಶಾಪನ್ನಂ ಪ್ರಾಮಾಣ್ಯಂ' ಎಂದು ಅನುಮಾನ ಮಾಡಿದ್ದಾನೆ. ಅವನ ಅಭಿಪ್ರಾಯ ಅಸಿದ್ಧಿವಾರಕ ಹೇತುವಿಶೇಷಣ ವ್ಯರ್ಥ, ಎಂದು.

## ನ್ಯಾಯದೀಪ

**ಮಣ್ಯುಕ್ತಪಕ್ಷಾಪೇಕ್ಷಯಾ ಅತ್ರ ಗುಣವಿಶೇಷಮಾಹ–ಅತ್ರ ಚೇತಿ ॥ ಪ್ರಾಚೀನೋಕ್ತಾನುಮಾನಪಕ್ಷೇ ಪಕ್ಷತಾವಚ್ಛೇದಕನಿರ್ವಚನಕ್ಲೇಶೋ ವಾ, ಹೇತುಪಕ್ಷತಾವಚ್ಛೇದಕೈಕ್ಯನಿಬಂಧನಃ ಸಿದ್ಧಸಾಧನತಾಕ್ಲೇಶೋ ವಾ, ನರಸಿಂಹಾಕಾರ ಜ್ಞಾನಹೇತುವಿಶೇಷಣ–ದುರ್ಜ್ಞಾನತ್ವಕ್ಲೇಶೋ ವಾ ನೇತ್ಯರ್ಥಃ ॥**

ಮಣಿಯಲ್ಲಿ ಹೇಳಿರುವ ಅನುಮಾನಗಳಿಗಿಂತ ಈ ಅನುಮಾನದಲ್ಲಿ ಇರುವ ಗುಣವಿಶೇಷವನ್ನು ಮೂಲದ 'ಅತ್ರಚ' ಎಂಬ ವಾಕ್ಯದಲ್ಲಿ ತೋರಿಸಲಾಗಿದೆ. ಮಣ್ಯುಕ್ತಾನುಮಾನದಲ್ಲಿ ಪಕ್ಷೀಭೂತ ಪ್ರಾಮಾಣ್ಯದಲ್ಲಿ ಇತರ ವ್ಯಾವೃತ್ತಿಗಾಗಿ ವಿಶೇಷಣಗಳನ್ನು ಸೇರಿಸಲಾಗಿತ್ತು. ಆಗ ಪಕ್ಷತಾವಚ್ಛೇದಕಕ್ಕೂ ಹೇತುವಿಗೂ ಐಕ್ಯಸಂದೇಹ ಬರುತ್ತದೆ, ಅದನ್ನು ಪರಿಹಾರ ಮಾಡಬೇಕಿತ್ತು. ಅನುವ್ಯವಸಾಯ ವಿಷಯತ್ವಾಭಾವವನ್ನು ಸಾಧನೆ ಮಾಡುವಾಗ ತೃತೀಯ ಕ್ಷಣದಲ್ಲಿ ಸಂದೇಹವನ್ನು ಸಮರ್ಥಿಸಲು ಜ್ಞಾನಾಂಶೇ ನಿರ್ವಿಕಲ್ಪಕ–ಘಟತ್ವಪ್ರಕಾರ–ಕತ್ವಾಂಶೇ ಸವಿಕಲ್ಪಕವಾದ ನರಸಿಂಹಾಕಾರವಾದ ಅನುವ್ಯವಸಾಯವನ್ನು ಸಮರ್ಥನೆ ಮಾಡಬೇಕಾಗಿತ್ತು. ಈ ಎಲ್ಲ ಪರಿಶ್ರಮ ಪ್ರಕೃತಾನುಮಾನದಲ್ಲಿ ಇಲ್ಲ.

## ಉದಯನೋಕ್ತಾನುಮಾನ ನಿರಾಸ

**बाधाप्रयोजकत्वाद्युक्तदोषात् ।**

ಉದಯನೋಕ್ತವಾದ ಈ ಅನುಮಾನಕ್ಕೂ ಹಿಂದೆ ಹೇಳಿದ ಬಾಧ–ಅಪ್ರಯೋಜಕತ್ವ–ಪ್ರತಿಕೂಲತರ್ಕಪರಾಹತಿ ದೋಷಗಳು ಇವೆ.

ವ್ಯವಸಾಯಪ್ರಕಾರಪ್ರಕಾರಕತಯಾ ತದ್ವದ್ವಿಶೇಷ್ಯಕತಯಾ ವ್ಯವಸಾಯವನ್ನು ಅನುವ್ಯವಸಾಯವು ಗ್ರಹಿಸಿದಾಗ ಪ್ರಾಮಾಣ್ಯವನ್ನು ಗ್ರಹಿಸಿದಂತೆಯೇ ಆಗುತ್ತದೆ. ಆಗ ಪ್ರಾಮಾಣ್ಯವು ಸ್ವತೋಗ್ರಾಹ್ಯವಾಯಿತು. ಪರತೋಗ್ರಾಹ್ಯತ್ವವನ್ನು ಸಾಧನೆ ಮಾಡಿದರೆ ಬಾಧದೋಷ.

ಸಾಕ್ಷಿಯು ದೋಷಶಂಕಾದಿಪ್ರತಿಬಂಧಕಗಳಿದ್ದಾಗ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಪ್ರಾಮಾಣ್ಯಸಂದೇಹ ಬರಬಹುದು. ತಾವತಾ ಸಾಕ್ಷಿಗೆ ಪ್ರಾಮಾಣ್ಯಗ್ರಹಣಶಕ್ತಿಯು ಇಲ್ಲವೆಂದಾಗು–ವುದಿಲ್ಲ. ಹೀಗೆ, ಸ್ವತಸ್ತ್ವವನ್ನು ಒಪ್ಪಿಯೂ ಸಂದೇಹವನ್ನು ಸಮರ್ಥನೆ ಮಾಡಬಹುದಾದ್ದರಿಂದ ಹೇತು ಅಪ್ರಯೋಜಕ.

ಪ್ರತಿತರ್ಕಪರಾಹತಿಯೂ ಇದೆ–ಯದಿ ಪ್ರಾಮಾಣ್ಯಂ ಪರತಃ ಗೃಹ್ಯೇತ ತರ್ಹಿ ಅನವಸ್ಥಾ ಸ್ಯಾತ್, ಎಂದು. ಹೀಗೆ ಈ ದೋಷಗಳಿಂದ ಉದಯನೋಕ್ತಾನುಮಾನವೂ ದುಷ್ಟವಾಗಿದೆ.

## ನ್ಯಾಯದೀಪ

**'ಅಪ್ರಯೋಜಕತ್ವಾದಿ' ಇತ್ಯಾದಿಪದೇನ ಪ್ರತಿಕೂಲತರ್ಕಪರಾಹತಿ–ಸೋಪಾಧಿಕತ್ವಾದಿಪರಿಗ್ರಹಃ। ಸುಧೋಕ್ತದಿಶಾ, ಸ್ವತಃ ಪ್ರಮಾಣತ್ವೇನ ಅಂಗೀಕೃತ ಧರ್ಮಿಜ್ಞಾನ–ಅನುಮಿತಿಪ್ರಾಮಾಣ್ಯೇ ವ್ಯಭಿಚಾರಸ್ಯ ಚ ಗ್ರಹಃ।**

ಮೂಲದ 'ಆದಿ' ಪದದಿಂದ ಈ ಅನುಮಾನಕ್ಕೆ, ಹಿಂದೆ ಹೇಳಿದ ಪ್ರತಿಕೂಲತರ್ಕಪರಾಹತಿಯನ್ನೂ ಉಪಾಧಿದೋಷವನ್ನೂ ಪರಿಗ್ರಹಿಸಬೇಕು. ಸುಧಾದಲ್ಲಿ ಈ ಅನುಮಾನಕ್ಕೆ ವ್ಯಭಿಚಾರದೋಷವನ್ನೂ ಹೇಳಿದ್ದಾರೆ. ನೈಯಾಯಿಕರು ಧರ್ಮಿಜ್ಞಾನಕ್ಕೆ ಮತ್ತು ಅನುಮಿತಿಗೆ ಪ್ರಾಮಾಣ್ಯಂ ಸ್ವತಃ ಎಂದು ಅಂಗೀಕರಿಸಿದ್ದಾರೆ. ಆದರೆ ಅಲ್ಲೂ ಕದಾಚಿತ್ ಸಂದೇಹ ಬರುತ್ತದೆ. ಹೀಗೆ, ವ್ಯಭಿಚಾರದೋಷ.

**एतेनैव, प्रामाण्यं परतो ज्ञायते । प्रामाण्याप्रामाण्यान्यतरमात्रकोटिकसंशयविषयत्वात् अप्रमाण्यवत् इत्याद्यपि निरस्तम् ।**

ಈ ದೋಷಗಳಿಂದಾಗಿಯೇ ಇನ್ನೊಂದು ಅನುಮಾನವೂ ನಿರಸ್ತವಾಯಿತು. 'ಇದಂ ಪ್ರಮಾಣಂ ನವಾ' ಎಂಬ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಇವೆರಡೇ ಕೋಟಿಗಳಿರುವ ಸಂದೇಹಕ್ಕೆ ವಿಷಯವಾದುದರಿಂದ ಪ್ರಾಮಾಣ್ಯವು ಪರತಃ ಗೃಹೀತವಾಗುತ್ತದೆ, ಇದು ಅನುಮಾನ. ಇದಕ್ಕೂ ಹಿಂದಿನ ಬಾಧಾದಿ ದೋಷಗಳು ಇವೆ.

## ನ್ಯಾಯದೀಪ

**ಏತೇನೈವೇತಿ ॥ ಬಾಧಾದಿನೇತ್ಯರ್ಥಃ। ದೃಷ್ಟಾಂತಘಟನಾಯ ಹೇತೌ ಅಪ್ರಾಮಾಣ್ಯಪದಮ್। ಅನ್ಯತರಶಬ್ದಃ ಉಭಯಪರಃ। ಪ್ರಾಮಾಣ್ಯಾ-ಪ್ರಾಮಾಣ್ಯೋಭಯ–ಮಾತ್ರಕೋಟಿಕೇತ್ಯರ್ಥಃ। ಸಂಶಯವಿಷಯೇ ಘಟಾದ್ಯರ್ಥೇ ವ್ಯಭಿಚಾರನಿರಾಸಾಯ ಪ್ರಾಮಾಣ್ಯಾ–ಪ್ರಾಮಾಣ್ಯಾನ್ಯತರ-ಕೋಟಿಕೇತ್ಯುಕ್ತಿಃ। 'ಇದಂ ಜ್ಞಾನಂ ಗುಣೋ ನವಾ, ಪ್ರಮಾಣಮ್ ಅಪ್ರಮಾಣಮ್ ವಾ' ಇತಿ ತದಂಗೀಕೃತ–ಚತುಷ್ಕೋಟಿಕ–ಸಂದೇಹವಿಷಯೇ ಜ್ಞಾನೇ ವ್ಯಭಿಚಾರನಿರಾಸಾಯ ಮಾತ್ರೇತ್ಯುಕ್ತಿಃ। ಯದಿಚ ವಿಷಯತ್ವಾದಿತ್ಯಸ್ಯ ಕೋಟಿತ್ವಾದಿತ್ಯರ್ಥಃ ತದಾ ಗುಣತ್ವೇ ವ್ಯಭಿಚಾರವಾರಣಾಯ ಮಾತ್ರಪದಮಿತಿ ಜ್ಞೇಯಮ್।**

**ಆದಿಪದೇನ, ಪ್ರಾಮಾಣ್ಯಂ, ಪರತೋ ಜ್ಞಾಯತೇ, ಸ್ವತೋ ಅಗ್ರಾಹ್ಯತ್ವೇ ಸತಿ ಗ್ರಾಹ್ಯತ್ವಾತ್ ಇತ್ಯಾದೇಃ ಗ್ರಹಃ ।**

ಮೂಲದಲ್ಲಿರುವ ಅನುಮಾನದ ಹೇತುವಿನಲ್ಲಿ 'ಅಪ್ರಾಮಾಣ್ಯ' ಪದವಿರುವುದರಿಂದ ದೃಷ್ಟಾಂತವಾದ ಅಪ್ರಾಮಾಣ್ಯದಲ್ಲಿ ಸಂದೇಹವಿಷಯತ್ವಹೇತುವು ಬರುತ್ತದೆ. ಪ್ರಾಮಾಣ್ಯ ಕೋಟಿಕಸಂದೇಹವಿಷಯತ್ವಾತ್, ಎಂದಿಷ್ಟೇ ಹೇತುವಾದರೆ 'ಪ್ರಮಾಣಂ ನವಾ' ಎಂಬ ಸಂದೇಹದಲ್ಲಿ ಪ್ರಾಮಾಣ್ಯಾಭಾವವು ವಿಷಯವಾಗಿರುವುದರಿಂದ ಸಂದೇಹವಿಷಯತ್ವವು ಅಪ್ರಾಮಾಣ್ಯದಲ್ಲಿ ಬರುತ್ತಿರಲಿಲ್ಲ.

ಹೇತುವಿನಲ್ಲಿ ಅನ್ಯತರ ಎಂದರೆ ಉಭಯ ಎಂದರ್ಥ. ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಈ ಎರಡೂ ಕೋಟಿಗಳು ಯಾವ ಸಂದೇಹದಲ್ಲಿ ಇವೆಯೋ ಅಂತಹ ಸಂದೇಹದಲ್ಲಿ ವಿಷಯ ಎಂದು ಅರ್ಥ. ಕೇವಲ ಸಂದೇಹವಿಷಯತ್ವಾತ್ ಎಂದಿಷ್ಟೇ ಹೇತುವು ಘಟದಲ್ಲಿ ಇದೆ, ಅಲ್ಲಿ ಸಾಧ್ಯ ಇಲ್ಲ, ವ್ಯಭಿಚಾರ. ಆದಕ್ಕಾಗಿ ಕೋಟಿಗಳೆರಡನ್ನೂ ಉಲ್ಲೇಖ ಮಾಡಲಾಗಿದೆ.

ಮಾತ್ರ ಪದವನ್ನು ಬಿಟ್ಟರೆ 'ಜ್ಞಾನಂ ಗುಣೋ ನವಾ, ಪ್ರಮಾಣಮ್ ಅಪ್ರಮಾಣಂ ವಾ' ಎಂಬ ಚತುಷ್ಕೋಟಿಕ ಸಂದೇಹವೂ ಸಂಗ್ರಹವಾಗುತ್ತದೆ. ತದ್ವಿಷಯತ್ವ ಜ್ಞಾನದಲ್ಲಿದೆ. ಅದರಲ್ಲಿ ಸಾಧ್ಯ ಇಲ್ಲ, ವ್ಯಭಿಚಾರ. ಈ ವ್ಯಭಿಚಾರವನ್ನು, ಸಂದೇಹ ಕೋಟಿತ್ವಾತ್, ಎಂದು ಹೇತುವಿಗೆ ಅರ್ಥ ಮಾಡಿಯೂ ಪರಿಹರಿಸಬಹುದು. ಜ್ಞಾನವು ಆ ಸಂದೇಹದಲ್ಲಿ ಕೋಟಿ ಅಲ್ಲ, ಆದರೂ ಆ ಸಂದೇಹದಲ್ಲಿ ಕೋಟಿಯಾದ ಗುಣತ್ವದಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಮಾತ್ರಪದಬೇಕು. ಆ ಸಂದೇಹದಲ್ಲಿ ಎರಡೇ ಕೋಟಿಗಳಲ್ಲ; ನಾಲ್ಕು ಕೋಟಿಗಳಿವೆ, ವ್ಯಭಿಚಾರವಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಉಪಪಾದಿತ–ಜ್ಞಪ್ತಿಸ್ವತಸ್ತ್ವೇನೈವ ಉತ್ಪತ್ತೌ ಅಪಿ ತತ್ ಸಿದ್ಧಪ್ರಾಯಮ್ ಇತಿ ಭಾವೇನ ಉತ್ತರವಾದೋಪಕ್ಷೇಪಣಾಯ ಉಪಸಂಹರತಿ–ತಸ್ಮಾದಿತಿ ॥**

ಪ್ರಾಮಾಣ್ಯವು ಜ್ಞಪ್ತೌ ಸ್ವತಃ, ಎಂದು ಇದುವರೆಗೆ ಸಮರ್ಥಿಸಿರುವುದರಿಂದಲೇ ಉತ್ಪತ್ತೌ ಸ್ವತಸ್ತ್ವವೂ ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದ ಎರಡೂ ವಿಧದ ಸ್ವತಸ್ತ್ವಗಳನ್ನೂ ಮುಂದಿನ ವಾಕ್ಯದಲ್ಲಿ ಉಪಸಂಹಾರ ಮಾಡಲಾಗಿದೆ. ಉತ್ಪತ್ತೌ ಸ್ವತಸ್ತ್ವವನ್ನೂ ಉಪಸಂಹಾರ ಮಾಡಿದಾಗ ಮುಂದಿನ ಪ್ರಕರಣದಲ್ಲಿ ಉತ್ಪತ್ತೌ ಸ್ವತಸ್ತ್ವ ಹೇಗೆ ಸಾಧ್ಯ? ಎಂಬ ಆಕ್ಷೇಪ ಹಾಗೂ ಅದಕ್ಕೆ ಉತ್ತರ ಸಂಗತವಾಗುತ್ತದೆ.

**तस्माज्ज्ञप्तावुत्पत्तौ च प्रामाण्यं स्वत एवेति । एतदप्युक्तं**

**''अन्यथा'' इत्यादिना । फलाभावमात्रेण स्वरूपयोग्यत्वाभावसाधने लोकसिद्ध-सर्वव्यवस्थायोगादित्यर्थः ।।**

ಸ್ವತಸ್ತ್ವಕ್ಕೆ ಸಾಧಕ ಇದೆ, ಬಾಧಕ ಇಲ್ಲ, ಪರತಸ್ತ್ವಕ್ಕೆ ಸಾಧಕ ಇಲ್ಲ, ಬಾಧಕ ಇದೆ. ಆದ್ದರಿಂದ ಪ್ರಾಮಾಣ್ಯದ ಉತ್ಪತ್ತಿ ಮತ್ತು ಜ್ಞಪ್ತಿಗಳು ಸ್ವತ ಏವ.

ಈ ಪ್ರಕರಣದಲ್ಲಿ ಹೇಳಿರುವ, ಸಂದೇಹ ಇರುವ ಕಾರಣದಿಂದಾಗಿ ಪ್ರಾಮಾಣ್ಯನಿಶ್ಚಯ ರೂಪವಾದ ಫಲವು ಇಲ್ಲದಿದ್ದರೂ ಸಾಕ್ಷಿಗೆ ತದ್‌ಗ್ರಹಣಯೋಗ್ಯತ್ವರೂಪವಾದ ಸ್ವತಸ್ತ್ವದ ಅಭಾವವು ಸಿದ್ಧವಾಗುವುದಿಲ್ಲ, ಎಂಬ ವಿಷಯವನ್ನು ಆಚಾರ್ಯರು 'ಅನ್ಯಥಾ ಅನವಸ್ಥಾನಾತ್' ಎಂಬ ವಾಕ್ಯದಿಂದ ಸೂಚಿಸಿದ್ದಾರೆ. ಆದರ ಅಭಿಪ್ರಾಯ– ಫಲವಾಗದಿದ್ದ ಮಾತ್ರಕ್ಕೆ ಕರಣದಲ್ಲಿ ಫಲಜನನಯೋಗ್ಯತೆಯೇ ಇಲ್ಲವೆಂದಾಗುವುದಾದಲ್ಲಿ ಲೋಕಸಿದ್ಧವಾದ ಎಲ್ಲ ವ್ಯವಸ್ಥೆಯೂ ಭಂಗವಾದೀತು. ಅಂದರೆ ಪ್ರತಿಬಂಧಕವಶಾತ್ ವಹ್ನಿಯು ದಾಹಕವಾಗದಿರುವುದರಿಂದ ವಹ್ನಿಗೆ ದಾಹಯೋಗ್ಯತೆಯೇ ಇಲ್ಲವೆಂದಾದೀತು. ಆದ್ದರಿಂದ, ಕ್ವಚಿತ್ ಪ್ರಾಮಾಣ್ಯಜ್ಞಾನಾಭಾವ ಮಾತ್ರದಿಂದ ಸಾಕ್ಷಿಗೆ ಪ್ರಾಮಾಣ್ಯಗ್ರಹಣಯೋಗ್ಯತೆಯೇ ಇಲ್ಲವೆಂದು ಹೇಳಬಾರದು.

## ನ್ಯಾಯದೀಪ

**ಏತದಪೀತಿ ॥ ನಿಶ್ಚಯರೂಪಫಲಾಭಾವೇ ಯೋಗ್ಯತ್ವಾಭಾವಃ ನ, ಇತ್ಯೇತದಪೀತ್ಯರ್ಥಃ। ಲೋಕೇತಿ ॥ ಪ್ರತಿಬಂಧಕ-ಸ್ಥಲೀಯ ದಾಹಾದ್ಯ-ಭಾವೇಽಪಿ ವಹ್ನ್ಯಾದೇಃ ತಚ್ಛಕ್ತತಾಸ್ತೀತಿ ಲೋಕಸಿದ್ಧವ್ಯವಸ್ಥಾ, ಇತ್ಯರ್ಥಃ।**

ಏತದಪಿ ಎಂದರೆ ಫಲ ಇಲ್ಲದಿರುವುದರಿಂದ ಯೋಗ್ಯತೆಯು ಇಲ್ಲ ಎಂದಾಗದು, ಎಂದು ಈ ಪ್ರಕರಣದಲ್ಲಿ ಹೇಳಿರುವ ವಿಷಯ.

ಅನವಸ್ಥಾ ಎಂಬ ಆಚಾರ್ಯರು ಹೇಳಿದ ಪದಕ್ಕೆ ವ್ಯವಸ್ಥಾಭಾವ ಎಂದರ್ಥ. ಪ್ರತಿಬಂಧಕವಿದ್ದಾಗ ದಾಹಾಭಾವ ಇದ್ದರೂ ವಹ್ನಿಗೆ ದಾಹಶಕ್ತಿ ಇದ್ದೇ ಇರುತ್ತದೆ, ಇದು ಲೋಕಸಿದ್ಧವ್ಯವಸ್ಥೆ. ಇದು ಇಲ್ಲವಾದೀತು ಎಂದು ಅರ್ಥ.

**ಇಲ್ಲಿಗೆ ಜ್ಞಪ್ತೌ ಪರತಸ್ತ್ವಾನುಮಾನಭಂಗ ಪ್ರಕರಣ ಮುಗಿಯಿತು ॥ 9 ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಪ್ರಾಮಾಣ್ಯವು ಸಾಕ್ಷಿವೇದ್ಯವಲ್ಲ, ಎಂದು ಸಾಧಿಸುವ ಅನೇಕ ಅನುಮಾನಗಳನ್ನು ದೋಷಹೇಳಿ, ನಿರಾಕರಿಸಲಾಗಿದೆ. ಅವೆಲ್ಲ ಅನುಮಾನಗಳ ಮೂಲಭೂತವಾದ ಧೋರಣೆ ಇದು–ಜಲಾದಿಜ್ಞಾನಗಳು ಬಂದ ಮರುಕ್ಷಣವೇ ಆ ಜ್ಞಾನಗಳ ಜ್ಞಾನವು ಸಾಕ್ಷಿಯಿಂದ ಬರುತ್ತದೆ. ಕೆಲವೊಮ್ಮೆ, ಆ ಸಾಕ್ಷಿಜ್ಞಾನ ಬಂದ ಮುಂದಿನ ಕ್ಷಣದಲ್ಲಿ ಪ್ರಾಮಾಣ್ಯಾ ಪ್ರಾಮಾಣ್ಯಕೋಟಿಗಳ ಸ್ಮರಣೆ ಬಂದು ಮೂರನೆಯ ಕ್ಷಣದಲ್ಲಿ 'ಜಲಜ್ಞಾನಂ ಪ್ರಮಾಣಂ ನವಾ' ಎಂಬ ಪ್ರಾಮಾಣ್ಯಸಂದೇಹ ಬರುತ್ತದೆ. ಒಂದುವೇಳೆ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದ ನಿರ್ಧಾರವಾಗಿದ್ದಿದ್ದರೆ ಆ ನಿರ್ಧಾರವು ಸಂದೇಹ ಪ್ರತಿಬಂಧಕವಾಗಿರುವುದರಿಂದ ತೃತೀಯಕ್ಷಣದಲ್ಲಿ ಪ್ರಾಮಾಣ್ಯಸಂದೇಹವು ಬರಲು ಸಾಧ್ಯವಿಲ್ಲ. ಆದರೆ, ಹೀಗೆ ಸಂದೇಹ ಬರುವುದು ಸರ್ವಾನುಭವಸಿದ್ಧವಾದುದರಿಂದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಅಂಗೀಕರಿಸಲೇಬೇಕು. ಇದು ಪರತತ್ತ್ವಸಾಧಕವಾದ ಅನುಮಾನಗಳ ಮೂಲಭೂತ ಅಭ್ಯುಪಗಮ. ಇದನ್ನು ಆಧಾರವನ್ನಾಗಿ ಇಟ್ಟುಕೊಂಡು ಮಣಿಗ್ರಂಥದಲ್ಲಿ ಮೂರು ವಿಧದ ಅನುಮಾನಗಳನ್ನು ಮಾಡಲಾಗಿದೆ.

1. ಅನುವ್ಯವಸಾಯದ ತೃತೀಯಕ್ಷಣದಲ್ಲಿ ಪ್ರಾಮಾಣ್ಯದ ಸಂದೇಹವು ಬರುವುದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

2. ಅನುವ್ಯವಸಾಯ ದ್ವಿತೀಯ ಕ್ಷಣದಲ್ಲಿ ಸಂದೇಹಸಾಮಗ್ರೀ ಇರುವುದರಿಂದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯವಲ್ಲ.

3. ಪ್ರಾಮಾಣ್ಯವು ಅನುವ್ಯವಸಾಯಧರ್ಮಿಕವಾದ ಪ್ರಾಮಾಣ್ಯಸಂದೇಹಪ್ರಯುಕ್ತ ಸಂದೇಹವಿಷಯವಲ್ಲವಾದುದರಿಂದ ಅನುವ್ಯವಸಾಯಕ್ಕೆ ಅದು ವಿಷಯವಲ್ಲ.

ಈ ಮೂರರಲ್ಲಿ ಮೊದಲ ಎರಡು ವಿಧದ ಅನುಮಾನಗಳಿಗೆ ಮೂಲಭೂತವಾದ ನಿರ್ಧಾರವೇ ತಪ್ಪು ಎಂದು ಶ್ರೀವ್ಯಾಸರಾಜರು ಹೇಳಿದ್ದಾರೆ. ಸ್ವತಸ್ತ್ವವಾದದಲ್ಲಿ, ಪ್ರಾಮಾಣ್ಯವು ಅನುವ್ಯವಸಾಯ ವೇದ್ಯವಾಗುತ್ತದೆ ಎಂದು ಹೇಳಲಾಗಿದೆ. ಹೊರತು, ಅದು ನಿಯಮೇನ ಅನುವ್ಯವಸಾಯ ವೇದ್ಯ ಎಂಬ ನಿರ್ಬಂಧವನ್ನು ಹೇಳಲಾಗಿಲ್ಲ. ಇದರ ಅಭಿಪ್ರಾಯ–ಸಾಕ್ಷಿಗೆ ಪ್ರಾಮಾಣ್ಯವನ್ನು ಗ್ರಹಿಸುವ ಶಕ್ತಿ ಸಹಜವಾಗಿದೆ. ಆದರೆ, ಪ್ರತಿಬಂಧಕಗಳಿದ್ದಾಗ ಶಕ್ತಿಯಿದ್ದರೂ ಸಾಕ್ಷಿಯಿಂದ ಪ್ರಾಮಾಣ್ಯನಿಶ್ಚಯವಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯ ಸಂದೇಹಕ್ಕೆ ಅವಕಾಶ ಇದ್ದೇ ಇದೆ. ಹೀಗೆ, ಪ್ರಾಮಾಣ್ಯಸಂದೇಹ ಬಂದ ಮಾತ್ರಕ್ಕೆ ಸಾಕ್ಷಿಗೆ ಪ್ರಾಮಾಣ್ಯಗ್ರಹಣಶಕ್ತಿಯೇ ಇಲ್ಲ ಎಂದು ನಿರ್ಧರಿಸಿ ಪ್ರಾಮಾಣ್ಯಸ್ವತಸ್ತ್ವವಾದವನ್ನು ಕೈಬಿಡಬೇಕಾದ ಅಗತ್ಯವೇನಿಲ್ಲ. ಲೋಕದಲ್ಲಿ ಕಾರ್ಯಜನಕವಾದ ಎಲ್ಲಾ ಕಾರಣಗಳಲ್ಲಿ ಇರುವ ಸಹಜ ಸ್ವಭಾವ

ಇದು. ಉದಾಹರಣೆಗೆ–ಬೀಜದಲ್ಲಿ ಅಂಕುರ ಜನನ ಶಕ್ತಿ ಇದೆ. ಆದರೂ ಅದನ್ನು ಬೆಂಕಿಯಲ್ಲಿ ಹುರಿದಾಗ ಅಂಕುರ ಹುಟ್ಟುವುದಿಲ್ಲ.

ಹೀಗೆ ಪ್ರತಿಬಂಧಕವಶಾತ್ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸದ್ದಿದಾಗ ದ್ವಿತೀಯಕ್ಷಣದಲ್ಲಿ ನಿಶ್ಚಯಾಭಾವ ಘಟಿತವಾದ ಸಂದೇಹ ಸಾಮಗ್ರಿಯೂ ಸಂಪನ್ನವಾಗಬಹುದು. ಆದರಿಂದ ತೃತೀಯ ಕ್ಷಣದಲ್ಲಿ ಸಂದೇಹವೂ ಬರಬಹುದು.

ಶ್ರೀವ್ಯಾಸರಾಜರು ನೈಯಾಯಿಕರಿಗೆ ಇನ್ನೊಂದು ಸವಾಲನ್ನು ಹಾಕಿ ಅವರನ್ನು ಬೆರಗು ಗೊಳಿಸಿದ್ದಾರೆ– ಸಾಕ್ಷಿಯಿಂದ ಪ್ರಾಮಾಣ್ಯವು ನಿರ್ಧಾರವಾಗಿದೆ ಎಂದೇ ಇಟ್ಟುಕೊಳ್ಳೋಣ. ಮುಂದೆ ಎಂದೂ ಸಂದೇಹವೇ ಬರಬಾರದೆಂದೇನೂ ಇಲ್ಲ. ಆ ಪ್ರಾಮಾಣ್ಯನಿಶ್ಚಯ ಎಲ್ಲ ಜ್ಞಾನಗಳಂತೆ ಎರಡು ಕ್ಷಣಮಾತ್ರ ಇರುತ್ತದೆ. ಮೂರನೆಯ ಕ್ಷಣದಲ್ಲಿ ನಾಶವಾಗುತ್ತದೆ. ನಾಲ್ಕನೆಯ ಕ್ಷಣದಲ್ಲಿ ಸಂದೇಹ ಬರುವುದಕ್ಕೆ ಯಾವ ತೊಂದರೆಯೂ ಇಲ್ಲ. ಆ ಸಂದೇಹ ಮೂರನೆಯ ಕ್ಷಣದಲ್ಲೇ ಬಂದಿದೆ, ನಾಲ್ಕನೆಯ ಕ್ಷಣದಲ್ಲಿ ಅಲ್ಲ, ಎಂದು ನಿರ್ಧಾರ ಮಾಡುವುದು ಹೇಗೆ? ಕ್ಷಣಗಳು ಅತ್ಯಂತ ಸೂಕ್ಷ್ಮವಾಗಿವೆ. ಅವುಗಳನ್ನು ಸ್ಥೂಲದೃಷ್ಟಿಯಿಂದ ನಿರ್ಧರಿಸಲು ಸಾಧ್ಯವಿಲ್ಲ. ಹೀಗೆ ತೃತೀಯ ಕ್ಷಣದಲ್ಲಿ ಸಂದೇಹ ಬಂದಿದೆ ಎನ್ನುವುದೇ ಅಸಿದ್ಧ.

ಮೂರನೆಯ ಅನುಮಾನ ಸ್ವಲ್ಪ ಸೂಕ್ಷ್ಮವಾದುದು. 'ಜಲಜ್ಞಾನಂ ಪ್ರಮಾಣಂ' ಎಂಬ ಪ್ರಾಮಾಣ್ಯಜ್ಞಾನದಲ್ಲಿ ಸಂದೇಹ ಬಂದರೆ ತತ್ಕಯುಕ್ತವಾಗಿ 'ಜಲಜ್ಞಾನಂ ಪ್ರಮಾಣಂ ನ ವಾ' ಎಂದು ಜಲಜ್ಞಾನದಲ್ಲಿ ಸಂದೇಹ ಬರುತ್ತದೆ. ಒಂದುವೇಳೆ 'ಜಲಜ್ಞಾನಂ ಪ್ರಮಾಣಂ' ಎಂಬ ಜ್ಞಾನವು ಸಾಕ್ಷಿಜ್ಞಾನ (ಅನುವ್ಯವಸಾಯ)ವಾಗಿದ್ದಲ್ಲಿ ಅದು ನಿಯತಪ್ರಮಾಣವಾದುದರಿಂದ ಅದರಲ್ಲಿ ಸಂದೇಹ ಬರಲು ಸಾಧ್ಯವಿಲ್ಲ. ಆದ್ದರಿಂದ ಆ ಜ್ಞಾನವು ಅನುಮಿತಿರೂಪವೇ ಆಗಿರಬೇಕು. ಇದರಿಂದಾಗಿ ಪ್ರಾಮಾಣ್ಯವು ಅನುಮಿತಿ ವೇದ್ಯವೆಂದಾಗುತ್ತದೆ, ಅನುವ್ಯವಸಾಯ ವೇದ್ಯವಲ್ಲ. ಇದು ಈ ಅನುಮಾನದ ಆಂತರ್ಯ. ಆದರೆ ಪ್ರಾಮಾಣ್ಯವು ಅನುವ್ಯವಸಾಯ ಗಮ್ಯವಾದರೂ 'ಜಲಜ್ಞಾನಂ ಪ್ರಮಾಣಂ ಇತಿ ಜ್ಞಾನಂ ಪ್ರಮಾಣಂ ನ ವಾ' ಎಂಬ ಸಂದೇಹ ಮನಸ್ಸಿನಿಂದ ಬರಬಹುದು. ದೋಷಶಂಕಾದಿರೂಪವಾದ ಪ್ರತಿಬಂಧಕಗಳಿದ್ದಾಗ ಪ್ರಾಮಾಣ್ಯವು ಸಾಕ್ಷಿವೇದ್ಯ ವಾಗುವ ಬದಲು ಮನೋವೇದ್ಯವಾಗುತ್ತದೆ. ಆ ಮಾನಸ ಪ್ರಾಮಾಣ್ಯಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹ ಬಂದು ತನ್ನಿಮಿತ್ತವಾಗಿ ಜಲಜ್ಞಾನದಲ್ಲೂ ಪ್ರಾಮಾಣ್ಯಸಂದೇಹವು ಬರಬಹುದು. ಇದನ್ನು ರಾಯರು–'ಸಿದ್ಧಾಂತೇಽಪಿ ಸಂಶಯಾದಿಸ್ಥಲೀಯ–ಪ್ರಾಮಾಣ್ಯಾನುವ್ಯವಸಾಯಸ್ಯ ಪ್ರಮಾತ್ವ–ಅನಿಯಮಾತ್' ಎಂದು ಹೇಳಿದ್ದಾರೆ. ಹೀಗೆ ಈ ಎಲ್ಲಾ ಅನುಮಾನಗಳೂ ಅಪ್ರಯೋಜಕಗಳು.

ಉದಯನಾಚಾರ್ಯರು 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿನಿಂದ ಪ್ರಾಮಾಣ್ಯಕ್ಕೆ ಸಾಕ್ಷಿವೇದ್ಯತ್ವಾಭಾವವನ್ನು ಸಾಧನೆ ಮಾಡಿದ್ದಾರೆ. ನ್ಯಾಯಸುಧಾದಲ್ಲಿ ಇದೇ

ಅನುಮಾನವನ್ನು ಉಲ್ಲೇಖ ಮಾಡಿ 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿನಲ್ಲಿ ಅನಭ್ಯಾಸದಶಾಯಾಂ ಎಂಬ ವಿಶೇಷಣವು ಅಸಿದ್ಧಿವಾರಕವಾದರೂ ವ್ಯಭಿಚಾರ ವಾರಕವಲ್ಲದ ಕಾರಣ ವ್ಯರ್ಥ. ವ್ಯರ್ಥವಿಶೇಷಣಘಟಿತವಾದ ಆ ಹೇತುವಿನಲ್ಲಿ ವ್ಯಾಪ್ತಿ ಇಲ್ಲ, ವ್ಯಾಪ್ಯತ್ವಾಸಿದ್ಧಿ ಎಂದು ದೋಷವನ್ನು ಹೇಳಲಾಗಿದೆ. ಆದರೆ, ಇಲ್ಲಿ ಈ ವಿಶೇಷಣಕೊಟ್ಟರೂ ಅಸಿದ್ಧಿಯನ್ನು ಹೇಳಿ ಅದು ಭಾಗಾಸಿದ್ಧಿಯಾದುದರಿಂದ ದೋಷವಲ್ಲ ಎಂದು ಆ ಅನುಮಾನವನ್ನು ಮೊದಲು ಸಮರ್ಥನೆ ಮಾಡಿ ಆಮೇಲೆ ನಿರಾಕರಿಸಲಾಗಿದೆ.

ಹೀಗೆ ಈ ಯಾವ ಅನುಮಾನಗಳಿಂದಲೂ ಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಸಾಧನೆ ಮಾಡಲು ಆಗುವುದಿಲ್ಲ.

**॥ ಪ್ರಕರಣ – 9 ॥**

# ಪ್ರಕರಣ-10

## ಉತ್ಪತ್ತೌ ಸ್ವತಸ್ತ್ವೇ ಚಿರಂತನಾನುಮಾನಭಂಗಃ

**ननु कथमेतत्? अनित्यप्रमा, ज्ञानहेत्वतिरिक्तहेतुजन्या, कार्यत्वे सति तद्विशेषत्वात् । अप्रमावत्। अन्यथा अप्रमापि प्रमा स्यात् । यदि दोषप्रतिबन्धान्न प्रमा तर्हि ज्ञानमपि सा न स्यात् इत्यनुकूलतर्कसनाथानुमानविरोधात्। स्वतस्त्वे च मानाभावात्;**

ಪ್ರಾಮಾಣ್ಯವು ಉತ್ಪತ್ತೌ ಸ್ವತಃ ಎಂದು ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಲಾಗಿದೆ. ಆದರೆ, ಅದು ಹೇಗೆ ಸಾಧ್ಯ? ಅನುಮಾನಕ್ಕೆ ವಿರುದ್ಧವಾಗಿದೆ. ಹೇಗೆಂದರೆ, ಅನಿತ್ಯಜ್ಞಾನ ಎರಡು ವಿಧವಾಗಿದೆ– ಭ್ರಮೆ, ಪ್ರಮೆ ಎಂದು. ಇವು ಜ್ಞಾನದ ಎರಡು ವೈವಿಧ್ಯಗಳು. ದೋಷವಿದ್ದಾಗ ಜ್ಞಾನವು ಭ್ರಮೆಯಾಗುವಂತೆ ಅದು ಪ್ರಮಾ ಆಗಲೂ ಒಂದು ಕಾರಣವಿಶೇಷವಿರಬೇಕು. ಕಾರಣ ವಿಶೇಷವಿಲ್ಲದೆ, ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ಅದರಿಂದಲೇ ಪ್ರಮಾ ಹುಟ್ಟುವುದಾದಲ್ಲಿ ಭ್ರಮೆಯೂ ಪ್ರಮಾ ಆಗಬೇಕಾದೀತು. ಅದೂ ಪ್ರಮಾದಂತೆ ಜ್ಞಾನಸಾಮಗ್ರೀ ಜನ್ಯವಾಗಿದೆ. ಆದರೂ ಪ್ರಮಾಕ್ಕೆ ಪ್ರತಿಬಂಧಕವಾದ ದೋಷವಿರುವುದರಿಂದ ಭ್ರಮೆಯು ಪ್ರಮಾ ಆಗುವುದಿಲ್ಲ ಎಂದು ಹೇಳಿದರೆ ಭ್ರಮೆಯು ಜ್ಞಾನವೂ ಆಗಬಾರದು. ಏಕೆಂದರೆ, ಪ್ರಮಾಕ್ಕೆ ಪ್ರತ್ಯೇಕವಾದ ವಿಶೇಷಸಾಮಗ್ರಿಯು ಇಲ್ಲದಿರುವುದರಿಂದ ಅದಕ್ಕೆ ದೋಷವು ಪ್ರತಿಬಂಧಕ ವಾಗುವುದಾದಲ್ಲಿ ಅದು ಜ್ಞಾನಸಾಮಗ್ರೀಮಾತ್ರಕ್ಕೆ ಪ್ರತಿಬಂಧಕವಾಗಬೇಕು. ಆಗ ಅದರಿಂದ ಹುಟ್ಟಿದ ಭ್ರಮೆಯು ಜ್ಞಾನವಾಗುವುದು ಹೇಗೆ? ಅಲ್ಲದೆ, ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವಕ್ಕೆ ಪ್ರಮಾಣವೂ ಇಲ್ಲ. ಹೀಗಾಗಿ, ಜ್ಞಾನಜನಕ ಸಾಮಗ್ರಿಯೇ ಪ್ರಮಾಜನಕ ಎನ್ನುವುದೂ ಸರಿಯಲ್ಲ. ಆದ್ದರಿಂದ ಅನುಮಾನದ ಭಾವಾರ್ಥ ಹೀಗಾಗುತ್ತದೆ. ಪ್ರಮಾತ್ಮಕ ಜ್ಞಾನವು ಜ್ಞಾನದ ಒಂದು ವಿಶೇಷ ವಿಭಾಗವಾದುದರಿಂದ ಜ್ಞಾನಸಾಮಾನ್ಯಕ್ಕೆ ಯಾವುದು ಸಾಮಗ್ರಿಯೋ ತದ್ಭಿನ್ನವಾದ ಕಾರಣವಿಶೇಷ ದಿಂದ ಅದು ಹುಟ್ಟುತ್ತದೆ. ಅಪ್ರಮಾದಂತೆ. ಅಪ್ರಮಾ ದೋಷಜನ್ಯವಾದಂತೆ ಪ್ರಮಾ ಗುಣಜನ್ಯ ಎಂದು, ಅನುಮಾನದ ಅಭಿಪ್ರಾಯ.

## ನ್ಯಾಯದೀಪ

**ಏತದಿತಿ ॥ ಉತ್ಪತ್ತೌ ಪ್ರಾಮಾಣ್ಯಂ ಸ್ವತ ಏವ, ಇತ್ಯೇತದಿತ್ಯರ್ಥಃ । ಕುತಃ? ಇತ್ಯತಃ ಕುಸುಮಾಂಜಲ್ಯುಕ್ತೇನ, ತತ್ರ ನಿರ್ಣಯಟೀಕಾದ್ಯಾಶಂಕಿತೇನ**

**ಅನುಮಾನೇನ ವಿರೋಧಂ, ಮಾನಾಭಾವಂ ಚ ಹೇತುದ್ವಯಮಾಹ–ಅನಿತ್ಯ ಪ್ರಮೇತಿ ॥ ಪ್ರಮೇತ್ಯೇವ ಉದಯನೋಕ್ತಾವಪಿ ಈಶ್ವರಜ್ಞಾನಾಂಶೇ ಬಾಧವಾರಣಾಯ ತದಭಿಪ್ರೇತಂ, ಸ್ವಯಮುಕ್ತಮ್–ಅನಿತ್ಯೇತಿ ॥ ಅತ ಏವ 'ಅನಿತ್ಯಪ್ರಮಾತ್ವಂ ಕಾರ್ಯತಾವಚ್ಛೇದಕಮ್' ಇತಿ ರುಚಿದತ್ತೋಕ್ತಿಃ ।**

ಮೂಲದಲ್ಲಿ 'ಕುತ ಏತತ್' ಎಂಬಲ್ಲಿ 'ಏತತ್'ಎಂದರೆ ಪ್ರಾಮಾಣ್ಯವು ಉತ್ಪತ್ತೌ ಸ್ವತಃ ಎನ್ನುವುದು (ಏಕೆ?) ಎಂದರ್ಥ.

ಉದಯನಾಚಾರ್ಯರು ಕುಸುಮಾಂಜಲಿ ಗ್ರಂಥದಲ್ಲಿ (ಪು.78) ಹೇಳಿರುವ, ಪರತಸ್ತ್ವ ಸಾಧಕವಾದ ಅನುಮಾನವನ್ನು ಟೀಕಾಚಾರ್ಯರು ತತ್ತ್ವನಿರ್ಣಯಟೀಕಾ ಮತ್ತು ನ್ಯಾಯಸುಧಾ ದಲ್ಲಿ ಅನುವಾದ ಮಾಡಿದ್ದಾರೆ. ಅದರ ವಿರೋಧ ಇದೆ, ಮತ್ತು ಸ್ವತಸ್ತ್ವಸಾಧಕಪ್ರಮಾಣವೂ ಇಲ್ಲ, ಆದ್ದರಿಂದ ಪ್ರಾಮಾಣ್ಯಕ್ಕೆ ಉತ್ಪತ್ತೌ ಸ್ವತಸ್ತ್ವ ಇಲ್ಲ, ಎಂದು ಎರಡು ಕಾರಣಗಳನ್ನು ಮೂಲದಲ್ಲಿ ಆಶಂಕೆ ಮಾಡಲಾಗಿದೆ.

ಅನುಮಾನದಲ್ಲಿ 'ಪ್ರಮಾ' ಎಂದಿಷ್ಟೇ ಪಕ್ಷ ಮಾಡಿದರೆ ಈಶಪ್ರಮಾವೂ ಪಕ್ಷದಲ್ಲಿ ಸೇರುವುದರಿಂದ ಅದರಲ್ಲಿ ಬಾಧ ಬರುತ್ತದೆ. ಆದಕ್ಕಾಗಿ 'ಅನಿತ್ಯ–ಪ್ರಮಾ' ಎಂದು ಪಕ್ಷನಿರ್ದೇಶ ಮಾಡಲಾಗಿದೆ. ಉದಯನಾಚಾರ್ಯರು 'ಪ್ರಮಾ'ಎಂದಿಷ್ಟೇ ಪಕ್ಷ ನಿರ್ದೇಶ ಮಾಡಿದ್ದರೂ ಅವರಿಗೂ ಅನಿತ್ಯಪ್ರಮಾವೇ ಪಕ್ಷತ್ವೇನ ಸಮ್ಮತವಾಗಿದೆ. ರುಚಿದತ್ತಮಿಶ್ರರೂ ಮಣಿವ್ಯಾಖ್ಯಾನದಲ್ಲಿ 'ಅನಿತ್ಯ ಪ್ರಮಾತ್ವಂ ಕಾರ್ಯತಾವಚ್ಛೇದಕಮ್' (ಪು.308) ಎಂದೇ ಹೇಳಿದ್ದಾರೆ.

## ನ್ಯಾಯದೀಪ

**ಹೇತ್ವಧೀನತ್ವೇ, ಜ್ಞಾನಹೇತ್ವಧೀನತ್ವೇ ಚ ಸಾಧ್ಯೇ ಸಿದ್ಧಸಾಧನಮ್ । ಅತಃ ಜ್ಞಾನ ಹೇತ್ವತಿರಿಕ್ತಹೇತುಜನ್ಯೇತಿ ॥ ತದ್ವಿಶೇಷತ್ವಾತ್ ॥ ಜ್ಞಾನವಿಶೇಷತ್ವಾದಿತ್ಯರ್ಥಃ । ಈಶ್ವರಜ್ಞಾನೇ ವ್ಯಭಿಚಾರ–ನಿರಾಸಾಯ ಕಾರ್ಯತ್ವೇ ಸತೀತಿ । ಜ್ಞಾನೇ ತದ್ದೋಷ ನಿರಾಸಾಯ ವಿಶೇಷ್ಯಮ್ । ಏತೇನ, ಮಣೌ ಜನ್ಯತ್ವಾದಿತಿ ಹೇತ್ವನುವಾದಃ ಅನುಚಿತಃ ಇತಿ ಸೂಚಿತಮ್ ।**

'ಹೇತ್ವಧೀನತ್ವ' ಅಥವಾ 'ಜ್ಞಾನಹೇತ್ವಧೀನತ್ವ'ವನ್ನು ಸಾಧ್ಯ ಮಾಡಿದರೆ ಸಿದ್ಧಸಾಧನತಾ ದೋಷ. ಇವೆರಡನ್ನೂ ಪ್ರಮಾದಲ್ಲಿ ಸ್ವತಸ್ತ್ವವಾದಿಗಳು ಒಪ್ಪಿದ್ದಾರೆ. ಅದಕ್ಕಾಗಿ, 'ಜ್ಞಾನ ಹೇತ್ವತಿರಿಕ್ತ' ಎಂಬ ವಿಶೇಷಣವನ್ನು ಹೇತುವಿಗೆ ಸೇರಿಸಲಾಗಿದೆ.

ಹೇತುವಿನಲ್ಲೂ ಕಾರ್ಯತ್ವಾಂಶವನ್ನು ಬಿಟ್ಟರೆ ಈಶಜ್ಞಾನದಲ್ಲಿ ವ್ಯಭಿಚಾರ. ಅದರಲ್ಲೂ

ಜ್ಞಾನವಿಶೇಷತ್ವ ಇದೆ. ಕಾರ್ಯತ್ವಾತ್ ಎಂದಿಷ್ಟೇ ಹೇಳಿದರೆ, ಜ್ಞಾನದಲ್ಲಿ ವ್ಯಭಿಚಾರ. ಅದಕ್ಕಾಗಿ, ತದ್ವಿಶೇಷತ್ವಾತ್, ಎಂದು ಸೇರಿಸಲಾಗಿದೆ. ಮಣಿಯಲ್ಲಿ (ಪು.309) ತದ್ವಿಶೇಷತ್ವಾತ್ ಎಂಬ ಅಂಶವನ್ನು ಬಿಟ್ಟು 'ಜನ್ಯಜ್ಞಾನತ್ವಾತ್' ಎಂದಿಷ್ಟೇ ಹೇತುವನ್ನಾಗಿ ಮಾಡಲಾಗಿದೆ. ಜ್ಞಾನದಲ್ಲಿ ವ್ಯಭಿಚಾರವಿರುವುದರಿಂದ ಅದು ಸರಿಯಲ್ಲ.

## ನ್ಯಾಯದೀಪ

**ಕುಸುಮಾಂಜಲೌ ಮಣೌ ಚ ಉಕ್ತಾನುಕೂಲತರ್ಕಮಾಹ-ಅನ್ಯಥೇತಿ ॥ ಪ್ರಮಾತ್ವಸ್ಯ ಜ್ಞಾನಸಾಮಗ್ರೀಮಾತ್ರಪ್ರಯೋಜ್ಯತ್ವೇ ಅಪ್ರಮಾಯಾಮಪಿ ಪ್ರಮಾತ್ವಂ ಸ್ಯಾತ್ । ತತ್ರಾಪಿ ಜ್ಞಾನಸಾಮಾನ್ಯಹೇತೋಃ ಸತ್ವಾತ್ ಇತಿ ಭಾವಃ ।**

**ಜ್ಞಾನಮಪೀತಿ ॥ ಜ್ಞಾನತ್ವ-ಪ್ರಮಾತ್ವಯೋಃ ಏಕಸಾಮಗ್ರೀಪ್ರಯೋಜ್ಯತ್ವಾತ್ ಏಕಾಂಶೇ ಪ್ರತಿಬಂಧೇ ಅಪರಾಂಶೇಽಪಿ ತಥಾತ್ವಾತ್ ಇತಿ ಭಾವಃ । ಮಾನಾಭಾವಾಚ್ಚ ಇತಿ 'ಚ' ಅನ್ವಯಃ ।**

ಈ ಅನುಮಾನಕ್ಕೆ ಕುಸುಮಾಂಜಲಿಯಲ್ಲಿ (ಪು.78) ಮತ್ತು ಮಣಿಗ್ರಂಥದಲ್ಲಿ (ಪು.306) ಹೇಳಿರುವ ಅನುಕೂಲತರ್ಕವನ್ನು ಇಲ್ಲಿ ಹೇಳಿದ್ದಾರೆ.

ಮೂಲದಲ್ಲಿ ಅಪ್ರಮಾವೂ ಪ್ರಮಾ ಆದೀತು, ಎಂದು ಆಪಾದಿಸಲಾಗಿದೆ. ಅದಕ್ಕೆ ಕಾರಣ, ಸ್ವತಸ್ತ್ವಪಕ್ಷದಲ್ಲಿ ಜ್ಞಾನದಲ್ಲಿ ಪ್ರಮಾತ್ವ ಬರಲು ವಿಶೇಷ ಸಾಮಗ್ರೀಗಳು ಬೇಕಾಗಿಲ್ಲ. ಜ್ಞಾನಸಾಮಾನ್ಯಸಾಮಗ್ರಿಯೇ ಪ್ರಮಾತ್ವಪ್ರಯೋಜಕ. ಅಪ್ರಮಾವೂ ಜ್ಞಾನಸಾಮಾನ್ಯ ಪ್ರಯೋಜಕ ಸಾಮಗ್ರೀಜನ್ಯವಾಗಿದೆ. ಆದ್ದರಿಂದ ಅದೂ ಪ್ರಮಾ ಆಗಲಿ, ಎಂದು ಅಭಿಪ್ರಾಯ.

ಅಪ್ರಮಾದಲ್ಲಿ ಪ್ರಮಾತ್ವ ಬರುವುದಿಲ್ಲವಾದರೆ ಜ್ಞಾನತ್ವವೂ ಬರಬಾರದು, ಎಂದು ಆಕ್ಷೇಪಿಸಲಾಗಿದೆ. ಅದಕ್ಕೆ ಕಾರಣ-ಜ್ಞಾನತ್ವಕ್ಕೂ ಪ್ರಮಾತ್ವಕ್ಕೂ ಪ್ರಯೋಜಕವಾದ ಸಾಮಗ್ರೀ ಒಂದೇ. ಅಪ್ರಮಾದಲ್ಲಿ ಪ್ರತಿಬಂಧಕನಿಮಿತ್ತದಿಂದ ಪ್ರಮಾತ್ವವು ಬರುವುದಿಲ್ಲವಾದರೆ ಅದು ಜ್ಞಾನತ್ವಾಂಶದಲ್ಲೂ ಪ್ರತಿಬಂಧಕವಾಗುವುದರಿಂದ ಅಪ್ರಮಾ ಜ್ಞಾನವೂ ಆಗಿರಬಾರದು, ಎಂದು.

ಮೂಲದಲ್ಲಿ 'ಸ್ವತಸ್ತ್ವೇ ಚ' ಎಂಬಲ್ಲಿರುವ ಚಶಬ್ದವನ್ನು ಮಾನಾಭಾವಾತ್ ಎಂಬ ಶಬ್ದದೊಂದಿಗೆ ಸೇರಿಸಬೇಕು. 'ಮಾನಾ ಭಾವಾಚ್ಚ' ಎಂದಾಗುತ್ತದೆ.[1]

---

1. **ಯದಿ ಚ ತಾವನ್ಮಾತ್ರಾಧೀನಾ ಭವೇತ್, ಅಪ್ರಮಾಪಿ ಪ್ರಮೈವ ಭವೇತ್ । ಅಸ್ತಿ ಹಿ ತತ್ರ ಜ್ಞಾನ ಹೇತುಃ । ಅನ್ಯಥಾ ಜ್ಞಾನಮಪಿ ಸಾ ನ ಸ್ಯಾತ್ । (ಕುಸುಮಾಂಜಲಿ-ಪು.74)**
**ಉತ್ಪದ್ಯತೇ ಪ್ರಾಮಾಣ್ಯಂ ಪರತಃ, ನತು ಸ್ವತೋ ಜ್ಞಾನಸಾಮಗ್ರೀಮಾತ್ರಾತ್ । ತಜ್ಜನ್ಯತ್ವೇ ಅಪ್ರಮಾಪಿ ಪ್ರಮಾ ಸ್ಯಾತ್ । ಅನ್ಯಥಾ ಜ್ಞಾನಮಪಿ ಸಾ ನ ಸ್ಯಾತ್ । (ಮಣಿ.ಪು.306)**

## ಕುಸುಮಾಂಜಲ್ಯುಕ್ತ–ಪರತಸ್ತ್ವಾನುಮಾನ ನಿರಾಸ

**इति चेन्न । प्रमाया ज्ञानत्वेन तद्धेतोर्ज्ञानहेतुतया तदतिरिक्त-जन्यत्वसाधने बाधात् । विरोधाच्च ।**

ಪ್ರಮಾ ಜ್ಞಾನಹೇತ್ವತಿರಿಕ್ತಹೇತುಜನ್ಯ, ಎಂದು ಸಾಧನೆ ಮಾಡಿದರೆ ಬಾಧದೋಷ. ಏಕೆಂದರೆ, ಪ್ರಮಾವೂ ಒಂದು ಜ್ಞಾನ. ಅದಕ್ಕೆ ಕಾರಣವಾದುದು ಜ್ಞಾನ–ಹೇತುವಾಗಿರಲೇಬೇಕು. ಜ್ಞಾನಹೇತ್ವತಿರಿಕ್ತವಾಗುವುದು ಹೇಗೆ? ಏವಂಚ ಜ್ಞಾನಹೇತ್ವತಿರಿಕ್ತಜನ್ಯತ್ವವು ಪ್ರಮಾದಲ್ಲಿ ಇಲ್ಲ. (ಜ್ಞಾನಹೇತು ಜನ್ಯತ್ವವೇ ಇದೆ.) ಆದ್ದರಿಂದ ಬಾಧ.

ಹೀಗೆ ಸಾಧನೆ ಮಾಡುವುದು ವ್ಯಾಹತವೂ ಆಗುತ್ತದೆ–ಪ್ರಮಾವು 'ಹೇತು ಜನ್ಯ' ಎಂಬ ಅಂಶದಿಂದ ಆ ಹೇತುವು ಜ್ಞಾನಹೇತು, ಎಂದು ಸಿದ್ಧವಾಗುತ್ತದೆ. ಆದಕ್ಕೆ ವಿರುದ್ಧವಾಗಿ ಆ ಹೇತುವಿಗೆ 'ಜ್ಞಾನ ಹೇತ್ವತಿರಿಕ್ತ' ಎಂಬ ವಿಶೇಷಣವಿದೆ. ಇದು 'ಮಾತಾ ವಂಧ್ಯಾ' ಎಂದಂತೆ ವ್ಯಾಹತ.

## ನ್ಯಾಯದೀಪ

**ವ್ಯಾಘಾತಂ ಚಾಹ–ವಿರೋಧಾಚ್ಚೇತಿ ॥ ಜ್ಞಾನಾಜನಕ–ಜನ್ಯತ್ವಾರ್ಥತ್ವೇಽಪಿ ಉಕ್ತದೋಷಾವೇವ ಇತಿ ಭಾವಃ ।**

ಅನುಮಾನಕ್ಕೆ ಬಾಧದೋಷ ಮಾತ್ರವಲ್ಲದೆ ವ್ಯಾಘಾತದೋಷವೂ ಇದೆ, ಎಂದು 'ವಿರೋಧಾಚ್ಚ' ಎಂಬ ಪದದಿಂದ ಹೇಳಲಾಗಿದೆ.

ಈ ಹೇತುವಿಗೆ ಜ್ಞಾನ–ಅಜನಕ–ಜನ್ಯ ಎಂಬ ಅರ್ಥವನ್ನು ಹೇಳಿದರೂ ವ್ಯಾಘಾತದೋಷ ಮತ್ತು ಬಾಧದೋಷಗಳಿವೆ.

## ಮಣ್ಯುಕ್ತ ಅನುಮಾನ ವಿಮರ್ಶೆ

## ನ್ಯಾಯದೀಪದಲ್ಲಿ ಅವತಾರಿಕೆ

**ಮಣಿಕೃತಾ ಉತ್ಪ್ರೇಕ್ಷ್ಯ ದೂಷಿತಾನಪಿ ಪಕ್ಷಾನ್ ಶಿಷ್ಯಾಣಾಂ ಸುಬೋಧಾಯ ಅನೂದ್ಯ ನಿರಾಕರೋತಿ–ನಾಪೀತಿ ॥**

ಪರತಸ್ತ್ವವಾದಿಗಳು ಹೇಳಿರದ, ಮಣಿಕಾರ ತಾನೇ ಉತ್ಪ್ರೇಕ್ಷೆ ಮಾಡಿ ನಿರಾಕರಿಸಿರುವ ಪರತಸ್ತ್ವಸಾಧಕವಾದ ಅನುಮಾನಗಳನ್ನು (ಉತ್ತರತ್ರ ಪರತಸ್ತ್ವದ ಪೂರ್ವಪಕ್ಷಗ್ರಂಥ ಪುಟ.309) ಮೂಲದಲ್ಲಿ ನಿರಾಕರಿಸಲಾಗಿದೆ.

**नापि ज्ञानत्वप्रयोजकहेत्वतिरिक्तहेतुजन्येति साध्यम् । प्रत्यक्षत्वादिप्रयोजकानामिन्द्रियादीनां चाक्षुषत्वादिप्रयोजकानां चक्षुरादीनां च ज्ञानत्वप्रयोकातिरिक्तत्वेन यथायथं तैः सिद्धसाधनात् ।**

ಜ್ಞಾನಸಾಮಾನ್ಯಕ್ಕೆ ಪ್ರಯೋಜಕವಾದ ಕಾರಣ ಯಾವುದಿದೆಯೋ ತದ್ಭಿನ್ನವಾದ ಕಾರಣದಿಂದ ಪ್ರಮಾವು ಜನ್ಯವಾಗಿದೆ. ಆ ಭಿನ್ನವಾದ ಕಾರಣ ಗುಣ. ಆದರಿಂದ ಪ್ರಮಾ ಹುಟ್ಟಿದೆ, ಎಂದು ಭಾವ. ಹೀಗೆ, ಸಾಧನೆ ಮಾಡಿದರೂ ಸಿದ್ಧಸಾಧನತಾ ದೋಷವಿದೆ. ಪ್ರತ್ಯಕ್ಷಕ್ಕೆ ಪ್ರಯೋಜಕವಾದುದು ಇಂದ್ರಿಯ, ಅದರ ಸನ್ನಿಕರ್ಷ. ಅದು ಜ್ಞಾನಸಾಮಾನ್ಯಕ್ಕೆ ಕಾರಣವಲ್ಲ. ಅದರಂತೆ, ಚಾಕ್ಷುಷಜ್ಞಾನಕ್ಕೆ ಕಾರಣವಾದುದು ಚಕ್ಷುರಿಂದ್ರಿಯ. ರಾಸನಜ್ಞಾನಕ್ಕೆ ಕಾರಣ ರಸನೇಂದ್ರಿಯ. ಅವುಗಳೂ ಜ್ಞಾನಸಾಮಾನ್ಯಕ್ಕೆ ಕಾರಣಗಳಲ್ಲ, ಅವುಗಳಿಂದಲೂ ಪ್ರಮಾವು ಹುಟ್ಟುತ್ತದೆ, ಎಂದು ಸ್ವತಸ್ತ್ವವಾದಿಗಳು ಒಪ್ಪಿದ್ದಾರೆ. ಆದ್ದರಿಂದ ಸಿದ್ಧಸಾಧನತಾದೋಷ.

## ನ್ಯಾಯದೀಪ

**ನಾಪೀತಿ ॥ ಪ್ರತ್ಯಕ್ಷತ್ವಾದಿ, ಇತಿ ಆದಿಪದೇನ ಅನುಮಿತಿತ್ವ–ಉಪಮಿತಿತ್ವ–ಶಾಬ್ದತ್ವಾದೀನಾಂ, ತಥಾ 'ಚಾಕ್ಷುಷತ್ವಾದಿ' ಇತ್ಯತ್ರ ರಾಸನತ್ವಾದೀನಾಂ, ದ್ವಿತೀಯ ಚತುರ್ಥ–ಆದಿಪದಾಭ್ಯಾಂ ಚ ಪರಾಮರ್ಶ–ಉಪಮಾನ–ಶಬ್ದಜ್ಞಾನಾನಾಂ ರಸನಾದೀನಾಂ ಚ ಗ್ರಹಃ ।**

**ಸಿದ್ಧಸಾಧನಾದಿತ್ಯುಪಲಕ್ಷಣಮ್ । ಜ್ಞಾನತ್ವಸ್ಯ ಈಶ್ವರಜ್ಞಾನವೃತ್ತಿತ್ವೇನ ಕಾರಣಾಪ್ರಯೋಜ್ಯತಯಾ ತತ್–ಪ್ರಯೋಜಕಸಾಮಗ್ರೀ–ಅಪ್ರಸಿದ್ಧ್ಯಾ ಸಾಧ್ಯಾಪ್ರಸಿದ್ಧಿರಿತ್ಯಪಿ ಬೋಧ್ಯಮ್ ॥**

ಮೂಲದಲ್ಲಿ 'ಪ್ರತ್ಯಕ್ಷತ್ವಾದಿಪ್ರಯೋಜಕ ಇಂದ್ರಿಯಾದೀನಾಂ' ಎಂದಿದೆ. ಇಲ್ಲಿ ಮೊದಲ ಆದಿಪದದಿಂದ ಇತರ ಅನುಭವಗಳಲ್ಲಿರುವ ಅನುಮಿತಿತ್ವ–ಉಪಮಿತಿತ್ವ–ಶಾಬ್ದತ್ವ ಧರ್ಮಗಳನ್ನು ತೆಗೆದುಕೊಳ್ಳಬೇಕು. ಇಂದ್ರಿಯಾದಿ ಎಂಬ ಆದಿಪದದಿಂದ ಅನುಮಿತ್ಯಾದಿಗಳಿಗೆ ಕರಣಗಳಾದ ಪರಾಮರ್ಶ–ಉಪಮಾನ ಶಬ್ದಜ್ಞಾನಗಳನ್ನು ತೆಗೆದುಕೊಳ್ಳಬೇಕು.

ಅದರಂತೆ 'ಚಾಕ್ಷುಷತ್ವಾದಿಪ್ರಯೋಜಕಾನಾಂ ಚಕ್ಷುರಾದೀನಾಂ' ಎಂಬಲ್ಲಿ ಮೊದಲ ಆದಿಪದದಿಂದ ರಾಸನತ್ವ–ಶ್ರಾವಣತ್ವಾದಿಧರ್ಮಗಳನ್ನು ಎರಡನೆಯ ಆದಿಪದದಿಂದ ರಸನೇಂದ್ರಿಯ–ಶ್ರೋತ್ರೇಂದ್ರಿಯಾದಿಗಳನ್ನೂ ತೆಗೆದುಕೊಳ್ಳಬೇಕು.

ಮೂಲದಲ್ಲಿ ಹೇಳಿದ ಸಿದ್ಧಸಾಧನತಾದೋಷ ಉಪಲಕ್ಷಣ. ಸಾಧ್ಯಾಪ್ರಸಿದ್ಧಿ ದೋಷವೂ ಇದೆ.

ಜ್ಞಾನತ್ವಪ್ರಯೋಜಕ ಸಾಮಗ್ರೀ ಅಪ್ರಸಿದ್ಧ. ಜ್ಞಾನತ್ವವು ಈಶಜ್ಞಾನದಲ್ಲಿ ಇದೆ. ಅದು ನಿತ್ಯವಾದ ಕಾರಣ ಜ್ಞಾನತ್ವಸಾಮಾನ್ಯಕ್ಕೆ ಪ್ರಯೋಜಕವಾದ ಸಾಮಗ್ರೀ ಇಲ್ಲವೇ ಇಲ್ಲ. ಇಲ್ಲಿ ಜ್ಞಾನತ್ವ ಪ್ರಯೋಜಕ ಸಾಮಗ್ರೀ ಎಂದರೆ,ಅದು ಜ್ಞಾನವಾಗಿರಲು ಪ್ರಯೋಜಕವಾದ ಸಾಮಗ್ರೀ ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಜ್ಞಾನತ್ವ ಪ್ರಯೋಜಕ ಸಾಮಗ್ರೀತ್ಯಸ್ಯ ಜ್ಞಾನತ್ವಾಶ್ರಯಜನಕ ಸಾಮಗ್ರೀ, ಇತ್ಯರ್ಥಃ ವಿವಕ್ಷಿತಃ, ತೇನ ನೇಂದ್ರಿಯಾದಿಭಿಃ ಸಿದ್ಧಸಾಧನಮ್ । ತೇಷಾಮಪಿ ತದಾಶ್ರಯಜನಕ ಸಾಮಗ್ರೀತ್ವೇನ ತದನ್ಯತ್ವಾಭಾವಾತ್ ಇತ್ಯತ ಆಹ– ನಾಪಿ ಜ್ಞಾನಸಾಮಾನ್ಯೇತಿ ॥**

ಸಾಧ್ಯವನ್ನು ಪರಿಷ್ಕಾರ ಮಾಡಿ ಸಿದ್ಧಸಾಧನತಾದೋಷವನ್ನು ಪರಿಹಾರ ಮಾಡಬಹುದು. ಜ್ಞಾನತ್ವಪ್ರಯೋಜಕ ಸಾಮಗ್ರೀ ಎಂದರೆ ಜ್ಞಾನತ್ವಾಶ್ರಯವಾದ ಜ್ಞಾನಕ್ಕೆ ಕಾರಣವಾದ ಸಾಮಗ್ರೀ ಎಂದರ್ಥ. ಹೀಗೆ ಪರಿಷ್ಕಾರ ಮಾಡಿದಾಗ ಇಂದ್ರಿಯಾದಿಗಳನ್ನಾಗಲೀ ಚಕ್ಷುರಾದಿಗಳನ್ನಾಗಲೀ ಪರಿಗಣಿಸಿ ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ. ಏಕೆಂದರೆ, ಅವುಗಳೂ ಕೂಡ ಜ್ಞಾನತ್ವಾಶ್ರಯ ವಾದ ಪ್ರತ್ಯಕ್ಷ ಮತ್ತು ಚಾಕ್ಷುಷಪ್ರತ್ಯಕ್ಷಕ್ಕೆ ಪ್ರಯೋಜಕವಾಗಿವೆ. ಆದ್ದರಿಂದ ಜ್ಞಾನತ್ವಾಶ್ರಯ ಪ್ರಯೋಜಕ ಸಾಮಗ್ರೀ ಭಿನ್ನವಾಗಿಲ್ಲ. ಹೀಗೆ ಸಿದ್ಧಸಾಧನತಾದೋಷವನ್ನು ಪರಿಹಾರ ಮಾಡಿದರೂ ಮತ್ತೆ ಅದೇ ದೋಷವನ್ನು 'ನಾಪಿ' ಎಂಬ ಮೂಲದಲ್ಲಿ ಹೇಳಲಾಗಿದೆ.

**नापि ज्ञानसामान्यसामग्र्यतिरिक्तसामग्रीजन्येति साध्यम् । सामग्री-शब्देन कृत्स्नकारणचक्रविवक्षायां सामग्रीभेदे कार्यभेदनियमेन प्रमाया ज्ञानभिन्नत्वापत्तेः । कतिपयकारणचक्रविवक्षायां चोक्तरीत्या इन्द्रियादिभिः सिद्धसाधनात् ॥**

ಜ್ಞಾನಸಾಮಾನ್ಯಸಾಮಗ್ರೀ ಯಾವುದಿದೆಯೋ ಆತ್ಮಮನಃ ಸಂಯೋಗಾದಿಗಳು, ಅವಿಲ್ಲದೆ ಯಾವ ಜ್ಞಾನಗಳೂ ಹುಟ್ಟುವುದಿಲ್ಲ, ಅಂತಹ ಸಾಮಗ್ರಿಗಿಂತ ಭಿನ್ನವಾದ ಸಾಮಗ್ರಿಯಿಂದ ಜ್ಞಾನವಿಶೇಷವಾದ ಪ್ರಮಾ ಹುಟ್ಟುತ್ತದೆ, ಹೀಗೆ ಸಾಧ್ಯವನ್ನು ಪರಿಷ್ಕಾರ ಮಾಡಿದಾಗ ಸಿದ್ಧಸಾಧನತಾದೋಷವಿಲ್ಲ.

ಇದೂ ಯುಕ್ತವಲ್ಲ, ಇಲ್ಲಿ ಸಾಮಗ್ರೀಪದಕ್ಕೆ ಅರ್ಥವೇನು? ಅದಕ್ಕೆ ಎರಡು ಅರ್ಥಗಳನ್ನು ಮಾಡಬಹುದು.

1. ಜ್ಞಾನಕ್ಕೆ ಬೇಕಾದ ಸಕಲಕಾರಣ ಸಮುದಾಯ.

2. ಜ್ಞಾನಕ್ಕೆ ಬೇಕಾಗಿರುವ ಕೆಲವು ಕಾರಣಗಳು, ಎಂದು.

ಮೊದಲನೆಯ ಅರ್ಥವನ್ನು ತೆಗೆದುಕೊಂಡರೆ, ಜ್ಞಾನಕ್ಕೆ ಎಷ್ಟೆಷ್ಟು ಕಾರಣಗಳಿವೆಯೋ ಅವುಗಳ ಸಮುದಾಯಕ್ಕಿಂತ ಭಿನ್ನವಾದ ಸಾಮಗ್ರಿಯಿಂದ ಪ್ರಮಾ ಜನ್ಯವಾಗಿದೆ, ಎಂದರ್ಥ. ಆಗ ಜ್ಞಾನಸಾಮಗ್ರೀ ಬೇರೆ, ಪ್ರಮಾ ಸಾಮಗ್ರೀ ಬೇರೆ ಎಂದಂತಾಗುತ್ತದೆ. ಸಾಮಗ್ರೀ ಬೇರೆಯಾದಲ್ಲಿ ಕಾರ್ಯವೂ ಭಿನ್ನವಾಗಿರಬೇಕು. ಆಗ ಪ್ರಮಾ ಜ್ಞಾನವಾಗಬಾರದು, ಅದು ಜ್ಞಾನಭಿನ್ನವಾದ ಕಾರ್ಯವಾದೀತು.

ಎರಡನೆಯ ಅರ್ಥದಂತೆ ಜ್ಞಾನಕ್ಕೆ ಕಾರಣವಾದ ಕೆಲವು ಕಾರಣ ಸಮುದಾಯಕ್ಕಿಂತ ಭಿನ್ನವಾದ ಸಾಮಗ್ರೀಗಳಿಂದ ಪ್ರಮಾ ಜನ್ಯವಾಗಿದೆ ಎಂದು ಹೇಳಿದಂತೆ ಆಗುತ್ತದೆ. ಆಗ ಜ್ಞಾನಕ್ಕೆ (ಅನುಮಿತಿಗೆ) ಕಾರಣವಾದ ಸಾಮಗ್ರೀ ಪರಾಮರ್ಶಘಟಿತವಾದ ಕಾರಣಕಲಾಪ, ತದ್ಭಿನ್ನವಾದ ಸಾಮಗ್ರೀ ಇಂದ್ರಿಯ ಘಟಿತವಾದ ಪ್ರತ್ಯಕ್ಷಸಾಮಗ್ರೀ. ಆದರಿಂದ ಪ್ರತ್ಯಕ್ಷಪ್ರಮಾ ಜನ್ಯವಾಗಿದೆ. ಹಿಂದೆ ಹೇಳಿದಂತೆ ಮತ್ತೆ ಸಿದ್ಧಸಾಧನದೋಷ.

## ನ್ಯಾಯದೀಪ

**ಜ್ಞಾನಸಾಮಾನ್ಯೇತಿ ॥ ಜ್ಞಾನತ್ವಾಶ್ರಯಸಾಮಗ್ರೀತ್ಯರ್ಥಃ । ಸಾಮಗ್ರೀಭೇದ ಇತಿ ॥ ಸಾಮಾನ್ಯ-ವಿಶೇಷಕಾರ್ಯಸ್ಥಲೇಽಪಿ ಸಾಮಾನ್ಯಕಾರ್ಯಸಾಮಗ್ರೀತಃ ವಿಶೇಷಕಾರ್ಯಸಾಮಗ್ರೀ ನ ಭಿನ್ನಾ, ಕಿಂತು ಮಿಲಿತೈವ ಇತಿ ಭಾವಃ ।**

**ಸಿದ್ಧಸಾಧನಾದಿತಿ ॥ ಇಂದ್ರಿಯಾದೀನಾಮ್ ಅಪಿ ಜ್ಞಾನತ್ವಾಶ್ರಯ ಕತಿಪಯಕಾರಣಾನ್ಯತ್ವಾತ್, ಇತಿ ಭಾವಃ॥**

'ಜ್ಞಾನಸಾಮಾನ್ಯ ಸಾಮಗ್ರೀ' ಎಂಬ ಮೂಲದಲ್ಲಿರುವ ಪದಕ್ಕೆ ಜ್ಞಾನತ್ವಾಶ್ರಯ ಸಾಮಗ್ರೀ ಎಂದರ್ಥ. ಇದರಿಂದ ಮೊದಲು ಹೇಳಿದ ಸಾಧ್ಯದ್ದೇ ಇದು ಪರಿಷ್ಕೃತರೂಪ ಎಂದು ತಿಳಿಯುತ್ತದೆ.

ಮೂಲದಲ್ಲಿ ಸಾಮಗ್ರೀಭೇದವಿದ್ದರೆ ಕಾರ್ಯಭೇದವಿರಬೇಕು, ಎನ್ನಲಾಗಿದೆ. ಘಟ ಸಾಮಾನ್ಯ ಪ್ರಯೋಜಕ ಸಾಮಗ್ರಿಗಿಂತ ನೀಲಘಟಪ್ರಯೋಜಕ ಸಾಮಗ್ರಿಯು ವಿಭಿನ್ನವಾಗಿದ್ದರೂ ಘಟ-ನೀಲಘಟಗಳಿಗೆ ಭೇದವಿಲ್ಲ, ಆದ್ದರಿಂದ ಆ ನಿಯಮ ಸರಿಯಲ್ಲ, ಎಂದು ಆಕ್ಷೇಪಿಸಬಾರದು. ಆ ಸಾಮಗ್ರೀಗಳಲ್ಲಿ ಭೇದವೇ ಇಲ್ಲ, ವಿಶೇಷಸಾಮಗ್ರಿಯಲ್ಲಿ ಸಾಮಾನ್ಯಸಾಮಗ್ರಿಯು ಸೇರಿರುವುದರಿಂದ ಅವೆರಡೂ ಪರಸ್ಪರ ಭಿನ್ನವಲ್ಲ.

**एतेन अनित्यज्ञानत्वावच्छिन्न-कार्यताभिन्नकार्यत्वप्रतियोगिक-कारण-जन्येति साध्यत इति निरस्तम् । इन्द्रियादिभिः सिद्धसाधनात् ।**

ಸಿದ್ಧಸಾಧನತಾದೋಷವಿರುವುದರಿಂದಾಗಿ ಈ ಮುಂದಿನ ಸಾಧ್ಯವೂ ಸರಿಯಲ್ಲ. ಅನಿತ್ಯ ಜ್ಞಾನತ್ವಾವಚ್ಛಿನ್ನಕಾರ್ಯತಾ ಭಿನ್ನಾ ಯಾ ಕಾರ್ಯತಾ (ಅನಿತ್ಯಪ್ರಮಾತ್ವಾವಚ್ಛಿನ್ನ ಕಾರ್ಯತಾ) ತಾದೃಶಕಾರ್ಯತಾ-ನಿರೂಪಿತ ಕಾರಣತಾ=ಗುಣನಿಷ್ಠಾ, ತದಾಶ್ರಯ ಗುಣ. ಆದರಿಂದ ಪ್ರಮಾ ಜನ್ಯವಾಗಿದೆ, ಎಂದು ಸಾಧ್ಯ. ಹೀಗೆ ಸಾಧನೆ ಮಾಡಿದರೂ ಸಿದ್ಧಸಾಧನತಾದೋಷ ಇದೆ. ಅನಿತ್ಯಜ್ಞಾನಗಳಿಗೆಲ್ಲ ಇಂದ್ರಿಯವು ಕಾರಣವಲ್ಲ. ಇಂದ್ರಿಯ ಕಾರ್ಯತಾವಚ್ಛೇದಕ ಪ್ರತ್ಯಕ್ಷತ್ವ ಹೊರತು, ಅನಿತ್ಯಜ್ಞಾನತ್ವ ಅಲ್ಲ. ಆದ್ದರಿಂದ ಅನಿತ್ಯಜ್ಞಾನತ್ವಾವಚ್ಛಿನ್ನ ಕಾರ್ಯತಾ ನಿರೂಪಿತಕಾರಣತಾ ಇಂದ್ರಿಯದಲ್ಲಿ ಇಲ್ಲ. ತಾದೃಶಕಾರ್ಯತಾಭಿನ್ನ-ಪ್ರತ್ಯಕ್ಷತ್ವಾವಚ್ಛಿನ್ನ-ಕಾರ್ಯತಾ-ನಿರೂಪಿತ ಕಾರಣತಾಶ್ರಯ ಇಂದ್ರಿಯ. ಆದರಿಂದ ಪ್ರಮಾ ಜನ್ಯವಾಗಿದೆ. ಇದು ಸ್ವತಸ್ತ್ವವಾದಿಗಳಿಗೂ ಸಿದ್ಧ. ಆದ್ದರಿಂದ ಸಿದ್ಧಸಾಧನತಾ.

## ನ್ಯಾಯದೀಪ

**ಜ್ಞಾನತ್ವಸ್ಯ ನಿತ್ಯವೃತ್ತಿತಯಾ ಅನವಚ್ಛೇದಕತ್ವಾದಾಹ-ಅನಿತ್ಯಜ್ಞಾನತ್ವೇತಿ ॥ ಅನಿತ್ಯಜ್ಞಾನತ್ವೇನ ಅವಚ್ಛಿನ್ನಾ=ನಿಯತಾ, ವ್ಯಾವರ್ತಿತಾ ವಾ ಯಾ ಕಾರ್ಯತಾ= ಅನಿತ್ಯಜ್ಞಾನ ಮಾತ್ರವೃತ್ತಿಃ, ಆತ್ಮಮನೋಯೋಗಾದಿಪ್ರಯೋಜ್ಯಾ ಕಾರ್ಯತಾ, ತದನ್ಯಕಾರ್ಯತ್ವಂ=ಪ್ರಮಾನಿಷ್ಠಂ, ಅಪ್ರಮಾನಿಷ್ಠಂ ಚ । ತನ್ನಿರೂಪಿತಂ ಯತ್ಕಾರಣಂ=ಪ್ರಮಾರೂಪಕಾರ್ಯ-ಕಾರಣಂ, ಅಪ್ರಮಾರೂಪಕಾರ್ಯ ಕಾರಣಂ ಗುಣದೋಷಲಕ್ಷಣಂ ತಜ್ಜನ್ಯೇತ್ಯರ್ಥಃ । ದೋಷಜನ್ಯತ್ವೇ ಬಾಧಾತ್ ಗುಣಜನ್ಯತ್ವೇನ ಸಾಧ್ಯಪರ್ಯವಸಾನಂ ಪ್ರಮಾಯಾಂ, ದೃಷ್ಟಾಂತೇ ದೋಷಜನ್ಯತ್ವೇನ ಸಾಧ್ಯಾನುಗಮೋ ಜ್ಞೇಯಃ ।**

ಜ್ಞಾನತ್ವವು ನಿತ್ಯೇಶ್ವರಜ್ಞಾನದಲ್ಲೂ ಇದೆ. ಅದು ಕಾರ್ಯತಾ ಅತಿಪ್ರಸಕ್ತವಾದುದರಿಂದ ಕಾರ್ಯತಾವಚ್ಛೇದಕವಾಗುವುದಿಲ್ಲ. ಅದಕ್ಕಾಗಿ ಅನಿತ್ಯಜ್ಞಾನತ್ವಾವಚ್ಛಿನ್ನ ಕಾರ್ಯತಾ, ಎನ್ನಲಾಗಿದೆ. ಆದರ ಅರ್ಥ-ಅನಿತ್ಯಜ್ಞಾನತ್ವ ಎಂಬ ಧರ್ಮದಿಂದ ಅವಚ್ಛಿನ್ನಾ ಎಂದರೆ ಆ ಧರ್ಮನಿಯತವಾದ (ವ್ಯಾಪ್ಯ ಮತ್ತು ವ್ಯಾಪಕವಾದ) ಅಥವಾ ಆ ಧರ್ಮದಿಂದಾಗಿ ಇತರ ಭಿನ್ನವಾದ ಯಾವ ಕಾರ್ಯತಾ ಇದೆಯೋ ಅದು ಅನಿತ್ಯವಾದ ಜ್ಞಾನದಲ್ಲಿ ಮಾತ್ರವೇ ಇರಬಹುದಾಗಿದೆ. ಅಂತಹ ಕಾರ್ಯತಾ ಎಲ್ಲಾ ಜ್ಞಾನಗಳಿಗೂ ಕಾರಣವಾದ ಆತ್ಮಮನಃ-ಸನ್ನಿಕರ್ಷಾದಿಗಳಿಂದ ಹುಟ್ಟುವ ಜ್ಞಾನಸಾಮಾನ್ಯದಲ್ಲಿ ಇದೆ. ತದನ್ಯಕಾರ್ಯತಾ ಎಂದರೆ ಪ್ರಮಾತ್ಮಕಜ್ಞಾನದಲ್ಲಿರುವ ಅಥವಾ ಭ್ರಮಾತ್ಮಕಜ್ಞಾನದಲ್ಲಿರುವ ಕಾರ್ಯತಾ. ಅಂತಹ ಕಾರ್ಯತಾದಿಂದ ನಿರೂಪಿತವಾದ ಕಾರಣವೆಂದರೆ ಪ್ರಮಾರೂಪವಾದ ಕಾರ್ಯಕ್ಕೆ ಜನಕವಾದ ಗುಣರೂಪಕಾರಣ ಅಥವಾ ಭ್ರಮರೂಪವಾದ ಕಾರ್ಯಕ್ಕೆ ಜನಕವಾದ ದೋಷರೂಪಕಾರಣ. ಆದರಿಂದ ಪ್ರಮಾ ಅಥವಾ

ಭ್ರಮೆಗಳು ಜನ್ಯವಾಗಿವೆ, ಎಂದು ಸಾಧ್ಯದ ಅರ್ಥ. ಪ್ರಮೆಯಲ್ಲಿ ದೋಷಜನ್ಯತ್ವವು ಬಾಧಿತವಾದುದರಿಂದ ಗುಣಜನ್ಯತ್ವವನ್ನು ಪರಿಗ್ರಹಿಸಿ ಸಾಧ್ಯವನ್ನು ಪರ್ಯವಸಾನಗೊಳಿಸಬೇಕು. ದೃಷ್ಟಾಂತವಾದ ಭ್ರಮೆಯಲ್ಲಿ ದೋಷಜನ್ಯತ್ವವನ್ನು ಪರಿಗ್ರಹಿಸಿ ಸಾಧ್ಯಪರ್ಯವಸಾನ ಮಾಡಬೇಕು. ಅಂತೂ ಎರಡರಲ್ಲೂ ತದನ್ಯಕಾರ್ಯತಾ ನಿರೂಪಿತಕಾರಣಜನ್ಯತ್ವವು ಸಮಾನವಾದುದು.

## ನ್ಯಾಯದೀಪ

**ಸಿದ್ಧಸಾಧನಾದಿತಿ ॥ ಕಾರ್ಯತ್ವಪದೇನ ಪ್ರಮಾದಿ–ವೃತ್ತಿಕಾರ್ಯತ್ವಮಿವ ಪ್ರತ್ಯಕ್ಷ–ಮಾತ್ರವೃತ್ತಿಕಾರ್ಯತ್ವಮ್, ಅನುಮಿತ್ಯಾದಿಮಾತ್ರವೃತ್ತಿಕಾರ್ಯತ್ವಂ, ಚಾಕ್ಷುಷಾದಿಮಾತ್ರ ವೃತ್ತಿಕಾರ್ಯತ್ವಮಪಿ ಭವತಿ, ಇತಿ ತತ್ತತ್ಪ್ರತಿಯೋಗಿಕ–ಕಾರಣಾನಿ ಇಂದ್ರಿಯಾದೀನ್ಯಪಿ ಭವಂತೀತಿ ತೈಃ ಸಿದ್ಧಸಾಧನಮ್ ಇತ್ಯರ್ಥಃ ।**

ಅನಿತ್ಯಜ್ಞಾನತ್ವಾವಚ್ಛಿನ್ನ ಕಾರ್ಯತಾಭಿನ್ನ ಕಾರ್ಯತಾ ಪ್ರಮಾ–ಭ್ರಮಾ ವೃತ್ತಿಕಾರ್ಯತಾ ಹೇಗೋ ಅದರಂತೆ ಪ್ರತ್ಯಕ್ಷಮಾತ್ರವೃತ್ತಿಕಾರ್ಯತಾ, ಅನುಮಿತಿ ಮಾತ್ರ ವೃತ್ತಿಕಾರ್ಯತಾ, ಚಾಕ್ಷುಷಜ್ಞಾನವೃತ್ತಿಕಾರ್ಯತಾಗಳೂ ಆಗುತ್ತವೆ. ತತ್ ನಿರೂಪಿತ ಕಾರಣತಾವತ್ತಾದುದು ಪ್ರತ್ಯಕ್ಷ, ಅನುಮಾನ, ಚಕ್ಷುರಿಂದ್ರಿಯಗಳೂ ಆಗುತ್ತವೆ. ತಜ್ಜನ್ಯವಾದುದು ಪ್ರಮಾ. ಇದು ಸ್ವತಸ್ತ್ವವಾದಕ್ಕೂ ಸಮ್ಮತವಾದುದರಿಂದ ಸಿದ್ಧಸಾಧನತಾ.

**एतेन, अनित्यप्रमा प्रमाऽप्रमोभयहेतुभिन्नहेतुजन्या जन्यत्वात्, प्रमाऽप्रमान्यतरप्रतिबन्धकजन्या वा प्रमाऽप्रमान्यतरत्वात्, स्वविरोध्यनुभवप्रतिबन्धकजन्या वा अनित्यानुभवत्वात् अप्रमावत् ।**

**चाक्षुषप्रमा चाक्षुषभ्रमाजनकजन्या अनित्यप्रमात्वात् रासनप्रमावदिति निरस्तम् ।**

**प्रमाजनकव्यक्तिविशेषस्योभयहेतुभिन्नत्वेन अप्रमाप्रतिबन्धकत्वेन, चाक्षुषभ्रमाजनकत्वेन च सिद्धसाधनात् ।**

ಇದರಂತಿರುವ ಇನ್ನೂ ಹಲವು ಅನುಮಾನಗಳಿಗೂ ಸಿದ್ಧಸಾಧನತಾದೋಷವಿದೆ.

**ಅನುಮಾನ 1.** ಅನಿತ್ಯಪ್ರಮಾ–**ಪಕ್ಷ**

ಪ್ರಮಾ–ಅಪ್ರಮಾ–ಉಭಯಹೇತುಭಿನ್ನ–ಹೇತು ಜನ್ಯಾ–**ಸಾಧ್ಯ.**

ಜನ್ಯವಾದುದರಿಂದ–**ಹೇತು.**

ಪ್ರಮಾ ಮತ್ತು ಅಪ್ರಮಾ ಉಭಯವಿಧದ ಜ್ಞಾನಗಳಿಗೆ ಕಾರಣವಾದುದು ಆತ್ಮಮನಃ ಸಂಯೋಗಾದಿಗಳು. ಜ್ಞಾನವು ಪ್ರಮಾ ಆಗಬೇಕಾದರೆ ಅವುಗಳ ಜೊತೆಗೆ ಗುಣವು ಸೇರಬೇಕು, ಭ್ರಮೆ ಆಗಬೇಕಾದರೆ ದೋಷವು ಸೇರಿರಬೇಕು. ಹೀಗೆ ಉಭಯವಿಧ ಜ್ಞಾನಕ್ಕೂ ಕಾರಣಕ್ಕಿಂತ ಭಿನ್ನವಾದ ಕಾರಣ ಗುಣ, ತಜ್ಜನ್ಯವಾಗಿದೆ ಪ್ರಮಾ. ಆದ್ದರಿಂದ ಪ್ರಾಮಾಣ್ಯ ಗುಣಜನ್ಯ ಎಂದು ಈ ಅನುಮಾನದ ಅಭಿಪ್ರಾಯ.

**ಅನುಮಾನ 2.** ಅನಿತ್ಯ ಪ್ರಮಾ–**ಪಕ್ಷ.**

ಪ್ರಮಾ–ಅಪ್ರಮಾ ಅನ್ಯತರ ಪ್ರತಿಬಂಧಕ ಜನ್ಯಾ–**ಸಾಧ್ಯ**

ಪ್ರಮಾ–ಅಪ್ರಮಾ ಅನ್ಯತರತ್ವಾತ್–**ಹೇತು.**

ಪ್ರಮಾಕ್ಕೆ ದೋಷವು ಪ್ರತಿಬಂಧಕ, ಅಪ್ರಮಾಕ್ಕೆ ಗುಣವು ಪ್ರತಿಬಂಧಕ. ಅಪ್ರಮಾಕ್ಕೆ ಪ್ರತಿಬಂಧಕವಾದ ಗುಣದಿಂದ ಪ್ರಮಾವು ಜನ್ಯವಾಗಿದೆ, ಎಂದು ಈ ಅನುಮಾನದ ಅಭಿಪ್ರಾಯ.

**ಅನುಮಾನ 3.** ಅನಿತ್ಯಪ್ರಮಾ–**ಪಕ್ಷ.**

ಸ್ವವಿರೋಧಿ–ಅನುಭವ ಪ್ರತಿಬಂಧಕ ಜನ್ಯಾ–ಸಾಧ್ಯ.

ಅನಿತ್ಯಾನುಭವತ್ವಾತ್–**ಹೇತು.** ಅಪ್ರಮಾವತ್–**ದೃಷ್ಟಾಂತ.**

ಪ್ರಮಾಕ್ಕೆ ವಿರೋಧಿಯಾದ ಅನುಭವ ಎಂದರೆ ಭ್ರಮೆ. ಅದಕ್ಕೆ ಪ್ರತಿಬಂಧಕವಾದುದು ಗುಣ. ಆದರಿಂದ ಪ್ರಮಾ ಜನ್ಯವಾಗಿದೆ.

ಈ ಎಲ್ಲ ಅನುಮಾನಗಳಿಗೂ ಅಪ್ರಮಾ ದೃಷ್ಟಾಂತ.

**ಅನುಮಾನ 4.** ಚಾಕ್ಷುಷಪ್ರಮಾ–**ಪಕ್ಷ.**

ಚಾಕ್ಷುಷಭ್ರಮಾಜನಕ ಜನ್ಯಾ–**ಸಾಧ್ಯ.**

ಅನಿತ್ಯಪ್ರಮಾತ್ವಾತ್–**ಹೇತು.** ರಾಸನಪ್ರಮಾವತ್–**ದೃಷ್ಟಾಂತ.**

ಚಾಕ್ಷುಷಪ್ರಮಾವು ಚಾಕ್ಷುಷಭ್ರಮೆಗೆ ಯಾವುದು ಕಾರಣವಲ್ಲವೋ(ಗುಣ) ಅದರಿಂದ ಜನ್ಯವಾಗಿದೆ. ಅನಿತ್ಯಜ್ಞಾನವಾದ ಕಾರಣ. ರಾಸನಪ್ರಮಾ ಇದಕ್ಕೆ ದೃಷ್ಟಾಂತ. ಅದೂ ಚಾಕ್ಷುಷ ಭ್ರಮೆಗೆ ಕಾರಣವಲ್ಲದ ರಸನೇಂದ್ರಿಯಸನ್ನಿಕರ್ಷದಿಂದ ಜನ್ಯವಾಗಿದೆ. ಆದ್ದರಿಂದ ಅದರಲ್ಲಿ ಸಾಧ್ಯವಿದೆ.

ಈ ನಾಲ್ಕೂ ಅನುಮಾನಗಳೂ ಸರಿಯಲ್ಲ. ಎಲ್ಲ ಅನುಮಾನಗಳಲ್ಲೂ ಸಿದ್ಧಸಾಧನತಾ ದೋಷವಿದೆ. ನಿರ್ದೋಷವಾದ ಅರ್ಥ ಮತ್ತು ಇಂದ್ರಿಯ ಸನ್ನಿಕರ್ಷವು ಪ್ರಮಾಕ್ಕೆ ಮಾತ್ರ ಕಾರಣ. ಆದ್ದರಿಂದ ಅದು ಪ್ರಮಾ–ಅಪ್ರಮಾ ಉಭಯ ಹೇತು ಅಲ್ಲ. ಆದ್ದರಿಂದ ಮೊದಲನೆಯ ಸಾಧ್ಯ ಅನಿತ್ಯಪ್ರಮಾದಲ್ಲಿ ಸಿದ್ಧ. ಅಂತಹ ಸನ್ನಿಕರ್ಷವು ಅಪ್ರಮಾಕ್ಕೆ ಪ್ರತಿಬಂಧಕವಾದುದರಿಂದಲೇ

ಎರಡನೆಯ ಮತ್ತು ಮೂರನೆಯ ಸಾಧ್ಯವೂ ಸಿದ್ಧವಾಯಿತು. ಅದು ಚಾಕ್ಷುಷಭ್ರಮೆಗೆ ಜನಕವಲ್ಲದ ಕಾರಣ ನಾಲ್ಕನೆಯ ಸಾಧ್ಯವೂ ಇದೆ. ಹೀಗೆ ಸಿದ್ಧಸಾಧನತಾದೋಷ.

ಭ್ರಮೆಗೆ ದೋಷ ಕಾರಣ. ದೋಷವಿಲ್ಲದಿದ್ದಾಗ ಪ್ರಮಾ ಹುಟ್ಟುತ್ತದೆ. ಪ್ರಮಾಕ್ಕೆ ಇದಕ್ಕಿಂತ ಬೇರೆಯಾದ ಗುಣಾದಿರೂಪವಾದ ಸ್ವತಂತ್ರಕಾರಣದ ಅಪೇಕ್ಷೆ ಇಲ್ಲ, ಎಂದು ಒಟ್ಟು ಅರ್ಥ.

## ನ್ಯಾಯದೀಪ

**ಪ್ರಮಾಪ್ರಮೇತಿ ॥ ತದುಭಯಹೇತುಃ ಜ್ಞಾನಸಾಮಾನ್ಯಸಾಮಗ್ರೀ ಆತ್ಮಮನಃಸಂಯೋಗಾದಿಃ । ತದ್ಭಿನ್ನೋ ಹೇತುಃ ಗುಣಃ, ದೋಷಶ್ಚ । ತಜ್ಜನ್ಯತ್ವಂ ಚ ಪಕ್ಷ–ದೃಷ್ಟಾಂತಯೋಃ ಪ್ರಮಾಪ್ರಮಯೋಃ ಪೂರ್ವವತ್ ಜ್ಞೇಯಮ್ ।**

**ಪ್ರಮೇತ್ಯುಕ್ತ್ಯಾ ಸಿದ್ಧಸಾಧನತ್ವಸ್ಯ, ಅಪ್ರಮೇತ್ಯುಕ್ತ್ಯಾ ಬಾಧಸ್ಯಚ ನಿರಾಸಃ । ನಚ ಪ್ರಾಗಭಾವ–ವ್ಯಕ್ತಿವಿಶೇಷೇಣ ಅರ್ಥಾಂತರಮ್ । ಭಾವತ್ವೇನ ವಿಶೇಷಣಾತ್ ।**

ಮೊದಲನೆಯ ಅನುಮಾನದಲ್ಲಿ ಪ್ರಮಾ–ಅಪ್ರಮಾ ಉಭಯಕ್ಕೂ ಹೇತುವಾದುದು ಜ್ಞಾನಸಾಮಾನ್ಯಕ್ಕೆ ಸಾಮಗ್ರಿಯಾದ ಆತ್ಮಮನಃಸಂಯೋಗಾದಿಗಳು. ತದ್ಭಿನ್ನವಾದುದು ಗುಣ ಮತ್ತು ದೋಷಗಳು. ಗುಣಜನ್ಯತ್ವ ಪಕ್ಷದಲ್ಲಿದೆ. ದೋಷಜನ್ಯತ್ವ ದೃಷ್ಟಾಂತದಲ್ಲಿದೆ.

ಸಾಧ್ಯದಲ್ಲಿ ಪ್ರಮಾಪದವನ್ನು ಬಿಟ್ಟು ಅಪ್ರಮಾಹೇತುಭಿನ್ನ ಹೇತುಜನ್ಯ ಎಂದಿಷ್ಟೇ ಹೇಳಿದರೆ ಅಪ್ರಮಾಹೇತುವಾದ ದೋಷಭಿನ್ನವಾದ ಜ್ಞಾನಕಾರಣಗಳಿಂದ ಪ್ರಮಾವು ಜನ್ಯವೆಂದು ಸ್ವತಸ್ತ್ವವಾದಿಗಳಿಗೂ ಸಿದ್ಧವಾದುದರಿಂದ ಸಿದ್ಧಸಾಧನತಾ ಬರುತ್ತಿತ್ತು. ಅದಕ್ಕಾಗಿ ಪ್ರಮಾಪದಬೇಕು. ಅಪ್ರಮಾಪದವನ್ನು ಬಿಟ್ಟರೆ ಪ್ರಮಾವು ಪ್ರಮಾಹೇತುಭಿನ್ನ ಹೇತುಜನ್ಯ ಎಂದಂತಾಗುತ್ತದೆ. ಇದು ವ್ಯಾಹತವಾದುದರಿಂದ ಬಾಧ. ಅದಕ್ಕಾಗಿ ಅಪ್ರಮಾಪದಬೇಕು.

ಇಷ್ಟಾದರೂ ತದುಭಯಹೇತುಭಿನ್ನವಾದ ಹೇತು ಎಂದರೆ ಪ್ರಮಾಪ್ರಾಗಭಾವ. ಅದರಿಂದ ಪ್ರಮಾ ಜನ್ಯ, ಎಂದು ಸಿದ್ಧವಾದುದರಿಂದ ಸಿದ್ಧಸಾಧನತಾದೋಷಕ್ಕೆ ಅವಕಾಶವಿದೆ. ಅದರ ಪರಿಹಾರಕ್ಕಾಗಿ ಹೇತುವಿನಲ್ಲಿ ಭಾವತ್ವೇ ಸತಿ ಎಂಬ ವಿಶೇಷಣವನ್ನು ಸೇರಿಸಬೇಕು. ಆಗ ಪ್ರಾಗಭಾವ ಸಂಗ್ರಹವಾಗುವುದಿಲ್ಲ.

## ನ್ಯಾಯದೀಪ

**ಯನ್ಮತೇ ಗುಣಾದೇಃ ವಿರೋಧಿಪ್ರತಿಬಂಧಕತ್ವಂ, ಸ್ವಕಾರ್ಯಕರತ್ವಂ ಚ ತನ್ಮತೇನಾಹ–ಪ್ರಮಾ–ಪ್ರಮಾನ್ಯತರೇತಿ ॥ ಅನಿತ್ಯಪ್ರಮೇತ್ಯೇವಂ ಪ್ರಾಗುಕ್ತ**

**ಪಕ್ಷಾನುಕರ್ಷಃ ಅತ್ರ ಉತ್ತರತ್ರ ಚ ಜ್ಞೇಯಃ । ಅನ್ಯತರಪ್ರತಿಬಂಧಕಃ ಗುಣಃ ದೋಷಶ್ಚ । ತಜ್ಜನ್ಯತ್ವಂ ಪೂರ್ವವತ್ ।**

**ಹೇತೌ ಜನ್ಯಪ್ರಮೇತಿ ಯೋಜ್ಯಮ್ । ಪ್ರಮಾಽ–ಪ್ರಮಾಬಹಿರ್ಭೂತಮ್ ಈಶ್ವರಜ್ಞಾನಮ್ ಇತಿ ಮತೇ ತು ಯಥಾಶ್ರುತಮೇವ ।**

**ಅನುಮಿತ್ಯಾದಿಪ್ರತಿಬಂಧಕ–ಪ್ರತ್ಯಕ್ಷಸಾಮಗ್ರೀಜನ್ಯತ್ವೇನ ಸಿದ್ಧಸಾಧನತ್ವ-ವಾರಣಾಯ ಸ್ವವಿರೋಧೀತ್ಯನುಭವವಿಶೇಷಣಮ್ । ಅಪ್ರಮಾರೂಪಃ ಅನುಭವಃ ಇತ್ಯರ್ಥಃ ।**

**ಸ್ವಶಬ್ದಸ್ಯ ಪಕ್ಷೀಭೂತ–ಅನಿತ್ಯಪ್ರಮಾ–ಮಾತ್ರಪರತ್ವೇನ ಅನುಮಿತ್ಯಾದೇಃ ಸ್ವವಿರೋಧಿತ್ವಾಭಾವಾತ್ ನೋಕ್ತದೋಷಃ।**

**ಸ್ವವಿರೋಧಿ–ಸ್ಮೃತಿ–ಪ್ರತಿಬಂಧಕಾನುಭವಸಾಮಗ್ರೀಜನ್ಯತಯಾ ಸಿದ್ಧಸಾಧನತಾ ವಾರಣಾಯ ಅನುಭವಪದಮ್ । ಅಪ್ರಮಾವದಿತಿ ॥ ತತ್ರ ದೋಷಜನ್ಯತ್ವೇನ ಸಾಧ್ಯಾನುಗಮೋ ಧ್ಯೇಯಃ ।**

ಯಾರು ಗುಣವು ಭ್ರಮೆಗೆ ಪ್ರತಿಬಂಧಕ ಹಾಗೂ ಪ್ರಮೆಗೆ ಕಾರಣ ಎಂದು ಹೇಳುವರೋ ಅವರಿಗೂ ಸಮ್ಮತವಾಗುವ ಅನುಮಾನ ಎರಡನೆಯದು. ಈ ಅನುಮಾನ ಮತ್ತು ಮುಂದಿನ ಅನುಮಾನದಲ್ಲಿ ಹಿಂದೆ ಹೇಳಿದ 'ಅನಿತ್ಯಪ್ರಮಾ' ಎಂಬ ಪಕ್ಷವಾಚಕಪದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ಅನ್ಯತರದಲ್ಲಿ ಭ್ರಮೆಗೆ ಪ್ರತಿಬಂಧಕ ಗುಣ, ಪ್ರಮೆಗೆ ಪ್ರತಿಬಂಧಕ ದೋಷ. ಗುಣದಿಂದ ಜನ್ಯ ಪ್ರಮಾ, ದೋಷದಿಂದ ಜನ್ಯ ಭ್ರಮೆ.

ಈ ಅನುಮಾನದ ಹೇತುವಿಗೆ ಈಶಜ್ಞಾನದಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ಜನ್ಯಪದ ವನ್ನು ಸೇರಿಸಿ 'ಜನ್ಯಪ್ರಮಾಪ್ರಮಾನ್ಯತರತ್ವಾತ್' ಎಂದು ಹೇತುವನ್ನು ಪರಿಷ್ಕಾರ ಮಾಡಬೇಕು. ಈಶಜ್ಞಾನವು ಗುಣಜನ್ಯವಲ್ಲದಿರುವುದರಿಂದ ಪ್ರಮಾವೂ ಅಲ್ಲ, ದೋಷಜನ್ಯವಲ್ಲದಿರುವುದರಿಂದ ಭ್ರಮೆಯೂ ಅಲ್ಲ, ಎನ್ನುವುದಾದರೆ ಜನ್ಯಪದವನ್ನು ಸೇರಿಸಬೇಕಾಗಿಲ್ಲ, ಪ್ರಮಾ ಅಪ್ರಮಾ ಪದಗಳಿಂದಲೇ ಈಶಜ್ಞಾನದಲ್ಲಿ ವ್ಯಭಿಚಾರ ಪರಿಹಾರವಾಗುತ್ತದೆ.

ಮೂರನೆಯ ಅನುಮಾನದ ಸಾಧ್ಯ–'ಸ್ವವಿರೋಧಿ–ಅನುಭವ ಪ್ರತಿಬಂಧಕ ಜನ್ಯಾ' ಎಂದು. ಇಲ್ಲಿ ಅನುಭವಕ್ಕೆ ಸ್ವವಿರೋಧಿ ಎಂಬ ವಿಶೇಷಣವನ್ನು ಕೊಡದಿದ್ದರೆ ಸಿದ್ಧಸಾಧನತಾದೋಷ ಬರುತ್ತದೆ. ಅನುಭವ ಎಂದರೆ ಅನುಮಿತಿ. ಅದಕ್ಕೆ ಪ್ರತಿಬಂಧಕವಾದುದು ಪ್ರತ್ಯಕ್ಷಸಾಮಗ್ರೀ. ಏಕೆಂದರೆ, ಸಮಾನವಿಷಯದಲ್ಲಿ ಅನುಮಿತಿಗೆ ಪ್ರತ್ಯಕ್ಷಸಾಮಗ್ರಿಯು ಪ್ರತಿಬಂಧಕ. ತಜ್ಜನ್ಯತ್ವವು

ಪ್ರತ್ಯಕ್ಷಪ್ರಮಾದಲ್ಲಿ ಸಿದ್ಧವಾಗಿದೆ. (ಸ್ವವಿರೋಧಿಪದವಿದ್ದರೆ ಅನುಮಿತಿಯು ಅನಿತ್ಯಪ್ರಮಾಕ್ಕೆ (ಸ್ವ)ವಿರೋಧಿಯಲ್ಲದುದರಿಂದ ಅನುಭವಪದದಿಂದ ಅನುಮಿತಿಯನ್ನು ಪರಿಗ್ರಹಿಸಲಾಗುವುದಿಲ್ಲ.) ಸ್ವವಿರೋಧಿಯಾದ ಅನುಭವ ಅಪ್ರಮಾರೂಪವಾದ ಜ್ಞಾನ ಮಾತ್ರ. ಏಕೆಂದರೆ, ಅನುಮಿತಿಯು ಸ್ವಪದಗ್ರಾಹ್ಯವಾದ ಅನಿತ್ಯಪ್ರಮಾಕ್ಕೆ ವಿರೋಧಿಯಲ್ಲ. ಏಕೆಂದರೆ, ಅನಿತ್ಯಪ್ರಮಾದಲ್ಲಿ ಅನುಮಿತಿಯೂ ಸೇರುತ್ತದೆ. ಅನುಮಿತಿಯು ಅನುಮಿತಿಗೆ ವಿರೋಧಿಯಲ್ಲ.

ಇನ್ನು ಸಾಧ್ಯದಲ್ಲಿ ಅನುಭವಪದವನ್ನು ಬಿಟ್ಟರೆ ಅನಿತ್ಯಪ್ರಮಾ ವಿರೋಧಿಯಾದುದು ಸ್ಮೃತಿ. ಅದಕ್ಕೆ ಪ್ರತಿಬಂಧಕವಾದುದು ಅನುಭವಸಾಮಗ್ರೀ. ತಜ್ಜನ್ಯತ್ವವು ಸಿದ್ಧವಾದುದರಿಂದ ಸಿದ್ಧಸಾಧನತಾ. ಅದರ ಪರಿಹಾರಕ್ಕಾಗಿ ಸ್ವವಿರೋಧಿ–ಅನುಭವ ಎನ್ನಬೇಕು. ಈಗ ಸ್ಮೃತಿಯನ್ನು ಪರಿಗ್ರಹಿಸಲು ಆಗುವುದಿಲ್ಲ.

## ನ್ಯಾಯದೀಪ

**ಚಾಕ್ಷುಷಭ್ರಮಾಜನಕೇತಿ ॥ ಪಕ್ಷೇ ಗುಣಜನ್ಯತ್ವೇನ, ದೃಷ್ಟಾಂತೇ ರಸನೇಂದ್ರಿಯ ಸಂಪ್ರಯೋಗಜನ್ಯತ್ವೇನ ಸಾಧ್ಯಂ ಬೋಧ್ಯಮ್ ।**

**ಆದ್ಯದ್ವಯಂ ಸ್ಮೃತ್ಯನುಭವಸಾಧಾರಣಂ ಸಾಧ್ಯಮ್, ತೃತೀಯಮ್ ಅನುಭವಾಸಾಧಾರಣಮ್, ಚತುರ್ಥಂ ಚಕ್ಷುರಾದಿಪ್ರತ್ಯಕ್ಷಾಸಾಧಾರಣಮ್ ಇತಿ ಸಾಧ್ಯಚತುಷ್ಟಯಂ ವಿವೇಕ್ತವ್ಯಮ್ ।**

**ವ್ಯಕ್ತಿವಿಶೇಷಸ್ಯೇತಿ ॥ ನಿರ್ದೋಷಾರ್ಥ–ಕರಣಸಂಪ್ರಯೋಗಾದಿರೂಪಸ್ಯ ಇತ್ಯರ್ಥಃ । ಅಪ್ರಮಾಪ್ರತಿಬಂಧಕತ್ವೇನೇತಿ ॥ ತದನುತ್ಪಾದವ್ಯಾಪ್ಯತ್ವರೂಪ ಪ್ರತಿಬಂಧಕತ್ವೇನ ಇತ್ಯರ್ಥಃ ।**

ನಾಲ್ಕನೆಯ ಅನುಮಾನದಲ್ಲಿ 'ಚಾಕ್ಷುಷಭ್ರಮಾಜನಕ ಜನ್ಯಾ' ಎಂದು ಸಾಧ್ಯ. ಅದನ್ನು ಪಕ್ಷವಾದ ಚಾಕ್ಷುಷಪ್ರಮಾದಲ್ಲಿ ಸಮನ್ವಯ ಮಾಡುವಾಗ ಗುಣಜನ್ಯತ್ವವನ್ನು ಹೇಳಿ ಪರ್ಯವಸಾನ ಮಾಡಬೇಕಾಗುತ್ತದೆ. ದೃಷ್ಟಾಂತವಾದ ರಾಸನಪ್ರಮಾದಲ್ಲಿ ಸಮನ್ವಯ ಮಾಡುವಾಗ ರಸನೇಂದ್ರಿಯಸನ್ನಿಕರ್ಷಜನ್ಯತ್ವವನ್ನು ಹೇಳಿ ಸಮನ್ವಯ ಮಾಡಬೇಕು.

ಈ ನಾಲ್ಕು ಅನುಮಾನಗಳಲ್ಲಿ ಮೊದಲೆರಡು ಅನುಮಾನಗಳಲ್ಲಿ ಅನಿತ್ಯಪ್ರಮಾವು ಪಕ್ಷವಾಗಿರುವುದರಿಂದ ಸ್ಮೃತಿ–ಅನುಭವಗಳಲ್ಲಿ ಸಾಧಾರಣವಾದ ಸಾಧ್ಯ. ಮೂರನೆಯದರಲ್ಲಿ ಅನಿತ್ಯಾನುಭವತ್ವವು ಹೇತುವಾದುದರಿಂದ ಅನುಭವದಲ್ಲಿ ಮಾತ್ರ ಪರ್ಯವಸಾನವಾಗುವ ಸಾಧ್ಯ. ನಾಲ್ಕನೆಯದರಲ್ಲಿ ಚಾಕ್ಷುಷಪ್ರಮಾವು ಪಕ್ಷವಾದುದರಿಂದ ಚಕ್ಷುರಾದಿ ಕರಣಗಳಲ್ಲಿ ಮಾತ್ರ ಸಾಧ್ಯವು ಪರ್ಯವಸಾನವಾಗುತ್ತದೆ. ಹೀಗೆ ನಾಲ್ಕು ಸಾಧ್ಯಗಳಲ್ಲಿ ಇರುವ ವೈಲಕ್ಷಣ್ಯವನ್ನು ತಿಳಿಯಬೇಕು.

ಈ ಅನುಮಾನಗಳನ್ನು ಖಂಡನೆ ಮಾಡುವ ಮೂಲದಲ್ಲಿ ವ್ಯಕ್ತಿವಿಶೇಷಸ್ಯ ಎಂದಿದೆ. ಅದರ ಅರ್ಥ–ನಿರ್ದೋಷವಾದ ಅರ್ಥ ಮತ್ತು ಕರಣಗಳಿಗೆ ಆಗುವ ಸನ್ನಿಕರ್ಷಕ್ಕೆ, ಎಂದು. ಅದು ಅಪ್ರಮಾಕ್ಕೆ ಪ್ರತಿಬಂಧಕ ಎಂದು ಮೂಲದಲ್ಲಿ ಇದೆ. ಅಪ್ರಮಾನುತ್ಪಾದ ವ್ಯಾಪ್ಯತ್ವವೇ ಅಪ್ರಮಾ ಪ್ರತಿಬಂಧಕತ್ವ. ನಿರ್ದೋಷಾರ್ಥ–ಕರಣಗಳಿಗೆ ಸನ್ನಿಕರ್ಷ ಇದ್ದಾಗಲೆಲ್ಲ ಅಪ್ರಮಾ ಹುಟ್ಟುವುದೇ ಇಲ್ಲ, ಎಂದು ಭಾವ.

## ಮೂರನೆಯ ವಿಧದ ಪರತಸ್ತ್ವಸಾಧಕಾನುಮಾನ

**नापि अनित्यप्रमा, अप्रमाव्यावृत्तधर्मावच्छिन्नकार्यताप्रतियोगिक-कारणजन्या अप्रमाविजातीयकार्यत्वात् । घटवत् इति युक्तम् । अप्रमाव्यावृत्तधर्मावच्छिन्नकार्यत्वम् इन्द्रियसम्प्रयोगस्य, तत्प्रति-योगिककारणम् इन्द्रियादीति तज्जन्यत्वेन सिद्धसाधनात् ।**

ಅನಿತ್ಯಪ್ರಮಾ–**ಪಕ್ಷ.**

ಅಪ್ರಮಾವ್ಯಾವೃತ್ತಧರ್ಮಾವಚ್ಛಿನ್ನ–ಕಾರ್ಯತಾಪ್ರತಿಯೋಗಿಕ–ಕಾರಣಜನ್ಯಾ–**ಸಾಧ್ಯ.**

ಅಪ್ರಮಾವಿಜಾತೀಯ ಕಾರ್ಯತ್ವಾತ್–**ಹೇತು.** ಘಟಾದಿವತ್–**ದೃಷ್ಟಾಂತ.**

ಅನಿತ್ಯವಾದ ಯಥಾರ್ಥಜ್ಞಾನಗಳು, ಅಯಥಾರ್ಥಜ್ಞಾನದಲ್ಲಿ ಇಲ್ಲದಿರುವ ಒಂದು ಧರ್ಮದಿಂದ (ಪ್ರಮಾತ್ವದಿಂದ) ಅವಚ್ಛಿನ್ನವಾದ ಕಾರ್ಯತಾದಿಂದ ನಿರೂಪಿತವಾದ ಕಾರಣದಿಂದ ಹುಟ್ಟುತ್ತವೆ. ಏಕೆಂದರೆ, ಯಥಾರ್ಥಜ್ಞಾನವು ಅಯಥಾರ್ಥಜ್ಞಾನಕ್ಕಿಂತ ವಿಲಕ್ಷಣವಾದ ಕಾರ್ಯವಾಗಿದೆ. ಉದಾಹರಣೆಗೆ, ಘಟವು ಪಟಕ್ಕಿಂತ ವಿಲಕ್ಷಣವಾದ ಕಾರ್ಯವಾದುದರಿಂದ ಪಟದಲ್ಲಿ ಇಲ್ಲದಿರುವ ಘಟತ್ವಾವಚ್ಛಿನ್ನಕಾರ್ಯತಾನಿರೂಪಿತ ಕಪಾಲರೂಪವಾದ ಕಾರಣದಿಂದ ಅದು ಜನ್ಯವಾಗಿದೆ. ಘಟ ಪಟಗಳಂತೆ ಯಥಾರ್ಥ–ಅಯಥಾರ್ಥಜ್ಞಾನಗಳು ವಿಲಕ್ಷಣ ಕಾರ್ಯಗಳು. ಹೀಗಾಗಿ ಅಪ್ರಮಾದಲ್ಲಿ ಇಲ್ಲದಿರುವ ಪ್ರಮಾತ್ವಾವಚ್ಛಿನ್ನ–ಕಾರ್ಯತಾ ನಿರೂಪಿತವಾದ ಒಂದು ಕಾರಣ ಅಂದರೆ ಪ್ರಮಾಕ್ಕೆ ಮಾತ್ರ ಕಾರಣವಾದುದು ಒಂದು ಇರಬೇಕು. ಅದೇ ಗುಣ. ಅದರಿಂದ ಪ್ರಮಾ ಜನ್ಯವಾಗಿದೆ. ಇದು ಈ ಅನುಮಾನದ ಉದ್ದೇಶ.

ಆದರೆ, ಈ ಅನುಮಾನಕ್ಕೂ ಸಿದ್ಧಸಾಧನತಾ ದೋಷವಿದೆ–ಇಂದ್ರಿಯಸನ್ನಿಕರ್ಷತ್ವ ಎಂಬ ಧರ್ಮವೂ ಅಪ್ರಮಾವ್ಯಾವೃತ್ತವಾಗಿದೆ. ತದವಚ್ಛಿನ್ನವಾದ ಇಂದ್ರಿಯಸನ್ನಿಕರ್ಷವು ಇಂದ್ರಿಯದಿಂದ ಜನ್ಯವಾಗಿದೆ. ತದ್ಧರ್ಮಾವಚ್ಛಿನ್ನ ಕಾರ್ಯತಾ ನಿರೂಪಿತ ಕಾರಣ ಎಂದರೆ ಇಂದ್ರಿಯಗಳು. ತಜ್ಜನ್ಯವಾಗಿದೆ ಪ್ರತ್ಯಕ್ಷಪ್ರಮಾ. ಹೀಗೆ, ಗುಣವನ್ನು ಅಂಗೀಕರಿಸದೆಯೂ ಈ ಸಾಧ್ಯವನ್ನು ಪರ್ಯವಸಾನ ಮಾಡಬಹುದು.

## ನ್ಯಾಯದೀಪ

**ಇಂದ್ರಿಯಸಂಪ್ರಯೋಗಸ್ಯೇತಿ ॥ ಇಂದ್ರಿಯಸಂಪ್ರಯೋಗತ್ವಸ್ಯ ಅಪ್ರಮಾವ್ಯಾವೃತ್ತತ್ವೇನ ತದವಚ್ಛಿನ್ನಕಾರ್ಯತ್ವಂ, ತಸ್ಯೇತ್ಯರ್ಥಃ । ಇಂದ್ರಿಯಾದಿ ಸಂಪ್ರಯೋಗಸ್ಯ ಇತಿ ಧ್ಯೇಯಮ್ । ಅಗ್ರೇ ಇಂದ್ರಿಯಾದೀತಿ ಶ್ರವಣಾತ್ ।**

**ತಜ್ಜನ್ಯತ್ವೇನೇತಿ ॥ ಸಂಯೋಗತ್ವಾವಚ್ಛಿನ್ನಂ ಪ್ರತಿ ದ್ರವ್ಯತ್ವೇನ ಜನಕತ್ವಾತ್ ಇಂದ್ರಿಯಸ್ಯಾಪಿ ದ್ರವ್ಯತ್ವಾತ್ ಇತಿ ಭಾವಃ ।**

ಇಂದ್ರಿಯಸಂಯೋಗತ್ವವು ಅಪ್ರಮಾವ್ಯಾವೃತ್ತವಾದ ಒಂದು ಧರ್ಮ. ತದವಚ್ಛಿನ್ನಕಾರ್ಯತಾ, ಅಂತಹ ಕಾರ್ಯತಾಶ್ರಯ ಇಂದ್ರಿಯಸಂಯೋಗ.

ಇಲ್ಲಿ ಕೇವಲ ಇಂದ್ರಿಯಸಂಯೋಗ ಮಾತ್ರವಲ್ಲದೆ, ಅನುಮಾನ-ಸಂಪ್ರಯೋಗ, ಶಬ್ದಜ್ಞಾನಸಂಪ್ರಯೋಗಗಳ ಸಂಗ್ರಹಕ್ಕಾಗಿ ಇಂದ್ರಿಯಾದಿಸಂಪ್ರಯೋಗ ಎಂದು ಆದಿಪದವನ್ನು ಸೇರಿಸಬೇಕು. ಮುಂದೆ 'ಇಂದ್ರಿಯಾದಿ' ಎಂಬ ಮೂಲದಿಂದ ಇದು ತಿಳಿಯುತ್ತದೆ. ಅಲ್ಲಿ ಆದಿಪದವಿದೆ.

ಸಂಯೋಗಕ್ಕೆ ದ್ರವ್ಯವು ಕಾರಣ. ಇಂದ್ರಿಯಸಂಯೋಗಕ್ಕೂ ದ್ರವ್ಯವು ಕಾರಣವಾಗಬೇಕು. ಆ ದ್ರವ್ಯಗಳೇ ಇಂದ್ರಿಯಗಳು. ಹೀಗೆ 'ಇಂದ್ರಿಯಸಂಯೋಗತ್ವಾವಚ್ಛಿನ್ನಂ ಪ್ರತಿ ದ್ರವ್ಯಂ (ಇಂದ್ರಿಯಂ) ಕಾರಣಂ' ಎಂಬ ಕಾರ್ಯಕಾರಣಭಾವ ನೈಯಾಯಿಕರಿಗೂ ಅಭಿಮತವಾಗಿದೆ.

## ಮಣ್ಯುಕ್ತ ಪ್ರಥಮಾನುಮಾನ ನಿರಾಸ

## ನ್ಯಾಯದೀಪದಲ್ಲಿ ಅವತಾರಿಕೆ

**ಮಣಿಕೃತಾ ಸಿದ್ಧಾಂತಿತಾನುಮಾನಾನಿ ಅಪಿ ಅನೂದ್ಯ ನಿರಾಹ-ನಾಪಿ ಅನಿತ್ಯಪ್ರಮೇತ್ಯಾದಿನಾ ॥**

ಮಣಿಕಾರನು (ಪು.324) ಪರತಸ್ತ್ವವನ್ನು ಸಿದ್ಧಾಂತವನ್ನಾಗಿ ನಿರೂಪಿಸಲು ಹೇಳಿರುವ ಅನುಮಾನಗಳನ್ನೂ ಅನುವಾದಿಸಿ ಮುಂದೆ ನಿರಾಕರಿಸಲಾಗಿದೆ.

**नापि अनित्यप्रमा, अप्रमाकारणविजातीयकारणजन्या, अप्रमा-विजातीयकार्यत्वात् घटवत् । अन्यथा कार्यवैजात्यमाकस्मिकं स्यादिति युक्तम् । हेतौ विजातीयत्वं यदि विरुद्धजात्यधिकरणत्वं तदा**

**प्रमात्वस्याजातित्वेनासिद्धेः । यदितु विरुद्धधर्ममात्राधिकरणत्वं तदा पटज्ञानविजातीयकार्ये घटज्ञाने व्यभिचारः । अनुमित्यादि-साधारणघटज्ञानमात्रानुगतकारणाभावात् । पाकजरूपरसादौ कारणावैजात्येऽपि कार्यवैजात्यदर्शनाच्च ।**

**ಪಕ್ಷ**–ಅನಿತ್ಯ ಪ್ರಮಾ.

**ಸಾಧ್ಯ**–ಅಪ್ರಮಾಕಾರಣ–ವಿಜಾತೀಯ ಕಾರಣಜನ್ಯಾ.

**ಹೇತು**–ಅಪ್ರಮಾವಿಜಾತೀಯಕಾರ್ಯತ್ವಾತ್ । **ದೃಷ್ಟಾಂತ**–ಘಟವತ್।

ಅನಿತ್ಯವಾದ ಪ್ರಮಾಗಳು ಅಪ್ರಮಾತ್ಮಕಜ್ಞಾನಕ್ಕಿಂತ ವಿಲಕ್ಷಣವಾದ ಕಾರ್ಯವಾಗಿವೆ. ಆದ್ದರಿಂದ ಅಪ್ರಮಾಕ್ಕೆ ಕಾರಣಕ್ಕಿಂತ ವಿಲಕ್ಷಣವಾದ ಕಾರಣದಿಂದಲೇ ಅವುಗಳು ಹುಟ್ಟಿರಬೇಕು. ಕಾರಣವೈಚಿತ್ರ್ಯವಿಲ್ಲದೆಯೂ ಕಾರ್ಯದಲ್ಲಿ ವೈಚಿತ್ರ್ಯ ಬರುವುದಾದಲ್ಲಿ ಆ ಕಾರ್ಯವೈಚಿತ್ರ್ಯವು ಆಕಸ್ಮಿಕವಾದೀತು. ಅಂದರೆ ಯಾವುದೇ ನಿಯಾಮಕವಿಲ್ಲದೆ ಅದೃಷ್ಟವಶಾತ್ ಒಮ್ಮೊಮ್ಮೆ ಒಂದೊಂದು ವಿಧದ ಕಾರ್ಯವು ಹುಟ್ಟುತ್ತದೆ ಎನ್ನಬೇಕಾಗುತ್ತದೆ.

ಪ್ರಕೃತಾನುಮಾನಕ್ಕೆ ಉದಾಹರಣೆ ಘಟ. ಅದು ಪಟವಿಲಕ್ಷಣವಾದ ಕಾರ್ಯ. ಅದಕ್ಕೆ ಪಟಕ್ಕೆ ಕಾರಣವಾದ ತಂತುಗಳಿಗಿಂತ ವಿಲಕ್ಷಣವಾದ ಕಪಾಲಗಳು ಕಾರಣವಾಗಿದೆ. ಅದರಂತೆ ಪ್ರಮಾಕ್ಕೂ ವಿಲಕ್ಷಣವಾದ ಒಂದು ಕಾರಣವಿರಬೇಕು. ಅದೇ ಗುಣ.

ಈ ಅನುಮಾನವೂ ಸರಿಯಲ್ಲ. ಈ ಅನುಮಾನದ ಹೇತುವಿನ ಬಗ್ಗೆ ಈ ಎರಡು ಪ್ರಶ್ನೆಗಳು–

1. ಪ್ರಮಾವು ಅಪ್ರಮಾವಿಜಾತೀಯ ಎಂದರೆ ಅಪ್ರಮಾದಲ್ಲಿರುವ ಜಾತಿಗೆ ವಿರುದ್ಧವಾದ ಜಾತಿಯು ಪ್ರಮಾದಲ್ಲಿ ಇದೆ, ಎಂದು ಅರ್ಥವೋ?

2. ಅಥವಾ, ಅಪ್ರಮಾದಲ್ಲಿರುವ ಧರ್ಮಕ್ಕೆ ವಿರುದ್ಧವಾದ ಧರ್ಮವು ಪ್ರಮಾದಲ್ಲಿ ಇದೆ ಎಂದು ಅರ್ಥವೋ?

ಮೊದಲನೆಯ ಅಭಿಪ್ರಾಯ ಸರಿಯಲ್ಲ. ಅಪ್ರಮಾದಲ್ಲಿ ಅಪ್ರಮಾತ್ವ ಜಾತಿ, ಪ್ರಮಾದಲ್ಲಿ ಪ್ರಮಾತ್ವಜಾತಿ ಇದ್ದಿದ್ದರೆ ಇದು ಯುಕ್ತವಾಗುತ್ತಿತ್ತು. ಆದರೆ, ನೈಯಾಯಿಕರು ಆ ಎರಡು ಧರ್ಮಗಳನ್ನು ಜಾತಿ ಎಂದು ಒಪ್ಪಿಲ್ಲ. 'ಇದಂ ರಜತಂ' ಎಂಬ ಭ್ರಮೆಯ ಧರ್ಮಿ–ಅಂಶದಲ್ಲಿ ಪ್ರಮಾತ್ವ ಇದೆ, ಧರ್ಮಾಂಶದಲ್ಲಿ ಇಲ್ಲ. ಹೀಗೆ ಅವೆರಡೂ ಧರ್ಮಗಳು ಅವ್ಯಾಪ್ಯವೃತ್ತಿಯಾಗಿವೆ. ಜಾತಿಯು ಎಂದೂ ಅವ್ಯಾಪ್ಯವೃತ್ತಿಯಾಗಿರುವುದಿಲ್ಲ. ಆದ್ದರಿಂದ ಪ್ರಮಾತ್ವ–ಅಪ್ರಮಾತ್ವಗಳು ಜಾತಿಗಳಲ್ಲ.

ಎರಡನೆಯ ಅಭಿಪ್ರಾಯವೂ ಯುಕ್ತವಲ್ಲ. ಆಗ ಸಾಮಾನ್ಯವ್ಯಾಪ್ತಿಯ ಸ್ವರೂಪ ಹೀಗಾಗುತ್ತದೆ-ಯಾವುದರಲ್ಲಿ ಯಾವುದಕ್ಕೆ ವಿರುದ್ಧವಾದ ಧರ್ಮವಿರುವುದೋ ಅದು ಅದಕ್ಕಿಂತ ವಿಲಕ್ಷಣಕಾರಣಜನ್ಯ, ಎಂದು. ಈ ವ್ಯಾಪ್ತಿಗೆ ವ್ಯಭಿಚಾರ ಇದೆ. ಘಟಜ್ಞಾನದಲ್ಲಿ ಪಟಜ್ಞಾನದಲ್ಲಿ ಇಲ್ಲದ ಘಟಜ್ಞಾನತ್ವ ಎಂಬ ಧರ್ಮ ಇದೆ. ಆದರೆ, ಘಟಜ್ಞಾನಸಾಮಾನ್ಯಕ್ಕೆ ಒಂದು ನಿಯತವಾದ ಕಾರಣವೇ ಇಲ್ಲ. ಏಕೆಂದರೆ, ಘಟಜ್ಞಾನವು ಪ್ರತ್ಯಕ್ಷಾತ್ಮಕವಾಗಿರಬಹುದು, ಅನುಮಿತ್ಯಾತ್ಮಕ ವಾಗಿರಬಹುದು, ಶಾಬ್ದಬೋಧಾತ್ಮಕವೂ ಆಗಿರಬಹುದು. ಆದರೆ, ಇವೆಲ್ಲ ಘಟಜ್ಞಾನಗಳಿಗೂ ಅನುಗತವಾದ ಒಂದುಕಾರಣವೇ ಇಲ್ಲ. ಹೀಗೆ ಘಟಜ್ಞಾನದಲ್ಲಿ ವಿಲಕ್ಷಣ ಏಕ ಕಾರಣಜನ್ಯತ್ವವು ಬರುವುದಿಲ್ಲ.

ಅಷ್ಟೇ ಅಲ್ಲ; ಈ ಹೇತುವು ಅಪ್ರಯೋಜಕವೂ ಆಗಿದೆ. ಕಾರ್ಯವು ವಿಲಕ್ಷಣವಾದರೆ ಕಾರಣವೂ ವಿಲಕ್ಷಣವಾಗಿರಬೇಕು, ಎಂದು ಈ ಅನುಮಾನದ ಹಿಂದಿನ ಭಾವ. ಆದರೆ, ಈ ನಿಯಮವನ್ನು ತಾರ್ಕಿಕರೇ ಒಪ್ಪುವುದಿಲ್ಲ. ಒಂದೇ ಪಾಕದಿಂದ (ವಿಲಕ್ಷಣ ತೇಜಃಸಂಯೋಗ) ರೂಪ, ರಸ, ಗಂಧ, ಸ್ಪರ್ಶಗಳೆಂಬ ವಿಜಾತೀಯ ಕಾರ್ಯಗಳು ಪೃಥಿವಿಯಲ್ಲಿ ಹುಟ್ಟುತ್ತವೆ. ಅಲ್ಲಿ ಕಾರ್ಯ ವೈಜಾತ್ಯವಿದೆ, ಕಾರಣ ವೈಜಾತ್ಯವಿಲ್ಲ. ಆದ್ದರಿಂದ ಹೇತು ಅಪ್ರಯೋಜಕ.[1]

## ನ್ಯಾಯದೀಪ

**ತದುಕ್ತಮೇವ ಅನುಕೂಲತರ್ಕಮಾಹ-ಅನ್ಯಥೇತಿ ॥ ವಿಜಾತೀಯ ಕಾರಣ-ಅಜನ್ಯತ್ವೇ ಇತ್ಯರ್ಥಃ । ಅಜಾತಿತ್ವೇನೇತಿ ॥ ಇದಂ ರಜತಂ, ಇತ್ಯಾದೌ ಧರ್ಮ್ಯಂಶೇ ಸತ್ವೇಽಪಿ ಧರ್ಮಾಂಶೇ ಅಭಾವೇನ ಪ್ರಮಾತ್ವಸ್ಯ ಅವ್ಯಾಪ್ಯವೃತ್ತಿತ್ವಾತ್, ಜ್ಞಾನತ್ವಸಮನಿಯತತ್ವಾಚ್ಚ ಇತಿ ಭಾವಃ ।**

ಮೂಲದಲ್ಲಿ 'ಅನ್ಯಥಾ' ಎಂಬ ವಾಕ್ಯದಲ್ಲಿ ಮಣಿಗ್ರಂಥದಲ್ಲಿ ಹೇಳಿರುವ ಅನುಕೂಲ ತರ್ಕವನ್ನೇ ಹೇಳಲಾಗಿದೆ.

ಪ್ರಮಾತ್ವವು ಜಾತಿಯಲ್ಲ ಎನ್ನುವುದಕ್ಕೆ ಎರಡು ಕಾರಣಗಳು– 1. ಅದು 'ಇದಂ ರಜತಮ್' ಎಂಬ ಅಖಂಡವಾದ ಭ್ರಮೆಯ ಏಕದೇಶದಲ್ಲಿ ಇದೆ, ಏಕದೇಶಾಂತರದಲ್ಲಿ ಇಲ್ಲ. ಹೀಗೆ ಅವ್ಯಾಪ್ಯವೃತ್ತಿಯಾಗಿದೆ.

---

1. ಚತುರ್ದಶ ಲಕ್ಷಣೆಯಲ್ಲಿ 'ರೂಪಸಾಮಾನ್ಯಾಭಾವಾದೌ ಸಾಧ್ಯೇ' ಎಂಬ ದೀಧಿತಿಯನ್ನು ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಗದಾಧರೀ ವಾಕ್ಯ ಹೀಗಿದೆ– "ಏಕಜಾತೀಯಸ್ಯೈವ ಅಗ್ನಿಸಂಯೋಗಸ್ಯ ರೂಪರಸಗಂಧಸ್ಪರ್ಶನಾಶಕತಯಾ..." ಎಂದು. ಇಲ್ಲಿ ರೂಪಾದಿಚತುಷ್ಟಯಕ್ಕೆ ನಾಶಕವಾದ ತೇಜಃ ಸಂಯೋಗವು ಏಕ ಜಾತೀಯ ಎಂದುದರಿಂದ ಅವುಗಳಿಗೆ ಉತ್ಪಾದಕ ಸಂಯೋಗವೂ ಏಕಜಾತೀಯವೆಂದು ತಿಳಿಯುತ್ತದೆ.

2. ಪ್ರಮಾತ್ವವು ಜ್ಞಾನತ್ವಸಮನಿಯತವಾಗಿದೆ. ಆದ್ದರಿಂದ 'ತುಲ್ಯತ್ವಂ' ಎಂಬ ಜಾತಿಬಾಧಕವಿದೆ. ಜ್ಞಾನತ್ವವು ಪ್ರಮಾ–ಭ್ರಮೆ ಎರಡರಲ್ಲೂ ಇರುವಂತೆ ಪ್ರಮಾತ್ವವೂ ಎರಡರಲ್ಲೂ ಇದೆ. ಹಿಂದೆ ಹೇಳಿದಂತೆ ಭ್ರಮೆಯಲ್ಲೂ ಧರ್ಮ್ಯಂಶದಲ್ಲಿ ಪ್ರಮಾತ್ವ ಇದೆ. ಆದ್ದರಿಂದ ಅದು ಜಾತಿ ಅಲ್ಲ.

## ನ್ಯಾಯದೀಪ

**''ಘಟಜ್ಞಾನಜಾತೀಯಮಪಿ ಕಾರ್ಯಂ ತದ್ವಿಜಾತೀಯಕಾರ್ಯ–ಕಾರಣ–ವಿಜಾತೀಯ ಘಟೇಂದ್ರಿಯ ಸನ್ನಿಕರ್ಷಾದಿಜನ್ಯಮ್ ಇತಿ ನ ವ್ಯಭಿಚಾರಃ'' ಇತಿ ಮಣ್ಯುಕ್ತ(ಪು.323) ನಿರಾಸಾಯ ವ್ಯಭಿಚಾರಂ ವ್ಯನಕ್ತಿ–ಅನುಮಿತ್ಯಾದೀತಿ ॥ ಅಪ್ರಯೋಜಕತ್ವಂ ಚಾಹ–ಪಾಕಜೇತಿ ॥ ನಚ ತತ್ರಾಪಿ ತತ್ಪ್ರಾಗಭಾವ–ರೂಪಹೇತುವೈಜಾತ್ಯಮಸ್ತೀತಿ ವಾಚ್ಯಮ್ । ಭಾವರೂಪವಿಜಾತೀಯೇತಿ ಸಾಧ್ಯಾರ್ಥತ್ವಾತ್ । ಅನ್ಯಥಾ ಪ್ರಾಗಭಾವೇನೈವ ಸಿದ್ಧಸಾಧನತಾಪತ್ತೇಃ ಇತಿ ಭಾವಃ ।**

ಈ ಅನುಮಾನಕ್ಕೆ ಘಟಜ್ಞಾನದಲ್ಲಿ ಬರಬಹುದಾದ ವ್ಯಭಿಚಾರವನ್ನು ಮಣಿಗ್ರಂಥದಲ್ಲಿ ಹೀಗೆ ಪರಿಹರಿಸಲಾಗಿದೆ. ಘಟಜ್ಞಾನವು ಪಟಜ್ಞಾನವಿಜಾತೀಯವಾಗಿದೆ. ಅದರಂತೆ, ಪಟಜ್ಞಾನಕಾರಣ ವಿಲಕ್ಷಣವಾದ ಘಟೇಂದ್ರಿಯಸನ್ನಿಕರ್ಷದಿಂದ ಜನ್ಯವಾಗಿದೆ. ಹೀಗೆ ಸಾಧ್ಯ–ಸಾಧನಗಳೆರಡೂ ಇವೆಯಾದ್ದರಿಂದ ವ್ಯಭಿಚಾರವಿಲ್ಲ, ಎಂದು. ಆದರೆ, ಘಟಜ್ಞಾನದಲ್ಲಿ ವ್ಯಭಿಚಾರ ಪರಿಹಾರವಾಗುವುದಿಲ್ಲ. ಘಟಜ್ಞಾನವು ಅನುಮಿತ್ಯಾದ್ಯಾತ್ಮಕವೂ ಆಗಿದೆ. ಆದರೆ, ಅದಕ್ಕೆ ಘಟೇಂದ್ರಿಯಸನ್ನಿಕರ್ಷವು ಕಾರಣವಲ್ಲ. ಹೀಗೆ ಘಟಜ್ಞಾನಸಾಮಾನ್ಯಕ್ಕೆ ಅನುಗತವಾದ ಒಂದು ಕಾರಣವೇ ಇಲ್ಲ. ಆದ್ದರಿಂದ ವಿಲಕ್ಷಣ ಕಾರಣ ಜನ್ಯತ್ವರೂಪವಾದ ಸಾಧ್ಯ ಅದರಲ್ಲಿ ಇಲ್ಲ. ವ್ಯಭಿಚಾರ ಇದ್ದಿದ್ದೆ.

ಮೂಲದಲ್ಲಿ ಪಾಕಜರೂಪಾದಿಗಳಲ್ಲಿ ಕಾರ್ಯವೈಜಾತ್ಯವಿದ್ದರೂ ಕಾರಣ ಒಂದೇ ಎಂದು ಹೇಳಲಾಗಿದೆ. ಆದರೆ ಅಲ್ಲೂ ಕಾರಣವೈಚಿತ್ರ್ಯವಿದೆ. ರೂಪಕ್ಕೆ ರೂಪ ಪ್ರಾಗಭಾವ ಕಾರಣ, ರಸಕ್ಕೆ ರಸಪ್ರಾಗಭಾವ ಕಾರಣ. ಆದ್ದರಿಂದ ಅಪ್ರಯೋಜಕತ್ವ ಹೇಗೆ? ಎಂದರೆ, ಪ್ರಕೃತದಲ್ಲಿ ಕಾರಣ ವೈಜಾತ್ಯ ಎಂದರೆ ಭಾವರೂಪಕಾರಣವೈಜಾತ್ಯ. ಅಭಾವರೂಪಕಾರಣವೈಜಾತ್ಯವೂ ವಿವಕ್ಷಿತವಾದರೆ ಸಿದ್ಧಸಾಧನತಾ. ಪ್ರಮಾಕ್ಕೂ ಪ್ರಮಾಪ್ರಾಗಭಾವರೂಪ ಕಾರಣವೈಜಾತ್ಯ ಇದ್ದೇ ಇದೆ. ಆದ್ದರಿಂದ ಕಾರಣವು ಭಾವರೂಪವಾಗಿದ್ದು ವಿಜಾತೀಯವಾಗಿರಬೇಕು. ಅಂತಹ ಕಾರಣವೈಜಾತ್ಯ ಪಾಕಜಸ್ಥಳದಲ್ಲಿ ಇಲ್ಲ. ಆದ್ದರಿಂದ ಅಪ್ರಯೋಜಕತ್ವ ಇದ್ದೇ ಇದೆ.

## ಮಣ್ಯುಕ್ತ ದ್ವಿತೀಯಾನುಮಾನ ನಿರಾಸ

### ನ್ಯಾಯದೀಪದಲ್ಲಿ ಅವತಾರಿಕೆ–

**ಮಣ್ಯುಕ್ತಾನುಮಾನಾಂತರಮಾಶಂಕತೇ–ಸ್ಯಾದೇತದಿತಿ ॥**

ಮಣಿಗ್ರಂಥದಲ್ಲಿ ಹೇಳಿರುವ ಇನ್ನೊಂದು ಅನುಮಾನವನ್ನು ಹೇಳಿ ನಿರಾಕರಿಸುತ್ತಾರೆ.

**स्यादेतत् । अनित्यप्रमात्वं अनित्यज्ञानत्वावच्छिन्नकार्यत्वप्रतियोगिककारणताभिन्नकारणता–प्रतियोगिकार्यतावच्छेकम् । अनित्यज्ञानत्वव्याप्यकार्यतावच्छेदकधर्मत्वात् अप्रमात्ववत् ।**

**नच विशेष्यासिद्धिः । अनित्यप्रमात्वं कार्यतावच्छेदकम्; बाधकं विना कार्यमात्रवृत्तिधर्मत्वात् अप्रमात्ववदित्यनेन तत्सिद्धेः । नीलघटत्वादौ प्रत्येकानुगतप्रयोजकद्वयादेव नीलरूपघटत्वयोः सिद्ध्या समाजस्यार्थिकत्वं बाधकम् । जन्यघटज्ञानत्त्वादौ तु स्वावच्छिन्नकार्यत्वप्रतियोगिककारणासम्भवो बाधक इति न तत्र व्यभिचारः इति चेत् ।**

**ಪಕ್ಷ**–ಅನಿತ್ಯಪ್ರಮಾತ್ವಮ್

**ಸಾಧ್ಯ**–ಅನಿತ್ಯಜ್ಞಾನತ್ವಾವಚ್ಛಿನ್ನ ಕಾರ್ಯತಾ ನಿರೂಪಿತ ಕಾರಣತಾ ಭಿನ್ನ ಕಾರಣತಾ ನಿರೂಪಿತ ಕಾರ್ಯತಾವಚ್ಛೇದಕಮ್ ।

**ಹೇತು**–ಅನಿತ್ಯಜ್ಞಾನತ್ವವ್ಯಾಪ್ಯ–ಕಾರ್ಯತಾವಚ್ಛೇದಕ ಧರ್ಮತ್ವಾತ್ ।

**ದೃಷ್ಟಾಂತ**–ಅಪ್ರಮಾತ್ವವತ್ ।

ಈ ಅನುಮಾನದ ಅಭಿಪ್ರಾಯ ಹೀಗೆ– ಅನಿತ್ಯಜ್ಞಾನವು ಎರಡು ವಿಧ. ಅನಿತ್ಯ ಪ್ರಮಾ, ಭ್ರಮ. ಈ ಎರಡರಲ್ಲಿರುವ ಪ್ರಮಾತ್ವ–ಭ್ರಮತ್ವಗಳು ವ್ಯಾಪ್ಯಧರ್ಮಗಳು. ಅನಿತ್ಯಜ್ಞಾನತ್ವವು ವ್ಯಾಪಕಧರ್ಮ. ಆ ವ್ಯಾಪ್ಯ–ಧರ್ಮಗಳಲ್ಲಿ ಭ್ರಮತ್ವವು ಕಾರ್ಯತಾವಚ್ಛೇದಕವಾಗಿದೆ. ಭ್ರಮೆಗೆ ದೋಷವು ಕಾರಣವಾದ್ದರಿಂದ ದೋಷತ್ವಾವಚ್ಛಿನ್ನಕಾರಣತಾ–ನಿರೂಪಿತ–ಕಾರ್ಯತಾ ಭ್ರಮನಿಷ್ಠಾ. ತಾದೃಶಕಾರ್ಯತಾವಚ್ಛೇದಕವಾಗಿದೆ, ಅಪ್ರಮಾತ್ವ. ಆ ದೋಷನಿಷ್ಠ–ಕಾರಣತಾ ಜ್ಞಾನತ್ವಾವಚ್ಛಿನ್ನ ಕಾರ್ಯತಾ–ನಿರೂಪಿತ–ಕಾರಣತಾ ಭಿನ್ನವಾಗಿದೆ. ಏಕೆಂದರೆ, ದೋಷವು ಭ್ರಮೆಗೆ ಮಾತ್ರ ಕಾರಣ,

ಜ್ಞಾನಸಾಮಾನ್ಯಕ್ಕೆ ಕಾರಣವಲ್ಲ. ಅದರಂತೆ ಅನಿತ್ಯ–ಪ್ರಮಾತ್ವವೂ ಕೂಡಾ ಕಿಂಚಿದ್ಧರ್ಮಾವಚ್ಛಿನ್ನ–ಕಾರಣತಾ–ನಿರೂಪಿತ–ಕಾರ್ಯತಾವಚ್ಛೇದಕವಾಗಬೇಕು. ಇದರ ಅರ್ಥ ಅನಿತ್ಯಪ್ರಮಾಕ್ಕೆ ಮಾತ್ರ ಕಾರಣವಾದುದು ಒಂದು ಇರಬೇಕು. ಆದರೆ ಆ ಕಾರಣ–ಜ್ಞಾನಸಾಮಾನ್ಯಕ್ಕೆ ಕಾರಣವಾಗಿರಬಾರದು. ಈ ಅರ್ಥ, ಅನಿತ್ಯಜ್ಞಾನತ್ವಾವಚ್ಛಿನ್ನ–ಕಾರ್ಯತಾ–ನಿರೂಪಿತ ಕಾರಣತಾ ಭಿನ್ನ ಎಂಬ ವಿಶೇಷಣದಿಂದ ತಿಳಿಯುತ್ತದೆ. ಹೀಗೆ ಇಲ್ಲಿ ಎರಡು ನಿಬಂಧನೆಗಳಿವೆ–

1. ಅನಿತ್ಯ ಪ್ರಮಾಕ್ಕೆ ಒಂದು ಕಾರಣವಿದೆ.

2. ಆ ಕಾರಣವು ಜ್ಞಾನಸಾಮಾನ್ಯಕ್ಕೆ ಕಾರಣವಲ್ಲ.

ಈ ಎರಡು ನಿಬಂಧನೆಗೆ ಒಳಪಟ್ಟು ಸಾಧ್ಯವು ಸಿದ್ಧವಾಗಬೇಕಾದರೆ ಪ್ರಮಾವು ಗುಣಜನ್ಯ ಎಂದು ಹೇಳಲೇಬೇಕಾಗುತ್ತದೆ.

ಇಲ್ಲಿ ಹೇತು–ಅನಿತ್ಯಜ್ಞಾನತ್ವವ್ಯಾಪ್ಯ–ಕಾರ್ಯತಾವಚ್ಛೇದಕ ಧರ್ಮತ್ವಾತ್ ಎಂದು. ಹೇತು ಘಟಕವಾದ ಧರ್ಮಕ್ಕೆ ಎರಡು ವಿಶೇಷಣಗಳಿವೆ.

1. ಆ ಧರ್ಮವು ಅನಿತ್ಯಜ್ಞಾನತ್ವ ವ್ಯಾಪ್ಯವಾಗಿರಬೇಕು.

2. ಆ ಧರ್ಮವು ಕಾರ್ಯತಾವಚ್ಛೇದವಾಗಿರಬೇಕು.

ಮೊದಲನೆಯದರಲ್ಲಿ ವಿವಾದವಿಲ್ಲ. ಆದರೆ, ಎರಡನೆಯ ಅಂಶ ವಿವಾದಾಸ್ಪದ. ಸ್ವತಸ್ತ್ವವಾದಿಗಳು ಅನಿತ್ಯಪ್ರಮಾಕ್ಕೆ ಪ್ರತ್ಯೇಕವಾದ ಒಂದು ಕಾರಣವನ್ನು ಅಂಗೀಕರಿಸಿಲ್ಲ. ಆದ್ದರಿಂದ ಅನಿತ್ಯ–ಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ. ಹೀಗೆ ಈ ಅನುಮಾನದ ಹೇತುವಿನ ವಿಶೇಷ್ಯಭಾಗವು ಪಕ್ಷದಲ್ಲಿ ಇಲ್ಲವಾದ ಕಾರಣ ವಿಶೇಷ್ಯಾಸಿದ್ಧಿ. ಇದರ ಪರಿಹಾರಕ್ಕಾಗಿ ಇನ್ನೊಂದು ಅನುಮಾನವಿದೆ.

ಕಾರ್ಯವಸ್ತುಗಳಲ್ಲಿ ಮಾತ್ರ ಇರುವ ಧರ್ಮವು ಕಾರ್ಯತಾವಚ್ಛೇದಕವಾಗಲೇಬೇಕು. ಇದು ಒಂದು ನಿಯಮ. ಉದಾಹರಣೆಗೆ–ಘಟತ್ವ–ಪಟತ್ವ ಮುಂತಾದ ಧರ್ಮಗಳು. ಎಲ್ಲಾ ಘಟ–ಪಟಗಳೂ ಅನಿತ್ಯಗಳು. ಅವುಗಳಲ್ಲಿ ಇರುವ ಘಟತ್ವಾದಿಗಳು ಕಾರ್ಯಮಾತ್ರ ವೃತ್ತಿಧರ್ಮಗಳು. ಆದ್ದರಿಂದ ಅವುಗಳು ಕಾರ್ಯತಾವಚ್ಛೇದಕಗಳಾಗಿವೆ. ಘಟತ್ವಾವಚ್ಛಿನ್ನಕ್ಕೆ ಕಪಾಲತ್ವಾವಚ್ಛಿನ್ನವು ಕಾರಣ. ಇಲ್ಲಿ ಕಾರ್ಯತಾವಚ್ಛೇದಕ ಘಟತ್ವ. ಆದರೆ, ದ್ರವ್ಯತ್ವವು ಕಾರ್ಯಾಕಾರ್ಯ ವೃತ್ತಿಧರ್ಮ. ಅದು ಅನಿತ್ಯವಾದ ಘಟಾದಿಗಳಲ್ಲೂ ಇದೆ, ನಿತ್ಯವಾದ ಆಕಾಶಾದಿಗಳಲ್ಲೂ ಇದೆ. ಅದು ಕಾರ್ಯತಾವಚ್ಛೇದಕವಾಗಬೇಕೆಂಬ ನಿಬಂಧನೆ ಇಲ್ಲ. ಪ್ರಕೃತ ಅನಿತ್ಯಪ್ರಮಾತ್ವವು ಕಾರ್ಯ ಮಾತ್ರ ವೃತ್ತಿಧರ್ಮವಾಗಿದೆ. ಅದು ಕಾರ್ಯತಾವಚ್ಛೇದಕವಾಗಿರಲೇಬೇಕು. ಆದ್ದರಿಂದ ವಿಶೇಷ್ಯಾಸಿದ್ಧಿ ದೋಷವಿಲ್ಲ.

ಇಲ್ಲಿ ಇನ್ನೊಂದು ವಿಚಾರ್ಯಾಂಶವಿದೆ–ವ್ಯಾಪ್ಯಧರ್ಮಗಳು ವ್ಯಾಪಕಧರ್ಮಾವಚ್ಛಿನ್ನಕ್ಕೆ ಯಾವುದು ಕಾರಣವೋ ತದ್ಭಿನ್ನ ಕಾರಣತಾ ನಿರೂಪಿತ–ಕಾರ್ಯತಾವಚ್ಛೇದಕವಾಗಿರಬೇಕು, ಎಂದು ಪ್ರಧಾನಾನುಮಾನದ ಆಶಯ. ಆದರೆ, ಇದು ಸರಿಯಲ್ಲ, ಘಟತ್ವವು ವ್ಯಾಪಕಧರ್ಮ. ನೀಲಘಟತ್ವವು ವ್ಯಾಪ್ಯಧರ್ಮ. ಆದರೆ ನೀಲಘಟತ್ವವು ಕಾರ್ಯತಾವಚ್ಛೇದಕವಲ್ಲ, ನೀಲ ಘಟಕ್ಕೆ ಪ್ರತ್ಯೇಕವಾದ ಒಂದು ಕಾರಣವಿಲ್ಲ, ನೀಲಘಟವೆಂದರೆ ನೀಲರೂಪವಿರುವ ಘಟ. ಅವುಗಳಲ್ಲಿ ಘಟಕ್ಕೆ ಕಾರಣವು ಕ್ಲೃಪ್ತವಾಗಿದೆ, ನೀಲರೂಪಕ್ಕೂ ಕಾರಣವು ಕ್ಲೃಪ್ತವಾಗಿದೆ. ಇವೆರಡೂ ಸೇರಿದಾಗ ನೀಲಘಟವು ಹುಟ್ಟುತ್ತದೆ. ನೀಲಘಟಕ್ಕೆ ಪ್ರತ್ಯೇಕವಾದ ಒಂದು ಕಾರಣದ ಆಗತ್ಯವಿಲ್ಲ. ಇದನ್ನೇ ಅರ್ಥಸಮಾಜ ಗ್ರಸ್ತತ್ವ ಎಂಬ ದೋಷವೆಂದು ನೈಯಾಯಿಕರು ಹೇಳುತ್ತಾರೆ. ಘಟತ್ವಾವಚ್ಛಿನ್ನ ಕಾರ್ಯತಾ ಒಂದಿದೆ. ತಾದೃಶಕಾರ್ಯತಾಶ್ರಯದಲ್ಲಿ ಘಟತ್ವ ಇದೆ. ನೀಲತ್ವಾವಚ್ಛಿನ್ನಕಾರ್ಯತಾ ಇನ್ನೊಂದಿದೆ. ತಾದೃಶಕಾರ್ಯತಾಶ್ರಯದಲ್ಲಿ ನೀಲತ್ವ ಇದೆ. ಹೀಗೆ ಪ್ರತ್ಯೇಕಕಾರ್ಯತಾಶ್ರಯ ವೃತ್ತಿಯಾದ ಎರಡು ಧರ್ಮಗಳು ಸೇರಿ ಮತ್ತೊಂದು, ವಿಭಿನ್ನವಾದ ಕಾರ್ಯತಾವಚ್ಛೇದಕ ವಾಗುವುದಿಲ್ಲ. ಹೀಗೆ ಇಲ್ಲಿ ಬಾಧಕವಿರುವ ಕಾರಣದಿಂದಾಗಿ ನೀಲಘಟತ್ವವು ವ್ಯಾಪ್ಯಧರ್ಮ ವಾದರೂ ಕಾರ್ಯತಾವಚ್ಛೇದಕವಾಗುವುದಿಲ್ಲ.

ಇದರಂತೆ, ಜನ್ಯಜ್ಞಾನತ್ವಕ್ಕೆ ವ್ಯಾಪ್ಯವಾದ ಧರ್ಮಗಳು–ಜನ್ಯಘಟ–ಜ್ಞಾನತ್ವಾದಿಗಳು. ಅವು ಗಳೂ ಕಾರ್ಯತಾವಚ್ಛೇದಕಗಳಲ್ಲ. ಏಕೆಂದರೆ, ಜನ್ಯಘಟಜ್ಞಾನ ಅನುಮಿತ್ಯಾತ್ಮಕ–ಶಾಬ್ದ– ಪ್ರತ್ಯಕ್ಷಾತ್ಮಕವಾಗಿರಬಹುದು. ಆದರೆ, ಅವೆಲ್ಲಕ್ಕೆ ಅನುಗತವಾದ ಒಂದು ಕಾರಣ ಇಲ್ಲ. ಹೀಗಾಗಿ ಬಾಧಕ ಇರುವುದರಿಂದ ಅದೂ ವಿಲಕ್ಷಣಕಾರಣತಾ ನಿರೂಪಿತಕಾರ್ಯತಾವಚ್ಛೇದಕವಾಗುವುದಿಲ್ಲ. ಆದರೆ, ಪ್ರಕೃತಪ್ರಮಾತ್ವವು ಕಾರ್ಯತಾವಚ್ಛೇದಕವಾಗಲು ಇಂತಹ ಬಾಧಕಗಳು ಇಲ್ಲ. ಆದ್ದರಿಂದ ಅನಿತ್ಯಪ್ರಮಾಕ್ಕೆ ಮೀಸಲಾದ ಒಂದು ಕಾರಣವಿರಬೇಕು. ಅದೇ ಗುಣ.

## ನ್ಯಾಯದೀಪ

**ಪ್ರಮಾತ್ವಸ್ಯ ನಿತ್ಯವೃತ್ತಿತಯಾ ಕಾರ್ಯತಾನವಚ್ಛೇದಕತ್ವಾತ್ ಅನಿತ್ಯಪ್ರಮಾತ್ವ- ಮಿತ್ಯುಕ್ತಿಃ । ಏವಂ ಸಾಧ್ಯೇಽಪಿ ಜ್ಞೇಯಮ್ ।**

**ಅನಿತ್ಯಜ್ಞಾನತ್ವಾವಚ್ಛಿನ್ನಂ ಯತ್ ಕಾರ್ಯತ್ವಂ ತತ್ ಪ್ರತಿಯೋಗಿಕಾ=ತನ್ನಿರೂಪಿತಾ ಕಾರಣತಾ ಆತ್ಮಮನೋಯೋಗಾದಿನಿಷ್ಠಾ, ತದ್ಭಿನ್ನಾ ಯಾ ಕಾರಣತಾ ಗುಣ–ದೋಷನಿಷ್ಠಾ । ತತ್ಪ್ರತಿಯೋಗಿಕಾರ್ಯತಾವಚ್ಛೇದಕಮ್ ಇತ್ಯುಕ್ತೌ ಪಕ್ಷೇ ಗುಣಜನ್ಯತಾವಚ್ಛೇದಕತ್ವೇನ, ದೃಷ್ಟಾಂತೇ ದೋಷಜನ್ಯತಾವಚ್ಛೇದಕತ್ವೇನ ಸಾಧ್ಯಸಿದ್ಧಿಃ । ಅನ್ಯಥಾ ಬಾಧಾತ್ ಇತಿ ಭಾವಃ ॥**

ಪ್ರಮಾತ್ವವು ನಿತ್ಯವಾದ ಈಶಪ್ರಮಾದಲ್ಲಿ ಅತಿಪ್ರಸಕ್ತವಾದುದರಿಂದ ಕಾರ್ಯತಾವಚ್ಛೇದಕ ವಾಗುವುದಿಲ್ಲ. ಅದಕ್ಕಾಗಿ ಅನಿತ್ಯಪ್ರಮಾತ್ವವನ್ನು ಪಕ್ಷವನ್ನಾಗಿ ಮಾಡಲಾಗಿದೆ. ಇದರಂತೆ ಸಾಧ್ಯದಲ್ಲೂ 'ಅನಿತ್ಯಜ್ಞಾನತ್ವ' ಎಂಬಲ್ಲಿ ಅನಿತ್ಯಪದದ ಸಾರ್ಥಕ್ಯವನ್ನು ತಿಳಿಯಬೇಕು.

ಸಾಧ್ಯದ ಸಮನ್ವಯ ಹೀಗೆ–ಅನಿತ್ಯಜ್ಞಾನತ್ವಾವಚ್ಛಿನ್ನವಾದ ಯಾವ ಕಾರ್ಯತಾ ಇದೆಯೋ ತನ್ನಿರೂಪಿತ ಕಾರಣತಾ ಆತ್ಮಮನಃಸಂಯೋಗದಲ್ಲಿದೆ. ಅನಿತ್ಯಜ್ಞಾನತ್ವಾವಚ್ಛಿನ್ನಂ ಪ್ರತಿ ಆತ್ಮಮನಃ ಸಂಯೋಗವು ಕಾರಣ. ತಾದೃಶಕಾರಣತಾಭಿನ್ನಕಾರಣತಾ ಎಂದರೆ ಗುಣನಿಷ್ಠಕಾರಣತಾ, ದೋಷನಿಷ್ಠಕಾರಣತಾ, ಪ್ರಮಾಕ್ಕೆ ಗುಣವು ಕಾರಣ, ಅಪ್ರಮಾಕ್ಕೆ ದೋಷವು ಕಾರಣ. ಗುಣನಿಷ್ಠ ಕಾರಣತಾ ನಿರೂಪಿತ ಕಾರ್ಯತಾವಚ್ಛೇಕ ಅನಿತ್ಯಪ್ರಮಾತ್ವ(ಪಕ್ಷ). ದೋಷನಿಷ್ಠಕಾರಣತಾನಿರೂಪಿತ ಕಾರ್ಯತಾವಚ್ಛೇದಕ ಅಪ್ರಮಾತ್ವ. ಹೀಗೆ, ಪಕ್ಷದಲ್ಲಿ ಗುಣಜನ್ಯತ್ವ ಪ್ರಯುಕ್ತ ಸಾಧ್ಯಪರ್ಯವಸಾನ, ದೃಷ್ಟಾಂತದಲ್ಲಿ ದೋಷಜನ್ಯತ್ವ ಪ್ರಯುಕ್ತ ಸಾಧ್ಯಪರ್ಯವಸಾನ. ಅನಿತ್ಯಪ್ರಮಾವು ಗುಣಜನ್ಯ ಎಂದು ಹೇಳದ ಹೊರತು ಪಕ್ಷದಲ್ಲಿ ಸಾಧ್ಯವು ಬರಲು ಸಾಧ್ಯವಿಲ್ಲ. ಹೀಗೆ ಪ್ರಾಮಾಣ್ಯದ ಉತ್ಪತ್ತಿಯು ಪರತಃ ಎಂದು ಸಿದ್ಧವಾಗುತ್ತದೆ.

## ನ್ಯಾಯದೀಪ

**ಹೇತೌ ಅನಿತ್ಯಜ್ಞಾನತ್ವೇ ವ್ಯಭಿಚಾರನಿರಾಸಾಯ ವ್ಯಾಪ್ಯಾಂತಂ ಧರ್ಮವಿಶೇಷಣಮ್ । ಅಭೇದೇಽಪಿ ವ್ಯಾಪ್ಯತ್ವಮ್, ಇತಿ ಪಕ್ಷೇ ತು ನ್ಯೂನವೃತ್ತಿತ್ವಂ ವ್ಯಾಪ್ಯತ್ವಂ ಬೋಧ್ಯಮ್ । ಘಟಾದಿಜ್ಞಾನತ್ವಾದೌ[1] ತದ್ವಾರಣಾಯ ವಿಶೇಷ್ಯಮ್ ।**

ಅನಿತ್ಯಜ್ಞಾನತ್ವವ್ಯಾಪ್ಯ–ಕಾರ್ಯತಾವಚ್ಛೇದಕಧರ್ಮತ್ವಾತ್ ಎಂದು ಹೇತು. ಕಾರ್ಯತಾ ವಚ್ಛೇದಕಧರ್ಮತ್ವಾತ್ ಎಂದಿಷ್ಟೇ ಹೇಳಿದರೆ ಅನಿತ್ಯಜ್ಞಾನತ್ವವೂ ಕಾರ್ಯತಾವಚ್ಛೇದಕವಾದುದ ರಿಂದ ಅದರಲ್ಲಿ ವ್ಯಭಿಚಾರ ಬರುತ್ತದೆ. ಅದು ಸಾಮಾನ್ಯಧರ್ಮಾವಚ್ಛಿನ್ನಕಾರ್ಯತಾ–ನಿರೂಪಿತ ಕಾರಣತಾಭಿನ್ನ–ಕಾರಣತಾ–ನಿರೂಪಿತ ಕಾರ್ಯತಾವಚ್ಛೇಕವಲ್ಲ, ಅದರಲ್ಲಿ ಸಾಧ್ಯ ಇಲ್ಲ. ಹೀಗೆ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಅನಿತ್ಯಜ್ಞಾನತ್ವವ್ಯಾಪ್ಯ, ಎಂಬ ವಿಶೇಷಣವನ್ನು ಧರ್ಮಕ್ಕೆ ಕೊಡಲಾಗಿದೆ. ಅನಿತ್ಯಜ್ಞಾನತ್ವವು ತನಗೆ ತಾನೇ ವ್ಯಾಪ್ಯವಲ್ಲ. ಆದ್ದರಿಂದ ಅದರಲ್ಲಿ ಹೇತು ಬರುವುದಿಲ್ಲ.

---

1. ನ್ಯಾಯದೀಪದಲ್ಲಿ 'ಘಟನಿತ್ಯಜ್ಞಾನತ್ವಾದೌ' ಎಂದು ಪಾಠ ಇದೆ. ಆದರೆ ನಿತ್ಯಜ್ಞಾನತ್ವವು ಅನಿತ್ಯಜ್ಞಾನತ್ವ ವ್ಯಾಪ್ಯವಲ್ಲವಾದ ಕಾರಣ ಅದನ್ನು ತೆಗೆದುಕೊಂಡು ವ್ಯಭಿಚಾರ ಹೇಳಲು ಆಗುವುದಿಲ್ಲ. ಅದಕ್ಕಾಗಿ 'ಘಟಾದಿಜ್ಞಾನತ್ವಾದೌ' ಎಂಬ ಪಾಠಾಂತರವನ್ನು ಅನುಸರಿಸಲಾಗಿದೆ. ಘಟಜ್ಞಾನತ್ವವು ಕಾರ್ಯತಾವಚ್ಛೇದಕವಲ್ಲ ಎಂದು ನ್ಯಾಯದೀಪದಲ್ಲೇ ಇದೆ.

ತದಭಾವವದವೃತ್ತಿತ್ವರೂಪ ವ್ಯಾಪ್ತಿಯು ಅಭೇದವಿದ್ದರೂ ಬರಬಹುದು. ಇದರಿಂದ ಅನಿತ್ಯಜ್ಞಾನತ್ವವು ತನಗೆ ತಾನೇ ವ್ಯಾಪ್ಯವಾಗುತ್ತದೆ. ಮತ್ತೆ ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ವ್ಯಾಪ್ಯತ್ವವೆಂದರೆ ನ್ಯೂನವೃತ್ತಿತ್ವ. ಅನಿತ್ಯಜ್ಞಾನತ್ವಕ್ಕೆ ನ್ಯೂನವೃತ್ತಿಯಾಗಿದೆ, ಅನಿತ್ಯಪ್ರಮಾತ್ವ ತನಗೆ ತಾನೇ ನ್ಯೂನವೃತ್ತಿಯಲ್ಲ. ಆದ್ದರಿಂದ ಅನಿತ್ಯಜ್ಞಾನತ್ವದಲ್ಲಿ ವ್ಯಭಿಚಾರವಿಲ್ಲ.

ಅನಿತ್ಯಜ್ಞಾನತ್ವವ್ಯಾಪ್ಯಧರ್ಮತ್ವಾತ್ ಎಂದಿಷ್ಟೇ ಹೇಳಿದರೆ ಘಟಜ್ಞಾನತ್ವಧರ್ಮದಲ್ಲಿ ವ್ಯಭಿಚಾರ. ಅದೂ ಅನಿತ್ಯಜ್ಞಾನತ್ವ ವ್ಯಾಪ್ಯಧರ್ಮವಾಗಿದೆ. ಆದರೆ, ಕಿಂಚಿನ್ನಿಷ್ಠ ಕಾರಣತಾನಿರೂಪಿತ ಕಾರ್ಯತಾವಚ್ಛೇದಕ ಅದು ಆಗಿಲ್ಲ. ಅದು ಅನುಮಿತ್ಯಾದಿಸಕಲಘಟಜ್ಞಾನಗಳಲ್ಲೂ ಇರುವುದರಿಂದ ಕಾರ್ಯತಾವಚ್ಛೇದಕವೇ ಅಲ್ಲ. ಸಾಧ್ಯವು ಅದರಲ್ಲಿ ಇಲ್ಲ. ವ್ಯಭಿಚಾರ. ಅದರ ಪರಿಹಾರಕ್ಕಾಗಿ ಕಾರ್ಯತಾವಚ್ಛೇದಕ ಎಂಬ ವಿಶೇಷಣವನ್ನು ಧರ್ಮಕ್ಕೆ ಕೊಡಲಾಗಿದೆ.

## ನ್ಯಾಯದೀಪ

**ಬಾಧಕಂ ವಿನೇತಿ ॥ ಅವಚ್ಛೇದಕಾಂತರೋಪಪನ್ನ ಕಾರ್ಯತಾಶ್ರಯವೃತ್ತಿತ್ವಂ ವಾ, ಸ್ವಾವಚ್ಛಿನ್ನಕಾರ್ಯತಾಪ್ರತಿಯೋಗಿಕ ಕಾರಣಾಸಂಭವೋ ವಾ, ಏಕವ್ಯಕ್ತಿಕತ್ವಂ ವಾ, ಗೌರವಂ ವಾ ಇತ್ಯಾದಿ ಯತ್ ಕಾರ್ಯತಾವಚ್ಛೇದಕತ್ವೇ ಬಾಧಕಂ ತದ್ವಿನಾ ಇತ್ಯರ್ಥಃ। ಅಪ್ರಮಾತ್ವವದಿತಿ ॥ ತತ್ರ ಬಾಧಕ–ಚತುಷ್ಟಯಸ್ಯಾಪಿ ಅಭಾವಾತ್ ಹೇತು–ಸಾಧ್ಯೇ ವ್ಯಕ್ತೇ ಇತಿ ಭಾವಃ।**

ಒಂದು ಧರ್ಮವು ಕಾರ್ಯತಾವಚ್ಛೇದಕ ಎನ್ನಲು ನಾಲ್ಕು ದೋಷಗಳಿವೆ– 1.ಬೇರೊಂದು ಅವಚ್ಛೇದಕದಿಂದಾಗಿಯೇ ಕಾರ್ಯತಾವು ಉಪಪನ್ನವಾಗಿರುವಾಗ ತಾದೃಶಕಾರ್ಯತಾಶ್ರಯ ವೃತ್ತಿಯಾದುದು ಕಾರ್ಯತಾವಚ್ಛೇದಕವಲ್ಲ. ಉದಾಹರಣೆಗೆ–ಘಟದಲ್ಲಿ ಘಟತ್ವ ಇದೆ, ನೀಲರೂಪದಲ್ಲಿ ನೀಲತ್ವ ಇದೆ. ಆವೆರಡೂ ಕಾರ್ಯತಾವಚ್ಛೇದಕಗಳೆಂದು ಕ್ಲೃಪ್ತವಾಗಿವೆ. ಆದರಿಂದಾಗಿಯೆ, ನೀಲಘಟದಲ್ಲಿರುವ ಕಾರ್ಯತಾವು ಉಪಪನ್ನವಾಗಿರುವಾಗ ನೀಲಘಟತ್ವವು ಕಾರ್ಯತಾವಚ್ಛೇದಕವಲ್ಲ.

2. ತದ್ಧರ್ಮಾವಚ್ಛಿನ್ನ ಕಾರ್ಯತಾ–ನಿರೂಪಿತ–ಕಾರಣತಾಶ್ರಯವೇ ಇಲ್ಲದಿದ್ದಾಗ ಆ ಧರ್ಮವು ಕಾರ್ಯತಾವಚ್ಛೇದಕವಲ್ಲ. ಉದಾಹರಣೆಗೆ–ಘಟಜ್ಞಾನತ್ವಾವಚ್ಛಿನ್ನ ಕಾರ್ಯತಾನಿರೂಪಿತ ಕಾರಣವೇ ಇಲ್ಲ. ಘಟಪ್ರತ್ಯಕ್ಷಕ್ಕೆ ಕಾರಣ ಇದೆ, ಘಟಾನುಮಿತಿಗೆ ಕಾರಣವಿದೆ, ಘಟಶಾಬ್ದಕ್ಕೆ ಕಾರಣವಿದೆ. ಈ ಮೂರರಲ್ಲಿ ಅನುಗತವಾದ ಘಟಜ್ಞಾನತ್ವ ಎಂಬ ಧರ್ಮಾವಚ್ಛಿನ್ನಕ್ಕೆ ಕಾರಣವೇ ಇಲ್ಲ. ಆದ್ದರಿಂದ ಘಟಜ್ಞಾನತ್ವವು ಕಾರ್ಯತಾವಚ್ಛೇದಕವಲ್ಲ.

3. ಲಘುಧರ್ಮವಿರುವಾಗ ಗುರುಧರ್ಮವು ಕಾರ್ಯತಾವಚ್ಛೇದಕವಾಗುವುದಿಲ್ಲ.

ಉದಾಹರಣೆಗೆ-ಘಟನಿಷ್ಠಕಾರ್ಯತಾವಚ್ಛೇದಕ ಘಟತ್ವ, ಕಂಬುಗ್ರೀವಾದಿಮತ್ವವು ಗುರುಧರ್ಮವಾದುದರಿಂದ ಅವಚ್ಛೇದಕವಲ್ಲ.

4. ಏಕವ್ಯಕ್ತಿತ್ವ ಅಂದರೆ ಒಂದೇ ಧರ್ಮಿಯಲ್ಲಿರುವ ಧರ್ಮ. ಅದೂ ಕಾರ್ಯತಾವಚ್ಛೇದಕವಲ್ಲ. ಉದಾಹರಣೆಗೆ-ತದ್ವ್ಯಕ್ತಿತ್ವ. ಅದು ಏಕಮಾತ್ರವೃತ್ತಿಧರ್ಮ. ಅದನ್ನು ಕಾರ್ಯತಾವಚ್ಛೇದಕ ಎಂದು ಹೇಳುವ ಅಗತ್ಯವಿಲ್ಲ.

ಅಪ್ರಮಾತ್ವವು ಕಾರ್ಯತಾವಚ್ಛೇದಕ ಎಂದು ಹೇಳಲು ಈ ನಾಲ್ಕು ಬಾಧಕಗಳೂ ಇಲ್ಲ. ಆದ್ದರಿಂದ ಅದರಲ್ಲಿ ಹೇತುವೂ ಇದೆ, ಸಾಧ್ಯವೂ ಇದೆ. ಆದ್ದರಿಂದ ಅದು ದೃಷ್ಟಾಂತವಾಗುತ್ತದೆ.

## ನ್ಯಾಯದೀಪ

**ಹೇತೌ ವಿಶೇಷಣಕೃತ್ಯಂ ಮಣ್ಯುಕ್ತಮೇವ ದೂಷಣಸೌಕರ್ಯಾಯಾಹ-ನೀಲೇತಿ ॥ ಪ್ರಯೋಜಕದ್ವಯಾದಿತಿ ॥ ಘಟತ್ವಪ್ರಯೋಜಕಾತ್, ನೀಲತ್ವ ಪ್ರಯೋಜಕಾಚ್ಚ ಇತ್ಯರ್ಥಃ। ಸಮಾಜಸ್ಯ=ಘಟತ್ವ-ನೀಲತ್ವಯೋಃ ಮೇಲನಸ್ಯ ಇತ್ಯರ್ಥಃ। ಆರ್ಥಿಕತ್ವಮಿತಿ ॥ ಘಟತ್ವ-ನೀಲತ್ವರೂಪಾವಚ್ಛೇದಕಾಂತ-ರೋಪಪನ್ನಕಾರ್ಯತಾಶ್ರಯವೃತ್ತಿತ್ವಮ್, ಇತ್ಯರ್ಥಃ। ಸ್ವೇತಿ ॥ ಸ್ವಾವಚ್ಛಿನ್ನಂ ಯತ್ ಕಾರ್ಯತ್ವಂ ತನ್ನಿರೂಪಿತಾನುಗತೈಕಕಾರಣಾಸಂಭವ ಇತ್ಯರ್ಥಃ ॥**

ಈ ಅನುಮಾನವನ್ನು ನಿರಾಕರಿಸಲು ಸೌಕರ್ಯವಾಗುತ್ತದೆ, ಎನ್ನುವ ಕಾರಣಕ್ಕಾಗಿ ಹೇತುಘಟಕ ವಿಶೇಷಣಗಳಿಗೆ ಮಣಿಗ್ರಂಥದಲ್ಲಿ ಹೇಳಿರುವ ಕೃತ್ಯವನ್ನೇ 'ನೀಲಘಟತ್ವಾದೌ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಈ ವಾಕ್ಯದಲ್ಲಿ ಪ್ರಯೋಜಕದ್ವಯಾತ್ ಎಂದರೆ ಘಟತ್ವ ಘಟದಲ್ಲಿರಲು ಪ್ರಯೋಜಕವಾದುದು (ಕಪಾಲಾದಿಗಳು) ಹಾಗೂ ರೂಪದಲ್ಲಿ ನೀಲತ್ವವು ಬರಲು ಪ್ರಯೋಜಕವಾದುದು (ಅವಯವರೂಪ) ಎಂದರ್ಥ. ಸಮಾಜ ಎಂದರೆ ಘಟತ್ವ ನೀಲತ್ವಗಳ ಮೇಲನ. ಅಂದರೆ ನೀಲಘಟತ್ವ, ಇದು ಕಾರ್ಯತಾವಚ್ಛೇದಕವಲ್ಲ. ಆರ್ಥಿಕತ್ವಂ ಎಂದರೆ, ನೀಲಘಟತ್ವ ಧರ್ಮವು ಘಟತ್ವ ಮತ್ತು ನೀಲತ್ವ ಎಂಬ ಪ್ರತ್ಯೇಕ ಎರಡು ಧರ್ಮಗಳಿಂದ ಅವಚ್ಛಿನ್ನವಾದ ಕಾರ್ಯತಾಶ್ರಯವಾದ ಘಟದಲ್ಲಿ ವೃತ್ತಿಯಾಗಿದೆ ಎಂದರ್ಥ. ಮೂಲದಲ್ಲಿ ಸ್ವಾವಚ್ಛಿನ್ನ ಇತ್ಯಾದಿ ವಾಕ್ಯದ ಅರ್ಥ-ಸ್ವಂ=ಘಟಜ್ಞಾನತ್ವಂ, ತದವಚ್ಛಿನ್ನಕಾರ್ಯತಾ ನಿರೂಪಿತವಾದ ಒಂದು ಅನುಗತಕಾರಣ ಇಲ್ಲ, ಎಂದು. ಘಟಪ್ರತ್ಯಕ್ಷಾದಿಗಳಿಗೆ ಒಂದು ಪ್ರತ್ಯೇಕವಾದ ಕಾರಣಗಳಿವೆ. ಘಟಜ್ಞಾನಕ್ಕೆ ಅನುಗತವಾದ ಒಂದು ಕಾರಣ ಇಲ್ಲ.

**मैवम् । घटज्ञान इव वक्ष्यमाणरीत्याऽनित्यप्रमामात्रेऽपि अनुगत-गुणाभावेन अनुमानद्वयेऽपि बाधात् । द्वितीये विशेषणासिद्धेश्च ।**

**बाधकराहित्यस्यैव हेतुत्वसम्भवे व्यर्थविशेष्यत्वाच्च । साधकाभावेन सत्प्रतिपक्षत्वाच्च । अप्रमामात्रानुगतदोषाभावेन दृष्टान्तस्य साध्यसाधनवैकल्याच्च ॥**

ಇಲ್ಲಿ ಒಂದಕ್ಕೆ ಪೂರಕವಾಗಿ ಇನ್ನೊಂದು ಅನುಮಾನವನ್ನು ಹೇಳಲಾಗಿದೆ. ಈ ಎರಡೂ ಅನುಮಾನಗಳಿಗೂ ಬಾಧದೋಷವಿದೆ. ಹೇಗೆ ಘಟಜ್ಞಾನಸಾಮಾನ್ಯಕ್ಕೆ ಅನುಗತವಾದ ಒಂದು ಕಾರಣವು ಇಲ್ಲವೋ ಅದರಂತೆಯೇ ಅನಿತ್ಯಪ್ರಮಾ ಸಾಮಾನ್ಯಕ್ಕೆ (ಪ್ರತ್ಯಕ್ಷ, ಅನುಮಿತಿ, ಶಾಬ್ದ) ಅನುಗತವಾದ ಒಂದು ಗುಣವಿಲ್ಲ. ಆದ್ದರಿಂದ ಅದರಲ್ಲಿ ಮೊದಲ ಮತ್ತು ಎರಡನೆಯ ಅನುಮಾನಗಳ '...ಕಾರ್ಯತಾವಚ್ಛೇದಕಂ' ಎಂಬ ಸಾಧ್ಯವು ಇಲ್ಲ. ಆದ್ದರಿಂದ ಬಾಧದೋಷ.

2. ಎರಡನೆಯ ಅನುಮಾನದ ಹೇತು– ಬಾಧಕಂ ವಿನಾ ಕಾರ್ಯಮಾತ್ರ ವೃತ್ತಿತ್ವ. ಇದರಲ್ಲಿ ವಿಶೇಷಣಭಾಗ 'ಬಾಧಕಂ ವಿನಾ' ಎಂಬುದು. ಅದು ಪಕ್ಷವಾಗಿರುವ ಅನಿತ್ಯಪ್ರಮಾತ್ವದಲ್ಲಿ ಇಲ್ಲ. ಅದು ಕಾರ್ಯತಾವಚ್ಛೇದಕವೆನ್ನಲು ಹಿಂದೆ ಹೇಳಿದ ಎರಡನೆಯ ಬಾಧಕವೇ ಇದೆ. ಏಕೆಂದರೆ, ಅನಿತ್ಯಪ್ರಮಾತ್ವಾವಚ್ಛಿನ್ನಕ್ಕೆ ಅನುಗತವಾದ ಒಂದು ಕಾರಣವಿಲ್ಲ. ಆದ್ದರಿಂದ ವಿಶೇಷಣಾಸಿದ್ಧಿದೋಷ.

3. ಇದೇ ಅನುಮಾನಕ್ಕೆ ವ್ಯರ್ಥವಿಶೇಷ್ಯತ್ವದೋಷವೂ ಇದೆ. ಬಾಧಕಾಭಾವಾತ್, ಎಂದು ವಿಶೇಷಣಭಾಗವನ್ನಷ್ಟೇ ಹೇತು ಮಾಡಿದರೂ ಸಾಕು. ಅಕಾರ್ಯವೃತ್ತಿತ್ವವೂ ಕಾರ್ಯತಾವ ಚ್ಛೇದಕತ್ವಕ್ಕೆ ಬಾಧಕ. ಅಂತಹ ಬಾಧಕವು ಇರುವುದರಿಂದಲೇ ಜ್ಞಾನತ್ವದಲ್ಲಿ ವ್ಯಭಿಚಾರ ಪರಿಹಾರ ವಾಗುತ್ತದೆ. ಅದರ ಪರಿಹಾರಕ್ಕಾಗಿ ಕಾರ್ಯಮಾತ್ರ ವೃತ್ತಿಧರ್ಮತ್ವಾತ್ ಎಂಬ ವಿಶೇಷಣಾಂಶ ವ್ಯರ್ಥ.

4. ಇದಕ್ಕೆ ಸತ್ಪ್ರತಿಪಕ್ಷದೋಷವೂ ಇದೆ–ಅನಿತ್ಯಪ್ರಮಾತ್ವಂ ನ ಕಾರ್ಯತಾವಚ್ಛೇದಕಂ, ತತ್ವೇ ಸಾಧಕಾಭಾವಾತ್ । ಅನುಗತವಾದ ಒಂದು ಧರ್ಮವು ಅನಿತ್ಯಪ್ರಮಾನಿರೂಪಿತ ಕಾರಣತಾವಚ್ಛೇದಕವಾಗಿದ್ದಲ್ಲಿ ತದವಚ್ಛಿನ್ನಕಾರಣತಾ–ನಿರೂಪಿತ–ಕಾರ್ಯತಾದಲ್ಲಿ ಅನಿತ್ಯ ಪ್ರಮಾತ್ವವು ಅವಚ್ಛೇದಕವಾಗುತ್ತಿತ್ತು. ಆದರೆ ಅಂತಹ ಅನುಗತವಾದ ಕಾರಣತಾವಚ್ಛೇದಕಧರ್ಮ ಇಲ್ಲ. ಹೀಗೆ ಸಾಧಕವಿಲ್ಲವಾದ ಕಾರಣ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಲ್ಲ.

5. ದೃಷ್ಟಾಂತದಲ್ಲಿ ಸಾಧ್ಯಸಾಧನವೈಕಲ್ಯವೂ ಎರಡು ಅನುಮಾನಗಳಿಗೆ ದೋಷ. ಅಪ್ರಮಾತ್ವವು ಪ್ರತ್ಯಕ್ಷ–ಅನುಮಿತಿ–ಶಾಬ್ದಬೋಧಗಳಲ್ಲಿ ಇದೆ. ಈ ಮೂರಕ್ಕೂ ಅನುಗತವಾದ ಒಂದು ಕಾರಣವೇ ಇಲ್ಲ. ಹೀಗಾಗಿ ಅದರಲ್ಲಿ ಕಿಂಚಿದ್ಧರ್ಮಾವಚ್ಛಿನ್ನಕಾರಣತಾ–ನಿರೂಪಿತ ಕಾರ್ಯತಾವಚ್ಛೇದಕತ್ವ ಸಾಧ್ಯವೂ ಇಲ್ಲ, ಅಂತಹ ಹೇತುವೂ ಇಲ್ಲ. ಎರಡನೆಯ ಅನುಮಾನದಲ್ಲಿ 'ಬಾಧಕಂ ವಿನಾ' ಎಂಬ ಹೇತ್ವಂಶ ಇಲ್ಲ.

## ನ್ಯಾಯದೀಪ

**ಘಟಜ್ಞಾನೇ ಇವೇತಿ ॥ ಜನ್ಯಘಟಜ್ಞಾನೇ ಇವ ಇತ್ಯರ್ಥಃ । ವಿಶೇಷಣೇತಿ ॥ ಸ್ವಾವಚ್ಛಿನ್ನಕಾರ್ಯತ್ವಪ್ರತಿಯೋಗಿಕೈಕಕಾರಣಾಸಂಭವರೂಪ–ಬಾಧಕಸ್ಯೈವ ಸತ್ವೇನ ಬಾಧಕಂ ವಿನಾ, ಇತ್ಯಸ್ಯ ಅಸಿದ್ಧೇಃ ಇತ್ಯರ್ಥಃ । ವ್ಯರ್ಥೇತಿ ॥ ಜ್ಞಾನತ್ವಾದೌ ನಿತ್ಯವೃತ್ತಿತ್ವಬಾಧಕಭಾವೇನೈವ ವ್ಯಭಿಚಾರನಿರಾಸಾತ್, ಇತಿ ಭಾವಃ । ನಚ ಬಾಧಕಂ ವಿನೇತ್ಯತ್ರ, ಪ್ರಾಗುಕ್ತಬಾಧಕಚತುಷ್ಟಯಮೇವ ಬಾಧಕಪದೇನ ವಿವಕ್ಷಿತಮ್ । ಅತೋ ಜ್ಞಾನತ್ವಾದೌ ವ್ಯಭಿಚಾರನಿರಾಸಾಯ ವಿಶೇಷ್ಯಮಿತಿ ವಾಚ್ಯಮ್ । ಸಾಮಾನ್ಯಶಬ್ದಸ್ಯ ವಿಶೇಷಪರತ್ವಮ್ ಉಪೇತ್ಯ ವಿಶೇಷ್ಯಕೃತ್ಯೋಕ್ತೇಃ ಅಯುಕ್ತತ್ವಾತ್ ಇತಿ ಭಾವಃ ।**

ಮೂಲದಲ್ಲಿ 'ಘಟಜ್ಞಾನೇ ಇವ' ಎಂದು ಅನುಗತಕಾರಣಾಭಾವಕ್ಕೆ ಘಟಜ್ಞಾನದ ಉದಾಹರಣೆ ಇದೆ. ಆದರೆ, ಈಶ್ವರೀಯ–ನಿತ್ಯಘಟಜ್ಞಾನವೂ ಅದರಲ್ಲಿ ಸೇರುತ್ತದೆ. ಅದರ ವ್ಯಾವೃತ್ತಿಗಾಗಿ ಜನ್ಯಘಟಜ್ಞಾನೇ ಎಂದು ಅರ್ಥಮಾಡಬೇಕು.

ಮೂಲದಲ್ಲಿ 'ವಿಶೇಷಣಾಸಿದ್ಧೇಃ' ಎಂದಿದೆ. ಅನಿತ್ಯ–ಪ್ರಮಾತ್ವದಲ್ಲಿ ಹೇತು–ಘಟಕವಾದ ವಿಶೇಷಣಾಂಶವು ಅಸಿದ್ಧ ಎಂದರ್ಥ. ಅರ್ಥಾತ್, ಬಾಧಕಭಾವವು ಅಸಿದ್ಧ, ಬಾಧಕವೇ ಇದೆ. ಹಿಂದೆ ತೋರಿಸಿದ ನಾಲ್ಕು ಬಾಧಕಗಳಲ್ಲಿ ಎರಡನೆಯ ಬಾಧಕ ಇದೆ. ಅನಿತ್ಯಪ್ರಮಾತ್ವಾವಚ್ಛಿನ್ನಂ ಪ್ರತಿ ಒಂದು ಅನುಗತಕಾರಣ ಇಲ್ಲ, ಇದೇ ಬಾಧಕ. ಆದ್ದರಿಂದ 'ಬಾಧಕಂ ವಿನಾ' ಎಂಬ ವಿಶೇಷಣ ಅಂಶವು ಅಸಿದ್ಧ.

ಹೇತುವಿನಲ್ಲಿ ವಿಶೇಷ್ಯಭಾಗವೂ ವ್ಯರ್ಥ. ಜ್ಞಾನತ್ವ ಧರ್ಮದಲ್ಲಿ ವ್ಯಭಿಚಾರ–ಪರಿಹಾರಕ್ಕಾಗಿ 'ಕಾರ್ಯಮಾತ್ರ–ವೃತ್ತಿತ್ವಾತ್' ಎಂಬ ವಿಶೇಷ್ಯಭಾಗವನ್ನು ಕೊಡಲಾಗಿದೆ. ಜ್ಞಾನತ್ವವು ಅಕಾರ್ಯವಾದ ನಿತ್ಯೇಶ್ವರಜ್ಞಾನದಲ್ಲಿಯೂ ಇದೆಯಾದ್ದರಿಂದ ಅದು ಕಾರ್ಯಮಾತ್ರವೃತ್ತಿಯಲ್ಲ. ಆದ್ದರಿಂದ ಅದರಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ. ಆದರೆ ಇದರ ಅಗತ್ಯವಿಲ್ಲ. 'ಬಾಧಕಂ ವಿನಾ' ಎಂಬ ವಿಶೇಷಣಭಾಗದಿಂದಲೇ ವ್ಯಭಿಚಾರ–ಪರಿಹಾರ ಮಾಡಬಹುದು. ಕಾರ್ಯತಾವಚ್ಛೇದಕ–ಧರ್ಮವು ಅತಿಪ್ರಸಕ್ತವಾಗಿರಬಾರದು. ಆದರೆ, ಜ್ಞಾನತ್ವವು ಕಾರ್ಯತ್ವ ಇಲ್ಲದಿರುವ ನಿತ್ಯಜ್ಞಾನದಲ್ಲಿ ಇದೆಯಾದ್ದರಿಂದ ಅತಿಪ್ರಸಕ್ತವಾಗಿದೆ. ಹೀಗೆ ಅದು ಕಾರ್ಯತಾವಚ್ಛೇದಕವಾಗಲು ನಿತ್ಯವೃತ್ತಿತ್ವವೇ ಬಾಧಕ. ಆದ್ದರಿಂದ 'ಬಾಧಕಂ ವಿನಾ' ಎಂಬ ಅಂಶ ಅದರಲ್ಲಿ ಇಲ್ಲ.

ಇದಕ್ಕೆ ಹೀಗೆ ಸಮಾಧಾನ ಹೇಳಬಹುದು– 'ಬಾಧಕಂ ವಿನಾ' ಎಂಬುದಕ್ಕೆ ಹಿಂದೆ ಹೇಳಿದ ನಾಲ್ಕು ಬಾಧಕಗಳು ಇಲ್ಲದಿರುವಾಗ ಎಂದಿಷ್ಟೇ ಅರ್ಥ. ಜ್ಞಾನತ್ವವು ಕಾರ್ಯತಾವಚ್ಛೇದಕವಾಗಲು ಆ ನಾಲ್ಕು ಬಾಧಕಗಳು ಇಲ್ಲ. ಹೀಗಾಗಿ ವಿಶೇಷಣಾಂಶ ಬಂತು, ವ್ಯಭಿಚಾರ. ಅದರ ಪರಿಹಾರಕ್ಕಾಗಿ

ವಿಶೇಷ್ಯ ಅಂಶ ಸಾರ್ಥಕ, ಎಂದು. ಆದರೆ ಅದು ಸರಿಯಲ್ಲ. 'ಬಾಧಕಂ ವಿನಾ' ಎಂಬ ಶಬ್ದ ಸಾಮಾನ್ಯಶಬ್ದ. ಯಾವ ಬಾಧಕಗಳೂ ಇಲ್ಲದಿರುವಾಗ, ಎಂದು ಅದರ ಅರ್ಥ. ಅದಕ್ಕೆ ಸಹಜವಾದ ಈ ಅರ್ಥವನ್ನು ಬಿಟ್ಟು 'ಬಾಧಕವಿಶೇಷಗಳು ಇಲ್ಲದಿರುವಾಗ' ಎಂಬ ವಿಶೇಷಾರ್ಥವನ್ನು ಮಾಡಿ ವಿಶೇಷ್ಯಭಾಗಕ್ಕೆ (ಕಾರ್ಯಮಾತ್ರವೃತ್ತಿಧರ್ಮತ್ವಾತ್) ಸಾರ್ಥಕ್ಯವನ್ನು ಹೇಳುವುದು ಸರಿಯಲ್ಲ.

## ನ್ಯಾಯದೀಪ

**ಸಾಧಕೇತಿ ॥ ಅನುಗತಕಾರಣತಾವಚ್ಛೇದಕೇನ ಹಿ ಕಾರ್ಯತಾವಚ್ಛೇದಕಮ್ ಉಪೇಯಮ್ । ಪ್ರಕೃತೇ ಚ ಅನುಗತಕಾರಣಂ ನೇತಿ ವಕ್ಷ್ಯಮಾಣತ್ವಾತ್ ಇತಿ ಭಾವಃ । ದೃಷ್ಟಾಂತಸ್ಯೇತಿ ॥ ಅನುಮಾನದ್ವಯೇಽಪಿ ಇತ್ಯನುಕರ್ಷಃ । ಅನುಗತದೋಷಾಭಾವೇನ ಆದ್ಯಹೇತೌ ಕಾರ್ಯತಾವಚ್ಛೇದಕತ್ವಸ್ಯ, ದ್ವಿತೀಯೇ-ಸ್ವಾವಚ್ಛಿನ್ನಕಾರ್ಯತೇತ್ಯಾದಿಬಾಧಕಾಭಾವಸ್ಯ ಚ ಅಭಾವೇನ ಸಾಧನವೈಕಲ್ಯಂ ಚೇತ್ಯರ್ಥಃ ।**

ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೆನ್ನಲು ಸಾಧಕವಿಲ್ಲ, ಎಂದು ಮೂಲದಲ್ಲಿ ಇದೆ. ಅನುಗತವಾದ ಒಂದು ಕಾರಣತಾವಚ್ಛೇದಕಧರ್ಮ ಇದ್ದರೆ ಆಗ ಕಾರ್ಯತಾವಚ್ಛೇದಕವೂ ಅನುಗತವಾಗಿರಬೇಕು. ಪ್ರಕೃತ, ಅನಿತ್ಯಪ್ರಮಾಗಳಿಗೆಲ್ಲ ಅನುಗತವಾದ ಒಂದು ದೋಷರೂಪಕಾರಣವು ಇಲ್ಲ. ಆದ್ದರಿಂದ ಅನುಗತಕಾರಣತಾವಚ್ಛೇದಕವು ಇಲ್ಲವಾದುದರಿಂದ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಲ್ಲ.

ದೃಷ್ಟಾಂತೇ ಸಾಧ್ಯ-ಸಾಧನವೈಕಲ್ಯವು ಎರಡೂ ಅನುಮಾನಗಳಿಗೆ ದೋಷ. ಅಪ್ರಮಾಕ್ಕೆ ಕಾರಣವಾದ ಅನುಗತವಾದ ದೋಷವು ಇಲ್ಲ. ಆದ್ದರಿಂದ ಅಪ್ರಮಾತ್ವವು ಕಿಂಚಿನ್ನಿರೂಪಿತ ಕಾರ್ಯತಾವಚ್ಛೇದಕವೇ ಅಲ್ಲ. ಹೀಗೆ ಮೊದಲ ಹೇತು ಅದರಲ್ಲಿ ಇಲ್ಲ. ಅನುಗತ ಕಾರಣವಿಲ್ಲದ ಕಾರಣ ಅಪ್ರಮಾತ್ವವು ಕಾರ್ಯತಾವಚ್ಛೇದಕವಾಗಲು ದ್ವಿತೀಯಬಾಧಕವೇ ಇದೆ. ಅದರಿಂದಾಗಿ ಎರಡನೆಯ ಹೇತುವಿನ 'ಬಾಧಕಂ ವಿನಾ' ಎಂಬ ವಿಶೇಷಣ ಅಂಶ ಇಲ್ಲ. ಅಪ್ರಮಾಕ್ಕೆ ಅನುಗತಕಾರಣವಿಲ್ಲದಿರುವುದರಿಂದಾಗಿಯೇ ಎರಡೂ ಅನುಮಾನಗಳ ಸಾಧ್ಯವೂ ಇಲ್ಲ.

**ननु प्रमाविशेषहेतूनां भूयोऽवयवेन्द्रियसन्निकर्षादीनां प्रमामात्रे सन्निकर्षत्वादिनाऽननुगमेऽपि गुणत्वेनानुगतिरस्तीति कथं बाधः? इति चेन्न। गुणत्वस्याजातित्वेन प्रमामात्रजनकत्वरूपतया अन्यो-न्याश्रयात् ।**

ಮಣಿಕಾರೋಕ್ತಾನುಮಾನಕ್ಕೆ, ಪ್ರತ್ಯಕ್ಷ–ಅನುಮಿತ್ಯಾದಿ ಸಕಲ ಪ್ರಮಾಗಳಿಗೆ ಅನುಗತವಾದ ಒಂದು ಕಾರಣವು ಇಲ್ಲದಿರುವುದರಿಂದ ಬಾಧದೋಷವನ್ನು ಹೇಳಲಾಗಿದೆ.(ಪು.534) ಆದರೆ, ಅದು ಸರಿಯಲ್ಲ. ಯದ್ಯಪಿ ಪ್ರತ್ಯಕ್ಷ–ಪ್ರಮಾಕ್ಕೆ ಭೂಯಃ ಅವಯವೇಂದ್ರಿಯ–ಸನ್ನಿಕರ್ಷವು ಕಾರಣ. ಅನುಮಿತಿಪ್ರಮಾಕ್ಕೆ ಯಥಾರ್ಥಲಿಂಗಪರಾಮರ್ಶ ಕಾರಣ. ಹೀಗೆ ಕಾರಣಗಳು ವಿಭಿನ್ನವಾಗಿರುವುದರಿಂದ ಅವುಗಳನ್ನು ಸನ್ನಿಕರ್ಷತ್ವೇನ ವಾ, ಪರಾಮರ್ಶತ್ವೇನ ವಾ, ಅನುಗಮ ಮಾಡಲು ಆಗುವುದಿಲ್ಲ, ಆದರೂ ಗುಣತ್ವೇನ ಅನುಗಮ ಮಾಡಬಹುದು. ಆದ್ದರಿಂದ ಅನಿತ್ಯ ಪ್ರಮಾತ್ವಾವಚ್ಛಿನ್ನಕ್ಕೆ ಗುಣತ್ವಾವಚ್ಛಿನ್ನವು ಕಾರಣ, ಎಂದು ಹೇಳಬಹುದು. ಆಗ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗುತ್ತದೆ, ಬಾಧ ಇಲ್ಲ.

ಇದು ಸರಿಯಲ್ಲ, ಗುಣತ್ವವು ಜಾತಿರೂಪವಲ್ಲ. 'ಪ್ರಮಾ–ಮಾತ್ರ ಜನಕತ್ವಂ ಗುಣತ್ವಂ' ಎಂದು ಹೇಳಬೇಕು. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ–ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕ ಎಂದು ಸಿದ್ಧವಾದರೆ ತದವಚ್ಛಿನ್ನಕಾರಣತಾವಚ್ಛೇದಕತ್ವರೂಪಗುಣತ್ವ ಸಿದ್ಧ ವಾಗುತ್ತದೆ. ಗುಣತ್ವಸಿದ್ಧವಾದರೆ ತದವಚ್ಛಿನ್ನಕಾರಣತಾನಿರೂಪಿತ ಕಾರ್ಯತಾವಚ್ಛೇದಕತ್ವವು ಅನಿತ್ಯಪ್ರಮಾತ್ವಕ್ಕೆ ಸಿದ್ಧವಾಗುತ್ತದೆ. ಆದ್ದರಿಂದ ಗುಣತ್ವವು ದುರ್ನಿರೂಪ.

## ನ್ಯಾಯದೀಪ

**ಅಜಾತಿತ್ವೇನೇತಿ ॥ ಸಂಯೋಗತ್ವ ಜ್ಞಾನತ್ವಾದಿನಾ ಸಾಂಕರ್ಯಾತ್ ಇತಿ ಭಾವಃ। ಏತೇನ ದೃಷ್ಟಾಂತೇ ಭ್ರಮಹೇತೂನಾಂ ದೋಷತ್ವೇನ ಅನುಗಮೋಽಪಿ ಪ್ರತ್ಯುಕ್ತಃ।**

**ಅನ್ಯೋನ್ಯಾಶ್ರಯಾದಿತಿ ॥ ಅನಿತ್ಯಪ್ರಮಾತ್ವಸ್ಯ ಕಾರ್ಯತಾವಚ್ಛೇದಕತ್ವಸಿದ್ಧೌ ಉಕ್ತರೂಪಗುಣತ್ವಸಿದ್ಧಿಃ। ತತ್ಸಿದ್ಧೌ ಚ ತತ್ಸಿದ್ಧಿರಿತಿ ಅನ್ಯೋನ್ಯಾಶ್ರಯಾತ್ ಇತ್ಯರ್ಥಃ।**

ಇಲ್ಲಿ ಗುಣತ್ವಂ ಎಂದರೆ ರೂಪಾದಿಗಳಲ್ಲಿರುವ ಗುಣತ್ವವಲ್ಲ, ಅದು ಜಾತಿರೂಪವಾದುದು. ಆದರೆ, ಪ್ರಕೃತ ಗುಣತ್ವ ಜಾತಿಗೆ ಸಾಂಕರ್ಯದೋಷವಿದೆ. ಸಂಯೋಗತ್ವದಿಂದ ಸಾಂಕರ್ಯ ಬರುತ್ತದೆ. ಸಂಯೋಗತ್ವಂ ವಿಹಾಯ ಗುಣತ್ವವು ಅನುಮಿತಿ–ಪ್ರಮಾಹೇತು–ಯಥಾರ್ಥಲಿಂಗ ಪರಾಮರ್ಶದಲ್ಲಿ ಇದೆ. ಗುಣತ್ವಂ ವಿಹಾಯ ಸಂಯೋಗತ್ವ ಘಟ–ಪಟಸಂಯೋಗದಲ್ಲಿ ಇದೆ. ಇವೆರಡೂ ಭೂಯೋಽವಯವೇಂದ್ರಿಯಸನ್ನಿಕರ್ಷ(ಸಂಯೋಗದಲ್ಲಿ)ದಲ್ಲಿ ಇವೆ. ಇದರಂತೆ ಜ್ಞಾನತ್ವದೊಂದಿಗೂ ಸಾಂಕರ್ಯವಿದೆ.

ಸಾಂಕರ್ಯದೋಷದಿಂದ ಗುಣತ್ವ ಹೇಗೆ ಜಾತಿಯಲ್ಲವೋ ಅದರಂತೆ ಭ್ರಮಕಾರಣ

ದೋಷನಿಷ್ಠದೋಷತ್ವವೂ ಜಾತಿಯಲ್ಲ. ಪ್ರತ್ಯಕ್ಷದಲ್ಲಿ ದೂರಸ್ಥತ್ವ, ಕಾಚಾದಿಗಳು ದೋಷಗಳು. ಅನುಮಿತಿಯಲ್ಲಿ ಭ್ರಮಾತ್ಮಕಪರಾಮರ್ಶವು ದೋಷ. ಅಲ್ಲೂ ಜ್ಞಾನತ್ವೇನ ಸಾಂಕರ್ಯವಿದೆ.

**एतदप्युक्तं ''प्रामाण्यं च स्वत एव अन्यथाऽनवस्थानात्'' इति । उत्पद्यत इति शेषः । ज्ञानात्मिकाया भ्रमेऽपि धर्म्यंशेऽनुवृत्तायाश्च प्रमायाः ज्ञानहेत्वन्यहेतुजन्यत्वादिति साधने घटादिवदज्ञानत्वापत्त्या प्रमा ज्ञानं, घटस्तु न इत्यादिव्यवस्थाऽयोगादित्यर्थः ।।**

**इति उत्पत्तौ परतस्त्वे चिरन्तनानुमानभङ्गः ।।**

ಇದುವರೆಗೆ ನಿರಾಕರಿಸಿರುವಂತೆ, ಉತ್ಪತ್ತೌ ಪರತಸ್ತ್ವವು ಯುಕ್ತವಲ್ಲ, ಎಂಬುದನ್ನು ಆಚಾರ್ಯರು ವಿಷ್ಣುತತ್ತ್ವನಿರ್ಣಯದಲ್ಲಿ 'ಪ್ರಾಮಾಣ್ಯಂ ಚ ಸ್ವತ ಏವ, ಅನ್ಯಥಾ ಅನವಸ್ಥಾನಾತ್' ಎಂದು ಹೇಳಿದ್ದಾರೆ. ಇಲ್ಲಿ ಸ್ವತ ಏವ ಉತ್ಪದ್ಯತೇ ಎಂದು ಸೇರಿಸಿಕೊಳ್ಳಬೇಕು. ಅನವಸ್ಥಾನಾತ್ ಎಂದರೆ– ಪ್ರಮಾವೂ ಒಂದು ಜ್ಞಾನ. ಅಲ್ಲದೆ ಭ್ರಮೆಯಲ್ಲೂ ಧರ್ಮ್ಯಂಶದಲ್ಲಿ ಪ್ರಮಾತ್ವ ಇದೆ. ಆದ್ದರಿಂದ ಅದರಲ್ಲಿ ಜ್ಞಾನಹೇತ್ವತಿರಿಕ್ತ–ಹೇತುಜನ್ಯತ್ವವನ್ನು ಸಾಧನೆ ಮಾಡಿದರೆ ಅದು ಜ್ಞಾನವಲ್ಲವೆಂದಾದೀತು. ಆಗ ಪ್ರಮಾ ಜ್ಞಾನ, ಘಟವು ಅಜ್ಞಾನ ಎಂಬ ವ್ಯವಸ್ಥೆಯೇ ಇಲ್ಲದಾದೀತು, ಎಂದರ್ಥ.

## ನ್ಯಾಯದೀಪ

**ಚಿರಂತನಾನುಮಾನಭಂಗಃ ।। ಉದಯನೋಕ್ತಾನುಮಾನಸ್ಯೈವ ಮಣಿಕೃತಾ ಪರಿಷ್ಕೃತತ್ವೇನ ನೂತನಾನುಮಾನಾಕರಣಾತ್ ತದ್ಭಂಗೇನ ಮಣ್ಯುಕ್ತಾನುಮಾನಭಂಗೋಽಪಿ ಇತಿ ಚಿರಂತನೇತ್ಯೇವ ಉಕ್ತಮ್ ।।**

ಈ ಪ್ರಕರಣದಲ್ಲಿ ಚಿರಂತನರ ಅನುಮಾನವನ್ನು ನಿರಾಕರಿಸಲಾಗಿದೆ–ಎಂದಿದ್ದಾರೆ. ಚಿರಂತನರು ಎಂದರೆ ಪ್ರಾಚೀನ ನೈಯಾಯಿಕರು. ಉದಯನಾಚಾರ್ಯರು ಪ್ರಾಚೀನರು. ಆದರೆ, ಮಣಿಕಾರ ನವೀನ. ಅವನು ಹೇಳಿದ ಅನುಮಾನವನ್ನೂ ಇಲ್ಲಿ ನಿರಾಕರಿಸಲಾಗಿದೆ. ಹೀಗಿದ್ದಾಗ ಚಿರಂತನಾನುಮಾನ ಭಂಗ ಹೇಗೆ? ಇದಕ್ಕೆ ಸಮಾಧಾನ–'ಪ್ರಮಾ ಜ್ಞಾನ ಹೇತ್ವತಿರಿಕ್ತಹೇತುಜನ್ಯಾ' ಎಂದು ಉದಯನಾಚಾರ್ಯೋಕ್ತಾನುಮಾನ. ಅದರದ್ದೇ ಪರಿಷ್ಕೃತರೂಪ–ಪ್ರಮಾ ಜ್ಞಾನತ್ವಹೇತ್ವತಿರಿಕ್ತ ಹೇತು ಪ್ರಯೋಜ್ಯಾ' ಎಂದು ಮಣಿಕಾರ ಹೇಳಿದ ಅನುಮಾನ. ಆದ್ದರಿಂದ ಮಣಿಕಾರೋಕ್ತಾನುಮಾನವೂ ಉದಯನಾಚಾರ್ಯೋಕ್ತವಾದ ಅನುಮಾನದ್ದೇ ಪರಿಷ್ಕೃತರೂಪ.

**ಇಲ್ಲಿಗೆ ಪರತಸ್ತ್ವಸಾಧನಕಾನುಮಾನ ಭಂಗ ಪ್ರಕರಣ ಮುಗಿಯಿತು. ।। 10 ।।**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಜ್ಞಾನಪ್ರಾಮಾಣ್ಯವು ಪರತಃ ಹುಟ್ಟುತ್ತದೆ ಎಂದು ಸಾಧಿಸುವ, ಪ್ರಾಚೀನ ನೈಯಾಯಿಕರು ಪ್ರಯೋಗಿಸಿರುವ ಅನುಮಾನಗಳನ್ನು ವಿಮರ್ಶೆ ಮಾಡಲಾಗಿದೆ. ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದ ಹೇಗೆ ತಿಳಿಯಲ್ಪಡುವುದೋ ಅದರಂತೆ, ಜ್ಞಾನಜನಕವಾದ ಸಾಮಗ್ರಿಗಳಿಂದಲೇ ಹುಟ್ಟುತ್ತದೆ. ಇದು ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವ. ಪ್ರಾಮಾಣ್ಯದ ಉತ್ಪತ್ತಿಗೆ ಪ್ರತ್ಯೇಕವಾದ ಕಾರಣದ ಅಗತ್ಯವಿಲ್ಲ. ಜ್ಞಾನಸಾಮಗ್ರಿಗಳಷ್ಟೇ ಇದ್ದರೆ ಸಾಕು. ಆ ಜ್ಞಾನಸಾಮಗ್ರಿಗಳ ಜೊತೆಯಲ್ಲಿ ದೋಷವು ಸೇರಿದರೆ ಹುಟ್ಟಿದ ಜ್ಞಾನವು ಅಪ್ರಮಾಣವಾಗುತ್ತದೆ. ಆ ದೋಷ ಇಂದ್ರಿಯಾದಿಗಳಲ್ಲೂ ಇರಬಹುದು, ಅಥವಾ ಕಾಣುವ ವಸ್ತುವಿನಲ್ಲೂ ಇರಬಹುದು. ಕಣ್ಣಿನಲ್ಲಿ ಪೊರೆ ಇದ್ದರೆ ಒಂದು ಎರಡಾಗಿ ಕಾಣಬಹುದು. ವಸ್ತು ದೂರದಲ್ಲಿದ್ದರೆ ಚಿಕ್ಕದಾಗಿ ಕಾಣಿಸಬಹುದು. ಹೀಗಿದ್ದಾಗ ಜ್ಞಾನವು ಅಪ್ರಮಾಣವಾಗುತ್ತದೆ. ಇಂತಹ ಯಾವ ದೋಷಗಳೂ ಇಲ್ಲದಿರುವಾಗ ಜ್ಞಾನವು ಪ್ರಮಾಣವೇ ಆಗಿರುತ್ತದೆ. ಇದು ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವ.

ನೈಯಾಯಿಕರ ವಾದ ಇದಕ್ಕಿಂತ ಭಿನ್ನವಾಗಿದೆ. ಜ್ಞಾನಸಾಮಗ್ರಿಗಳ ಜೊತೆಗೆ ದೋಷ ಸೇರಿದರೆ ಜ್ಞಾನವು ಅಪ್ರಮಾಣವಾಗುತ್ತದೆ, ಗುಣ ಸೇರಿದಾಗ ಪ್ರಮಾಣವಾಗುತ್ತದೆ. ಅಪ್ರಾಮಾಣ್ಯಕ್ಕೆ ದೋಷವು ಕಾರಣ, ಪ್ರಾಮಾಣ್ಯಕ್ಕೆ ಗುಣವು ಕಾರಣ. ವಾಕ್ಯವನ್ನು ಪ್ರಯೋಗ ಮಾಡುವ ವ್ಯಕ್ತಿ ಮೋಸಗಾರನಾಗಿದ್ದರೆ ಅವನು ಹೇಳುವ ವಾಕ್ಯದಿಂದ ಬರುವ ಜ್ಞಾನ ಅಪ್ರಮಾಣವಾಗುತ್ತದೆ. ಪ್ರಾಮಾಣಿಕನಾಗಿದ್ದರೆ ಅವನ ವಾಕ್ಯದಿಂದ ಹುಟ್ಟುವ ಜ್ಞಾನ ಪ್ರಮಾಣವಾಗಿರುತ್ತದೆ. ಹೀಗೆ, ಜ್ಞಾನವು ಎರಡು ವಿಧ–ಪ್ರಮಾ, ಅಪ್ರಮಾ ಎಂದು. ಪ್ರಮಾಕ್ಕೆ ಗುಣವು ಕಾರಣ, ಅಪ್ರಮಾಕ್ಕೆ ದೋಷವು ಕಾರಣ. ಇದು ನೈಯಾಯಿಕರ ವಾದ.

ಪ್ರಾಮಾಣ್ಯಂ ಪರತಃ, ಎಂಬುದಕ್ಕೆ ನೈಯಾಯಿಕರು ಹೇಳುವ ಯುಕ್ತಿ ಇದು. ಪೃಥಿವೀ–ಜಲಗಳೆರಡೂ ದ್ರವ್ಯಗಳು. ಅಂದರೆ ದ್ರವ್ಯದ ಎರಡು ಪ್ರಭೇದಗಳು. ದ್ರವ್ಯತ್ವವು ಅವೆರಡರಲ್ಲೂ ಇರುವ ಸಾಮಾನ್ಯ ಧರ್ಮ. ವಸ್ತುವಿನಲ್ಲಿ ದ್ರವ್ಯತ್ವಧರ್ಮವು ಬರಬೇಕಾದರೆ ಒಂದು ಸಾಮಾನ್ಯಕಾರಣ ಇರಬೇಕು. ಅದರ ಜೊತೆಯಲ್ಲಿ ಪೃಥಿವಿಯ ಪರಮಾಣುಗಳು ಸೇರಿದರೆ ಹುಟ್ಟಿದ ವಸ್ತು ಪೃಥಿವೀ ಆಗುತ್ತದೆ, ಜಲಪರಮಾಣುಗಳು ಸೇರಿದರೆ ಆ ವಸ್ತು ಜಲವಾಗುತ್ತದೆ. ಅದರಂತೆ, ಪ್ರಮೆ ಮತ್ತು ಭ್ರಮೆಗಳು ಜ್ಞಾನದ ಎರಡು ವಿಶೇಷಗಳು. ಎಲ್ಲಾ ಜ್ಞಾನಗಳಿಗೂ ಕಾರಣವಾದುದು ಆತ್ಮಮನಃ ಸಂಯೋಗ. ಅದರ ಜೊತೆಯಲ್ಲಿ ಗುಣ ಸೇರಿದರೆ ಹುಟ್ಟಿದ ಜ್ಞಾನವು ಪ್ರಮಾ ಆಗುತ್ತದೆ. ದೋಷ ಸೇರಿದರೆ ಜ್ಞಾನವು ಭ್ರಮೆಯಾಗುತ್ತದೆ. ಹೀಗೆ ಪ್ರಾಮಾಣ್ಯ ಗುಣಜನ್ಯ, ಅಪ್ರಾಮಾಣ್ಯ ದೋಷಜನ್ಯ, ಎಂದು ಅವರ ಸಮರ್ಥನೆ. ದೋಷ ಇದ್ದಾಗ ಅಪ್ರಾಮಾಣ್ಯ, ದೋಷ ಇಲ್ಲದಾಗ ಪ್ರಾಮಾಣ್ಯ. ಪ್ರಾಮಾಣ್ಯಂ ಸ್ವತಃ, ಅಪ್ರಾಮಾಣ್ಯಂ ಪರತಃ, ಇದು ದ್ವೈತ ಸಿದ್ಧಾಂತ.

ಪ್ರಮಾತ್ವಕಜ್ಞಾನವು ಜ್ಞಾನದ ಒಂದು ವಿಶೇಷರೂಪವಾದುದರಿಂದ ಅದು ಜ್ಞಾನ ಹೇತುವಿಗಿಂತ ಭಿನ್ನವಾದ ಕಾರಣದಿಂದ ಹುಟ್ಟಿದೆ, ಎಂದು ನೈಯಾಯಿಕರ ಪರತಸ್ತ್ವಸಾಧಕ ಅನುಮಾನದ ಅಭಿಪ್ರಾಯ. ಆದರೆ, ಹೀಗೆ ಹೇಳುವುದು ವ್ಯಾಹತ. ಪ್ರಮಾತ್ವಕಜ್ಞಾನವೂ ಒಂದು ಜ್ಞಾನವಾದುದರಿಂದ ಜ್ಞಾನಸಾಮಾನ್ಯಕ್ಕೆ ಕಾರಣವಾದುದು ಅದಕ್ಕೂ ಕಾರಣವಾಗಿರಬೇಕು. ಇದನ್ನು ಇನ್ನೊಂದು ರೀತಿಯಿಂದ ಹೇಳುವುದಾದಲ್ಲಿ–ಪ್ರಮಾತ್ಮಕ ಜ್ಞಾನಕ್ಕೆ ಕಾರಣವಾದುದು ಜ್ಞಾನಹೇತುವೇ ಆಗುತ್ತದೆ. ಹೀಗಿರುವಾಗ ಅದನ್ನು ಜ್ಞಾನಹೇತ್ವತಿರಿಕ್ತ ಎಂದರೆ ವ್ಯಾಹತಿದೋಷ.

ಉದಯನಾಚಾರ್ಯರು ಪ್ರಯೋಗಿಸಿದ ಈ ಅನುಮಾನವನ್ನು ನವೀನ ನ್ಯಾಯಪಿತಾಮಹನೆನಿಸಿದ ಗಂಗೇಶೋಪಾಧ್ಯಾಯ(ಮಣಿಕಾರ) ಹೀಗೆ ಪರಿಷ್ಕರಿಸಿದ್ದಾನೆ–ಪ್ರಮಾತ್ಮಕ ಜ್ಞಾನವು ಜ್ಞಾನದ ಒಂದು ವಿಶೇಷ ವಿಭಾಗವಾಗಿದೆ. ಆದುದರಿಂದ ಅಪ್ರಮಾ ಹುಟ್ಟಲು ಜ್ಞಾನಸಾಮಾನ್ಯಕ್ಕೆ ಕಾರಣವಾಗಿರುವ ಆತ್ಮಮನಃಸಂಯೋಗಕ್ಕಿಂತ ಭಿನ್ನವಾದ ದೋಷ ಎಂಬ ಕಾರಣವಿಶೇಷವು ಹೇಗೆ ಅಗತ್ಯವೋ, ಅದರಂತೆ ಪ್ರಮಾಕ್ಕೂ ಜ್ಞಾನಸಾಮಾನ್ಯಕಾರಣಕ್ಕಿಂತ ಭಿನ್ನವಾದ ಒಂದು ಕಾರಣವಿಶೇಷದ ಅಗತ್ಯವಿದೆ, ಎಂದು. ಇದು ನಮಗೂ ಸಮ್ಮತವಾದುದರಿಂದ ಸಿದ್ಧಸಾಧನತಾ ಎಂದಿದ್ದಾರೆ ವ್ಯಾಸರಾಜರು. ಪ್ರಮಾತ್ಮಕಜ್ಞಾನವು ಪ್ರತ್ಯಕ್ಷ, ಅನುಮಿತಿ, ಶಾಬ್ದಬೋಧ ಎಂದು ಮೂರು ವಿಧವಿದೆ. ಪ್ರತ್ಯಕ್ಷಾತ್ಮಕ ಪ್ರಮಾಕ್ಕೆ ಇಂದ್ರಿಯಸಂಯೋಗವು ಕಾರಣ, ಅನುಮಿತ್ಯಾತ್ಮಕ ಪ್ರಮಾಕ್ಕೆ ಲಿಂಗಪರಾಮರ್ಶವು ಕಾರಣ. ಶಾಬ್ದಬೋಧಕ್ಕೆ ಶಬ್ದಜ್ಞಾನವು ಕಾರಣ. ಈ ಎಲ್ಲ ಕಾರಣಗಳು ಜ್ಞಾನಸಾಮಾನ್ಯಕ್ಕೆ ಕಾರಣಗಳಲ್ಲ. ಜ್ಞಾನವಿಶೇಷಕ್ಕೆ ಕಾರಣಗಳು. ಜ್ಞಾನಸಾಮಾನ್ಯಕ್ಕೆ (ಸಕಲಜ್ಞಾನಗಳಿಗೆ) ಕಾರಣವಾದುದು ಆತ್ಮಮನಃಸಂಯೋಗ. ಅದರ ಜೊತೆಯಲ್ಲಿ ಈ ಕಾರಣವಿಶೇಷಗಳು ಸೇರಿದರೆ ಪ್ರತ್ಯಕ್ಷಾದಿಪ್ರಮಾಗಳು ಹುಟ್ಟುತ್ತವೆ. ಹೀಗೆ, ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ಅದಕ್ಕಿಂತ ಭಿನ್ನವಾದ ವಿಶೇಷಕಾರಣಗಳಿಂದಲೇ ಪ್ರಮಾವು ಹುಟ್ಟುತ್ತದೆ ಎನ್ನುವುದು ನಮಗೂ ಸಮ್ಮತವಾಗಿದೆ. ಆದ್ದರಿಂದ ಸಿದ್ಧಸಾಧನತಾದೋಷ. ನೈಯಾಯಿಕರು ಗುಣರೂಪವಾದ ವಿಶೇಷಕಾರಣವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅನುಮಾನವನ್ನು ಮಾಡಿದರೆ ಶ್ರೀವ್ಯಾಸರಾಜರು ಗುಣದ ಗೊಡವೆಗೇ ಹೋಗದೆ ಅವರ ಸಾಧ್ಯವನ್ನು ಪರ್ಯವಸಾನ ಗೊಳಿಸಿದ್ದಾರೆ.

ಈ ದೋಷವೂ ಬರದಂತೆ ಮತ್ತೊಂದು ಅನುಮಾನವನ್ನು ಮಣಿಕಾರ ಉಲ್ಲೇಖಿಸಿದ್ದಾನೆ. ಅನಿತ್ಯಪ್ರಮಾತ್ವವು ಅನಿತ್ಯಜ್ಞಾನಗಳಲ್ಲಿ ಮಾತ್ರವೇ ಇರುವುದರಿಂದ ಅದು ಕಾರ್ಯತಾವಚ್ಛೇದಕ ವಾಗಲೇಬೇಕು. ಅದು ಕಾರ್ಯತಾವಚ್ಛೇದಕವಾಗಬೇಕಾದರೆ ಅನಿತ್ಯಪ್ರಮಾಗಳೆಲ್ಲಕ್ಕೂ ಸಾಧಾರಣ ವಾದ ಒಂದು ಕಾರಣವಿರಲೇಬೇಕು. ಇಂದ್ರಿಯ, ಪರಾಮರ್ಶಗಳು ಪ್ರತ್ಯಕ್ಷ–ಅನುಮಿತಿಗಳಿಗೆ ಮಾತ್ರ ಕಾರಣ. ಇಂದ್ರಿಯವು ಅನುಮಿತಿಗೆ ಕಾರಣವಲ್ಲ, ಪರಾಮರ್ಶವು ಪ್ರತ್ಯಕ್ಷಕ್ಕೆ ಕಾರಣವಲ್ಲ. ಪ್ರತ್ಯಕ್ಷ, ಅನುಮಿತಿ, ಶಾಬ್ದಬೋಧ ಈ ಮೂರೂ ಪ್ರಮಾಗಳಿಗೆ ಒಂದು ಕಾರಣವಿರಬೇಕು. ಅದು ಗುಣ, ಎಂದು ಆ ಅನುಮಾನದ ಅಭಿಪ್ರಾಯ.

ಈ ಅನುಮಾನದ ಮೂಲಭೂತವಾದ ನಿರ್ಣಯವೇ ಸರಿ ಇಲ್ಲ. ಕಾರ್ಯಮಾತ್ರ ವೃತ್ತಿಧರ್ಮವು ಕಾರ್ಯತಾವಚ್ಛೇದಕ, ಎಂದು ಮೂಲಭೂತವಾದ ನಿಯಮ. ಆದರೆ ಅನಿತ್ಯಘಟಜ್ಞಾನತ್ವವು ಕಾರ್ಯಮಾತ್ರ ವೃತ್ತಿಯಾಗಿದೆ, ಅಕಾರ್ಯದಲ್ಲಿ ಅಂದರೆ ನಿತ್ಯದಲ್ಲಿ ಆ ಧರ್ಮ ಇಲ್ಲ. ಆದರೆ, ಅದು ಕಾರ್ಯತಾವಚ್ಛೇದಕವಲ್ಲ. ಅನಿತ್ಯಘಟಜ್ಞಾನ ಪ್ರತ್ಯಕ್ಷಾತ್ಮಕವಾಗಿರಬಹುದು, ಅನುಮಿತಿಯೂ ಆಗಿರಬಹುದು, ಶಾಬ್ದಬೋಧವೂ ಆಗಿರಬಹುದು. ಇವೆಲ್ಲಕ್ಕೆ ಸಾಮಾನ್ಯವಾದ ಒಂದು ಕಾರಣವಿಶೇಷವು ಇಲ್ಲ. ಆದಕಾರಣ ಅನಿತ್ಯಜ್ಞಾನತ್ವವು ಕಾರ್ಯತಾವಚ್ಛೇದಕವೇ ಅಲ್ಲ. ಅದರಂತೆ ಅನಿತ್ಯಪ್ರಮಾತ್ವವೂ ಕಾರ್ಯತಾವಚ್ಛೇದಕವಾಗಲೇಬೇಕೆಂಬ ನಿರ್ಬಂಧ ಸರಿಯಲ್ಲ.

ಇಷ್ಟೆ ಅಲ್ಲ. ಅನಿತ್ಯಪ್ರತ್ಯಕ್ಷಪ್ರಮಾಕ್ಕೆ ವಸ್ತುವಿನ ಅನೇಕ ಅವಯವಗಳಿಗೂ ಇಂದ್ರಿಯಕ್ಕೂ ಸಂಯೋಗವು (ಭೂಯೋಽವಯವೇಂದ್ರಿಯ ಸಂಯೋಗ) ಗುಣ, ಅನುಮಿತಿಗೆ ಯಥಾರ್ಥವಾದ ಲಿಂಗಪರಾಮರ್ಶವು ಗುಣ. ಶಬ್ದದಲ್ಲಿ ಆಪ್ತೋಕ್ತತ್ವವು ಗುಣ. ಹೀಗೆ ಬೇರೆ ಬೇರೆ ಪ್ರಮಾಕ್ಕೆ ಗುಣಗಳೂ ಬೇರೆ ಬೇರೆ ಎಂದೇ ನೈಯಾಯಿಕರ ಸಿದ್ಧಾಂತ. ಆದರೆ, ಅವೆಲ್ಲದರಲ್ಲೂ ಗುಣತ್ವ ಎಂಬ ಒಂದು ಸಾಮಾನ್ಯಧರ್ಮ ಇಲ್ಲ. ಆದ್ದರಿಂದ ಅನಿತ್ಯಪ್ರಮಾ ಸಾಮಾನ್ಯಕ್ಕೆ ಗುಣವು ಕಾರಣ, ಎಂದು ಅನುಗತವಾದ ಒಂದು ಕಾರಣವನ್ನೇ ಹೇಳಲಾಗದು. ಹೀಗಿರುವಾಗ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗುವುದು ಹೇಗೆ?

ಹೀಗೆ ಈ ಪ್ರಕರಣದಲ್ಲಿ ತಾರ್ಕಿಕರ ವಾದವನ್ನು ತಾರ್ಕಿಕ ರೀತಿಯಲ್ಲೇ ನಿರಾಕರಿಸಲಾಗಿದೆ.

## ।। ಪ್ರಕರಣ – 10 ।।

# ಪ್ರಕರಣ – 11

## ಅನಿತ್ಯಪ್ರಮಾಮಾತ್ರಾನುಗತಗುಣಭಂಗಃ

### ನ್ಯಾಯದೀಪದಲ್ಲಿ ಅವತಾರಿಕೆ

**ಯದುಕ್ತಮ್ ಅನುಗತಗುಣಾಭಾವೇನ ಅನುಮಾನದ್ವಯೇ ಬಾಧಾತ್, ಇತ್ಯಾದಿ ತನ್ನೇತಿ ಭಾವೇನ ಅನುಗತಗುಣಮ್ ಆಶಂಕ್ಯ ನಿರಾಹ–ಅಥೇತಿ ॥**

ಹಿಂದಿನ ಕೊನೆಯ ಎರಡು ಅನುಮಾನಗಳಿಗೆ ಬಾಧದೋಷವನ್ನು ಹೇಳಲು ಕಾರಣ, ಪ್ರಮಾಮಾತ್ರಸಾಧಾರಣವಾದ ಅನುಗತ ಗುಣಾಭಾವ. (ಅನುಗತಗುಣಾಭಾವೇನ ಅನುಮಾನ ದ್ವಯೇಽಪಿ ಬಾಧಾತ್–ಮೂಲ.ಪು.529) ಅದು ಸರಿಯಲ್ಲ. ಅನುಗತವಾದ, ಪ್ರಮಾಕಾರಣವಾದ ಗುಣ ಇದೆ, ಎಂದು ಆಕ್ಷೇಪಿಸಿ, ಅದಕ್ಕೆ ಸಮಾಧಾನವನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ.

अथ मतं, ग्राह्यप्रमा वा विशेष्यनिष्ठविशेषणज्ञानं वा अविद्यमाना-संसर्गाग्रहो वा गुणः प्रमामात्रेऽनुगतो हेतुः ।

नाचात्र प्रमाणाभावः । आद्ये पक्षे, विशिष्टज्ञानत्वेन विशेषणज्ञानजन्यां धारावाहिकोत्तरप्रमां प्रति विशेष्यमपि विषयीकुर्वन्त्याः पूर्वस्या ग्राह्यप्रमायाः कारणत्वे क्लृप्ते प्रमान्तरं प्रत्यपि ईश्वरनिष्ठाया ग्राह्यप्रमाया गुणत्वकल्पनात् ।

द्वितीयेऽपि विशिष्टज्ञानरूपं सामान्यं प्रति विशेषणज्ञानस्य विशेषणज्ञानत्वरूपेण सामान्येन कारणत्वे ''यत्सामान्ययोः कार्यकारणभावो बाधकाभावे सति तद्विशेषयोरपि सः'' इति न्यायेन विशिष्टप्रमां प्रति विशेष्यनिष्ठविशेषणज्ञानत्वेन कारणत्वकल्पनात् ।

तृतीयेऽपि संसर्गग्रहसामान्यं प्रत्यसंसर्गाग्रहमात्रस्य कारणत्वेन तद्विशेषस्याविद्यमानासंसर्गाग्रहस्य संसर्गप्रमां प्रति कारणत्वकल्पनात् इति ।।

1. ಗ್ರಾಹ್ಯವಾದ ವಸ್ತುವಿನ ಪ್ರಮಾವೇ ಗುಣ. (ಗ್ರಾಹ್ಯಸ್ಯ ಪ್ರಮಾ)

2. ಜ್ಞಾನದಲ್ಲಿ ಯಾವುದು ವಿಶೇಷ್ಯವೋ ಅದರಲ್ಲಿರುವ ವಿಶೇಷಣದ ಜ್ಞಾನ ಗುಣ.

3. ವಿಶೇಷಣ ಮತ್ತು ವಿಶೇಷ್ಯಗಳಿಗೆ ಇಲ್ಲದಿರುವ ಅಸಂಸರ್ಗದ ಅಗ್ರಹ ಗುಣ.

ಈ ಮೂರರಲ್ಲಿ ಯಾವುದಾದರೊಂದು ಸಕಲ ಪ್ರಮಾಕ್ಕೂ ಕಾರಣವಾಗಿರುವ ಅನುಗತವಾದ ಗುಣ. ಇವುಗಳಲ್ಲಿ ಒಂದೊಂದನ್ನೂ ಪ್ರಮಾಕ್ಕೆ ಕಾರಣವೆಂದು ಹೀಗೆ ಸಾಧಿಸಬಹುದು.

**1. ಗ್ರಾಹ್ಯಪ್ರಮಾ ಗುಣಃ–** ಘಟವನ್ನು ನೋಡಿ ಒಂದರ ನಂತರ ಒಂದರಂತೆ 'ಅಯಂ ಘಟಃ' ಎಂಬ ಧಾರಾವಾಹಿಕ ಜ್ಞಾನ ಹುಟ್ಟುತ್ತದೆ. ಅವುಗಳಲ್ಲಿ ಮೊದಮೊದಲಿನ ಜ್ಞಾನವು ಉತ್ತರೋತ್ತರದ ಜ್ಞಾನಗಳಿಗೆ 'ವಿಶಿಷ್ಟಜ್ಞಾನಂ ಪ್ರತಿ ವಿಶೇಷಣಜ್ಞಾನಂ ಕಾರಣಮ್' ಎಂಬ ನಿಯಮದಂತೆ ವಿಶೇಷಣ ಜ್ಞಾನವಿಧಯಾ ಕಾರಣ. ಪೂರ್ವಜ್ಞಾನವು ವಿಶೇಷಣವನ್ನು ಮಾತ್ರ ಗ್ರಹಿಸದೆ, ವಿಶೇಷ್ಯವನ್ನೂ ವಿಷಯೀಕರಿಸುತ್ತದೆ. ಆದ್ದರಿಂದ ಪೂರ್ವಜ್ಞಾನವು ಉತ್ತರಜ್ಞಾನಕ್ಕೆ ಸಮಷ್ಟಿಯಾಗಿ ಕಾರಣವೆಂದು ಧಾರಾವಾಹಿಕ ಸ್ಥಲದಲ್ಲಿ ಸಿದ್ಧವಾಗಿದೆ. ಅದಕ್ಕನುಗುಣವಾಗಿ ಸರ್ವತ್ರ ಪ್ರಮಾಸಾಮಾನ್ಯಕ್ಕೆ ತತ್ತತ್‌ಪ್ರಮಾಗ್ರಾಹ್ಯವಾದ ವಸ್ತುವಿನ ಪ್ರಮಾವು ಕಾರಣ, ಎಂದು ಸಾಮಾನ್ಯಕಾರ್ಯಕಾರಣ ಭಾವವನ್ನು ಕಲ್ಪಿಸಬಹುದು. ಹೀಗೆ ಕಾರ್ಯಕಾರಣಭಾವವು ಸಿದ್ಧವಾದ ಮೇಲೆ 'ಅಯಂ ಘಟಃ' ಎಂಬ ಒಂದೇ ಪ್ರಮಾ ಬಂದಾಗಲೂ ಅದಕ್ಕೆ ಘಟವಿಷಯಕ ಈಶ್ವರೀಯಪ್ರಮಾ ಕಾರಣ ಎಂದು ಕಲ್ಪನೆ ಮಾಡಬೇಕು. ಹೀಗೆ, ಸರ್ವತ್ರ ಜೀವೀಯ ಪ್ರಮಾಕ್ಕೆ ಗ್ರಾಹ್ಯಪ್ರಮಾವೇ ಗುಣ.

**2. ವಿಶೇಷ್ಯನಿಷ್ಠವಿಶೇಷಣಜ್ಞಾನಂ ಗುಣಃ –** ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ, ಎನ್ನುವುದು ಸಾಮಾನ್ಯಕಾರ್ಯಕಾರಣಭಾವ. ಪ್ರಮಾ ಎನ್ನುವುದು ವಿಶಿಷ್ಟಜ್ಞಾನವಿಶೇಷ. ಸಾಮಾನ್ಯಗಳಿಗೆ ಕಾರ್ಯಕಾರಣಭಾವ ಇದ್ದರೆ ಬಾಧಕವಿಲ್ಲದಿದ್ದಾಗ ವಿಶೇಷಗಳಿಗೂ ಅದೇ ರೀತಿಯ ಕಾರ್ಯಕಾರಣಭಾವ ಇರುತ್ತದೆ ಎಂದು ನಿಯಮ. ಪ್ರಮಾವು ವಿಶಿಷ್ಟ ಜ್ಞಾನವಿಶೇಷವಾದುದರಿಂದ ವಿಶಿಷ್ಟ ಪ್ರಮಾಂ ಪ್ರತಿ ವಿಶೇಷ್ಯನಿಷ್ಠ ವಿಶೇಷಣಜ್ಞಾನವು ಕಾರಣ, ಎಂದು ವಿಶೇಷಕಾರ್ಯಕಾರಣ ಭಾವವೂ ಸಿದ್ಧವಾಗುತ್ತದೆ. ಹೀಗೆ ಪ್ರಮಾಕ್ಕೆ ಕಾರಣವಾದ ವಿಶೇಷ್ಯನಿಷ್ಠವಾದ ವಿಶೇಷಣದ ಜ್ಞಾನವೇ ಗುಣ. ವಿಶೇಷಣವು ವಿಶೇಷ್ಯನಿಷ್ಠವಾಗಿದ್ದರೆ ಅದರ ಜ್ಞಾನವು ಪ್ರಮಾವೇ ಆಗಿರಬೇಕು. ಕೇವಲ ವಿಶೇಷಣ ಜ್ಞಾನಜನ್ಯವಾದರೆ ಆ ಜ್ಞಾನವು ಪ್ರಮೆಯೂ ಆಗಬಹುದು, ಭ್ರಮೆಯೂ ಆಗಬಹುದು. ವಿಶೇಷ್ಯನಿಷ್ಠ ವಿಶೇಷಣಜ್ಞಾನ ಜನ್ಯವಾದರೆ ಅದು ಪ್ರಮೆಯೇ ಆಗಿರಬೇಕು.

**3. ಅವಿದ್ಯಮಾನ–ಅಸಂಸರ್ಗ–ಅಗ್ರಹಃ ಗುಣಃ –** ಭೂತಲಕ್ಕೂ ಘಟಕ್ಕೂ ಸಂಯೋಗ ಸಂಸರ್ಗವು ವಿದ್ಯಮಾನ. ಅಸಂಸರ್ಗವು ಅವಿದ್ಯಮಾನ. ಅದರ ಅಗ್ರಹ ಮೊದಲು ಇದ್ದರೆ 'ಘಟವದ್ ಭೂತಲಂ' ಎಂಬ ಜ್ಞಾನವು ಘಟದ ಸಂಯೋಗವನ್ನು ಗ್ರಹಿಸುವುದರಿಂದಾಗಿ ಪ್ರಮಾ ಆಗುತ್ತದೆ. ಶುಕ್ತಿಯಲ್ಲಿ 'ಇದಂ ರಜತಂ' ಎಂಬ ಜ್ಞಾನ ಬರುವ ಮೊದಲು ಶುಕ್ತಿಗೂ ರಜತಕ್ಕೂ

ತಾದಾತ್ಮ್ಯಾಭಾವವು ಅವಿದ್ಯಮಾನ ಅಲ್ಲ, ವಿದ್ಯಮಾನ. ಅಥವಾ, ಶುಕ್ತಿಗೂ ರಜತತ್ವಕ್ಕೂ ಅಸಂಸರ್ಗವು ವಿದ್ಯಮಾನ. ಹೀಗೆ, ಭ್ರಮಸ್ಥಲದಲ್ಲಿ ವಿದ್ಯಮಾನವಾದ ಅಸಂಸರ್ಗದ ಅಗ್ರಹವಿದ್ದರೆ ಪ್ರಮಾಸ್ಥಲದಲ್ಲಿ ವಿಶೇಷಣವಿಶೇಷ್ಯಗಳಿಗೆ ಸಂಸರ್ಗಾಭಾವವು ಅವಿದ್ಯಮಾನವಾಗಿರುತ್ತದೆ. ಅದರ ಗ್ರಹ ಇಲ್ಲದಿರುವುದು ಪ್ರಮೆಗೆ ಕಾರಣ.

ಇದನ್ನು ಪ್ರಮಾಕಾರಣ ಎಂದು ಹೀಗೆ ಸಾಧಿಸಬೇಕು—ಸಂಸರ್ಗಗ್ರಹಕ್ಕೆ ಅಸಂಸರ್ಗಾಗ್ರಹವು ಕಾರಣ ಎಂದು ಸಾಮಾನ್ಯಕಾರ್ಯಕಾರಣಭಾವವು ಸಿದ್ಧವಾಗಿದೆ. ಭೂತಲದಲ್ಲಿ ಘಟಸಂಸರ್ಗಜ್ಞಾನವು (ಘಟವದ್ ಭೂತಲಂ) ಬರಬೇಕಾದರೆ ಘಟ-ಭೂತಲಗಳಿಗೆ ಅಸಂಸರ್ಗ ಜ್ಞಾನವು ಇರಬಾರದು. ಅದು ಸಂಸರ್ಗಜ್ಞಾನಕ್ಕೆ ವಿರೋಧಿಯಾದ ಜ್ಞಾನವಾದುದರಿಂದ ಪ್ರತಿಬಂಧಕ. ತದಭಾವವು ಕಾರಣ. ಈ ಸಾಮಾನ್ಯ ಕಾರ್ಯಕಾರಣಭಾವದ ಆಧಾರದಲ್ಲಿ ವಿಶೇಷ ಕಾರ್ಯಕಾರಣ ಭಾವವನ್ನು ಹೀಗೆ ಕಲ್ಪಿಸಬೇಕು-ಸಂಸರ್ಗಪ್ರಮಾಂ ಪ್ರತಿ ಅವಿದ್ಯಮಾನ ಅಸಂಸರ್ಗ ಅಗ್ರಹಃ ಕಾರಣಮ್, ಎಂದು.

ಹೀಗೆ ಮೂರು ವಿಧವಾಗಿ ಪ್ರಮಾಕಾರಣವಾದ ಅನುಗತ ಗುಣವನ್ನು ಕಲ್ಪಿಸಬಹುದು, ಎಂದು ನೈಯಾಯಿಕರ ವಾದ.

## ನ್ಯಾಯದೀಪ

**ಯದ್ಯಪಿ ಪ್ರಮಾಮಾತ್ರೇ ನಾನುಗತೋ ಗುಣಃ, ಇತ್ಯೇವೋಕ್ತಂ ಮಣೌ, ತಥಾಪಿ ಪಕ್ಷಧರ-ಪ್ರಗಲ್ಭಾದಿವ್ಯಾಖ್ಯಾತೃಭಿಃ ಅನುಗತಗುಣಸ್ಯ ಉಕ್ತತ್ವಾತ್ ತನ್ಮತಾಶಂಕೇಯಮ್ । ಗ್ರಾಹ್ಯೇತಿ॥ ಯೇನ ಯತ್ ಗ್ರಾಹ್ಯಂ ತತ್ರ ತತ್ ಪ್ರಮಾ ಹೇತುಃ ಇತ್ಯರ್ಥಃ । ವಿಶೇಷ್ಯನಿಷ್ಠೇತಿ ॥ ವಿಶೇಷ್ಯಸಂಬದ್ಧೇತ್ಯರ್ಥಃ । ತೇನ 'ಆಕಾಶೇ ಶಬ್ದಃ' ಇತ್ಯಾದೌ ನ ದೋಷಃ । ಅವಿದ್ಯಮಾನೋ ಯೋ ಅಸಂಸರ್ಗಃ= ಧರ್ಮ-ಧರ್ಮಿಸಂಬಂಧಾಭಾವಃ, ತದಗ್ರಹಃ ಇತಿ ತೃತೀಯಪಕ್ಷಾರ್ಥಃ ।**

ಮೂಲದಲ್ಲಿ ಸಕಲ ಪ್ರಮಾಕ್ಕೂ ಅನುಗತವಾದ ಗುಣವನ್ನು ನಿರೂಪಿಸಲಾಗಿದೆ. ಮಣಿಕಾರ ಮಾತ್ರ 'ಸಕಲ ಪ್ರಮಾಕ್ಕೂ ಕಾರಣವಾದ ಅನುಗತವಾದ ಗುಣವು ಇಲ್ಲ' (ಪು.353) ಎಂದಿದ್ದಾನೆ. ಆದರೂ, ಮಣಿಗ್ರಂಥದ ವ್ಯಾಖ್ಯಾಕಾರ ಪಕ್ಷಧರಮಿಶ್ರ-'ಅಸ್ಮನ್ಮತೇ ತು ಅನುಗತಸಾಮಾನ್ಯೋ ಗುಣೋ ಅಸ್ತೀತಿ ವಯಂ ವಕ್ಷ್ಯಾಮಃ' ಎಂದು ಹೇಳಿ 'ಗ್ರಾಹ್ಯಪ್ರಮಾ ಗುಣಃ' ಎಂದಿರುತ್ತಾನೆ. ಪ್ರಗಲ್ಭಮಿಶ್ರನು (15ನೇ ಶತಮಾನದಲ್ಲಿ ಮಿಥಿಲೆಯಲ್ಲಿದ್ದ. ಚಿಂತಾಮಣಿ ವ್ಯಾಖ್ಯಾಕಾರ) ಉಳಿದೆರಡು ಗುಣಗಳನ್ನು ತೋರಿಸಿದ್ದಾನೆ. ಹೀಗೆ, ಅವರು ಹೇಳಿದ ಗುಣಗಳನ್ನು ಅನುವಾದ ಮಾಡಿ ಮೂಲದಲ್ಲಿ ನಿರಾಕರಿಸಲಾಗಿದೆ.

ಗ್ರಾಹ್ಯಪ್ರಮಾ ಗುಣ ಎಂದರೆ ಯಾರಿಂದ ಯಾವ ವಸ್ತುವು ಗ್ರಾಹ್ಯವೋ ಆ ವಸ್ತುವಿನ ಯಥಾರ್ಥಜ್ಞಾನವು ಪ್ರಮಾಕಾರಣವಾದ ಗುಣ, ಎಂದರ್ಥ.

ವಿಶೇಷ್ಯನಿಷ್ಠ ವಿಶೇಷಣಜ್ಞಾನಂ ಗುಣಃ, ಎಂಬ ಎರಡನೆಯ ಕಲ್ಪದಲ್ಲಿ ವಿಶೇಷ್ಯನಿಷ್ಠ ಎಂದರೆ ವಿಶೇಷ್ಯದಲ್ಲಿ ಇರುವ, ಎಂದು ಅರ್ಥವಲ್ಲ. ಹಾಗೆ ಅರ್ಥ ಹೇಳಿದರೆ 'ಆಕಾಶೇ ಶಬ್ದಃ' ಎಂಬ ಪ್ರಮಾದಲ್ಲಿ ಗುಣ ಇಲ್ಲದಾದೀತು. ಅಲ್ಲಿ ವಿಶೇಷ್ಯ ಶಬ್ದ, ಅದರಲ್ಲಿ ವಿಶೇಷಣವಾದ ಆಕಾಶವು ಇಲ್ಲ. ಆದ್ದರಿಂದ ವಿಶೇಷ್ಯ ಸಂಬದ್ಧ ಎಂದು ಅರ್ಥ. ಆಕಾಶದ ಸಂಬಂಧವು ಶಬ್ದಕ್ಕಿದೆ.

## ನ್ಯಾಯದೀಪ

**ಮತತ್ರಯೇಽಪಿ ಕ್ರಮೇಣ ಯುಕ್ತೀರಾಹ–ಆದ್ಯೇತ್ಯಾದಿನಾ ॥ ಪ್ರಮಾಂತರಂ ಪ್ರತೀತಿ ॥ ಅನುಭವಂ ಪ್ರತೀತ್ಯರ್ಥಃ। ವಿಶಿಷ್ಟೇತಿ ॥ ಜನ್ಯ–ವಿಶಿಷ್ಟ ಜ್ಞಾನೇತ್ಯರ್ಥಃ।**

ಮೂರು ವಿಧದ ಗುಣಗಳು ಕಾರಣ ಎನ್ನುವುದಕ್ಕೆ ಮೂಲದಲ್ಲಿ 'ಆದ್ಯೇ' ಇತ್ಯಾದಿಯಾಗಿ ಯುಕ್ತಿಯನ್ನು ಕೊಡಲಾಗಿದೆ.

## ಗ್ರಾಹ್ಯಪ್ರಮಾಕ್ಕೆ ಗುಣತ್ವಭಂಗ

**मैवम् – आद्यपक्षे धारावाहिकपूर्वप्रमायां ग्राह्यप्रमात्वे सत्यपि तस्या विशेषणज्ञानत्वेनैव कारणतया ग्राह्यप्रमात्वेन तदभावात् ।**

**तत्र तस्याः समानाधिकरणाया एव कारणत्वक्लृप्त्या प्रमान्तरेऽपि (समानाधिकरणाया एव कारणत्वक्लृप्त्या प्रमात्वेऽपि) समानाधिकरणाया एव तत्कल्पनाप्रसङ्गाच्च ।।**

1. ಈ ರೀತಿಯಿಂದ 'ಗುಣ'ದ ಕಲ್ಪನೆ ಸರಿಯಲ್ಲ. ಮೂರು ವಿಧದ ಗುಣಗಳಲ್ಲಿ ಮೊದಲನೆಯ ಪಕ್ಷ–ಗ್ರಾಹ್ಯಪ್ರಮಾ ಗುಣ, ಎಂದು. ಇದಕ್ಕೆ ಕೊಟ್ಟ ಸಮರ್ಥನೆ ಧಾರಾವಾಹಿಕ ಪ್ರಮೆಯಲ್ಲಿ ಪ್ರಥಮ ಜ್ಞಾನವು ದ್ವಿತೀಯ ಜ್ಞಾನಕ್ಕೆ ಕಾರಣ, ಎಂದು. ಪ್ರಥಮಜ್ಞಾನವು ವಿಶೇಷಣ ಜ್ಞಾನತ್ವೇನ ದ್ವಿತೀಯವಿಶಿಷ್ಟಜ್ಞಾನಕ್ಕೆ ಕಾರಣ, ಹೊರತು ಗ್ರಾಹ್ಯಪ್ರಮಾತ್ವೇನ ಕಾರಣ ಅಲ್ಲ. ಆದ್ದರಿಂದ ಅಲ್ಲಿ 'ಗ್ರಾಹ್ಯಪ್ರಮಾವು ಕಾರಣ' ಎಂಬ ವಿವಕ್ಷಿತ ಅಂಶವು ಸಿದ್ಧವಾಗುವುದಿಲ್ಲ.

2. ಅದು ಗ್ರಾಹ್ಯಪ್ರಮಾತ್ವೇನ ಕಾರಣ ಎಂದು ಒಪ್ಪಿಕೊಂಡರೂ ಪೂರ್ವಜ್ಞಾನ ಮತ್ತು

ಉತ್ತರಜ್ಞಾನಗಳು ಒಬ್ಬ ವ್ಯಕ್ತಿಗೇ ಬಂದಿರುವುದರಿಂದ ಉತ್ತರ ಪ್ರಮಾಕ್ಕೆ ಪೂರ್ವಪ್ರಮಾವು ಸಮಾನಾಧಿಕರಣತಯಾ ಕಾರಣ. ಇದರಿಂದ ಇತರ ಪ್ರಮಾಗಳಿಗೆ ಗುಣತ್ವೇನ ಕಲ್ಪಿಸುವ ಈಶ್ವರ ಪ್ರಮಾವು ವ್ಯಧಿಕರಣವಾಗುವುದರಿಂದ ಅದು ನಮ್ಮಲ್ಲಿರುವ ಪ್ರಮಾಕ್ಕೆ ಕಾರಣವಾದ ಗುಣ ಎನಿಸಲಾರದು. ಧಾರಾವಾಹಿಕದ ದೃಷ್ಟಾಂತದಿಂದ ಸಮಾನಾಧಿಕರಣ ಗ್ರಾಹ್ಯ ಪ್ರಮಾವೇ ಗುಣ ಎಂದು ಕಲ್ಪಿಸಬೇಕೇ ವಿನಃ ವ್ಯಧಿಕರಣವಾದ ಪ್ರಮಾವು ಗುಣವೆಂದು ಸಿದ್ಧವಾಗಲಾರದು.

## ನ್ಯಾಯದೀಪ

**ತದಭಾವಾದಿತಿ ॥ ಕಾರಣತ್ವಾಭಾವಾತ್, ಇತ್ಯರ್ಥಃ। ಗ್ರಾಹ್ಯಪ್ರಮಾತ್ವೇನೈವ ಕಾರಣತ್ವಮ್, ಇತ್ಯತ್ರ ಕಲ್ಪಕಾಭಾವಾತ್ ಇತ್ಯರ್ಥಃ।**

**ನ ಚಶಾಬ್ದಪ್ರಮಾಯಾಂ ಗ್ರಾಹ್ಯವಿಶೇಷಸ್ಯ ವಾಕ್ಯಾರ್ಥಸ್ಯ ಪ್ರಮಾ ಹೇತುರಿತಿ ಪ್ರಮಾಸಾಮಾನ್ಯೇ ಗ್ರಾಹ್ಯಪ್ರಮಾಸಾಮಾನ್ಯಂ ಹೇತುರಿತಿ ವಾಚ್ಯಮ್ । ತಥಾಪಿ ಗ್ರಾಹ್ಯಪ್ರಮಾಮಾತ್ರಸ್ಯ ಅತಿಪ್ರಸಕ್ತತಯಾ ತದ್-ಗ್ರಾಹ್ಯಪ್ರಮಾಯಾಂ ತದ್‌ಗ್ರಾಹ್ಯಪ್ರಮಾ ಹೇತುಃ ಇತ್ಯನನುಗಮ ಏವ, ಇತಿ ಅನುಗತಗುಣಾ-ಲಾಭಾತ್ । ಅಪ್ರಮಾತ್ವೇ ದೃಷ್ಟಾಂತೇ ಸಾಧ್ಯವೈಕಲ್ಯಸ್ಯ ಏವಮಪಿ ಅಪರಿಹಾರಾಚ್ಚ, ಇತಿ ಭಾವಃ ।**

ಧಾರಾವಾಹಿಕಪೂರ್ವಜ್ಞಾನವು ಉತ್ತರಜ್ಞಾನಕ್ಕೆ ಗ್ರಾಹ್ಯಪ್ರಮಾತ್ವೇನ ಕಾರಣ, ಎಂದು ಕಲ್ಪನೆ ಮಾಡಲು ಆಧಾರವಿಲ್ಲ. ಅದು ವಿಶೇಷಣಜ್ಞಾನತ್ವೇನ ಕಾರಣ ಎಂದಷ್ಟೇ ಹೇಳಿದರೂ ಸಾಕು. ಇದು ಮೂಲದ ತದಭಾವಾತ್, ಎಂಬ ಪದದ ತಾತ್ಪರ್ಯ.

ಗ್ರಾಹ್ಯಪ್ರಮಾ ಕಾರಣ, ಎಂದು ಹೀಗೆ ಸಾಧಿಸಬಹುದು-ಶಾಬ್ದ ಪ್ರಮಾಕ್ಕೆ, ಗ್ರಾಹ್ಯವಾದ ವಾಕ್ಯಾರ್ಥದ ಪ್ರಮಾವು ಕಾರಣ. ಏಕೆಂದರೆ, ಶಾಬ್ದಬೋಧಕ್ಕೆ ಯೋಗ್ಯತಾಜ್ಞಾನ ಕಾರಣ. ಯೋಗ್ಯತಾ ಜ್ಞಾನ ಎಂದರೆ ವಾಕ್ಯಾರ್ಥಜ್ಞಾನ. ಹೀಗೆ, ವಾಕ್ಯಾರ್ಥ ಪ್ರಮಾಕ್ಕೆ ಗ್ರಾಹ್ಯ ಪ್ರಮಾ ಕಾರಣ ಎಂಬ ವಿಶೇಷಕಾರ್ಯಕಾರಣಭಾವದಿಂದ ಪ್ರಮಾಸಾಮಾನ್ಯಕ್ಕೆ ಗ್ರಾಹ್ಯಪ್ರಮಾ ಕಾರಣ ಎಂದು ಸಾಮಾನ್ಯ ಕಾರ್ಯ-ಕಾರಣಭಾವವನ್ನು ಕಲ್ಪನೆ ಮಾಡಬಹುದು.

ಇದು ಸರಿಯಲ್ಲ. ಗ್ರಾಹ್ಯಪ್ರಮಾತ್ವವು ಅತಿಪ್ರಸಕ್ತಧರ್ಮ. 'ಘಟವದ್‌ಭೂತಲಂ' ಎಂಬ ಜ್ಞಾನಕ್ಕೆ ಗ್ರಾಹ್ಯಪ್ರಮಾ ಎಂದರೆ 'ಘಟವದ್‌ಭೂತಲಂ' ಎಂಬ ಜ್ಞಾನ ಹೇಗೋ 'ಪಟವದ್ ಭೂತಲಂ' ಎಂಬ ಜ್ಞಾನವೂ ಗ್ರಾಹ್ಯಪ್ರಮಾ ಆಗುತ್ತದೆ. ಪಟವಿಶಿಷ್ಟಭೂತಲವೂ ಜ್ಞಾನಾಂತರ ಗ್ರಾಹ್ಯವೇ ಆಗಿದೆ. ಆದ್ದರಿಂದ ತದ್‌ಗ್ರಾಹ್ಯಪ್ರಮಾಯಾಂ ತದ್‌ಗ್ರಾಹ್ಯಪ್ರಮಾ ಹೇತುಃ, ಎಂದು

ವ್ಯಕ್ತಿಭೇದೇನ ಭಿನ್ನಭಿನ್ನವಾದ ಕಾರ್ಯಕಾರಣಭಾವವನ್ನೇ ಹೇಳಬೇಕು. ಆಗ ಅನನುಗಮವೇ ಬಂತು, ಪ್ರಮಾಸಾಮಾನ್ಯಕ್ಕೆ ಅನುಗತ ಗುಣವು ಕಾರಣ ಎಂಬ ಸಿದ್ಧಾಂತ ಸ್ಥಾಪನೆಯಾಗುವುದಿಲ್ಲ. ಅಲ್ಲದೆ, ಅನುಗತಗುಣವನ್ನು ಸ್ಥಾಪನೆ ಮಾಡಿ ಬಾಧದೋಷವನ್ನು ಪರಿಹಾರ ಮಾಡಿದರೂ ಅನುಗತದೋಷವು ಇಲ್ಲದಿರುವುದರಿಂದ ಹಿಂದೆ ಹೇಳಿದ, ಅಪ್ರಮಾರೂಪದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಪರಿಹಾರ ಮಾಡಲು ಸಾಧ್ಯವಿಲ್ಲ.

## ನ್ಯಾಯದೀಪ

**ನನ್ವಸ್ತು ವಿಶೇಷಣಜ್ಞಾನತ್ವೇನೈವ ಹೇತುತಾ ಇತ್ಯತ ಆಹ–ತತ್ರೇತಿ ॥ ಯದ್ವಾ ಗ್ರಾಹ್ಯಪ್ರಮಾತ್ವೇನ ತತ್ರ ಕಾರಣತ್ವೇಽಪಿ ನ ಸರ್ವತ್ರಾನುಗತಗುಣಲಾಭಃ ಇತ್ಯಾಹ–ತತ್ರೇತಿ ॥ ಉಕ್ತವಿಶಿಷ್ಟಪ್ರಮಾಯಾಂ, ತಸ್ಯಾಃ ವಿಶೇಷಣಪ್ರಮಾತ್ವೇನ ಹೇತುಭೂತಪೂರ್ವಪ್ರಮಾಯಾಃ ಇತ್ಯರ್ಥಃ। ಕ್ಲೃಪ್ತ್ಯಾ ಇತಿ ॥ ಅನ್ಯಥಾ ಅತಿಪ್ರಸಂಗಾತ್, ನಿರ್ವಿಕಲ್ಪಕಾನಾದರಾಪತ್ತೇಶ್ಚ ಇತಿ ಭಾವಃ ॥**

ಧಾರಾವಾಹಿಕ ಪ್ರಮಾ ಸ್ಥಳದಲ್ಲಿ ಪೂರ್ವಪ್ರಮಾವು ಉತ್ತರಪ್ರಮಾಕ್ಕೆ ಗ್ರಾಹ್ಯಪ್ರಮಾತ್ವೇನ ಹೇತುವಾಗದಿದ್ದರೂ ವಿಶೇಷಣಜ್ಞಾನತ್ವೇನೈವ ಹೇತುವಾಗಲಿ. ಅದೇ ಗುಣವೆಂದು ಪರಿಗಣಿಸ ಬಹುದು, ಎಂದರೆ ಆದಕ್ಕೆ 'ತತ್ರ' ಎಂದು ಸಮಾಧಾನ. ವಿಶೇಷಣ ಜ್ಞಾನತ್ವೇನ ಪೂರ್ವಜ್ಞಾನವು ಸಮಾನಾಧಿಕರಣವಾಗಿಯೇ ಹೇತುವಾದ್ದರಿಂದ ಅನ್ಯತ್ರ, ವ್ಯಧಿಕರಣವಾದ ಈಶಪ್ರಮಾವು ಗುಣವಾಗಲು ಸಾಧ್ಯವಿಲ್ಲ, ಎಂದು ಸಮಾಧಾನ.

ಅಥವಾ, ತತ್ರ ಎಂಬ ವಾಕ್ಯಕ್ಕೆ ಹೀಗೂ ಸಂದರ್ಭವನ್ನು ಹೇಳಬಹುದು. ಧಾರಾವಾಹಿಕ ಪ್ರಮಾಸ್ಥಳದಲ್ಲಿ ಪೂರ್ವಜ್ಞಾನವು ಗ್ರಾಹ್ಯಪ್ರಮಾತ್ವೇನ ಕಾರಣ, ಎಂದು ಒಪ್ಪಿದರೂ ಅನ್ಯತ್ರ ಅಂತಹ ಗುಣ ಇರಲು ಸಾಧ್ಯವಿಲ್ಲ ಎಂದು ಹೇಳಲು 'ತತ್ರ' ಎಂಬ ಪ್ರಕರಣ ಇದೆ. ಅದು ಸಮಾನಾಧಿ ಕರಣವಾಗಿಯೇ ಅಲ್ಲಿ ಕಾರಣವಾದುದರಿಂದ ವ್ಯಧಿಕರಣವಾದ ಈಶ್ವರ ಪ್ರಮಾವನ್ನು ಅನ್ಯತ್ರ ಗುಣ ಎಂದು ಹೇಳಲು ಬರುವುದಿಲ್ಲ, ಎಂದು ಅರ್ಥ.

ವಿಶೇಷಣಜ್ಞಾನವು ಸಮಾನಾಧಿಕರಣತಯೈವ ಕಾರಣ, ವ್ಯಧಿಕರಣವಾಗಿ ಕಾರಣವಾದರೆ ಚೈತ್ರನಿಗೆ ವಿಶೇಷಣಜ್ಞಾನವಿದ್ದಾಗ ಮೈತ್ರನಿಗೆ ವಿಶಿಷ್ಟಜ್ಞಾನ ಬರಬೇಕಾದೀತು. ಅಷ್ಟೇ ಅಲ್ಲ. ಹೀಗೆ ಹೇಳಿದರೆ, ನಿರ್ವಿಕಲ್ಪಕಜ್ಞಾನವನ್ನು ಕೈಬಿಡಬೇಕಾದೀತು. ಚೈತ್ರನ ಘಟತ್ವ ವಿಶಿಷ್ಟಘಟಜ್ಞಾನಕ್ಕೆ ಈಶ್ವರನಲ್ಲಿರುವ ವಿಶೇಷಣಜ್ಞಾನವು ಕಾರಣ ಎಂದು ಹೇಳಬಹುದು. ಚೈತ್ರನಿಗೇ ಘಟತ್ವದ ನಿರ್ವಿಕಲ್ಪಕ ಜ್ಞಾನಬೇಕಾಗಿಲ್ಲ, ಎನ್ನಬೇಕಾದೀತು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು, ಈಶ್ವರಜ್ಞಾನಸ್ಯ ಪ್ರಕಾರಾಂತರೇಣ ಹೇತುತ್ವಾತ್ ಕ್ಲೃಪ್ತೇರ್ವಾ ಪ್ರಮಾತ್ವಸ್ಯ ಗುಣಪ್ರಯೋಜ್ಯತ್ವಾನ್ಯಥಾನುಪಪತ್ತ್ಯಾ ವಾ ಏತತ್ ಕಲ್ಪ್ಯತೇ ಇತ್ಯತ ಆಹ– ಈಶ್ವರೇತಿ ।।**

ಈಶ್ವರಜ್ಞಾನವು ಕಾರ್ಯಸಾಮಾನ್ಯಕ್ಕೆ ಕಾರಣವೆಂದು ಸಿದ್ಧವಾದುದರಿಂದ ಅಥವಾ, ಪ್ರಮಾತ್ವವು ಗುಣಪ್ರಯೋಜ್ಯವೆಂದು ಹೇಳುವುದು ಅನಿವಾರ್ಯವಾದ ಕಾರಣ ತದನ್ಯಥಾನು-ಪಪತ್ತ್ಯಾ ಈಶ್ವರಜ್ಞಾನವು ಹೇತುವೆಂದು ಕಲ್ಪಿಸಬೇಕು, ಎಂಬ ಆಕ್ಷೇಪಕ್ಕೆ ಮುಂದಿನ ಗ್ರಂಥದಲ್ಲಿ ಸಮಾಧಾನವಿದೆ—

**ईश्वरज्ञानस्य भ्रमं प्रतीवोपादानसाक्षात्कारतयैव कारणत्वस्य क्लृप्तत्वेन ग्राह्यप्रमात्वेन कारणत्वकल्पनस्य प्रामाण्यपरतस्त्वनिश्चयाधीनत्वेन अन्योन्याश्रयाच्च ।।**

ಈಶ್ವರಜ್ಞಾನವು ಕಾರ್ಯಸಾಮಾನ್ಯಕ್ಕೆ ಕಾರಣ ಹೌದು. ಅದು ಉಪಾದಾನವಿಷಯಕ-ಅಪರೋಕ್ಷಜ್ಞಾನತ್ವೇನ ಕಾರಣ, ಹೊರತು ಗ್ರಾಹ್ಯಪ್ರಮಾತ್ವೇನ ಅಲ್ಲ. ಏಕೆಂದರೆ, ಅದು ಭ್ರಮೆಗೂ ಕಾರಣ. ಆಗ ಗ್ರಾಹ್ಯಭ್ರಮತ್ವೇನ ಕಾರಣ ಎಂದರೆ ಈಶ್ವರನಿಗೂ ಭ್ರಮೆ ಇದೆ, ಎನ್ನಬೇಕಾದೀತು. ಹೀಗಾಗಿ, ಭ್ರಮೆಗೆ ಉಪಾದಾನವಿಷಯಕಜ್ಞಾನತ್ವೇನ ಹೇಗೆ ಅದು ಕಾರಣವೋ ಅದರಂತೆ, ಪ್ರಮಾಕ್ಕೂ ಅದೇ ರೀತಿಯಿಂದ ಕಾರಣ. ಇನ್ನು, ಗುಣಜನ್ಯತ್ವಾನ್ಯಥಾನುಪಪತ್ತ್ಯಾ ಗ್ರಾಹ್ಯ ಪ್ರಮಾತ್ವೇನ ಪ್ರಮೆಗೆ ಕಾರಣ, ಎಂದು ಕಲ್ಪಿಸಿದರೆ ಅನ್ಯೋನ್ಯಾಶ್ರಯದೋಷ. ಪ್ರಾಮಾಣ್ಯಂ ಪರತಃ (ಗುಣಜನ್ಯ) ಎಂದು ನಿಶ್ಚಯವಾದರೆ ತದನ್ಯಥಾನುಪಪತ್ತ್ಯಾ ಈಶ್ವರಜ್ಞಾನವು ಗ್ರಾಹ್ಯಪ್ರಮಾತ್ವೇನ ಕಾರಣ ಎಂದು ಸಿದ್ಧವಾಗುತ್ತದೆ. ಹಾಗೆ ಅದು ಕಾರಣವಾದರೆ ಪ್ರಾಮಾಣ್ಯಕ್ಕೆ ಗುಣಜನ್ಯತ್ವ ಸಿದ್ಧವಾಗುತ್ತದೆ. ಹೀಗೆ, ಅನ್ಯೋನ್ಯಾಶ್ರಯ.

**लिङ्गाभासविप्रलम्भकवाक्यजन्ययोः यादृच्छिकसंवादेन प्रमयोः त्वदुक्तव्यधिकरणगुणजन्यत्ववत् समानाधिकरणदोषजन्यत्वस्यापि सत्वेन अप्रामाण्यस्याप्यापाताच्च ।।**

3. ಕೆಲವೊಮ್ಮೆ ಭ್ರಮಾತ್ಮಕವಾದ ಪರಾಮರ್ಶದಿಂದಲೂ (ಲಿಂಗಾಭಾಸ) ಪ್ರಮಾತ್ಮಕವಾದ ಅನುಮಿತಿಯು ಬರುತ್ತದೆ. ವಹ್ನಿಯು ಧೂಮವ್ಯಾಪ್ಯ ಎಂದು ಭ್ರಮಿಸಿ 'ಧೂಮವ್ಯಾಪ್ಯ ವಹ್ನಿಮಾನ್ ಮಹಾನಸಃ' ಎಂಬ ಪರಾಮರ್ಶದಿಂದ 'ಮಹಾನಸಃ ಧೂಮವಾನ್' ಎಂದು ಅನುಮಿತಿ ಬರುತ್ತದೆ. ಆ ಅನುಮಿತಿ ಪ್ರಮಾತ್ಮಕವಾಗಿದೆ.

ಇದರಂತೆ, ವಿಪ್ರಲಂಭಕ ಹೇಳಿದ 'ನದೀತೀರೇ ಪಂಚಫಲಾನಿ ಸಂತಿ' ಎಂಬ ವಾಕ್ಯಾಭಾಸದಿಂದ ಪ್ರಮಾತ್ಮಕವಾದ ಜ್ಞಾನವೇ ಹುಟ್ಟಬಹುದು. ಇದು ಯಾದೃಚ್ಛಿಕಸಂವಾದಿವಾಕ್ಯ. ಇದೂ ಯಾದೃಚ್ಛಿಕವಾಗಿ ಪ್ರಮಾಜನಕವಾಗುತ್ತದೆ.

ಇಂತಹ ಪ್ರಮೆಗಳಿಗೆ ಈಶ್ವರೀಯಪ್ರಮಾವನ್ನು ಗುಣ, ಎಂದು ಹೇಳಬೇಕು. ಅದು ವ್ಯಧಿಕರಣಗುಣ. ಅಂದರೆ, ಪ್ರಮಾ ಬರುವ ವ್ಯಕ್ತಿಯಲ್ಲಿ ಇಲ್ಲ, ಈಶ್ವರನಲ್ಲಿದೆ. ವಾಕ್ಯಪ್ರಯೋಗ ಮಾಡಿದವನಲ್ಲೂ ಇಲ್ಲ. ಅಂತಹ ಗುಣದಿಂದ ಜನ್ಯವಾದುದರಿಂದ ಅದು ಪ್ರಮಾ ಆಗುವುದಾದಲ್ಲಿ ಅನುಮಿತಿ ಬರುವ ವ್ಯಕ್ತಿಯಲ್ಲೇ ಇರುವ, ಆದ್ದರಿಂದಲೇ ಸಮಾನಾಧಿಕರಣವಾದ ಭ್ರಾಂತ್ಯಾತ್ಮಕ ಪರಾಮರ್ಶರೂಪವಾದ ದೋಷದಿಂದ ಜನ್ಯವಾದುದರಿಂದ ಅದು ಅಪ್ರಮಾ ಏಕಾಗಬಾರದು?

ಆದರಂತೆ, ವಾಕ್ಯಪ್ರಯೋಗ ಮಾಡುವ ವ್ಯಕ್ತಿಯಲ್ಲೇ ಇರುವ ವಿಪ್ರಲಂಭರೂಪದೋಷ ದಿಂದ ಜನ್ಯವಾದುದರಿಂದ ಶಾಬ್ದಬೋಧವು ಅಪ್ರಮಾತ್ಮಕವೂ ಏಕಾಗಬಾರದು?

## ನ್ಯಾಯದೀಪ

**ಯಾದೃಚ್ಛಿಕೇತಿ ॥ ಯಾದೃಚ್ಛಿಕಸಂವಾದೇನ ಹೇತುನಾ ಅವಗತ-ಪ್ರಮಾತ್ವಯೋಃ ಇತ್ಯರ್ಥಃ। ಅಪ್ರಾಮಾಣ್ಯಸ್ಯೇತಿ ॥ ನಚಾಯಂ ದೋಷಃ ಸಿದ್ಧಾಂತೇऽಪೀತಿ ವಾಚ್ಯಮ್, ವಿಷಯಸತ್ವಾಭಾವ ವಿಶಿಷ್ಟಸ್ಯೈವ ದೋಷಸ್ಯ ಅಪ್ರಮಾಹೇತುತ್ವಾತ್। ನಚೈವಂ ಪರಮತೇ ಯುಕ್ತಮ್। ಉಕ್ತರೂಪ-ದೋಷಾಭಾವಾದೇವ ಪ್ರಮಾತ್ವೋಪಪತ್ತೌ ಗುಣಸ್ಯ ಹೇತುತಾನಾಪತ್ತೇಃ ಇತಿ ಭಾವಃ।**

ಮೂಲದಲ್ಲಿ ಯಾದೃಚ್ಛಿಕಸಂವಾದವು ಪ್ರಮಾತ್ವಹೇತು ಎಂದಂತಿದೆ. ಆದರ ಭಾವ-ಯಾದೃಚ್ಛಿಕಸಂವಾದದಿಂದಾಗಿ ಪ್ರಮಾತ್ವವು ತಿಳಿಯುತ್ತದೆ, ಎಂದರ್ಥ.

ಪರತಸ್ತ್ವವಾದಿಗಳಿಗೆ ಯಾದೃಚ್ಛಿಕಸಂವಾದಿಜ್ಞಾನವು ಭ್ರಮೆಯಾಗಲಿ ಎಂದು ಆಪಾದಿಸಿ ದಂತೆ ಸ್ವತಸ್ತ್ವವಾದಿಗಳ ಮೇಲೂ ಈ ಆಪಾದನೆಯನ್ನು ಮಾಡಬಹುದು. ಅಪ್ರಾಮಾಣ್ಯವು ಪರತಃ ಆದುದರಿಂದ ಪ್ರಕೃತ ದೋಷರೂಪವಾದ ಅಪ್ರಾಮಾಣ್ಯಕಾರಣವು ಇದೆ. ಆದುದರಿಂದ ತಜ್ಜನ್ಯ ಜ್ಞಾನವು ಭ್ರಮೆಯಾಗಲಿ, ಎಂದರೆ, ಅದು ಸರಿಯಲ್ಲ. ಏಕೆಂದರೆ, ದೋಷವು ಪ್ರಮಾ ಪ್ರತಿಬಂಧಕ, ಅರ್ಥಸತ್ವವು ಉತ್ತೇಜಕ. ಆದ್ದರಿಂದ ಅರ್ಥಸತ್ವಾಭಾವವಿಶಿಷ್ಟವಾದ ದೋಷವೇ ಪ್ರಮಾಕ್ಕೆ ಪ್ರತಿಬಂಧಕ. ಅದು ಪ್ರಕೃತದಲ್ಲಿ ಇಲ್ಲ. ಆದ್ದರಿಂದ ಭ್ರಮೆಯು ಹುಟ್ಟುವುದಿಲ್ಲ. ಪ್ರತಿಬಂಧಕಾ ಭಾವವು ಇರುವುದರಿಂದ ಪ್ರಮೆಯೇ ಹುಟ್ಟುತ್ತದೆ. ಈ ಪರಿಹಾರವನ್ನು ಪರತಸ್ತ್ವವಾದಿಗಳು ಹೇಳುವಂತಿಲ್ಲ. ಏಕೆಂದರೆ ಅವರು ನಮ್ಮಂತೆ ದೋಷಾಭಾವವು ಪ್ರಮಾಹೇತು ಎಂದು ಹೇಳಿದರೆ, ಆದರಿಂದಲೇ ಜ್ಞಾನಕ್ಕೆ ಪ್ರಮಾತ್ವವು ಸಿದ್ಧವಾಗುವಾಗ ಗುಣಕ್ಕೆ ಕಾರಣತ್ವವೇ ಸಿದ್ಧವಾಗಲಿಕ್ಕಿಲ್ಲ.

**धारावाहिके भ्रमे पूर्वस्य भ्रमस्योत्तरभ्रमं प्रति त्वदुक्तरीत्या ग्राह्यभ्रमत्वेन कारणत्वे क्लृप्ते भ्रमान्तरेऽपि ग्राह्यभ्रमः कारणत्वेन कल्प्यः । स एव च भ्रममात्रेऽनुगतो दोषः । एवञ्च संवादिशुकादिवाक्यमूलत्वेन नित्यप्रमावत् विसंवादिशुकादिवाक्यमूलत्वेन नित्यभ्रमोऽपि सिद्ध्येत् इत्यतिप्रसङ्गाच्च ।।**

**4.** ಧಾರಾವಾಹಿಕ ಪ್ರಮಾದೃಷ್ಟಾಂತದಿಂದ ಗ್ರಾಹ್ಯಪ್ರಮಾವು ಗುಣ, ಎಂದು ಕಲ್ಪಿಸಿದರೆ ಅತಿಪ್ರಸಂಗವಿದೆ–ಧಾರಾವಾಹಿಕಭ್ರಮಸ್ಥಳದಲ್ಲೂ ತುಲ್ಯನ್ಯಾಯೇನ ಪೂರ್ವಭ್ರಮೆಯು ಉತ್ತರ ಭ್ರಮೆಗೆ ಗ್ರಾಹ್ಯಭ್ರಮತ್ವೇನ ಕಾರಣ ಎಂದು ಕ್ಲೃಪ್ತವಾಗಿದೆ. ಆದರಿಂದ ಭ್ರಮಸಾಮಾನ್ಯಕ್ಕೆ ಗ್ರಾಹ್ಯಭ್ರಮೆಯು ದೋಷ ಎಂದು ಸಿದ್ಧವಾಗುತ್ತದೆ. ಏವಂಚ, ಸಂವಾದಿಯಾದ ಶುಕೋಚ್ಚರಿತವಾಕ್ಯಕ್ಕೆ ಈಶ್ವರಪ್ರಮಾವೇ ಮೂಲ ಎಂದು ನೀವು ಕಲ್ಪಿಸುವಂತೆ ವಿಸಂವಾದಿ ಶುಕವಾಕ್ಯಕ್ಕೆ ಈಶ್ವರಭ್ರಮೆಯೇ ದೋಷ ಎಂದು ಕಲ್ಪಿಸಬೇಕಾಗಿ ಬಂದು ಈಶ್ವರನಿಗೆ ನಿತ್ಯಪ್ರಮಾ ಇರುವಂತೆಯೇ ನಿತ್ಯಭ್ರಮೆಯೂ ಇರಬೇಕಾದೀತು.

## ನ್ಯಾಯದೀಪ

**ನಿತ್ಯಭ್ರಮೋಽಪೀತಿ ॥ ಅನ್ಯಥಾ ಪ್ರಾಗುಕ್ತಾಪ್ರಮಾತ್ವದೃಷ್ಟಾಂತೇ ಸಾಧ್ಯಸಾಧನ ವೈಕಲ್ಯಾಪತ್ತೇಃ । ಇತೋಽನ್ಯಸ್ಯ ದೋಷಸ್ಯ ಅಭಾವೇನ ಕಾರ್ಯತಾವಚ್ಛೇದಕತ್ವಾಸಿದ್ಧೇಃ ಇತಿ ಭಾವಃ ।**

ಈಶ್ವರನಿಗೆ ನಿತ್ಯಭ್ರಮೆಯನ್ನು ಅಂಗೀಕರಿಸಿದರೆ ಮಾತ್ರ ಹಿಂದಿನ ಪ್ರಕರಣದಲ್ಲಿ ಅನುಮಾನಕ್ಕೆ ಕೊಟ್ಟಿರುವ ಅಪ್ರಮಾತ್ವದೃಷ್ಟಾಂತವು ಸರಿ ಹೋಗುತ್ತದೆ. ಇಲ್ಲದೇಹೋದಲ್ಲಿ ಸಾಧ್ಯ-ಸಾಧನ ವೈಕಲ್ಯದೋಷವು ಬರುತ್ತದೆ. ಅಲ್ಲಿ (ಪು.523) ಅನಿತ್ಯಜ್ಞಾನಭಿನ್ನಕಾರಣತಾನಿರೂಪಿತ ಕಾರ್ಯತಾವಚ್ಛೇದಕತ್ವವು ಸಾಧ್ಯ. ಈ ಸಾಧ್ಯ ಅಪ್ರಮಾತ್ವದಲ್ಲಿ ಬರಬೇಕಾದರೆ ಅಪ್ರಮಾತ್ವಾವಚ್ಛಿನ್ನಂ ಪ್ರತಿ ಗ್ರಾಹ್ಯಭ್ರಮೆಯು ದೋಷ, ಎಂದು ಹೇಳಲೇಬೇಕು. ಅದರಂತೆ, ಅನಿತ್ಯಜ್ಞಾನತ್ವ-ವ್ಯಾಪ್ಯ ಕಾರ್ಯತಾವಚ್ಛೇದಕತ್ವರೂಪ-ಹೇತು ಅಪ್ರಮಾತ್ವದಲ್ಲಿ ಬರಬೇಕಾದರೂ ಇದು ಅನಿವಾರ್ಯ. ಆದ್ದರಿಂದ ಈಶ್ವರನಿಗೆ ನಿತ್ಯಭ್ರಮೆಯು ಸಿದ್ಧವಾಗಲೇಬೇಕು.

**आद्यद्वितीययोः विशिष्टज्ञानं प्रति विशेषणज्ञानकारणत्वस्यैव मां प्रत्यसिद्धेश्च । वक्ष्यते चैतन्निर्विकल्पकभङ्गे ।**

**द्वितीयतृतीययोः निर्विकल्पकरूपप्रमाननुगमाच्च ।।**

5. ವಿಶೇಷ್ಯನಿಷ್ಠ–ವಿಶೇಷಣ ಜ್ಞಾನಂ ಗುಣಃ, ಗ್ರಾಹ್ಯಪ್ರಮಾ ಗುಣಃ ಈ ಎರಡೂ ಪಕ್ಷಗಳನ್ನು ಸಮರ್ಥನೆ ಮಾಡುವಾಗ 'ವಿಶಿಷ್ಟಜ್ಞಾನಂ ಪ್ರತಿ ವಿಶೇಷಣಜ್ಞಾನಂ ಕಾರಣಮ್' ಎಂಬ ಕಾರ್ಯ ಕಾರಣಭಾವವನ್ನು ಅಂಗೀಕಾರ ಮಾಡಬೇಕಾಗುತ್ತದೆ. ನಿರ್ವಿಕಲ್ಪಕಜ್ಞಾನಭಂಗಪ್ರಕರಣದಲ್ಲಿ ಈ ನ್ಯಾಯವನ್ನೇ ನಾವು ನಿರಾಕರಿಸಲಿದ್ದೇವೆ, ಆದಕಾರಣ ಈ ನಿಯಮವು ನಮಗೆ ಸಮ್ಮತವಲ್ಲ.

ಎರಡನೆಯದಾದ ವಿಶೇಷ್ಯನಿಷ್ಠ ವಿಶೇಷಣಜ್ಞಾನತ್ವಂ, ಎಂಬ ಗುಣವು ನಿರ್ವಿಕಲ್ಪಕಪ್ರಮಾದಲ್ಲಿ ಇಲ್ಲ. ಅಲ್ಲಿ ವಿಶೇಷಣ–ವಿಶೇಷ್ಯಭಾವವೇ ಇಲ್ಲ. ನಿರ್ವಿಕಲ್ಪಕವು ಸಂಸರ್ಗಗ್ರಹರೂಪವಲ್ಲದ ಕಾರಣ ಅದಕ್ಕೆ ಅಸಂಸರ್ಗಾಗ್ರಹವು ಕಾರಣವಲ್ಲ. ಆದ್ದರಿಂದ ಅದರಲ್ಲಿ ಮೂರನೆಯದಾದ ಗುಣಜನ್ಯತ್ವವೂ ಇಲ್ಲ.

## ನ್ಯಾಯದೀಪ

**ವಿಶೇಷಣ ಜ್ಞಾನಕಾರಣತ್ವಸ್ಯೈವ ।। ದೂರೇ 'ಯತ್ ಸಾಮಾನ್ಯಯೋ'ರಿತಿ ನ್ಯಾಯಾವತಾರಃ ಇತಿ ಏವಕಾರಾರ್ಥಃ। ಪ್ರಾಮಾಣಿಕತ್ವೇನ ಸಿದ್ಧಮಿತ್ಯಾಹ–ವಕ್ಷ್ಯತೇ ಇತಿ ।।**

ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ, ಎಂಬ ಈ ಸಾಮಾನ್ಯಕಾರ್ಯ–ಕಾರಣಭಾವವೇ ಅಸಿದ್ಧ, ಹೀಗಿದ್ದ ಮೇಲೆ ಅದರ ಆಧಾರದಿಂದ ವಿಶೇಷಕಾರ್ಯಕಾರಣಭಾವವನ್ನು (ಪ್ರಮಾಕ್ಕೆ ವಿಶೇಷಣಜ್ಞಾನ ಕಾರಣ) ಕಲ್ಪನೆ ಮಾಡುವುದು ದೂರದಲ್ಲೇ ಉಳಿಯುತ್ತದೆ, ಎಂದು ಏವಕಾರದ ಅರ್ಥ. ಸಾಮಾನ್ಯಕಾರ್ಯಕಾರಣಭಾವಕ್ಕೆ ಪ್ರಮಾಣವಿರುವುದರಿಂದ ಅದು ಸಿದ್ಧವಾಗುತ್ತದೆ ಎಂದರೆ, ಅದಕ್ಕೆ 'ವಕ್ಷ್ಯತೇ' ಎಂದು ಮುಂತಾಗಿ ಸಮಾಧಾನ.

## ನ್ಯಾಯದೀಪ

**ರುಚಿದತ್ತಾದಿಸ್ತು, ವಿಶೇಷ್ಯನಿಷ್ಠ–ವಿಶೇಷಣಜ್ಞಾನಂ ಗುಣ ಇತ್ಯಯುಕ್ತಮ್। 'ಲೋಹಿತಃ ಸ್ಫಟಿಕಃ' ಇತ್ಯಾದೌ ಲೌಹಿತ್ಯ–ಸಾಕ್ಷಾದ್ವಿಷಯಕಭ್ರಮೇ ಅನ್ವಯವ್ಯಭಿಚಾರಾತ್। ಲೌಹಿತ್ಯರೂಪವಿಶೇಷಣಸ್ಯ ಪರಂಪರಾಸಂಬಂಧೇನ ವಿಶೇಷ್ಯನಿಷ್ಠತ್ವಾತ್।**

**ನಚ, ತತ್ಸಂಬಂಧವಿಷಯಕಪ್ರಮಾಯಾಂ ತತ್ಸಂಬಂಧೇನ ವಿಶೇಷ್ಯವೃತ್ತಿ ಯದ್ವಿಶೇಷಣಂ ತಜ್ಜ್ಞಾನತ್ವೇನ ಹೇತುತಾ, ಇತಿ ವಾಚ್ಯಮ್। ಏವಂಹಿ ತತ್ಸಂಬಂಧವಿಷಯಕ–ತದ್ವಿಶೇಷಣ–ವಿಶೇಷ್ಯಕ–ಪ್ರಮಾತ್ವಂ ಕಾರ್ಯತಾ–ವಚ್ಛೇದಕಮ್। ತತ್ಸಂಬಂಧೇನ ತದ್ವಿಶೇಷಣ ಜ್ಞಾನತ್ವಂ ಕಾರಣತಾವಚ್ಛೇದಕಮ್,**

**ಇತ್ಯನನುಗಮ ಏವ । ಕಿಂಚ ಅಭಾವತ್ವ-ವಿಶಿಷ್ಟ-ಪ್ರತ್ಯಕ್ಷೇ ವ್ಯಭಿಚಾರಶ್ಚ ಇತ್ಯದೂಷಯತ್ ।**

ರುಚಿದತ್ತಮಿಶ್ರರು ತಮ್ಮ ಮಣಿವ್ಯಾಖ್ಯಾನದಲ್ಲಿ ಪ್ರಗಲ್ಭಮಿಶ್ರರು ಹೇಳಿರುವ ವಿಶೇಷ್ಯನಿಷ್ಠ-ವಿಶೇಷಣಜ್ಞಾನಂ ಗುಣಃ, ಎಂಬ ಗುಣನಿರೂಪಣೆಯನ್ನು ಹೀಗೆ ನಿರಾಕರಿಸಿದ್ದಾರೆ- 'ಲೋಹಿತಃ ಸ್ಫಟಿಕಃ' ಎಂಬ ಜ್ಞಾನವು ಭ್ರಾಂತಿ. ಆದರೂ ಲೋಹಿತರೂಪವು ಸ್ಫಟಿಕದಲ್ಲಿ ಪರಂಪರಾಸಂಬಂಧೇನ(ಜಪಾಕುಸುಮದ್ವಾರಾ) ಇರುವುದರಿಂದ ಲೌಹಿತ್ಯವು ವಿಶೇಷ್ಯನಿಷ್ಠವಾಗಿದೆ. ಆದ್ದರಿಂದ ಆ ಜ್ಞಾನದಲ್ಲಿ ಗುಣ ಇದೆ. ಆದರೆ, ಅದರ ಕಾರ್ಯವಾದ ಪ್ರಮಾತ್ವ ಇಲ್ಲ. ಹೀಗೆ ಅನ್ವಯವ್ಯಭಿಚಾರ. ಇದರ ಪರಿಹಾರಕ್ಕಾಗಿ ಯಾವ ಪ್ರಮಾದಲ್ಲಿ ಯಾವ ಸಂಬಂಧವು ತೋರುತ್ತದೋ ಆ ಪ್ರಮಾಕ್ಕೆ, ಆ ಸಂಬಂಧದಿಂದ ವಿಶೇಷ್ಯದಲ್ಲಿ ಇರುವ ವಿಶೇಷಣಜ್ಞಾನವು ಗುಣ, ಎಂದು ಪರಿಷ್ಕಾರ ಮಾಡಬೇಕು. ಲೋಹಿತಃ ಸ್ಫಟಿಕಃ ಎಂಬ ಜ್ಞಾನದಲ್ಲಿ ಸಮವಾಯಸಂಬಂಧದಿಂದ ಲೌಹಿತ್ಯವು ಪ್ರಕಾರವಾಗಿದೆ. ಆದರೆ ಆ ಸಂಬಂಧದಿಂದ ಸ್ಫಟಿಕದಲ್ಲಿ ಲೌಹಿತ್ಯವು ಇಲ್ಲ. ಗುಣ ಇಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ. ಹೀಗೆ ಹೇಳಿದಾಗ ವಿಶೇಷಣ ಮತ್ತು ಸಂಬಂಧಭೇದದಿಂದ ಕಾರ್ಯತಾ ವಚ್ಛೇದಕವಾದ ಪ್ರಮಾತ್ವವೂ ಭಿನ್ನವಾಗುತ್ತದೆ. ಕಾರಣತಾವಚ್ಛೇದಕವಾದ ವಿಶೇಷಣಜ್ಞಾನತ್ವವೂ ಭಿನ್ನವಾಗುತ್ತದೆ. ಅನುಗತ ಪ್ರಮಾತ್ವಾವಚ್ಛಿನ್ನಕ್ಕೆ ಅನುಗತಗುಣವು ಕಾರಣ ವೆಂದಂತೆ ಆಗುವುದಿಲ್ಲ. ಅಷ್ಟೇ ಅಲ್ಲ, ಅಭಾವತ್ವವು ಪೂರ್ವಾನುಪಸ್ಥಿತವಾದರೂ ಪ್ರಕಾರವಾಗುತ್ತದೆ, ಎಂದು ನೈಯಾಯಿಕ ಸಿದ್ಧಾಂತ. ಆದ್ದರಿಂದ ಅಭಾವತ್ವವಿಶಿಷ್ಟ ಪ್ರತ್ಯಕ್ಷಪ್ರಮಾದಲ್ಲಿ ವಿಶೇಷಣ ಜ್ಞಾನತ್ವರೂಪವಾದ ಗುಣ ಇಲ್ಲವಾದುದರಿಂದ ವ್ಯಭಿಚಾರ. (ಮಣಿ. ಪುಟ.332)

## ನ್ಯಾಯದೀಪ

**ಅನನುಗಮಾಚ್ಚೇತಿ ॥ ನನು, ಈಶ್ವರಜ್ಞಾನಮಾದಾಯ ದ್ವಿತೀಯಮಪಿ ನಿರ್ವಿಕಲ್ಪಕೇ ಅನುಗಮಯಿತುಂ ಶಕ್ಯಮ್ ಇತಿ ಚೇನ್ನ-ತಸ್ಯ ಸಾಧಾರಣ-ಹೇತುತ್ವೇನ ವಿಶೇಷಾಕಾರೇಣ ಹೇತುತ್ವಕಲ್ಪಕಾಭಾವಾತ್ ಇತಿ ಭಾವಃ ।**

ನಿರ್ವಿಕಲ್ಪಕದಲ್ಲಿ ಎರಡನೆಯದಾದ ಗುಣಜನ್ಯತ್ವ ಇದೆ-ಸರ್ವಕಾರ್ಯಕ್ಕೂ ಈಶ್ವರಜ್ಞಾನವು ಕಾರಣ. ಅದು ವಿಶೇಷಣಜ್ಞಾನವೆಂದು ಪರಿಗಣಿಸಿದರೆ, ತಜ್ಜನ್ಯತ್ವವು ನಿರ್ವಿಕಲ್ಪಕದಲ್ಲೂ ಇದೆ. ಹೀಗೆ ಹೇಳುವುದು ಯುಕ್ತವಲ್ಲ. ಈಶ್ವರಜ್ಞಾನವು ಸಕಲ ಕಾರ್ಯಕ್ಕೂ ಸಾಧಾರಣಕಾರಣ. ಗುಣವು ಪ್ರಮಾಕ್ಕೆ ವಿಶೇಷಕಾರಣ. ಆದ್ದರಿಂದ ಈಶಜ್ಞಾನವು ವಿಶೇಷಣ ಜ್ಞಾನತ್ವರೂಪ ವಿಶೇಷರೂಪದಿಂದ ಕಾರಣವಾಗುವುದಿಲ್ಲ.[1]

1. ಈ ವಾಕ್ಯವು ಕೆಲವು ಪ್ರತಿಗಳಲ್ಲಿ ಇಲ್ಲ. ವಸ್ತುತಃ ನಿರ್ವಿಕಲ್ಪಕದಲ್ಲಿ ವಿಶೇಷಣ-ವಿಶೇಷ್ಯ ಭಾವವೇ ಇಲ್ಲದಿರುವುದರಿಂದ ಈಶ ಜ್ಞಾನವನ್ನು ವಿಶೇಷಣ ಜ್ಞಾನ, ಎಂದು ಹೇಳುವುದು ಯುಕ್ತವಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ತೃತೀಯಮ್ ಅನುಗತಮಿತಿ ಶಂಕತೇ – ನನ್ವಿತಿ ॥**

ಮೂರನೆಯ ಗುಣವು ನಿರ್ವಿಕಲ್ಪಕದಲ್ಲೂ ಇದೆ ಎಂದು ನನು, ಎಂಬ ವಾಕ್ಯದಲ್ಲಿ ಆಶಂಕೆ ಮಾಡಲಾಗಿದೆ.

**ननु निर्विकल्पकेऽपि अविद्यमानस्यासंसर्गस्याग्रहो अस्त्येवेति चेन्न । असंसर्गाग्रहरूपो यः संसर्गग्रहप्रतिबन्धकः तदभावतया संसर्गग्रह एव हेतुत्वात् ।**

**नच निर्विकल्पकं प्रमाऽप्रमाबहिर्भूतम् । तथापि निर्विकल्पकस्य गुणाजन्यत्वेऽपि अप्रमावैजात्यवत् प्रमाया अपि तदुपपत्तेः ।**

**तृतीयेऽविद्यमानासंसर्गशब्देनोक्तस्य विद्यमानसंसर्गस्य योऽयमग्रहः तस्य धारावाहिकद्वितीयादिप्रमाननुगमाच्च । अविद्यमानासंसर्गस्य संसर्गरूपतया तदग्रहस्य असंसर्गाग्रहविशेषत्वाभावाच्च ॥**

ನಿರ್ವಿಕಲ್ಪದಲ್ಲಿ ಅವಿದ್ಯಮಾನಾಸಂಸರ್ಗ–ಅಗ್ರಹರೂಪವಾದ ಗುಣಜನ್ಯತ್ವವು ಇದೆ. ಆದರಲ್ಲಿ ಸಂಸರ್ಗವು ವಿಷಯವಲ್ಲ. ಆದರೂ ಅಲ್ಲಿ ವಿಶೇಷಣ–ವಿಶೇಷ್ಯಗಳಿಗೆ ಅಸಂಸರ್ಗವು ಅವಿದ್ಯಮಾನ. ಆದಕ್ಕೆ ಅವಿದ್ಯಮಾನಅಸಂಸರ್ಗಾಗ್ರಹವು ಕಾರಣವಾಗಬಹುದು. ಈ ಆಶಂಕೆ ಉಚಿತವಲ್ಲ. ಸಂಸರ್ಗಜ್ಞಾನಕ್ಕೆ ಪ್ರತಿಬಂಧಕವಾದುದು ಅಸಂಸರ್ಗಗ್ರಹ, ಅರ್ಥಾತ್ ಅಸಂಸರ್ಗಗ್ರಹ ಇದ್ದರೆ ಸಂಸರ್ಗಗ್ರಹ ಬರುವುದಿಲ್ಲ. ಹೀಗೆ, ಪ್ರತಿಬಂಧಕವಾದ ಅಸಂಸರ್ಗಗ್ರಹದ ಅಭಾವರೂಪವಾದುದರಿಂದ ಅಸಂಸರ್ಗ–ಅಗ್ರಹವು ಪ್ರತಿಬಂಧಕಾಭಾವರೂಪವಾಗಿ ಕಾರಣವಾಗುತ್ತದೆ. ನಿರ್ವಿಕಲ್ಪಕವು ಸಂಸರ್ಗಗ್ರಹವಲ್ಲವಾದಕಾರಣ ಆದಕ್ಕೆ ಅಸಂಸರ್ಗಗ್ರಹವು ಪ್ರತಿಬಂಧಕವಲ್ಲ. ಆದರಿಂದಾಗಿ ಅಸಂಗರ್ಗಾಗ್ರಹವು ಕಾರಣವೂ ಅಲ್ಲ. ಆದು ಸಂಸರ್ಗಗ್ರಹಕ್ಕೆ ಮಾತ್ರ ಕಾರಣ.

ನಿರ್ವಿಕಲ್ಪಕವು ಪ್ರಮಾವೂ ಅಲ್ಲ, ಭ್ರಮೆಯೂ ಅಲ್ಲ. ಆದು ಪ್ರಮಾ–ಅಪ್ರಮಾ ಬಹಿರ್ಭೂತವಾದುದರಿಂದ ಆದರಲ್ಲಿ ಗುಣಜನ್ಯತ್ವದ ಅಗತ್ಯವೇ ಇಲ್ಲ ಎನ್ನುವುದೂ ಯುಕ್ತವಲ್ಲ. ಆದು ಗುಣದಿಂದ ಅಜನ್ಯವಾದರೂ ಅಪ್ರಮಾ ಅಲ್ಲ, ಅಪ್ರಮಾ ವಿಜಾತೀಯ. ಆದರಂತೆಯೇ ಸಕಲಪ್ರಮಾಗಳೂ ಕೂಡಾ ಗುಣಾಜನ್ಯವಾದರೂ ದೋಷಾಜನ್ಯತ್ವದಿಂದಾಗಿಯೇ ಅಪ್ರಮಾ ವಿಜಾತೀಯವಾಗಬಹುದಾದ್ದರಿಂದ ಪ್ರಮಾ ಆಗಬೇಕಾದರೆ ಗುಣಜನ್ಯವೇ ಆಗಿರಬೇಕೆಂಬ ನಿರ್ಬಂಧ ಸರಿಯಲ್ಲ.

ಮೂರನೆಯ ಪಕ್ಷದಲ್ಲಿ ಅವಿದ್ಯಮಾನ–ಅಸಂಸರ್ಗ ಎಂಬ ಶಬ್ದಕ್ಕೆ ವಿದ್ಯಮಾನ ಸಂಸರ್ಗ ಎಂದು ಅರ್ಥ. ಅಲ್ಲಿಗೆ, ವಿದ್ಯಮಾನಸಂಸರ್ಗದ ಅಗ್ರಹವು ಗುಣ, ತಜ್ಜನ್ಯವಾದುದು ಪ್ರಮಾ ಎಂದಂತಾಗುತ್ತದೆ. ಇಂತಹ ಗುಣವು ಧಾರಾವಾಹಿಕ ದ್ವಿತೀಯಾದಿಪ್ರಮಾಗಳಲ್ಲಿ ಇಲ್ಲ. ಅಲ್ಲಿ ಪೂರ್ವ–ಪೂರ್ವಪ್ರಮಾಗಳು ಸಂಸರ್ಗಗ್ರಹರೂಪಗಳಾದುದರಿಂದ ವಿಶೇಷಣಜ್ಞಾನರೂಪವಾದ ಅವುಗಳಿಂದ ಜನ್ಯವಾದ ಉತ್ತರೋತ್ತರ ಪ್ರಮಾಗಳು ಸಂಸರ್ಗಗ್ರಹಜನ್ಯವೇ ಆಗುತ್ತವೆ. ಸಂಸರ್ಗ–ಅಗ್ರಹದಿಂದ ಜನ್ಯವಲ್ಲ. ಆದ್ದರಿಂದ ಅಲ್ಲಿ ಇಂತಹ ಗುಣಜನ್ಯತ್ವವು ಬರುವುದಿಲ್ಲ. ಅಷ್ಟೇ ಅಲ್ಲ. ಅವಿದ್ಯಮಾನ ಅಸಂಸರ್ಗ ಎಂದರೆ, ಹಿಂದೆ ಹೇಳಿದಂತೆ ಸಂಸರ್ಗರೂಪವಾದುದರಿಂದ ಸಂಸರ್ಗಾಗ್ರಹವು ಅಸಂಸರ್ಗಾಗ್ರಹದ ವಿಶೇಷರೂಪವೇ ಆಗುವುದಿಲ್ಲ. ಹೀಗಾಗಿ ಸಂಸರ್ಗ ಜ್ಞಾನ ಸಾಮಾನ್ಯಕ್ಕೆ ಅಸಂಸರ್ಗಾಗ್ರಹವು ಕಾರಣವಾದುದರಿಂದ 'ಯದ್ವಿಶೇಷಯೋಃ' ಎಂಬ ನ್ಯಾಯದಿಂದ ಅವಿದ್ಯಮಾನ ಅಸಂಸರ್ಗಾಗ್ರಹವು ಪ್ರಮಾಕಾರಣ ಎಂಬ ಪೂರ್ವೋಕ್ತ ಸಮರ್ಥನೆ (ಪು.554) ಯುಕ್ತವಲ್ಲ.

## ನ್ಯಾಯದೀಪ

**ಬಹಿರ್ಭೂತಮಿತಿ ॥ ಗುಣ–ದೋಷಾನ್ಯತರಾಜನ್ಯತ್ವಾತ್ ಇತಿ ಭಾವಃ। ಸಂಸರ್ಗರೂಪತಯೇತಿ ॥ ನಞ್ದ್ವಯೇನ ವಿದ್ಯಮಾನಸಂಸರ್ಗಲಾಭಂ ವಿನಾ ಪರ್ಯವಸಾನಾಭಾವಾತ್ ಇತಿ ಭಾವಃ। ಅಸಂಸರ್ಗಾಗ್ರಹ–ವಿಶೇಷತ್ವಾಭಾವಾಚ್ಚೇತಿ ॥ ತಥಾಚ ಯತ್ಸಾಮಾನ್ಯಯೋರಿತಿ ನ್ಯಾಯಾವ–ತಾರೇಣ ಕಥಂ ತಸ್ಯ ಗುಣತ್ವಲಾಭಃ ? ಇತಿ ಭಾವಃ।**

ನಿರ್ವಿಕಲ್ಪಕವು ಗುಣಜನ್ಯವಲ್ಲದ ಕಾರಣ ಪ್ರಮಾ ಅಲ್ಲ. ದೋಷಜನ್ಯವಲ್ಲದ ಕಾರಣ ಭ್ರಮೆ ಅಲ್ಲ. ಹೀಗೆ ಅದು ಪ್ರಮಾ–ಅಪ್ರಮಾ ಬಹಿರ್ಭೂತವಾಗಿದೆ.

ಅವಿದ್ಯಮಾನ ಅಸಂಸರ್ಗ, ಎಂಬ ಪದದಲ್ಲಿ ನಿಷೇಧಾರ್ಥಕ ಎರಡು ನಞ್‌ಗಳಿವೆ. ಅದು ವಿಧಿಯಲ್ಲೇ ಪರ್ಯವಸಾನಗೊಳ್ಳುತ್ತದೆ. ಆದ್ದರಿಂದ ಅವಿದ್ಯಮಾನ–ಅಸಂಸರ್ಗ ಎಂದರೆ, ವಿದ್ಯಮಾನ ಸಂಸರ್ಗ, ಎಂದೇ ಅರ್ಥ.

## ಅನುಗತಗುಣೋಕ್ತಿಮಣಿವಿರುದ್ಧ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಮ್ ಅನುಗತ–ಗುಣತ್ರಯಪಕ್ಷತ್ರಯಂ ಪ್ರತ್ಯೇಕಂ ದೂಷಯಿತ್ವಾ ಸಂಹತ್ಯಾಪಿ ದೂಷಯಿತುಂ–**

## ನ್ಯಾಯದೀಪದಲ್ಲಿ ಅವತಾರಿಕೆ

**ತೃತೀಯಮ್ ಅನುಗತಮಿತಿ ಶಂಕತೇ – ನನ್ವಿತಿ ॥**

ಮೂರನೆಯ ಗುಣವು ನಿರ್ವಿಕಲ್ಪಕದಲ್ಲೂ ಇದೆ ಎಂದು ನನು, ಎಂಬ ವಾಕ್ಯದಲ್ಲಿ ಆಶಂಕೆ ಮಾಡಲಾಗಿದೆ.

**ननु निर्विकल्पकेऽपि अविद्यमानस्यासंसर्गस्याग्रहो अस्त्येवेति चेन्न । असंसर्गाग्रहरूपो यः संसर्गग्रहप्रतिबन्धकः तदभावतया संसर्गग्रह एव हेतुत्वात् ।**

**नच निर्विकल्पकं प्रमाऽप्रमाबहिर्भूतम् । तथापि निर्विकल्पकस्य गुणाजन्यत्वेऽपि अप्रमावैजात्यवत् प्रमाया अपि तदुपपत्तेः ।**

**तृतीयेऽविद्यमानासंसर्गशब्देनोक्तस्य विद्यमानसंसर्गस्य योऽयमग्रहः तस्य धारावाहिकद्वितीयादिप्रमाननुगमाच्च । अविद्यमानासंसर्गस्य संसर्गरूपतया तदग्रहस्य असंसर्गाग्रहविशेषत्वाभावाच्च ॥**

ನಿರ್ವಿಕಲ್ಪದಲ್ಲಿ ಅವಿದ್ಯಮಾನಾಸಂಸರ್ಗ–ಅಗ್ರಹರೂಪವಾದ ಗುಣಜನ್ಯತ್ವವು ಇದೆ. ಅದರಲ್ಲಿ ಸಂಸರ್ಗವು ವಿಷಯವಲ್ಲ. ಆದರೂ ಅಲ್ಲಿ ವಿಶೇಷಣ–ವಿಶೇಷ್ಯಗಳಿಗೆ ಅಸಂಸರ್ಗವು ಅವಿದ್ಯಮಾನ. ಅದಕ್ಕೆ ಅವಿದ್ಯಮಾನಅಸಂಸರ್ಗಾಗ್ರಹವು ಕಾರಣವಾಗಬಹುದು. ಈ ಆಶಂಕೆ ಉಚಿತವಲ್ಲ. ಸಂಸರ್ಗಜ್ಞಾನಕ್ಕೆ ಪ್ರತಿಬಂಧಕವಾದುದು ಅಸಂಸರ್ಗಗ್ರಹ, ಅರ್ಥಾತ್ ಅಸಂಸರ್ಗಗ್ರಹ ಇದ್ದರೆ ಸಂಸರ್ಗಗ್ರಹ ಬರುವುದಿಲ್ಲ. ಹೀಗೆ, ಪ್ರತಿಬಂಧಕವಾದ ಅಸಂಸರ್ಗಗ್ರಹದ ಅಭಾವರೂಪವಾದುದರಿಂದ ಅಸಂಸರ್ಗ–ಅಗ್ರಹವು ಪ್ರತಿಬಂಧಕಾಭಾವರೂಪವಾಗಿ ಕಾರಣವಾಗುತ್ತದೆ. ನಿರ್ವಿಕಲ್ಪಕವು ಸಂಸರ್ಗಗ್ರಹವಲ್ಲವಾದಕಾರಣ ಅದಕ್ಕೆ ಅಸಂಸರ್ಗಗ್ರಹವು ಪ್ರತಿಬಂಧಕವಲ್ಲ. ಅದರಿಂದಾಗಿ ಅಸಂಗರ್ಗಾಗ್ರಹವು ಕಾರಣವೂ ಅಲ್ಲ. ಅದು ಸಂಸರ್ಗಗ್ರಹಕ್ಕೆ ಮಾತ್ರ ಕಾರಣ.

ನಿರ್ವಿಕಲ್ಪಕವು ಪ್ರಮಾವೂ ಅಲ್ಲ, ಭ್ರಮೆಯೂ ಅಲ್ಲ. ಅದು ಪ್ರಮಾ–ಅಪ್ರಮಾ ಬಹಿರ್ಭೂತವಾದುದರಿಂದ ಅದರಲ್ಲಿ ಗುಣಜನ್ಯತ್ವದ ಆಗತ್ಯವೇ ಇಲ್ಲ ಎನ್ನುವುದೂ ಯುಕ್ತವಲ್ಲ. ಅದು ಗುಣದಿಂದ ಅಜನ್ಯವಾದರೂ ಅಪ್ರಮಾ ಅಲ್ಲ, ಅಪ್ರಮಾ ವಿಜಾತೀಯ. ಅದರಂತೆಯೇ ಸಕಲಪ್ರಮಾಗಳೂ ಕೂಡಾ ಗುಣಾಜನ್ಯವಾದರೂ ದೋಷಾಜನ್ಯತ್ವದಿಂದಾಗಿಯೇ ಅಪ್ರಮಾ ವಿಜಾತೀಯವಾಗಬಹುದಾದ್ದರಿಂದ ಪ್ರಮಾ ಆಗಬೇಕಾದರೆ ಗುಣಜನ್ಯವೇ ಆಗಿರಬೇಕೆಂಬ ನಿರ್ಬಂಧ ಸರಿಯಲ್ಲ.

ಮೂರನೆಯ ಪಕ್ಷದಲ್ಲಿ ಅವಿದ್ಯಮಾನ-ಅಸಂಸರ್ಗ ಎಂಬ ಶಬ್ದಕ್ಕೆ ವಿದ್ಯಮಾನ ಸಂಸರ್ಗ ಎಂದು ಅರ್ಥ. ಅಲ್ಲಿಗೆ, ವಿದ್ಯಮಾನಸಂಸರ್ಗದ ಅಗ್ರಹವು ಗುಣ, ತಜ್ಜನ್ಯವಾದುದು ಪ್ರಮಾ ಎಂದಂತಾಗುತ್ತದೆ. ಇಂತಹ ಗುಣವು ಧಾರಾವಾಹಿಕ ದ್ವಿತೀಯಾದಿಪ್ರಮಾಗಳಲ್ಲಿ ಇಲ್ಲ. ಅಲ್ಲಿ ಪೂರ್ವ-ಪೂರ್ವಪ್ರಮಾಗಳು ಸಂಸರ್ಗಗ್ರಹರೂಪಗಳಾದುದರಿಂದ ವಿಶೇಷಣಜ್ಞಾನರೂಪವಾದ ಅವುಗಳಿಂದ ಜನ್ಯವಾದ ಉತ್ತರೋತ್ತರ ಪ್ರಮಾಗಳು ಸಂಸರ್ಗಗ್ರಹಜನ್ಯವೇ ಆಗುತ್ತವೆ. ಸಂಸರ್ಗ-ಅಗ್ರಹದಿಂದ ಜನ್ಯವಲ್ಲ. ಆದ್ದರಿಂದ ಅಲ್ಲಿ ಇಂತಹ ಗುಣಜನ್ಯತ್ವವು ಬರುವುದಿಲ್ಲ. ಅಷ್ಟೇ ಅಲ್ಲ, ಅವಿದ್ಯಮಾನ ಅಸಂಸರ್ಗ ಎಂದರೆ, ಹಿಂದೆ ಹೇಳಿದಂತೆ ಸಂಸರ್ಗರೂಪವಾದುದರಿಂದ ಸಂಸರ್ಗಾಗ್ರಹವು ಅಸಂಸರ್ಗಾಗ್ರಹದ ವಿಶೇಷರೂಪವೇ ಆಗುವುದಿಲ್ಲ. ಹೀಗಾಗಿ ಸಂಸರ್ಗ ಜ್ಞಾನ ಸಾಮಾನ್ಯಕ್ಕೆ ಅಸಂಸರ್ಗಾಗ್ರಹವು ಕಾರಣವಾದುದರಿಂದ 'ಯದ್ವಿಶೇಷಯೋಃ' ಎಂಬ ನ್ಯಾಯದಿಂದ ಅವಿದ್ಯಮಾನ ಅಸಂಸರ್ಗಾಗ್ರಹವು ಪ್ರಮಾಕಾರಣ ಎಂಬ ಪೂರ್ವೋಕ್ತ ಸಮರ್ಥನೆ (ಪು.554) ಯುಕ್ತವಲ್ಲ.

## ನ್ಯಾಯದೀಪ

**ಬಹಿರ್ಭೂತಮಿತಿ ॥ ಗುಣ-ದೋಷಾನ್ಯತರಾಜನ್ಯತ್ವಾತ್ ಇತಿ ಭಾವಃ। ಸಂಸರ್ಗರೂಪತಯೇತಿ ॥ ನಞ್ದ್ವಯೇನ ವಿದ್ಯಮಾನಸಂಸರ್ಗಲಾಭಂ ವಿನಾ ಪರ್ಯವಸಾನಾಭಾವಾತ್ ಇತಿ ಭಾವಃ। ಅಸಂಸರ್ಗಾಗ್ರಹ-ವಿಶೇಷತ್ವಾಭಾವಾಚ್ಚೇತಿ ॥ ತಥಾಚ ಯತ್ಸಾಮಾನ್ಯಯೋರಿತಿ ನ್ಯಾಯಾವ-ತಾರೇಣ ಕಥಂ ತಸ್ಯ ಗುಣತ್ವಲಾಭಃ ? ಇತಿ ಭಾವಃ।**

ನಿರ್ವಿಕಲ್ಪಕವು ಗುಣಜನ್ಯವಲ್ಲದ ಕಾರಣ ಪ್ರಮಾ ಅಲ್ಲ. ದೋಷಜನ್ಯವಲ್ಲದ ಕಾರಣ ಭ್ರಮೆ ಅಲ್ಲ. ಹೀಗೆ ಅದು ಪ್ರಮಾ-ಅಪ್ರಮಾ ಬಹಿರ್ಭೂತವಾಗಿದೆ.

ಅವಿದ್ಯಮಾನ ಅಸಂಸರ್ಗ, ಎಂಬ ಪದದಲ್ಲಿ ನಿಷೇಧಾರ್ಥಕ ಎರಡು ನಞ್‌ಗಳಿವೆ. ಅದು ವಿಧಿಯಲ್ಲೇ ಪರ್ಯವಸಾನಗೊಳ್ಳುತ್ತದೆ. ಆದ್ದರಿಂದ ಅವಿದ್ಯಮಾನ-ಅಸಂಸರ್ಗ ಎಂದರೆ, ವಿದ್ಯಮಾನ ಸಂಸರ್ಗ, ಎಂದೇ ಅರ್ಥ.

## ಅನುಗತಗುಣೋಕ್ತಿಮಣಿವಿರುದ್ಧ

## ನ್ಯಾಯದೀಪದಲ್ಲಿ ಅವತಾರಿಕೆ

**ಏವಮ್ ಅನುಗತ-ಗುಣತ್ರಯಪಕ್ಷತ್ರಯಂ ಪ್ರತ್ಯೇಕಂ ದೂಷಯಿತ್ವಾ ಸಂಹತ್ಯಾಪಿ ದೂಷಯಿತುಂ-**

**''ಭೂಯೋಽವಯವೇಂದ್ರಿಯಸನ್ನಿಕರ್ಷ - ಯಥಾರ್ಥಲಿಂಗ - ಸಾದೃಶ್ಯ - ವಾಕ್ಯಾರ್ಥಜ್ಞಾನಾನಾಂ ಯಥಾಯಥಂ ಪ್ರತ್ಯೇಕಮೇವ ಗುಣತ್ವಮ್ ॥''**

**ಇತಿ ಮಣ್ಯುಕ್ತಿ(ಪು.353) ವಿರುದ್ಧಂ ಚೇತಿ ಭಾವೇನಾಹ–ಕಿಂಚೇತಿ ॥**

ಇದುವರೆಗೆ ಸಕಲಪ್ರಮಾಗಳಿಗೂ ಅನುಗತವಾದ ಗುಣವಿದೆ, ಎಂಬ ಪಕ್ಷವನ್ನು ಅವಲಂಬಿಸಿ ಮೂರು ವಿಧದ ಗುಣಗಳಿಗೆ ಪ್ರತ್ಯೇಕವಾದ ದೋಷವನ್ನು ಹೇಳಿ ಪ್ರಮಾವು ಗುಣಜನ್ಯ ಎಂಬುದನ್ನೇ ನಿರಾಕರಿಸಲು, ಮೊದಲು ಅನುಗತಗುಣೋಕ್ತಿಯು ಮಣ್ಯುಕ್ತವಾದ ಅನನುಗತ ಗುಣೋಕ್ತಿಗೆ ವಿರುದ್ಧ ಎಂದು ಮೂಲದಲ್ಲಿ ತೋರಿಸುತ್ತಾರೆ.

ಮಣಿಗ್ರಂಥದಲ್ಲಿ, ಪ್ರತ್ಯಕ್ಷಕ್ಕೆ ಭೂಯಃಅವಯವೇಂದ್ರಿಯ ಸನ್ನಿಕರ್ಷವು ಗುಣ, ಅನುಮಿತಿಗೆ ಯಥಾರ್ಥವಾದ ಲಿಂಗಜ್ಞಾನವು ಗುಣ, ಉಪಮಿತಿಗೆ ಯಥಾರ್ಥವಾದ ಸಾದೃಶ್ಯಜ್ಞಾನವು ಗುಣ. ಶಾಬ್ದಬೋಧಕ್ಕೆ ಯಥಾರ್ಥವಾಕ್ಯಾರ್ಥಜ್ಞಾನವು ಗುಣ, ಎಂದಿದೆ. ಇದು ಅನುಗತ ಗುಣೋಕ್ತಿಗೆ ವಿರುದ್ಧ ಎಂದು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ–

**किञ्च अनित्यप्रमामात्रानुगतगुणाङ्गीकारे प्रमारूपानुमित्यादौ प्रमात्वस्य अनित्यप्रमामात्रानुगतगुणेन अनुमितित्वशाब्दत्वादेश्च लिङ्गपरामर्श-शब्दकारणकत्वादिनैवोपपत्त्या यथायथं लिङ्गपरामर्शादिप्रतिनियतगुणोक्तिः व्यर्था ॥**

ಅನುಗತವಾದ ಗುಣ ನಿರೂಪಣೆಯು ಮಣಿಗ್ರಂಥಕ್ಕೆ ವಿರುದ್ಧ. ಮಣಿಗ್ರಂಥದಲ್ಲಿ ಪ್ರತ್ಯಕ್ಷಾದಿ ಪ್ರಮಾಚತುಷ್ಟಯಗಳಿಗೆ ಪ್ರತ್ಯೇಕವಾದ ಗುಣಗಳನ್ನು ಹೇಳಲಾಗಿದೆ. ಒಂದು ವೇಳೆ ಪ್ರಮಾ ಸಾಮಾನ್ಯಕ್ಕೆ ಅನುಗತವಾದ ಒಂದು ಗುಣವು ಕಾರಣವಾಗಿದ್ದಲ್ಲಿ ಅಂತಹ ಸಾಮಾನ್ಯ ಗುಣದಿಂದ ಜನ್ಯವಾದುದರಿಂದ ಪ್ರತ್ಯಕ್ಷಾನುಮಿತ್ಯಾದಿಗಳು ಪ್ರಮಾ. ಅವುಗಳು ಪ್ರತ್ಯಕ್ಷ, ಅನುಮಿತಿ ಎಂಬ ವಿಶೇಷರೂಪವನ್ನು ಪಡೆಯಲು ಅವುಗಳಿಗೆ ವಿಶಿಷ್ಟಕಾರಣವಾದ ಇಂದ್ರಿಯ, ಅನುಮಾನಾದಿಗಳು ಕಾರಣ. ಹೀಗೆ ಪ್ರತ್ಯಕ್ಷಪ್ರಮಾ, ಅನುಮಿತಿ ಪ್ರಮಾಗಳನ್ನು ನಿರೂಪಿಸಲು ಬರುವಾಗ ಮಣಿಕಾರ ಒಂದೊಂದಕ್ಕೂ ಪ್ರತ್ಯೇಕವಾಗಿ ಗುಣಗಳನ್ನು ಹೇಳಿದ್ದು ವಿರುದ್ಧವಾಗುತ್ತದೆ. ಅವನು ಗುಣವಿಶೇಷಗಳನ್ನು ಹೇಳಿರುವುದರಿಂದಾಗಿ ಅನುಗತಗುಣಸಾಮಾನ್ಯಗಳು ಇಲ್ಲವೆಂದೇ ಅವನ ಅಭಿಪ್ರಾಯ.

## ನ್ಯಾಯದೀಪ

**ನಚ ಪ್ರಮಾತ್ವಾನುಮಿತಿತ್ವಾದಿರೂಪಕಾರ್ಯತಾವಚ್ಛೇದಕಬಲಾತ್ ತದನುಗುಣಃ ಅನುಗತಗುಣಃ ಕಶ್ಚಿತ್ ಸ್ವೀಕಾರ್ಯಃ ಇತಿ ಶಂಕ್ಯಮ್ । ನೀಲಘಟತ್ವಾದಾವಿವ**

**ಪ್ರಮಾತ್ವಾನುಮಿತಿತ್ವಾದೇಃ ಸ್ವಸಾಮಗ್ರೀ–ಮಹಾ–ಮಹಿಮ್ನೈವ ಏಕತ್ರ ಸಮಾಜೇನ ಅವಚ್ಛೇದಕಾಂತರೋಪಪನ್ನಕಾರ್ಯತಾಶ್ರಯವೃತ್ತಿತ್ವರೂಪ-ಬಾಧಕೇನ ತಸ್ಯ ಕಾರ್ಯತಾನವಚ್ಛೇದಕತ್ವಾತ್। ಅತ ಏವ ಪ್ರಮಾತ್ವಸ್ಯ ಅನುಮಿತಿತ್ವಾದೇಶ್ಚ ಪ್ರಯೋಜಕ–ಸಾಮಗ್ರೀಸಮಾಜಸ್ಯ 'ಪ್ರಮಾಮಾತ್ರಾನುಗತ ಗುಣೇನ' ಇತಿ, 'ಲಿಂಗಪರಾಮರ್ಶ–ಶಬ್ದಕಾರಣಕತ್ವಾದಿನಾ' ಇತ್ಯುಕ್ತಿಃ ॥**

ಮೂಲದಲ್ಲಿ ಲಿಂಗಪರಾಮರ್ಶಾದಿರೂಪವಾದ ಪ್ರತಿನಿಯತಗುಣೋಕ್ತಿಯು ವ್ಯರ್ಥ ಎಂದಿದೆ. ಆದರೆ, ಅದು ವ್ಯರ್ಥವಲ್ಲ, ಅವಶ್ಯಸ್ವೀಕಾರ್ಯ. ಏಕೆಂದರೆ, ಪ್ರಮಾತ್ವವೂ ಕಾರ್ಯತಾವಚ್ಛೇದಕ, ಅನುಮಿತಿತ್ವವೂ ಕಾರ್ಯತಾವಚ್ಛೇದಕ. ಅವೆರಡೂ ಕಾರ್ಯತಾವಚ್ಛೇದಕವಾಗಬೇಕಾದರೆ ಅದಕ್ಕೆ ಮಾತ್ರ (ಅನುಮಿತಿ ಪ್ರಮಾಕ್ಕೆ) ಪ್ರತಿನಿಯತವಾದ ಕಾರಣವು ಇರಲೇಬೇಕು. ಅದೇ ಯಥಾರ್ಥ ಲಿಂಗಪರಾಮರ್ಶ, ಎಂದು ಆಕ್ಷೇಪ. ಈ ಆಕ್ಷೇಪ ಯುಕ್ತವಲ್ಲ. ನೀಲಘಟತ್ವವು ಅರ್ಥಸಮಾಜ ಗ್ರಸ್ತವಾದುದರಿಂದ ಕಾರ್ಯತಾವಚ್ಛೇದಕವಲ್ಲ. ಅದರಂತೆ ಅನುಮಿತಿಪ್ರಮಾತ್ವವೂ ಕಾರ್ಯತಾವ ಚ್ಛೇದಕವಲ್ಲ. ಅರ್ಥಸಮಾಜಗ್ರಸ್ತ ಎಂದರೆ–ಅವಚ್ಛೇದಕಾಂತರ–ಉಪಪನ್ನ ಕಾರ್ಯತಾಶ್ರಯ ವೃತ್ತಿತ್ವ. ಪ್ರಮಾತ್ವವು ಕಾರ್ಯತಾವಚ್ಛೇದಕ. ಅನುಮಿತಿತ್ವವೂ ಕಾರ್ಯತಾವಚ್ಛೇದಕ. ತಾದೃಶ–ಅವಚ್ಛೇದಕದ್ವಯಾವಚ್ಛಿನ್ನವಾದ ಎರಡು ಕಾರ್ಯತಾಗಳಿಗೆ ಆಶ್ರಯವಾದುದು ಪ್ರಮಾತ್ಮಕಾನುಮಿತಿ. ಅದರಲ್ಲಿ ವೃತ್ತಿಯಾಗಿದೆ ಪ್ರಮಾತ್ವ ಮತ್ತು ಅನುಮಿತಿತ್ವ ಎಂಬ ಎರಡು ಧರ್ಮಗಳು. ಅವೆರಡು ಧರ್ಮಾವಚ್ಛಿನ್ನಗಳಿಗೆ ಪ್ರತ್ಯೇಕವಾದ ಸಾಮಗ್ರೀದ್ವಯಗಳು ಕ್ಲೃಪ್ತವಾಗಿವೆ. ಆ ಎರಡು ಸಾಮಗ್ರೀಗಳು ಜೊತೆಸೇರಿ ಹುಟ್ಟಿದ ಕಾರ್ಯದಲ್ಲಿ ಪ್ರಮಾತ್ವ ಅನುಮಿತಿತ್ವಗಳು ಬರುತ್ತವೆ. ಆದ್ದರಿಂದ ಅನುಮಿತಿ ಪ್ರಮಾತ್ವಾವಚ್ಛಿನ್ನಂ ಪ್ರತಿ ಇನ್ನೊಂದು ಪ್ರತ್ಯೇಕವಾದ ಕಾರಣವನ್ನು ಹೇಳುವ ಅಗತ್ಯವಿಲ್ಲ. ಹೀಗೆ, ಅನುಮಿತಿಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ. ಅದಕ್ಕೆ ಪ್ರತಿನಿಯತವಾದ ಒಂದು ಗುಣವು ಬೇಕಾಗಿಲ್ಲ. ಇದನ್ನು ಸೂಚಿಸುವುದಕ್ಕಾಗಿಯೇ ಮೂಲದಲ್ಲಿ ಪ್ರಮಾತ್ವಪ್ರಯೋಜಕವಾದ 'ಪ್ರಮಾಮಾತ್ರಾನುಗತಗುಣ' ಎಂಬ ಸಾಮಗ್ರಿಯನ್ನು ಅನುಮಿತಿತ್ವಾದಿ ಪ್ರಯೋಜಕವಾದ 'ಲಿಂಗಪರಾಮರ್ಶ–ಶಬ್ದ' ಎಂಬ ಸಾಮಗ್ರಿಯನ್ನೂ ಪ್ರತ್ಯೇಕವಾಗಿ ತೋರಿಸಲಾಗಿದೆ.

## ವಿಷಯ ಸತ್ವವು ಗುಣವಲ್ಲ

## ನ್ಯಾಯದೀಪದಲ್ಲಿ ಅವತಾರಿಕೆ

**ಪೂರ್ವೋಕ್ತಮತತ್ರಯೇಽಪಿ ವಿಷಯಸತ್ವಮೇವ ಗುಣ ಇತಿ ಫಲಿತಮ್, ಇತಿ, 'ತಚ್ಚಾನೇನ ಸಾಧಿತಮ್' ಇತ್ಯಾದಿನಾ ವಕ್ಷ್ಯನ್ ವಿಷಯಸತ್ವಂ ಚ ನ ಗುಣಃ ಇತ್ಯಾಹ–ಕಿಂಚೇತಿ ॥**

ಇದುವರೆಗೆ ನಿರೂಪಿಸಿದ ಮೂರು ವಿಧದ 'ಗುಣಪರಿಷ್ಕಾರದ' ಫಲಿತಾರ್ಥ 'ಅರ್ಥ ಸತ್ತ್ವಂ ಗುಣಃ' ಎಂದು. ಇದನ್ನು ಮುಂದೆ 'ತಚ್ಚಾನೇನ' ಎಂಬ ಮೂಲದಲ್ಲಿ (ಪು.561) ಹೇಳಲಾಗುತ್ತದೆ. ಆದರೆ, ವಿಷಯಸತ್ತ್ವವೇ ಗುಣ, ಎಂದು ಹೇಳುವುದು ಸರಿಯಲ್ಲ. ಆದನ್ನು 'ಕಿಂಚ' ಎಂಬ ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किञ्च परतस्त्ववादिना हि विषयसत्त्वनैरपेक्ष्येण स्वत एवाप्रमाव्यावृत्तं ज्ञानसाधारणकारणादधिकं किञ्चित्कारणं प्रमायां साधनीयम् । नतु ज्ञानसाधारणकारणस्यैव विषयसत्त्वविशेषणेन अप्रमाव्यावृत्तिः साधनीया । स्वतस्त्ववादिनापि प्रमायां ज्ञानसाधारणकारणस्य विषयसत्त्वस्य च स्वीकृतत्वेन सिद्धसाधनात् ।।**

**अत एव सुधायां ''ज्ञानजनकमात्राधीनजन्मत्वं स्वतस्त्वं'' इति मात्रशब्देन जनकान्तरमेव निषिद्धम् । नतु विषयसत्त्वम् । तस्यातीतादिविषयकानुमित्यादिसाधारणत्वेन प्रामाण्यशरीरान्तर्गतत्वेन च तदजनकत्वात् ।।**

ಪರತಸ್ತ್ವವಾದಿಗಳು 'ಪ್ರಾಮಾಣ್ಯಂ ಗುಣಜನ್ಯಂ' ಎಂದು ಹೇಳುವಾಗ ಗುಣದ ನಿರುಕ್ತಿಯನ್ನು ವಿಷಯಸತ್ತ್ವದ ಅಪೇಕ್ಷೆ ಇಲ್ಲದಂತೆ ಮಾಡಬೇಕು. ಅಂದರೆ ಗುಣದಲ್ಲಿ ವಿಷಯ ಸತ್ತ್ವವು ಸೇರಿರಬಾರದು ಹಾಗೂ ಅದು ಅಪ್ರಮಾಸ್ಥಳದಲ್ಲಿ ಇರಬಾರದು. ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ಅದಕ್ಕಿಂತಲೂ ಹೆಚ್ಚಿನ ಅಂಶವು ಅದರಲ್ಲಿ ಸೇರಿರಬೇಕು. ಅಂತಹ ಗುಣವು ಪ್ರಮಾಕಾರಣ, ಎಂದು ಹೇಳಬೇಕು. ಹೊರತು, ಜ್ಞಾನಸಾಧಾರಣಕಾರಣದ ಜೊತೆಯಲ್ಲಿ ವಿಷಯಸತ್ತ್ವವನ್ನು ಸೇರಿಸಿ, ತತ್‌ಪ್ರಯುಕ್ತ ಅಪ್ರಮಾವ್ಯಾವೃತ್ತವಾದ ಗುಣವನ್ನು ಪ್ರಮಾಹೇತು, ಎಂದು ಹೇಳಬಾರದು. ಹಾಗೆ ಹೇಳಿದರೆ ಸಿದ್ಧಸಾಧನತಾದೋಷ ಬಂದೀತು. ಏಕೆಂದರೆ, ಸ್ವತಸ್ತ್ವವಾದಿಗಳೂ ಪ್ರಮಾ ಬರಬೇಕಾದರೆ ಜ್ಞಾನಸಾಧಾರಣಕಾರಣ ಮತ್ತು ವಿಷಯವು ಇರಬೇಕು, ಎಂದು ಒಪ್ಪಿರುತ್ತಾರೆ.

ಸುಧಾದಲ್ಲಿ (ಜಿಜ್ಞಾಸಾಧಿಕರಣ) 'ಜ್ಞಾನಜನಕಾಧೀನಮಾತ್ರ ಜನ್ಮತ್ವಂ' ಎಂದು ಉತ್ಪತ್ತೌ ಸ್ವತಸ್ತ್ವವನ್ನು ನಿರೂಪಿಸಲಾಗಿದೆ. ಅಲ್ಲಿರುವ ಮಾತ್ರಶಬ್ದದಿಂದ ವಿಷಯಸತ್ತ್ವವು ವ್ಯವಚ್ಛೇದ್ಯವಲ್ಲ. ವಿಷಯಸತ್ತ್ವಾತಿರಿಕ್ತವಾದ ಗುಣವೇ ವ್ಯವಚ್ಛೇದ್ಯ. ಏಕೆಂದರೆ, ಅತೀತಾದಿವಿಷಯಕವಾದ ಅನುಮಿತಿ ಸ್ಥಳದಲ್ಲೂ ಪೂರ್ವಕಾಲದಲ್ಲಿ ಒಂದೊಮ್ಮೆ ಅನುಮಿತಿ–ವಿಷಯವು ಸತ್ಯವಾಗಿರಲೇಬೇಕು. ಆದರೂ

ಅದು ಈಗ ಇಲ್ಲದಿರುವುದರಿಂದ ಆ ಅನುಮಿತಿಯು ವಿಷಯಸತ್ತ್ವಜನ್ಯವಲ್ಲ. ಅಲ್ಲದೆ, ಪ್ರಾಮಾಣ್ಯ ಶರೀರದಲ್ಲೇ 'ತದ್ವತಿ' ಎಂಬಾಂಶದಲ್ಲಿ ವಿಷಯಸತ್ತ್ವವು ಸೇರಿದೆ. ಸ್ವಘಟಿತವಾದ ಪ್ರಾಮಾಣ್ಯಕ್ಕೆ ಸ್ವವು (ವಿಷಯಸತ್ತ್ವವು) ಕಾರಣವಲ್ಲ. ಆದ್ದರಿಂದ ವಿಷಯಸತ್ತ್ವವು ಗುಣವಲ್ಲ.

## ನ್ಯಾಯದೀಪ

**ಅಪ್ರಮೇತಿ ॥ ಅಪ್ರಮಾಕಾರಣವ್ಯಾವೃತ್ತಮ್ ಇತ್ಯರ್ಥಃ। ಜ್ಞಾನಸಾಧಾರಣ ಕಾರಣಸ್ಯೇತಿ ಪರರೀತ್ಯೋಕ್ತಿಃ। ಸ್ವಮತೇ ಗ್ರಾಹ್ಯಜ್ಞಾನ-ವಿಶೇಷಣಜ್ಞಾನಯೋಃ ಅಹೇತುತ್ವಾತ್ ಇತಿ ಜ್ಞೇಯಮ್ । ಅಪ್ರಮೇತಿ ॥ ಅಪ್ರಮಾಕರಣ ವ್ಯಾವೃತ್ತಿಃ। ಅತ ಏವೇತಿ ॥ ವಿಷಯಸತ್ತ್ವಸ್ಯ ಅನುಮತತ್ವಾದೇವ ಇತ್ಯರ್ಥಃ। ಸುಧಾಯಾಮ್ – ಜಿಜ್ಞಾಸಾಧಿಕರಣಸುಧಾಯಾಮ್ ಇತ್ಯರ್ಥಃ। ನನು ವಿಷಯಸತ್ತ್ವಸ್ಯಾಪಿ ಪ್ರಮಾಜನಕತಯಾ ಜನಕಾಂತರನಿಷೇಧೇ ವಿಷಯಸತ್ತ್ವಮಪಿ ಸುಧಾಯಾಂ ನಿಷಿದ್ಧಮೇವ। ಅತಃ ತದನುಪ್ರವೇಶೇ ಸತಿ ನ ಸಿದ್ಧಸಾಧನಮ್ ಇತ್ಯತ ಆಹ–ತಸ್ಯೇತಿ ॥ ವಿಷಯಸತ್ತ್ವಸ್ಯ, ಇತ್ಯರ್ಥಃ। ಅತೀತೇತಿ ॥ ಅನುಮಿತ್ಯಾದಿಪ್ರಾಮಾಣ್ಯಾಯ ಪೂರ್ವಂ ತತ್ರ ವಿಷಯಸತ್ತ್ವಸ್ಯ ವಾಚ್ಯತಯಾ ತಸ್ಯ ಇದಾನೀಂತನ ಅನುಮಿತ್ಯಜನಕತ್ವಾತ್ ಇತಿ ಭಾವಃ।**

ಮೂಲದಲ್ಲಿ ಅಪ್ರಮಾವ್ಯಾವೃತ್ತವಾದ ಗುಣ ಎಂದರೆ, ಅಪ್ರಮಾಕಾರಣಕೋಟಿಯಲ್ಲಿ ಸೇರಿರದ ಗುಣ, ಎಂದು ಅರ್ಥ.

ಮೂಲದಲ್ಲಿ 'ಜ್ಞಾನಸಾಧಾರಣಕಾರಣಸ್ಯ' ಎಂದಿದೆ. ಅದಕ್ಕೆ ಜ್ಞಾನರೂಪವಾದ ಸಾಧಾರಣಕಾರಣ, ಎಂದು ಅರ್ಥ. ಇದು ಪರಮತ. ಅವರು ಜ್ಞಾನಸಾಮಾನ್ಯಕ್ಕೆ ಗ್ರಾಹ್ಯಜ್ಞಾನವು ಅಥವಾ, ವಿಶೇಷಣಜ್ಞಾನವು ಕಾರಣ, ಎಂದು ಹೇಳುತ್ತಾರೆ. ನಾವು ಹಾಗೆ ಹೇಳುವುದಿಲ್ಲ.[1]

ಸುಧಾದ ಮಾತ್ರಪದದಿಂದ ವಿಷಯಸತ್ತ್ವವು ವ್ಯಾವರ್ತ್ಯವಲ್ಲ, ಎನ್ನುವುದು ಸರಿಯಲ್ಲ. ವಿಷಯಸತ್ತ್ವವೂ ಪ್ರಮಾಜನಕ. ಮಾತ್ರಪದದಿಂದ ಪ್ರಮಾಜನಕವನ್ನು ನಿಷೇಧ ಮಾಡಿದಾಗ ವಿಷಯಸತ್ತ್ವವೂ ನಿಷಿದ್ಧವೇ ಆಗುತ್ತದೆ. ಆದ್ದರಿಂದ ಸ್ವತಸ್ತ್ವವಾದಿಗಳು ನಿಷೇಧ ಮಾಡಿರುವ ವಿಷಯ ಸತ್ತ್ವವನ್ನು ಗುಣಶರೀರದಲ್ಲಿ ಸೇರಿಸಿದರೆ ಸಿದ್ಧಸಾಧನತಾ ಹೇಗೆ?

ಈ ಆಕ್ಷೇಪದ ಪರಿಹಾರಕ್ಕಾಗಿ ವಿಷಯಸತ್ತ್ವವು ಪ್ರಮಾಜನಕ ಅಲ್ಲ. ಎಂದು 'ತಸ್ಯ' ಎಂಬ ವಾಕ್ಯದಲ್ಲಿ ತೋರಿಸಲಾಗಿದೆ.

1. ಈ ವಾಕ್ಯ ಕೆಲವು ಪ್ರತಿಗಳಲ್ಲಿ ಇಲ್ಲ. ಜ್ಞಾನಸಾಧಾರಣಕಾರಣ ಎಂದರೆ ಜ್ಞಾನರೂಪಸಾಧಾರಣ ಕಾರಣ ಎಂದು ಅರ್ಥ ಮಾಡಬೇಕಾಗುತ್ತದೆ. ಆದರೆ ಅದು ಸ್ವರಸ ಅಲ್ಲ. ಜ್ಞಾನಸ್ಯ ಸಾಧಾರಣ ಕಾರಣ, ಎಂದು ಅದಕ್ಕೆ ಅರ್ಥ. ಆತ್ಮಮನಃ ಸಂಯೋಗ ಜ್ಞಾನ ಸಾಧಾರಣ ಕಾರಣ. ಅದು ನಮಗೂ ಸಮ್ಮತವಾದುದರಿಂದ ಪರರೀತ್ಯಾ, ಎನ್ನಬೇಕಾಗಿಲ್ಲ.

'ಅಯಂ ದೇಶಃ ಅತೀತವಹ್ನಿಮಾನ್' ಎಂಬ ಅನುಮಿತಿಯು ಯಥಾರ್ಥವಾಗಬೇಕಾದರೆ ಆ ಪ್ರದೇಶದಲ್ಲಿ ಎಂದಾದರೊಮ್ಮೆ ವಹ್ನಿ ಇರಲೇಬೇಕು. ಆದ್ದರಿಂದ ವಿಷಯಸತ್ವವು ಪ್ರಮಾತ್ವ ಪ್ರಯೋಜಕ ಎನ್ನುವುದು ಸ್ವತಸ್ತ್ವವಾದಿಗಳಿಗೂ ಸಮ್ಮತ. ಆದರೆ, ಅದು ಅನುಮಿತಿ ಬರುವ ಕಾಲದಲ್ಲಿ ಇಲ್ಲವಾದ ಕಾರಣ ಅನುಮಿತಿಗೆ ಕಾರಣವಾಗಲಾರದು. ಹೀಗೆ ವಿಷಯಸತ್ವ ಇಲ್ಲದೆ ಜ್ಞಾನವು ಪ್ರಮಾವಾಗುವುದಿಲ್ಲವಾದುದರಿಂದ ಸುಧಾದಲ್ಲಿರುವ ಮಾತ್ರಪದದಿಂದ ವಿಷಯಸತ್ವವು ನಿಷಿದ್ಧವಲ್ಲ.

## ನ್ಯಾಯದೀಪ

**ತದಜನಕತ್ವಾದಿತಿ ।। ಯತ್ತು, ಪ್ರಮಾಣಪದ್ಧತೌ ಸಾಧನಪದೇನ ಪ್ರಮಾತೃ-ಪ್ರಮೇಯಯೋಃ ವ್ಯವಚ್ಛೇದ ಇತಿ ಕಾರಣತ್ವಮಾತ್ರಮುಪೇತ್ಯ ಸಾಧಕತಮತ್ವಾ-ಭಾವವಚನಮ್ ತತ್ ಅಭ್ಯುಪೇತ್ಯವಾದೇನ ಇತಿ ಭಾವಃ ।**

ಪ್ರಮಾಣಪದ್ಧತಿಯಲ್ಲಿ 'ಸಾಕ್ಷಾತ್‌ಜ್ಞೇಯವಿಷಯೀಕಾರಿ(ಪ್ರಮಾ) ಸಾಧನಮ್' ಎಂದು ಪ್ರಮಾಕರಣದ ಲಕ್ಷಣವನ್ನು ಹೇಳುವಾಗ ಸಾಧನಪದದಿಂದ ಪ್ರಮಾತೃ ಮತ್ತು ಪ್ರಮೇಯ (ವಿಷಯ)ಗಳಲ್ಲಿ ಬರುವ ಅತಿವ್ಯಾಪ್ತಿ ಪರಿಹಾರವಾಗುತ್ತದೆ, ಎಂದಿದೆ. ಇದರಿಂದ, ವಿಷಯವು (ಪ್ರಮೇಯ)ಪ್ರಮಾಕ್ಕೆ ಕಾರಣವಾದರೂ ಸಾಧನವಲ್ಲ, ಎಂದಂತಾಗುತ್ತದೆ. ಆದರೆ, ಇಲ್ಲಿ ವಿಷಯವು ಕಾರಣವೇ ಅಲ್ಲ, ಎಂದು ನಿಷೇಧ ಮಾಡಲಾಗಿದೆ. ಇದು ವಿರುದ್ಧವಲ್ಲವೆ? ಎಂದರೆ, ಪ್ರಮಾಣಪದ್ಧತಿಯಲ್ಲಿ ವಿಷಯವು ಕಾರಣ ಎಂದಿರುವುದು ಅಭ್ಯುಪಗಮವಾದ. ವಸ್ತುತಃ ಸಿದ್ಧಾಂತರೀತ್ಯಾ ವಿಷಯಸನ್ನಿಕರ್ಷವೇ ಜ್ಞಾನಕಾರಣ, ವಿಷಯವು ಅನ್ಯಥಾಸಿದ್ಧ.[1]

**एतेन यादृच्छिकसंवादेन प्रमायां, लिङ्गाभासेन शब्दाभासेन च जन्यायाम् अनुमितौ शाब्दप्रतीतौ च पक्षस्य वस्तुतः साध्यवत्त्वं, योग्यता च गुण इति निरस्तम् । स्पष्टयिष्यते चैतत् ।।**

ಇದರಿಂದ ಇನ್ನೊಂದು ವಿಧದ ಗುಣದ ಕಲ್ಪನೆಯೂ ನಿರಸ್ತವಾಗುತ್ತದೆ– ಕೆಲವೊಮ್ಮೆ ಲಿಂಗಾಭಾಸದಿಂದ (ದುಷ್ಟಹೇತುವಿನಿಂದ) ಬಂದ ಅನುಮಿತಿಯೂ ಆಕಸ್ಮಾತ್ ಪ್ರಮಾತ್ಮಕ ವಾಗುತ್ತದೆ. ಆದರಂತೆ 'ನದೀತೀರೇ ಪಂಚಫಲಾನಿ ಸಂತಿ' ಎಂಬ ಶಬ್ದಾಭಾಸದಿಂದ ಹುಟ್ಟಿದ

1. **ಪ್ರಮಾಣಪದ್ಧತಿಯಲ್ಲಿ ರಾಯರು ತಮ್ಮ ಟಿಪ್ಪಣಿಯಲ್ಲಿ ಇದನ್ನು ಹೇಳಿದ್ದಾರೆ–ಕಾರಣತ್ವೇऽಪಿ ಇತಿ ಅಭ್ಯುಪಗಮವಾದಃ । ಪ್ರಮಾತುಃ ಕಾರಣತ್ವೇऽಪಿ ಪ್ರಮೇಯಸ್ಯ ತದಭಾವಾತ್ । ವಿಷಯಸ್ಯ ಕ್ವಾಪಿ ಜನಕತಾಸಮ್ಮತೇಃ, ಇತಿ ತತ್ತ್ವೋದ್ಯೋತಟೀಕೋಕ್ತೇಃ । ಉಕ್ತಂ ಹಿ ತರ್ಕತಾಂಡವೇ ಚ ಪ್ರತ್ಯಕ್ಷ ಪ್ರಮಾಸು ಅನುಗತ ಗುಣಭಂಗೇ–ಚಕ್ಷುರಾದಿವತ್ ಕಾರಣತ್ವೇನ ಧರ್ಮಿಗ್ರಾಹಕ–ಪ್ರಮಾಣಸಿದ್ಧೋऽರ್ಥಃ ಸನ್ನಿಕರ್ಷೇಣ ಅನ್ಯಥಾಸಿದ್ಧತ್ವಾತ್ ನ ಪ್ರಮಾಹೇತುಃ ।**

ಶಾಬ್ದಬೋಧವೂ ಯಾದೃಚ್ಛಿಕಸಂವಾದದಿಂದ ಪ್ರಮಾತ್ಮಕವಾಗುವುದಿದೆ. ಅಂತಹ ಪ್ರಮಾಕ್ಕೆ ಅನುಮಿತಿಗೆ ಪಕ್ಷದಲ್ಲಿ ವಸ್ತುತಃ ಸಾಧ್ಯವತ್ವವೇ ಗುಣ, ಶಾಬ್ದಪ್ರಮಾಕ್ಕೆ ಯೋಗ್ಯತಾವೇ (ಪದಾರ್ಥೇ ತತ್ರ ತದ್ವತ್ತಾ) ಗುಣ. ಇದು ತಾರ್ಕಿಕರ ವಾದ. ಇದೂ ನಿರಸ್ತವಾಯಿತು. ಇವೆರಡೂ ಅರ್ಥಸತ್ವಘಟಿತವಾದುದರಿಂದ ಪ್ರಮಾಹೇತುವಾಗಲು ಸಾಧ್ಯವಿಲ್ಲ. ಇದನ್ನು ಮುಂದಿನ ಪ್ರಕರಣದಲ್ಲಿ ಸ್ಪಷ್ಟಪಡಿಸುತ್ತೇವೆ.

## ನ್ಯಾಯದೀಪ

**ಏತೇನೇತಿ ॥ ವಿಷಯಸತ್ವಸ್ಯ ಗುಣತ್ವಾಭಾವಕಥನೇನ ಇತ್ಯರ್ಥಃ। ವಾಸ್ತವ ಸಾಧ್ಯಸತ್ವ–ಯೋಗ್ಯತಯೋಃ ವಿಷಯಸತ್ವರೂಪತ್ವಾತ್, ಇತಿ ಭಾವಃ। ಕಥಮಿದಂ ಸಾಧ್ಯಸತ್ವಾದಿಕಂ ವಿಷಯಸತ್ವಗರ್ಭಮ್ ಇತ್ಯತ ಆಹ–ಸ್ಪಷ್ಟಯಿಷ್ಯತೇ ಇತಿ ॥ ಉತ್ತರಭಂಗೇ ಇತ್ಯರ್ಥಃ॥**

ಏತೇನ ಅಂದರೆ ವಿಷಯಸತ್ವವು ಗುಣವಾಗದು, ಎಂದುದರಿಂದ, ಎಂದರ್ಥ. ಪ್ರಕೃತ ಪಕ್ಷದಲ್ಲಿ ವಾಸ್ತವವಾಗಿ ಸಾಧ್ಯಸತ್ವ, ಮತ್ತು ಶಾಬ್ದಜ್ಞಾನಕ್ಕೆ ಕಾರಣವಾದ ಯೋಗ್ಯತಾ ಇವೆರಡೂ ವಿಷಯಸತ್ವಘಟಿತವಾಗಿವೆ, ಎಂದು ಭಾವ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವಸ್ತು ವಿಷಯಸತ್ವಂ ನ ಗುಣಃ। ತಥಾಪಿ, ಗ್ರಾಹ್ಯಪ್ರಮೇತ್ಯಾದ್ಯುಕ್ತ-ಪಕ್ಷತ್ರಯೇಽಪಿ ಕಿಮಾಗತಮ್, ಇತ್ಯತ ಆಹ–ತಚ್ಚೇತಿ॥**

ವಿಷಯಸತ್ವವು ಗುಣವಲ್ಲ ಎನ್ನುವ ವಿಷಯಕ್ಕೂ ಹಿಂದೆ ಹೇಳಿರುವ ಮೂರು ರೀತಿಯ ಗುಣನಿರೂಪಣೆಗೂ ಏನು ಸಂಬಂಧ? ಅದನ್ನು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**तच्चानेन साधितम् । विशेषणज्ञानस्यासंसर्गाग्रहस्य च भ्रमसाधारण्यात्। विशेष्यनिष्ठशब्देन, अविद्यमानशब्देन च विषयसत्वस्यैवोक्तेः । अन्यथा भ्रमेऽपि विशेष्यानिष्ठविशेषणज्ञानं, विद्यमानासंसर्गाग्रहश्च प्रमाव्यावृत्तत्वाद्दोष इति तज्जन्यत्वेनैव परतस्त्वं स्यात् ॥**

ಹಿಂದೆ ಹೇಳಿರುವ ಮೂರು ಪಕ್ಷಗಳಲ್ಲೂ ವಿಷಯ ಸತ್ವವೇ ಗುಣವೆಂದು ಹೇಳಿದಂತಾಗಿದೆ. (ಹೇಗೆಂದರೆ) ವಿಶೇಷಣಜ್ಞಾನವು ಭ್ರಮೆಗೂ ಕಾರಣ. ಅದರ ವ್ಯಾವೃತ್ತಿಗಾಗಿ ಗುಣದಲ್ಲಿ ವಿಶೇಷಣಕ್ಕೆ

'ವಿಶೇಷ್ಯನಿಷ್ಠ' ಎಂಬ ವಿಶೇಷಣವನ್ನು ಕೊಡಲಾಗಿದೆ. ಅಂದರೆ ವಿಶೇಷಣವು ವಿಶೇಷ್ಯನಿಷ್ಠ ವಾಗಿರಬೇಕೆಂದು ಹೇಳುವ ಮೂಲಕ ವಿಷಯ ಸತ್ವವನ್ನೇ ಹೇಳಿದಂತಾಗಿದೆ.

ಮೂರನೆಯ ಗುಣಸ್ವರೂಪವನ್ನು ಅಸಂಸರ್ಗಾಗ್ರಹ ಎಂದಿಷ್ಟೇ ಹೇಳಿದರೆ ಅದು ಭ್ರಮೆಗೂ ಕಾರಣವಾದುದರಿಂದ ಗುಣವಾಗುವುದಿಲ್ಲ. ಆದಕ್ಕಾಗಿ, 'ಅಸಂಸರ್ಗಕ್ಕೆ' ಅವಿದ್ಯಮಾನ ಎಂಬ ವಿಶೇಷಣವನ್ನು ಕೊಡಲಾಗಿದೆ. ಭ್ರಮೆಯಲ್ಲಿ ವಿಶೇಷಣದ ಅಸಂಸರ್ಗ ವಿಶೇಷ್ಯದಲ್ಲಿ ವಿದ್ಯಮಾನ, ಪ್ರಮಾದಲ್ಲಿ ಸಂಸರ್ಗವು ಇರುವುದರಿಂದ ಅಸಂಸರ್ಗವು ಅವಿದ್ಯಮಾನ. ಹೀಗೆ, ಅವಿದ್ಯಮಾನ ಅಸಂಸರ್ಗಪದದಿಂದ ವಿದ್ಯಮಾನ ಸಂಸರ್ಗ ಎಂದಂತೆಯೇ ಆಗುತ್ತದೆ. ಇದೇ ವಿಷಯ ಸತ್ವ. (ವಿಶೇಷ್ಯದಲ್ಲಿ ವಿಶೇಷಣದ ಸಂಸರ್ಗ) ಹೀಗೆ, ಇವೆರಡೂ ವಿಷಯ ಸತ್ವಘಟಿತಗಳೇ ಆಗಿವೆ.

ಹೀಗಿದ್ದರೂ ಇವೆರಡು ಪ್ರಮಾಕ್ಕೆ ಕಾರಣವಾಗುವುದಾದಲ್ಲಿ ತುಲ್ಯನ್ಯಾಯೇನ, ವಿಶೇಷ್ಯದಲ್ಲಿ ಇಲ್ಲದಿರುವ (ಅನಿಷ್ಠವಾದ) ವಿಶೇಷಣದ ಜ್ಞಾನವು ದೋಷವಾಗಬೇಕು. ಅರ್ಥಾತ್ ವಿದ್ಯಮಾನ ಅಸಂಸರ್ಗದ ಅಗ್ರಹವು ದೋಷವಾಗಬೇಕು. ಪಿತ್ತಾದಿಗಳು ದೋಷ ಆಗಬಾರದು. ತಥಾಚ ಏತಾದೃಶ ದೋಷಗಳಿಂದ ಜನ್ಯವಾಗುವ ಕಾರಣದಿಂದಾಗಿಯೇ ಜ್ಞಾನವು ಭ್ರಮೆ, ಎಂದಾದೀತು. ಆದ್ದರಿಂದ ವಿಷಯಸತ್ವವು ಗುಣವಲ್ಲ, ವಿಷಯಾಸತ್ವವು ದೋಷವೂ ಅಲ್ಲ.

## ನ್ಯಾಯದೀಪ

**ತಚ್ಚೇತಿ ।। ಜ್ಞಾನಸಾಧಾರಣಕಾರಣಸ್ಯ ವಿಷಯಸತ್ವೇನ ವಿಶೇಷಿತತ್ವಮ್ ಅನೇನ ಪಕ್ಷತ್ರಯೇಣ ಸಾಧಿತಂ ತ್ವಯಾ ಇತ್ಯರ್ಥಃ। ಕಥಮ್? ಇತ್ಯತೋ ವ್ಯನಕ್ತಿ-ವಿಶೇಷಣೇತ್ಯಾದಿನಾ ।। ವಿಶೇಷಣಜ್ಞಾನಸ್ಯ ಇತ್ಯುಕ್ತ್ಯಾ ಗ್ರಾಹ್ಯಜ್ಞಾನ-ಸ್ಯಾಪಿ ಗ್ರಹಃ ಪ್ರಾಪ್ತಃ। ವಿಶೇಷ್ಯನಿಷ್ಠೇತಿ ।। ಗ್ರಾಹ್ಯಪ್ರಮೇತಿ ಪ್ರಮಾಶಬ್ದೇನ ಇತ್ಯಪಿ ಧ್ಯೇಯಮ್। 'ಪರತಸ್ತ್ವಾದಿನಾ ಹಿ' ಇತ್ಯಾದಿನಾ ಉಕ್ತಪ್ರಮೇಯಾನಂಗೀಕಾರೇ ಬಾಧಕಮಾಹ-ಅನ್ಯಥೇತಿ ।। ಗ್ರಾಹ್ಯ-ಭ್ರಮೋऽಪಿ ಅತ್ರ ಉಪಲಕ್ಷ್ಯಃ। ಯದ್ವಾ ಆದ್ಯಪಕ್ಷಸ್ಯ ಅತಿಫಲ್ಗುತ್ವಾತ್ ದ್ವಿತೀಯ-ತೃತೀಯಯೋರೇವಾತ್ರ ಪೂರ್ವತ್ರ ಚ ದೋಷೋತ್ಕೀರ್ತನಮ್ ಇತಿ ಬೋಧ್ಯಮ್।**

ತಚ್ಚ ಅಂದರೆ, ಜ್ಞಾನಕ್ಕೆ ಸಾಧಾರಣಕಾರಣಗಳೊಂದಿಗೆ ವಿಷಯಸತ್ವವನ್ನು ಅಧಿಕವಾಗಿ ಸೇರಿಸಿ ಗುಣವೆಂದು ಪರಿಗಣಿಸಿರುವುದು, ನೀವು ಹೇಳಿರುವ ಮೂರೂ ಗುಣನಿರೂಪಣೆಯಲ್ಲೂ ಸಮಾನ, ಎಂದರ್ಥ.

'ವಿಶೇಷಣಜ್ಞಾನ' ಎಂದು ಮೂಲದಲ್ಲಿ ಹೇಳಿದುದರಿಂದ ಎರಡನೆ ಗುಣದಂತೆ

ಮೊದಲಗುಣವಾದ ಗ್ರಾಹ್ಯಜ್ಞಾನವೂ ಅಂಗೀಕೃತವಾಯಿತು. ಎರಡು ಮತ್ತು ಮೂರನೆಯ ಪಕ್ಷಗಳು ವಿಷಯಸತ್ವಘಟಿತವೆಂದು ಹೇಳಲಾಗಿದೆ. ಅದರ ಜೊತೆಯಲ್ಲಿ 'ಗ್ರಾಹ್ಯಪ್ರಮಾ ಗುಣಃ' ಎಂಬ ಪ್ರಥಮ ಪಕ್ಷದಲ್ಲೂ ಪ್ರಮಾ ಶಬ್ದದಲ್ಲಿ ವಿಷಯಸತ್ವ ಸೇರಿದೆ, ಎಂದೂ ತಿಳಿಯಬೇಕು.

ಅನ್ಯಥಾ ಎಂಬ ವಾಕ್ಯವು, ಹಿಂದೆ (ಪು.553) ಹೇಳಿದ 'ಕಿಂಚ ಪರತಸ್ತ್ವವಾದಿನಾ' ಎಂಬ ವಾಕ್ಯದೊಂದಿಗೆ ಸಂಬಂಧಿಸಿದೆ. ಅಲ್ಲಿ ಹೇಳಿದಂತೆ ವಿಷಯ ಸತ್ತಾಘಟಿತವಾದ ಗುಣವನ್ನು ಕಾರಣ, ಎಂದು ಹೇಳದೇ ಹೋದರೆ ಎಂದರ್ಥ.

'ಅನ್ಯಥಾ' ಎಂದು ಮೂಲದಲ್ಲಿ ಭ್ರಮಾಪ್ರತಿಬಂದಿಯನ್ನು ಹೇಳುವಾಗ ಎರಡಕ್ಕೆ ದೋಷಗಳನ್ನು ಹೇಳಲಾಗಿದೆ. ಅದರ ಜೊತೆಗೆ ಮೊದಲನೆಯ 'ಗ್ರಾಹ್ಯಪ್ರಮಾ ಗುಣಃ' ಎಂಬಪಕ್ಷಕ್ಕೆ ಪ್ರತಿಬಂದಿಯಾಗಿ 'ಗ್ರಾಹ್ಯಭ್ರಮವು' ದೋಷವಾಗಲಿ, ಎಂಬುದನ್ನೂ ಸೇರಿಸಿಕೊಳ್ಳಬೇಕು.

ಅಥವಾ, ಇದನ್ನು ಸೇರಿಸಿಕೊಳ್ಳಬೇಕಾಗಿಲ್ಲ. ಪ್ರಥಮ ಪಕ್ಷ ಅತ್ಯಂತ ಕ್ಷುಲ್ಲಕವೆಂದು ಉಪೇಕ್ಷೆ ಮಾಡಿ ದ್ವಿತೀಯ ತೃತೀಯ ಪಕ್ಷಗಳಿಗೆ ಮಾತ್ರ ದೋಷ ಹೇಳಿ ಇಲ್ಲಿ ಅವೆರಡಕ್ಕೇ ಪ್ರತಿಬಂದಿಯನ್ನು ಹೇಳಲಾಗಿದೆ.

**तस्मात् भ्रमे स्वत एव प्रमाव्यावृत्तं पित्तादिकमिव प्रमायामपि स्वत एव भ्रमव्यावृत्तं भूयोऽवयवेन्द्रियसन्निकर्षादिकमधिकं वाच्यमिति किमनेन ॥**

ಆದ್ದರಿಂದ, ಭ್ರಮೆಗೆ ಪ್ರಮೆಯಲ್ಲಿ ಇಲ್ಲದ ಪಿತ್ತಾದಿದೋಷಗಳು ಹೇಗೆ ಕಾರಣವೋ ಅದರಂತೆ ಪ್ರಮೆಗೂ ಭ್ರಮೆಯಲ್ಲಿ ಇಲ್ಲದ, ವಿಷಯ ಸತ್ವನಿರಪೇಕ್ಷವಾದ ಭೂಯೋಽವಯವೇಂದ್ರಿಯ ಸನ್ನಿಕರ್ಷವೇ, ಮೊದಲಾದ ಅಧಿಕವಾದ ಕಾರಣ ವಿಶೇಷವನ್ನು ಗುಣವೆಂದು ಹೇಳಬೇಕು. ಹೀಗಿದ್ದ ಮೇಲೆ ಈ ರೀತಿಯ ಅನುಗತಗುಣಗಳ ನಿರುಕ್ತಿ ವ್ಯರ್ಥ.

## ನ್ಯಾಯದೀಪ

**ಸ್ವತ ಏವೇತಿ ॥ ವಿಷಯಸತ್ವನೈರಪೇಕ್ಷ್ಯೇಣ, ಇತ್ಯರ್ಥಃ ॥**

ಸ್ವತ ಏವ ಎಂದರೆ ವಿಷಯಸತ್ವದ ಅಪೇಕ್ಷೆಯೇ ಇಲ್ಲದೆ, ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಪ್ರಮಾಮಾತ್ರೇ ಅನುಗತಕಾರಣದೂಷಣೇನ ಮಣ್ಯುಕ್ತಾನು-ಮಾನಾಂತರಮಪಿ ನಿರಸ್ತಮಿತ್ಯಾಹ-ಏತೇನೇತಿ ॥**

ಹೀಗೆ ಸಕಲಪ್ರಮಾಗಳಿಗೂ ಅನುಗತವಾದ ಒಂದು ಕಾರಣ ಇಲ್ಲ, ಎಂದು ದೂಷಣೆ ಮಾಡಿರುವುದರಿಂದಲೇ ಮಣಿಗ್ರಂಥದಲ್ಲಿ ಹೇಳಿರುವ (ಪು.338) ಇನ್ನೊಂದು ಅನುಮಾನವೂ ದೂಷಿತವಾಯಿತು, ಎಂದು ಮುಂದೆ ತಿಳಿಸುತ್ತಾರೆ.

## ಮಣ್ಯುಕ್ತಾನುಮಾನಾಂತರ ನಿರಾಸ

**एतेन,अनित्यप्रमात्वं अप्रमाकारणतावच्छेदकरूपानवच्छिन्नकारणता-प्रतियोगिककार्यतावच्छेदकम् । भ्रमावृत्तिकार्यतावच्छेदकत्वात् । घटत्ववत् इत्याद्यपि निरस्तम् । कार्यतावाच्छेदकत्वस्यैव निरासादिति।।**

ಇದರಿಂದಾಗಿ ಈ ಅನುಮಾನವೂ ನಿರಸ್ತವಾಯಿತು—

ಅನಿತ್ಯಪ್ರಮಾತ್ವವು-**ಪಕ್ಷ**

ಅಪ್ರಮಾ-ಕಾರಣತಾವಚ್ಛೇದಕವಾದ ಯಾವ ಧರ್ಮವಿದೆಯೋ ತದನವಚ್ಛಿನ್ನವಾದ ಕಾರಣತಾ ಅಂದರೆ, ಗುಣತ್ವಾವಚ್ಛಿನ್ನಕಾರಣತಾ, ತನ್ನಿರೂಪಿತ ಕಾರ್ಯತಾವಚ್ಛೇದಕವಾಗಿದೆ-**ಸಾಧ್ಯ.**

ಭ್ರಮೆಯಲ್ಲಿ ಇಲ್ಲದ ಕಾರ್ಯತಾವಚ್ಛೇದಕಧರ್ಮವಾದುದರಿಂದ-**ಹೇತು.**

ಘಟತ್ವದಂತೆ-**ದೃಷ್ಟಾಂತ.**

ಘಟತ್ವವು ಭ್ರಮೆಯಲ್ಲಿ ಇಲ್ಲ. ಅದು ಕಾರ್ಯತಾವಚ್ಛೇದಕವೂ ಆಗಿದೆ. ಆದ್ದರಿಂದ ಅದರಲ್ಲಿ ಹೇತು ಇದೆ. ಸಾಧ್ಯವೂ ಇದೆ-ಅಪ್ರಮಾಕಾರಣವಾದುದು ದೋಷ. ಕಾರಣತಾವಚ್ಛೇದಕ ದೋಷತ್ವ. ತದನವಚ್ಛಿನ್ನಕಾರಣತಾ ಎಂದರೆ ದಂಡತ್ವಾವಚ್ಛಿನ್ನಕಾರಣತಾ. ತನ್ನಿರೂಪಿತ ಕಾರ್ಯತಾ ಘಟನಿಷ್ಠಾ. ತದವಚ್ಛೇದಕವಾಗಿದೆ, ಘಟತ್ವ.

ಈ ಅನುಮಾನದಿಂದ ಪ್ರಮಾಕ್ಕೆ ಕಾರಣವಾದ ಒಂದು ಗುಣ ಸಿದ್ಧವಾಗುತ್ತದೆ. ಇದು ಮಣಿಕಾರ ಹೇಳಿದ (ಪು.338) ಅನುಮಾನ. ಇದೂ ಸರಿಯಲ್ಲ. ಹಿಂದೆ ಹೇಳಿದಂತೆ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲವಾದುದರಿಂದ ಬಾಧ ಮತ್ತು ಅಸಿದ್ಧಿ ಎರಡೂ ದೋಷಗಳಿವೆ.

## ನ್ಯಾಯದೀಪ

**ಅಪ್ರಮೇತಿ ।। ಅಪ್ರಮಾಕಾರಣತಾ ದೋಷಾದಿನಿಷ್ಠಾ। ತದನವಚ್ಛೇದಕಂ**

**ರೂಪಂ ವಿಶೇಷ್ಯನಿಷ್ಠ–ವಿಶೇಷಣಜ್ಞಾನತ್ವಾದಿಕಮ್ । ತದವಚ್ಛಿನ್ನ–ಕಾರಣತಾ ನಿರೂಪಿತ–ಕಾರ್ಯತಾವಚ್ಛೇದಕಮ್ ಇತ್ಯರ್ಥಃ । ದೃಷ್ಟಾಂತೇ ದಂಡತ್ವಾದಿಕಮೇವ ಅಪ್ರಮಾಕಾರಣತಾನವಚ್ಛೇದಕಂ ರೂಪಂ ಬೋಧ್ಯಮ್ ।**

**ಹೇತೌ ಅಪ್ರಮಾತ್ವೇ ವ್ಯಭಿಚಾರವಾರಣಾಯ ಭ್ರಮಾದ್ಯವೃತ್ತೀತಿ । ಭ್ರಮನಿಷ್ಠಾತ್ಯಂತಾಭಾವ–ಪ್ರತಿಯೋಗೀ ಇತ್ಯರ್ಥಃ । ನಿತ್ಯಾನಿತ್ಯ–ವೃತ್ತಿಪ್ರಮಾತ್ವಾದೌ ತನ್ನಿರಾಸಾಯ ವಿಶೇಷ್ಯಮ್ ।**

ಸಾಧ್ಯದ ಸಮನ್ವಯ ಹೀಗೆ–ಅಪ್ರಮಾಕ್ಕೆ ಕಾರಣದೋಷ. ಕಾರಣತಾ ದೋಷನಿಷ್ಠಾ. ತದವಚ್ಛೇದಕ ದೋಷನಿಷ್ಠಧರ್ಮ. ಅನವಚ್ಛೇದಕ ಗುಣನಿಷ್ಠವಾದ ವಿಶೇಷ್ಯನಿಷ್ಠ–ವಿಶೇಷಣ ಜ್ಞಾನತ್ವಾದಿಗಳು. ತದಚ್ಛಿನ್ನಕಾರಣತಾ ನಿರೂಪಿತ ಕಾರ್ಯತಾ ಪ್ರಮಾದಲ್ಲಿದೆ. ಅದರಲ್ಲಿ ಅವಚ್ಛೇದಕ ಪ್ರಮಾತ್ವ. ದೃಷ್ಟಾಂತವಾದ ಘಟತ್ವದಲ್ಲಿ ಸಮನ್ವಯ ಮಾಡುವಾಗ ಅಪ್ರಮಾ ಕಾರಣತಾನಚ್ಛೇದಕಧರ್ಮ ದಂಡತ್ವ. ತದವಚ್ಛಿನ್ನಕಾರಣತಾ–ನಿರೂಪಿತಕಾರ್ಯತಾವಚ್ಛೇದಕ ಘಟತ್ವ.

ಹೇತುವಿನಲ್ಲಿ ಭ್ರಮಾವೃತ್ತಿ ಎಂಬ ವಿಶೇಷಣವನ್ನು ಬಿಟ್ಟರೆ ಅಪ್ರಮಾತ್ವದಲ್ಲಿ ವ್ಯಭಿಚಾರ. ಅದೂ ಕಾರ್ಯತಾವಚ್ಛೇದಕವಾಗಿದೆಯಾದ್ದರಿಂದ ಅದರಲ್ಲಿ ಹೇತು ಇದೆ, ಸಾಧ್ಯ ಇಲ್ಲ. ಅದರ ಪರಿಹಾರಕ್ಕಾಗಿ ಕಾರ್ಯತಾದಲ್ಲಿ ಭ್ರಮಾವೃತ್ತಿ, ಎಂಬ ವಿಶೇಷಣಬೇಕು. ಭ್ರಮಾವೃತ್ತಿ ಎಂದರೆ, ಭ್ರಮನಿಷ್ಠ–ಅತ್ಯಂತಾಭಾವಪ್ರತಿಯೋಗಿ ಎಂದರ್ಥ. ಭ್ರಮನಿಷ್ಠ–ಕಾರ್ಯತಾ ಹಾಗಾಗಿಲ್ಲ. ಆದ್ದರಿಂದ ಭ್ರಮೆಯಲ್ಲಿ ಹೇತು ಬರುವುದಿಲ್ಲ. ಭ್ರಮಾವೃತ್ತಿಧರ್ಮತ್ವಾತ್ ಎಂದಿಷ್ಟೇ ಹೇಳಿದರೆ ನಿತ್ಯಪ್ರಮಾ ಮತ್ತು ಅನಿತ್ಯಪ್ರಮಾದಲ್ಲಿರುವ ಪ್ರಮಾತ್ವದಲ್ಲಿ ವ್ಯಭಿಚಾರ. ಅದೂ ಭ್ರಮಾವೃತ್ತಿಧರ್ಮವಾಗಿದೆ. ಆದರೆ, ಅತಿಪ್ರಸಕ್ತವಾದುದರಿಂದ ಕಾರ್ಯತಾವಚ್ಛೇದಕವಲ್ಲ. ಸಾಧ್ಯ ಇಲ್ಲ. ಅದರ ಪರಿಹಾರಕ್ಕಾಗಿ ಕಾರ್ಯತಾವಚ್ಛೇದಕ ಎಂಬ ವಿಶೇಷ್ಯಭಾಗವೂ ಬೇಕು.

## ನ್ಯಾಯದೀಪ

**ಆದಿಪದೇನ, ಅನಿತ್ಯರಜತಪ್ರಮಾತ್ವಂ, ರಜತಾಪ್ರಮಾಕಾರಣತಾನವಚ್ಛೇದಕ–ರೂಪಾವಚ್ಛಿನ್ನ–ಕಾರಣತಾ–ಪ್ರತಿಯೋಗಿಕ–ಕಾರ್ಯತಾವಚ್ಛೇದಕಂ, ರಜತ–ಭ್ರಮಾವೃತ್ತಿಕಾರ್ಯತಾವಚ್ಛೇದಕ–ಧರ್ಮತ್ವಾತ್ ಇತ್ಯಾದಿಗ್ರಹಃ ।**

**ಕಾರ್ಯತೇತಿ ॥ ಅನುಗತಗುಣನಿರಾಸೇನ ಸ್ವಾವಚ್ಛಿನ್ನಕಾರ್ಯತ್ವ ಪ್ರತಿಯೋಗಿಕ–ಕಾರಣಾಸಂಭವರೂಪ–ಬಾಧಕಸ್ಯೈವ ಭಾವೇನ, 'ಬಾಧಕಂ ವಿನಾ ಕಾರ್ಯಮಾತ್ರವೃತ್ತಿಧರ್ಮತ್ವಾತ್ ಕಾರ್ಯತಾವಚ್ಛೇದಕಂ' ಇತ್ಯಸ್ಯ ಅಸಂಭವಾತ್ । ತಥಾಚ ಬಾಧಾಸಿದ್ಧೀ ಇತಿ ಭಾವಃ । ರಜತಾನುಮಿತ್ಯಾದಿ–**

**ಸಾಧಾರಣಗುಣಾಭಾವೇನ ರಜತಪ್ರಮಾತ್ವೇऽಪಿ ನ ಕಾರ್ಯತಾವಚ್ಛೇದಕತ್ವಮ್ ಇತಿ ಜ್ಞೇಯಮ್ ।**

ಮೂಲದ ಆದಿಪದದಿಂದ ಮಣ್ಯುಕ್ತ ಅನುಮಾನಾಂತರವನ್ನು ತೆಗೆದುಕೊಂಡು ಅದೂ ಸರಿಯಲ್ಲ, ಎಂದು ತಿಳಿಯಬೇಕು. ಆ ಅನುಮಾನದಲ್ಲಿ ಅನಿತ್ಯರಜತಪ್ರಮಾತ್ವವು ಪಕ್ಷ. ಪ್ರಥಮಾನುಮಾನದಲ್ಲಿ ವಿಷಯವಿಶೇಷವನ್ನು ವಿವಕ್ಷೆ ಮಾಡದೆ ಅನಿತ್ಯಪ್ರಮಾತ್ವಸಾಮಾನ್ಯವು ಪಕ್ಷ. ಈ ಅನುಮಾನದಲ್ಲಿ ರಜತ ಎಂಬ ವಿಷಯವನ್ನು ಸೇರಿಸಿ ಪ್ರಮಾತ್ವವಿಶೇಷವನ್ನು ಪಕ್ಷಮಾಡಲಾಗಿದೆ. ಸಾಧ್ಯ ಸಮನ್ವಯಮಾಡುವಾಗ ರಜತ–ಅಪ್ರಮಾಕಾರಣತಾದಲ್ಲಿ ಅನವಚ್ಛೇದಕಧರ್ಮ ಎಂದರೆ ರಜತಪ್ರಮಾಕ್ಕೆ ಕಾರಣವಾದ ಗುಣನಿಷ್ಠಧರ್ಮ. ತದವಚ್ಛಿನ್ನ ಕಾರಣತಾನಿರೂಪಿತ ಕಾರ್ಯತಾದಲ್ಲಿ ಅನಿತ್ಯ ರಜತಪ್ರಮಾತ್ವವು ಅವಚ್ಛೇದಕವಾಗಿದೆ.

ಈ ಎರಡೂ ಅನುಮಾನಗಳೂ ಸರಿಯಲ್ಲ. ನಿತ್ಯಪ್ರಮಾಗಳಿಗೆಲ್ಲ ಕಾರಣವಾದ ಗುಣ ಇಲ್ಲ ಎಂದು ಹೇಳಿರುವುದರಿಂದ, ಅನಿತ್ಯ ಪ್ರಮಾತ್ವಾವಚ್ಛಿನ್ನ–ಕಾರ್ಯತಾ–ನಿರೂಪಿತ–ಕಾರಣವೇ ಅಸಂಭವಿ. ಇದೇ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕ ಎನ್ನಲು ಬಾಧಕ. ಈ ಬಾಧಕ ಇರುವುದರಿಂದಾಗಿಯೇ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಲ್ಲ. 'ಕಾರ್ಯಮಾತ್ರವೃತ್ತಿ ಧರ್ಮಃ ಕಾರ್ಯತಾವಚ್ಛೇದಕಃ' ಎಂಬ ನಿಯಮದಲ್ಲಿ ಬಾಧಕಂ ವಿನಾ, ಎಂಬ ಅಂಶವೂ ಸೇರಿರುವುದರಿಂದ ಈ ನಿಯಮವನ್ನು ಆಧಾರವನ್ನಾಗಿ ಪರಿಗಣಿಸಿ ಅನಿತ್ಯಪ್ರಮಾತ್ವವು ಕಾರ್ಯತಾ ವಚ್ಛೇದಕ, ಎಂದು ಸಾಧಿಸಲಾಗುವುದಿಲ್ಲ. ಅದರಂತೆ ಅನಿತ್ಯರಜತ–ಪ್ರಮಾತ್ವವು ಅನುಮಿತಿ–ಪ್ರತ್ಯಕ್ಷಾದಿಸಾಧಾರಣವಾಗಿದೆ. ಅವೆಲ್ಲಕ್ಕೂ ಸಾಧಾರಣವಾದ ಗುಣ ಇಲ್ಲ. ಆದ್ದರಿಂದ ಅದೂ ಕಾರ್ಯತಾವಚ್ಛೇದಕವಲ್ಲ. ಹೀಗಾಗಿ, ಆ ಎರಡೂ 'ಪಕ್ಷ'ಗಳಲ್ಲಿ ಸಾಧ್ಯವೂ ಇಲ್ಲ, ಹೇತುವೂ ಇಲ್ಲವಾದ ಕಾರಣ ಬಾಧ ಮತ್ತು ಅಸಿದ್ಧಿದೋಷಗಳು ಬರುತ್ತವೆ.

**एतदुक्तं ''अन्यथा'' इत्यादिना । अनुगतगुणाभावेऽपि अनित्यप्रमात्वस्य कार्यतावच्छेदकत्वे घटत्वादिकं कार्यतावच्छेदकं, नतु नीलघटत्वादिकमिति व्यवस्थाऽयोगादित्यर्थः ।**

ಈ ಪ್ರಕರಣದಲ್ಲಿ ಅರ್ಥವನ್ನೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯ ತಿಳಿಸುತ್ತದೆ. ಅನ್ಯಥಾ ಎಂದರೆ– ಪ್ರಮಾಸಾಮಾನ್ಯಕ್ಕೆ ಅನುಗತವಾದ ಗುಣವು ಇಲ್ಲದಿದ್ದರೂ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗುವುದಾದರೆ, ಅನವಸ್ಥಾನಾತ್=ವ್ಯವಸ್ಥೆಯೇ ಭಗ್ನ ವಾದೀತು. ಘಟತ್ವವು ಕಾರ್ಯತಾವಚ್ಛೇದ, ನೀಲಘಟತ್ವ ಅವಚ್ಛೇದಕವಲ್ಲ, ಎಂಬ ವ್ಯವಸ್ಥೆ ಇಲ್ಲವಾದೀತು, ಎಂದರ್ಥ.

**ಇಲ್ಲಿಗೆ ಅನಿತ್ಯಪ್ರಮಾತ್ರಾನುಗತಗುಣಭಂಗ ಪ್ರಕರಣ ಮುಗಿಯಿತು. ॥ 11 ॥**

## ಈ ಪ್ರಕರಣದ ಸಾರಾಂಶ

ಪ್ರಾಮಾಣ್ಯವು ಗುಣಜನ್ಯ. ಆದುದರಿಂದ ಅದು ಉತ್ಪತ್ತೌ ಪರತಃ ಎಂದು ನೈಯಾಯಿಕ ಸಿದ್ಧಾಂತ. ಅಂದರೆ, ಜ್ಞಾನಸಾಮಾನ್ಯಕ್ಕೆ ಕಾರಣವಾಗದ ಒಂದು ಕಾರಣವಿಶೇಷ ಪ್ರಮಾತ್ಮಕಜ್ಞಾನಕ್ಕಿದೆ. ಅದರಿಂದಾಗಿ ಜ್ಞಾನವು ಪ್ರಮಾ ಆಗುತ್ತದೆ, ಅದೇ ಗುಣ, ಎಂದು ಅಭಿಪ್ರಾಯ.

ಸಕಲ ಪ್ರಮಾಕ್ಕೂ ಅಂದರೆ, ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದಬೋಧ ಈ ನಾಲ್ಕು ಪ್ರಮಾಗಳಿಗೂ ಕಾರಣವಾದ ಒಂದು ಗುಣ ಇಲ್ಲ, ಎಂದು ಮಣಿಕಾರ ಹೇಳಿದ್ದರೂ ಮಣಿಗ್ರಂಥದ ವ್ಯಾಖ್ಯಾನಕಾರರು ಅಂತಹ ಮೂರು ಗುಣಗಳನ್ನು ತಿಳಿಸಿದ್ದಾರೆ. ಅದನ್ನು ಈ ಪ್ರಕರಣದಲ್ಲಿ ನಿರಾಕರಿಸಲಾಗಿದೆ.

**1.** ಪ್ರಮಾಕ್ಕೆ ಗ್ರಾಹ್ಯಪ್ರಮಾವೇ ಒಂದು ಗುಣ, ಎಂದು ಮೊದಲ ಪಕ್ಷ. ಪ್ರಮಾ ಗುಣಜನ್ಯ, ಎಂದರೆ ಪ್ರಮಾ ಪ್ರಮಾಜನ್ಯ ಎಂದು ಅರ್ಥ. ಇದು ವಿಚಿತ್ರವಾಗಿ ಕಂಡರೂ ಇದನ್ನು ತಾರ್ಕಿಕರು ಸಮರ್ಥಿಸಿ ತೋರಿಸಿದ್ದಾರೆ. ಹೇಗೆಂದರೆ, ಧಾರಾವಾಹಿಕ ಪ್ರಮಾಸ್ಥಳದಲ್ಲಿ ಪೂರ್ವಪ್ರಮಾವು ಉತ್ತರ ಪ್ರಮಾಕ್ಕೆ ಕಾರಣ. ಏಕೆಂದರೆ, ಅಯಂ ಘಟಃ, ಎಂಬ ಜ್ಞಾನ ವಿಶಿಷ್ಟಜ್ಞಾನ. ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನವು ಕಾರಣ. ಈ ನ್ಯಾಯದಂತೆ ದ್ವಿತೀಯ ಘಟಜ್ಞಾನಕ್ಕೆ ಪ್ರಥಮ ಘಟಜ್ಞಾನವು ವಿಶೇಷಣಜ್ಞಾನ ರೂಪವಾಗಿ ಕಾರಣ. ಅದು ವಿಶೇಷ್ಯಜ್ಞಾನವೂ ಆಗಿರುವುದರಿಂದ ಘಟವಿಷಯಕವಾದ ತದ್ವಿಷಯಕ ಪ್ರಥಮಪ್ರಮಾವು ದ್ವಿತೀಯಪ್ರಮಾಕ್ಕೆ ಕಾರಣವೆಂದು ತೀರ್ಮಾನವಾಗುತ್ತದೆ. ಆದುದರಿಂದ ಪ್ರಥಮಘಟಜ್ಞಾನಕ್ಕೂ ಘಟಪ್ರಮಾವು ಕಾರಣವಾಗಬೇಕು. ಆದರೆ, ಜೀವೀಯ ಪ್ರಥಮ ಘಟಜ್ಞಾನಾತ್ ಪೂರ್ವದಲ್ಲಿ ಜೀವೀಯ ಘಟಜ್ಞಾನ ಇಲ್ಲದಿರುವುದರಿಂದ ಈಶ್ವರೀಯ ಘಟಪ್ರಮಾ ಕಾರಣ ಎಂದು ಕಲ್ಪಿಸಬೇಕು. ಈಶ್ವರನಿಗೆ ಸಕಲವಸ್ತುಗಳ ಪ್ರಮಾವೂ ಸದಾ ಇರುವುದರಿಂದ ಅದು ಎಲ್ಲಾ ಪ್ರಮಾಗಳಿಗೂ ಗುಣ. ಇದು ನೈಯಾಯಿಕರು ಕೊಡುವ ಸಮರ್ಥನೆ.

ಇದು ಸರಿಯಲ್ಲ. ಇದಕ್ಕೆ ಆರು ದೋಷಗಳನ್ನು ಇಲ್ಲಿ ಹೇಳಲಾಗಿದೆ.

**ಅ.** ಧಾರಾವಾಹಿಕ ಪ್ರಮಾ ಸ್ಥಳದಲ್ಲಿ ಉತ್ತರ ಜ್ಞಾನಕ್ಕೆ ಪೂರ್ವಜ್ಞಾನವು ವಿಶೇಷಣ ಜ್ಞಾನತ್ವೇನ ಕಾರಣ, ಎಂದಿಷ್ಟೇ ಸಿದ್ಧವಾಗಿದೆ ಹೊರತು, ಅದು ಗ್ರಾಹ್ಯಪ್ರಮಾತ್ವೇನ ಕಾರಣ, ಎಂದೇನೂ ತೀರ್ಮಾನವಾಗುವುದಿಲ್ಲ. ವಿಶೇಷಣಜ್ಞಾನವು ಪ್ರಮಾತ್ಮಕವೂ ಆಗಿರಬಹುದು, ಭ್ರಮಾತ್ಮಕವೂ ಆಗಿರಬಹುದು. ಎರಡರಿಂದಲೂ ವಿಶಿಷ್ಟಜ್ಞಾನವು ಹುಟ್ಟುತ್ತದೆ.

**ಆ.** ಪೂರ್ವಜ್ಞಾನವು ಉತ್ತರಜ್ಞಾನಕ್ಕೆ ಪ್ರಮಾತ್ವೇನ ಕಾರಣ ಎಂದು ಅಂಗೀಕರಿಸಿದರೂ ಅದು ಸಮಾನಾಧಿಕರಣವಾಗಿ ಕಾರಣ, ಎಂದೇ ಸಿದ್ಧವಾಗುತ್ತದೆ. ಏಕೆಂದರೆ, ಧಾರಾವಾಹಿಕ ಪ್ರಮಾಸ್ಥಳದಲ್ಲಿ ಪೂರ್ವೋತ್ತರಜ್ಞಾನಗಳು ಒಬ್ಬನಿಗೇ ಬರುತ್ತವೆ. ಆದರ ಆಧಾರದಿಂದ ಈಶ್ವರ ಪ್ರಮಾ ಕಾರಣ, ಎಂದು ನಿರ್ಧರಿಸುವುದು ಉಚಿತವಲ್ಲ. ಅದು ಜೀವಪ್ರಮಾಕ್ಕೆ ವ್ಯಧಿಕರಣ.

**ಇ.** ಈಶ್ವರಜ್ಞಾನವು ಕಾರ್ಯಸಾಮಾನ್ಯಕ್ಕೆ ಉಪಾದಾನವಿಷಯಕಜ್ಞಾನತ್ವೇನ ಕಾರಣ. ಘಟಕ್ಕೆ

ಉಪಾದಾನ ಕಪಾಲ, ಪ್ರಮಾಕ್ಕೆ ಉಪಾದಾನ ಆತ್ಮ. ತತ್ತದ್ ವಿಷಯಕತ್ವೇನ ಅದು ಕಾರಣ. ಹೊರತು, ನಮ್ಮ ಪ್ರಮಾ ವಿಷಯಕಪ್ರಮಾತ್ವೇನ (ಗ್ರಾಹ್ಯ ಪ್ರಮಾತ್ವೇನ) ಅದು ಕಾರಣವಲ್ಲ. ಆದ್ದರಿಂದ ಗ್ರಾಹ್ಯಪ್ರಮಾ ಗುಣ, ಎಂದು ಸಿದ್ಧವಾಗುವುದಿಲ್ಲ.

**ಈ.** ದುಷ್ಟಾನುಮಾನದಿಂದ ಕದಾಚಿತ್ ಪ್ರಮಾತ್ಮಕವಾದ ಅನುಮಿತಿ ಬಂದರೆ ಅದಕ್ಕೆ ವ್ಯಧಿಕರಣವಾದ ಈಶ್ವರಪ್ರಮಾ ಹೇಗೆ ಕಾರಣವೋ ಅದರಂತೆ ಸಮಾನಾಧಿಕರಣವಾದ (ಅನುಮಿತಿ ಬರುವ ವ್ಯಕ್ತಿಯಲ್ಲೇ ಇರುವ) ಭ್ರಮಾತ್ಮಕವಾದ ಲಿಂಗಪರಾಮರ್ಶವೂ ಕಾರಣ. ಹೀಗೆ ಅದು ವ್ಯಧಿಕರಣಗುಣಜನ್ಯವಾದುದರಿಂದ ಪ್ರಮಾ ಆದಂತೆ ಸಮಾನಾಧಿಕರಣ ದೋಷ(ಭ್ರಮೆ) ಜನ್ಯವಾದುದರಿಂದ ಭ್ರಮೆಯೂ ಏಕಾಗಬಾರದು?

**ಉ.** ಧಾರಾವಾಹಿಕಪ್ರಮಾದಲ್ಲಿ ಪೂರ್ವಪ್ರಮಾವು ಕಾರಣ ಎಂದು ಸಿದ್ಧವಾದಂತೆ ಧಾರಾವಾಹಿಕಭ್ರಮೆಯಲ್ಲಿ ಪೂರ್ವ ಭ್ರಮೆಯೂ ಕಾರಣ, ಎಂದು ಸಿದ್ಧವಾದುದರಿಂದ ಸಕಲ ಭ್ರಮೆಗಳಿಗೂ ಗ್ರಾಹ್ಯವಸ್ತುವಿಷಯಕಭ್ರಮೆಯು ದೋಷ, ಎಂದು ಕಲ್ಪಿಸಿ ವಿಸಂವಾದಿ ಶುಕೋಚ್ಚರಿತ ವಾಕ್ಯಕ್ಕೆ ಕಾರಣವಾದ ಭ್ರಮಾತ್ಮಕ ಜ್ಞಾನವೂ ಈಶ್ವರನಿಗೆ ಇದೆ, ಎಂದು ಕಲ್ಪಿಸಬೇಕಾದೀತು. ಏಕೆಂದರೆ, ನೈಯಾಯಿಕರು ಸಂವಾದಿಶುಕವಾಕ್ಯವು ಈಶ್ವರೀಯ ಪ್ರಮಾರೂಪಗುಣಜನ್ಯ ಎಂದು ಕಲ್ಪಿಸಿದ್ದಾರೆ.

**ಊ.** ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನವು ಕಾರಣ ಎಂದು ನಾವು ಅಂಗೀಕರಿಸಿಲ್ಲವಾದ ಕಾರಣ ಧಾರಾವಾಹಿಕ ಸ್ಥಳದಲ್ಲಿ ಪೂರ್ವಜ್ಞಾನವು ಉತ್ತರ ಜ್ಞಾನಕ್ಕೆ ಕಾರಣ, ಎಂದು ಕ್ಲೃಪ್ತವೇ ಅಲ್ಲ.

**2.** ಎರಡನೆಯ ಗುಣದ ನಿರೂಪಣೆ ಹೀಗಿದೆ— ಭ್ರಮೆಯಾಗಿರಲಿ ಪ್ರಮಾ ಆಗಿರಲಿ, ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನವು ಕಾರಣ. ಭ್ರಮೆಯಲ್ಲಿ ಆ ವಿಶೇಷಣವು ವಿಶೇಷ್ಯದಲ್ಲಿ ಇರುವುದಿಲ್ಲ. ಪ್ರಮಾದಲ್ಲಿ ಇರುತ್ತದೆ. ಆದ್ದರಿಂದ ವಿಶೇಷ್ಯನಿಷ್ಠ ವಿಶೇಷಣಜ್ಞಾನವು ಪ್ರಮಾ ಸಾಮಾನ್ಯಕ್ಕೆ ಗುಣ.

ಇದಕ್ಕೆ ಎರಡು ದೋಷಗಳಿವೆ.

**ಅ.** ಹಿಂದೆ ಹೇಳಿದಂತೆ ನಮ್ಮ ಸಿದ್ಧಾಂತದಲ್ಲಿ ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ, ಎಂಬ ಕಾರ್ಯಕಾರಣಭಾವವೇ ಇಲ್ಲ. ದಂಡವಿಶಿಷ್ಟದೇವದತ್ತನು ಕಣ್ಣೆದುರಿಗೆ ಇದ್ದಾಗ ದಂಡಜ್ಞಾನ ಮೊದಲು ಬಂದು ಆಮೇಲೆ ದಂಡಿಯ ಜ್ಞಾನ ಬರುವುದಿಲ್ಲ. 'ದಂಡೀ ದೇವದತ್ತಃ' ಎಂಬ ವಿಶಿಷ್ಟಜ್ಞಾನವೇ ಮೊದಲು ಬರುತ್ತದೆ. ಹೀಗೆ ವಿಶೇಷಣಜ್ಞಾನವು ಕಾರಣವೇ ಅಲ್ಲವಾದುದರಿಂದ ವಿಶೇಷ್ಯನಿಷ್ಠ-ವಿಶೇಷಣಜ್ಞಾನವು ಗುಣವಲ್ಲ.

**ಆ.** ನೈಯಾಯಿಕರು ಘಟ-ಘಟತ್ವಗಳ ನಿರ್ವಿಕಲ್ಪಕ ಜ್ಞಾನವನ್ನು ಅಂಗೀಕರಿಸಿದ್ದಾರೆ. ಆ ನಿರ್ವಿಕಲ್ಪಕಜ್ಞಾನವು ಪ್ರಮಾ. ಆದರೆ, ಅದಕ್ಕೆ ವಿಶೇಷಣಜ್ಞಾನವು ಕಾರಣವಲ್ಲವಾದುದರಿಂದ ಗುಣಜನ್ಯವಲ್ಲ.

ನಿರ್ವಿಕಲ್ಪವು ಪ್ರಮಾ-ಅಪ್ರಮಾ ಬಹಿರ್ಭೂತ. ಆದ್ದರಿಂದ ಅದು ಗುಣಜನ್ಯವಾಗಬೇಕಿಲ್ಲ,

ಎನ್ನುವುದಾದಲ್ಲಿ ಅದು ದೋಷಜನ್ಯವಲ್ಲವಾದ ಕಾರಣ ಹೇಗೆ ಭ್ರಮೆಯಾಗುವುದಿಲ್ಲವೋ ಅದರಂತೆ ಘಟಾದಿಜ್ಞಾನಗಳೂ ದೋಷಜನ್ಯವಲ್ಲವಾದುದರಿಂದಲೇ ಭ್ರಮೆ ಅಲ್ಲ ಎಂದಾಗಬಹುದು, ಅದು ಗುಣಜನ್ಯವೇ ಆಗಬೇಕೆಂಬ ನಿರ್ಬಂಧ ಏಕೆ?

**3.** ಅವಿದ್ಯಮಾನ ಅಸಂಸರ್ಗ–ಅಗ್ರಹ, ಇದು ಗುಣ, ಎಂದು ಮೂರನೆಯ ಪಕ್ಷ. ಇದು ಪ್ರಮಾಸ್ಥಳದಲ್ಲಿ ಮಾತ್ರ ಇದೆ, ಭ್ರಮೆ ಬರುವಾಗ ಇಂತಹ ಗುಣವು ಇರುವುದಿಲ್ಲ. ಅಲ್ಲಿ ಶುಕ್ತಿಗೂ ರಜತತ್ವಕ್ಕೂ ಅಸಂಸರ್ಗವು ವಿದ್ಯಮಾನ, ಹೊರತು ಅವಿದ್ಯಮಾನ ಅಲ್ಲ. ಆದ್ದರಿಂದ ಅವಿದ್ಯಮಾನ ಅಸಂಸರ್ಗ–ಅಗ್ರಹ ಅಲ್ಲಿಲ್ಲ. ಆದರೆ ರಜತಕ್ಕೂ ರಜತತ್ವಕ್ಕೂ ಸಂಸರ್ಗ ಇದೆ. ಅಸಂಸರ್ಗ ಅವಿದ್ಯಮಾನ. ಅದರ ಅಗ್ರಹದಿಂದಾಗಿ 'ಇದಂ ರಜತಮ್' ಎಂಬ ಪ್ರಮಾ ಬರುತ್ತದೆ. ಹೀಗೆ ಅವಿದ್ಯಮಾನ–ಅಸಂಸರ್ಗ–ಅಗ್ರಹವೇ ಗುಣ.

**ಅ.** ಇಂತಹ ಗುಣವೂ ನಿರ್ವಿಕಲ್ಪಕಪ್ರಮಾದಲ್ಲಿ ಇಲ್ಲ. ಅಲ್ಲಿ ಘಟ–ಘಟತ್ವಗಳು ಪ್ರತ್ಯೇಕವಾಗಿ ತೋರುತ್ತವೆಯಾದರೂ ಅವೆರಡಕ್ಕೆ ವಾಸ್ತವಿಕವಾಗಿ ಸಂಸರ್ಗವಿದೆ. ಹೀಗೆ, ಅಲ್ಲಿ ಅಸಂಸರ್ಗವು ಅವಿದ್ಯಮಾನ ಅಲ್ಲ.

**ಆ.** ಅವಿದ್ಯಮಾನ ಅಸಂಸರ್ಗ ಎಂಬ ಎರಡು ನಿಷೇಧಗಳಿಂದ ವಿದ್ಯಮಾನ ಸಂಸರ್ಗ ಎಂಬ ಅರ್ಥವು ಸಿಗುತ್ತದೆ. ಆಗ, ವಿದ್ಯಮಾನ ಸಂಸರ್ಗದ ಅಗ್ರಹವು ಗುಣ ಎಂದಾಗುತ್ತದೆ. ಧಾರಾವಾಹಿಕ ದ್ವಿತೀಯ ಪ್ರಮಾದಲ್ಲಿ ಈ ಗುಣಜನ್ಯತ್ವ ಇಲ್ಲ. ಅಲ್ಲಿ ಪೂರ್ವಜ್ಞಾನವು ವಿಶೇಷಣ–ವಿಶೇಷ್ಯಸಂಸರ್ಗಗ್ರಹರೂಪವಾದುದರಿಂದ ದ್ವಿತೀಯ ಜ್ಞಾನ ಪ್ರಥಮಜ್ಞಾನರೂಪವಾದ ಸಂಸರ್ಗ ಗ್ರಹಜನ್ಯವೇ ಆಗಿದೆ.

ಹೀಗೆ, ಈ ಮೂರೂ ಪ್ರಮಾಸಾಮಾನ್ಯಕ್ಕೆ ಕಾರಣವಾದ ಗುಣಗಳಲ್ಲ. ಇವೇ ಗುಣಗಳಾದರೆ ಸಿದ್ಧಸಾಧನತಾದೋಷವೂ ಬರುತ್ತದೆ. ಈ ಮೂರೂ ಗುಣಗಳು, ಜ್ಞಾನ ಬಂದಾಗ ವಿಷಯ ಇರಬೇಕು, ಎನ್ನುವಲ್ಲಿ ಪರ್ಯವಸಾನವಾಗುತ್ತವೆ. ಈ ನಿಬಂಧನೆ ಸ್ವತಸ್ತ್ವವಾದಿಗಳಿಗೂ ಸಮ್ಮತ ವಾದುದು. ಎಲ್ಲೂ ವಿಷಯವಿಲ್ಲದೆ ಜ್ಞಾನವೇ ಬರುವುದಿಲ್ಲ. ಅತೀತವಸ್ತುವಿನ ಅನುಮಿತಿ ಬಂದಾಗಲೂ ವಿಷಯವು ಪೂರ್ವಕಾಲದಲ್ಲಿ ಇದ್ದೇ ಇರುತ್ತದೆ. 'ಪ್ರಮಾ ಗುಣಜನ್ಯ' ಎಂದು ಹೇಳಬೇಕಾದರೆ ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ಅದನ್ನು ಬಿಟ್ಟು, ಭ್ರಮೆಯಲ್ಲಿ ಇಲ್ಲದ ಒಂದು ಕಾರಣವಿಶೇಷವನ್ನು ಹೇಳಬೇಕು. ಉದಾಹರಣೆಗೆ–ಭ್ರಮೆಗೆ ಪಿತ್ತಾದಿಗಳು ದೋಷವಿಧಯಾ ಕಾರಣ. ಅದು, ಪ್ರಮೆಗೆ ಕಾರಣವಲ್ಲ, ಆದ್ದರಿಂದಲೇ ಜ್ಞಾನಸಾಮಾನ್ಯಕ್ಕೆ ಕಾರಣವಲ್ಲ. ಅದರಂತೆ ಪ್ರಮಾಸಾಮಾನ್ಯಕ್ಕೆ ಒಂದು ಕಾರಣವಿದ್ದರೆ ಅದು ಗುಣವಾಗುತ್ತದೆ. ವಿಷಯಸತ್ವವು ಅಂತಹ ವಿಶೇಷಕಾರಣ ಅಲ್ಲ. ಆದ್ದರಿಂದ ಇವಾವೂ ಗುಣಗಳಲ್ಲ.

ಹೀಗೆ, ಈ ಪ್ರಕರಣದಲ್ಲಿ ಪ್ರಮಾಸಾಮಾನ್ಯಕ್ಕೆ ಕಾರಣವಾದ ಅನುಗತವಾದ ಒಂದು ಗುಣ ಇಲ್ಲ, ಎಂದು ಸಾಧಿಸಲಾಗಿದೆ.

## ॥ ಪ್ರಕರಣ – 11 ॥

# ಪ್ರಕರಣ - 12

## ಯಜ್ಞಪತ್ಯುಕ್ತವಕ್ರಾನುಮಾನಭಂಗಃ

**अथापि स्यात् । प्रमामात्रानुगतगुणाभावेऽपि परतस्त्वं सेत्स्यति । न ह्यनित्यप्रमात्वस्य उक्तकार्यतावच्छेदकत्वं परतस्त्वम् । किन्तु तस्य स्वाश्रयमात्रवृत्ति-धर्मावच्छिन्नकार्यताश्रय-मात्रवृत्तित्वम् । तच्चानित्यप्रमामात्रानुगतगुणाभावेऽपि अननुगतगुणैरपि सेत्स्यति ।**

ಆದರೂ ಪ್ರಮಾಗುಣಜನ್ಯವೇ ಆಗುತ್ತದೆ. ಹಿಂದೆ ಹೇಳಿದಂತೆ, ಸಕಲಪ್ರಮಾಗಳಿಗೂ ಅನುಗತವಾದ ಗುಣವು ಇಲ್ಲದಿದ್ದರೂ ಪ್ರಮಾಕ್ಕೆ ಪರತಸ್ತ್ವವು ಸಿದ್ಧವಾಗುತ್ತದೆ. ಹೇಗೆಂದರೆ— ಅನಿತ್ಯಪ್ರಮಾತ್ವವು ಅನುಗತಕಿಂಚಿದ್ಧರ್ಮಾವಚ್ಛಿನ್ನಕಾರಣತಾ(ಗುಣನಿಷ್ಠ) ನಿರೂಪಿತ-ಕಾರ್ಯತಾವಚ್ಛೇದಕವಾಗಿರುವುದೇ ಪರತಸ್ತ್ವವಲ್ಲ. ಅರ್ಥಾತ್, ಸಕಲ ಅನಿತ್ಯಪ್ರಮಾಗಳಿಗೆ ಅನುಗತವಾದ ಒಂದು ಕಾರಣ ಇರುವುದೇ ಗುಣಜನ್ಯತ್ವವಲ್ಲ. ಕಿಂತು, ಅನಿತ್ಯಪ್ರಮಾತ್ವಕ್ಕೆ ಆಶ್ರಯವಾದ ಅನಿತ್ಯಪ್ರಮಾದಲ್ಲಿ ಮಾತ್ರ ಇರುವ ಜನ್ಯ ಪ್ರತ್ಯಕ್ಷಪ್ರಮಾತ್ವ, ಅನುಮಿತಿಪ್ರಮಾತ್ವ ಮೊದಲಾದ ಯಾವ ಧರ್ಮಗಳಿವೆಯೋ ತದವಚ್ಛಿನ್ನವಾದ ಕಾರ್ಯತಾ ಅಂದರೆ ಅನಿತ್ಯಪ್ರತ್ಯಕ್ಷಪ್ರಮಾದಿನಿಷ್ಠ-ಕಾರ್ಯತಾ, ತದಾಶ್ರಯವಾದ ಪ್ರತ್ಯಕ್ಷಾದಿಗಳಲ್ಲಿ ಮಾತ್ರ ಅನಿತ್ಯಪ್ರಮಾತ್ವವು ಇದೆ ಎಂದರ್ಥ. ಇದೇ ಪರತಸ್ತ್ವ.

ಇದರ ಅಭಿಪ್ರಾಯ–ಅನಿತ್ಯ ಪ್ರಮಾ ಒಟ್ಟು ನಾಲ್ಕು ವಿಧ–

1. ಜನ್ಯಪ್ರತ್ಯಕ್ಷಪ್ರಮಾ 2. ಅನುಮಿತಿಪ್ರಮಾ

3. ಉಪಮಿತಿಪ್ರಮಾ 4. ಶಾಬ್ದಪ್ರಮಾ

ಈ ನಾಲ್ಕಕ್ಕೆ ಪ್ರತ್ಯೇಕ ಪ್ರತ್ಯೇಕವಾದ ಗುಣಗಳಿವೆ. ಉದಾಹರಣೆಗೆ– ಪ್ರತ್ಯಕ್ಷಕ್ಕೆ ಭೂಯೋಽವಯವೇಂದ್ರಿಯಸಂಯೋಗವು ಗುಣ. ತಾದೃಶಸಂಯೋಗತ್ವಾವಚ್ಛಿನ್ನಕಾರಣತಾ ನಿರೂಪಿತಕಾರ್ಯತಾಶ್ರಯ ಪ್ರತ್ಯಕ್ಷ. ಹೀಗೆ ನಾಲ್ಕು ವಿಧ ಗುಣನಿಷ್ಠಕಾರಣತಾ ನಿರೂಪಿತ ಕಾರ್ಯತಾಶ್ರಯವಾದವುಗಳು ಮೇಲೆ ಹೇಳಿದ ನಾಲ್ಕು ಪ್ರಮಾಗಳು. ಅನಿತ್ಯಪ್ರಮಾತ್ವವು ಆ ನಾಲ್ಕರಲ್ಲಿ ಮಾತ್ರ ಇದೆ. ಅಂದರೆ, ಗುಣದಿಂದ ಅಜನ್ಯವಾದುದರಲ್ಲಿ ಇಲ್ಲ. ಇದೇ ಪ್ರಾಮಾಣ್ಯಕ್ಕೆ (ಪ್ರಮಾತ್ವಕ್ಕೆ) ಪರತಸ್ತ್ವ. ಒಟ್ಟಿನಲ್ಲಿ ಅನಿತ್ಯಪ್ರಮಾಸಾಮಾನ್ಯಕ್ಕೆ ಒಂದು ಗುಣ ಇಲ್ಲದಿದ್ದರೂ ಪ್ರಮಾತ್ವವು ಗುಣಜನ್ಯವಾದ ಜ್ಞಾನದಲ್ಲಿ ಮಾತ್ರ ಇದೆ, ಎಂದು ಭಾವ. ಇಂತಹ ಪರತಸ್ತ್ವ ಅನನುಗತವಾದ ಗುಣಗಳು ಇದ್ದರೂ ಬರುತ್ತದೆ.

## ನ್ಯಾಯದೀಪ

**ಯಜ್ಞಪತಿಮತಮ್ ಆಶಂಕತೇ– ಅಥಾಪೀತಿ ॥ 'ಅಥಾಪಿ' ಇತ್ಯಾದಿ ಉಕ್ತಮೇವ ವ್ಯನಕ್ತಿ– ಪ್ರಮೇತಿ ॥ ಉಕ್ತೇತಿ ॥ ಅಪ್ರಮಾಕಾರಣೇತ್ಯುಕ್ತೇತ್ಯರ್ಥಃ । ತಸ್ಯೇತಿ ॥ ಅನಿತ್ಯಪ್ರಮಾತ್ವಸ್ಯೇತ್ಯರ್ಥಃ । ಸ್ವೇತಿ ॥ ಸ್ವಸ್ಯ=ಅನಿತ್ಯಪ್ರಮಾತ್ವಸ್ಯ ಯಃ ಆಶ್ರಯಃ ತನ್ಮಾತ್ರವೃತ್ತಯಃ=ತದಿತರಾವೃತ್ತಿತ್ವೇ ಸತಿ ತದ್‌ವೃತ್ತಯಃ ಯೇ ಧರ್ಮಾಃ=ಜನ್ಯಪ್ರತ್ಯಕ್ಷತ್ವಾದಯಃ, ತದವಚ್ಛಿನ್ನಕಾರ್ಯತಾಶ್ರಯೇ ಏವ ವರ್ತಮಾನತ್ವಮ್=ಉಕ್ತಕಾರ್ಯತಾಶ್ರಯತ್ವವ್ಯಾಪ್ಯತ್ವಮ್, ಇತಿ ಯಾವತ್ ॥**

ಪ್ರಾರಂಭದಲ್ಲಿ 'ಅಥಾಪಿ' ಎಂದು ಹೇಳಿದ್ದನ್ನೇ 'ಪ್ರಮಾಮಾತ್ರ' ಇತ್ಯಾದಿಯಾಗಿ, ಮೊದಲ ವಾಕ್ಯದಲ್ಲಿ ವಿವರಿಸಲಾಗಿದೆ.

ಸ್ವಾಶ್ರಯಮಾತ್ರವೃತ್ತಿ ಎಂಬುದನ್ನು ಹೀಗೆ ಬಿಡಿಸಬೇಕು— ಸ್ವಸ್ಯ ಅಂದರೆ ಅನಿತ್ಯಪ್ರಮಾತ್ವಕ್ಕೆ ಯಾವುದು ಆಶ್ರಯವೋ ಅಂದರೆ ಅನಿತ್ಯಪ್ರಮಾ. ತನ್ಮಾತ್ರವೃತ್ತಿಯಾದುದು ಎಂದರೆ ಅನಿತ್ಯಪ್ರಮಾ ಬಿಟ್ಟು ಬೇರೆಡೆ ಇರದ, ಅನಿತ್ಯಪ್ರಮಾದಲ್ಲಿ ಇರುವ ಧರ್ಮ, ಅಂತಹ ಧರ್ಮಗಳೆಂದರೆ ಜನ್ಯಪ್ರತ್ಯಕ್ಷ ಪ್ರಮಾತ್ವ, ಅನುಮಿತಿಪ್ರಮಾತ್ವ ಮುಂತಾದ ನಾಲ್ಕು ಧರ್ಮಗಳು. ಅಂತಹ ಧರ್ಮಾವಚ್ಛಿನ್ನ ಕಾರ್ಯತಾ ಅಂದರೆ ಅನಿಯತ ಗುಣನಿಷ್ಠಕಾರಣತಾನಿರೂಪಿತಕಾರ್ಯತಾ. ತಾದೃಶಕಾರ್ಯತಾ ಶ್ರಯದಲ್ಲಿ ಮಾತ್ರ ಅನಿತ್ಯಪ್ರಮಾತ್ವ ಇದೆ. ಅರ್ಥಾತ್, ತಾದೃಶಕಾರ್ಯತಾಶ್ರಯತ್ವಕ್ಕೆ ಅನಿತ್ಯ ಪ್ರಮಾತ್ವವು ವ್ಯಾಪ್ಯವಾಗಿದೆ, ಎಂದು ಅರ್ಥ. ಅನಿತ್ಯಪ್ರಮಾತ್ವಂ ಯತ್ರ ತತ್ರ ತಾದೃಶಕಾರ್ಯತಾ ಶ್ರಯತ್ವಂ ಎಂದು ವ್ಯಾಪ್ತಿ. ಅನಿತ್ಯಪ್ರಮಾತ್ವವು ಗುಣಜನ್ಯಪ್ರತ್ಯಕ್ಷಾದಿ ನಾಲ್ಕು ಪ್ರಮಾಗಳನ್ನು ಬಿಟ್ಟು ಇನ್ನೆಲ್ಲೂ ಇಲ್ಲ, ಎಂದರ್ಥ. ಆಗ ಅದು ಕಾರ್ಯತಾಶ್ರಯಮಾತ್ರವೃತ್ತಿಯಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ತದುಕ್ತಮೇವ ಪಂಚಮಾತ್ರಾನುಮಾನಮಾಹ–ಅನಿತ್ಯಪ್ರಮಾತ್ವಮಿತಿ ॥**

ಯಜ್ಞಪತ್ಯುಪಾಧ್ಯಾಯರೇ ಉಲ್ಲೇಖಿಸಿರುವ ಐದು 'ಮಾತ್ರ' ಎಂಬ ಪದಗಳಿಂದ ಘಟಿತವಾದ ಅನುಮಾನವನ್ನು ಮುಂದೆ ತೋರಿಸಲಾಗಿದೆ.[1]

---

1. **ಈ ಅನುಮಾನವನ್ನು ರುಚಿದತ್ತಮಿಶ್ರ ಮಣಿವ್ಯಾಖ್ಯಾನದಲ್ಲಿ 'ಅತ್ರ ವದಂತಿ' ಎಂದು ಅನುವಾದಿಸಿ 'ತನ್ನ, ಸಂದಿಗ್ಧಾಸಿದ್ಧೇಃ । ತತ್ತದ್ವ್ಯಕ್ತ್ಯಾ ಅರ್ಥಾಂತರತ್ವಾಚ್ಚ' ಎಂದು ನಿರಾಕರಿಸಿದ್ದಾನೆ. ಅದರ ವ್ಯಾಖ್ಯಾನವಾದ ನ್ಯಾಯಶಿಖಾಮಣಿಯಲ್ಲಿ 'ಅತ್ರ ವದಂತಿ' ಎಂಬ ವಾಕ್ಯಕ್ಕೆ ಉಪಾಧ್ಯಾಯಮತಮಾಹ ಎಂದು ಅವತಾರಿಕೆ ಇದೆ. ಇದರಿಂದಾಗಿ ಇದು ಯಜ್ಞಪತಿ ಉಪಾಧ್ಯಾಯರ ಮತವೆಂದು ಸ್ಪಷ್ಟವಾಗುತ್ತದೆ. (ಪುಟ.329)**

**तत्रच प्रमाणम्-अनित्यप्रमात्वं स्वाश्रयमात्रवृत्तिधर्मावच्छिन्न-कार्यताश्रयमात्रवृत्ति, स्वाश्रयमात्रावृत्ति-धर्मावच्छिन्नकार्यता-प्रतियोगिककारणत्वाश्रयमात्रानुत्पाद्यकार्यमात्रवृत्तिधर्मत्वात् । अप्रमा-त्ववदित्यनुमानम् ।**

**ಪಕ್ಷ**–ಅನಿತ್ಯಪ್ರಮಾತ್ವಮ್.

**ಸಾಧ್ಯ**–ಅನಿತ್ಯಪ್ರಮಾತ್ವಕ್ಕೆ ಆಶ್ರಯವಾದ ಪ್ರತ್ಯಕ್ಷಪ್ರಮಾದಿ ನಾಲ್ಕರಲ್ಲಿ ಮಾತ್ರವೇ ಇರುವ ಧರ್ಮಗಳಿಂದ (ಪ್ರತ್ಯಕ್ಷಪ್ರಮಾತ್ವಾದಿಧರ್ಮಗಳಿಂದ) ಅವಚ್ಛಿನ್ನವಾದ ಕಾರ್ಯತಾಗಳಿಗೆ ಆಶ್ರಯವಾದ ನಾಲ್ಕು ವಿಧದ ಪ್ರಮಾಗಳಲ್ಲಿ ಮಾತ್ರ (ಅನಿತ್ಯಪ್ರಮಾತ್ವವು) ಇದೆ.

**ಹೇತು**–ಅನಿತ್ಯಪ್ರಮಾತ್ವಾಶ್ರಯದಲ್ಲಿ ಮಾತ್ರ ಇಲ್ಲದಿರುವ ಅರ್ಥಾತ್ ತದಧಿಕದೇಶವೃತ್ತಿ-ಯಾದ ಯಾವ ಅನಿತ್ಯಜ್ಞಾನತ್ವ ಎಂಬ ಧರ್ಮ ಇದೆಯೋ ತಾದೃಶಧರ್ಮಾವಚ್ಛಿನ್ನಕಾರ್ಯನಿರೂಪಿತ ಕಾರಣತಾಕ್ಕೆ ಆಶ್ರಯವಾದುದು ಆತ್ಮಮನಃಸಂಯೋಗ ಮುಂತಾದುವು (ಜ್ಞಾನಸಾಮಾನ್ಯ ಸಾಮಗ್ರೀ). ಅವುಗಳಿಂದ ಮಾತ್ರ ಅನುತ್ಪಾದ್ಯವಾದ ಕಾರ್ಯವೆಂದರೆ ಪ್ರತ್ಯಕ್ಷಾದಿಅನಿತ್ಯಪ್ರಮಾ. ಪ್ರತ್ಯಕ್ಷಾದಿಪ್ರಮಾಕ್ಕೆ ಭ್ರಮ–ಪ್ರಮಾ ಸಾಧಾರಣವಾದ, ಜ್ಞಾನಸಾಮಾನ್ಯಕ್ಕೆ ಬೇಕಾದ ಸಾಮಗ್ರಿಗಳು ಮಾತ್ರ ಸಾಲದು. ಅದರ ಜೊತೆಗೆ, ಗುಣವೂ ಸೇರಬೇಕು. ಆದ್ದರಿಂದ ಅನಿತ್ಯಪ್ರತ್ಯಕ್ಷಾದಿಪ್ರಮಾ ಜ್ಞಾನಸಾಮಾನ್ಯಸಾಮಗ್ರಿಯಿಂದ ಅನುತ್ಪಾದ್ಯವಾದ ಕಾರ್ಯ. ಅದರಲ್ಲಿ ಮಾತ್ರ ಅನಿತ್ಯಪ್ರಮಾತ್ವವು ಇದೆ. ಆದ್ದರಿಂದ ಅದರಲ್ಲಿ ಸಾಧ್ಯವೂ ಇರಬೇಕು.

ಈ ಅನುಮಾನದ ತಾತ್ಪರ್ಯ ಇದು—ವಿಶೇಷ (ನ್ಯೂನವೃತ್ತಿ) ಧರ್ಮಾವಚ್ಛಿನ್ನವು ತದಪೇಕ್ಷಯಾ ಸಾಮಾನ್ಯ (ಅಧಿಕದೇಶ ವೃತ್ತಿಯಾದ) ಧರ್ಮಾವಚ್ಛಿನ್ನಕ್ಕೆ ಯಾವುದು ಕಾರಣವೋ ತಾವನ್ಮಾತ್ರದಿಂದ ಹುಟ್ಟುವುದಿಲ್ಲ. ಅದರ ಜೊತೆಯಲ್ಲಿ ಕಾರಣವಿಶೇಷವೂ ಸೇರಬೇಕು. ಅಂತಹ ಕಾರಣವಿಶೇಷಜನ್ಯವಾದ ವಿಶೇಷ (ನ್ಯೂನವೃತ್ತಿ) ಧರ್ಮಾವಚ್ಛಿನ್ನದಲ್ಲಿ ಸಾಮಾನ್ಯಧರ್ಮವು ಇರುತ್ತದೆ. ಉದಾಹರಣೆಗೆ–ಘಟತ್ವಾವಚ್ಛಿನ್ನವು ಕಾರ್ಯವಿಶೇಷ. ದ್ರವ್ಯತ್ವಾವಚ್ಛಿನ್ನ ಕಾರ್ಯ ಸಾಮಾನ್ಯ. ದ್ರವ್ಯಕಾರಣದ ಜೊತೆ ವಿಶೇಷಕಾರಣಗಳು ಸೇರಿದರೆ ಘಟವು ಹುಟ್ಟುತ್ತದೆ. ಹೀಗೆ ವಿಶೇಷಕಾರಣಜನ್ಯವಾದ ಘಟಾದಿಕಾರ್ಯವಿಶೇಷಗಳಲ್ಲಿ ದ್ರವ್ಯತ್ವವು ಇರುತ್ತದೆ.

ಇದಕ್ಕೆ ದೃಷ್ಟಾಂತ ಅಪ್ರಮಾತ್ವ. ಅದರಲ್ಲಿ ಹೇತು ಇದೆ– ಸ್ವಂ=ಅಪ್ರಮಾತ್ವ. ಸ್ವಾಶ್ರಯ ಅಪ್ರಮಾ. ಅಪ್ರಮಾ ಮಾತ್ರದಲ್ಲಿ ಅವೃತ್ತಿಯಾದ ಧರ್ಮ ಅನಿತ್ಯಜ್ಞಾನತ್ವ. ತದವಚ್ಛಿನ್ನ ಕಾರ್ಯತಾ ನಿರೂಪಿತಕಾರಣತಾಶ್ರಯ ಆತ್ಮಮನಃಸಂಯೋಗಾದಿಗಳು. ಅವುಗಳಿಂದ ಮಾತ್ರ ಅನುತ್ಪಾದ್ಯಕಾರ್ಯ ಅಪ್ರಮಾ. ಏಕೆಂದರೆ, ಅಪ್ರಮಾ ಹುಟ್ಟಬೇಕಾದರೆ ಅವುಗಳ ಜೊತೆಯಲ್ಲಿ ದೋಷವೂ ಇರಬೇಕು. ತಾದೃಶ–ಅಪ್ರಮಾ ಮಾತ್ರವೃತ್ತಿಧರ್ಮ ಅಪ್ರಮಾತ್ವ.

ಸಾಧ್ಯವೂ ಇದೆ— ಸ್ವಂ=ಅಪ್ರಮಾತ್ವ. ತದಾಶ್ರಯ ಅಪ್ರಮಾ. ತನ್ಮಾತ್ರ ವೃತ್ತಿಧರ್ಮಗಳು-ಭ್ರಮಾತ್ಮಕ-ಪ್ರತ್ಯಕ್ಷತ್ವಾದಿ ನಾಲ್ಕು ಧರ್ಮಗಳು. ತದವಚ್ಛಿನ್ನಕಾರ್ಯತಾಶ್ರಯವಾದವುಗಳು ಭ್ರಮಾತ್ಮಕ ಪ್ರತ್ಯಕ್ಷಾದಿಗಳು. ಅವುಗಳಲ್ಲಿ ಮಾತ್ರ ಅಪ್ರಮಾತ್ವ ಇದೆ.

## ನ್ಯಾಯದೀಪ

**ಬಾಧನಿರಾಸಾಯ– ಅನಿತ್ಯೇತಿ ॥ ಸಾಧ್ಯಮ್ ಉಕ್ತಾರ್ಥಮ್ । ಸಾಧ್ಯ–ಹೇತ್ವೋಃ ಸ್ವಪದಮ್ ಸಮಭಿವ್ಯಾಹೃತಪರಮ್ । ಏವಂಚ ಅನಿತ್ಯಪ್ರಮಾತ್ವಾಶ್ರಯೇ ಏವ ಯೋ ನ ವರ್ತತೇ ಧರ್ಮಃ=ಅನಿತ್ಯಜ್ಞಾನತ್ವಾದಿಃ, ತದವಚ್ಛಿನ್ನ–ಕಾರ್ಯತಾ ನಿರೂಪಿತ–ಕಾರಣತಾಶ್ರಯಃ=ಮನಃಸಂಯೋಗಾದಿಃ, ತನ್ಮಾತ್ರಾನುತ್ಪಾದ್ಯ ಕಾರ್ಯಂ=ಅನಿತ್ಯಪ್ರಮಾ, ತನ್ಮಾತ್ರವೃತ್ತಿಧರ್ಮತ್ವಾತ್ ಇತಿ ಹೇತ್ವರ್ಥಃ । ಅನಿತ್ಯಜ್ಞಾನಕಾರಣಮಾತ್ರಾನುತ್ಪಾದ್ಯ–ಕಾರ್ಯಮಾತ್ರವೃತ್ತಿ–ಧರ್ಮತ್ವಾತ್, ಇತಿ ಫಲಿತೋಽರ್ಥಃ ।**

ಪಕ್ಷ ಅನಿತ್ಯಪ್ರಮಾತ್ವ. ಇಲ್ಲಿ ಅನಿತ್ಯತ್ವ ವಿಶೇಷಣವನ್ನು ಬಿಟ್ಟರೆ ಈಶ್ವರಪ್ರಮಾತ್ವವೂ ಪಕ್ಷದಲ್ಲಿ ಸೇರುವುದರಿಂದ ಅದರಲ್ಲಿ ಕಾರ್ಯತಾಶ್ರಯ ಮಾತ್ರವೃತ್ತಿತ್ವವು ಬಾಧಿತ. ಅದರ ಪರಿಹಾರಕ್ಕಾಗಿ ಅನಿತ್ಯತ್ವವಿಶೇಷಣ ಬೇಕು.

ಸಾಧ್ಯದ ಅರ್ಥವನ್ನು ಈಗಾಗಲೇ ವಿವರಿಸಲಾಗಿದೆ. ಸಾಧ್ಯ ಮತ್ತು ಹೇತುಗಳಲ್ಲಿರುವ ಸ್ವಪದದಿಂದ ಪೂರ್ವಪ್ರಕೃತವಾದುದನ್ನು ತೆಗೆದುಕೊಳ್ಳಬೇಕು.

ಹೇತುಸಮನ್ವಯ ಹೀಗೆ– ಸ್ವ ಎಂದರೆ ಪಕ್ಷವಾದ ಅನಿತ್ಯಪ್ರಮಾತ್ವ. ಅದಕ್ಕೆ ಆಶ್ರಯವಾದುದು ಅನಿತ್ಯಪ್ರಮಾ. ಅದರಲ್ಲಿ ಮಾತ್ರ ಅವೃತ್ತಿಯಾದ ಧರ್ಮ=ಅನಿತ್ಯಜ್ಞಾನತ್ವ. ಅದು ಅಪ್ರಮಾದಲ್ಲೂ ಇರುವುದರಿಂದ ಪ್ರಮಾಮಾತ್ರವೃತ್ತಿ ಅಲ್ಲ. ತದವಚ್ಛಿನ್ನಕಾರ್ಯತಾ–ನಿರೂಪಿತ–ಕಾರಣತಾ-ವತ್ತಾದುದು=ಆತ್ಮಮನಃಸಂಯೋಗಾದಿಗಳು. ಅವುಗಳು ಪ್ರಮಾ–ಅಪ್ರಮಾ ಎಲ್ಲಾ ಜ್ಞಾನಗಳಿಗೂ ಕಾರಣಗಳು. ಅವುಗಳು ಮಾತ್ರ ಇದ್ದಾಗ ಹುಟ್ಟಿದ ಜ್ಞಾನವು ಪ್ರಮಾವೇ ಆಗಬೇಕೆಂದಿಲ್ಲ. ಆದ್ದರಿಂದ ತನ್ಮಾತ್ರ–ಅನುತ್ಪಾದ್ಯಕಾರ್ಯ=ಅನಿತ್ಯಪ್ರಮಾ. ಅದರಲ್ಲಿ ಮಾತ್ರ, ಪಕ್ಷೀಭೂತವಾದ ಅನಿತ್ಯ ಪ್ರಮಾತ್ವವು ಇದೆ. ಈ ಹೇತುವಿನ ಫಲಿತಾರ್ಥ–ಅನಿತ್ಯಪ್ರಮಾವು ಅನಿತ್ಯಜ್ಞಾನಕ್ಕೆ ಕಾರಣಗಳಿಂದ ಮಾತ್ರ ಹುಟ್ಟಿರುವ ಕಾರ್ಯವಲ್ಲ, ಎಂದು.

## ನ್ಯಾಯದೀಪದಲ್ಲಿ ಅವತಾರಿಕೆ

**ಹೇತೋಃ ಅಪ್ರಯೋಜಕತಾಂ ನಿರಸ್ಯನ್ ಸಾಧ್ಯಪರ್ಯವಸಾನ–ಪ್ರಕಾರಮಾಹ– ಅನೇನೇತಿ ॥**

ಮುಂದಿನ ಗ್ರಂಥದಲ್ಲಿ, ಹೇತುವಿನಲ್ಲಿ ಬರಬಹುದಾದ ಅಪ್ರಯೋಜಕತಾಶಂಕೆಯನ್ನು ನಿರಾಕರಿಸಲಾಗಿದೆ. ಅಲ್ಲದೆ, ಪಕ್ಷದಲ್ಲಿ ಸಾಧ್ಯವು ಪರ್ಯವಸಾನಗೊಳ್ಳುವಾಗ ಪ್ರಮಾಕ್ಕೆ ಗುಣಜನ್ಯತ್ವರೂಪ ಇಷ್ಟಸಿದ್ಧಿಯಾಗುವ ವಿಧಾನವನ್ನೂ ಹೇಳಲಾಗಿದೆ.

**अनेन सामान्यकारणमात्रानुत्पाद्य-कार्यमात्रवृत्तिधर्मत्वरूपेण हेतुना साध्यमानं विशेषकारणजन्यत्वं सर्वप्रमानुगतगुणस्य बाधितत्वेन अननुगतगुणजन्यत्वमादाय पर्यवस्यति ।।**

ಈ ಅನುಮಾನದ ಹೇತು, ಪ್ರಮಾವು ಜ್ಞಾನಸಾಮಾನ್ಯಕಾರಣದಿಂದ ಅನುತ್ಪಾದ್ಯ, ಎಂದು. ಅದು ಪ್ರಮಾದಲ್ಲಿ ಇರಬೇಕಾದರೆ ಪ್ರಮಾಕ್ಕೆ ಒಂದು ವಿಶೇಷಕಾರಣವನ್ನು ಹೇಳಬೇಕು. ಆದರೆ, ಸಕಲಪ್ರಮಾ ಸಾಧಾರಣವಾದ ಒಂದು ವಿಶೇಷಕಾರಣ ಇಲ್ಲ, ಆದ್ದರಿಂದ ಪ್ರತ್ಯಕ್ಷಾದಿ ಪ್ರಮಾಗಳಿಗೆ ಮಾತ್ರ ಕಾರಣವಾದ ವಿಶೇಷಕಾರಣಗಳು ಸಿದ್ಧವಾಗುತ್ತದೆ. ಇದರಿಂದಾಗಿ, ಪ್ರಾಮಾಣ್ಯಕ್ಕೆ ಪರತಃ ಉತ್ಪತ್ತಿಯನ್ನು ಸಾಧಿಸಿದಂತಾಗುತ್ತದೆ.

## ನ್ಯಾಯದೀಪ

**ಅನನುಗತೇತಿ ।। ಪ್ರತ್ಯಕ್ಷಪ್ರಮಾದ್ಯೇಕೈಕಾನುಗತೇತ್ಯಪಿ ಯೋಜ್ಯಮ್ । ಅನ್ಯಥಾ, ಜನ್ಯಪ್ರತ್ಯಕ್ಷಪ್ರಮಾತ್ವಾದೇಃ ಅವಚ್ಛೇದಕತ್ವಾಯೋಗೇನ ಬಾಧಾಪತ್ತೇಃ ಇತಿ ಭಾವಃ ।।**

ಮೂಲದಲ್ಲಿ ಅನನುಗತಗುಣಜನ್ಯತ್ವ ಎಂದಿದೆ. ಅದರೊಂದಿಗೆ, ಪ್ರತ್ಯಕ್ಷಪ್ರಮಾದಿಗಳಿಗೆ ಅನುಗತವಾದ, ಎಂಬ ಅಂಶವನ್ನು ಗುಣಗಳಿಗೆ ಸೇರಿಸಿಕೊಳ್ಳಬೇಕು. ಆಗ, ಪ್ರಮಾಸಾಮಾನ್ಯಕ್ಕೆ ಅನುಗತವಲ್ಲದ, ಪ್ರತ್ಯಕ್ಷ–ಅನುಮಿತ್ಯಾದಿಗಳಿಗೆ ಅನುಗತವಾದ ಗುಣ, ಎಂಬ ಅರ್ಥ ಸಿಗುತ್ತದೆ. ಪ್ರತ್ಯಕ್ಷಾದಿಗಳಿಗೆ ಕಾರಣವಾದ ಅನನುಗತಗುಣವಿದ್ದಾಗ, ಸ್ವಾಶ್ರಯಮಾತ್ರವೃತ್ತಿ–ಪ್ರತ್ಯಕ್ಷತ್ವಾದಿ ಧರ್ಮಾವಚ್ಛಿನ್ನಕಾರ್ಯತಾವು ಸಿದ್ಧವಾಗಿ ಸಾಧ್ಯವು ಪಕ್ಷದಲ್ಲಿ ಪರ್ಯವಸಾನವಾಗುತ್ತದೆ. ಅಂತಹ ಅನುಗತವಾದ ಗುಣವು ಇಲ್ಲದಿದ್ದಲ್ಲಿ ಜನ್ಯಪ್ರತ್ಯಕ್ಷ ಪ್ರಮಾತ್ವಾದಿಗಳು ಕಾರ್ಯತಾವಚ್ಛೇದ ವಾಗುವುದಿಲ್ಲ. ಆದರಿಂದಾಗಿ ಪ್ರತ್ಯಕ್ಷತ್ವಾವಚ್ಛಿನ್ನಕಾರ್ಯತಾವೇ ಇಲ್ಲವಾಗುವುದರಿಂದ ಸಾಧ್ಯವು ಪಕ್ಷದಲ್ಲಿ ಬರುವುದಿಲ್ಲ, ಬಾಧ ಬರುತ್ತದೆ.

## ವಿಶೇಷಣಗಳಿಗೆ ಕೃತ್ಯ
## ನ್ಯಾಯದೀಪದಲ್ಲಿ ಅವತಾರಿಕೆ

**ಸಾಧ್ಯೇ ಮಾತ್ರಪದದ್ವಯಂ ವ್ಯವಚ್ಛೇದ್ಯಾರ್ಥಕಂ,ನ ತು ಕಾತ್ಸ್ನ್ಯಾರ್ಥಕಮ್, ಇತ್ಯುಪೇತ್ಯ ದೂಷಣಜ್ಞಾನಸೌಕರ್ಯಾಯ ವ್ಯಾವರ್ತ್ಯಂವ್ಯನಕ್ತಿ–ಅತ್ರಚೇತಿ ।।**

ಸಾಧ್ಯದಲ್ಲಿ ಎರಡು ಮಾತ್ರಪದಗಳಿವೆ. ಅವೆರಡೂ ಇತರ ವ್ಯವಚ್ಛೇದವನ್ನು ತಿಳಿಸುತ್ತವೆ, 'ಸಕಲ' ಎಂದು ಅವಕ್ಕೆ ಅರ್ಥವಲ್ಲ, ಖಂಡನೆಯನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ, ಎನ್ನುವ ದೃಷ್ಟಿಯಿಂದ ಈ ಎರಡು ಮಾತ್ರಪದಗಳಿಗೆ ಕೃತ್ಯವನ್ನು ಹೇಳುತ್ತಾರೆ.

**अत्रच साध्ये आद्यं मात्रपदं स्वतस्त्वपक्षेऽपि अनित्यप्रमात्वस्य स्वाधिकदेशवृत्तिना अनित्यज्ञानत्वेन अवच्छिन्नकार्यताश्रये एव वर्तमानत्वात् सिद्धसाधनमिति शङ्कानिरासाय । द्वितीयं तु सर्वासां प्रमाणां गुणजन्यत्वसिद्ध्यर्थम् ।।**

ಈ ಅನುಮಾನದ ಸಾಧ್ಯದಲ್ಲಿ ಮೊದಲನೆಯ ಮಾತ್ರಪದವನ್ನು ಬಿಟ್ಟರೆ, ಅನಿತ್ಯ ಪ್ರಮಾತ್ವಾಶ್ರಯವೃತ್ತಿಯಾದ ಅನಿತ್ಯಜ್ಞಾನತ್ವನ್ನು ತೆಗೆದುಕೊಂಡು ತದವಚ್ಛಿನ್ನ-ಕಾರ್ಯತಾಶ್ರಯ (ಜ್ಞಾನ) ವೃತ್ತಿತ್ವವು ಅನಿತ್ಯಪ್ರಮಾತ್ವದಲ್ಲಿ ಇದೆ. ಇದು ಸ್ವತಸ್ತ್ವವಾದಿಗಳಿಗೂ ಸಮ್ಮತ. ಆದ್ದರಿಂದ ಸಿದ್ಧಸಾಧನತಾದೋಷ. ಮಾತ್ರ ಪದವಿದ್ದರೆ ಅನಿತ್ಯಜ್ಞಾನತ್ವವನ್ನು ತೆಗೆದುಕೊಳ್ಳಲಾಗುವುದಿಲ್ಲ, ಅದು ಪ್ರಮಾತ್ವಾಶ್ರಯವಾದ ಪ್ರಮಾದಲ್ಲಿ ಮಾತ್ರ ಇಲ್ಲ, ಅಪ್ರಮಾದಲ್ಲೂ ಇದೆ. ಆದ್ದರಿಂದ, ಅಧಿಕದೇಶವೃತ್ತಿಯಾಗಿದೆ. ಅನಿತ್ಯಪ್ರತ್ಯಕ್ಷತ್ವಾದಿ ಧರ್ಮಗಳನ್ನೇ ತೆಗೆದುಕೊಳ್ಳಬೇಕು.

ಎರಡನೆಯ ಮಾತ್ರಪದ ಇಷ್ಟಸಿದ್ಧಿಗಾಗಿ. ಸಕಲಪ್ರಮಾಗಳೂ ಗುಣಜನ್ಯ, ಎಂಬುದು ಅದರಿಂದ ಸಿದ್ಧವಾಗುತ್ತದೆ. ಅನಿತ್ಯಪ್ರಮಾತ್ವವು ಗುಣಜನ್ಯಕಾರ್ಯದಲ್ಲಿ ಮಾತ್ರ ಇದೆ, ಗುಣಾಜನ್ಯದಲ್ಲಿ ಇಲ್ಲ, ಎಂದು ಆ ಮಾತ್ರಪದದಿಂದ ತಿಳಿಯುತ್ತದೆ. ಇದರಿಂದಾಗಿ ಜನ್ಯಪ್ರಮಾಗಳೆಲ್ಲವೂ ಗುಣಜನ್ಯ, ಎಂದಂತಾಗುತ್ತದೆ.

## ನ್ಯಾಯದೀಪ

**ದ್ವಿತೀಯಮಿತಿ ॥ ಅನಿತ್ಯಪ್ರಮಾತ್ವಂ ತಾದೃಶಕಾರ್ಯತಾಶ್ರಯೇ ಏವ ವರ್ತಿ, ನತ್ವನ್ಯತ್ರ, ಇತ್ಯಸ್ಯ ವ್ಯವಚ್ಛೇದಾರ್ಥಕ-ಮಾತ್ರಪದೇನ ಲಾಭಾತ್, ತಸ್ಯ ಜನ್ಯಪ್ರತ್ಯಕ್ಷಪ್ರಮಾತ್ವಾನುಮಿತಿತ್ವೋಪಮಿತಿತ್ವ-ಶಾಬ್ದತ್ವಾಶ್ರಯೇಷು ಸರ್ವತ್ರ ವರ್ತನಂ, ತೇಷಾಂ ಸರ್ವೇಷಾಂ ಗುಣಜನ್ಯತ್ವೇ ಏವ ಉಪಪದ್ಯತೇ । ಅನ್ಯಥಾ ಬಾಧಾತ್ । ಕಾತ್ಸ್ನ್ಯಾರ್ಥತ್ವೇ ತು ಯತ್ಕಿಂಚಿತ್ ತಾದೃಶಧರ್ಮಾವಚ್ಛಿನ್ನ ಕಾರ್ಯತಾಶ್ರಯೇ ಸರ್ವತ್ರ ವರ್ತಿತ್ವೋಪಪತ್ತ್ಯಾ ಇಷ್ಟಾಸಿದ್ಧೇಃ ವ್ಯವಚ್ಛೇದಾರ್ಥ ಏವ ದ್ವಿತೀಯೋಽಪೀತಿ ಭಾವಃ ।**

ಎರಡನೆಯ ಮಾತ್ರಪದಕ್ಕೂ ವ್ಯವಚ್ಛೇದವೇ ಅರ್ಥ, ಸಕಲ ಎಂದು ಅರ್ಥವಲ್ಲ, ವ್ಯವಚ್ಛೇದ

ಎಂಬ ಅರ್ಥವನ್ನು ಹೇಳಿದರೆ ಹೀಗೆ ಅಭಿಪ್ರಾಯವಾಗುತ್ತದೆ— ಅನಿತ್ಯಪ್ರಮಾತ್ವವು ಪ್ರತ್ಯಕ್ಷಪ್ರಮಾತ್ವಾದಿಧರ್ಮಾವಚ್ಛಿನ್ನಕಾರ್ಯತಾಶ್ರಯದಲ್ಲಿ ಮಾತ್ರವೇ ಇದೆ, ಅನ್ಯತ್ರ ಇಲ್ಲ (ಗುಣಾಜನ್ಯಜ್ಞಾನದಲ್ಲಿ ಇಲ್ಲ) ಎಂದು. ಇದರಿಂದ ಅನಿತ್ಯಪ್ರಮಾತ್ವಕ್ಕೆ ಆಶ್ರಯಗಳಾದ ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದಬೋಧ ಇವುಗಳೆಲ್ಲವೂ ಗುಣಜನ್ಯವಾಗಿವೆ, ಎಂದು ಸಿದ್ಧವಾಗುತ್ತದೆ. ಏಕೆಂದರೆ, ಪ್ರತ್ಯಕ್ಷಪ್ರಮಾತ್ವಾದ್ಯವಚ್ಛಿನ್ನಕಾರ್ಯತಾ ಇರಬೇಕಾದರೆ ಪ್ರಮಾತ್ಮಕ-ಪ್ರತ್ಯಕ್ಷತ್ವಾವಚ್ಛಿನ್ನಕ್ಕೆ ಒಂದು ಕಾರಣ ಬೇಕು. ಅದೇ ಗುಣ. ಇವುಗಳಲ್ಲಿ ಯಾವುದಾದರೊಂದು ಗುಣಜನ್ಯವಲ್ಲದಿದ್ದರೂ ಮಾತ್ರಪದಘಟಿತವಾದ ಸಾಧ್ಯವು ಪಕ್ಷದಲ್ಲಿ ಬರುವುದಿಲ್ಲವಾದುದರಿಂದ ಬಾಧ ಬರುತ್ತದೆ. ಮಾತ್ರ ಪದಕ್ಕೆ ಸಕಲ ಎಂಬ ಅರ್ಥವನ್ನು ಹೇಳಿದರೆ ಈ ಉದ್ದೇಶ ಸಿದ್ಧವಾಗುವುದಿಲ್ಲ. ಆಗ ತಾದೃಶಕಾರ್ಯತಾ=ಪ್ರತ್ಯಕ್ಷತ್ವಾವಚ್ಛಿನ್ನಕಾರ್ಯತಾ. ತದಾಶ್ರಯವಾದ ಸಕಲಪ್ರತ್ಯಕ್ಷಗಳಲ್ಲೂ ಅನಿತ್ಯಪ್ರಮಾತ್ವ ಇದೆ, ಎಂದು ಹೇಳಿಯೂ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಅನುಮಿತ್ಯಾದಿಗಳು ಗುಣಜನ್ಯ ಎಂದು ಇದರಿಂದ ಸಿದ್ಧವಾಗಬೇಕಿಲ್ಲ. ಹೀಗೆ, ಎರಡನೆಯ ಮಾತ್ರಪದವೂ ವ್ಯವಚ್ಛೇದಾರ್ಥಕವೇ ಆಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಹೇತೌ ಅಪಿ ಮಾತ್ರಪದಾನಿ ವ್ಯವಚ್ಛೇದಾರ್ಥಾನಿ, ಇತ್ಯುಪೇತ್ಯ 'ಅನುತ್ಪಾದ್ಯಾಂತ' ವಿಶೇಷಣಕೃತ್ಯಂ ವಕ್ತುಮಾಹ–ಹೇತಾವಿತಿ ॥**

ಹೇತುವಿನಲ್ಲೂ ಮೂರು ಮಾತ್ರಪದಗಳಿವೆ. ಈ ಮೂರಕ್ಕೂ ವ್ಯವಚ್ಛೇದವೇ ಅರ್ಥ. ಅನುತ್ಪಾದ್ಯ, ಎಂಬಲ್ಲಿವರೆಗೆ ಎರಡು ಮಾತ್ರಪದಗಳಿವೆ. ಆ ಅನುತ್ಪಾದಾಂತವಿಶೇಷಣಕ್ಕೆ ಕೃತ್ಯವನ್ನು ಹೇಳುವುದಕ್ಕಾಗಿ ಮಾತ್ರಪದಗಳಿಗೆ ಕೃತ್ಯವನ್ನು ಮುಂದೆ ಹೇಳಲಾಗಿದೆ.

**हेतौ प्रथममात्रपदाभावे[1] एतद्घटपटान्यतरत्वे व्यभिचारः । घटत्वपटत्वयोः कार्यतावच्छेदकयोरेतद्घटपटान्यतरत्वाधिकरणमात्रवृत्तित्वाभावेन साध्याभावात् । अन्यतरत्वस्य च स्वानुगतकारणाभावेन कार्यतानवच्छेदकत्वात् ॥**

**(अतः स्वाश्रयमात्रावृत्तिधर्मावच्छिन्नकार्यत्वप्रतियोगिकारणताश्रयमात्रानुत्पाद्येति कार्यं विशेषितम् । तेनैतद्घटपटान्यान्यत्वाश्रय**

---

1. ಇಲ್ಲಿ 'ಕಾರ್ಯಮಾತ್ರವೃತ್ತಿತ್ವಾತ್ ಇತ್ಯೇತಾವತ್ಯುಕ್ತೇ' ಎಂದು ಪಾಠಾಂತರ.

कार्यस्य तदुभयान्यान्यत्वाधिकरणमात्रावृत्तिघटत्वपटत्वावच्छिन्न-कार्यत्वप्रतियोगिककारणत्वाश्रयमात्रोत्पाद्यत्वेन हेत्वभावान्न व्यभिचारः।।)

हेतुस्तत्र वर्तते । अन्यतरत्वाश्रयावृत्तिकुड्यत्वा-दिरूपधर्मावच्छिन्ना या कार्यता तत्प्रतियोगिककारणत्वाश्रयीभूतं यत्कुड्यकारणं तन्मात्रानुत्पाद्ये एतद्घटपटरूपे कार्येऽन्यतरत्वस्य वृत्तेः।

मात्रपदे दत्ते तु न व्यभिचारः । स्वाश्रयमात्रावृत्तिपदेन अन्यतरत्वा-धिकदेशवर्तिनोः घटपटत्वयोरपि सङ्गृहीतत्वेन तदवच्छिन्नकार्यताः प्रतियोगिककारणत्वाश्रयीभूतं यद्घटादिकारणं तन्मात्रोत्पाद्ये घटादावप्य-न्यतरत्वस्य वृत्त्या तदनुत्पाद्यकार्यमात्रवृत्तित्वरूप-हेत्वभावात् ।।

ಹೇತುವಿನ ಪ್ರಥಮ ಮಾತ್ರಪದ ಬಿಟ್ಟರೆ, ಸ್ವಾಶ್ರಯಾವೃತ್ತಿಧರ್ಮಾವಚ್ಛಿನ್ನಕಾರ್ಯತಾ-ನಿರೂಪಿತ-ಕಾರಣತಾಶ್ರಯಮಾತ್ರಾನುತ್ಪಾದ್ಯ-ಕಾರ್ಯಮಾತ್ರವೃತ್ತಿಧರ್ಮತ್ವವು ಹೇತುವಾಗುತ್ತದೆ. ಆಗ, ಏತದ್‌ಘಟ-ಪಟಾನ್ಯತರತ್ವದಲ್ಲಿ ವ್ಯಭಿಚಾರ. ಅದರಲ್ಲಿ ಸಾಧ್ಯ ಇಲ್ಲ-ಸ್ವಾಶ್ರಯಮಾತ್ರ ವೃತ್ತಿಧರ್ಮಾವಚ್ಛಿನ್ನ-ಕಾರ್ಯತಾಶ್ರಯಮಾತ್ರವೃತ್ತಿತ್ವವು ಸಾಧ್ಯ. ಸ್ವಪದದಿಂದ ಏತದ್‌ಘಟ-ಪಟಾನ್ಯತರತ್ವನ್ನು ತೆಗೆದುಕೊಂಡರೆ ತದಾಶ್ರಯವಾದುದು ಏತದ್‌ಘಟ-ಪಟಗಳು. ತನ್ಮಾತ್ರವೃತ್ತಿ ಧರ್ಮ ಎಂದರೆ ಅದೇ ಅನ್ಯತರತ್ವ-ತದವಚ್ಛಿನ್ನ ಕಾರ್ಯತಾ ಅಪ್ರಸಿದ್ಧ. ಏಕೆಂದರೆ, ಏತದ್‌ಘಟ-ಪಟಾನ್ಯತರಕ್ಕೆ ಅನುಗತವಾದ ಒಂದು ಕಾರಣವೇ ಇಲ್ಲವಾದುದರಿಂದ ಆ ಅನ್ಯತರತ್ವವು ಕಾರ್ಯತಾನವಚ್ಛೇದಕ. ಕಾರ್ಯತಾವಚ್ಛೇದಕವಾದುದು ಘಟತ್ವ ಮತ್ತು ಪಟತ್ವಗಳು. ಅವುಗಳೆರಡೂ ಅಧಿಕದೇಶದಲ್ಲಿರುವುದರಿಂದ ಏತದ್‌ಘಟ-ಪಟಾನ್ಯತರತ್ವಾಶ್ರಯಮಾತ್ರ ವೃತ್ತಿಯಲ್ಲ. ಹೀಗೆ ಏನು ಮಾಡಿದರೂ ಅನ್ಯತರತ್ವದಲ್ಲಿ ಸಾಧ್ಯ ಬರುವುದಿಲ್ಲ.

ಹೇತು ಬರುತ್ತದೆ- ಉಕ್ತಾನ್ಯತರತ್ವಾಶ್ರಯ ಏತದ್‌ಘಟ-ಪಟ. ಅದರಲ್ಲಿ ಅವೃತ್ತಿಯಾದ ಧರ್ಮ ಕುಡ್ಯತ್ವ. ಘಟತ್ವ-ಪಟತ್ವಗಳಲ್ಲ. ತದವಚ್ಛಿನ್ನಕಾರ್ಯತಾ-ನಿರೂಪಿತ-ಕಾರಣತಾಶ್ರಯ ವಾದುದು ಕುಡ್ಯಕ್ಕೆ (ಗೋಡೆಗೆ) ಕಾರಣವಾದ ಮಣ್ಣು. ತದನುತ್ಪಾದ್ಯವಾದ ಕಾರ್ಯ ಏತದ್ ಘಟಪಟ. ಅದರಲ್ಲಿ ವೃತ್ತಿಯಾಗಿದೆ ಅನ್ಯತರತ್ವ. ಹೀಗೆ, ಸಾಧ್ಯ ಇಲ್ಲ, ಹೇತು ಇದೆಯಾದ್ದರಿಂದ ಅನ್ಯತರತ್ವದಲ್ಲಿ ವ್ಯಭಿಚಾರ.

ಮಾತ್ರಪದ ಕೊಟ್ಟರೆ ವ್ಯಭಿಚಾರ ಪರಿಹಾರವಾಗುತ್ತದೆ. ಮಾತ್ರಪದ–ಘಟಿತ–ಹೇತುವು ಅನ್ಯತರತ್ವದಲ್ಲಿ ಇಲ್ಲ. ಸ್ವಾಶ್ರಯವಾದ ಏತದ್‌ಘಟ–ಪಟದಲ್ಲಿ ಮಾತ್ರ ಅವೃತ್ತಿಯಾದ ಧರ್ಮ ಈಗ ಘಟತ್ವ–ಪಟತ್ವಗಳೂ ಆಗುತ್ತವೆ. ಅವುಗಳು ಅಧಿಕ ದೇಶವೃತ್ತಿಯಾದುದರಿಂದ ಸ್ವಾಶ್ರಯ ಮಾತ್ರದಲ್ಲಿ ಇಲ್ಲ. ತದವಚ್ಛಿನ್ನಕಾರ್ಯತಾ–ನಿರೂಪಿತಕಾರಣತಾಶ್ರಯ ಘಟ–ಪಟಕಾರಣವಾದ ಕಪಾಲ–ತಂತ್ವಾದಿಗಳು. ಅವುಗಳಿಂದ ಉತ್ಪಾದ್ಯವಾದ ಘಟ ಮತ್ತು ಪಟಗಳಲ್ಲಿ ಅನ್ಯತರತ್ವವು ಇದೆ. ಹೀಗಾಗಿ ತದನುತ್ಪಾದ್ಯಕಾರ್ಯ–ಮಾತ್ರ ವೃತ್ತಿಧರ್ಮವಾಗಿಲ್ಲ ಅನ್ಯತರತ್ವ. ಅದರಲ್ಲಿ ಹೇತು ಇಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ.[1]

## ನ್ಯಾಯದೀಪ

**ಘಟಪಟಾನ್ಯತರತ್ವೇ ಸಾಧ್ಯಸತ್ವಾತ್ ಏತದಿತ್ಯುಕ್ತಮ್ । ಏತದ್ ಘಟಪಟಾನ್ಯತರತ್ವೇ ಸಾಧ್ಯಾಭಾವಂ ವ್ಯನಕ್ತಿ–ಕಾರ್ಯತೇತಿ । ಯಯೋಃ ಘಟತ್ವಪಟತ್ವಯೋಃ ಕಾರ್ಯತಾವಚ್ಛೇದಕತ್ವಂ ನ ತಯೋಃ ಸ್ವಾಶ್ರಯಮಾತ್ರ ವೃತ್ತಿತ್ವಮ್। ತತೋ ಅಧಿಕದೇಶವೃತ್ತಿತ್ವಾತ್ । ಅನ್ಯತರತ್ವಸ್ಯಾಪಿ ಅನುಗತಕಾರಣಾಭಾವೇನ ಕಾರ್ಯತಾನವಚ್ಛೇದಕತ್ವಾತ್ ।**

**ಪ್ರಥಮ ಮಾತ್ರಪದಂ ಹಿತ್ವಾ ಸ್ವಾಶ್ರಯಾವೃತ್ತಿಧರ್ಮಾವಚ್ಛಿನ್ನೇತ್ಯಾದೇ-ರೇವೋಕ್ತೌ ಏತದ್‌ಘಟಪಟಾನ್ಯತರತ್ವಸ್ಯ ಸ್ವಾಶ್ರಯಾವೃತ್ತಿ–ಕುಡ್ಯತ್ವಾದಿ ಧರ್ಮಾವಚ್ಛಿನ್ನ – ಕಾರ್ಯತಾಪ್ರತಿಯೋಗಿಕ – ಕಾರಣತಾಶ್ರಯಃ = ಕುಡ್ಯಾದ್ಯ ಸಾಧಾರಣಕಾರಣಮ್ । ತನ್ಮಾತ್ರಾನುತ್ಪಾದ್ಯಂ ಯತ್ ಏತದ್‌ಘಟ–ಪಟರೂಪಂ ಕಾರ್ಯಂ ತದ್‌ವೃತ್ತಿತ್ವೇನ ಏತದ್‌ಘಟಪಟಾನ್ಯತರತ್ವೇ ಉಕ್ತಹೇತೋಃ ಸತ್ವೇಽಪಿ ಮೂಲೋಕ್ತದಿಶಾ ಸಾಧ್ಯಾಭಾವೇನ ವ್ಯಭಿಚಾರಃ। ದತ್ತೇ ತು ಮಾತ್ರಪದೇ ನ ದೋಷಃ। ಕುಡ್ಯತ್ವಸ್ಯ ಏತದ್‌ಘಟಪಟಾನ್ಯತರತ್ವಾನ್ಯತರಾಶ್ರಯೇ ಅವೃತ್ತಿ-**

---

1. ಈ ಮೂಲದಲ್ಲಿ 'अत:' ಎಂದು ಆರಂಭಿಸಿ 'न व्यभिचार:' ಎಂಬಲ್ಲಿವರೆಗಿನ ಒಂದು ಪ್ಯಾರಾ ಕೆಲವು ಪಾಠಗಳಲ್ಲಿ ಇಲ್ಲ. ಆದರೆ, ರಾಯರು ಆ ಪಾಠವನ್ನು ತೆಗೆದುಕೊಂಡು ಸಾಮಂಜಸ್ಯವನ್ನು ವಿಚಾರ ಮಾಡಿದ್ದಾರೆ. ಆದ್ದರಿಂದ ಅದನ್ನೂ ಮೂಲದಲ್ಲಿ ಸೇರಿಸಬೇಕು.

ಆ ಪ್ಯಾರಾದಲ್ಲಿರುವ ಎರಡನೆಯ ವಾಕ್ಯದಲ್ಲಿ ಅನ್ಯತರತ್ವದ ಸ್ವರೂಪವನ್ನು ಬಿಡಿಸಿ ಹೇಳಲಾಗಿದೆ–ತದುಭಯಾನ್ಯಾನ್ಯತ್ವ–ಅಧಿಕರಣ ಮಾತ್ರಾವೃತ್ತಿ ಘಟತ್ವ–ಪಟತ್ವ... ಎಂದು. ತದುಭಯ ಎಂದರೆ ಏತದ್–ಘಟ–ಪಟ. ತದನ್ಯತರತ್ವ ಎಂದರೆ ತದನ್ಯಾನ್ಯತ್ವ. ತದುಭಯಾನ್ಯವಾದುದು ಅವೆರಡನ್ನು ಬಿಟ್ಟು ಉಳಿದೆಲ್ಲ ವಸ್ತುಗಳು. ತದನ್ಯತ್ವ ಅವೆರಡರಲ್ಲಿ ಇದೆ. ಹೀಗೆ ಅನ್ಯಾನ್ಯತ್ವಾಶ್ರಯಕಾರ್ಯವೆಂದರೆ ಏತದ್‌ಘಟಪಟಗಳು. ತನ್ಮಾತ್ರಾವೃತ್ತಿಯಾದುದು ಘಟತ್ವ–ಪಟತ್ವ. ಅವೆರಡೂ ಸಕಲ ಘಟಪಟಗಳಲ್ಲೂ ಇವೆಯಾದುದರಿಂದ ಏತದ್ ಘಟ-ಪಟಗಳಲ್ಲಿ ಮಾತ್ರ ಇರುವ ಧರ್ಮಗಳಲ್ಲ.

**ಧರ್ಮತ್ವೇऽಪಿ, ತದ್ವೃತ್ತಿತ್ವೇ ಸತಿ, ತತೋऽಧಿಕದೇಶವೃತ್ತಿತ್ವರೂಪ ತನ್ಮಾತ್ರಾವೃತ್ತಿ- ಧರ್ಮತ್ವಾಭಾವೇನ ತತ್ರ ಹೇತೋರೇವಾಭಾವಾತ್ ॥**

ಮೂಲದಲ್ಲಿ ''ಏತದ್–ಘಟಪಟಾನ್ಯತರತ್ವ' ಎಂದು ಏತತ್‌ಪದವಿದೆ. ಅದನ್ನು ಬಿಟ್ಟರೆ 'ಘಟಪಟಾನ್ಯತರತ್ವದಲ್ಲಿ' ವ್ಯಭಿಚಾರ ಎಂಗಾಗುತ್ತದೆ. ಆದರೆ, ಅದರಲ್ಲಿ ಸಾಧ್ಯ ಇದೆಯಾದ್ದರಿಂದ ವ್ಯಭಿಚಾರ ಬರುವುದಿಲ್ಲ. ಅದಕ್ಕಾಗಿ 'ಏತತ್' ಪದಬೇಕು. 'ಏತದ್–ಘಟಪಟಾನ್ಯತರತ್ವದಲ್ಲಿ' ಸಾಧ್ಯ ಇಲ್ಲ. ಅದನ್ನು 'ಕಾರ್ಯತಾ' ಎಂಬ ಮೂಲವಾಕ್ಯದಲ್ಲಿ ತೋರಿಸಲಾಗಿದೆ– ಘಟತ್ವ–ಪಟತ್ವಗಳು ಪ್ರತ್ಯೇಕವಾಗಿ ಕಾರ್ಯತಾವಚ್ಛೇದಕವಾಗಿವೆ. ಆದರೆ, ಅವುಗಳು ಏತದ್–ಘಟಪಟಾನ್ಯತರತ್ವಾಶ್ರಯ ವಾದ ಏತದ್–ಘಟ ಮತ್ತು ಏತತ್ ಪಟಗಳಲ್ಲಿ ಮಾತ್ರ ಇಲ್ಲ. ಸಕಲ ಘಟ–ಪಟಗಳಲ್ಲೂ ಇದೆ. ಅದು ವ್ಯಾಪಕಧರ್ಮವಾದುದರಿಂದ. ಇನ್ನು ಅಲ್ಲಿ ಮಾತ್ರ ಇರುವ ಧರ್ಮಗಳು ಏತದ್–ಘಟಪಟಾನ್ಯತರತ್ವ ಅದು ಕಾರ್ಯತಾವಚ್ಛೇದಕವೇ ಅಲ್ಲ. ಹೀಗೆ ಆದರಲ್ಲಿ ಪ್ರಕೃತಸಾಧ್ಯ ಇಲ್ಲ. (ಇದರ ಮುಂದೆ ನ್ಯಾಯದೀಪದಲ್ಲಿ ಎರಡು ವಾಕ್ಯಗಳು ಕೆಲವು ಪ್ರತಿಗಳಲ್ಲಿ ಇಲ್ಲ. ಅದರ ಅಗತ್ಯವಿಲ್ಲವಾದುದರಿಂದ ಅವೆರಡು ವಾಕ್ಯಗಳನ್ನು ಬಿಡಲಾಗಿದೆ.)

ಮೊದಲನೆಯ ಮಾತ್ರಪದವನ್ನು ಬಿಟ್ಟರೆ ಏತದ್–ಘಟಪಟಾನ್ಯತರತ್ವದಲ್ಲಿ ವ್ಯಭಿಚಾರ ಓೀಗೆ–ಮಾತ್ರಪದವನ್ನು ಬಿಟ್ಟರೆ, ಸ್ವಾಶ್ರಯ–ಅವೃತ್ತಿಧರ್ಮಾವಚ್ಛಿನ್ನ–ಕಾರ್ಯತಾನಿರೂಪಿತ–ಕಾರಣತಾಶ್ರಯ–ಮಾತ್ರಾನುತ್ಪಾದ್ಯ–ಕಾರ್ಯಮಾತ್ರವೃತ್ತಿಧರ್ಮತ್ವವು ಹೇತುವಾಗುತ್ತದೆ. ಈ ಹೇತು ಏತದ್‌ಘಟಪಟಾನ್ಯತರತ್ವದಲ್ಲಿ ಇದೆ. ಸ್ವಾಶ್ರಯಾವೃತ್ತಿಧರ್ಮ ಎಂದರೆ ಕುಡ್ಯತ್ವ. ತದವಚ್ಛಿನ್ನಕಾರ್ಯತಾನಿರೂಪಿತ–ಕಾರಣತಾಶ್ರಯವಾದುದು ಕುಡ್ಯಕ್ಕೆ(ಗೋಡೆಗೆ) ಅಸಾಧಾರಣ ಕಾರಣವಾದ ಮಣ್ಣು–ಕಲ್ಲುಗಳು. ತನ್ಮಾತ್ರದಿಂದ ಅನುತ್ಪಾದ್ಯವಾದ ಕಾರ್ಯ ಎಂದರೆ, ಏತದ್ ಘಟ–ಪಟ. ಅದರಲ್ಲಿ ವೃತ್ತಿಯಾಗಿದೆ– ಏತದ್ ಘಟಪಟಾನ್ಯತರತ್ವ. ಹೀಗೆ ಹೇತು ಇದೆ. ಆದರೆ, ಮೂಲದಲ್ಲಿ ಹೇಳಿರುವಂತೆ ಅದರಲ್ಲಿ ಸಾಧ್ಯ ಇಲ್ಲ. ಹೀಗೆ, ವ್ಯಭಿಚಾರ. ಮಾತ್ರಪದವಿದ್ದರೆ ವ್ಯಭಿಚಾರವು ಪರಿಹಾರವಾಗುತ್ತದೆ. ಆಗ ಕುಡ್ಯತ್ವ ಧರ್ಮದ ಸಂಗ್ರಹವಾಗುವುದಿಲ್ಲ. ಏಕೆಂದರೆ, ತನ್ಮಾತ್ರಾವೃತ್ತಿತ್ವ ಎಂದರೆ ತದ್‌ವೃತ್ತಿತ್ವೇ ಸತಿ ತತೋ ಅಧಿಕದೇಶವೃತ್ತಿತ್ವ. ಇದು ಘಟತ್ವದಲ್ಲಿ ಇದೆ. ಅದು ಏತದ್‌ಘಟಪಟಾನ್ಯತರದಲ್ಲಿ ಇದೆ. ಅಷ್ಟೇ ಅಲ್ಲ, ಅಧಿಕದೇಶದಲ್ಲೂ ಇದೆ–ಸಕಲ ಘಟಗಳಲ್ಲೂ ಇದೆ. ಆದರೆ, ಕುಡ್ಯತ್ವವು ತದ್‌ವೃತ್ತಿ ಅಲ್ಲ. ಅದರಲ್ಲಿ ಮೊದಲನೆಯ ದಲ ಇಲ್ಲ, ಆದ್ದರಿಂದ ಕುಡ್ಯತ್ವವನ್ನು ಪರಿಗ್ರಹಿಸಿ ಹೇಳಿದ ಹೇತುವು ಬರುವುದಿಲ್ಲ.

## ನ್ಯಾಯದೀಪ

**ಯದ್ಯಪ್ಯತ್ರ ವಿವಕ್ಷಿತಂ ತನ್ಮಾತ್ರಾನುತ್ಪಾದ್ಯತ್ವಂ, ತದುತ್ಪಾದ್ಯತ್ವೇ ಸತಿ ತತೋऽಧಿ**

**ಕೋತ್ಪಾದ್ಯತ್ವಮ್ । ತಚ್ಚ ಉಕ್ತಸ್ಥಲೇ ನಾಸ್ತಿ । ಏತದ್ ಘಟ-ಪಟಾನ್ಯತರತ್ವೇ (ಅನ್ಯತರಸ್ಮಿನ್) ಕುಡ್ಯಕಾರಣೋತ್ಪಾದ್ಯತ್ವೇ ಸತಿ ತತೋಽಧಿಕೋತ್ಪಾದ್ಯತ್ವರೂಪ ತನ್ಮಾತ್ರಾನುತ್ಪಾದ್ಯತ್ವಸ್ಯ ಬಾಧಾತ್ । ತಥಾಚ ಹೇತ್ವಭಾವಾದೇವ ನ ತತ್ರ ವ್ಯಭಿಚಾರಃ । ತಥಾಪಿ ತನ್ಮಾತ್ರಾನುತ್ಪಾದ್ಯತ್ವಂ ತದಿತರಾನುತ್ಪಾದ್ಯತ್ವೇ ಸತಿ ತದುತ್ಪಾದ್ಯತ್ವರೂಪ-ತನ್ಮಾತ್ರೋತ್ಪಾದ್ಯತ್ವಸ್ಯ ಅಭಾವವತ್ವರೂಪಮ್ ತತ್ ಅಸ್ತ್ಯೇವ ಏತದ್-ಘಟಪಟಾನ್ಯತರತಾಶ್ರಯೇ ಏತದ್-ಘಟಪಟರೂಪೇ ಅರ್ಥೇ ಇತಿ, ತಾವನ್ಮಾತ್ರೇಣ ತತ್ರ ಹೇತುಸತ್ವ- ರೂಪಮ್ ಉಪೇತ್ಯ ವ್ಯಭಿಚಾರೇ ಚೋದಿತೇ ಮಾತ್ರಪದೇನ ತನ್ನಿರಾಸಃ ॥**

ವಸ್ತುತಃ ಏತದ್ ಘಟ-ಪಟಾನ್ಯತರತ್ವದಲ್ಲಿ ವ್ಯಭಿಚಾರ ಪ್ರಸಕ್ತಿ ಇಲ್ಲ. ಅಲ್ಲಿ ಹೇತುವೇ ಇಲ್ಲ. ಕುಡ್ಯಕಾರಣಾನುತ್ಪಾದ್ಯತ್ವವು ಘಟಪಟಗಳಲ್ಲಿ ಇದೆ, ಎಂದು ಹೇತುವನ್ನು ಸಮನ್ವಯ ಮಾಡಲಾಗಿದೆ. ಆದರೆ, ಪ್ರಕೃತಹೇತುವಾಗಿರುವ ಕುಡ್ಯಕಾರಣಮಾತ್ರಾನುತ್ಪಾದ್ಯತ್ವ ಎಂದರೆ ಕುಡ್ಯಕಾರಣದಿಂದ ಉತ್ಪಾದ್ಯವಾಗಿರಬೇಕು, ಅದಕ್ಕಿಂತಲೂ ಹೆಚ್ಚಿನ ಕಾರಣದಿಂದ ಉತ್ಪಾದ್ಯವಾಗಿರಬೇಕು. ಇದೇ ತನ್ಮಾತ್ರಾನುತ್ಪಾದ್ಯತ್ವ. ಇದು ಘಟ-ಪಟಾನ್ಯತರದಲ್ಲಿ ಇಲ್ಲ. ಅದು ಕುಡ್ಯಕಾರಣದಿಂದ ಉತ್ಪಾದ್ಯವಲ್ಲ. ಹೀಗೆ ಹೇತುವೇ ಇಲ್ಲದಿರುವುದರಿಂದ ವ್ಯಭಿಚಾರದ ಪ್ರಸಕ್ತಿಯೇ ಇಲ್ಲ. ಆದರೂ ತನ್ಮಾತ್ರಾನುತ್ಪಾದ್ಯತ್ವವೆಂದರೆ ತನ್ಮಾತ್ರೋತ್ಪಾದ್ಯತ್ವಾಭಾವ. ತನ್ಮಾತ್ರೋತ್ಪಾದ್ಯತ್ವವೆಂದರೆ ತದಿತರಾನುತ್ಪಾದ್ಯತ್ವೇ ಸತಿ ತದುತ್ಪಾದ್ಯತ್ವ. ಇದು ಘಟ-ಪಟಗಳಲ್ಲಿ ಇಲ್ಲ. ಘಟ-ಪಟಗಳು ಕುಡ್ಯಕಾರಣದಿಂದ ಉತ್ಪಾದ್ಯವಲ್ಲ. ಹೀಗಾಗಿ ಅದರಲ್ಲಿ ತದ್-ಘಟಿತವಾದ ತನ್ಮಾತ್ರೋತ್ಪಾದ್ಯತ್ವವು ಇಲ್ಲ. ತದಭಾವರೂಪವಾದ ಹೇತು ಇದೆ. ವ್ಯಭಿಚಾರಪ್ರಸಕ್ತಿ ಇದೆ. ಅದರ ಪರಿಹಾರಕ್ಕಾಗಿ ಮಾತ್ರ ಪದ ಅಗತ್ಯ.

## ನ್ಯಾಯದೀಪ

**ಮೂಲೇ ತು, ಪ್ರಕೃತಾಭಿಮತ-ತನ್ಮಾತ್ರಾನುತ್ಪಾದ್ಯತ್ವಸ್ಯ ತತ್ರಾಭಾವಾತ್, ಕುಡ್ಯಾದಿ-ಅಸಾಧಾರಣಕಾರಣೇತರ-ಈಶ್ವರಜ್ಞಾನೋತ್ಪಾದ್ಯತ್ವೇನ ತದಿತರಾನುತ್ಪಾದ್ಯತ್ವಸ್ಯಾಪ್ರಸಿಧ್ಯಾ ತದಭಾವಸ್ಯ ದುರ್ಗ್ರಹತ್ವಾಚ್ಚ ವ್ಯಭಿಚಾರಚೋದನಾ ನ ಯುಕ್ತಾ ಇತ್ಯರುಚ್ಯೈವ 'ಪ್ರಥಮಮಾತ್ರಪದಸ್ಯ ಇದಂ ಕೃತ್ಯಮ್' ಇತ್ಯಾದ್ಯನುಕ್ತ್ವಾ 'ಸ್ವಾಶ್ರಯಮಾತ್ರವೃತ್ತಿ- ಧರ್ಮಾವಚ್ಛಿನ್ನ - ಕಾರ್ಯತ್ವಪ್ರತಿಯೋಗಿಕ-ಕಾರಣತಾಶ್ರಯ ಮಾತ್ರಾನುತ್ಪಾದ್ಯೇತಿ ಕಾರ್ಯಂ ವಿಶೇಷಿತಮ್' ಇತ್ಯೇವೋಕ್ತಮ್ ॥**

ಮೂಲದಲ್ಲಿ, ಹೇತುಘಟಕವಾದ ಪ್ರಥಮಮಾತ್ರಪದಕ್ಕೆ ಇದು ಕೃತ್ಯ, ಎಂದು ಹೇಳದೆ 'ಸ್ವಾಶ್ರಯಮಾತ್ರಾವೃತ್ತಿ – ಧರ್ಮಾವಚ್ಛಿನ್ನ – ಕಾರ್ಯತಾ ನಿರೂಪಿತ – ಕಾರಣತಾಶ್ರಯ ಮಾತ್ರಾನುತ್ಪಾದ್ಯ, ಇತಿ ಕಾರ್ಯಂ ವಿಶೇಷಿತಮ್' ಎಂದು ದೀರ್ಘವಾಗಿ ಹೇಳಲಾಗಿದೆ. ಹೀಗೆ ಹೇಳಲು ಕಾರಣ–ಏತದ್–ಘಟಪಟಾನ್ಯತರತ್ವದಲ್ಲಿ ಮಾತ್ರಪದಕ್ಕೆ ಕೃತ್ಯವಾಗಿ ಹೇಳಿದ ವ್ಯಭಿಚಾರದಲ್ಲಿ ಹೆಚ್ಚು ಸ್ವೈರ್ಭರ್ಯ ಇಲ್ಲ, ಎಂದು ಸೂಚಿಸುವುದೇ ಆಗಿದೆ. ವ್ಯಭಿಚಾರ ಏಕಿಲ್ಲ, ಎಂದರೆ ಹೀಗೆ– ಪ್ರಕೃತಾಭಿಮತವಾದ ತನ್ಮಾತ್ರಾನುತ್ಪಾದ್ಯತ್ವ ಜ್ಞಾನಸಾಮಾನ್ಯಕಾರಣ. ಉತ್ಪಾದ್ಯತ್ವೇ ಸತಿ ತತಃ ಅಧಿಕಕಾರಣ (ಗುಣ) ಉತ್ಪಾದ್ಯತ್ವ, ಇದೇ ಪ್ರಾಮಾಣ್ಯದಲ್ಲಿ ವಿವಕ್ಷಿತವಾದ ಹೇತು. ಅಂತಹ ಹೇತು ಘಟ–ಪಟಗಳಲ್ಲಿ ಇಲ್ಲ. ಹಿಂದೆ ಹೇಳಿದಂತೆ, ಘಟ–ಪಟಗಳು ಕುಡ್ಯಸಾಧಾರಣಕಾರಣದಿಂದ ಉತ್ಪಾದ್ಯಗಳಲ್ಲ. ಹೀಗೆ ಹೇತು ಇಲ್ಲ.

ಅಲ್ಲದೆ, ಕುಡ್ಯಾದಿಗಳಿಗೆ ಯಾವುದು ಅಸಾಧಾರಣಕಾರಣವೋ ತದಿತರವಾದ ಈಶ್ವರಜ್ಞಾನ ದಿಂದ ಎಲ್ಲ ಕಾರ್ಯಗಳೂ ಉತ್ಪಾದ್ಯಗಳೇ ಆಗಿವೆ. ಹೀಗಾಗಿ ತದಿತರಾನುತ್ಪಾದ್ಯತ್ವವು ಅಪ್ರಸಿದ್ಧ. ಪ್ರತಿಯೋಗಿ ಅಪ್ರಸಿದ್ಧವಾದುದರಿಂದ ತದನುತ್ಪಾದ್ಯತ್ವರೂಪವಾದ ಅಭಾವವೂ ಅಪ್ರಸಿದ್ಧ. ಇಂತಹ ಹೇತು ಘಟ–ಪಟಗಳಲ್ಲಿ ಇರಲು ಸಾಧ್ಯವೇ ಇಲ್ಲ. ವ್ಯಭಿಚಾರ ಇಲ್ಲ. ಇದನ್ನು ಸೂಚಿಸುವುದಕ್ಕಾಗಿ ಮೂಲದಲ್ಲಿ ಅನುತ್ಪಾದ್ಯಾಂತ ವಿಶೇಷಣಕ್ಕೆ ಕೃತ್ಯವನ್ನಷ್ಟೇ ಹೇಳಲಾಗಿದೆ. ಅನುತ್ಪಾದ್ಯಾಂತವನ್ನು ಬಿಟ್ಟರೆ ಕಾರ್ಯಮಾತ್ರವೃತ್ತಿಧರ್ಮತ್ವವು ಹೇತುವಾಗುತ್ತದೆ. ಅದು ಅನ್ಯತರತ್ವದಲ್ಲಿ ಇದೆ. ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ಅನುತ್ಪಾದ್ಯಾಂತ ವಿಶೇಷಣ. (ಆದ್ದರಿಂದಲೇ ರಾಯರಿಗೆ ವಿವಕ್ಷಿತವಾದ ಮೂಲಪಾಠ 'ಹೇತೌ ಏತದ್ ಘಟಪಟಾನ್ಯತರತ್ವೇ ವ್ಯಭಿಚಾರಃ' (ಪುಟ578) ಎಂದು. 'ಮಾತ್ರಪದಾಭಾವೇ' ಎನ್ನುವ ಅಂಶ 'ಕ್ವಚಿತ್ತು' ಎಂದು ಮುಂದೆ ಹೇಳುವಂತೆ ಪಾಠಾಂತರ. 'ಹೇತುಸ್ತತ್ರ ವರ್ತತೇ' ಎಂದು ಮೂಲದಲ್ಲಿ ಅನ್ಯತರತ್ವದಲ್ಲಿ ಹೇತುವನ್ನು ಸಮನ್ವಯ ಮಾಡುವ ಗ್ರಂಥವೂ ಕೆಲವು ಮೂಲ ಪ್ರತಿಗಳಲ್ಲಿ ಇಲ್ಲ. ಹೀಗೆ ಇಲ್ಲಿ ಪ್ರಥಮ ಮಾತ್ರಪದದ ಕೃತ್ಯ ವಿಚಾರವಲ್ಲ.)

## ನ್ಯಾಯದೀಪ

**ಕೇಚಿತ್ತು(ಕ್ವಚಿತ್ತು) 'ಪ್ರಥಮ–ಮಾತ್ರಪದಾಭಾವೇ' ಇತ್ಯಾದಿಃ ಪ್ರಥಮ ಮಾತ್ರಪದಕೃತ್ಯ–ಪರತಯಾಪಿ ಪಾಠಃ ಉಪಲಭ್ಯತೇ ಇತಿ ಪಕ್ಷೇ ತು–ತನ್ಮಾತ್ರಾನುತ್ಪಾದ್ಯೇತ್ಯಸ್ಯ ತದಿತರಾನುತ್ಪಾದ್ಯತ್ವ ವಿಶಿಷ್ಟ–ತದುತ್ಪಾದ್ಯತ್ವಾಭಾವವತ್ತ್ವ ರೂಪ–ತನ್ಮಾತ್ರಾನುತ್ಪಾದ್ಯಾರ್ಥಕತ್ವೇಽಪಿ ಇಹ ಅಪ್ರಸಿದ್ಧಿನಿರಾಸಾಯ**

**ತದಿತರಾನುತ್ಪಾದ್ಯತ್ವಮಾತ್ರಂ ವಿವಕ್ಷಣೀಯಮ್ ।[1] ತಚ್ಚ ಗಗನಾದೌ ಪ್ರಸಿದ್ಧಮಿತಿ ತದಭಾವಃ ಏತದ್–ಘಟಪಟಾನ್ಯತರತ್ವಾಶ್ರಯಕಾರ್ಯೇ ಗೃಹೀತುಂ ಶಕ್ಯಃ ಇತಿ ವ್ಯಭಿಚಾರ- ಚೋದನಾ ಉಪಪಾದ್ಯಾ ಅಸಿದ್ಧಿಃ=ಅಪ್ರಸಿದ್ಧಿಃ । ತಥಾಚ ನಾಸಿದ್ಧಿವಾರಕತ್ವಂ ದೋಷಃ,[2] ಇತ್ಯಾಹುಃ ।**

ಕೆಲವು ಹಸ್ತಪ್ರತಿಗಳಲ್ಲಿ 'ಪ್ರಥಮ ಮಾತ್ರ ಪದಾಭಾವೇ' ಎಂದು ಪ್ರಾರಂಭದಲ್ಲಿ ವಾಕ್ಯವಿದೆ. ಇದರಿಂದ ಈ ವ್ಯಭಿಚಾರಪರಿಹಾರವು 'ಮಾತ್ರ' ಪದಕ್ಕೆ ಕೃತ್ಯ ಎಂದು ತಿಳಿಯುತ್ತದೆ. ಆಗ ವ್ಯಭಿಚಾರವನ್ನು ಹೀಗೆ ಸಮರ್ಥನೆ ಮಾಡಬೇಕು. ಹೇತುವಿನಲ್ಲಿ 'ತನ್ಮಾತ್ರಾನುತ್ಪಾದ್ಯ' ಎಂದರೆ ತದಿತರಾನುತ್ಪಾದ್ಯತ್ವ ವಿಶಿಷ್ಟ ತದುತ್ಪಾದ್ಯತ್ವಾಭಾವ ಎಂದು ಪರಿಗಣಿಸಿದರೆ ಅದು ಅಪ್ರಸಿದ್ಧ. ಹಿಂದೆ ಹೇಳಿದಂತೆ ಸರ್ವಕಾರ್ಯವೂ ತದಿತರ ಈಶ್ವರಜ್ಞಾನದಿಂದ ಉತ್ಪಾದ್ಯವೇ ಆಗಿದೆ. ಆದಕ್ಕಾಗಿ 'ತದುತ್ಪಾದ್ಯತ್ವ' ಎಂಬ ವಿಶೇಷ್ಯಭಾಗವನ್ನು ಬಿಡಬೇಕು. ಆಗ ತದಿತರಾನುತ್ಪಾದ್ಯತ್ವವು ಗಗನದಲ್ಲಿ ಪ್ರಸಿದ್ಧವಾಗುವುದರಿಂದ ತದಭಾವರೂಪ ಹೇತು ಘಟಪಟಗಳಲ್ಲಿ ಬರುತ್ತದೆ. ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ಮಾತ್ರ ಪದಬೇಕು. ಹೀಗೆ ಕೆಲವರು ಹೇಳುತ್ತಾರೆ.

ಎರಡನೆಯ ಮಾತ್ರಪದಕ್ಕೆ ಅಸಿದ್ಧಿವಾರಕತಯಾ ಸಾರ್ಥಕ್ಯವನ್ನು ಮುಂದೆ ಹೇಳಲಾಗಿದೆ. ಆದರೆ, ಸ್ವರೂಪಾಸಿದ್ಧಿವಾರಕವಿಶೇಷಣಗಳು ವ್ಯರ್ಥ. ಆದ್ದರಿಂದ ಅಸಿದ್ಧಿ ಎಂದರೆ ಸ್ವರೂಪಾಸಿದ್ಧಿಯಲ್ಲ, ಅಪ್ರಸಿದ್ಧಿ.

ಅಪ್ರಸಿದ್ಧಿ ಹೀಗೆ–ಎರಡನೆಯ ಮಾತ್ರಪದವನ್ನು ಬಿಟ್ಟರೆ ಪಕ್ಷವಾದ ಪ್ರಮಾತ್ವದಲ್ಲಿ ಹೇತುವು ಬರುವುದಿಲ್ಲ. ಪ್ರಮಾತ್ವಾಧಿಕರಣ–ಮಾತ್ರಾವೃತ್ತಿಧರ್ಮ ಎಂದರೆ, ತದಧಿಕದೇಶವೃತ್ತಿಯಾದ ಅನಿತ್ಯಜ್ಞಾನತ್ವ. ತದವಚ್ಛಿನ್ನಕಾರಣ ಆತ್ಮಮನಃಸಂಯೋಗ. ತದುತ್ಪಾದ್ಯವೇ ಆಗಿದೆ ಪ್ರಮಾ. ಪ್ರಮಾತ್ವವು ತದನುತ್ಪಾದ್ಯವೃತ್ತಿಯಲ್ಲ.

ಇದರಂತೆ, ಘಟತ್ವಾದಿ ಧರ್ಮಗಳಲ್ಲೂ ಈ ಹೇತುವು ಬರುವುದಿಲ್ಲ. ಏಕೆಂದರೆ, ತದಧಿಕರಣ ಮಾತ್ರಾವೃತ್ತಿಧರ್ಮ ಎಂದರೆ ದ್ರವ್ಯತ್ವಾದಿ ತದಧಿಕದೇಶವೃತ್ತಿಧರ್ಮಗಳು. ತದವಚ್ಛಿನ್ನ ಕಾರಣಗಳು ಅದೃಷ್ಟಾದಿಸಾಮಾನ್ಯಕಾರಣಗಳು. ತಜ್ಜನ್ಯವಾದ ಘಟದಲ್ಲಿ ವೃತ್ತಿಯಾಗಿದೆ, ಘಟತ್ವ. ಹೀಗೆ, ಹೇತುವು ಯಾವುದರಲ್ಲೂ ಇಲ್ಲದಿರುವುದರಿಂದ ಅಪ್ರಸಿದ್ಧಿ. ಅದರ ಪರಿಹಾರಕ್ಕಾಗಿ ದ್ವಿತೀಯ ಮಾತ್ರಪದಬೇಕು. ಈಗ ಪ್ರಮಾತ್ವದಲ್ಲಿ ಹೇತು ಬರುತ್ತದೆ. ಅನಿತ್ಯಜ್ಞಾನಕಾರಣವಾದ ಮನಃಸಂಯೋಗಾದಿಗಳಿಂದ ಅನಿತ್ಯಪ್ರಮಾವು ಉತ್ಪಾದ್ಯವಾದರೂ, ತನ್ಮಾತ್ರದಿಂದ ಉತ್ಪಾದ್ಯವಲ್ಲ.

---

1. ಈ ಪಕ್ಷವನ್ನು ಪ್ರಕಾಶವ್ಯಾಖ್ಯಾನ ನ್ಯಾಯಶಿಖಾಮಣಿಯಲ್ಲಿ ಅಂಗೀಕರಿಸಲಾಗಿದೆ–ಉತ್ಪಾದ್ಯಸ್ಯ ಸರ್ವಸ್ಯ ತಾದೃಶಕಾರಣತಾಶ್ರಯಾತಿರಿಕ್ತೇಶ್ವರಾದ್ಯುತ್ಪಾದ್ಯತ್ವಾತ್ ಇತಿ ಚೇನ್ನ । ಸ್ವಾಧಿಕರಣಾವೃತ್ತಿತ್ವಘಟಿತತಾದೃಶಕಾರಣ- ತಾಶ್ರಯಾತಿರಿಕ್ತಾನುತ್ಪಾದ್ಯಂ ಗಗನಾದಿ ಪ್ರಸಿದ್ಧಂ, ತದ್ಭಿನ್ನೇ ನೀಲಘಟಃ ಇತಿ ತತ್ರಹೇತು ಸತ್ವಾತ್ । (ಪು.330)

2. ಇದೂ ನ್ಯಾಯಶಿಖಾಮಣಿ ವ್ಯಾಖ್ಯಾನಕಾರನ ಪಕ್ಷ–ತಸ್ಮಾದಪ್ರಸಿದ್ಧಿವಾರಣಾಯೈವ ತದುಪಾದಾನಮ್ ।(ಪು.331)

ವಿಶೇಷವು ಸಾಮಾನ್ಯಕ್ಕೆ ಯಾವುದು ಕಾರಣವೋ ತದಧಿಕ ಕಾರಣದಿಂದಲೂ ಉತ್ಪಾದ್ಯವಾದುದರಿಂದ ತನ್ಮಾತ್ರೋತ್ಪಾದ್ಯವಲ್ಲ. ಆದ್ದರಿಂದಲೇ ಘಟತ್ವದಲ್ಲೂ ಹೇತುವು ಪ್ರಸಿದ್ಧವಾಗುತ್ತದೆ. ಘಟವೂ ದ್ರವ್ಯಸಾಮಾನ್ಯಕ್ಕೆ ಯಾವುದು ಕಾರಣವೋ ತನ್ಮಾತ್ರದಿಂದ ಉತ್ಪಾದ್ಯವಲ್ಲ. ತದಧಿಕದಿಂದ ಉತ್ಪಾದ್ಯ. ಹೀಗೆ ಅಪ್ರಸಿದ್ಧಿ ಪರಿಹಾರವಾಗುತ್ತದೆ.

ಇಲ್ಲಿ ಮೂಲಪಾಠದಲ್ಲಿ ವ್ಯತ್ಯಾಸಗಳಿರುವುದರಿಂದ ರಾಯರ ಟಿಪ್ಪಣಿಯನ್ನು ಅನುಸರಿಸಿ ಅದರ ಸ್ಪಷ್ಟೀಕರಣವನ್ನು ನೀಡಲಾಗಿದೆ–

**ಮೂಲಪಾಠ 1**

ತನ್ಮಾತ್ರಾನುತ್ಪಾದ್ಯತ್ವಂ ಎಂಬ ಹೇತ್ವಂಶಕ್ಕೆ–ತದುತ್ಪಾದ್ಯತ್ವೇ ಸತಿ ತತೋ ಅಧಿಕೋತ್ಪಾದ್ಯತ್ವಮ್, ಎಂದು ಅರ್ಥವಿಟ್ಟುಕೊಂಡಾಗ ಮೂಲಪಾಠದಲ್ಲಿ 'ಹೇತೌ ಪ್ರಥಮಮಾತ್ರಪದಾಭಾವೇ' ಎಂಬ ಮೊದಲನೆಯ ಪದ ಇಲ್ಲ. ಅದರ ಬದಲು 'ಕಾರ್ಯಮಾತ್ರ ವೃತ್ತಿತ್ವಾತ್, ಇತ್ಯೇತಾವತ್ಯುಕ್ತೇ' ಎಂಬ ಅಧಿಕಾಂಶ ಕೆಲವು ಪಾಠಗಳಲ್ಲಿ ಇದೆ. ಈ ಪಕ್ಷದಲ್ಲಿ ಮೂಲಪಾಠ–

**हेतौ कार्यमात्रवृत्तित्वादित्येतावत्युक्ते एतद्घटपटान्यतरत्वे व्यभिचारः। घटत्वपटत्वयोः कार्यतावच्छेदकयोरेतद्घट-पटान्यतरत्वाधिकरणमात्रवृत्तित्वाभावेन साध्याभावात्। अन्यतरत्वस्य च स्वानुगतकारणा-भावेन कार्यतानवच्छेदकत्वात्॥**

**अतः स्वाश्रयमात्रावृत्तिधर्मावच्छिन्नकार्यत्वप्रतियोगिककारणताश्रयमात्रानुत्पाद्येति कार्यं विशेषितम्। तेनैतद्घटपटान्यान्यत्वाश्रयकार्यस्य तदुभयान्यान्यत्वाधिकरण-मात्रावृत्तिघटत्वपटत्वावच्छिन्नकार्यत्वप्रतियोगिक- कारणत्वाश्रयमात्रोत्पाद्यत्वेन हेत्वभावान्न व्यभिचारः॥**

(ಈ ಪಾಠದಲ್ಲಿ ಪ್ರಥಮ ಮಾತ್ರಪದಕ್ಕೆ ಕೃತ್ಯವನ್ನು ನ್ಯಾಯದೀಪದಲ್ಲಿ ತೋರಿಸಲಾಗಿದೆ)

**ಮೂಲಪಾಠ 2**

ತನ್ಮಾತ್ರಾನುತ್ಪಾದ್ಯತ್ವಂ ಎಂದರೆ ತದಿತರಾನುತ್ಪಾದ್ಯತ್ವೇ ಸತಿ ತದುತ್ಪಾದ್ಯತ್ವರೂಪ ತನ್ಮಾತ್ರೋತ್ಪಾದ್ಯತ್ವಸ್ಯ ಅಭಾವಃ, ಅಥವಾ, ತದಿತರಾನುತ್ಪಾದ್ಯತ್ವಮಾತ್ರ ಎಂದು ಪರಿಗಣಿಸಿದಾಗ ಇಂತಹ ಹೇತುವು ಘಟಪಟಾನ್ಯತರತ್ವದಲ್ಲಿ ಮಾತ್ರಪದ ಇಲ್ಲದಿದ್ದಾಗ ಬರುವುದರಿಂದ ವ್ಯಭಿಚಾರಕ್ಕೆ ಅವಕಾಶವಿದೆ. ಅದರ ಪರಿಹಾರಕ್ಕಾಗಿ ಪ್ರಥಮಮಾತ್ರಪದ ಸಾರ್ಥಕ. ಈ ಪಕ್ಷದಲ್ಲಿ ಮೂಲಪಾಠ–

**हेतौ प्रथममात्रपदाभावे एतद्घटपटान्यतरत्वे व्यभिचारः। घटत्वपटत्वयो कार्यतावच्छेदकयोरेतद्घटपटान्यतरत्वाधिकरणामात्र- वृत्तित्वाभावेन**

साध्याभावात् । अन्यतरत्वस्य च स्वानुगतकारणा- भावेन कार्यनानवच्छेदकत्वात् ।

हेतुस्तत्र वर्तते । अन्यतरत्वाश्रयावृत्तिकुड्यत्वा-दिरूपधर्मावच्छिन्ना या कार्यता तत्प्रतियोगिककारणत्वाश्रयीभूतं यत्कुड्यकारणं तन्मात्रानुत्पाद्ये एतद्घटपटरूपे कार्येऽन्यतरत्वस्य वृत्तेः।

मात्रपदे दत्ते तु न व्यभिचारः । स्वाश्रयमात्रावृत्तिपदेन अन्यतरत्वाधिकदेशवर्तिनोः घटपटत्वयोरपि सङ्गृहीतत्वेन तदवच्छिन्नकार्यताः प्रतियोगिककारणत्वाश्रयीभूतं यद्घटादिकारणं तन्मात्रोत्पाद्ये घटादावप्यन्यतरत्वस्य वृत्त्या तदनुत्पाद्यकार्यमात्रवृत्तित्वरूप-हेत्वभावात् ।।

ಈ ಎರಡು ಪಾಠಗಳಲ್ಲಿ ಮೊದಲನೆಯ ಪಾಠವು ರಾಯರಿಗೆ ಸಮ್ಮತ. ಎರಡನೆಯ ಪಾಠವನ್ನು 'ಕ್ವಚಿತ್ತು=ಕೆಲವು ಮೂಲಪ್ರತಿಗಳಲ್ಲಿ' ಎಂದು ಉಲ್ಲೇಖಿಸಿದ್ದಾರೆ.

**द्वितीयमात्रपदाभावेऽसिद्धिः। अनित्यप्रमात्वस्य स्वाश्रयाधिकदेशवृत्तिनाऽनित्यज्ञानत्वेन अवच्छिन्ना या कार्यता तत्प्रतियोगिककारणत्वाश्रयो यो मनःसंयोगादिः तदुत्पाद्यप्रमारूपकार्यवृत्तित्वेन तदनुत्पाद्यकार्य-वृत्तित्वाभावात् । मात्रपदे दत्ते तु नासिद्धिः । प्रमाया ज्ञानसामान्यकारणोत्पाद्यत्वेऽपि तन्मात्रानुत्पाद्यत्वात् । तथात्वे ह्यप्रमापि प्रमा स्यात् ।।**

ಹೇತುವಿನಲ್ಲಿ ಎರಡನೆಯ ಮಾತ್ರಪದ ಬಿಟ್ಟರೆ ಸ್ವರೂಪಾಸಿದ್ಧಿ ಬರುತ್ತದೆ. ಹೇತು-ಸ್ವಾಶ್ರಯಮಾತ್ರಾವೃತ್ತಿ- ಧರ್ಮಾವಚ್ಛಿನ್ನ-ಕಾರ್ಯತಾನಿರೂಪಿತ-ಕಾರಣತ್ವಾಶ್ರಯ-ಮಾತ್ರ-ಅನುತ್ಪಾದ್ಯ-ಕಾರ್ಯಮಾತ್ರವೃತ್ತಿಧರ್ಮತ್ವ. ಇಲ್ಲಿ ಎರಡನೆಯ ಮಾತ್ರಪದವು ಇಲ್ಲದಿದ್ದರೆ ಅನಿತ್ಯಪ್ರಮಾತ್ವದಲ್ಲಿ ಈ ಹೇತು ಬರುವುದಿಲ್ಲ. ಹೇಗೆಂದರೆ- ಸ್ವ=ಅನಿತ್ಯಪ್ರಮಾತ್ವ, ಅದಕ್ಕೆ ಆಶ್ರಯ ಅನಿತ್ಯಪ್ರಮಾ. ತನ್ಮಾತ್ರದಲ್ಲಿ ಅವೃತ್ತಿಯಾದ ಧರ್ಮ, ಅದಕ್ಕಿಂತ ಅಧಿಕದೇಶವೃತ್ತಿಯಾದ ಅನಿತ್ಯಜ್ಞಾನತ್ವ. ತದವಚ್ಛಿನ್ನಕಾರ್ಯತಾನಿರೂಪಿತ-ಕಾರಣತಾಶ್ರಯವಾದುದು, ಅನಿತ್ಯಜ್ಞಾನಕ್ಕೆ ಕಾರಣವಾದ ಆತ್ಮಮನಃಸಂಯೋಗಾದಿಗಳು. ಅವುಗಳಿಂದ ಉತ್ಪಾದ್ಯಕಾರ್ಯ=ಅನಿತ್ಯಪ್ರಮಾ. ಅನಿತ್ಯಪ್ರಮಾ ಉತ್ಪತ್ತಿಯಾಗಬೇಕಾದರೂ ಆತ್ಮಮನಃಸಂಯೋಗಾದಿಗಳು ಬೇಕೇಬೇಕು. ಹೀಗೆ ಅನಿತ್ಯಪ್ರಮಾತ್ವವು ತದುತ್ಪಾದ್ಯಕಾರ್ಯವೃತ್ತಿಯೇ ಆಗಿದೆ, ಅನುತ್ಪಾದ್ಯವೃತ್ತಿ ಅಲ್ಲ. ಆದ್ದರಿಂದ ಅಸಿದ್ಧಿ.

ಮಾತ್ರಪದವನ್ನು ಕೊಟ್ಟಾಗ ಈ ಅಸಿದ್ಧಿಯು ಪರಿಹಾರವಾಗುತ್ತದೆ. ಅನಿತ್ಯಪ್ರಮೆಯು ಜ್ಞಾನ ಸಾಮಾನ್ಯಕಾರಣದಿಂದ ಉತ್ಪಾದ್ಯವಾದರೂ ತನ್ಮಾತ್ರದಿಂದ ಉತ್ಪಾದ್ಯವಲ್ಲ. ಅದಕ್ಕಿಂತಲೂ ಅಧಿಕ ವಾದ ಗುಣದಿಂದ ಉತ್ಪಾದ್ಯ. ಜ್ಞಾನಸಾಮಾನ್ಯಕಾರಣದಿಂದಷ್ಟೇ ಉತ್ಪಾದ್ಯವಾದರೆ, ಅಪ್ರಮಾವೂ ಅದರಿಂದ ಉತ್ಪಾದ್ಯವಾದುದರಿಂದ, ಅದೂ ಪ್ರಮಾವಾಗಬೇಕಾದೀತು. ಆದ್ದರಿಂದ ಜ್ಞಾನಸಾಮಾನ್ಯ ಕಾರಣದ ಜೊತೆಗೆ ಗುಣದಿಂದಲೂ ಉತ್ಪಾದ್ಯವಾದುದರಿಂದ ಅಸಿದ್ಧಿ ಇಲ್ಲ.

## ನ್ಯಾಯದೀಪ

**ತಥಾತ್ವೇ=ತನ್ಮಾತ್ರೋತ್ಪಾದ್ಯತ್ವೇ ಇತ್ಯರ್ಥಃ ।**

ಮೂಲದಲ್ಲಿ ತಥಾತ್ವೇ ಎಂದರೆ ಪ್ರಮಾವು ಜ್ಞಾನಸಾಮಾನ್ಯಕಾರಣದಿಂದಷ್ಟೇ ಉತ್ಪಾದ್ಯವಾದಲ್ಲಿ (ಭ್ರಮೆಯೂ ಪ್ರಮೆಯಾದೀತು) ಎಂದರ್ಥ.

**तृतीयं मात्रपदं तु कार्याकार्यवृत्तिधर्मेषु व्यभिचारवारणाय इति चेत्।**

ಮೂರನೆಯ ಮಾತ್ರಪದವನ್ನು ಬಿಟ್ಟರೆ–ತನ್ಮಾತ್ರಾನುತ್ಪಾದ್ಯ–ಕಾರ್ಯವೃತ್ತಿ–ಧರ್ಮತ್ವಾತ್ ಎಂದು ಹೇತುವಾಗುತ್ತದೆ. ಆಗ, ಜ್ಞಾನಸಾಮಾನ್ಯಕಾರಣದಿಂದ ಅನುತ್ಪಾದ್ಯವಾದ ಕಾರ್ಯ ಎಂದರೆ ಅನಿತ್ಯಪ್ರಮಾ. ತದ್‌ವೃತ್ತಿಧರ್ಮವೆಂದರೆ, ಪ್ರಮಾತ್ವ. ಅದರಲ್ಲಿ ಹೇತು ಬಂತು. ಆದರೆ, ಸಾಧ್ಯ ಇಲ್ಲ. ಏಕೆಂದರೆ, ಸ್ವಾಶ್ರಯಮಾತ್ರವೃತ್ತಿ ಧರ್ಮಾವಚ್ಛಿನ್ನಕಾರ್ಯತಾಶ್ರಯಮಾತ್ರವೃತ್ತಿ, ಇದು ಸಾಧ್ಯ. ಆದರೆ ಪ್ರಮಾತ್ವವು ಕಾರ್ಯತಾಶ್ರಯದಲ್ಲಿ ಮಾತ್ರ ಇಲ್ಲ. ಅದು ನಿತ್ಯಪ್ರಮಾದಲ್ಲೂ ಇದೆಯಾದುದರಿಂದ ಕಾರ್ಯಾಕಾರ್ಯವೃತ್ತಿ. ಆದ್ದರಿಂದ ಸಾಧ್ಯ ಇಲ್ಲ. ಹೀಗೆ ವ್ಯಭಿಚಾರ. ಹೇತುವಿನಲ್ಲಿ ಮಾತ್ರಪದವಿದ್ದರೆ ಪ್ರಮಾತ್ವವು ಕಾರ್ಯಮಾತ್ರವೃತ್ತಿಧರ್ಮವಲ್ಲವಾದುದರಿಂದ ಹೇತುವೂ ಇಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ.

ಹೀಗೆ ಪೂರ್ವೋಕ್ತಾನುಮಾನದಿಂದ ಅನನುಗತ ಗುಣಜನ್ಯತ್ವವನ್ನು ಸಾಧಿಸಲಾಗಿದೆ.

**मैवम् । स्वतस्त्वेऽपि अनित्यप्रमामात्रवृत्तिना तत्तत्प्रमात्वरूपेण धर्मेणावच्छिन्ना या तत्तत्प्रागभावनिरूपिता कार्यता तदाश्रयमात्रवृत्तित्वस्यानित्यप्रमात्वे सत्वेन सिद्धसाधनात् ।**

**नच प्रागभावस्यापि तत्तत्प्रागभावत्त्वेन तत्तद्व्यक्तिं प्रति न हेतुता किन्तु प्रागभावत्त्वेन कार्यमात्रं प्रति हेतुतेति वाच्यम् । उत्पन्नस्य घटस्य स्वप्रागभावाभावेऽपि अन्यप्रागभावसत्वेन पुनरुत्पत्ति-दोषतादवस्थ्यात् ।**

ಈ ಅನುಮಾನ ಸರಿಯಲ್ಲ. ಸಿದ್ಧಸಾಧನತಾದೋಷ ಇದೆ. ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದರೂ ಈ ಸಾಧ್ಯವನ್ನು ಸಮನ್ವಯ ಮಾಡಬಹುದು. ಹೇಗೆಂದರೆ, ಅನಿತ್ಯ ಪ್ರಮಾಮಾತ್ರ ವೃತ್ತಿಧರ್ಮ ಎಂದರೆ, ತತ್ತತ್‌ಪ್ರಮಾತ್ವ. ತದವಚ್ಛಿನ್ನಕಾರ್ಯತಾ=ತತ್ತತ್‌ಪ್ರಮಾನಿಷ್ಠಾ ಕಾರ್ಯತಾ. ತನ್ನಿರೂಪಿತಕಾರಣತಾ=ತತ್ತತ್‌ಪ್ರಮಾಪ್ರಾಗಭಾವತ್ವಾವಚ್ಛಿನ್ನಕಾರಣತಾ. ತತ್ತತ್‌ಪ್ರಮಾಂ ಪ್ರತಿ ತತ್ತತ್‌ಪ್ರಾಗಭಾವಃ ಕಾರಣಮ್, ಎಂದು ಕಾರ್ಯಕಾರಣಭಾವ. ತಾದೃಶಕಾರಣತಾನಿರೂಪಿತ ಕಾರ್ಯತಾಶ್ರಯ=ತತ್ತತ್‌ಪ್ರಮಾ. ತನ್ಮಾತ್ರವೃತ್ತಿತ್ವವು ಅನಿತ್ಯಪ್ರಮಾತ್ವದಲ್ಲಿ ಇದೆ. ಹೀಗೆ, ಪ್ರಾಗಭಾವರೂಪಕಾರಣವನ್ನು ಹೇಳಿಯೂ ಸಾಧ್ಯವನ್ನು ಪರ್ಯವಸಾನಮಾಡಬಹುದಾದ್ದರಿಂದ ಗುಣಜನ್ಯತ್ವದ ಅನಿವಾರ್ಯತೆ ಇಲ್ಲ. ಆದ್ದರಿಂದ ಸಿದ್ಧಸಾಧನತಾ.

ಈ ಸಿದ್ಧಸಾಧನತಾದೋಷವನ್ನು ಹೀಗೆ ಪರಿಹರಿಸಬೇಕು– ಪ್ರಾಗಭಾವವು ಕಾರ್ಯಗಳಿಗೆ ತತ್ತದ್ವಸ್ತುಪ್ರಾಗಭಾವತ್ವೇನ ಕಾರಣವಲ್ಲ. ಪ್ರಾಗಭಾವತ್ವೇನ ಅನುಗತರೂಪೇಣ ಕಾರಣ. ಆದ್ದರಿಂದ ಅನಿತ್ಯಪ್ರಮಾತ್ವಾಶ್ರಯಮಾತ್ರವೃತ್ತಿಧರ್ಮಪದದಿಂದ ತತ್ತತ್‌ಪ್ರಮಾತ್ವವನ್ನು ತೆಗೆದುಕೊಂಡು ತದವಚ್ಛಿನ್ನಕ್ಕೆ ತತ್ತತ್‌ಪ್ರಾಗಭಾವಕಾರಣ ಎಂಬ ಕಾರ್ಯ–ಕಾರಣಭಾವವೇ ಇಲ್ಲ, ಎಂದು.

ಆದರೆ, ಇದು ಸರಿಯಲ್ಲ. ಪ್ರಾಗಭಾವವು ಪ್ರಾಗಭಾವತ್ವೇನ ಕಾರಣವಾದರೆ ಪ್ರಾಗಭಾವ ಅಂಗೀಕಾರವೇ ವ್ಯರ್ಥವಾದೀತು. ಉತ್ಪನ್ನವಾದ ಘಟವು ಪುನಃ ಉತ್ಪನ್ನವಾಗಲಿ, ಎಂಬ ಆಪತ್ತಿಯ ಪರಿಹಾರಕ್ಕಾಗಿ ಪ್ರಾಗಭಾವವನ್ನು ಅಂಗೀಕರಿಸಲಾಗಿದೆ. ಘಟವು ಹುಟ್ಟಿದ ಮೇಲೆ ಇತರ ಎಲ್ಲ ಕಾರಣಗಳು ಇದ್ದರೂ ತದ್‌ಘಟಪ್ರಾಗಭಾವವು ಇಲ್ಲದಿರುವುದರಿಂದ ಅದೇ ಘಟವು ಪುನಃ ಹುಟ್ಟುವುದಿಲ್ಲ. ಒಂದುವೇಳೆ ಪ್ರಾಗಭಾವವು ಪ್ರಾಗಭಾವತ್ವೇನ ಕಾರಣವಾದರೆ ಆ ಪ್ರಾಗಭಾವ ಇಲ್ಲದೇ ಹೋದರೂ, ಅದೇ ಕಪಾಲದಲ್ಲಿ ಈ ಘಟ ನಾಶವಾಗಿ ಘಟಾಂತರವು ಹುಟ್ಟುವ ಸಂದರ್ಭದಲ್ಲಿ, ಉತ್ಪತ್ಸ್ಯಮಾನಘಟದ ಪ್ರಾಗಭಾವವು ಇರುವುದರಿಂದ ಉತ್ಪನ್ನಘಟವು ಪುನರುತ್ಪನ್ನವಾಗಲಿ, ಎಂಬ ಆಪತ್ತಿ ಬಂದೇ ಬರುತ್ತದೆ. ಇದನ್ನು ಪರಿಹಾರ ಮಾಡಬೇಕಾದರೆ ಪ್ರಾಗಭಾವವು ತತ್ತತ್‌ಪ್ರಾಗಭಾವತ್ವೇನ ಕಾರಣ, ಎಂದೇ ಹೇಳಬೇಕು. ಆದ್ದರಿಂದ ಹಿಂದೆ ಹೇಳಿದ ಸಿದ್ಧಸಾಧನತಾದೋಷ ಇದ್ದೇ ಇದೆ.

## ನ್ಯಾಯದೀಪ

**ಕಾರ್ಯಾಕಾರ್ಯೇತಿ ।। ಪ್ರಮಾತ್ವಾದೌ ಇತ್ಯರ್ಥಃ । ಅನಿತ್ಯಜ್ಞಾನತ್ವಸ್ಯ ತತಃ ಅಧಿಕದೇಶವೃತ್ತಿತ್ವೇನ ತತ್ರ ಸಾಧ್ಯಾಭಾವಾತ್ ಇತ್ಯರ್ಥಃ ।**

**ಪ್ರಾಗಭಾವನಿರೂಪಿತಾ=ಪ್ರಾಗಭಾವನಿಷ್ಠಕಾರಣತಾನಿರೂಪಿತಾ, ತತ್ತತ್‌ಪ್ರಮಾ-ತ್ವಾವಚ್ಛಿನ್ನ ಕಾರ್ಯತಾ ಇತ್ಯರ್ಥಃ ।**

**ಉತ್ಪನ್ನಸ್ಯೇತಿ ॥ ಘಟೋತ್ಪತ್ತಿಸಮವಹಿತೋತ್ತರಕ್ಷಣೇ ತದ್–ಘಟ–ಸಾಮಗ್ರೀಸತ್ತ್ವೇನ ತಯಾ ತಸ್ಯೈವ ಘಟಸ್ಯ ಪುನರುತ್ಪತ್ತಿಪ್ರಸಂಗದೋಷ–ನಿರಾಸಾಯ ಹಿ ಪ್ರಾಗಭಾವೇ ಹೇತುರುಕ್ತಾ । ಪ್ರಾಗಭಾವತ್ವೇನೈವ ಹೇತುತ್ವೇ ಹೇತುತಾವಚ್ಛೇದಕಾವಚ್ಛಿನ್ನ–ಯತ್ಕಿಂಚಿದ್ಧೇತುಸತ್ವೇಽಪಿ ಕಾರ್ಯೋತ್ಪತ್ತಿನಿಯಮೇನ ತಾದೃಶಪ್ರಾಗಭಾವಾಂತರಸತ್ವಾತ್ ಪುನಃ ತದುತ್ಪತ್ತಿದೋಷಃ ನ ಪರಿಹೃತ ಏವ ಸ್ಯಾತ್ ಇತಿ ನ ಪ್ರಾಗಭಾವತ್ವೇನ ಹೇತುತಾ, ಕಿಂತು ತತ್ತತ್ಪ್ರಾಗಭಾವತ್ವೇನ ಇತಿ ಪ್ರಾಗುಕ್ತದೋಷ ಏವೇತಿ ಭಾವಃ ॥**

ಮೂಲದಲ್ಲಿ ಕಾರ್ಯಾಕಾರ್ಯವೃತ್ತಿಧರ್ಮವೆಂದರೆ–ಪ್ರಮಾತ್ವ ಮುಂತಾದ ಧರ್ಮಗಳು. ಪ್ರಮಾತ್ವವು ಅನಿತ್ಯ–ನಿತ್ಯಪ್ರಮಾಗಳಲ್ಲಿ ಇರುವುದರಿಂದ ಕಾರ್ಯಾಕಾರ್ಯವೃತ್ತಿಯಾಗಿದೆ. ಜ್ಞಾನತ್ವವೂ ಅಂತಹ ಧರ್ಮ.

ಅನಿತ್ಯಜ್ಞಾನತ್ವವು ಭ್ರಮೆಯಲ್ಲೂ ಇರುವುದರಿಂದ ಪ್ರಮಾತ್ವಕ್ಕಿಂತ ಅಧಿಕದೇಶವೃತ್ತಿಯಾಗಿದೆ. ಆದ್ದರಿಂದ ಅದು ಪ್ರಮಾತ್ವಾಶ್ರಯಮಾತ್ರ ವೃತ್ತಿಧರ್ಮವಲ್ಲ. ಒಂದುವೇಳೆ ಅನಿತ್ಯಜ್ಞಾನತ್ವದ ಸಂಗ್ರಹವಾಗಿದ್ದಿದ್ದರೆ ಸಾಧ್ಯವು ಬರುತ್ತಿತ್ತು. ಮಾತ್ರಪದವಿರುವುದರಿಂದ ಅದು ಸಂಗ್ರಹವಾಗುವುದಿಲ್ಲ. ಕಿಂತು, ತತ್ತತ್ ಪ್ರಮಾತ್ವವೇ. ಆದ್ದರಿಂದ ಪ್ರಮಾತ್ವದಲ್ಲಿ ಸಾಧ್ಯ ಇಲ್ಲ.

ಮೂಲದಲ್ಲಿ, ಪ್ರಾಗಭಾವ ನಿರೂಪಿತಾ ಕಾರ್ಯತಾ, ಎಂದಿದೆ. ಅದಕ್ಕೆ ಅರ್ಥ–ಪ್ರಾಗಭಾವ ನಿಷ್ಠಕಾರಣತಾ–ನಿರೂಪಿತಕಾರ್ಯತಾ ಎಂದು.

ಉತ್ಪನ್ನವಾದ ಘಟಾದಿ ವಸ್ತುವಿನ ಅವ್ಯವಹಿತೋತ್ತರಕ್ಷಣದಲ್ಲಿ ಆ ಘಟಕ್ಕೆ ಬೇಕಾದ ಸಾಮಗ್ರೀಗಳೆಲ್ಲವೂ ಇರುವುದರಿಂದ ಅದೇ ಘಟವು ಮತ್ತೆ ಹುಟ್ಟಲಿ ಎಂಬ ಆಪತ್ತಿಯ ಪರಿಹಾರವೇ ಪ್ರಾಗಭಾವಾಂಗೀಕಾರಕ್ಕೆ ಹೇತು. ಪ್ರಾಗಭಾವವು ಪ್ರಾಗಭಾವತ್ವೇನ ಕಾರಣವಾದರೆ ತತ್ಪ್ರಾಗಭಾವ ಇಲ್ಲದಿದ್ದರೂ ಹೇತುತಾವಚ್ಛೇದಕವಾದ ಪ್ರಾಗಭಾವತ್ವಾವಚ್ಛಿನ್ನ ಯತ್ಕಿಂಚಿತ್ ಪ್ರಾಗಭಾವವು ಇರುವ ಕಾರಣ ಉತ್ಪನ್ನವು ಪುನರುತ್ಪತ್ತಿಯಾಗಬೇಕಾದ ಅನಿವಾರ್ಯತೆ ಇದ್ದೇ ಇದೆ. ಅದರ ಪರಿಹಾರಕ್ಕಾಗಿ ಪ್ರಾಗಭಾವವು ತತ್ತತ್ಪ್ರಾಗಭಾವತ್ವೇನೈವ ಹೇತುವಾಗಬೇಕು. ಆಗ ಸಿದ್ಧಸಾಧನತಾ ಇದ್ದೇ ಇದೆ.

**यदितु सिद्धसाधनतावारणाय साध्ये कार्यताशब्देन भावकारण-निरूपिता कार्यताऽभिप्रेता । तर्हि सामान्यकारणमात्रानुत्पाद्यकार्य-मात्रवृत्तित्वहेतोरभावरूपविशेषकारणेनापि उपपत्त्याऽप्रयोजकता । तत्तद्घटत्वादौ व्यभिचारश्च । तद्वारणाय हेतावपि कार्यमात्रेत्यत्र कार्यशब्देन भावकारणोत्पाद्यकार्यविवक्षायां स्वतस्त्ववादिनं**

**प्रत्यसिद्धिः । प्रत्यक्षप्रमादौ इन्द्रियार्थसन्निकर्षादेर्गुणस्य सत्वान्नासिद्धिरित्यादि तु अनुपदमेव निरसिष्यते ।।**

ಹಿಂದೆ ಹೇಳಿದ ಸಿದ್ಧಸಾಧನತಾವನ್ನು ಹೀಗೆ ಪರಿಹರಿಸಬಹುದು–ಸಾಧ್ಯದಲ್ಲಿ ಸ್ವಾಶ್ರಯಮಾತ್ರ ವೃತ್ತಿಧರ್ಮಾವಚ್ಛಿನ್ನಕಾರ್ಯತಾ ಎಂದರೆ ಭಾವಕಾರಣ–ನಿರೂಪಿತ–ಕಾರ್ಯತಾವೇ ವಿವಕ್ಷಿತ. ತತ್ತತ್ ಪ್ರಮಾತ್ವಾವಚ್ಛಿನ್ನ ಕಾರ್ಯತಾ ಪ್ರಾಗಭಾವರೂಪ–ಅಭಾವಕಾರಣನಿರೂಪಿತ ಕಾರ್ಯತಾ. ಆದ್ದರಿಂದ ಅದನ್ನು ತೆಗೆದುಕೊಂಡು ಸಾಧ್ಯಪರ್ಯವಸಾನ ಮಾಡಲು ಸಾಧ್ಯವಿಲ್ಲ, ಎಂದು.

ಆದರೆ ಇದು ಯುಕ್ತವಲ್ಲ. ಹೀಗೆ ಹೇಳಿದರೆ ಹೇತು ಅಪ್ರಯೋಜಕವಾಗುತ್ತದೆ. ಅನಿತ್ಯಪ್ರಮಾವು ಜ್ಞಾನವಿಶೇಷವಾಗಿರುವುದರಿಂದ ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ತದತಿರಿಕ್ತವಾದ ಭಾವರೂಪವಾದ ಕಾರಣಾಂತರದ ಅಪೇಕ್ಷೆ ಅದಕ್ಕೆ ಇದೆ, ಎಂದು ಸಾಧ್ಯ–ಸಾಧನಗಳಿಗೆ ಪ್ರಯೋಜ್ಯಪ್ರಯೋಜಕಗಳನ್ನು ಹೇಳಿದಂತೆ ಆಗುತ್ತದೆ. ಆದರೆ, ಈ ರೀತಿ ಆ ವಿಶೇಷಕಾರಣವು ಭಾವರೂಪವೇ ಆಗಿರಬೇಕು, ಎಂಬ ನಿಬಂಧನೆ ಅನಾವಶ್ಯಕ. ಅದು ಅಭಾವರೂಪವೂ ಆಗಬಹುದು. ಕಾರ್ಯವಿಶೇಷವು ಕಾರಣವಿಶೇಷಪ್ರಯುಕ್ತವಾಗಿರಬೇಕು. ಭಾವರೂಪಕಾರಣ ವಿಶೇಷಪ್ರಯುಕ್ತವಾಗಿರಬೇಕೆಂದೇನಿಲ್ಲ. ಆದ್ದರಿಂದ ಹೇತುರಸ್ತು, ಸಾಧ್ಯಂ ಮಾಸ್ತು, ಎಂಬ ಅಪ್ರಯೋಜಕ ಶಂಕೆಗೆ ಅವಕಾಶವಾಗುತ್ತದೆ.

ವ್ಯಭಿಚಾರದೋಷವೂ ಪರತಸ್ತ್ವಸಾಧಕಾನುಮಾನಕ್ಕೆ ಇದೆ. ತತ್ತದ್‌ಘಟತ್ವದಲ್ಲಿ ವ್ಯಭಿಚಾರ. ಅದರಲ್ಲಿ ಸಾಧ್ಯವಿಲ್ಲ. ಸ್ವಪದದಿಂದ ಅದನ್ನು ತೆಗೆದುಕೊಂಡಾಗ ಸ್ವಾಶ್ರಯಮಾತ್ರವೃತ್ತಿಧರ್ಮ ಎಂದರೆ ಘಟತ್ವವಲ್ಲ. ಅದು ತದ್‌ಘಟತ್ವಕ್ಕಿಂತ ಅಧಿಕದೇಶವೃತ್ತಿ. ತತ್ತದ್ ಘಟತ್ವವೂ ಅಲ್ಲ. ಏಕೆಂದರೆ, ಏಕಮಾತ್ರವೃತ್ತಿತ್ವಾತ್ ಅದು ಕಾರ್ಯತಾವಚ್ಛೇದಕವೇ ಅಲ್ಲ. ಆದುದರಿಂದ ತದವಚ್ಛಿನ್ನಕಾರ್ಯತಾ ಅಪ್ರಸಿದ್ಧ.

ಈ ವ್ಯಭಿಚಾರದ ಪರಿಹಾರಕ್ಕಾಗಿ ಹೇತುವಿನಲ್ಲಿ 'ಕಾರ್ಯಮಾತ್ರವೃತ್ತಿಧರ್ಮತ್ವಾತ್' ಎಂಬಲ್ಲೂ ಕಾರ್ಯಶಬ್ದಕ್ಕೆ ಭಾವಕಾರಣದಿಂದ ಹುಟ್ಟಿರುವ ಕಾರ್ಯ ಎಂದು ಅರ್ಥಮಾಡಬೇಕು. ಆಗ ಹೇತುವೂ ಇಲ್ಲವಾದುದರಿಂದ ತದ್‌ಘಟತ್ವದಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ. ಆದರೆ, ಹೀಗೆ ಮಾಡಿದರೆ ಸ್ವತಸ್ತ್ವವಾದಿಗಳಿಗೆ ಪಕ್ಷದಲ್ಲಿ ಹೇತುವು ಅಸಿದ್ಧವಾಗುತ್ತದೆ. ಅನಿತ್ಯಪ್ರಮಾಕ್ಕೆ, ಜ್ಞಾನಸಾಮಾನ್ಯಕ್ಕೆ ಯಾವುದು ಕಾರಣವೋ ತದಧಿಕವಾದ ಭಾವರೂಪವಾದ ಕಾರಣವನ್ನು ಸ್ವತಸ್ತ್ವವಾದಿಗಳು ಅಂಗೀಕರಿಸಿಲ್ಲ. ಪ್ರತ್ಯಕ್ಷ ಪ್ರಮಾಕ್ಕೆ ಇಂದ್ರಿಯ ಸನ್ನಿಕರ್ಷವೇ ಗುಣ, ಅನುಮಿತಿಗೆ ಯಥಾರ್ಥಪರಾಮರ್ಶವೇ ಗುಣ. ಹೀಗೆ, ಭಾವರೂಪವಾದ ಕಾರಣವು ಇರುವುದರಿಂದ ಅಸಿದ್ಧಿ ಇಲ್ಲ ಎನ್ನುವುದೂ ಸರಿಯಲ್ಲ. ಇವಾವುವೂ ಗುಣಗಳಲ್ಲ, ಎಂದು ಮುಂದಿನ ಪ್ರಕರಣದಲ್ಲೇ ನಿರಾಕರಿಸಲಾಗುವುದು.

## ನ್ಯಾಯದೀಪ

**ಭಾವೇತಿ ॥ ಭಾವನಿಷ್ಠಕಾರಣತಾನಿರೂಪಿತ, ಇತ್ಯರ್ಥಃ। ಅಪ್ರಯೋಜಕತೇತಿ ॥ ಸಾಮಾನ್ಯಸಾಮಗ್ರೀಮಾತ್ರಾನುತ್ಪಾದ್ಯ- ಕಾರ್ಯಮಾತ್ರವೃತ್ತಿತ್ವಸ್ಯ ವಿಶೇಷಕಾರಣಜನ್ಯತ್ವಂ ವಿನಾ ಅನುಪಪತ್ತ್ಯಾ ತದಾಕ್ಷೇಪಕತ್ವೇಽಪಿ ವಿಶೇಷ ಕಾರಣಸ್ಯ ಭಾವತ್ವಂ ವಿನಾ ಅನುಪಪತ್ತ್ಯಭಾವೇನ ಭಾವರೂಪವಿಶೇಷ-ಕಾರಣಜನ್ಯವೃತ್ತಿತ್ವಸಾಧನೇ ಅಪ್ರಯೋಜಕತ್ವೈವ ಇತಿ ಭಾವಃ।**

ಮೂಲದಲ್ಲಿ ಭಾವಕಾರಣತಾ ಎಂದರೆ ಭಾವನಿಷ್ಠಕಾರಣತಾ ಎಂದು ಅರ್ಥ. ಭಾವನಿಷ್ಠ ಕಾರಣತಾಶ್ರಯಜನ್ಯತ್ವವನ್ನು ಸಾಧನೆ ಮಾಡಿದರೆ ಅಪ್ರಯೋಜಕತಾ ಎಂದು ಮೂಲದಲ್ಲಿ ಇದೆ. ಅಪ್ರಯೋಜಕತ್ವವನ್ನು ಹೀಗೆ ಉಪಪಾದನೆ ಮಾಡಬೇಕು– ಜನ್ಯಪ್ರಮಾತ್ವವು ಜ್ಞಾನಸಾಮಾನ್ಯ ಸಾಮಗ್ರೀಮಾತ್ರದಿಂದ ಅನುತ್ಪಾದ್ಯವಾದ ಕಾರ್ಯದಲ್ಲಿದೆ, ಎಂಬ ಹೇತುವನ್ನು ಸಮರ್ಥಿಸ ಬೇಕಾದರೆ ಪ್ರಮಾತ್ವಕ್ಕೆ ಆಶ್ರಯವಾದ ಕಾರ್ಯವು ವಿಶೇಷವಾದ ಕಾರಣದಿಂದ ಜನ್ಯವಾಗಿದೆ, ಎಂದಾದರೆ ಸಾಕು. ಆ ಕಾರಣವು ಭಾವರೂಪವೇ ಆಗಿರಬೇಕು ಎಂಬ ನಿರ್ಬಂಧದ ಅಗತ್ಯವಿಲ್ಲ. ಹೀಗಿದ್ದರೂ ಭಾವರೂಪವಾದ ವಿಶೇಷಕಾರಣದಿಂದ ಜನ್ಯವಾಗಿದೆ, ಎಂದು ಸಾಧನೆ ಮಾಡಿದರೆ, ಅಪ್ರಯೋಜಕತಾ.

## ನ್ಯಾಯದೀಪ

**ತತ್ತದ್‌ಘಟತ್ವೇತಿ ॥ ಘಟತ್ವೇನ ಮೃತ್‌ಪಿಂಡತ್ವೇನೈವ ಕಾರ್ಯಕಾರಣಭಾವಃ। ನ ತದ್‌ಘಟತ್ವೇನ ಮೃತ್‌ಪಿಂಡತ್ವೇನ ಹೇತುಹೇತುಮದ್‌ಭಾವಃ। ಏಕವ್ಯಕ್ತಿಕತ್ವೇನ ಬಾಧಕೇನ ತದ್‌ಘಟತ್ವಸ್ಯ ಕಾರ್ಯತಾನವಚ್ಛೇದಕತ್ವಾತ್। ಬಾಧಕಂ ವಿನಾ ಕಾರ್ಯಮಾತ್ರವೃತ್ತಿಧರ್ಮತ್ವಾತ್, ಇತಿ ಹೇತುನೈವ ಕಾರ್ಯತಾವಚ್ಛೇದಕತ್ವಸಾಧನಾತ್। ತಥಾಚ ಸ್ವಾಶ್ರಯಮಾತ್ರವೃತ್ತೇಃ ಸ್ವಸ್ಯ ವಾ ಅನ್ಯಸ್ಯ ವಾ ಧರ್ಮಸ್ಯ ಕಾರ್ಯತಾವಚ್ಛೇದಕಸ್ಯ ಅಭಾವೇನ ತದವಚ್ಛಿನ್ನ-ಕಾರ್ಯತಾಶ್ರಯಮಾತ್ರವೃತ್ತಿತ್ವರೂಪಸಾಧ್ಯಾಭಾವೇನ,ಸ್ವಾಶ್ರಯಮಾತ್ರ ಅವೃತ್ತಿ-ಘಟತ್ವರೂಪಧರ್ಮಾವಚ್ಛಿನ್ನ-ಕಾರ್ಯತಾಪ್ರತಿಯೋಗಿಕ-ಕಾರಣಮಾತ್ರಾ-ನುತ್ಪಾದ್ಯಕಾರ್ಯಂ ತದ್‌ಘಟ ಏವ, ಸ್ವಪ್ರಾಗಭಾವಭೂತಾಧಿಕಕಾರಣಜನ್ಯತ್ವಾತ್। ತಥಾಚ ತನ್ಮಾತ್ರವೃತ್ತಿತ್ವರೂಪಹೇತುಸತ್ತ್ವಾತ್ ವ್ಯಭಿಚಾರ ಇತ್ಯರ್ಥಃ ॥**

ಮೂಲದಲ್ಲಿ ತತ್ತದ್ ಘಟತ್ವದಲ್ಲಿ ವ್ಯಭಿಚಾರವನ್ನು ಹೇಳಲಾಗಿದೆ. ಅದರ ಸಮರ್ಥನೆ ಹೀಗೆ— ಘಟಂ ಪ್ರತಿ ಮೃತ್ಪಿಂಡಃ ಕಾರಣಂ ಎಂದೇ ಕಾರ್ಯಕಾರಣಭಾವ. ಹೊರತು, ತದ್ ಘಟಂ

ಪ್ರತಿ ಏತತ್‌ಮೃತ್ಪಿಂಡಃ ಕಾರಣಮ್ ಎಂದಲ್ಲ. ಹೀಗೆ ಕಾರ್ಯತಾವಚ್ಛೇಕ ಘಟತ್ವ ಹೊರತು, ತದ್‌ಘಟತ್ವ ಅಲ್ಲ. ಅದು ಏವಮಾತ್ರವೃತ್ತಿಧರ್ಮವಾದ ಕಾರಣದಿಂದಾಗಿ ಕಾರ್ಯತಾವಚ್ಛೇದಕ ವಲ್ಲ. ಬಾಧಕವಿಲ್ಲದಿದ್ದರೆ ಮಾತ್ರ ಕಾರ್ಯಮಾತ್ರ ವೃತ್ತಿಧರ್ಮವು ಕಾರ್ಯತಾವಚ್ಛೇದಕವಾಗುತ್ತದೆ. ಪ್ರಕೃತದಲ್ಲಿ ಏಕವ್ಯಕ್ತಿಕತ್ವರೂಪ ಬಾಧಕವೇ ಇದೆ. ಆದ್ದರಿಂದ ಪ್ರಕೃತ ಸಾಧ್ಯದಲ್ಲಿರುವ ಸ್ವಪದದಿಂದ ತದ್‌ಘಟತ್ವವನ್ನು ತೆಗೆದುಕೊಂಡರೆ ತದಾಶ್ರಯಮಾತ್ರದಲ್ಲಿ (ತದ್‌ಘಟದಲ್ಲಿ ಮಾತ್ರ) ಇರುವ ಧರ್ಮ ಘಟತ್ವ ಅಲ್ಲ. ತದ್‌ಘಟತ್ವ ಅಥವಾ ತದ್‌ವ್ಯಕ್ತಿತ್ವ. ಅದು ಎರಡೂ ಏಕಮಾತ್ರ ವೃತ್ತಿತ್ವಾತ್ ಕಾರ್ಯತಾವಚ್ಛೇದಕವಲ್ಲ. ತದವಚ್ಛಿನ್ನಕಾರ್ಯತಾ ಅಪ್ರಸಿದ್ಧ. ಆದ್ದರಿಂದ ತದ್‌ಘಟತ್ವದಲ್ಲಿ ಸಾಧ್ಯ ಇಲ್ಲ. ಹೇತು ಇದೆ–ಸ್ವಾಶ್ರಯವಾದ ತದ್‌ಘಟದಲ್ಲಿ ಮಾತ್ರ ಅವೃತ್ತಿ ಧರ್ಮ=ಘಟತ್ವ ತದವಚ್ಛಿನ್ನಕಾರ್ಯತಾ ನಿರೂಪಿತ ಕಾರಣತಾವತ್ತಾದುದು ದಂಡಾದಿಗಳು. ತನ್ಮಾತ್ರದಿಂದ ಅನುತ್ಪಾದ್ಯ ಕಾರ್ಯ ತದ್‌ಘಟ. ಏಕೆಂದರೆ, ಅದಕ್ಕೆ ಸ್ವಪ್ರಾಗಭಾವರೂಪವಾದ ಅಧಿಕವಾದ ಕಾರಣ ಬೇಕು. ಹೀಗೆ ತದ್‌ಘಟಮಾತ್ರ ವೃತ್ತಿತ್ವ ಎಂಬ ಹೇತುವು ತದ್‌ಘಟತ್ವದಲ್ಲಿ ಇದೆ. ಆದ್ದರಿಂದ ವ್ಯಭಿಚಾರ.

## ನ್ಯಾಯದೀಪ

**ಯತ್ಸಾಮಾನ್ಯನ್ಯಾಯೇನ ವಿಶೇಷಯೋಃ ಕಾರ್ಯಕಾರಣಭಾವಃ ನ ತತ್ತ್ವೇನ ರೂಪೇಣ ಕಿಂತು ಸಾಮಾನ್ಯೇನೈವ। ನ ಚೈವಂ ತನ್ಮೃತ್ಪಿಂಡತ್ವೇನ ಹೇತು–ಹೇತುವದ್ಭಾವಾಭಾವೇ ಮೃತ್ಪಿಂಡಾಂತರಾತ್ ಏತದ್‌ಘಟೋತ್ಪತ್ತಿಃ ಸ್ಯಾತ್ ಇತಿ ವಾಚ್ಯಮ್। ಮೃತ್ಪಿಂಡಾಂತರೇ ಏತದ್-ಘಟಪ್ರಾಗಭಾವಾಭಾವಾದೇವ ತತ ಉತ್ಪತ್ತ್ಯಪ್ರಸಕ್ತೇಃ। ತತ್ತತ್ ಪ್ರಾಗಭಾವತ್ವೇನ ಹೇತುತ್ವಕಲ್ಪನಂ ಪೂರ್ವೋಕ್ತದಿಶಾ ಉತ್ಪನ್ನಸ್ಯ ಪುನರುತ್ಪತ್ತಿಬಾಧಕಾದೇವ ಇತಿ ಭಾವಃ॥**

ಯದ್ಯಪಿ ಘಟಸಾಮಾನ್ಯಕ್ಕೂ ಮೃತ್ಪಿಂಡಕ್ಕೂ ಇರುವ ಸಾಮಾನ್ಯಕಾರ್ಯ–ಕಾರಣಭಾವ ದಿಂದ, 'ಯತ್ಸಾಮಾನ್ಯಯೋಃ' ಎಂಬ ನ್ಯಾಯದಂತೆ, ತದ್‌ಘಟ–ತತ್‌ಮೃತ್ಪಿಂಡರೂಪ ಕಾರ್ಯ ವಿಶೇಷಗಳಿಗೂ ಕಾರ್ಯಕಾರಣಭಾವವನ್ನೂ ಹೇಳಬೇಕು. ಆದರೂ ಯತ್ಸಾಮಾನ್ಯಯೋಃ ಇತ್ಯಾದಿ ನ್ಯಾಯದಲ್ಲಿ ವಿಶೇಷವೆಂದರೆ, ತದ್‌ಘಟತ್ವಾದಿಗಳಲ್ಲ. ಕಿಂತು ತದೇತತಾದಿಗಳಲ್ಲಿ ಸಾಮಾನ್ಯವಾದ ಒಂದು ಅನುಗತಧರ್ಮಾವಚ್ಛೇದೇನ ಕಾರ್ಯಕಾರಣಭಾವವೇ ವಿಶೇಷಕಾರ್ಯಕಾರಣಭಾವ. ಆದ್ದರಿಂದ ತದ್‌ಘಟಕ್ಕೆ ಏತತ್–ಮೃತ್‌ಕಾರಣ, ಎಂದು ಕಾರ್ಯಕಾರಣಭಾವ ಅಪ್ರಾಮಾಣಿಕ.

ತದ್‌ಘಟಕ್ಕೆ ಏತತ್–ಮೃತ್ಪಿಂಡಕಾರಣ ಎಂದು ಒಪ್ಪದಿದ್ದಲ್ಲಿ ಮೃತ್‌ಪಿಂಡಾಂರತದಿಂದ ಏತದ್‌ಘಟವು ಹುಟ್ಟಲಿ, ಎಂಬ ಆಪತ್ತಿಯನ್ನು ಪರಿಹಾರಮಾಡುವುದು ಹೇಗೆ? ಎಂದರೆ, ಮೃತ್ಪಿಂಡಾಂತರದಲ್ಲಿ ಏತದ್‌ಘಟಪ್ರಾಗಭಾವವು ಇಲ್ಲವಾದುದರಿಂದಲೇ ಅದರಿಂದ ಈ ಘಟ ಹುಟ್ಟುವುದಿಲ್ಲ, ಎಂದು ಪರಿಹಾರ ಮಾಡಬಹುದು. ಹೀಗೆ ಹೇಳಿದಾಗ, ತತ್ತತ್ ಪ್ರಾಗಭಾವಗಳು

ತತ್ತದ್–ಘಟಕ್ಕೆ ಕಾರಣ, ಎಂದು ಕಲ್ಪಿಸಬೇಕಾಗುತ್ತದೆ. ಅದು ಅನಿವಾರ್ಯ, ಎಂದು ಹಿಂದೆಯೇ ಹೇಳಲಾಗಿದೆ. ಇಲ್ಲದಿದ್ದಲ್ಲಿ, ಉತ್ಪನ್ನವಾದ ಘಟವು ಪುನಃ ಹುಟ್ಟಲಿ ಎಂಬ ಆಕ್ಷೇಪವನ್ನು ಪರಿಹರಿಸಲಾಗದು. ಆದ್ದರಿಂದ ತದ್‌ಘಟತ್ವವು ಭಾವಕಾರಣನಿರೂಪಿತ–ಕಾರ್ಯತಾವಚ್ಛೇದಕವಾಗುವುದಿಲ್ಲ. ವ್ಯಭಿಚಾರ ಅಪರಿಹಾರ್ಯ.

## ನ್ಯಾಯದೀಪ

**ಭಾವಕಾರಣೇತಿ ॥ ಸ್ವಾಧಿಕರಣಮಾತ್ರಾವೃತ್ತಿ–ಧರ್ಮಾವಚ್ಛಿನ್ನ–ಕಾರ್ಯತಾಪ್ರತಿಯೋಗಿಕ–ಕಾರಣಮಾತ್ರಾನುತ್ಪಾದ್ಯ–ಭಾವಕಾರಣಕಾರ್ಯ–ಇತ್ಯುಕ್ತೌ ತಾದೃಶಕಾರಣಾದಧಿಕ–ಭಾವಕಾರಣಜನ್ಯ–ಕಾರ್ಯಮಾತ್ರವೃತ್ತಿತ್ವಾತ್ ಇತ್ಯರ್ಥ–ಲಾಭಾತ್ । ತದ್‌ಘಟತ್ವಾದೌ ಚ ಸ್ವಪ್ರಾಗಭಾವರೂಪ–ಅಧಿಕಕಾರಣಜನ್ಯ–ಕಾರ್ಯಮಾತ್ರವೃತ್ತಿತ್ವೇನ ಉಕ್ತಹೇತ್ವಭಾವಾತ್ ನ ವ್ಯಭಿಚಾರ ಇತಿ ಭಾವಃ ॥**

ಹೇತುವಿನಲ್ಲಿ ಭಾವಪದವನ್ನು ಸೇರಿಸಿದರೆ ತದ್‌ಘಟತ್ವದಲ್ಲಿ ವ್ಯಭಿಚಾರಪರಿಹಾರವಾಗುತ್ತದೆ. ತದ್‌ಘಟತ್ವದಲ್ಲಿ ಪ್ರಾಗಭಾವರೂಪ–ಅಧಿಕಕಾರಣ ಜನ್ಯವಾದ ಕಾರ್ಯ(ತದ್‌ಘಟ) ವೃತ್ತಿತ್ವ ಬಂದರೂ ಭಾವಕಾರಣಜನ್ಯ ಕಾರ್ಯವೃತ್ತಿತ್ವವು ಬರುವುದಿಲ್ಲ. ಆದ್ದರಿಂದ ಹೇತುವು ಇಲ್ಲ, ವ್ಯಭಿಚಾರಪರಿಹಾರವಾಗುತ್ತದೆ, ಎಂದು ಆಕ್ಷೇಪಗ್ರಂಥದ ಆಶಯ.

## ನ್ಯಾಯದೀಪ

**ಅಸಿದ್ಧಿರಿತಿ ॥ ಅನಿತ್ಯಪ್ರಮಾತ್ವವ್ಯಾಪ್ಯ ಅನಿತ್ಯಪ್ರತ್ಯಕ್ಷಪ್ರಮಾತ್ವಾದ್ಯಾಶ್ರಯನಿಷ್ಠ–ಕಾರ್ಯತಾನಿರೂಪಿತ–ಅನುಗತಗುಣಾಭಾವಾತ್ ಅನಿತ್ಯಜ್ಞಾನಸಾಮಾನ್ಯ ಸಾಮಗ್ರೀತಃ ಅಧಿಕಭಾವಕಾರಣಜನ್ಯ–ಕಾರ್ಯಮಾತ್ರವೃತ್ತಿ–ಧರ್ಮತ್ವಸ್ಯ ಅನಿತ್ಯ ಪ್ರಮಾತ್ವೇ ಅಭಾವಾತ್ ಇತಿ ಭಾವಃ। ಅತ ಏವೋಕ್ತಂ ರುಚಿದತ್ತೇನಾಪಿ 'ಸಂದಿಗ್ಧಾಸಿದ್ಧೇಃ' ಇತಿ ॥ (ಪು.332)**

ಅಸಿದ್ಧಿ ಹೀಗೆ–ಅನಿತ್ಯಪ್ರಮಾತ್ವವ್ಯಾಪ್ಯವಾದುದು ಅನಿತ್ಯಪ್ರತ್ಯಕ್ಷಪ್ರಮಾತ್ವ. ತದಾಶ್ರಯ ಕಾರ್ಯ=ಅನಿತ್ಯಪ್ರತ್ಯಕ್ಷಪ್ರಮಾ. ಅದಕ್ಕೆ ಕಾರಣವಾದ ಒಂದು ಭಾವರೂಪವಾದ ಗುಣ ಇಲ್ಲ. ಆದ್ದರಿಂದ ಅನಿತ್ಯಪ್ರಮಾತ್ವವು ಜ್ಞಾನಸಾಮಾನ್ಯಸಾಮಗ್ರಿಗಿಂತ ಅಧಿಕವಾದ ಭಾವಕಾರಣಜನ್ಯವಾದ ಪ್ರತ್ಯಕ್ಷಾದಿ ಕಾರ್ಯಮಾತ್ರವೃತ್ತಿಯಾದ ಧರ್ಮವಲ್ಲ. ಪಕ್ಷದಲ್ಲಿ ಹೇತು ಬರುವುದಿಲ್ಲವಾದ್ದರಿಂದ ಅಸಿದ್ಧಿ.

## ನ್ಯಾಯದೀಪ

**ಯತ್ತು, ಉಕ್ತಸ್ಥಲೇ ವ್ಯಭಿಚಾರವಾರಣಾಯ ಯಾವತ್‌ಕಾರ್ಯವೃತ್ತಿಧರ್ಮತ್ವಾತ್**

**ಇತಿ ವಿಶೇಷಣಮ್ । ತತ್ತದ್ ಘಟತ್ವಾದೇಶ್ಚ ತಾದೃಶ-ಏಕಕಾರ್ಯ-ಮಾತ್ರ ವೃತ್ತಿತ್ವಾತ್ ಇತಿ ಚೇನ್ನ ।[1] ತಥಾಪಿ ನೀಲಘಟತ್ವಾದೌ ವ್ಯಭಿಚಾರಾನಿರಾಸಾತ್।**

**ಏತೇನ, ಸಾಧ್ಯೇ ಸ್ವಾಶ್ರಯಮಾತ್ರವೃತ್ತಿ-ಅನೇಕ ವೃತ್ತಿ-ಧರ್ಮೇತಿ ವಿಶೇಷಣಮ್ ಇತಿ ನಿರಸ್ತಮ್ । ಅಪ್ರಯೋಜಕತ್ವ-ವ್ಯಭಿಚಾರಯೋಃ ಅಪರಿಹಾರಾತ್ । ಯಜ್ಞಪತ್ಯುಕ್ತೇಃ ಅರ್ವಾಚೀನತ್ವಾತ್ ನ ತನ್ನಿರಾಸಃ ಮೂಲಾರೂಢತಯಾ ಪ್ರದರ್ಶಿತಃ ।**

ತತ್ತದ್‌ಘಟತ್ವದಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡಬಹುದು. ಹೇತುವನ್ನು ಯಾವತ್‌ಕಾರ್ಯಮಾತ್ರವೃತ್ತಿಧರ್ಮತ್ವಾತ್, ಎಂದು ಪರಿಷ್ಕರಿಸಬೇಕು. ತದ್‌ಘಟತ್ವವು ಒಂದೇ ಕಾರ್ಯದಲ್ಲಿ ಇದೆ. ಯಾವತ್=ಅನೇಕ ಕಾರ್ಯಗಳಲ್ಲಿ ಇಲ್ಲ. ಆದ್ದರಿಂದ ಹೇತು ಬರುವುದಿಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ. ಆದರೂ, ನೀಲಘಟತ್ವದಲ್ಲಿ ವ್ಯಭಿಚಾರ ಬರುತ್ತದೆ. ಅದು ಅನೇಕ ನೀಲಘಟಗಳಲ್ಲಿ ಇದೆ. ಆದರೆ ಅದು ಕಾರ್ಯತಾವಚ್ಛೇದಕವೇ ಅಲ್ಲ. ಆದ್ದರಿಂದ ವ್ಯಭಿಚಾರ.

ಯಜ್ಞಪತಿ ಉಪಾಧ್ಯಾಯೋಕ್ತವಾದ ಅನುಮಾನಕ್ಕೆ ಅಪ್ರಯೋಜಕತ್ವ-ವ್ಯಭಿಚಾರಗಳನ್ನು ಹೇಳಿರುವುದರಿಂದ ಸಾಧ್ಯದಲ್ಲಿ 'ಸ್ವಾಶ್ರಯಮಾತ್ರವೃತ್ತಿ-ಅನೇಕಮಾತ್ರ ವೃತ್ತಿಧರ್ಮ' ಎಂಬ ವಿಶೇಷಣವನ್ನು ಸೇರಿಸಿದಾಗ ಪ್ರಾಗಭಾವಮಾದಾಯ ಸಿದ್ಧಸಾಧನತಾದೋಷವು ಪರಿಹಾರವಾಗುತ್ತದೆ. ತತ್ತತ್ ಪ್ರಮಾತ್ವಧರ್ಮವನ್ನು ಪರಿಗ್ರಹಿಸಿ ಸಿದ್ಧಸಾಧನತಾದೋಷವನ್ನು ಹೇಳಲಾಗಿದೆ. ತತ್ತತ್‌ಪ್ರಮಾತ್ವವು ಅನೇಕ ವೃತ್ತಿ ಅಲ್ಲ, ಆದ್ದರಿಂದ ಸಾಧ್ಯಶರೀರದಲ್ಲಿ ಸ್ವಾಶ್ರಯಮಾತ್ರವೃತ್ತಿ ಎಂಬ ಪದದಿಂದ ಏಕಮಾತ್ರ ವೃತ್ತಿಯಾದ ತತ್ತತ್‌ಪ್ರಮಾತ್ವದ ಸಂಗ್ರಹವಾಗುವುದಿಲ್ಲ, ಹೀಗೆ ಸಿದ್ಧಸಾಧನತಾಪರಿಹಾರವಾದರೂ ಅಪ್ರಯೋಜಕತ್ವ-ವ್ಯಭಿಚಾರ ದೋಷಗಳು ಅಪರಿಹಾರ್ಯ.

ಯಜ್ಞಪತಿ ಉಪಾಧ್ಯಾಯರು ವ್ಯಾಸರಾಜರಿಗಿಂತ ಅರ್ವಾಚೀನರಾದುದರಿಂದ ತದುಕ್ತತಯಾ ಈ ಅನುಮಾನವನ್ನು ಮೂಲದಲ್ಲಿ ಹೇಳಲಾಗಿಲ್ಲ.

**ಯಜ್ಞಪತ್ಯುಕ್ತವಕ್ರಾನುಮಾನಭಂಗ ಪ್ರಕರಣ ಮುಗಿಯಿತು. ॥ 12 ॥**

---

1. ಈ ಸಮಾಧಾನವನ್ನು ನ್ಯಾಯಶಿಖಾಮಣಿಯಲ್ಲಿ ಹೇಳಲಾಗಿದೆ. ಅದನ್ನು ರಾಯರು ಇಲ್ಲಿ ನಿರಾಕರಿಸಿದ್ದಾರೆ.

## ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಯಜ್ಞಪತ್ಯುಪಾಧ್ಯಾಯರು ಹೇಳಿರುವ ಅನುಮಾನವನ್ನು ನಿರಾಕರಿಸಲಾಗಿದೆ. ಯಜ್ಞಪತ್ಯುಪಾಧ್ಯಾಯರು 15ನೆಯ ಶತಮಾನದವರು. ವ್ಯಾಸರಾಜರೂ ಅದೇ ಶತಮಾನದಲ್ಲಿದ್ದರೂ ಉಪಾಧ್ಯಾಯರು ಅರ್ವಾಚೀನರು ಎಂದು ರಾಯರು ಹೇಳಿದ್ದಾರೆ. ಆದರಿಂದಾಗಿ ವ್ಯಾಸರಾಜರು 'ಯತ್ತೂಕ್ತಂ ಉಪಾಧ್ಯಾಯೇನ' ಎಂದು ಹೇಳಲಿಲ್ಲ, ಎಂದೂ ರಾಯರು ಬರೆದಿದ್ದಾರೆ. (ಪು.592)

ಈ ಅನುಮಾನ ವಕ್ರಾನುಮಾನ. ಅಂದರೆ, ಅನಿತ್ಯಪ್ರಮಾಗಳಿಗೆಲ್ಲ ಸಾಮಾನ್ಯವಾದ ಒಂದು ಗುಣ ಇಲ್ಲದಿದ್ದರೂ ಅನಿತ್ಯಪ್ರಮಾತ್ವವು ಗುಣಜನ್ಯಮಾತ್ರವೃತ್ತಿ ಎಂದು ಹೇಳುವ ಮೂಲಕ ಅನಿತ್ಯಪ್ರಮಾದ ನಾಲ್ಕು ಪ್ರಭೇದಗಳಾದ ಪ್ರತ್ಯಕ್ಷಪ್ರಮಾ, ಅನುಮಿತಿಪ್ರಮಾ, ಉಪಮಿತಿಪ್ರಮಾ, ಶಾಬ್ದಪ್ರಮಾ ಇವುಗಳು ಪ್ರತ್ಯೇಕವಾದ ಗುಣಗಳಿಂದ ಜನ್ಯವಾಗಿವೆ, ಎನ್ನುವುದರಲ್ಲಿ ಪರ್ಯವಸಾನವಾಗುತ್ತದೆ. ಇವು ನಾಲ್ಕರಲ್ಲಿ ಒಂದು ಗುಣಜನ್ಯವಾಗದಿದ್ದರೂ ಅನಿತ್ಯಪ್ರಮಾತ್ವವು ಗುಣಜನ್ಯಮಾತ್ರ ವೃತ್ತಿಯಾಗಲಾರದು. ಹೀಗೆ ಪ್ರತ್ಯಕ್ಷಪ್ರಮಾದಿಗಳಿಗೆ ಪ್ರತ್ಯೇಕವಾಗಿ ಒಂದೊಂದು ಗುಣಗಳು ಕಾರಣ ಎಂದು ಈ ಅನುಮಾನದ ಪರ್ಯವಸಿತಾರ್ಥ.

ಅನುಮಾನದ ಅಭಿಪ್ರಾಯ ಹೀಗೆ— ಅನಿತ್ಯಜ್ಞಾನವು ಎರಡು ವಿಧವಾಗಿದೆ–ಅನಿತ್ಯಪ್ರಮಾ ಮತ್ತು ಭ್ರಮೆ. ಅನಿತ್ಯಜ್ಞಾನಗಳಿಗೆಲ್ಲ ಬೇಕಾಗುವ ಕಾರಣ ಆತ್ಮಮನಃಸಂಯೋಗ. ಇದರ ಜೊತೆಗೆ ಗುಣ ಸೇರಿದರೆ ಪ್ರಮಾ ಹುಟ್ಟುತ್ತದೆ, ದೋಷ ಸೇರಿದರೆ ಭ್ರಮೆ ಹುಟ್ಟುತ್ತದೆ. ಹೇಗಾದರೂ, ಜ್ಞಾನಸಾಮಾನ್ಯಕಾರಣದ ಜೊತೆಗೆ ಏನಾದರೊಂದು ಅಧಿಕಾಂಶವು ಸೇರಿದಾಗ ಮಾತ್ರ ಪ್ರತ್ಯಕ್ಷಾದಿ ಪ್ರಮಾಗಳು ಹುಟ್ಟುತ್ತವೆ. ಕೇವಲ ಆತ್ಮಮನಃಸಂಯೋಗದಿಂದ ಪ್ರತ್ಯಕ್ಷಾದಿಪ್ರಮಾಗಳು ಹುಟ್ಟುವುದಿಲ್ಲ. ಹಾಗೆ ಹುಟ್ಟುವುದಾದರೆ ಭ್ರಮೆಯೂ ಪ್ರಮಾ ಆಗಬೇಕಾದೀತು. ಅದೂ ಆತ್ಮಮನಃ ಸಂಯೋಗದಿಂದ ಜನ್ಯವಾಗಿದೆ. ಹೀಗೆ ಜ್ಞಾನಸಾಮಾನ್ಯಕಾರಣದಿಂದ ಅನುತ್ಪಾದ್ಯವಾದ ಪ್ರತ್ಯಕ್ಷಾದಿ–ಪ್ರಮಾರೂಪವಾದ ಕಾರ್ಯಮಾತ್ರದಲ್ಲಿ ಅನಿತ್ಯಪ್ರಮಾತ್ವವು ಇರುವುದರಿಂದ ಪ್ರತ್ಯಕ್ಷಾದಿಪ್ರಮಾತ್ವಾವಚ್ಛಿನ್ನ ಕಾರ್ಯತಾಶ್ರಯದಲ್ಲಿಯೇ ಆ ಅನಿತ್ಯಪ್ರಮಾತ್ವ ಇದೆ. ಅಂದರೆ ಆ ಪ್ರಮಾತ್ವಕ್ಕೆ ಆಶ್ರಯಗಳಾದ ಪ್ರತ್ಯಕ್ಷಾದಿಪ್ರಮಾಗಳಲ್ಲಿ ಇರುವ ನಾಲ್ಕು ಧರ್ಮಗಳು ಕಾರ್ಯತಾವಚ್ಛೇದಕವಾಗಿವೆ. ಅವುಗಳು ಕಾರ್ಯತಾವಚ್ಛೇದಕಗಳಾಗಬೇಕಾದರೆ ತತ್ತದವಚ್ಛಿನ್ನ ಪ್ರತ್ಯಕ್ಷಾದಿ ಪ್ರಮಾಗಳಿಗೆ ಕಾರಣವಿಶೇಷವು ಇದ್ದೇ ಇರಬೇಕು. ಅದೇ ಗುಣ. ಅಂತಹ ಗುಣ ಪ್ರತ್ಯಕ್ಷಾದಿಪ್ರಮಾಗಳಿಗೆ ಬೇರೆ ಬೇರೆಯೇ ಆಗಿದೆ. ಇದೇ ಅನನುಗತವಾದ ಗುಣ. ಹೀಗೆ ಪರ್ಯಾಯವಾಗಿ ಗುಣಜನ್ಯತ್ವವನ್ನು ಸಾಧನೆ ಮಾಡುವ ಅನುಮಾನ ಇದಾಗಿದೆ.

ಬಹಳ ಜಾಣ್ಮೆಯಿಂದ ಈ ಅನುಮಾನದ ಮರ್ಮವನ್ನು ಶ್ರೀವ್ಯಾಸರಾಜರು ಖಂಡಿಸಿದ್ದಾರೆ.

ಅನುಮಾನದ ಒಟ್ಟು ಅಭಿಪ್ರಾಯ ಪ್ರತ್ಯಕ್ಷಾದಿಪ್ರಮಾಗಳಿಗೆ ಜ್ಞಾನಸಾಮಾನ್ಯಕಾರಣಕ್ಕಿಂತ ಅಧಿಕವಾದ ಕಾರಣ ಒಂದು ಬೇಕು, ಎಂಬುದು. ಅಂತಹ ಒಂದು ವಿಶೇಷಕಾರಣವನ್ನು ಸ್ವತಸ್ತ್ವವಾದಿಗಳೂ ಅಂಗೀಕರಿಸಿದ್ದಾರೆ. ಅದು ಪ್ರಾಗಭಾವ. ಪ್ರಾಗಭಾವವು ಒಂದೊಂದು ಕಾರ್ಯಕ್ಕೂ ತತ್ತದ್ರೂಪೇಣ ಜನಕವಾದ ಒಂದು ಕಾರಣವಿಶೇಷ. ಭ್ರಮೆಗೆ ಕಾರಣವಾದ ಪ್ರಾಗಭಾವವೇ ಬೇರೆ, ಪ್ರಮಾಕ್ಕೆ ಕಾರಣವಾದ ಪ್ರಾಗಭಾವವೇ ಬೇರೆ. ಪ್ರಮಾದಲ್ಲಿ ತತ್ತತ್ಪ್ರಮಾವ್ಯಕ್ತಿವಿಶೇಷಕ್ಕೆ ತತ್ತತ್ಪ್ರಮಾಪ್ರಾಗಭಾವ ಕಾರಣ. ಹೀಗೆ, ಜ್ಞಾನಸಾಮಾನ್ಯಕಾರಣಕ್ಕಿಂತ ಅಧಿಕವಾದ ತತ್ತತ್ಪ್ರಾಗಭಾವತ್ವಾವಚ್ಛಿನ್ನಕಾರಣತಾನಿರೂಪಿತತತ್ತತ್ಪ್ರಮಾತ್ವಾವಚ್ಛಿನ್ನ-ಕಾರ್ಯತಾಶ್ರಗಳಾದ ಪ್ರತ್ಯಕ್ಷಾದಿ ಪ್ರಮಾವಿಶೇಷಗಳಲ್ಲಿ ಮಾತ್ರ ಅನಿತ್ಯಪ್ರಮಾತ್ವ ವೃತ್ತಿಯಾಗಿದೆ ಎಂದು ಹೇಳಿಯೂ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಆದ್ದರಿಂದ ಸಿದ್ಧಸಾಧನತಾ.

ಈ ದೋಷವನ್ನು ಪರಿಹಾರಮಾಡಬೇಕಾದರೆ ಜ್ಞಾನಸಾಮಾನ್ಯಕಾರಣಕ್ಕಿಂತ ಭಿನ್ನವಾದ ಭಾವರೂಪವಾದ ಕಾರಣವೇ ಪ್ರತ್ಯಕ್ಷಪ್ರಮಾವಿಶೇಷಕ್ಕೆ ಇರಬೇಕು, ಎಂಬ ನಿರ್ಬಂಧ ಹೇರಬೇಕು. ಹೀಗೆ ನಿರ್ಬಂಧ ಮಾಡಿದರೆ ಅನುಮಾನಕ್ಕೆ ಅಪ್ರಯೋಜಕತಾದೋಷ. ಸಾಮಾನ್ಯಕ್ಕಿಂತ ಕಾರ್ಯವು ವಿಶೇಷವಾಗಬೇಕಾದರೆ ವಿಶೇಷಕಾರಣವಿದ್ದರೆ ಸಾಕು, ಆ ಕಾರಣವು ಭಾವರೂಪವೇ ಆಗಬೇಕು, ಎಂಬ ನಿರ್ಬಂಧ ಅನಗತ್ಯ. ಆದ್ದರಿಂದ ಹೇತು ಇಂತಹ ಭಾವಕಾರಣಜನ್ಯತ್ವರೂಪಸಾಧ್ಯಕ್ಕೆ ಸಾಧಕವಾಗುವುದಿಲ್ಲ.

ಹೀಗೆ ಈ ಪ್ರಕರಣದಲ್ಲಿ ಪ್ರಮಾವಿಶೇಷವು ಗುಣವಿಶೇಷಜನ್ಯ ಎಂಬ ಪರೋಕ್ತವಾದವನ್ನು ನಿರಾಕರಿಸಲಾಗಿದೆ.

ಶ್ರೀರಾಘವೇಂದ್ರಸ್ವಾಮಿಗಳ ನ್ಯಾಯದೀಪ ವ್ಯಾಖ್ಯಾನದಲ್ಲಿ ರುಚಿದತ್ತಮಿಶ್ರರ ಪ್ರಕಾರ ವ್ಯಾಖ್ಯಾನಕ್ಕೆ ವಿವರಣರೂಪದಲ್ಲಿ ನ್ಯಾಯಶಿಖಾಮಣಿಯಲ್ಲಿ ಉಲ್ಲೇಖಗೊಂಡಿರುವ ವಿಮರ್ಶೆಯೂ ಇರುವುದು ಗಮನೀಯ. ಅಲ್ಲದೆ, ಈ ಪ್ರಕರಣದ ಮೂಲಪಾಠದಲ್ಲಿ ಪಾಠಾಂತರದ ಗೊಂದಲ ವನ್ನೂ ಗಮನಿಸಬಹುದು. ರಾಯರು ತರ್ಕತಾಂಡವದ ಅನೇಕ ಹಸ್ತಪ್ರತಿಗಳನ್ನು ಗಮನಿಸಿ ಯಾವುದನ್ನೂ ನಿರಾಕರಿಸದೆ ಎಲ್ಲವನ್ನೂ ಅಭಿಪ್ರಾಯಭೇದದಿಂದ ಹೊಂದಿಸಿದ್ದಾರೆ. ಇಲ್ಲಿ ಮಹತ್ತರವಾದ ಪಾಠಭೇದಗಳು ಇರುವುದರಿಂದ ರಾಯರ ವ್ಯಾಖ್ಯಾನಕ್ಕೆ ಅನುಗುಣವಾಗಿ ಎರಡೂ ಪಾಠಗಳನ್ನೂ ಪ್ರತ್ಯೇಕಗೊಳಿಸಿ ತೋರಿಸಲಾಗಿದೆ. (ಪು.583)

## ॥ ಪ್ರಕರಣ – 12 ॥

# ಪ್ರಕರಣ – 13

## ಪ್ರತ್ಯಕ್ಷಾದಿಪ್ರಮಾಸು ಪ್ರತ್ಯೇಕಾನುಗತಗುಣಭಂಗಃ

**अथ मतम्, अनित्यप्रत्यक्षप्रमात्वम्, अनुमितिप्रमात्वम्, शाब्दप्रमात्वं च कार्यतावच्छेदकम्। बाधकं विना कार्यमात्रवृत्तित्वात् घटत्ववदिति प्रत्येकमेव प्रयोक्तव्यम्। बाधकं च समाजस्यार्थिकत्वम् अनुगतहेत्वभावश्च। तेन नीलघटत्वादौ घटज्ञानत्वादौ च न व्यभिचारः। एतादृशप्रत्यक्षप्रमात्वादिकं प्रति अनित्यप्रमात्वस्य व्यापकत्वमेव प्रमात्वस्य परतस्त्वम्। एवंच तत्तत्प्रागभावनिरूपितकार्यतया नार्थान्तरम्।**

ಅನಿತ್ಯಪ್ರಮಾಸಾಮಾನ್ಯಕ್ಕೆ ಅನುಗತವಾದ ಗುಣವು ಇಲ್ಲದಿದ್ದರೂ ಪ್ರತ್ಯಕ್ಷಪ್ರಮಾ, ಅನುಮಿತಿಪ್ರಮಾ, ಶಾಬ್ದಪ್ರಮಾ ಈ ಮೂರು ಪ್ರಮಾಗಳಿಗೆ ಪ್ರಮಾತ್ವಪ್ರಯೋಜಕವಾದ ಪ್ರತ್ಯೇಕವಾದ ಗುಣಗಳಿವೆ. ಅವುಗಳನ್ನು ಅನುಮಾನಗಳಿಂದ ಹೀಗೆ ಸಾಧಿಸಬಹುದು. ಮೊದಲು ಈ ಮೂರು ಧರ್ಮಗಳು ಕಾರ್ಯತಾವಚ್ಛೇದಕವಾಗಿವೆ, ಎಂದು ಸಾಧಿಸಲಾಗುವುದು.

**ಪಕ್ಷ**–ಅನಿತ್ಯಪ್ರತ್ಯಕ್ಷಪ್ರಮಾತ್ವಂ, ಅನುಮಿತಿಪ್ರಮಾತ್ವಂ, ಶಾಬ್ದಪ್ರಮಾತ್ವಮ್.

**ಸಾಧ್ಯ**–ಕಾರ್ಯತಾವಚ್ಛೇದಕಮ್.

**ಹೇತು**–ಬಾಧಕಂ ವಿನಾ ಕಾರ್ಯಮಾತ್ರವೃತ್ತಿತ್ವಾತ್–ಈ ಮೂರು ಧರ್ಮಗಳು ಕಾರ್ಯದಲ್ಲಿ ಮಾತ್ರ ಇವೆ, ಅವುಗಳನ್ನು ಕಾರ್ಯತಾವಚ್ಛೇದಕ ಎನ್ನಲು ಬಾಧಕವೂ ಇಲ್ಲ.

**ದೃಷ್ಟಾಂತ**–ಘಟತ್ವವತ್.

ಇಲ್ಲಿ ಮೂರು ಧರ್ಮಗಳನ್ನು ಪ್ರತ್ಯೇಕವಾಗಿ ಪಕ್ಷಮಾಡಿ ಮೂರು ಅನುಮಾನಗಳನ್ನು ಮಾಡಬೇಕು.

ಒಂದು ಧರ್ಮವು ಕಾರ್ಯತಾವಚ್ಛೇದಕವಾಗಲು ಬಾಧಕಗಳು ಎರಡು ಇರಬಹುದು. ಅರ್ಥಸಮಾಜಗ್ರಸ್ತತ್ವ ಅಥವಾ, ತದವಚ್ಛಿನ್ನವಾದ ಕಾರ್ಯಕ್ಕೆ ಅನುಗತವಾದ ಒಂದು ಕಾರಣ ಇಲ್ಲದಿರುವುದು. ಮೊದಲನೆಯದಕ್ಕೆ ಉದಾಹರಣೆ– ನೀಲಘಟತ್ವ. ಇದರಲ್ಲಿ ನೀಲತ್ವವೂ

ಅನುಮಾನದ ಒಟ್ಟು ಅಭಿಪ್ರಾಯ ಪ್ರತ್ಯಕ್ಷಾದಿಪ್ರಮಾಗಳಿಗೆ ಜ್ಞಾನಸಾಮಾನ್ಯಕಾರಣಕ್ಕಿಂತ ಅಧಿಕವಾದ ಕಾರಣ ಒಂದು ಬೇಕು, ಎಂಬುದು. ಅಂತಹ ಒಂದು ವಿಶೇಷಕಾರಣವನ್ನು ಸ್ವತಸ್ತ್ವವಾದಿಗಳೂ ಅಂಗೀಕರಿಸಿದ್ದಾರೆ. ಅದು ಪ್ರಾಗಭಾವ. ಪ್ರಾಗಭಾವವು ಒಂದೊಂದು ಕಾರ್ಯಕ್ಕೂ ತತ್ತದ್ರೂಪೇಣ ಜನಕವಾದ ಒಂದು ಕಾರಣವಿಶೇಷ. ಭ್ರಮೆಗೆ ಕಾರಣವಾದ ಪ್ರಾಗಭಾವವೇ ಬೇರೆ, ಪ್ರಮಾಕ್ಕೆ ಕಾರಣವಾದ ಪ್ರಾಗಭಾವವೇ ಬೇರೆ. ಪ್ರಮಾದಲ್ಲಿ ತತ್ತತ್‌ಪ್ರಮಾವ್ಯಕ್ತಿವಿಶೇಷಕ್ಕೆ ತತ್ತತ್‌ಪ್ರಮಾಪ್ರಾಗಭಾವ ಕಾರಣ. ಹೀಗೆ, ಜ್ಞಾನಸಾಮಾನ್ಯಕಾರಣಕ್ಕಿಂತ ಅಧಿಕವಾದ ತತ್ತತ್‌ಪ್ರಾಗಭಾವತ್ವಾವಚ್ಛಿನ್ನಕಾರಣತಾನಿರೂಪಿತತತ್ತತ್‌ಪ್ರಮಾತ್ವಾವಚ್ಛಿನ್ನ-ಕಾರ್ಯತಾಶ್ರಗಳಾದ ಪ್ರತ್ಯಕ್ಷಾದಿ ಪ್ರಮಾವಿಶೇಷಗಳಲ್ಲಿ ಮಾತ್ರ ಅನಿತ್ಯಪ್ರಮಾತ್ವ ವೃತ್ತಿಯಾಗಿದೆ ಎಂದು ಹೇಳಿಯೂ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಆದ್ದರಿಂದ ಸಿದ್ಧಸಾಧನತಾ.

ಈ ದೋಷವನ್ನು ಪರಿಹಾರಮಾಡಬೇಕಾದರೆ ಜ್ಞಾನಸಾಮಾನ್ಯಕಾರಣಕ್ಕಿಂತ ಭಿನ್ನವಾದ ಭಾವರೂಪವಾದ ಕಾರಣವೇ ಪ್ರತ್ಯಕ್ಷಪ್ರಮಾವಿಶೇಷಕ್ಕೆ ಇರಬೇಕು, ಎಂಬ ನಿರ್ಬಂಧ ಹೇರಬೇಕು. ಹೀಗೆ ನಿರ್ಬಂಧ ಮಾಡಿದರೆ ಅನುಮಾನಕ್ಕೆ ಅಪ್ರಯೋಜಕತಾದೋಷ. ಸಾಮಾನ್ಯಕ್ಕಿಂತ ಕಾರ್ಯವು ವಿಶೇಷವಾಗಬೇಕಾದರೆ ವಿಶೇಷಕಾರಣವಿದ್ದರೆ ಸಾಕು, ಆ ಕಾರಣವು ಭಾವರೂಪವೇ ಆಗಬೇಕು, ಎಂಬ ನಿರ್ಬಂಧ ಅನಗತ್ಯ. ಆದ್ದರಿಂದ ಹೇತು ಇಂತಹ ಭಾವಕಾರಣಜನ್ಯತ್ವರೂಪಸಾಧ್ಯಕ್ಕೆ ಸಾಧಕವಾಗುವುದಿಲ್ಲ.

ಹೀಗೆ ಈ ಪ್ರಕರಣದಲ್ಲಿ ಪ್ರಮಾವಿಶೇಷವು ಗುಣವಿಶೇಷಜನ್ಯ ಎಂಬ ಪರೋಕ್ತವಾದವನ್ನು ನಿರಾಕರಿಸಲಾಗಿದೆ.

ಶ್ರೀರಾಘವೇಂದ್ರಸ್ವಾಮಿಗಳ ನ್ಯಾಯದೀಪ ವ್ಯಾಖ್ಯಾನದಲ್ಲಿ ರುಚಿದತ್ತಮಿಶ್ರರ ಪ್ರಕಾರ ವ್ಯಾಖ್ಯಾನಕ್ಕೆ ವಿವರಣರೂಪದಲ್ಲಿ ನ್ಯಾಯಶಿಖಾಮಣಿಯಲ್ಲಿ ಉಲ್ಲೇಖಗೊಂಡಿರುವ ವಿಮರ್ಶೆಯೂ ಇರುವುದು ಗಮನೀಯ. ಅಲ್ಲದೆ, ಈ ಪ್ರಕರಣದ ಮೂಲಪಾಠದಲ್ಲಿ ಪಾಠಾಂತರದ ಗೊಂದಲ ವನ್ನೂ ಗಮನಿಸಬಹುದು. ರಾಯರು ತರ್ಕತಾಂಡವದ ಅನೇಕ ಹಸ್ತಪ್ರತಿಗಳನ್ನು ಗಮನಿಸಿ ಯಾವುದನ್ನೂ ನಿರಾಕರಿಸದೆ ಎಲ್ಲವನ್ನೂ ಅಭಿಪ್ರಾಯಭೇದದಿಂದ ಹೊಂದಿಸಿದ್ದಾರೆ. ಇಲ್ಲಿ ಮಹತ್ತರವಾದ ಪಾಠಭೇದಗಳು ಇರುವುದರಿಂದ ರಾಯರ ವ್ಯಾಖ್ಯಾನಕ್ಕೆ ಅನುಗುಣವಾಗಿ ಎರಡೂ ಪಾಠಗಳನ್ನೂ ಪ್ರತ್ಯೇಕಗೊಳಿಸಿ ತೋರಿಸಲಾಗಿದೆ. (ಪು.583)

## ॥ ಪ್ರಕರಣ – 12 ॥

# ಪ್ರಕರಣ – 13

## ಪ್ರತ್ಯಕ್ಷಾದಿಪ್ರಮಾಸು ಪ್ರತ್ಯೇಕಾನುಗತಗುಣಭಂಗಃ

अथ मतम्, अनित्यप्रत्यक्षप्रमात्वम्, अनुमितिप्रमात्वम्, शाब्दप्रमात्वं च कार्यतावच्छेदकम्। बाधकं विना कार्यमात्रवृत्तित्वात् घटत्ववदिति प्रत्येकमेव प्रयोक्तव्यम्। बाधकं च समाजस्यार्थिकत्वम् अनुगतहेत्वभावश्च। तेन नीलघटत्वादौ घटज्ञानत्वादौ च न व्यभिचारः। एतादृशप्रत्यक्षप्रमात्वादिकं प्रति अनित्यप्रमात्वस्य व्यापकत्वमेव प्रमात्वस्य परतस्त्वम्। एवंच तत्तत्प्रागभावनिरूपितकार्यतया नार्थान्तरम्।

ಅನಿತ್ಯಪ್ರಮಾಸಾಮಾನ್ಯಕ್ಕೆ ಅನುಗತವಾದ ಗುಣವು ಇಲ್ಲದಿದ್ದರೂ ಪ್ರತ್ಯಕ್ಷಪ್ರಮಾ, ಅನುಮಿತಿಪ್ರಮಾ, ಶಾಬ್ದಪ್ರಮಾ ಈ ಮೂರು ಪ್ರಮಾಗಳಿಗೆ ಪ್ರಮಾತ್ವಪ್ರಯೋಜಕವಾದ ಪ್ರತ್ಯೇಕವಾದ ಗುಣಗಳಿವೆ. ಅವುಗಳನ್ನು ಅನುಮಾನಗಳಿಂದ ಹೀಗೆ ಸಾಧಿಸಬಹುದು. ಮೊದಲು ಈ ಮೂರು ಧರ್ಮಗಳು ಕಾರ್ಯತಾವಚ್ಛೇದಕವಾಗಿವೆ, ಎಂದು ಸಾಧಿಸಲಾಗುವುದು.

**ಪಕ್ಷ–**ಅನಿತ್ಯಪ್ರತ್ಯಕ್ಷಪ್ರಮಾತ್ವಂ, ಅನುಮಿತಿಪ್ರಮಾತ್ವಂ, ಶಾಬ್ದಪ್ರಮಾತ್ವಮ್.

**ಸಾಧ್ಯ–**ಕಾರ್ಯತಾವಚ್ಛೇದಕಮ್.

**ಹೇತು–**ಬಾಧಕಂ ವಿನಾ ಕಾರ್ಯಮಾತ್ರವೃತ್ತಿತ್ವಾತ್–ಈ ಮೂರು ಧರ್ಮಗಳು ಕಾರ್ಯದಲ್ಲಿ ಮಾತ್ರ ಇವೆ, ಅವುಗಳನ್ನು ಕಾರ್ಯತಾವಚ್ಛೇದಕ ಎನ್ನಲು ಬಾಧಕವೂ ಇಲ್ಲ.

**ದೃಷ್ಟಾಂತ–**ಘಟತ್ವವತ್.

ಇಲ್ಲಿ ಮೂರು ಧರ್ಮಗಳನ್ನು ಪ್ರತ್ಯೇಕವಾಗಿ ಪಕ್ಷಮಾಡಿ ಮೂರು ಅನುಮಾನಗಳನ್ನು ಮಾಡಬೇಕು.

ಒಂದು ಧರ್ಮವು ಕಾರ್ಯತಾವಚ್ಛೇದಕವಾಗಲು ಬಾಧಕಗಳು ಎರಡು ಇರಬಹುದು. ಅರ್ಥಸಮಾಜಗ್ರಸ್ತತ್ವ ಅಥವಾ, ತದವಚ್ಛಿನ್ನವಾದ ಕಾರ್ಯಕ್ಕೆ ಅನುಗತವಾದ ಒಂದು ಕಾರಣ ಇಲ್ಲದಿರುವುದು. ಮೊದಲನೆಯದಕ್ಕೆ ಉದಾಹರಣೆ– ನೀಲಘಟತ್ವ. ಇದರಲ್ಲಿ ನೀಲತ್ವವೂ

ಪ್ರತ್ಯೇಕವಾಗಿ ಕಾರ್ಯತಾವಚ್ಛೇಕ, ಘಟತ್ವವೂ ಕಾರ್ಯತಾವಚ್ಛೇದಕ. ತದವಚ್ಛಿನ್ನವಾದ ಎರಡಕ್ಕೆ ಪ್ರತ್ಯೇಕ ವಾಗಿರುವ ಕಾರಣಗಳು ಜೊತೆ ಸೇರಿದಾಗ ನೀಲಘಟ ಹುಟ್ಟುತ್ತದೆ. ನೀಲಘಟಕ್ಕೆ ಪ್ರತ್ಯೇಕವಾದ ಒಂದು ಕಾರಣ ಬೇಕಿಲ್ಲ. ಆದ್ದರಿಂದ, ನೀಲಘಟತ್ವವು ಕಾರ್ಯತಾವಚ್ಛೇದಕವಲ್ಲ.

ಎರಡನೆಯದಕ್ಕೆ ಉದಾಹರಣೆ–ಘಟಜ್ಞಾನತ್ವ. ಅದು ಪ್ರತ್ಯಕ್ಷ–ಅನುಮಿತಿ–ಶಾಬ್ದಬೋಧ ಗಳಲ್ಲಿ ಮೂರರಲ್ಲೂ ಇದೆ. ಆ ಮೂರಕ್ಕೂ ಅನುಗತವಾದ ಒಂದು ಕಾರಣ ಇಲ್ಲ. ಆದ್ದರಿಂದ ಅದೂ ಕಾರ್ಯತಾವಚ್ಛೇದಕವಲ್ಲ. ಆದರೆ, ಪ್ರತ್ಯಕ್ಷ–ಪ್ರಮಾತ್ವಾದಿ ಮೂರು ಧರ್ಮಗಳು ಕಾರ್ಯತಾ ವಚ್ಛೇದಕವಾಗಲು ಇಂತಹ ಬಾಧಕಗಳಿಲ್ಲ. ಆದಕಾರಣ ಆ ಮೂರೂ ಕಾರ್ಯತಾವಚ್ಛೇದಕವಾಗಿವೆ.

ಈ ಮೂರು ಕಾರ್ಯತಾವಚ್ಛೇದಕಗಳಾಗಬೇಕಾದರೆ ತದವಚ್ಛಿನ್ನಗಳಿಗೆ ಪ್ರತ್ಯೇಕವಾದ ಕಾರಣಗಳು ಇರಬೇಕು. ಅವುಗಳೇ ಅನನುಗತಗುಣಗಳು. ಪ್ರತ್ಯಕ್ಷಪ್ರಮಾತ್ವಾದಿ ಈ ಮೂರು ಧರ್ಮಗಳಿಗೆ ವ್ಯಾಪಕವಾಗಿದೆ (ಅಧಿಕದೇಶವೃತ್ತಿ) ಜನ್ಯಪ್ರಮಾತ್ವ. ಇದೇ ಪ್ರಮಾತ್ವಕ್ಕೆ ಪರತಸ್ತ್ವ.

ಇಲ್ಲಿ ಹಿಂದೆ ಹೇಳಿರುವಂತೆ, ತತ್ತತ್‌ಪ್ರಮಾಪ್ರಾಗಭಾವವನ್ನು ತೆಗೆದುಕೊಂಡು ಅರ್ಥಾಂತರ ವನ್ನು ಹೇಳಲಾಗುವುದಿಲ್ಲ. ಪ್ರಾಗಭಾವವು ತತ್ತತ್‌ಪ್ರಾಗಭಾವತ್ವೇನ ಕಾರಣ. ಅದು ಪ್ರತ್ಯಕ್ಷ ಪ್ರಮಾತ್ವಾವಚ್ಛಿನ್ನಕ್ಕೆ ಕಾರಣವಾಗುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನಿತ್ಯಪ್ರಮಾತ್ವಂ, ಕಾರ್ಯತಾವಚ್ಛೇದಕಂ, ಬಾಧಕಂ ವಿನಾ ಕಾರ್ಯಮಾತ್ರ-ವೃತ್ತಿಧರ್ಮತ್ವಾತ್, ಇತಿ ಮಣ್ಯುಕ್ತಾನುಮಾನೇ (ಪು.325) ಪ್ರಗಲ್ಭಾದಿನಾ ಉಕ್ತಾನುಗತಗುಣಪಕ್ಷಂ ನಿರಸ್ಯ, ಯಜ್ಞಪತ್ಯುಕ್ತ–ಪ್ರಮಾಮಾತ್ರಾನುಗತಂ ಗುಣಮ್ ಆಕ್ಷಿಪ್ಯ, ಅನುಮಾನಂ ಚ ನಿರಸ್ಯ, ಯತ್ ಪಕ್ಷಧರೇಣೈವ ಪಕ್ಷಾಂತರಮ್ ಉಕ್ತಮ್ ''ಯದ್ಯಪಿ ಯಥಾಶ್ರುತಂ ಸಾಧ್ಯಂ ಬಾಧಿತಂ, ಅನಿತ್ಯಪ್ರಮಾನುಗತ–ಹೇತ್ವಸಿದ್ಧೇಃ। ಅತ ಏವ ಸ್ವರೂಪಾಸಿದ್ಧಿರಪಿ। ತಥಾಪಿ, ಅನಿತ್ಯಪ್ರಮಾತ್ವಮ್ ಇತ್ಯನೇನ ಅನಿತ್ಯಪ್ರತ್ಯಕ್ಷಪ್ರಮಾತ್ವಾದಿಕಮೇವ ವಿವಕ್ಷಿತಮ್, ಕಾರ್ಯತಾ-ವಚ್ಛೇದಕವ್ಯಾಪಕತ್ವಮೇವ ಸಾಧ್ಯಮ್। ತಾದೃಶಕಾರ್ಯಮಾತ್ರವೃತ್ತಿ–ಧರ್ಮವ್ಯಾಪಕತ್ವಾತ್, ಇತಿ ಹೇತುಃ ಇತಿ ವಾ ಸ್ಮರ್ತವ್ಯಮ್, ಇತಿ''। ತದನುರೋಧೇನ ಪ್ರಮಾಮಾತ್ರಾನನುಗತಗುಣಪಕ್ಷಮ್ ಆಶಂಕತೇ–ಅಥೇತಿ ॥**

ಮಣಿಗ್ರಂಥದಲ್ಲಿ ಪ್ರಮಾಸಾಮಾನ್ಯವು ಗುಣಜನ್ಯ ಎಂದು ಸಾಧಿಸಿರುವ ಅನುಮಾನವನ್ನು ಪತ್ತನೆಯ ಪ್ರಕರಣದಲ್ಲಿ ಈ ಹಿಂದೆ ನಿರಾಕರಿಸಲಾಗಿದೆ. ಆ ಅನುಮಾನದಲ್ಲಿ ವಿವಕ್ಷಿತವಾದ

ಅನುಗತಗುಣವನ್ನು ಪ್ರಗಲ್ಭಮಿಶ್ರಾದಿಗಳು ಹೇಳಿದಂತೆ ಮೂರು ವಿಧವಾಗಿ ನಿರೂಪಿಸಿ ಹನ್ನೊಂದನೆಯ ಪ್ರಕರಣದಲ್ಲಿ ನಿರಾಕರಿಸಲಾಗಿದೆ. ಹನ್ನೆರಡನೆಯ ಪ್ರಕರಣದಲ್ಲಿ ಯಜ್ಞಪತಿ ಉಪಾಧ್ಯಾಯರು ಪ್ರಮಾಮಾತ್ರಕ್ಕೆ ಹೇಳಿರುವ ಅನುಗತಗುಣವನ್ನೂ ಆಕ್ಷೇಪಿಸಿ ಅವರು ಹೇಳಿರುವ ಅನುಮಾನವನ್ನೂ ಅದೇ ಪ್ರಕರಣದಲ್ಲಿ ನಿರಾಕರಿಸಲಾಗಿದೆ.

ಈ ಪ್ರಕರಣದಲ್ಲಿ ಮಣಿವ್ಯಾಖ್ಯಾಕಾರರಾದ ಪಕ್ಷಧರಮಿಶ್ರರ ಪಕ್ಷವನ್ನು ನಿರಾಕರಿಸಲಾಗಿದೆ. ಪಕ್ಷಧರಮಿಶ್ರರು ಮಣಿಕಾರೋಕ್ತಯಥಾಶ್ರುತಾನುಮಾನಕ್ಕೆ ದೋಷ ಹೇಳಿ ಅದಕ್ಕೆ ಅರ್ಥಾಂತರವನ್ನು ಮಾಡಿದ್ದಾರೆ. ಮಣಿಗ್ರಂಥದಲ್ಲಿ ಹೇಳಿದ ಅನುಮಾನದ ಆಶಯ ಇದು–ಕಾರ್ಯದಲ್ಲಿ ಮಾತ್ರವೇ ಇರುವ ಧರ್ಮವು, ಬಾಧಕವೇನೂ ಇಲ್ಲದಿದ್ದಾಗ, ಕಾರ್ಯತಾವಚ್ಛೇದಕವಾಗಬೇಕು. ಪ್ರಕೃತ ಅನಿತ್ಯಪ್ರಮಾತ್ವವು ಜನ್ಯವಾದ ಪ್ರಮಾದಲ್ಲಿ ಮಾತ್ರ ಇರುವ ಧರ್ಮ, ಅದು ನಿತ್ಯದಲ್ಲಿ ಇಲ್ಲ. ಅದು ಕಾರ್ಯತಾವಚ್ಛೇದಕವಾಗಲು ಬಾಧಕವೂ ಇಲ್ಲ. ಆದ್ದರಿಂದ ಅದು ಕಾರ್ಯತಾವಚ್ಛೇದಕವಾಗ ಬೇಕು. ಹಾಗಾಗಬೇಕಾದರೆ, ತದವಚ್ಛಿನ್ನಕ್ಕೆ ಒಂದು ಕಾರಣವಿರಬೇಕು. ಅದೇ ಅನುಗತಗುಣ, ಎಂದು.

ಇದನ್ನು ಪಕ್ಷಧರಮಿಶ್ರರು ಆಲೋಕವ್ಯಾಖ್ಯಾನದಲ್ಲಿ ಹೀಗೆ ವಿಮರ್ಶೆ ಮಾಡಿದ್ದಾರೆ. ಈ ಅನುಮಾನಕ್ಕೆ ಬಾಧ ಮತ್ತು ಸ್ವರೂಪಾಸಿದ್ಧಿ ಎರಡು ದೋಷಗಳಿವೆ. ಅನುಗತಗುಣರೂಪವಾದ ಕಾರಣವೇ ಇಲ್ಲವಾದುದರಿಂದ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ. ಆದ್ದರಿಂದ ಬಾಧ. ಆದ್ದರಿಂದಲೇ ಅನಿತ್ಯಪ್ರಮಾವು ಯಾವುದರ ಕಾರ್ಯವೂ ಅಲ್ಲ. ಹೀಗೆ ಹೇತುವೂ ಇಲ್ಲ. ಆದ್ದರಿಂದ ಮಣಿಯಲ್ಲಿ ಹೇಳಿದ ಅನಿತ್ಯಪ್ರಮಾತ್ವಪದದಿಂದ ಅನಿತ್ಯಪ್ರತ್ಯಕ್ಷಪ್ರಮಾತ್ವ ಅನುಮಿತಿಪ್ರಮಾತ್ವ, ಶಾಬ್ದಪ್ರಮಾತ್ವ ಈ ಮೂರು ಧರ್ಮಗಳು ವಿವಕ್ಷಿತ.ಅನಿತ್ಯಪ್ರಮಾತ್ವ ಪಕ್ಷವಾದರೆ, ಸಾಧ್ಯಕಾರ್ಯತಾವಚ್ಛೇದಕತ್ವ ಅಲ್ಲ, ತದ್ವ್ಯಾಪಕತ್ವ. ಕಾರ್ಯತಾವಚ್ಛೇದಕ ಅನಿತ್ಯಪ್ರತ್ಯಕ್ಷಪ್ರಮಾತ್ವಾದಿಗಳು. ಅವುಗಳಿಗೆ ವ್ಯಾಪಕವಾಗಿದೆ (ತದಾಶ್ರಯವಾದ ಮೂರರಲ್ಲೂ ಇದೆ) ಅನಿತ್ಯಪ್ರಮಾತ್ವ ಎಂದು ಸಾಧ್ಯದ ಅರ್ಥ. ಕಾರ್ಯಮಾತ್ರವೃತ್ತಿಧರ್ಮತ್ವಾತ್, ಎಂದರೆ ಕಾರ್ಯಮಾತ್ರವೃತ್ತಿಯಾದ ಅನಿತ್ಯಪ್ರತ್ಯಕ್ಷತ್ವಾದಿಧರ್ಮಗಳಿಗೆ ವ್ಯಾಪಕವಾದುದರಿಂದ ಎಂದು ಅರ್ಥ. ಇದು ಮಿಶ್ರರ ವಿವರಣೆ.

ಇದರಂತೆ, ಅನಿತ್ಯಪ್ರಮಾಕ್ಕೆ ಕಾರಣವಾದ ಅನನುಗತವಾದ ಗುಣವನ್ನು ಅಥ ಎಂಬ ಗ್ರಂಥದಲ್ಲಿ ಶಂಕೆ ಮಾಡಲಾಗಿದೆ.

## ನ್ಯಾಯದೀಪ

**ಮತಮಿತಿ ॥ ಇತಿ ಪ್ರಯೋಕ್ತವ್ಯಮ್, ಇತ್ಯನೇನ ಅನ್ವಯಃ। ಬಾಧಕಂ**

ಪ್ರತ್ಯೇಕವಾಗಿ ಕಾರ್ಯತಾವಚ್ಛೇಕ, ಘಟತ್ವವೂ ಕಾರ್ಯತಾವಚ್ಛೇದಕ. ತದವಚ್ಛಿನ್ನವಾದ ಎರಡಕ್ಕೆ ಪ್ರತ್ಯೇಕ ವಾಗಿರುವ ಕಾರಣಗಳು ಜೊತೆ ಸೇರಿದಾಗ ನೀಲಘಟ ಹುಟ್ಟುತ್ತದೆ. ನೀಲಘಟಕ್ಕೆ ಪ್ರತ್ಯೇಕವಾದ ಒಂದು ಕಾರಣ ಬೇಕಿಲ್ಲ. ಆದ್ದರಿಂದ, ನೀಲಘಟತ್ವವು ಕಾರ್ಯತಾವಚ್ಛೇದಕವಲ್ಲ.

ಎರಡನೆಯದಕ್ಕೆ ಉದಾಹರಣೆ–ಘಟಜ್ಞಾನತ್ವ. ಅದು ಪ್ರತ್ಯಕ್ಷ–ಅನುಮಿತಿ–ಶಾಬ್ದಬೋಧ ಗಳಲ್ಲಿ ಮೂರರಲ್ಲೂ ಇದೆ. ಆ ಮೂರಕ್ಕೂ ಅನುಗತವಾದ ಒಂದು ಕಾರಣ ಇಲ್ಲ. ಆದ್ದರಿಂದ ಅದೂ ಕಾರ್ಯತಾವಚ್ಛೇದಕವಲ್ಲ. ಆದರೆ, ಪ್ರತ್ಯಕ್ಷ–ಪ್ರಮಾತ್ವಾದಿ ಮೂರು ಧರ್ಮಗಳು ಕಾರ್ಯತಾ ವಚ್ಛೇದಕವಾಗಲು ಇಂತಹ ಬಾಧಕಗಳಿಲ್ಲ. ಆದಕಾರಣ ಆ ಮೂರೂ ಕಾರ್ಯತಾವಚ್ಛೇದಕವಾಗಿವೆ.

ಈ ಮೂರು ಕಾರ್ಯತಾವಚ್ಛೇದಕಗಳಾಗಬೇಕಾದರೆ ತದವಚ್ಛಿನ್ನಗಳಿಗೆ ಪ್ರತ್ಯೇಕವಾದ ಕಾರಣಗಳು ಇರಬೇಕು. ಅವುಗಳೇ ಅನನುಗತಗುಣಗಳು. ಪ್ರತ್ಯಕ್ಷಪ್ರಮಾತ್ವಾದಿ ಈ ಮೂರು ಧರ್ಮಗಳಿಗೆ ವ್ಯಾಪಕವಾಗಿದೆ (ಅಧಿಕದೇಶವೃತ್ತಿ) ಜನ್ಯಪ್ರಮಾತ್ವ. ಇದೇ ಪ್ರಮಾತ್ವಕ್ಕೆ ಪರತಸ್ತ್ವ.

ಇಲ್ಲಿ ಹಿಂದೆ ಹೇಳಿರುವಂತೆ, ತತ್ತತ್‌ಪ್ರಮಾಪ್ರಾಗಭಾವವನ್ನು ತೆಗೆದುಕೊಂಡು ಅರ್ಥಾಂತರ ವನ್ನು ಹೇಳಲಾಗುವುದಿಲ್ಲ. ಪ್ರಾಗಭಾವವು ತತ್ತತ್‌ಪ್ರಾಗಭಾವತ್ವೇನ ಕಾರಣ. ಅದು ಪ್ರತ್ಯಕ್ಷ ಪ್ರಮಾತ್ವಾವಚ್ಛಿನ್ನಕ್ಕೆ ಕಾರಣವಾಗುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನಿತ್ಯಪ್ರಮಾತ್ವಂ, ಕಾರ್ಯತಾವಚ್ಛೇದಕಂ, ಬಾಧಕಂ ವಿನಾ ಕಾರ್ಯಮಾತ್ರ-ವೃತ್ತಿಧರ್ಮತ್ವಾತ್, ಇತಿ ಮಣ್ಯುಕ್ತಾನುಮಾನೇ (ಪು.325) ಪ್ರಗಲ್ಭಾದಿನಾ ಉಕ್ತಾನುಗತಗುಣಪಕ್ಷಂ ನಿರಸ್ಯ, ಯಜ್ಞಪತ್ಯುಕ್ತ–ಪ್ರಮಾಮಾತ್ರಾನುಗತಂ ಗುಣಮ್ ಆಕ್ಷಿಪ್ಯ, ಅನುಮಾನಂ ಚ ನಿರಸ್ಯ, ಯತ್ ಪಕ್ಷಧರೇಣೈವ ಪಕ್ಷಾಂತರಮ್ ಉಕ್ತಮ್ ''ಯದ್ಯಪಿ ಯಥಾಶ್ರುತಂ ಸಾಧ್ಯಂ ಬಾಧಿತಂ, ಅನಿತ್ಯಪ್ರಮಾನುಗತ–ಹೇತ್ವಸಿದ್ಧೇಃ। ಅತ ಏವ ಸ್ವರೂಪಾಸಿದ್ಧಿರಪಿ। ತಥಾಪಿ, ಅನಿತ್ಯಪ್ರಮಾತ್ವಮ್ ಇತ್ಯನೇನ ಅನಿತ್ಯಪ್ರತ್ಯಕ್ಷಪ್ರಮಾತ್ವಾದಿಕಮೇವ ವಿವಕ್ಷಿತಮ್, ಕಾರ್ಯತಾ-ವಚ್ಛೇದಕವ್ಯಾಪಕತ್ವಮೇವ ಸಾಧ್ಯಮ್। ತಾದೃಶಕಾರ್ಯಮಾತ್ರವೃತ್ತಿ–ಧರ್ಮವ್ಯಾಪಕತ್ವಾತ್, ಇತಿ ಹೇತುಃ ಇತಿ ವಾ ಸ್ಮರ್ತವ್ಯಮ್, ಇತಿ''। ತದನುರೋಧೇನ ಪ್ರಮಾಮಾತ್ರಾನನುಗತಗುಣಪಕ್ಷಮ್ ಆಶಂಕತೇ–ಅಥೇತಿ ॥**

ಮಣಿಗ್ರಂಥದಲ್ಲಿ ಪ್ರಮಾಸಾಮಾನ್ಯವು ಗುಣಜನ್ಯ ಎಂದು ಸಾಧಿಸಿರುವ ಅನುಮಾನವನ್ನು ಹತ್ತನೆಯ ಪ್ರಕರಣದಲ್ಲಿ ಈ ಹಿಂದೆ ನಿರಾಕರಿಸಲಾಗಿದೆ. ಆ ಅನುಮಾನದಲ್ಲಿ ವಿವಕ್ಷಿತವಾದ

ಅನುಗತಗುಣವನ್ನು ಪ್ರಗಲ್ಭಮಿಶ್ರಾದಿಗಳು ಹೇಳಿದಂತೆ ಮೂರು ವಿಧವಾಗಿ ನಿರೂಪಿಸಿ ಹನ್ನೊಂದನೆಯ ಪ್ರಕರಣದಲ್ಲಿ ನಿರಾಕರಿಸಲಾಗಿದೆ. ಹನ್ನೆರಡನೆಯ ಪ್ರಕರಣದಲ್ಲಿ ಯಜ್ಞಪತಿ ಉಪಾಧ್ಯಾಯರು ಪ್ರಮಾಮಾತ್ರಕ್ಕೆ ಹೇಳಿರುವ ಅನುಗತಗುಣವನ್ನೂ ಆಕ್ಷೇಪಿಸಿ ಅವರು ಹೇಳಿರುವ ಅನುಮಾನವನ್ನೂ ಅದೇ ಪ್ರಕರಣದಲ್ಲಿ ನಿರಾಕರಿಸಲಾಗಿದೆ.

ಈ ಪ್ರಕರಣದಲ್ಲಿ ಮಣಿವ್ಯಾಖ್ಯಾಕಾರರಾದ ಪಕ್ಷಧರಮಿಶ್ರರ ಪಕ್ಷವನ್ನು ನಿರಾಕರಿಸಲಾಗಿದೆ. ಪಕ್ಷಧರಮಿಶ್ರರು ಮಣಿಕಾರೋಕ್ತಯಥಾಶ್ರುತಾನುಮಾನಕ್ಕೆ ದೋಷ ಹೇಳಿ ಅದಕ್ಕೆ ಅರ್ಥಾಂತರವನ್ನು ಮಾಡಿದ್ದಾರೆ. ಮಣಿಗ್ರಂಥದಲ್ಲಿ ಹೇಳಿದ ಅನುಮಾನದ ಆಶಯ ಇದು–ಕಾರ್ಯದಲ್ಲಿ ಮಾತ್ರವೇ ಇರುವ ಧರ್ಮವು, ಬಾಧಕವೇನೂ ಇಲ್ಲದಿದ್ದಾಗ, ಕಾರ್ಯತಾವಚ್ಛೇದಕವಾಗಬೇಕು. ಪ್ರಕೃತ ಅನಿತ್ಯಪ್ರಮಾತ್ವವು ಜನ್ಯವಾದ ಪ್ರಮಾದಲ್ಲಿ ಮಾತ್ರ ಇರುವ ಧರ್ಮ, ಅದು ನಿತ್ಯದಲ್ಲಿ ಇಲ್ಲ. ಅದು ಕಾರ್ಯತಾವಚ್ಛೇದಕವಾಗಲು ಬಾಧಕವೂ ಇಲ್ಲ. ಆದ್ದರಿಂದ ಅದು ಕಾರ್ಯತಾವಚ್ಛೇದಕವಾಗ ಬೇಕು. ಹಾಗಾಗಬೇಕಾದರೆ, ತದವಚ್ಛಿನ್ನಕ್ಕೆ ಒಂದು ಕಾರಣವಿರಬೇಕು. ಅದೇ ಅನುಗತಗುಣ, ಎಂದು.

ಇದನ್ನು ಪಕ್ಷಧರಮಿಶ್ರರು ಆಲೋಕವ್ಯಾಖ್ಯಾನದಲ್ಲಿ ಹೀಗೆ ವಿಮರ್ಶೆ ಮಾಡಿದ್ದಾರೆ. ಈ ಅನುಮಾನಕ್ಕೆ ಬಾಧ ಮತ್ತು ಸ್ವರೂಪಾಸಿದ್ಧಿ ಎರಡು ದೋಷಗಳಿವೆ. ಅನುಗತಗುಣರೂಪವಾದ ಕಾರಣವೇ ಇಲ್ಲವಾದುದರಿಂದ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ. ಆದ್ದರಿಂದ ಬಾಧ. ಆದ್ದರಿಂದಲೇ ಅನಿತ್ಯಪ್ರಮಾವು ಯಾವುದರ ಕಾರ್ಯವೂ ಅಲ್ಲ. ಹೀಗೆ ಹೇತುವೂ ಇಲ್ಲ. ಆದ್ದರಿಂದ ಮಣಿಯಲ್ಲಿ ಹೇಳಿದ ಅನಿತ್ಯಪ್ರಮಾತ್ವಪದದಿಂದ ಅನಿತ್ಯಪ್ರತ್ಯಕ್ಷಪ್ರಮಾತ್ವ ಅನುಮಿತಿಪ್ರಮಾತ್ವ, ಶಾಬ್ದಪ್ರಮಾತ್ವ ಈ ಮೂರು ಧರ್ಮಗಳು ವಿವಕ್ಷಿತ.ಅನಿತ್ಯಪ್ರಮಾತ್ವ ಪಕ್ಷವಾದರೆ, ಸಾಧ್ಯಕಾರ್ಯತಾವಚ್ಛೇದಕತ್ವ ಅಲ್ಲ, ತದ್‌ವ್ಯಾಪಕತ್ವ. ಕಾರ್ಯತಾವಚ್ಛೇದಕ ಅನಿತ್ಯಪ್ರತ್ಯಕ್ಷಪ್ರಮಾತ್ವಾದಿಗಳು. ಅವುಗಳಿಗೆ ವ್ಯಾಪಕವಾಗಿದೆ (ತದಾಶ್ರಯವಾದ ಮೂರರಲ್ಲೂ ಇದೆ) ಅನಿತ್ಯಪ್ರಮಾತ್ವ, ಎಂದು ಸಾಧ್ಯದ ಅರ್ಥ. ಕಾರ್ಯಮಾತ್ರವೃತ್ತಿಧರ್ಮತ್ವಾತ್, ಎಂದರೆ ಕಾರ್ಯಮಾತ್ರವೃತ್ತಿಯಾದ ಅನಿತ್ಯಪ್ರತ್ಯಕ್ಷತ್ವಾದಿಧರ್ಮಗಳಿಗೆ ವ್ಯಾಪಕವಾದುದರಿಂದ ಎಂದು ಅರ್ಥ. ಇದು ಮಿಶ್ರರ ವಿವರಣೆ.

ಇದರಂತೆ, ಅನಿತ್ಯಪ್ರಮಾಕ್ಕೆ ಕಾರಣವಾದ ಅನನುಗತವಾದ ಗುಣವನ್ನು ಅಥ ಎಂಬ ಗ್ರಂಥದಲ್ಲಿ ಶಂಕೆ ಮಾಡಲಾಗಿದೆ.

## ನ್ಯಾಯದೀಪ

**ಮತಮಿತಿ ॥ ಇತಿ ಪ್ರಯೋಕ್ತವ್ಯಮ್, ಇತ್ಯನೇನ ಅನ್ವಯಃ। ಬಾಧಕಂ**

**ವಿನೇತಿ ॥ ಅವಚ್ಛೇದಕಾಂತರೋಪಪನ್ನ–ಕಾರ್ಯತಾಶ್ರಯವೃತ್ತಿತ್ವ, ಸ್ವಾವಚ್ಛಿನ್ನ-ಕಾರ್ಯತಾಪ್ರತಿಯೋಗಿಕ–ಕಾರಣಾಸಂಭವಃ ಇತ್ಯಾದಿಬಾಧಕಂ ವಿನಾ ಇತ್ಯರ್ಥಃ ।**

**ನಿತ್ಯವೃತ್ತಿತ್ವಾದಿರೂಪ–ಕಾರ್ಯತಾವಚ್ಛೇದಕಬಾಧಕಸ್ಯ ಜ್ಞಾನತ್ವಾದಾವಿವ ನೀಲ-ಘಟತ್ವಾದೌ ಅಭಾವಾತ್, ವಿಶಿಷ್ಟಹೇತೋರಪಿ ತತ್ರ ವ್ಯಭಿಚಾರ ಇತ್ಯತಃ ವಿವಕ್ಷಿತ–ಪಕ್ಷಧರಾದ್ಯುಕ್ತ–ಬಾಧಕಶಬ್ದಾರ್ಥೋಕ್ತ್ಯಾ ಉಕ್ತದೋಷಂ ನಿರಾಹ-ಬಾಧಕಂ ಚೇತಿ ॥ ಸಮಾಜಸ್ಯ=ಮೇಲನಸ್ಯ ಆರ್ಥಿಕತ್ವಂ=ಅವಚ್ಛೇದಕಾಂತ-ರೋಪಪನ್ನ–ಕಾರ್ಯತಾಶ್ರಯವೃತ್ತಿತ್ವಮ್, ಇತ್ಯರ್ಥಃ । ಅನುಗತೇತಿ ॥ ಸ್ವಾವಚ್ಛಿನ್ನಕಾರ್ಯತಾ–ಪ್ರತಿಯೋಗಿಕಾನುಗತಹೇತ್ವಭಾವಃ, ಇತ್ಯರ್ಥಃ । ತೇನೇತಿ ॥ ಬಾಧಕಂ ವಿನಾ, ಇತ್ಯತ್ರ ವಿವಕ್ಷಿತಬಾಧಕಾಭಾವರೂಪ ವಿಶೇಷಣೇನ ಇತ್ಯರ್ಥಃ ॥**

ಮೂಲದಲ್ಲಿ 'ಅಥ ಮತಂ' ಎಂಬಲ್ಲಿರುವ 'ಮತಂ' ಎಂಬ ಪದವನ್ನು 'ಇತಿ ಪ್ರಯೋಕ್ತವ್ಯಂ' ಎಂಬ ಕ್ರಿಯೆಯೊಂದಿಗೆ ಅನ್ವಯಿಸಿಕೊಳ್ಳಬೇಕು. ಹೀಗೆ ಅನುಮಾನಪ್ರಯೋಗ ಮಾಡಬೇಕೆಂದು ಅಭಿಪ್ರಾಯ, ಎಂದು ಅರ್ಥ.

ಹೇತುವಿನಲ್ಲಿ ಬಾಧಕಂ ವಿನಾ ಎಂದರೆ, ಎರಡು ವಿಧವಾದ ಬಾಧಕಗಳು ಇಲ್ಲದಿರುವಾಗ ಎಂದರ್ಥ. ಅವುಗಳಲ್ಲಿ ಒಂದು ಬಾಧಕ–ಬೇರೆ ಎರಡು ಅವಚ್ಛೇದಕಗಳಿಂದಾಗಿಯೇ ಸಮರ್ಥಿಸ ಬಹುದಾದ ಕಾರ್ಯತಾಶ್ರಯದಲ್ಲಿ ಇರುವ ಧರ್ಮವು ಕಾರ್ಯತಾವಚ್ಛೇದಕವಾಗುವುದಿಲ್ಲ. ಅದಕ್ಕೆ ನೀಲಘಟತ್ವ ಉದಾಹರಣೆ. ಅಲ್ಲಿ ಅವಚ್ಛೇದಕಾಂತರ ಎಂದರೆ, ನೀಲತ್ವ–ಘಟತ್ವ. ತದವಚ್ಛಿನ್ನ ಕಾರ್ಯತಾ ಕ್ಲೃಪ್ತವಾಗಿದೆ. ಅಂತಹ ಎರಡು ವಿಧದ ಕಾರ್ಯತಾಗಳಿಗೆ ಆಶ್ರಯವಾದುದು ನೀಲಘಟ. ಅಲ್ಲಿ ವೃತ್ತಿಯಾಗಿದೆ ನೀಲಘಟತ್ವ. ಆದ್ದರಿಂದ ಅದು ಕಾರ್ಯತಾವಚ್ಛೇದಕ ಅಲ್ಲ.

ಇನ್ನೊಂದು–ಸ್ವಾವಚ್ಛಿನ್ನ–ಕಾರ್ಯತಾನಿರೂಪಿತ–ಕಾರಣವು ಅಸಂಭಾವಿತವಾಗಿರುವುದು. ಅದಕ್ಕೆ ಉದಾಹರಣೆ– ಘಟಜ್ಞಾನತ್ವ. ಪ್ರತ್ಯಕ್ಷ–ಅನುಮಿತಿ–ಶಾಬ್ದಬೋಧಗಳಲ್ಲಿ ಘಟಜ್ಞಾನತ್ವ ಇದೆ. ಆದರೆ, ಈ ಮೂರಕ್ಕೂ ಅನುಗತವಾದ ಒಂದು ಕಾರಣ ಇಲ್ಲ. ಆದ್ದರಿಂದ ಘಟಜ್ಞಾನತ್ವವು ಕಾರ್ಯತಾವಚ್ಛೇದಕವಲ್ಲ.

ಈ ಎರಡೂ ವಿಧದ ಬಾಧಕಗಳು ಇಲ್ಲದಿರುವಾಗ ಕಾರ್ಯಮಾತ್ರವೃತ್ತಿಯಾದ ಧರ್ಮವು ಕಾರ್ಯತಾವಚ್ಛೇದಕವಾಗಬೇಕು.

ಸಾಧಾರಣವಾಗಿ ಒಂದು ಧರ್ಮವು ಕಾರ್ಯತಾವಚ್ಛೇದಕವಾಗಬೇಕಾದರೆ ಬಾಧಕ–ಆ ಧರ್ಮವು ನಿತ್ಯವಸ್ತುಗಳಲ್ಲೂ ಇರುವುದು. ಉದಾಹರಣೆಗೆ ಜ್ಞಾನತ್ವ. ಅದು ನಿತ್ಯವಾದ

ಈಶ್ವರಜ್ಞಾನದಲ್ಲೂ ಇದೆ. ಆದರಿಂದಾಗಿ ಅದು ಕಾರ್ಯತಾವಚ್ಛೇದಕವಲ್ಲ. ಅಂತಹ ಬಾಧಕ ನೀಲಘಟತ್ವದಲ್ಲಿ ಇಲ್ಲ. ಹೀಗಾಗಿ ನೀಲಘಟತ್ವದಲ್ಲಿ ಬಾಧಕಾಭಾವೇ ಸತಿ ಕಾರ್ಯಮಾತ್ರವೃತ್ತಿತ್ವ ಇದೆ. ಹೇತು ಬಂತು. ಆದರೆ ಅದು ಕಾರ್ಯತಾವಚ್ಛೇದಕ ಅಲ್ಲ. ಸಾಧ್ಯ ಇಲ್ಲ, ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕಾಗಿ ಪಕ್ಷಧರಮಿಶ್ರಾದಿಗಳು ಹೇಳಿರುವ ಇನ್ನೆರಡು ಅವಚ್ಛೇದಕ ಬಾಧಕಗಳನ್ನೂ ಮೂಲದಲ್ಲಿ ತೋರಿಸಲಾಗಿದೆ.

'ಸಮಾಜಸ್ಯ ಆರ್ಥಿಕತ್ವಂ' ಎಂದರೆ ಸಮಾಜ=ಎರಡು ಕಾರ್ಯತಾವಚ್ಛೇದಕಧರ್ಮಗಳ ಸಮಾಗಮ. ಆರ್ಥಿಕ=ಅವಚ್ಛೇದಕಾಂತರಗಳಿಂದಲೇ ಉಪಪನ್ನವಾಗುವ ಕಾರ್ಯತಾಕ್ಕೆ ಯಾವುದು ಆಶ್ರಯವೋ ಆದರಲ್ಲಿ ಇರುವುದು. ನೀಲಘಟತ್ವವು ಅಂತಹ ಧರ್ಮ.[1]

## ನ್ಯಾಯದೀಪ

**ಏವಂ ಜನ್ಯಪ್ರತ್ಯಕ್ಷಪ್ರಮಾತ್ವಾದೇಃ ಪರತಸ್ತ್ವಪ್ರಾಪ್ತಾವಪಿ ಅನಿತ್ಯಪ್ರಮಾತ್ವಸ್ಯ ತನ್ನ ಪ್ರಾಪ್ತಮ್, ಇತ್ಯತ ಆಹ–ಏತಾದೃಶೇತಿ ॥ ಪ್ರಮಾತ್ವಸ್ಯ ॥ ಅನಿತ್ಯೇತಿ ಯೋಜ್ಯಮ್ । ಯದ್ವಾ, ಈಶ್ವರಜ್ಞಾನಪ್ರಾಮಾಣ್ಯಸ್ಯಾಪಿ ಪರತಸ್ತ್ವಂ ಪ್ರಾಪ್ತಮಿತಿ ಭಾವೇನ ಪ್ರಮಾತ್ವಸ್ಯ, ಇತ್ಯೇವೋಕ್ತಿಃ ।**

**ಏವಂ ಚೇತಿ ॥ ಅನಿತ್ಯಪ್ರತ್ಯಕ್ಷತ್ವಾದೇಃ ಕಾರ್ಯತಾವಚ್ಛೇದಕತ್ವೇನ ಅನಿತ್ಯ-ಪ್ರಮಾತ್ವಸ್ಯ ತದ್ವ್ಯಾಪಕತ್ವೇ ಸಾಧ್ಯಮಾನೇ ಸತೀತ್ಯರ್ಥಃ ।**

ಈ ಅನುಮಾನದಿಂದ ಜನ್ಯಪ್ರತ್ಯಕ್ಷಪ್ರಮಾತ್ವ, ಅನುಮಿತಿಪ್ರಮಾತ್ವ, ಶಾಬ್ದಪ್ರಮಾತ್ವಗಳಿಗೆ ಗುಣಜನ್ಯತ್ವ ಸಿದ್ಧವಾಗುವುದರಿಂದ ಪರತಸ್ತ್ವವು ಸಿದ್ಧವಾಗಬಹುದು. ಆದರೆ, ಅನಿತ್ಯಪ್ರಮಾತ್ವವು ಪರತಃ, ಎಂದು ಸಿದ್ಧವಾಗುವುದು ಹೇಗೆ? ಅದಕ್ಕೆ ಮೂಲದಲ್ಲಿ ಉತ್ತರ–ಅಂತಹ ಪ್ರತ್ಯಕ್ಷತ್ವಾದಿ ಧರ್ಮವ್ಯಾಪಕತ್ವವೇ ಅನಿತ್ಯಪ್ರಮಾತ್ವಕ್ಕೆ ಪರತಸ್ತ್ವ.

ಮೂಲದಲ್ಲಿ ಪ್ರಮಾತ್ವಕ್ಕೆ ಪರತಸ್ತ್ವ ಎಂದಿಷ್ಟೇ ಇದೆ. ಅನಿತ್ಯಪ್ರಮಾತ್ವಕ್ಕೆ ಪರತಸ್ತ್ವ ಎಂದು ಅರ್ಥವನ್ನು ತಿಳಿಯಬೇಕು. ಅಥವಾ ಅನಿತ್ಯ ಎಂಬ ವಿಶೇಷಣದ ಅಗತ್ಯವಿಲ್ಲ. ನಿತ್ಯವಾದ ಈಶ್ವರಪ್ರಮಾಗತ ಪ್ರಮಾತ್ವಕ್ಕೂ ವ್ಯಾಪಕತ್ವರೂಪವಾದ ಪರತಸ್ತ್ವವು ಸಿದ್ಧವಾಗುತ್ತದೆ.

'ಏವಂಚ' ಎಂದರೆ, ಅನಿತ್ಯಪ್ರತ್ಯಕ್ಷತ್ವವು ಕಾರ್ಯತಾವಚ್ಛೇದಕ, ತದ್ವ್ಯಾಪಕತ್ವವು ಪ್ರಮಾತ್ವಕ್ಕೆ ಎಂದಿರುವುದರಿಂದ ಎಂದರ್ಥ. ಹೀಗೆ ಹೇಳಿರುವುದರಿಂದ ತತ್ತತ್ಪ್ರಾಗಭಾವವನ್ನು ಇಟ್ಟುಕೊಂಡು ಅರ್ಥಾಂತರವನ್ನು ಹೇಳಲಾಗುವುದಿಲ್ಲ.

1. ಮಣಿಗ್ರಂಥದಲ್ಲಿ (ಪುಟ 336) ಇದರ ವಿವರಣೆ ಹೀಗಿದೆ– 'ನೀಲಘಟತ್ವಂ ತು ವಿಶಿಷ್ಟಂ ನ ಕಾರ್ಯತಾವಚ್ಛೇದಕಂ, ಪ್ರತ್ಯೇಕಾನುಗತ ಪ್ರಯೋಜಕ–ದ್ವಯಾದೇವ ವಿಶಿಷ್ಟಸಿದ್ಧೇಃ, ಆರ್ಥಃ ಸಮಾಜಃ ॥'

**नचात्राप्यनुगतहेत्वभावो बाधकः । प्रत्यक्षप्रमायामिन्द्रियार्थसन्निकर्षस्य अर्थस्य च शाब्दप्रमायां यथार्थवाक्यार्थज्ञानस्य च गुणस्यानुगमात् । भ्रमे त्वर्थोऽसन्निति न हेतुर्न वा तस्य सन्निकर्षः ।**

ಜನ್ಯಪ್ರತ್ಯಕ್ಷಪ್ರಮಾತ್ವವು ಕಾರ್ಯತಾವಚ್ಛೇದಕವಾಗಲೂ ಅನುಗತವಾದ ಕಾರಣ ಇಲ್ಲದಿರುವುದೇ ಬಾಧಕ. ಆದ್ದರಿಂದ 'ಬಾಧಕಂ ವಿನಾ' ಎಂಬ ಹೇತು ಅದರಲ್ಲಿ ಇಲ್ಲವಾದುದರಿಂದ ಅಸಿದ್ಧಿ, ಎಂದು ಆಕ್ಷೇಪ ಮಾಡಬಾರದು. ಅವುಗಳಿಗೆ ಅನುಗತವಾದ ಹೇತು ಇದೆ— ಪ್ರತ್ಯಕ್ಷಪ್ರಮಾಕ್ಕೆ ಇಂದ್ರಿಯಾರ್ಥಸನ್ನಿಕರ್ಷ ಮತ್ತು ವಿಷಯವು ಕಾರಣ. ಅನುಮಿತಿಪ್ರಮಾಕ್ಕೆ ಯಥಾರ್ಥವಾದ ಲಿಂಗಪರಾಮರ್ಶ ಕಾರಣ. ಶಾಬ್ದಪ್ರಮಾಕ್ಕೆ ಯಥಾರ್ಥವಾದ ವಾಕ್ಯಾರ್ಥಜ್ಞಾನ (ಯೋಗ್ಯತಾಜ್ಞಾನ) ಇವುಗಳೇ ಕಾರಣವಾಗಿರುವ ಗುಣಗಳು. ಇವುಗಳು ಪ್ರತ್ಯಕ್ಷಾದಿಗಳಿಗೆ ಅನುಗತವಾದ ಗುಣಗಳಾಗಿವೆ. ಭ್ರಮಾತ್ಮಕಜ್ಞಾನಕ್ಕೆ ವಿಷಯವಾದ ರಜತವು ಪುರೋದೇಶದಲ್ಲಿ ಅಸತ್ಯವಾದುದರಿಂದ ಅದರೊಂದಿಗೆ ಸನ್ನಿಕರ್ಷವಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಭ್ರಮೆಗೆ ಅರ್ಥವು ಕಾರಣವೂ ಆಗುವುದಿಲ್ಲ. ಹೀಗೆ ಭ್ರಮಾತ್ಮಕಪ್ರತ್ಯಕ್ಷವು ಉಕ್ತಗುಣಜನ್ಯವಲ್ಲ.

## ನ್ಯಾಯದೀಪ

**ಬಾಧಕ ಇತಿ ॥ ಸ್ವಾವಚ್ಛಿನ್ನಕಾರ್ಯತಾ–ನಿರೂಪಿತ–ಏಕಕಾರಣಾಭಾವರೂಪ ಬಾಧಕ ಸದ್ಭಾವಾತ್, ಬಾಧಕಂ ವಿನಾ, ಇತ್ಯುಕ್ತವಿಶೇಷಣಾಸಿದ್ಧಿರಿತಿ ಭಾವಃ ।**

**ಮಣ್ಯಾದ್ಯುಕ್ತಮೇವಾಹ–ಪ್ರತ್ಯಕ್ಷೇತಿ ॥ ಅನಿತ್ಯೇತಿ ಯೋಜ್ಯಮ್ । ಗುಣಸ್ಯೇತಿ । ಅನ್ವಯವ್ಯತಿರೇಕಾದಿತಿ ಮಣ್ಯುಕ್ತೇಃ (ಪು.353) ಇತಿ ಭಾವಃ । ಸಾದೃಶ್ಯಜ್ಞಾನಮ್ ಉಪಮಿತೌ ಗುಣಃ, ಇತಿ ಮಣ್ಯುಕ್ತಮಪಿ ಅತ್ರ ನಾನೂದಿತಮ್ । ಉಪಮಾನಸ್ಯ ಅನುಮಾನಾನತಿರೇಕಸ್ಯ ಅನ್ಯತ್ರ ವ್ಯಕ್ತತ್ವಾತ್।**

ಪ್ರತ್ಯಕ್ಷತ್ವವು ಕಾರ್ಯತಾವಚ್ಛೇದಕವಾಗಲು ಅನುಗತಕಾರಣಾಭಾವವು ಬಾಧಕ ಎಂದಿದೆ, ಮೂಲದಲ್ಲಿ. ಘಟಜ್ಞಾನತ್ವವು ಕಾರ್ಯತಾವಚ್ಛೇದಕವಾಗಲು ಇದು ಬಾಧಕವಾಗಿದೆ. ಅದರಂತೆ ಪ್ರತ್ಯಕ್ಷತ್ವವು ಅವಚ್ಛೇದಕವಾಗಲೂ ಇದೇ ಬಾಧಕ. ಸ್ವಂ=ಪ್ರತ್ಯಕ್ಷತ್ವಂ, ಪ್ರತ್ಯಕ್ಷತ್ವಾವಚ್ಛಿನ್ನ ಕಾರ್ಯತಾನಿರೂಪಿತ ಕಾರಣತಾಶ್ರಯವಾದುದು ಒಂದು ಇಲ್ಲ. ಹೀಗೆ, ಬಾಧಕವಿರುವುದರಿಂದ ಹೇತುಘಟಕ ವಿಶೇಷಣಾಂಶ ಬಾಧಕಂ ವಿನಾ, ಎಂಬುದು ಪಕ್ಷದಲ್ಲಿ ಅಸಿದ್ಧ, ಎಂದು ಭಾವ. ಇದಕ್ಕೆ ಮಣ್ಯುಕ್ತವಾದ ಪರಿಹಾರವನ್ನು ಮೂಲದಲ್ಲಿ ಹೇಳಲಾಗಿದೆ. ಪ್ರತ್ಯಕ್ಷಕ್ಕೆ ಇಂದ್ರಿಯಾರ್ಥ ಸನ್ನಿಕರ್ಷ ಮತ್ತು ಅರ್ಥ ಇವೆರಡು ಕಾರಣವಾಗಿದೆ, ಎಂದು. ಅನ್ವಯ–ವ್ಯತಿರೇಕಗಳಿಂದ ಅವೆರಡು ಪ್ರತ್ಯಕ್ಷ

ಕಾರಣ, ಎಂದು ಸಿದ್ಧವಾಗುತ್ತದೆ. ಹೀಗೆ ಕಾರಣವಿರುವುದರಿಂದ ಪ್ರತ್ಯಕ್ಷತ್ವವು ಕಾರ್ಯತಾವಚ್ಛೇದಕ ವಾಗಲು ಬಾಧಕವಿಲ್ಲ.

ಮಣಿಯಲ್ಲಿ, ಸಾದೃಶ್ಯಜ್ಞಾನವು ಉಪಮಿತಿಗೆ ಗುಣ, ಎಂದೂ ಹೇಳಿದೆ. ಅದನ್ನು ಇಲ್ಲಿ ಅನುವಾದ ಮಾಡಿಲ್ಲ. ಏಕೆಂದರೆ, ಉಪಮಾನವು ಅನುಮಾನದಲ್ಲೇ ಸೇರುವುದರಿಂದ ಅದು ಪ್ರತ್ಯೇಕ ಪ್ರಮಾಣವೇ ಅಲ್ಲ, ಎಂದು ನವೀನಸಿದ್ಧಾಂತ.

## ಪ್ರತ್ಯಕ್ಷಹೇತುಗುಣನಿರಾಸ

**इति चेदुच्यते—प्रत्यक्षप्रमामात्रे न सन्निकर्षार्थौ हेतू । शुक्तौ रूप्यभ्रमकालेऽपि तयोः सत्वेन शुक्तित्वेन शुक्तिप्रमाप्रसङ्गात्; दोषः प्रतिबन्धक इति चेत् तर्ह्यावश्यकत्वाद् दोषाभावादेव प्रमास्तु ।**

ಹೀಗೆ ಪ್ರತ್ಯಕ್ಷಾದಿಪ್ರಮಾಗಳಿಗೆ ಪ್ರತ್ಯೇಕವಾದ ಗುಣಗಳನ್ನು ಸಾಧನೆ ಮಾಡಿದರೆ ನಾವು ಹೇಳುತ್ತೇವೆ– ಸಕಲಪ್ರತ್ಯಕ್ಷಪ್ರಮಾಕ್ಕೂ ಸನ್ನಿಕರ್ಷ ಅಥವಾ ಅರ್ಥ ಕಾರಣ ಎಂದು ಹೇಳಲಾಗುವುದಿಲ್ಲ. ಕೆಲವೊಮ್ಮೆ ಸನ್ನಿಕರ್ಷ–ಅರ್ಥಗಳು ಇದ್ದರೂ ಪ್ರಮಾ ಬರುವುದಿಲ್ಲ. ಉದಾಹರಣೆಗೆ– ರಜತಭ್ರಮೆ ಬರುವಾಗ ಶುಕ್ತಿರೂಪವಾದ ಅರ್ಥ ಮತ್ತು ಅದರೊಂದಿಗೆ ಕಣ್ಣಿನ ಸನ್ನಿಕರ್ಷ ಎರಡೂ ಇದೆ. ಆದರೆ ಶುಕ್ತಿತ್ವೇನ ಶುಕ್ತಿ ಪ್ರಮಾದ ಬದಲು ಭ್ರಮೆ ಹುಟ್ಟಿದೆ. ಹೀಗೆ ಅನ್ವಯವ್ಯಭಿಚಾರ. ಅಲ್ಲಿ ಸನ್ನಿಕರ್ಷವಿದ್ದರೂ ಪ್ರಮಾ ಬರದಿರುವುದಕ್ಕೆ ದೋಷವು ಪ್ರತಿಬಂಧಕವಾಗಿದೆ, ಎನ್ನುವುದಾದಲ್ಲಿ ಸನ್ನಿಕರ್ಷವು ಪ್ರಮಾಕಾರಣ ಎನ್ನುವುದರ ಬದಲು ದೋಷಾಭಾವವು ಕಾರಣ ಎನ್ನುವುದೇ ಉಚಿತ. ಏಕೆಂದರೆ, ದೋಷಕ್ಕೆ ಪ್ರತಿಬಂಧಕತ್ವವು ಅನಿವಾರ್ಯ. ಪ್ರತಿಬಂಧಕಾಭಾವ ಕಾರ್ಯಹೇತು. ಏವಂಚ, ಸನ್ನಿಕರ್ಷಕ್ಕೆ ಪ್ರಮಾಹೇತುತ್ವವೇ ಸಿದ್ಧವಾಗುವುದಿಲ್ಲ.

## ನ್ಯಾಯದೀಪ

**ಸನ್ನಿಕರ್ಷಾರ್ಥಾವಿತಿ ॥ ಅಲ್ಪನಿರಾಸತ್ವಾತ್ ಸನ್ನಿಕರ್ಷಸ್ಯ ಪೂರ್ವಂ ನಿರ್ದೇಶಃ। ಯದ್ವಾ, 'ನಾಸಿಕಾ–ಸ್ತನಯೋಃ ಧ್ಮಾಧೇಟೋಃ' ಇತ್ಯಾದಿನಿರ್ದೇಶೇನ 'ಅಲ್ಪಾಚ್‌ತರಂ ಪೂರ್ವಂ' ಇತ್ಯಸ್ಯ ಪ್ರಾಯಿಕತ್ವಾತ್ 'ಅರ್ಥಸ್ಯ ಯೌ ಸನ್ನಿಕರ್ಷೌ' ಇತಿ ಭ್ರಮನಿರಾಸಾಯ ಏವಂ ನಿರ್ದೇಶಾತ್ ಅದೋಷಃ ॥**

**ಅನ್ವಯವ್ಯಭಿಚಾರಮಾಹ–ಶುಕ್ತಾವಿತಿ ॥ ತಯೋಃ=ಶುಕ್ತಿರೂಪಾರ್ಥ–ತತ್‌ಸನ್ನಿಕರ್ಷಯೋಃ, ಇತ್ಯರ್ಥಃ । ಇದಂತ್ವೇನ ಪ್ರಮಾತ್ವಸ್ಯ ಸತ್ವಾತ್, ಶುಕ್ತಿತ್ವೇನ ಇತ್ಯುಕ್ತಿಃ ।**

**ಮಣ್ಯಾದಿನಾ ದಾಹಾಭಾವೇಽಪಿ ವಹ್ನೇಃ ದಾಹಾಹೇತುತ್ವಾಭಾವವತ್ ಇಹಾಪಿ ಅಹೇತುತ್ವಂ ನ ಸನ್ನಿಕರ್ಷಾದೇಃ ಪ್ರಾಪ್ಯತೇ ಇತಿ ಭಾವೇನ ಆಶಂಕ್ಯ ನಿರಾಹ–ದೋಷ ಇತಿ ॥ ದೋಷಾಭಾವಾದೇವೇತಿ ॥ ತಸ್ಯ ಚ ಅನಿತ್ಯಪ್ರಮಾಮಾತ್ರೇ ಅನುಗತಹೇತುತ್ವಾತ್ ಕಿಮ್ ಉಕ್ತಕುಸೃಷ್ಟ್ಯಾ, ಇತಿ ಭಾವಃ ।**

ಮೂಲದಲ್ಲಿ 'ಸನ್ನಿಕರ್ಷಾರ್ಥೌ' ಎಂದು ಪ್ರಯೋಗ ಮಾಡಲಾಗಿದೆ. ದ್ವಂದ್ವಸಮಾಸದಲ್ಲಿ ಅಲ್ಪಸ್ವರಾಕ್ಷರವಿರುವ ಪದವು ಪೂರ್ವಪದವಾಗಿರಬೇಕು, ಎಂಬ ನಿಯಮಾನುಸಾರವಾಗಿ 'ಅರ್ಥ–ಸನ್ನಿಕರ್ಷೌ' ಎಂದೇ ಪ್ರಯೋಗ ಸಾಧು. ಆದರೂ ಸನ್ನಿಕರ್ಷಕ್ಕೆ ಗುಣತ್ವನಿರಾಸ ಅಲ್ಲವಾದುದರಿಂದ ಅದನ್ನು ಮೊದಲು ಹೇಳಲಾಗಿದೆ. ಅಥವಾ, ಈ ನಿಯಮವನ್ನು ಪಾಣಿನಿಯೇ ಉಲ್ಲಂಘಿಸಿದ್ದಾನೆ. ಅವನು 'ನಾಸಿಕಾಸ್ತನಯೋಃ' ಎಂದು ಸೂತ್ರದಲ್ಲಿ ಪ್ರಯೋಗಮಾಡಿದ್ದಾನೆ. ಈ ನಿಯಮಾನುಸಾರವಾಗಿ 'ಸ್ತನ–ನಾಸಿಕಯೋಃ' ಎಂದಾಗಬೇಕು. ಅಥವಾ, ಅರ್ಥಸನ್ನಿಕರ್ಷೌ ಎಂದು ಪ್ರಯೋಗಿಸಿದರೆ, 'ಅರ್ಥಸ್ಯ ಸನ್ನಿಕರ್ಷೌ' ಎಂಬ ತತ್ಪುರುಷಸಮಾಸದ ಪ್ರಸಕ್ತಿ ಇದೆ. ಅದರ ನಿವಾರಣೆಗಾಗಿ 'ಸನ್ನಿಕರ್ಷಾರ್ಥೌ' ಎಂದು ಪ್ರಯೋಗಿಸಲಾಗಿದೆ.

ಸನ್ನಿಕರ್ಷವು ಪ್ರಮಾಹೇತು ಎನ್ನುವುದಕ್ಕೆ ಅನ್ವಯವ್ಯಭಿಚಾರವನ್ನು 'ಶುಕ್ತೌ' ಇತ್ಯಾದಿ ವಾಕ್ಯದಲ್ಲಿ ಹೇಳಲಾಗಿದೆ. ಮೂಲದಲ್ಲಿ ತಯೋಃ ಎಂದರೆ ಶುಕ್ತಿ ಎಂಬ ಅರ್ಥ ಮತ್ತು ಅದಕ್ಕೆ ಇಂದ್ರಿಯದೊಂದಿಗೆ ಆಗುವ ಸನ್ನಿಕರ್ಷಗಳಿಗೆ ಎಂದರ್ಥ. ಶುಕ್ತಿಪ್ರಮಾ ಬರಲಿ ಎಂದು ಆಪತ್ತಿ ಮಾಡಿದರೆ ಇಷ್ಟಾಪತ್ತಿ. ಇದಂತ್ವೇನ ಶುಕ್ತಿಯ ಪ್ರಮಾ ಬರುತ್ತಿದೆ. ಆದಕ್ಕಾಗಿ, ಶುಕ್ತಿತ್ವೇನ ಪ್ರಮಾ ಬರಲಿ, ಎಂದು ಆಪಾದಿಸಲಾಗಿದೆ.

ಸನ್ನಿಕರ್ಷರೂಪವಾದ ಪ್ರಮಾಕಾರಣ ಇದ್ದರೂ ದೋಷರೂಪ ಪ್ರತಿಬಂಧಕವು ಇರುವ ಕಾರಣದಿಂದ ಪ್ರಮಾರೂಪಕಾರ್ಯ ಉತ್ಪತ್ತಿಯಾಗುವುದಿಲ್ಲ. ತಾವತಾ ಸನ್ನಿಕರ್ಷ ಅಕಾರಣ ವೆಂದಾಗುವುದಿಲ್ಲ. ಉದಾಹರಣೆಗೆ– ಮಣಿ ಇದ್ದಾಗ ವಹ್ನಿಯಿಂದ ದಾಹವಾಗದಿರುವ ಮಾತ್ರದಿಂದ ಅದು ದಾಹಕಾರಣವಲ್ಲ, ಎಂದೇನೂ ಆಗುವುದಿಲ್ಲ. ಈ ಆಶಂಕೆಗೆ ಉತ್ತರ– 'ದೋಷಃ' ಎಂಬ ಮೂಲವಾಕ್ಯದಲ್ಲಿ ಇದೆ.

ದೋಷಾಭಾವವು ಕಾರಣವೆಂದಾಗ ಅದು ಸಕಲಪ್ರಮಾನುಗತವಾಗುತ್ತದೆ. ಹೀಗೆ, ಅನಿತ್ಯಪ್ರಮಾಗಳಿಗೆಲ್ಲ ದೋಷಾಭಾವವೇ ಕಾರಣವೆಂದು ಹೇಳಲು ಬರುವಾಗ ಒಂದೊಂದು ಅನುಭವಕ್ಕೆ ಬೇರೆ ಬೇರೆ ಗುಣಗಳನ್ನು ಕಲ್ಪಿಸುವ ಈ ಕುಸೃಷ್ಟಿ ಏಕೆ?

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವೇವಮ್, ದಾಹಸ್ಥಲೇಽಪಿ ಮಣ್ಯಭಾವ ಏವ ಹೇತುಃ ಸ್ಯಾತ್ ನ ವಹ್ನಿಃ ।**

**ಅನ್ವಯ–ವ್ಯತಿರೇಕಬಲಾತ್ ವಹ್ನೇಃ ದಾಹಹೇತುತ್ವೇ, ಸನ್ನಿಕರ್ಷಾದೇರಪಿ ಅಸ್ತು ಹೇತುತ್ವಮ್ । ಸನ್ನಿಕರ್ಷೋತ್ಕರ್ಷೇಣ ಪ್ರಮೋತ್ಕರ್ಷದರ್ಶನಾಚ್ಚ । ಇತಿ ಚೇತ್–ಕಿಮತ್ರ ಸನ್ನಿಕರ್ಷಪದೇನ ಲೌಕಿಕ ಏವ ಅಭಿಮತಃ, ಅಥ, ಅಲೌಕಿಕ–ಪ್ರತ್ಯಾಸತ್ತಿಸಾಧಾರಣಂ ಸನ್ನಿಕರ್ಷಮಾತ್ರಮ್ ಇತಿ ವಿಕಲ್ಪೌ ಹೃದಿ ನಿಧಾಯ ಆದ್ಯೇ ವ್ಯತಿರೇಕವ್ಯಭಿಚಾರಮಾಹ–ಕಿಂಚೇತಿ ॥**

ಹಿಂದಿನ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳಬಹುದು— ದೋಷಾಭಾವವು ಕಾರಣವಾಗುವ ಮಾತ್ರಕ್ಕೆ ಸನ್ನಿಕರ್ಷವು ಕಾರಣವಲ್ಲ ಎನ್ನುವುದು ಸರಿಯಲ್ಲ, ಹಾಗೆ ಹೇಳಿದರೆ ದಾಹಸ್ಥಳದಲ್ಲೂ ಮಣ್ಯಭಾವವೇ ಕಾರಣ. ವಹ್ನಿಯು ದಾಹಕ್ಕೆ ಕಾರಣವೇ ಅಲ್ಲ, ಎಂದಾದೀತು. ಹೀಗಿದ್ದರೂ ಅನ್ವಯ–ವ್ಯತಿರೇಕಗಳಿಂದಾಗಿ ವಹ್ನಿಯೂ ಕಾರಣ, ಎಂದು ಕಲ್ಪಿಸುವುದಾದಲ್ಲಿ ಸನ್ನಿಕರ್ಷಕ್ಕೂ ಅನ್ವಯ–ವ್ಯತಿರೇಕಗಳಿಂದಾಗಿ ಪ್ರಮಾಕಾರಣತ್ವವನ್ನು ಹೇಳಬೇಕಾಗುತ್ತದೆ. ಅಷ್ಟೇ ಅಲ್ಲ, ಸನ್ನಿಕರ್ಷ ಸರಿಯಾಗಿ ಆದಷ್ಟೂ ಪ್ರಮಾದಲ್ಲಿ ಉತ್ಕರ್ಷವು ಅನುಭವಸಿದ್ಧವಾಗಿದೆ. ಇದರಿಂದಾಗಿಯೂ ಸನ್ನಿಕರ್ಷವು ಪ್ರಮಾಕಾರಣ, ಎಂದು ಹೇಳಲೇಬೇಕಾಗುತ್ತದೆ.

ಈ ಸಮಾಧಾನದ ಮೇಲೆ, ಎರಡು ವಿಕಲ್ಪಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ದೋಷವನ್ನು ಮುಂದಿನ 'ಕಿಂಚ' ಎಂಬ ಮೂಲದಲ್ಲಿ ಹೇಳಲಾಗಿದೆ.

ವಿಕಲ್ಪ 1. ಸನ್ನಿಕರ್ಷ ಎಂದರೆ ಲೌಕಿಕ ಸನ್ನಿಕರ್ಷ ಮಾತ್ರವೋ ?

2. ಲೌಕಿಕ–ಅಲೌಕಿಕ ಎರಡೂ ಸೇರಿದಂತೆ ಸನ್ನಿಕರ್ಷವು ಗುಣವೋ?

ಇವುಗಳಲ್ಲಿ ಮೊದಲನೆಯ ಪಕ್ಷಕ್ಕೆ ವ್ಯತಿರೇಕವ್ಯಭಿಚಾರ ದೋಷವನ್ನು ಇಲ್ಲಿ ಹೇಳಲಾಗಿದೆ—

**किञ्च षड्विधसन्निकर्षान्यतरत् योगिप्रत्यक्षादौ, प्रत्यभिज्ञायां च तत्तादौ नास्ति । तत्रच योगजधर्म–संस्कारादिः प्रत्यासत्तिश्चेत् तर्हि भ्रमेऽपि दोषस्तथा स्यात् ।**

ಸನ್ನಿಕರ್ಷವು ಪ್ರತ್ಯಕ್ಷಪ್ರಮಾಕ್ಕೆ ಗುಣ ಎಂದರೆ ಸಂಯೋಗಾದಿ ಆರು ವಿಧದ ಸನ್ನಿಕರ್ಷಗಳು ಅಂದರೆ ಲೌಕಿಕ ಸನ್ನಿಕರ್ಷಗಳು ಗುಣ ಎಂದು ಅರ್ಥವಾದರೆ ಯೋಗಿಗಳಿಗೆ ಬರುವ ಪ್ರತ್ಯಕ್ಷದಲ್ಲಿ ಈ ಸನ್ನಿಕರ್ಷಗಳಿಲ್ಲ. ನಮಗೆ ಬರುವ 'ಸೋಽಯಂ ದೇವದತ್ತಃ' ಎಂಬ ಪ್ರತ್ಯಭಿಜ್ಞಾದಲ್ಲಿಯೂ ತತ್ತಾಂಶದಲ್ಲಿ (ಅತೀತದೇಶ–ಕಾಲ–ಸಂಬಂಧದಲ್ಲಿ) ಲೌಕಿಕಸನ್ನಿಕರ್ಷ ಇಲ್ಲ. ಆದರೆ, ಅದು ಪ್ರಮಾ ಆಗಿದೆ. ಹೀಗೆ ವ್ಯತಿರೇಕವ್ಯಭಿಚಾರ. ಇದಕ್ಕೆ ಪರಿಹಾರವಾಗಿ–ಯೋಗಿಪ್ರತ್ಯಕ್ಷದಲ್ಲಿ ಯೋಗಾನುಷ್ಠಾನದಿಂದ ಪಡೆದ ಸಾಮರ್ಥ್ಯವೇ ಸನ್ನಿಕರ್ಷ ಎಂದೂ ತತ್ತಾಂಶದಲ್ಲಿ ಸಂಸ್ಕಾರವು ಸನ್ನಿಕರ್ಷ, ಎಂದೂ ದ್ವಿತೀಯ ಪಕ್ಷವನ್ನು ಹೇಳಬೇಕು. ಹಾಗೆ ಹೇಳಿದರೆ, ಭ್ರಮೆಗೆ ದೋಷವೂ

ಸನ್ನಿಕರ್ಷವಾಗಲಿ. ಇತ್ಥಂಚ, ದೋಷಸನ್ನಿಕರ್ಷರೂಪ ಗುಣಜನ್ಯವಾದುದರಿಂದ ಭ್ರಮೆಯೂ ಪ್ರಮಾ ಆಗಲಿ. ಹೀಗೆ ಅಲ್ಲಿ ಸನ್ನಿಕರ್ಷರೂಪಗುಣ ಇದ್ದರೂ ಪ್ರಮಾರೂಪವಾದ ಕಾರ್ಯವು ಇಲ್ಲದಿರುವುದರಿಂದ ಅನ್ವಯವ್ಯಭಿಚಾರ.

## ನ್ಯಾಯದೀಪ

**ಷಡ್ವಿಧೇತಿ ॥ ಸಂಯೋಗ–ಸಂಯುಕ್ತಸಮವಾಯ–ಸಂಯುಕ್ತಸಮವೇತ ಸಮವಾಯ–ಸಮವಾಯ–ಸಮವೇತಸಮವಾಯ–ವಿಶೇಷಣವಿಶೇಷ್ಯಭಾವ–ರೂಪೇತ್ಯರ್ಥಃ। ಅನ್ಯತರದಿತ್ಯಸ್ಯ ಪ್ರಾಗ್ವತ್ ಸಾಧುತ್ವಂ ಧ್ಯೇಯಮ್। ಯೋಗಿಪ್ರತ್ಯಕ್ಷಾದೌ ಇತಿ ಆದಿಪದೇನ ಸಾಮಾನ್ಯಜ–ಪ್ರತ್ಯಕ್ಷಗ್ರಹಃ। ಪ್ರತ್ಯಭಿಜ್ಞಾಯಾಮ್ ಇತ್ಯುಪಲಕ್ಷಣಮ್। 'ಸುರಭಿ ಚಂದನಮ್' ಇತ್ಯಾದಿ ಪ್ರತ್ಯಕ್ಷಂ ಚ ಗ್ರಾಹ್ಯಮ್। ತೇನ, ತತ್ರಾದೌ ಇತ್ಯಾದಿಪದೇನ ಉಪನೀತ–ಗಂಧಾದಿಗ್ರಹಃ।**

**ದ್ವಿತೀಯಮಾಶಂಕ್ಯ ಅನ್ವಯ ವ್ಯಭಿಚಾರೇಣ ನಿರಾಹ–ತತ್ರಚೇತಿ ॥ ಸಂಸ್ಕಾರಾದಿಃ ಇತ್ಯಾದಿಪದೇನ ಜ್ಞಾನ–ಸಾಮಾನ್ಯಯೋಃ ಗ್ರಹಃ। ತಥೇತಿ ॥ ಪ್ರತ್ಯಾಸತ್ತಿರಿತ್ಯರ್ಥಃ। ತಥಾಚ ತಾದೃಶ–ಪ್ರತ್ಯಾಸತ್ತೌ ಸತ್ಯಾಮಪಿ ತತ್ರ ಪ್ರಮಾ ಅನುದಯಾತ್ ವ್ಯಭಿಚಾರ ಇತಿ ಭಾವಃ।**

ಮೂಲದಲ್ಲಿ ಉಲ್ಲೇಖಿಸಿರುವ ಷಡ್ವಿಧ ಸನ್ನಿಕರ್ಷಗಳು ಸಂಯೋಗಾದಿಗಳು. ಅವುಗಳು ಕ್ರಮವಾಗಿ 1.ದ್ರವ್ಯ 2.ಗುಣ–ಕ್ರಿಯಾ–ಜಾತಿ 3.ಗುಣಕ್ರಿಯಾಗತಜಾತಿ 4.ಶಬ್ದ 5.ಶಬ್ದತ್ವ 6.ಅಭಾವ ಜ್ಞಾನಕ್ಕೆ ಹೇತುಗಳು.

ಆರು ಸನ್ನಿಕರ್ಷಗಳಲ್ಲಿ ಒಂದು ಎಂದಾಗ 'ಅನ್ಯತಮಂ' ಎಂದು ಹೇಳುವುದು ಉಚಿತ ವಾದರೂ ಭಾವಗ್ರಾಹಕ ಐದು, ಅಭಾವಗ್ರಾಹಕ ಒಂದು ಹೀಗೆ ಎರಡು ಗುಂಪು ಮಾಡಿ 'ಅನ್ಯತರತ್' ಎಂಬ ಮೂಲದ ಪ್ರಯೋಗವನ್ನು ಕೂಡಿಸಬೇಕು.

ಯೋಗಿಪ್ರತ್ಯಕ್ಷಾದೌ ಎಂಬಲ್ಲಿ ಆದಿಪದದಿಂದ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯಿಂದ ಹುಟ್ಟುವ ಜ್ಞಾನವನ್ನು ಪರಿಗ್ರಹಿಸಬೇಕು.

ಪ್ರತ್ಯಭಿಜ್ಞಾ ಉಪಲಕ್ಷಣ. 'ಸುರಭಿ ಚಂದನಮ್' ಎಂಬ ಜ್ಞಾನಲಕ್ಷಣಾಪ್ರತ್ಯಾಸತ್ತಿಜನ್ಯವಾದ ಜ್ಞಾನವನ್ನೂ ಪರಿಗ್ರಹಿಸಬೇಕು. ಅದು ಗಂಧಜ್ಞಾನರೂಪವಾದ ಪ್ರತ್ಯಾಸತ್ತಿಯಿಂದ ಜನ್ಯವಾಗಿದೆ.

ಎರಡನೆಯ ವಿಕಲ್ಪ, ಸನ್ನಿಕರ್ಷಗಳೆಲ್ಲವೂ ಗುಣಗಳು ಎಂದು. ಇದನ್ನು ಆಶಂಕೆ ಮಾಡಿ,

ವ್ಯಭಿಚಾರ ದೋಷ ಹೇಳಿ ನಿರಾಕರಿಸುತ್ತಾರೆ– 'ತತ್ರ ಚ' ಎಂಬ ವಾಕ್ಯದಿಂದ. ಮೂಲದ ಸಂಸ್ಕಾರಾದಿ ಎಂಬ ಆದಿಪದದಿಂದ ಜ್ಞಾನಲಕ್ಷಣಾ–ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಗಳನ್ನೂ ಪರಿಗ್ರಹಿಸಬೇಕು.

ಏವಂಚ, ದೋಷರೂಪ ಪ್ರತ್ಯಾಸತ್ತಿ ಇದ್ದರೂ ಭ್ರಮಸ್ಥಳದಲ್ಲಿ ಪ್ರಮಾರೂಪವಾದ ಕಾರ್ಯ ಇಲ್ಲದಿರುವುದರಿಂದ ಅನ್ವಯವ್ಯಭಿಚಾರ, ಎಂದು ಮೂಲದ ಅಭಿಪ್ರಾಯ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಮ್ ಅರ್ಥಸ್ಯಾಪಿ ಅನನ್ಯಥಾಸಿದ್ಧಾನ್ವಯವ್ಯತಿರೇಕೌ ನ ಸ್ತಃ। ಅನ್ಯಥಾಖ್ಯಾತಿವಿಚಾರೇ ಸುಧೋಕ್ತರೀತ್ಯಾ ಕ್ವಚಿದ್ ವಿಶೇಷಣಾಭಾವಾತ್, ಕ್ವಚಿದ್ ವಿಶೇಷ್ಯಾಭಾವಾದಿತಿ ಭಾವೇನಾಹ–ಕಿಂಚೇತಿ ॥**

ಸನ್ನಿಕರ್ಷದಂತೆ, ಅರ್ಥಕ್ಕೂ (ವಿಷಯಕ್ಕೂ) ಅನನ್ಯಥಾಸಿದ್ಧವಾದ ಅನ್ವಯ–ವ್ಯತಿರೇಕಗಳು ಇಲ್ಲ. ಕೆಲವುಕಡೆ ಅನ್ವಯವ್ಯತಿರೇಕರೂಪವಾದ ವಿಶೇಷ್ಯಾಂಶ ಇದ್ದರೂ ವಿಶೇಷಣವಾದ ಅನನ್ಯಥಾಸಿದ್ಧತ್ವವು ಇರುವುದಿಲ್ಲ. ಉದಾ–ವರ್ತಮಾನವಿಷಯಕಪ್ರತ್ಯಕ್ಷಕ್ಕೂ ವಿಷಯಕ್ಕೂ ಅನ್ವಯವ್ಯತಿರೇಕ ಇದೆ. ಆದರೆ, ಸನ್ನಿಕರ್ಷಕ್ಕಾಗಿ ಅಷ್ಟೇ ಅಲ್ಲಿ ಅರ್ಥದ ಅಗತ್ಯ. ಆದ್ದರಿಂದ ಅರ್ಥವು ಸನ್ನಿಕರ್ಷದಿಂದ ಅನ್ಯಥಾಸಿದ್ಧ. ಇನ್ನು ಕೆಲವೆಡೆ ವಿಶೇಷ್ಯವೇ ಇಲ್ಲ. ಯೋಗಿಗಳಿಗೆ ಪ್ರತ್ಯಕ್ಷ ಬರುವಾಗ ಅರ್ಥದ ಅನ್ವಯವ್ಯತರೇಕಗಳೇ ಇಲ್ಲ. ಆದ್ದರಿಂದ ಅರ್ಥವು ಜ್ಞಾನಕ್ಕೆ ಕಾರಣವಲ್ಲ. ಅರ್ಥವು ಕಾರಣವಲ್ಲ ಎಂಬುದನ್ನು ಪ್ರಾಭಾಕರರು ಹೇಳುವ ಅಖ್ಯಾತಿವಾದವನ್ನು ನಿರಾಕರಿಸುವ ಸಂದರ್ಭಲ್ಲಿ ನ್ಯಾಯಸುಧಾದಲ್ಲೂ ಹೇಳಲಾಗಿದೆ. (ನನು ಜನಕಸ್ಯೈವ ಸಾಕ್ಷಾತ್ಕಾರಿಪ್ರತ್ಯಯವಿಷಯತ್ವಂ ದೃಷ್ಟಮ್...ಸುಧಾ)[1]

**किञ्च चक्षुरादिवत् कारणत्वेन धर्मिग्राहकमानासिद्धोऽर्थः सन्निकर्षेणान्यथासिद्धत्वात् अतीतादिविषयकयोगिप्रत्यक्षादावसत्वाच्च न प्रत्यक्षप्रमाहेतुः । अन्यथा वर्तमानविषयकानुमितौ अपि अर्थो हेतुः स्यात् ।**

ಅರ್ಥವೂ ಪ್ರತ್ಯಕ್ಷಕ್ಕೆ ಕಾರಣವಲ್ಲ. ಪ್ರತ್ಯಕ್ಷಕ್ಕೆ ವಿಷಯೇಂದ್ರಿಯಸಂಯೋಗವು ಜನಕ. ಅಂತಹ ಸಂಯೋಗವಾಗಬೇಕಾದರೆ ಅರ್ಥ ಇರಬೇಕು. ಹೀಗೆ ಸನ್ನಿಕರ್ಷದಿಂದ ಅರ್ಥವು ಅನ್ಯಥಾಸಿದ್ಧ. ಹೀಗೆ ಹೇಳಿದರೆ ಇಂದ್ರಿಯವೂ ಅನ್ಯಥಾಸಿದ್ಧವಾದೀತು, ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ–ಇಂದ್ರಿಯ ಸ್ವರೂಪವು ಸಿದ್ಧವಾಗುವಾಗಲೇ ಪ್ರತ್ಯಕ್ಷಕಾರಣತ್ವೇನೈವ ಸಿದ್ಧವಾಗುತ್ತದೆ.

---

1. **ನ್ಯಾಯಸುಧಾಪರಿಮಳ ವ್ಯಾಖ್ಯಾನದ ಈ ಭಾಗದಲ್ಲಿ ರಾಯರು ತರ್ಕತಾಂಡವವನ್ನು ಉಲ್ಲೇಖಿಸಿದ್ದಾರೆ— ತದುಕ್ತಂ ತರ್ಕತಾಂಡವೇ ಪ್ರತ್ಯಕ್ಷಾದಿಪ್ರಮಾಸು ಅನುಗತಗುಣಭಂಗೇ–ಚಕ್ಷುರಾದಿವತ್... ಪ್ರತ್ಯಕ್ಷಪ್ರಮಾಹೇತುರಿತಿ ॥**

ರೂಪಾದಿಜ್ಞಾನಗಳು ಒಂದು ಕ್ರಿಯೆಯಾದುದರಿಂದ ಅದಕ್ಕೆ ಕಾರಣವು ಇರಲೇಬೇಕು, ಎಂಬ ಅನುಮಾನದಿಂದ ಅಂದರೆ, ಧರ್ಮಿಗ್ರಾಹಕಪ್ರಮಾಣದಿಂದಲೇ ಚಕ್ಷುರಾದಿಇಂದ್ರಿಯಗಳು ಜ್ಞಾನಕಾರಣತ್ವೇನೈವ ಸಿದ್ಧವಾಗಿವೆ. ಮತ್ತೆ ಅನ್ಯಥಾಸಿದ್ಧಿಯನ್ನು ಹೇಳಿ ಕಾರಣತ್ವವನ್ನು ನಿರಾಕರಣೆ ಮಾಡುವುದು ಧರ್ಮಿಗ್ರಾಹಕಮಾನಕ್ಕೆ ವಿರುದ್ಧವಾಗುತ್ತದೆ. ಆದರೆ, ಘಟಪಟಾದಿವಿಷಯಗಳು ಪ್ರತ್ಯಕ್ಷಸಿದ್ಧವಾದುದರಿಂದ ಅವುಗಳು ಪ್ರತ್ಯಕ್ಷ-ಕಾರಣತ್ವೇನ ಸಿದ್ಧವಾಗುವುದಿಲ್ಲ. ಹೀಗೆ, ವೈಷಮ್ಯವಿರುವುದರಿಂದ ಅರ್ಥವು ಅನ್ಯಥಾಸಿದ್ಧವಾದರೂ ಇಂದ್ರಿಯವು ಅನ್ಯಥಾಸಿದ್ಧವಲ್ಲ.

ಅಷ್ಟೇ ಅಲ್ಲ, ಅರ್ಥಕ್ಕೆ ಸರ್ವತ್ರ ಪ್ರತ್ಯಕ್ಷದೊಂದಿಗೆ ಅನ್ವಯವ್ಯತಿರೇಕಗಳೂ ಇಲ್ಲ. ಯೋಗಿಗಳಿಗೆ ಅತೀತಾನಾಗತವಸ್ತುಗಳ ಪ್ರತ್ಯಕ್ಷ ಬರುತ್ತದೆ. ಆದರೆ, ವಿಷಯಗಳು ಇರುವುದಿಲ್ಲ. ಆದ್ದರಿಂದ ಅರ್ಥವು ಪ್ರತ್ಯಕ್ಷಕಾರಣವೇ ಅಲ್ಲ. ಹೀಗೆ ಅನ್ಯಥಾಸಿದ್ಧಿಯನ್ನು ಒಪ್ಪಿಕೊಳ್ಳದೆ, ಅರ್ಥವೂ ಪ್ರತ್ಯಕ್ಷಕ್ಕೆ ಕಾರಣವಾಗುವುದಾದಲ್ಲಿ ವರ್ತಮಾನವಿಷಯಕ ಅನುಮಿತಿಗೂ ವಿಷಯವು ಕಾರಣವಾದೀತು.

## ನ್ಯಾಯದೀಪ

**ನನು ಸನ್ನಿಕರ್ಷೇಣೈವ ಅರ್ಥಃ ಅನ್ಯಥಾಸಿದ್ಧಶ್ಚೇತ್ ಚಕ್ಷುರಾದಿರಪಿ ತಥಾ ಸ್ಯಾತ್ ಇತ್ಯತ ಉಕ್ತಮ್-ಚಕ್ಷುರಾದಿವದಿತ್ಯಾದಿ ॥ ರೂಪಾದ್ಯುಪಲಬ್ಧಯಃ, ಕರಣಸಾಧ್ಯಾಃ, ಕ್ರಿಯಾತ್ವಾತ್, ಛಿದಿಕ್ರಿಯಾವತ್, ಇತ್ಯನುಮಾನೇನ ಸಿದ್ಧ್ಯತ್ ಚಕ್ಷುರಾದಿಕಂ ಕರಣತ್ವೇನೈವ ಸಿದ್ಧಮ್ । ನತು ಅರ್ಥಃ, ಇತಿ ವೈಷಮ್ಯಮ್ ಇತಿ ಭಾವಃ । ಅತೀತೇತಿ ॥ ಅತೀತಾನಾಗತವಿಷಯಕೇ ಯೋಗಿಪ್ರತ್ಯಕ್ಷೇ, ಸಾಮಾನ್ಯಜ ಪ್ರತ್ಯಕ್ಷೇ ಚ ಇತ್ಯರ್ಥಃ । ಅನ್ಯಥೇತಿ ॥ ಉಕ್ತದಿಶಾ ಅನ್ಯಥಾಸಿದ್ಧ್ಯಕಲ್ಪನೇ, ಇತ್ಯರ್ಥಃ ॥**

ಸನ್ನಿಕರ್ಷದಿಂದ ಅರ್ಥವು ಅನ್ಯಥಾಸಿದ್ಧವಾಗುವುದಾದಲ್ಲಿ ಚಕ್ಷುರಾದಿಇಂದ್ರಿಯಗಳೂ ಅನ್ಯಥಾಸಿದ್ಧಗಳಾಗಲಿ ಎಂಬ ಆಕ್ಷೇಪಕ್ಕೆ ಮೂಲದಲ್ಲಿ 'ಚಕ್ಷುರಾದಿವತ್' ಇತ್ಯಾದಿವಾಕ್ಯದಲ್ಲಿ ಸಮಾಧಾನವನ್ನು ಹೇಳಲಾಗಿದೆ.

ಇಂದ್ರಿಯಸಾಧಕವಾದ ಅನುಮಾನದ ಅಭಿಪ್ರಾಯ-ರೂಪಾದಿಜ್ಞಾನಗಳು ಒಂದು ಕ್ರಿಯೆಯಾದುದರಿಂದ ಅದಕ್ಕೆ ಕರಣವು ಇರಲೇಬೇಕು. ಕ್ರಿಯಾಸಾಮಾನ್ಯಕ್ಕೆ ಕರಣವು ಇದ್ದೇ ಇರುತ್ತದೆ. ಉದಾಹರಣೆಗೆ- ದಾರುಚ್ಛೇದನವು ಒಂದು ಕ್ರಿಯೆ. ಅದಕ್ಕೆ ಕೊಡಲಿಯು ಕರಣವಾಗಿದೆ. ಹೀಗೆ ಈ ಅನುಮಾನದಿಂದ ಚಕ್ಷುರಾದಿಗಳು ಜ್ಞಾನಕರಣತ್ವೇನೈವ ಸಿದ್ಧವಾಗುತ್ತವೆ. ಆದರೆ, ಅರ್ಥಸಿದ್ಧಿ ಹೀಗಲ್ಲ. ಅದು ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ. ಇದೇ ಅರ್ಥಕ್ಕೂ ಇಂದ್ರಿಯಕ್ಕೂ ಇರುವ ವ್ಯತ್ಯಾಸ. ಆದ್ದರಿಂದ ಅರ್ಥದಂತೆ ಇಂದ್ರಿಯಕ್ಕೆ ಅನ್ಯಥಾಸಿದ್ಧಿಯನ್ನು ಹೇಳಲಾಗದು.

ಅತೀತ ಮತ್ತು ಅನಾಗತ ವಿಷಯಗಳ ಬಗ್ಗೆ ಯೋಗಿಗಳ ಪ್ರತ್ಯಕ್ಷ ಹಾಗೂ ಘಟತ್ವಾದಿರೂಪ ಸಾಮಾನ್ಯಲಕ್ಷಣಾಸನ್ನಿಕರ್ಷದಿಂದ ಹುಟ್ಟುವ ನಮ್ಮ ಅಲೌಕಿಕಪ್ರತ್ಯಕ್ಷ ಇವುಗಳಲ್ಲಿ ವಿಷಯವು ಇರುವುದಿಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನ್ವಯವ್ಯಭಿಚಾರಾಚ್ಚ ಅರ್ಥೋ ನ ಹೇತುಃ ಇತಿ ಭಾವೇನಾಹ–ಅಪಿಚೇತಿ ॥**

ಕೆಲವೆಡೆ ಅರ್ಥ ಇದ್ದರೂ ಪ್ರತ್ಯಕ್ಷವು ಬರುವುದಿಲ್ಲ. ಹೀಗೆ ಅನ್ವಯವ್ಯಭಿಚಾರ ವಿರುವುದರಿಂದಾಗಿಯೂ ಅರ್ಥವು ಜ್ಞಾನಕ್ಕೆ ಕಾರಣವಲ್ಲ ಎಂದು ಮುಂದೆ ಹೇಳುತ್ತಾರೆ.

**अपिच, त्वन्मते भ्रमेऽपि यस्मिन्नंशे भ्रमत्वं तद्रजतत्वादिकं विशेषणं सदेव । वैशिष्ट्यं त्वसदपि असत्ख्यातिभीतस्य तव मते न भाति ॥**

ನ್ಯಾಯಮತದಂತೆ 'ಇದಂ ರಜತಂ' ಎಂಬ ಭ್ರಮೆಯಲ್ಲಿ ತೋರುವ ರಜತತ್ವವು ಶುಕ್ತಿಯಲ್ಲಿ ಇಲ್ಲದಿದ್ದರೂ ಆಪಣಸ್ಥರಜತದಲ್ಲಿ ಅದು ಸತ್ಯವಾಗಿದೆ. ಆದರೆ, ಅದು ಅಲ್ಲಿದ್ದರೂ ಭ್ರಮಾತ್ಮಕ–ಪ್ರತ್ಯಕ್ಷಕ್ಕೆ ಕಾರಣವಾಗಿದೆ. ಅದರಿಂದ ಪ್ರಮಾ ಹುಟ್ಟುವುದಿಲ್ಲ. ಹೀಗೆ, ವಿಷಯ ಇದ್ದರೂ ಪ್ರತ್ಯಕ್ಷಪ್ರಮಾ ಇಲ್ಲವಾದುದರಿಂದ ಅನ್ವಯವ್ಯಭಿಚಾರ.

'ಇದಂ ರಜತಂ' ಎಂಬ ಜ್ಞಾನವು ರಜತತ್ವವಿಷಯಕವಾದುದರಿಂದ ಅದು ಭ್ರಮೆಯಲ್ಲ. ರಜತತ್ವ ಮತ್ತು ಶುಕ್ತಿಗೆ ವೈಶಿಷ್ಟ್ಯವನ್ನು ವಿಷಯೀಕರಿಸುವುದರಿಂದ ಅದು ಭ್ರಮೆ. ಅದು ಅಸತ್ಯ. ಆದ್ದರಿಂದ ವ್ಯಭಿಚಾರಕ್ಕೆ ಅವಕಾಶ ಇಲ್ಲ ಎನ್ನುವುದು ಸರಿಯಲ್ಲ. ಇಲ್ಲದಿರುವುದು ಕಂಡರೆ ಅಸತ್–ಖ್ಯಾತಿಯನ್ನು ಅಂಗೀಕರಿಸಬೇಕಾದೀತು. ಆದರೆ, ನೈಯಾಯಿಕರು ಅದಕ್ಕೆ ಹೆದರುತ್ತಾರೆ. ಆದ್ದರಿಂದ ರಜತತ್ವವಿಷಯಕವಾದುದರಿಂದಲೇ ಅದು ಭ್ರಮೆ. ಆಗ ವಿಷಯವಾದ ರಜತತ್ವ ಇದೆ. ಪ್ರತ್ಯಕ್ಷ ಪ್ರಮಾ ಇಲ್ಲ. ವ್ಯಭಿಚಾರ ಅನಿವಾರ್ಯ.

## ನ್ಯಾಯದೀಪ

**ಸದೇವೇತಿ ॥ ತಥಾ ಚ ತತ್ರ, ಅನ್ವಯವ್ಯಭಿಚಾರಾತ್ ನಾರ್ಥಃ ಪ್ರಮಾಯಾಂ ಹೇತುರಿತಿ ಭಾವಃ ।**

**ನನು ವೈಶಿಷ್ಟ್ಯಾಂಶೇ ಏವ ಭ್ರಮತ್ವಮ್ । ತಚ್ಚಾಸದೇವ । ಅತೋ ನ ವ್ಯಭಿಚಾರಃ । ಇತ್ಯತ ಆಹ–ವೈಶಿಷ್ಟ್ಯಂ ತ್ವಿತಿ ॥ ತವೇತಿ ॥ ಮಣಿಕೃತ ಇತ್ಯರ್ಥಃ ।**

**ಏತೇನ 'ಭ್ರಮೇ ತು ಅರ್ಥೋ ಅಸನ್ನಿತಿ ನ ಹೇತುಃ' ಇತಿ ಪ್ರಾಗುಕ್ತಂ ಪ್ರತ್ಯುಕ್ತಮ್ ।**

ರಜತತ್ವವು ಸತ್ಯವಾದುದರಿಂದ ಅದು ಇದ್ದರೂ ತದ್ವಿಷಯಕವಾದ ಪ್ರಮಾ ಹುಟ್ಟಿಲ್ಲವಾದುದರಿಂದ ಅನ್ವಯವ್ಯಭಿಚಾರ. ಆದ್ದರಿಂದ ಅರ್ಥವು ಪ್ರಮಾಹೇತುವಲ್ಲ.

'ಇದಂ ರಜತಮ್' ಎಂಬ ಜ್ಞಾನವು ರಜತತ್ವವೈಶಿಷ್ಟ್ಯಾಂಶದಲ್ಲೇ ಭ್ರಮೆ, ರಜತತ್ವಾಂಶದಲ್ಲಿ ಅಲ್ಲ. ವೈಶಿಷ್ಟ್ಯವು ಅಸತ್ಯವಾಗಿದೆ. ಆದ್ದರಿಂದ ವ್ಯಭಿಚಾರ ಇಲ್ಲ, ಎಂಬ ಆಕ್ಷೇಪಕ್ಕೆ 'ವೈಶಿಷ್ಟ್ಯಂ ತು' ಎಂದು ಮೂಲದ ಸಮಾಧಾನ. ಅಲ್ಲಿ ತವ ಎಂದರೆ ಮಣಿಕಾರನಿಗೆ.

ಹೀಗೆ ಇಲ್ಲಿ ಭ್ರಮೆಗೆ ಅಸತ್ತಾದ ತಾದಾತ್ಮ್ಯವು ವಿಷಯವಲ್ಲ. ವಿಷಯವಾದ ರಜತತ್ವವು ಸತ್ಯ, ಎಂದಂತಾಗಿದೆ. ಇದರಿಂದ ಹಿಂದೆ (ಪು.600) 'ಭ್ರಮೆಯಲ್ಲಿ ಅಸತ್ತಾದುದರಿಂದ ಅರ್ಥವು ಕಾರಣವಲ್ಲ' ಎಂದುದು ಸರಿಯಲ್ಲ ಎಂದು ತಿಳಿಸಿದಂತಾಯಿತು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ವಿಶೇಷಣಂ ಅನ್ಯತ್ರ ಸದಪಿ ಪುರತಃ ಅಸದೇವ ಇತಿ ಚೇತ್ ತರ್ಹಿ ವಿಶೇಷಣಂ ಅರ್ಥಶ್ಚೇತ್ ಅಸಂಭವಿ । ವಿಶೇಷ್ಯಂ ಚೇತ್ ವ್ಯಭಿಚಾರಿ ಇತ್ಯಾಹ –ಕಿಂಚ ತ್ವನ್ಮತೇ ಇತ್ಯಾದಿನಾ ॥**

ಹಿಂದೆ ಹೇಳಿದ ವ್ಯಭಿಚಾರವನ್ನು ಹೀಗೆ ಪರಿಹಾರ ಮಾಡಬಹುದು– ವಿಶೇಷಣವಾದ ರಜತತ್ವವು ಆಪಣಸ್ಥರಜತದಲ್ಲಿ ಸತ್ತಾದರೂ ಪುರೋದೇಶದಲ್ಲಿ ಅಸತ್. ಆದ್ದರಿಂದ ವಿಷಯಸತ್ವವೂ ಇಲ್ಲ, ಪ್ರಮೆಯೂ ಇಲ್ಲವಾದುದರಿಂದ ವ್ಯಭಿಚಾರ ಪರಿಹಾರವಾಯಿತು, ಎಂದು. ಇದು ಸರಿಯಲ್ಲ. ಹಾಗಾದರೆ, ಅರ್ಥವು ಪ್ರಮಾಕಾರಣ, ಎಂದರೆ ಜ್ಞಾನದಲ್ಲಿ ವಿಶೇಷಣವಾಗಿರುವ ಅರ್ಥವೋ, ವಿಶೇಷ್ಯವಾಗಿರುವ ಅರ್ಥವೋ? ವಿಶೇಷಣವಾದರೆ ಅಸಂಭವ, ವಿಶೇಷ್ಯವಾದರೆ ವ್ಯಭಿಚಾರದೋಷ, ಎಂದು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किञ्च त्वन्मते प्रत्यक्षप्रमायामपि विशेषणज्ञानमेव हेतुर्नतु विशेषणम् । विशेष्यं तु भ्रमे सदेव ।।**

ನ್ಯಾಯಮತದಲ್ಲಿ ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ, ಹೊರತು, ವಿಶೇಷಣವಲ್ಲ. ಆದ್ದರಿಂದ ಅರ್ಥಸತ್ವವು ಪ್ರತ್ಯಕ್ಷಪ್ರಮಾದಲ್ಲಿ ಗುಣ ಎನ್ನುವುದಕ್ಕೆ ವಿಶೇಷಣಸತ್ವವು ಗುಣ ಎಂಬ ಅಭಿಪ್ರಾಯವಾದಲ್ಲಿ ವಿಶೇಷಣವು ಕಾರಣವೇ ಅಲ್ಲವಾದುದರಿಂದ ಅಸಂಭವ. ಇನ್ನು ಅರ್ಥ ಎಂದರೆ ವಿಶೇಷ್ಯ ಎಂದು ಅಭಿಪ್ರಾಯವಾದರೆ ಭ್ರಮೆಯಲ್ಲೂ ವಿಶೇಷ್ಯವಾದ 'ಇದಂ' ಪದಾರ್ಥವು ಇದೆಯಾದುದರಿಂದ ಅನ್ವಯವ್ಯಭಿಚಾರ.

## ನ್ಯಾಯದೀಪ

**ಸದೇವೇತಿ ॥ ತಥಾಚ ಶುಕ್ತಿತ್ವೇನ ಶುಕ್ತಿಪ್ರಮಾ ಸ್ಯಾತ್ । ನಾಸ್ತಿ ಚ ಸಾ । ಅತಃ ನ ವಿಶೇಷ್ಯರೂಪಃ ಅರ್ಥಃ ಪ್ರಮಾಯಾಂ ಗುಣತಯಾ ಹೇತುರಿತಿ ಭಾವಃ ।**

ಭ್ರಮೆಯಲ್ಲೂ ವಿಶೇಷ್ಯರೂಪವಾದ (ಶುಕ್ತಿ) ಅರ್ಥ ಇದೆ. ಅದು ಪ್ರಮಾಹೇತುವಾದ ಗುಣವಾದರೆ ಭ್ರಮೆಯ ಬದಲು ಶುಕ್ತಿಪ್ರಮಾ ಹುಟ್ಟಬೇಕಾದೀತು. ಆದರೆ, ರಜತಭ್ರಮಕಾಲದಲ್ಲಿ ಶುಕ್ತಿಪ್ರಮಾ ಇಲ್ಲ. ಆದ್ದರಿಂದ ವಿಶೇಷ್ಯರೂಪವಾದ ಅರ್ಥವು ಪ್ರಮಾಕಾರಣವಾದ ಗುಣ ಅಲ್ಲ, ಎಂದು ಮೂಲದ ಅಭಿಮತಿ.

## ನ್ಯಾಯದೀಪ

**ನನು ಮಣಿಕೃನ್ಮತೇ ವೈಶಿಷ್ಟ್ಯರೂಪಾರ್ಥ ಏವ ಪ್ರಮಾರೂಪಪ್ರತ್ಯಕ್ಷಮಾತ್ರೇ ಗುಣೋಽಸ್ತು । ಭ್ರಮೇ ಚ ವೈಶಿಷ್ಟ್ಯರೂಪೋಽರ್ಥಃ ಪುರತಃ ಅಸನ್ನಿತಿ ತಸ್ಯ ಭ್ರಮಾಹೇತುತಯಾ ಭ್ರಾಂತೇಃ ಪ್ರಮಾತ್ವಾನಾಪತ್ತಿಃ । ಅನ್ಯತ್ರ ಸತ್ವೇನ ಭ್ರಾಂತೌ ಭಾನೋಪಪತ್ತಿಶ್ಚ, ಇತಿ ಚೇನ್ನ । ಯತ್ರ ಕ್ವಚನ ಸತ್ವಮಾತ್ರೇಣ ತದ್ಗೋಚರ ಪ್ರತ್ಯಕ್ಷಂ ಪ್ರತಿ ಅನನ್ಯಥಾಸಿದ್ಧನಿಯತ-ಪೂರ್ವಕ್ಷಣವೃತ್ತಿತ್ವಾಭಾವೇನ ಹೇತುತ್ವಾನಿರ್ಧಾರಣಾತ್, ಪುರತಃ ಅಸತ್ವೇನ ಅಹೇತುತ್ವಸ್ಯ ಸನ್ನಿಕರ್ಷಾಭಾವೇನ ಉಪಪತ್ತ್ಯಾ, ಪುರತಃ ಸತ್ವಸ್ಯ ಸನ್ನಿಕರ್ಷೇ ಏವ ಉಪಯೋಗೇನ ಸರ್ವಥಾಪಿ ತದಹೇತುತ್ವಸ್ಯೈವ ನ್ಯಾಯ್ಯತ್ವಾಚ್ಚ ಇತಿ ಧ್ಯೇಯಮ್ ।**

(ಈ ಭಾಗ ಕೆಲವು ಹಸ್ತಪ್ರತಿಗಳಲ್ಲಿ ಇಲ್ಲ)

ಮಣಿಕಾರನ ಮತದಂತೆ ವಿಶೇಷ್ಯದಲ್ಲಿ ವಿಶೇಷಣದ ವೈಶಿಷ್ಟ್ಯವೇ ಪ್ರತ್ಯಕ್ಷಪ್ರಮಾಕ್ಕೆ ಕಾರಣವಾದ ಗುಣ, ಏಕಾಗಬಾರದು? ಭ್ರಮಸ್ಥಳದಲ್ಲಿ ರಜತತ್ವದ ವೈಶಿಷ್ಟ್ಯವು ಪುರೋದೇಶವೃತ್ತಿ ಶುಕ್ತಿಯಲ್ಲಿ ಇಲ್ಲ. ಆದ್ದರಿಂದ ಅದು ಭ್ರಮೆಗೆ ಕಾರಣವೇ ಅಲ್ಲ. ಇದರಿಂದ ಭ್ರಮೆಯೂ ಪ್ರಮೆಯಾಗಲಿ, ಎಂಬ ಆಪತ್ತಿಗೆ ಅವಕಾಶವಿಲ್ಲ. ಆದರೂ ದೇಶಾಂತರದಲ್ಲಿ ರಜತತ್ವವೈಶಿಷ್ಟ್ಯವು ಇದೆ, ಆದರಿಂದ ಭ್ರಮೆಯಲ್ಲಿ ಅದು ತೋರಬಹುದು. ಹೀಗೆ ಭ್ರಮೆಯಲ್ಲಿ ವಿಷಯಸತ್ವವು ಇಲ್ಲ. ಆದ್ದರಿಂದ ವ್ಯಭಿಚಾರ ಇಲ್ಲ.

ಇದು ಸರಿಯಲ್ಲ. ವೈಶಿಷ್ಟ್ಯವು ಪುರತಃ ಇರಬೇಕಾದುದು, ಸನ್ನಿಕರ್ಷಕ್ಕಾಗಿ. ಪುರತಃ ಇದ್ದಾಗ ಅದರೊಂದಿಗೆ ಇಂದ್ರಿಯಸನ್ನಿಕರ್ಷವಾಗುತ್ತದೆ, ಅದರ ಜ್ಞಾನ ಬರುತ್ತದೆ. ದೇಶಾಂತರದಲ್ಲಿದ್ದರೆ ಸನ್ನಿಕರ್ಷವೂ ಇಲ್ಲ, ಜ್ಞಾನವೂ ಇಲ್ಲ. ಹೀಗೆ ವೈಶಿಷ್ಟ್ಯಸತ್ವವು ಸನ್ನಿಕರ್ಷದಿಂದ ಅನ್ಯಥಾಸಿದ್ಧವಾದುದರಿಂದ ಸರ್ವಥಾ ಕಾರಣವಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಾಚಾಂ ಮತಮಾಶಂಕತೇ–ನನ್ವಿತಿ ॥**

ಮೂಲದಲ್ಲಿ 'ನನು' ಎಂದು ಮಾಡಿರುವ ಆಕ್ಷೇಪ ಪ್ರಾಚೀನ ನೈಯಾಯಿಕರ ಮತದಂತೆ.

**ननु तथापि लौकिकप्रत्यक्षप्रमायां वैशिष्ट्यरूपोऽर्थो गुणः । भ्रमे तु चिरन्तनमतेऽसदपि वैशिष्ट्यं सदुपरक्तत्वेन भातीति चेन्न । अर्थो न हेतुरित्युक्तत्वात् ॥**

ಆದರೂ, ಪ್ರತ್ಯಕ್ಷಪ್ರಮಾಕ್ಕೆ ವಿಶೇಷಣವೈಶಿಷ್ಟ್ಯವೇ ಗುಣರೂಪವಾಗಿ ಕಾರಣವಾಗಲಿ. ಪ್ರಾಚೀನಮತದಂತೆ ವೈಶಿಷ್ಟ್ಯವು ಭ್ರಮಸ್ಥಳದಲ್ಲಿ ಇಲ್ಲ. ಆದ್ದರಿಂದ ಭ್ರಮೆಯೂ ಪ್ರಮೆಯಾಗಲಿ, ಎನ್ನುವ ಆಕ್ಷೇಪಕ್ಕೆ ಅವಕಾಶ ಇಲ್ಲ. ಅದು ಅಸತ್ಯವಾದರೂ ರಜತತ್ವರೂಪ ಸದುಪರಾಗೇಣ ಭ್ರಮೆಯಲ್ಲಿ ತೋರಬಹುದು ಎಂದು ಪ್ರಾಚೀನರ ಸಿದ್ಧಾಂತ.

ಇದೂ ಸರಿಯಲ್ಲ. ಪ್ರಮಾಸ್ಥಳದಲ್ಲೂ ಅರ್ಥವು ಸನ್ನಿಕರ್ಷದಿಂದ ಅನ್ಯಥಾಸಿದ್ಧವಾಗಿದೆ. ಜ್ಞಾನಹೇತುವಲ್ಲ, ಎಂದು ಹಿಂದೆಯೇ ಹೇಳಲಾಗಿದೆ. (ಪು.605)[1]

## ನ್ಯಾಯದೀಪ

**ಉಕ್ತತ್ವಾದಿತಿ ॥ 'ಚಕ್ಷುರಾದಿವತ್' ಇತ್ಯಾದಿ ಗ್ರಂಥೇನ (ಪು.605) ಇತ್ಯರ್ಥಃ ।**

## ನ್ಯಾಯದೀಪದಲ್ಲಿ ಅವತಾರಿಕೆ

**ವೈಶಿಷ್ಟ್ಯರೂಪೋ ಅರ್ಥಃ ಅರ್ಥಪದೇನ ನ ವಿವಕ್ಷಿತುಂ ಶಕ್ಯಃ। ಕಿಂತು, ವಿಶೇಷ್ಯಂ, ವಿಶೇಷಣಂ ವಾ। ತಚ್ಚ ಅನ್ವಯವ್ಯಭಿಚಾರಾತ್ ನ ಪ್ರಮಾಯಾಂ ಹೇತುರಿತಿ ಭಾವೇನಾಹ–ಕಿಂಚೇತಿ ॥**

---

1. ಮಣಿಗ್ರಂಥದಲ್ಲಿ ಪ್ರಾಚೀನಮತದ ಉಲ್ಲೇಖ ಹೀಗಿದೆ—

''ಪ್ರಾಂಚಸ್ತು–ತಾದಾತ್ಮ್ಯ–ಸಂಸರ್ಗಯೋಃ ಅಸತೋರೇವ ವಿಷಯತ್ವಂ ಮನ್ಯಂತೇ ।
ನಚೈವಂ ಅಸತ್‌ಖ್ಯಾತಿಃ । ಸದುಪರಕ್ತಸ್ಯ ಅತ್ಯಂತಾಸತಃ ಖ್ಯಾತ್ಯಭ್ಯುಪಗಮಾತ್ ।''
ಮಣಿಕಾರನ ಮತದಲ್ಲಿ (ನವೀನಮತದಲ್ಲಿ) ಅಸತ್‌ಖ್ಯಾತಿ ಇಲ್ಲ. ಭ್ರಾಂತಿಯಲ್ಲಿ ತೋರುವುದೆಲ್ಲ ಸತ್ಯ. ಮಣಿಯಲ್ಲಿ ಸ್ವಮತವನ್ನು ಹೀಗೆ ನಿರೂಪಿಸಲಾಗಿದೆ– ''ಅಥೇದಂ ರಜತಮಿತಿ ಜ್ಞಾನಂ ಕಥಮ್ ಅಯಥಾರ್ಥಮ್? ಇದಂ–ರಜತಯೋಃ ಸತ್ತ್ವಾತ್ । ನಚ ತದುಭಯತಾದಾತ್ಮ್ಯಮ್ ಅಸತ್ । ಉಭಯಂ ತಾದಾತ್ಮ್ಯಂ ಚೇತ್ಯತೋ ಅಧಿಕಸ್ಯ ಅಭಾವಾತ್ । ತಯೋಶ್ಚ ಸತ್ತ್ವಾತ್ । ಅಸತ್ತ್ವೇ ವಾ ಅಸತ್ ಖ್ಯಾತಿಃ । ಏವಂ ಸಂಸರ್ಗಾರಾಪೋಽಪೀತಿ । ಉಚ್ಯತೇ–ಸನ್ಮಾತ್ರವಿಷಯತ್ವೇಽಪಿ ತದಭಾವವತಿ ತತ್‌ಪ್ರಕಾರಕತ್ವಂ, ಪ್ರಕಾರವ್ಯಧಿಕರಣವಿಷಯತಾಕತ್ವಂ ವಾ ಅಯಥಾರ್ಥತ್ವಮ್ ।' (ಪು.562–63)

'ಪ್ರಮಾಕ್ಕೆ ಅರ್ಥಸತ್ತ್ವವು ಗುಣ' ಎಂದಾಗ ಅರ್ಥ ಎಂದರೆ ವಿಶೇಷಣವೈಶಿಷ್ಟ್ಯ ಅಲ್ಲ. ಕಿಂತು, ವಿಶೇಷಣ ಮತ್ತು ವಿಶೇಷ್ಯಗಳು. ಅವೆರಡೂ ಭ್ರಮಸ್ಥಳದಲ್ಲೂ ಇವೆ. ಅಲ್ಲಿ ಪ್ರಮಾ ಹುಟ್ಟಿಲ್ಲ, ಆದ್ದರಿಂದ ವ್ಯಭಿಚಾರ–ಇದನ್ನು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

## ಅನುಮಿತಿ ಹೇತುಗುಣ ನಿರಾಸ

**किञ्च यद्वैशिष्ट्यमसत् न तदंशे त्वन्मते बाधः, तत्प्रयुक्तभ्रमत्वं वा सम्भवति । त्वन्मतेऽसतोऽभावविरहात्मत्वरूपप्रतियोगित्वाभावेन स्वप्रतियोगिकाभावप्रमारूपबाधायोगात् । यत्रतु रजतत्वांशे ते सम्भवतः न तदसदिति नार्थो भ्रमव्यावृत्तो हेतुः ।**

**एवं बाष्पे धूमभ्रमेणोत्पन्नायां यादृच्छिकसंवादेन प्रमायामनुमितौ न यथार्थलिङ्गपरामर्शोऽस्ति ।**

ಮಣಿಕಾರನ ಮತದಂತೆ ಯಾವ ವೈಶಿಷ್ಟ್ಯವು ಅಸತ್ಯವೋ ಅದರ ಬಾಧವು ಬರಲು ಸಾಧ್ಯವಿಲ್ಲ. ಬಾಧ್ಯತ್ವವು ಇಲ್ಲದಿರುವುದರಿಂದಲೇ ಬಾಧ್ಯತ್ವ ಪ್ರಯುಕ್ತವಾದ ಭ್ರಮವಿಷಯತ್ವವೂ ಅದರಲ್ಲಿ ಇಲ್ಲ.

ಮಣಿಕಾರನ ಸಿದ್ಧಾಂತದಲ್ಲಿ ಅಸತ್ಯವು ಬಾಧ್ಯವಾಗುವುದಿಲ್ಲ. ಏಕೆಂದರೆ, ಬಾಧ ಎಂದರೆ, ಸ್ವಪ್ರತಿಯೋಗಿಕ–ಅಭಾವಪ್ರಮಾ. ಸ್ವ ಎಂದರೆ, ರಜತತ್ವ. ತತ್‌ಪ್ರತಿಯೋಗಿಕ–ಅಭಾವ=ರಜತತ್ವಾಭಾವ. ಈ ಅಭಾವದ ಪ್ರಮಾತ್ಮಕ ಜ್ಞಾನ ಎಂದರೆ 'ಅತ್ರ ರಜತತ್ವಂ ನಾಸ್ತಿ'ಎಂಬ ಪ್ರಮಾ. ಇದೇ ಬಾಧ. ಇಂತಹ ಬಾಧಜ್ಞಾನಕ್ಕೆ ಸತ್ಯವು ವಿಷಯವಾಗುತ್ತದೆ. ಅಸತ್ಯದ ಅಭಾವವು ಇಲ್ಲವಾದುದರಿಂದ ಅಭಾವವಿರಹಾತ್ಮತ್ವರೂಪವಾದ ಪ್ರತಿಯೋಗಿತ್ವವು ಅಸತ್ಯಕ್ಕಿಲ್ಲ. ಘಟದಲ್ಲಿ ಪ್ರತಿಯೋಗಿತ್ವ ಇದೆ. ಅದು ಘಟಾಭಾವದ ವಿರಹರೂಪವಾಗಿದೆ. (ಘಟಾಭಾವಾಭಾವ ರೂಪವಾಗಿದೆ) ಶಶವಿಷಾಣದ ಅಭಾವವು ಅಪ್ರಸಿದ್ಧವಾದುದರಿಂದ ಶಶವಿಷಾಣವು ತದ್ವಿರಹಾತ್ಮಕವಲ್ಲ. ಅದರಲ್ಲಿ ವಿರಹಾತ್ಮಕತ್ವರೂಪವಾದ ಪ್ರತಿಯೋಗಿತ್ವವು ಇಲ್ಲ. ಆದ್ದರಿಂದ ಅದು ಬಾಧ್ಯವಲ್ಲ. ಅದರಿಂದಾಗಿಯೇ ಅದು ಭ್ರಾಂತಿವಿಷಯವೂ ಅಲ್ಲ.

ಆದರೆ, ರಜತತ್ವವು ಸತ್ಯವಾದುದರಿಂದ ಅದು ಬಾಧವಿಷಯವೂ ಆಗುತ್ತದೆ, ಭ್ರಾಂತಿಗೂ ವಿಷಯವಾಗುತ್ತದೆ. ಅದು ಅಸತ್ತಲ್ಲ. ಹೀಗೆ ಅಸತ್ಯವಾದುದು ಭ್ರಮವಿಷಯವಲ್ಲ, ವಿಷಯವಾದುದು ಸತ್ಯ. ಹೀಗಾಗಿ ಭ್ರಮೆಯಲ್ಲೂ ಸತ್ಯವಾದ ವಿಷಯವಿದೆ. ಪ್ರಮಾರೂಪ ಕಾರ್ಯವಿಲ್ಲ. ವ್ಯಭಿಚಾರ ಅನಿವಾರ್ಯ.

ಇದುವರೆಗೆ ಪ್ರತ್ಯಕ್ಷಪ್ರಮಾಕ್ಕೆ ಅನುಗತಗುಣವಿಲ್ಲ ಎಂದು ಸಾಧಿಸಲಾಗಿದೆ. ಇದರಂತೆಯೇ ಅನುಮಿತಿಗೂ ಯಥಾರ್ಥಲಿಂಗ ಪರಮಾರ್ಶವು ಗುಣವಲ್ಲ. ಬಾಷ್ಪದಲ್ಲಿ ಧೂಮಾರೋಪವನ್ನು ಮಾಡಿ(ಧೂಮವೆಂದು ಭ್ರಮಿಸಿ) ವಹ್ನಿವ್ಯಾಪ್ಯಧೂಮವಾನ್ ಪರ್ವತಃ, ಎಂಬ ಪರಾಮರ್ಶ ಬಂತು. ಇದು ಅಯಥಾರ್ಥ. ಇದರಿಂದ 'ಪರ್ವತಃ ವಹ್ನಿಮಾನ್' ಎಂಬ ಅನುಮಿತಿ ಬರುತ್ತದೆ. ಯದೃಚ್ಛಯಾ ಅದು ಪ್ರಮಾ ಆಗಿದೆ. ಅಲ್ಲಿ ಪ್ರಮಾತ್ಮಕವಾದ ಅನುಮಿತಿ ಇದೆ. ಗುಣ ಇಲ್ಲ, ವ್ಯಭಿಚಾರ.

## ನ್ಯಾಯದೀಪ

**ಯದಿತಿ ಭಿನ್ನಂ ಪದಮ್। ತ್ವನ್ಮತೇ ಇತಿ ॥ ಪ್ರಾಚೀನತಾರ್ಕಿಕಮತೇ। ಸ್ವಪ್ರತಿಯೋಗಿಕೇತಿ ॥ ಪ್ರಾಮಾಣಿಕಸ್ಯ ಘಟಾದೇರೇವ ಅತ್ಯಂತಾಭಾವೋಪಗಮೇನ ಅಪ್ರಾಮಾಣಿಕಾತ್ಯಂತಾಭಾವಾನಂಗೀಕಾರಾತ್। ತದನಂಗೀಕಾರೇ ಹೇತುಃ-ಅಭಾವವಿರಹೇತ್ಯಾದಿ ॥ ಬಾಧಾಯೋಗಾದಿತ್ಯುಕ್ತ್ವಾ ತತ್‌ಪ್ರಯುಕ್ತ ಭ್ರಮತ್ವಸ್ಯಾಪಿ ಅಯೋಗಃ ಉಕ್ತಪ್ರಾಯಃ ಇತಿ ಭಾವಃ। ತ ಇತಿ ॥ ಬಾಧ-ಭ್ರಮತ್ವೇ ಇತ್ಯರ್ಥಃ। ಉಕ್ತರೂಪಬಾಧಯೋಗಾದೇವ ತತ್‌ಪ್ರಯುಕ್ತ-ಭ್ರಮತ್ವಂ ಚ ಸಂಭವತೀತಿ ಭಾವಃ।**

**ಪ್ರತ್ಯಕ್ಷಪ್ರಮಾಯಾಮ್ ಅನುಗತಗುಣಾಸಂಭವಮ್ ಉಕ್ತ್ವಾ 'ದೃಶ್ಯತೇ ಚ ಯಾದೃಚ್ಛಿಕಸಂವಾದಿನಾ ಗುಣಾಭಾವೇಽಪಿ ಪ್ರಮಾಜನಕತ್ವಮ್' ಇತಿ ತತ್ತ್ವನಿರ್ಣಯಟೀಕಾಂ ವಿವೃಣ್ವನ್ ಅನುಮಿತಾವಪಿ ಪ್ರಾಗುಕ್ತಾನುಗತಗುಣಂ ನಿರಾಹ-ಏವಮಿತ್ಯಾದಿನಾ ॥**

ಪ್ರಾಚೀನಮತದಲ್ಲಿ ಅಸತ್ಯಕ್ಕೆ ಬಾಧ ಇಲ್ಲ. ಏಕೆಂದರೆ, ತತ್‌ಪ್ರತಿಯೋಗಿಕ-ಅಭಾವಪ್ರಮಾ ಬಾಧ. 'ನಾಸ್ತಿ ರಜತಂ' ಎಂಬ ಪ್ರಮಾದಲ್ಲಿ ರಜತಾಭಾವವು ವಿಷಯ. ಅದು ರಜತದ ಬಾಧ. ಅಸತ್ಯಪ್ರತಿಯೋಗಿಕವಾದ ಅಭಾವ ಇಲ್ಲ. ಅಸತ್ಯಕ್ಕೆ ಪ್ರತಿಯೋಗಿತ್ವವೇ ಅಸಂಭಾವಿತ. ಅಭಾವವಿರಹರೂಪತ್ವವೇ ಪ್ರತಿಯೋಗಿತ್ವ. ಘಟಾಭಾವಕ್ಕೆ ಘಟವು ಪ್ರತಿಯೋಗಿ. ಅದು ಘಟಾಭಾವದ-ವಿರಹರೂಪವಾಗಿದೆ. ಹೀಗೆ, ಶಶವಿಷಾಣಾಭಾವದ ಅಭಾವವು ಇಲ್ಲವಾದ ಕಾರಣ, ತದಾತ್ಮಕತ್ವರೂಪವಾದ ಪ್ರತಿಯೋಗಿತ್ವವು ಶಶವಿಷಾಣದಲ್ಲಿ ಇಲ್ಲ. ಪ್ರತಿಯೋಗಿತ್ವವು ಇಲ್ಲವಾದುದರಿಂದ ತತ್‌ಪ್ರತಿಯೋಗಿಕಾಭಾವ ಪ್ರಮಾರೂಪವಾದ ಬಾಧವೂ ಅಸತ್ಯಕ್ಕೆ ಇಲ್ಲ. ಪ್ರಾಮಾಣಿಕವಾದ ಘಟಾದಿಗಳೇ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗುತ್ತವೆ. ಅಪ್ರಾಮಾಣಿಕ ವಸ್ತುವಿನ ಅಭಾವವೇ ಇಲ್ಲ. ಆದ್ದರಿಂದ ಅಸತ್ಯಕ್ಕೆ ಬಾಧ ಇಲ್ಲ. ಬಾಧವು ಇಲ್ಲದಿರುವುದರಿಂದಲೇ ಭ್ರಮೆಯೂ ಇಲ್ಲ.

ಈವರೆಗೆ ಪ್ರತ್ಯಕ್ಷಪ್ರಮಾಕ್ಕೆ ಅನುಗತಗುಣವಿಲ್ಲ ಎಂದು ಹೇಳಿ ಅನುಮಿತಿಯಲ್ಲೂ ಅಂತಹ ಗುಣ ಇಲ್ಲ, ಎಂದು 'ಏವಮ್' ಎಂಬ ಗ್ರಂಥದಲ್ಲಿ ಹೇಳುತ್ತಾರೆ. ಗುಣವು ಪ್ರಮಾಹೇತುವಲ್ಲ, ಯಾದೃಚ್ಛಿಕಸಂವಾದಿಸ್ಥಳದಲ್ಲಿ ಗುಣವು ಇಲ್ಲದಿದ್ದರೂ ಪ್ರಮಾ ಹುಟ್ಟುತ್ತದೆ, ಎಂದು ತತ್ತ್ವನಿರ್ಣಯದಲ್ಲಿದೆ. ಅದನ್ನೇ ಇಲ್ಲಿ ವಿವರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಸಮಾನಾಧಿಕರಣಸ್ಯ ತಸ್ಯ ತತ್ರ ಅಭಾವೇಽಪಿ ಕಾರ್ಯಮಾತ್ರಂ ಪ್ರತಿ ಕಾರಣಸ್ಯ ಈಶ್ವರಜ್ಞಾನಸ್ಯ ಸಲ್ಲಿಂಗವಿಷಯಕಸ್ಯ ತತ್ರಾಪಿ ಸತ್ವಮ್ ಅಸ್ತಿ। ಸಾಮಾನಾಧಿಕರಣ್ಯಸ್ಯ ಅಪ್ರಯೋಜಕತ್ವಾತ್। ಅತಃ ನ ವ್ಯತಿರೇಕ ವ್ಯಭಿಚಾರಃ ಇತಿ ಭಾವೇನ ಆಶಂಕ್ಯ ನಿರಾಹ–ನಚೇತಿ ॥**

ಯದೃಚ್ಛಯಾ ಪ್ರಮಾತ್ಮಕವಾದ ಅನುಮಿತಿ ಹುಟ್ಟಿದಾಗ ಅನುಮಿತಿ ಬಂದಿರುವ ವ್ಯಕ್ತಿಯಲ್ಲಿ ಯಥಾರ್ಥಲಿಂಗಪರಾಮರ್ಶರೂಪವಾದ ಗುಣವು ಇಲ್ಲದಿದ್ದರೂ ಈಶ್ವರನಿಗೆ ಸಲ್ಲಿಂಗಕಪರಾಮರ್ಶ ಇದೆ. ಕಾರ್ಯಮಾತ್ರಂ ಪ್ರತಿ ಅದು ಕಾರಣವಾದುದರಿಂದ ಪ್ರಕೃತಾನುಮಿತಿಗೂ ಅದು ಕಾರಣ. ಆದ್ದರಿಂದ ಅಲ್ಲೂ ಗುಣ ಇದೆಯಾದ ಕಾರಣ ವ್ಯಭಿಚಾರ ಇಲ್ಲ, ಈ ಆಶಂಕೆಯನ್ನು ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ–

**नचेश्वरे सोऽस्तीति वाच्यम् । उक्तरीत्या दोषजन्यत्वस्यापि सत्वेन भ्रमत्वस्याप्यापत्तेः। ईश्वरज्ञानस्य सत्यपरमर्शत्वेन कारणत्वकल्पनस्य परतस्त्वसिद्ध्यधीनत्वेन अन्योन्याश्रयाच । भ्रमघटादिसाधारणेनो-पादानाद्यपरोक्षज्ञानत्वेन कारणत्वे च तस्य न गुणता । अन्य-थाऽस्मदादिनिष्ठानां संशय-प्रत्यक्षानुमिति-निर्विकल्पकानां यथा-क्रमम् ईश्वरनिष्ठैः विशेषदर्शन-लिङ्गपरामर्श-वाक्यार्थज्ञानविशेषण-ज्ञानैः जन्यत्वात् यथाक्रमं निश्चयत्वानुमितित्व-शाब्दज्ञानत्व-सविकल्पकत्वानि स्युः ।**

ಯದೃಚ್ಛಯಾ ಪ್ರಮಾತ್ಮಕವಾದ ಅನುಮಿತಿ ಬಂದಾಗಲೂ ಈಶ್ವರಗತವಾದ ಯಥಾರ್ಥ ಲಿಂಗಪರಾಮರ್ಶವು ಗುಣವಾಗಿ ಕಾರಣವಾಗಿದೆಯಾದ್ದರಿಂದ ವ್ಯಭಿಚಾರ ಇಲ್ಲ ಎನ್ನುವುದು ಸರಿಯಲ್ಲ. ವ್ಯಧಿಕರಣಗುಣಜನ್ಯವಾದಂತೆ ಸಮಾನಾಧಿಕರಣದೋಷದಿಂದ (ಅನುಮಿತಿ ಬರುವ

ವ್ಯಕ್ತಿಯಲ್ಲಿರುವ ಭ್ರಮಾತ್ಮಕ ಪರಾಮರ್ಶ) ಜನ್ಯವಾದ ಕಾರಣದಿಂದ ಆ ಅನುಮಿತಿಯು ಭ್ರಮೆಯೂ ಆಗಬೇಕಾದೀತು.

**(ಆ)** ಈಶ್ವರಜ್ಞಾನವು ಈಶ್ವರಜ್ಞಾನತ್ವೇನ ಕಾರಣ ಎಂದು ಸಿದ್ಧವಾಗಿದೆ. ಅದು ಸತ್ಯಪರಾಮರ್ಶತ್ವೇನ ಕಾರಣ ಎಂದು ಕಲ್ಪನೆ ಮಾಡಬೇಕು. ಈ ರೀತಿಯ ಕಲ್ಪನೆಗೆ ಆಧಾರ, ಪ್ರಾಮಾಣ್ಯವು ಗುಣಜನ್ಯ, ಎಂಬ ನಿರ್ಧಾರ. ಹೀಗೆ ಮಾಡಿದರೆ, ಅನ್ಯೋನ್ಯಾಶ್ರಯ ದೋಷ. ಪ್ರಾಮಾಣ್ಯವು ಗುಣಜನ್ಯವೆಂದು ಸಿದ್ಧವಾದರೆ ಅದರ ಆಧಾರದಿಂದ ಈಶ್ವರಜ್ಞಾನಕ್ಕೆ ಪರಾಮರ್ಶತ್ವೇನ ಹೇತುತ್ವಸಿದ್ಧಿ. ಈ ಹೇತುತ್ವ ಸಿದ್ಧವಾದರೆ, ವ್ಯಭಿಚಾರ ಇಲ್ಲದಿರುವುದರಿಂದ ಪ್ರಾಮಾಣ್ಯಕ್ಕೆ ಗುಣಜನ್ಯತ್ವಸಿದ್ಧಿ. ಹೀಗೆ ಅನ್ಯೋನ್ಯಾಶ್ರಯದೋಷ.

**(ಇ)** ಈಶ್ವರಜ್ಞಾನವು ಪ್ರಮಾಕ್ಕೆ ಅಸಾಧಾರಣಕಾರಣವಾದ ಗುಣ, ಎಂದು ಹೇಳುವುದು ಯುಕ್ತವೂ ಅಲ್ಲ. ಏಕೆಂದರೆ, ಅದು ಭ್ರಮಕ್ಕೂ ಕಾರಣ. ಘಟಕ್ಕೂ ಕಾರಣವಾಗಿದೆ. ಹೀಗೆ ಅದು ಸಾಧಾರಣಕಾರಣ. ಅದೂ ಉಪಾದಾನವಿಷಯಕ–ಅಪರೋಕ್ಷಜ್ಞಾನತ್ವೇನ ಕಾರಣ. ಅದು ಗುಣವಾಗುವುದಾದಲ್ಲಿ ಭ್ರಮೆಯೂ ಅಂತಹ ಗುಣದಿಂದ ಜನ್ಯವಾಗಿರುವುದರಿಂದ ಅದೂ ಪ್ರಮಾ ಆದೀತು.

ಅಲ್ಲದೆ, ಉಪಾದಾನವಿಷಯಕ–ಅಪರೋಕ್ಷಜ್ಞಾನತ್ವೇನ ಕಾರಣವಾಗಿರುವ ಈಶ್ವರಜ್ಞಾನವು ಸತ್ಯಲಿಂಗಪರಾಮರ್ಶತ್ವೇನ ಅನುಮಿತಿಗೆ ಗುಣವಾಗುವುದಾದಲ್ಲಿ ಈ ನಾಲ್ಕು ಅನಿಷ್ಟಗಳು ಎದುರಾಗುತ್ತವೆ.

1. ನಮಗೆ ಬರುವ ಸಂದೇಹವೂ ಈಶ್ವರಜ್ಞಾನದಿಂದ ಜನ್ಯವಾಗಿದೆ. ಈಶ್ವರಜ್ಞಾನವು ಸರ್ವವಿಷಯಕವಾದುದರಿಂದ 'ಏಕತರಕೋಟಿವ್ಯಾಪ್ಯವತ್ತಾಜ್ಞಾನರೂಪವೂ' ಆಗಿದೆ. ಹೀಗೆ ಈಶ್ವರ ಜ್ಞಾನರೂಪವಾದ ವಿಶೇಷದರ್ಶನದಿಂದ ಜನ್ಯವಾದುದರಿಂದ ನಮ್ಮ ಸಂದೇಹವೂ ನಿಶ್ಚಯ ವೆಂದಾಗಲಿ.

2. ನಮಗೆ ಬರುವ ಪ್ರತ್ಯಕ್ಷಕ್ಕೆ ಈಶಜ್ಞಾನವು ಸತ್ಯಲಿಂಗಪರಾಮರ್ಶತ್ವೇನ ಕಾರಣವಾಗಿ ಪ್ರತ್ಯಕ್ಷವು ಅನುಮಿತ್ಯಾತ್ಮಕವಾಗಲಿ.

3. ನಮಗಿರುವ ಅನುಮಿತಿಗೆ ಈಶಜ್ಞಾನವು ವಾಕ್ಯಾರ್ಥಜ್ಞಾನತ್ವೇನ ಹೇತುವಾಗಿ ಅನುಮಿತಿಯೂ ಶಾಬ್ದಬೋಧರೂಪವಾಗಲಿ.

4. ನಮಗಿರುವ ನಿರ್ವಿಕಲ್ಪಕಜ್ಞಾನಕ್ಕೆ ವಿಶೇಷಣ ಜ್ಞಾನತ್ವೇನ ಕಾರಣವಾಗಿ ವಿಶೇಷಣಜ್ಞಾನ ಜನ್ಯವಾದ ಕಾರಣದಿಂದಾಗಿ ನಮ್ಮ ನಿರ್ವಿಕಲ್ಪಕವೂ ಸವಿಕಲ್ಪವೆನಿಸಲಿ.

ಈ ಎಲ್ಲ ಅನಿಷ್ಟಗಳು ಪರಿಹಾರವಾಗಬೇಕಾದರೆ ಈಶ್ವರಜ್ಞಾನವು ಸಾಧಾರಣಕಾರಣ, ಗುಣತ್ವೇನ ಕಾರಣವಲ್ಲವೆಂದೇ ಹೇಳಬೇಕು. ಆಗ ಯಾದೃಚ್ಛಿಕಾನುಮಿತಿಸ್ಥಳದಲ್ಲಿ ಗುಣ ಇಲ್ಲವಾದುದರಿಂದ ವ್ಯಭಿಚಾರ ಅನಿವಾರ್ಯ.

## ನ್ಯಾಯದೀಪ

**ದೋಷೇತಿ ॥ ಅಸ್ಮದೀಯಾಸಲ್ಲಿಂಗಪರಾಮರ್ಶರೂಪೇತ್ಯರ್ಥಃ । ಈಶ್ವರಜ್ಞಾನಮಪಿ ಕಿಂ ಸಲ್ಲಿಂಗಕಪರಾಮರ್ಶತ್ವೇನ ಹೇತುಃ, ಉತ ಉಪಾದಾನಾದಿಜ್ಞಾನತ್ವೇನ? ಆದ್ಯೇ ದೋಷಮಾಹ–ಈಶ್ವರೇತಿ ॥ ಅಂತ್ಯೇ ತು ನ ತಸ್ಯ ಗುಣತ್ವೇನ ಹೇತುತ್ವಮ್ । ತಥಾತ್ವೇ ಭ್ರಮಸ್ಯಾಪಿ ಗುಣಜನ್ಯತಾಪತ್ತಿಃ ಇತಿ ಭಾವೇನ ಆಹ–ಭ್ರಮೇತಿ ॥ ಭ್ರಮಾದಿಸಾಧಾರಣೇನ, ಘಟಾದಿಸಾಧಾರಣೇನ ಇತ್ಯರ್ಥಃ । ಉಪಾದಾನಾದಿ–ಪ್ರತ್ಯಕ್ಷತ್ವೇನ ಹೇತುತಾ ಇತಿ ಉಪಪಾದನಾಯ ಘಟಾದೀತ್ಯುಕ್ತಿಃ, ವಿಪಕ್ಷೇ ಅನಿಷ್ಟಪ್ರಸಂಗದ್ಯೋತನಾಯ ಭ್ರಮೇತ್ಯುಕ್ತಿಃ । ಅತಿಪ್ರಸಂಗಾಂತರಾಣಿ ಆಹ–ಅನ್ಯಥೇತಿ ॥ ತೇನಾಪಿ ರೂಪೇಣ ಹೇತೋಃ ಸಲ್ಲಿಂಗವಿಷಯಕತ್ವಮಾತ್ರೇಣ ಗುಣತ್ವೇ ಇತ್ಯರ್ಥಃ ।**

ಯಾದೃಚ್ಛಿಕಾನುಮಿತಿಯು ನಮ್ಮಲ್ಲಿರುವ ದೋಷದಿಂದ ಜನ್ಯವೆಂದು ಮೂಲದಲ್ಲಿದೆ. ಅಲ್ಲಿ ದೋಷವೆಂದರೆ ನಮ್ಮಲ್ಲಿರುವ ಭ್ರಮಾತ್ಮಕ ಪರಾಮರ್ಶ.

ಈಶ್ವರಜ್ಞಾನವು ಗುಣ ಎಂದು ತಾರ್ಕಿಕರು ಹೇಳಿದರೆ ಎರಡು ಪ್ರಶ್ನೆಗಳನ್ನು ಕೇಳಬೇಕು. 1. ಈಶ್ವರಜ್ಞಾನವು ಸಲ್ಲಿಂಗಕಪರಾಮರ್ಶತ್ವೇನ ಕಾರಣವೋ? 2. ಅಥವಾ ಉಪಾದಾನವಿಷಯಕ ಜ್ಞಾನತ್ವೇನ ಕಾರಣವೋ?

ಮೊದಲನೆಯ ಪಕ್ಷಕ್ಕೆ ದೋಷವನ್ನು 'ಈಶ್ವರಜ್ಞಾನಸ್ಯ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಎರಡನೆಯ ಪಕ್ಷದಲ್ಲಿ ಈಶ್ವರಜ್ಞಾನವು ಗುಣತ್ವೇನ ಕಾರಣವಾಗಲಿಲ್ಲ. ಸಕಲಕಾರ್ಯಗಳಿಗೆ ಕಾರಣವಾದಂತೆ ಅದೊಂದು ಸಾಧಾರಣಕಾರಣವಾಗುತ್ತದೆ. ತಜ್ಜನ್ಯತ್ವಮಾತ್ರದಿಂದ ಜ್ಞಾನವು ಪ್ರಮಾವಾಗುವುದಾದಲ್ಲಿ ಭ್ರಮೆಯೂ ಅದರಿಂದ ಜನ್ಯವಾದುದರಿಂದ ಅದೂ ಪ್ರಮಾ ಆದೀತು.

ಮೂಲದಲ್ಲಿ 'ಭ್ರಮ–ಘಟಾದಿ ಸಾಧಾರಣೇನ' ಎಂದರೆ ಭ್ರಮಾದಿ ಸಾಧಾರಣ, ಘಟಾದಿ ಸಾಧಾರಣ, ಎಂದು ಅನ್ವಯ. ಇಲ್ಲಿ 'ಘಟಾದಿ' ಎಂಬುದನ್ನು ಉಪಾದಾನವಿಷಯಕ ಪ್ರತ್ಯಕ್ಷತ್ವೇನ ಈಶ್ವರಜ್ಞಾನವು ಕಾರಣ ಎಂಬುದರ ಸೂಚನೆಗೆ ಉಲ್ಲೇಖಿಸಲಾಗಿದೆ. ಈಶಜ್ಞಾನಜನ್ಯತ್ವ ಮಾತ್ರದಿಂದ ಯಾದೃಚ್ಛಿಕಾನುಮಿತಿಯು ಪ್ರಮಾವಾಗುವುದಾದಲ್ಲಿ ಭ್ರಮೆಯೂ ಪ್ರಮಾ ಆಗಲಿ, ಎಂಬ ಅನಿಷ್ಟಪ್ರಸಂಗವನ್ನು ಸೂಚಿಸುವುದಕ್ಕಾಗಿ ಭ್ರಮೆಯನ್ನು ಉಲ್ಲೇಖಿಸಲಾಗಿದೆ.

'ಅನ್ಯಥಾ' ಎಂಬ ವಾಕ್ಯದಲ್ಲಿ ಇನ್ನೂ ಅನೇಕ ಅತಿಪ್ರಸಂಗಗಳನ್ನು ಹೇಳಲಾಗಿದೆ. ಆ ವಾಕ್ಯದಲ್ಲಿ ಅನ್ಯಥಾ ಎಂದರೆ, ಉಪಾದಾನವಿಷಯಕ ಜ್ಞಾನತ್ವೇನ ಹೇತುವಾಗಿರುವ ಈಶಜ್ಞಾನವು ಸಲ್ಲಿಂಗ ವಿಷಯಕವಾಗಿರುವ ಮಾತ್ರದಿಂದ (ಸಕಲವಿಷಯಕವಾದುದರಿಂದ) ಅದನ್ನು ಗುಣ ಎಂದು ಪರಿಗಣಿಸಿದರೆ, ಎಂದು ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ಯೇನ ಕೇನಾಪಿ ರೂಪೇಣ ಹೇತೋರಪಿ ಈಶ್ವರಜ್ಞಾನಸ್ಯ ಗುಣತ್ವಕಲ್ಪನೇ ಅತಿಪ್ರಸಂಗಾಂತರಮಾಹ–ಅಪಿಚೇತಿ ॥**

ರೂಪಾಂತರದಿಂದ ಸಾಧಾರಣಕಾರಣವಾಗಿದ್ದರೂ ಈಶ್ವರಜ್ಞಾನವನ್ನು ಗುಣ ಎಂದು ಪರಿಗಣಿಸಿದಲ್ಲಿ ಇನ್ನೊಂದು ಅತಿಪ್ರಸಂಗವನ್ನು 'ಅಪಿಚ' ಎಂಬ ಮೂಲದಲ್ಲಿ ಹೇಳುತ್ತಾರೆ.

**अपिचैवं व्यधिकरणस्य परामर्शस्य गुणत्वे दोषत्वमपि तस्यैव स्यात्। सामानाधिकरण्यस्य अप्रयोजकत्वात् । तथाचाभासानुमितिमूलत्वेन नित्यभ्रमः सिद्ध्येत् ।**

ಅಷ್ಟೇ ಅಲ್ಲ, ಅನುಮಿತಿವ್ಯಧಿಕರಣವಾದ ಈಶ್ವರಜ್ಞಾನವು ಯಾದೃಚ್ಛಿಕ ಪ್ರಮಾತ್ಮಕಾನುಮಿತಿಗೆ ಗುಣವಾಗುವುದಾದಲ್ಲಿ ಭ್ರಮೆಗೆ ಕಾರಣವಾದ ದೋಷವೂ ಈಶ್ವರಜ್ಞಾನವೇ ಆಗಲಿ. ಭ್ರಮಾತ್ಮಕ ಅನುಮಿತಿ ಬರುವ ವ್ಯಕ್ತಿಯಲ್ಲೇ ಭ್ರಮಾತ್ಮಕಪರಾಮರ್ಶ ಇದ್ದರೂ, ಸಾಮಾನಾಧಿಕರಣ್ಯವು ಅಪ್ರಯೋಜಕವಾದುದರಿಂದ, ಅದು ದೋಷರೂಪವಾಗಿ ಕಾರಣ ವಾಗದಿರಲಿ. ತಥಾಚ ಭ್ರಮಾತ್ಮಕವಾದ ಅನುಮಿತಿಗೆ ಮೂಲಭೂತವಾದ ದೋಷಾತ್ಮಕವಾಗಿ, ಈಶ್ವರನಿಗೆ (ನಿತ್ಯಪ್ರಮಾದಂತೆ) ನಿತ್ಯಭ್ರಮೆಯೂ ಇದೆ, ಎಂದು ಸಿದ್ಧವಾದೀತು.

## ನ್ಯಾಯದೀಪ

**ಏವಮ್ ಇತ್ಯಸ್ಯ ವ್ಯಕ್ತೀಕರಣಂ ವ್ಯಧಿಕರಣಸ್ಯೇತ್ಯಾದಿ । ನಿತ್ಯಭ್ರಮ ಇತಿ ॥ ನನು ಸತಿ ಸಂಭವೇ ತ್ಯಾಗಾಯೋಗಾತ್ ತತ್ರ ಸಮಾನಾಧಿಕರಣಸ್ಯ ಏವ ಅಸಲ್ಲಿಂಗಪರಾಮರ್ಶರೂಪದೋಷಸ್ಯ ಸಂಭವಾತ್ ನ ವ್ಯಧಿಕರಣ-ದೋಷಕಲ್ಪನಾ ಇತಿ ಚೇನ್ನ । ಗಂಧಪ್ರಾಗಭಾವಾವಚ್ಛಿನ್ನಃ ಘಟಃ, ಗಂಧವಾನ್, ಪೃಥಿವೀತ್ವಾತ್ ಇತ್ಯಾದೌ ಆಭಾಸಾನುಮಿತೌ ಸಮಾನಾಧಿಕರಣದೋಷಾಸಂಭವೇ ವ್ಯಧಿಕರಣಸ್ಯೈವ ಕಲ್ಪ್ಯತ್ವೇ, ಅನುಗತಿಲಾಭಾಯ ಸರ್ವತ್ರ ತಸ್ಯೈವ ದೋಷತ್ವಕಲ್ಪನೌಚಿತ್ಯಾತ್ ಇತಿ ಭಾವಃ ।**

ಮೂಲದಲ್ಲಿ 'ಏವಂ' ಎಂಬುದರ ವಿವರಣೆಯೇ 'ವ್ಯಧಿಕರಣಸ್ಯ' ಎಂದು ಮುಂದೆ ಮಾಡಲಾಗಿದೆ.

ಈಶ್ವರನಿಗೆ ನಿತ್ಯಭ್ರಮೆಯು ಬರಲಿ, ಎಂಬುದರ ಅಭಿಪ್ರಾಯದ ಮೇಲೆ ಹೀಗೆ

ಸಮಾಧಾನವನ್ನು ಹೇಳಬಹುದು–ಯಾದೃಚ್ಛಿಕ ಸಂವಾದಿಸ್ಥಳದಲ್ಲಿ ಸಮಾನಾಧಿಕರಣವಾದ ಗುಣವು ಸರ್ವಥಾ ಇಲ್ಲವಾದ ಕಾರಣ, ಈಶ್ವರಪ್ರಮಾವನ್ನೇ ಗುಣ ಎಂದು ಅನಿವಾರ್ಯವಾಗಿ ಕಲ್ಪಿಸಬೇಕು. ಎಲ್ಲಿ ಸಮಾನಾಧಿಕರಣದೋಷವು ಲಭ್ಯವಿದೆಯೋ ಅಲ್ಲಿಯೂ ವ್ಯಧಿಕರಣದೋಷವನ್ನು ಕಲ್ಪನೆ ಮಾಡಬಾರದು. ಸಂಭವವಿರುವುದನ್ನು ತ್ಯಾಗಮಾಡುವುದು ಉಚಿತವಲ್ಲ. ಆದ್ದರಿಂದ ಈಶ್ವರನಿಗೆ ನಿತ್ಯಭ್ರಮೆಯನ್ನು ಕಲ್ಪಿಸಬೇಕಾದ ಅಗತ್ಯವಿಲ್ಲ.

ಇದು ಸರಿಯಲ್ಲ. ಕೆಲವು ಅನುಮಾನಗಳಲ್ಲಿ ಸಮಾನಾಧಿಕರಣದೋಷವೂ ಅಸಂಭಾವಿತವಾಗುತ್ತದೆ. ಉದಾಹರಣೆಗೆ– 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧವಾನ್, ಪೃಥಿವೀತ್ವಾತ್' ಎಂಬ ಅನುಮಾನದಲ್ಲಿ ಬಾಧಮಾತ್ರ ದೋಷ. ಹೇತುವಿನಲ್ಲಿ ವ್ಯಾಪ್ತಿಯೂ ಇದೆ, ಪಕ್ಷಧರ್ಮತಾವೂ ಇದೆ. ಹೀಗೆ ಸಮಾನಾಧಿಕರಣವಾದ ಸಲ್ಲಿಂಗ ಪರಾಮರ್ಶರೂಪವಾದ ಗುಣವು ಇರುವುದರಿಂದ ಅನುಮಿತಿಯು ಭ್ರಮಾತ್ಮಕವಾಗಲು ಬೇಕಾದ ದೋಷವು ಸಮಾನಾಧಿಕರಣವಲ್ಲ. ಅಲ್ಲಿ ವ್ಯಧಿಕರಣವಾದ ದೋಷವನ್ನೇ, ಯಾದೃಚ್ಛಿಕಸಂವಾದಿಸ್ಥಳದಲ್ಲಿ ವ್ಯಧಿಕರಣಗುಣವನ್ನು ಕಲ್ಪಿಸಿದಂತೆ, ಕಲ್ಪನೆ ಮಾಡಬೇಕಾಗುತ್ತದೆ. ಅಲ್ಲಿ ಅನಿವಾರ್ಯವಾದುದರಿಂದ ವ್ಯಧಿಕರಣದೋಷವು ಕಾರಣ ಎಂದು ಸಿದ್ಧವಾದ ಮೇಲೆ ಸರ್ವತ್ರ ದುಷ್ಟಾನುಮಾನಗಳಲ್ಲಿ ಅದನ್ನೇ ದೋಷವೆನ್ನುವುದರಿಂದ ಅನುಗತವಾದ ಒಂದು ಕಾರಣವನ್ನು ಹೇಳಿದಂತೆ ಆಗುತ್ತದೆ. ಆದ್ದರಿಂದ ಈಶ್ವರನಿಗೆ ನಿತ್ಯಭ್ರಮೆಯು ಅನಿವಾರ್ಯ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಗುಣೇ ಸಾಮಾನಾಧಿಕರಣ್ಯಮ್ ಅಪ್ರಯೋಜಕಮ್, ದೋಷೇ ತು ತನ್ನಿಯಮಃ ಪ್ರಯೋಜಕಃ। ಗಂಧಪ್ರಾಗಭಾವಾವಚ್ಛಿನ್ನ, ಇತ್ಯಾದೌ ಬಾಧಿತತ್ವ ಪ್ರಮಾದಿರೇವ ಕಶ್ಚಿತ್ ಕಲ್ಪ್ಯತೇ ಇತ್ಯತ ಆಹ–ಕಿಂಚೈವಂ ಸತೀತಿ ॥**

ಹಿಂದೆ ಹೇಳಿರುವ ದೋಷವನ್ನು ಹೀಗೆ ಪರಿಹರಿಸಬಹುದು— ಗುಣವು ಸಮಾನಾಧಿಕರಣವಾಗದಿದ್ದರೂ ಪ್ರಮಾಕ್ಕೆ ಕಾರಣವಾಗುತ್ತದೆ, ದೋಷಕ್ಕೆ ಮಾತ್ರ ಈ ನಿರ್ಬಂಧ ಇದೆ. ಅದು ಸಮಾನಾಧಿಕರಣವಾದರೆ ಮಾತ್ರ ಭ್ರಮೆಗೆ ಪ್ರಯೋಜಕವಾಗುತ್ತದೆ. ಹಿಂದೆ ಹೇಳಿದ ಅನುಮಾನದಲ್ಲೂ ಬಾಧಪ್ರಮಾ ಎಂಬ ಸಮಾನಾಧಿಕರಣ ದೋಷದಿಂದಾಗಿಯೆ ಅನುಮಿತಿಯು ಭ್ರಮೆಯಾಗಿದೆ. ಅದಕ್ಕಾಗಿ ಈಶ್ವರನಲ್ಲಿ ಭ್ರಮೆಯನ್ನು ಕಲ್ಪಿಸಬೇಕಾದ ಅಗತ್ಯವಿಲ್ಲ, ಎಂದು. ಹೀಗೆ ಹೇಳಿದರೂ ದೋಷ ತಪ್ಪಿದ್ದಲ್ಲ, ಎಂದು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किञ्चैवं सति स्थाणौ करादिविपर्ययजन्यस्य पुरुषत्वभ्रमस्येश्वरनिष्ठया वक्रकोटरत्वादिप्रमया जन्यत्वात् स्थाणुप्रमात्वं स्यात् ।**

ವ್ಯಧಿಕರಣವಾದ ಗುಣವೂ ಪ್ರಮಾಕ್ಕೆ ಕಾರಣವಾಗುವುದಾದಲ್ಲಿ ಮರವನ್ನು ನೋಡಿ 'ಇದು ಮನುಷ್ಯ' ಎಂದು ಬಂದಿರುವ ಭ್ರಾಂತಿಯೂ ಪ್ರಮಾ ಆದೀತು. ಆ ಭ್ರಮೆಗೆ ಸಮಾನಾಧಿಕರಣವಾದ, ಶಾಖಾದಿಗಳಲ್ಲಿ ಕರತ್ವಭ್ರಾಂತಿ ಕಾರಣ ಎಂದು ಹೇಗೆ ಹೇಳಬಹುದೋ ಹಾಗೆಯೇ ಈಶ್ವರನಿಗಿರುವ ಸ್ಥಾಣತ್ವವ್ಯಾಪ್ಯ ವಕ್ರ-ಕೋಟರತ್ವಾದಿ ಪ್ರಮಾವೂ ಗುಣರೂಪವಾಗಿ ಕಾರಣವಾಗಿದೆ. ಆದ್ದರಿಂದ ಅದೂ ಸ್ಥಾಣುಪ್ರಮಾ ಆಗಲಿ.

## ನ್ಯಾಯದೀಪ

**ಕಿಂಚೈವಂಸತೀತಿ ॥ ವ್ಯಧಿಕರಣಸ್ಯಾಪಿ ಗುಣಸ್ಯ ಹೇತುತ್ವೇ ಸತೀತ್ಯರ್ಥಃ। ಸ್ಥಾಣುತ್ವಪ್ರಮಾತ್ವಮಿತಿ ॥ ನಚ ತತ್ರ ಸಮಾನಾಧಿಕರಣೋ ದೋಷಃ ಪ್ರಬಲಃ ಇತಿ ಶಂಕ್ಯಮ್। ಯಾದೃಚ್ಛಿಕಸಂವಾದಿನಿ ಪ್ರಮಾನುದಯಾಪಾತಾತ್। ನಚಾರೋಪೇ ಸತಿ ನಿಮಿತ್ತಾನುಸರಣಮ್, ಇತಿ ನ್ಯಾಯೇನ ತತ್ರ ಪ್ರಮಾತ್ವಾದೃಷ್ಟ್ಯಾ ನ ವಿಶೇಷಪ್ರಮಾತ್ವೇನ ಈಶ್ವರಜ್ಞಾನಂ ಹೇತುರಿತಿ ಯುಕ್ತಮ್। ಪ್ರಾಮಾಣ್ಯಸ್ಯ ಸ್ವತಸ್ತ್ವೇನಾಪಿ ಉಪಪತ್ತ್ಯಾ ಈಶ್ವರಜ್ಞಾನಸ್ಯಾಪಿ ಅನುಮಿತಿ ಪ್ರಮಾಯಾಂ ನ ಗುಣತ್ವೇನ ಹೇತುತ್ವಮಿತಿ ಸುವಚತ್ವಾದಿತಿ ಭಾವಃ।**

ಮೂಲದಲ್ಲಿ ಭ್ರಮೆಯೂ ಪ್ರಮೆಯಾಗಲೀ, ಎಂದು ಆಕ್ಷೇಪಿಸಲಾಗಿದೆ. ಅದನ್ನು ಪರಿಹರಿಸಬಹುದು-ಅಲ್ಲಿ ವ್ಯಧಿಕರಣಗುಣಕ್ಕಿಂತ ಸಮಾನಾಧಿಕರಣವಾದ ದೋಷವು ಪ್ರಬಲ. ಆದ್ದರಿಂದ ಪುರುಷತ್ವಜ್ಞಾನವು ಭ್ರಮೆಯೇ ಆಗುತ್ತದೆ, ಪ್ರಮಾ ಆಗುವುದಿಲ್ಲ, ಎಂದು.

ಇದು ಸರಿಯಲ್ಲ. ಹಾಗಾದರೆ, ಇದೇ ನ್ಯಾಯವನ್ನು ಯಾದೃಚ್ಛಿಕಸಂವಾದಿ ಅನುಮಿತಿ ಪ್ರಮಾಕ್ಕೂ ಅನ್ವಯಿಸಬೇಕು. ಅಲ್ಲೂ ವ್ಯಧಿಕರಣಗುಣಕ್ಕಿಂತ ಸಮಾನಾಧಿಕರಣದೋಷವೇ ಪ್ರಬಲವಾಗಬೇಕು. ಆಗ ಆ ಅನುಮಿತಿಯೂ ಭ್ರಮಾತ್ಮಕವಾಗಬೇಕಾದೀತು.

''ಆರೋಪೇ ಸತಿ ನಿಮಿತ್ತಾನುಸರಣಂ, ನತು ನಿಮಿತ್ತಮಸ್ತೀತಿ ಆರೋಪಃ'' ಎಂದು ನ್ಯಾಯವಿದೆ. ಆರೋಪವು ಅನುಭವಸಿದ್ಧವಾದರೆ ಅದಕ್ಕೊಂದು ನಿಮಿತ್ತವನ್ನು ಕಲ್ಪಿಸಬೇಕು. ಆದರೆ, ಕಲ್ಪಿಸಿದ ನಿಮಿತ್ತವಿದ್ದ ಮಾತ್ರಕ್ಕೆ ಆರೋಪ ಮಾಡಲಾಗುವುದಿಲ್ಲ. ಪ್ರಕೃತದಲ್ಲಿ, ಯಾದೃಚ್ಛಿಕಾನುಮಿತಿಯು ಪ್ರಮಾ ಆಗಿರುವುದು ಅನುಭವಸಿದ್ಧವಾಗಿದೆ. ಅದಕ್ಕೆ ಈಶ್ವರಪ್ರಮಾವು ಗುಣ ಎಂದು ನಿಮಿತ್ತವನ್ನು ಕಲ್ಪಿಸಬೇಕಾಗಿದೆ. ಅಂದಮಾತ್ರಕ್ಕೆ 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧವಾನ್' ಎಂಬ ಭ್ರಮಾತ್ಮಕಅನುಮಿತಿಯೂ ಈಶ್ವರಪ್ರಮಾರೂಪ ಗುಣಜನ್ಯವಾದ ಕಾರಣದಿಂದ ಪ್ರಮೆಯಾಗಲಿ, ಎಂದು ಆಕ್ಷೇಪ ಮಾಡುವುದು, ಸರಿಯಲ್ಲ.

ಹೀಗೆ ಸಮಾಧಾನ ಹೇಳುವುದು ಯುಕ್ತವಲ್ಲ. ಯಾದೃಚ್ಛಿಕಪ್ರಮಾತ್ಮಕ ಅನುಮಿತಿಗೆ

ಈಶ್ವರಪ್ರಮಾರೂಪ ಗುಣ ಕಾರಣ ಎಂದು ಕಲ್ಪಿಸಲು ಆಧಾರ 'ಪ್ರಾಮಾಣ್ಯಂ ಪರತಃ ಉತ್ಪದ್ಯತೇ' ಎಂಬ ಆಗ್ರಹ. ಈ ಆಗ್ರಹವನ್ನು ಬಿಟ್ಟರೆ ಈಶ್ವರಪ್ರಮಾರೂಪಗುಣದ ಅಗತ್ಯವೂ ಇಲ್ಲ, ಆದರಿಂದಾಗಿ ಭ್ರಮೆಯೂ ಪ್ರಮಾ ಆಗಲಿ ಎಂಬ ಆಕ್ಷೇಪಕ್ಕೂ ಅವಕಾಶ ಇಲ್ಲ. ಆದ್ದರಿಂದ ಪರತಸ್ತ್ವಸಿದ್ಧಾಂತವನ್ನು ಪರಿತ್ಯಜಿಸಿ ಈಶ್ವರಪ್ರಮಾ ಗುಣತ್ವೇನ ಹೇತುವಲ್ಲ, ಎಂದು ಹೇಳುವುದೇ ಸೂಕ್ತ.

## ನ್ಯಾಯದೀಪದಲ್ಲಿ ಅವತಾರಿಕೆ

**ಏವಂ ಯಾದೃಚ್ಛಿಕಸಂವಾದಿನಿ ಪೂರ್ವೋಕ್ತಗುಣವ್ಯಭಿಚಾರಮುಕ್ತ್ವಾ ತತ್ಸ್ಥೈರ್ಯಾಯ ವ್ಯಧಿಕರಣಸ್ಯ ಗುಣತ್ವಮ್ ಅನೇಕದೋಷೋಕ್ತ್ಯಾ ನಿರಸ್ಯ ಇದಾನೀಂ ಪ್ರಕಾರಾಂತರೇಣ ತತ್ರ ಗುಣವ್ಯಭಿಚಾರಾಭಾವಮ್ ಆಶಂಕ್ಯ ದೋಷಾಂತರಮಾಹ-ನನ್ವಿತ್ಯಾದಿನಾ ॥**

ಇದುವರೆಗೆ ಪ್ರಾಮಾಣ್ಯಕ್ಕೆ ಗುಣವು ಕಾರಣ ಎನ್ನುವ ಪಕ್ಷಕ್ಕೆ ಯಾದೃಚ್ಛಿಕಸಂವಾದಿಯಾದ ಅನುಮಿತಿಯಲ್ಲಿ ಗುಣಕ್ಕೆ ವ್ಯಭಿಚಾರದೋಷವನ್ನು ಹೇಳಿ, ವ್ಯಧಿಕರಣವಾದ ಗುಣವು ಕಾರಣ ಎಂದು ಕಲ್ಪಿಸಿದರೆ ಅನೇಕದೋಷಗಳನ್ನು ಹೇಳುವ ಮೂಲಕ ಅದನ್ನು ನಿರಾಕರಿಸಲಾಯಿತು. ಮುಂದಿನ ಗ್ರಂಥದಲ್ಲಿ ಯಾದೃಚ್ಛಿಕಸಂವಾದಿಯಾದ ಅನುಮಿತಿಯಲ್ಲಿ ಪ್ರಕಾರಾಂತರದಿಂದ ಗುಣವ್ಯಭಿಚಾರ ಇಲ್ಲ, ಎಂದು ಆಶಂಕೆ ಮಾಡಿ ಅದಕ್ಕೆ ದೋಷವನ್ನು ಹೇಳಲಾಗಿದೆ.

## ಅನುಮಿತಿಯಲ್ಲಿ ವ್ಯಾಪ್ಯವತ್ತಾಪಕ್ಷಗುಣವಾದ ನಿರಾಸ

**ननु तर्ह्यनुमितिसमानाधिकरणं वस्तुतः साध्यव्याप्यवतः पक्षस्य व्याप्यवत्त्वेन ज्ञानं गुणोऽस्त्विति चेन्मैवम् । लाघवेन वस्तुतः साध्यवत्पक्षस्य ज्ञानेनैव प्रमात्वसम्भवात् । स च विषयसत्वोपहितत्वान्न गुण इत्युक्तम् ।**

ಯಾದೃಚ್ಛಿಕಸಂವಾದಿಸ್ಥಳದಲ್ಲಿ ವ್ಯಧಿಕರಣವಾದ ಗುಣವು ಕಾರಣವಾಗುವುದು ಬೇಡ. ಸಮಾನಾಧಿಕರಣವಾದ ಗುಣವನ್ನೇ ಅಲ್ಲೂ ತೋರಿಸಬಹುದು-ಅಲ್ಲಿ ವಹ್ನಿಮತ್ತಾದ ಪರ್ವತವು ವಸ್ತುತಃ ವ್ಯಾಪ್ಯವತ್ತಾಗಿದೆ. ಭ್ರಾಂತವ್ಯಕ್ತಿಯು ಧೂಳೀಪಟಲವನ್ನು ಧೂಮವೆಂದು ಭ್ರಮಿಸಿದರೂ ಪರ್ವತದಲ್ಲಿ ವಾಸ್ತವವಾಗಿ ವಹ್ನಿವ್ಯಾಪ್ಯವಾದ ಆಲೋಕವು ಇದ್ದೇ ಇದೆ. ಆದ್ದರಿಂದ ವಸ್ತುತಃ ವ್ಯಾಪ್ಯವತ್ತಾದ ಪಕ್ಷದ ವ್ಯಾಪ್ಯವತ್ತ್ವೇನ ಜ್ಞಾನವೇ ಅಲ್ಲಿ ಗುಣ. ಆ ಗುಣವು ಪ್ರಮಾಸಮಾನಾಧಿಕರಣವೂ ಆಗಿದೆ, ಎಂದರೆ ಇದೂ ಯುಕ್ತವಲ್ಲ. ಸಾಧ್ಯವ್ಯಾಪ್ಯವತ್ಪಕ್ಷಜ್ಞಾನವು ಗುಣ, ಎಂದು

ಕಲ್ಪಿಸುವುದಕ್ಕಿಂತ ವಸ್ತುತಃ ಸಾಧ್ಯವತ್‌ಪಕ್ಷಜ್ಞಾನವೇ ಗುಣ, ಎಂದು ಹೇಳುವುದು ಲಾಘವ. ಆದರೆ, ಅದು ವಿಷಯಸತ್ತ್ವಘಟಿತವಾಗಿದೆ. ವಿಷಯಸತ್ತ್ವವು ಗುಣದಲ್ಲಿ ಸೇರಬಾರದು ಎಂದು ಹಿಂದೆಯೇ (ಪು.553) ಹೇಳಲಾಗಿದೆ. ಆದ್ದರಿಂದ ಈ ರೀತಿಯಾದ ಗುಣದ ಕಲ್ಪನೆಯೂ ಸರಿಯಲ್ಲ.

## ನ್ಯಾಯದೀಪ

**ಯಾದೃಚ್ಛಿಕಸಂವಾದಿನಿ ಧೂಮಾಭಾವೇಽಪಿ ವಹ್ನಿವ್ಯಾಪ್ಯಸ್ಯ ಆಲೋಕಾದೇಃ ಸತ್ತ್ವೇನ ತಾದೃಶೇ ಪಕ್ಷೇ ಭಾಷ್ಪೇ ಧೂಮಜ್ಞಾನಂ ವ್ಯಾಪ್ಯವತ್ತ್ವಜ್ಞಾನಂ ಭವತೀತಿ ನ ತತ್ರ ವ್ಯಭಿಚಾರ ಇತಿ ಭಾವಃ । ವಸ್ತುತ ಇತಿ ॥ ವಸ್ತುತಃ ಸಾಧ್ಯವಾನ್ ಯಃ ಪಕ್ಷಃ ತಾದೃಶಪಕ್ಷಜ್ಞಾನೇನೈವ ಇತ್ಯರ್ಥಃ । ಸಚೇತಿ ॥ ಉಕ್ತರೂಪಪಕ್ಷಸ್ಯ ಜ್ಞಾನಮ್, ಇತ್ಯರ್ಥಃ । ತಚ್ಚೇತಿ ವಕ್ತವ್ಯೇ ವಿಧೇಯಗುಣಾಪೇಕ್ಷಯಾ ಪುಲ್ಲಿಂಗ ಪ್ರಯೋಗಃ ।**

ಯಾದೃಚ್ಛಿಕಸಂವಾದಿಅನುಮಿತಿಸ್ಥಳದಲ್ಲಿ ಪರ್ವತದಲ್ಲಿ ಧೂಮ ಇಲ್ಲದೇ ಹೋದರೂ ವಹ್ನಿವ್ಯಾಪ್ಯವಾದ ಆಲೋಕವು ಇರುವುದರಿಂದ ಪಕ್ಷವು ವಸ್ತುತಃ ವಹ್ನಿವ್ಯಾಪ್ಯವತ್ ಆಗಿದೆ. ಅಲ್ಲಿ ಬಾಷ್ಪದಲ್ಲಿ ಧೂಮತ್ವ ಭ್ರಮೆಯಿಂದ 'ಧೂಮವಾನ್ ಪರ್ವತಃ' ಎಂಬ ಜ್ಞಾನವು ಬಂದರೂ ಅದೂ ವಸ್ತುತಃ ವ್ಯಾಪ್ಯವತ್ ಪಕ್ಷವಿಷಯಕ ಜ್ಞಾನವೇ ಆಗುತ್ತದೆ. ಗುಣಜನ್ಯವಾಯಿತು ಅನುಮಿತಿ, ಅಲ್ಲಿ ಗುಣಕ್ಕೆ ವ್ಯಭಿಚಾರ ಇಲ್ಲ, ಎಂದರೆ ಇದು ಯುಕ್ತವಲ್ಲ, ಎಂದು ಮೂಲದಲ್ಲಿ ನಿರಾಕರಿಸಲಾಗಿದೆ.

ವಸ್ತುತಃ ಎಂಬುದನ್ನು ಸಾಧ್ಯವತ್ತ್ವಾಂಶದಲ್ಲಿ ಸೇರಿಸಿಕೊಂಡಾಗ 'ವಸ್ತುತಃ ಯಃ ಸಾಧ್ಯವಾನ್ ಪಕ್ಷಃ' ಎಂದು ಅರ್ಥಸಿಗುತ್ತದೆ. ಅಂತಹ ಪಕ್ಷವಿಷಯಕಜ್ಞಾನಗುಣ. ಆ ಜ್ಞಾನವು ಭ್ರಾಂತಿಯಾದರೂ ಅದಕ್ಕೆ ವಿಷಯವಾದುದು ವಸ್ತುತಃ ಸಾಧ್ಯವತ್ತಾಗಿ ಇರಬೇಕು, ಎಂದರ್ಥ. ಈಗ 'ಧೂಮವಾನ್ ಪರ್ವತಃ' ಎಂಬ ಜ್ಞಾನವೂ ಸಾಧ್ಯವತ್‌ಪಕ್ಷ ವಿಷಯಕವಾಗುತ್ತದೆ.

ಮೂಲದಲ್ಲಿ ಜ್ಞಾನವು ಪ್ರಸ್ತುತವಾದರೂ 'ಆ ಜ್ಞಾನವು ಗುಣ' ಎಂದು ಗುಣವು ವಿಧೇಯವಾದುದರಿಂದ ತದಪೇಕ್ಷಯಾ ಸಃ ಎಂದು ಪುಲ್ಲಿಂಗವನ್ನು ಪ್ರಯೋಗ ಮಾಡಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಉಕ್ತಗುಣಸ್ಯ ಅನ್ವಯವ್ಯಭಿಚಾರಂ ಚಾಹ–ಕಿಂಚೇತಿ ॥**

'ವ್ಯಾಪ್ಯವತಃ ಪಕ್ಷಸ್ಯ ವ್ಯಾಪ್ಯವತ್ತ್ವೇನ ಜ್ಞಾನಂ ಗುಣಃ' ಎನ್ನುವುದಕ್ಕೂ ಅನ್ವಯ ವ್ಯಭಿಚಾರವನ್ನು ಮುಂದಿನ ಗ್ರಂಥದಲ್ಲಿ ಹೇಳುತ್ತಾರೆ–

**किञ्च प्रागभावावच्छिन्नो घटो गन्धवान् पृथवीत्वात् इत्यनुमाने वस्तुतोऽनेककर्तृके लाघवतर्कानुग्रहात् एककर्तृकत्वविषयानुमाने चोक्तगुणसद्भावात् प्रमा ज्ञायेत ।**

ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧವಾನ್, ಪೃಥಿವೀತ್ವಾತ್, ಎಂಬ ಅನುಮಾನದಲ್ಲಿ ಪಕ್ಷವಾದ ಘಟದಲ್ಲಿ ಗಂಧವ್ಯಾಪ್ಯಪೃಥಿವೀತ್ವವು ಇದೆ. ಹೀಗೆ ಘಟವು ವಸ್ತುತಃ ಸಾಧ್ಯವ್ಯಾಪ್ಯವತ್ತಾಗಿದೆ. ಆದರಲ್ಲಿ ವ್ಯಾಪ್ಯವತ್ತಾಜ್ಞಾನವು ಗುಣ. ಅಂತಹ ಗುಣಜನ್ಯವಾದ ಅನುಮಿತಿಯು ಪ್ರಮಾ ಆಗಲಿ. ಅದರಂತೆ, ವಸ್ತುತಃ ಅನೇಕಕರ್ತೃಕವಾದ ಪ್ರಾಸಾದಾದಿಕಾರ್ಯದಲ್ಲಿ ಕಾರ್ಯತ್ವ ಹೇತುವಿನಿಂದ ಸಕರ್ತೃಕತ್ವವನ್ನು ಸಾಧನೆ ಮಾಡುವಾಗ ಈಶ್ವರಾನುಮಾನದಂತೆ 'ಕರ್ತುಃ ಏಕತ್ವೇ ಲಾಘವಮ್' ಎಂಬ ಲಾಘವತರ್ಕದಿಂದ 'ಪ್ರಸಾದಃ ಏಕಕರ್ತೃಕಃ' ಎಂಬ ಅನುಮಿತಿ ಬರುತ್ತದೆ. ಇದು ಅಪ್ರಮಾ. ಆದರೂ ಸಕರ್ತೃಕತ್ವವ್ಯಾಪ್ಯಕಾರ್ಯತ್ವವು ವಸ್ತುತಃ ಪ್ರಾಸಾದದಲ್ಲಿ ಇದೆ. ಆದ್ದರಿಂದ ಆ ಅನುಮಿತಿ ವಸ್ತುತಃ ವ್ಯಾಪ್ಯವತಿ ವ್ಯಾಪ್ಯವತ್ತ್ವಜ್ಞಾನರೂಪಗುಣಜನ್ಯವಾಗಿದೆ. ಆದ್ದರಿಂದ ಆ ಅನುಮಿತಿಯೂ ಪ್ರಮಾ ಆಗಲಿ.

ಈ ಎರಡೂ ಸಂದರ್ಭಗಳಲ್ಲೂ ತಾರ್ಕಿಕಾಭಿಮತಗುಣ ಇದೆ, ಆದರೆ, ಅನುಮಿತಿ ಪ್ರಮಾ ಅಲ್ಲ. ಆದ್ದರಿಂದ ಅನ್ವಯವ್ಯಭಿಚಾರ.

## ನ್ಯಾಯದೀಪ–ರುಚಿದತ್ತ–ಪಕ್ಷಧರಮತ ವಿಮರ್ಶೆ

**ಅನೇಕೇತಿ ॥ ಪ್ರಾಸಾದಃ ಸಕರ್ತೃಕಃ ಕಾರ್ಯತ್ವಾತ್, ಘಟವತ್, ಇತ್ಯನುಮಾನೇ ಇತ್ಯರ್ಥಃ। ಉಕ್ತೇತಿ ॥ ವಸ್ತುತಃ ಸಾಧ್ಯವ್ಯಾಪ್ಯತ್ವವತಃ ಇತ್ಯಾದಿನಾ ಉಕ್ತೇತ್ಯರ್ಥಃ।**

**ಏತೇನ ಪಕ್ಷತಾವಚ್ಛೇದಕಾವಚ್ಛೇದೇನ ಜ್ಞಾಪ್ಯವತಿ ಪಕ್ಷೇ ಲಿಂಗಜ್ಞಾನಂ ಗುಣಃ, ಇತಿ ರುಚಿದತ್ತೇನ ಉಕ್ತಮ್[1] (ಪು.355) ನಿರಸ್ತಮ್। 'ವಸ್ತುತಃ ಅನೇಕಕರ್ತೃಕೇ' ಇತ್ಯಾದಿನಾ ಉಕ್ತದೋಷಾನತಿಲಂಘನಾತ್। ಲಾಘವೇನ ವಸ್ತುತಃ ಜ್ಞಾಪ್ಯವತ್‌ಪಕ್ಷಸ್ಯ ಜ್ಞಾನೇನೈವ ಪ್ರಮಾತ್ವಸಂಭವಾತ್। ತಸ್ಯಚ ವಿಷಯಸತ್ತ್ವೋಪಹಿತತ್ವೇನ ಅಗುಣತ್ವಾತ್।**

1 ಯಥಾರ್ಥಲಿಂಗಜ್ಞಾನಪದೇನ ಪಕ್ಷತಾವಚ್ಛೇದಕಾವಚ್ಛೇದೇನ ಜ್ಞಾಪ್ಯವತಿ ಪಕ್ಷೇ ಲಿಂಗಜ್ಞಾನಂ ವಿವಕ್ಷಿತಮ್। ತಸ್ಯ ಚ ಗಂಧಪ್ರಾಗಭಾವಾವಚ್ಛಿನ್ನ ಪಕ್ಷಕ ಗಂಧಾನುಮಿತೌ ಅಭಾವಾತ್ ನೋಕ್ತದೋಷಃ ॥

(ರುಚಿದತ್ತಮಿಶ್ರ–ಪ್ರಕಾಶವ್ಯಾಖ್ಯಾ)

**ಏತೇನೈವ, ಪಕ್ಷತಾವಚ್ಛೇದಕಾವಿರೋಧಿ[2]-ಸಾಧ್ಯಕಾನುಮಿತಿ–ಪ್ರಮಾಯಾಂ ಯಥಾರ್ಥಲಿಂಗಪರಾಮರ್ಶೋ ಗುಣಃ, ಇತಿ ಪಕ್ಷಧರೋಕ್ತಮಪಿ ಪ್ರತ್ಯುಕ್ತಂ। ಗಂಧಪ್ರಾಗಭಾವೇತ್ಯುಕ್ತಸ್ಥಲೇ ತ್ವದುಕ್ತಗುಣೇ ಸತ್ಯಪಿ ಪಕ್ಷತಾವಚ್ಛೇದಕಾವಿರೋಧಿ ಸಾಧ್ಯಪ್ರಮಾಯಾಃ ಅನುದಯಾತ್।**

ಮಣಿವ್ಯಾಖ್ಯಾಕಾರ ರುಚಿದತ್ತ ಮಿಶ್ರರು 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ' ಎಂದು ಪಕ್ಷಮಾಡಿರುವ ಅನುಮಾನದ ವ್ಯಾವೃತ್ತಿಗೋಸ್ಕರ–'ಪಕ್ಷತಾವಚ್ಛೇದಕಾವಚ್ಛೇದೇನ ಪಕ್ಷವು ವ್ಯಾಪ್ಯವತ್ತಾಗಿರಬೇಕು. ಪ್ರಕೃತಪಕ್ಷತಾವಚ್ಛೇದಕ ಗಂಧಪ್ರಾಗಭಾವ. ತದವಚ್ಛೇದೇನ ಘಟದಲ್ಲಿ ಗಂಧವ್ಯಾಪ್ಯಪೃಥಿವೀತ್ವ ಇಲ್ಲ. ತದವಚ್ಛೇದೇನ ಪೃಥಿವೀತ್ವ ಇದ್ದರೂ ಅದು ಗಂಧವ್ಯಾಪ್ಯವಲ್ಲ. (ಗಂಧಸಾಮಾನಾಧಿಕರಣ್ಯವಿಶಿಷ್ಟವಲ್ಲ.) ಆದ್ದರಿಂದ ಅಲ್ಲಿ ಗುಣ ಇಲ್ಲ, ವ್ಯಭಿಚಾರ ಪರಿಹಾರ ವಾಗುತ್ತದೆ, ಎಂದಿದ್ದಾರೆ. ಅಲ್ಲಿ ವ್ಯಭಿಚಾರ ಪರಿಹಾರವಾದರೂ ಎರಡನೆಯ ಅನುಮಾನದಲ್ಲಿ ವ್ಯಭಿಚಾರ ಇದ್ದಿದ್ದೆ. ಅದರಲ್ಲಿ ಪಕ್ಷತಾವಚ್ಛೇದಕಾವಚ್ಛೇದೇನ ಸಕರ್ತೃಕತ್ವವ್ಯಾಪ್ಯ ಕಾರ್ಯತ್ವ ಇದೆ. ಆದರೂ, 'ಪ್ರಾಸಾದಃ ಏಕಕರ್ತೃಕಃ' ಎಂಬ ಅನುಮಿತಿ ಪ್ರಮಾ ಅಲ್ಲ, ಅಷ್ಟೇ ಅಲ್ಲ, 'ವಸ್ತುತಃ ವ್ಯಾಪ್ಯವತಿ ವ್ಯಾಪ್ಯಪ್ರಕಾರಕಃ ಪರಾಮರ್ಶಃ ಗುಣಃ' ಎನ್ನುವುದಕ್ಕಿಂತ 'ಜ್ಞಾಪ್ಯವತ್‌ಪಕ್ಷಸ್ಯ ಜ್ಞಾನಂ ಗುಣಃ' ಎನ್ನುವುದು ಲಾಘವ. ಆದರೆ, ಅದೂ ಗುಣವಲ್ಲ, ಅದು ವಿಷಯಸತ್ವಘಟಿತರೂಪ. ಗುಣಶರೀರದಲ್ಲಿ ವಿಷಯಸತ್ವವು ಸೇರಿರಬಾರದು, ಎಂದು ಹಿಂದೆಯೇ (ಪು.558) ಹೇಳಲಾಗಿದೆ.

ಪಕ್ಷಧರಮಿಶ್ರರು ಇನ್ನೊಂದು ರೀತಿಯಿಂದ ಗುಣಕಾರಣತ್ವವನ್ನು ಸಮರ್ಥಿಸಿದ್ದಾರೆ– ಯಾವ ಅನುಮಿತಿಯಲ್ಲಿ ಪಕ್ಷತಾವಚ್ಛೇದಕಕ್ಕೂ ಸಾಧ್ಯಕ್ಕೂ ವಿರೋಧವಿಲ್ಲವೋ ಅಂತಹ ಅನುಮಿತಿಪ್ರಮಾಕ್ಕೆ ಯಥಾರ್ಥಪರಾಮರ್ಶವು ಗುಣ. ಪ್ರಕೃತ ಅನುಮಿತಿಯಲ್ಲಿ ಗಂಧಪ್ರಾಗಭಾವಕ್ಕೂ ಗಂಧಕ್ಕೂ ವಿರೋಧವಿದೆ. ಆದ್ದರಿಂದ ಇಲ್ಲಿ ಅದು ಗುಣವಲ್ಲ, ಇದೂ ಯುಕ್ತವಲ್ಲ, ಯಥಾರ್ಥಲಿಂಗ ಪರಾಮರ್ಶರೂಪಗುಣವಿದ್ದರೆ ಕಾರಣವಿರುವುದರಿಂದ ಪಕ್ಷತಾವಚ್ಛೇದಕ–ಅವಿರೋಧಿಯಾದ ಸಾಧ್ಯಪ್ರಕಾರಕ ಅನುಮಿತಿ ಪ್ರಮಾ ಬರಬೇಕು. ಪ್ರಕೃತ ಗಂಧಸಾಧ್ಯಕಾನುಮಾನದಲ್ಲಿ ಅಂತಹ ಗುಣ ಇದೆ. ಅಂತಹ ಅನುಮಿತಿ ಇಲ್ಲ, ಅನ್ವಯವ್ಯಭಿಚಾರ ಅನಿವಾರ್ಯ.

## ಅನುಮಿತಿಹೇತು ಗುಣಾಂತರ ನಿರಾಸ

**नच बाधाभावसहकृतसत्यपरामर्शादिः गुण इति वाच्यम् । आवश्यकत्वात् बाधाभावेनैव प्रमात्वसम्भवेन गुणस्य हेतुत्वासिद्धेः ।**

2. ಪಕ್ಷತಾವಚ್ಛೇದಕಾವಿರೋಧಿಸಾಧ್ಯಪ್ರಮಾಯಾಂ ಯಥಾರ್ಥಪರಾಮರ್ಶೋ ಗುಣಃ ಇತ್ಯಪ್ಯಾಹುಃ (ಪ್ರಕಾಶವ್ಯಾಖ್ಯಾ. ಪು.357)

ಕೇವಲ ಯಥಾರ್ಥಪರಾಮರ್ಶವು ಗುಣವಲ್ಲ, ಬಾಧಾಭಾವಸಹಕೃತಸತ್ಯಪರಾಮರ್ಶವೇ ಗುಣ. 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ' ಎಂಬ ಅನುಮಾನದಲ್ಲಿ ಬಾಧರೂಪದೋಷ ಇದೆ. ಬಾಧಾಭಾವಸಹಕೃತವಾದ ಗುಣವು ಇಲ್ಲ. ಆದ್ದರಿಂದ ವ್ಯಭಿಚಾರ ಇಲ್ಲ. ಹೀಗೆ ಹೇಳುವುದೂ ಸರಿಯಲ್ಲ. ಸತ್ಯಪರಾಮರ್ಶವು ಗುಣ ಎಂದು ಹೇಳಿದರೂ ಅದರ ಜೊತೆಯಲ್ಲಿ ಬಾಧಾಭಾವವನ್ನು ಸೇರಿಸುವುದು ಆವಶ್ಯಕ ಎಂದಾದ ಮೇಲೆ ಬಾಧಾಭಾವವೇ ಪ್ರಮಾಕಾರಣ, ಎಂದರೆ ಮುಗಿಯಿತು. ಗುಣವು ಕಾರಣ, ಎಂದು ಹೇಳುವ ಅಗತ್ಯವೇನು? ಇಷ್ಟಾಪತ್ತಿ ಎನ್ನುವಂತಿಲ್ಲ, ಬಾಧ ಎಂದರೆ ವಿಷಯಾಭಾವ. ಬಾಧಾಭಾವ ಎಂದರೆ, ವಿಷಯಸತ್ವ. ಅದು ಗುಣವಲ್ಲ.

## ನ್ಯಾಯದೀಪ

**ಬಾಧಾಭಾವೇನೈವ ಇತಿ ॥ ಸ ಚ ವಿಷಯಸತ್ವಪರ್ಯವಸನ್ನ ಇತಿ ನ ಗುಣಃ ಇತಿ ಭಾವಃ ।**

**ಏತೇನ ಅಬಾಧಿತತತ್ವಜ್ಞಾನಂ ಗುಣಃ, ಇತಿ ಪ್ರತ್ಯುಕ್ತಮ್ । ವಿಷಯ ಸತ್ವೋಪಹಿತತ್ವಾತ್ । ಘನಗರ್ಜಿತಸ್ಥಲೇ ವ್ಯಭಿಚಾರಾಚ್ಚ ।**

ಇದರಿಂದ ಅಬಾಧಿತತತ್ವಜ್ಞಾನವೇ ಗುಣ. ಘಟಪಕ್ಷಕಾನುಮಾನದಲ್ಲಿ ಬಾಧಿತತತ್ವಜ್ಞಾನವೇ ಇದೆ. ಗುಣ ಇಲ್ಲ, ಎನ್ನುವ ಪಕ್ಷವೂ ಸರಿಯಲ್ಲ. (ಈ ಪಕ್ಷವನ್ನು ಪಕ್ಷಧರಮಿಶ್ರರು ಸಿದ್ಧಾಂತ ಮಾಡಿದ್ದಾರೆ–ವಸ್ತುತಸ್ತು ಅಬಾಧಿತತತ್ವಪ್ರಮಾ ತತ್ರ ಗುಣ ಇತಿ ಬಾಧೇ ವಕ್ಷ್ಯಾಮಃ। (ಪು.355))

ಇದೂ ವಿಷಯಸತ್ವೋಪಹಿತವಾದುದರಿಂದ ಗುಣವಲ್ಲ. ಘನಗರ್ಜಿತಮೇಘಾನುಮಾನ ಸ್ಥಳದಲ್ಲಿ ಇಂತಹ ಗುಣ ಇಲ್ಲ, ವ್ಯಭಿಚಾರವೂ ಇದೆ. ಘನಗರ್ಜಿತಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಅನುಮಿತಿ ಬರುವುದರಿಂದ ಅನುಮಿತಿಗೆ ಅಗತ್ಯವಾದ ಸ್ಮರಣಾತ್ಮಕ ಪರಾಮರ್ಶವನ್ನು ಬಿಟ್ಟು ಇನ್ನಾವ ಕಾರಣಗಳೂ ಇರುವುದಿಲ್ಲ. ಹೀಗಾಗಿ ಅಬಾಧಿತತತ್ವಜ್ಞಾನವೂ ಅಲ್ಲಿಲ್ಲ.[1]

## ನ್ಯಾಯದೀಪದಲ್ಲಿ ಅವತಾರಿಕೆ

''ದೃಶ್ಯತೇ ಚ ಯಾದೃಚ್ಛಿಕಸಂವಾದಿನೋ ಅನಾಪ್ತವಾಕ್ಯಸ್ಯ ಗುಣಾಭಾವೇऽಪಿ

---

1. ಈ ದೋಷವನ್ನು ನ್ಯಾಯಶಿಖಾಮಣಿಗ್ರಂಥದಲ್ಲಿ ಕೇಚಿತ್ತು ಎಂದು ಆಶಂಕೆ ಮಾಡಿ ಉತ್ತರ ಕೊಡಲಾಗಿದೆ. ಕಿಂಚ ಘನಗರ್ಜಿತಾದೌ ಅಪಿ ಅನುಮಿತಿಃ ನ ಸ್ಯಾತ್, ತತ್ರ ಸಂಶಯರೂಪಸ್ಯ ಅನ್ಯಸ್ಯ ವಾ ತಜ್ಞಾನಸ್ಯ ಅಭಾವಾತ್। ತಚ್ಚಿಂತ್ಯಂ–ಬಾಧಜ್ಞಾನಾಭಾವಾತ್ (ಬಾಧಜ್ಞಾನಾಭಾವವು ಕಾರಣ ಎನ್ನುವುದಕ್ಕಿಂತಲೂ) ಅಬಾಧಿತತತ್ವಜ್ಞಾನೋಪಸ್ಥಿತೌ ಲಾಘವೇನ ತಸ್ಯೈವ ಕಾರಣತ್ವಸ್ಥಿತೌ ಅನ್ಯತ್ರಾಪಿ ಘನಗರ್ಜಿತಸ್ಥಲೇ ತತ್ಕಲ್ಪನಂ, ತತ್ಕಾರಣತೋಪಜೀವಿತ್ವಾತ್ ನ ಪ್ರತಿಬಂಧಕಮಿತಿ ತುಲ್ಯಮ್। (ಇಲ್ಲಿ ಹೇಳಿದ ದೋಷ ಅತಿದುರ್ಬಲವಾದುದರಿಂದ ನ್ಯಾಯದೀಪದಲ್ಲಿ ಹೇಳಿದ ದೋಷ ಅಪರಿಹಾರ್ಯ)

**ಯಥಾರ್ಥಜ್ಞಾನಜನಕತ್ವಮ್'' ಇತಿ ತತ್ತ್ವನಿರ್ಣಯ ಟೀಕಾವಾಕ್ಯಂ ವಿವೃಣ್ವಾನಃ ಪ್ರಾಗುಕ್ತಂ ಶಾಬ್ದಪ್ರಮಾಯಾಮ್ ಅಪಿ ಅನುಗತಗುಣಂ ನಿರಾಹ–ಏವಮಿತಿ ॥**

ತತ್ತ್ವನಿರ್ಣಯದಲ್ಲಿ ಶಾಬ್ದಬೋಧವು ಗುಣಜನ್ಯ ಎನ್ನುವುದನ್ನು ನಿರಾಕರಿಸಲಾಗಿದೆ– ಅನಾಪ್ತನು ಹೇಳಿದ, ಆದರೆ ಯದೃಚ್ಛಯಾ ಸಂವಾದಿಯಾದ ವಾಕ್ಯದಲ್ಲಿ ಗುಣ ಇಲ್ಲದಿದ್ದರೂ ಪ್ರಮಾತ್ಮಕವಾದ ಶಾಬ್ದಬೋಧ ಹುಟ್ಟುತ್ತದೆ, ಎಂದು. ಇದನ್ನೇ ವಿವರಿಸಿ, ಹಿಂದೆ ಹೇಳಿರುವ (ಪು.600) ಶಾಬ್ದಪ್ರಮಾದಲ್ಲಿ ಅನುಗತಗುಣವನ್ನು ಈ ಮೂಲದಲ್ಲಿ ನಿರಾಕರಿಸಲಾಗಿದೆ.

## ಶಾಬ್ದಪ್ರಮಾಕ್ಕೆ ಗುಣಜನ್ಯತ್ವ ನಿರಾಸ

**एवं विप्रलम्भकादिवाक्यजन्यायां शुकादिवाक्यजन्यायां च यादृच्छिकसंवादेन प्रमायां न यथार्थवाक्यार्थज्ञानमस्ति । नच तत्रापीश्वरे तदस्तीति शङ्क्यम् । व्यधिकरणगुणजन्यत्वेन प्रमात्ववत् समानाधिकरणदोषजन्यत्वेन अप्रमात्वं च स्यात् इत्याद्यतिप्रसङ्गात् ।**

ಅನುಮಿತಿಯಂತೆ ವಾಕ್ಯಪ್ರಮಾಕ್ಕೂ ಗುಣಜನ್ಯತ್ವ ಇಲ್ಲ. ವಿಪ್ರಲಂಭಕನ ವಾಕ್ಯದಿಂದ, ಶುಕಾದಿವಾಕ್ಯದಿಂದ ಹುಟ್ಟಿದ ಜ್ಞಾನವು ಆಕಸ್ಮಿಕವಾಗಿ ಪ್ರಮಾ ಆದಾಗ ಆ ವಾಕ್ಯವನ್ನು ಉಚ್ಚರಿಸಿದ ಮೋಸಗಾರನ ಮತ್ತು ಶುಕದ ಯಥಾರ್ಥಜ್ಞಾನವು ಆ ವಾಕ್ಯಜನ್ಯಶಾಬ್ದಬೋಧಕ್ಕೆ ಕಾರಣವಲ್ಲ. ಮೋಸಗಾರನಿಗೆ ತಾನು ಉಚ್ಚರಿಸಿದ ವಾಕ್ಯದ ಅರ್ಥಕ್ಕೆ ವಿರುದ್ಧವಾದ ಜ್ಞಾನವಿರುತ್ತದೆ, ಶುಕಕ್ಕೆ ಜ್ಞಾನವೇ ಇರುವುದಿಲ್ಲ. ಅಲ್ಲಿ ಶಾಬ್ದಪ್ರಮಾ ಇದೆ. ಯಥಾರ್ಥವಾಕ್ಯಾರ್ಥಜ್ಞಾನ ಇಲ್ಲ, ವ್ಯಭಿಚಾರ. ಅಲ್ಲೂ ಈಶ್ವರಯಥಾರ್ಥಜ್ಞಾನವೇ ಗುಣ, ತಜ್ಜನ್ಯವಾದುದರಿಂದ ಪ್ರಮಾ ಎನ್ನುವುದಾದಲ್ಲಿ, ವ್ಯಧಿಕರಣಗುಣಜನ್ಯವಾದುದರಿಂದ ಪ್ರಮಾ ಆದಂತೆ ಸಮಾನಾಧಿಕರಣ ದೋಷಜನ್ಯವಾದುದ ರಿಂದ ಅಪ್ರಮಾವೂ ಆಗಲಿ, ಎಂಬ ಅತಿಪ್ರಸಂಗ ಬಂದೀತು.

## ನ್ಯಾಯದೀಪ

**ಏವಮಿತಿ ॥ 'ಘಟೋಽಸ್ತಿ' ಇತಿ ವಕ್ತವ್ಯೇ ಪ್ರಮಾದಾದಿನಾ 'ಪಟೋಽಸ್ತಿ' ಇತ್ಯುಕ್ತವಾಕ್ಯಮ್ ಆದಿಪದಾರ್ಥಃ ।**

ಮೂಲದಲ್ಲಿರುವ ಆದಿಪದದಿಂದ–'ಘಟೋಽಸ್ತಿ' ಎಂದು ಹೇಳುವ ಬದಲು ಪ್ರಮಾದದಿಂದಾಗಿ 'ಪಟೋಽಸ್ತಿ' ಎಂದಾಗ ಅಲ್ಲಿ ಆಕಸ್ಮಿಕವಾಗಿ ಪಟ ಇದ್ದರೆ, ಶಾಬ್ದಬೋಧವು ಪ್ರಮಾತ್ಮಕವಾಗುತ್ತದೆ. ಆದರೆ, ಹೇಳುವವನಿಗೆ 'ಪಟ ಇದೆ' ಎಂಬ ಜ್ಞಾನ ಇರುವುದಿಲ್ಲ. ಅಲ್ಲೂ ಗುಣಕ್ಕೆ ವ್ಯಭಿಚಾರ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ತದ್ವಾಕ್ಯೇ ತಾದೃಶಗುಣಾಭಾವೇಽಪಿ ತಜ್ಜಾತೀಯೇ ವಾಕ್ಯಾಂತರೇ ಅಸ್ತಿ, ಇತ್ಯತಃ, ತತ್ರಾಪಿ ತಸ್ಯ ನ ಹೇತುತ್ವಮ್ ಇತ್ಯಾಹ–ಕಿಂಚೇತಿ ॥**

ಅನಾಪ್ತ ಅಥವಾ ಶುಕ ಉಚ್ಚರಿಸಿದಾಗ ಯಥಾರ್ಥವಾಕ್ಯಾರ್ಥಜ್ಞಾನರೂಪಗುಣವು ಇಲ್ಲದೇ ಇದ್ದರೂ ಅದೇ ವಾಕ್ಯವನ್ನು ಬೇರೆಯವರು ಉಚ್ಚರಿಸಿದಾಗ ಗುಣ ಇದೆ. ಎಂದರೆ, ಬೇರೆಯವರು ಉಚ್ಚರಿಸಿದಾಗಲೂ ಅಂತಹ ಗುಣವು ಇದ್ದರೂ ಅದು ಕಾರಣವಲ್ಲ ಎಂದು ಮುಂದೆ ಹೇಳಲಾಗಿದೆ.

**किञ्च, तद्धि न साक्षाच्छाब्दप्रमाजनकम् । वक्तृनिष्ठे तस्मिन् चिरध्वस्तेऽपि श्रोतरि प्रमोत्पत्तेः । किन्तु वाक्यरचनाद्वारा । रचनायां च न तत्कारणम् । शुकबालादीनामिव तादृशपदावलीज्ञान-मात्रेण तदुपपत्तेः ।**

ವಕ್ತೃವಿನಲ್ಲಿರುವ ಯಥಾರ್ಥವಾಕ್ಯಾರ್ಥಜ್ಞಾನವು ಶಾಬ್ದಪ್ರಮಾಕ್ಕೆ ಗುಣ, ಎನ್ನುವುದು ಯುಕ್ತವೂ ಅಲ್ಲ. ಶಾಬ್ದಬೋಧ ಬರುವುದು ಶ್ರೋತೃವಿಗೆ. ವಾಕ್ಯಾರ್ಥಜ್ಞಾನ ಇರುವುದು ವಕ್ತೃವಿನಲ್ಲಿ. ಅದು ಶ್ರೋತೃವಿಗೆ ಬರುವ ಶಾಬ್ದಬೋಧಕ್ಕೆ ಸಾಕ್ಷಾತ್ ಕಾರಣವಾಗಲು ಸಾಧ್ಯವಿಲ್ಲ. ಏಕೆಂದರೆ, ವಕ್ತೃವಿಗೆ ವಾಕ್ಯಾರ್ಥಜ್ಞಾನ, ವಾಕ್ಯಪ್ರಯೋಗ, ಶ್ರೋತೃವಿಗೆ ಶಬ್ದಜ್ಞಾನ, ಅರ್ಥಸ್ಮೃತಿ ಆಮೇಲೆ ಶಾಬ್ದಪ್ರಮಾ ಹುಟ್ಟಬೇಕು. ಆಗ ಗುಣವೆನಿಸುವ ವಕ್ತೃವಿನಲ್ಲಿರುವ ಯಥಾರ್ಥವಾಕ್ಯಾರ್ಥ ಜ್ಞಾನವು ಚಿರಧ್ವಸ್ತ. ಆದ್ದರಿಂದ ವಾಕ್ಯರಚನೆಯ ಮೂಲಕ ವಾಕ್ಯಾರ್ಥಜ್ಞಾನವು ಹೇತುವಾಗಬೇಕು. 'ಅರ್ಥಂ ಬುದ್ಧ್ವಾ ಶಬ್ದರಚನಾ'. ಆದರೆ, ವಾಕ್ಯರಚನೆಗೂ ವಾಕ್ಯಾರ್ಥಜ್ಞಾನವು ಕಾರಣವಲ್ಲ. ಶುಕ ಮತ್ತು ಮಕ್ಕಳು ಅರ್ಥಜ್ಞಾನವಿಲ್ಲದೆಯೇ ಹೇಳಿಕೊಟ್ಟಿದ್ದನ್ನು ಹೇಳುತ್ತವೆ. ಅವುಗಳಿಗೆ ವಾಕ್ಯರಚನೆಗೆ ಪದಸಮೂಹಜ್ಞಾನವು ಕಾರಣ ಹೊರತು, ಅರ್ಥಜ್ಞಾನವಲ್ಲ. ಹೀಗೆ ವಾಕ್ಯರಚನೆಗೂ ವಾಕ್ಯಾರ್ಥಜ್ಞಾನದ ಅಗತ್ಯವಿಲ್ಲ. ಆದ್ದರಿಂದ, ಯಥಾರ್ಥವಾಕ್ಯಾರ್ಥಜ್ಞಾನದಿಂದ ಶಾಬ್ದಬೋಧವು ಜನ್ಯವೇ ಅಲ್ಲವಾದುದರಿಂದ ಅದನ್ನು ಗುಣ, ಎಂದು ಪರಿಗಣಿಸಲಾಗದು.

## ನ್ಯಾಯದೀಪ

**ಕಿಂಚೇತಿ ॥ ಚಿರಧ್ವಸ್ತೇಽಪಿ ತಸ್ಮಿನ್ ಇತಿ ಪೂರ್ವೇಣ ಅನ್ವಯಃ ।**

**ನನು, ಕಾರ್ಯಮಾತ್ರಂ ಪ್ರತಿ ಕಾರಣೀಭೂತಮ್ ಈಶ್ವರಜ್ಞಾನಮೇವ ಯಥಾರ್ಥವಾಕ್ಯಾರ್ಥಜ್ಞಾನರೂಪಂ ತದ್ರಚನಾದ್ವಾರಾ ಪ್ರಮಾಂ ಪ್ರತಿ ಗುಣತ್ವೇನ ಕಾರಣಮಸ್ತು । ಅತೋ ನ ಯಾದೃಚ್ಛಿಕ ಪ್ರಮಾಯಾಂ ವ್ಯಭಿಚಾರಃ ।**

**ನಾಪಿ ತೇನ ವಿನಾ ವಾಕ್ಯರಚನೋಪಪತ್ತಿಃ । ತಸ್ಯ ಕಾರ್ಯಮಾತ್ರಂ ಪ್ರತಿ ಹೇತುತ್ವೇನ ರಚನಾಯಾಂ ತಜ್ಜನ್ಯಪ್ರಮಾಯಾಂ ಚ ಹೇತುತ್ವಾತ್ । ಶುಕಾದಿವಾಕ್ಯಜನ್ಯಪ್ರಮಾಯಾಮ್ ಅಪಿ ಈಶ್ವರೀಯ ಪ್ರಮಾಮಾದಾಯ್ಯೈವ ನ ವ್ಯಭಿಚಾರ, ಇತಿ ತದೀಯವ್ಯಾಖ್ಯಾತೃ–ಉಕ್ತೇಃ ।[1]**

**''ಭ್ರಾಂತಪ್ರತಾರಕವಾಕ್ಯೇ ಶುಕಾದಿವಾಕ್ಯೇ ಚ ಈಶ್ವರಸ್ಯೈವ**
**ಯಥಾರ್ಥವಾಕ್ಯಾರ್ಥಜ್ಞಾನಂ ಜನಕಮ್ '' (ಪು.380)**

**ಇತಿ ಮಣ್ಯುಕ್ತೇಃ ಇತಿ ಭಾವೇನ ಶಂಕತೇ–ನಚ ತತ್ರಾಪೀತಿ ॥**

ಯಥಾರ್ಥವಾಕ್ಯಾರ್ಥಜ್ಞಾನವೇ ಶಾಬ್ದಪ್ರಮಾಕ್ಕೆ ಗುಣ. ಕಾರ್ಯಸಾಮಾನ್ಯಕ್ಕೆ ಈಶ್ವರ ಜ್ಞಾನವು ಕಾರಣ. ಅಂತಹ ಈಶ್ವರಜ್ಞಾನವು ಸರ್ವವಿಷಯಕವಾದ ಕಾರಣ ವಾಕ್ಯಾರ್ಥವಿಷಯಕವೂ ಆಗಿದೆ. ಹೀಗೆ ಈಶ್ವರಜ್ಞಾನವು ಯಥಾರ್ಥವಾಕ್ಯಾರ್ಥಜ್ಞಾನವಾಗಿ ವಾಕ್ಯರಚನೆ ಮತ್ತು ತನ್ಮೂಲಕ ಶಾಬ್ದಪ್ರಮಾಕ್ಕೆ ಕಾರಣವಾಗುತ್ತದೆ. ಯಾದೃಚ್ಛಿಕ ಸಂವಾದಿ ಶಾಬ್ದಪ್ರಮಾದಲ್ಲೂ ಇಂತಹ ಗುಣವು ಇರುವುದರಿಂದ ವ್ಯಭಿಚಾರವೂ ಇಲ್ಲ. ಈಶ್ವರಜ್ಞಾನವಿಲ್ಲದೆ ವಾಕ್ಯರಚನಾರೂಪಕಾರ್ಯವೂ ಹುಟ್ಟಲಾರದು. ಏಕೆಂದರೆ, ಕಾರ್ಯಸಾಮಾನ್ಯಕ್ಕೆ ಈಶ್ವರಜ್ಞಾನವು ಕಾರಣವಾದುದರಿಂದ ವಾಕ್ಯರಚನೆ ಮತ್ತು ತಜ್ಜನ್ಯಶಾಬ್ದಪ್ರಮಾಕ್ಕೂ ಅದು ಕಾರಣ. ಶುಕ ಮತ್ತು ಮಗುವಿನಿಂದ ಉಚ್ಚರಿಸಲ್ಪಟ್ಟ ವಾಕ್ಯಕ್ಕೂ ತಜ್ಜನ್ಯಶಾಬ್ದಪ್ರಮಾಕ್ಕೂ ಈಶ್ವರೀಯ ಜ್ಞಾನವು ಕಾರಣ. ಆದ್ದರಿಂದ ಆ ವಾಕ್ಯಗಳಿಂದ ಹುಟ್ಟಿದ ಶಾಬ್ದಪ್ರಮಾಕ್ಕೂ ಗುಣವು ಕಾರಣವಾದುದರಿಂದ ವ್ಯಭಿಚಾರವಿಲ್ಲ. ಇದನ್ನು ಸ್ವತಃ ಮಣಿಕಾರನೇ ಹೇಳಿದ್ದಾನೆ. ಈ ಅಭಿಪ್ರಾಯದಿಂದ 'ನಚ' ಎಂದು ಶಂಕೆ ಮಾಡಿ ಮೂಲದಲ್ಲಿ ನಿರಾಸಮಾಡಲಾಗಿದೆ.

**नच तत्रापीश्वरनिष्ठं यथार्थवाक्यार्थज्ञानं रचनाद्वारा हेतुरिति वाच्यम्। तस्य ज्ञानसामान्यं भ्रमं च प्रतीवोपादानापरोक्षत्वेनैव हेतुतया प्रमां प्रत्यसाधारण्याभावात् । अन्यथोक्तातिप्रसङ्गात् । विसंवादिशुकादि-वाक्यरचनाहेतुत्वेन भ्रमोऽपि कल्प्यत इति नित्यप्रमावन्नित्य-भ्रमप्रसङ्गाच ॥**

ಭ್ರಾಂತ–ಪ್ರತಾರಕವಾಕ್ಯಗಳಿಂದ ಹುಟ್ಟಿದ ಶಾಬ್ದಪ್ರಮಾದಲ್ಲೂ ಈಶ್ವರನ ಯಥಾರ್ಥ ವಾಕ್ಯಾರ್ಥಜ್ಞಾನರೂಪ ಗುಣಜನ್ಯತ್ವವು ಇದೆ, ಎಂದು ಆಶಂಕೆ ಮಾಡಬಾರದು. ಈಶ್ವರಜ್ಞಾನವು

1. ಇದು ಮಣಿವ್ಯಾಖ್ಯಾತೃ–ರುಚಿದತ್ತಮಿಶ್ರರ ವಾಕ್ಯ–ಪು.358

ಸಕಲಜ್ಞಾನಗಳಿಗೂ ಮಾತ್ರವಲ್ಲ, ಭ್ರಮೆಗೂ ಉಪಾದಾನಗೋಚರ–ಅಪರೋಕ್ಷಜ್ಞಾನತ್ವೇನ ಕಾರಣವಾಗಿದೆ. ಹೀಗೆ ಅದು ಸಾಮಾನ್ಯಕಾರಣವಾದುದರಿಂದ ಪ್ರಮಾಮಾತ್ರಕ್ಕೆ ಅಸಾಧಾರಣ ಕಾರಣ ಅಲ್ಲ. ಆದ್ದರಿಂದ ಅದನ್ನು ಗುಣ ಎಂದು ಪರಿಗಣಿಸಲು ಆಗುವುದಿಲ್ಲ. ಹಾಗೆ ಪರಿಗಣಿಸಿದರೆ ಸಮ್ಮ ಸಂದೇಹಕ್ಕೆ ಈಶ್ವರಜ್ಞಾನವು ವ್ಯಾಪ್ಯವತ್ತಾನಿಶ್ಚಯತ್ವೇನ ಕಾರಣವಾಗಿ ಸಂದೇಹವೂ ನಿಶ್ಚಯಾತ್ಮಕವಾಗಲಿ ಎಂದು ಹಿಂದೆ ಹೇಳಿದ (ಪು.613) ಅತಿಪ್ರಸಂಗ ಬಂದೀತು. ಅಷ್ಟೇ ಅಲ್ಲ, ಸಂವಾದಿ–ಶುಕವಾಕ್ಯಜನ್ಯಪ್ರಮಾಕ್ಕೆ ಅದು ಗುಣವಾದರೆ ವಿಸಂವಾದಿಶುಕವಾಕ್ಯಜನ್ಯಭ್ರಮೆಗೆ ದೋಷವೆಂದಾಗಿ ಈಶ್ವರನಿಗೆ ನಿತ್ಯಪ್ರಮೆಯಂತೆ ನಿತ್ಯಭ್ರಮೆಯೂ ಇದೆ, ಎಂದಾದೀತು.

## ನ್ಯಾಯದೀಪ

**ತತ್ರಾಪೀತಿ ॥ ಯಾದೃಚ್ಛಿಕಸಂವಾದಿನ್ಯಾಮಪೀತ್ಯರ್ಥಃ । ಉಕ್ತೇತಿ ॥ 'ಅನ್ಯಥಾ ಅಸ್ಮದಾದಿ' (ಪು.613) ಇತ್ಯಾದಿನಾ ಉಕ್ತೇತ್ಯರ್ಥಃ ।**

ತತ್ರಾಪಿ ಎಂದರೆ, ಯಾದೃಚ್ಛಿಕಸಂವಾದ ಇರುವಲ್ಲಿಯೂ, ಎಂದರ್ಥ. ಉಕ್ತ ಎಂದರೆ ಹಿಂದೆ 'ಅನ್ಯಥಾ ಅಸ್ಮದಾದಿ' ಇತ್ಯಾದಿಗ್ರಂಥದಲ್ಲಿ ಹೇಳಿದ, ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**''ವಯಂ ತು ಬ್ರೂಮಃ'' ಇತ್ಯುಪಕ್ರಮ್ಯ,**

**'ಶಾಬ್ದಪ್ರಮಾಯಾಂ ವಕ್ತುಃ ಯಥಾರ್ಥವಾಕ್ಯಾರ್ಥಜ್ಞಾನಂ ನ ಗುಣಃ, ಕಿಂತು ಯೋಗ್ಯತ್ವಾದಿಕಮ್ ಯಥಾರ್ಥ ತಜ್ಜ್ಞಾನಂ ವಾ' (ಮಣಿ.ಪು.381)**

**ಇತಿ ಮಣ್ಯುಕ್ತಂ ಪಕ್ಷಾಂತರಮ್ ಆಶಂಕತೇ–ನನ್ವಿತಿ ॥**

ಮಣಿಗ್ರಂಥದಲ್ಲಿ ಪರೋಕ್ತಗುಣಗಳನ್ನು ನಿರೂಪಿಸಿ 'ವಯಂ ತು ಬ್ರೂಮಃ' ಎಂದು ಸ್ವಪಕ್ಷದಲ್ಲಿ ಗುಣವನ್ನು ಹೀಗೆ ಹೇಳಲಾಗಿದೆ. 'ಶಾಬ್ದಪ್ರಮಾಕ್ಕೆ ವಕ್ತೃವಿನಲ್ಲಿರುವ ಯಥಾರ್ಥ ವಾಕ್ಯಾರ್ಥಜ್ಞಾನವು ಗುಣವಲ್ಲ. ಕಿಂತು, ಯೋಗ್ಯತಾದಿಗಳು ಅಥವಾ ಯಥಾರ್ಥಯೋಗ್ಯತಾ ಜ್ಞಾನವೇ ಗುಣ' ಎಂದು. ಈ ಪಕ್ಷವನ್ನು ಆಶಂಕೆ ಮಾಡಿ ಮೂಲದಲ್ಲಿ ನಿರಾಕರಿಸಲಾಗಿದೆ.

## ಮಣ್ಯುಕ್ತ ಶಾಬ್ದಪ್ರಮಾಗುಣನಿರಾಸ

**ननु शाब्दप्रमायां योग्यता तत्प्रमा वा गुणः । स च सर्वत्र प्रमाणवाक्येऽस्तीति चेन्न । मदिष्टवेदापौरुषेयत्वाविरोधिनः त्वदिष्टेश्वरसिद्धिविरोधिनश्च एवंविधगुणजन्यत्वस्य साधनेऽर्थान्तरात् ।**

ಶಾಬ್ದಪ್ರಮಾಕ್ಕೆ ಯೋಗ್ಯತಾ ಅಥವಾ ಯೋಗ್ಯತಾಪ್ರಮಾ ಇದೇ ಗುಣ. ಇವೆರಡೂ ಮತಭೇದೇನ ಸರ್ವತ್ರ ಪ್ರಾಮಾಣಿಕ ವಾಕ್ಯದಲ್ಲಿ ಇದೆ. ಆದ್ದರಿಂದ ವ್ಯಭಿಚಾರ ಇಲ್ಲ, (ಮಣಿಕಾರನ) ಈ ಪಕ್ಷವೂ ಉಚಿತವಲ್ಲ. ಸ್ವತಸ್ತ್ವವಾದಿಗಳು ವೇದಾಪೌರುಷೇಯತ್ವವಾದಿಗಳು. ಆಪ್ತೋಕ್ತತ್ವವು ಗುಣ ಎಂದಾದರೆ ವೇದದಲ್ಲಿ ಅದು ಬರುವುದಿಲ್ಲ. ಯೋಗ್ಯತಾಪ್ರಮಾ ಗುಣವಾದರೆ ಇಂತಹ ಗುಣಜನ್ಯತ್ವವನ್ನು ಪ್ರಮಾಕ್ಕೆ ಹೇಳಿದರೂ ವೇದಾಪೌರುಷೇಯತ್ವಕ್ಕೇನೂ ಬಾಧಕವಿಲ್ಲ. ಆದ್ದರಿಂದ ಇದು ನಮಗೆ ಅವಿರೋಧಿಯಾದುದರಿಂದ ಅರ್ಥಾಂತರತಾ.

ಅಷ್ಟೇ ಅಲ್ಲ. ಇದು ನೈಯಾಯಿಕರಿಗೆ ವಿರುದ್ಧವೂ ಆಗುತ್ತದೆ. ನೈಯಾಯಿಕರು ವೇದದಿಂದ ಈಶ್ವರನ ಅಸ್ತಿತ್ವವನ್ನು ಸಾಧನೆ ಮಾಡುತ್ತಾರೆ–ಶಾಬ್ದಬೋಧವು ವಕ್ತೃವಿನಲ್ಲಿರುವ ಯಥಾರ್ಥಜ್ಞಾನರೂಪಗುಣಜನ್ಯವಾಗಬೇಕು. ವೇದಕ್ಕೆ ಮೊದಲ ವಕ್ತೃ ಈಶ್ವರನಾದುದರಿಂದ ಅವನ ಯಥಾರ್ಥಜ್ಞಾನವೇ ಶಾಬ್ದಪ್ರಮಾಕ್ಕೆ ಗುಣ. ಹೀಗೆ ಶಾಬ್ದಪ್ರಮಾಕಾರಣೀಭೂತವಾದ ಗುಣಾಶ್ರಯತಯಾ ಈಶ್ವರಸಿದ್ಧಿಯಾಗುತ್ತದೆ, ಎಂದು ಕುಸುಮಾಂಜಲಿಗ್ರಂಥದಲ್ಲಿ ಉದಯನಾಚಾರ್ಯರು ಹೇಳಿದ್ದಾರೆ. ಇದು ಗುಣವಲ್ಲ ಎಂದು ನಿರಾಕರಿಸಿ ಯೋಗ್ಯತಾಜ್ಞಾನವೇ ಗುಣವೆಂದಾದಲ್ಲಿ ಆ ಯೋಗ್ಯತಾಜ್ಞಾನವು ಶ್ರೋತೃಗತವಾದ ಕಾರಣ ಅದರಿಂದ ಈಶ್ವರಸಿದ್ಧಿಯನ್ನು ಮಾಡಲಾಗುವುದಿಲ್ಲ.

## ನ್ಯಾಯದೀಪ

**ಯೋಗ್ಯತಾ ಸ್ವರೂಪಸತೀ ನ ಹೇತುಃ । ಅತೋ ನ ಗುಣಃ । ಇತ್ಯತಃ ತತ್ಪ್ರಮಾ ವಾ ಇತ್ಯುಕ್ತಮ್ । ತ್ವದಿಷ್ಟೇತಿ ॥**

**ಪ್ರಮಾಯಾಃ ಪರತಂತ್ರತ್ವಾತ್ ಸರ್ಗಪ್ರಲಯಸಂಭವಾತ್ ।**
**ತದನ್ಯಸ್ಮಿನ್ ಅನಾಶ್ವಾಸಾತ್ ನ ವಿಧಾಂತರಸಂಭವಃ ॥**

**ಇತಿ ಕುಸುಮಾಂಜಲ್ಯುಕ್ತರೀತ್ಯಾ ಪ್ರಾಮಾಣ್ಯ–ಪರತಸ್ತ್ವಸ್ಯ ಈಶ್ವರಸಿದ್ಧ್ಯರ್ಥ- ತ್ವೋಪಗಮಾತ್ ಯಥಾರ್ಥ–ವಾಕ್ಯಾರ್ಥಜ್ಞಾನಸ್ಯ ಗುಣತ್ವಪಕ್ಷೇ ಏವ ವೇದೇ ತಾದೃಶಯಥಾರ್ಥ–ವಾಕ್ಯಾರ್ಥಜ್ಞಾನವತ್ತ್ವೇನ ಈಶ್ವರಸಿದ್ಧೇಃ ಇತಿ ಭಾವಃ ॥**

ಯೋಗ್ಯತೆ ಇದ್ದ ಮಾತ್ರಕ್ಕೆ ಶಾಬ್ದಪ್ರಮಾ ಬರುವುದಿಲ್ಲ. ಆದ್ದರಿಂದ ಅದು ಗುಣವಾಗುವುದಿಲ್ಲ. ಅದಕ್ಕಾಗಿ, ಮೂಲದಲ್ಲಿ 'ತತ್ಪ್ರಮಾ ವಾ' ಎಂದು ಪಕ್ಷಾಂತರವನ್ನು ಹೇಳಲಾಗಿದೆ.

ಕುಸುಮಾಂಜಲಿಯಲ್ಲಿ ಈಶ್ವರಸಾಧಕಲಿಂಗಗಳಲ್ಲಿ ಸರ್ಗ, ಪ್ರಲಯ, ಇವುಗಳ ಜೊತೆಗೆ, 'ಪ್ರಮಾಯಾಃ ಪರತಂತ್ರತ್ವಾತ್' ಎಂಬುದೂ ಒಂದು. 'ಪ್ರಾಮಾಣ್ಯಂ ಪರತಃ' ಆದ್ದರಿಂದ ಎಂದು ಇದರ ಅರ್ಥ. ಹೀಗೆ, ಪ್ರಾಮಾಣ್ಯಪರತಸ್ತ್ವವೂ ಈಶ್ವರಸಿದ್ಧಿಗೆ ಹೇತುವಾದ್ದರಿಂದ ಯಥಾರ್ಥ

ವಾಕ್ಯಾರ್ಥಜ್ಞಾನವು ಶಾಬ್ದಪ್ರಮಾಕ್ಕೆ ಗುಣವಾದರೆ ಮಾತ್ರ ಈ ಹೇತುವಿನಿಂದ ಈಶ್ವರನನ್ನು ಸಾಧನೆ ಮಾಡಬಹುದು. ಯೋಗ್ಯತಾಪ್ರಮಾವು ಗುಣವಾದರೆ, ಈ ಹೇತು ಈಶ್ವರಸಾಧಕವಾಗುವುದಿಲ್ಲ, ಎಂದು ಮೂಲದ ಅಭಿಪ್ರಾಯ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು, 'ನ ವೈದಿಕಪ್ರಮಾಯಾಂ ಗುಣಜನ್ಯತ್ವೇನ ಈಶ್ವರಸಿದ್ಧಿಃ' ಇತಿ ಮಣಿಕೃದುಕ್ತೇಃ (ಪು.382) ಏತನ್ಮತೇ ಹೇತ್ವಂತರೇಣ ಅಸ್ತು ಈಶ್ವರಸಿದ್ಧಿಃ ಇತ್ಯತ ಆಹ–ಕಿಂಚೇತಿ ॥**

ಕುಸುಮಾಂಜಲಿಯಲ್ಲಿ ಉದಯನಾಚಾರ್ಯರು ವೇದವಾಕ್ಯಾರ್ಥಯಥಾರ್ಥಜ್ಞಾನ ರೂಪವಾದ ಹೇತುವು ಈಶ್ವರಸಾಧಕ ಎಂದು ಹೇಳಿದ್ದಾರೆ. ಆದರೆ ಮಣಿಕಾರ ವೈದಿಕಪ್ರಮಾಕ್ಕೆ ಗುಣಜನ್ಯತ್ವ ಹೇತುವಿನಿಂದ ಈಶ್ವರಸಿದ್ಧಿಯನ್ನು ನಿರಾಕರಿಸಿದ್ದಾರೆ. ಹಿಂದೆ ಹೇಳಿದ ಅರ್ಥಾಂತರದೋಷ ಮಣಿಕಾರನ ಪಕ್ಷಕ್ಕಿಲ್ಲ. ಅದಕ್ಕಾಗಿ 'ಕಿಂಚ' ಎಂದು ಮೂಲದಲ್ಲಿ ದೋಷಾಂತರವನ್ನು ಹೇಳಲಾಗಿದೆ.

**किञ्च योग्यता किं शब्दप्रतिपाद्यस्य संसर्गस्य सत्वं, किं वा संसर्गसत्वाविनाभूतं धर्मान्तरम् ॥**

**नाद्यः । शाब्दप्रमायां शाब्दप्रमाया वा तद्विषयस्य वाऽजनकत्वात् । विषयसत्वस्य प्रमात्वान्तर्गतत्वेन तद्धेतुत्वायोगाच्च । प्रत्यक्षादिप्रमास्वपि नियतविषयसत्वस्य सद्भावेन त्वदुक्तस्य शाब्दासाधारण्यस्यायोगाच्च । अप्रमायामपि विषयासत्वस्यैव दोषत्वापाताच्च । आवश्यकेन निर्दोषत्वेनैव प्रमात्वोपपत्तेश्च ॥**

**ಯೋಗ್ಯತಾ ಎಂದರೇನು?**

1. ಶಬ್ದದಿಂದ ಪ್ರತಿಪಾದ್ಯವಾದ ಅರ್ಥದ್ವಯಗಳ ಸಂಬಂಧಸತ್ವವು ಯೋಗ್ಯತೆಯೋ?

2. ಅಥವಾ, ಅಂತಹ ಸಂಬಂಧಸತ್ವವ್ಯಾಪ್ಯವಾದ ಧರ್ಮಾಂತರವೋ?

1. ಮೊದಲನೆಯ ಪಕ್ಷ ಸರಿಯಲ್ಲ. ಯೋಗ್ಯತಾಜ್ಞಾನವು ಗುಣ ಎಂದು ಪರಿಗಣಿಸಿದರೆ, ಈ ಪಕ್ಷದಲ್ಲಿ, ಸಂಸರ್ಗಪ್ರಮಾವು ಗುಣ ಎಂದಂತಾಗುತ್ತದೆ. ಶಾಬ್ದಪ್ರಮಾ ಎಂದರೂ ಸಂಸರ್ಗಪ್ರಮಾ. ಅಲ್ಲಿಗೆ ಸಂಸರ್ಗಪ್ರಮಾಕ್ಕೆ ಸಂಸರ್ಗಪ್ರಮಾ ಕಾರಣ, ಎಂದಾಯಿತು. ಹೀಗೆ ಹೇಳಿದರೆ ಆತ್ಮಾಶ್ರಯ.

ಯೋಗ್ಯತೆಯೇ ಗುಣ ಎನ್ನುವ ಪಕ್ಷದಲ್ಲಿ ಸಂಸರ್ಗಪ್ರಮಾಕ್ಕೆ ಸಂಸರ್ಗವು ಕಾರಣ ಎಂದಂತಾಗುತ್ತದೆ. ಇದು ವಿಷಯಸತ್ತ್ವವು ಕಾರಣ, ಎನ್ನುವುದರಲ್ಲಿ ಪರ್ಯವಸಾನವಾಗುತ್ತದೆ. ವಿಷಯಸತ್ತ್ವವು ಪ್ರಮಾತ್ವದಲ್ಲಿ ಸೇರಿರುವುದರಿಂದ ಅಂತಹ ಪ್ರಮಾತ್ವಕ್ಕೆ ವಿಷಯಸತ್ತ್ವವು ಕಾರಣವಾದರೆ ಆತ್ಮಾಶ್ರಯದೋಷಬರುತ್ತದೆ. ಅಷ್ಟೇ ಅಲ್ಲ, ಪ್ರತ್ಯಕ್ಷಾದಿಪ್ರಮಾಗಳಲ್ಲೂ ವಿಷಯಸತ್ತ್ವವು ಸಮಾನ. ಹೀಗಾಗಿ, ಅದು ಶಾಬ್ದಪ್ರಮಾಕ್ಕೆ ಅಸಾಧಾರಣಕಾರಣವಾಗುವುದಿಲ್ಲ. ಆದರೆ, ಮಣಿಕಾರ ಯೋಗ್ಯತಾವು ಶಾಬ್ದಪ್ರಮಾಕ್ಕೆ ಅಸಾಧಾರಣಕಾರಣವಾದ ಗುಣ, ಎಂದು ಹೇಳಿದ್ದಾನೆ. ಅದು ಯುಕ್ತವಾಗುವುದಿಲ್ಲ. ಇನ್ನೂ ಒಂದು ಬಾಧಕವಿದೆ–ಪ್ರಮಾಕ್ಕೆ ವಿಷಯಸತ್ತ್ವವು ಗುಣವಾದರೆ ತುಲ್ಯನ್ಯಾಯೇನ ಅಪ್ರಮಾಕ್ಕೆ ವಿಷಯ ಅಸತ್ತ್ವವು ದೋಷವಾದೀತು. ಇದಲ್ಲದೆ, ಶಬ್ದದಲ್ಲಿ ಯೋಗ್ಯತಾವು ಬರಬೇಕಾದರೆ ವಕ್ತೃವಿನಲ್ಲಿ ಭ್ರಮ, ವಿಪ್ರಲಂಭಾದಿ ದೋಷಗಳು ಇರಬಾರದು. ಅಂದಮೇಲೆ ಆವಶ್ಯಕವಾದ ದೋಷಾಭಾವವೇ ಪ್ರಮಾ ಕಾರಣ ಎಂದು ಹೇಳುವುದು ಉಚಿತ, ಯೋಗ್ಯತಾಕ್ಕೆ ಕಾರಣತ್ವವನ್ನು ಹೇಳುವ ಅಗತ್ಯವಿಲ್ಲ. ಆದ್ದರಿಂದ ಸಂಸರ್ಗಸತ್ತ್ವಂ ಯೋಗ್ಯತಾ, ಎಂಬ ಮೊದಲಪಕ್ಷ ಯುಕ್ತವಲ್ಲ.

## ನ್ಯಾಯದೀಪ

**''ವಾಕ್ಯಾರ್ಥಾಽಬಾಧೋ ಯೋಗ್ಯತಾ'' ಇತಿ ಇಹೈವ ಪ್ರಾಮಾಣ್ಯವಾದೇ (ಪು.378) ಮಣ್ಯುಕ್ತೇಃ ಆದ್ಯಃ ಕಲ್ಪಃ। ಯೋಗ್ಯತಾವಾದೋಕ್ತ್ಯನುರೋಧೇನ ಅಂತ್ಯಃ। ಧರ್ಮಾಂತರಮಿತಿ ॥ ಏತಚ್ಚಾಗ್ರೇ ವ್ಯಕ್ತಮ್। ಅಜನಕತ್ವಾದಿತಿ ॥ ಆದ್ಯೇ ಆತ್ಮಾಶ್ರಯಾತ್। ಅಂತ್ಯೇ ಅತೀತಾದಿಸಾಧಾರಣ್ಯಾಭಾವಾತ್ ಇತಿ ಭಾವಃ। ತದ್ಧೇತುತ್ವಾಯೋಗಾಚ್ಚೇತಿ॥ ಆತ್ಮಾಶ್ರಯಾದಿತಿ ಭಾವಃ। ವಿಷಯಾಸತ್ವಸ್ಯೈ–ವೇತಿ ॥ ಗುಣವಿರೋಧಿನ ಏವ ದೋಷತ್ವಾತ್ ಅನುಗತಿಸಂಭವಾಚ್ಚ। ತಥಾಚ ಭ್ರಮೇ ಅಸತೋಽಪಿ ಭಾನಂ ತ್ವಯಾಪಿ ಸ್ವೀಕಾರ್ಯಮ್। ಅನ್ಯಥಾ ಭ್ರಮತ್ವಮೇವ ನ ಸ್ಯಾತ್ ಇತಿ ಭಾವಃ।**

**ನನು ಶುಕ–ಬಾಲಾದಿವಾಕ್ಯಜನ್ಯಪ್ರಮಾಯಾಂ ಅನ್ಯಸ್ಯ ಪ್ರಮಾಪ್ರಯೋಜಕಸ್ಯ ಅಭಾವಾತ್ ಅನನ್ಯಗತ್ಯಾ ವಿಷಯ ಸತ್ತ್ವರೂಪಾಪಿ ಯೋಗ್ಯತಾ ಗುಣಃ, ಇತ್ಯೇವ ವಾಚ್ಯಮ್, ಇತ್ಯತ ಆಹ–ಆವಶ್ಯಕೇನೇತಿ ॥ ವಕ್ತುಃ ಭ್ರಾಂತಿ–ವಿಪ್ರಲಂಭಾದಿ–ದೋಷಭಾವೇ ಯೋಗ್ಯತಾಯಾ ಅಪಿ ಅಭಾವೇನ ತದರ್ಥಂ ತಸ್ಯ ಅಪೇಕ್ಷಣೀಯತ್ವೇನ ಆವಶ್ಯಕತ್ವಮ್ ಇತಿ ಭಾವಃ।**

ಯೋಗ್ಯತೆಯ ಸ್ವರೂಪದ ಬಗ್ಗೆ ಮೂಲದಲ್ಲಿ ಎರಡು ಪ್ರಶ್ನೆಗಳನ್ನು ಮಾಡಲಾಗಿದೆ.

ಅವುಗಳಲ್ಲಿ ಮೊದಲನೆಯ ಯೋಗ್ಯತಾಸ್ವರೂಪವನ್ನು ಪ್ರಾಮಾಣ್ಯವಾದದ ಇದೇ ಪ್ರಕರಣದಲ್ಲಿ (ಪು.378) ಮಣಿಕಾರ ಹೇಳಿದ್ದಾನೆ. ಇನ್ನೊಂದನ್ನು ಶಬ್ದಪ್ರಕರಣ ಯೋಗ್ಯತಾವಾದದಲ್ಲಿ ಹೇಳಿದ್ದಾನೆ. ಅದನ್ನು ಇಲ್ಲೇ ಮುಂದಿನ ಮೂಲದಲ್ಲಿ ನಿರೂಪಿಸಲಾಗಿದೆ.

ಶಾಬ್ದಪ್ರಮಾಕ್ಕೆ ಶಾಬ್ದಪ್ರಮಾ ಕಾರಣ, ಎಂದರೆ ಆತ್ಮಾಶ್ರಯದೋಷ. ವಿಷಯಸತ್ತ್ವ ರೂಪವಾದ ಯೋಗ್ಯತೆಯು ಅತೀತಾದಿವಸ್ತುಗಳ ಪ್ರಮಾ ಬಂದಾಗ ಅಲ್ಲಿ ಇರುವುದಿಲ್ಲ.

ಪ್ರಮಾಕ್ಕೆ ವಿಷಯಸತ್ತ್ವವು ಗುಣವಾದರೆ ಗುಣವಿರೋಧಿಯಾದುದು ದೋಷವಾದ ಕಾರಣ ವಿಷಯಾಸತ್ತ್ವವು ದೋಷವಾಗಬೇಕು. ಅದೇ ದೋಷವೆಂದಾಗ ಸಕಲ ಭ್ರಮೆಗೂ ಅದು ಅನುಗತವಾದ ದೋಷವಾಗುತ್ತದೆ. ಅನ್ಯಾಥಾಖ್ಯಾತಿವಾದಿಗಳಾದ ನೈಯಾಯಿಕರು ಭ್ರಾಂತಿಯಲ್ಲಿ ತೋರುವ ರಜತವು ಅನ್ಯತ್ರಸತ್ ಎಂದು ಹೇಳಿದರೂ ಭ್ರಮೆಯಲ್ಲಿ ಯಾವುದಾದರೊಂದು ಅಸತ್ತಾದ ವಿಷಯವು ಭಾನವಾಗುತ್ತದೆ, ಎಂದು ಹೇಳಲೇಬೇಕು. ಇಲ್ಲವಾದರೆ ಅದು ಭ್ರಮೆಯೇ ಆಗಲಾರದು. ಆದ್ದರಿಂದ ಭ್ರಮೆಯಲ್ಲಿ ವಿಷಯ–ಅಸತ್ತ್ವವು ನಿಯತ.

ವಿಷಯಸತ್ತ್ವರೂಪ ಯೋಗ್ಯತೆಯು ಗುಣವೆಂದು ಹೇಳುವುದು ಅನಿವಾರ್ಯ. ಶುಕ ಮತ್ತು ಮಕ್ಕಳು ಉಚ್ಚರಿಸುವ ವಾಕ್ಯದಲ್ಲಿ ಇದನ್ನು ಬಿಟ್ಟು ಇನ್ನಾವವಿಧದ ಯೋಗ್ಯತೆಯನ್ನೂ ಹೇಳಲಾಗುವುದಿಲ್ಲ, ಎಂದು ನೈಯಾಯಿಕರು ವಾದ ಮಾಡಿದರೆ ಅದಕ್ಕೆ ಸಮಾಧಾನ–ಆವಶ್ಯಕೇನ, ಎಂಬ ವಾಕ್ಯದಲ್ಲಿದೆ. ದೋಷಾಭಾವವೇ ಶುಕಾದ್ಯುಚ್ಚರಿತವಾಕ್ಯದಲ್ಲಿರುವ ಗುಣ. ಇದು ಯೋಗ್ಯತಾ ಗುಣ ಎಂದು ಹೇಳುವವರಿಗೂ ಅಂಗೀಕಾರಾರ್ಹವಾದುದರಿಂದ ಆವಶ್ಯಕ.

**नान्त्यः । त्वया ह्येकपदार्थसंसर्गे अपरपदार्थनिष्ठात्यन्ताभावप्रतियोगित्वप्रमाविशेष्यत्वाभावो वा एकपदार्थसंसर्गेऽपरपदार्थनिष्ठात्यन्ताभावप्रतियोगितावच्छेदकधर्मशून्यत्वं वा योग्यतेत्युक्तम् ।।**

2. ಹಿಂದೆ ಮಾಡಿದ ಯೋಗ್ಯತೆಯ ಸ್ವರೂಪದ ಎರಡನೆಯ ನಿರೂಪಣೆ– ಸಂಸರ್ಗಸತ್ತಾವಿನಾಭೂತ–ಧರ್ಮಾಂತರ. ಇದೂ ಸರಿಯಲ್ಲ. ಮಣಿಕಾರ ಹೀಗೆ ಯೋಗ್ಯತಾ ಸ್ವರೂಪವನ್ನು ಪರಿಷ್ಕರಿಸಿದ್ದಾನೆ—

1. ಒಂದು ಪದಾರ್ಥಸಂಸರ್ಗದಲ್ಲಿರುವ ಇನ್ನೊಂದು ಪದಾರ್ಥಗತ ಅತ್ಯಂತಾಭಾವ– ಪ್ರತಿಯೋಗಿತ್ವಪ್ರಕಾರಕ ಪ್ರಮಾವಿಶೇಷ್ಯತ್ವಾಭಾವವೇ ಯೋಗ್ಯತಾ. ಉದಾಹರಣೆಗೆ, ಒಂದು ಪದಾರ್ಥ ಸಂಸರ್ಗ ಎಂದರೆ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಸೇಚನಸಂಸರ್ಗ. ಅದು ಜಲದಲ್ಲಿದೆ. ಆದ್ದರಿಂದ ಜಲನಿಷ್ಠವಾದ ಅತ್ಯಂತಾಭಾವ ಎಂದರೆ ಸೇಚನ ಸಂಸರ್ಗದ ಅತ್ಯಂತಾಭಾವ ಅಲ್ಲ. ಹೀಗಾಗಿ ''ಸೇಚನ ಸಂಸರ್ಗಃ ಜಲನಿಷ್ಠಾಭಾವ ಪ್ರತಿಯೋಗೀ'' ಎಂಬ ಪ್ರಮಾ ಬರುವುದಿಲ್ಲ.

ಸೇಚನ ಸಂಸರ್ಗದಲ್ಲಿ ತಾದೃಶಪ್ರತಿಯೋಗಿತ್ವ ಪ್ರಕಾರಕಪ್ರಮಾವಿಶೇಷ್ಯತ್ವ ಇಲ್ಲ, ವಿಶೇಷ್ಯತ್ವಾಭಾವ ಇದೆ. ಇದೇ ಯೋಗ್ಯತಾ.

'ವಹ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಸೇಚನಕರಣತ್ವಸಂಸರ್ಗವು ವಹ್ನಿಯಲ್ಲಿ ಇಲ್ಲ. ಆದ್ದರಿಂದ, 'ಸೇಚನಸಂಸರ್ಗಃ ವಹ್ನಿನಿಷ್ಠಾಭಾವಪ್ರತಿಯೋಗೀ' ಎಂಬ ಪ್ರಮಾ ಇದೆ. ತಾದೃಶಜ್ಞಾನ ವಿಶೇಷ್ಯತ್ವವು ಸೇಚನಸಂಸರ್ಗದಲ್ಲಿ ಇದೆ. ಹೀಗೆ ಇಲ್ಲಿ ಯೋಗ್ಯತಾ ಇಲ್ಲ.

2. ಅಥವಾ, ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾ ವಚ್ಛೇದಕಧರ್ಮಶೂನ್ಯತ್ವಂ; ಯೋಗ್ಯತಾ. ಜಲದಲ್ಲಿ ಸೇಚನಸಂಸರ್ಗಾಭಾವ ಇಲ್ಲ. ಆದ್ದರಿಂದ ಜಲನಿಷ್ಠಾಭಾವ ಎಂದರೆ ಸೇಚನ ಸಂಸರ್ಗಾಭಾವ ಅಲ್ಲ. ಸೇಚನಸಂಸರ್ಗವು ಜಲನಿಷ್ಠಾಭಾವ ಪ್ರತಿಯೋಗಿ ಅಲ್ಲ. ಸಂಸರ್ಗತ್ವವು ತಾದೃಶಪ್ರತಿಯೋಗಿತಾವಚ್ಛೇದಕವಲ್ಲ. ಅದರಲ್ಲಿ ಪ್ರತಿಯೋಗಿ ತಾವಚ್ಛೇದಕಧರ್ಮಶೂನ್ಯತ್ವವು ಬರುತ್ತದೆ. ಇದೇ ಯೋಗ್ಯತೆ.

ವಹ್ನಿಯಲ್ಲಿ ಸೇಚನಕ್ರಿಯಾಸಂಸರ್ಗವು ಇಲ್ಲ. ಆದ್ದರಿಂದ ವಹ್ನಿನಿಷ್ಠಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕಧರ್ಮವೇ ಸೇಚನಕ್ರಿಯಾಸಂಸರ್ಗದಲ್ಲಿ ಇದೆ. ಅದರಲ್ಲಿ ಯೋಗ್ಯತೆ ಇಲ್ಲ.

ಹೀಗೆ ಎರಡು ರೀತಿಯಿಂದ ಯೋಗ್ಯತೆಯನ್ನು ಪರಿಷ್ಕಾರ ಮಾಡಲಾಗಿದೆ.

## ನ್ಯಾಯದೀಪ

**ಯೋಗ್ಯತಾವಾದೋಕ್ತಮಾಹ–ಏಕೇತಿ ॥**

**'ಜಲೇನ ಸಿಂಚತಿ' ಇತ್ಯಾದೌ ಸೇಕರೂಪಃ ಯಃ ಪದಾರ್ಥಃ ತತ್‌ಸಂಸರ್ಗೇ, 'ಅಪರಪದಾರ್ಥಭೂತ–ಜಲನಿಷ್ಠಾತ್ಯಂತಾಭಾವಪ್ರತಿಯೋಗೀ ಸೇಕಸಂಸರ್ಗಃ' ಇತಿ ಕದಾಪಿ ಪ್ರಮಿತ್ಯಭಾವೇನ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಪ್ರಕಾರಿಕಾ ಯಾ ಪ್ರಮಾ ತದ್ವಿಶೇಷ್ಯತ್ವಾಭಾವೋ ಅಸ್ತಿ, ಇತಿ ತತ್ ಯೋಗ್ಯವಾಕ್ಯಮ್ । 'ವಹ್ನಿನಾ ಸಿಂಚತಿ' ಇತ್ಯಾದೌ ತು ಸೇಕನಿರೂಪಿತಸಂಸರ್ಗೇ 'ವಹ್ನಿನಿಷ್ಠಾತ್ಯಂತಾಭಾವ ಪ್ರತಿಯೋಗೀ ಸೇಕಸಂಸರ್ಗಃ' ಇತಿ ಪ್ರಮಿತ್ಯುದಯೇನ ತತ್ರಾಪರಪದಾರ್ಥನಿಷ್ಠಾತ್ಯಂತಾಭಾವ–ಪ್ರತಿಯೋಗಿತ್ವ–ಪ್ರಕಾರಕಪ್ರಮಾ–ವಿಶೇಷ್ಯತ್ವಮೇವಾಸ್ತಿ, ಇತಿ ತದಯೋಗ್ಯವಾಕ್ಯಮ್ । ಅತೋ ನಾವ್ಯಾಪ್ತಿ–ಅತಿವ್ಯಾಪ್ತೀ ।**

**'ಅತ್ರ ಆಕಾಶೇ ಶಬ್ದಃ' ಇತಿ ಯೋಗ್ಯವಾಕ್ಯೇ ಶಬ್ದನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವಮ್ ಅವೃತ್ತಿಪದಾರ್ಥೇ ಆಕಾಶೇ ಅಸ್ತಿ, ಇತಿ ಅವ್ಯಾಪ್ತಿನಿರಾಸಾಯ**

**ಏಕಪದಾರ್ಥೇ ಇತ್ಯನುಕ್ತ್ವಾ ಏಕಪದಾರ್ಥಸಂಸರ್ಗೇ, ಇತ್ಯುಕ್ತಮ್ । ಆಕಾಶಸಂಸರ್ಗಸ್ತು ನ ತಥೇತಿ ನ ದೋಷಃ ।**

**ಅಪರಪದಾರ್ಥನಿಷ್ಠ–ಅತ್ಯಂತಾಭಾವ–ಪ್ರತಿಯೋಗಿತ್ವಾಭಾವಃ ಇತ್ಯೇವಪೂರ್ತೌ ತಾದೃಶಪ್ರತಿಯೋಗಿತ್ವ–ಪ್ರಮಾವಿಶೇಷ್ಯತ್ವಂ ಪ್ರತಿಬಂಧಕಂ, ಇತಿ ಮತಾವಷ್ಟಂಭೇನ ತತ್ಪ್ರಮಾವಿಶೇಷ್ಯತ್ವಾಭಾವಃ ಇತ್ಯಂತಮುಕ್ತಮ್, ಇತ್ಯಾಹುಃ ।**

ಮೊದಲನೆಯ ಯೋಗ್ಯತಾ ಲಕ್ಷಣದ ಸಮನ್ವಯ ಹೀಗೆ— 'ಜಲೇನ ಸಿಂಚತಿ' ಎಂಬಲ್ಲಿ ಏಕಪದಾರ್ಥ ಎಂದರೆ ಸೇಚನ. ಅದರ ಸಂಸರ್ಗವು, ಜಲನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿಲ್ಲ. ಏಕೆಂದರೆ, ಸೇಚನ ಸಂಸರ್ಗವು ಜಲದಲ್ಲಿ ಇಲ್ಲ, ಎಂದು ಯಾರಿಗೂ ಪ್ರಮಿತಿ ಬರುವುದಿಲ್ಲ. ಹೀಗಾಗಿ, ಜಲನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಕಾರಕ–ಜ್ಞಾನದಲ್ಲಿ ಸೇಕಸಂಸರ್ಗವು ವಿಶೇಷ್ಯವಾಗುವುದಿಲ್ಲ. ಆದ್ದರಿಂದ ವಿಶೇಷ್ಯತ್ವಾಭಾವರೂಪವಾದ ಯೋಗ್ಯತೆಯು ಅದರಲ್ಲಿ ಇದೆ, ಶಾಬ್ದಬೋಧ ಬರುತ್ತದೆ.

'ವಹ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಇಂತಹ ಯೋಗ್ಯತೆಯು ಇಲ್ಲ. ಏಕೆಂದರೆ ಸೇಚನಸಂಸರ್ಗವು ವಹ್ನಿಯಲ್ಲಿ ಇಲ್ಲ. ಸೇಚನ ಸಂಸರ್ಗಃ, ವಹ್ನಿನಿಷ್ಠಾಂತ್ಯಂತಾಭಾವ ಪ್ರತಿಯೋಗೀ, ಎಂಬ ಪ್ರಮಾ ಇದೆ. ಹೀಗೆ ಸೇಚನಸಂಸರ್ಗದಲ್ಲಿ ಅಪರಪದಾರ್ಥವಾದ ವಹ್ನಿನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಪ್ರಕಾರಕ ಜ್ಞಾನವಿಶೇಷ್ಯತ್ವವೇ ಇದೆ, ತದಭಾವ ಇಲ್ಲ. ಹೀಗೆ ಈ ಲಕ್ಷಣವು ಲಕ್ಷ್ಯದಲ್ಲಿ ಸಮನ್ವಯವಾಗುತ್ತದೆ, ಅವ್ಯಾಪ್ತಿ ಇಲ್ಲ. ಅಲಕ್ಷ್ಯವಾದ ಅಯೋಗ್ಯವಾಕ್ಯದಲ್ಲಿ ಸಮನ್ವಯವಾಗುವುದಿಲ್ಲ, ಅತಿವ್ಯಾಪ್ತಿಯೂ ಇಲ್ಲ.

**ಕೃತ್ಯಚಿಂತನೆ– 1.** ಈ ಲಕ್ಷಣದಲ್ಲಿ ಏಕಪದಾರ್ಥೇ ಎನ್ನುವ ಬದಲು ಏಕಪದಾರ್ಥಸಂಸರ್ಗೇ ಎಂದು ಹೇಳಲು ಇದು ಕಾರಣ– 'ಅತ್ರ ಆಕಾಶೇ ಶಬ್ದಃ' ಎಂಬ ವಾಕ್ಯದಲ್ಲಿ ವಿಶೇಷ್ಯವಾದುದು ಶಬ್ದ. ಇದು ಯೋಗ್ಯವಾಕ್ಯ, ಇದರಲ್ಲಿ ಲಕ್ಷಣ ಬರಬೇಕು. ಆದರೆ ಬರುವುದಿಲ್ಲ, ಏಕಪದಾರ್ಥೇ= ಆಕಾಶೇ, ಅಪರಪದಾರ್ಥ ಎಂದರೆ, ಶಬ್ದ. ತನ್ನಿಷ್ಠಾತ್ಯಂತಾಭಾವ ಎಂದರೆ ಆಕಾಶಾತ್ಯಂತಾಭಾವ. ಆಕಾಶವು ಅವೃತ್ತಿಪದಾರ್ಥವಾದುದರಿಂದ ಶಬ್ದದಲ್ಲಿ ಆಕಾಶವು ಇಲ್ಲ. ತಾದೃಶಾಭಾವಪ್ರತಿಯೋಗಿತ್ವ ಪ್ರಕಾರಕಪ್ರಮಾವಿಶೇಷ್ಯತ್ವವು ಆಕಾಶದಲ್ಲಿ ಇದೆ. ಯೋಗ್ಯತೆ ಇಲ್ಲ. ಅದಕ್ಕಾಗಿ, ಏಕಪದಾರ್ಥ ಸಂಸರ್ಗೇ, ಎನ್ನಬೇಕು. ಆಕಾಶಸಂಸರ್ಗವು ಶಬ್ದದಲ್ಲಿ ಇದೆ. ಆದ್ದರಿಂದ ಆಕಾಶಸಂಸರ್ಗವು ಶಬ್ದನಿಷ್ಠಾತ್ಯಂತಾಭಾವಪ್ರತಿಯೋಗಿ ಅಲ್ಲ. ಯೋಗ್ಯತೆ ಬರುತ್ತದೆ.

2. ಅಪರಪದಾರ್ಥ ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಾಭಾವಃ ಎನ್ನುವ ಬದಲು ತಾದೃಶ ಪ್ರತಿಯೋಗಿತ್ವಪ್ರಕಾರಕ ಪ್ರಮಾವಿಶೇಷ್ಯತ್ವಾಭಾವಃ ಎಂದಿರುವುದಕ್ಕೆ ಕಾರಣ–ಏಕಪದಾರ್ಥದಲ್ಲಿ ತಾದೃಶಪ್ರಮಾವಿಶೇಷ್ಯತ್ವಜ್ಞಾನವೇ ಸಂಸರ್ಗಜ್ಞಾನರೂಪವಾದ ಶಾಬ್ದಬೋಧಕ್ಕೆ ಪ್ರತಿಬಂಧಕ

ಹೊರತು, ಪ್ರತಿಯೋಗಿತ್ವಾಭಾವರೂಪವಾದ ವಿಷಯವು ಜ್ಞಾನಕ್ಕೆ ಪ್ರತಿಬಂಧಕವಾಗುವುದಿಲ್ಲ, ಎಂದು ತಾರ್ಕಿಕರ ಮತ. ಆ ಮತವನ್ನು ಅನುಸರಿಸಿ ಹೀಗೆ ಹೇಳಲಾಗಿದೆ.

## ನ್ಯಾಯದೀಪ

**ನರಹರಿಸ್ತು, ಉಕ್ತಾತ್ಯಂತಾಭಾವ ಪ್ರತಿಯೋಗಿತ್ವಾಭಾವ ಇತ್ಯೇವೋಕ್ತೌ ವಾಕ್ಯಾರ್ಥ ಏವ ಯೋಗ್ಯತಾ ಸ್ಯಾತ್, ಇತಿ ತತ್‌ಪ್ರಮಾವಿಶೇಷ್ಯತ್ವಾಭಾವ ಇತ್ಯುಕ್ತಮ್, ಇತ್ಯಬ್ರವೀತ್ । ತಥಾಚ ಯೋಗ್ಯತಾವಾದೇ ಸ್ಪಷ್ಟಯಿಷ್ಯಾಮಃ ।**

**ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವಪ್ರತಿಯೋಗಿ, ಇತಿ ಪ್ರಮಾವಿಷಯತ್ವಸ್ಯ ಘಟಸಂಸರ್ಗೇಽಪಿ ಸತ್ವೇನ 'ಗೇಹೇ ಘಟೋಽಸ್ತಿ' ಇತಿ ವಾಕ್ಯೇ ಅವ್ಯಾಪ್ತಿನಿರಾಸಾಯ ಪ್ರಮಾವಿಶೇಷ್ಯತ್ವಾಭಾವಃ ಇತ್ಯುಕ್ತಮ್ ।**

ನರಹರಿಮಿಶ್ರರು ವಿಶೇಷ್ಯತ್ವಾಭಾವಪರ್ಯಂತಾನುಧಾವನಕ್ಕೆ ಹೀಗೆ ಕೃತ್ಯವನ್ನು ಹೇಳುತ್ತಾರೆ— ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾಭಾವವೇ ಯೋಗ್ಯತಾ, ಎಂದರೆ ವಾಕ್ಯಾರ್ಥವನ್ನೇ ಯೋಗ್ಯತಾ ಎಂದಂತಾದೀತು. ಸೇಚನಸಂಸರ್ಗದಲ್ಲಿ ವಹ್ನಿನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಾಭಾವ ಎಂದರೆ ಸೇಚನಸಂಸರ್ಗವು ವಹ್ನಿಯಲ್ಲಿ ಇದೆ, ಎಂದೇ ಅರ್ಥ. ಇದು ವಾಕ್ಯಾರ್ಥವೇ ಆಯಿತು. ಇದರಿಂದ ಶಾಬ್ದಪ್ರಮಾಕ್ಕೆ ಅಂದರೆ, ಸಂಸರ್ಗಪ್ರಮಾಕ್ಕೆ, ಯೋಗ್ಯತಾ= ಸಂಸರ್ಗವು ಕಾರಣ ಎಂದಂತಾಗುತ್ತದೆ. ಅರ್ಥಾತ್ ವಾಕ್ಯಾರ್ಥಜ್ಞಾನಕ್ಕೆ ವಾಕ್ಯಾರ್ಥವೇ ಗುಣ, ಎಂದಂತಾಯಿತು. ಹೀಗೆ ಹೇಳುವುದು ಅವಿವಕ್ಷಿತ. ಅದಕ್ಕಾಗಿ, ವಿಶೇಷ್ಯತ್ವಾಭಾವ ಪರ್ಯಂತಾನುಧಾವನಮ್.

3. ಜ್ಞಾನವಿಶೇಷ್ಯತ್ವಂ, ಎನ್ನುವುದರ ಬದಲು, ಜ್ಞಾನವಿಷಯತ್ವಂ ಎಂದು ಹೇಳಿದರೆ ಅವ್ಯಾಪ್ತಿ– 'ಗೇಹೇ ಘಟಃ' ಇದು ಯೋಗ್ಯವಾಕ್ಯ. ಇಲ್ಲಿ ಏಕಪದಾರ್ಥಸಂಸರ್ಗ ಎಂದರೆ ಘಟಸಂಸರ್ಗ. ಅದರಲ್ಲಿ ಗೇಹನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಪ್ರಕಾರಕ ಪ್ರಮಾ ವಿಷಯತ್ವವೇ ಇದೆ. 'ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವಪ್ರತಿಯೋಗಿ' ಎಂಬ ಜ್ಞಾನವು ಪ್ರಮಾ. ಇದರಲ್ಲಿ ಘಟಸಂಸರ್ಗವೂ ವಿಷಯವಾಗುತ್ತದೆ. ಇಲ್ಲಿ ಸಂಸರ್ಗತ್ವವು ಸಂಸರ್ಗತ್ವತ್ವೇನ ವಿಷಯವಾಗಿದೆ. ಸಂಸರ್ಗತ್ವತ್ವ ಎಂದರೆ ಸಂಸರ್ಗೇತರಾವೃತ್ತಿತ್ವೇ ಸತಿ ಸಂಸರ್ಗವೃತ್ತಿತ್ವಮ್. ತದ್‌ಘಟಕತಯಾ ಸಂಸರ್ಗವೂ ವಿಷಯವಾಗಿದೆ. ಅದಕ್ಕಾಗಿ ವಿಶೇಷ್ಯತ್ವಮ್ ಎನ್ನಬೇಕು. ಈ ಜ್ಞಾನದಲ್ಲಿ ಸಂಸರ್ಗವು ವಿಶೇಷ್ಯವಲ್ಲವಾದುದರಿಂದ ಯೋಗ್ಯತ್ವವು ಬರುತ್ತದೆ.

## ನ್ಯಾಯದೀಪ

**ಅತ್ರ ಸ್ವ–ಪರಸಾಧಾರಣ–ಪ್ರಮಾವಿಶೇಷ್ಯತ್ವಾಭಾವನಿಶ್ಚಯಸ್ಯ ಅಶಕ್ಯತ್ವಾತ್ ಪ್ರಮಾಪ್ರವೇಶೇ ಗೌರವಾಚ್ಚ ಇತ್ಯಾದಿ ದೋಷಾತ್ ದ್ವಿತೀಯಂ ಲಕ್ಷಣಮ್ ।**

**ವಹ್ನಿಸಂಸರ್ಗತ್ವಂ ಹಿ ಸೇಕಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿ-ತಾವಚ್ಛೇದಕಃ ಧರ್ಮಃ, ತತ್-ಶೂನ್ಯತ್ವಂ ಜಲಸಂಸರ್ಗೇ ಅಸ್ತೀತಿ 'ಜಲೇನ ಸಿಂಚತಿ' ಇತ್ಯಾದಿವಾಕ್ಯಂ ಯೋಗ್ಯಮ್ । ಅಗ್ನಿನಾ ಸಿಂಚತಿ, ಇತಿ ವಾಕ್ಯಂ ತು ಅಯೋಗ್ಯಮ್, ಇತಿ ನಾವ್ಯಾಪ್ತ್ಯಾದಿದೋಷಃ ।**

**ಅತ್ರ, ಉಕ್ತರೂಪ-ಪ್ರತಿಯೋಗಿತ್ವಾಭಾವಸ್ಯ ವಾಕ್ಯಾರ್ಥರೂಪ-ಸಂಸರ್ಗ-ಪರ್ಯವಸನ್ನತಯಾ ತಜ್ಜ್ಞಾನಸ್ಯ ಶಾಬ್ದಪ್ರಮಾಯಾಮ್ ಅಹೇತುತ್ವಾತ್ ತತ್‌ಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವಮ್ ಇತ್ಯುಕ್ತಮ್ ॥**

ಯೋಗ್ಯತಾದ ಮೊದಲನೆಯ ಲಕ್ಷಣದಲ್ಲಿ ಪ್ರಮಾಪದವು ಸೇರಿದೆ. 'ಘಟಃ ರೂಪಸಮವಾಯವಾನ್' ಎಂಬ ವಾಕ್ಯ ಬೋಧ್ಯವಾದ ಘಟದಲ್ಲಿ ರೂಪಸಮವಾಯದ ಸಂಸರ್ಗ ಜ್ಞಾನವು ತಾರ್ಕಿಕರ ರೀತಿಯಿಂದ ಪ್ರಮಾ. ನಮ್ಮ ಮತದಂತೆ ಭ್ರಮೆ. ಆದ್ದರಿಂದ ಪ್ರಮಾಘಟಿತವಾದ ಯೋಗ್ಯತೆಯನ್ನು ಇಂತಹ ಸಂದರ್ಭದಲ್ಲಿ ನಿರ್ಣಯ ಮಾಡಲು ಬರುವುದಿಲ್ಲ. ಅಷ್ಟೇ ಅಲ್ಲ, ಪ್ರಮಾವನ್ನು ಸೇರಿಸುವ ಅಗತ್ಯವೂ ಇಲ್ಲ. ಅದಕ್ಕಾಗಿ, ಎರಡನೆಯ ಲಕ್ಷಣವನ್ನು ಹೇಳಲಾಗಿದೆ.

'ವಹ್ನಿನಾ ಸಿಂಚತಿ' ಎಂಬ ವಾಕ್ಯಜನ್ಯಬೋಧದಲ್ಲಿ ವಹ್ನಿಸಂಸರ್ಗವು ಸೇಚನಕ್ರಿಯೆಯಲ್ಲಿ ತೋರುತ್ತದೆ. ಆದರೆ, ಅದು ಅಲ್ಲಿ ಇಲ್ಲ. ಸೇಚನಪದಾರ್ಥನಿಷ್ಠಾತ್ಯಂತಾಭಾವ ಎಂದರೆ ವಹ್ನಿಸಂಸರ್ಗಾಭಾವ. ಅದಕ್ಕೆ ಪ್ರತಿಯೋಗಿ ವಹ್ನಿಸಂಸರ್ಗ. ಪ್ರತಿಯೋಗಿತಾವಚ್ಛೇದಕ ವಹ್ನಿ ಸಂಸರ್ಗತ್ವ. ತಾದೃಶಧರ್ಮಶೂನ್ಯತ್ವವು ಜಲಸಂಸರ್ಗದಲ್ಲಿ ಇದೆ. ಜಲದಿಂದ ಸೇಚನೆ ಮಾಡಬಹುದಾದ್ದರಿಂದ ಜಲಸಂಸರ್ಗವು ಸೇಚನದಲ್ಲಿ ಇದೆ. ಸೇಚನನಿಷ್ಠಾತ್ಯಂತಾಭಾವಕ್ಕೆ ಜಲಸಂಸರ್ಗವು ಪ್ರತಿಯೋಗಿಯಾಗುವುದಿಲ್ಲ. ಆದರಲ್ಲಿ ಪ್ರತಿಯೋಗಿತಾವಚ್ಛೇದಕ- ಧರ್ಮಶೂನ್ಯತ್ವವು ಬರುತ್ತದೆ. ಹೀಗೆ ವಹ್ನಿನಾ ಸಿಂಚತಿ, ಎಂಬ ವಾಕ್ಯ ಅಯೋಗ್ಯ, ಜಲೇನ ಸಿಂಚತಿ, ಎಂಬ ವಾಕ್ಯ ಯೋಗ್ಯ.

ಈ ಪರಿಷ್ಕಾರದಲ್ಲಿ ಪ್ರತಿಯೋಗಿತ್ವಾಭಾವವನ್ನೇ ಸಂಸರ್ಗದಲ್ಲಿ ಹೇಳಬಹುದು. ಆದರೆ, ಹಾಗೆ ಹೇಳಿದರೆ, ಏಕಪದಾರ್ಥಸಂಸರ್ಗವು ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿ ಅಲ್ಲ, ಎನ್ನುವ ಯೋಗ್ಯತೆಯು ಏಕಪದಾರ್ಥಲ್ಲಿ ಅಪರಪದಾರ್ಥದ ಸಂಸರ್ಗವು ಇದೆ, ಎನ್ನುವಲ್ಲೇ ಪರ್ಯವಸಾನವಾಗುತ್ತದೆ. ಇದು ವಾಕ್ಯಾರ್ಥರೂಪವೇ ಆಗುತ್ತದೆ. ಆದರ ಜ್ಞಾನವು ವಾಕ್ಯಾರ್ಥಜ್ಞಾನರೂಪವಾಗುತ್ತದೆ. ಆಗ ಯೋಗ್ಯತಾಜ್ಞಾನವು ವಾಕ್ಯಾರ್ಥಜ್ಞಾನಕ್ಕೆ ಹೇತು ಎಂದರೆ ಆತ್ಮಾಶ್ರಯದೋಷ ಬರುತ್ತದೆ. ಅದಕ್ಕಾಗಿ, ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾ-ವಚ್ಛೇದಕ-ಧರ್ಮಶೂನ್ಯತ್ವಮ್, ಎಂದು ಹೇಳಲಾಗಿದೆ.

ಹೀಗೆ ಯೋಗ್ಯತೆಯನ್ನು ಎರಡು ರೀತಿಯಾಗಿ ಮಣಿಕಾರ ಪರಿಷ್ಕರಿಸಿದ್ದಾನೆ. ಇವೆರಡಕ್ಕೂ ದೋಷವನ್ನು ಮುಂದೆ ಹೇಳಲಾಗಿದೆ.

**तत्रच आद्यपक्षे अनन्वयप्रमाविरहो योग्यता । द्वितीये जलेन सिञ्चतीत्यत्र सेकानन्वयप्रतियोगितावच्छेदका येऽग्नित्वादयो धर्माः तच्छून्यत्वं जले विद्यमानं योग्यतेति पर्यवस्यति । तत्र यद्यपि इदं द्वयं संसर्गसत्वाविनाभूतं, नतु संसर्गरूपमिति न पूर्वोक्तदोषः । तथाप्यत्र पक्षद्वये अनन्वयप्रमाविरहो वा अनन्वयप्रमाविरहप्रमा वा अनन्वयप्रतियोगितावच्छेदकधर्मशून्यत्वं वा तच्छून्यत्वप्रमा वा गुण इति फलितार्थः ।**

**स चायुक्तः । अवश्यकेन निर्दोषत्वेनैव प्रमात्वोपपत्तौ संसर्गव्याप्यस्य संसर्गाभावप्रमाविरहस्य वा तत्प्रमाया वा संसर्गाभावप्रतियोगितावच्छेदकधर्मशून्यत्वस्य वा तत्प्रमाया वा गुणत्वकल्पने अतिगौरवात् । नहि निर्दोषत्वे सति तयोर्वा तत्प्रमयोर्वा व्यतिरेकेण शाब्दप्रमाव्यतिरेको दृष्टः । नच शाब्दप्रमाया गुणजन्यत्वम् अद्यापि सिद्धम् । येन तन्निर्वाहाय तयोर्वा तत्प्रमयोर्वा गुणत्वं कल्प्येत ।।**

ಈ ಎರಡು ವಿಧವಾದ ಯೋಗ್ಯತೆಗಳಲ್ಲಿ ಮೊದಲಪಕ್ಷದ ಪರ್ಯವಸಿತಾರ್ಥ–ಅನನ್ವಯಪ್ರಮಾವಿರಹಃ ಎಂದು. ಅಪರಪದಾರ್ಥನಿಷ್ಠ–ಅತ್ಯಂತಾಭಾವಪ್ರತಿಯೋಗಿತ್ವಪ್ರಕಾರಕ ಪ್ರಮಾ ಎಂದರೆ ಅನನ್ವಯಪ್ರಮಾ. ಸೇಚನಾನ್ವಯವು ಅಗ್ನಿನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ, ಎಂದರೆ ಅಗ್ನಿಯಲ್ಲಿ ಸೇಚನದ ಅನನ್ವಯ ಇದೆ, ಎಂದರ್ಥ. ಆದ್ದರಿಂದ, ಪ್ರತಿಯೋಗಿತ್ವಪ್ರಕಾರಕಪ್ರಮಾ ವಿರಹ ಎಂದರೆ ಅನನ್ವಯಪ್ರಮಾವಿರಹ.

ಎರಡನೆಯ ಪಕ್ಷದಲ್ಲಿ– 'ಜಲೇನ ಸಿಂಚತಿ' ಎಂಬಲ್ಲಿ ಸೇಚನಾನನ್ವಯಪ್ರತಿಯೋಗಿತಾವಚ್ಛೇದಕವಾದ ಧರ್ಮ ಎಂದರೆ ಅಗ್ನಿತ್ವಾದಿಗಳು. ತಾದೃಶಧರ್ಮಶೂನ್ಯತ್ವ ಇದೇ ಯೋಗ್ಯತಾ. ಇದು ಜಲದಲ್ಲಿ ಇದೆ. ಅಗ್ನಿಯಲ್ಲಿ ಇಲ್ಲ. ಆದರಲ್ಲಿ ಸೇಚನಾನನ್ವಯ ಇದೆ. ಅಂದರೆ, ಸೇಚನನಿಷ್ಠಾನ್ವಯಾಭಾವ ಇದೆ. ತಾದೃಶಾಭಾವಪ್ರತಿಯೋಗಿತಾವಚ್ಛೇದಕವಾದ ಧರ್ಮ ಅಗ್ನಿಸಂಸರ್ಗತ್ವ. 'ಸೇಚನೇ ಅಗ್ನಿಸಂಸರ್ಗೋ ನಾಸ್ತಿ' ಎಂದು ಅಭಾವ. ಈ ಅಭಾವಪ್ರತಿಯೋಗಿತಾವಚ್ಛೇದಕ ಅಗ್ನಿ ಸಂಸರ್ಗತ್ವ ಆಗುವುದಕ್ಕೆ ಕಾರಣ ಅಗ್ನಿಯಲ್ಲಿರುವ ಅಗ್ನಿತ್ವ. ಆದ್ದರಿಂದ ಮೂಲದಲ್ಲಿ ಅಗ್ನಿತ್ವವು ಪ್ರತಿಯೋಗಿತಾವಚ್ಛೇದಕ, ಎನ್ನಲಾಗಿದೆ. ಏತಾದೃಶಧರ್ಮಶೂನ್ಯತ್ವವೇ ಯೋಗ್ಯತಾ, ಎಂದು ಎರಡನೆಯ ಪಕ್ಷ.

ಇವೆರಡೂ ಯೋಗ್ಯತೆಗಳು ಸಂಸರ್ಗವ್ಯಾಪ್ಯಧರ್ಮಗಳೇ ಹೊರತು ಸಂಸರ್ಗರೂಪಗಳಲ್ಲ. ಹೀಗಾಗಿ, ಹಿಂದೆ ಹೇಳಿದಂತೆ, ಇವುಗಳು ವಾಕ್ಯಾರ್ಥರೂಪಗಳಲ್ಲ. ಆದಕಾರಣ ಇಂತಹ ಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಕಾರಣವಾದರೆ ಆತ್ಮಾಶ್ರಯದೋಷವಿಲ್ಲ. ಈ ಎರಡು ಧರ್ಮಗಳು ಎಲ್ಲಿರುತ್ತವೋ ಅಲ್ಲಿ ಅಪರಪದಾರ್ಥಸಂಸರ್ಗವು ಇರುತ್ತದೆ. ಹೀಗೆ ಇವು ಸಂಸರ್ಗವ್ಯಾಪ್ಯಧರ್ಮಗಳು. ಆದರೂ ಇಂತಹ ಯೋಗ್ಯತಾ ಅಥವಾ ಯೋಗ್ಯತಾಪ್ರಮಾ ಗುಣಃ ಎಂಬ ಪೂರ್ವೋಕ್ತ ಎರಡು ಕಲ್ಪಗಳನ್ನು ಅನುಸರಿಸಿದಾಗ ಫಲಿತಾರ್ಥ ಹೀಗಾಗುತ್ತದೆ.

| **ಯೋಗ್ಯತಾ** | **ಯೋಗ್ಯತಾಪ್ರಮಾ** |
|---|---|
| 1. ಅನನ್ವಯ ಪ್ರಮಾ ವಿರಹಃ | 1. ಅನನ್ವಯ ಪ್ರಮಾವಿರಹ ಪ್ರಮಾ । |
| 2. ಅನನ್ವಯಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವಮ್ | 2. ಅನನ್ವಯಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವಪ್ರಮಾ |

ಇವು ಯಾವುವೂ ಯುಕ್ತವಲ್ಲ. ಇಂತಹ ಯೋಗ್ಯತೆಯು ಶಬ್ದದಲ್ಲಿ ಬರಬೇಕಾದರೆ ವಕ್ತೃವಿನಲ್ಲಿ ನಿರ್ದೋಷತ್ವವು ಆವಶ್ಯಕ. ಅದರಿಂದಾಗಿಯೇ ಶಾಬ್ದಬೋಧಕ್ಕೆ ಪ್ರಮಾತ್ವವನ್ನು ಹೇಳಲು ಬರುವಾಗ ಗುರುಭೂತವಾದ ಈ ನಾಲ್ಕಕ್ಕೆ ಕಾರಣತ್ವವನ್ನು ಹೇಳುವುದು ಉಚಿತವಲ್ಲ. ಈ ನಾಲ್ಕೂ ಧರ್ಮಗಳು ಸಂಸರ್ಗವ್ಯಾಪ್ಯಗಳು. ಮೇಲೆ ಹೇಳಿದ ನಾಲ್ಕರ ರೂಪಾಂತರಗಳು–

| | |
|---|---|
| 1. ಸಂಸರ್ಗಾಭಾವಪ್ರಮಾ–ವಿರಹ | 1. ತಾದೃಶವಿರಹಪ್ರಮಾ |
| 2. ಸಂಸರ್ಗಾಭಾವಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವ | 2. ತಾದೃಶಶೂನ್ಯತ್ವಪ್ರಮಾ |

ವಾಕ್ಯದಲ್ಲಿ ನಿರ್ದೋಷತ್ವವು ಇದ್ದಾಗ ಈ ಎರಡು ವಿಧವಾದ ಯೋಗ್ಯತೆಗಳು ಅಥವಾ, ಅವುಗಳ ಜ್ಞಾನವು ಇಲ್ಲದಿರುವ ಕಾರಣದಿಂದಾಗಿ ಶಾಬ್ದಪ್ರಮಾ ಹುಟ್ಟದಿರುವ ಸಂದರ್ಭ ಇಲ್ಲ. ಹಾಗಿದ್ದಿದ್ದಲ್ಲಿ ಅವುಗಳಿಗೂ ಕಾರಣತ್ವವನ್ನು ಕಲ್ಪಿಸಬಹುದಿತ್ತು. ಹೀಗಿದ್ದರೂ, ಗೌರವವನ್ನು ಉಪೇಕ್ಷಿಸಿ, ಶಾಬ್ದಪ್ರಮಾಕ್ಕೆ ಗುಣಜನ್ಯತ್ವವು ಅನಿವಾರ್ಯವಾದುದರಿಂದ ಹೀಗೆ ಕಲ್ಪನೆ ಮಾಡಬೇಕು, ಎಂದು ಆಗ್ರಹಮಾಡುವುದು ಸರಿಯಲ್ಲ. ಏಕೆಂದರೆ, ಪ್ರಮಾಕ್ಕೆ ಗುಣಜನ್ಯತ್ವವು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ಯೋಗ್ಯತಾ ಅಥವಾ ತಜ್ಜ್ಞಾನವು ಗುಣ ಎಂಬ ಪಕ್ಷವು ಗೌರವ ದುಷ್ಟ.

## ನ್ಯಾಯದೀಪ

**ಅನನ್ವಯೇऽತಿ ॥ ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಸ್ಯ ಅನನ್ವಯರೂಪತ್ವಾತ್, ಇತಿ ಭಾವಃ । ಅಗ್ನಿತ್ವಾದಯ ಇತಿ ॥**

तत्रच आद्यपक्षे अनन्वयप्रमाविरहो योग्यता । द्वितीये जलेन सिञ्चतीत्यत्र सेकानन्वयप्रतियोगितावच्छेदका येऽग्नित्वादयो धर्माः तच्छून्यत्वं जले विद्यमानं योग्यतेति पर्यवस्यति । तत्र यद्यपि इदं द्वयं संसर्गसत्वाविनाभूतं, नतु संसर्गरूपमिति न पूर्वोक्तदोषः । तथाप्यत्र पक्षद्वये अनन्वयप्रमाविरहो वा अनन्वयप्रमाविरहप्रमा वा अनन्वयप्रतियोगितावच्छेदकधर्मशून्यत्वं वा तच्छून्यत्वप्रमा वा गुण इति फलितार्थः ।

स चायुक्तः । अवश्यकेन निर्दोषत्वेनैव प्रमात्वोपपत्तौ संसर्गव्याप्यस्य संसर्गाभावप्रमाविरहस्य वा तत्प्रमाया वा संसर्गाभावप्रतियोगितावच्छेदकधर्मशून्यत्वस्य वा तत्प्रमाया वा गुणत्वकल्पने अतिगौरवात् । नहि निर्दोषत्वे सति तयोर्वा तत्प्रमयोर्वा व्यतिरेकेण शाब्दप्रमाव्यतिरेको दृष्टः । नच शाब्दप्रमाया गुणजन्यत्वम् अद्यापि सिद्धम् । येन तन्निर्वाहाय तयोर्वा तत्प्रमयोर्वा गुणत्वं कल्प्येत ॥

ಈ ಎರಡು ವಿಧವಾದ ಯೋಗ್ಯತೆಗಳಲ್ಲಿ ಮೊದಲಪಕ್ಷದ ಪರ್ಯವಸಿತಾರ್ಥ–ಅನನ್ವಯಪ್ರಮಾವಿರಹಃ ಎಂದು. ಅಪರಪದಾರ್ಥನಿಷ್ಠ–ಅತ್ಯಂತಾಭಾವಪ್ರತಿಯೋಗಿತ್ವಪ್ರಕಾರಕ ಪ್ರಮಾ ಎಂದರೆ ಅನನ್ವಯಪ್ರಮಾ. ಸೇಚನಾನ್ವಯವು ಅಗ್ನಿನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ, ಎಂದರೆ ಅಗ್ನಿಯಲ್ಲಿ ಸೇಚನದ ಅನನ್ವಯ ಇದೆ, ಎಂದರ್ಥ. ಆದ್ದರಿಂದ, ಪ್ರತಿಯೋಗಿತ್ವಪ್ರಕಾರಕಪ್ರಮಾ ವಿರಹ ಎಂದರೆ ಅನನ್ವಯಪ್ರಮಾವಿರಹ.

ಎರಡನೆಯ ಪಕ್ಷದಲ್ಲಿ– 'ಜಲೇನ ಸಿಂಚತಿ' ಎಂಬಲ್ಲಿ ಸೇಚನಾನನ್ವಯಪ್ರತಿಯೋಗಿತಾವಚ್ಛೇದಕವಾದ ಧರ್ಮ ಎಂದರೆ ಅಗ್ನಿತ್ವಾದಿಗಳು. ತಾದೃಶಧರ್ಮಶೂನ್ಯತ್ವ ಇದೇ ಯೋಗ್ಯತಾ. ಇದು ಜಲದಲ್ಲಿ ಇದೆ. ಅಗ್ನಿಯಲ್ಲಿ ಇಲ್ಲ. ಅದರಲ್ಲಿ ಸೇಚನಾನನ್ವಯ ಇದೆ. ಅಂದರೆ, ಸೇಚನನಿಷ್ಠಾನ್ವಯಾಭಾವ ಇದೆ. ತಾದೃಶಾಭಾವಪ್ರತಿಯೋಗಿತಾವಚ್ಛೇದಕವಾದ ಧರ್ಮ ಅಗ್ನಿಸಂಸರ್ಗತ್ವ. 'ಸೇಚನೇ ಅಗ್ನಿಸಂಸರ್ಗೋ ನಾಸ್ತಿ' ಎಂದು ಅಭಾವ. ಈ ಅಭಾವಪ್ರತಿಯೋಗಿತಾವಚ್ಛೇದಕ ಅಗ್ನಿ ಸಂಸರ್ಗತ್ವ ಆಗುವುದಕ್ಕೆ ಕಾರಣ ಅಗ್ನಿಯಲ್ಲಿರುವ ಅಗ್ನಿತ್ವ. ಆದ್ದರಿಂದ ಮೂಲದಲ್ಲಿ ಅಗ್ನಿತ್ವವು ಪ್ರತಿಯೋಗಿತಾವಚ್ಛೇದಕ, ಎನ್ನಲಾಗಿದೆ. ಏತಾದೃಶಧರ್ಮಶೂನ್ಯತ್ವವೇ ಯೋಗ್ಯತಾ, ಎಂದು ಎರಡನೆಯ ಪಕ್ಷ.

ಇವೆರಡೂ ಯೋಗ್ಯತೆಗಳು ಸಂಸರ್ಗವ್ಯಾಪ್ಯಧರ್ಮಗಳೇ ಹೊರತು ಸಂಸರ್ಗರೂಪಗಳಲ್ಲ. ಹೀಗಾಗಿ, ಹಿಂದೆ ಹೇಳಿದಂತೆ, ಇವುಗಳು ವಾಕ್ಯಾರ್ಥರೂಪಗಳಲ್ಲ. ಆದಕಾರಣ ಇಂತಹ ಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಕಾರಣವಾದರೆ ಆತ್ಮಾಶ್ರಯದೋಷವಿಲ್ಲ. ಈ ಎರಡು ಧರ್ಮಗಳು ಎಲ್ಲಿರುತ್ತವೋ ಅಲ್ಲಿ ಅಪರಪದಾರ್ಥಸಂಸರ್ಗವು ಇರುತ್ತದೆ. ಹೀಗೆ ಇವು ಸಂಸರ್ಗವ್ಯಾಪ್ಯಧರ್ಮಗಳು. ಆದರೂ ಇಂತಹ ಯೋಗ್ಯತಾ ಅಥವಾ ಯೋಗ್ಯತಾಪ್ರಮಾ ಗುಣಃ ಎಂಬ ಪೂರ್ವೋಕ್ತ ಎರಡು ಕಲ್ಪಗಳನ್ನು ಅನುಸರಿಸಿದಾಗ ಫಲಿತಾರ್ಥ ಹೀಗಾಗುತ್ತದೆ.

| **ಯೋಗ್ಯತಾ** | **ಯೋಗ್ಯತಾಪ್ರಮಾ** |
|---|---|
| 1. ಅನನ್ವಯ ಪ್ರಮಾ ವಿರಹಃ | 1. ಅನನ್ವಯ ಪ್ರಮಾವಿರಹ ಪ್ರಮಾ । |
| 2. ಅನನ್ವಯಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವಮ್ | 2. ಅನನ್ವಯಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವಪ್ರಮಾ |

ಇವು ಯಾವುವೂ ಯುಕ್ತವಲ್ಲ. ಇಂತಹ ಯೋಗ್ಯತೆಯು ಶಬ್ದದಲ್ಲಿ ಬರಬೇಕಾದರೆ ವಕ್ತೃವಿನಲ್ಲಿ ನಿರ್ದೋಷತ್ವವು ಆವಶ್ಯಕ. ಆದರಿಂದಾಗಿಯೇ ಶಾಬ್ದಬೋಧಕ್ಕೆ ಪ್ರಮಾತ್ವವನ್ನು ಹೇಳಲು ಬರುವಾಗ ಗುರುಭೂತವಾದ ಈ ನಾಲ್ಕಕ್ಕೆ ಕಾರಣತ್ವವನ್ನು ಹೇಳುವುದು ಉಚಿತವಲ್ಲ. ಈ ನಾಲ್ಕೂ ಧರ್ಮಗಳು ಸಂಸರ್ಗವ್ಯಾಪ್ಯಗಳು. ಮೇಲೆ ಹೇಳಿದ ನಾಲ್ಕರ ರೂಪಾಂತರಗಳು–

| | |
|---|---|
| 1. ಸಂಸರ್ಗಾಭಾವಪ್ರಮಾ–ವಿರಹ | 1. ತಾದೃಶವಿರಹಪ್ರಮಾ |
| 2. ಸಂಸರ್ಗಾಭಾವಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವ | 2. ತಾದೃಶಶೂನ್ಯತ್ವಪ್ರಮಾ |

ವಾಕ್ಯದಲ್ಲಿ ನಿರ್ದೋಷತ್ವವು ಇದ್ದಾಗ ಈ ಎರಡು ವಿಧವಾದ ಯೋಗ್ಯತೆಗಳು ಅಥವಾ, ಅವುಗಳ ಜ್ಞಾನವು ಇಲ್ಲದಿರುವ ಕಾರಣದಿಂದಾಗಿ ಶಾಬ್ದಪ್ರಮಾ ಹುಟ್ಟದಿರುವ ಸಂದರ್ಭ ಇಲ್ಲ. ಹಾಗಿದ್ದಿದ್ದಲ್ಲಿ ಅವುಗಳಿಗೂ ಕಾರಣತ್ವವನ್ನು ಕಲ್ಪಿಸಬಹುದಿತ್ತು. ಹೀಗಿದ್ದರೂ, ಗೌರವವನ್ನು ಉಪೇಕ್ಷಿಸಿ, ಶಾಬ್ದಪ್ರಮಾಕ್ಕೆ ಗುಣಜನ್ಯತ್ವವು ಅನಿವಾರ್ಯವಾದುದರಿಂದ ಹೀಗೆ ಕಲ್ಪನೆ ಮಾಡಬೇಕು, ಎಂದು ಆಗ್ರಹಮಾಡುವುದು ಸರಿಯಲ್ಲ. ಏಕೆಂದರೆ, ಪ್ರಮಾಕ್ಕೆ ಗುಣಜನ್ಯತ್ವವು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ಯೋಗ್ಯತಾ ಅಥವಾ ತಜ್ಜ್ಞಾನವು ಗುಣ ಎಂಬ ಪಕ್ಷವು ಗೌರವ ದುಷ್ಟ.

## ನ್ಯಾಯದೀಪ

**ಅನನ್ವಯೇಽತಿ ॥ ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಸ್ಯ ಅನನ್ವಯರೂಪತ್ವಾತ್, ಇತಿ ಭಾವಃ । ಅಗ್ನಿತ್ವಾದಯ ಇತಿ ॥**

**ಅಗ್ನಿತ್ವ–ಮೃತ್ವ–ಪಾಷಾಣತ್ವಾದಯಃ । ಸೇಕಾನ್ವಯಃ=ಸೇಕನಿಷ್ಠಾನ್ವಯಃ । ಅಗ್ನಿ-ಸಂಸರ್ಗತ್ವಾದೇಃ ಸೇಕನಿಷ್ಠಾತ್ಯಂತಾಭಾವ–ಪ್ರತಿಯೋಗಿತಾವಚ್ಛೇದಕತ್ವಸ್ಯ ಅಗ್ನಿತ್ವಾದಿಧರ್ಮನಿಬಂಧನತ್ವಾತ್ ಅಗ್ನಿತ್ವಾದಯಃ ಇತ್ಯುಕ್ತಮ್ । ಪ್ರತಿಯೋಗಿತಾವಚ್ಛೇದಕಾಃ ಇತ್ಯಸ್ಯ ಅಧಿಕರಣತಾವಚ್ಛೇದಕಾಃ, ಇತ್ಯರ್ಥ, ಇತ್ಯಪ್ಯಾಹುಃ ।**

**ಯೋಗ್ಯತಾ ತತ್ಪ್ರಮಾ ವಾ, ಇತಿ ಪ್ರಾಗುಕ್ತ–ಕಲ್ಪದ್ವಯೋಕ್ತಿ–ಅನುರೋಧಾ-ದಾಹ-ಅನನ್ವಯಪ್ರಮಾವಿರಹೋ ವಾ ಇತ್ಯಾದಿ ॥ ಆವಶ್ಯಕೇನೇತಿ ॥ ಉಕ್ತಪ್ರಮಾವಿರಹಾದೇಃ ವಾಕ್ಯಗತ–ನಿರ್ದೋಷತ್ವೇನೈವ ಸಂಭವಾತ್ ಇತಿ ಭಾವಃ । ಸಂಸರ್ಗವ್ಯಾಪ್ಯಸ್ಯ ಇತ್ಯೇತತ್ ಪ್ರಮಾವಿರಹಸ್ಯ ವಿಶೇಷಣಮ್ ।**

**ನನು ನಿರ್ದೋಷತ್ವಸ್ಯೇವ ತಯೋರಪಿ ಅನ್ವಯ–ವ್ಯತಿರೇಕಸಿದ್ಧಕಾರಣತ್ವಸ್ಯ ತ್ಯಾಗಾಯೋಗಾತ್ ಇತ್ಯತ ಆಹ–ನಹೀತಿ ॥ ತಯೋರಿತಿ ॥ ಉಕ್ತರೂಪ–ಪ್ರಮಾವಿರಹ–ಧರ್ಮಶೂನ್ಯತ್ವಯೋಃ ಇತ್ಯರ್ಥಃ । ವಿಸಂವಾದಿ-ಶುಕಾದಿವಾಕ್ಯೇಽಪಿ ನಿರ್ದೋಷತ್ವಂ ನ ಸಿದ್ಧಮ್ । ಭ್ರಾಂತ್ಯಾದಿದೋಷಾ-ಭಾವೇಽಪಿ ಅನ್ಯಸ್ಯ ಕಸ್ಯಚಿತ್ ಕಲ್ಪ್ಯತ್ವಾತ್, ಇತಿ ಭಾವಃ । ಗುಣಜನ್ಯತ್ವಾ-ನ್ಯಥಾನುಪಪತ್ತ್ಯೈವ ತತ್ ಕಲ್ಪ್ಯತೇ ಇತ್ಯತ ಆಹ– ನಚ ಶಾಬ್ದೇತಿ ॥ ಅದ್ಯಾಪೀತಿ ॥ ಅನುಗತಗುಣಕಲ್ಪನವೇಲಾಯಾಮ್ ಅಪೀತ್ಯರ್ಥಃ ॥**

ಮೂಲದಲ್ಲಿ ಅನನ್ವಯಪ್ರಮಾವಿರಹವು ಮೊದಲನೆಯಪಕ್ಷದ ಪರ್ಯವಸಿತಾರ್ಥ, ಎಂದಿದೆ. ಅದು ಹೇಗೆಂದರೆ, ಮೊದಲನೆಯಪಕ್ಷ–ಏಕಪದಾರ್ಥಸಂಸರ್ಗೀ ಅಪರಪದಾರ್ಥನಿಷ್ಠ-ಅತ್ಯಂತಾಭಾವಪ್ರತಿಯೋಗಿತ್ವ ಪ್ರಮಾವಿರಹ. ತದ್ಘಟಕವಾದ ಪ್ರತಿಯೋಗಿತ್ವವು ಅನನ್ವಯರೂಪ. ಆದ್ದರಿಂದ ಅನನ್ವಯಪ್ರಮಾವಿರಹ ಅದರ ಪರ್ಯವಸಿತವಾ[illegible]ರ್ಥ.

ಮೂಲದಲ್ಲಿ ಸೇಕಾನ್ವಯ ಎಂದರೆ ಸೇಕಸ್ಥ ಅನ್ವಯವಲ್ಲ, ಸೇಕನಿಷ್ಠಾನ್ವಯ, ಎಂದರ್ಥ.

ಮೂಲದಲ್ಲಿ ಸೇಕಾನ್ವಯ ಪ್ರತಿಯೋಗಿತಾವಚ್ಛೇದಕ ಅಗ್ನಿತ್ವ ಎಂದಿದೆ. ಆದರೆ ಅಗ್ನಿಸಂಸರ್ಗಾಭಾವವನ್ನು ಅಪರಪದಾರ್ಥನಿಷ್ಠಾಭಾವಪದದಿಂದ ತೆಗೆದುಕೊಂಡಿರುವುದರಿಂದ ಪ್ರತಿಯೋಗಿತಾವಚ್ಛೇದಕ ಸಂಸರ್ಗತ್ವವೇ ಆಗುತ್ತದೆ, ಅಗ್ನಿತ್ವವಲ್ಲ. ಆದರೆ, ಅಗ್ನಿಸಂಸರ್ಗತ್ವವು ಪ್ರತಿಯೋಗಿತಾವಚ್ಛೇದಕವಾಗಲು ಕಾರಣ ಅಗ್ನಿಯಲ್ಲಿರುವ ಅಗ್ನಿತ್ವ. ಇದರಿಂದಾಗಿ ಅದನ್ನೇ ಪ್ರತಿಯೋಗಿತಾವಚ್ಛೇದಕ, ಎಂದು ಹೇಳಲಾಗಿದೆ. ಕೆಲವರು, ಪ್ರತಿಯೋಗಿತಾವಚ್ಛೇದಕಪದಕ್ಕೆ ಅಧಿಕರಣತಾವಚ್ಛೇದಕ ಎಂದು ಅರ್ಥಮಾಡಿ ಸೇಕಸಂಸರ್ಗಾಭಾವಕ್ಕೆ ಅಧಿಕರಣ ಅಗ್ನಿ, ಅಧಿಕರಣತಾವಚ್ಛೇದಕ ಅಗ್ನಿತ್ವ ಎಂದು ಅಭಿಪ್ರಾಯಪಡುತ್ತಾರೆ.

ವಾಕ್ಯದಲ್ಲಿ ನಿರ್ದೋಷತ್ವವು ಆವಶ್ಯಕ. ಏಕೆಂದರೆ, ಪ್ರಮಾವಿರಹಾದಿರೂಪವಾದ ಪೂರ್ವೋಕ್ತ ಯೋಗ್ಯತೆಯು ಬರಬೇಕಾದರೆ ವಾಕ್ಯವು ನಿರ್ದೋಷವಾಗಿರಬೇಕು.

ಯೋಗ್ಯತೆ ಇರಬೇಕಾದರೆ ನಿರ್ದೋಷತ್ವವು ಇರಬೇಕು ಎಂದರೆ ನಿರ್ದೋಷವಾಕ್ಯದಲ್ಲಿ ಯೋಗ್ಯತೆ ಇದೆ, ಎಂದು ಅರ್ಥ. ಇದು ಸರಿಯಲ್ಲ. ವಿಸಂವಾದಿಶುಕವಾಕ್ಯದಲ್ಲಿ ಯಾವ ವಾಕ್ಯದೋಷಗಳೂ ಇಲ್ಲ. ಭ್ರಾಂತಿಪೂರ್ವಕತ್ವವೂ ಇಲ್ಲ. ನಿರ್ದೋಷತ್ವ ಇದೆ. ಆದರೆ ಅದರಲ್ಲಿ ಯೋಗ್ಯತಾ ಇಲ್ಲ, ಎಂದರೆ, ಇದು ಸರಿಯಲ್ಲ, ಶುಕವಾಕ್ಯದಲ್ಲಿ ಭ್ರಾಂತಿಮೂಲತ್ವಾದಿ ದೋಷಗಳಿಲ್ಲದಿದ್ದರೂ ಅಲ್ಲೂ ಏನಾದರೊಂದು ದೋಷವನ್ನು ಕಲ್ಪಿಸಬೇಕು. ಶುಕಕ್ಕೆ ಆ ವಾಕ್ಯವನ್ನು ಹೇಳಿಕೊಟ್ಟ ಪುರುಷನ ಭ್ರಮೆಯೇ ಅದರಲ್ಲಿರುವ ದೋಷ.

## ನ್ಯಾಯದೀಪದಲ್ಲಿ ಅವತಾರಿಕೆ

**ಸ್ವತಂತ್ರಾನ್ವಯವ್ಯತಿರೇಕಾಭಾವೇಽಪಿ ಹೇತುತ್ವಕಲ್ಪನೇ ಅತಿಪ್ರಸಂಗಮಾಹ– ಕಿಂಚೇತಿ ॥**

ಉಕ್ತವಾದ ಯೋಗ್ಯತಾರೂಪವಾದ ಗುಣಗಳಿಗೆ ಸ್ವತಂತ್ರಾನ್ವಯವ್ಯತಿರೇಕವಿಲ್ಲದಿದ್ದರೂ ಅವುಗಳು ಶಾಬ್ದಪ್ರಮಾಕ್ಕೆ ಕಾರಣವಾಗುವುದಾದರೆ ಅತಿಪ್ರಸಂಗವನ್ನು ಮುಂದೆ ಹೇಳುತ್ತಾರೆ–

**किञ्च प्रत्यक्षादावपि विषयसत्वाविनाभूतस्य विषयासत्वप्रमाविरहादेः सत्वात् स एव गुणः स्यात् । अतीन्द्रियार्थसन्निकर्षादेः गुणत्वोक्तिरयुक्ता स्यात् । तत्र सतोऽपि तस्य गुणत्वेन जनकत्वे मानं नेति चेत् समं प्रकृतेऽपि ।।**

ಶಾಬ್ದಪ್ರಮಾಕ್ಕೆ ಅನನ್ವಯಪ್ರಮಾವಿರಹವು ಗುಣವಾಗುವುದಾದರೆ ಪ್ರತ್ಯಕ್ಷಾನುಮಿತ್ಯಾದಿ ಗಳಲ್ಲೂ ವಿಷಯಸತ್ವವ್ಯಾಪ್ಯವಾದ ವಿಷಯದ ಅಸತ್ವಪ್ರಮಾವಿರಹವೂ ಪೂರ್ವವೃತ್ತಿಯಾಗಿರು ವುದರಿಂದ ಅದೇ ಗುಣವಾದೀತು. ಹೀಗಾಗಿ ಇಂದ್ರಿಯಾರ್ಥಸಂಯೋಗವು ಅತೀಂದ್ರಿಯ ವಾದುದರಿಂದ ಅದನ್ನು ಪ್ರತ್ಯಕ್ಷದಲ್ಲಿ ಗುಣವೆಂದು ಹೇಳುವುದು ತಪ್ಪಾದೀತು. ಪ್ರತ್ಯಕ್ಷದಲ್ಲಿ ಆ ಧರ್ಮವು ಪೂರ್ವ ವೃತ್ತಿಯಾದರೂ ಅದು ಜನಕವೆನ್ನಲು ಪ್ರಮಾಣವಿಲ್ಲ, ಎನ್ನುವ ಸಮಾಧಾನ ಶಾಬ್ದಪ್ರಮಾದಲ್ಲೂ ಸಮಾನ.

## ನ್ಯಾಯದೀಪ

**ಪ್ರಮಾವಿರಹಾದೇಃ ಇತಿ ಆದಿಪದೇನ ತತ್ಪ್ರಮಾವಚ್ಛೇದಕಧರ್ಮಶೂನ್ಯತ್ವ-**

**ತತ್ಪ್ರಮಯೋಶ್ಚ ಗ್ರಹಃ। ಸನ್ನಿಕರ್ಷಾದೇರಿತಿ ॥ ಸಲ್ಲಿಂಗಕಪರಾಮರ್ಶಃ ಆದಿಪದಾರ್ಥಃ।**

ಮೂಲದಲ್ಲಿ ಪ್ರಮಾವಿರಹಾದೇಃ ಎಂಬ ಆದಿಪದದಿಂದ ವಿಷಯಾಸತ್ವಪ್ರಮಾವಚ್ಛೇದಕ ಧರ್ಮಶೂನ್ಯತ್ವ ಮತ್ತು ತಾದೃಶಧರ್ಮಶೂನ್ಯತ್ವಜ್ಞಾನ ಇವುಗಳನ್ನು ಪರಿಗ್ರಹಿಸಬೇಕು. ಸನ್ನಿಕರ್ಷಾದೇಃ ಎಂಬ ಆದಿಪದದಿಂದ ಅನುಮಿತಿಗೆ ಕಾರಣವೆಂದು ನೈಯಾಯಿಕರು ಪರಿಗ್ರಹಿಸಿರುವ ಗುಣವಾದ ಸಲ್ಲಿಂಗಕಪರಾಮರ್ಶವನ್ನು ತೆಗೆದುಕೊಳ್ಳಬೇಕು.

**अपिचैवम् अप्रमायामपि विषयासत्वाविनाभूतविषयाभावो वा विषयासत्वावच्छेदकधर्मवत्त्वं वा तयोः प्रमा वा दोषः स्यान्नतु काचादिः ॥**

ವಿಷಯಸತ್ವವ್ಯಾಪ್ಯವಾದುದನ್ನು ಪ್ರಮಾಹೇತು ಗುಣವೆಂದು ಪರಿಗಣಿಸಿದರೆ ಅಪ್ರಮಾಕ್ಕೂ ವಿಷಯ–ಅಸತ್ವವ್ಯಾಪ್ಯವಾದ ವಿಷಯಾಭಾವಪ್ರಮಾ ಅಥವಾ ವಿಷಯಾಸತ್ವಾವಚ್ಛೇದಕಧರ್ಮವತ್ವ ಅಥವಾ ಇವೆರಡರ ಪ್ರಮಾತ್ಮಕಜ್ಞಾನವೇ ದೋಷವೆಂದಾಗಲಿ,ಕಾಚಾದಿಗಳು ದೋಷವೇ ಆಗಲಿಕ್ಕಿಲ್ಲ.

## ನ್ಯಾಯದೀಪ

**ಅಪಿಚೈವಮಿತಿ। ವಿಷಯಸತ್ವಾವಿನಾಭೂತಸ್ಯ ಗುಣತ್ವೇ ಇತ್ಯರ್ಥಃ। ವಿಷಯಾಸತ್ವಾವಿನಾಭೂತೇತಿ ವಿಷಯಾಭಾವಪ್ರಮಾವಿಶೇಷಣಮ್। ಪ್ರಮಾ ವಿಶೇಷ್ಯತ್ವಮಿತ್ಯರ್ಥಃ। ತಯೋರಿತಿ ॥ ವಿಷಯಾಭಾವಪ್ರಮಾ-ವಿಷಯಾಸತ್ವಾ-ವಚ್ಛೇದಕಧರ್ಮಯೋಃ ಇತ್ಯರ್ಥಃ। ನತ್ವಿತಿ ॥ ತಥಾಚ ಭ್ರಮೇ ಕಾಚಾದಿರ್ದೋಷಃ ಇತಿ ಮಣ್ಯಾದ್ಯುಕ್ತಿಃ ಅಯುಕ್ತಾ ಸ್ಯಾತ್। ತದನ್ವಯ ವ್ಯತಿರೇಕವಿರೋಧಶ್ಚ ಸ್ಯಾತ್, ಇತಿ ಭಾವಃ।**

ಏವಂ ಎಂದರೆ, ವಿಷಯಸತ್ವಕ್ಕೆ ವ್ಯಾಪ್ಯವಾದ ಧರ್ಮವು ಗುಣವಾಗುವುದಾದಲ್ಲಿ ಎಂದರ್ಥ. ಮೂಲದಲ್ಲಿ ವಿಷಯಾಸತ್ವಾವಿನಾಭೂತ ಎಂಬ ಪದ ವಿಷಯಾಭಾವದಲ್ಲಿ ವಿಶೇಷಣವಲ್ಲ, ತತ್-ಪ್ರಮಾದಲ್ಲಿ ವಿಶೇಷಣವೆಂದು ತಿಳಿಯಬೇಕು. ಅಂತಹ ಪ್ರಮಾದೋಷವೆಂದರೆ ಪ್ರಮಾವಿಶೇಷ್ಯತ್ವವು (ವಿಷಯನಿಷ್ಠಧರ್ಮ) ದೋಷ, ಎಂದು ತಿಳಿಯಬೇಕು. ವಿಷಯಾಸತ್ವಪ್ರಮಾ ವಿಶೇಷ್ಯತ್ವಾದಿಗಳೇ ದೋಷವೆಂದಾಗ ಕಾಚಾದಿಗಳು ದೋಷವಲ್ಲ ಎಂದಾಯಿತು. ಆದರೆ, ಮಣಿಕಾರ ಭ್ರಮೆಗೆ ಕಾಚಾದಿಗಳೇ ದೋಷವೆಂದು ಹೇಳಿದ್ದಾನೆ. ಅದು ಅಯುಕ್ತವಾದೀತು. ಭ್ರಮೆಗೆ ಕಾಚಾದಿದೋಷಗಳ ಅನ್ವಯವ್ಯತಿರೇಕವು ಅನುಭವಸಿದ್ಧ. ಅದರ ವಿರೋಧವೂ ಬರುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ವಿಷಯಾಸತ್ವ–ಅವಿನಾಭೂತಧರ್ಮಪ್ರಮಾದೇಃ ವಿಷಯಸತ್ವಭ್ರಮ ವಿರೋಧಿತ್ವಾತ್ ಕಥಂ ದೋಷತಾ? ಇತ್ಯತಃ ಸಂಸರ್ಗವ್ಯಾಪ್ಯಪ್ರಮಾ ಗುಣಃ, ಇತಿ ಪಕ್ಷೇ ದೋಷಾಂತರಮಾಹ–ಕಿಂಚೇತಿ ॥**

ವಿಷಯಾಸತ್ವ–ಅವಿನಾಭೂತವಾದ ವಿಷಯಾಭಾವದ ಪ್ರಮಾ ಭ್ರಮೆಗೆ ದೋಷವಾಗಲೀ ಎಂದು ಆಪಾದಿಸಲಾಯಿತು. ಆದರೆ ಇದು ಸರಿಯಲ್ಲ. ಭ್ರಮೆಯಲ್ಲಿ ವಿಷಯಸತ್ವವು ತೋರುತ್ತದೆ–'ರಜತಂ ಸತ್' ಎಂದು. ವಿಷಯಾಭಾವಪ್ರಮಾವು ವಿಷಯಸತ್ವಭಾನಕ್ಕೆ ವಿರೋಧಿಯಾದುದು. ದೋಷವು ಭ್ರಮೆಗೆ ಅನುಕೂಲವಾಗಿರಬೇಕು, ವಿರೋಧಿಯಾಗಿರಬಾರದು. ಆದ್ದರಿಂದ ಅದು ದೋಷವಾಗುವುದು ಹೇಗೆ? ಹೀಗೆ, ಈ ಆಪಾದನೆಯು ಸರಿಯಲ್ಲ. ಅದಕ್ಕಾಗಿ, 'ಸಂಸರ್ಗವ್ಯಾಪ್ಯ ಪ್ರಮಾ ಗುಣಃ' ಎಂಬ ಪಕ್ಷಕ್ಕೆ ದೋಷಾಂತರವನ್ನು ಹೇಳುತ್ತಿದ್ದಾರೆ–

**किञ्च शाब्दी संसर्गप्रमा नियमेन संसर्गव्याप्यधीजन्या चेदनुमितिः स्यात् ॥**

ಸಂಸರ್ಗಪ್ರಮಾತ್ಮಕವಾದ ಶಾಬ್ದಪ್ರಮಾಕ್ಕೆ ಸಂಸರ್ಗವ್ಯಾಪ್ಯವತ್ತಾಪ್ರಮಾವು ಗುಣವೆಂದಾದಲ್ಲಿ ಶಾಬ್ದಪ್ರಮಾವು ನಿಯಮೇನ ವ್ಯಾಪ್ಯವತ್ತಾಜ್ಞಾನದಿಂದ ಜನ್ಯವೆಂದಂತಾಯಿತು. ಆಗ ಶಾಬ್ದಪ್ರಮಾ ಪರಾಮರ್ಶಜನ್ಯವಾದುದರಿಂದ ಅನುಮಿತ್ಯಾತ್ಮಕವಾಯಿತು. ಅಲ್ಲಿಗೆ ಶಾಬ್ದಬೋಧ ಎಂಬ ಜ್ಞಾನಪ್ರಭೇದವೇ ಇಲ್ಲದಾದೀತು.

## ನ್ಯಾಯದೀಪ

**ಶಾಬ್ದೀ ಸಂಸರ್ಗಪ್ರಮೇತಿ ॥ ಪರ್ವತ–ವಹ್ನಿಸಂಸರ್ಗಪ್ರಮಾವತ್, ಇತಿ ಭಾವಃ ।**

**ನನು ಸಂಶಯೋತ್ತರಪ್ರತ್ಯಕ್ಷಮಿವ ವ್ಯಾಪ್ಯಧೀಜನ್ಯಮಪಿ ನಾನುಮಿತಿರೂಪಮ್ ಇತಿ ಚೇನ್ನ । ತತ್ರ ಬಲವತ್‌ಪ್ರತ್ಯಕ್ಷಕರಣಕತ್ವೇನ ವ್ಯಾಪ್ಯಧೀಕರಣಕತ್ವಾಭಾವಾತ್ । ಇಹ ಚ ನಿಯಮೇನ ವ್ಯಾಪ್ಯಧೀಜನ್ಯತ್ವೇ ತತ್ಕರಣಕತ್ವಾಪಾತಾತ್ । ನಹಿ ಪರಾಮರ್ಶಾದಪಿ ಶಬ್ದಃ ಪ್ರತ್ಯಕ್ಷಸಾಮಗ್ರೀವತ್ ಬಲವಾನ್ ।**

ಪರಾಮರ್ಶಜನ್ಯವಾದುದರಿಂದ ಪರ್ವತ–ವಹ್ನಿ–ಸಂಸರ್ಗಜ್ಞಾನವು ಅನುಮಿತಿಯಾದಂತೆ ಪ್ರಕೃತ ಪದಾರ್ಥಸಂಸರ್ಗಜ್ಞಾನವೂ (ಶಾಬ್ದಪ್ರಮಾ) ಅನುಮಿತ್ಯಾತ್ಮಕವಾಗಲಿ, ಎಂದು ಮೂಲದ ಅಭಿಪ್ರಾಯ.

ಈ ಆಪಾದನೆ ಯುಕ್ತವಲ್ಲ. 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂದೇಹಾನಂತರ 'ಪುರುಷ ಏವ' ಎಂದು ಜ್ಞಾನ ಹುಟ್ಟುತ್ತದೆ. ಈ ಜ್ಞಾನವು ವಿಶೇಷದರ್ಶನರೂಪವಾದ 'ಪುರುಷತ್ವವ್ಯಾಪ್ಯ-ಕರಾದಿಮಾನ್' ಎಂಬ ಪರಾಮರ್ಶದಿಂದ ಹುಟ್ಟಿದರೂ ಅನುಮಿತಿಯಲ್ಲ, ಪ್ರತ್ಯಕ್ಷವೇ. ಅದರಂತೆ, ಪ್ರಕೃತ ಶಾಬ್ದಪ್ರಮಾವೂ ವ್ಯಾಪ್ಯವತ್ತಾಜ್ಞಾನಜನ್ಯವಾದ ಮಾತ್ರಕ್ಕೆ ಅನುಮಿತಿಯೇ ಏಕಾಗಬೇಕು? ಶಬ್ದಜನ್ಯವಾದುದರಿಂದ ಶಾಬ್ದಪ್ರಮಾ ಆಗಬಹುದು.

ಈ ಸಮಾಧಾನ ಸರಿಯಲ್ಲ. ಸಂಶಯಾನಂತರದಲ್ಲಿ ಪರಾಮರ್ಶರೂಪವಾದ ಅನುಮಿತಿ ಸಾಮಗ್ರಿಯೂ ಇದೆ, ಚಕ್ಷುಃಸನ್ನಿಕರ್ಷರೂಪವಾದ ಪ್ರತ್ಯಕ್ಷಸಾಮಗ್ರಿಯೂ ಇದೆ. ಇವೆರಡರಲ್ಲಿ ಪ್ರತ್ಯಕ್ಷಸಾಮಗ್ರೀ ಪ್ರಬಲ. ಆದ್ದರಿಂದ, ಸಂಶಯೋತ್ತರಾಪ್ರತ್ಯಕ್ಷವು ಅನುಮಾನಕ್ಕಿಂತಲೂ ಪ್ರಬಲವಾದ ಪ್ರತ್ಯಕ್ಷಪ್ರಮಾಣದಿಂದ (ಚಕ್ಷುರಿಂದ್ರಿಯದಿಂದ) ಜನ್ಯವಾದ ಕಾರಣ ಪ್ರತ್ಯಕ್ಷಾತ್ಮಕ ವಾಗುತ್ತದೆ. ಪ್ರಕೃತದಲ್ಲಿ, ಶಬ್ದವು ಅನುಮಾನಕ್ಕಿಂತ ಪ್ರಬಲವಲ್ಲ, ವ್ಯಾಪ್ಯವತ್ತಾಜ್ಞಾನರೂಪವಾದ ಅನುಮಾನವೇ ಪ್ರಬಲ. ಅದು ಶಾಬ್ದಪ್ರಮಾನಿಯತಪೂರ್ವವೃತ್ತಿಯೂ ಆಗಿದೆ. ಏವಂಚ ತಜ್ಜನ್ಯವಾದುದರಿಂದ ಶಾಬ್ದಪ್ರಮಾ ಅನುಮಿತ್ಯಾತ್ಮಕವೇ ಆಗಬೇಕು.

## ನ್ಯಾಯದೀಪ

**ನಚ ವ್ಯಾಪ್ಯತ್ವಪ್ರಕಾರಕ ಜ್ಞಾನಜನ್ಯತ್ವೇನ ಅನುಮಿತೇಃ, ಪ್ರಕೃತೇ ತದಜನ್ಯತ್ವಾತ್ ನಾನುಮಿತಿತ್ವಮ್ । ನಿಯಮೇನ ತಜ್ಜನ್ಯತ್ವೇ ತಥಾತ್ವೇನ ತಜ್ಜನ್ಯತ್ವಾವಶ್ಯಂ-ಭಾವಾತ್ । ಅನ್ಯಥಾ ಪ್ರಮೇಯತ್ವಾದಿನಾಪಿ ಜ್ಞಾನೇ ತತ್‌ಪ್ರಮಾಯಾಃ ಗುಣತ್ವಾಪತ್ತೇಃ । ಅಸಂಸರ್ಗಪ್ರಮಾ ವಿರಹಪ್ರಮಾತ್ವಾದಿನಾ ಹೇತುತ್ವಾಪೇಕ್ಷಯಾ ಸಂಸರ್ಗವ್ಯಾಪ್ಯತ್ವೇನ ಪ್ರಮಾತ್ವಸ್ಯ ಲಘುತ್ವಾತ್ । ಅನ್ಯತ್ರ ತೇನ ರೂಪೇಣ ಹೇತುತಾಯಾಃ ಕ್ಲೃಪ್ತತ್ವಾತ್ । ಅಸಂಸರ್ಗಪ್ರಮಾವಿರಹ-ಪ್ರಮಾತ್ವಾದಿನಾ ಹೇತುತ್ವಸ್ಯ ಪ್ರಮಾಯಾಃ ಗುಣಜನ್ಯತ್ವಸಿದ್ಧ್ಯಧೀನತ್ವೇನ ಅನ್ಯೋನ್ಯಾಶ್ರಯಾಚ್ಚ ಇತಿ ಭಾವಃ ।**

ಶಾಬ್ದಪ್ರಮಾವು ಸಂಸರ್ಗವ್ಯಾಪ್ಯಧೀಜನ್ಯವಾದರೂ ವ್ಯಾಪ್ಯವಾದ ಸಂಸರ್ಗಾಭಾವ ಪ್ರಮಾವಿರಹದ ಅಥವಾ ತತ್‌ಪ್ರಮಾದತ್ವ ವ್ಯಾಪ್ಯತ್ವೇನ ಜ್ಞಾನವು ಶಾಬ್ದಪ್ರಮಾಜನಕವಲ್ಲ, ಕಿಂತು ಪ್ರಮಾವಿರಹತ್ವೇನ ಅಥವಾ ವಿರಹಪ್ರಮಾತ್ವೇನ ವ್ಯಾಪ್ಯಜ್ಞಾನವು ಜನಕ. ವ್ಯಾಪ್ಯತ್ವಪ್ರಕಾರಕ ಜ್ಞಾನದಿಂದ ಜನ್ಯವಾದರೆ ಮಾತ್ರ, ಅದು ಅನುಮಿತಿಯಾಗುತ್ತದೆ. ಪ್ರಕೃತ, ವ್ಯಾಪತ್ವೇನ ವ್ಯಾಪ್ಯ ಜ್ಞಾನಜನ್ಯವಲ್ಲವಾದ ಕಾರಣ ಶಾಬ್ದಪ್ರಮಾ ಅನುಮಿತಿಯಾಗಬೇಕಿಲ್ಲ, ಎನ್ನುವುದು ಸರಿಯಲ್ಲ. ಶಾಬ್ದಪ್ರಮಾವು ನಿಯಮೇನ ಸಂಸರ್ಗವ್ಯಾಪ್ಯಪ್ರಮಾದಿಂದ ಹುಟ್ಟುವುದಾದಲ್ಲಿ ವ್ಯಾಪ್ಯತ್ವೇನ ತಜ್ಜ್ಞಾನವೇ ಕಾರಣವಾಗಬೇಕು. ಇಲ್ಲದಿದ್ದರೆ ಸಂಸರ್ಗವ್ಯಾಪ್ಯದ ಪ್ರಮೇಯತ್ವೇನ ಜ್ಞಾನವೂ

ಗುಣವಾದೀತು. ಅಲ್ಲದೆ, ಸಂಸರ್ಗವ್ಯಾಪ್ಯವಾದುದು ಅಸಂಸರ್ಗಪ್ರಮಾವಿರಹಪ್ರಮಾ. ಅದರ ತಾದೃಶಪ್ರಮಾತ್ವೇನ ಜ್ಞಾನಕ್ಕಿಂತಲೂ ಸಂಸರ್ಗವ್ಯಾಪ್ಯತ್ವೇನ ಜ್ಞಾನಕ್ಕೆ ಹೇತುತ್ವವು ಲಘು. ತದ್ವತ್ತಾಜ್ಞಾನಕ್ಕೆ ತದ್‌ವ್ಯಾಪ್ಯವತ್ತಾನಿಶ್ಚಯವು ಕಾರಣ ಎಂದು ಅನುಮಿತ್ಯಾದಿಗಳಲ್ಲಿ ಕ್ಲೃಪ್ತವೂ ಆಗಿದೆ. ಅಲ್ಲದೆ, ಪ್ರಮಾವು ಗುಣಜನ್ಯವೆಂದು ನಿರ್ಧಾರವಾದಮೇಲೆ ಶಾಬ್ದಪ್ರಮಾಸ್ಥಳದಲ್ಲಿ ಬೇರಾವ ಗುಣವೂ ಇಲ್ಲದಿರುವುದರಿಂದ ಅನಿವಾರ್ಯವಾಗಿ ಅಸಂಸರ್ಗಪ್ರಮಾ–ವಿರಹಪ್ರಮಾ ಕಾರಣ ಎಂದು ಸಿದ್ಧವಾಗುತ್ತದೆ. ಅದು ಸಿದ್ಧವಾದರೆ ವ್ಯಭಿಚಾರಾಭಾವಾತ್ ಪ್ರಮಾಕ್ಕೆ ಗುಣಜನ್ಯತ್ವ ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ. ಆದ್ದರಿಂದ ಸಂಸರ್ಗವ್ಯಾಪ್ಯತ್ವೇನ ವ್ಯಾಪ್ಯದ ಜ್ಞಾನವೇ ಗುಣ. ತಜ್ಜನ್ಯವಾದರೆ ಶಾಬ್ದಪ್ರಮಾ ಅನುಮಿತಿಯಾಗಲೇಬೇಕು.[1]

## ನ್ಯಾಯದೀಪದಲ್ಲಿ ಅವತಾರಿಕೆ

**ಸಂಸರ್ಗವ್ಯಾಪ್ಯಪ್ರಮಾ ಗುಣಃ, ಇತಿ ಪಕ್ಷಂ ನಿರಸ್ಯ ಅಸಂಸರ್ಗಪ್ರಮಾವಿರಹಃ ಗುಣಃ ಇತಿ ಪಕ್ಷೇಽಪಿ ದೋಷಮಾಹ–ಕಿಂಚಾಸಂಸರ್ಗೇತಿ ॥**

ಇದುವರೆಗೆ ಸಂಸರ್ಗವ್ಯಾಪ್ಯವಾದ ಸಂಸರ್ಗಾಭಾವಪ್ರಮಾವಿರಹದ ಪ್ರಮಾವೇ ಗುಣ, ಎಂಬ ಪಕ್ಷವನ್ನು ನಿರಾಸಮಾಡಲಾಗಿದೆ. ಮುಂದೆ ಅಸಂಸರ್ಗಪ್ರಮಾವಿರಹವೇ ಗುಣ ಎಂಬ ಪಕ್ಷವನ್ನು ನಿರಾಕರಿಸುತ್ತಾರೆ.

**किञ्च असंसर्गप्रमाविरहो वा(असंसर्गप्रमाविरहप्रमा वा) गुण, इति मते अग्निना सिञ्चेदित्यादौ श्रोतुरनन्वयप्रमाविरहदशायां संसर्गप्रमा स्यात् ।**

ಅಸಂಸರ್ಗದ ಪ್ರಮಾ ಇದ್ದರೆ ಸಂಸರ್ಗಜ್ಞಾನ ಹುಟ್ಟುವುದಿಲ್ಲ. ಆದ್ದರಿಂದ ಅಸಂಸರ್ಗಪ್ರಮಾವಿರಹವೇ ಸಂಸರ್ಗಜ್ಞಾನಕ್ಕೆ (ಶಾಬ್ದಬೋಧಕ್ಕೆ) ಕಾರಣವಾದ ಗುಣ. ಅಥವಾ, ಅದರ ಜ್ಞಾನ ಎಂದರೆ ಅಸಂಸರ್ಗಪ್ರಮಾವಿರಹದ ಪ್ರಮಾ ಇದಾದರೂ ಗುಣವಾಗಬಹುದು.

ಆದರೆ, ಈ ಪಕ್ಷವೂ ಸರಿಯಲ್ಲ. ಒಬ್ಬ ಶ್ರೋತೃವಿಗೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳುವುದಕ್ಕೆ ಮೊದಲು ಅಗ್ನಿ ಮತ್ತು ಸೇಚನಗಳಿಗೆ ಅಸಂಸರ್ಗಪ್ರಮಾ (ಅನನ್ವಯಪ್ರಮಾ) ಇರಲಿಲ್ಲ. ಆಗ ತಾದೃಶಪ್ರಮಾವಿರಹರೂಪವಾದ ಗುಣವು ಇರುವುದರಿಂದ ಶಾಬ್ದಪ್ರಮಾ ಹುಟ್ಟಬೇಕಾದೀತು.

---

1. ಇಲ್ಲಿ ನ್ಯಾಯದೀಪದ ವಾಕ್ಯಗಳು ಲುಪ್ತವಾಗಿವೆ, ಎಂಬ ಸೂಚನೆ ಕೆಲವು ಪುಸ್ತಕಗಳಲ್ಲಿವೆ. ಮುದ್ರಿತ ಪುಸ್ತಕದ ವಾಕ್ಯಗಳು ಹೀಗಿವೆ–
''ನಚ ವ್ಯಾಪ್ಯತ್ವಪ್ರಕಾರಕ ಜ್ಞಾನಜನ್ಯತ್ವೇನ ತದಜನ್ಯತ್ವಾತ್ ನಾನುಮಿತಿತ್ವಮ್ ।
ನಿಯಮೇನ ತಜ್ಜನ್ಯತ್ವೇ ತಥಾತ್ವೇನ ತಜ್ಜನ್ಯತ್ವಾವಶ್ಯಂಭಾವಾತ್ ॥''
ಇದನ್ನು ಇಲ್ಲಿ ಸ್ವಲ್ಪ ಬದಲಾಯಿಸಲಾಗಿದೆ.

## ನ್ಯಾಯದೀಪ

**ಕ್ವಚಿತ್ತು ಅಸಂಸರ್ಗಪ್ರಮಾ–ವಿರಹ–ಪ್ರಮಾ ವಾ, ಇತ್ಯಪಿ ಪಾಠಃ । ತದಾ ತು 'ಉಭಯತ್ರ ದೋಷಾಂತರಮಾಹ' ಇತ್ಯವತಾರ್ಯ ವಿರಹದಶಾಯಾಂ ಇತ್ಯನಂತರಂ 'ತತ್‌ಪ್ರಮಾದಶಾಯಾಮ್' ಇತ್ಯಪಿ ವ್ಯಾಖ್ಯೇಯಮ್ । ಸಂಸರ್ಗಪ್ರಮಾ ಸ್ಯಾದಿತಿ ॥ ತಥಾಚ ಅನ್ವಯವ್ಯಭಿಚಾರಾತ್ ನಾಯಂ ಗುಣತ್ವೇನ ಹೇತುರಿತಿ ಭಾವಃ ॥**

ಕೆಲವೆಡೆ ಮೂಲದಲ್ಲಿ 'ಅಸಂಸರ್ಗಪ್ರಮಾವಿರಹಪ್ರಮಾ ವಾ' ಎಂದೂ ಪಾಠ ಇದೆ. (ಇದು ಇನ್ನೊಂದು ಗುಣ. ಈ ಪಾಠವನ್ನೇ ಮೂಲದಲ್ಲಿ ಅನುಸರಿಸಲಾಗಿದೆ.) ಆಗ ಈ ಮೂಲಕ್ಕೆ 'ಎರಡೂವಿಧದ ಗುಣನಿರುಕ್ತಿಗೂ ದೋಷವನ್ನು ಹೇಳುತ್ತಾರೆ' ಎಂದು ಅವತಾರಿಕೆ ಕೊಡಬೇಕು. ಮೂಲದಲ್ಲಿ ಒಂದರ ಖಂಡನೆಯ ಜೊತೆಯಲ್ಲಿ 'ವಿರಹಪ್ರಮಾದಶಾಯಾಂ' (ಸಂಸರ್ಗ ಪ್ರಮಾ ಸ್ಯಾತ್) ಎಂದೂ ಸೇರಿಸಿಕೊಳ್ಳಬೇಕು.

ಒಟ್ಟಿನಲ್ಲಿ ಇಲ್ಲಿಯ ಅಭಿಪ್ರಾಯ–ಅಗ್ನಿನಾ ಸಿಂಚತಿ, ಎಂಬಲ್ಲಿ ಎರಡೂ ವಿಧದ ಗುಣಗಳು ಇವೆ. ಸಂಸರ್ಗಪ್ರಮಾ ಇಲ್ಲ, ಅನ್ವಯವ್ಯಭಿಚಾರವಿರುವುದರಿಂದ ಇವೆರಡೂ ಗುಣತ್ವೇನ ಕಾರಣವಲ್ಲ, ಎಂದು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು, ತತ್ರ ಸತ್ಯಪಿ ಉಕ್ತಗುಣೇ ಕಾರ್ಯಾಭಾವಃ ಪ್ರತಿಬಂಧನಿಮಿತ್ತಃ ನ ಅಹೇತುತ್ವನಿಮಿತ್ತಃ ಇತಿ ಭಾವೇನ ಆಶಂಕ್ಯ ನಿರಾಹ–ನಚೇತಿ ॥**

'ಅಗ್ನಿನಾ ಸಿಂಚತಿ' ಎಂಬಲ್ಲಿ ಸಂಸರ್ಗಪ್ರಮಾ ಹುಟ್ಟುವುದಕ್ಕೆ ಪ್ರತಿಬಂಧಕ ಇದೆ. ಆದ್ದರಿಂದ ಅಲ್ಲಿ ಕಾರ್ಯವಾಗಿಲ್ಲ. ತಾವತಾ ಗುಣಕ್ಕೆ ಅಹೇತುತ್ವವು ಸಿದ್ಧವಾಗುವುದಿಲ್ಲ, ಎನ್ನುವ ಆಶಂಕೆ ಮಾಡಿ ನಿರಾಕರಿಸಿದ್ದಾರೆ, ಮುಂದಿನ ಗ್ರಂಥದಲ್ಲಿ.

**नच श्रोतुस्तद्विरहदशायामपि ईश्वरस्यासंसर्गप्रमास्ति । सा च श्रोतुः संसर्गप्रमाप्रतिबन्धिकेति वाच्यम् । तथात्वे ईश्वरस्य वाक्यार्थप्रमा गुण इति चिरन्तनमत-त्यागायोगात् ।**

ಅಗ್ನಿನಾ ಸಿಂಚತಿ, ಎಂಬಲ್ಲಿ ಶ್ರೋತೃವಿಗೆ ಅಸಂಸರ್ಗಪ್ರಮಾವಿರಹವಿದ್ದರೂ ಈಶ್ವರನಿಗೆ ಅಸಂಸರ್ಗಪ್ರಮಾ ಇದೆ. ಅದು ಶಾಬ್ದಬೋಧೋತ್ಪತ್ತಿಗೆ ಪ್ರತಿಬಂಧಕವಾಗಿದೆ, ಎನ್ನುವುದು ಯುಕ್ತವಲ್ಲ. ಮಣಿಕಾರ, ಪ್ರಾಚೀನರು ಹೇಳಿರುವ ವಾಕ್ಯಾರ್ಥಪ್ರಮಾ ಗುಣಃ ಎಂಬ ಪಕ್ಷವನ್ನು

ಅಂಗೀಕರಿಸುವುದಿಲ್ಲ. ಏಕೆಂದರೆ, ಅದು ವಕ್ತೃಗತವಾಗಿದ್ದು ವ್ಯಧಿಕರಣವಾದುದರಿಂದ ಕಾರಣವಲ್ಲ, ಎನ್ನುತ್ತಾನೆ. ಪ್ರಕೃತ ವ್ಯಧಿಕರಣವಾದ ಈಶ್ವರೀಯ ಅಸಂಸರ್ಗಪ್ರಮಾ ಪ್ರತಿಬಂಧಕ ಎಂದು ಒಪ್ಪುವುದಾದಲ್ಲಿ ವ್ಯಧಿಕರಣ ವಾದರೂ ವಾಕ್ಯಾರ್ಥಪ್ರಮಾ ಗುಣ ಏಕಾಗಬಾರದು? ಆದ್ದರಿಂದ ಅವನು ಮಾಡಿದ ಪ್ರಾಚೀನಮತನಿರಾಸ ಸರಿಯಲ್ಲವಾದೀತು.

## ನ್ಯಾಯದೀಪ

**ಚಿರಂತನಮತೇತಿ ॥ 'ನ ವೈದಿಕಪ್ರಮಾಯಾಃ ಗುಣಜನ್ಯತ್ವೇನ ಈಶ್ವರಸಿದ್ಧಿಃ' (ಪು.382) ಇತ್ಯಾದಿ ಮಣ್ಯುಕ್ತ್ಯಾ ಪ್ರತೀತಃ ಚಿರಂತನಮತತ್ಯಾಗಃ ಅಯುಕ್ತಃ ಸ್ಯಾದಿತ್ಯರ್ಥಃ ॥**

ಪ್ರಾಮಾಣ್ಯವಾದದಲ್ಲಿ ಮಣಿಕಾರ, ವೈದಿಕಪ್ರಮಾವು ಗುಣಜನ್ಯವಾದುದರಿಂದ (ಯಥಾರ್ಥವಾಕ್ಯಾರ್ಥಜ್ಞಾನ) ಆ ಗುಣಾಶ್ರಯನಾಗಿ ಈಶ್ವರನು ಸಿದ್ಧವಾಗುತ್ತಾನೆ, ಎನ್ನುವುದು ಸರಿಯಲ್ಲ, ಎಂದು ಹೇಳಿರುವುದರಿಂದ ಪ್ರಾಚೀನಮತವನ್ನು ಅವನು ನಿರಾಕರಿಸಿರುತ್ತಾನೆ, ಎಂದು ತಿಳಿಯುತ್ತದೆ. ಅದು ಅಯುಕ್ತವಾದೀತು, ಎಂದು ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ವ್ಯಧಿಕರಣಸ್ಯ ಗುಣತ್ವಾಯೋಗೇನ ತ್ಯಾಗೇಽಪಿ ವಿರೋಧಿವಿಷಯಕತ್ವಾತ್ ಪ್ರತಿಬಂಧಕತ್ವಂ ಸ್ಯಾದೇವ ಇತ್ಯತಃ ನ ಯುಕ್ತಂ ತದಪಿ ಇತ್ಯಾಹ–ಕಿಂಚೇತಿ ॥**

ವ್ಯಧಿಕರಣವಾದುದು ಗುಣವಾಗದಿದ್ದರೂ ಪ್ರತಿಬಂಧಕವಾಗುತ್ತದೆ. ಪ್ರತಿಬಂಧಕವೆನಿಸಲು ವಿರೋಧಿವಿಷಯಕತ್ವವು ಪ್ರಯೋಜಕ. ಈಶ್ವರನ ಅಸಂಸರ್ಗಪ್ರಮಾ ಸಂಸರ್ಗಜ್ಞಾನಕ್ಕೆ ವಿರೋಧಿ ಯಾಗಿದೆ. ಆದ್ದರಿಂದ ವ್ಯಧಿಕರಣವಾದರೂ ಅದು ಪ್ರತಿಬಂಧಕವಾಗುತ್ತದೆ, ಎಂದರೆ, ಇದೂ ಸರಿಯಲ್ಲವೆಂದು ಮುಂದೆ ಹೇಳುತ್ತಾರೆ–

**किञ्च ईश्वरस्यानन्वयप्रमा, न तावत् विषयासत्त्ववेदनेन प्रतिबन्धिका । श्रोतुस्तदावेदनस्य व्यधिकरणया स्वरूपसत्येश्वरनिष्ठप्रमया कर्तुमशक्यत्वात् ।**

**नापि लिङ्गभूतया ज्ञातया तया तत् कर्तुं शक्यम् । तथात्वे ह्यनन्वयप्रमाज्ञानस्यैव प्रतिबन्धकत्वेन तत्प्रमाया अज्ञानदशायां संसर्गप्रमा स्यात् ।**

**नापि सा विषयासत्वमनावेद्य स्वरूपेणैव विषयसत्वविरोधित्वेन विषयसत्वगर्भितप्रमाप्रतिबन्धिका। तथात्वे अनन्वयस्यैव साक्षाद्विषयसत्वविरोधित्वेन प्रमाप्रतिबन्धकत्वौचित्येन प्रमाग्रहणवैयर्थ्यात् ।।**

ಈಶ್ವರನಿಗೆ ಇರುವ ಅನನ್ವಯಪ್ರಮಾವು 'ಅಗ್ನಿನಾ ಸಿಂಚತಿ' ಎಂಬ ವಾಕ್ಯಜನ್ಯಜ್ಞಾನಕ್ಕೆ ವಿಷಯವಾದುದು ಇಲ್ಲ, ಎಂದು ತಿಳಿಸುವ ಮೂಲಕ ಶಾಬ್ದಬೋಧಕ್ಕೆ ಪ್ರತಿಬಂಧಕವಾಗಲು ಸಾಧ್ಯವಿಲ್ಲ. ಏಕೆಂದರೆ, ಶಾಬ್ದಬೋಧ ಬರಬೇಕಾದುದು ಶ್ರೋತೃವಿಗೆ. ಅವನಿಗೆ ವಿಷಯ ಇಲ್ಲ, ಎಂದು ತಿಳಿಯಲು ಈಶ್ವರನ ಅಸಂಸರ್ಗಜ್ಞಾನವು ಕಾರಣವಾಗುವುದಿಲ್ಲ. ಹೀಗೆ, ಈಶನಲ್ಲಿರುವ ಜ್ಞಾನವು ಸ್ವರೂಪಸತ್ತಯಾ ಶ್ರೋತೃವಿನ ವಿಷಯಾಸತ್ವ ಜ್ಞಾನಕ್ಕೆ ಕಾರಣವಲ್ಲ. ಇನ್ನು ಆ ಜ್ಞಾನವು ಜ್ಞಾತವಾಗಿ ಲಿಂಗತಯಾ ಕಾರಣವಾಗಬೇಕು. ಅರ್ಥಾತ್, ಈಶ್ವರನಿಗೆ ಅಸಂಸರ್ಗಜ್ಞಾನವನ್ನು ತಿಳಿದು ಜೀವನು ವಾಕ್ಯವಿಷಯಾಭಾವವನ್ನು ಅನುಮಾನ ಮಾಡಬೇಕು. ಆಗ ಈಶ್ವರನಿಗಿರುವ ಅನನ್ವಯ ಪ್ರಮಾದ ಜ್ಞಾನ ಜೀವನಿಗೆ ಅಗತ್ಯವಾದುದರಿಂದ ಆ ಜ್ಞಾನವನ್ನೇ ಶಾಬ್ದಪ್ರಮಾಪ್ರತಿಬಂಧಕವೆಂದು ಹೇಳಬಹುದು. ಅದರಿಂದ ವಿಷಯಾಭಾವಾನುಮಾನದ ಅಗತ್ಯವೇ ಇಲ್ಲ. ಆಗಲಿ, ಆ ಜ್ಞಾನವನ್ನೇ ಪ್ರತಿಬಂಧಕವೆನ್ನುತ್ತೇವೆ, ಎನ್ನುವುದಾದರೆ, ಈಶ್ವರನಿಗೆ ಅಂತಹ ಜ್ಞಾನ ಇದೆ, ಎಂದು ಶ್ರೋತೃ ತಿಳಿಯದಿರುವ ಸಂದರ್ಭದಲ್ಲಿ ಪ್ರತಿಬಂಧಕಾಭಾವಾತ್ ಅಗ್ನಿನಾ ಸಿಂಚತಿ, ಎಂಬ ವಾಕ್ಯದಿಂದ ಶಾಬ್ದಪ್ರಮಾ ಬರಬೇಕಾದೀತು.

ಇನ್ನು ಹೀಗೆ ಹೇಳಬೇಕು– ಅದು ಜೀವನಿಗೆ ವಿಷಯಾಸತ್ವವನ್ನು ತಿಳಿಸುವ ಮೂಲಕ ಪ್ರತಿಬಂಧಕವಲ್ಲ. ಅದನ್ನು ತಿಳಿಸದಿದ್ದರೂ ಸ್ವರೂಪಸತ್ತಾಗಿಯೇ ಪ್ರತಿಬಂಧಕ. ಹೇಗೆಂದರೆ, ಈಶ್ವರೀಯ ಅಸಂಸರ್ಗಪ್ರಮಾ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವಿಷಯಸತ್ವಕ್ಕೆ ವಿರೋಧಿಯಾಗಿದೆ. ಆದ್ದರಿಂದ ವಿಷಯಸತ್ವಘಟಿತವಾದ ಪ್ರಾಮಾಣ್ಯ ತದ್ವಾಕ್ಯಜನ್ಯಜ್ಞಾನದಲ್ಲಿ ಬರುವುದಿಲ್ಲ. ಹೀಗೆ ಈಶಪ್ರಮಾವು ಸಾಕ್ಷಾತ್ ಪ್ರಮಾತ್ವಪ್ರತಿಬಂಧಕವಾಗುತ್ತದೆ, ಎಂದು. ಇದೂ ಸರಿಯಲ್ಲ. ಹೀಗೆ ಈಶ್ವರೀಯ ಅನನ್ವಯಪ್ರಮಾ ಪ್ರತಿಬಂಧಕ ಎಂದು ಹೇಳುವ ಬದಲಾಗಿ, ಅಗ್ನಿ–ಸೇಚನಗಳಿಗಿರುವ ಅನನ್ವಯವೇ ಪ್ರಮಾವಿಷಯಸತ್ವಕ್ಕೆ ವಿರೋಧಿಯಾದುದರಿಂದ ಪ್ರಮಾಕ್ಕೆ ಪ್ರತಿಬಂಧಕ ಎಂದು ಹೇಳುವುದು ಉಚಿತ. ಅನನ್ವಯ ಪ್ರಮಾ ಎಂಬಲ್ಲಿ ಪ್ರಮಾಪದ ವ್ಯರ್ಥ.

## ನ್ಯಾಯದೀಪ

**ಪ್ರತಿಬಂಧಕತ್ವಂ ಕಿಂ ವಿರೋಧಿವಿಷಯಜ್ಞಾಪನರೂಪೇಣ, ಉತ ಸಾಕ್ಷಾತ್? ಆದ್ಯೇऽಪಿ ಕಿಂ ಸ್ವರೂಪಸತೀ ವಾ ಜ್ಞಾತಾ ಸತೀ ಲಿಂಗತಯಾ ವಾ, ಇತಿ ವಿಕಲ್ಪ್ಯ**

**ಆದ್ಯದ್ವಯಂ ಕ್ರಮೇಣ ನಿರಾಹ-ನ ತಾವದಿತ್ಯಾದಿನಾ ॥ ತದಾವೇದನಸ್ಯ= ವಿಷಯಾಸತ್ವಜ್ಞಾಪನಸ್ಯ ಇತ್ಯರ್ಥಃ । ಸಮಾನಾಧಿಕರಣಜ್ಞಾನೇನೈವ ತದಾವೇದನಸ್ಯ ದೃಷ್ಟಚರತ್ವಾತ್ ಇತಿ ಭಾವಃ ।**

**ಲಿಂಗಭೂತಯೇತಿ ॥ ಅಗ್ನಿನಾ ಸಿಂಚೇತ್ ಇತಿ ವಾಕ್ಯೇ ಅನ್ವಯಃ, ಅಸನ್, ತಥಾ ಈಶ್ವರಪ್ರಮಾವಿಷಯತ್ವಾತ್ । ಸಮ್ಮತವತ್ । ಇತ್ಯೇವಂ ಲಿಂಗಭೂತಯಾ ಇತ್ಯರ್ಥಃ । ಅಂತ್ಯಪಕ್ಷಂ ನಿರಾಹ-ನಾಪಿ ಸೇತಿ ॥**

ಈಶ್ವರನಿಗಿರುವ ಅಸಂಸರ್ಗಪ್ರಮಾವು ಶ್ರೋತೃವಿನ ಶಾಬ್ದಪ್ರಮಾಕ್ಕೆ ಎರಡು ರೀತಿಯಿಂದ ಪ್ರತಿಬಂಧಕವಾಗಬಹುದು.

1. ಶಾಬ್ದಪ್ರಮಾಕ್ಕೆ ವಿರೋಧಿಯಾದ ವಿಷಯವನ್ನು ತಿಳಿಸಿಕೊಡುವ ಮೂಲಕ.

2. ಅಥವಾ, ಸ್ವರೂಪಸತ್ತಯಾ ಸಾಕ್ಷಾತ್.

ಮೊದಲ ಪಕ್ಷದಲ್ಲೂ ಎರಡು ಸಂಭಾವ್ಯತೆಗಳಿವೆ–

1. ಅ. ಈಶಪ್ರಮಾ ಸ್ವರೂಪಸತ್ತಾಗಿ ವಿರೋಧಿವಿಷಯಜ್ಞಾಪಕ.

1.ಆ. ಜ್ಞಾತಂ ಸತ್ ಲಿಂಗತಯಾ ವಿರೋಧಿವಿಷಯಜ್ಞಾಪಕ.

ಈ ಎರಡು ವಿಕಲ್ಪಗಳನ್ನು ಮೊದಲು ಒಂದಾದ ಮೇಲೆ ಇನ್ನೊಂದನ್ನು ನಿರಾಕರಿಸಲಾಗಿದೆ. 1.ಅ. ಸರಿಯಲ್ಲ, ಸಮಾನಾಧಿಕರಣವಾಗಿದ್ದಾಗ ಮಾತ್ರ ಒಂದು ಜ್ಞಾನವು ಇನ್ನೊಂದು ಜ್ಞಾನಕ್ಕೆ ಜನಕವಾಗಿರುವುದು ಲೋಕದಲ್ಲಿ ಕಂಡಿದೆ. ಪ್ರಕೃತ, ಅಸಂಸರ್ಗ ಪ್ರಮಾ ಈಶ್ವರನಿಷ್ಠ. ಆದರಿಂದ ಶ್ರೋತೃವಿಗೆ ವಿಷಯಾಸತ್ವಜ್ಞಾನ ಬರಲು ಸಾಧ್ಯವಿಲ್ಲ.

ಇನ್ನು ಲಿಂಗತಯಾ ಜ್ಞಾಪಕ ಎನ್ನುವ 1.ಆ. ಪಕ್ಷವೂ ಸರಿಯಲ್ಲ. ಅದು ಲಿಂಗತಯಾ ಹೀಗೆ ಜ್ಞಾಪಕವಾಗಬೇಕು– ಅಗ್ನಿನಾ ಸಿಂಚೇತ್, ಎಂಬ ವಾಕ್ಯದಲ್ಲಿ ಪದಾರ್ಥಗಳಿಗೆ ಅನ್ವಯವು ಇಲ್ಲ, ಅನ್ವಯ ಇಲ್ಲವೆಂದು ಈಶ್ವರನಿಗೆ ಪ್ರಮಾ ಇರುವುದರಿಂದ, ಎಂದು. ಹೀಗೆ ಹೇಳಿದರೆ, ಆ ಈಶ್ವರಪ್ರಮಾವು, ಕದಾಚಿತ್ ಅಜ್ಞಾತವಾದಾಗ 'ಅಗ್ನಿನಾ ಸಿಂಚತಿ' ವಾಕ್ಯದಿಂದ ಶಾಬ್ದಪ್ರಮಾ ಬರಬೇಕಾದೀತು. ಹೀಗೆ ಮೊದಲನೇ ಪಕ್ಷದ ಎರಡು ಉಪಪಕ್ಷಗಳೂ ಸರಿಯಲ್ಲ. ಎರಡನೆಯ ಪಕ್ಷವನ್ನು 'ನಾಪಿ' ಎಂದು ಮೂಲದಲ್ಲಿ ನಿರಾಕರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ವಿರೋಧಿವಿಷಯತ್ವೇಽಪಿ ಅಯುಕ್ತಂ ಪ್ರತಿಬಂಧಕತ್ವಮ್ ಇತ್ಯಾಹ-ಕಿಂಚ ವಸ್ತುಗತ್ಯಾ ಇತಿ ॥**

ಈಶ್ವರಪ್ರಮಾಕ್ಕೆ ಅನ್ವಯವಿರೋಧಿಯಾದ ಅನನ್ವಯವು ವಿಷಯವಾದರೂ ಅದು ಪ್ರಮಾಕ್ಕೆ ಪ್ರತಿಬಂಧಕವಾಗದು ಎಂದು ಮುಂದೆ ಹೇಳಲಾಗಿದೆ.

**किञ्च वस्तुगत्या अनन्वयविषयाया अपि सर्वकार्यहेतुभूताया ईश्वरप्रमायाः शाब्दप्रमां प्रत्यपि हेतुत्वेन कथं तत्प्रतिबन्धकत्वम् । नच प्रमाया गुणजन्यत्वम् अद्यापि सिद्धम् । येनेश्वरज्ञानस्य उपादानापरोक्षज्ञानत्वेन हेतुत्वम् अनन्वयप्रमात्वेन तु प्रतिबन्धकत्वमिति कल्प्येत ॥**

ಈಶ್ವರಪ್ರಮಾವು ಶಾಬ್ದಪ್ರಮಾಕ್ಕೆ ಪ್ರತಿಬಂಧಕವಾಗಲು ಸಾಧ್ಯವಿಲ್ಲ. ಶಾಬ್ದಜ್ಞಾನಕ್ಕೆ ಅನ್ವಯವು ವಿಷಯ. ಈಶ್ವರಪ್ರಮಾಕ್ಕೆ ಅನನ್ವಯವು ವಿಷಯ. ಹೀಗೆ, ಅವೆರಡು ವಿರುದ್ಧವಿಷಯಕಗಳಾದುದರಿಂದ ಪ್ರತಿಬಂಧಕವಾಗುವ ಸಂಭವವೇನೊ ಇದೆ. ಆದರೆ, ಈಶ್ವರಜ್ಞಾನ ಸರ್ವಕಾರ್ಯಗಳಿಗೂ ಕಾರಣವಾದುದು, ಅದಕ್ಕೆ ವಿರುದ್ಧವಾಗಿ ಪ್ರತಿಬಂಧಕವಾಗಲಾರದು. ಶಾಬ್ದಪ್ರಮಾಕ್ಕೂ ಅದು ಕಾರಣವೇ ಆಗಬೇಕು.

ಇದಕ್ಕೆ ಹೀಗೆ ಸಮಾಧಾನ ಹೇಳಬಹುದು– ಈಶ್ವರಜ್ಞಾನವು ಶಾಬ್ದಪ್ರಮಾಕ್ಕೆ ಕಾರಣವೂ ಆಗುತ್ತದೆ, ಪ್ರತಿಬಂಧಕವೂ ಆಗುತ್ತದೆ. ಅದು ಉಪಾದಾನಗೋಚರ ಅಪರೋಕ್ಷಜ್ಞಾನತ್ವೇನ ಕಾರಣ, ಅನನ್ವಯಪ್ರಮಾತ್ವೇನ ಪ್ರತಿಬಂಧಕ. ಹೀಗೆ ರೂಪಭೇದೇನ ಈಶ್ವರಜ್ಞಾನವು ಎರಡೂ ಆಗಿದೆ, ಎಂದು. ಆದರೆ, ಇಷ್ಟೊಂದು ಕಲ್ಪನೆ, ಪ್ರಮಾಕ್ಕೆ ಗುಣಜನ್ಯತ್ವವು ಸಿದ್ಧವಾಗಿದ್ದರೆ ಉಚಿತವಾಗುತ್ತಿತ್ತು. ಅದು ಇನ್ನೂ ನಿರ್ಧಾರವಾಗಿಲ್ಲ.

## ನ್ಯಾಯದೀಪ

**ನನು ಪ್ರಮಾಯಾಃ ಗುಣಜನ್ಯತ್ವಾನ್ಯಥಾನುಪಪತ್ತ್ಯೈವ ದ್ವೈರೂಪ್ಯಮ್ ಆಕಾರಭೇದೇನ ಈಶ್ವರಪ್ರಮಾಯಾಃ ಕಲ್ಪ್ಯತೇ ಇತ್ಯತ ಆಹ–ನಚೇತಿ ॥**

ಪ್ರಮಾ ಗುಣಜನ್ಯವಾಗಬೇಕಾದರೆ ಈಶ್ವರಜ್ಞಾನಕ್ಕೆ ವಿಭಿನ್ನರೂಪಗಳಿಂದ ಹೇತುತ್ವ–ಪ್ರತಿಬಂಧಕತ್ವ ಎರಡನ್ನೂ ಕಲ್ಪನೆ ಮಾಡಲೇಬೇಕಾಗುತ್ತದೆ, ಎನ್ನುವ ಶಂಕೆಗೆ–ನ ಚ, ಎಂಬ ವಾಕ್ಯದಲ್ಲಿ ಸಮಾಧಾನವಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಾಗುಕ್ತಮತಾಂತರಮಪಿ ಪ್ರಾತಿಸ್ವಿಕ ದೋಷೇಣ ನಿರಾಹ–ಕಿಂಚೇತಿ ॥**

ಹಿಂದೆ ಹೇಳಿರುವ (ಪು.631) ಗುಣಸ್ವರೂಪದ ಬಗ್ಗೆ ಮತಾಂತರವನ್ನೂ ಪ್ರತ್ಯೇಕ ದೋಷವನ್ನು ಹೇಳಿ ನಿರಾಕರಿಸುತ್ತಾರೆ–

## ಗುಣಾಂತರ ನಿರಾಸ

**किञ्चानन्वयप्रतियोगितावच्छेदकधर्मशून्यत्वं प्रमागुण इति मते अतीन्द्रियविषये वाक्ये संसर्गप्रमातः प्राक् तस्या असम्भवात् न शाब्दप्रमाहेतुता ।।**

ಅನನ್ವಯಪ್ರತಿಯೋಗಿತಾವಚ್ಛೇದಕ–ಧರ್ಮಶೂನ್ಯತ್ವಂ, ಇದು ಪ್ರಮಾಕ್ಕೆ ಕಾರಣವಾದ ಗುಣ, ಎಂದು ಹೇಳುವುದೂ ಸರಿಯಲ್ಲ. ಸೇಚನಾನ್ವಯಕ್ಕೆ ಪ್ರತಿಯೋಗಿ ಜಲ. ಪ್ರತಿಯೋಗಿತಾ ವಚ್ಛೇದಕ ಜಲತ್ವ. ಅನನ್ವಯಪ್ರತಿಯೋಗಿ ವಹ್ನಿ, ಪ್ರತಿಯೋಗಿತಾವಚ್ಛೇದಕಧರ್ಮ ವಹ್ನಿತ್ವ. ತಾದೃಶಧರ್ಮಶೂನ್ಯತ್ವವು ಜಲದಲ್ಲಿ ಇದೆ. ಆದ್ದರಿಂದ ಜಲೇನ ಸಿಂಚತಿ, ವಾಕ್ಯದಿಂದ ಪ್ರಮಾ ಹುಟ್ಟುತ್ತದೆ. ಹೀಗೆ ಹೇಳಿದರೆ, ಅತೀಂದ್ರಿಯವಿಷಯವನ್ನು ತಿಳಿಸುವ ವೇದವಾಕ್ಯದಿಂದ ಪ್ರಮಾ ಬರಲಿಕ್ಕಿಲ್ಲ. ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ, ಎಂಬ ವಾಕ್ಯದಿಂದ ಸ್ವರ್ಗಕ್ಕೆ ಹೇತು ಜ್ಯೋತಿಷ್ಟೋಮ ಯಾಗ, ಎಂಬ ಅನ್ವಯಬೋಧ ಬರಬೇಕಾದರೆ ಸ್ವರ್ಗಾನನ್ವಯ ಪ್ರತಿಯೋಗಿತಾ ವಚ್ಛೇದಕಧರ್ಮಜ್ಯೋತಿಷ್ಟೋಮತ್ವ ಅಲ್ಲ, ಕೃಷಿತ್ವಾದಿಗಳೇ, ಅಂತಹ ಧರ್ಮಶೂನ್ಯತ್ವ ಜ್ಯೋತಿಷ್ಟೋ ಮದಲ್ಲಿ ಇದೆ, ಎಂಬ ಗುಣದ ಕಲ್ಪನೆ ಇರಬೇಕು. ಈ ಕಲ್ಪನೆ ಶಾಬ್ದಬೋಧ ಬಂದಮೇಲಷ್ಟೇ ಬರುವುದಕ್ಕೆ ಸಾಧ್ಯ, ಅದಕ್ಕಿಂತ ಪೂರ್ವದಲ್ಲಿ ಇಲ್ಲ. ಏಕೆಂದರೆ, ಸ್ವರ್ಗಕ್ಕೆ ಯಾವುದು ಸಾಧನ, ಯಾವುದು ಅಲ್ಲ, ಎನ್ನುವುದನ್ನು ವೇದದಿಂದಲೇ ತಿಳಿಯಬೇಕು. ಆದ್ದರಿಂದ ಇಂತಹ ಗುಣಜ್ಞಾನವೂ ಶಾಬ್ದಪ್ರಮಾಹೇತುವಲ್ಲ.

## ನ್ಯಾಯದೀಪ

**'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿವಾಕ್ಯೇ ಹೇತುಹೇತುಮದ್ಭಾವಾದಿರೂಪ–ಸ್ವರ್ಗಾದ್ಯನನ್ವಯಪ್ರತಿಯೋಗಿತಾ-ವಚ್ಛೇದಕಧರ್ಮಃ ಜ್ಯೋತಿಷ್ಟೋಮತ್ವಾದಿಃ ನ, ಕಿಂತು ಕೃಷಿತ್ವಾದಿರೇವ ಇತಿ ಜ್ಞಾನಸ್ಯ ತದನ್ವಯಪ್ರಮಿತಿ–ಅನಂತರಭಾವಿತ್ವೇನ ತದ್ಧೇತುತ್ವಮ್ ಅಯುಕ್ತಮ್, ಇತ್ಯರ್ಥಃ ।**

'ಜ್ಯೋತಿಷ್ಟೋಮೇನ' ಇತ್ಯಾದಿ ವಾಕ್ಯಗಳಲ್ಲಿ ಸ್ವರ್ಗಕ್ಕೂ ಜ್ಯೋತಿಷ್ಟೋಮಯಾಗಕ್ಕೂ ಅನ್ವಯ ಹೇತು–ಹೇತುಮದ್ಭಾವ. ಸ್ವರ್ಗಕ್ಕೆ ಹೇತುವಾದ ಯಾಗವು ಈ ಅನ್ವಯಕ್ಕೆ ಪ್ರತಿಯೋಗಿ. ಅನನ್ವಯ

ಪ್ರತಿಯೋಗಿ ಕೃಷಿ. ಅದು ಧಾನ್ಯಹೇತು, ಸ್ವರ್ಗಹೇತುವಲ್ಲ. ಹೀಗೆ, ಯಾವುದು ಯಾವುದಕ್ಕೆ ಹೇತು ಎಂದು ಅತೀಂದ್ರಿಯವಿಷಯಗಳ ಬಗ್ಗೆ ತಿಳುವಳಿಕೆ ವೇದಗಳಿಂದಲೇ ಬರಬೇಕು. ಅರ್ಥಾತ್ ವೇದಗಳಿಂದಲೇ ಅನ್ವಯಪ್ರತಿಯೋಗಿತಾವಚ್ಛೇದಕ ಯಾವುದು, ಯಾವುದಲ್ಲ ಎಂದು ತಿಳಿಯಬೇಕು. ಅದಕ್ಕಿಂತ ಮೊದಲು ಅನನ್ವಯ-ಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವ ಜ್ಞಾನ ಬರಲು ಸಾಧ್ಯವಿಲ್ಲ. ಆದ್ದರಿಂದ ಅತೀಂದ್ರಿಯವಿಷಯಕವಾದ ವಾಕ್ಯಗಳಲ್ಲಿ ಅನ್ವಯಪ್ರತೀತಿಯ ಆನಂತರದಲ್ಲಿ ಬರುವ ಇಂತಹ ಗುಣಜ್ಞಾನವು ಅನ್ವಯಜ್ಞಾನಕ್ಕೆ ಕಾರಣವಾಗುವುದಿಲ್ಲ.

## ಯೋಗ್ಯತಾಪ್ರಮಾ ಗುಣವಲ್ಲ

**एतेन अयोग्यताज्ञानेन शाब्दज्ञानप्रतिबन्धात् तद्विघटनीयस्य योग्यताज्ञानस्य शाब्दधीहेतुत्वे सिद्धे तद्विशेषौ योग्यताप्रमाभ्रमौ शाब्दप्रमाभ्रमौ प्रति जनकाविति निरस्तम् । अयोग्यताया उक्तरीत्या विषयाभावरूपत्वे बाधवत्, विषयाभावव्याप्यरूपत्वे सत्प्रतिपक्षवत् साक्षात्प्रतिबन्धकत्वसम्भवे योग्यताज्ञानविघटकत्वकल्पकाभावात् । व्यभिचारज्ञानासंसर्गग्रहाप्रामाण्यज्ञानानि तु न साक्षादनुमिति-प्रवृत्तिप्रतिबन्धकानि। भिन्नविषयकत्वात् इत्यनुमिति-प्रवृत्तिहेतु-भूतव्याप्तिज्ञान-संसर्गग्रह- प्रामाण्यज्ञानविघटकानि ।**

**तस्माच्छाब्दज्ञाने आकाङ्क्षाऽऽसत्ती अयोग्यतानिश्चयविरहश्च हेतवः । ते च भ्रमसाधारणाः । प्रमाणाबाधरूपा स्वरूपसती योग्यता तु प्रामाण्यान्तर्गतविषयसत्वात्मकत्वान्न गुणः ।**

**अप्रमासामग्रीतः प्रमासामग्र्यां विशेषस्तु निर्दोषत्वमेवेति वक्ष्यते ।**

**तस्मादनित्यप्रमात्वपक्षकानुमानेषु इव अनित्यप्रत्यक्षप्रमात्वादि-पक्षकानुमानेष्वपि तदनुगतगुणाभावात् बाधासिध्यादीति ।।**

ಇದರಿಂದ ಇನ್ನೊಂದು ವಾದವೂ ನಿರಸ್ತವಾಯಿತು. ಅಯೋಗ್ಯತಾಜ್ಞಾನವು ಶಾಬ್ದಜ್ಞಾನಕ್ಕೆ ಪ್ರತಿಬಂಧಕ. ವಹ್ನಿಯು ಸೇಚನಕ್ಕೆ ಕರಣವಲ್ಲ, ಎಂಬ ಅಯೋಗ್ಯತಾಜ್ಞಾನವಿದ್ದರೆ 'ವಹ್ನಿನಾ ಸಿಂಚತಿ' ಎಂಬ ವಾಕ್ಯದಿಂದ ಶಾಬ್ದಬೋಧವು ಬರುವುದಿಲ್ಲ. ಇಂತಹ ಪ್ರತಿಬಂಧಕವಾದ ಅಯೋಗ್ಯತಾ

ಜ್ಞಾನದಿಂದ ವಿಘಟನೀಯವಾದುದು ಯೋಗ್ಯತಾಜ್ಞಾನ. ಕಾರಣೀಭೂತಧರ್ಮವಿಘಟಕತ್ವಂ ಪ್ರತಿಬಂಧಕತ್ವಮ್. ಅಯೋಗ್ಯತಾಜ್ಞಾನಕ್ಕೆ ಪ್ರತಿಬಂಧಕತ್ವವನ್ನು ಸಮರ್ಥಿಸಬೇಕಾದರೆ ಯೋಗ್ಯತಾ ಜ್ಞಾನವು ಶಾಬ್ದಜ್ಞಾನಕ್ಕೆ ಕಾರಣ, ಎಂದು ಹೇಳಬೇಕಾಗುತ್ತದೆ. ಹೀಗೆ ಯೋಗ್ಯತಾಜ್ಞಾನಕ್ಕೆ ಶಾಬ್ದಬೋಧಹೇತುತ್ವವು ಸಿದ್ಧವಾದ ಮೇಲೆ ಅಂತಹ ಯೋಗ್ಯತಾಜ್ಞಾನದ ಎರಡು ಪ್ರಭೇದಗಳು ಯೋಗ್ಯತಾಪ್ರಮಾ ಮತ್ತು ಯೋಗ್ಯತಾಭ್ರಮೆ. ಶಾಬ್ದಜ್ಞಾನದ ಎರಡು ಪ್ರಭೇದಗಳು ಶಾಬ್ದಪ್ರಮಾ ಮತ್ತು ಶಾಬ್ದಭ್ರಮೆ. ಇವೆರಡಕ್ಕೆ ಅವೆರಡು ಜನಕಗಳು. ಒಂದು ಗುಣ, ಇನ್ನೊಂದು ದೋಷ.

ಈ ಪಕ್ಷವೂ ಸರಿಯಲ್ಲ. ಅಯೋಗ್ಯತಾಜ್ಞಾನ ಎಂದರೆ ವಹ್ನಿಯಲ್ಲಿ ಸೇಚನಕರಣತ್ವ ಇಲ್ಲ, ಎಂಬ ಜ್ಞಾನ. ಇದು ಶಾಬ್ದಜ್ಞಾನವಿಷಯಾಭಾವಜ್ಞಾನ. ತದಭಾವವತ್ತಾಜ್ಞಾನಮುದ್ರಯಾ ಇದು ಬಾಧಜ್ಞಾನದಂತೆ ಶಾಬ್ದಬೋಧಕ್ಕೆ ಸಾಕ್ಷಾತ್ ಪ್ರತಿಬಂಧಕ.

ಇನ್ನು, ಸೇಚನಕರಣತ್ವಾಭಾವ–ವ್ಯಾಪ್ಯವಹ್ನಿತ್ವ, ಇದು ಅಯೋಗ್ಯತೆ ಎಂದಾದರೆ ಇದರ ಜ್ಞಾನವು ತದಭಾವವ್ಯಾಪ್ಯವತ್ತಾಜ್ಞಾನರೂಪ. ಅದೂ ಸತ್‌ಪ್ರತಿಪಕ್ಷಜ್ಞಾನದಂತೆ ಸಾಕ್ಷಾತ್ ಪ್ರತಿಬಂಧಕ. ಹೀಗೆ ಅಯೋಗ್ಯತಾನಿಶ್ಚಯಕ್ಕೆ ಸಾಕ್ಷಾತ್ ಪ್ರತಿಬಂಧಕತ್ವವನ್ನೇ ಹೇಳಲು ಬರುವಾಗ ತತ್‌ವಿಘಟನೀಯವಾದ ಯೋಗ್ಯತಾಜ್ಞಾನವು ಶಾಬ್ದಬೋಧಕಾರಣ, ಎಂದು ಕಲ್ಪಿಸಬೇಕಾದ ಅಗತ್ಯವೇ ಇಲ್ಲ.

ವ್ಯಭಿಚಾರ ಜ್ಞಾನವಾದರೆ ಸಾಕ್ಷಾತ್ ಅನುಮಿತಿಗೆ ಪ್ರತಿಬಂಧಕವಲ್ಲ, ಭಿನ್ನವಿಷಯಕ ವಾದುದರಿಂದ. ಅದಕ್ಕಾಗಿ, ತದ್ವಿಘಟನೀಯವಾದ, ಅನುಮಿತಿಹೇತುವಾದ ವ್ಯಾಪ್ತಿಜ್ಞಾನವನ್ನು ಕಲ್ಪಿಸಬೇಕು.

ಅಸಂಸರ್ಗಾಗ್ರಹವು ಪ್ರವೃತ್ತಿಗೆ ಸಾಕ್ಷಾತ್ ಪ್ರತಿಬಂಧಕವಲ್ಲ. ಅದಕ್ಕೆ ಪ್ರತಿಬಂಧಕತ್ವವನ್ನು ಕೂಡಿಸುವುದಕ್ಕಾಗಿ ಸಂಸರ್ಗಾಗ್ರಹವು ಪ್ರವೃತ್ತಿಹೇತು, ಎಂದು ಹೇಳಬೇಕಾಗುತ್ತದೆ. ಆಗ ತದ್ವಿಘಟಕತಯಾ ಅಸಂಸರ್ಗಾಗ್ರಹವು ಪ್ರತಿಬಂಧಕವಾಗುತ್ತದೆ.

ಅಪ್ರಾಮಾಣ್ಯಜ್ಞಾನವೂ ಭಿನ್ನವಿಷಯಕವಾದುದರಿಂದ ಪ್ರವೃತ್ತಿಗೆ ಪ್ರತಿಬಂಧಕವಾಗುವು ದಿಲ್ಲ, ಅದಕ್ಕಾಗಿ, ಪ್ರಾಮಾಣ್ಯಜ್ಞಾನವು ಪ್ರವೃತ್ತಿಕಾರಣ ಎಂದು ಹೇಳಬೇಕು. ತದ್ವಿಘಟಕತ್ವೇನ ಅಪ್ರಾಮಾಣ್ಯಜ್ಞಾನವು ಪ್ರವೃತ್ತಿಪ್ರತಿಬಂಧಕವಾಗುತ್ತದೆ.

ಆದರೆ, ಅಯೋಗ್ಯತಾಜ್ಞಾನವು ಸಾಕ್ಷಾತ್ ಶಾಬ್ದಜ್ಞಾನಪ್ರತಿಬಂಧಕವೇ ಆಗಿರುವಾಗ ತತ್‌ಪ್ರತಿಬದ್ಧ್ಯತ್ವೇನ ಯೋಗ್ಯತಾಜ್ಞಾನವನ್ನು ಶಾಬ್ದಜ್ಞಾನಕಾರಣವನ್ನಾಗಿ ಕಲ್ಪಿಸಬೇಕಾಗಿಲ್ಲ. ಆದ್ದರಿಂದ ಶಾಬ್ದಜ್ಞಾನಕ್ಕೆ ಆಕಾಂಕ್ಷಾ, ಆಸತ್ತಿ, ಅಯೋಗ್ಯತಾನಿಶ್ಚಯಾಭಾವ ಇವುಗಳು ಮಾತ್ರ ಕಾರಣ. ಇವುಗಳೆಲ್ಲವೂ ಭ್ರಮಾತ್ಮಕಶಾಬ್ದಬೋಧಕ್ಕೂ ಕಾರಣಗಳು. ಪ್ರಮಾಣಾಬಾಧರೂಪವಾದ ಯೋಗ್ಯತೆಯು ಪ್ರಾಮಾಣ್ಯದಲ್ಲಿ ಸೇರಿರುವ ವಿಷಯಸತ್ವರೂಪವಾದುದರಿಂದ ಪ್ರಾಮಾಣ್ಯ ಪ್ರಯೋಜಕವೇ ಅಲ್ಲವಾದ ಕಾರಣ ಅದು ಗುಣವೇ ಅಲ್ಲ.

ಹಾಗಾದರೆ, ಪ್ರಮಾಭ್ರಮೆಗಳೆಂಬ ವೈಲಕ್ಷಣ್ಯಕ್ಕೆ ಯಾವುದು ಪ್ರಯೋಜಕ ಎಂದರೆ– ಅಪ್ರಮಾಸಾಮಗ್ರಿಗಳಿಗಿಂತ ಪ್ರಮಾಸಾಮಗ್ರಿಯಲ್ಲಿ ಒಂದು ವಿಶೇಷವಿದೆ. ಅದು ನಿರ್ದೋಷತ್ವ. ಅದನ್ನು ಮುಂದೆ ಹೇಳುತ್ತೇವೆ. ಏವಂಚ, ದೋಷವಿದ್ದರೆ ಯಾವ ಸಾಮಗ್ರಿಯಿಂದ ಭ್ರಮೆ ಹುಟ್ಟುವುದೋ ದೋಷವಿಲ್ಲದಿದ್ದಾಗ ಅದೇ ಸಾಮಗ್ರಿಯಿಂದ ಪ್ರಮಾ ಹುಟ್ಟುತ್ತದೆ. ಹೀಗೇ ಹೇಳಲು ಬರುವಾಗ ಗುಣಕ್ಕೆ ಕಾರಣತ್ವವನ್ನು ಹೇಳುವುದು ಅನಗತ್ಯ.

ಆದ್ದರಿಂದ ಪರತಸ್ತ್ವವನ್ನು ಸಾಧನೆ ಮಾಡುವ ಅನಿತ್ಯಪ್ರಮಾತ್ವಪಕ್ಷಕವಾದ ಅನುಮಾನಗಳಲ್ಲಿ ಹೇಗೆ ಬಾಧ–ಅಸಿದ್ಧಿದೋಷಗಳು ಇವೆಯೋ ಅದರಂತೆಯೇ, ಅನಿತ್ಯ–ಪ್ರತ್ಯಕ್ಷಪ್ರಮಾತ್ವಾದಿ–ಪಕ್ಷಕಾನುಮಾನಗಳಲ್ಲೂ, ಪ್ರತ್ಯಕ್ಷಾದಿಪ್ರತ್ಯೇಕ ಪ್ರಮಾಗಳಿಗೆ ಅನುಗತವಾದ ಒಂದು ಗುಣ ಇಲ್ಲದಿರುವುದರಿಂದ ಬಾಧ–ಅಸಿದ್ಧಿ ಮುಂತಾದ ಹಿಂದೆ ಹೇಳಿರುವ ದೋಷಗಳು ಇವೆ.

## ನ್ಯಾಯದೀಪ

**ಯೋಗ್ಯತಾಜ್ಞಾನಸ್ಯ ಹೇತುತ್ವೋಪಪಾದನಾಯ ಉಕ್ತಮ್–ಅಯೋಗ್ಯತೇತ್ಯಾದಿ ।। ಸಾಕ್ಷಾದಪ್ರತಿಬಂಧಕಸ್ಯ ಕಾರ್ಯಾನುಕೂಲಕಿಂಚಿದ್ಧರ್ಮ–ವಿಘಟಕತ್ವರೂಪತ್ವಾತ್ ಪ್ರತಿಬಂಧಕತ್ವಸ್ಯ ಇತಿ ಭಾವಃ। ತದ್ವಿಶೇಷೌ ಇತಿ ।। 'ಯತ್ಸಾಮಾನ್ಯೇ ಯತ್ಸಾಮಾನ್ಯಂ ಹೇತುಃ ಬಾಧಕಾಭಾವೇ ತದ್ವಿಶೇಷಯೋರಪಿ' ಇತಿ ನ್ಯಾಯಾದಿತಿ ಭಾವಃ।**

ಮೂಲದಲ್ಲಿ 'ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿಬಂಧಕ' ಎಂದಿರುವುದು ಯೋಗ್ಯತಾಜ್ಞಾನಕ್ಕೆ ಶಾಬ್ದಬೋಧಹೇತುತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ. ಹೇಗೆಂದರೆ, ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಸಾಕ್ಷಾತ್ತಾಗಿ ಪ್ರತಿಬಂಧಕವಲ್ಲ. ಕಾರಣವಿಘಟನದ್ವಾರಾ ಪ್ರತಿಬಂಧಕವಾಗಬೇಕು. ಆಗ ಆ ಕಾರಣವಿಶೇಷ ಯೋಗ್ಯತಾಜ್ಞಾನ, ಎಂದೇ ಹೇಳಬೇಕು. ಯೋಗ್ಯತಾಜ್ಞಾನ ಶಾಬ್ದಜ್ಞಾನಕ್ಕೆ ಹೇತುವಾದರೆ 'ಯತ್ಸಾಮಾನ್ಯಯೋಃ' ಇತ್ಯಾದಿ ನ್ಯಾಯದಂತೆ ಯೋಗ್ಯತಾಪ್ರಮಾ ಶಾಬ್ದಪ್ರಮಾಕ್ಕೆ ಕಾರಣ ಎಂದು ಸಿದ್ಧವಾಗುತ್ತದೆ.

## ನ್ಯಾಯದೀಪ

**ಏತೇನ ಇತ್ಯೇತದ್ ವ್ಯನಕ್ತಿ–ಅಯೋಗ್ಯತೇತಿ ।। ಉಕ್ತರೀತ್ಯೇತಿ ।। 'ಯೋಗ್ಯತಾ ಕಿಂ ಶಬ್ದಪ್ರತಿಪಾದ್ಯಸ್ಯ ಸಂಸರ್ಗಸ್ಯ ಸತ್ತ್ವಮ್' ಇತ್ಯಾದಿನಾ ಉಕ್ತರೀತ್ಯಾ ಇತ್ಯರ್ಥಃ। ವಿಷಯಾಭಾವವ್ಯಾಪ್ಯೇತಿ ।। 'ಏಕಪದಾರ್ಥ ಸಂಸರ್ಗೇ' ಇತ್ಯಾದಿನಾ ಉಕ್ತರೀತ್ಯಾ, ಇತಿ ಅನುಷಂಗಃ। ಯೋಗ್ಯತಾ**

**ಜ್ಞಾನೇತ್ಯಾದಿ ॥ ತಥಾಚ ಯೋಗ್ಯತಾಜ್ಞಾನಸ್ಯೈವ ಶಾಬ್ದಜ್ಞಾನಾಹೇತುತ್ವೇ 'ಯತ್ಸಾಮಾನ್ಯ' ಇತಿ ನ್ಯಾಯಾನವತಾರಾತ್ ನ ಯೋಗ್ಯತಾ ಪ್ರಮಾ-ಭ್ರಮೌ ಗುಣದೋಷೌ ಸಿದ್ಧ್ಯತಃ ಇತಿ ಭಾವಃ ॥**

'ಏತೇನ' ಎಂಬುದರ ವಿವರಣೆಯೇ ಮುಂದಿರುವ ಅಯೋಗ್ಯತಾಜ್ಞಾನೇನ ಮುಂತಾದ ವಾಕ್ಯ. ಯೋಗ್ಯತಾಜ್ಞಾನವು ಶಾಬ್ದಬೋಧಸಾಮಾನ್ಯಕ್ಕೆ ಹೇತು, ಎಂದು ಸಿದ್ಧವಾದರೆ 'ಯತ್ಸಾಮಾನ್ಯಯೋಃ ಕಾರ್ಯಕಾರಣಭಾವಃ ಅಸತಿ ಬಾಧಕೇ ತದ್ವಿಶೇಷಯೋರಪಿ' ಎಂಬ ನ್ಯಾಯದಂತೆ ಯೋಗ್ಯತಾಪ್ರಮಾ ಶಾಬ್ದಪ್ರಮಾಕ್ಕೆ ಕಾರಣ, ಎಂದು ಸಿದ್ಧವಾಗುತ್ತದೆ. ಸಾಮಾನ್ಯ ಕಾರ್ಯಕಾರಣಭಾವವೇ ಸಿದ್ಧವಾಗದಿದ್ದಲ್ಲಿ ಈ ವಿಶೇಷಕಾರ್ಯಕಾರಣಭಾವಕ್ಕೆ ಅವಕಾಶವೇ ಇಲ್ಲ. ಆದ್ದರಿಂದ, ಯೋಗ್ಯತಾಪ್ರಮಾ ಗುಣವೆಂದಾಗಲೀ ತದ್‌ಭ್ರಮೆಯು ದೋಷವೆಂದಾಗಲೀ ಸಿದ್ಧವಾಗುವುದಿಲ್ಲ.

## ನ್ಯಾಯದೀಪ

**ನನ್ವೇವಂ ವ್ಯಾಪ್ತಿಜ್ಞಾನಮಪಿ ಅನುಮಿತಿಹೇತುಃ ನ ಸ್ಯಾತ್ । ತಥಾ ವೈಶಿಷ್ಟ್ಯಜ್ಞಾನಂ ಪ್ರಾಮಾಣ್ಯಜ್ಞಾನಂ ಚ ಪ್ರವೃತ್ತಿಹೇತುಃ ನ ಸ್ಯಾತ್ । ತದ್ವಿಘಟಕಸ್ಯ ವ್ಯಭಿಚಾರಜ್ಞಾನಾದೇಃ ಸಾಕ್ಷಾದೇವ ಅನುಮಿತಿಪ್ರತಿಬಂಧಕತ್ವಸಂಭವಾತ್ ಇತ್ಯತ ಆಹ-ವ್ಯಭಿಚಾರೇತಿ ॥**

**ಏವಂ ಯೋಗ್ಯತಾದೇಃ ಗುಣತ್ವಂ ನಿರಸ್ಯ ಮಣೌ 'ಯೋಗ್ಯತ್ವಾದಿಕಂ ಗುಣಃ' ಇತಿ ಆದಿಪದೇನ ಆಕಾಂಕ್ಷಾಸತ್ಯೋರಪಿ ಉಪಾದಾನಂ ಯತ್ ತದಪಿ ಅಯುಕ್ತಂ ಇತಿ ಹೇತುಂ ವದನ್ನೇವ ಉಪಸಂಹರತಿ-ತಸ್ಮಾದಿತಿ ॥**

**ಅಯೋಗ್ಯತಾನಿಶ್ಚಯವಿರಹ ಇತಿ ॥ ನತು ಯೋಗ್ಯತಾಜ್ಞಾನಮ್ ಇತ್ಯರ್ಥಃ। ವಿವರಿಷ್ಯತೇ ಚೈತದ್ ಯೋಗ್ಯತಾವಾದೇ ಇತಿ ಭಾವಃ । ಭ್ರಮಸಾಧಾರಣ ಇತಿ ಹೇತುಗರ್ಭಮ್ । ನ ಗುಣಃ ಇತ್ಯನ್ವಯಃ ।**

ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಸಾಕ್ಷಾತ್ ಪ್ರತಿಬಂಧಕ, ಯೋಗ್ಯತಾಜ್ಞಾನ ವಿಘಟಕತಯಾ ಪ್ರತಿಬಂಧಕವಲ್ಲ, ಎನ್ನುವುದಾದಲ್ಲಿ ವ್ಯಭಿಚಾರಜ್ಞಾನಾದಿಗಳೂ ಸಾಕ್ಷಾತ್ ಪ್ರತಿಬಂಧಕವಾಗಿ ವ್ಯಾಪ್ತಿಜ್ಞಾನವು ಅನುಮಿತಿಹೇತುವಲ್ಲ, ಅದರಂತೆ ಪ್ರಾಮಾಣ್ಯಜ್ಞಾನ, ಸಂಸರ್ಗ ಜ್ಞಾನಗಳೂ ಪ್ರವೃತ್ತಿಗೆ ಹೇತುಗಳಲ್ಲ, ಎಂದಾಗಲಿ. ಅವುಗಳಿಗೆ ವಿಘಟಕವಾದ ವ್ಯಭಿಚಾರಜ್ಞಾನ, ಅಸಂಸರ್ಗಗ್ರಹ, ಅಪ್ರಾಮಾಣ್ಯಜ್ಞಾನಗಳು ಸಾಕ್ಷಾದೇವ ಅನುಮಿತಿ ಮತ್ತು ಪ್ರವೃತ್ತಿಗಳಿಗೆ ಪ್ರತಿಬಂಧಕಗಳಾಗಲಿ. ಈ ಆಕ್ಷೇಪಕ್ಕೆ 'ವ್ಯಭಿಚಾರಾದೇಃ' ಇತ್ಯಾದಿ ವಾಕ್ಯವು ಸಮಾಧಾನ ನೀಡುತ್ತದೆ.

ಹೀಗೆ, ಇದುವರೆಗೆ ಯೋಗ್ಯತಾದಿಗಳು ಗುಣಗಳಲ್ಲ, ಎಂದು ನಿರಾಕರಿಸಲಾಗಿದೆ. ಮಣಿಗ್ರಂಥದಲ್ಲಿ 'ಯೋಗ್ಯತ್ವಾದಿಕಂ ಗುಣಃ' ಎಂದು ಆದಿಪದದಿಂದ ಆಕಾಂಕ್ಷಾ, ಆಸತ್ತಿಗಳನ್ನೂ ಗುಣಗಳನ್ನಾಗಿ ಸಂಗ್ರಹಿಸಲಾಗಿದೆ. ಅದೂ ಸರಿಯಲ್ಲ ಎನ್ನುವುದಕ್ಕೆ ಕಾರಣವನ್ನು ಕೊಡುತ್ತಾ ಪ್ರಕರಣದ ಉಪಸಂಹಾರವನ್ನು ತಸ್ಮಾತ್; ಎಂಬ ವಾಕ್ಯದಲ್ಲಿ ಮಾಡಲಾಗಿದೆ.

ಆಕಾಂಕ್ಷಾ ಆಸತ್ತ್ಯಾದಿಗಳು ಭ್ರಮಜನಕವಾಕ್ಯದಲ್ಲೂ ಇವೆ ಎಂಬುದನ್ನೂ 'ಭ್ರಮಸಾಧಾರಣಂ' ಪದದಿಂದ ಹೇಳಲಾಗಿದೆ. ಇದು ಹೇತುಗರ್ಭವಿಶೇಷಣ. ಅವುಗಳು ಗುಣಗಳಾದರೆ ವಾಕ್ಯಾರ್ಥಭ್ರಮೆಯೂ ಪ್ರಮಾ ಆಗಬೇಕಾದೀತು, ಎಂದರ್ಥ.

## ನ್ಯಾಯದೀಪ

**ನನ್ವೇವಂ ಗುಣನಿರಾಸೇ, ಕಾರ್ಯೇ ವೈಜಾತ್ಯಸ್ಯ ಕಾರಣ–ವೈಜಾತ್ಯನಿಮಿತ್ತತ್ವಾತ್, ಜ್ಞಾನಸಾಮಾನ್ಯಸಾಮಗ್ರ್ಯಾಃ ಅಪ್ರಮಾಯಾಮಪಿ ಸತ್ತ್ವೇನ ಪ್ರಮಾಸಾಮಗ್ರ್ಯಾಂ ಅಪ್ರಮಾಸಾಮಗ್ರೀತಃ ವೈಲಕ್ಷಣ್ಯಾಭಾವೇ ತತ್ಕಾರ್ಯವೈಲಕ್ಷಣ್ಯಂ ನ ಸ್ಯಾತ್ ಇತ್ಯತ ಆಹ–ಅಪ್ರಮೇತಿ ॥ ನಿರ್ದೋಷತ್ವಮೇವೇತಿ ॥ ಯದ್ಯಪಿ ದೋಷಾಭಾವೋಽಪಿ ನ ಪ್ರಾಮಾಣ್ಯಹೇತುಃ ಇತಿ ವಕ್ಷ್ಯತೇ, ತಥಾಪಿ ಭಿಕ್ಷುಪಾದ ಪ್ರಸಾರನ್ಯಾಯೇನ ಗುಣಹೇತುತ್ವನಿರಾಸಾಯ ದೋಷಾಭಾವಸ್ಯ ಪ್ರಮಾ ನಿಮಿತ್ತತ್ವೋಕ್ತಿಃ ಇತಿ ಧ್ಯೇಯಮ್ ।**

ಹೀಗೆ ಪ್ರಮಾಕ್ಕೆ ಹೇತುವಾದ ಗುಣವೇ ಇಲ್ಲ, ಎಂದು ನಿರಾಕರಣೆ ಮಾಡಿದರೆ, ಕಾರ್ಯದಲ್ಲಿ ವೈಲಕ್ಷಣ್ಯವು ಕಾರಣವೈಲಕ್ಷಣ್ಯಪ್ರಯುಕ್ತವಾದುದರಿಂದ ಪ್ರಮಾರೂಪಕಾರ್ಯವೈಜಾತ್ಯಕ್ಕೆ ನಿಮಿತ್ತವೇನು? ಜ್ಞಾನಸಾಮಾನ್ಯಸಾಮಗ್ರಿಯು ಅಪ್ರಮಾಕ್ಕೂ ಕಾರಣ. ಆದ್ದರಿಂದ ಅದು ಪ್ರಮಾ ಮಾತ್ರ ಹೇತುವಾದ ಕಾರಣವಿಶೇಷವಾಗುವುದಿಲ್ಲ, ಹೀಗಿರುವಾಗ ಪ್ರಮಾತ್ಮಕಜ್ಞಾನವಿಶೇಷಕ್ಕೆ ಕಾರಣವಿಶೇಷ ಯಾವುದು? ಅದಕ್ಕೆ ಉತ್ತರ–ಅತ ಏವ, ಎಂದು. ನಿರ್ದೋಷತ್ವವೇ ಪ್ರಮಾತ್ಮಕ ಜ್ಞಾನಕ್ಕೆ ಕಾರಣ, ಎಂದು ಉತ್ತರ.

ವಸ್ತುತಃ ಮುಂದೆ (ಪ್ರಕರಣ-15) ದೋಷಾಭಾವವು ಪ್ರತಿಬಂಧಕಾಭಾವರೂಪವಾದುದರಿಂದ ಪ್ರಮಾಕ್ಕೆ ಕಾರಣವಲ್ಲ, ಎಂದು ನಿರಾಕರಿಸಲಾಗಿದೆ. ಆದರೂ, ಭಿಕ್ಷುಪಾದಪ್ರಸರಣ ನ್ಯಾಯದಿಂದ ಇದನ್ನು ಒಪ್ಪಿಕೊಳ್ಳಲಾಗಿದೆ. ಸದ್ಯ ನೈಯಾಯಿಕರು ಹೇಳಿರುವ ಗುಣನಿರಾಸವಾದರೆ ಸಾಕು. ದೋಷಾಭಾವದಿಂದಲೇ ಪ್ರಮಾತ್ಮಕವಿಜಾತೀಯಕಾರ್ಯವು ಸಿದ್ಧವಾಗುವುದರಿಂದ ಗುಣದ ಅಗತ್ಯವಿಲ್ಲ, ಎಂದು ಹೇಳಿದಾಗ ತಾರ್ಕಿಕರು ಒಮ್ಮೆ ನಿರುತ್ತರರಾಗುತ್ತಾರೆ. ಮತ್ತೆ ವಸ್ತುತಃ ಗುಣಾಭಾವದ ಅಗತ್ಯವೂ ಇಲ್ಲ, ಎಂದು ಸಾಧನೆ ಮಾಡಬಹುದು. ಈ ಅಭಿಪ್ರಾಯದಿಂದ ಅಸಮ್ಮತವಾದುದನ್ನೂ ಇಲ್ಲಿ ಒಪ್ಪಿಕೊಳ್ಳಲಾಗಿದೆ.

तदप्युक्तं ''अन्यथा'' इत्यादिना । अनुगतगुणाभवेऽपि जन्य-प्रत्यक्षप्रमात्वादेः कार्यतावच्छेदकत्वे पूर्वोक्ताव्यवस्थापातादित्यर्थः । एवमुत्तरत्रापि द्रष्टव्यम् ।।

ಈ ಪ್ರಕರಣದಲ್ಲಿ ಹೇಳಿದ ವಿಷಯವೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯದಿಂದ ಪ್ರತಿಪಾದಿತವಾಗಿದೆ. ಹೇಗೆಂದರೆ— ಅನುಗತವಾದ ಗುಣವು ಇಲ್ಲದಿದ್ದರೂ ಜನ್ಯಪ್ರತ್ಯಕ್ಷಪ್ರಮಾತ್ವವು ಕಾರ್ಯತಾವಚ್ಛೇದಕವಾಗುವುದಾದರೆ, ಘಟತ್ವವು ಕಾರ್ಯತಾವಚ್ಛೇದಕ ನೀಲಘಟತ್ವವು ಕಾರ್ಯತಾವಚ್ಛೇದಕವಲ್ಲ, ಎಂಬ ವ್ಯವಸ್ಥೆಯೇ ಇಲ್ಲದಾದೀತು, ಎಂದು ಆ ವಾಕ್ಯದ ಅರ್ಥ. ಮುಂದಿನ ಪ್ರಕರಣದಲ್ಲೂ ಇದೇ ಅರ್ಥವನ್ನು ಆ ವಾಕ್ಯಕ್ಕೆ ಹೇಳಬೇಕು.

## ನ್ಯಾಯದೀಪ

**ಪೂರ್ವೋಕ್ತೇತಿ ।। ಅನಿತ್ಯಪ್ರಮಾಮಾತ್ರೇ ಅನುಗತಗುಣಭಂಗಾಂತೋಕ್ತೇ-ತ್ಯರ್ಥಃ ।**

ಪೂರ್ವೋಕ್ತವೆಂದರೆ ಅನಿತ್ಯಪ್ರಮಾಕ್ಕೆ ಅನುಗತವಾದ ಒಂದು ಗುಣವನ್ನು ನಿರಾಕರಿಸಿರುವ ಪ್ರಕರಣದ ಕೊನೆಯಲ್ಲಿ ಹೇಳಿದ, ಎಂದು ಅರ್ಥ.

ಪ್ರತ್ಯಕ್ಷಾದಿಪ್ರಮಾಸು ಪ್ರತ್ಯೇಕಾನುಗತಗುಣಭಂಗ
ಪ್ರಕರಣ ಮುಗಿಯಿತು. ।। 13 ।।

## ಈ ಪ್ರಕರಣದ ಸಾರಾಂಶ

ಹಿಂದಿನ ಪ್ರಕರಣದಲ್ಲಿ ಅನಿತ್ಯಪ್ರಮಾಸಾಮಾನ್ಯಕ್ಕೆ ಅನುಗತವಾದ ಒಂದು ಗುಣವಿದೆ, ಎಂದು ಹೇಳುವ ಪ್ರಗಲ್ಭಮಿಶ್ರರು ಮತ್ತು ಯಜ್ಞಪತ್ಯುಪಾಧ್ಯಾಯರ ಮತಗಳನ್ನು ನಿರಾಕರಿಸಲಾಗಿದೆ. ಈಪ್ರಕರಣದಲ್ಲಿ ಪ್ರತ್ಯಕ್ಷಾದಿಪ್ರಮಾಗಳಿಗೆ ಪ್ರತ್ಯೇಕವಾದ, ಅನನುಗತವಾದ ಗುಣಗಳನ್ನು ನಿರಾಸ ಮಾಡಲಾಗಿದೆ. ಇದು ಮಣಿಕಾರನ ಪಕ್ಷ. ಪ್ರತ್ಯಕ್ಷಪ್ರಮಾಕ್ಕೆ ಇಂದ್ರಿಯಾರ್ಥಸನ್ನಿಕರ್ಷವು ಮತ್ತು ವಿಷಯವು ಗುಣ. ಅನುಮಿತಿ ಪ್ರಮಾಕ್ಕೆ ಯಥಾರ್ಥಲಿಂಗ ಪರಾಮರ್ಶವು ಗುಣ. ಶಾಬ್ದಪ್ರಮಾಕ್ಕೆ ಯಥಾರ್ಥವಾಕ್ಯಾರ್ಥಜ್ಞಾನವು ಗುಣ. ಇವುಗಳನ್ನು ಕ್ರಮವಾಗಿ ಈ ಪ್ರಕರಣದಲ್ಲಿ ನಿರಾಕರಣೆ ಮಾಡಲಾಗಿದೆ.

**ಪ್ರತ್ಯಕ್ಷಪ್ರಮಾಹೇತುಗುಣನಿರಾಸ—** ಪ್ರತ್ಯಕ್ಷಪ್ರಮಾಕ್ಕೆ ಇಂದ್ರಿಯಾರ್ಥಸನ್ನಿಕರ್ಷವಾಗಲಿ, ವಿಷಯ(ಅರ್ಥ)ವಾಗಲೀ ಗುಣ ಎಂದು ಹೇಳಲು ಆಗುವುದಿಲ್ಲ. ಶುಕ್ತಿಯನ್ನು ನೋಡಿ 'ಇದಂ ರಜತಮ್' ಎಂಬ ಭ್ರಮೆ ಬರುವಾಗ ಸನ್ನಿಕರ್ಷವೂ ಇದೆ, ವಿಷಯವೂ ಇದೆ. ಆದರೂ ಶುಕ್ತಿಯ ಶುಕ್ತಿತ್ವೇನ ಪ್ರಮಾ ಇಲ್ಲ. ವ್ಯಭಿಚಾರದೋಷ. ಕಾಚಾದಿ ದೋಷವು ಪ್ರತಿಬಂಧಕವಾದುದರಿಂದ ಸನ್ನಿಕರ್ಷ– ವಿಷಯಗಳು ಇದ್ದರೂ ಪ್ರಮಾ ಬರುವುದಿಲ್ಲ, ಎನ್ನುವುದಾದರೆ, ಹಾಗಾದರೆ, ಪ್ರತ್ಯಕ್ಷಪ್ರಮಾಕ್ಕೆ ದೋಷಾಭಾವವೇ ಗುಣವಾಗಲಿ. ದೋಷವಿದ್ದಾಗ ಇಂದ್ರಿಯಗಳಿಂದ ಅಯಥಾರ್ಥಜ್ಞಾನ ಬರುತ್ತದೆ, ದೋಷವಿಲ್ಲದಿದ್ದಾಗ ಯಥಾರ್ಥಜ್ಞಾನ ಹುಟ್ಟುತ್ತದೆ, ಎಂದೇ ಹೇಳಬಹುದು. ಗುಣದ ಕಲ್ಪನೆಯ ಅಗತ್ಯವೇ ಇಲ್ಲ. ಹೀಗೆ ಅನ್ವಯ ವ್ಯಭಿಚಾರವಿರುವುದರಿಂದ ಸನ್ನಿಕರ್ಷ ಅಥವಾ ವಿಷಯಗಳು ಪ್ರತ್ಯಕ್ಷಪ್ರಮಾಕ್ಕೆ ಗುಣಗಳಲ್ಲ.

ವ್ಯತಿರೇಕ ವ್ಯಭಿಚಾರವೂ ಇದೆ— ಯೋಗಿಗಳಿಗೆ ಅತೀತ–ಅನಾಗತವಸ್ತುಗಳ ಪ್ರತ್ಯಕ್ಷವು ಬರುತ್ತದೆ. ನಮಗೂ 'ಸೋಽಯಂ ಘಟಃ' ಎಂಬ ಪ್ರತ್ಯಭಿಜ್ಞಾ ಹುಟ್ಟುತ್ತದೆ. ಯೋಗಿ ಪ್ರತ್ಯಕ್ಷದಲ್ಲಿ ಲೌಕಿಕ ಸನ್ನಿಕರ್ಷಗಳೂ ಇಲ್ಲ, ವಿಷಯವೂ ಇಲ್ಲ. ಪ್ರತ್ಯಭಿಜ್ಞಾದಲ್ಲೂ ತತ್ತಾಂಶದಲ್ಲಿ ಸನ್ನಿಕರ್ಷ ಇಲ್ಲ. ಆದರೂ ಪ್ರತ್ಯಕ್ಷಪ್ರಮಾ ಬರುತ್ತದೆ. ಆದ್ದರಿಂದ ವ್ಯಭಿಚಾರ. ಯೋಗಿ ಪ್ರತ್ಯಕ್ಷಕ್ಕೆ ಲೌಕಿಕ ಷಡ್ವಿಧ–ಸನ್ನಿಕರ್ಷಗಳು ಕಾರಣವಲ್ಲದಿದ್ದರೂ ಯೋಗಲಬ್ಧ ಸಾಮರ್ಥ್ಯ ವಿಶೇಷವೇ ಸನ್ನಿಕರ್ಷ. ತತ್ತಾಂಶದಲ್ಲಿ ಸಂಸ್ಕಾರವು ಸನ್ನಿಕರ್ಷ. ಆದ್ದರಿಂದ ವ್ಯಭಿಚಾರ ಇಲ್ಲ, ಎಂದು ಸಮಾಧಾನ ಹೇಳುವುದಾದರೆ, ಭ್ರಮೆಯಲ್ಲೂ ದೋಷವೇ ಸನ್ನಿಕರ್ಷವೆಂದು ಹೇಳಬಹುದು. ಆಗ ಗುಣಜನ್ಯವಾದುದರಿಂದ ಭ್ರಮೆಯೂ ಪ್ರಮಾ ಆಗಬೇಕಾದೀತು.

ಹೀಗೆ, ಪ್ರಮಾತ್ಮಕ ಪ್ರತ್ಯಕ್ಷಸಾಮಾನ್ಯಕ್ಕೆ ಅನುಗತವಾದ ಒಂದು ಗುಣ ಇಲ್ಲ.

**ಅನುಮಿತಿಹೇತುಗುಣನಿರಾಸ—** ಅನುಮಿತಿ ಪ್ರಮಾಕ್ಕೆ ಯಥಾರ್ಥಲಿಂಗಪರಾಮರ್ಶವು ಗುಣ, ಎಂದು ಮಣಿಗ್ರಂಥದಲ್ಲಿ ಹೇಳಲಾಗಿದೆ. ಪರಾಮರ್ಶವು ಯಥಾರ್ಥವಾದರೆ ಅದರಿಂದ

ಜನ್ಯವಾದ ಅನುಮಿತಿಯೂ ಪ್ರಮಾತ್ಮವೇ ಆಗಿರುತ್ತದೆ, ಎಂದು ನೈಯಾಯಿಕರ ಅಭಿಪ್ರಾಯ. ಇದರ, ಇನ್ನೊಂದು ಮುಖದ ಅರ್ಥ–ಪರಾಮರ್ಶವು ಭ್ರಮಾತ್ಮಕವಾದರೆ ಅನುಮಿತಿಯೂ ಭ್ರಮೆಯಾಗಬೇಕು. ಆದರೆ, ಹೀಗಿಲ್ಲ. ಕೆಲವೊಮ್ಮೆ ಭ್ರಮಾತ್ಮಕವಾದ ಪರಾಮರ್ಶದಿಂದಲೂ ಪ್ರಮಾತ್ಮಕವಾದ ಅನುಮಿತಿಯೂ ಬರುವುದಿದೆ. ಉದಾಹರಣೆಗೆ—ಪರ್ವತದಲ್ಲಿ ಬಾಷ್ಪನೋಡಿ ಅದನ್ನು ಧೂಮ ಎಂದು ಭ್ರಮಿಸಿದಾಗ ವಹ್ನಿವ್ಯಾಪ್ಯ–ಧೂಮವಾನ್ ಪರ್ವತಃ, ಎಂಬ ಪರಾಮರ್ಶ ಹುಟ್ಟುತ್ತದೆ. ಈ ಪರಾಮರ್ಶವು ಭ್ರಮಾತ್ಮಕವಾಗಿದೆ. ಆದರೆ, ಪರ್ವತದಲ್ಲಿ ವಹ್ನಿಯು ಇರುವುದರಿಂದ, ಇದರಿಂದ ಹುಟ್ಟಿದ ಅನುಮಿತಿ ಪ್ರಮಾತ್ಮಕವಾಗುತ್ತದೆ. ಇಲ್ಲಿ ಗುಣ ಇಲ್ಲ, ಅನುಮಿತಿ ಪ್ರಮಾ ಆಗಿದೆ. ಆದ್ದರಿಂದ ವ್ಯತಿರೇಕ ವ್ಯಭಿಚಾರ.

ಇದಕ್ಕೆ ಹೀಗೆ ಸಮಾಧಾನ ಹೇಳಬಹುದು– ಅನುಮಿತಿ ಬಂದಿರುವ ವ್ಯಕ್ತಿಗೆ ಯಥಾರ್ಥಪರಾಮರ್ಶ ಇಲ್ಲದಿದ್ದರೂ ಈಶ್ವರನಿಗೆ ಯಥಾರ್ಥವಾದ ಪರಾಮರ್ಶ ಇದೆ. ಈಶ್ವರ ಜ್ಞಾನವು ಸಕಲಕಾರ್ಯಗಳಿಗೂ ಕಾರಣ. ಅವನ ಯಥಾರ್ಥಪರಾಮರ್ಶದಿಂದ ಅನುಮಿತಿ ಹುಟ್ಟಿದೆ, ಗುಣಜನ್ಯವಾಯಿತು, ಪ್ರಮಾತ್ಮಕವಾಗುತ್ತದೆ, ಎಂದು.

ಇದು ಸರಿಯಲ್ಲ. ಈಶ್ವರನ ಪರಾಮರ್ಶ ವ್ಯಧಿಕರಣ, ಅನುಮಿತಿ ಬರುವ ವ್ಯಕ್ತಿಯಲ್ಲಿ ಇರುವ ಪರಾಮರ್ಶ ಸಮಾನಾಧಿಕರಣ. ಅದು ಭ್ರಮಾತ್ಮಕ. ಸಮಾನಾಧಿಕರಣ ಭ್ರಮರೂಪ ದೋಷಜನ್ಯವಾದುದರಿಂದ ಪರ್ವತಃ ವಹ್ನಿಮಾನ್, ಎಂಬ ಅನುಮಿತಿಯು ಭ್ರಮಾತ್ಮಕವೂ ಆಗಬೇಕಾದೀತು. ಅಲ್ಲದೆ, ಈಶ್ವರಜ್ಞಾನವು ಸರ್ವಕಾರ್ಯಗಳಿಗೂ ಸಾಧಾರಣಕಾರಣ. ಪ್ರಕೃತ ಪ್ರಮಾಕ್ಕೆ ಗುಣರೂಪವಾದ ವಿಶೇಷಕಾರಣಬೇಕು. ಅಷ್ಟೇ ಅಲ್ಲ, ಅದು ಉಪಾದಾನಗೋಚರ ಅಪರೋಕ್ಷ ಜ್ಞಾನತ್ವೇನ ಕಾರಣ. ಯಥಾರ್ಥ–ಪರಾಮರ್ಶತ್ವೇನ ಕಾರಣವೂ ಅಲ್ಲ. ಹಾಗಿದ್ದರೂ ಅದನ್ನು ಗುಣವೆಂದು ಪರಿಗಣಿಸುವುದಾದಲ್ಲಿ ಭ್ರಮೆಯೂ ಈಶ್ವರಜ್ಞಾನರೂಪ ಗುಣಜನ್ಯವಾದುದರಿಂದ ಪ್ರಮಾ ಆದೀತು. ಹೀಗೆ ಈ ಪಕ್ಷಕ್ಕೆ ಅನೇಕ ದೋಷಗಳನ್ನು ಹೇಳಿ ಇದು ತೀರಾ ಅಸಮರ್ಪಕವಾದ ಸಮಾಧಾನ, ಎಂದು ತೋರಿಸಲಾಗಿದೆ.

ಮಣಿಕಾರ, ಯಾದೃಚ್ಛಿಕಾನುಮಿತಿಪ್ರಮಾದಲ್ಲಿ ಯಥಾರ್ಥಪರಾಮರ್ಶ ಎಂಬ ಗುಣ ಇಲ್ಲ, ಎಂದು ವ್ಯಭಿಚಾರಶಂಕೆಯನ್ನು ಮಾಡಿದ್ದಾನೆ. ಸಮಾಧಾನ ಕೊಡಲಿಲ್ಲ. ರುಚಿದತ್ತಮಿಶ್ರರು ವ್ಯಾಖ್ಯಾನದಲ್ಲಿ ಇದಕ್ಕೆ ಹೀಗೆ ಸಮಾಧಾನ ಕೊಟ್ಟಿದ್ದಾರೆ— "**ಲಿಂಗಾಭಾಸಜನ್ಯಪ್ರಮಾಯಾಮಪಿ ಪಕ್ಷತಾವಚ್ಛೇದಕಾವಚ್ಛೇದೇನೈವ ಜ್ಞಾಪ್ಯವತಿ ಪಕ್ಷೇ ಲಿಂಗಜ್ಞಾನಮ್...ಗುಣ ಇತಿ...॥**" ಎಂದು. ಇದನ್ನೇ ತರ್ಕತಾಂಡವದಲ್ಲಿ '**ವಸ್ತುತಃ ಸಾಧ್ಯವ್ಯಾಪ್ಯವತಃ ಪಕ್ಷಸ್ಯ ವ್ಯಾಪ್ಯವತ್ತ್ವೇನ ಜ್ಞಾನಂ ಗುಣಃ ಅಸ್ತು**' ಎಂದು ಅನುವಾದ ಮಾಡಿ ನಿರಾಕರಿಸಲಾಗಿದೆ—

ಹೀಗೆ ಪರಿಷ್ಕಾರ ಮಾಡಿದಾಗ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ವ್ಯಭಿಚಾರವು

# ಈ ಪ್ರಕರಣದ ಸಾರಾಂಶ

ಹಿಂದಿನ ಪ್ರಕರಣದಲ್ಲಿ ಅನಿತ್ಯಪ್ರಮಾಸಾಮಾನ್ಯಕ್ಕೆ ಅನುಗತವಾದ ಒಂದು ಗುಣವಿದೆ, ಎಂದು ಹೇಳುವ ಪ್ರಗಲ್ಭಮಿಶ್ರರು ಮತ್ತು ಯಜ್ಞಪತ್ಯುಪಾಧ್ಯಾಯರ ಮತಗಳನ್ನು ನಿರಾಕರಿಸಲಾಗಿದೆ. ಈಪ್ರಕರಣದಲ್ಲಿ ಪ್ರತ್ಯಕ್ಷಾದಿಪ್ರಮಾಗಳಿಗೆ ಪ್ರತ್ಯೇಕವಾದ, ಅನನುಗತವಾದ ಗುಣಗಳನ್ನು ನಿರಾಸ ಮಾಡಲಾಗಿದೆ. ಇದು ಮಣಿಕಾರನ ಪಕ್ಷ. ಪ್ರತ್ಯಕ್ಷಪ್ರಮಾಕ್ಕೆ ಇಂದ್ರಿಯಾರ್ಥಸನ್ನಿಕರ್ಷವು ಮತ್ತು ವಿಷಯವು ಗುಣ. ಅನುಮಿತಿ ಪ್ರಮಾಕ್ಕೆ ಯಥಾರ್ಥಲಿಂಗ ಪರಾಮರ್ಶವು ಗುಣ. ಶಾಬ್ದಪ್ರಮಾಕ್ಕೆ ಯಥಾರ್ಥವಾಕ್ಯಾರ್ಥಜ್ಞಾನವು ಗುಣ. ಇವುಗಳನ್ನು ಕ್ರಮವಾಗಿ ಈ ಪ್ರಕರಣದಲ್ಲಿ ನಿರಾಕರಣೆ ಮಾಡಲಾಗಿದೆ.

**ಪ್ರತ್ಯಕ್ಷಪ್ರಮಾಹೇತುಗುಣನಿರಾಸ—** ಪ್ರತ್ಯಕ್ಷಪ್ರಮಾಕ್ಕೆ ಇಂದ್ರಿಯಾರ್ಥಸನ್ನಿಕರ್ಷವಾಗಲಿ, ವಿಷಯ(ಅರ್ಥ)ವಾಗಲೀ ಗುಣ ಎಂದು ಹೇಳಲು ಆಗುವುದಿಲ್ಲ. ಶುಕ್ತಿಯನ್ನು ನೋಡಿ 'ಇದಂ ರಜತಮ್' ಎಂಬ ಭ್ರಮೆ ಬರುವಾಗ ಸನ್ನಿಕರ್ಷವೂ ಇದೆ, ವಿಷಯವೂ ಇದೆ. ಆದರೂ ಶುಕ್ತಿಯ ಶುಕ್ತಿತ್ವೇನ ಪ್ರಮಾ ಇಲ್ಲ. ವ್ಯಭಿಚಾರದೋಷ. ಕಾಚಾದಿ ದೋಷವು ಪ್ರತಿಬಂಧಕವಾದುದರಿಂದ ಸನ್ನಿಕರ್ಷ– ವಿಷಯಗಳು ಇದ್ದರೂ ಪ್ರಮಾ ಬರುವುದಿಲ್ಲ, ಎನ್ನುವುದಾದರೆ, ಹಾಗಾದರೆ, ಪ್ರತ್ಯಕ್ಷಪ್ರಮಾಕ್ಕೆ ದೋಷಾಭಾವವೇ ಗುಣವಾಗಲಿ. ದೋಷವಿದ್ದಾಗ ಇಂದ್ರಿಯಗಳಿಂದ ಅಯಥಾರ್ಥಜ್ಞಾನ ಬರುತ್ತದೆ, ದೋಷವಿಲ್ಲದಿದ್ದಾಗ ಯಥಾರ್ಥಜ್ಞಾನ ಹುಟ್ಟುತ್ತದೆ, ಎಂದೇ ಹೇಳಬಹುದು. ಗುಣದ ಕಲ್ಪನೆಯ ಅಗತ್ಯವೇ ಇಲ್ಲ. ಹೀಗೆ ಅನ್ವಯ ವ್ಯಭಿಚಾರವಿರುವುದರಿಂದ ಸನ್ನಿಕರ್ಷ ಅಥವಾ ವಿಷಯಗಳು ಪ್ರತ್ಯಕ್ಷಪ್ರಮಾಕ್ಕೆ ಗುಣಗಳಲ್ಲ.

ವ್ಯತಿರೇಕ ವ್ಯಭಿಚಾರವೂ ಇದೆ— ಯೋಗಿಗಳಿಗೆ ಅತೀತ–ಅನಾಗತವಸ್ತುಗಳ ಪ್ರತ್ಯಕ್ಷವು ಬರುತ್ತದೆ. ನಮಗೂ 'ಸೋಽಯಂ ಘಟಃ' ಎಂಬ ಪ್ರತ್ಯಭಿಜ್ಞಾ ಹುಟ್ಟುತ್ತದೆ. ಯೋಗಿ ಪ್ರತ್ಯಕ್ಷದಲ್ಲಿ ಲೌಕಿಕ ಸನ್ನಿಕರ್ಷಗಳೂ ಇಲ್ಲ, ವಿಷಯವೂ ಇಲ್ಲ. ಪ್ರತ್ಯಭಿಜ್ಞಾದಲ್ಲೂ ತತ್ತಾಂಶದಲ್ಲಿ ಸನ್ನಿಕರ್ಷ ಇಲ್ಲ. ಆದರೂ ಪ್ರತ್ಯಕ್ಷಪ್ರಮಾ ಬರುತ್ತದೆ. ಆದ್ದರಿಂದ ವ್ಯಭಿಚಾರ. ಯೋಗಿ ಪ್ರತ್ಯಕ್ಷಕ್ಕೆ ಲೌಕಿಕ ಷಡ್ವಿಧ–ಸನ್ನಿಕರ್ಷಗಳು ಕಾರಣವಲ್ಲದಿದ್ದರೂ ಯೋಗಲಬ್ಧ ಸಾಮರ್ಥ್ಯ ವಿಶೇಷವೇ ಸನ್ನಿಕರ್ಷ. ತತ್ತಾಂಶದಲ್ಲಿ ಸಂಸ್ಕಾರವು ಸನ್ನಿಕರ್ಷ. ಆದ್ದರಿಂದ ವ್ಯಭಿಚಾರ ಇಲ್ಲ, ಎಂದು ಸಮಾಧಾನ ಹೇಳುವುದಾದರೆ, ಭ್ರಮೆಯಲ್ಲೂ ದೋಷವೇ ಸನ್ನಿಕರ್ಷವೆಂದು ಹೇಳಬಹುದು. ಆಗ ಗುಣಜನ್ಯವಾದುದರಿಂದ ಭ್ರಮೆಯೂ ಪ್ರಮಾ ಆಗಬೇಕಾದೀತು.

ಹೀಗೆ, ಪ್ರಮಾತ್ಮಕ ಪ್ರತ್ಯಕ್ಷಸಾಮಾನ್ಯಕ್ಕೆ ಅನುಗತವಾದ ಒಂದು ಗುಣ ಇಲ್ಲ.

**ಅನುಮಿತಿಹೇತುಗುಣನಿರಾಸ—** ಅನುಮಿತಿ ಪ್ರಮಾಕ್ಕೆ ಯಥಾರ್ಥಲಿಂಗಪರಾಮರ್ಶವು ಗುಣ, ಎಂದು ಮಣಿಗ್ರಂಥದಲ್ಲಿ ಹೇಳಲಾಗಿದೆ. ಪರಾಮರ್ಶವು ಯಥಾರ್ಥವಾದರೆ ಅದರಿಂದ

ಜನ್ಯವಾದ ಅನುಮಿತಿಯೂ ಪ್ರಮಾತ್ಮವೇ ಆಗಿರುತ್ತದೆ, ಎಂದು ನೈಯಾಯಿಕರ ಅಭಿಪ್ರಾಯ. ಇದರ, ಇನ್ನೊಂದು ಮುಖದ ಅರ್ಥ-ಪರಾಮರ್ಶವು ಭ್ರಮಾತ್ಮಕವಾದರೆ ಅನುಮಿತಿಯೂ ಭ್ರಮೆಯಾಗಬೇಕು. ಆದರೆ, ಹೀಗಿಲ್ಲ. ಕೆಲವೊಮ್ಮೆ ಭ್ರಮಾತ್ಮಕವಾದ ಪರಾಮರ್ಶದಿಂದಲೂ ಪ್ರಮಾತ್ಮಕವಾದ ಅನುಮಿತಿಯೂ ಬರುವುದಿದೆ. ಉದಾಹರಣೆಗೆ—ಪರ್ವತದಲ್ಲಿ ಬಾಷ್ಪನೋಡಿ ಅದನ್ನು ಧೂಮ ಎಂದು ಭ್ರಮಿಸಿದಾಗ ವಹ್ನಿವ್ಯಾಪ್ಯ-ಧೂಮವಾನ್ ಪರ್ವತಃ, ಎಂಬ ಪರಾಮರ್ಶ ಹುಟ್ಟುತ್ತದೆ. ಈ ಪರಾಮರ್ಶವು ಭ್ರಮಾತ್ಮಕವಾಗಿದೆ. ಆದರೆ, ಪರ್ವತದಲ್ಲಿ ವಹ್ನಿಯು ಇರುವುದರಿಂದ, ಇದರಿಂದ ಹುಟ್ಟಿದ ಅನುಮಿತಿ ಪ್ರಮಾತ್ಮಕವಾಗುತ್ತದೆ. ಇಲ್ಲಿ ಗುಣ ಇಲ್ಲ, ಅನುಮಿತಿ ಪ್ರಮಾ ಆಗಿದೆ. ಆದ್ದರಿಂದ ವ್ಯತಿರೇಕ ವ್ಯಭಿಚಾರ.

ಇದಕ್ಕೆ ಹೀಗೆ ಸಮಾಧಾನ ಹೇಳಬಹುದು– ಅನುಮಿತಿ ಬಂದಿರುವ ವ್ಯಕ್ತಿಗೆ ಯಥಾರ್ಥಪರಾಮರ್ಶ ಇಲ್ಲದಿದ್ದರೂ ಈಶ್ವರನಿಗೆ ಯಥಾರ್ಥವಾದ ಪರಾಮರ್ಶ ಇದೆ. ಈಶ್ವರ ಜ್ಞಾನವು ಸಕಲಕಾರ್ಯಗಳಿಗೂ ಕಾರಣ. ಅವನ ಯಥಾರ್ಥಪರಾಮರ್ಶದಿಂದ ಅನುಮಿತಿ ಹುಟ್ಟಿದೆ, ಗುಣಜನ್ಯವಾಯಿತು, ಪ್ರಮಾತ್ಮಕವಾಗುತ್ತದೆ, ಎಂದು.

ಇದು ಸರಿಯಲ್ಲ. ಈಶ್ವರನ ಪರಾಮರ್ಶ ವ್ಯಧಿಕರಣ, ಅನುಮಿತಿ ಬರುವ ವ್ಯಕ್ತಿಯಲ್ಲಿ ಇರುವ ಪರಾಮರ್ಶ ಸಮಾನಾಧಿಕರಣ. ಅದು ಭ್ರಮಾತ್ಮಕ. ಸಮಾನಾಧಿಕರಣ ಭ್ರಮರೂಪ ದೋಷಜನ್ಯವಾದುದರಿಂದ ಪರ್ವತಃ ವಹ್ನಿಮಾನ್, ಎಂಬ ಅನುಮಿತಿಯು ಭ್ರಮಾತ್ಮಕವೂ ಆಗಬೇಕಾದೀತು. ಅಲ್ಲದೆ, ಈಶ್ವರಜ್ಞಾನವು ಸರ್ವಕಾರ್ಯಗಳಿಗೂ ಸಾಧಾರಣಕಾರಣ. ಪ್ರಕೃತ ಪ್ರಮಾಕ್ಕೆ ಗುಣರೂಪವಾದ ವಿಶೇಷಕಾರಣಬೇಕು. ಅಷ್ಟೇ ಅಲ್ಲ, ಅದು ಉಪಾದಾನಗೋಚರ ಅಪರೋಕ್ಷ ಜ್ಞಾನತ್ವೇನ ಕಾರಣ. ಯಥಾರ್ಥ-ಪರಾಮರ್ಶತ್ವೇನ ಕಾರಣವೂ ಅಲ್ಲ. ಹಾಗಿದ್ದರೂ ಅದನ್ನು ಗುಣವೆಂದು ಪರಿಗಣಿಸುವುದಾದಲ್ಲಿ ಭ್ರಮೆಯೂ ಈಶ್ವರಜ್ಞಾನರೂಪ ಗುಣಜನ್ಯವಾದುದರಿಂದ ಪ್ರಮಾ ಆದೀತು. ಹೀಗೆ ಈ ಪಕ್ಷಕ್ಕೆ ಅನೇಕ ದೋಷಗಳನ್ನು ಹೇಳಿ ಇದು ತೀರಾ ಅಸಮರ್ಪಕವಾದ ಸಮಾಧಾನ, ಎಂದು ತೋರಿಸಲಾಗಿದೆ.

ಮಣಿಕಾರ, ಯಾದೃಚ್ಛಿಕಾನುಮಿತಿಪ್ರಮಾದಲ್ಲಿ ಯಥಾರ್ಥಪರಾಮರ್ಶ ಎಂಬ ಗುಣ ಇಲ್ಲ, ಎಂದು ವ್ಯಭಿಚಾರಶಂಕೆಯನ್ನು ಮಾಡಿದ್ದಾನೆ. ಸಮಾಧಾನ ಕೊಡಲಿಲ್ಲ. ರುಚಿದತ್ತಮಿಶ್ರರು ವ್ಯಾಖ್ಯಾನದಲ್ಲಿ ಇದಕ್ಕೆ ಹೀಗೆ ಸಮಾಧಾನ ಕೊಟ್ಟಿದ್ದಾರೆ— "**ಲಿಂಗಾಭಾಸಜನ್ಯಪ್ರಮಾಯಾಮಪಿ ಪಕ್ಷತಾವಚ್ಛೇದಕಾವಚ್ಛೇದೇನೈವ ಜ್ಞಾಪ್ಯವತಿ ಪಕ್ಷೇ ಲಿಂಗಜ್ಞಾನಮ್...ಗುಣ ಇತಿ...॥**" ಎಂದು. ಇದನ್ನೇ ತರ್ಕತಾಂಡವದಲ್ಲಿ '**ವಸ್ತುತಃ ಸಾಧ್ಯವ್ಯಾಪ್ಯವತಃ ಪಕ್ಷಸ್ಯ ವ್ಯಾಪ್ಯವತ್ವೇನ ಜ್ಞಾನಂ ಗುಣಃ ಅಸ್ತು**' ಎಂದು ಅನುವಾದ ಮಾಡಿ ನಿರಾಕರಿಸಲಾಗಿದೆ—

ಹೀಗೆ ಪರಿಷ್ಕಾರ ಮಾಡಿದಾಗ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ವ್ಯಭಿಚಾರವು

ಪರಿಹಾರವಾಗುತ್ತದೆ. ಅಲ್ಲಿ ಪಕ್ಷವು ವಸ್ತುತಃ ವ್ಯಾಪ್ಯವತ್ತಾಗಿದೆ. ಧೂಮರೂಪವಾದ ವ್ಯಾಪ್ಯವು ಇಲ್ಲದಿದ್ದರೂ ಆಲೋಕರೂಪವಾದ ವ್ಯಾಪ್ಯವು ಪರ್ವತದಲ್ಲಿ ಇದೆ. ವ್ಯಾಪ್ಯವತ್ತಾದ ಪರ್ವತದಲ್ಲಿ ವ್ಯಾಪ್ಯವಾದ ಧೂಮಜ್ಞಾನವು ಇದೆ. ಗುಣ ಇರುವುದರಿಂದ ಪ್ರಮಾತ್ಮಕವಾದ ಅನುಮಿತಿ ಬಂದಿದೆ. ಆದರೆ, ಇಂತಹ ಗುಣ ಇದ್ದರೂ ಕೆಲವೊಮ್ಮೆ ಭ್ರಮಾತ್ಮಕವಾದ ಅನುಮಿತಿಯೂ ಬರುತ್ತದೆ. ಉದಾಹರಣೆಗೆ- ಉತ್ಪತ್ತಿಕಾಲೀನಃ ಘಟಃ ಗಂಧವಾನ್ ಪೃಥಿವೀತ್ವಾತ್, ಎಂದು ಅನುಮಾನ ಮಾಡಿದಾಗ ಗಂಧವ್ಯಾಪ್ಯವಾದ ಪೃಥಿವೀತ್ವವು ಘಟದಲ್ಲಿ ಇದೆ. ಹೀಗೆ ವ್ಯಾಪ್ಯವತ್ತಾದ ಘಟದಲ್ಲಿ ವ್ಯಾಪ್ಯವತ್ತ್ವೇನ ಜ್ಞಾನವು ಇದೆಯಾದರೂ ಅದರಿಂದ ಹುಟ್ಟುವ ಅನುಮಿತಿ ಮಾತ್ರ ಭ್ರಮಾತ್ಮಕವಾಗಿದೆ. ಉತ್ಪತ್ತಿಕ್ಷಣದಲ್ಲಿ ಘಟದಲ್ಲಿ ಗಂಧ ಇಲ್ಲ, ಆದ್ದರಿಂದ ಅನ್ವಯವ್ಯಭಿಚಾರ.

ಇದಕ್ಕೆ ರುಚಿದತ್ತಮಿಶ್ರರು ಹೀಗೆ ಪರಿಹಾರ ಹೇಳಿದ್ದಾರೆ— ವಸ್ತುತಸ್ತು ಅಬಾಧಿತತತ್ತ್ವಪ್ರಮಾ ತತ್ರ ಗುಣಃ, ಎಂದು. ಹಿಂದೆ ಹೇಳಿದ ಅನುಮಾನದಲ್ಲಿ ಬಾಧಪ್ರಮಾ ಇದೆ. ಅಭಾದಿತತತ್ವಪ್ರಮಾ ಇಲ್ಲ, ಗುಣ ಇಲ್ಲ. ವ್ಯಭಿಚಾರವು ಪರಿಹೃತವಾಯಿತು. ಇದನ್ನೂ ವ್ಯಾಸರಾಜರು ನಿರಾಕರಿಸಿದ್ದಾರೆ. ಅಬಾಧಿತತತ್ವಪ್ರಮಾ ಗುಣಃ ಎಂದು ಕಲ್ಪನೆ ಮಾಡುವುದಕ್ಕಿಂತ 'ಬಾಧಾಭಾವಃ ಗುಣಃ' ಎಂದು ಹೇಳುವುದು ಲಾಘವ. ಅನುಮಿತ್ಯಾದಿ ಸಕಲಜ್ಞಾನಗಳಿಗೂ ಬಾಧಜ್ಞಾನವು ಪ್ರತಿಬಂಧಕ. ತದಭಾವವು ಕಾರಣ, ಎಂದು ಸಿದ್ಧ. ಅದನ್ನೇ ಅನುಮಿತಿಗೆ ಕಾರಣ ಎಂದು ಹೇಳುವುದು ಬಿಟ್ಟು ಅಬಾಧಿತತತ್ವಪ್ರಮಾಗುಣಃ ಎಂದು ಏಕೆ ಕಲ್ಪನೆ ಮಾಡಬೇಕು? ಬಾಧಾಭಾವವೇ ಗುಣವಾಗಲಿ, ಎಂದು ಇಷ್ಟಾಪತ್ತಿಯನ್ನು ತಾರ್ಕಿಕರು ಹೇಳುವಂತಿಲ್ಲ, ಬಾಧ ಎಂದರೆ ಜ್ಞಾನವಿಷಯದ ಅಭಾವ. ಬಾಧಾಭಾವ ಎಂದರೆ ವಿಷಯಸತ್ವ. ಹೀಗೆ ಬಾಧಾಭಾವವು ವಿಷಯಸತ್ವದಲ್ಲಿ ಪರ್ಯವಸಾನ ವಾಗುವುದರಿಂದ ವಿಷಯಸತ್ವಘಟಿತವಾದ ಪ್ರಮಾಕ್ಕೆ ಅದು ಕಾರಣವಲ್ಲ, ಹೀಗೆ, ಅನುಮಿತಿಗೂ ಅನುಗತವಾದ ಗುಣ ಇಲ್ಲ.

**ವಾಕ್ಯಪ್ರಮಾಹೇತು-ಅನುಗತಗುಣಭಂಗ**—ವಾಕ್ಯಜನ್ಯ ಪ್ರಮಾತ್ಮಕ ಶಾಬ್ದಬೋಧಕ್ಕೆ ಯಥಾರ್ಥವಾದ ವಾಕ್ಯಾರ್ಥಜ್ಞಾನವೇ ಗುಣ. ಆದರೆ, ಇಂತಹ ಗುಣ ಪ್ರತಾಕರಕೋಕ್ತವಾದ ಮತ್ತು ಶುಕೋಕ್ತವಾದ ಯಾದೃಚ್ಛಿಕ ಸಂವಾದಿವಾಕ್ಯದಲ್ಲಿ ಇಲ್ಲ. ಅಲ್ಲಿ ವಕ್ತೃವಿಗೆ ಯಥಾರ್ಥಜ್ಞಾನವೇ ಇಲ್ಲ, ಆದರೂ ಈಶ್ವರನ ಯಥಾರ್ಥಜ್ಞಾನವೇ ಅಲ್ಲಿ ಗುಣ. ಇದು ಪ್ರಾಚೀನ ನೈಯಾಯಿಕರ (ಉದಯನಾಚಾರ್ಯ) ಸಿದ್ಧಾಂತ. ಮಣಿಕಾರ ಇದನ್ನು ಉಲ್ಲೇಖ ಮಾಡಿದ್ದಾನೆ– **''ಭ್ರಾಂತಪ್ರತಾರಕವಾಕ್ಯೇ ಶುಕಾದಿವಾಕ್ಯೇ ಚ ಪ್ರಮಾಣಶಬ್ದತ್ವೇನ ಆಪ್ತೋಕ್ತತ್ವಾತ್ ವೇದವತ್ ಈಶ್ವರಸ್ಯೈವ ಯಥಾರ್ಥವಾಕ್ಯಾರ್ಥಜ್ಞಾನಂ ಜನಕಂ। ತಸ್ಯ ಕಾರ್ಯಮಾತ್ರೇ ಕರ್ತೃತ್ವಾತ್।''** ಆದರೆ, ಈಶ್ವರಜ್ಞಾನವು ವ್ಯಧಿಕರಣ. ಸಮಾನಾಧಿಕರಣವಾದದು ವಾಕ್ಯಾರ್ಥಭ್ರಮೆ. ಆದ್ದರಿಂದ ಆ ವಾಕ್ಯದಿಂದ ಹುಟ್ಟಿದ ಜ್ಞಾನವು ಭ್ರಮೆಯೂ ಏಕಾಗಬಾರದು?

**ಮಣಿಕಾರನ ಸಿದ್ಧಾಂತ**— ಶಾಬ್ದಪ್ರಮಾಕ್ಕೆ ಯೋಗ್ಯತಾದಿಗಳು ಅಥವಾ ಯೋಗ್ಯತಾದಿಗಳ

ಯಥಾರ್ಥಜ್ಞಾನವು ಗುಣ. ಇದನ್ನು 'ಅತ್ರೋಚ್ಯತೇ' ಎಂದು ಮಣಿಯಲ್ಲಿ ಹೇಳಿ— **ಶಾಬ್ದಪ್ರಮಾಯಾಂ ಲೋಕೇ ವಕ್ತುಃ ಯಥಾರ್ಥಜ್ಞಾನಂ ನ ಗುಣಃ। ಕಿಂತು ಯೋಗ್ಯತಾದಿಕಂ ಯಥಾರ್ಥ ತಜ್ಞಾನಂ ವಾ ಲಾಘವಾತ್, ಆವಶ್ಯಕತ್ವಾಚ್ಚ। ಭ್ರಮ-ಪ್ರಮಾದ-ವಿಪ್ರಲಿಪ್ಸಾಜನ್ಯೇ ವಾಕ್ಯೇ ವಿಸಂವಾದಿನಿ ನ ಯಥಾರ್ಥಯೋಗ್ಯತಾಜ್ಞಾನಂ, ವಾಕ್ಯಾರ್ಥಸ್ಯ ಬಾಧಿತತ್ವಾತ್ ।''**

ಇದು ಸರಿಯಲ್ಲ, ವಸ್ತುತಃ ಇಂತಹ ಯೋಗ್ಯತಾಜ್ಞಾನವು ಶಾಬ್ದಪ್ರಮಾಕ್ಕೆ ಕಾರಣ ಎಂದು ಒಪ್ಪಿಕೊಂಡರೂ ವೇದಾಪೌರುಷೇಯತ್ವಕ್ಕೆ ಬಾಧಕವೇನೂ ಇಲ್ಲ. ಆದರೂ, ಇದನ್ನು ಕಾರಣ ಎಂದು ಹೇಳುವುದು ಸರಿಯಲ್ಲ. ಏಕೆಂದರೆ, ಏಕಪದಾರ್ಥದಲ್ಲಿ ಅಪರಪದಾರ್ಥಸಂಸರ್ಗವೇ ಯೋಗ್ಯತಾ. ಇದೇ ವಾಕ್ಯಾರ್ಥವೂ ಆಗಿದೆ. ಆದ್ದರಿಂದ ಯೋಗ್ಯತಾಪ್ರಮಾ ಎಂದರೂ ಶಾಬ್ದಪ್ರಮಾ ಎಂದರೂ ಎರಡೂ ಒಂದೆ. ತನಗೆ ತಾನು ಕಾರಣವಾಗುವುದು ಹೇಗೆ?

ಮಣಿಕಾರ ಶಬ್ದಪ್ರಕರಣದಲ್ಲಿ ಯೋಗ್ಯತಾವ್ಯಾಪ್ಯವಾದ ಧರ್ಮವಿಶೇಷಗಳೆರಡನ್ನು ಯೋಗ್ಯತೆ, ಎಂದು ಹೇಳಿದ್ದಾನೆ. ಆದರೆ, ಅಂತಹ ಯೋಗ್ಯತೆ ಇಲ್ಲದಿರಲು ವಾಕ್ಯದೋಷವು ಕಾರಣ. ವಾಕ್ಯದಲ್ಲಿ ದೋಷವು ಇಲ್ಲದಿದ್ದಲ್ಲಿ ಯೋಗ್ಯತೆಯು ಇರುತ್ತದೆ. ಹೀಗಿದ್ದಮೇಲೆ ಯೋಗ್ಯತೆ ಬರಲು ಅಗತ್ಯವಾದ ನಿರ್ದೋಷತ್ವವೇ ಅಥವಾ ಅದರ ಜ್ಞಾನವೇ ಗುಣ ಎಂದು ಹೇಳುವುದು ಉಚಿತ. ಅಂತಹ ಗುಣವು ಪ್ರಮಾಕ್ಕೆ ಕಾರಣವಾದರೂ ಸ್ವತಸ್ತ್ವಭಂಗವಾಗುವುದಿಲ್ಲ. ಸ್ವತಸ್ತ್ವವಾದಿಗಳೂ **'ನಿರ್ದೋಷಃ ಶಬ್ದಃ ಆಗಮಃ'** ಎಂದೇ ಒಪ್ಪಿರುತ್ತಾರೆ.

ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿಬಂಧಕ.ಪ್ರತಿಬಂಧಕಾಭಾವವು ಕಾರ್ಯಹೇತು. ಅಯೋಗ್ಯತಾ ಜ್ಞಾನ ಎಂದರೆ, ಅಸಂಸರ್ಗಪ್ರಮಾ. ತದಭಾವ ಅಥವಾ ತದಭಾವಜ್ಞಾನವು ಗುಣ, ಎಂದು ನೈಯಾಯಿಕರಲ್ಲಿ ಕೆಲವರು ಹೇಳುತ್ತಾರೆ. ಆದರೆ, ಇದೂ ಗುಣವಲ್ಲ. ಶಾಬ್ದಬೋಧ ಬರುವ ಮೊದಲು ಈ ಜ್ಞಾನವು ಅನಿವಾರ್ಯವಲ್ಲ. ಆದ್ದರಿಂದ, ಈ ವಾಕ್ಯದ ಅರ್ಥಗಳಿಗೆ ಅನನ್ವಯ ಇದೆ, ಎಂಬ ಜ್ಞಾನವು ಇಲ್ಲದೇ ಇದ್ದಾಗ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದ ಬಂದಿರುವ ಜ್ಞಾನವು ಅಸಂಸರ್ಗಪ್ರಮಾಭಾವರೂಪ ಗುಣಜನ್ಯವಾದುದರಿಂದ ಪ್ರಮಾತ್ಮಕವಾಗಬೇಕಾದೀತು.

ಹೀಗೆ, ಶಾಬ್ದಪ್ರಮಾಕ್ಕೂ ಅನುಗತವಾದ ಗುಣ ಇಲ್ಲ. ಆದ್ದರಿಂದ ಪ್ರಮಾವಿಶೇಷಗಳು ಗುಣಜನ್ಯವಲ್ಲದ ಕಾರಣ, ಪ್ರಮಾಸಾಮಾನ್ಯವೂ ಗುಣಜನ್ಯವಲ್ಲ.

**ನ್ಯಾಯದೀಪದಲ್ಲಿ ವಿಶೇಷ**—ತರ್ಕತಾಂಡವದಲ್ಲಿ ಹೇಳಿರುವ ದೋಷಕ್ಕೆ ಅನಂತರ ಬಂದ ತಾರ್ಕಿಕರು ಹೇಳಿರುವ ಆಕ್ಷೇಪಗಳನ್ನೂ ಅನುವಾದ ಮಾಡಿ ರಾಯರು ಈ ಪ್ರಕರಣದಲ್ಲಿ ನಿರಾಸಮಾಡಿದ್ದಾರೆ–

1. ಯಾದೃಚ್ಛಿಕಪ್ರಮಾತ್ಮಕವಾದ ಅನುಮಿತಿಗೆ ಈಶ್ವರಗತಯಥಾರ್ಥಪರಾಮರ್ಶವು ಗುಣ ಎಂಬ ಪಕ್ಷಕ್ಕೆ ತರ್ಕತಾಂಡವದಲ್ಲಿ ಹೀಗೆ ದೋಷ ಹೇಳಲಾಗಿದೆ—ವ್ಯಧಿಕರಣ ಪ್ರಮಾ ಗುಣವಾದಂತೆ

ಭ್ರಮಾತ್ಮಕಾನುಮಿತಿಗೆ ವ್ಯಧಿಕರಣವಾದ, ಈಶ್ವರಗತವಾದ ಭ್ರಮಾತ್ಮಕ ಪರಾಮರ್ಶವೇ ಕಾರಣವಾಗಲಿ, ಆದರಿಂದ ಈಶ್ವರನಿಗೆ ನಿತ್ಯಪ್ರಮೇಯಂತೆ ನಿತ್ಯಭ್ರಮೆಯೂ ಸಿದ್ಧವಾಗಲಿ, ಎಂದು ಆಪಾದಿಸಲಾಗಿದೆ. ಇದರ ಮೇಲೆ ತಾರ್ಕಿಕರ ಸಮಾಧಾನವನ್ನು ರಾಯರು ಹೀಗೆ ಅನುವಾದ ಮಾಡಿದ್ದಾರೆ. ಅನುಮಿತಿಯು ಭ್ರಮಾತ್ಮಕವಾಗಲು ಭ್ರಮೆ ಬರುವ ವ್ಯಕ್ತಿಯಲ್ಲೇ ದೋಷವಿರುವಾಗ ಈಶ್ವರಗತವಾದ ವ್ಯಧಿಕರಣದೋಷಕ್ಕೆ ಕಾರಣತ್ವವನ್ನು ಕಲ್ಪನೆ ಮಾಡುವುದು ಸರಿಯಲ್ಲ, 'ಸತಿ ಸಂಭವೇ ತ್ಯಾಗಾಯೋಗಾತ್' ಎಂದು. ಇದಕ್ಕೆ ರಾಯರು ಹೇಳಿದ ದೋಷ-ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧವಾನ್, ಎಂಬಲ್ಲಿ ಅನುಮಿತಿಯು ಭ್ರಮೆ. ಅಲ್ಲಿ ಅನುಮಾನ ಪ್ರಯೋಕ್ತೃವಿಗೆ ಯಥಾರ್ಥ ಪರಮಾರ್ಶರೂಪವಾದ ಗುಣವಿದ್ದರೂ ಅನುಮಿತಿಯು ಭ್ರಮೆಯಾಗಿದೆ. ಆದಕ್ಕೆ ವ್ಯಧಿಕರಣವಾದ ಈಶ್ವರೀಯ ಭ್ರಮಾತ್ಮಕ ಪರಾಮರ್ಶವು ಕಾರಣ ಎಂದು ಕಲ್ಪನೆ ಮಾಡಬೇಕು. ಅಲ್ಲಿ ಅದು ಅನಿವಾರ್ಯವಾದ ಮೇಲೆ ಸರ್ವತ್ರ ಈಶ್ವರಗತವಾದ ಭ್ರಮೆಯೇ ದೋಷವೆಂದು ಕಲ್ಪಿಸಬೇಕು.

2. ವಸ್ತುತಃ ವ್ಯಾಪ್ಯವತಿ ಪಕ್ಷೇ ವ್ಯಾಪ್ಯವತ್ತಾಜ್ಞಾನಂ ಗುಣಃ, ಎಂಬ ಪಕ್ಷಕ್ಕೆ ಗಂಧಪ್ರಾಗಭಾವಾವಚ್ಛಿನ್ನ ಘಟಪಕ್ಷಕಾನುಮಾನದಲ್ಲಿ ಅಂತಹ ಗುಣವಿದ್ದರೂ ಪ್ರಮಾತ್ಮಕಾನುಮಿತಿ ಬರುವದಿಲ್ಲ, ಎಂದು ವ್ಯಭಿಚಾರವನ್ನು ಹೇಳಲಾಗಿದೆ. ಆದಕ್ಕೆ ರುಚಿದತ್ತಮಿಶ್ರರು ಪಕ್ಷತಾವಚ್ಛೇದಕಾವಚ್ಛೇದೇನ ವ್ಯಾಪ್ಯವತ್ತಾಗಿರಬೇಕು ಪಕ್ಷ, ಎಂದು ಪರಿಷ್ಕರಿಸಿ ಉಕ್ತಸ್ಥಳದಲ್ಲಿ ಗುಣವಿಲ್ಲ ಎಂದು ಪರಿಹಾರ ಹೇಳಿದ್ದಾರೆ. ಈ ಪರಿಹಾರವೂ, ವಸ್ತುತಃ ಅನೇಕಕರ್ತೃಕಪ್ರಾಸಾದದಲ್ಲಿ ಲಾಘವತರ್ಕವಶಾತ್ ಏಕಕರ್ತೃಕತ್ವಾನುಮಿತಿ ಬಂದಾಗ ವ್ಯಭಿಚಾರವಿರುವುದರಿಂದ ಸರಿಯಲ್ಲ, ಎಂದು ನಿರಾಕರಿಸಿದ್ದಾರೆ. ಈ ಸಂದರ್ಭದಲ್ಲೇ ಪಕ್ಷಧರ ಮಿಶ್ರರು ಹೇಳಿದ ಪರಿಹಾರವೂ ಸರಿಯಲ್ಲ ಎಂದು ನ್ಯಾಯದೀಪದಲ್ಲಿ ತೋರಿಸಲಾಗಿದೆ.

## ॥ ಪ್ರಕರಣ – 13 ॥

# ಪ್ರಕರಣ – 14

## ಪ್ರತ್ಯಕ್ಷಪ್ರಮಾದೌ ಭೂಯೋಽವಯವೇಂದ್ರಿಯ ಸನ್ನಿಕರ್ಷಾದೇಃ ಹೇತುತ್ವಭಂಗಃ ॥

### ನ್ಯಾಯದೀಪದಲ್ಲಿ ಅವತಾರಿಕೆ

**ಯತ್ತೂಕ್ತಂ ಮಣೌ ''ತತ್ತತ್–ಪ್ರಮಾಯಾಂ ಭೂಯೋಽವಯವೇಂದ್ರಿಯ ಸನ್ನಿಕರ್ಷ-ಯಥಾರ್ಥಲಿಂಗ–ಸಾದೃಶ್ಯ–ವಾಕ್ಯಾರ್ಥ–ಜ್ಞಾನಾನಾಂ ಯಥಾಯಥಂ ಪ್ರತ್ಯೇಕಮೇವ ಗುಣತ್ವಮ್ । ಅನ್ವಯವ್ಯತಿರೇಕಾತ್ । ತತ್ತದಪ್ರಮಾಯಾಂ ಪಿತ್ತಾದಿ–ಲಿಂಗಭ್ರಮಾದೀನಾಂ ದೋಷತ್ವವತ್ । ಪ್ರತ್ಯಕ್ಷೇ ವಿಶೇಷದರ್ಶನಮಪಿ ಗುಣಃ । ತದನುವಿಧಾನಾತ್'' (ಪು.353) ಇತ್ಯಾದಿ । ತತ್ತಾತ್ಪರ್ಯಮ್ ಆಶಂಕತೇ–ಅಥಾಪಿ ಸ್ಯಾದಿತ್ಯಾದಿನಾ ॥**

ಮಣಿಗ್ರಂಥದಲ್ಲಿ ಹೇಳಿರುವ, ಪ್ರತ್ಯಕ್ಷಪ್ರಮಾದಿಗಳಿಗೆ ಹೇತುವಾದ ಗುಣವನ್ನು ಮೂಲದಲ್ಲಿ ಆಶಂಕೆ ಮಾಡಲಾಗಿದೆ. ಮಣಿಯಲ್ಲಿ ಹೀಗಿದೆ– ಪ್ರತ್ಯಕ್ಷಪ್ರಮಾಕ್ಕೆ, ವಸ್ತುವಿನ ಭೂಯೋಽವಯವಕ್ಕೂ ಇಂದ್ರಿಯಕ್ಕೂ ಆಗುವ ಸನ್ನಿಕರ್ಷವು, ಗುಣ. ಅನುಮಿತಿಗೆ ಯಥಾರ್ಥಲಿಂಗಪರಾಮರ್ಶ, ಉಪಮಿತಿಗೆ ಯಥಾರ್ಥಸಾದೃಶ್ಯಜ್ಞಾನ, ಶಾಬ್ದಪ್ರಮಾಕ್ಕೆ ಯಥಾರ್ಥ–ವಾಕ್ಯಾರ್ಥ ಜ್ಞಾನ, ಇವುಗಳೇ ಅನನುಗತವಾದ ಗುಣಗಳು ಕಾರಣಗಳು. ಇವುಗಳೊಂದಿಗೆ ಅನ್ವಯ–ವ್ಯತಿರೇಕಗಳು ಇರುವುದರಿಂದಾಗಿ ಇವುಗಳು ಪ್ರಮಾಹೇತುಗಳೆಂದು ನಿರ್ಣಯವಾಗುತ್ತದೆ. ಪ್ರತ್ಯಕ್ಷಭ್ರಮೆಗೆ ಪಿತ್ತಾದಿದೋಷಗಳು, ಅನುಮಿತಿಭ್ರಮೆಗೆ ಲಿಂಗಭ್ರಮೆ ಹೀಗೆ ಭ್ರಮೆಗೆ ಅನನುಗತವಾದ ದೋಷವು ಕಾರಣವಾದಂತೆ ಪ್ರಮೆಗೂ ಅನನುಗತವಾದ ಗುಣಗಳೇ ಕಾರಣ. ಅದರಂತೆ, ಸಂಶಯ ಮತ್ತು ಭ್ರಮೆಗಳ ಅನಂತರದಲ್ಲಿ ಹುಟ್ಟುವ ಪ್ರತ್ಯಕ್ಷಕ್ಕೆ ವಿಶೇಷದರ್ಶನವು ಗುಣ. ತದನ್ವಯ–ವ್ಯತಿರೇಕಾನುವಿಧಾನ ಇರುವುದರಿಂದ'' ಇತ್ಯಾದಿಯಾಗಿ. ಇದರ ತಾತ್ಪರ್ಯವನ್ನು ಮೂಲದಲ್ಲಿ ಆಶಂಕೆ ಮಾಡಲಾಗಿದೆ.

**अथापि स्यात्, भ्रमसामान्ये प्रत्यक्षादिभ्रमे वानुगतदोषस्य अभावेऽपि तत्तद्भ्रमविशेषे पित्तादिरिव स्थूलावयविप्रत्यक्षप्रमायां भूयोवयवेन्द्रियसन्निकर्षः, संशयविपर्ययोत्तरप्रत्यक्षप्रमायां विशेष-प्रमा, नियमेन प्रमयोरनुमितिशाब्दप्रतीत्योः सत्यलिङ्गपरामर्श–**

**वाक्यार्थज्ञाने चान्वयव्यतिरेकाभ्यां हेतू । एवं च प्रमाया अप्रमाव्यावृत्ताननुगताधिकहेतुजन्यत्वात् परतस्त्वम् । त एवाननुगता हेतवः प्रमां प्रत्यसाधारणहेतुत्वेन उपधिना गुणा इत्युच्यन्ते ।**

**तस्मात् अनित्यप्रमात्वम् अनित्य-ज्ञानत्वप्रयोजकाधिकप्रयोज्यं, तदन्वयव्यतिरेकानुविधायित्वात् । अप्रमात्ववत् । अन्यथाऽप्रमापि प्रमा स्यात् । न चाप्रमायामधिको दोषो हेतुरस्तीति वाच्यम् । तथात्वे भ्रमस्य प्रमात्वप्रयोजकजन्यत्वे सति अधिकजन्यत्वेन प्रमाविशेषत्वापातात्, इति मम सिद्धान्त-रहस्यमिति चेत् ।**

ಪ್ರತ್ಯಕ್ಷಾದಿ ಸಕಲಭ್ರಮೆಗಳಿಗೂ ಕಾರಣವಾದ ಒಂದು ದೋಷ ಇಲ್ಲ. ಅಥವಾ, ಸಕಲ ಪ್ರತ್ಯಕ್ಷಭ್ರಮೆಗಳಿಗೂ ಅನುಗತವಾದ ಒಂದು ದೋಷವು ಅಪ್ರಾಮಾಣಿಕ. ಹೀಗೆ ಅನುಗತವಾದ ದೋಷಗಳು ಇಲ್ಲದೇ ಹೋದರೂ ಭ್ರಮವಿಶೇಷಕ್ಕೆ ಪಿತ್ತಾದಿ ದೋಷವಿಶೇಷಗಳು ಕಾರಣವಾಗಿರುವಂತೆ ಸಕಲ ಪ್ರಮಾಗಳಿಗೂ ಅನುಗತವಾದ ಒಂದು ಗುಣವಿಲ್ಲದಿದ್ದರೂ ಅನನುಗತವಾದ ಗುಣಗಳಿಂದಲೇ ಪ್ರಮಾತ್ವವನ್ನು ಹೇಳಬಹುದು– ಸ್ಥೂಲವಾದ ಅವಯವ ವಸ್ತುವಿನ ಪ್ರತ್ಯಕ್ಷಕ್ಕೆ ಆ ವಸ್ತುವಿನ ಅನೇಕ–ಅವಯವಗಳೊಂದಿಗೆ ಇಂದ್ರಿಯಕ್ಕೆ ಆಗುವ ಸನ್ನಿಕರ್ಷವು ಗುಣ. ಸಂದೇಹ ಮತ್ತು ಭ್ರಮೆಯ ಅನಂತರದಲ್ಲಿ ಹುಟ್ಟುವ ಪ್ರತ್ಯಕ್ಷಪ್ರಮಾಕ್ಕೆ ಏಕತರಕೋಟಿವ್ಯಾಪ್ಯವತ್ತಾಪ್ರಮಾ ಗುಣ. ಅನುಮಿತಿ ಮತ್ತು ಶಾಬ್ದಜ್ಞಾನಗಳು ನಿಯಮೇನ ಪ್ರಮಾ ಆಗಿರುತ್ತವೆ. ಅನುಮಿತಿ ಪ್ರಮಾಕ್ಕೆ ಸತ್ಯಲಿಂಗ–ಪರಾಮರ್ಶವು ಗುಣ, ಶಾಬ್ದಪ್ರಮಾಕ್ಕೆ ಸತ್ಯವಾಕಾರ್ಥಜ್ಞಾನವು ಗುಣ. ಇವುಗಳಿಗೆ ಅನ್ವಯ–ವ್ಯತಿರೇಕದಿಂದ ಹೇತುತ್ವವು ಸಿದ್ಧವಾಗುತ್ತದೆ.

ಹೀಗೆ ಸಕಲ ಪ್ರಮಾಗಳೂ, ಭ್ರಮೆಗೆ ಕಾರಣವಾಗದ, ಜ್ಞಾನಸಾಮಾನ್ಯಕಾರಣಕ್ಕಿಂತ ಅಧಿಕವಾದ ಹೇತುವಿನಿಂದ ಜನ್ಯವಾಗಿರುವುದರಿಂದ ಪ್ರಾಮಾಣ್ಯಂ ಪರತಃ. ಈ ಅಧಿಕ ಹೇತುಗಳೇ ಪ್ರಮಾಕ್ಕೆ ಅಸಾಧಾರಣಕಾರಣಗಳಾದುದರಿಂದ ಗುಣಗಳೆನಿಸುತ್ತವೆ. ಆದ್ದರಿಂದ ಪರತಸ್ತ್ವ ಸಾಧಕವಾದ ಅನುಮಾನದ ಸ್ವರೂಪ ಹೀಗಾಗುತ್ತದೆ.

**ಪಕ್ಷ**–ಅನಿತ್ಯಪ್ರಮಾತ್ವವು

**ಸಾಧ್ಯ**–ಅನಿತ್ಯಜ್ಞಾನತ್ವ–ಪ್ರಯೋಜಕ–ಅಧಿಕಜನ್ಯವಾಗಿದೆ

**ಹೇತು**– ಆ ಅಧಿಕ ಕಾರಣಗಳ ಅನ್ವಯ ವ್ಯತಿರೇಕಗಳ ಅನುಸರಣೆ ಇರುವುದರಿಂದ.

**ಉದಾಹರಣೆ**–ಅಪ್ರಮಾತ್ವದಂತೆ.

ಒಂದು ವೇಳೆ ಪ್ರಮಾತ್ವಕ್ಕೆ ಭ್ರಮಪ್ರಯೋಜಕಕ್ಕಿಂತ ಅಧಿಕವಾದುದು ಕಾರಣವಾಗದೇ ಇದ್ದರೆ ಭ್ರಮೆಯೂ ಪ್ರಮೆಯಾದೀತು.

ಭ್ರಮೆ ಪ್ರಮೆಯಾಗುವುದಿಲ್ಲ. ಪ್ರಮಾ ದೋಷಜನ್ಯವಲ್ಲ. ಭ್ರಮೆ ದೋಷಜನ್ಯವಾಗಿದೆ. ಆದ್ದರಿಂದ ಅದು ಪ್ರಮೆಯಾಗುವುದು ಹೇಗೆ? ಹಾಗಾದರೆ, ಭ್ರಮೆಗೆ ಪ್ರಮಾತ್ವಪ್ರಯೋಜಕವಾದ ಮನಃಸನ್ನಿಕರ್ಷಾದಿಗಳೂ ಪ್ರಯೋಜಕ, ಅಧಿಕವಾದ ದೋಷವೂ ಪ್ರಯೋಜಕ. ಹೀಗಿದ್ದರೆ, ಭ್ರಮೆಯು ಪ್ರಮಾವಿಶೇಷವಾದೀತು. ಪ್ರಮಾಪ್ರಯೋಜಕಪ್ರಯೋಜ್ಯವಾದುದರಿಂದ ಅದು ಪ್ರಮಾ. ತದಧಿಕಪ್ರಯೋಜ್ಯವಾದುದರಿಂದ ವಿಶೇಷಪ್ರಮಾ. ಈ ಆಪತ್ತಿಯ ಪರಿಹಾರಕ್ಕಾಗಿ ಪ್ರಮಾಗುಣಜನ್ಯ, ಭ್ರಮೆ ದೋಷಜನ್ಯ ಎಂಬ ವ್ಯವಸ್ಥೆಯನ್ನು ಒಪ್ಪಬೇಕಾಗುತ್ತದೆ. ಇದು ನೈಯಾಯಿಕರ ಸಿದ್ಧಾಂತರಹಸ್ಯ.

## ನ್ಯಾಯದೀಪ

**ಸಂಶಯೇತಿ॥ ಸಂಶಯೋತ್ತರ–ವಿಪರ್ಯಯೋತ್ತರೇತ್ಯರ್ಥಃ । ವಿಶೇಷೇತಿ ॥ ವ್ಯಾಪ್ಯೇತ್ಯರ್ಥಃ । ಪ್ರಮಯೋರಿತಿ ಪ್ರತೀತ್ಯೋಃ ವಿಶೇಷಣಮ್। ತಾವತಾ ಕಥಂ ಪ್ರಮಾತ್ವಸ್ಯ ಪರತಸ್ತ್ವಮ್, ಇತ್ಯತ ಆಹ–ಏವಂ ಚೇತಿ ॥ ಉಕ್ತಸನ್ನಿಕರ್ಷಾದೇಃ ಹೇತುತ್ವೇ ಸತಿ ಇತ್ಯರ್ಥಃ । ಗುಣಜನ್ಯತ್ವಾತ್ ಕಥಮ್ ಏತತ್ ಇತ್ಯತ ಆಹ–ತ ಏವೇತಿ ॥ ಅಸಾಧಾರಣೇತಿ ॥ ಭ್ರಮ ವ್ಯಾವೃತ್ತೇತ್ಯರ್ಥಃ ॥**

**ಮಣಿಕೃದಭಿಮತಮ್ ಅನುಮಾನಮಾಹ–ತಸ್ಮಾದಿತಿ ॥ ಉಕ್ತಸನ್ನಿಕರ್ಷಾದೇಃ ಗುಣತ್ವೇನ, ತಜ್ಜನ್ಯತ್ವೇನ ಪ್ರಮಾಯಾಃ ಪರತಸ್ತ್ವಸಂಭವಾತ್ ಪ್ರಯೋಗಃ ಉಚ್ಯತೇ ಇತ್ಯರ್ಥಃ । ತದನ್ವಯೇತಿ–ಉಕ್ತರೂಪಸನ್ನಿಕರ್ಷಾದಿಲಕ್ಷಣಾಧಿಕ ಕಾರಣ ಪರಾಮರ್ಶಃ। ಹೇತೋಃ ಅಪ್ರಯೋಜಕತ್ವನಿರಾಸಾಯ ವಿಪಕ್ಷೇ ಬಾಧಕಮಾಹ–ಅನ್ಯಥೇತಿ ॥ ಅನಿತ್ಯಜ್ಞಾನತ್ವ–ಪ್ರಯೋಜಕಾತ್ಅಧಿಕಾ-ಪ್ರಯೋಜ್ಯತ್ವೇ, ತನ್ಮಾತ್ರಪ್ರಯೋಜ್ಯತ್ವೇ ಇತ್ಯರ್ಥಃ ॥**

**ಆಪಾದಕಾಸಿದ್ಧಿಮಾಶಂಕ್ಯ ಆಹ–ನಚೇತಿ ॥ ಪ್ರಮಾತ್ವಪ್ರಯೋಜಕೇತಿ ॥ ಅನಿತ್ಯೇತಿ ಯೋಜ್ಯಮ್ । ಅನಿತ್ಯಜ್ಞಾನತ್ವಪ್ರಯೋಜಕಸ್ಯೈವ ಅನಿತ್ಯಪ್ರಮಾತ್ವ-ಪ್ರಯೋಜಕತ್ವೇನ ತ್ವದಭಿಮತೇಃ ಇತಿ ಭಾವಃ ।**

ಮಣಿಕಾರನಿಗೆ ವಿವಕ್ಷಿತವಾದ ಅನುಮಾನವನ್ನು ಮೂಲದಲ್ಲಿ ತೋರಿಸಲಾಗಿದೆ. ತಸ್ಮಾತ್ ಎಂದರೆ, ಸನ್ನಿಕರ್ಷಾದಿಗಳು ಪ್ರಮಾತ್ವಪ್ರಯೋಜಕವಾದ ಗುಣವಾದುದರಿಂದ, ಅದರಿಂದ ಜನ್ಯವಾದ ಕಾರಣ ಪ್ರಮಾಣ್ಯಕ್ಕೆ ಪರತಸ್ತ್ವ ಬರುವುದರಿಂದ ಅನುಮಾನ ಪ್ರಯೋಗವನ್ನು

ಮಾಡಬಹುದು, ಎಂದರ್ಥ. ಅನುಮಾನದ ಹೇತು ಅಪ್ರಯೋಜಕ ಎಂಬ ಶಂಕೆಯ ಪರಿಹಾರಕ್ಕಾಗಿ ಮೂಲದಲ್ಲಿ ಅನ್ಯಥಾ, ಎಂದು ಬಾಧಕತರ್ಕವನ್ನು ಹೇಳಲಾಗಿದೆ. ಅನಿತ್ಯಜ್ಞಾನಕ್ಕೆ ಯಾವುದು ಪ್ರಯೋಜಕವೋ ಅದಕ್ಕಿಂತಲೂ ಹೆಚ್ಚಿನ ಕಾರಣದಿಂದ ಪ್ರಮಾವು ಪ್ರಯೋಜ್ಯವಲ್ಲವಾದುದರಿಂದ, ತನ್ಮಾತ್ರಪ್ರಯೋಜ್ಯವಾದರೆ (ಭ್ರಮೆಯೂ ಪ್ರಮಾ ಆದೀತು) ಎಂದು ಅನ್ಯಥಾ ಶಬ್ದದ ಅರ್ಥ.

**मैवम् । भूयोवयवेन्द्रियसन्निकर्षे शङ्खत्वादिविशेषदर्शने च सत्यपि पीतः शङ्खः, इत्यादिभ्रमस्य, वंशे उरगभ्रमस्य बाष्पावयवे धूमावयविभ्रमेऽवयव्यंशे एव भ्रमस्य दर्शनेन अन्वयव्यभिचारात् ।**

ಇದು ಸರಿಯಲ್ಲ, ಪ್ರತ್ಯಕ್ಷಪ್ರಮಾಕ್ಕೆ ಹೇತುವಾದ ಗುಣಕ್ಕೆ ಅನ್ವಯವ್ಯಭಿಚಾರ ಇದೆ– ಶಂಖದ ಭೂಯೋಽವಯವ ಸನ್ನಿಕರ್ಷವಿದ್ದರೂ ಆದರಂತೆ ಶುಕ್ಲತ್ವವ್ಯಾಪ್ಯಶಂಖತ್ವವಾನ್ ಅಯಂ, ಎಂಬ ವಿಶೇಷದರ್ಶನವಿದ್ದರೂ ಪಿತ್ತದೋಷವಿದ್ದರೆ ಪೀತಃ ಶಂಖಃ, ಎಂಬ ಭ್ರಮೆಯೇ ಬರುತ್ತದೆ. ಬಿದಿರಿನ ಕೋಲಿನ ಭೂಯೋವಯವಸನ್ನಿಕರ್ಷವಿದ್ದರೂ, ಕೈಯಿಂದ ಮುಟ್ಟಿ 'ಇದು ಸರ್ಪತ್ವಾಭಾವ ವ್ಯಾಪ್ಯವಂಶತ್ವವಾನ್' ಎನ್ನುವ ಜ್ಞಾನವಿದ್ದರೂ ಮಂಡೂಕವಸಾಂಜನವನ್ನು ಕಣ್ಣಿಗೆ ಹಚ್ಚಿಕೊಂಡಾಗ 'ಇದು ಹಾವು' ಎಂಬ ಭ್ರಮೆ ಬರುತ್ತದೆ. ಬಾಷ್ಪದ ಅವಯವದಲ್ಲಿ 'ಧೂಮ ಇದೆ' ಎಂಬ ಭ್ರಮೆ ಬಂದಾಗ ಅಥವಾ ಬಾಷ್ಪಾವಯವಿಯನ್ನೇ ಹೊಗೆ ಎಂದು ಭ್ರಮಿಸಿದಾಗ ಪೂರ್ವದಲ್ಲಿ ಭೂಯೋಽವಯವ ಸನ್ನಿಕರ್ಷರೂಪ ಗುಣವಿದೆ. ಆದರೂ ಪ್ರಮಾ ಹುಟ್ಟುವ ಬದಲು 'ಅಯಂ ಧೂಮಃ' ಎಂಬ ಭ್ರಮೆಯೇ ಹುಟ್ಟುತ್ತದೆ. ಈ ಎಲ್ಲ ಸಂದರ್ಭಗಳಲ್ಲೂ ಗುಣ ಇದ್ದರೂ ಭ್ರಮೆ ಹುಟ್ಟಿದೆ, ಪ್ರಮಾ ಹುಟ್ಟಿಲ್ಲವಾದ ಕಾರಣ ಅನ್ವಯವ್ಯಭಿಚಾರ.

## ನ್ಯಾಯದೀಪ

**ಇತ್ಯಾದಿಭ್ರಮಸ್ಯೇತಿ ॥ ತಿಕ್ತೋ ಗುಡಃ, ಇತ್ಯಾದಿಃ ಆದಿಪದಾರ್ಥಃ। ವಿಪರೀತಪ್ರತ್ಯಕ್ಷಂ ಗುಣಃ ಇತ್ಯಹ ಆಹ– ವಂಶೇತಿ ॥ ಅನುರಗತ್ವಸ್ಯ, ಸ್ಪರ್ಶನೇ ದರ್ಶನೇ ಭೂಯೋಽವಯವೇಂದ್ರಿಯಸನ್ನಿಕರ್ಷೇ ಸತ್ಯಪಿ ಮಂಡೂಕ-ವಸಾಕ್ತನೇತ್ರಸ್ಯ ಮಂಡೂಕವಸಾದೋಷೇಣ ಜಾಯಮಾನಸ್ಯ ವಂಶೇ ಉರಗಭ್ರಮಸ್ಯ, ಇತ್ಯರ್ಥಃ।**

**ತದಿಂದ್ರಿಯಜ–ಪ್ರತ್ಯಕ್ಷಪ್ರಮಾಯಾಂ ತದಿಂದ್ರಿಯ ವಿಶೇಷದರ್ಶನಂ ಹೇತುರಿತಿ ವಿಶೇಷದರ್ಶನಸ್ಯ ಹೇತುತ್ವೇ, ಭವೇದೇವಂ ವಿಶೇಷವಿವಕ್ಷಾ ತದೇವಾಯುಕ್ತಮ್ ಇತಿ 'ಏವಂ ಭ್ರಮೋತ್ತರ–ಪ್ರಮಾಯಾಮಪಿ' ಇತ್ಯಾದಿನಾ ವಕ್ಷ್ಯಾಮಃ ಇತಿ**

**ಭಾವೇನ ಸ್ಥಲಾಂತರೇಽಪಿ ಉಕ್ತಸನ್ನಿಕರ್ಷಸ್ಯ ವ್ಯಭಿಚಾರಮಾಹ–ಬಾಷ್ಪೇತಿ ॥ ಧೂಮೇತಿ ॥ ಧೂಮರೂಪಾವಯವೀ, ಇತ್ಯರ್ಥಃ। ಯತ್ರ ಸ್ಥೂಲಾವಯವಿಪ್ರತ್ಯಕ್ಷೇ ಭೂಯೋಽವಯವೇಂದ್ರಿಯಸನ್ನಿಕರ್ಷಃ ಗುಣಃ ಇತ್ಯುಕ್ತಂ ತಸ್ಮಿನ್ನೇವ, ಇತಿ ವಿರೋಧಸ್ಫೋರಣಾಯ ಅವಯವ್ಯಂಶೇ ಏವ ಇತ್ಯುಕ್ತಮ್।**

ಪಿತ್ತದೋಷದಿಂದ ಪೀತಃ ಶಂಖಃ, ಎಂಬ ಭ್ರಮೆ, ಆದಿಪದದಿಂದ 'ತಿಕ್ತಃ ಗುಡಃ' ಎಂಬ ಭ್ರಮೆ. ಇಲ್ಲಿ ಗುಣವಿದ್ದರೂ ಪ್ರಮಾ ಇಲ್ಲ ವ್ಯಭಿಚಾರ. ಈ ವ್ಯಭಿಚಾರದ ಪರಿಹಾರವನ್ನು ಹೀಗೆ ಮಾಡಬಹುದು–ಯಾವ ವಿಶೇಷದರ್ಶನವಿದ್ದಾಗ ಭ್ರಮೆಯು ಬರುವುದಿಲ್ಲವೋ ಅಂತಹ ವಿಪರೀತಪ್ರತ್ಯಕ್ಷವೇ ಗುಣ. ಶುಕ್ಲತ್ವವ್ಯಾಪ್ಯಶಂಖತ್ವವಾನ್, ಎಂಬ ವಿಶೇಷದರ್ಶನವಿದ್ದಾಗಲೂ ಭ್ರಮೆ ಬರುತ್ತದೆ. ಆದ್ದರಿಂದ ಇದು ಗುಣವಲ್ಲ, ಆದ್ದರಿಂದ ವ್ಯಭಿಚಾರ ಇಲ್ಲ. ಅದಕ್ಕಾಗಿ, ಇನ್ನೊಂದು ಕಡೆ ವ್ಯಭಿಚಾರವನ್ನು ಹೇಳಲಾಗಿದೆ. ಅದು ವಂಶೋರಗ ಭ್ರಮೆ. ವಂಶವು ಉರಗವಲ್ಲ, ಎಂಬ ವಿಪರೀತ ಜ್ಞಾನವು 'ವಂಶವು ಉರಗ' ಎಂಬ ಭ್ರಮೆಗೆ ವಿರೋಧಿ. ಆದ್ದರಿಂದ ಅದು ಗುಣ. ಅಂತಹ ಗುಣ–ಇದ್ದರೂ ಚಕ್ಷುರಿಂದ್ರಿಯದಿಂದ ಪ್ರಮಾ ಬಂದಿಲ್ಲ. ಆದ್ದರಿಂದ ವ್ಯಭಿಚಾರ.

ಈ ವ್ಯಭಿಚಾರವನ್ನೂ ಹೀಗೆ ಪರಿಹರಿಸಬಹುದು–ತದಿಂದ್ರಿಯಜನ್ಯಪ್ರತ್ಯಕ್ಷಕ್ಕೆ ತದಿಂದ್ರಿಯ ಜನ್ಯವಾದ ಭ್ರಮವಿರೋಧಿಜ್ಞಾನವು ಗುಣ. ಪ್ರಕೃತದಲ್ಲಿ ತ್ವಗಿಂದ್ರಿಯ ಜನ್ಯವಾದ ವಿಪರೀತ ಪ್ರತ್ಯಕ್ಷ ಇದೆ. ಇದು ಚಾಕ್ಷುಷಪ್ರಮಾಕ್ಕೆ ಗುಣವಲ್ಲ. ಆದ್ದರಿಂದ ಅನ್ವಯ ವ್ಯಭಿಚಾರ ಇಲ್ಲ, ಎಂದು. ಆದರೆ, ಹೀಗೆ ವಿಶೇಷಕಾರ್ಯಕಾರಣಭಾವವನ್ನು ಹೇಳುವುದೇ ಸರಿಯಲ್ಲ, ಎಂದು ಮುಂದೆ ಮೂಲದಲ್ಲಿ (ಪು.657) ನಿರಾಕರಿಸಲಾಗಿದೆ. ಆದರೂ ಗುಣಹೇತುತ್ವಕ್ಕೆ ಬಾಷ್ಪದಲ್ಲಿ ಧೂಮಭ್ರಮೆ ಬರುವಲ್ಲಿಯೂ ಮೂಲದಲ್ಲಿ ವ್ಯಭಿಚಾರವನ್ನು ಹೇಳಲಾಗಿದೆ. (ಈ ವಾಕ್ಯ ಕೆಲವು ಪ್ರತಿಗಳಲ್ಲಿ ಇಲ್ಲ. ಅದರ ಬದಲು 'ತದಿಂದ್ರಿಯಜನ್ಯ ಪ್ರತ್ಯಕ್ಷಪ್ರಮಾಯಾಂ ತದಿಂದ್ರಿಯಜವಿಶೇಷಧೀತದ್ದರ್ಶನಂ ಹೇತುರಿತ್ಯತ ಆಹ–**ಬಾಷ್ಪೇತಿ ॥** ಎಂದು ಪಾಠವಿದೆ.) ಈ ಭ್ರಮೆಯನ್ನು ಹೇಳುವಾಗ ಅವಯವ್ಯಂಶೇ ಏವ, ಎಂದು ಪ್ರಕಾರಾಂತರವನ್ನು ಹೇಳಲಾಗಿದೆ. ವಿರೋಧವನ್ನು ಸ್ಫುಟೀಕರಿಸುವ ಸಲುವಾಗಿ ಹೀಗೆ ಹೇಳಲಾಗಿದೆ. ಯಾವ ಅವಯವಿಯ ವಿಷಯದಲ್ಲಿ ಪ್ರತ್ಯಕ್ಷಪ್ರಮಾಕ್ಕೆ ಭೂಯೋಽ-ವಯವೇಂದ್ರಿಯಸನ್ನಿಕರ್ಷವು ಗುಣವಾಗಬೇಕೋ ಅಂತಹ ಗುಣವಿದ್ದರೂ ಅದೇ ಅವಯವಿಯಲ್ಲಿ ಭ್ರಮೆ ಬರುತ್ತಿದೆ, ಎನ್ನುವುದು ವಿರೋಧ.

**यदि च तत्र पित्तमण्डूकवसाञ्जनादिदोष-प्रतिबन्धात् प्रमानुत्पत्तिः तर्ह्यावश्यकत्वाद्दोषाभाव एव हेतुः। मम तु दोषाभावेन प्रमारूप-विपरीतकार्यानुत्पत्तौ ज्ञानसामग्र्यैव प्रमोत्पत्तिः।**

ಒಂದುವೇಳೆ, ಹಿಂದಿನ ಎರಡೂ ಸಂದರ್ಭಗಳಲ್ಲಿ ಪ್ರಮಾಕ್ಕೆ ಬೇಕಾದ ಸಾಮಗ್ರೀಗಳಿದ್ದರೂ ಪ್ರಮಾ ಹುಟ್ಟಲು ಪಿತ್ತದೋಷ, ಮಂಡೂಕವಸಾರೂಪವಾದ ಪ್ರತಿಬಂಧಕಗಳು ಇವೆಯಾದ ಕಾರಣ ಪ್ರಮಾ ಹುಟ್ಟುವುದಿಲ್ಲ, ತಾವತಾ ವ್ಯಾಪ್ಯದರ್ಶನಾದಿಗಳಿಗೆ ಕಾರಣತ್ವಾಭಾವವು ಸಿದ್ಧವಾಗುವುದಿಲ್ಲ. ಏಕೆಂದರೆ, ಪ್ರತಿಬಂಧಕವಶಾತ್ ಕಾರ್ಯವು ಉತ್ಪನ್ನವಾಗದಿದ್ದರೆ ಕಾರಣವು ಅಕಾರಣವೆಂದಾಗುವುದಿಲ್ಲ, ಎನ್ನುವುದಾದರೆ ಹಾಗಿದ್ದರೆ, ಅಂತಹ ಪ್ರತಿಬಂಧಕದೋಷಾಭಾವವೇ ಪ್ರಮಾಹೇತು, ಎಂದರೆ ಸಾಕು, ವ್ಯಾಪ್ಯದರ್ಶನಕ್ಕೆ ಕಾರಣತ್ವವನ್ನು ಹೇಳುವ ಅಗತ್ಯವೇ ಇಲ್ಲ. ವ್ಯಾಪ್ಯದರ್ಶನಕ್ಕೆ ಕಾರಣತ್ವವನ್ನು ಹೇಳಿದರೂ ದೋಷಕ್ಕೆ ಪ್ರತಿಬಂಧಕತ್ವವನ್ನು ಕಲ್ಪಿಸುವುದು ಅನಿವಾರ್ಯ. ಹಾಗಿದ್ದಮೇಲೆ ದೋಷಾಭಾವವೇ ಪ್ರಮಾಕಾರಣ ಎನ್ನುವುದು ಉಚಿತ.

ಆದರೆ, ಸ್ವತಸ್ತ್ವಸಿದ್ಧಾಂತದಲ್ಲಿ ದೋಷಾಭಾವವೂ ಪ್ರಾಮಾಣ್ಯಕ್ಕೆ ಕಾರಣವಲ್ಲ. ಹೀಗಿರುವಾಗ, ಪೂರ್ವೋಕ್ತ ಸಂದರ್ಭದಲ್ಲಿ ಪ್ರಾಮಾಣ್ಯಪ್ರಯೋಜಕವಾದ ಜ್ಞಾನಸಾಮಗ್ರಿಯು ಇರುವುದರಿಂದ ಪ್ರಮಾ ಏಕೆ ಹುಟ್ಟುವುದಿಲ್ಲ, ಎಂದರೆ, ದೋಷವು ಭ್ರಮೆಗೆ ಕಾರಣ. ಆ ಕಾರಣ ಇರುವುದರಿಂದ ಪ್ರಮಾ ಪ್ರಯೋಜಕವು ಇದ್ದರೂ ಭ್ರಮೆ ಹುಟ್ಟಿದೆ. ದೋಷವು ಇಲ್ಲದಿರುವಾಗ ವಿಪರೀತಕಾರ್ಯವು ಅಂದರೆ, ಭ್ರಮೆಯು, ಜ್ಞಾನ ಸಾಮಗ್ರಿಯಿಂದ ಹುಟ್ಟುವುದಿಲ್ಲ, ಅದರ ಸಹಜಕಾರ್ಯವಾದ ಪ್ರಮಾವೇ ಹುಟ್ಟುತ್ತದೆ. ಹೀಗೆ ಜ್ಞಾನಸಾಮಗ್ರಿಯ ಸಹಜಕಾರ್ಯ ಪ್ರಮಾ. ದೋಷವು ಆ ಸಾಮಗ್ರಿಯಲ್ಲಿರುವ ಸಹಜ ಸಾಮರ್ಥ್ಯವನ್ನು ಪ್ರತಿಬಂಧಿಸಿ ವಿಪರೀತ ಕಾರ್ಯವು (ಭ್ರಮೆಯು) ಹುಟ್ಟುವಂತೆ ಮಾಡುತ್ತದೆ.

## ನ್ಯಾಯದೀಪ

**ಅಂಜನಾದಿ ಇತ್ಯಾದಿ ಪದೇನ ಸಾರೂಪ್ಯಾದಿಪರಿಗ್ರಹಃ। ದೋಷಾಭಾವ ಏವೇತಿ ॥ ಯಾದೃಚ್ಛಿಕಸಂವಾದಿನಿ ದೋಷಾಭಾವಃ ಪ್ರಮಾವ್ಯಭಿಚಾರೀ ಇತಿ ಉತ್ತರಭಂಗೇ ನಿರಸಿಷ್ಯತೇ ಇತಿ ಭಾವಃ।**

**ಯತ್ತು, ಸನ್ನಿಕರ್ಷಾದಿ–ಉತ್ಕರ್ಷೇಣ ಪ್ರಮೋತ್ಕರ್ಷಾತ್ ಸನ್ನಿಕರ್ಷಾದಿರೇವ ಹೇತುರಿತಿ। ತನ್ನ। ಉಕ್ತಸ್ಥಲೇಷು ತದುತ್ಕರ್ಷೇ ಸತ್ಯಪಿ ಪ್ರಮಾನುದಯೇನ ವ್ಯಭಿಚಾರಾತ್।**

**ನನು ಸಿದ್ಧಾಂತೇ ದೋಷಾಭಾವಸ್ಯ ಪ್ರಾಮಾಣ್ಯಾಹೇತುತ್ವಾತ್ ಉಕ್ತಸ್ಥಲೇ ಪ್ರಾಮಾಣ್ಯಪ್ರಯೋಜಕ–ಜ್ಞಾನಸಾಮಗ್ರೀಸತ್ತ್ವಾತ್ ಪ್ರಮೋತ್ಪತ್ತಿಃ ಸ್ಯಾತ್ ಇತ್ಯತ ಆಹ– ಮಮ ತು, ಇತಿ ॥ ಯದ್ವಾ, ತಾವತಾಪಿ ಸಿದ್ಧಾಂತೇ ಸ್ವತಸ್ತ್ವಹಾನಿಃ ಇತ್ಯತ ಆಹ–ಮಮ ತು, ಇತಿ ॥**

ಮೂಲದಲ್ಲಿ ಭ್ರಮೆಗೆ ಅಂಜನಾದಿಗಳು ಕಾರಣ, ಎಂದಿದೆ. ಅಲ್ಲಿ ಆದಿಪದದಿಂದ ಸಾರೂಪ್ಯವನ್ನು ತೆಗೆದುಕೊಳ್ಳಬೇಕು. ಶುಕ್ತಿಯಲ್ಲಿ ರಜತ ಸಾರೂಪ್ಯವೂ ಭ್ರಮೆಗೆ ಹೇತುವಾಗುತ್ತದೆ.

ದೋಷಾಭಾವವೇ ಭ್ರಮೆಗೆ ಹೇತುವಾಗಲಿ, ಎಂದುದು ಅಭ್ಯುಪಗಮವಾದ. ವಸ್ತುತಃ ಯಾದೃಚ್ಛಿಕ ಸಂವಾದಿ ಸ್ಥಲದಲ್ಲಿ ದೋಷವಿದ್ದರೂ ಪ್ರಮಾ ಹುಟ್ಟುವುದರಿಂದ ದೋಷಾಭಾವವು ಪ್ರಮಾ ವ್ಯಭಿಚಾರಿಯಾಗಿದೆ. ಇದನ್ನು ಮುಂದಿನ ಪ್ರಕರಣದಲ್ಲಿ ಹೇಳಲಾಗುವುದು.

ಸಿದ್ಧಾಂತದಲ್ಲಿ ದೋಷಾಭಾವವೂ ಪ್ರಮಾಕ್ಕೆ ಕಾರಣವಲ್ಲ. ಹಾಗಾದರೆ, ಪಿತ್ತಾದಿ ದೋಷವಿದ್ದಾಗ ಪ್ರಾಮಾಣ್ಯಕಾರಣವಾದ ಜ್ಞಾನಸಾಮಗ್ರೀಗಳು ಇರುವುದರಿಂದ ಪ್ರಮೋತ್ಪತ್ತಿ ಆಗಬೇಕಾದೀತು, ಈ ಆಕ್ಷೇಪಕ್ಕೆ 'ಮಮ ತು' ಎಂದು ಉತ್ತರ.

ಅಥವಾ, ಮಮ ತು, ಎಂಬ ವಾಕ್ಯಕ್ಕೆ ಹೀಗೂ ಸಂಗತಿಯನ್ನು ಹೇಳಬಹುದು–ದೋಷಾಭಾವ ಏವ ಹೇತುಃ, ಎಂದು ಒಪ್ಪಿಕೊಂಡರೂ ಪ್ರಮಾಕ್ಕೆ ಜ್ಞಾನಕಾರಣಾತಿರಿಕ್ತ–ಕಾರಣಜನ್ಯತ್ವವು ಬರುವುದರಿಂದ ಸ್ವತಸ್ತ್ವ ಸಿದ್ಧಾಂತಕ್ಕೆ ಹಾನಿ ಬಂತು, ಎಂಬ ಆಕ್ಷೇಪದ ಪರಿಹಾರಕ್ಕಾಗಿ 'ಮಮ ತು' ಎಂಬ ವಾಕ್ಯ ಇದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನೌಪಾಧಿಕ ಭ್ರಮೋತ್ತರ ಪ್ರತ್ಯಕ್ಷ ಪ್ರಮಾಯಾಮೇವ ವಿಶೇಷದರ್ಶನಂ ಗುಣಃ, ಅತೋ ನೋಕ್ತದೋಷಃ ಇತ್ಯತಃ ವಿಶೇಷದರ್ಶನಾಭಾವೇ ಭ್ರಮೋತ್ತರ ಪ್ರಮಾಭಾವಃ ಇತಿ ವ್ಯತಿರೇಕಃ ಅನ್ಯಥಾಸಿದ್ಧಃ ನ ವಿಶೇಷದರ್ಶನ ಹೇತುತಾಕಲ್ಪಕಃ, ಇತಿ ಭಾವೇನ ದೋಷಾಂತರಮಾಹ– ಏವಂ ಭ್ರಮೇತಿ ॥**

ಹಿಂದೆ ವಿಶೇಷದರ್ಶನಕ್ಕೆ ಸೋಪಾಧಿಕ ಭ್ರಮೆಯಲ್ಲಿ ಅಂದರೆ, ಪೀತಃ ಶಂಖಃ ಎಂಬ ಭ್ರಮೆಯಲ್ಲಿ ಅನ್ವಯವ್ಯಭಿಚಾರವನ್ನು ಹೇಳಲಾಗಿದೆ. ಅದರ ಪರಿಹಾರಕ್ಕಾಗಿ ಅನೌಪಾಧಿಕ ಭ್ರಮೆಯ ಉತ್ತರದಲ್ಲಿ ಬರುವ ಪ್ರತ್ಯಕ್ಷಪ್ರಮಾಕ್ಕೆ ವಿಶೇಷ ದರ್ಶನವು ಗುಣ, ಎಂದು ಪರಿಷ್ಕಾರ ಮಾಡಬೇಕು. ಈಗ ವ್ಯಭಿಚಾರ ಪರಿಹಾರವಾಗುತ್ತದೆ. ಹಿಂದೆ ಹೇಳಿರುವ 'ಶಂಖಃ ಪೀತಃ' ಇತ್ಯಾದಿ ಭ್ರಮೆಗಳು ಸೋಪಾಧಿಕ ಭ್ರಮೆಗಳು. ತದುತ್ತರ ಪ್ರಮಾಕ್ಕೆ ಗುಣವು ಕಾರಣವಲ್ಲ, ಎಂದು ವ್ಯಭಿಚಾರ ಪರಿಹಾರ ಮಾಡಿದರೂ ವಿಶೇಷದರ್ಶನವು ಭ್ರಮೋತ್ತರ–ಪ್ರಮಾಕ್ಕೆ ಕಾರಣ, ಎಂದು ಹೇಳುವುದು ಸರಿಯಲ್ಲ. ಅನ್ವಯವ್ಯತಿರೇಕದಿಂದ ಕಾರಣತ್ವವನ್ನು ನಿರ್ಧರಿಸಬೇಕು. ಆದರೆ, ವಿಶೇಷದರ್ಶನವು ಇಲ್ಲದಿದ್ದರೆ ಭ್ರಮೋತ್ತರ ಪ್ರಮಾ ಬರುವುದಿಲ್ಲ, ಎನ್ನುವ ವ್ಯತಿರೇಕವು ಅನ್ಯಥಾಸಿದ್ಧವಾದುದರಿಂದ ವಿಶೇಷದರ್ಶನಕ್ಕೆ ಪ್ರಮಾಹೇತುತ್ವಕಲ್ಪಕವಲ್ಲ. ಈ ಅಭಿಪ್ರಾಯದಿಂದ ಮುಂದಿನ ಗ್ರಂಥದಲ್ಲಿ ದೋಷಾಂತರವನ್ನು ಹೇಳಲಾಗಿದೆ.

ಇಲ್ಲಿ ನ್ಯಾಯದೀಪದಲ್ಲಿ ಈ ಕೆಳಗಿನ ಪಾಠವು ಬ್ರಾಕೇಟಿನಲ್ಲಿದೆ. ಅದನ್ನೂ ಮುಂದಿನ ಗ್ರಂಥಕ್ಕೆ ಅವತಾರಿಕೆ ಎಂದು ಪರಿಗಣಿಸಬಹುದು—

## ನ್ಯಾಯದೀಪ

**ವಿಶೇಷದರ್ಶನಪದೇನ ವಿಶೇಷದರ್ಶನಸಾಮಾನ್ಯವಿವಕ್ಷಾಯಾಂ ಪ್ರಾಗುಕ್ತಾನ್ವಯವ್ಯಭಿಚಾರಲಗನೇಽಪಿ ಉಕ್ತರೂಪವಿಶೇಷದರ್ಶನವಿವಕ್ಷಾಯಾಂ ನೋಕ್ತದೋಷಲಗನಮ್ ಇತ್ಯತಃ ದೋಷಾಂತರಮಾಹ–ಏವಂ ಭ್ರಮೇತಿ ॥**

ವಿಶೇಷದರ್ಶನವು ಗುಣ, ಎಂಬಲ್ಲಿ ವಿಶೇಷದರ್ಶನವೆಂದರೆ, ಏಕಕೋಟಿವ್ಯಾಪ್ಯವತ್ತಾಜ್ಞಾನ, ಎಂದು ತಿಳಿದರೆ ಹಿಂದೆ ಹೇಳಿರುವಂತೆ ಪಿತ್ತಾದಿದೋಷದಿಂದ 'ಪೀತಃ ಶಂಖಃ' ಎಂಬ ಜ್ಞಾನ ಬಂದಾಗ ವ್ಯಭಿಚಾರದೋಷವು ಬರಬಹುದು. ಆದರೆ ಪಿತ್ತಾದಿ ಪ್ರತಿಬಂಧಕಾಭಾವ ಸಹಿತ ವಿಶೇಷದರ್ಶನವೇ ಗುಣ, ಎಂದು ಹೇಳಿದಾಗ ಈ ವ್ಯಭಿಚಾರವು ಪರಿಹಾರವಾಗುತ್ತದೆ. ಆದಕ್ಕಾಗಿ, ದೋಷಾಂತರವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**एवं भ्रमोत्तरप्रमायामपि तदनुत्तरप्रमायां या क्लृप्ता सामग्री भ्रमकाले सा न वर्तते चेत् तदभावादेव कार्याभावो न तु विशेष दर्शनाभावादिति विशेषप्रमा न हेतुः । वर्तते चेत् विशेषदर्शनाभावेऽपि तदनुत्तरप्रमेव तदुत्तरप्रमाप्युत्पद्येतैव । न हि कार्ये वैचित्र्याभावेऽपि कालभेदमात्रेण विचित्रहेत्वपेक्षा ।**

ಭ್ರಮೋತ್ತರ ಪ್ರಮಾಕ್ಕೆ ವಿಶೇಷದರ್ಶನವು ಗುಣ, ಎಂದು ಹೇಳುವುದು ಸರಿಯಲ್ಲ. ಭ್ರಮೋತ್ತರಪ್ರಮಾಸ್ಥಳದಲ್ಲಿ ಭ್ರಮೆ ಬರುವ ಕಾಲದಲ್ಲಿ ಭ್ರಮಾನುತ್ತರಪ್ರಮಾಕ್ಕೆ ಬೇಕಾಗಿರುವ ಕಾರಣವು ಇಲ್ಲವೆಂದಾದಲ್ಲಿ ಅಂತಹ ಕಾರಣವು ಇಲ್ಲವಾದುದರಿಂದಲೇ ಭ್ರಮಕಾಲದಲ್ಲಿ ಪ್ರಮೆ ಬರುವುದಿಲ್ಲ. ಪ್ರಮಾ ಹುಟ್ಟದಿರಲು ವಿಶೇಷ ದರ್ಶನಾಭಾವವು (ಗುಣಾಭಾವವು) ಕಾರಣವೇ ಅಲ್ಲ. ಆದ್ದರಿಂದ ವಿಶೇಷದರ್ಶನಾಭಾವವು ಪ್ರಮಾಭಾವಕ್ಕೆ ಅನ್ಯಥಾಸಿದ್ಧ. ಹೀಗಾಗಿ, ವಿಶೇಷ ದರ್ಶನಾಭಾವೇ ಪ್ರಮಾಭಾವಃ, ಎಂಬ ವ್ಯತಿರೇಕವು ಅಪ್ರಯೋಜಕ.

ಇನ್ನು ಭ್ರಮಕಾಲದಲ್ಲಿ ಪ್ರಮಾಕಾರಣವು ಇದೆ ಎಂದಾದಲ್ಲಿ ಪ್ರಮಾವೂ ಹುಟ್ಟಲೇಬೇಕು. ಅಂತಹ ಕಾರಣವು ಇದ್ದಾಗ ಭ್ರಮಾನುತ್ತರ ಪ್ರಮೆಯು ಬರುವಂತೆ ವಿಶೇಷದರ್ಶನವು ಇಲ್ಲದಿದ್ದರೂ ಭ್ರಮೋತ್ತರದಲ್ಲಿ ಪ್ರಮೆಯು ಹುಟ್ಟಲೇಬೇಕು. ಏಕೆಂದರೆ, ಭ್ರಮೋತ್ತರಪ್ರಮೆಗೂ ತದನುತ್ತರ ಪ್ರಮೆಗೂ ವೈಲಕ್ಷಣ್ಯವು ಇಲ್ಲ. ಹೀಗೆ ಕಾರ್ಯವೈಲಕ್ಷಣ್ಯವಿಲ್ಲದಿದ್ದಮೇಲೆ ಭ್ರಮೋತ್ತರ ಕಾಲ,

ಭ್ರಮಾನುತ್ತರಕಾಲ ಎಂಬ ಕಾಲಭೇದ ಮಾತ್ರದಿಂದ ಒಂದೇ ಕಾರ್ಯಕ್ಕೆ ವಿಚಿತ್ರವಾದ ಕಾರಣಾಂತರದ ಅಪೇಕ್ಷೆ ಇದೆ, ಎಂದು ಹೇಳುವುದು ಉಚಿತವಲ್ಲ. ಅರ್ಥಾತ್, ಭ್ರಮಾನುತ್ತರ ಪ್ರಮೆಯೂ ಪ್ರಮಾವೇ, ತದುತ್ತರಪ್ರಮೆಯೂ ಪ್ರಮೆಯೇ. ಆದರೂ, ಆ ಪ್ರಮೆಯು ಭ್ರಮೆಯ ಉತ್ತರದಲ್ಲಿ (ಕಾಲವಿಶೇಷದಲ್ಲಿ) ಹುಟ್ಟಿದೆ ಎಂಬ ಇಷ್ಟೇ ಕಾರಣಕ್ಕಾಗಿ ಅದಕ್ಕೆ ವಿಶೇಷದರ್ಶನವು ಕಾರಣ, ಎಂದು ಹೇಳುವುದು ಸರಿಯಲ್ಲ. ಕಾರ್ಯದಲ್ಲಿ ವೈಲಕ್ಷಣ್ಯವು ಇಲ್ಲದಿರುವಾಗ ಕಾಲವ್ಯತ್ಯಾಸ ಮಾತ್ರದಿಂದ ಕಾರಣವೈಲಕ್ಷಣ್ಯವನ್ನು ಕಲ್ಪನೆ ಮಾಡಬಾರದು.

## ನ್ಯಾಯದೀಪ

**ಭ್ರಮೇತಿ ।। ಸಂಶಯ–ವಿಪರ್ಯಯರೂಪಭ್ರಮೇತ್ಯರ್ಥಃ । ಪ್ರಮಾಯಾಮಪಿ ನ ವಿಶೇಷಪ್ರಮಾ ಹೇತುಃ ಇತ್ಯನ್ವಯಃ । ನನು ಭ್ರಮಾನುತ್ತರ ಪ್ರತ್ಯಕ್ಷಸಾಮಗ್ರ್ಯಾ ಕಥಂ ತದುತ್ತರಪ್ರತ್ಯಕ್ಷಪ್ರಮಾ ಜಾಯೇತ, ಇತ್ಯತ ಆಹ–ನ ಹೀತಿ ।। ವಿಚಿತ್ರೇತಿ ।। ವಿಶೇಷದರ್ಶನರೂಪಾ ಇತ್ಯರ್ಥಃ ।**

ಭ್ರಮೋತ್ತರ ಎಂಬ ಮೂಲದಲ್ಲಿ ಭ್ರಮಪದಕ್ಕೆ ಸಂದೇಹ ಮತ್ತು ಅನ್ಯಥಾಜ್ಞಾನ, ಎಂದು ಎರಡೂ ಅರ್ಥ. 'ಭ್ರಮೋತ್ತರ ಪ್ರಮಾಯಾಮಪಿ' ಎಂಬ ವಾಕ್ಯದ ಆರಂಭದ ಶಬ್ದಕ್ಕೆ 'ನ ವಿಶೇಷಪ್ರಮಾ ಹೇತುಃ' ಎಂಬ ವಾಕ್ಯದ ಕೊನೆಯ ಶಬ್ದದೊಂದಿಗೆ ಅನ್ವಯ.

ಭ್ರಮೆ ಇಲ್ಲದಿರುವ ಕಾಲದಲ್ಲಿರುವ ಪ್ರತ್ಯಕ್ಷಪ್ರಮಾ ಸಾಮಗ್ರಿಯಿಂದ ಭ್ರಮೋತ್ತರಕಾಲದಲ್ಲಿ ಪ್ರಮಾತ್ಮಕ ಪ್ರತ್ಯಕ್ಷವು ಹುಟ್ಟುವುದು ಹೇಗೆ? ಎಂಬ ಪ್ರಶ್ನೆಗೆ 'ನ ಹಿ' ಎಂಬ ವಾಕ್ಯ ಉತ್ತರ. ಅಲ್ಲಿ ಕಾಲಭೇದ ಮಾತ್ರ. ಹೊರತು ಕಾರ್ಯದಲ್ಲಿ (ಪ್ರಮೆಯಲ್ಲಿ) ವೈಲಕ್ಷಣ್ಯವೇನಿಲ್ಲ. ಹೀಗಾಗಿ ಭ್ರಮಾನುತ್ತರ ಪ್ರಮಾಸಾಮಗ್ರಿಯಿಂದಲೇ ಭ್ರಮೋತ್ತರ ಪ್ರಮೆಯೂ ಹುಟ್ಟಬಹುದು. ಅದಕ್ಕಾಗಿ ಪ್ರತ್ಯಕ್ಷಸಾಮಗ್ರಿಯಲ್ಲಿ ಅಧಿಕವಾದ ವಿಶೇಷದರ್ಶನವನ್ನು ಸೇರಿಸಬೇಕಾದ ಅಗತ್ಯವಿಲ್ಲ, ಎಂದು ಆ ವಾಕ್ಯದ ಅಭಿಪ್ರಾಯ.

**यदि तदा संशयादिदोषः प्रतिबन्धकः तर्ह्यावश्यकत्वाद्दोषाभावादेव प्रमास्तु ।**

ಸಂಶಯಕಾಲದಲ್ಲೂ ಪ್ರಮಾಸಾಮಗ್ರಿಯು ಇರುವುದಾದಲ್ಲಿ ಅದರಿಂದಲೇ ಸಂಶಯೋತ್ತರ ಪ್ರಮೆಯು ಹುಟ್ಟಲಿ, ಎಂದು ಆಪಾದಿಸಲಾಗಿದೆ. (ತದುತ್ತರಪ್ರಮಾಪಿ ಉತ್ಪದ್ಯೇತ–ಪು.663) ಆದರೆ, ಆ ಕಾಲದಲ್ಲಿ ಸಂಶಯರೂಪವಾದ ದೋಷವು ಪ್ರಮೆಗೆ ಪ್ರತಿಬಂಧಕವಾಗಿದೆ. ಪ್ರಮಾ ಹುಟ್ಟುವುದು ಹೇಗೆ? ಹಾಗಾದರೆ, ಅನಂತರ ಹುಟ್ಟುವ ಪ್ರಮೆಗೆ ಆ ದೋಷದ ಅಭಾವವೇ ಕಾರಣ ಎಂದರೆ ಸಾಕು. ವಿಶೇಷದರ್ಶನವು ಕಾರಣ ಎಂದು ಹೇಳುವ ಅಗತ್ಯವೇ ಇಲ್ಲ.

## ನ್ಯಾಯದೀಪ

**ಸಂಶಯಾದೀತಿ ।। ವಿಪರ್ಯಯಃ ಆದಿಪದಾರ್ಥಃ ।**

**ನನು ಸಂಶಯಸ್ಯ ಗ್ರಾಹ್ಯಸಂಶಯಪರ್ಯವಸನ್ನತಯಾ ಪ್ರಮಾಣಾ-ಪರಿಪಂಥಿತ್ವಾತ್ ಕಥಂ ಪ್ರತಿಬಂಧಕತ್ವಶಂಕಾ? ಅನ್ಯಥಾ ತಸ್ಮಿನ್ ಸತಿ ವಿಶೇಷ-ದರ್ಶನಾದಪಿ ಪ್ರತ್ಯಕ್ಷಾನಾಪತ್ತೇಃ ಇತಿ ಚೇನ್ನ। ವಿಶೇಷದರ್ಶನವಿರಹವಿಶಿಷ್ಟ-ಸಂಶಯಾದೇಃ ಪ್ರತಿಬಂಧಕತ್ವೇನ, ತದಭಿಪ್ರಾಯೇಣ ಸಂಶಯಾದಿದೋಷಃ ಪ್ರತಿಬಂಧಕಃ ಇತ್ಯುಕ್ತೇಃ ।।**

**ದೋಷಾಭಾವಾದೇವೇತಿ ।। ನನು ವಿಶೇಷದರ್ಶನವಿರಹವಿಶಿಷ್ಟ-ಸಂಶಯಾದಿದೋಷಾಭಾವೋ ಹಿ ಸಂಶಯಾದಿಸ್ಥಲೇ ವಿಶೇಷ-ಅದರ್ಶನರೂಪ-ವಿಶೇಷಣಾಭಾವೇನೈವ ವಾಚ್ಯ ಇತಿ, ವಿಶೇಷದರ್ಶನಮೇವ ಪರ್ಯವಸನ್ನಮಿತಿ ಚೇನ್ನ। ತಾವತಾ ತಸ್ಯ ಪ್ರತಿಬಂಧಕರೂಪ ದೋಷಾಭಾವತ್ವೇನೈವ ಹೇತುತ್ವ-ಪ್ರಾಪ್ತ್ಯಾ ತೇನ ರೂಪೇಣ ಹೇತುತ್ವಾಪ್ರಾಪ್ತೇಃ। ವಿಶಿಷ್ಟಾಭಾವಸಂಪಾದನೇನ ಅನ್ಯಥೋಪಕ್ಷೀಣತ್ವಾಚ್ಚ ।।**

ಪ್ರಮಾಕ್ಕೆ ಸಂಶಯವು ದೋಷರೂಪವಾಗಿ ಪ್ರತಿಬಂಧಕ ಎಂದು ಮೂಲದಲ್ಲಿ ಹೇಳಲಾಗಿದೆ. ಆದರೆ, ಪ್ರಕೃತಸಂದೇಹ ಗ್ರಾಹ್ಯಸಂದೇಹರೂಪವಾದುದು. ಯಾವ ವಿಷಯದಲ್ಲಿ ಪ್ರಮಾ ಬರಬೇಕೋ ಅದೇ ವಿಷಯದಲ್ಲಿ ಸಂದೇಹ. ಗ್ರಾಹ್ಯಸಂದೇಹವು ಪ್ರಮಾಣಕ್ಕೆ ವಿರೋಧಿಯಲ್ಲ. ಅನುಮಿತ್ಯಾದಿ ಸ್ಥಳದಲ್ಲಿ ಸಂದೇಹವು ಇದ್ದರೂ ಪ್ರಮಾ ಹುಟ್ಟುತ್ತದೆ. ಒಂದುವೇಳೆ ಸಂದೇಹವು ನಿಶ್ಚಯ ವಿರೋಧಿಯಾದರೆ ವಿಶೇಷದರ್ಶನ ಕಾಲದಲ್ಲೂ ಸಂದೇಹವು ಇರುವುದರಿಂದ ಮುಂದೆ ನಿಶ್ಚಯವು ಬರಲಿಕ್ಕಿಲ್ಲ, ಎಂದರೆ, ಇದಕ್ಕೆ ಹೀಗೆ ಸಮಾಧಾನ-ವಿಶೇಷದರ್ಶನಾಭಾವ ವಿಶಿಷ್ಟವಾದ ಸಂದೇಹವು ಪ್ರತ್ಯಕ್ಷಪ್ರಮಾಕ್ಕೆ ಪ್ರತಿಬಂಧಕ. ವಿಶೇಷ ದರ್ಶನ ಬಂದಾಗ ಸಂದೇಹವಿದ್ದರೂ ವಿಶೇಷ ದರ್ಶನಾಭಾವರೂಪವಾದ ವಿಶೇಷಣವು ಇಲ್ಲ. ವಿಶೇಷಣಾಭಾವಾತ್ ವಿಶಿಷ್ಟಾಭಾವಃ. ಆದ್ದರಿಂದ ವಿಶೇಷದರ್ಶನಾನಂತರದಲ್ಲಿ ಪ್ರತ್ಯಕ್ಷಪ್ರಮಾ ಬರುತ್ತದೆ.

ಮೂಲದಲ್ಲಿ ಸಂದೇಹರೂಪ ದೋಷಾಭಾವವೇ ಪ್ರಮಾ ಕಾರಣವಾಗಲಿ, ವಿಶೇಷದರ್ಶನವು ಕಾರಣ, ಎಂದು ಏಕೆ ಹೇಳಬೇಕು, ಎಂದು ಆಕ್ಷೇಪಿಸಲಾಗಿದೆ. ಆದರೆ, ಹಿಂದೆ ಹೇಳಿದಂತೆ ವಿಶೇಷ ದರ್ಶನಾಭಾವವಿಶಿಷ್ಟ ಸಂದೇಹವು ಪ್ರಮಾಕ್ಕೆ ಪ್ರತಿಬಂಧಕ. ವಿಶೇಷದರ್ಶನವಿರುವಾಗ ಸಂದೇಹ ವಿದ್ದರೂ ವಿಶೇಷಣವಾದ ವಿಶೇಷದರ್ಶನಾಭಾವವು ಇಲ್ಲದಿರುವುದರಿಂದ ವಿಶಿಷ್ಟಾಭಾವವನ್ನು ಹೇಳಬೇಕು. ಈ ವಿಶಿಷ್ಟಾಭಾವವು ವಿಶೇಷಣಾಭಾವದಲ್ಲೇ ಅಂದರೆ ವಿಶೇಷದರ್ಶನದಲ್ಲೇ

ಪರ್ಯವಸನ್ನವಾಗುತ್ತದೆ. ಅಂತತಃ ವಿಶೇಷದರ್ಶನವೇ ಪ್ರಮಾ ಕಾರಣ ಎಂದಂತಾಯಿತು, ಎಂದರೆ, ಹೀಗೆ ಹೇಳುವುದು ಸರಿಯಲ್ಲ. ವಿಶಿಷ್ಟಾಭಾವವು ವಿಶೇಷದರ್ಶನದಲ್ಲಿ ಪರ್ಯವಸಾನವಾದರೂ ಅದು ದೋಷಾಭಾವತ್ವೇನೈವ ಕಾರಣ, ಹೊರತು, ವಿಶೇಷದರ್ಶನತ್ವೇನ ಕಾರಣವಲ್ಲ. ಅಲ್ಲದೆ, ವಿಶೇಷದರ್ಶನವು ವಿಶಿಷ್ಟಾಭಾವ ಸಂಪಾದನೆಗೆ ಮಾತ್ರ ಸಹಕಾರಿಯಾಗುತ್ತದೆ, ಪ್ರಮೋತ್ಪಾದನೆಗೆ ಅದು ಅನ್ಯಥಾಸಿದ್ಧವೂ ಆಯಿತು.

## ನ್ಯಾಯದೀಪ

**ರುಚಿದತ್ತಾದಯಸ್ತು (ಪುಟ.365) ಭ್ರಮಸ್ಥಲೇ ವಿಶೇಷಾದರ್ಶನ ಸಹಕೃತಸಂಶಯಾದೇಃ ಪ್ರತಿಬಂಧಕತ್ವೇ ಸಂಶಯೋತ್ಪತ್ತಿಕಾಲೇ ಪ್ರತ್ಯಕ್ಷಾಪತ್ತಿಃ । ನ ಚ 'ಯಜ್ಞಾನಂ ಯತ್ರ ಪ್ರತಿಬಂಧಕಂ ತತ್ಸಾಮಗ್ರ್ಯಪಿ ತತ್ರ ಪ್ರತಿಬಂಧಿಕಾ' ಇತಿ ನ್ಯಾಯಾತ್ ತದಾ ಸಂಶಯಸಾಮಗ್ರೀಪ್ರತಿಬಂಧಾತ್ ನ ಪ್ರತ್ಯಕ್ಷಮ್, ಇತಿ ವಾಚ್ಯಮ್, ಏಮಮಪಿ ಧರ್ಮಿಜ್ಞಾನಕಾಲೇ ದೈವಾತ್ ಪುರುಷತ್ವಾದಿ ಜ್ಞಾನವತಃ ಪುರುಷತ್ವಾದಿ ನಿಶ್ಚಯಾಪತ್ತೇಃ । ಸಂಶಯಸ್ಯ, ತತ್ಸಾಮಗ್ರ್ಯಾಃ ವಾ ತದಾನೀಮ್ ಅಭಾವಾತ್ ।**

**ನ ಚ ದೋಷಸ್ಯ ಪ್ರತಿಬಂಧಕತ್ವಾತ್ ನ ತದಾ ಪ್ರತ್ಯಕ್ಷಮಿತಿ ವಾಚ್ಯಮ್ । ತರ್ಹಿ ಆವಶ್ಯಕತ್ವಾತ್ ಸಂಶಯಕಾಲೇಽಪಿ ತತ ಏವ ದೋಷಾತ್ ಪ್ರತ್ಯಕ್ಷಾನುತ್ಪತ್ತಿರಸ್ತು । ಕಿಂ ಸಂಶಯಸ್ಯ ಪ್ರತಿಬಂಧಕತ್ವಾಭ್ಯುಪಗಮೇನ ? ತಥಾ ಚ ವಿಶೇಷದರ್ಶನೇ ಸತಿ ವಿಶೇಷಾದರ್ಶನರೂಪದೋಷಾಭಾವಾದೇವ ಪ್ರತ್ಯಕ್ಷ ಪ್ರಮೋತ್ಪತ್ತಿಃ, ನ ತು ನಿರುಕ್ತವಿಶಿಷ್ಟಾಭಾವಸ್ಯ ಪ್ರತ್ಯಕ್ಷಪ್ರಮಾಹೇತುತ್ವಮ್ । ಮಾನಾಭಾವಾತ್। ನ ಚ ವಿಶೇಷದರ್ಶನಸ್ಯ ದೋಷತ್ವೇ ಸಂಶಯಾನುತ್ತರಪ್ರಮಾನುದಯಾಪತ್ತಿಃ ಇತಿ ಶಂಕ್ಯಮ್ । ಫಲಬಲೇನ ಏತಸ್ಯ ಕ್ವಚಿದೇವ ದೋಷತ್ವಕಲ್ಪನಾದಿತ್ಯಾಹುಃ ।**

ರುಚಿದತ್ತಾದಿಗಳು ಮಣಿವ್ಯಾಖ್ಯಾನದಲ್ಲಿ ಸಂಶಯವು ಪ್ರತಿಬಂಧಕವೇ ಅಲ್ಲ ಎಂದು ನಿರಾಕರಿಸಿದ್ದಾರೆ– ವಿಶೇಷಾದರ್ಶನ ಸಹಿತ ಸಂಶಯವು ಭ್ರಮಸ್ಥಳದಲ್ಲಿ ನಿರ್ಣಯಕ್ಕೆ ಪ್ರತಿಬಂಧಕ ಎಂದು ಹೇಳಿದರೂ ಸಂದೇಹ ಹುಟ್ಟುವ ಕಾಲದಲ್ಲೇ ಪುರುಷ ಏವಾಯಂ, ಎಂಬ ನಿರ್ಣಯವು ಬರಲಿ, ಎಂಬ ಆಪತ್ತಿ ಇದ್ದೇ ಇದೆ. ಏಕೆಂದರೆ, ತತ್ಪೂರ್ವದಲ್ಲಿ ಸಂದೇಹರೂಪವಾದ ಪ್ರತಿಬಂಧಕ ಇಲ್ಲ. ಈ ಆಪತ್ತಿಯನ್ನು ಹೀಗೆ ಪರಿಹರಿಸಬಹುದು–ಯಾವ ಜ್ಞಾನವು ಯಾವುದಕ್ಕೆ ಪ್ರತಿಬಂಧಕವೋ ಆ ಜ್ಞಾನದ ಸಾಮಗ್ರಿಯೂ ಅದಕ್ಕೆ ಪ್ರತಿಬಂಧಕವಾಗುತ್ತದೆ. ಎಂದು ನ್ಯಾಯವಿದೆ. ಈ ನ್ಯಾಯದ ಪ್ರಕಾರ ಸಂದೇಹಾತ್ಪೂರ್ವದಲ್ಲಿ ಸಂದೇಹ ಸಾಮಗ್ರೀ ಇರುವುದರಿಂದ ಸಂದೇಹಕಾಲದಲ್ಲಿ

ನಿರ್ಣಯವು ಬರುವುದಿಲ್ಲ, ಎಂದು. ಹೀಗೆ ಹೇಳಿದರೂ, ಸಂದೇಹಕಾರಣವಾದ ಧರ್ಮಿಜ್ಞಾನ ಬರುವ ಕಾಲದಲ್ಲಿ ಯಾವ ಪ್ರತಿಬಂಧಕವೂ ಇಲ್ಲ. ಆಗ ಸಂದೇಹ ಇನ್ನೂ ಹುಟ್ಟಿರುವುದಿಲ್ಲ. ಕೋಟಿಸ್ಮರಣೆಯು ಇಲ್ಲದಿರುವುದರಿಂದ ಸಂದೇಹಸಾಮಗ್ರಿಯೂ ಇಲ್ಲ. ದೈವವಶಾತ್ ಪೂರ್ವದಲ್ಲಿ ಪುರುಷತ್ವ ಸ್ಮೃತಿ (ವಿಶೇಷಣಜ್ಞಾನ) ಇದೆ. ಹೀಗೆ, ಪ್ರತಿಬಂಧಕ ಇಲ್ಲ, ಕಾರಣ ಇದೆಯಾದ್ದರಿಂದ ಪುರುಷತ್ವನಿರ್ಣಯ ಬರಬೇಕಾದೀತು. ಇದರ ಪರಿಹಾರಕ್ಕಾಗಿ ಸಂಶಯಕಾರಣವಾದ ದೋಷವು ಪ್ರತಿಬಂಧಕ, ಎನ್ನಬೇಕು. ಹೀಗೆ ಹೇಳುವುದು ಅನಿವಾರ್ಯವಾದ ಮೇಲೆ, ಸಂದೇಹ, ಸಂದೇಹಸಾಮಗ್ರಿಗಳು ಪ್ರತಿಬಂಧಕ ಎಂದು ಕಲ್ಪನೆ ಮಾಡುವ ಅಗತ್ಯವೇ ಇಲ್ಲ, ದೋಷವು ಪ್ರತಿಬಂಧಕ, ಎಂದಿಷ್ಟೇ ಹೇಳಿದರೆ ಸಾಕು. ಏವಂ ಚ, ವಿಶೇಷದರ್ಶನಕಾಲದಲ್ಲಿ ವಿಶೇಷ-ಅದರ್ಶನರೂಪವಾದ ದೋಷವು ಇಲ್ಲದಿರುವ ಕಾರಣದಿಂದಲೇ ನಿರ್ಣಯವು ಹುಟ್ಟುತ್ತದೆ. ಅದಕ್ಕಾಗಿ ವಿಶೇಷದರ್ಶನಾಭಾವವಿಶಿಷ್ಟವಾದ ಸಂದೇಹಾಭಾವವು ನಿರ್ಣಯ ಹೇತು, ಎಂದು ಕಲ್ಪನೆ ಮಾಡುವುದು ಅನಾವಶ್ಯಕ. ಅದಕ್ಕೆ ಪ್ರಮಾಣವೇ ಇಲ್ಲ.

ವಿಶೇಷಾದರ್ಶನವು ನಿರ್ಣಯಕ್ಕೆ ಪ್ರತಿಬಂಧಕವಾದ ದೋಷ, ಎಂದು ಕಲ್ಪಿಸಿದರೆ ಸರ್ವದಾ ವಿಶೇಷ-ಅದರ್ಶನವು ಪ್ರತಿಬಂಧಕವಾಗಿ ಇರುವುದರಿಂದ ಸಂಶಯಾನುತ್ತರ ಪ್ರತ್ಯಕ್ಷವೂ ಬರದೇ ಹೋದೀತು, ಎಂದರೆ, ಎಲ್ಲಿ ವಿಶೇಷದರ್ಶನವಿಲ್ಲದೆ ನಿರ್ಣಯವು ಉತ್ಪತ್ತಿಯಾಗುವುದಿಲ್ಲವೋ, ಅಲ್ಲಿ ಮಾತ್ರ ವಿಶೇಷಾದರ್ಶನವು ಪ್ರತಿಬಂಧಕ ಎಂದು ಫಲಬಲಾತ್, ಕಲ್ಪನೆ ಮಾಡಬೇಕು. ಸಂಶಯಾನುತ್ತರದಲ್ಲಿ ನಿರ್ಣಯಾತ್ಮಕಪ್ರತ್ಯಕ್ಷವು ಹುಟ್ಟುವುದರಿಂದ ಅಲ್ಲಿ ವಿಶೇಷ-ಅದರ್ಶನವು ಪ್ರತಿಬಂಧಕವಲ್ಲ. ಹೀಗೆ, ರುಚಿದತ್ತಾದಿಗಳು ಸಂದೇಹಕಾರಣವಾದ ದೋಷವೇ (ವಿಶೇಷಾದರ್ಶನ) ಸಂದೇಹೋತ್ತರ ಪ್ರತ್ಯಕ್ಷಕ್ಕೆ ಪ್ರತಿಬಂಧಕವೆನ್ನುತ್ತಾರೆ. ವಿಶೇಷದರ್ಶನ ಬಂದಾಗ ವಿಶೇಷಾದರ್ಶನ ರೂಪವಾದ ಪ್ರತಿಬಂಧಕವು ನಾಶವಾಗುವುದರಿಂದ ನಿರ್ಣಯವು ಹುಟ್ಟುತ್ತದೆ, ಎಂದು ಅವರ ವಾದ.

ಈ ಪಕ್ಷದಲ್ಲೂ ದೋಷಾಭಾವವೇ ಪ್ರಮಾಕಾರಣವಾ. ., ಗುಣವು ಪ್ರಮಾಕಾರಣ ಎಂದು ಕಲ್ಪಿಸಬೇಕಾಗಿಲ್ಲ, ಎಂಬ ಮೂಲೋಕ್ತ ದೋಷವು ಇದ್ದೇ ಇದೆ.

## ನ್ಯಾಯದೀಪ

**ದೋಷಾಭಾವಾದೇವ ಸಾऽಸ್ತು, ಇತ್ಯನಂತರಂ 'ಮಮ ತು' ಇತ್ಯಾದಿವಾಕ್ಯಮ್ ಅತ್ರಾಪಿ ಅನುವರ್ತ್ಯ ಯೋಜ್ಯಮ್ ।**

ಮೂಲದಲ್ಲಿ ದೋಷಾಭಾವದಿಂದಲೇ ಪ್ರಮಾ ಬರಲಿ, ಎಂಬ ವಾಕ್ಯಾನಂತರದಲ್ಲಿ ಹಿಂದಿನ ಮೂಲದಲ್ಲಿರುವ (ಪು.665) 'ಮಮ ತು' ಇತ್ಯಾದಿ ವಾಕ್ಯವನ್ನು ಅನುವೃತ್ತಿ ಮಾಡಿ

ಸೇರಿಸಿಕೊಳ್ಳಬೇಕು. ಸ್ವತಸ್ತ್ವಮತದಲ್ಲಿ ದೋಷಾಭಾವದ ಅಗತ್ಯವೂ ಇಲ್ಲ, ದೋಷ ಇಲ್ಲದಿರುವುದರಿಂದ ಜ್ಞಾನ ಸಾಮಗ್ರಿಯು ಭ್ರಮೆಯನ್ನು ಹುಟ್ಟಿಸದೆ, ಪ್ರಮಾಕ್ಕೆ ಜನಕವಾಗುತ್ತದೆ, ಎಂದು ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ಭ್ರಮೋತ್ತರ–ಪ್ರಮಾವ್ಯತಿರೇಕಸ್ಯ ವಿಶೇಷದರ್ಶನತ್ವೇನ ವಿಶೇಷದರ್ಶನ–ವ್ಯತಿರೇಕನಿಮಿತ್ತತಾ ನಾಸ್ತಿ, ಕಿಂತು ದೋಷನಿಮಿತ್ತತಾ, ಇತಿ ಅನ್ಯಥಾಸಿದ್ಧಿಮುಕ್ತ್ವಾ ಸತ್ಯಪಿ ವಿಶೇಷಪ್ರಮಾವ್ಯತಿರೇಕಾದೌ ಪ್ರಮೋತ್ಪತ್ತೇಃ ವ್ಯಭಿಚಾರಾತ್ ನ ವಿಶೇಷಪ್ರಮಾ–ಯಥಾರ್ಥಲಿಂಗಪರಾಮರ್ಶಾದೇಃ ಪ್ರಮಾಂ ಪ್ರತಿ ಹೇತುತ್ವಮ್, ದೂರೇ ಗುಣತ್ವೇನ ಇತಿ ಭಾವೇನಾಹ–ಕಿಂಚೇತಿ ॥**

ಇದುವರೆಗೆ ಭ್ರಮೋತ್ತರ ಪ್ರಮಾಭಾವವು ವಿಶೇಷದರ್ಶನತ್ವೇನ ವಿಶೇಷದರ್ಶನಾಭಾವ ಪ್ರಯುಕ್ತವಲ್ಲ, ಕಿಂತು ಸಂದೇಹಕಾರಣವಾದ ದೋಷಪ್ರಯುಕ್ತ ಎಂದು ಸಮರ್ಥಿಸಲಾಯಿತು. ಇದರಿಂದ ವಿಶೇಷದರ್ಶನವು ಭ್ರಮೋತ್ತರ ಪ್ರಮಾಕ್ಕೆ ಅನ್ಯಥಾ ಸಿದ್ಧ, ಎಂದು ತಿಳಿಸಿದಂತಾಗಿದೆ. ಮುಂದೆ, ವಿಶೇಷಪ್ರಮಾವಾಗಲಿ, ಯಥಾರ್ಥಲಿಂಗಪರಾಮರ್ಶವಾಗಲೀ ಪ್ರಮಾಕ್ಕೆ ವ್ಯಭಿಚಾರಿಯಾದುದರಿಂದ ಕಾರಣವೇ ಅಲ್ಲ, ಅದು ಗುಣತ್ವೇನ ಕಾರಣವೆನ್ನುವುದು ದೂರದಲ್ಲೇ ಉಳಿಯಿತು, ಎಂದು ತಿಳಿಸಲಾಗುವುದು.

**किञ्च, करादौ चरणादिभ्रमजन्ये संशयानन्तरभाविनि, नियमेन प्रमारूपे पुरुषसाक्षात्कारे विशेषप्रमारूपस्य, वह्न्यालोके धूमभ्रम-जन्यायां नियमेन प्रमायामनुमितौ यथार्थलिङ्गपरामर्शरूपस्य, भ्रान्तविप्रलम्भकवाक्यजन्यायां नियमेन प्रमायां शाब्दप्रतीतौ यथार्थवाक्यार्थज्ञानरूपस्य गुणस्य, अभावेऽपि प्रमात्वदर्शनेन व्यतिरेकव्यभिचारोऽपि ॥**

ಸ್ಥಾಣುರ್ವಾ ಪುರುಷೋ ವಾ, ಎಂಬ ಸಂದೇಹವು ದೂರದಿಂದ ಪುರುಷನನ್ನು ನೋಡಿ ಮೊದಲು ಬಂತು. ಆಮೇಲೆ ಪುರುಷತ್ವ ವ್ಯಾಪ್ಯಕರಾದಿಮಾನ್, ಎಂಬ ವಿಶೇಷದರ್ಶನ ಬಂತು. ಅದರಿಂದಾಗಿ 'ಅಯಂ ಪುರುಷ ಏವ' ಎಂಬ ನಿರ್ಣಯ ಬಂತು. ಈ ನಿರ್ಣಯ ಪ್ರಮಾತ್ಮಕ ಜ್ಞಾನ. ಆದರೆ, ಅದಕ್ಕೆ, ಕಾರಣವಾದ ವಿಶೇಷದರ್ಶನವು ಭ್ರಮೆ. ಏಕೆಂದರೆ, ಪುರುಷನ ಕೈಯನ್ನು ಕಾಲು ಎಂದು ತಪ್ಪಾಗಿ ತಿಳಿದು ಆ ವ್ಯಾಪ್ಯವತ್ತಾಜ್ಞಾನ ಹುಟ್ಟಿದೆ. ಹೀಗೆ, ಇಲ್ಲಿ ಪ್ರಮಾತ್ಮಕ ನಿರ್ಣಯ (ಕಾರ್ಯ) ಇದ್ದರೂ ಪ್ರಮಾತ್ಮಕವಾದ ವಿಶೇಷದರ್ಶನವು (ಕಾರಣ) ಇಲ್ಲ, ಆದ್ದರಿಂದ ವ್ಯಭಿಚಾರ.

ಅದರಂತೆ, ವಹ್ನಿಯ ಪ್ರಕಾಶವನ್ನು ಧೂಮ ಎಂದು ತಪ್ಪಾಗಿ ತಿಳಿದು 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬ ಪರಾಮರ್ಶ ಹುಟ್ಟುತ್ತದೆ. ಇದು ಪ್ರಮಾತ್ಮಕವಲ್ಲ. ಆದರೆ, ಇದರಿಂದ ಹುಟ್ಟಿದ ವಹ್ನಿಮಾನ್ ಪರ್ವತಃ, ಎಂಬ ಜ್ಞಾನ ಪ್ರಮಾತ್ಮಕ. ಇಲ್ಲಿಯೂ ಯಥಾರ್ಥಲಿಂಗಪರಾಮರ್ಶರೂಪವಾದ ಗುಣವು ಇಲ್ಲದೆಯೂ ಪ್ರಮಾತ್ಮಕ ಅನುಮಿತಿ ಬಂದಿದೆ.

ಅದರಂತೆ ಭ್ರಾಂತನಾದ ವಿಪ್ರಲಂಭಕನು ಮೋಸಮಾಡಲು 'ನದೀತೀರೇ ಪಂಚಫಲಾನಿ ಸಂತಿ' ಎಂದು ಹೇಳಿದ. ಅವನಿಗೆ 'ಫಲಾನಿ ನ ಸಂತಿ' ಎಂಬ ಭ್ರಾಂತಿ ಇದೆ. ಆದರೆ, ಅಲ್ಲಿ ಫಲ ಇತ್ತು. ಈ ಸಂದರ್ಭದಲ್ಲಿ ಹೇಳುವವನಿಗೆ ಯಥಾರ್ಥವಾಕ್ಯಾರ್ಥ ಜ್ಞಾನ ಎಂಬ ಗುಣ ಇಲ್ಲ. ಆದರೆ ಶಾಬ್ದ ಪ್ರಮಾ ಇದೆ.

ಹೀಗೆ ಪ್ರತ್ಯಕ್ಷ-ಅನುಮಿತಿ-ಶಾಬ್ದಪ್ರಮಾಗಳು ತಾರ್ಕಿಕರು ಹೇಳಿದ ಗುಣವ್ಯಭಿಚಾರಿಗಳಾಗಿವೆ. ಆದ್ದರಿಂದ ಅವು ಪ್ರಮಾ ಹೇತುಗಳೇ ಅಲ್ಲ.

## ನ್ಯಾಯದೀಪ

**ನನು ಉಕ್ತಸ್ಥಲೇ ಸರ್ವತ್ರ ಈಶ್ವರಪ್ರಮಾಮಾದಾಯ ವಿಶೇಷಪ್ರಮಾ-ಸತ್ಯಪರಾಮರ್ಶ-ಯಥಾರ್ಥವಾಕ್ಯಾರ್ಥಜ್ಞಾನಾನಾಂ ನ ವ್ಯತಿರೇಕ ವ್ಯಭಿಚಾರ ಇತಿ ಚೇನ್ನ। ಅಸ್ಮಿನ್ ಪಕ್ಷೇ 'ನಚೇಶ್ವರೇ ಸೋಽಸ್ತಿ ಇತಿ ವಾಚ್ಯಮ್' ಇತ್ಯಾದಿನಾ ದೋಷಾಣಾಂ ಪೂರ್ವಮೇವ ಉಕ್ತತ್ವಾತ್ ಇತಿ ಭಾವಃ।**

ಹಿಂದೆ ಹೇಳಿದ ಸಂದರ್ಭದಲ್ಲಿ ಈಶ್ವರನಲ್ಲಿರುವ ಪ್ರಮಾವೇ ಗುಣ. ಆದ್ದರಿಂದ ವ್ಯಭಿಚಾರ ಇಲ್ಲ, ಎಂದು ಹೇಳಬಾರದು. ಅದನ್ನು ಈ ಹಿಂದೆಯೇ (ಪು.613) ನಿರಾಕರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ಗುಣವ್ಯತಿರೇಕೇಣ ಪ್ರಮಾವ್ಯತಿರೇಕಸ್ಯಾಪಿ ದರ್ಶನಾತ್ ಉಕ್ತಸ್ಥಲೇಷ್ವಪಿ ಕಶ್ಚನ ಗುಣಃ ಕಲ್ಪ್ಯತೇ, ಇತ್ಯತಃ ವ್ಯತಿರೇಕಾಸಿದ್ಧಿದೋಷಮಾಹ-ಕಿಂಚೇತಿ ॥**

ಗುಣವಿಲ್ಲದ ಪ್ರಯುಕ್ತ ಪ್ರಮಾ ಬರದಿರುವುದೂ ಕಂಡಿದೆ. ಆದ್ದರಿಂದ ಹಿಂದಿನ ವ್ಯಭಿಚಾರ ಸ್ಥಳಗಳಲ್ಲಿ ಯಾವುದಾದರೊಂದು ಗುಣವನ್ನು ಕಲ್ಪಿಸಿ ವ್ಯಭಿಚಾರವನ್ನು ಪರಿಹರಿಸಬೇಕು, ಎಂಬ ಈ ಆಶಂಕೆಗೆ ಗುಣವ್ಯತಿರೇಕ ಪ್ರಯುಕ್ತವಾಗಿ ಪ್ರಮಾವ್ಯತಿರೇಕವೇ ಅಸಿದ್ಧ ಎಂಬುದನ್ನು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किञ्चा दुष्टायां ज्ञानसामग्र्यां सत्यामपि गुणव्यतिरेकेण प्रमाव्यतिरेको**

न दृष्ट इति गुणो न हेतुः । दृष्टो विसंवादिशुकादिवाक्ये, तत्र भ्रान्तिविप्रलम्भादिदोषाभावादिति चेन्न । तत्राप्यनित्यवाक्यदोषस्य विवक्षितार्थतत्त्वज्ञानाभावस्य वा शुकवाक्यमूलभूतवाक्यप्रयोक्तृपुंनिष्ठस्य भ्रान्त्यादेर्मूलदोषस्य वा सत्वात् । गुणव्यतिरेकेण प्रमात्वव्यतिरेके सिद्धेऽपि भ्रमत्वार्थं त्वयापि भ्रमत्वप्रयोजकत्वेन क्लृप्तस्य दोषस्य तत्र वक्तव्यत्वाच्च । अभावोऽपि हि करणापाटवविशेषादर्शनादिरिव लोकव्यवहारात् प्रमाव्यावृत्तकारणत्वात्, तत्त्वज्ञानविरोधित्वाच्च दोष एव । अङ्गीकृतं च त्वयापि 'नीलं तम' इति भ्रमे दोषन्तराभावेन अधिष्ठानभूतस्य अभावरूपस्य तमस एव दोषत्वम् । क्वचिद्गुणसन्निधानन्तु रासभवद्यादृच्छिकं वा गन्धं प्रति क्लृप्तकारण-गन्धप्रागभावसहभूत-पाकजरसप्रागभाववत्, प्रमां प्रति क्लृप्तप्रयोजक-दोषाभावसहभूतत्वेन अन्यथासिद्धं वा ।।

ಗುಣವ್ಯತಿರೇಕದಿಂದ ಪ್ರಮಾವ್ಯತಿರೇಕವು ಕಂಡಿಲ್ಲ. ದೋಷಸಹಿತವಾದ ಜ್ಞಾನಸಾಮಗ್ರೀ ಇರುವಾಗಲೂ ಪ್ರಮಾ ವ್ಯತಿರೇಕವು ಗುಣವ್ಯತಿರೇಕ ಪ್ರಯುಕ್ತವಲ್ಲ, ದೋಷಪ್ರಯುಕ್ತ. ಹೀಗೆ, ತದಭಾವೇ ತದಭಾವಃ, ಎಂಬ ವ್ಯತಿರೇಕವು ಇಲ್ಲದಿರುವುದರಿಂದ ಗುಣವು ಪ್ರಮಾ ಹೇತುವೇ ಅಲ್ಲ.

ಗುಣವ್ಯತಿರೇಕದಿಂದ ಪ್ರಮಾವ್ಯತಿರೇಕವೂ ಕಂಡಿದೆ. ಶುಕವು ಉಚ್ಚರಿಸಿದ ವಿಸಂವಾದಿವಾಕ್ಯದಲ್ಲಿ ಯಾವ ದೋಷಗಳೂ ಇಲ್ಲ. ಭ್ರಾಂತಿ, ವಿಪ್ರಲಂಭ ಮುಂತಾದ ದೋಷಗಳು ಮನುಷ್ಯನಲ್ಲಿ ಇರುತ್ತವೆ. ಶುಕದಲ್ಲಿ ಅವುಗಳು ಇಲ್ಲ. ಹೀಗೆ ದೋಷಾಭಾವ ಇದ್ದರೂ ಆ ವಾಕ್ಯದಿಂದ ಪ್ರಮಾ ಹುಟ್ಟದಿರುವುದಕ್ಕೆ ಗುಣಾಭಾವವೇ ಕಾರಣ.

ಹೀಗೆ ಹೇಳುವುದು ಸರಿಯಲ್ಲ. ಅಲ್ಲೂ ಅನಿತ್ಯವಾಕ್ಯಗಳಲ್ಲಿ ಇರಬಹುದಾದ ದೋಷಗಳು ಅಥವಾ, ಆ ವಾಕ್ಯವನ್ನು ಉಚ್ಚರಿಸುವ ಶುಕದಲ್ಲಿ ದೋಷ ಇಲ್ಲದಿದ್ದರೂ ಅದನ್ನು ಹೇಳಿಕೊಟ್ಟ ಪುರುಷನಲ್ಲಿ ಭ್ರಾಂತ್ಯಾದಿ ದೋಷಗಳು ಇರಬಹುದು.

ಈ ಕಲ್ಪನೆಯನ್ನು ಸ್ವತಸ್ತ್ವವಾದಿಗಳಾದ ನಾವು ಮಾತ್ರ ಮಾಡುವುದಲ್ಲ. ಪರತಸ್ತ್ವವಾದಿಗಳೂ ಏನಾದರೊಂದು ದೋಷವನ್ನು ಕಲ್ಪನೆ ಮಾಡಲೇಬೇಕು. ಏಕೆಂದರೆ, ಅಲ್ಲಿ ಗುಣಾಭಾವದಿಂದ ತತ್ಕಾರ್ಯವಾದ ಪ್ರಮಾಭಾವ ಇರಬಹುದು. ಆದರೆ, ಅಲ್ಲಿ ಭ್ರಮೆ ಬರುತ್ತದೆ. ಅದು ದೋಷಜನ್ಯ.

ಅದಕ್ಕಾಗಿ ಅಲ್ಲಿ ಅವರಾದರೂ ದೋಷವನ್ನು ಕಲ್ಪಿಸಲೇಬೇಕು. ವಿವಕ್ಷಿತಾರ್ಥ ತತ್ತ್ವಜ್ಞಾನದ ಅಭಾವವೇ ಅಲ್ಲಿ ದೋಷ. ಹೀಗೆ ದೋಷಪ್ರಯುಕ್ತವಾಗಿಯೇ ಅಲ್ಲೂ ಪ್ರಮಾಭಾವ ಇದೆ. ಗುಣಾಭಾವ ಪ್ರಯುಕ್ತವಲ್ಲ.

ಅಭಾವವು ದೋಷವಾಗುವುದು ಹೇಗೆ? ಎಂದರೆ, ಅಭಾವವೂ ದೋಷವಾಗುತ್ತದೆ-ಕರಣ ಪಾಟವ ಗುಣ. ಕರಣಾಪಾಟವ ದೋಷ. ಅದರಂತೆ ವಿಶೇಷ-ಅದರ್ಶನವು ಭ್ರಮೋತ್ತರ ಪ್ರಮಾ ಸ್ಥಳದಲ್ಲಿ (ಸಂದೇಹಕಾಲದಲ್ಲಿ ಪ್ರಮಾ ಹುಟ್ಟದಿರಲು) ದೋಷ.

1. ಪ್ರಕೃತದಲ್ಲಿ, ವಿವಕ್ಷಿತಾರ್ಥತತ್ತ್ವಜ್ಞಾನ ಇಲ್ಲದಿರುವುದು ದೋಷ ಎಂದು ಲೋಕ ವ್ಯವಹಾರಸಿದ್ಧವಾಗಿದೆ.
2. ಅದು ಪ್ರಮಾಕ್ಕೆ ಕಾರಣವಲ್ಲ, ಭ್ರಮೆಗೆ ಮಾತ್ರ ಕಾರಣ.
3. ತತ್ತ್ವಜ್ಞಾನಕ್ಕೆ ವಿರೋಧಿಯಾಗಿದೆ.

ಹೀಗೆ, ಮೂರು ಕಾರಣಗಳಿಂದಾಗಿ ವಿವಕ್ಷಿತಾರ್ಥತತ್ತ್ವಜ್ಞಾನದ ಅಭಾವವೂ ದೋಷವಾಗಬಹುದು.

ನೈಯಾಯಿಕರೂ ಅಭಾವವು ದೋಷವೆಂದು ಒಪ್ಪಿರುತ್ತಾರೆ-ನೈಯಾಯಿಕರ ಮತದಲ್ಲಿ 'ನೀಲಂ ತಮಃ' ಎಂಬ ಜ್ಞಾನವು ಭ್ರಮೆ. ಈ ಭ್ರಮೆ ಬರುವುದಕ್ಕೆ ಕಣ್ಣಿನಲ್ಲಿಯಾಗಲೀ, ಪರಿಸರದಲ್ಲಿಯಾಗಲೀ ಯಾವುದೇ ದೋಷಗಳು ಇರುವುದಿಲ್ಲ. ಅನಿವಾರ್ಯವಾಗಿ ತಮಸ್ಸೇ ದೋಷವೆಂದು ಪರಿಗಣಿಸಬೇಕು. ತಮಸ್ಸು ನ್ಯಾಯಮತದಲ್ಲಿ ಅಭಾವರೂಪವಾದುದು. ಅಲ್ಲಿಗೆ, ಅಭಾವವೂ ದೋಷವೆಂದು ನೈಯಾಯಿಕರೂ ಒಪ್ಪಿದ್ದಾರೆ.

ಹೀಗೆ ಪ್ರಮಾಕ್ಕೆ ಗುಣದ ಅಪೇಕ್ಷೆಯೇ ಇಲ್ಲ. ಆದರೂ ಕೆಲವು ಕಡೆ ಆಪ್ತೋಕ್ತತ್ವ ರೂಪಗುಣವೂ ಪ್ರಮಾ ಬರುವಲ್ಲಿ ಇರುತ್ತದೆ. ಅದು ಘಟಕ್ಕೆ ರಾಸಭ ಸನ್ನಿಧಾನದಂತೆ ಯಾದೃಚ್ಛಿಕ. ಅಥವಾ, ಪಾಕದಿಂದ ಗಂಧಾದಿಗುಣಗಳು ಹುಟ್ಟುವಾಗ ಗಂಧೋತ್ಪತ್ತಿಪೂರ್ವದಲ್ಲಿ ಗಂಧಪ್ರಾಗಭಾವದ ಜೊತೆಗೆ ಪಾಕಜ ರಸಪ್ರಾಗಭಾವವೂ ಇರುತ್ತದೆ. ಆದರೂ ಅದು ಅನ್ಯಥಾಸಿದ್ಧ. ಅದರಂತೆ, ಪ್ರಮಾಪೂರ್ವದಲ್ಲಿ ದೋಷಾಭಾವದ ಜೊತೆಯಲ್ಲಿರುವ ಗುಣವೂ ಅನ್ಯಥಾ ಸಿದ್ಧ. ಆದ್ದರಿಂದ ಪ್ರಮಾವು ಗುಣಜನ್ಯವಲ್ಲ.

## ನ್ಯಾಯದೀಪ

**ಶಂಕತೇ-ದೃಷ್ಟ ಇತಿ ॥ ಸತ್ಯಪಿ ದೋಷಾಭಾವೇ ಗುಣವ್ಯತಿರೇಕೇಣ ಪ್ರಮಾವ್ಯತಿರೇಕ ಇತ್ಯನುಷಂಗಃ। ತತ್ರ ದೋಷಾಭಾವಸತ್ವಮ್**

**ಉಪಪಾದಯತಿ–ತತ್ರೇತಿ ॥ ಆದಿಪದೇನ ಪ್ರಮಾದ–ಕರಣಾಪಾಟವಯೋಃ ಗ್ರಹಃ । ಅಪ್ರಾಮಾಣ್ಯಸ್ಯ ದೋಷಜನ್ಯತ್ವವಾದಿನಾ ತ್ವಯಾಪಿ ತತ್ರ ಕಶ್ಚಿದ್ದೋಷಃ ಕಲ್ಪ್ಯಃ । ಅನ್ಯಥಾ ತಸ್ಯ ಪರತಸ್ತ್ವಹಾನೇಃ ಇತ್ಯಾಹ–ಗುಣವ್ಯತಿರೇಕೇಣೇತಿ ॥**

**ನನು ವಿವಕ್ಷಿತಾರ್ಥ–ತತ್ತ್ವಜ್ಞಾನಾಭಾವಸ್ಯ ಅಭಾವರೂಪತ್ವಾತ್ ಕಥಂ ದೋಷತ್ವಮ್, ಇತ್ಯತ ಆಹ–ಅಭಾವೋऽಪಿ ಹೀತಿ ॥**

**ಅನ್ವಯಾಭಾವಾದಿರಾದಿಪದಾರ್ಥಃ । ಅಧಿಷ್ಠಾನೇತಿ ॥ ನೈಲ್ಯಾರೋಪಾಧಿಷ್ಠಾನ ಭೂತಸ್ಯ ಆಲೋಕಾಭಾವ ರೂಪಸ್ಯ ಇತ್ಯರ್ಥಃ । ಕುತ್ರಚಿದ್ವಾ ಗುಣಾನುವಿಧಾನಸ್ಯ ಕಾ ಗತಿಃ? ಇತ್ಯತ ಆಹ–ಕ್ವಚಿದಿತಿ ॥ ಪ್ರಮಾಯಾಂ ಗುಣಾನುವಿಧಾನಮ್ ಅಭ್ಯುಪೇತ್ಯಾಪಿ ಮಣ್ಯುಕ್ತಾನ್ಯಥಾಸಿದ್ಧಿಮಾಹ–ಗಂಧಮಿತಿ ॥**

ಮೂಲದಲ್ಲಿ 'ದೃಷ್ಟಃ' ಎಂಬುದು ಶಂಕಾಗ್ರಂಥ. ಅಲ್ಲಿ, ದೋಷಾಭಾವ ಇದ್ದರೂ ಗುಣವ್ಯತಿರೇಕ ಪ್ರಯುಕ್ತವಾಗಿ ಪ್ರಮಾವ್ಯತಿರೇಕವು ದೃಷ್ಟವಾಗಿದೆ, ಎಂದು ಅಧ್ಯಾಹಾರ ಮಾಡಿ ವಾಕ್ಯವನ್ನು ಪೂರ್ಣಗೊಳಿಸಬೇಕು.

ಅಪ್ರಾಮಾಣ್ಯಂ ಪರತಃ, ಎಂದು ಹೇಳುವ ನೈಯಾಯಿಕರೂ ವಿಸಂವಾದಿ ಶುಕವಾಕ್ಯದಲ್ಲಿ ಯಾವುದಾದರೊಂದು ದೋಷವನ್ನು ಹೇಳಲೇಬೇಕು ಎಂದು 'ತತ್ರ' ಎಂಬ ಮೂಲವಾಕ್ಯದ ಅರ್ಥ.

'ನೀಲಂ ತಮಃ' ಎಂಬ ಜ್ಞಾನ ಭ್ರಮೆ. ಈ ಭ್ರಮೆಯಲ್ಲಿ ಆಲೋಕಾಭಾವರೂಪವಾದ ತಮಸ್ಸೇ ಅಧಿಷ್ಠಾನ. ಅದರಲ್ಲಿ ನೈಲ್ಯದ ಆರೋಪ. ಈ ಆರೋಪಕ್ಕೆ ಅಧಿಷ್ಠಾನವಾದ ತಮಸ್ಸೇ ದೋಷ. ಅದು ಅಭಾವರೂಪ.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ರಸಪ್ರಾಗಭಾವಃ ಅನ್ಯತ್ರ ಕ್ಲೃಪ್ತಾನ್ವಯ–ವ್ಯತಿರೇಕತ್ವಾತ್ ಅಸ್ತು ಅನ್ಯಥಾಸಿದ್ಧಃ । ಗುಣಸನ್ನಿಧಿಸ್ತು ನಾನ್ಯತ್ರ ಕಾರ್ಯೇ ಕ್ಲೃಪ್ತಾನ್ವಯಾದಿಃ । ಪ್ರಕೃತಕಾರ್ಯೇಣ ವಿನಾ ಕಾರ್ಯಾಂತರೋಪಕ್ಷೀಣೋ ಹಿ ಅನ್ಯಥಾಸಿದ್ಧಃ । ನ ಹಿ ಗುಣಃ ಕಾರ್ಯಾಂತರೇಣ ಸಿದ್ಧಃ । ಯೇನ ಅನ್ಯಥಾಸಿದ್ಧಃ ಸ್ಯಾತ್ ಇತ್ಯತ ಆಹ–ಕಿಂಚೇತಿ ॥**

ಗಂಧಕ್ಕೆ ರಸಪ್ರಾಗಭಾವವು ಅನ್ಯಥಾಸಿದ್ಧವಾಗಬಹುದು. ಏಕೆಂದರೆ, ರಸಪ್ರಾಗಭಾವಕ್ಕೆ ರಸದೊಂದಿಗೆ ಅನ್ವಯ–ವ್ಯತಿರೇಕಗಳು (ಅಪಾಕಜ ಸ್ಥಳದಲ್ಲಿ) ಕ್ಲೃಪ್ತವಾಗಿವೆ. ಆದರೆ, ಗುಣಸನ್ನಿಧಿಗೆ ಹೀಗೆ ಕಾರ್ಯಾಂತರದೊಂದಿಗೆ ಅನ್ವಯವ್ಯತಿರೇಕಗಳು ಕ್ಲೃಪ್ತವಲ್ಲ. ಪ್ರಕೃತ ಕಾರ್ಯವಲ್ಲದ

ಕಾರ್ಯಾಂತರೋತ್ಪಾದದಲ್ಲಿ ಕೃತಕೃತ್ಯವಾದುದು ಪ್ರಕೃತಕಾರ್ಯಕ್ಕೆ ಅನ್ಯಥಾ ಸಿದ್ಧವಾಗುತ್ತದೆ. ಗುಣವು ಹೀಗೆ ಕಾರ್ಯಾಂತರ ಜನನದಲ್ಲಿ ಕೃತಕೃತ್ಯವಲ್ಲ. ಆದ್ದರಿಂದ ಅನ್ಯಥಾಸಿದ್ಧವಾಗುವುದು ಹೇಗೆ? ಅದಕ್ಕಾಗಿ, ದೋಷಾಂತರವನ್ನು ಕಿಂಚ ಎಂದು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**किञ्च, त्वयाप्यनन्यथासिद्धशब्दस्य यौगिकत्वे आत्माश्रयाल्लोकव्यवहारानुसारेण पारिभाषिक एवार्थः उक्तः। एवं च भ्रमरूपविपरीतकार्योत्पादक–दोषनिरासकस्य गुणस्य विपरीतकार्योत्पादक निरासकत्वरूपान्यैव अन्यथासिद्धिः परिभाष्यताम्। लोके घटं प्रति दण्डत्व इव कदलीकाण्डरूपविपरीतकार्योत्पादकस्य वेत्रबीजसम्बन्धिदावाग्निदाहस्य विरोधिनि पदार्थे वेत्राङ्कुरं प्रति कारणत्वाव्यवहारात्। दाहविरोधिनो हेतुत्वे क्वाप्युत्सर्गापवादाभावप्रसङ्गाच्च।**

**यस्य हि स्वसामग्रीवशेन प्रसक्तिः तदौत्सर्गिकम्। सत्यामपि सामग्र्यां यद्वशात्तद्विपरीतं कार्यं भवति तत्तस्यापवादकम्। न च दाहविरोधिनो हेतुत्वे दाहस्थले वेत्राङ्कुरसामग्र्यस्ति। अन्यथा दण्डाभावाद्घटानुत्पत्तिरपि तदुत्पत्तेरपवादः स्यात् ॥**

ನೈಯಾಯಿಕರು ಅನ್ಯಥಾಸಿದ್ಧಶಬ್ದವು ಯೌಗಿಕ ಎಂದು ಒಪ್ಪಿಲ್ಲ. ಅದು, ಯೌಗಿಕವೆಂದಾದರೆ ಕಾರ್ಯಾಂತರ ಜನಕತ್ವೇನ ಸಿದ್ಧ ಎಂದೋ ಅಥವಾ ಇದನ್ನು ಬಿಟ್ಟು ಬೇರೊಂದು ಕಾರಣದಿಂದ ಕಾರ್ಯವು ಹುಟ್ಟಿದೆ ಎಂದೋ ಅದಕ್ಕೆ ಅರ್ಥವಾಗುತ್ತದೆ. ಹೀಗೆ ಯೌಗಿಕವಾದ ಅರ್ಥಹೇಳಿದರೆ ಆತ್ಮಾಶ್ರಯ ದೋಷ ಬರುತ್ತದೆ. ಹೇಗೆಂದರೆ– ಅನನ್ಯಥಾಸಿದ್ಧತ್ವವು ಕಾರಣತಾಲಕ್ಷಣದಲ್ಲಿ ಸೇರಿದೆ. ಮತ್ತೆ ಅನ್ಯಥಾಸಿದ್ಧಿಶರೀರದಲ್ಲಿ ಕಾರಣತ್ವವು ಸೇರಿದರೆ, ಕಾರಣತ್ವಶರೀರದಲ್ಲಿ ಕಾರಣತ್ವವು ಘಟಕವಾದಂತಾಗಿ ಜ್ಞಪ್ತೌ ಆತ್ಮಾಶ್ರಯದೋಷ. ಅದಕ್ಕಾಗಿ, ಮಣಿಕಾರ ಅನುಮಾನಗ್ರಂಥದಲ್ಲಿ ಪಾರಿಭಾಷಿಕವಾದ ಮೂರು ವಿಧದ ಅನ್ಯಥಾಸಿದ್ಧಿಯನ್ನು ಹೇಳಿದ್ದಾನೆ. ಅದರಂತಹ ಪಾರಿಭಾಷಿಕವಾದ ಒಂದು ಅನ್ಯಥಾ ಸಿದ್ಧಿಯನ್ನು ಪ್ರಕೃತ ಗುಣಕ್ಕೂ ಕಲ್ಪಿಸಬೇಕು. ಅದು ಹೇಗೆಂದರೆ– ಪ್ರಮೆಗೆ ವಿಪರೀತಕಾರ್ಯ ಭ್ರಮೆ. ಅಂತಹ ವಿಪರೀತ ಕಾರ್ಯೋತ್ಪಾದಕವಾದುದು ದೋಷ. 'ತನ್ನಿರಾಸಕತ್ವಂ' ಇದೇ ಗುಣಕ್ಕಿರುವ ಅನ್ಯಥಾಸಿದ್ಧಿ ಎಂದು ಕಲ್ಪಿಸಬಹುದು. ಲೋಕದಲ್ಲಿ ದಂಡತ್ವಕ್ಕೆ ಘಟಕಾರಣತಾವ್ಯವಹಾರ ಇಲ್ಲ. ಅದಕ್ಕಾಗಿ ದಂಡತ್ವಕ್ಕೆ ಅನ್ಯಥಾಸಿದ್ಧತ್ವವನ್ನು ಹೇಳಲಾಗುತ್ತದೆ. ಅದರಂತೆ, ವಿಪರೀತ ಕಾರ್ಯ–ಕಾರಣ ನಿರಾಸಕಕ್ಕೂ ಕಾರಣತಾವ್ಯವಹಾರ ಇಲ್ಲ.

ಉದಾಹರಣೆಗೆ–ವೇತ್ರಾಂಕುರವಿಪರೀತವಾದ ಕಾರ್ಯ ಕದಲೀಕಾಂಡ. ಆ ಕಾರ್ಯಕ್ಕೆ ಕಾರಣ–ದಾವದಹನ. ಅದಕ್ಕೆ ವಿರೋಧಿಯಾದುದು ತದಭಾವ. ಆ ತದಭಾವವು ವೇತ್ರಾಂಕುರಕ್ಕೆ ಕಾರಣ, ಎಂಬ ವ್ಯವಹಾರ ಇಲ್ಲ. ಅಷ್ಟೇ ಅಲ್ಲ, ದಾಹವಿರೋಧಿಯಾದುದೂ ವೇತ್ರಾಂಕುರಕ್ಕೆ ಕಾರಣವೆಂದಾದಲ್ಲಿ ಉತ್ಸರ್ಗ–ಅಪವಾದವ್ಯವಸ್ಥೆಯೇ ಇಲ್ಲದಾದೀತು. ಹಿಂಸೆಯು ಪಾಪಹೇತು ಎನ್ನುವುದು ಉತ್ಸರ್ಗ. ಯಾಗೀಯ ಹಿಂಸೆ ಪುಣ್ಯಹೇತು, ಇದು ಅಪವಾದ. ಇಲ್ಲಿ ಹಿಂಸೆಯ ಪಾಪಜನಕತ್ವಕ್ಕೆ ವಿಪರೀತವಾದ ಕಾರ್ಯ ಪುಣ್ಯಜನಕತ್ವ. ಅದಕ್ಕೆ ಕಾರಣವಾದ ಯಾಗಸಂಬಂಧಕ್ಕೆ ವಿರೋಧಿಯಾದುದು ಯಾಗ ಸಂಬಂಧಾಭಾವ. ಅದೂ ಪಾಪಕ್ಕೆ ಹೇತುವಾದರೆ ಯಾಗಸಂಬಂಧಾಭಾವ ವಿಶಿಷ್ಟವಾದ ಹಿಂಸೆಯು ಪಾಪಜನಕ ಎಂದಂತಾಗುತ್ತದೆ. ಇದಕ್ಕೆ ಅಪವಾದವೇ ಇಲ್ಲ. ಆದ್ದರಿಂದ ಇದು ಉತ್ಸರ್ಗನಿಯಮ ಹೇಗಾದೀತು? ಉತ್ಸರ್ಗವೇ ಇಲ್ಲದಿರುವಾಗ ಅಪವಾದವೆಲ್ಲಿ?

ಯಾವ ಕಾರ್ಯವು, ತನಗೆ ಬೇಕಾದ ಸಾಮಗ್ರಿಗಳೆಲ್ಲವೂ ಇದ್ದಾಗ, ಪ್ರಸಕ್ತವಾಗುತ್ತದೋ ಅದು ಉತ್ಸರ್ಗ. ವೇತ್ರಾಂಕುರಕ್ಕೆ ಬೇಕಾದ ಸಾಮಗ್ರಿಗಳು ವೇತ್ರಬೀಜಕ್ಕೆ ಆಗುವ ಧರಣಿ–ಸಲಿಲ ಸಂಯೋಗ. ಅದಿದ್ದಾಗ ವೇತ್ರಾಂಕುರ ರೂಪಕಾರ್ಯವು ಪ್ರಸಕ್ತವಾಗುತ್ತದೆ. ಆದ್ದರಿಂದ ಇದು ಉತ್ಸರ್ಗ. ಈ ಎಲ್ಲ ಸಾಮಗ್ರಿಗಳು ಇದ್ದಾಗಲೂ ಯಾವುದರಿಂದಾಗಿ ಸಹಜಕಾರ್ಯಕ್ಕೆ ವಿರುದ್ಧವಾದ ಕಾರ್ಯವು ಹುಟ್ಟುವುದೋ ಅದು ಅಪವಾದ. ವೇತ್ರ ಬೀಜಕ್ಕೆ ದಾವದಹನಸಂಬಂಧವಾದಾಗ ಧರಣಿ ಸಲಿಲ ಸಂಯೋಗವಿದ್ದರೂ ಕದಲೀಕಾಂಡರೂಪವಾದ ವಿಪರೀತಕಾರ್ಯವು ಹುಟ್ಟುತ್ತದೆ. ಆದ್ದರಿಂದ ದಾವದಹನವು ಅಪವಾದ. ಒಂದುವೇಳೆ ಆ ದಾವದಾಹಕ್ಕೆ ವಿರೋಧಿಯಾದುದೂ ವೇತ್ರಾಂಕುರಕ್ಕೆ ಕಾರಣವಾದರೆ ವೇತ್ರಬೀಜವು ದಗ್ಧವಾದಾಗ ವೇತ್ರಾಂಕುರಕ್ಕೆ ಬೇಕಾದ ಸಾಮಗ್ರಿಯೇ (ದಾಹವಿರೋಧಿಯಾದ ದಾಹಾಭಾವ) ಇಲ್ಲವಾದ ಕಾರಣದಿಂದಾಗಿಯೇ ವೇತ್ರಾಂಕುರವು ಹುಟ್ಟುವುದಿಲ್ಲ, ಹೊರತು ದಾವದಹನರೂಪ ಪ್ರತಿಬಂಧಕ ಪ್ರಯುಕ್ತವಾಗಿ ಅಲ್ಲ. ಏವಂಚ, ದಾವದಹನವಿದ್ದಾಗ ಕಾರಣಾಭಾವಾದೇವ ವೇತ್ರಾಂಕುರ ರೂಪವಾದ ಕಾರ್ಯ ಪ್ರಸಕ್ತಿಯೇ ಇಲ್ಲ. ಹೀಗೆ ಅದರಲ್ಲಿ ಉತ್ಸರ್ಗದ ಲಕ್ಷಣವೇ ಇಲ್ಲದಿರುವುದರಿಂದ ಅದು ಉತ್ಸರ್ಗ ವಾಗುವುದು ಹೇಗೆ? ಕಾರಣಸಾಮಗ್ರ್ಯಭಾವ ಪ್ರಯುಕ್ತವಾದ ಕಾರ್ಯಾಭಾವವೂ ಉತ್ಸರ್ಗ ವಾಗುವುದಾದಲ್ಲಿ ದಂಡಾಭಾವದಿಂದ ಘಟಾನುತ್ಪತ್ತಿಯೂ ಘಟೋತ್ಪತ್ತಿಗೆ ಅಪವಾದವೆಂದಾದೀತು.

## ನ್ಯಾಯದೀಪ

**ಆತ್ಮಾಶ್ರಯಾದಿತಿ ॥ ಕಾರಣಲಕ್ಷಣ–ಶರೀರಪ್ರವಿಷ್ಟಸ್ಯ ಅನ್ಯಥಾ–ಸಿದ್ಧಶಬ್ದಸ್ಯ ಕಾರ್ಯಾಂತರಜನಕತ್ವಮಿತಿ ವಾ ಅನೇನ ವಿನಾ ಕಾರಣಾಂತರೇಣ ಕಾರ್ಯಂ ಸಿದ್ಧಂ=ಉತ್ಪನ್ನಮಿತಿ ವಾ ಅರ್ಥೋಕ್ತೌ ಆತ್ಮಾಶ್ರಯಾತ್ ಇತ್ಯರ್ಥಃ ।**

**ಪಾರಿಭಾಷಿಕ ಏವೇತಿ ॥ ಅನನ್ಯಥಾಸಿದ್ಧ–ನಿಯತಪೂರ್ವವರ್ತಿತ್ವಜಾತೀಯತ್ವಂ ಕಾರಣತ್ವಮ್ । ಅನ್ಯಥಾಸಿದ್ಧತ್ವಂ ಚ ತ್ರಿಧಾ–**

**1. ಯೇನ ಸಹೈವ ಯಸ್ಯ ಯಂ ಪ್ರತಿ ಪೂರ್ವವೃತ್ತಿತ್ವಮ್ ಅವಗಮ್ಯತೇ ತತ್ತಥಾ । ಘಟಂ ಪ್ರತಿ ದಂಡರೂಪಸ್ಯ ।**

**2. ಅನ್ಯಂ ಪ್ರತಿ ಪೂರ್ವವೃತ್ತಿತ್ವೇ ಜ್ಞಾತೇ ಏವ ಯಂ ಪ್ರತಿ ಯಸ್ಯ ಪೂರ್ವವೃತ್ತಿತ್ವಮ್ ಅವಗಮ್ಯತೇ । ಶಬ್ದಂ ಪ್ರತಿ ಪೂರ್ವವೃತ್ತಿತ್ವೇ ಜ್ಞಾತೇ ಏವ ಜ್ಞಾನಂ ಪ್ರತಿ ಆಕಾಶಸ್ಯ ।**

**3. ಅನ್ಯತ್ರ ಕ್ಲೃಪ್ತನಿಯತ–ಪೂರ್ವವರ್ತಿನ ಏವ ಕಾರ್ಯಸಂಭವೇ ತತ್ಸಹಭೂತತ್ವಮ್ । ಯಥಾ ಗಂಧವತಿ ಗಂಧಾನುತ್ಪಾದಾತ್ ಗಂಧಂ ಪ್ರತಿ ಗಂಧಪ್ರಾಗಭಾವಸ್ಯ ನಿಯತಪೂರ್ವವೃತ್ತಿತ್ವಕಲ್ಪನಾತ್ ಪಾಕಜಸ್ಥಲೇ ಗಂಧಂ ಪ್ರತಿ ರೂಪಾದಿಪ್ರಾಗಭಾವಾನಾಮ್ ಅನ್ಯಥಾ ಸಿದ್ಧತ್ವಮ್ ।**

**ಇತ್ಯಾದಿ ಗ್ರಂಥೇನ ಅನುಮಾನಖಂಡೇ ಕಾರಣತಾವಾದೇ ಉಕ್ತಃ ಇತ್ಯರ್ಥಃ ।**

**'ಅನ್ಯೈವ ಅನ್ಯಥಾಸಿದ್ಧಿಃ' ಇತ್ಯನಂತರಂ 'ಲೋಕವ್ಯವಹಾರಾನುಸಾರೇಣ' ಇತ್ಯನುಕರ್ಷಃ । ಸ ಚಾಸಿದ್ಧಃ ಇತ್ಯತ ಆಹ–ಲೋಕೇ ಇತಿ ॥ ದಂಡತ್ವೇ ಯಥಾ ಕಾರಣತಾ–ಅವ್ಯವಹಾರಃ ತಥಾ ಕಾರಣತ್ವಾವ್ಯವಹಾರಾತ್ । ಕಿಂತು ಅನ್ಯಥಾಸಿದ್ಧತ್ವೇನೈವ ವ್ಯವಹಾರಾತ್, ಇತ್ಯರ್ಥಃ ।**

ಮೂಲದಲ್ಲಿ ಹೇಳಿದ ಆತ್ಮಾಶ್ರಯವನ್ನು ಹೀಗೆ ಸಮರ್ಥಿಸಬೇಕು. ಕಾರಣಲಕ್ಷಣದಲ್ಲಿ ಅನ್ಯಥಾಸಿದ್ಧಶಬ್ದವು ಸೇರಿದೆ. ಅದಕ್ಕೆ ಕಾರ್ಯಾಂತರಜನಕತ್ವಂ ಎಂದೋ, ಈ ಕಾರಣವನ್ನು ಬಿಟ್ಟು (ರಾಸಭವನ್ನು ಬಿಟ್ಟು) ಕಾರಣಾಂತರಗಳಿಂದಲೇ (ದಂಡಾದಿಗಳಿಂದಲೇ) ಕಾರ್ಯವು (ಘಟ) ಉತ್ಪನ್ನವಾಗಿದೆ, ಎಂದೋ ಅರ್ಥ ಹೇಳಿದರೆ ಅನ್ಯಥಾಸಿದ್ಧಲಕ್ಷಣದಲ್ಲಿ ಕಾರಣತ್ವವು ಪ್ರವಿಷ್ಟವಾದುದರಿಂದ ಕಾರಣತ್ವ ಲಕ್ಷಣದಲ್ಲಿ ಕಾರಣತ್ವವು ಸೇರಿದಂತಾಗಿ ಆತ್ಮಾಶ್ರಯ ದೋಷ.

ಪಾರಿಭಾಷಿಕವಾದ ಅನ್ಯಥಾಸಿದ್ಧಿಯನ್ನು ಮಣಿಕಾರ ಅನುಮಾನಖಂಡದಲ್ಲಿ ಮೂರು ರೀತಿಯಾಗಿ ನಿರೂಪಿಸಿದ್ದಾನೆ.

1. ಯಾವುದಕ್ಕೆ ಇನ್ನೊಂದರಿಂದ ಕೂಡಿಯೇ ಕಾರ್ಯಾನ್ವಯ–ವ್ಯತಿರೇಕವಿದೆಯೋ ಆ ಕಾರ್ಯಕ್ಕೆ ಅದು ಅನ್ಯಥಾಸಿದ್ಧ. ಅದಕ್ಕೆ ಉದಾಹರಣೆ–ದಂಡರೂಪ. ಘಟಕ್ಕೆ ಕಾರಣವಾದ ದಂಡವನ್ನು ಸೇರಿಸಿಕೊಂಡೇ ದಂಡರೂಪಕ್ಕೆ ಅನ್ವಯ–ವ್ಯತಿರೇಕಗಳನ್ನು ಹೇಳಬೇಕು. ದಂಡರೂಪಸತ್ತ್ವೇ ಘಟಸತ್ತ್ವಮ್, ಎಂದು. ಹೊರತು ದಂಡವನ್ನು ಬಿಟ್ಟು 'ರೂಪಸತ್ತ್ವೇ ಘಟಸತ್ತ್ವಂ' ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ದಂಡರೂಪವು ಅನ್ಯಥಾಸಿದ್ಧ.

2. ಇನ್ನೊಂದು ಕಾರ್ಯಕ್ಕೆ ಪೂರ್ವವೃತ್ತಿ ಎಂದು ತಿಳಿದ ಮೇಲೆಯೇ ಯಾವುದು ಪ್ರಕೃತಕಾರ್ಯಕ್ಕೆ ಪೂರ್ವವೃತ್ತಿ ಎಂದು ತಿಳಿಯುವುದೋ, ಅದು ಅನ್ಯಥಾಸಿದ್ಧ. ಉದಾಹರಣೆಗೆ– ಆಕಾಶವು ಜ್ಞಾನಕ್ಕೆ ಅನ್ಯಥಾಸಿದ್ಧ. ಆಕಾಶವು ಆಕಾಶತ್ವೇನ ಜ್ಞಾನಕ್ಕೆ ಕಾರಣ, ಎಂದು ತಿಳಿಯಬೇಕು. ಆಕಾಶತ್ವ ಎಂದರೆ ಶಬ್ದಸಮವಾಯಿಕಾರಣತ್ವ. ಅಂದರೆ, ಶಬ್ದಪೂರ್ವವೃತ್ತಿತ್ವ. ಆಗ ಆಕಾಶವು ಶಬ್ದಪೂರ್ವವೃತ್ತಿ ಎಂದು ತಿಳಿದರೆ ಮಾತ್ರ ಜ್ಞಾನಂ ಪ್ರತಿ ಪೂರ್ವವೃತ್ತಿ, ಎಂದು ಜ್ಞಾತವಾಗುತ್ತದೆ. ಆದ್ದರಿಂದ ಅದು ಜ್ಞಾನಂ ಪ್ರತಿ ಅನ್ಯಥಾ ಸಿದ್ಧ.

3. ಬೇರೆ ಕಡೆಯಲ್ಲಿ, ಒಂದು ಕಾರ್ಯಕ್ಕೆ ನಿಯತಪೂರ್ವವೃತ್ತಿಯೆಂದು ಸಿದ್ಧವಾದ ಕಾರಣದಿಂದಲೇ ಈ ಸ್ಥಳದಲ್ಲೂ ಆ ಕಾರ್ಯವು ಉತ್ಪನ್ನವಾಗುತ್ತಿರಲು ಅದರ ಜೊತೆಯಲ್ಲಿರುವ ಇತರವು ಅನ್ಯಥಾಸಿದ್ಧ. ಉದಾಹರಣೆಗೆ, ಅಪಾಕಜ ಸ್ಥಳದಲ್ಲಿ ಘಟದಲ್ಲಿ ಒಂದು ಗಂಧವು ಇರುವಾಗಲೇ ಗಂಧಾಂತರವು ಉತ್ಪನ್ನವಾಗಲಿ ಎಂಬ ಆಪತ್ತಿಯ ಪರಿಹಾರಕ್ಕಾಗಿ ಗಂಧಕ್ಕೆ ಗಂಧಪ್ರಾಗ ಭಾವವು ಕಾರಣ, ಎಂದು ಹೇಳಲೇಬೇಕು. ಹಾಗಿರುವಾಗ, ಪಾಕಜಸ್ಥಳದಲ್ಲೂ ಗಂಧಪ್ರಾಗ ಭಾವದಿಂದಾಗಿಯೇ ಗಂಧೋತ್ಪತ್ತಿಯಾಗುತ್ತಿರಲು ಅದರ ಜೊತೆಯಲ್ಲಿರುವ ರೂಪಪ್ರಾಗಭಾವವು ಅನ್ಯಥಾಸಿದ್ಧ.

ಈ ಅನ್ಯಥಾಸಿದ್ಧಿಗಳು ಪ್ರಕೃತದಲ್ಲಿ ಇಲ್ಲದಿದ್ದರೂ ಬೇರೆಯೇ ರೀತಿಯ ಅನ್ಯಥಾಸಿದ್ಧಿಯನ್ನು ಕಲ್ಪಿಸಬೇಕು ಎಂದು ಮೂಲದಲ್ಲಿ ಇದೆ. ಅದಕ್ಕೆ 'ಲೋಕಸಿದ್ಧವಾದ ಅಕಾರಣತ್ವವ್ಯವಹಾರಕ್ಕೆ ಅನುಗುಣವಾಗಿ' ಎಂಬ ಅಂಶವನ್ನು ಸೇರಿಸಿಕೊಳ್ಳಬೇಕು. ಅಕಾರಣತ್ವವ್ಯವಹಾರವು ಅಸಿದ್ಧವಲ್ಲ ಎಂಬುದನ್ನು 'ಲೋಕೇ' ಎಂಬ ವಾಕ್ಯದಲ್ಲಿ ತೋರಿಸಿಕೊಡಲಾಗಿದೆ. ಅದರ ಭಾವಾರ್ಥ– ದಂಡತ್ವದಲ್ಲಿ ಹೇಗೆ ಅಕಾರಣತ್ವವ್ಯವಹಾರ ಇದೆಯೋ ಅದರಂತೆ ವಿಪರೀತಕಾರ್ಯಜನಕಕ್ಕೆ ವಿರೋಧಿ ಯಾದುದರಲ್ಲೂ ಕಾರಣತ್ವವ್ಯವಹಾರ ಇಲ್ಲ, ಅನ್ಯಥಾಸಿದ್ಧತ್ವವ್ಯವಹಾರವೇ ಇದೆ, ಎಂದು. ಆದ್ದರಿಂದ ಭ್ರಮಜನಕದೋಷನಿರಾಸಕವಾದ ಗುಣವೂ ಪ್ರಮಾಕ್ಕೆ ಅನ್ಯಥಾಸಿದ್ಧ.

## ನ್ಯಾಯದೀಪ

**ಏತೇನ, 'ಕಿಂಚೇದಂ ಗುಣಾನ್ವಯವ್ಯತಿರೇಕಿತ್ವಂ ಅನ್ಯತ್ರಾನುಪಕ್ಷೀಣಂ, ಸಾಮಾನ್ಯಂ ವಾ । ನಾದ್ಯಃ, ದೋಷನಿರಾಸೋಪಕ್ಷೀಣತ್ವಾತ್ ।' ಇತ್ಯಾದಿ ದೇವತಾಧಿಕರಣ (1.3.8) ಟೀಕಾ ವಿವೃತಾ ।**

**ಲೋಕವ್ಯವಹಾರಾಭಾವೇಽಪಿ ಅಸ್ತು ಹೇತುತ್ವಮ್, ಇತ್ಯತಃ 'ಔತ್ಸರ್ಗಿಕತ್ವಾತ್ ಪ್ರಾಮಾಣ್ಯಸ್ಯ' ಇತಿ ತತ್ತ್ವನಿರ್ಣಯ ಟೀಕೋಕ್ತಂ ವಿಪಕ್ಷಬಾಧಕತ್ವೇನ ಸಂಯೋಜ್ಯ ತದ್ವ್ಯನಕ್ತಿ–ದಾಹೇತ್ಯಾದಿನಾ ॥**

**ಅಸ್ತ್ವೇವಂ ಉತ್ಸರ್ಗಾಪವಾದ-ಶಬ್ದಾರ್ಥಃ। ವಿರೋಧಿನೋಽಪಿ ಹೇತುತ್ವೇ ತದಭಾವಪ್ರಸಂಗಃ ಕುತಃ? ಇತ್ಯತ ಆಹ– ನ ಚೇತಿ॥ ದಾಹಸ್ಥಲೇ ಇತ್ಯಾದಿ॥ ತಥಾಚ ಸತ್ಯಾಮಪಿ ಸಾಮಗ್ರ್ಯಾಂ, ಇತ್ಯಾದೇಃ ಅಭಾವಾತ್ ಉತ್ಸರ್ಗಾಪವಾದಾಭಾವಪ್ರಸಂಗಃ, ಇತ್ಯರ್ಥಃ॥**

**ಏತೇನ, ತತ್ತ್ವನಿರ್ಣಯಟೀಕಾಯಾಂ ಜ್ಞಪ್ತಿಸ್ಥಲೇ ಅಭಿಹಿತಮಿದಂ ಬಾಧಕಂ ಉತ್ಪತ್ತಿಸ್ಥಲೇಽಪಿ ಅನುಸಂಧೇಯಮ್ ಇತಿ ಸೂಚಿತಮ್।**

**ಅನ್ಯಥೇತಿ॥ ಸಾಮಗ್ರ್ಯಭಾವೇಽಪಿ ಕಾರ್ಯಾನುತ್ಪತ್ತೇಃ ಅಪವಾದತ್ವೇ ಇತ್ಯರ್ಥಃ। ತದುತ್ಪತ್ತೇರಿತಿ। ಘಟೋತ್ಪತ್ತೇರಿತ್ಯರ್ಥಃ।**

ಮೂಲದಲ್ಲಿರುವ 'ದಾಹವಿರೋಧಿನಃ' ಎಂಬ ವಾಕ್ಯಪರ್ಯಂತ ಗ್ರಂಥದಿಂದ ಬ್ರಹ್ಮಸೂತ್ರದ ದೇವತಾಧಿಕರಣದಲ್ಲಿ ವೇದಾಪೌರುಷೇಯತ್ವವನ್ನು ಸಾಧನೆ ಮಾಡುವ ಪ್ರಸಂಗದಲ್ಲಿ ಬಂದಿರುವ ''ಕಿಂಚೇದಂ'' ಇತ್ಯಾದಿ ಟೀಕಾವಾಕ್ಯದ ಅರ್ಥವನ್ನು ವಿವರಿಸಲಾಗಿದೆ. ಅಲ್ಲಿ ಗುಣವು ದೋಷನಿರಾಸ ಮಾಡುವಲ್ಲೇ ಚರಿತಾರ್ಥ, ಎಂದು ಸಮರ್ಥಿಸಲಾಗಿದೆ.

ಲೋಕವ್ಯವಹಾರವು ಇಲ್ಲದೇ ಇದ್ದರೂ ವಿಪರೀತಕಾರ್ಯೋತ್ಪಾದಕ ವಿರೋಧಿಯೂ ಕಾರಣವಾಗಲಿ, ಎಂದು ಆಕ್ಷೇಪಿಸಿದರೆ ಅದಕ್ಕೆ ತತ್ತ್ವನಿರ್ಣಯ ಟೀಕೆಯಲ್ಲಿ 'ಔತ್ಸರ್ಗಿಕತ್ವಾತ್ ಪ್ರಾಮಾಣ್ಯಸ್ಯ' ಎಂದು ಹೇಳಿರುವ ಬಾಧಕವನ್ನು ಸೇರಿಸಿ ಅದನ್ನೇ ವಿವರಿಸಲಾಗಿದೆ– ದಾಹ ಇತ್ಯಾದಿ ಮೂಲದಿಂದ.

ಮೂಲದಲ್ಲಿ ಹೇಳಿದಂತೆ ಉತ್ಸರ್ಗ–ಅಪವಾದ ಶಬ್ದಗಳ ಅರ್ಥವು ಆಗಿರಲಿ. ಆದರಿಂದ ವಿಪರೀತಕಾರ್ಯೋತ್ಪಾದ ವಿರೋಧಿಯೂ ಕಾರ್ಯಹೇತು, ಎಂದು ಹೇಳಿದರೆ ಉತ್ಸರ್ಗಾಪ-ವಾದಗಳು ಇಲ್ಲದಾಗುವುದು ಹೇಗೆ? ಅದಕ್ಕೆ ಉತ್ತರ–ನ ಚ ಎಂಬ ವಾಕ್ಯ.

ಈ ಮೂಲದಲ್ಲಿ, ತತ್ವನಿರ್ಣಯದಲ್ಲಿ ಜ್ಞಪ್ತೌ ಸ್ವತಸ್ತ್ವವನ್ನು ಹೇಳುವ ಸಂದರ್ಭದಲ್ಲಿ ಹೇಳಿರುವ ಈ ಬಾಧಕವನ್ನು ಉತ್ಪತ್ತೌ ಸ್ವತಸ್ತ್ವ ಪ್ರಸಂಗದಲ್ಲೂ ಅನುಸಂಧಾನ ಮಾಡಿಕೊಳ್ಳಬೇಕು, ಎಂದು ಸೂಚಿಸಲಾಗಿದೆ.

**अत एव यत्र संशयादिरूपा दोषाः प्रतिबन्धकाः तत्रैव तन्निरासार्थं भूयोवयवेन्द्रियसन्निकर्ष-विशेषदर्शनादिगुणापेक्षा । अन्यथा संशयोत्तरप्रमयेव तदनुत्तरप्रमयापि विशेषदर्शनमपेक्ष्येत ।।**

ಗುಣವು ದೋಷನಿರಾಸದಲ್ಲೇ ಉಪಕ್ಷೀಣವಾದುದರಿಂದಲೇ ಪ್ರಮೋತ್ಪತ್ತಿಗೆ ಎಲ್ಲಿ ಸಂಶಯಾದಿದೋಷಗಳು ಪ್ರತಿಬಂಧಕವಾಗಿರುತ್ತವೋ ಅಲ್ಲಿ ಮಾತ್ರ ಭಯೋಽವಯವೇಂದ್ರಿಯ

ಸನ್ನಿಕರ್ಷ ಮತ್ತು ವಿಶೇಷದರ್ಶನಾದಿ ಗುಣಗಳ ಆವಶ್ಯಕತೆ ಇರುತ್ತದೆ. ಅದು ಸಾಕ್ಷಾತ್ ಪ್ರಮಾಹೇತುವಾಗಿದ್ದಲ್ಲಿ ಸಂಶಯೋತ್ತರ ಪ್ರಮೆಯಂತೆ ಸಂಶಯಾನುತ್ತರ ಪ್ರಮೆಯಲ್ಲೂ ವಿಶೇಷದರ್ಶನಾದಿಗಳ ಅಗತ್ಯವಿರುತ್ತಿತ್ತು.

## ನ್ಯಾಯದೀಪ

**ಅತ ಏವೇತಿ ॥ ದೋಷನಿರಾಸೋಪಕ್ಷೀಣತ್ವಾದೇವ, ಇತ್ಯರ್ಥಃ। ಅನ್ಯಥೇತಿ ॥ ಸರ್ವತ್ರ ಪ್ರಮಾಮಾತ್ರೇ ತದ್ಧೇತುತಾಯಾಮ್ ಇತ್ಯರ್ಥಃ।**

ಅತಏವ ಎಂದರೆ, ಗುಣವು ದೋಷನಿರಾಸದಲ್ಲೇ ಉಪಕ್ಷೀಣವಾದುದರಿಂದ ಅನ್ಯಥಾ ಎಂದರೆ ಎಲ್ಲ ಪ್ರಮಾಕ್ಕೂ ಅದು ಹೇತುವಾಗಿದ್ದಲ್ಲಿ, ಎಂದರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವಸ್ತು ದೋಷನಿರಾಸಕತ್ವಂ ಗುಣಸ್ಯ, ಪ್ರಾಮಾಣ್ಯಹೇತುತ್ವಂ ಚಾಸ್ತು। ಅಪ್ರಾಮಾಣ್ಯೇ, ಗುಣನಿರಾಸೇ ಚ ದೋಷಾಣಾಂ ಹೇತುತ್ವಮಿವ ಇತ್ಯತಃ 'ನ ಚೋಭಯಕಾರಣತ್ವಕಲ್ಪಕಮಸ್ತಿ' ಇತಿ ಭಾಷ್ಯಟೀಕಾಂ ವಿವೃಣ್ವನ್ ಆಹ-ಕಿಂಚೇತಿ॥**

ಗುಣವು ದೋಷನಿರಾಸಕವಾಗಿರಲಿ, ಆದರೂ ಅದು ಪ್ರಾಮಾಣ್ಯಕ್ಕೆ ಕಾರಣವೂ ಆಗಲಿ. ದೋಷವು ಹೀಗೆಯೇ ಉಭಯಕಾರಣವಾಗಿದೆ. ಅದು ಪ್ರಾಮಾಣ್ಯಕಾರಣವಾದ ಗುಣಕ್ಕೂ ನಿರಾಸಕ ವಾಗಿದೆ, ಅಪ್ರಾಮಾಣ್ಯಕ್ಕೂ ಕಾರಣವಾಗಿದೆ. ಅದರಂತೆಯೇ ಗುಣವೂ ಉಭಯಕಾರಣವಾಗಲಿ. ಇದಕ್ಕೆ ಸೂತ್ರಭಾಷ್ಯಟೀಕಾದಲ್ಲಿರುವ (1.3.8ಅಧಿ.) ವಾಕ್ಯವನ್ನು ವಿವರಿಸುತ್ತಾ 'ಕಿಂಚ' ಎಂದು ಸಮಾಧಾನವನ್ನು ಹೇಳಲಾಗಿದೆ.

**किञ्च दोषनिरासेऽवश्यं कारणस्य गुणस्य प्रमायामपि कारणत्वे गौरवम् । नच प्रमारूपं कार्यमनन्यथासिद्धम् । येनोभयं कल्प्येत ॥**

ದೋಷನಿರಾಸಕ್ಕೆ ಗುಣವು ಕಾರಣ ಎಂದು ಅವಶ್ಯ ಹೇಳಲೇಬೇಕು. ಮತ್ತೆ ಅದು ಪ್ರಮಾಕ್ಕೂ ಕಾರಣ ಎಂದು ಕಲ್ಪಿಸುವುದು ಗೌರವ. ಒಂದುವೇಳೆ ಪ್ರಮಾರೂಪವಾದ ಕಾರ್ಯವು ಗುಣಮನ್ಯಥಾ ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಉತ್ಪತ್ತಿಯಾಗುವುದಿಲ್ಲ ಎನ್ನುವ ಅನಿವಾರ್ಯತೆ ಇದ್ದಲ್ಲಿ ಗುಣಕ್ಕೆ ಪ್ರಮಾಹೇತುತ್ವವನ್ನೂ ಕಲ್ಪಿಸಬಹುದಿತ್ತು. ಆದರೆ, ಅಂತಹ ಅನಿವಾರ್ಯತೆ ಇಲ್ಲ, ಆದ್ದರಿಂದ ಗುಣವು ಉಭಯಹೇತು ಎಂದು ಕಲ್ಪಿಸಬೇಕಾಗಿಲ್ಲ.

## ನ್ಯಾಯದೀಪ

**ಪ್ರಮಾಯಾಃ ಪರತಸ್ತ್ವಾನ್ಯಥಾನುಪಪತ್ತಿಸಿದ್ಧಗೌರವಂ ನ ದೋಷಾಯ, ಇತ್ಯತ ಆಹ– ನ ಚೇತಿ ॥ ಅನ್ಯಥೇತಿ ॥ ಜ್ಞಾನಸಾಮಾನ್ಯಸಾಮಗ್ರೀತಃ ನ ಸಿದ್ಧಮಿತಿ ನ ಚೇತ್ಯರ್ಥಃ ॥**

ಪ್ರಾಮಾಣ್ಯಕ್ಕೆ ಪರತಸ್ತ್ವವು ಗುಣಕಾರಣತ್ವಮನ್ಯಥಾ ಅನುಪಪನ್ನವಾದುದರಿಂದ ಗುಣಕ್ಕೆ ಉಭಯಕಾರಣತ್ವಪ್ರಯುಕ್ತ ಗೌರವವು ದೋಷವಲ್ಲ, ಎನ್ನುವುದಕ್ಕೆ ಉತ್ತರ 'ನಚ' ಎಂಬ ವಾಕ್ಯದಲ್ಲಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಾಗುಕ್ತಾನುಕೂಲತರ್ಕಂ ನಿರಾಹ–ಏತೇನೇತಿ ॥**

ಪ್ರಾಮಾಣ್ಯಕ್ಕೆ ಜ್ಞಾನಸಾಮಗ್ರಿಗಳೇ ಕಾರಣ, ಗುಣವು ಕಾರಣವಲ್ಲವೆಂದಾದಲ್ಲಿ ಅಪ್ರಮಾವೂ ಪ್ರಮಾ ಆದೀತು, ಎಂಬ ಹಿಂದಿನ ಅನುಕೂಲತರ್ಕವನ್ನು ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**एतेन, अप्रमापि प्रमाविशेषः स्यादिति निरस्तम्। प्रमात्व-प्रयोजिकाया अदुष्टसामग्र्या भ्रमेऽभावात् । अन्यथा दावाग्निदग्धवेत्र-बीजजन्यकदल्यङ्कुरोऽपि वेत्राङ्कुरविशेषः स्यात् ।**

**ननु तत्र दाहेन दोषेण सहजाया वेत्राङ्कुरजननशक्तेः नाशात् विपरीत शक्तेश्चोत्पादात् वेत्राङ्कुरसामग्र्येव नास्तीति चेत् समं प्रकृतेऽपि । ममापि लोकसिद्धौत्सर्गिकापवादकसाम्यमेव प्रामाण्याप्रामाण्ययोरपे-क्षितम् ।।**

ಪ್ರಾಮಾಣ್ಯಕ್ಕೆ ದೋಷಾಭಾವವೂ ಕಾರಣ ಎಂದು ಹೇಳಿರುವುದರಿಂದ 'ಜ್ಞಾನಸಾಮಾನ್ಯ ಕಾರಣದಿಂದಲೇ ಪ್ರಮಾವು ಹುಟ್ಟುವುದಾದಲ್ಲಿ ಅಪ್ರಮಾವೂ ಪ್ರಮಾ ವಿಶೇಷವಾಗಲಿ' ಎಂದು ಹಿಂದೆ (ಪು.662) ಮಾಡಿರುವ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಪ್ರಾಮಾಣ್ಯಕ್ಕೆ ಪ್ರಯೋಜಕವಾದ ಸಾಮಗ್ರೀ ದೋಷಾಭಾವಸಹಿತವಾದ ಜ್ಞಾನಸಾಮಗ್ರೀ. ಅದು ಭ್ರಮಸ್ಥಳದಲ್ಲಿ ಇಲ್ಲ, ಅಲ್ಲಿ ದೋಷಗಳೇ ಇವೆ. ಹೀಗಿದ್ದರೂ ಭ್ರಮೆಯೂ ಪ್ರಮಾ ವಿಶೇಷವಾಗಲಿ, ಎಂದು ಆಪಾದಿಸುವುದಾದಲ್ಲಿ ದಾವದಗ್ಧ ವೇತ್ರಬೀಜದಿಂದ ಜನ್ಯವಾದ ಕದಲೀ ಅಂಕುರವೂ ವೇತ್ರಾಂಕುರ

ವಿಶೇಷವಾಗಲೀ ಎಂದೂ ಆಪಾದಿಸಬೇಕಾಗುತ್ತದೆ. ಅಲ್ಲೂ ವೇತ್ರಾಂಕುರಕ್ಕೆ ಬೇಕಾದ ಸಾಮಗ್ರಿಯೂ ಇದೆ, ದಾವದಹನರೂಪ ವಿಶೇಷ ಕಾರಣವೂ ಇದೆ.

ಹೀಗೆ ಪ್ರತ್ಯಾಪಾದನೆ ಸರಿಯಲ್ಲ–ದಾವದಾಹದಿಂದ ವೇತ್ರಬೀಜದಲ್ಲಿರುವ ವೇತ್ರಾಂಕುರ ಜನನಶಕ್ತಿಯು ನಾಶವಾಗಿದೆ, ಕದಲೀಕಾಂಡ ಜನನ ಶಕ್ತಿಯು ಉತ್ಪನ್ನವಾಗಿದೆ. ಹೀಗಾಗಿ ಅಲ್ಲಿ ವೇತ್ರಾಂಕುರಕ್ಕೆ ಬೇಕಾದ ಸಾಮಗ್ರಿಯೇ ಇಲ್ಲ, ಹೇಗೆ ವೇತ್ರಾಂಕುರವಿಶೇಷವಾಗಲು ಸಾಧ್ಯ?

ಈರೀತಿಯ ಸಮಾಧಾನವು ಪ್ರಕೃತದಲ್ಲೂ ಸಮಾನ. ದೋಷದಿಂದಾಗಿ ಜ್ಞಾನಕರಣಗಳಲ್ಲಿ ಇರುವ ಪ್ರಮಾಜನನ ಶಕ್ತಿಯು ನಾಶವಾಗಿ ಅಪ್ರಮಾಜನನ ಶಕ್ತಿಯು ಉತ್ಪನ್ನವಾಗಿದೆ. ಹೀಗಿರುವಾಗ ಅಪ್ರಮಾವೂ ಪ್ರಮಾವಿಶೇಷವಾಗುವುದು ಹೇಗೆ ಸಾಧ್ಯ? ಪ್ರಾಮಾಣ್ಯಸ್ವತಸ್ತ್ವವಾದಿಗಳಾದ ನಮಗೆ ಲೋಕಸಿದ್ಧವಾದ ಉತ್ಸರ್ಗಾಪವಾದದ ಸಾಮ್ಯವೇ ಪ್ರಾಮಾಣ್ಯಾಪ್ರಾಮಾಣ್ಯಗಳಿಗೆ ವಿವಕ್ಷಿತವಾಗಿದೆ.

## ನ್ಯಾಯದೀಪ

**ಏತೇನೇತಿ ॥ ಪ್ರಮಾಯಾಃ ದೋಷಾಭಾವಸಹಿತ–ಜ್ಞಾನಸಾಮಗ್ರೀಜನ್ಯತ್ವ ಕಥನೇನ ಇತ್ಯರ್ಥಃ। ಪರಮುಖೇನೈವ ಸಮಾಧಿಂ ವಾಚಯತಿ–ನನ್ವಿತಿ ॥ ಅಸ್ತ್ವೇವಂ ಲೋಕೇ, ಪ್ರಾಮಾಣ್ಯಾದೌ ಕಥಮ್? ಇತ್ಯತ ಆಹ–ಮಮಾಪೀತಿ ॥ ಅನನ್ಯಥಾಸಿದ್ಧಶಬ್ದಾರ್ಥೇ ತವ ಯಥಾ, ತಥಾ ಇತ್ಯಪೇರರ್ಥಃ ॥**

ಮೂಲದಲ್ಲಿ ಏತೇನ ಎಂದರೆ, ಪ್ರಮಾಜ್ಞಾನವು ದೋಷಾಭಾವ ಸಹಿತವಾದ ಜ್ಞಾನಸಾಮಗ್ರಿಯಿಂದ ಜನ್ಯವಾಗುತ್ತದೆ, ಎಂದು ಹಿಂದೆ ಹೇಳಿರುವುದರಿಂದ, ಎಂದರ್ಥ.

ಮಮಾಪಿ, ಎಂಬಲ್ಲಿರುವ ಅಪಿ ಶಬ್ದಕ್ಕೆ, ತಾರ್ಕಿಕರು ಹೇಗೆ ಅನನ್ಯಥಾಸಿದ್ಧತ್ವವನ್ನು ಪಾರಿಭಾಷಿಕವಾಗಿ ಪರಿಷ್ಕರಿಸುತ್ತಾರೋ ಹಾಗೆ ನಾವೂ ಉತ್ಸರ್ಗಾಪವಾದ ಶಬ್ದದ ಅರ್ಥವನ್ನೂ ಪರಿಷ್ಕರಿಸುತ್ತೇವೆ, ಎಂದು ಅರ್ಥ.

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರಮಾಯಾಮ್ ಅಭಿಮತಸಾಮಗ್ರ್ಯಭಾವೇನೈವ ಭ್ರಮಸ್ಯ ನ ಪ್ರಮಾವಿಶೇಷತ್ವಂ ಇತಿ ಸ್ವಯಮೇಕಂ ಸಮಾಧಿಮುಕ್ತ್ವಾ ಅನ್ಯಾಪದೇಶೇನ ಸಮಾಧ್ಯಂತರಮಾಹ– ಅನ್ಯೇ ತ್ವಿತಿ ॥**

ಪ್ರಮಾತ್ಮಕ ಜ್ಞಾನಕ್ಕೆ ಅಭಿಮತವಾದ ಸಾಮಗ್ರೀ ದೋಷಾಭಾವ. ಭ್ರಮಸ್ಥಳದಲ್ಲಿ ಅದು ಇಲ್ಲದಿರುವುದರಿಂದ, ಭ್ರಮೆಯೂ ಪ್ರಮಾ ವಿಶೇಷವಾಗಲಿ ಎಂಬ ತಾರ್ಕಿಕರ ಆಕ್ಷೇಪಕ್ಕೆ

ಅವಕಾಶವಿಲ್ಲ. ಇದು ಶ್ರೀವ್ಯಾಸರಾಜರೇ ಹೇಳಿದ ಸಮಾಧಾನ. ಇದಕ್ಕೆ ಮತ್ತೆ ಕೆಲವರು ಹೇಳುವ ಸಮಾಧಾನವನ್ನು ಮುಂದೆ ತಿಳಿಸುತ್ತಾರೆ.

**अन्ये तु, यथा नीलरूपसामग्रीजन्यस्यापि चित्ररूपस्य न नीलरूपविशेषत्वम् । यथा च विरुद्धनिश्चयद्वयसामग्रीजन्यस्य संशयस्य न निश्चयविशेषत्वं, यथा च पाकजरूपसामग्रीजन्यस्य रसस्पर्शादेर्न रूपविशेषत्वं तथा भ्रमस्यापि न प्रमाविशेषत्वमित्याहुः ॥**

ಕೆಲವರು ಭ್ರಮೆಯೂ ಪ್ರಮಾ ವಿಶೇಷವಾದೀತು, ಎಂಬ ತಾರ್ಕಿಕರ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳುತ್ತಾರೆ– ನೀಲರೂಪಕ್ಕೆ ಅವಯವಗತರೂಪಾದಿಗಳು ಕಾರಣವೆಂದು ಕ್ಲೃಪ್ತವಾಗಿದೆ. ಆದರೆ ಚಿತ್ರಪಟದಲ್ಲಿ ಆ ನೀಲರೂಪ ಜನಕವಾದ ಸಾಮಗ್ರಿಯಿಂದ 'ಚಿತ್ರ' ಎಂಬ ರೂಪಾಂತರವೇ ಹುಟ್ಟುತ್ತದೆ. ನೀಲರೂಪವಿಶೇಷವು ಹುಟ್ಟುವುದಿಲ್ಲ. ಪುರುಷತ್ವವ್ಯಾಪ್ಯವತ್ತಾಜ್ಞಾನ ಪುರುಷತ್ವ ನಿಶ್ಚಯಕ್ಕೆ ಕಾರಣ. ಸ್ಥಾಣುತ್ವವ್ಯಾಪ್ಯವತ್ತಾಜ್ಞಾನ ಸ್ಥಾಣುತ್ವನಿಶ್ಚಯಕ್ಕೆ ಕಾರಣ. ಈ ಎರಡು ನಿರ್ಣಯಸಾಮಗ್ರೀಗಳಿಂದ ಜನ್ಯವಾದ ಸಂದೇಹವು ನಿಶ್ಚಯವಿಶೇಷವಾಗುವುದಿಲ್ಲ.

ಪಾಕಜ ರೂಪಕ್ಕೆ ತೇಜಃಸಂಯೋಗ–ದೇಶ–ಕಾಲಾದಿ ಸಾಮಗ್ರಿಗಳು ಕಾರಣ. ಆದರಿಂದಲೇ ಜನ್ಯವಾದ ರಸ–ಸ್ಪರ್ಶಾದಿ ಗುಣಗಳು ರೂಪವಿಶೇಷಗಳಲ್ಲ. ಆದರಂತೆ, ಪ್ರಮಾಸಾಮಗ್ರೀ ಜನ್ಯವಾದರೂ ಭ್ರಮೆಯು ಪ್ರಮಾವಾಗಬೇಕಾಗಿಲ್ಲ.

## ನ್ಯಾಯದೀಪ

**ನ ನೀಲೇತ್ಯಾದಿ ॥ ಕಿಂತು ವಿಜಾತೀಯ ರೂಪಾಂತರತ್ವಮ್, ಇತಿ ಭಾವಃ। ತಥೈವ ಉದಯನಾದ್ಯುಕ್ತೇಃ ಇತಿ ಭಾವಃ। ವಿರುದ್ಧೇತಿ ॥ 'ವಿರುದ್ಧೋಭಯಾರೋಪ–ಸಾಮಗ್ರೀದ್ವಯಸಮಾರೋಪಾತ್, ಉಭಯಾರೋಪಃ ಏಕ ಏವ ಭವತಿ। ಸ ಏವ ಸಂಶಯಃ।' ಇತಿ ಜ್ಞಪ್ತಿಪ್ರಾಮಾಣ್ಯೇ ಮಣ್ಯುಕ್ತೇರಿತಿ ಭಾವಃ। ಯಥಾ ಚ ಪಾಕಜೇತಿ ॥ ತೇಜಃ ಸಂಯೋಗ–ಕಾಲ–ಅದೃಷ್ಟಾದಿ ಸಾಮಗ್ರ್ಯಾಃ ತುಲ್ಯತ್ವಾತ್, ಇತಿ ಭಾವಃ।**

**ಅಸ್ಮಿನ್ ಪಕ್ಷೇ ದೃಷ್ಟಾಂತಾನಾಮ್ ಅಸಂಪ್ರತಿಪತ್ತಿಃ, ವಕ್ಷ್ಯಮಾಣದಿಶಾ ಪ್ರಮಾಸಾಮಗ್ರ್ಯಾಂ ದೋಷಾಭಾವಸ್ಯ ಆವಶ್ಯಕತ್ವಾತ್ ಸಾಮಗ್ರ್ಯಭಾವಾದೇವ**

**ತದ್ವಿಶೇಷತ್ವಾಭಾವೋಪಪತ್ತೌ ಉಕ್ತಸಮಾಧಿರಯುಕ್ತಾ ಇತ್ಯುರುಚಿಬೀಜಂ ಧ್ಯೇಯಮ್ ।**

ನೀಲರೂಪಜನಕ–ಸಾಮಗ್ರಿಯಿಂದ ಪಟದಲ್ಲಿ ನೀಲರೂಪವಲ್ಲ, ಕಿಂತು ವಿಜಾತೀಯವಾದ ಚಿತ್ರರೂಪವು ಹುಟ್ಟುತ್ತದೆ, ಎಂದು 'ಸ ನೀಲ' ಇತ್ಯಾದಿ ಮೂಲದ ಅಭಿಪ್ರಾಯ. ಉದಯನಾಚಾರ್ಯರೂ ಕುಸುಮಾಂಜಲಿಯಲ್ಲಿ ಹೀಗೆ, ದೋಷಾಭಾವವೇ ಪ್ರಮಾಕಾರಣವೆಂದು ಹೇಳಿದ್ದಾರೆ.

ನಿಶ್ಚಯಕಾರಣವಾದ ವ್ಯಾಪ್ಯವತ್ತಾಜ್ಞಾನದಿಂದ ಸಂದೇಹವು ಬರುತ್ತದೆ, ಎಂದು ಮಣಿಕಾರನೂ ಒಪ್ಪಿರುತ್ತಾನೆ–'ವಿರುದ್ಧವಾದ ಸ್ಥಾಣುತ್ವ–ಪುರುಷತ್ವ ರೂಪ ಧರ್ಮದ್ವಯಗಳ ಆರೋಪಸಾಮಗ್ರೀದ್ವಯಗಳ ಆರೋಪದಿಂದ (ಉಭಯಕೋಟಿವ್ಯಾಪ್ಯವತ್ತಾಜ್ಞಾನ) ಉಭಯ ವಿಷಯಕವಾದ ಒಂದು ಜ್ಞಾನ ಹುಟ್ಟುತ್ತದೆ, ಅದೇ ಸಂದೇಹ' (ಪು.191) ಎಂದು. ಇದು ಜ್ಞಪ್ತಿ ಪ್ರಾಮಾಣ್ಯವಾದದಲ್ಲಿರುವ ಮಣಿಕಾರನ ವಾಕ್ಯ.

ಈ ಪಕ್ಷದಲ್ಲಿ ಶ್ರೀವ್ಯಾಸರಾಜರಿಗೆ ಹೆಚ್ಚು ಆದರವಿಲ್ಲ. ಅದಕ್ಕೆ ಕಾರಣ— ಇಲ್ಲಿ ಕೊಟ್ಟಿರುವ ದೃಷ್ಟಾಂತಗಳು ನೈಯಾಯಿಕರಿಗೆ ಸಂಪ್ರತಿಪನ್ನವಲ್ಲ. ಅಲ್ಲದೆ, ಹಿಂದೆ ಹೇಳಿದಂತೆ ಪ್ರಮಾಜ್ಞಾನವು ಭ್ರಮೆಗೆ ಕಾರಣವಲ್ಲದ ದೋಷಾಭಾವರೂಪವಾದ ವಿಶೇಷಕಾರಣದಿಂದ ಜನ್ಯವಾಗಿದೆ. ಆದರಿಂದಾಗಿಯೆ ಭ್ರಮೆಯೂ ಪ್ರಮಾವಿಶೇಷವಾಗಲಿ, ಎಂಬ ಆಕ್ಷೇಪವನ್ನು ಪರಿಹರಿಸಬಹುದು. ಆದಕ್ಕಾಗಿ ಪರಿಹಾರಾಂತರದ ಅಗತ್ಯವಿಲ್ಲ.

**तस्मादन्वयव्यभिचारात् व्यतिरेकव्यभिचारात् अन्यथासिद्धेश्च गुणो न प्रमाहेतुः । भ्रमप्रतिबन्दी तूद्धरिष्यते ।**

ಹೀಗೆ ಗುಣ ಇದ್ದೂ 'ಪೀತಃ ಶಂಖಃ' ಎಂಬ ಭ್ರಮೆ ಹುಟ್ಟುವುದರಿಂದ ಗುಣವು ಪ್ರಮಾಕ್ಕೆ ಕಾರಣ ಎಂದು ನಿರ್ಧರಿಸಲು ಅನ್ವಯವ್ಯಭಿಚಾರ ಇದೆ. ಕರದಲ್ಲಿ ಚರಣಭ್ರಾಂತಿ ಬಂದು ಪುರುಷತ್ವವ್ಯಾಪ್ಯಕರಾದಿಮಾನ್ ಎಂಬ ವ್ಯಾಪ್ಯದರ್ಶನ ಜನ್ಯವಾದ 'ಪುರುಷ ಏವಾಯಂ' ಎಂಬ ಪ್ರಮಾ ಬಂದಾಗ ಅಲ್ಲಿ ವಿಶೇಷದರ್ಶನಪ್ರಮಾರೂಪವಾದ ಗುಣ ಇಲ್ಲ, ಹೀಗೆ ವ್ಯತಿರೇಕ ವ್ಯಭಿಚಾರವೂ ಇದೆ. ಗುಣವು ಭ್ರಮಹೇತುವಾದ ದೋಷಕ್ಕೆ ನಿರಾಸಕತಯಾ ಪ್ರಮಾಕ್ಕೆ ಅನ್ಯಥಾ ಸಿದ್ಧವೂ ಆಗಿದೆ. ಹೀಗೆ, ಮೂರು ದೋಷಗಳು ಇರುವುದರಿಂದ ಗುಣವು ಪ್ರಮಾಕ್ಕೆ ಹೇತುವಲ್ಲ.

ಪ್ರಮಾಕ್ಕೆ ಗುಣವಂತೆ ಭ್ರಮೆಗೂ ದೋಷವು ಕಾರಣವಲ್ಲವೆಂದಾದೀತು, ಎಂಬ ಪ್ರತಿಬಂದಿಯನ್ನು ಮುಂದಿನ 17ನೇ ಪ್ರಕರಣದಲ್ಲಿ ನಿರಾಸ ಮಾಡುತ್ತೇವೆ.

## ನ್ಯಾಯದೀಪ

**ತಸ್ಮಾದಿತ್ಯುಕ್ತಂ ವ್ಯನಕ್ತಿ–ಅನ್ವಯೇತಿ ॥ ಪೀತಃ ಶಂಖಃ, ಇತ್ಯಾದಿ ಭ್ರಮೇ ಇತ್ಯರ್ಥಃ। ವ್ಯತಿರೇಕೇತಿ ॥ ಕರಾದೌ ಚರಣಾದಿಭ್ರಮಜನ್ಯೇ, ಇತ್ಯಾದಿನಾ ಉಕ್ತ ಪ್ರಮಾವಿಶೇಷೇ ಇತ್ಯರ್ಥಃ। ಅನ್ಯಥೇತಿ ॥ ವಿರೋಧಿನಿರಾಸೋಪಕ್ಷೀಣತ್ವಾಚ್ಚ ಇತ್ಯರ್ಥಃ। ಉಭಯಕಾರಣತ್ವೇ ಗೌರವಾತ್, ಕಲ್ಪಕಾಭಾವಾತ್, ಅಪ್ರಮಾಯಾಃ ಪ್ರಮಾವಿಶೇಷತ್ವಾಪತ್ತಿರೂಪ ಬಾಧಕಾಭಾವಾಚ್ಚ ಇತ್ಯಪಿ ಧ್ಯೇಯಮ್ ॥**

**ನನ್ವೇವಂ ದೋಷಸ್ಯಾಪಿ ಭ್ರಮಹೇತುತ್ವ–ಖಂಡನ–ಸಂಭವೇನ ಭ್ರಮೋಽಪಿ ಸ್ವತ ಏವ ಸ್ಯಾತ್। ತತ್ರ ಯಾ ಗತಿಃ ಸಾ ಪ್ರಮಾಯಾಮಪಿ ಇತ್ಯತ ಆಹ– ಭ್ರಮೇತಿ ॥ ಸ್ವತಸ್ತ್ವಾನುಮಾನೋಕ್ತ್ಯನಂತರಂ ಉದ್ಧರಿಷ್ಯತೇ,(ಪ್ರ.17) ಇತ್ಯರ್ಥಃ।**

ಮೂಲದಲ್ಲಿ ತಸ್ಮಾತ್ ಎಂದು ಹೇಳಿರುವುದನ್ನೇ ಅನ್ವಯವ್ಯಭಿಚಾರಾತ್, ಎಂದು ಮುಂತಾಗಿ ವಿವರಿಸಲಾಗಿದೆ. 'ಪೀತಃ ಶಂಖಃ' ಎಂಬ ಭ್ರಮೆಯಲ್ಲಿ ಗುಣಕ್ಕೆ ಅನ್ವಯವ್ಯಭಿಚಾರ. ಕರವು ಚರಣ, ಎಂದು ಭ್ರಮಿಸಿ ಬಂದ ವ್ಯಾಪ್ಯವತ್ತಾಜ್ಞಾನ ಜನ್ಯವಾದ ನಿರ್ಣಯದಲ್ಲಿ ವ್ಯತಿರೇಕವ್ಯಭಿಚಾರ. ವಿರೋಧಿಯಾದ ದೋಷನಿರಾಸದಲ್ಲೇ ಗುಣವು ಉಪಕ್ಷೀಣವಾಗುವುದರಿಂದ ಅನ್ಯಥಾಸಿದ್ಧಿ. ಹೀಗೆ ಮೂರು ಕಾರಣಗಳಿಂದ ಗುಣಜನ್ಯತ್ವವು ಪ್ರಮಾಕ್ಕೆ ಇಲ್ಲ. ಇವುಗಳ ಜೊತೆಯಲ್ಲಿ, ಗುಣವು ದೋಷನಿರಾಸ ಮತ್ತು ಪ್ರಮಾ ಉಭಯಕಾರಣವೆಂದಾಗ ಗೌರವದೋಷ, ಅದಕ್ಕೆ ಕಲ್ಪಕವೂ ಇಲ್ಲ, ಆದ್ದರಿಂದಲೂ ಗುಣವು ಕಾರಣವಲ್ಲ. ಅದರಂತೆ ಗುಣಜನ್ಯತ್ವವನ್ನು ಹೇಳದಿದ್ದಲ್ಲಿ ಅಪ್ರಮಾವೂ ಪ್ರಮಾವಿಶೇಷವಾಗಲಿ ಎಂಬ ಬಾಧಕವನ್ನೂ ಪರಿಹರಿಸಲಾಗಿದೆ. ಈ ಕಾರಣಗಳಿಂದಲೂ ಗುಣಕ್ಕೆ ಕಾರಣತ್ವವನ್ನು ಹೇಳಬೇಕಾದ ಅಗತ್ಯವಿಲ್ಲ, ಎಂದು ಇತರ ಕಾರಣಗಳನ್ನೂ ತಿಳಿಯಬಹುದು.

ಹೀಗೆ, ಗುಣಕ್ಕೆ ಪ್ರಮಾಹೇತುತ್ವವನ್ನು ನಿರಾಕರಿಸಿದಂತೆ ದೋಷಕ್ಕೂ ಭ್ರಮ ಹೇತುತ್ವವನ್ನು ನಿರಾಕರಿಸಬಹುದು. ಆಗ ಭ್ರಮೆಯೂ ದೋಷಜನ್ಯವಲ್ಲ, ಎಂದಂತಾಗಿ 'ಅಪ್ರಾಮಾಣ್ಯಂ ಸ್ವತಃ' ಎಂದೂ ಆದೀತು. ಈ ಆಪತ್ತಿಬಂದರೆ ಏನು ಸಮಾಧಾನವೋ ಗುಣಕ್ಕೂ ಅದೇ ಸಮಾಧಾನ ಸಮಾನ ಎಂದು ಆಕ್ಷೇಪ. ಇದಕ್ಕುತ್ತರ ಮೂಲದ 'ಭ್ರಮಪ್ರತಿಬಂದೀತು' ಎಂಬ ವಾಕ್ಯ.

**एतदप्युक्तं ''अन्यथा'' इत्यादिना। अन्वयव्यभिचारे व्यतिरेकव्यभिचारे औत्सर्गिककार्या-पवादकनिरासकत्वेनान्यथासिद्धौ च सत्यामपि गुणस्य हेतुत्वे रासभादेरपि हेतुत्वप्रसङ्गेन हेत्वहेतुव्यवस्थित्ययोगादित्यर्थः ॥**

ಈ ಪ್ರಕರಣದಲ್ಲಿ ಹೇಳಿರುವ ವಿಷಯವನ್ನೂ 'ಅನ್ಯಥಾನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯವು ಸೂಚಿಸುತ್ತದೆ. ಹೇಗೆಂದರೆ, ಅನ್ಯಥಾ=ಹಿಂದೆ ಹೇಳಿರುವ ಅನ್ವಯವ್ಯಭಿಚಾರ–ವ್ಯತಿರೇಕ ವ್ಯಭಿಚಾರಗಳೂ, ಅದರಂತೆ ಔತ್ಸರ್ಗಿಕವಾದ ಕಾರ್ಯಕ್ಕೆ(ಪ್ರಮಾಕ್ಕೆ) ಅಪವಾದವನ್ನು (ದೋಷ ವನ್ನು) ನಿರಾಸ ಮಾಡುವುದರಿಂದ ಗುಣವು ಅನ್ಯಥಾಸಿದ್ಧ ಎಂಬ ಈ ಮೂರು ದೋಷಗಳು ಇದ್ದರೂ ಗುಣವು ಪ್ರಮಾಹೇತುವಾಗುವುದಾದಲ್ಲಿ ರಾಸಭವೂ ಘಟಕ್ಕೆ ಹೇತುವಾಗಬಹುದಾದ್ದರಿಂದ, ಅನವಸ್ಥಾನಾತ್=ಲೋಕದಲ್ಲಿ ಇದು ಈ ಕಾರ್ಯಕ್ಕೆ ಹೇತು, ಇದು ಅಲ್ಲ, ಎಂಬ ವ್ಯವಸ್ಥೆಯೇ ಇಲ್ಲವೆಂದಾದೀತು. ಹೀಗೆ, ಆಚಾರ್ಯರ ವಾಕ್ಯಕ್ಕೆ ಅರ್ಥ.

## ನ್ಯಾಯದೀಪ

**ಏತದಪಿ ಇತ್ಯುಕ್ತಮೇವ ಅನ್ಯಥಾದಿಶಬ್ದಾರ್ಥವಿವರಣೇನ ವ್ಯನಕ್ತಿ- ಅನ್ವಯೇತ್ಯಾದಿನಾ ॥**

ಏತದಪಿ, ಎಂದು ಹೇಳಿದ್ದರ ವಿವರಣೆಯನ್ನೇ ಅನ್ವಯವ್ಯಭಿಚಾರೇ, ಎಂದು ಮುಂತಾಗಿ ಮಾಡಲಾಗಿದೆ.

**ಇಲ್ಲಿಗೆ ಸ್ಥೂಲಾವಯವಿಪ್ರತ್ಯಕ್ಷಾದೌ ಭೂಯೋऽವಯಯೇಂದ್ರಿಯ ಸನ್ನಿಕರ್ಷಾದೇಃ ಹೇತುತ್ವಭಂಗಃ ಎಂಬ ಪ್ರಕರಣ ಮುಗಿಯಿತು. ॥ 14 ॥**

## ಈ ಪ್ರಕರಣದ ಸಾರಾಂಶ

ಪ್ರಮಾಸಾಮಾನ್ಯಕ್ಕೆ ಅನುಗತವಾದ ಗುಣವಿಲ್ಲ, ಪ್ರತ್ಯಕ್ಷಪ್ರಮಾಕ್ಕೂ ಅನುಗತವಾದ ಗುಣವಿಲ್ಲ. ಆದರೂ, ಪ್ರತ್ಯಕ್ಷಪ್ರಮಾವಿಶೇಷಕ್ಕೆ ಗುಣವಿಶೇಷವನ್ನು ಕಾರಣವನ್ನಾಗಿ ಹೇಳಬಹುದು. ಹೇಗೆಂದರೆ, ಸ್ಥೂಲವಾದ ವಸ್ತುವಿನ ಪ್ರತ್ಯಕ್ಷಪ್ರಮಾಕ್ಕೆ ಆ ವಸ್ತುವಿನ ಅನೇಕ ಭಾಗಗಳೊಂದಿಗೆ ಇಂದ್ರಿಯಸನ್ನಿಕರ್ಷವು ಗುಣ. ದೊಡ್ಡ ವಸ್ತುವಿನ ಒಂದು ಭಾಗ ಮಾತ್ರ ಕಂಡರೆ ಭ್ರಮೆ ಬರುವ ಸಂಭವ ಇದೆ. ಅದರ ಬಹುಭಾಗವು ನಮ್ಮ ಕಣ್ಣಿಗೆ ತೋರುವಂತಿದ್ದರೆ ಭ್ರಮೆ ಬರುವುದಿಲ್ಲ, ಪ್ರಮೆಯೇ ಹುಟ್ಟುತ್ತದೆ. ಹೀಗೆ ಇಂತಹ ಪ್ರತ್ಯಕ್ಷಪ್ರಮಾಕ್ಕೆ ಭೂಯೋಽವಯವೇಂದ್ರಿಯ ಸನ್ನಿಕರ್ಷವೇ ಗುಣ.

ಇದರಂತೆ, ಎದುರುಗಡೆ ಮನುಷ್ಯನು ಕತ್ತಲೆಯಲ್ಲಿ ಇದ್ದಾಗ 'ಇದು ಕಂಬ' ಎಂಬ ಭ್ರಮೆ ಬರುವ ಸಂಭವವಿದೆ. ಆಮೇಲೆ ಅವನ ಕೈಕಾಲುಗಳ ಚಲನೆಯನ್ನು ನೋಡಿ 'ಇವನು ಮನುಷ್ಯ' ಎಂಬ ಪ್ರಮಾತ್ಮಕ ಪ್ರತ್ಯಕ್ಷ ಬರುತ್ತದೆ. ಇದು ಭ್ರಮೋತ್ತರ ಪ್ರಮಾ. ಇದಕ್ಕೆ ವಿಶೇಷ ದರ್ಶನವು ಕಾರಣ. ವಿಶೇಷದರ್ಶನವೆಂದರೆ ಮನುಷ್ಯನಲ್ಲೇ ಇರುವ ಅಸಾಧಾರಣಧರ್ಮಗಳ ದರ್ಶನ. ಅದರಿಂದ ಪ್ರಮಾ ಹುಟ್ಟುತ್ತದೆ. ಹೀಗೆ ಭ್ರಮೋತ್ತರ ಪ್ರಮಾಕ್ಕೆ ವಿಶೇಷದರ್ಶನವೇ ಗುಣ. ಆದ್ದರಿಂದ ಪ್ರತ್ಯಕ್ಷ ಪ್ರಮಾವು ಗುಣಜನ್ಯವಾಗಿದೆ. ಇದು ಮಣಿಕಾರ ಮಾಡಿರುವ ಸಮರ್ಥನೆ. ಇದನ್ನು ಈ ಪ್ರಕರಣದಲ್ಲಿ ನಿರಾಕರಿಸಲಾಗಿದೆ.

ಕಾರಣತ್ವ ನಿರ್ಧಾರವಾಗಬೇಕಾದರೆ ಅನ್ವಯ ವ್ಯತಿರೇಕಗಳು ಇರಬೇಕು. ಪ್ರಕೃತದಲ್ಲಿ ಭೂಯೋಽವಯವೇಂದ್ರಿಯ ಸನ್ನಿಕರ್ಷಸತ್ವೇ ಅಥವಾ ವಿಶೇಷದರ್ಶನ ಸತ್ವೇ ಪ್ರಮೋತ್ಪತ್ತಿಃ, ಎಂಬ ಅನ್ವಯ ಇದ್ದರೆ ಅವೆರಡನ್ನೂ ಪ್ರಮಾಕಾರಣ ಎಂದು ಹೇಳಬಹುದು. ಆದರೆ, ಈ ರೀತಿಯ ಅನ್ವಯ ಇಲ್ಲ. ಪಿತ್ತದೋಷ ಇದ್ದವನಿಗೆ ಬಿಳಿಯಾದ ದೊಡ್ಡ ಶಂಖವನ್ನು ನೋಡಿ 'ಪೀತಃ ಶಂಖಃ' ಎಂಬ ಭ್ರಾಂತಿಯು ಬರುತ್ತದೆ. ಇಲ್ಲಿ ಶಂಖದ ಅನೇಕ ಅವಯವಗಳೊಂದಿಗೆ ಇಂದ್ರಿಯ ಸನ್ನಿಕರ್ಷ ಇದೆ. ಶಂಖವು ಹಳದಿಯಲ್ಲ, ಬಿಳಿಯೇ ಎಂಬ ವಿಶೇಷದರ್ಶನವೂ ಇದೆ. ಆದರೆ, ಪ್ರತ್ಯಕ್ಷಪ್ರಮಾ ಬರುವುದಿಲ್ಲ. ಹೀಗೆ ಕಾರಣವಿದ್ದರೂ ಕಾರ್ಯವು ಆಗಿಲ್ಲದಿರುವುದರಿಂದ ಅನ್ವಯವ್ಯಭಿಚಾರ.

ಈ ದೋಷವನ್ನು ಹೀಗೆ ಪರಿಹರಿಸಬಹುದು. ಅಲ್ಲಿ ಪ್ರಮಾಕ್ಕೆ ಕಾರಣವಾದ ಗುಣವು ಇದ್ದರೂ ಪ್ರಮಾ ಪ್ರತಿಬಂಧಕವಾದ ಪಿತ್ತದೋಷವೂ ಇರುವುದರಿಂದ ಪ್ರಮಾರೂಪವಾದ ಕಾರ್ಯವು ಹುಟ್ಟುವುದಿಲ್ಲ. ಇಷ್ಟುಮಾತ್ರದಿಂದ ಗುಣವು ಕಾರಣವೇ ಅಲ್ಲ, ಎಂದು ನಿರ್ಧರಿಸುವುದು ಸರಿಯಲ್ಲ. ಉದಾಹರಣೆಗೆ, ಕಣ್ಣಿದ್ದವರಿಗೂ ಕತ್ತಲೆಯಲ್ಲಿ ಏನೂ ಕಾಣುವುದಿಲ್ಲ. ಅಂದಮಾತ್ರಕ್ಕೆ ಕಣ್ಣು ಪ್ರತ್ಯಕ್ಷಜ್ಞಾನಕ್ಕೆ ಕಾರಣವಲ್ಲ ಎಂದೇನೂ ಆಗುವುದಿಲ್ಲ. ಅದರಂತೆ, ಪ್ರಕೃತದಲ್ಲಿ ಗುಣವು ಇದ್ದರೂ ಪಿತ್ತರೂಪ ಪ್ರತಿಬಂಧಕವು ಇರುವುದರಿಂದ ಪ್ರಮಾ ಹುಟ್ಟುವುದಿಲ್ಲ.

ಈ ಸಮಾಧಾನ ಯುಕ್ತವೇ. ಆದರೆ, ಇದರಿಂದ ಗುಣವು ಕಾರಣವೆಂದೇನೂ ಸಿದ್ಧವಾಗುವುದಿಲ್ಲ. ಗುಣವು ಕಾರಣವೆಂದ ಮೇಲೂ ಅದಕ್ಕೊಂದು ಪ್ರತಿಬಂಧಕವನ್ನು ಹೇಳುವುದು ಅನಿವಾರ್ಯವೆಂದಾದ ಮೇಲೆ ಅಂತಹ ಪ್ರತಿಬಂಧಕಾಭಾವವೇ ಪ್ರಮಾಹೇತು ಎಂದರಾಯಿತು. ಒಟ್ಟಿನಲ್ಲಿ, ಜ್ಞಾನಜನಕವಾದ ಸಾಮಗ್ರಿಯೇ ಪ್ರಮಾಕ್ಕೆ ಕಾರಣ. ಅದರ ಜೊತೆಯಲ್ಲಿ ದೋಷ ಸೇರಿದರೆ, ಭ್ರಾಂತಿ ಹುಟ್ಟುತ್ತದೆ, ದೋಷವಿಲ್ಲವಿದ್ದಾಗ ಪ್ರತ್ಯಕ್ಷಪ್ರಮಾ ಹುಟ್ಟುತ್ತದೆ. ಪ್ರಮಾಕ್ಕೆ ವಿಶೇಷವಾದ ಪ್ರತ್ಯೇಕ ಕಾರಣದ ಅಗತ್ಯವೇ ಇಲ್ಲ. ತಾರ್ಕಿಕರು ಹೇಳುವ ಗುಣಗಳಿಂದ ಪ್ರಮಾ ಪ್ರತಿಬಂಧಕವಾದ ದೋಷವು, ಕೆಲವುಕಡೆ, ಪರಿಹಾರವಾಗುತ್ತದೆ. ಅದು ಪ್ರಮಾಕ್ಕೆ ಕಾರಣವೇ ಅಲ್ಲ.

ಇದರಂತೆ ಗುಣಾಭಾವೇ ಪ್ರಮಾಭಾವಃ, ಎಂಬ ವ್ಯತಿರೇಕವೂ ಇಲ್ಲ. ಭ್ರಮೋತ್ತರ ಪ್ರಮಾಕ್ಕೆ ಪ್ರಮಾತ್ಮಕವಾದ ವಿಶೇಷದರ್ಶನವು ಗುಣ. ಇಂತಹ ಗುಣವಿಲ್ಲದೆಯೂ ಪ್ರತ್ಯಕ್ಷಪ್ರಮಾ ಹುಟ್ಟುತ್ತದೆ. ಹಿಂದೆ ಹೇಳಿದಂತೆ ಪುರುಷನನ್ನು ನೋಡಿ ಸ್ಥಾಣು ಎಂಬ ಭ್ರಮೆ ಹುಟ್ಟಿತು. ಆಮೇಲೆ ಕೈಕಾಲುಗಳ ಚಲನೆ ಕಾಣಿಸಿತು. ಆದರೆ, ಅದರಲ್ಲೂ ಒಂದು ತಪ್ಪು ಕಲ್ಪನೆ ಸೇರಿತ್ತು. ಕೈಯು ಕಾಲಾಗಿಯೂ, ಕಾಲು ಕೈಯಾಗಿಯೂ ಕಾಣಿಸಿತು. ಇದು ವಿಶೇಷದರ್ಶನವೇನೋ ಹೌದು. ಆದರೆ ಭ್ರಾಂತಿ. ಇದರಿಂದ ಬಂದ 'ಅಯಂ ಪುರುಷಃ' ಎಂಬ ಪ್ರತ್ಯಕ್ಷವು ಪ್ರಮಾತ್ಮಕ. ಹೀಗೆ ಇಲ್ಲಿ ಪ್ರತ್ಯಕ್ಷಪ್ರಮಾ ಇದೆ, ಪ್ರಮಾತ್ಮಕ ವಿಶೇಷದರ್ಶನ ಇಲ್ಲ. ವ್ಯತಿರೇಕ ವ್ಯಭಿಚಾರ ಬರುತ್ತದೆ.

ಪ್ರತ್ಯಕ್ಷ ಪ್ರಮಾಕ್ಕೆ ಹೇಳಿರುವ ಎರಡೂ ಗುಣಗಳೂ ಅನ್ಯಥಾಸಿದ್ಧವೂ ಆಗಿವೆ. ವಿಶೇಷದರ್ಶನದ ಅಪೇಕ್ಷೆ ಭ್ರಮೋತ್ತರ ಪ್ರತ್ಯಕ್ಷಸ್ಥಳದಲ್ಲಿ ಮಾತ್ರ. ಎಲ್ಲ ಕಡೆ ಅದರ ಅಗತ್ಯವಿಲ್ಲ. ಅದಕ್ಕೆ ಕಾರಣ ಇದು. ಭ್ರಮಸ್ಥಳದಲ್ಲಿ ಭ್ರಮೆಗೆ ಒಂದು ಕಾರಣವಿರುತ್ತದೆ. ಅದರ ನಿರಾಸಕ್ಕಾಗಿ ಗುಣಬೇಕು. ಇದರಿಂದ ಗುಣದ ಕೆಲಸ ದೋಷನಿರಾಸ. ದೋಷಪರಿಹಾರವಾದರೆ ಜ್ಞಾನಸಾಮಗ್ರಿ ಯಿಂದಲೇ ಪ್ರಮಾತ್ಮಕ ಪ್ರತ್ಯಕ್ಷವು ಹುಟ್ಟುತ್ತದೆ. ಹೀಗೆ ಗುಣವು ದೋಷನಿರಾಸದಲ್ಲಿ ಉಪಕ್ಷೀಣ, ಅದು ಪ್ರಮೆಗೆ ಅನ್ಯಥಾಸಿದ್ಧ.

ಹೀಗೆ, ಮೂರುದೋಷಗಳನ್ನು ಹೇಳಿ ಪ್ರತ್ಯಕ್ಷಪ್ರಮಾಕ್ಕೆ ಮಣಿಕಾರೋಕ್ತಗುಣಗಳು ಕಾರಣಗಳಲ್ಲ, ಎಂದು ನಿರಾಕರಿಸಲಾಗಿದೆ.

ಮಣಿಕಾರ ಪ್ರಮಾವು ಗುಣಜನ್ಯವಲ್ಲ ಎಂದಾಗ ಗಂಭೀರವಾದ ಆಕ್ಷೇಪ ಒಂದನ್ನು ಮಾಡಿದ್ದಾನೆ. ಪ್ರಮಾಕ್ಕೆ ಗುಣವು ಕಾರಣವಲ್ಲ ಎಂದಾದರೆ ಜ್ಞಾನ ಸಾಮಾನ್ಯಕ್ಕೆ ಕಾರಣವಾದುದೇ ಪ್ರಮಾಕಾರಣ, ಎನ್ನಬೇಕು. ಹಾಗಿದ್ದರೆ ಭ್ರಮೆಯೂ ಪ್ರಮಾ ಎಂದಾದೀತು. ಭ್ರಮೆಯೂ ಜ್ಞಾನಕಾರಣ ಜನ್ಯವಾಗಿದೆ. ಅಂದರೆ ಅದೂ ಪ್ರಮಾಕಾರಣ ಜನ್ಯವಾಯಿತು. ಅದೂ ಪ್ರಮೆಯೇ ಆಗಬೇಕು. ಅಷ್ಟೇ ಅಲ್ಲ, ಪ್ರಮೆಗೆ ಕಾರಣವಲ್ಲದ ದೋಷವಿಶೇಷಗಳಿಂದಲೂ ಜನ್ಯವಾಗಿದೆ. ಹೀಗೆ ಪ್ರಮಾ ಕಾರಣದಿಂದ ಮಾತ್ರವಲ್ಲದೆ, ಅಧಿಕ ಕಾರಣದಿಂದಲೂ ಜನ್ಯವಾದುದರಿಂದ ಭ್ರಮೆಯು ಪ್ರಮಾವಿಶೇಷವಾಗಬೇಕು. ಇದು ಮಣಿಕಾರನ ಆಕ್ಷೇಪ.

ಇದಕ್ಕೂ ಸರಿಯಾದ ಸಮಾಧಾನವನ್ನು ಇಲ್ಲಿ ಕೊಡಲಾಗಿದೆ. ಮೊದಲನೆಯದಾಗಿ ಭ್ರಮೆಯು ಎಲ್ಲಾ ಪ್ರಮಾಕಾರಣಗಳಿಂದ ಜನ್ಯವೇ ಅಲ್ಲ. ಹಿಂದೆ ಹೇಳಿದಂತೆ, ಪ್ರಮೆಗೆ ದೋಷಾಭಾವವೂ ಕಾರಣ. ಆದರೆ, ಭ್ರಮೆಗೆ ದೋಷಕಾರಣ. ದೋಷಜನ್ಯವಾದುದರಿಂದಲೇ ಜ್ಞಾನ ಸಾಮಗ್ರೀಜನ್ಯವಾದರೂ ಅದು ಭ್ರಮೆಯಾಗುತ್ತದೆ. ದೋಷವಿಲ್ಲದೇ ಇರುವಾಗ ಅದೇ ಸಾಮಗ್ರಿಯಿಂದ ಜನ್ಯವಾದುದರಿಂದಲೇ ಜ್ಞಾನವು ಪ್ರಮೆಯಾಗುತ್ತದೆ.

ಮಣಿಕಾರನ ಆಕ್ಷೇಪಕ್ಕೆ ಒಂದು ಪ್ರತಿಬಂದಿಯನ್ನು ಶ್ರೀವ್ಯಾಸರಾಜರು ಹೇಳಿದ್ದಾರೆ. ವೇತ್ರಬೀಜದಿಂದ ವೇತ್ರಾಂಕುರವೂ ಹುಟ್ಟುತ್ತದೆ, ಕದಲೀಕಾಂಡವೂ ಹುಟ್ಟುತ್ತದೆ. ವೇತ್ರಾಂಕುರಕ್ಕೆ ಕಾರಣವಾದ ಬೀಜದಿಂದಲೇ ಕದಲೀಕಾಂಡವೂ ಹುಟ್ಟುವುದರಿಂದ ಕದಲೀಕಾಂಡ ವೇತ್ರಾಂಕುರ ವಾದೀತು. ವೇತ್ರಬೀಜದ ಜೊತೆಯಲ್ಲಿ ದಾವದಹನವೂ ಹೆಚ್ಚಿನ ಕಾರಣವಾದುದರಿಂದ ಕದಲೀಕಾಂಡವು ವೇತ್ರಾಂಕುರವಿಶೇಷವೂ ಆಗಲಿ. ಇದಕ್ಕೆ ಹೀಗೆ ಸಮಾಧಾನ ಹೇಳಬೇಕು. ದಾವದಾಹದಿಂದ ವೇತ್ರಬೀಜದ ಸಹಜಶಕ್ತಿಯೇ ನಾಶವಾಗಿದೆ. ಮಾತ್ರವಲ್ಲ, ವಿಚಿತ್ರಶಕ್ತಿಯೊಂದು ಹುಟ್ಟಿದೆ. ಆ ಶಕ್ತಿಯಿಂದ ಜನ್ಯವಾಗಿದೆ ಕದಲೀಕಾಂಡ. ಹೀಗಿರುವಾಗ ಅದು ವೇತ್ರಾಂಕುರ ವಾಗುವುದು ಹೇಗೆ? ಇದೇ ಸಮಾಧಾನವನ್ನು ಪ್ರಕೃತದಲ್ಲೂ ಹೇಳಬಹುದು. ಜ್ಞಾನಸಾಮಗ್ರಿಯ ಸಹಜಶಕ್ತಿ ಪ್ರಮಾವನ್ನು ಉಂಟುಮಾಡುವುದು. ದೋಷವು ಆ ಸಹಜಶಕ್ತಿಯನ್ನು ನಾಶಮಾಡಿ ವಿರುದ್ಧವಾದ ಶಕ್ತಿಯನ್ನು ಕೊಡುತ್ತದೆ. ಆಗ ಅದೇ ಸಾಮಗ್ರಿಯು ಭ್ರಾಂತಿಗೆ ಕಾರಣವಾಗುತ್ತದೆ. ಇದೇ ಪ್ರಾಮಾಣ್ಯಸ್ವತಸ್ತ್ವದ ಅಂತರಾತ್ಮ.

**॥ ಪ್ರಕರಣ – 14 ॥**

# ಪ್ರಕರಣ – 15

## ಪ್ರಮಾಯಾಂ ದೋಷಾಭಾವಸ್ಯ ಹೇತುತ್ವಭಂಗಃ

अस्तु तर्हि दोषाभावादेव प्रमा । तस्य अनन्यथासिद्धान्वयव्यतिरेकित्वादिति चेन्न । कारणतावच्छेदक-प्रतिबन्धकाभावादिसाधारणस्य प्रयोजकत्वमात्रस्य आपादने इष्टत्वात् ।

''अदुष्टमिन्द्रियं त्वक्षं तर्कोऽदुष्टस्तथानुमा ।
आगमोऽदुष्टवाक्यं च''

इति ब्रह्मतर्के, ''निर्दोषार्थेऽन्द्रियसन्निकर्षः प्रत्यक्षम्। निर्दोषोपपत्तिरनुमा । निर्दोषः शब्दः आगमः'' इति प्रमाणलक्षणे ; ''दोषाभावस्य कारणत्वे च नास्माकमनिष्टम् । तावता वेदापौरुषेयत्वाव्याघातात्'' इति भाष्यटीकायां चोक्तेः । दोषाभावस्यापेक्षितत्वेऽपि प्रमाजननशक्तिः सहजा, न तु भ्रमजननशक्तिवदाधेया इत्येतावतैव प्रामाण्यस्वतस्त्वसिद्धेश्च । उक्तं हि सुधायां–

''इन्द्रियादीनामौत्सर्गिकी शक्तिः प्रमाण्यजनने दोषापवादादप्रामाण್यमपि जनयंति'' इति ।

ಹಿಂದಿನ ಪ್ರಕರಣದಲ್ಲಿ ಸ್ವತಸ್ತ್ವವಾದಿಗಳೇ ಒಪ್ಪಿಕೊಂಡಿರುವಂತೆ ದೋಷಾಭಾವವೇ ಪ್ರಮಾಹೇತುವೆಂದಾಗಲಿ. ಅದು ಅನನ್ಯಥಾಸಿದ್ಧವೂ ಆಗಿದೆ, ಪ್ರಮಾದೊಂದಿಗೆ ಅನ್ವಯ– ವ್ಯತಿರೇಕಗಳೂ ಅದಕ್ಕಿದೆ. ತಜ್ಜನ್ಯವಾಗಿರುವುದರಿಂದ ಪ್ರಮಾಣ್ಯಕ್ಕೆ ಪರತಸ್ತ್ವವೂ ಸಿದ್ಧವಾಗುತ್ತದೆ, ಎಂದರೆ, ಹೌದು. ದೋಷಾಭಾವವು ಪ್ರಮಾಪ್ರಯೋಜಕವೆನ್ನುವುದು ಸ್ವತಸ್ತ್ವವಾದಿಗಳಿಗೂ ಸಮ್ಮತವೆ. ಸಕಲ ಕಾರ್ಯಗಳಿಗೂ ಕಾರಣತಾವಚ್ಛೇದಕವಾದುದು ಪ್ರತಿಬಂಧಕಾಭಾವ. ಅದು ಮತ್ತು ಜನಕ–ಜನಕ (ಕುಲಾಲಪಿತಾ)ಇವುಗಳೆರಡೂ ಕಾರ್ಯಕ್ಕೆ ಪ್ರಯೋಜಕಗಳು, ಕಾರಣಗಳಲ್ಲ.ಪ್ರಕೃತದಲ್ಲಿ ಕಾರಣತಾವಚ್ಛೇದಕ ದೋಷಾಭಾವ. ಆದ್ದರಿಂದ ಅದೂ ಕಾರ್ಯಕ್ಕೆ ಪ್ರಯೋಜಕವಾಗಿದೆ. ಇದು ನಾವು ಮಾಡಿದ ಕಲ್ಪನೆಯಲ್ಲ. ಪೂರ್ವಾಚಾರ್ಯರೂ ಒಪ್ಪಿದ್ದಾರೆ. ಬ್ರಹ್ಮತರ್ಕ ವಾಕ್ಯದಲ್ಲಿ ದೋಷಾಭಾವವನ್ನು ಪ್ರತ್ಯಕ್ಷ, ಅನುಮಾನ, ಆಗಮ ಈ ಮೂರೂ ಕರಣಗಳಿಗೂ ವಿಶೇಷಣವನ್ನಾಗಿ ಕೊಡಲಾಗಿದೆ.

ಅದುಷ್ಟಮ್ ಇಂದ್ರಿಯಂ ತ್ವಕ್ಷಂ, ತರ್ಕೋಽದುಷ್ಟಸ್ತಥಾನುಮಾ ।

ಆಗಮೋಽದುಷ್ಟವಾಕ್ಯಂ ಚ...॥

ಇದು ವೇದವ್ಯಾಸರ ವಚನ. ಆಚಾರ್ಯರು ಪ್ರಮಾಣಲಕ್ಷಣದಲ್ಲೂ ಇದನ್ನೇ ಹೇಳಿದ್ದಾರೆ—

1. ನಿರ್ದೋಷಾರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಮ್ ।

2. ನಿರ್ದೋಷೋಪಪತ್ತಿಃ ಅನುಮಾ ।

3. ನಿರ್ದೋಷಃ ಶಬ್ದಃ ಆಗಮಃ ।

ಟೀಕಾಕೃತ್ಪಾದರೂ ದೇವತಾಧಿಕರಣ (1.3.8) ಸೂತ್ರಭಾಷ್ಯಟೀಕಾದಲ್ಲಿ 'ದೋಷಾಭಾವವು ಪ್ರಮಾಕಾರಣವಾದರೂ ವೇದಾಪೌರುಷೇಯತ್ವಕ್ಕೇನೂ ಚ್ಯುತಿ ಇಲ್ಲ' ಎಂದಿದ್ದಾರೆ. ಹೀಗೆ, ವ್ಯಾಸರಿಂದ ಹಿಡಿದು ಟೀಕಾಕೃತ್ಪಾದರವರೆಗೆ ಎಲ್ಲರೂ ದೋಷಾಭಾವವು ಪ್ರಮಾ ಹೇತು, ಎಂದು ಒಪ್ಪಿರುತ್ತಾರೆ. ಇದರಿಂದ ಸ್ವತಸ್ತ್ವವಾದಕ್ಕೇನೂ ಹಾನಿಯಾಗುವುದಿಲ್ಲ. ಕರಣಗಳಲ್ಲಿರುವ ಪ್ರಮಾಜನನ ಶಕ್ತಿಯು ಸಹಜವಾದುದು, ಭ್ರಮಜನನ ಶಕ್ತಿಯಂತೆ ಅನ್ಯಾಹಿತವಲ್ಲ, ಎನ್ನುವುದೇ ಸ್ವತಸ್ತ್ವವಾದ. ದೋಷಾಭಾವವು ಪ್ರತಿಬಂಧಾಭಾವ ರೂಪದಿಂದ ಪ್ರಮಾಪ್ರಯೋಜಕವಾದರೂ ಈ ವಾದಕ್ಕೇನೂ ಚ್ಯುತಿ, ಇಲ್ಲ. ನ್ಯಾಯಸುಧಾದಲ್ಲಿ ಸ್ವತಸ್ತ್ವವನ್ನು ಹೀಗೆಯೇ ನಿರೂಪಿಸಲಾಗಿದೆ— ಇಂದ್ರಿಯ-ಲಿಂಗ-ಶಬ್ದಗಳಲ್ಲಿ ಪ್ರಾಮಾಣ್ಯಜನನಶಕ್ತಿಯು ಸಹಜವಾಗಿದೆ, ಆದರೂ ಅವುಗಳು ದೋಷರೂಪವಾದ ಅಪವಾದದಿಂದ ಅಪ್ರಾಮಾಣ್ಯಕ್ಕೂ ಜನಕವಾಗಿವೆ, ಎಂದು.

## ನ್ಯಾಯದೀಪ

**ಅಸ್ತು, ಇತಿ ॥ ತಥಾಚ ಜ್ಞಾನಹೇತುತಃ ಅಧಿಕಜನ್ಯತ್ವಾತ್ ಸ್ವತಸ್ತ್ವಹಾನಿಃ, ಇತಿ ಭಾವಃ ।**

**ಪ್ರಯೋಜಕತ್ವಮ್ ಆಪಾದ್ಯತೇ ಕಾರಣತ್ವಂ ವಾ? ಆದ್ಯೇ ಆಹ-ಕಾರಣೇತಿ ॥ ಪ್ರತಿಬಂಧಕಾಭಾವಾಹೇತುತಾಯಾಃ ವಕ್ಷ್ಯಮಾಣತ್ವಾಶಯೇನಾಹ-ಪ್ರತಿಬಂಧಕಾಭಾವಾದೀತಿ ॥ ಕಾರಣ-ಕಾರಣಾದಿಃ ಆದಿಪದಾರ್ಥಃ । ತದ್-ವ್ಯತಿರೇಕ ಪ್ರಯುಕ್ತ-ವ್ಯತಿರೇಕಪ್ರತಿಯೋಗಿತ್ವಮಾತ್ರಸ್ಯ, ನ ತು ಅನನ್ಯಥಾಸಿದ್ಧಸ್ಯ, ಇತ್ಯರ್ಥಃ ।**

**ಇಷ್ಟತ್ವಮೇವ ಕ್ರಮಾತ್ ಸೂತ್ರ-ಭಾಷ್ಯ-ಟೀಕಾಕೃತಾಂ ಸಮ್ಮತ್ಯಾ ದ್ರಢಯತಿ-ಅದುಷ್ಟಮಿತಿ ॥ ಅಕ್ಷ, ಅನುಮಾ, ಆಗಮಃ, ಇತಿ ಲಕ್ಷ್ಯ ನಿರ್ದೇಶಃ ।**

**ತತ್ವನಿರ್ಣಯೋದಾಹೃತ–ಬ್ರಹ್ಮತರ್ಕೇ, ಇತ್ಯರ್ಥಃ। ಮಾನತ್ರಯೇऽಪಿ ದೋಷಾಭಾವಾಪೇಕ್ಷಾದ್ಯೋತನಾಯ ತ್ರಿತಯೋದಾಹರಣಮ್ । ಟೀಕಾಯಾಂ ಚೇತಿ ॥ ದೇವತಾಧಿಕರಣಭಾಷ್ಯಟೀಕಾಯಾಮ್, ಇತ್ಯರ್ಥಃ। ತತ್ರ ಕಾರಣತ್ವೇ ಚ, ಇತ್ಯುಕ್ತೇಃ, ಪ್ರಯೋಜಕತ್ವೇ ಚ, ಇತ್ಯರ್ಥಃ ಇತ್ಯಗ್ರೇ ವ್ಯಕ್ತಮ್ ॥**

'ಅಸ್ತು ತರ್ಹಿ' ಎಂದು ಹೇಳುವ ಪರತಸ್ತ್ವಾದಿಗಳ ಅಭಿಪ್ರಾಯ–ದೋಷಾಭಾವ ಪ್ರಮಾ ಹೇತುವಾದರೆ ಜ್ಞಾನಹೇತುವಲ್ಲದ ದೋಷಾಭಾವರೂಪವಾದ ಅಧಿಕಕಾರಣದಿಂದ ಜನ್ಯವಾದುದರಿಂದ ಪ್ರಾಮಾಣ್ಯಕ್ಕೆ ಸ್ವತಸ್ತ್ವಹಾನಿಯಾಯಿತು, ಎಂದು.

ದೋಷಾಭಾವವು ಪ್ರಯೋಜಕವೆಂದಾದರೆ ಈ ಆಕ್ಷೇಪವೋ, ಕಾರಣವೆಂದಾದರೆ ಆಕ್ಷೇಪವೋ? ಮೊದಲನೆಯದಕ್ಕೆ ಇಷ್ಟಾಪತ್ತಿಯೇ ಉತ್ತರ. ವಸ್ತುತಃ ಮುಂದೆ ಪ್ರತಿಬಂಧಕಾಭಾವವೂ ಕಾರ್ಯಹೇತುವಲ್ಲ, ಎಂದು ನಿರಾಕರಿಸಲಾಗಿದೆ. ಅದಕ್ಕಾಗಿ, ಆದಿಪದವನ್ನು ಹೇಳಲಾಗಿದೆ. ಆದರಿಂದ ಕಾರಣಕ್ಕೆ ಕಾರಣವಾದುದನ್ನು (ಜನಕ ಜನಕ) ತೆಗೆದುಕೊಳ್ಳಬೇಕು.

ಪ್ರಯೋಜಕಕ್ಕೂ ಕಾರಣಕ್ಕೂ ವ್ಯತ್ಯಾಸ ಇದೆ. ಯಾವುದರ ಅಭಾವದಿಂದ ಕಾರ್ಯಾಭಾವವು ಇರುತ್ತದೋ ಅದು ಪ್ರಯೋಜಕ. ಕುಲಾಲಪಿತೃ ಇಲ್ಲದಿದ್ದರೆ ಘಟವೂ ಇರಲಾರದು. ಆದ್ದರಿಂದ ಕುಲಾಲಪಿತೃಘಟಕ್ಕೆ ಪ್ರಯೋಜಕ. ಆದರೆ, ಅವನು ಅನ್ಯಥಾಸಿದ್ಧನಾದುದರಿಂದ ಕಾರಣನಲ್ಲ, ಕಾರಣವಾದದ್ದು ಅನನ್ಯಥಾಸಿದ್ಧವೂ ಆಗಿರುತ್ತದೆ. ಇದು ಅವರೆಡಕ್ಕೆ ಇರುವ ವ್ಯತ್ಯಾಸ.

ದೇವತಾಧಿಕರಣ ತತ್ತ್ವಪ್ರಕಾಶಿಕಾ ಟೀಕೆಯಲ್ಲಿ 'ದೋಷಾಭಾವಸ್ಯ ಕಾರಣತ್ವೇ ಚ' ಎಂದಿದೆ. ಅದಕ್ಕೆ ಪ್ರಯೋಜಕತ್ವೇ ಚ, ಎಂದು ಅರ್ಥ. ಈ ಅರ್ಥವು ಟೀಕಾಕಾರರಿಗೂ ಸಮ್ಮತವಾಗಿದೆ. ಏಕೆಂದರೆ, ಮುಂದಿನ ಟೀಕಾವಾಕ್ಯದಲ್ಲಿ 'ಅತಃ ಪ್ರಮಾಯಾಃ ಜ್ಞಾನಕಾರಣಾತಿರಿಕ್ತ–ಕಾರಣನಿರಪೇಕ್ಷತ್ವೇನ' ಎಂದಿದೆ. ಇದರಿಂದ ಜ್ಞಾನಕ್ಕೆ ಕಾರಣವಲ್ಲದ ದೋಷಾಭಾವವು ಪ್ರಮಾಕ್ಕೂ ಕಾರಣವಲ್ಲ, ಎಂದೇ ಟೀಕೆಯ ಅಭಿಪ್ರಾಯ.

## ನ್ಯಾಯದೀಪ

**ನನ್ವೇವಮಪಿ ಕಥಂ ನ ಸ್ವತಸ್ತ್ವಹಾನಿಃ। ಜ್ಞಾನಹೇತ್ವತಿರಿಕ್ತಾನವೇಕ್ಷತ್ವಾಭಾವಾತ್ ಇತ್ಯತ ಆಹ–ದೋಷಾಭಾವಸ್ಯೇತಿ ॥ ಏತಾವತೈವೇತಿ ॥ ದೋಷಾಭಾವಸ್ಯ ಕಾರಣತ್ವಪಕ್ಷೇ ಶಕ್ಯಾಧಾಯಕತ್ವೇऽಪಿ, ಪ್ರಯೋಜಕತ್ವಪಕ್ಷೇ ತದಭಾವಾತ್, ಇತಿ ಭಾವಃ।**

**ಉಕ್ತಂ ಹೀತಿ ॥ ದೋಷೇತ್ಯಾದಿನಾ ಉಕ್ತಂ ಪ್ರಮೇಯಂ ಜಿಜ್ಞಾಸಾಧಿಕರಣ**

**ಸುಧಾಯಾಮ್, ಉಕ್ತಮಿತ್ಯರ್ಥಃ। ಔತ್ಸರ್ಗಿಕೀ, ಉತ್ಸರ್ಗಃ=ಸಾಮಾನ್ಯಂ, ಜ್ಞಾನಮಾತ್ರಜನಿಕೈವ ಇತ್ಯರ್ಥಃ। ದೋಷಾಪವಾದಾದಿತ್ಯಸ್ಯ ದೋಷಾಹಿತ–ಶಕ್ತಿರೂಪಾಪವಾದಾದಿತ್ಯರ್ಥಃ, ಇತಿ ಭಾವಃ।**

**ನನ್ವೇವಂ ಗುಣಸ್ಯಾಪಿ ಪ್ರಯೋಜಕತ್ವೋಪಪತ್ತೌ ಕಿಂ ತನ್ನಿರಾಸಾಯಾಸೇನ ಇತಿ ಚೇನ್ನ, ಗುಣವಾದಿನೋಽಪಿ ದೋಷಾಭಾವಸ್ಯ ಆವಶ್ಯಕತ್ವೋಪಪಾದನಾತ್, ಗುಣಸ್ಯ ದೋಷನಿರಾಸೋಪಕ್ಷೀಣ–ತ್ವೋಪಪಾದನಾಚ್ಚ, ಇತಿ ಭಾವಃ।**

ಮೂಲದಲ್ಲಿ ದೋಷಾಭಾವವು ಪ್ರಾಮಾಣ್ಯಕ್ಕೆ ಪ್ರಯೋಜಕ ಎಂಬುದು ಸ್ವತಸ್ತ್ವವಾದಿಗಳಿಗೂ ಸಮ್ಮತ, ಎಂದು ಹೇಳಲಾಗಿದೆ. ಆದರೆ, ಇದರಿಂದ ಸ್ವತಸ್ತ್ವಹಾನಿಯಾಗುತ್ತದೆ. ಜ್ಞಾನಕಾರಣ ಬಿಟ್ಟು ಇತರ ಯಾವುದರ ಅಪೇಕ್ಷೆಯೂ ಇಲ್ಲದಿರುವುದು ಸ್ವತಸ್ತ್ವ. ದೋಷಾಭಾವವು ಜ್ಞಾನಹೇತುವಲ್ಲ, ಅದರ ಅಪೇಕ್ಷೆ ಪ್ರಾಮಾಣ್ಯಕ್ಕೆ ಇದ್ದರೆ ಸ್ವತಸ್ತ್ವಕ್ಕೆ ಹಾನಿಯಾದಂತೆ. ಈ ಆಕ್ಷೇಪಕ್ಕೆ 'ದೋಷಾಭಾವಸ್ಯ' ಎಂಬ ವಾಕ್ಯದಲ್ಲಿ ಸಮಾಧಾನ ಇದೆ. ಸ್ವತಸ್ತ್ವ ಎಂದರೆ ಇಂದ್ರಿಯಗಳಿಗೆ ಜ್ಞಾನಜನಕತ್ವಶಕ್ತಿಯಂತೆ ಪ್ರಾಮಾಣ್ಯಜನಕತ್ವಶಕ್ತಿಯೂ ಸಹಜ, ಎಂದು ಅಭಿಪ್ರಾಯ. ದೋಷವಿದ್ದಾಗ ಈ ಶಕ್ತಿ ಪ್ರತಿಬದ್ಧವಾಗುತ್ತದೆ. ದೋಷ ಇಲ್ಲದಿರುವಾಗ ಅದು ಫಲೋಪದಾಯಕವಾಗುತ್ತದೆ. ಆದ್ದರಿಂದ ಸ್ವತಸ್ತ್ವಹಾನಿ ಇಲ್ಲ.

ಈ ರೀತಿಯ ಸ್ವತಸ್ತ್ವವೇ ವಿವಕ್ಷಿತವಾದಲ್ಲಿ ಗುಣವು ಪ್ರಾಮಾಣ್ಯಹೇತು ಎಂದು ಹೇಳಿದರೂ ಬಾಧಕವೇನಿಲ್ಲ, ಹೀಗಿರುವಾಗ ತಾರ್ಕಿಕರ ವಾದವನ್ನು ಏಕೆ ನಿರಾಕರಿಸಬೇಕು? ಅದಕ್ಕೆ ಎರಡು ಕಾರಣಗಳು—

1. ಹಿಂದಿನ ಪ್ರಕರಣದಲ್ಲಿ ಗುಣವು ಪ್ರಾಮಾಣ್ಯಕಾರಣ, ಎಂದು ಹೇಳಿದರೂ ದೋಷವಿದ್ದಾಗ ಗುಣವಿದ್ದರೂ ಪ್ರಾಮಾಣ್ಯವು ಹುಟ್ಟುವುದಿಲ್ಲವಾದುದರಿಂದ ಗುಣಹೇತುತ್ವವಾದಿಗಳೂ ದೋಷಾಭಾವಕ್ಕೆ ಪ್ರಯೋಜಕತ್ವವನ್ನು ಹೇಳಲೇಬೇಕು. ಹೀಗಿರುವಾಗ ದೋಷಾಭಾವವೇ ಸಾಕು, ಗುಣಬೇಕಾಗಿಲ್ಲ.

2. ಗುಣವು ಅನ್ಯಥಾಸಿದ್ಧವೂ ಆಗಿದೆ. ಅದು ಪ್ರಾಮಾಣ್ಯಪ್ರತಿಬಂಧಕವಾದ ದೋಷನಿರಾಸದಲ್ಲಿ ಚರಿತಾರ್ಥ. ಅದಕ್ಕೆ ಪ್ರಾಮಾಣ್ಯಹೇತುತ್ವ ಇಲ್ಲ.

ಹೀಗೆ ಸ್ವತಸ್ತ್ವಹಾನಿಯಾಗುವ ಭಯದಿಂದ ಗುಣಕ್ಕೆ ಹೇತುತ್ವವನ್ನು ನಿರಾಕರಿಸಿದ್ದಲ್ಲ, ಅದಕ್ಕೆ ಕಾರಣತ್ವವು ಅನುಪಪನ್ನವಾದುದರಿಂದ ಕಾರಣತ್ವವನ್ನು ನಿರಾಕರಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ದ್ವಿತೀಯಂ ನಿರಾಹ–ಕಾರಣತ್ವಸ್ಯೇತಿ ॥**

ದೋಷಾಭಾವವು ಪ್ರಯೋಜಕವೋ, ಕಾರಣವೋ? ಎಂದು ಎರಡು ವಿಕಲ್ಪಗಳನ್ನು ಮಾಡಿ ಅವುಗಳಲ್ಲಿ ಇದುವರೆಗೆ ಮೊದಲನೆಯದನ್ನು ಇಷ್ಟಾಪತ್ತ್ಯಾ ಪರಿಹಾರ ಮಾಡಲಾಯಿತು. ಮುಂದಿನ ಭಾಗದಲ್ಲಿ ಎರಡನೆಯ ವಿಕಲ್ಪವನ್ನು ನಿರಾಕರಿಸಲಾಗಿದೆ.

**कारणत्वस्यापादानं त्वयुक्तम् । क्लृप्तकारणं चक्षुरादिकमादायैव दोषाभावस्य प्रमां प्रति नियतपूर्वभावित्वग्रहणेन दण्डत्ववत्, दण्डगतदार्ढ्यवत्, शक्तिः कारणतावच्छेदिकेति पक्षे शक्तिवत्, उपस्थितेष्टभेदाग्रहः प्रवर्तक इत्यत्रोपस्थितिवत्, विषयत्वेन विषयजन्यं ज्ञानं प्रत्यक्षमित्यत्र विषयत्ववच्च चक्षुरादिनिष्ठकारणतावच्छेदकत्वमात्रेण अन्वयतिरेकयोरुपपत्तौ दोषाभावे कारणतायाः, दोषाभावत्वे कारणतावच्छेदकतायाश्च कल्पने गौरवात् । उक्तरीत्या सत्यपि दोषे प्रमात्वदर्शनेन प्रमासामान्यं प्रति व्यतिरेकव्यभिचाराच्च ।।**

**उक्तं हि विष्णुतत्वनिर्णयटीकायां ''दोषाभावोऽपि न प्रामाण्यकारणम्। यादृच्छिकसंवादिषु सत्यपि दोषे प्रमाणज्ञानोदयात्''इति ।।**

ದೋಷಾಭಾವವು ಕಾರಣ ಎಂದು ಹೇಳಲು ಆಗುವುದಿಲ್ಲ. ಅದು ಅನ್ಯಥಾಸಿದ್ಧ. 'ಯೇನ ಸಹೈವ' ಇತ್ಯಾದಿ ಅನ್ಯಥಾಸಿದ್ಧಿ ಅದಕ್ಕಿದೆ. ದಂಡತ್ವ ಮತ್ತು ದಂಡಗತದಾರ್ಢ್ಯಗಳಿಗೆ ದಂಡವನ್ನು ಬಿಟ್ಟು ಘಟದೊಂದಿಗೆ ಸ್ವತಂತ್ರವಾಗಿ ಅನ್ವಯವ್ಯತಿರೇಕಗಳನ್ನು ಹೇಳಲು ಆಗುವುದಿಲ್ಲ. ಅದರಂತೆ 'ಅದುಷ್ಟೇಂದ್ರಿಯ ಸತ್ವೇ ಪ್ರತ್ಯಕ್ಷಂ' ಎಂದು ದೋಷಾಭಾವಕ್ಕೆ ಇಂದ್ರಿಯದೊಂದಿಗೇ ಪ್ರತ್ಯಕ್ಷಾನ್ವಯವ್ಯತಿರೇಕಗಳು ಇವೆ, ಸ್ವತಂತ್ರಾನ್ವಯ ವ್ಯತಿರೇಕಗಳಿಲ್ಲ. ದಂಡಾದಿಗತಶಕ್ತಿಯು ಕಾರಣತಾವಚ್ಛೇದಕ ಎಂದು ಅಂಗೀಕರಿಸಿರುವ ಮೀಮಾಂಸಕರ ಮತದಲ್ಲಿ ಶಕ್ತಿಯೂ ಅನ್ಯಥಾಸಿದ್ಧ. ಪ್ರಾಭಾಕರರು ಭ್ರಮಸ್ಥಳದಲ್ಲಿ ಉಪಸ್ಥಿತವಾದ, ಇಷ್ಟವಾದ, ರಜತಾದಿಗಳಿಂದ ಪುರೋವರ್ತಿಯಲ್ಲಿ ಭೇದಾಗ್ರಹವೇ ರಜತಾರ್ಥಿಯ ಪ್ರವೃತ್ತಿಗೆ ಕಾರಣ, ಎನ್ನುತ್ತಾರೆ. ಇಲ್ಲಿ ಉಪಸ್ಥಿತ ಎಂದರೆ ಉಪಸ್ಥಿತಿವಿಷಯ ಎಂದರ್ಥ. ಅಲ್ಲಿ 'ಉಪಸ್ಥಿತಿಯು' ಕಾರಣಕೋಟಿಯಲ್ಲಿ ಸೇರಿದ್ದರೂ ಅದು ಪ್ರವೃತ್ತಿಗೆ ಕಾರಣವಲ್ಲ. ವಿಷಯತ್ವೇನ ವಿಷಯಜನ್ಯಂ ಜ್ಞಾನಂ ಪ್ರತ್ಯಕ್ಷಂ, ಎಂದು ನೈಯಾಯಿಕರೂ ಪ್ರತ್ಯಕ್ಷದ ಲಕ್ಷಣವನ್ನು ಹೇಳುತ್ತಾರೆ. ಅಲ್ಲಿ ವಿಷಯತ್ವಾಂಶವು ಕಾರಣತಾವಚ್ಛೇದಕ ಹೊರತು, ಕಾರಣವಲ್ಲ. ಜ್ಞಾನಾತ್‌ಪೂರ್ವದಲ್ಲಿ ವಿಷಯದಲ್ಲಿ ವಿಷಯತ್ವವು ಇರುವುದಿಲ್ಲ. ಅದರಂತೆ

ದೋಷಾಭಾವವು ಚಕ್ಷುರಾದಿನಿಷ್ಠವಾದ ಕಾರಣತಾದಲ್ಲಿ ಅವಚ್ಛೇದಕ ಮಾತ್ರ. ಇದರಿಂದಾಗಿಯೇ ಅದಕ್ಕೆ ಅನ್ವಯ-ವ್ಯತಿರೇಕಗಳು. ಅದು ಕಾರಣವೂ ಅಲ್ಲ, ದೋಷಾಭಾವತ್ವವು ಕಾರಣತಾವಚ್ಛೇದಕವೂ ಅಲ್ಲ. ಹಾಗೆ ಕಲ್ಪನೆ ಮಾಡುವುದು ಗೌರವ. ಅಷ್ಟೇ ಅಲ್ಲ, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಕರದಲ್ಲಿ ಚರಣ ಎಂದು ಭ್ರಮಾತ್ಮಕ ದೋಷವಿದ್ದರೂ ಪ್ರತ್ಯಕ್ಷಪ್ರಮಾ ಹುಟ್ಟುವುದರಿಂದ ಅದಕ್ಕೆ ವ್ಯತಿರೇಕವ್ಯಭಿಚಾರವೂ ಇದೆ. ಆದ್ದರಿಂದ ದೋಷಾಭಾವವು ಪ್ರಮಾಕಾರಣವಲ್ಲ. ಇದನ್ನು ತತ್ತ್ವನಿರ್ಣಯಟೀಕಾದಲ್ಲಿ ಹೇಳಲಾಗಿದೆ. ''ದೋಷಾಭಾವವು ಪ್ರಮಾಕಾರಣವಲ್ಲ. ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ದೋಷವಿದ್ದರೂ ಪ್ರಮಾ ಹುಟ್ಟುತ್ತದೆ.''

## ನ್ಯಾಯದೀಪ

**ಕಾರಣತ್ವಸ್ಯೇತಿ ॥ ಕುತ ಇತ್ಯತಃ 'ಯೇನ ಸಹೈವ ಯಸ್ಯ ಯಂ ಪ್ರತಿ ಪೂರ್ವವೃತ್ತಿತ್ವಮ್ ಅವಗಮ್ಯತೇ ತತ್ ತೇನ ಅನ್ಯಥಾಸಿದ್ಧಮ್' ಇತಿ ಮಣ್ಯುಕ್ತಾನ್ಯಥಾಸಿದ್ಧಿಮತ್ತ್ವಾತ್, ಇತ್ಯಾಹ– ಕ್ಲೃಪ್ತೇತಿ ॥ ಗ್ರಹಣೇನೇತಿ ॥ ತ್ವದುಕ್ತಪಾರಿಭಾಷಿಕಾನ್ಯಥಾಸಿದ್ಧತ್ವೇನ ಹೇತುನಾ ಇತ್ಯರ್ಥಃ। ಅಸ್ಯ ಚಕ್ಷುರಾದಿನಿಷ್ಠಕಾರಣತಾ, ಇತ್ಯಾದಿನಾ ಅನ್ವಯಃ।**

**ಗುರುಮತೇನಾಹ–ಉಪಸ್ಥಿತೇತಿ ॥ ಉಪಸ್ಥಿತಂ=ಬುದ್ಧೌ ವಿಪರಿವರ್ತಮಾನಂ ಯದಿಷ್ಟಂ ರಜತಾದಿ, ತೇನ ಪುರೋವರ್ತಿನಃ ಭೇದಾಗ್ರಹಃ ಇತ್ಯರ್ಥಃ। ಉಪಸ್ಥಿತೇರಪಿ ಪುರೋವರ್ತಿಗೋಚರ–ಪ್ರವೃತ್ತಿಕಾರಣತ್ವೇ ವೈಶಿಷ್ಟ್ಯಜ್ಞಾನಸ್ಯಾಪಿ ಹೇತುತಾಪತ್ತ್ಯಾ ಭೇದಾಗ್ರಹಃ ಪ್ರವೃತ್ತಿಹೇತುಃ ಇತಿ ಮತಹಾನ್ಯಾಪತ್ತೇಃ ಹೇತುತಾವಚ್ಛೇದಕತ್ವಂ ಯಥಾ ತಥೇತ್ಯರ್ಥಃ। ನ್ಯಾಯಮತೇನಾಹ– ವಿಷಯತ್ವೇನೇತಿ ॥ ಪ್ರತ್ಯಕ್ಷಮಿತ್ಯತ್ರೇತಿ ॥ ಇತಿ ಪ್ರತ್ಯಕ್ಷಲಕ್ಷಣೇ ಇತ್ಯರ್ಥಃ। ಅನ್ಯಥಾಸಿದ್ಧಿಮುಕ್ತ್ವಾ ವ್ಯಭಿಚಾರಂ ಚಾಹ–ಉಕ್ತೇತಿ ॥ 'ಕಿಂಚ ಕರಾದೌ ಚರಣಾದಿಭ್ರಮಜನ್ಯ' ಇತ್ಯಾದಿನಾ ಉಕ್ತರೀತ್ಯಾ ಇತ್ಯರ್ಥಃ ॥**

ದೋಷಾಭಾವವು ಏಕೆ ಕಾರಣವಲ್ಲ? ಎಂದರೆ 'ಯೇನ ಸಹೈವ' ಇತ್ಯಾದಿಯಾಗಿ ಮಣಿಯಲ್ಲಿ ಹೇಳಿದ ಅನ್ಯಥಾಸಿದ್ಧಿಯು ಇರುವುದರಿಂದ ಎಂಬ ಕಾರಣವನ್ನೂ 'ಕ್ಲೃಪ್ತ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಈ ವಾಕ್ಯದಲ್ಲಿರುವ ಗ್ರಹಣೇನ ಎನ್ನುವುದಕ್ಕೆ ಮಣಿಕಾರ ಹೇಳಿರುವ ಪಾರಿಭಾಷಿಕವಾದ ಅನ್ಯಥಾಸಿದ್ಧಿಯಿಂದಾಗಿ, ಎಂದು ಅರ್ಥ.

'ಉಪಸ್ಥಿತ' ಎಂಬ ಮೂಲವಾಕ್ಯದಲ್ಲಿ ಗುರುಮತದಲ್ಲೂ (ಪ್ರಾಭಾಕರ) ದೃಷ್ಟಾಂತವನ್ನು ತೋರಿಸಿದ್ದಾರೆ. ಉಪಸ್ಥಿತರಜತ, ಎಂದರೆ ಸ್ಮರಣೆಯಲ್ಲಿ ವಿಷಯವಾದ ರಜತ, ಎಂದು ಅರ್ಥ.

ಸ್ಮೃತವಾದ ರಜತದಿಂದ ಪುರೋವರ್ತಿಯಾದ ಶುಕ್ತಿಗೆ ಭೇದಾಗ್ರಹವು ಪ್ರವೃತ್ತಿಹೇತು, ಎಂದು ಪ್ರಾಭಾಕರ ಸಿದ್ಧಾಂತ. ಅಲ್ಲಿ ಸೇರಿರುವ ಉಪಸ್ಥಿತಿಯೂ ಪ್ರವೃತ್ತಿಗೆ ಕಾರಣ, ಎಂದು ಹೇಳಿದರೆ ಉಪಸ್ಥಿತಿಯ ವೈಶಿಷ್ಟ್ಯವು ರಜತದಲ್ಲಿ ಭಾನವಾಗಬೇಕು, ಆಗ ಪ್ರವೃತ್ತಿ ಎಂದಂತಾಗುತ್ತದೆ. ಹೀಗೆ ಹೇಳಿದಲ್ಲಿ ವೈಶಿಷ್ಟ್ಯಗ್ರಹ ಪ್ರವೃತ್ತಿಹೇತುವಲ್ಲ, ಭೇದಾಗ್ರಹವೇ ಹೇತು, ಎಂಬ ಪ್ರಾಭಾಕರಮತ ಹಾನಿಯಾದಂತೆ. ಆದ್ದರಿಂದ ಅದು ಕಾರಣವಲ್ಲ, ಕಾರಣತಾವಚ್ಛೇದಕ ಮಾತ್ರ. ಆದರಂತೆ ಪ್ರಕೃತ ದೋಷಾಭಾವ.

ನ್ಯಾಯಮತದಂತೆ ದೃಷ್ಟಾಂತ–ವಿಷಯಸ್ಯ, ಎಂದು.

## ನ್ಯಾಯದೀಪದಲ್ಲಿ ಅವತಾರಿಕೆ

**ನನು ದೋಷಸ್ಯ ಪ್ರತಿಬಂಧಕತಯಾ ತದಭಾವಸ್ಯ ಸ್ವತಂತ್ರಾವೇವ ಅನ್ವಯ–ವ್ಯತಿರೇಕೌ, ಅತಃ ನ ಪ್ರಾಗುಕ್ತಾನ್ಯಥಾಸಿದ್ಧಿಃ ಯುಕ್ತಾ ಇತ್ಯತ ಆಹ–ಕಿಂಚೇತಿ ।।**

ದೋಷವು ಪ್ರಮಾಕ್ಕೆ ಪ್ರತಿಬಂಧಕವಾಗಿರುವುದರಿಂದ ತದಭಾವಕ್ಕೆ ಪ್ರಮಾದೊಂದಿಗೆ ಸ್ವತಂತ್ರವಾಗಿಯೇ ಅನ್ವಯವ್ಯತಿರೇಕಗಳಿವೆ, ಕಾರಣಮಾದಾಯ ಅಲ್ಲ, ಆದ್ದರಿಂದ ಹಿಂದೆ ಹೇಳಿದ ಅನ್ಯಥಾಸಿದ್ಧಿ ಇಲ್ಲ, ಈ ಆಕ್ಷೇಪಕ್ಕೆ 'ಕಿಂಚ' ಎಂದು ಮುಂದಿನ ಮೂಲ ಉತ್ತರ.

**किञ्च, प्रतिबन्धकाभावे लोके कारणत्वाव्यवहारात् औत्सर्गिककार्यापवादकविरोधित्वरूपान्यैव अन्यथासिद्धिः परिभाष्यतामित्युक्तम् । उक्तं हि सुधायां ''तर्हि दोषाभावः कारणमित्यायातमिति चेन्न । तथा सत्युत्सर्गापवादयोः क्वाप्यभावप्रसङ्गात्'' इति ।।**

ಲೋಕದಲ್ಲಿ ಪ್ರತಿಬಂಧಕಾಭಾವವು ಕಾರಣ ಎಂದು ಹೇಳುವ ವಾಡಿಕೆ ಇಲ್ಲ. ಅದಕ್ಕನುಗುಣವಾಗಿ ಅದರಲ್ಲಿ ಬರುವಂತಹ ಒಂದು ಹೊಸವಿಧವಾದ ಅನ್ಯಥಾಸಿದ್ಧಿಯನ್ನು ನಿರ್ವಚನಮಾಡಬೇಕು. ಅದನ್ನು ಹೀಗೆ ನಿರೂಪಿಸಬಹುದು. ಔತ್ಸರ್ಗಿಕಕಾರ್ಯಕ್ಕೆ ಯಾವುದು ಅಪವಾದಕವಾಗಿದೆಯೋ ತದ್ವಿರೋಧಿಯಾದುದು ಅನ್ಯಥಾಸಿದ್ಧ, ಎಂದು. ಪ್ರಕೃತದಲ್ಲಿ ಔತ್ಸರ್ಗಿಕ ಕಾರ್ಯ ಪ್ರಾಮಾಣ್ಯ. ಅದಕ್ಕೆ ಅಪವಾದಕವಾದುದು (ಪ್ರತಿಬಂಧಕ) ದೋಷ. ಅದಕ್ಕೆ ವಿರೋಧಿಯಾಗಿದೆ(ವಿರಹರೂಪವಾಗಿದೆ) ದೋಷಾಭಾವ. ಆದ್ದರಿಂದ ಅದು ಅನ್ಯಥಾಸಿದ್ಧ. ಅದು ಪ್ರಾಮಾಣ್ಯಕ್ಕೆ ಕಾರಣವಲ್ಲ. ಸುಧಾದಲ್ಲಿ ಹೀಗೆಯೆ ಹೇಳಲಾಗಿದೆ— 'ದೋಷವಿದ್ದರೆ ಪ್ರಾಮಾಣ್ಯ ಹುಟ್ಟುವುದಿಲ್ಲ, ಅದಿಲ್ಲದಿದ್ದಾಗಲೇ ಪ್ರಾಮಾಣ್ಯವು ಹುಟ್ಟುವುದಾದಲ್ಲಿ ದೋಷಾಭಾವವು

ಪ್ರಾಮಾಣ್ಯಕ್ಕೆ ಕಾರಣವಾಯಿತು, ಎಂದರೆ ಇಲ್ಲ, ಪ್ರತಿಬಂಧಕಾಭಾವವು ಕಾರಣವಾದಲ್ಲಿ ಉತ್ಸರ್ಗಾಪವಾದಗಳೇ ಇಲ್ಲವೆಂದಾದೀತು' (ಇದರ ವಿವರಣೆ 678 ಪುಟದಲ್ಲಿ ಬಂದಿದೆ.) ಎಂದು.

## ನ್ಯಾಯದೀಪ

**ಅನ್ಯಥಾಸಿದ್ಧಿ ಶಬ್ದಸ್ಯ ತ್ವಯಾ ಯೌಗಿಕಾರ್ಥಂ ತ್ಯಕ್ತ್ವಾ ಲೋಕವ್ಯವಹಾರಾನುರೋಧೇನ ತ್ರಿಧಾ ಪಾರಿಭಾಷಿಕಾರ್ಥೋಕ್ತೇಃ ಇಹಾಪಿ ವ್ಯವಹಾರಾನುರೋಧೇನ ತ್ವದುಕ್ತಾನ್ಯಥಾಸಿದ್ಧಿತ್ರಯಾತ್ ಅನ್ಯೈವಾನ್ಯಥಾಸಿದ್ಧಿಃ ಪರಿಭಾಷ್ಯತಾಮ್ ಇತ್ಯುಕ್ತಮ್ ಅತೀತಭಂಗೇ ಇತ್ಯರ್ಥಃ। ಉಕ್ತಂ ಹೀತಿ ॥ ದೋಷಭಾವಸ್ಯ ಅನ್ಯಥಾಸಿದ್ಧತಯಾ ಕಾರಣತ್ವಂ ನೇತ್ಯೇತತ್ ಜಿಜ್ಞಾಸಾಧಿಕರಣೇ—**

**ಪ್ರತ್ಯಕ್ಷವಚ್ಚ ಪ್ರಾಮಾಣ್ಯಮ್...॥**

**ಇತ್ಯಾದಿ ಶ್ಲೋಕವ್ಯಾಖ್ಯಾನಸುಧಾಯಾಮ್ ಉಕ್ತಮಿತ್ಯರ್ಥಃ॥**

ಅನ್ಯಥಾಸಿದ್ಧಿ ಎಂಬ ಶಬ್ದದ ಯೌಗಿಕಾರ್ಥ–ಅದಿಲ್ಲದೆಯೂ ಕಾರ್ಯವು ಸಿದ್ಧವಾಗುತ್ತದೆ, ಎಂದು. ಆದರೆ, ಈ ಅರ್ಥವನ್ನು ಇಟ್ಟುಕೊಂಡರೆ ದಂಡತ್ವಾದಿಗಳಿಗೆ ಅನ್ಯಥಾಸಿದ್ಧಿಯನ್ನು ಹೇಳಲು ಆಗುವುದಿಲ್ಲ, ಅದಕ್ಕಾಗಿ ಅನ್ಯಥಾಸಿದ್ಧಿ ಶಬ್ದಕ್ಕೆ, ಲೋಕದಲ್ಲಿ ಯಾವುದನ್ನು ಕಾರಣವೆಂದು ಪರಿಗಣಿಸಿಲ್ಲವೋ ಆದರೂ ಯಾವುದರಲ್ಲಿ ಕಾರಣಲಕ್ಷಣವು ಬರುವುದೋ ಅವುಗಳಲ್ಲಿ ಬರುವಂತೆ ಮೂರು ರೀತಿಯಾದ ಪಾರಿಭಾಷಿಕವಾದ ಅರ್ಥವನ್ನು ನೈಯಾಯಿಕರು ಹೇಳಿದ್ದಾರೆ. ಆದ್ದರಿಂದ ಪ್ರತಿಬಂಧಕಾಭಾವದಲ್ಲೂ ಕಾರಣತ್ವವ್ಯವಹಾರವು ಇಲ್ಲದಿರುವುದರಿಂದ ಅದರಲ್ಲೂ ಬರುವಂತೆ ಹೊಸದಾದ ಅನ್ಯಥಾಸಿದ್ಧಿಯನ್ನು ಹೇಳಬೇಕು, ಎಂದು ಮೂಲದ ಅಭಿಪ್ರಾಯ.

ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವಲ್ಲ ಎಂಬ ವಿಷಯವು 'ಪ್ರತ್ಯಕ್ಷವಚ್ಚ' ಇತ್ಯಾದಿ ಶ್ಲೋಕದ ಕೊನೆಯ ಪಾದವಾದ 'ಅಪ್ರಾಮಾಣ್ಯಂ ತಥಾನ್ಯತಃ' ಎಂಬುದರ ವಿವರಣೆಯ ಸಂದರ್ಭದಲ್ಲಿ ಸುಧಾಗ್ರಂಥದಲ್ಲಿ ಬಂದಿದೆ.

## ನ್ಯಾಯದೀಪ

**ಉಪಲಕ್ಷಣಮೇತತ್। 'ದೋಷಾಭಾವಾನ್ವಯವ್ಯತಿರೇಕನಿಯಮಾತ್ ಪ್ರಾಮಾಣ್ಯಸ್ಯ ಪರತಸ್ತ್ವಂ ಕಿಂ ನ ಸ್ಯಾತ್? ಇತಿ ಚೇನ್ನ। ಯಾದೃಚ್ಛಿಕಸಂವಾದಿಷು ಪ್ರಾಮಾಣ್ಯೇऽಪಿ ದೋಷಾಭಾವಾಭಾವೇನ ಕಾರಣತ್ವಭಂಗಾತ್।' ಇತ್ಯಾದಿನಾ ವಾದಾವಲ್ಯಾಮ್ ಉಕ್ತಮಿತ್ಯರ್ಥಃ। ಉತ್ಸರ್ಗೇತ್ಯಾದೇರರ್ಥಸ್ತು 'ದಾಹವಿರೋಧಿನೋ ಹೇತುತ್ವೇ' (ಪು.678) ಇತ್ಯಾದಿನಾ ಪೂರ್ವಗ್ರಂಥೇನೈವ ವಿವೃತೋ ಧ್ಯೇಯಃ।**

ದೋಷಾಭಾವವು ಅನ್ಯಥಾಸಿದ್ಧವಾದುದರಿಂದ ಕಾರಣವಲ್ಲ, ಎನ್ನುವುದು ಉಪಲಕ್ಷಣ. ವ್ಯತಿರೇಕ ವ್ಯಭಿಚಾರವಿರುವುದರಿಂದಲೂ ಅದು ಕಾರಣವಲ್ಲ. ಅದನ್ನು ವಾದಾವಲೀ ಗ್ರಂಥದಲ್ಲಿ ಶ್ರೀಜಯತೀರ್ಥರು ತೋರಿಸಿದ್ದಾರೆ–''ದೋಷಾಭಾವಕ್ಕೆ ಪ್ರಾಮಾಣ್ಯದೊಂದಿಗೆ ಅನ್ವಯ–ವ್ಯತಿರೇಕಗಳು ಇರುವುದರಿಂದ ಅದು ಪ್ರಾಮಾಣ್ಯಕ್ಕೆ ಕಾರಣವಾದುದರಿಂದ ಪ್ರಾಮಾಣ್ಯಂ ಪರತಃ, ಎಂದಾಗಲೀ, ಎಂದರೆ ಅದು ಸರಿಯಲ್ಲ. ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ವಕ್ತೃವಿನಲ್ಲಿ ವಿಪ್ರಲಂಭಕತ್ವರೂಪವಾದ ದೋಷವಿದ್ದರೂ ಪ್ರಾಮಾಣ್ಯವಿರುವುದರಿಂದ ದೋಷಾಭಾವಕ್ಕೆ ಕಾರಣತ್ವವೇ ಇಲ್ಲ'' ಎಂದು.

**न चैवं भाष्यटीकायाः विष्णुतत्त्वनिर्णयटीकया सुधया च विरोध इति शङ्‌क्यम् । भाष्यटीकायां कारणशब्दस्यास्मदुक्तं यद्धटं प्रति कुलालपित्रादिसाधारणं तद्व्यतिरेकप्रयुक्तव्यतिरेकप्रतियोगित्वरूपं प्रयोजकत्वं तन्मात्रपरत्वात् । उक्तं हि—**

**''तस्माद्गुणेभ्यो दोषाणामभावस्तदभावतः ।**
**अप्रामाण्यद्वयाभावस्तेनोत्सर्गोऽनपोदितः'' इति ।।**

ದೋಷಾಭಾವವು ಕಾರಣವಲ್ಲವೆಂದಾದರೆ ಭಾಷ್ಯಟೀಕಾಕ್ಕೆ (ತತ್ತ್ವಪ್ರಕಾಶಿಕಾ) ವಿಷ್ಣುತತ್ತ್ವನಿರ್ಣಯಟೀಕೆ ಮತ್ತು ಸುಧಾಟೀಕೆಗಳೊಂದಿಗೆ ವಿರೋಧ ಬಂದೀತು. ಭಾಷ್ಯಟೀಕಾದಲ್ಲಿ (ದೇವತಾಧಿಕರಣ) ದೋಷಾಭಾವವು ಕಾರಣವೆಂದರೂ ಬಾಧಕವಿಲ್ಲ, ಎನ್ನಲಾಗಿದೆ. ತತ್ತ್ವನಿರ್ಣಯ ಮತ್ತು ಸುಧಾಗಳಲ್ಲಿ ದೋಷಾಭಾವವು ಕಾರಣವೇ ಅಲ್ಲ, ಎನ್ನಲಾಗಿದೆ. ಆದ್ದರಿಂದ ಅವುಗಳಿಗೆ ವಿರೋಧ ಬಂತು. ಇದನ್ನು ಹೀಗೆ ಪರಿಹರಿಸಬೇಕು— ವಸ್ತುತಃ ತತ್ತ್ವನಿರ್ಣಯ ಮತ್ತು ಸುಧೆಯಲ್ಲಿ ಹೇಳಿದ್ದೇ ಸರಿ. ಭಾಷ್ಯಟೀಕಾದಲ್ಲಿ ದೋಷಾಭಾವವು ಕಾರಣ ಎಂದರೆ ಪ್ರಯೋಜಕ ಎಂದರ್ಥ. ಕುಲಾಲಪಿತೃವಿನಂತೆ ದೋಷಾಭಾವ. ದೋಷವು ಅಪ್ರಾಮಾಣ್ಯಕ್ಕೆ ಕಾರಣ. ಅದಿಲ್ಲದಿರುವುದರಿಂದ ಅಪ್ರಾಮಾಣ್ಯವು ಹುಟ್ಟುವುದಿಲ್ಲ. ಅದರಿಂದಾಗಿ ಜ್ಞಾನಸಾಮಗ್ರಿಯಿಂದ ಪ್ರಾಮಾಣ್ಯವು ಹುಟ್ಟುತ್ತದೆ, ಎಂದರ್ಥ. ಹೀಗೆ, ದೋಷಾಭಾವವ್ಯತಿರೇಕ ಪ್ರಯುಕ್ತವಾಗಿ ಪ್ರಾಮಾಣ್ಯವ್ಯತಿರೇಕವು ಇರುತ್ತದೆ. ಅದಕ್ಕೆ ಪ್ರಾಮಾಣ್ಯವು ಪ್ರತಿಯೋಗಿಯಾಗಿದೆ. ಇಂತಹ ಪ್ರತಿಯೋಗಿತ್ವರೂಪ ಧರ್ಮ ಕಾರಣದಲ್ಲೂ ಇದೆ, ಪ್ರಯೋಜಕದಲ್ಲೂ ಇದೆ. ಈ ಅರ್ಥವನ್ನು ಇಟ್ಟುಕೊಂಡು ದೋಷಾಭಾವವು ಕಾರಣ, ಎಂದು ಭಾಷ್ಯಟೀಕಾದಲ್ಲಿ ಹೇಳಲಾಗಿದೆ. ಆದ್ದರಿಂದಲೇ ಮೀಮಾಂಸಾಶ್ಲೋಕವಾರ್ತಿಕಾದಲ್ಲೂ ಹೀಗೆ ಹೇಳಲಾಗಿದೆ— ಆಪ್ತೋಕ್ತತ್ವಾದಿ ಗುಣಗಳಿಂದ ವಾಕ್ಯದಲ್ಲಿ ಅಪ್ರಾಮಾಣ್ಯಕ್ಕೆ ಕಾರಣವಾದ ಅಬೋಧಕತ್ವ ಮತ್ತು ವಿಪರೀತಬೋಧಕತ್ವ ರೂಪವಾದ ದೋಷಾಭಾವವು ಬರುತ್ತದೆ. ಅದರಿಂದ ಅಪ್ರಾಣ್ಯಾಭಾವ. ಹೀಗೆ ದೋಷವಿಲ್ಲದಿದ್ದಾಗ 'ಜ್ಞಾನಜನಕವಾದ ಸಾಮಗ್ರಿಯಿಂದಲೇ ಪ್ರಾಮಾಣ್ಯವು ಹುಟ್ಟುತ್ತದೆ' ಎಂಬ ಉತ್ಸರ್ಗನಿಯಮಕ್ಕೆ ಭಂಗಬರುವುದಿಲ್ಲ, ಎಂದು.

## ನ್ಯಾಯದೀಪ

**ಭಾಷ್ಯಟೀಕಾಯಾ ಇತಿ ॥ ಪ್ರಾಗುಕ್ತಾಯಾ ಇತ್ಯರ್ಥಃ (1-3.8) । ಸುಧಯಾ ಚೇತಿ । ವಾದಾವಲ್ಯಾ ಚೇತ್ಯಪಿ ಧ್ಯೇಯಮ್ । ತದ್ವ್ಯತಿರೇಕೇತಿ ॥ ದೋಷಾಭಾವವ್ಯತಿರೇಕ-ಪ್ರಯುಕ್ತ-ವ್ಯತಿರೇಕಪ್ರತಿಯೋಗಿತ್ವಂ ಪ್ರಾಮಾಣ್ಯಸ್ಯ ಯತ್ ತದ್ರೂಪಂ ಪ್ರಯೋಜಕತ್ವಮಿತ್ಯರ್ಥಃ । ಸ್ವವಿರಹಪ್ರಯುಕ್ತ-ವಿರಹ-ಪ್ರತಿಯೋಗಿಕಾರ್ಯಕತ್ವರೂಪಂ ಯತ್ ಪ್ರಯೋಜಕತ್ವಂ ಇತಿ ಫಲಿತೋಽರ್ಥಃ । ಉಕ್ತಂ ಹೀತಿ ॥ ವಾರ್ತಿಕೇ ದೋಷಾಭಾವಸ್ಯ ಉಕ್ತರೂಪಂ ಪ್ರಯೋಜಕತ್ವಮ್ ಉಕ್ತಮಿತ್ಯರ್ಥಃ । ತದಭಾವತಃ=ಗುಣಾಧೀನ-ದೋಷಾಭಾವತಃ । ಅಬೋಧಕತ್ವರೂಪಂ, ವಿಪರೀತಬೋಧಕತ್ವರೂಪಂ ಅನನುಷ್ಠಾನರೂಪಂ ವಾ ಯದಪ್ರಾಮಾಣ್ಯದ್ವಯಂ ತದಭಾವಃ । ತೇನ ದೋಷಾಭಾವಸ್ಯ ಅಪ್ರಾಮಾಣ್ಯನಿರಾಸೋಪಕ್ಷಯೇಣ ಜ್ಞಾನಸಾಮಗ್ರೀತ ಏವ ಪ್ರಮಾ ಜಾಯತೇ ಇತ್ಯುತ್ಸರ್ಗೋ ನ ಭಗ್ನಃ, ಇತ್ಯರ್ಥಃ ।**

ಮೂಲದಲ್ಲಿ ಹೇಳಿರುವ ಪ್ರಯೋಜಕತ್ವವು ಕಾರ್ಯದಲ್ಲಿ ಪರ್ಯವಸಾನಗೊಳ್ಳುತ್ತದೆ. ಆದಕ್ಕಾಗಿ, ವಿರಹಪ್ರತಿಯೋಗಿಕಾರ್ಯಕತ್ವಂ, ಎಂದು ಅದನ್ನು ಕಾರಣದಲ್ಲಿ ಪರ್ಯವಸಾನ ಗೊಳಿಸಬೇಕು. ಮೇಲೆ ಉದಾಹರಿಸಿರುವ ಶ್ಲೋಕ ಮೀಮಾಂಸಾದರ್ಶನದ ಶ್ಲೋಕವಾರ್ತಿಕಾ ಗ್ರಂಥದಲ್ಲಿದೆ. ಆದರಲ್ಲಿ 'ತದಭಾವತಃ' ಎಂದರೆ ಗುಣಪ್ರಯುಕ್ತವಾದ ದೋಷಭಾವದಿಂದ, ಎಂದು ಅರ್ಥ. ಅಪ್ರಾಮಾಣ್ಯಕಾರಣವಾದ ಒಂದು ವಾಕ್ಯದೋಷ ಅಬೋಧಕತ್ವರೂಪವಾದುದು. ಇನ್ನೊಂದು ವಿಪರೀತಬೋಧಕತ್ವರೂಪವಾದುದು. ಇವೆರಡನ್ನೂ ಅನನುಷ್ಠಾನರೂಪವಾದ ಅಪ್ರಾಮಾಣ್ಯ ಎಂದು ಪರಿಗಣಿಸಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಪಾಗುಕ್ತ-ಪ್ರತಿಬಂಧಕ-ವಿರೋಧಿತ್ವರೂಪಾನ್ಯಥಾಸಿದ್ಧಿಃ ಅಯುಕ್ತಾ, ಇತಿ ಭಾವೇನ ಶಂಕತೇ-ನನ್ವಿತಿ ॥**

ಒಂದೆ ಹೊಸದೊಂದು ಅನ್ಯಥಾಸಿದ್ಧಿಯನ್ನು ಕಲ್ಪಿಸಿ ದೋಷಾಭಾವಕ್ಕೆ ಅನ್ಯಥಾಸಿದ್ಧತ್ವವನ್ನು ಹೇಳಬೇಕು, ಎನ್ನಲಾಗಿದೆ. ಅದು ಸರಿಯಲ್ಲ ಎಂದು ಮೂಲದಲ್ಲಿ ಆಕ್ಷೇಪಿಸಲಾಗಿದೆ.

**ननु कथं तर्हि दोषस्य प्रतिबन्धकत्वमपि । तत्रैव तस्मिन् सत्यपि प्रमाया दर्शनादिति चेन्न । तत्र यादृच्छिकस्य विषयसत्वस्योत्तेजकत्वेन उत्तेजकाभावविशिष्टस्य प्रतिबन्धकस्याभावात् ॥**

**न च तर्ह्यावश्यकत्वात् विषयसत्वमेव प्रमाप्रयोजकं न तु दोषाभावापेक्षेति वाच्यम् । शुक्तौ रूप्यभ्रमकाले शुक्तित्वादेर्विषयस्य सत्वेऽपि दोषरूपप्रतिबन्धेन शुक्तित्वादिप्रमाव्यतिरेकात् ।।**

ದೋಷವು ಪ್ರಮಾಕ್ಕೆ ಪ್ರತಿಬಂಧಕವಾಗುವುದಾದರೂ ಹೇಗೆ? ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ದೋಷವಿದ್ದರೂ ಪ್ರಮಾ ಹುಟ್ಟಿದೆ. ಆದ್ದರಿಂದ ದೋಷವು ಪ್ರಮಾಪ್ರತಿಬಂಧಕ ಹೇಗೆ? ಎಂದರೆ, ಅಲ್ಲಿ ದೋಷರೂಪವಾದ ಪ್ರತಿಬಂಧಕವಿದ್ದರೂ ವಿಷಯಸತ್ವರೂಪವಾದ ಉತ್ತೇಜಕವು ಇರುವುದರಿಂದ ಉತ್ತೇಜಕಾಭಾವವಿಶಿಷ್ಟವಾದ ದೋಷವು ಇಲ್ಲ, ತದಭಾವವು ಇರುವುದರಿಂದ ಪ್ರಮಾ ಹುಟ್ಟಿದೆ.

ಹಾಗಾದರೆ, ವಿಷಯಸತ್ವವು ಉತ್ತೇಜಕವೆಂದು ಹೇಳುವುದು ಅನಿವಾರ್ಯವಾದಮೇಲೆ ವಿಷಯಸತ್ವವೇ ಪ್ರಮಾಕ್ಕೆ ಕಾರಣವಾಗಲಿ, ದೋಷಾಭಾವದ ಅಗತ್ಯವೇನು? ಈ ಆಕ್ಷೇಪವೂ ಸರಿಯಲ್ಲ. ಭ್ರಮಸ್ಥಳದಲ್ಲಿ ವಿಷಯವಾದ ಶುಕ್ತಿಯು ಇದ್ದರೂ ಅದರ ಪ್ರಮಾ ಹುಟ್ಟುವುದಿಲ್ಲ. ಅದಕ್ಕೆ ದೋಷವು ಪ್ರತಿಬಂಧಕವೆಂದು ಹೇಳಲೇಬೇಕು. ಹೀಗೆ ಅಲ್ಲಿ ವಿಷಯಸತ್ವರೂಪವಾದ ಕಾರಣವಿದ್ದರೂ ಪ್ರಮಾರೂಪಕಾರ್ಯವು ಇಲ್ಲವಾದುದರಿಂದ ದೋಷಕ್ಕೆ ಪ್ರತಿಬಂಧಕತ್ವವನ್ನು ಹೇಳಲೇಬೇಕು.

## ನ್ಯಾಯದೀಪ

**ತತ್ರೇತಿ ।। ಯಾದೃಚ್ಛಿಕಸಂವಾದಿನಿ, ಇತ್ಯರ್ಥಃ । ತಸ್ಮಿನ್=ದೋಷೇ, ಇತ್ಯರ್ಥಃ ।।**

ತತ್ರ, ಎಂದರೆ, ಯಾದೃಚ್ಛಿಕ ಸಂವಾದಿಸ್ಥಲದಲ್ಲಿ, ಎಂದು ಅರ್ಥ. ತಸ್ಮಿನ್, ಎಂದರೆ, ದೋಷವು ಇದ್ದಾಗಲೂ, ಎಂದರ್ಥ.

**यद्वा 'इमं मा दह' इत्यादौ मन्त्रादेः उद्देश्यव्यक्तिविशेष इव लिङ्गाभासस्य यत्र विषयसत्वाभावस्तत्रैव प्रतिबन्धकत्वात् यादृच्छिकविषयसत्वस्थले केवलस्य प्रतिबन्धकस्याभाव एवास्ति । दोषाभावस्य स्वरूपेण हेतुत्वे तु व्यतिरेकव्यभिचारो दुष्परिहर इति दोषाभावोऽपि न हेतुः । तस्मात् परतस्त्वे न किञ्चिन्मानम् ।।**

ಅಥವಾ, ವಿಷಯಸತ್ವವು ಉತ್ತೇಜಕ, ಎಂದು ಹೇಳಬೇಕಾದ್ದಿಲ್ಲ. ಕೇವಲ ದೋಷವೇ ಪ್ರತಿಬಂಧಕ. ಯಾದೃಚ್ಛಿಕ ಸಂವಾದಿಸ್ಥಲದಲ್ಲಿರುವ ಲಿಂಗಾಭಾಸವು ದೋಷವೇ ಅಲ್ಲ. ಹೇಗೆಂದರೆ, ಇವನಿಗೆ ಮಾತ್ರ ಬೆಂಕಿಯು ಸುಡದಿರಲಿ, ಎಂಬ ಉದ್ದೇಶದಿಂದ ಮಂತ್ರವನ್ನು ಉಚ್ಚರಿಸಿದಾಗ

ಉಳಿದವರನ್ನು ಸುಡಲು ಮಂತ್ರವು ಹೇಗೆ ಪ್ರತಿಬಂಧಕವಾಗುವುದಿಲ್ಲವೋ ಅದರಂತೆ, ಪ್ರಕೃತ ಲಿಂಗಾಭಾಸವೂ ವಿಷಯವು ಎಲ್ಲಿ ಇರುವುದಿಲ್ಲವೋ ಅಲ್ಲಿ ಮಾತ್ರ ಪ್ರತಿಬಂಧಕ. ವಿಷಯವು ಇರುವಲ್ಲಿ ಅದು ಪ್ರತಿಬಂಧಕವಲ್ಲ. ಹೀಗೆ, ಯಾದೃಚ್ಛಿಕ ಸಂವಾದಿಸ್ಥಲದಲ್ಲಿ ಪ್ರತಿಬಂಧಕಾಭಾವವೇ ಇದೆ. ಆ ದೋಷದಲ್ಲಿ ಉತ್ತೇಜಕಾಭಾವ, ಎಂಬ ವಿಶೇಷಣವನ್ನು ಕೊಡಬೇಕಾಗಿಲ್ಲ. ಏವಂಚ ವ್ಯಭಿಚಾರವಿಲ್ಲದಿರುವುದರಿಂದ ಕೇವಲ ಪ್ರತಿಬಂಧಕಾಭಾವವು ಪ್ರಮಾಕ್ಕೆ ಪ್ರಯೋಜಕವಾಗುತ್ತದೆ.

ಹೀಗೆ, ದೋಷಾಭಾವವು ದೋಷಾಭಾವತ್ವೇನ ಹೇತು ಎನ್ನುವುದಕ್ಕೆ ಯಾದೃಚ್ಛಿಕ ಸಂವಾದಿ ಸ್ಥಲದಲ್ಲಿ ವ್ಯತಿರೇಕ ವ್ಯಭಿಚಾರ ಇದೆ. ಅಲ್ಲಿ ಲಿಂಗಾಭಾಸಾದಿ ದೋಷಗಳೇ ಇವೆ. ಆದ್ದರಿಂದ ಅದನ್ನು ಪ್ರತಿಬಂಧಕಾಭಾವತ್ವೇನ ಕಾರಣ ಎಂದೇ ಹೇಳಬೇಕು. ಹಾಗೆ ಹೇಳಿದರೆ ಉತ್ಸರ್ಗಾಪವಾದ ನಿಯಮವು ಭಂಗವಾಗುತ್ತದೆ. ಆದ್ದರಿಂದ ಪ್ರಾಮಾಣ್ಯ-ಪರತಸ್ತ್ವಕ್ಕೆ ಯಾವ ಪ್ರಮಾಣವೂ ಇಲ್ಲ.

## ನ್ಯಾಯದೀಪ

**ಮಾ ದಹೇತಿ ॥ ಅಸ್ಯ ಸಾಧುತ್ವಂ ಸಂಶಯೋಪಪಾದನಗ್ರಂಥೋಕ್ತಂ ಜ್ಞೇಯಮ್ । ವ್ಯತಿರೇಕವ್ಯಭಿಚಾರ ಇತಿ ॥ ಯಾದೃಚ್ಛಿಕಸಂವಾದಿನಿ, ಇತ್ಯರ್ಥಃ । ತಸ್ಮಾದಿತಿ ॥ ಅನುಗತಗುಣಸ್ಯ ಅಭಾವಾತ್, ದೋಷಾಭಾವಸ್ಯ ಚ ಅಹೇತುತ್ವಾತ್ ಇತ್ಯರ್ಥಃ ॥**

'ಮಾ ದಹ' ಎಂಬಲ್ಲಿ ಮಾ ಎಂಬುದು ಅವ್ಯಯ, ಮಾಙ್ ಅಲ್ಲ. ಆದ್ದರಿಂದ ಲುಙ್ ಲಕಾರ ಬಂದಿಲ್ಲ. ಲೋಟ್‌ಲಕಾರ ಸಾಧು, ಎಂದು ಸಂಶಯಪ್ರಕರಣದಲ್ಲಿ (ಪುಟ.318) ಹೇಳಿದ್ದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ದೋಷಾಭಾವಕ್ಕೆ ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ವ್ಯತಿರೇಕ ವ್ಯಭಿಚಾರವನ್ನು ತಿಳಿಯಬೇಕು. ತಸ್ಮಾತ್ ಎಂದರೆ, ಪ್ರಮಾ ಮಾತ್ರಕ್ಕೆ ಅನುಗತವಾದ ಗುಣವೂ ಇಲ್ಲ, ದೋಷಾಭಾವವೂ ಕಾರಣವಲ್ಲವಾದುದರಿಂದ, ಎಂದು ಅರ್ಥ.

**एतदप्युक्तं ''अन्यथा'' इत्यादिना । औत्सर्गिककार्यापवादक-निरासरूपस्यापि दोषाभावस्य हेतुत्वे, इदमौत्सर्गिकम् इदमपवादकमिति व्यवस्थित्ययोगादित्यर्थः ।।**

ಈ ಪ್ರಕರಣದಲ್ಲಿ ಹೇಳಿರುವ ವಿಷಯವನ್ನೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯದಲ್ಲಿ ಹೇಳಲಾಗಿದೆ. ಔತ್ಸರ್ಗಿಕವಾದ ಕಾರ್ಯಕ್ಕೆ ಅಪವಾದರೂಪವಾದುದು ದೋಷ. ತನ್ನಿರಾಸರೂಪವಾದುದು ದೋಷಾಭಾವ. ಅದೂ ಕಾರ್ಯಕ್ಕೆ ಕಾರಣವಾದರೆ, ಇದು ಉತ್ಸರ್ಗನಿಯಮ, ಅದಕ್ಕೆ ಇದು ಅಪವಾದ ಎಂಬ ವ್ಯವಸ್ಥೆಯೇ ಇಲ್ಲದಾದೀತು, ಎಂದು ಅರ್ಥ.

**ಇಲ್ಲಿಗೆ ದೋಷಾಭಾವಸ್ಯ ಹೇತುತ್ವಭಂಗ ಪ್ರಕರಣವು ಮುಗಿಯಿತು. ॥ 15 ॥**

## ಈ ಪ್ರಕರಣದ ಸಾರಾಂಶ

ಹಿಂದಿನ ಪ್ರಕರಣದಲ್ಲಿ ಗುಣವು ಪ್ರಮಾಪ್ರತಿಬಂಧಕವಾದ ದೋಷವನ್ನು ನಿರಾಸಮಾಡುವುದರಲ್ಲೇ ಉಪಕ್ಷೀಣ. ಅದು ಪ್ರಮಾ ಹೇತು ಅಲ್ಲ, ಎಂದು ಹೇಳಲಾಗಿದೆ. ಇದರಿಂದ ಪ್ರಮಾ ಹುಟ್ಟಲು ದೋಷಾಭಾವವು ಇರಬೇಕು, ಎಂದಂತಾಯಿತು. ಅದು ಸ್ವತಸ್ತ್ವವಾದಕ್ಕೆ ವಿರೋಧಿಯಲ್ಲ. ಏಕೆಂದರೆ, ದೋಷಾಭಾವವು ಪ್ರಮಾ ಪ್ರಯೋಜಕ ಎನ್ನುವುದು ಸ್ವತಸ್ತ್ವವಾದಿಗಳಿಗೆ ಸಮ್ಮತವಾಗಿದೆ. ಕಾರಣತಾವಚ್ಛೇದಕವಾದುದರಿಂದ ದೋಷಾಭಾವವು ಪ್ರಮಾಪ್ರಯೋಜಕ, ಎಂದು ಪೂರ್ವಾಚಾರ್ಯರಿಗೂ ಸಮ್ಮತವಾಗಿದೆ. ಬ್ರಹ್ಮತರ್ಕದಲ್ಲಿ ಪ್ರತ್ಯಕ್ಷಾದಿಗಳನ್ನು ಹೇಳುವಾಗ 'ಅದುಷ್ಟಮಿಂದ್ರಿಯಂ ತ್ವಕ್ಷಮ್' ಎಂದು ಮುಂತಾಗಿ ಕರಣತ್ರಯದಲ್ಲೂ ದೋಷಾಭಾವವನ್ನು ವಿಶೇಷಣವನ್ನಾಗಿ ಸೇರಿಸಲಾಗಿದೆ. ಆಚಾರ್ಯರೂ ಪ್ರಮಾಣಲಕ್ಷಣದಲ್ಲಿ ದೋಷಾಭಾವವನ್ನು ಸೇರಿಸಿಯೇ ಕರಣಗಳನ್ನು ನಿರೂಪಿಸಿದ್ದಾರೆ. ಟೀಕಾಚಾರ್ಯರಂತೂ 'ದೋಷಾಭಾವವು ಪ್ರಮಾಹೇತು ಎನ್ನುವುದು, ನಮಗೇನೂ ಬಾಧಕವಲ್ಲ' ಎಂದು ಸೂತ್ರಭಾಷ್ಯಟೀಕಾದಲ್ಲಿ ಹೇಳಿದ್ದಾರೆ. ಏಕೆಂದರೆ, ಕರಣಗಳಲ್ಲಿ ಪ್ರಮಾಜನನ ಶಕ್ತಿಯು ಸಹಜ, ಆಹಿತವಲ್ಲ. ಹೀಗೆ ಜ್ಞಾನಜನನ ಶಕ್ತಿಯಂತೆ ಪ್ರಮಾಜನನ ಶಕ್ತಿಯೂ ಸಹಜವಾದುದರಿಂದ ಪ್ರಾಮಾಣ್ಯಕ್ಕೆ ಉತ್ಪತ್ತೌ ಸ್ವತಸ್ತ್ವಕ್ಕೆ ಬಾಧಕವಿಲ್ಲ. ದೋಷವಿದ್ದಾಗ ಈ ಸಹಜ ಶಕ್ತಿಯು ಪ್ರತಿಬದ್ಧವಾಗಿ ಅಪ್ರಾಮಾಣ್ಯಜನನ ಶಕ್ತಿಯು ಕರಣಗಳಿಗೆ ಬರುತ್ತದೆ. ಹೀಗೆ, ಅಪ್ರಾಮಾಣ್ಯ ಜನನ ಶಕ್ತಿಯು ಕರಣಗಳಲ್ಲಿ ಆಹಿತವಾದುದು. ಆದ್ದರಿಂದಲೇ ಅಪ್ರಾಮಾಣ್ಯಂ ಪರತಃ. ಇದರಿಂದ ಅರ್ಥಾತ್ ಪ್ರಮಾ ಹುಟ್ಟಬೇಕಾದರೆ ಕರಣಗಳಲ್ಲಿ ದೋಷವು ಇರಬಾರದು, ಎಂದು ಸಿದ್ಧವಾಗುತ್ತದೆ. ಆದರೂ, ಕರಣಗಳಲ್ಲಿ ಪ್ರಮಾಜನನ ಶಕ್ತಿಯು ಸಹಜ ಎಂಬ ಸಿದ್ಧಾಂತಕ್ಕೆ ಇದರಿಂದೇನೂ ತೊಂದರೆ ಯಾಗುವುದಿಲ್ಲ. ಆದ್ದರಿಂದ ದೋಷಾಭಾವಕ್ಕೆ ಪ್ರಯೋಜಕತ್ವವನ್ನು ಪೂರ್ವಾಚಾರ್ಯರೆಲ್ಲ ಒಪ್ಪಿದ್ದಾರೆ.

ದೋಷಾಭಾವವು ಪ್ರಮಾಪ್ರಯೋಜಕವಾದರೂ ಪ್ರಮಾ ಕಾರಣವಲ್ಲ. ಅದು ಅನ್ಯಥಾಸಿದ್ಧವಾಗಿದೆ, ಹಾಗೂ ವ್ಯಭಿಚಾರಿಯೂ ಆಗಿದೆ. ದಂಡತ್ವವು ಕಾರಣತಾವಚ್ಛೇದಕವಾದುದರಿಂದ ಅನ್ಯಥಾಸಿದ್ಧವಾದಂತೆ ದೋಷಾಭಾವವೂ ಕಾರಣತಾವಚ್ಛೇಕವಾದುದರಿಂದ ಅನ್ಯಥಾಸಿದ್ಧ. ದೋಷಾಭಾವವಿಶಿಷ್ಟ-ಇಂದ್ರಿಯಾದಿಗಳು ಕರಣವಾದಾಗ ದೋಷಾಭಾವವು ಕಾರಣತಾವಚ್ಛೇದಕ ವಾಗುತ್ತದೆ. ಅದರಿಂದಾಗಿ ಅದು ಅನ್ಯಥಾಸಿದ್ಧ. ಯಾದೃಚ್ಛಿಕಸಂವಾದಿಸ್ಥಲದಲ್ಲಿ ದೋಷವಿದ್ದರೂ ಪ್ರಮಾ ಹುಟ್ಟುವುದರಿಂದ ದೋಷಾಭಾವವು ಪ್ರಮಾವ್ಯಭಿಚಾರಿಯೂ ಆಗಿದೆ. ಹಾಗಾದರೆ, ದೋಷವು ಪ್ರತಿಬಂಧಕವೂ ಆಗಲಿಕ್ಕಿಲ್ಲ. ಯಾದೃಚ್ಛಿಕಸಂವಾದಿ ಸ್ಥಲದಲ್ಲಿ ದೋಷವಿದ್ದರೂ ಪ್ರಮಾ ಹುಟ್ಟುವುದರಿಂದ ಅದು ಪ್ರಮಾಕ್ಕೆ ಪ್ರತಿಬಂಧಕವೆನ್ನುವುದು ಹೇಗೆ? ಇದಕ್ಕೆ ಹೀಗೆ ಸಮಾಧಾನ— ದೋಷವು ಪ್ರತಿಬಂಧಕವಾದರೂ ವಿಷಯಸತ್ವವು ಉತ್ತೇಜಕ. ಯಾದೃಚ್ಛಿಕಸಂವಾದಿಸ್ಥಲದಲ್ಲಿ

ವಿಷಯವು ಇರುವುದರಿಂದ ಪ್ರತಿಬಂಧಕವಿದ್ದರೂ ಪ್ರಮಾ ಹುಟ್ಟುತ್ತದೆ. ಹಾಗಾದರೆ ವಿಷಯಸತ್ವವೂ ಪ್ರಮಾಕ್ಕೆ ಆವಶ್ಯಕ ಎಂದಾದ ಮೇಲೆ ಪ್ರಮಾಕಾರಣವಾಗಲಿ, ದೋಷವು ಪ್ರತಿಬಂಧಕ ಎಂದು ಮತ್ತೆ ದೋಷಕ್ಕೆ ಪ್ರತಿಬಂಧಕತ್ವವನ್ನು ಏಕೆ ಕಲ್ಪಿಸಬೇಕು? ಎಂದರೆ, ವಿಷಯವು ಸತ್ತಾದರೂ ಭ್ರಮಸ್ಥಲದಲ್ಲಿ ವಿಷಯದ ಪ್ರಮಾ ಬರುವುದಿಲ್ಲ. ಆದಕ್ಕಾಗಿ ದೋಷವು ಪ್ರತಿಬಂಧಕ ಎಂದು ಹೇಳಲೇಬೇಕು.

ದೋಷಾಭಾವವು ಪ್ರಯೋಜಕ, ಕಾರಣವಲ್ಲ ಎಂದು ತತ್ತ್ವನಿರ್ಣಯಟೀಕಾ ಮತ್ತು ಸುಧಾದಲ್ಲಿ ಹೇಳಲಾಗಿದೆ.

''ದೋಷಾಭಾವೋಽಪಿ ನ ಪ್ರಾಮಾಣ್ಯಕಾರಣಮ್ ।

ಯಾದೃಚ್ಛಿಕಸಂವಾದಿಷು ಸತ್ಯಪಿ ದೋಷೇ ಪ್ರಮಾಣಜ್ಞಾನೋದಯಾತ್ ॥''

(ತತ್ವನಿರ್ಣಯಟೀಕಾ)

''ತರ್ಹಿ ದೋಷಾಭಾವಃ ಕಾರಣಮಿತ್ಯಾಯಾತಮ್, ಇತಿ ಚೇನ್ನ,

ತಥಾಸತಿ ಉತ್ಸರ್ಗಾಪವಾದಯೋಃ ಕ್ವಾಪಿ ಅಭಾವಪ್ರಸಂಗಾತ್ ॥''

(ಸುಧಾ–ಜಿಜ್ಞಾಸಾಧಿಕರಣ)

ಆದರೆ ಸೂತ್ರಭಾಷ್ಯಟೀಕಾ ತತ್ವಪ್ರಕಾಶಿಕಾದಲ್ಲಿ ದೋಷಾಭಾವವು ಕಾರಣ, ಎಂದು ಹೇಳಲಾಗಿದೆ.

''ದೋಷಾಭಾವಸ್ಯ ಕಾರಣತ್ವೇ ಚ ನಾಸ್ಮಾಕಮನಿಷ್ಟಮ್ ।
ವೇದಾಪೌರುಷೇಯತ್ವಾವ್ಯಾಘಾತಾತ್ ॥'' (ಬ್ರಹ್ಮ. 1.3.8)

ಹೀಗೆ, ಟೀಕಾಗ್ರಂಥದಲ್ಲಿ ತೋರುವ ವಿರೋಧವನ್ನು ಈ ಪ್ರಕರಣದಲ್ಲಿ ಪರಿಹಾರ ಮಾಡಲಾಗಿದೆ. ದೋಷಾಭಾವವು ಪ್ರಯೋಜನವೆನ್ನುವುದೇ ಸಿದ್ಧಾಂತ. ಆದರೂ ಕಾರಣ ಮತ್ತು ಪ್ರಯೋಜಕಗಳಲ್ಲಿ ಇರುವ ಸಮಾನಧರ್ಮ 'ತದ್–ವ್ಯತಿರೇಕ ಪ್ರಯುಕ್ತ–ವ್ಯತಿರೇಕ ಪ್ರತಿಯೋಗಿ ಕಾರ್ಯಕತ್ವಂ' ಎಂಬುದು. ಇದರ ಅರ್ಥ, ಯಾವುದು ಇಲ್ಲದಿರುವುದರಿಂದ ಕಾರ್ಯವೂ ಇಲ್ಲದಾಗುವುದೋ ಅದು ಕಾರಣ, ಅಥವಾ ಪ್ರಯೋಜಕ ಎಂದು. ಹೀಗೆ ಕಾರಣಗತಧರ್ಮವು ಪ್ರಯೋಜಕದಲ್ಲಿಯೂ ಇರುವುದರಿಂದ ತತ್ತ್ವಪ್ರಕಾಶಿಕಾದಲ್ಲಿ ಪ್ರಯೋಜಕ, ಎಂಬ ಅರ್ಥದಲ್ಲಿ ಕಾರಣಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ದೋಷಾಭಾವವು ಕಾರಣವಲ್ಲ, ಪ್ರಯೋಜಕ ಎಂದೇ ಸಿದ್ಧಾಂತ.

## ॥ ಪ್ರಕರಣ – 15 ॥

# ಪ್ರಕರಣ – 16

## ಉತ್ಪತ್ತೌ ಸ್ವತಸ್ತ್ವೇ ಅನುಮಾನಾನಿ

**स्वतस्त्वे तु अनित्यप्रमामात्रानुगतो गुणः, इति पक्षे- अनित्ययथार्थज्ञानत्वं, अनित्यज्ञानत्वानवच्छिन्नकार्यतानवच्छेदकम्, अनित्यज्ञानावृत्तित्वरहितत्वात्, ज्ञानत्ववत् । तत्समनियतधर्मघटितत्वात्, यदेवं तदेवम्, यथा पृथुबुध्नोदराकारघटितं घटत्वम् घटत्वानवच्छिन्न-कार्यतानवच्छेदकम् । भ्रमावृत्तिकार्यतानवच्छेदकं वा भ्रमवृत्तित्वात्, भ्रमत्ववत् ।।**

ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವದಲ್ಲಿ ಅನುಮಾನವು ಪ್ರಮಾಣ. ಪರತಸ್ತ್ವವಾದದಲ್ಲಿ ಅನಿತ್ಯವಾದ ಎಲ್ಲಾ ಪ್ರಮಾಗಳಿಗೂ ಅನುಗತವಾದ ಒಂದು ಗುಣವು ಕಾರಣ, ಎನ್ನುವ ವಾದವೂ ಇದೆ. ಪ್ರತ್ಯಕ್ಷಾದಿಪ್ರಮಾಣಗಳಿಗೆ ಅನನುಗತವಾದ ಗುಣವು ಕಾರಣ, ಎಂದು ಇನ್ನೊಂದು ಪಕ್ಷವೂ ಇದೆ. ಮೊದಲನೆಯ ಪಕ್ಷವನ್ನು ನಿರಾಕರಿಸುವ, ಪ್ರಾಮಾಣ್ಯಸ್ವತಸ್ತ್ವಸಾಧಕವಾದ ಅನುಮಾನ ಹೀಗೆ—

1. ಅನಿತ್ಯವಾದ ಯಥಾರ್ಥಜ್ಞಾನವೃತ್ತಿಯಾದ ಜ್ಞಾನತ್ವವು — **ಪಕ್ಷ.**

ಅನಿತ್ಯಜ್ಞಾನತ್ವಾನವಚ್ಛಿನ್ನವಾದ ಕಾರ್ಯತಾದಲ್ಲಿ ಅವಚ್ಛೇದಕವಲ್ಲ — **ಸಾಧ್ಯ.**

ಅನಿತ್ಯಜ್ಞಾನಾವೃತ್ತಿತ್ವರಹಿತ್ವಾತ್–ಅಂದರೆ ಅನಿತ್ಯಯಥಾರ್ಥಜ್ಞಾನತ್ವವು ಎಲ್ಲಾ ಅನಿತ್ಯಜ್ಞಾನಗಳಲ್ಲೂ ಇದೆಯಾದ್ದರಿಂದ —**ಹೇತು.**

ಅನಿತ್ಯಪ್ರಮಾಗಳಿಗೆಲ್ಲ ಕಾರಣವಾದ ಒಂದು ಗುಣವಿದ್ದಲ್ಲಿ ತಾದೃಶಗುಣದಿಂದ ಜನ್ಯವಾದ ಪ್ರಮಾವೃತ್ತಿಯಾದ ಅನಿತ್ಯಪ್ರಮಾತ್ವವು ತಾದೃಶಕಾರ್ಯತಾವಚ್ಛೇದಕವಾಗುತ್ತಿತ್ತು. ಆದರೆ, ಅದು ಗುಣಜನ್ಯವಲ್ಲದ ಭ್ರಮೆಯಲ್ಲೂ ಇದೆ. ಹೀಗೆ, ಗುಣಜನ್ಯವಾದ ಕಾರ್ಯ (ಪ್ರಮಾ) ವೃತ್ತಿಕಾರ್ಯತಾಕ್ಕಿಂತ ಅತಿರಿಕ್ತವೃತ್ತಿಯಾದುದರಿಂದ ಅದು ಗುಣಕಾರ್ಯತಾವಚ್ಛೇದಕವಲ್ಲ. ಸಾಧ್ಯದ ಒಟ್ಟು ಅಭಿಪ್ರಾಯ— ಅನಿತ್ಯಜ್ಞಾನತ್ವಾನವಚ್ಛಿನ್ನವಾದ ಕಾರ್ಯತಾದಲ್ಲಿ ಅವಚ್ಛೇದಕವಾದ ಧರ್ಮವು ಕೆಲವು ಅನಿತ್ಯಜ್ಞಾನಗಳಲ್ಲಿ ಇರಬಾರದು. ಆದರೆ, ಅನಿತ್ಯಯಥಾರ್ಥ ಜ್ಞಾನತ್ವವು ಸಕಲಾನಿತ್ಯಜ್ಞಾನಗಳಲ್ಲೂ ಇದೆ. ಅನಿತ್ಯಜ್ಞಾನಗಳು ಎರಡುವಿಧ–ಪ್ರಮಾ ಮತ್ತು ಭ್ರಮೆ. ಎರಡರಲ್ಲೂ ಅನಿತ್ಯಪ್ರಮಾತ್ವ ಇದೆ. ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ. ಆದ್ದರಿಂದ ಅದು

ತಾದೃಶಕಾರ್ಯತಾದಲ್ಲಿ ಅವಚ್ಛೇದಕವಲ್ಲ. ಇನ್ನೊಂದು ರೀತಿಯಿಂದ ಹೇಳುವುದಾದರೆ, ಅನಿತ್ಯಜ್ಞಾನತ್ವಾನವಚ್ಛಿನ್ನ ಕಾರ್ಯತಾ ಎಂದರೆ ಅನಿತ್ಯಪ್ರಮಾತ್ವಾವಚ್ಛಿನ್ನಕಾರ್ಯತಾ, ಎಂದು ಹೇಳ ಬೇಕು. ಆದರೆ, ಅನಿತ್ಯಪ್ರಮಾತ್ವವು ಧರ್ಮ್ಯಂಶದಲ್ಲಿ ಭ್ರಮೆಯಲ್ಲೂ ಇದೆ. ಆದ್ದರಿಂದ ಅನಿತ್ಯ ಪ್ರಮಾತ್ವಾವಚ್ಛಿನ್ನ ಕಾರ್ಯತಾವೂ ಅನಿತ್ಯಜ್ಞಾನತ್ವಾವಚ್ಛಿನ್ನವಾಗಬಹುದು. ಅಂತಹ ಪ್ರಮಾತ್ವ-ಜ್ಞಾನತ್ವಗಳು ಸಮನಿಯತವಾದುದರಿಂದ ಜ್ಞಾನತ್ವಾನವಚ್ಛಿನ್ನವಾದ ಪ್ರಮಾತ್ವಾವಚ್ಛಿನ್ನವಾದ ಒಂದು ಕಾರ್ಯತಾವು ಅಪ್ರಾಮಾಣಿಕ. ಹೀಗಾಗಿ ಅನಿತ್ಯಪ್ರಮಾತ್ವವು ಪರತಸ್ತ್ವವಾದಿಗಳಿಗೆ ವಿವಕ್ಷಿತವಾದ ಗುಣಜನ್ಯವಾದ ಯಾವಕಾರ್ಯತಾದಲ್ಲೂ ಅವಚ್ಛೇದಕವಲ್ಲ, ಎಂದು. ಪರತಸ್ತ್ವವಾದಿಗಳು ಅನಿತ್ಯಪ್ರಮಾಕ್ಕೆ ಗುಣವು ಕಾರಣ,ಎಂದು ಹೇಳುತ್ತಾರೆ. ಹಾಗೆ ಹೇಳಿದಾಗ, ಗುಣತ್ವಾವಚ್ಛಿನ್ನಕಾರಣತಾ ನಿರೂಪಿತ ಅನಿತ್ಯಯಥಾರ್ಥಜ್ಞಾನತ್ವಾವಚ್ಛಿನ್ನ ಕಾರ್ಯತಾವನ್ನು ಅವರು ಅಂಗೀಕರಿಸಬೇಕಾಗುತ್ತದೆ. ಇಂತಹ ಒಂದು ಕಾರ್ಯತಾವೇ ಇಲ್ಲ, ಎಂದು ನಿಷೇಧ ಮಾಡುವ ಮೂಲಕ ಈ ಅನುಮಾನದಿಂದ ಪ್ರಾಮಾಣ್ಯಕ್ಕೆ ಗುಣಜನ್ಯತ್ವವನ್ನು ನಿರಾಕರಿಸಿ ಜ್ಞಾನಸಾಮಾನ್ಯಕಾರಣವೇ ಪ್ರಮಾಕಾರಣ ಎಂಬ ಸ್ವತಸ್ತ್ವವನ್ನು ಸಾಧಿಸಲಾಗಿದೆ.

ಇದಕ್ಕೆ ಉದಾಹರಣೆ— ಜ್ಞಾನತ್ವ. ಅದು ನಿತ್ಯವಾದ ಈಶ್ವರಜ್ಞಾನದಲ್ಲಿ ಇರುವುದರಿಂದ ತದವಚ್ಛಿನ್ನಕಾರ್ಯತಾ ಅಪ್ರಾಮಾಣಿಕ. ಆದ್ದರಿಂದ, ಅದು ಅನಿತ್ಯಜ್ಞಾನತ್ವದಿಂದ ಅನವಚ್ಛಿನ್ನವಾದ ಕಾರ್ಯತಾದಲ್ಲಿ ಅನವಚ್ಛೇದಕ. ತದನಚ್ಛಿನ್ನ ಕಾರ್ಯತಾ ಎರಡಿದೆ—ಜ್ಞಾನತ್ವಾವಚ್ಛಿನ್ನವಾದ ಅಧಿಕವೃತ್ತಿಕಾರ್ಯತಾ ಮತ್ತು ಅನಿತ್ಯಪ್ರತ್ಯಕ್ಷತ್ವಾವಚ್ಛಿನ್ನ ನ್ಯೂನವೃತ್ತಿಕಾರ್ಯತಾ. ಇವುಗಳಲ್ಲಿ ಮೊದಲನೆಯ ಕಾರ್ಯತಾ ಅಪ್ರಸಿದ್ಧ. ಎರಡನೆಯ ಕಾರ್ಯತಾವು ಪ್ರಸಿದ್ಧವಾದರೂ ಅತಿರಿಕ್ತ ವೃತ್ತಿಯಾದುದರಿಂದ ಆ ಕಾರ್ಯತಾದಲ್ಲಿ ಜ್ಞಾನತ್ವವು ಅವಚ್ಛೇದಕವಲ್ಲ. ಒಟ್ಟಿನಲ್ಲಿ ಅದು ಕಾರ್ಯತಾವಚ್ಛೇದಕವೇ ಅಲ್ಲ. ಅದರಂತೆ, ಅನಿತ್ಯಪ್ರಮಾತ್ವವೂ ಗುಣಕಾರ್ಯತಾವಚ್ಛೇದಕವಲ್ಲ.

**ಅನುಮಾನ-2.** ತತ್‌ಸಮನಿಯತಧರ್ಮ-ಘಟಿತತ್ವಾತ್-ಇಲ್ಲಿ ಹೇತು ಮಾತ್ರ ಬೇರೆ, ಪಕ್ಷಸಾಧ್ಯಗಳು ಅದೇ. ಅನಿತ್ಯ ಯಥಾರ್ಥಜ್ಞಾನತ್ವಕ್ಕೆ ಅನಿತ್ಯಜ್ಞಾನತ್ವವು ಸಮನಿಯತವಾದ ಧರ್ಮ. ಜ್ಞಾನತ್ವವು ಭ್ರಮ-ಪ್ರಮಾರೂಪವಾದ ಸಕಲ ಜ್ಞಾನಗಳಲ್ಲೂ ಇರುವಂತೆ ಅನಿತ್ಯಜ್ಞಾನತ್ವವೂ ಭ್ರಮ-ಪ್ರಮಾಗಳೆರಡರಲ್ಲೂ ಇದೆ. ಅಂತಹ (ಜ್ಞಾನತ್ವರೂಪ) ಸಮನಿಯತಧರ್ಮವು ಅನಿತ್ಯ ಯಥಾರ್ಥಜ್ಞಾನತ್ವದಲ್ಲಿ ಸೇರಿದೆ. ಸಮನಿಯತ ಧರ್ಮಾಂತರ ಘಟಿತವಾದ ಧರ್ಮವು ಕಾರ್ಯತಾ ವಚ್ಛೇದಕವಲ್ಲ. ಉದಾಹರಣೆಗೆ, ಪೃಥುಬುಧ್ನೋದರಾಕಾರಘಟತ್ವವು ಕಾರ್ಯತಾವಚ್ಛೇದಕವಲ್ಲ. ಅದರಲ್ಲಿ ತತ್‌ಸಮನಿಯತವಾದ ಘಟತ್ವರೂಪಧರ್ಮವು ಘಟಕವಾಗಿದೆ. ಅದರಂತೆ, ಪ್ರಕೃತ ಅನಿತ್ಯಯಥಾರ್ಥಜ್ಞಾನತ್ವವೂ ಕಾರ್ಯತಾವಚ್ಛೇದಕವಲ್ಲ.

**ಅನುಮಾನ-3.** ಅನಿತ್ಯಯಾಥಾರ್ಥಜ್ಞಾನತ್ವವು — **ಪಕ್ಷ.**
ಭ್ರಮಾವೃತ್ತಿಕಾರ್ಯತಾದಲ್ಲಿ ಅವಚ್ಛೇದಕವಲ್ಲ — **ಸಾಧ್ಯ.**

ಭ್ರಮವೃತ್ತಿಯಾದುದರಿಂದ — **ಹೇತು.**

ಭ್ರಮತ್ವವತ್ — **ದೃಷ್ಟಾಂತ.**

ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿರುವುದರಿಂದ ಅನಿತ್ಯಯಥಾರ್ಥಜ್ಞಾನತ್ವವು ಭ್ರಮೆಯಲ್ಲೂ ಇದೆ. ಹೀಗಾಗಿ ಅದು ಭ್ರಮೆಯಲ್ಲಿ ಇಲ್ಲದ, ಪ್ರಮಾಮಾತ್ರವೃತ್ತಿಯಾದ ಕಾರ್ಯತಾದಲ್ಲಿ ಅವಚ್ಛೇದಕವಾಗಲು ಸಾಧ್ಯವಿಲ್ಲ, ಅತಿರಿಕ್ತವೃತ್ತಿಯಾದುದರಿಂದ. ಉದಾಹರಣೆಗೆ, ಭ್ರಮತ್ವ ಅದು ಭ್ರಮವೃತ್ತಿಕಾರ್ಯತಾದಲ್ಲಿ ಅವಚ್ಛೇದಕವಾಗಲು ಸಾಧ್ಯ. ತದವೃತ್ತಿ ಕಾರ್ಯತಾದಲ್ಲಿ ಅವಚ್ಛೇದಕವಲ್ಲ.

ಒಟ್ಟಿನಲ್ಲಿ ಈ ಅನುಮಾನಗಳ ಅರ್ಥ—ಅನಿತ್ಯಯಥಾರ್ಥಜ್ಞಾನಕ್ಕೆ ಜ್ಞಾನಸಾಮಾನ್ಯಕಾರಣ ಬಿಟ್ಟು ವಿಶೇಷವಾದ ಕಾರಣವಿಲ್ಲ, ಎಂದು. ಅಂತಹ ವಿಶೇಷಕಾರಣವು ಇದ್ದಿದ್ದರೆ ತಜ್ಜನ್ಯವಾದುದರಿಂದ, ಪ್ರಾಮಾಣ್ಯವು ಪರತಃ, ಎಂದಾಗುತ್ತಿತ್ತು. ಅದಿಲ್ಲವಾದುದರಿಂದ ಪ್ರಾಮಾಣ್ಯಂ ಸ್ವತಃ.

## ನ್ಯಾಯದೀಪ

**ಸ್ವತಸ್ತ್ವೇತ್ವಿತಿ ॥ ಮಾನಮಿತ್ಯನುಕರ್ಷಃ । ಉಚ್ಯತೇ ಇತ್ಯರ್ಥಃ । ಅನನುಗತಗುಣಪಕ್ಷೇ ಸಿದ್ಧಸಾಧನತಾವಾರಣಾಯ–'ಇತಿಪಕ್ಷೇ' ಇತಿ ವಿವೇಕಾಯ ಉಕ್ತಮ್।**

**ಅನಿತ್ಯಪ್ರಮಾತ್ವಂ, ಅನಿತ್ಯಜ್ಞಾನತ್ವಾವಚ್ಛಿನ್ನ–ಕಾರ್ಯತ್ವಪ್ರತಿಯೋಗಿಕ ಕಾರಣತಾ-ಭಿನ್ನ– ಕಾರಣತಾಪ್ರತಿಯೋಗಿಕ– ಕಾರ್ಯತಾವಚ್ಛೇದಕಮ್–(ಸಾಧ್ಯ)**

**ಅನಿತ್ಯಜ್ಞಾನತ್ವವ್ಯಾಪ್ಯಕಾರ್ಯತಾವಚ್ಛೇದಕ ಧರ್ಮತ್ವಾತ್ – (ಹೇತು)**

**ಇತಿ ಮಣ್ಯುಕ್ತಾನುಮಾನಸ್ಯ ಪ್ರತ್ಯನುಮಾನಮಾಹ–ಅನಿತ್ಯೇತಿ ॥**

ಮೂಲದಲ್ಲಿ ಅನಿತ್ಯಪ್ರಮಾಗಳಿಗೆಲ್ಲ ಅನುಗತವಾದ ಗುಣವಿದೆ, ಎಂಬ ಪಕ್ಷದಲ್ಲಿ ಈ ಅನುಮಾನ ಎಂದು ಹೇಳಿದ್ದರ ಉದ್ದೇಶ ಇದು–ಅನನುಗತ ಗುಣಪಕ್ಷದಲ್ಲಿ ಅನಿತ್ಯಪ್ರತ್ಯಕ್ಷ ಪ್ರಮಾತ್ವಾದಿಗಳೇ ಕಾರ್ಯತಾವಚ್ಛೇದಕ, ಅನಿತ್ಯಯಥಾರ್ಥಜ್ಞಾನತ್ವವಲ್ಲ. ಆದ್ದರಿಂದ ಈ ಪಕ್ಷದಲ್ಲಿ ಅನಿತ್ಯಯಥಾರ್ಥಜ್ಞಾನತ್ವವು ಕಾರ್ಯತಾವಚ್ಛೇಕವಲ್ಲ, ಎನ್ನುವುದು ಸಮ್ಮತವೇ. ಹೀಗೆ ಸಿದ್ಧಸಾಧನತಾ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ಪಕ್ಷಭೇದೇನ ದೋಷವನ್ನು ಹೇಳಲಾಗಿದೆ. ಇದನ್ನು ತಿಳಿಸಲು ಮೂಲದಲ್ಲಿ 'ಇತಿ ಪಕ್ಷೇ' ಎಂದು ಹೇಳಲಾಗಿದೆ.

ಇದು ಮಣಿಕಾರ ಹೇಳಿರುವ ಅನುಮಾನಕ್ಕೆ ಪ್ರತ್ಯನುಮಾನ. ಮಣಿಕಾರೋಕ್ತಾನುಮಾನದ ಅಭಿಪ್ರಾಯ ಹೀಗೆ—ಅನಿತ್ಯಜ್ಞಾನತ್ವವು ಅಧಿಕದೇಶವೃತ್ತಿಯಾದ ವ್ಯಾಪಕಧರ್ಮ. ಅನಿತ್ಯ

ಪ್ರಮಾತ್ವವು ಪ್ರಮಾದಲ್ಲಿ ಮಾತ್ರವೇ ಇರುವ ವ್ಯಾಪ್ಯಧರ್ಮ. ವ್ಯಾಪಕಧರ್ಮಾವಚ್ಛಿನ್ನಕ್ಕೆ ಒಂದು ಕಾರಣವಿದ್ದರೆ ವ್ಯಾಪ್ಯಧರ್ಮಾವಚ್ಛಿನ್ನಕ್ಕೆ ವಿಶೇಷವಾದ ಒಂದು ಕಾರಣಾಂತರ ಇರಬೇಕು. ತಾದೃಶಕಾರಣತಾ–ನಿರೂಪಿತ–ಕಾರ್ಯತಾದಲ್ಲಿ ಅನಿತ್ಯಯಥಾರ್ಥಜ್ಞಾನತ್ವವು ಅವಚ್ಛೇದಕವಾಗಿದೆ, ಎಂದು. ಇದರಿಂದ ಅನಿತ್ಯಪ್ರಮಾಕ್ಕೆ ಕಾರಣವಾದ ಒಂದು ಗುಣವು ಸಿದ್ಧವಾಗುತ್ತದೆ, ಎಂದು. ಇದಕ್ಕೆ ವಿರುದ್ಧವಾಗಿ ಮೂಲದಲ್ಲಿ ಅನಿತ್ಯಯಥಾರ್ಥಜ್ಞಾನತ್ವವು ಕಾರ್ಯತಾವಚ್ಛೇದಕವೇ ಅಲ್ಲ, ಎಂದು ಸಾಧಿಸಲಾಗಿದೆ.

## ನ್ಯಾಯದೀಪ - ಕೃತ್ಯಚಿಂತನೆ

**ಅನಿತ್ಯೇತಿ ॥ ವಿಶೇಷ್ಯಮಾತ್ರಸ್ಯ ನಿತ್ಯವೃತ್ತಿತಯಾ ಕಾರ್ಯತಾನವಚ್ಛೇದಕತ್ವೇನ ಸಿದ್ಧಸಾಧನವಾರಣಾಯ ಅನಿತ್ಯೇತಿ ಪಕ್ಷವಿಶೇಷಣಮ್ । ಯಥಾರ್ಥೇತ್ಯುಕ್ತಿರಪಿ ತದ್ವಾರಣಾಯೈವ ।**

**ಸಾಧ್ಯೇ, ಅನಿತ್ಯಜ್ಞಾನನಿಷ್ಠ–ಕಾರ್ಯತಾನವಚ್ಛೇದಕತ್ವೇನ ಸಿದ್ಧಸಾಧನನಿರಾಸಾಯ ಅನಿತ್ಯೇತ್ಯಾದಿ ಕಾರ್ಯತಾವಿಶೇಷಣಮ್ । ಪ್ರಮಾನಿಷ್ಠೇತ್ಯಪಿ ಯೋಜ್ಯಮ್ । ತೇನ ಘಟಾದಿನಿಷ್ಠಕಾರ್ಯತಾವನಚ್ಛೇದಕತ್ವೇನ ನ ಸಿದ್ಧಸಾಧನಮ್ ।**

**ಹೇತೌ, ಇಂದ್ರಿಯತ್ವಾದಿನಾ ಇಂದ್ರಿಯಾದಿನಿಷ್ಠ–ಕಾರಣತಾಪ್ರತಿಯೋಗಿಕ–ಕಾರ್ಯತಾವಚ್ಛೇದಕೇ ಪ್ರತ್ಯಕ್ಷತ್ವಾದೌ ವ್ಯಭಿಚಾರವಾರಣಾಯ ನಞ್ದ್ವಯಮ್ । ತತ್ರಾನಿತ್ಯಜ್ಞಾನವೃತ್ತಿತ್ವವತ್ ತದವೃತ್ತಿತ್ವಸ್ಯಾಪಿ ಸತ್ವೇನ ತದ್ರಾಹಿತ್ಯಾಭಾವಾತ್ । ಉಕ್ತದೋಷನಿರಾಸಾಯೈವ ಅನಿತ್ಯಜ್ಞಾನೇತ್ಯಪಿ ಉಕ್ತಿಃ । ಅಸಿದ್ಧಿನಿರಾಸಾಯ ಅನಿತ್ಯೇತಿ ॥**

ಪಕ್ಷ—ಅನಿತ್ಯಯಥಾರ್ಥಜ್ಞಾನತ್ವಂ, ಎಂದು. ಇಲ್ಲಿ ಜ್ಞಾನತ್ವವನ್ನಷ್ಟೇ ಪಕ್ಷವನ್ನಾಗಿ ಮಾಡಿದರೆ, ಸಿದ್ಧಸಾಧನತಾದೋಷ. ಜ್ಞಾನತ್ವವು ನಿತ್ಯವಾದ ಈಶ್ವರಜ್ಞಾನದಲ್ಲಿ ಇದೆ. ಅತಿರಿಕ್ತ ವೃತ್ತಿಯಾದುದರಿಂದ ಅದು ಕಾರ್ಯತಾವಚ್ಛೇದಕವಲ್ಲ, ಎನ್ನುವುದು ಪರತಸ್ತ್ವವಾದಿಗಳಿಗೂ ಸಮ್ಮತ. ಅದರ ಪರಿಹಾರಕ್ಕಾಗಿ ಅನಿತ್ಯ ಎಂಬ ವಿಶೇಷಣವನ್ನು ಕೊಡಲಾಗಿದೆ. ಯಥಾರ್ಥಪದವನ್ನು ಬಿಟ್ಟರೂ ಇದೇ ದೋಷ. ಆಗ ಅನಿತ್ಯಜ್ಞಾನತ್ವವು ಪಕ್ಷವಾಗುತ್ತದೆ. ಅದು, ಭ್ರಮ—ಪ್ರಮಾಸಾಧಾರಣವಾದುದರಿಂದ ಅದಕ್ಕೆ ಅನುಗತವಾದ ಆತ್ಮಮನಃ ಸಂಯೋಗರೂಪವಾದ ಒಂದು ಕಾರಣವು ಇರುವುದರಿಂದ ಅದು ಅನಿತ್ಯಜ್ಞಾನತ್ವಾವಚ್ಛಿನ್ನಕಾರ್ಯತಾದಲ್ಲಿ ಅವಚ್ಛೇದಕವಾಗಿದೆ. ಹೊರತು, ಅನಿತ್ಯಜ್ಞಾನತ್ವಾನವಚ್ಛಿನ್ನವಾದ ಘಟಾದಿನಿಷ್ಠ–ಕಾರ್ಯತಾದಲ್ಲಿ ಅವಚ್ಛೇದಕವಾಗಿಲ್ಲ. ಆದ್ದರಿಂದ ಅದು ತಾದೃಶ ಕಾರ್ಯತಾನವಚ್ಛೇಕವೆಂದು ಸಿದ್ಧ. ಅದಕ್ಕಾಗಿ ಯಥಾರ್ಥಪದ ಬೇಕು.

ಸಾಧ್ಯ—ಅನಿತ್ಯಜ್ಞಾನತ್ವಾನವಚ್ಛಿನ್ನ-ಕಾರ್ಯತಾನವಚ್ಛೇದಕಮ್, ಎಂದು. ಇಲ್ಲಿ ಕೇವಲ ಕಾರ್ಯತಾನವಚ್ಛೇದಕಂ ಎಂದಿಷ್ಟೇ ಸಾಧ್ಯವಾದರೆ ಸಿದ್ಧಸಾಧನತಾ. ಪರತಸ್ತ್ವಮತದಲ್ಲಿ ಅನಿತ್ಯ ಜ್ಞಾನನಿಷ್ಠಕಾರ್ಯತಾಕ್ಕೆ ಅನಿತ್ಯಯಥಾರ್ಥಜ್ಞಾನತ್ವವು ನ್ಯೂನವೃತ್ತಿಯಾದುದರಿಂದ ತನ್ನಿಷ್ಠ ಕಾರ್ಯತಾದಲ್ಲಿ ಅನವಚ್ಛೇದಕವೇ ಆಗಿದೆ. ಅದಕ್ಕಾಗಿ ಕಾರ್ಯತಾದಲ್ಲಿ ಅನಿತ್ಯಜ್ಞಾನತ್ವಾನವಚ್ಛಿನ್ನ ಎಂಬ ವಿಶೇಷಣವನ್ನು ಕೊಡಬೇಕು. ಆ ಕಾರ್ಯತಾ ಅನಿತ್ಯಜ್ಞಾನತ್ವಾವಚ್ಛಿನ್ನವೇ ಆಗಿದೆ. ತದನವಚ್ಛಿನ್ನಕಾರ್ಯತಾಪದೇನ ಅನಿತ್ಯ ಪ್ರಮಾನಿಷ್ಠ-ಕಾರ್ಯತಾವು ಗ್ರಾಹ್ಯ. ತದನವಚ್ಛೇದಕತ್ವವು ಪರತಸ್ತ್ವವಾದಿಗಳಿಗೆ ಸಿದ್ಧವಲ್ಲ, ಆದ್ದರಿಂದ ಸಿದ್ಧಸಾಧನಾ ಇಲ್ಲ. ಅದರಂತೆ, ಆ ಕಾರ್ಯತಾದಲ್ಲಿ ಪ್ರಮಾನಿಷ್ಠ, ಎಂಬ ವಿಶೇಷಣವನ್ನೂ ಸೇರಿಸಬೇಕು. ಇಲ್ಲದಿದ್ದರೆ ತಾದೃಶ ಘಟಾದಿನಿಷ್ಠ ಕಾರ್ಯತಾದಲ್ಲಿ ಅನಿತ್ಯಯಥಾರ್ಥಜ್ಞಾನತ್ವವು ಅನವಚ್ಛೇದಕವೆಂದು ಸಿದ್ಧವಾದುದರಿಂದ ಸಿದ್ಧಸಾಧನತಾ ಬರುತ್ತಿತ್ತು.

ಹೇತು—ಅನಿತ್ಯಜ್ಞಾನ-ಅವೃತ್ತಿತ್ವರಹಿತತ್ವಾತ್, ಎಂದು. ಇಲ್ಲಿ ಎರಡು ನಿಷೇಧಗಳಿವೆ. ಅವೆರಡನ್ನು ಬಿಟ್ಟರೆ ಅನಿತ್ಯಜ್ಞಾನವೃತ್ತಿತ್ವಾತ್, ಎಂದಿಷ್ಟೇ ಹೇತುವಾಗುತ್ತದೆ. ಹೀಗೆ, ಹೇತುಮಾಡಿದರೆ ಪ್ರತ್ಯಕ್ಷತ್ವದಲ್ಲಿ ವ್ಯಭಿಚಾರ ಬರುತ್ತದೆ. ಆ ಧರ್ಮವು ಅನಿತ್ಯಜ್ಞಾನದಲ್ಲಿ ಇದೆ. ಆದರೆ, ಅದರಲ್ಲಿ ಸಾಧ್ಯವು ಇಲ್ಲ. ಏಕೆಂದರೆ, ಪ್ರತ್ಯಕ್ಷವು ಇಂದ್ರಿಯಜನ್ಯವಾದುದರಿಂದ ಪ್ರತ್ಯಕ್ಷತ್ವದಲ್ಲಿ ಇಂದ್ರಿಯತ್ವಾವಚ್ಛಿನ್ನಕಾರಣತಾ ನಿರೂಪಿತ ಕಾರ್ಯತಾವಚ್ಛೇದಕತ್ವವೇ ಇದೆ. ಅದರ ಪರಿಹಾರಕ್ಕಾಗಿ ನಿಷೇಧದ್ವಯಗಳನ್ನು ಸೇರಿಸಬೇಕು. ಆಗ ಪ್ರತ್ಯಕ್ಷತ್ವದಲ್ಲಿ ಹೇತುವೂ ಬರುವುದಿಲ್ಲ. ಅದು ಅನಿತ್ಯಜ್ಞಾನವಾದ ಅನುಮಿತಿಯಲ್ಲಿ ಅವೃತ್ತಿಯೇ ಆಗಿದೆ. ಅವೃತ್ತಿತ್ವರಹಿತತ್ವ ಬರುವುದಿಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ. ಅವೃತ್ತಿತ್ವರಹಿತತ್ವಾತ್ ಎಂದಿಷ್ಟೇ ಹೇತು ಮಾಡಿದರೂ ಪ್ರತ್ಯಕ್ಷತ್ವವು ಕ್ವಚಿತ್ ವೃತ್ತಿಯಾದುದರಿಂದ ಮತ್ತೆ ಅದೇ ಪ್ರತ್ಯಕ್ಷತ್ವದಲ್ಲಿ ಹೇತು ಬರುವುದರಿಂದ ವ್ಯಭಿಚಾರ. ಅದರ ಪರಿಹಾರಕ್ಕಾಗಿ 'ಅನಿತ್ಯಜ್ಞಾನ' ಎಂಬ ವಿಶೇಷಣವನ್ನು ಸೇರಿಸಬೇಕು. ಅನಿತ್ಯಪದವನ್ನು ಬಿಟ್ಟು ಜ್ಞಾನಾವೃತ್ತಿತ್ವರಹಿತತ್ವಾತ್ ಎಂದು ಹೇತು ಮಾಡಿದರೆ ಈ ಹೇತು ಪಕ್ಷದಲ್ಲೇ ಬರುವುದಿಲ್ಲ ವಾದುದರಿಂದ ಅಸಿದ್ಧಿ. ಏಕೆಂದರೆ, ಅನಿತ್ಯಯಥಾರ್ಥಜ್ಞಾನತ್ವವು ನಿತ್ಯೇಶ್ವರಜ್ಞಾನದಲ್ಲಿ ಅವೃತ್ತಿಯೇ ಆಗಿದೆ. ಅದರಲ್ಲಿ ಜ್ಞಾನಾವೃತ್ತಿತ್ವರಹಿತತ್ವವು ಬರುವುದಿಲ್ಲ. ಅನಿತ್ಯಪದವಿದ್ದರೆ ಈಶ್ವರಜ್ಞಾನ ಸಂಗ್ರಹವಾಗುವುದಿಲ್ಲ. ಅಸಿದ್ಧಿಪರಿಹಾರವಾಗುತ್ತದೆ.

## ನ್ಯಾಯದೀಪ

**ಜ್ಞಾನತ್ವವದಿತಿ ॥ ತಸ್ಯ ನಿತ್ಯವೃತ್ತಿತಯಾ ಕಾರ್ಯತಾನವಚ್ಛೇದಕತ್ವಾತ್, ಅನಿತ್ಯಜ್ಞಾನವೃತ್ತಿತ್ವಾಚ್ಚ ಇತಿ ಭಾವಃ । ತತ್ಸಮೇತಿ ॥ ಅನಿತ್ಯಪ್ರಮಾತ್ವ-ಸಮನಿಯತಃ ಯೋ ಧರ್ಮಃ ಅನಿತ್ಯಜ್ಞಾನತ್ವಂ, ತದ್ಘಟಿತತ್ವಾತ್ ಇತ್ಯರ್ಥಃ ।**

ಭ್ರಮೇಽಪಿ ಧರ್ಮ್ಯಂಶೇ ಪ್ರಮಾತ್ವೇನ ಅನಿತ್ಯಪ್ರಮಾತ್ವ-ಅನಿತ್ಯಜ್ಞಾನತ್ವಯೋಃ ಅನ್ಯೋನ್ಯಂ ವ್ಯಾಪ್ಯ-ವ್ಯಾಪಕಭಾವಾತ್, ಇತಿ ಭಾವಃ। ಅತ ಏವ ತತ್ಸಮನಿಯತ-ಧರ್ಮಘಟಿತತ್ವದ್ಯೋತನಾಯೈವ ಅನಿತ್ಯಪ್ರಮಾತ್ವಮ್, ಇತಿ ಪಕ್ಷನಿರ್ದೇಶಮ್ ಅಕೃತ್ವಾ 'ಅನಿತ್ಯಯಥಾರ್ಥಜ್ಞಾನತ್ವಮ್' ಇತ್ಯುಕ್ತಮ್।

ಯದೇವಮಿತಿ ॥ ಯತ್ ಯತ್ಸಮನಿಯತಧರ್ಮಘಟಿತಂ ತತ್ ತದನವಚ್ಛಿನ್ನ-ಕಾರ್ಯತಾನವಚ್ಛೇದಕಮ್ ಇತ್ಯರ್ಥಃ। ಪೃಥುಬುಧ್ನೇತಿ ॥ ಪೃಥುಬುಧ್ನೋದರಾಕಾರಘಟತ್ವಂ ನಾಮ ಧರ್ಮಃ, ಸ್ವಸಮನಿಯತ-ಘಟತ್ವಧರ್ಮಘಟಿತತ್ವಾತ್ ತದನವಚ್ಛಿನ್ನಕಾರ್ಯತಾ=ಪಟಾದಿನಿಷ್ಠಾ, ತದನವ-ಚ್ಛೇದಕಃ ಇತ್ಯರ್ಥಃ।

ಈ ಅನುಮಾನಕ್ಕೆ ದೃಷ್ಟಾಂತ ಜ್ಞಾನತ್ವ. ಅದು ನಿತ್ಯಜ್ಞಾನದಲ್ಲೂ ಇರುವುದರಿಂದ ಕಾರ್ಯತಾನವಚ್ಛೇದಕತ್ವರೂಪವಾದ ಸಾಧ್ಯವು ಅದರಲ್ಲಿದೆ. ಅನಿತ್ಯಜ್ಞಾನದಲ್ಲಿ ಅದು ವೃತ್ತಿಯಾದುದರಿಂದ ಹೇತುವೂ ಇದೆ.

ತತ್ಸಮನಿಯತ, ಎಂದರೆ ಅನಿತ್ಯಪ್ರಮಾತ್ವಸಮನಿಯತವಾದ ಧರ್ಮ=ಅನಿತ್ಯಜ್ಞಾನತ್ವ. ತದ್‌ಘಟಿತವಾಗಿದೆ ಅನಿತ್ಯಯಥಾರ್ಥಜ್ಞಾನತ್ವ, ಎಂದರ್ಥ. ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿದೆ. ಅನಿತ್ಯಪ್ರಮಾತ್ವ ಇರುವಲ್ಲೆಲ್ಲ ಅನಿತ್ಯಜ್ಞಾನತ್ವವೂ ಇದೆ, ಅನಿತ್ಯಜ್ಞಾನತ್ವ ಇರುವಲ್ಲೆಲ್ಲ ಅನಿತ್ಯಪ್ರಮಾತ್ವವೂ ಇದೆ. ಹೀಗೆ ವ್ಯಾಪ್ಯತ್ವ, ವ್ಯಾಪಕತ್ವ ಎರಡೂ ಇರುವುದರಿಂದ ಅವೆರಡೂ ಸಮನಿಯತಗಳಾಗಿವೆ. ಈ ಸಮನಿಯತತ್ವವನ್ನು ಸ್ಫುಟಪಡಿಸುವುದಕ್ಕಾಗಿಯೇ 'ಅನಿತ್ಯ ಪ್ರಮಾತ್ವಂ' ಎಂಬ ರೂಢಶಬ್ದವನ್ನು ಬಿಟ್ಟು 'ಅನಿತ್ಯಯಥಾರ್ಥಜ್ಞಾನತ್ವಂ' ಎಂದು ಪಕ್ಷನಿರ್ದೇಶ ಮಾಡಲಾಗಿದೆ.

ಯದೇವಂ ತದೇವಂ, ಎಂದು ವ್ಯಾಪ್ತಿಯನ್ನು ತೋರಿಸಲಾಗಿದೆ. ಯಾವ ಧರ್ಮವು ತನಗೆ ಸಮನಿಯತವಾದ ಧರ್ಮಾಂತರದಿಂದ ಘಟಿತವಾಗಿದೆಯೋ ಅದು ಘಟಕಧರ್ಮಾನವಚ್ಛಿನ್ನವಾದ ಕಾರ್ಯತಾದಲ್ಲಿ ಅನವಚ್ಛೇದಕವಾಗಿರುತ್ತದೆ. ಉದಾಹರಣೆಗೆ— ಪೃಥುಬುಧ್ನೋದರಾಕಾರ ಘಟತ್ವವು ತನಗೆ ಸಮನಿಯತವಾದ ಘಟತ್ವಧರ್ಮದಿಂದ ಸಮನಿಯತವಾಗಿದೆ. ಆದ್ದರಿಂದ ಅದು ಘಟತ್ವಾನವಚ್ಛಿನ್ನವಾದ ಪಟಾದಿನಿಷ್ಠವಾದ ಕಾರ್ಯತಾದಲ್ಲಿ ಅನವಚ್ಛೇದಕವೂ ಆಗಿದೆ.

## ನ್ಯಾಯದೀಪ

ಪ್ರಾಚೀನಪಕ್ಷನಿರ್ದೇಶೇ ಏವ ಸಾಧ್ಯಾಂತರಮ್ ಆಹ-ಭ್ರಮಾವೃತ್ತೀತಿ ॥ ಭ್ರಮಾವೃತ್ತಿಕಾರ್ಯತಾ=ಪ್ರಮಾದಿನಿಷ್ಠಾ ಕಾರ್ಯತಾ। ತದನವಚ್ಛೇದಕಮ್, ಇತ್ಯರ್ಥಃ। ಅನಿತ್ಯ-ಯಥಾರ್ಥಜ್ಞಾನತ್ವಂ ತಾದೃಶಜ್ಞಾನನಿಷ್ಠ-ಕಾರ್ಯತಾ-

**ನವಚ್ಛೇದಕಮ್, ಇತ್ಯೇವ ಸಾಧ್ಯಕರಣೇ ಅನಿತ್ಯಜ್ಞಾನತ್ವೇ ವ್ಯಭಿಚಾರಃ। ತಸ್ಯ ಆತ್ಮಮನಃಸಂಯೋಗಾದಿ–ಹೇತುನಿರೂಪಿತ–ಕಾರ್ಯತಾವಚ್ಛೇದಕತ್ವಾತ್। ಭ್ರಮವೃತ್ತಿತ್ವಾಚ್ಚ। ಅತಃ ಭ್ರಮಾವೃತ್ತೀತ್ಯೇವಮ್ ಉಕ್ತಿಃ। ಅನಿತ್ಯಜ್ಞಾನತ್ವಸ್ಯ ಚ ತಾದೃಶಘಟಾದಿ ನಿಷ್ಠಕಾರ್ಯತಾನವಚ್ಛೇದಕತ್ವಾತ್ ನ ದೋಷಃ।**

ಹಿಂದಿನ ಪಕ್ಷವನ್ನೇ ನಿರ್ದೇಶಮಾಡಿ ಬೇರೊಂದು ಸಾಧ್ಯವನ್ನು 'ಭ್ರಮಾವೃತ್ತಿ' ಎಂದು ನಿರ್ದೇಶಿಸಲಾಗಿದೆ. ಭ್ರಮದಲ್ಲಿ ಅವೃತ್ತಿಯಾದ ಕಾರ್ಯತಾ ಎಂದರೆ, ಪ್ರಮಾ–ಘಟಾದಿ ನಿಷ್ಠಕಾರ್ಯತಾಗಳು. ಅವುಗಳಲ್ಲಿ ಅನಿತ್ಯಯಾರ್ಥರ್ಥಜ್ಞಾನತ್ವವು ಅನವಚ್ಛೇದಕವಾಗಿದೆ, ಎಂದು ಸಾಧ್ಯದ ಅರ್ಥ. ಪರತಸ್ತ್ವವಾದಿಗಳು ಅದು ಪ್ರಮಾನಿಷ್ಠಕಾರ್ಯತಾದಲ್ಲಿ ಅವಚ್ಛೇದಕವಾಗಿದೆ, ಎನ್ನುತ್ತಾರೆ. ಅದಕ್ಕೆ ವಿರುದ್ಧವಾಗಿ ಈ ಅನುಮಾನದಲ್ಲಿ ಸಾಧಿಸಲಾಗಿದೆ.

ಈ ಸಾಧ್ಯದಲ್ಲಿ ಕಾರ್ಯತಾದಲ್ಲಿ ಭ್ರಮಾವೃತ್ತಿ ಎಂಬ ವಿಶೇಷಣವನ್ನು ಕೊಡದಿದ್ದರೆ ಅನಿತ್ಯಜ್ಞಾನನಿಷ್ಠ–ಕಾರ್ಯತಾನವಚ್ಛೇದಕಮ್, ಎಂದು ಸಾಧ್ಯವಾಗುತ್ತದೆ. ಆಗ ಅನಿತ್ಯಜ್ಞಾನತ್ವದಲ್ಲಿ ವ್ಯಭಿಚಾರ ಬರುತ್ತದೆ. ಅನಿತ್ಯಜ್ಞಾನಕ್ಕೆ ಆತ್ಮಮನಃ ಸನ್ನಿಕರ್ಷವು ಕಾರಣ. ತಾದೃಶಕಾರಣತಾ ನಿರೂಪಿತ ಕಾರ್ಯತಾದಲ್ಲಿ ಅನಿತ್ಯಜ್ಞಾನತ್ವವು ಅವಚ್ಛೇದಕವಾಗಿದೆ. ಆದ್ದರಿಂದ ಸಾಧ್ಯ ಬರಲಿಲ್ಲ, ಭ್ರಮ ವೃತ್ತಿತ್ವರೂಪ ಹೇತುವೂ ಇದೆ. ವ್ಯಭಿಚಾರ ಬಂತು. ಭ್ರಮಾವೃತ್ತಿತ್ವವಿಶೇಷಣವಿದ್ದರೆ ಅದರಲ್ಲಿ ಸಾಧ್ಯವೂ ಬರುತ್ತದೆ. ಅನಿತ್ಯಜ್ಞಾನತ್ವಾವಚ್ಛಿನ್ನಕಾರ್ಯತಾ ಭ್ರಮವೃತ್ತಿಯೇ ಆಗಿದೆ, ಅವೃತ್ತಿ ಯಾಗಿಲ್ಲ. ತಥಾಚ ಭ್ರಮಾವೃತ್ತಿಕಾರ್ಯತಾ ಎಂದರೆ ಪ್ರಮಾಘಟಾದಿನಿಷ್ಠಕಾರ್ಯತಾ, ತದನವಚ್ಛೇದಕವಾಗಿದೆ, ಅನಿತ್ಯಜ್ಞಾನತ್ವ. ಸಾಧ್ಯ ಬರುತ್ತದೆ. ವ್ಯಭಿಚಾರ ಪರಿಹಾರವಾಗುತ್ತದೆ.

**न चैतेषां हेतूनामसिद्धिः । भ्रमेऽपि धर्म्यंशे प्रमात्वस्य सत्त्वात् । प्रमात्वस्य ज्ञानत्वघटितत्वाच्च। नाप्यप्रयोजकता । समनियतयोरेकस्यैव कार्यतावच्छेदकत्वे आवश्यके लाघवार्थे प्रमाणस्वरसाल्लघुनोऽनित्यज्ञानत्वस्यैव तदौचित्यात् । भ्रमे ज्ञानत्वप्रमात्वयोः व्याप्यवृत्तित्वाव्याप्यवृत्तित्वे तु एकसामग्रीप्रयोज्यत्वेऽपि त्वन्मते वेगविभागयोरिव युक्ते । मन्मते तु प्रकारांशे प्रमात्वापवादकस्य दोषस्य सत्वात् तद्भावो युक्तः ।**

**ननु विभागस्याव्याप्यवृत्तित्वं स्वात्यन्ताभावसामानाधिकरण्यम् । अत्यन्ताभावस्य अधिकरणविशेषसम्बन्धः स्वरूपानतिरिक्त इति न हेतुसापेक्ष इति चेत्तुल्यं प्रमात्वेऽपि ।**

ಒಂದೆ ಮೂರು ಹೇತುಗಳನ್ನು ಹೇಳಲಾಗಿದೆ—

1. ಅನಿತ್ಯಜ್ಞಾನಾವೃತ್ತಿತ್ವರಹಿತತ್ವಾತ್ ।

2. ತತ್ಸಮನಿಯತಧರ್ಮಘಟಿತತ್ವಾತ್ ।

3. ಭ್ರಮವೃತ್ತಿತ್ವಾತ್ ।

ಈ ಹೇತುಗಳು ಪಕ್ಷವಾದ ಅನಿತ್ಯಯಥಾರ್ಥಜ್ಞಾನತ್ವದಲ್ಲಿ ಇಲ್ಲ, ಎಂದು ಅಸಿದ್ಧಿಶಂಕೆಯನ್ನು ಮಾಡಬಾರದು. ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿರುವುದರಿಂದ ಅನಿತ್ಯಪ್ರಮಾತ್ವವು ಎಲ್ಲಾ ಅನಿತ್ಯಜ್ಞಾನಗಳಲ್ಲೂ ಅಂದರೆ, ಭ್ರಮೆ ಮತ್ತು ಪ್ರಮೆ ಎರಡರಲ್ಲೂ ಇದೆ. ಆದ್ದರಿಂದ ಅದು ಅನಿತ್ಯಜ್ಞಾನಾವೃತ್ತಿಯಾಗಿಲ್ಲ. ಅನಿತ್ಯಜ್ಞಾನಾವೃತ್ತಿತ್ವವು ಅದರಲ್ಲಿ ಇಲ್ಲ. ಪ್ರಥಮಹೇತು ಬಂತು. ಆದ್ದರಿಂದಲೇ ಅನಿತ್ಯಜ್ಞಾನತ್ವವೂ ಅನಿತ್ಯಪ್ರಮಾತ್ವವೂ ಸಮನಿಯತವೂ ಆಗುತ್ತದೆ. ಇದರಿಂದ ಅನಿತ್ಯಪ್ರಮಾತ್ವವೂ ಸ್ವಸಮನಿಯತವಾದ ಜ್ಞಾನತ್ವ ಧರ್ಮಘಟಿತವಾಗಿದೆ. ಹೀಗೆ ಎರಡನೆಯ ಹೇತುವೂ ಪಕ್ಷದಲ್ಲಿ ಬರುತ್ತದೆ. ಪ್ರಮಾತ್ವವು ಭ್ರಮೆಯಲ್ಲೂ ಇರುವುದರಿಂದಲೇ ಮೂರನೆಯ ಹೇತುವೂ ಪಕ್ಷದಲ್ಲಿದೆ.

ಹೇತುರಸ್ತು ಸಾಧ್ಯಂ ಮಾಸ್ತು, ಎಂಬ ಅಪ್ರಯೋಜಕ ಶಂಕೆಯೂ ಯುಕ್ತವಲ್ಲ. ಸಮನಿಯತವಾದ ಅನಿತ್ಯಜ್ಞಾನತ್ವ ಮತ್ತು ತದ್ಘಟಿತವಾದ ಅನಿತ್ಯಯಥಾರ್ಥಜ್ಞಾನತ್ವ ಇವೆರಡರಲ್ಲಿ ಯಾವುದಾದರೊಂದು ಕಾರ್ಯತಾವಚ್ಛೇದಕವಾಗಬೇಕು. ಆಗ, ಲಘೌ ಸಂಭವತಿ ಗುರೌ ತದಭಾವಃ, ಎಂಬ ಲಾಘವ ತರ್ಕದಂತೆ ಅನಿತ್ಯ ಜ್ಞಾನತ್ವವೇ ಕಾರ್ಯತಾವಚ್ಛೇದಕವಾಗಬೇಕು, ಗುರುವಾದ ಅನಿತ್ಯಯಥಾರ್ಥಜ್ಞಾನತ್ವವು ಅವಚ್ಛೇದಕವಾಗುವುದಿಲ್ಲ. ಹೀಗೆ ಮೂರೂ ಹೇತುಗಳಿಗೂ ಇದೇ ಅನುಕೂಲ ತರ್ಕವಾಗಿದೆ.

ಭ್ರಮೆಯಲ್ಲಿ ಜ್ಞಾನತ್ವವು ವ್ಯಾಪ್ಯವೃತ್ತಿ. ಪ್ರಮಾತ್ವವು ಧರ್ಮ್ಯಂಶದಲ್ಲಿ ಮಾತ್ರ ಇರುವುದರಿಂದ ಅವ್ಯಾಪ್ಯವೃತ್ತಿ. ಇದು ಹೇಗೆ ಸಾಧ್ಯ? ಅವೆರಡೂ ಧರ್ಮಗಳೂ ಏಕಸಾಮಗ್ರೀ ಪ್ರಯುಕ್ತವಾಗಿರುವಾಗ ಒಂದು ವ್ಯಾಪ್ಯವೃತ್ತಿ ಇನ್ನೊಂದು ಅವ್ಯಾಪ್ಯವೃತ್ತಿಯಾಗುವುದು ಹೇಗೆ? ಈ ಪ್ರಶ್ನೆಗೆ ಹೀಗೆ ಸಮಾಧಾನ–ತಾರ್ಕಿಕರಲ್ಲಿ ವೇಗ ಮತ್ತು ವಿಭಾಗ ಇವೆರಡೂ ಕ್ರಿಯಾಜನ್ಯವಾದ ಗುಣಗಳು. ಹೀಗಾಗಿ ಅವೆರಡಕ್ಕೂ ಪ್ರಯೋಜಕ ಕ್ರಿಯಾ ಒಂದೇ. ಆದರೂ ವೇಗವು ವ್ಯಾಪ್ಯವೃತ್ತಿ, ವಿಭಾಗವು ಅವ್ಯಾಪ್ಯವೃತ್ತಿ. ಅದರಂತೆ, ಜ್ಞಾನತ್ವ–ಪ್ರಮಾತ್ವಗಳೂ ವ್ಯಾಪ್ಯಾವ್ಯಾಪ್ಯವೃತ್ತಿಗಳಾಗ ಬಹುದು. ನಮ್ಮ ಮತದಂತೆ, ಪ್ರಮಾತ್ವಕ್ಕೆ ಅಪವಾದಕ ದೋಷ. ಅದು ಭ್ರಮದ ಪ್ರಕಾರಾಂಶದಲ್ಲಿ ಇದೆ, ಧರ್ಮ್ಯಂಶದಲ್ಲಿ ಇಲ್ಲ. ಆದ್ದರಿಂದ ಪ್ರಮಾತ್ವವೂ ಒಂದಂಶದಲ್ಲಿ ಇದೆ, ಇನ್ನೊಂದು ಅಂಶದಲ್ಲಿ ಇಲ್ಲ.

ವ್ಯಾಪ್ಯವೃತ್ತಿತ್ವ, ಅವ್ಯಾಪ್ಯವೃತ್ತಿತ್ವಗಳು ವಿರುದ್ಧಧರ್ಮಗಳೇ ಅಲ್ಲ. ಅವ್ಯಾಪ್ಯವೃತ್ತಿತ್ವ ಎಂದರೆ

ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯ. ವಿಭಾಗ ಇರುವಲ್ಲೇ ಅದರ ಅಭಾವವೂ ಇದೆ, ಎಂದು ಅರ್ಥ. ಅಭಾವವೂ ನಿತ್ಯ, ಅದರ ಸಂಬಂಧವೂ ಅಧಿಕರಣಸ್ವರೂಪ. ಇವೆರಡೂ ನಿಮಿತ್ತ ಸಾಪೇಕ್ಷಗಳಲ್ಲ. ಆದ್ದರಿಂದ ವೇಗ ಮತ್ತು ವಿಭಾಗಗಳು ಕ್ರಿಯಾ ಮಾತ್ರ ಜನ್ಯವಾದರೂ ಒಂದು ವ್ಯಾಪ್ಯವೃತ್ತಿ ಇನ್ನೊಂದು ಅವ್ಯಾಪ್ಯವೃತ್ತಿಯಾಗಲು ವಿಶೇಷ ನಿಮಿತ್ತಗಳು, ಇರಬೇಕಾಗಿಲ್ಲ, ಎನ್ನುವುದಾದಲ್ಲಿ ಇದೇ ಪರಿಹಾರ ಜ್ಞಾನತ್ವ-ಪ್ರಮಾತ್ವಗಳಿಗೂ ಸಮಾನ. ಅವುಗಳೂ ಏಕಹೇತುಕಗಳಾದರೂ ಒಂದು ವ್ಯಾಪ್ಯವೃತ್ತಿ ಇನ್ನೊಂದು ಅವ್ಯಾಪ್ಯವೃತ್ತಿಯಾಗಬಹುದು.

## ನ್ಯಾಯದೀಪ

**ನ ಚೈಷಾಮಿತಿ ॥ ತ್ರಯಾಣಾಮಿತ್ಯರ್ಥಃ। ಭ್ರಮೇಽಪಿ ಇತ್ಯನೇನ ಆದ್ಯಂತಯೋಃ ಅಸಿದ್ಧ್ಯುದ್ಧಾರಃ। ಪ್ರಮಾತ್ವಸ್ಯೇತಿ ॥ ಅನಿತ್ಯಪ್ರಮಾತ್ವಸ್ಯ ಅನಿತ್ಯಜ್ಞಾನತ್ವಘಟಿತತ್ವಾತ್। ಯದ್ವಾ, ಪ್ರಮಾತ್ವಸ್ಯ ಜ್ಞಾನತ್ವಘಟಿತತ್ವೇ, ಅನಿತ್ಯಪ್ರಮಾತ್ವಸ್ಯ ಅನಿತ್ಯಜ್ಞಾನತ್ವಘಟಿತತ್ವಂ ಅರ್ಥಸಿದ್ಧಮ್ ಇತಿ ಪ್ರಮಾತ್ವಸ್ಯ ಇತ್ಯೇವೋಕ್ತಮ್। ಲಘುನ ಇತಿ ॥ ಪ್ರಮಾತ್ವಸ್ಯ ವಿಷಯಸತ್ವಘಟಿತತ್ವೇನ ಗುರುತ್ವಮ್, ಇತಿ ಭಾವಃ।**

ಮೂಲದಲ್ಲಿ, ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿದೆ, ಎಂದು ಹೇಳುವ ಮೂಲಕ ಮೊದಲ ಮತ್ತು ಕೊನೆಯ ಹೇತುಗಳಲ್ಲಿ ಅಸಿದ್ಧಿಯನ್ನು ಪರಿಹರಿಸಲಾಗಿದೆ.

ಮೂಲದಲ್ಲಿ ಪ್ರಮಾತ್ವವು ಜ್ಞಾನತ್ವಘಟಿತವಾಗಿದೆ, ಎನ್ನಲಾಗಿದೆ. ಆದರೆ ಪ್ರಕೃತಹೇತು ಅನಿತ್ಯಯಥಾರ್ಥಜ್ಞಾನತ್ವ. ಅದಕ್ಕೆ ಅನುಸಾರವಾಗಿ ಪ್ರಮಾತ್ವಸ್ಯ ಎಂಬುದಕ್ಕೆ ಅನಿತ್ಯಪ್ರಮಾತ್ವಸ್ಯ ಎಂದು ಅರ್ಥ. ಅಥವಾ, 'ಪ್ರಮಾತ್ವಸ್ಯ' ಎನ್ನುವುದಕೆ ಅನಿತ್ಯ ಎಂಬ ಅಂಶವನ್ನು ಸೇರಿಸಬೇಕಾಗಿಲ್ಲ. ಪ್ರಮಾತ್ವವು ಜ್ಞಾನತ್ವಘಟಿತ ಎಂದೇ ಮೂಲಕ್ಕೆ ಅರ್ಥ. ಪ್ರಮಾತ್ವವು ಜ್ಞಾನತ್ವಘಟಿತವಾದರೆ, ಅನಿತ್ಯಪ್ರಮಾತ್ವವು ಅನಿತ್ಯಜ್ಞಾನತ್ವಘಟಿತ ಎಂದು ಅರ್ಥಾತ್ ಲಭ್ಯ.

ಅನಿತ್ಯಜ್ಞಾನತ್ವವು ಲಘುಧರ್ಮ. ಅನಿತ್ಯಪ್ರಮಾತ್ವವು ಗುರುಧರ್ಮ. ಪ್ರಮಾತ್ವವು ತದ್ವತಿ-ತತ್ಪ್ರಕಾರಕತ್ವರೂಪ. ಅದು ವಿಷಯಘಟಿತವಾಗಿದೆ. ಹೀಗಾಗಿ ಗುರುಧರ್ಮ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನಿತ್ಯಪ್ರಮಾತ್ವಮ್ ಅಪ್ರಮಾಕಾರಣತಾನವಚ್ಛೇದಕ-ರೂಪಾವಚ್ಛಿನ್ನಕಾರಣತಾ ಪ್ರತಿಯೋಗಿಕ-ಕಾರ್ಯತಾವಚ್ಛೇದಕಂ, ಭ್ರಮಾವೃತ್ತಿಕಾರ್ಯತಾವಚ್ಛೇದ-ಕತ್ವಾತ್, ಘಟತ್ವವತ್ ಇತಿ ಮಣ್ಯುಕ್ತಸ್ಯ (ಪು.338) ಪ್ರತ್ಯನುಮಾನಮಾಹ- ಅನಿತ್ಯಪ್ರಮಾತ್ವಮಿತಿ ॥**

ಅನಿತ್ಯಪ್ರಮಾವು ಗುಣಜನ್ಯ ಎಂದು ಸಾಧಿಸಲು ಮಣಿಗ್ರಂಥದಲ್ಲಿ ಈ ಅನುಮಾನವನ್ನು ಆಧಾರವನ್ನಾಗಿ ಕೊಡಲಾಗಿದೆ—

**ಪಕ್ಷ**— ಅನಿತ್ಯಪ್ರಮಾತ್ವ.

**ಸಾಧ್ಯ** — ಅಪ್ರಮಾಕ್ಕೆ ಯಾವುದು ಕಾರಣವೋ ತನ್ನಿಷ್ಠಕಾರಣತಾನವಚ್ಛೇದಕವಾದ ಒಂದು ಧರ್ಮದಿಂದ (ಗುಣತ್ವ–ದೋಷಭಾವತ್ವ) ಅವಚ್ಛಿನ್ನವಾದ ಕಾರಣತಾ ನಿರೂಪಿತ ಕಾರ್ಯತಾದಲ್ಲಿ ಅವಚ್ಛೇದಕವಾಗಿದೆ. ಅರ್ಥಾತ್, ಅಪ್ರಮಾಕ್ಕೆ ಕಾರಣ ಬೇರೆ, ಪ್ರಮಾಕ್ಕೆ ಕಾರಣ ಬೇರೆ.

**ಹೇತು** — ಏಕೆಂದರೆ, ಅನಿತ್ಯಪ್ರಮಾತ್ವವು ಭ್ರಮೆಯಲ್ಲಿ ಅವೃತ್ತಿಯಾದ ಕಾರ್ಯತಾದಲ್ಲಿ ಅವಚ್ಛೇದಕವಾಗಿದೆ. ಅಂದರೆ, ಜ್ಞಾನದಲ್ಲಿ ಎರಡು ಕಾರ್ಯತಾಗಳಿವೆ–ಭ್ರಮನಿಷ್ಠಕಾರ್ಯತಾ, ಪ್ರಮಾನಿಷ್ಠಕಾರ್ಯತಾ. ಈ ಎರಡೂ ಒಂದಿದ್ದಲ್ಲಿ ಮತ್ತೊಂದಿಲ್ಲ. ಆದರಿಂದಾಗಿ ಎರಡೂ ಕಾರ್ಯತಾಗಳಲ್ಲಿ ಅವಚ್ಛೇದಕವಾಗಿರುವ ಧರ್ಮಗಳು ಬೇರೆಬೇರೆ. ಕಾರ್ಯತಾವಚ್ಛೇದಕಗಳು ವಿಭಿನ್ನವಾಗಿರುವುದರಿಂದ ಕಾರಣತಾವಚ್ಛೇದಕಗಳೂ ವಿಭಿನ್ನವಾಗಿರಬೇಕು.

ಉದಾಹರಣೆ–ಘಟತ್ವ. ಅದು ಭ್ರಮಾವೃತ್ತಿಯಾದ ಘಟನಿಷ್ಠಕಾರ್ಯತಾದಲ್ಲಿ ಅವಚ್ಛೇದಕ ವಾಗಿದೆ. ಆದ್ದರಿಂದ, ಅಪ್ರಮಾಕಾರಣತಾನವಚ್ಛೇದಕವಾದ ದಂಡತ್ವಾವಚ್ಛಿನ್ನಕಾರಣತಾನಿರೂಪಿತ–ಘಟನಿಷ್ಠಕಾರ್ಯತಾವಚ್ಛೇದಕವಾಗಿದೆ.

ಈ ಅನುಮಾನಕ್ಕೆ ಪ್ರತಿಯಾಗಿ ಸ್ವತಸ್ತ್ವಸಾಧಕವಾದ ಅನುಮಾನವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**अनित्यप्रमात्वं दोषविरोधिवृत्तिधर्मावच्छिन्नकारणत्वप्रतियोगिक-कार्यतानवच्छेदकं, दोषजन्यवृत्तित्वात् । भ्रमत्ववत् । दोषविरोधी गुणो दोषाभावश्चेति स्वतस्त्वसिद्धिः ।**

**ಪಕ್ಷ**— ಅನಿತ್ಯಪ್ರಮಾತ್ವ.

**ಸಾಧ್ಯ** — ದೋಷಕ್ಕೆ ವಿರೋಧಿಯಾದ ಗುಣ ಮತ್ತು ದೋಷಾಭಾವದಲ್ಲಿ ಇರುವ ಗುಣತ್ವ–ದೋಷಾಭಾವತ್ವಾಚ್ಛಿನ್ನ–ಕಾರಣತಾನಿರೂಪಿತ–ಕಾರ್ಯತಾದಲ್ಲಿ ಅವಚ್ಛೇದಕವಾಗಿಲ್ಲ. ಮಣಿಕಾರ, ಗುಣತ್ವ ಅಥವಾ ದೋಷಾಭಾವತ್ವಾವಚ್ಛಿನ್ನಕಾರಣತಾನಿರೂಪಿತ ಕಾರ್ಯತಾದಲ್ಲಿ ಅನಿತ್ಯಪ್ರಮಾತ್ವವು ಅವಚ್ಛೇದಕ ಎಂದು ಸಾಧಿಸಿದರೆ ಇಲ್ಲಿ ಅದಕ್ಕೆ ವಿರುದ್ಧವಾಗಿ ತಾದೃಶ ಕಾರ್ಯತಾದಲ್ಲಿ ಅನವಚ್ಛೇದಕ ಎಂದು ಸಾಧಿಸಲಾಗಿದೆ.

**ಹೇತು** — ಏಕೆಂದರೆ, ಅನಿತ್ಯಪ್ರಮಾತ್ವವು ದೋಷಜನ್ಯವಾದ ಭ್ರಮೆಯಲ್ಲೂ ಇದೆ. ಅದು

ದೋಷವಿರೋಧಿ ಜನ್ಯದಲ್ಲಿ ಇರುವುದಾದಲ್ಲಿ ದೋಷಜನ್ಯದಲ್ಲಿ ಇರಬಾರದು. ದೋಷಜನ್ಯದಲ್ಲೂ ಇದೆ ಎಂದಾದಮೇಲೆ ಅದಕ್ಕೆ ದೋಷವಿರೋಧಿಯು (ಗುಣ–ದೋಷಾಭಾವ) ಕಾರಣವಲ್ಲ.

ಉದಾಹರಣೆ— ಭ್ರಮತ್ವ. ಅದು ದೋಷಜನ್ಯದಲ್ಲಿ ಇದೆ. ಆದ್ದರಿಂದಲೇ ದೋಷವಿರೋಧಿ ನಿರೂಪಿತ ಜನ್ಯತಾವಚ್ಛೇದಕವಲ್ಲ.

## ನ್ಯಾಯದೀಪ

**ದೋಷಃ=ಪಿತ್ತಾದಿಃ। ತದ್ವಿರೋಧಿವೃತ್ತಿಧರ್ಮಃ ಗುಣತ್ವಾದಿರೂಪಃ। ತದವಚ್ಛಿನ್ನೇತ್ಯರ್ಥಃ। ದೋಷಜನ್ಯವೃತ್ತಿತ್ವಾತ್, ಇತಿ ಹೇತೋಃ ಅಸಿದ್ಧ್ಯುದ್ಧಾರಃ ಪ್ರಾಗ್ವತ್।**

**ನನು ಉಕ್ತಾನುಮಾನೇನ ದೋಷವಿರೋಧಿನಃ ಗುಣಸ್ಯ ಅಹೇತುತ್ವಲಾಭೇಽಪಿ ದೋಷಾಭಾವಸ್ಯ ಹೇತುತ್ವಾನಿವಾರಣಾತ್, ಜ್ಞಾನಹೇತ್ವಧಿಕಜನ್ಯತ್ವಾತ್ ಪ್ರಮಾತ್ವಸ್ಯ ಜ್ಞಾನಹೇತುಮಾತ್ರಜನ್ಯತ್ವಕ್ಷತಿಃ, ಇತ್ಯತ ಆಹ–ದೋಷವಿರೋಧೀತಿ ॥ ವಿರೋಧಿತ್ವಂ ಚ ಸಹಾನವಸ್ಥಾಯಿತ್ವಂ ವಾ ತನ್ನಿಶ್ಚಯಪ್ರತಿಬಂಧಕ–ನಿಶ್ಚಯವಿಷಯತ್ವಂ ವಾ ಉಭಯಾನುಗತಮ್। ಪ್ರತಿಬಂಧಕತ್ವಂ ಚ ತದನುತ್ಪಾದವ್ಯಾಪ್ಯತ್ವಮ್, ಇತಿ ಭಾವಃ।**

ಪ್ರಕೃತ ಹೇತು—ದೋಷಜನ್ಯವೃತ್ತಿತ್ವಾತ್, ಎಂದು. ಅನಿತ್ಯಪ್ರಮಾತ್ವವು ದೋಷಜನ್ಯವಾದ ಭ್ರಮೆಯಲ್ಲೂ ಧರ್ಮ್ಯಂಶದಲ್ಲಿ ಇದೆ, ಎಂದು ಹಿಂದೆಯೇ ನಿರೂಪಿಸಲಾಗಿದೆ. ಆದ್ದರಿಂದ ಅಸಿದ್ಧಿ ಇಲ್ಲ.

ಈ ಅನುಮಾನದ ಸಾಧ್ಯದಲ್ಲಿ ದೋಷವಿರೋಧಿಪದದಿಂದ ಗುಣವನ್ನು ಮಾತ್ರ ಪರಿಗಣಿಸಿದರೆ, ಪ್ರಮಾ ಗುಣಜನ್ಯವಲ್ಲ, ಎಂದು ಸಿದ್ಧವಾದರೂ ದೋಷಾಭಾವಜನ್ಯವಲ್ಲ, ಎಂದು ಸಿದ್ಧವಾಗುವುದಿಲ್ಲ. ದೋಷಾಭಾವಜನ್ಯವಾದರೂ ಜ್ಞಾನಹೇತುಮಾತ್ರ–ಜನ್ಯತ್ವರೂಪ–ಸ್ವತಸ್ತ್ವವು ಸಿದ್ಧವಾಗುವುದಿಲ್ಲ. ದೋಷಾಭಾವವು ಜ್ಞಾನಹೇತುವಲ್ಲ, ಅತಿರಿಕ್ತ. ತಜ್ಜನ್ಯತ್ವಾತ್ ಪ್ರಮಾತ್ವಕ್ಕೆ ಸ್ವತಸ್ತ್ವಹಾನಿಯಾಗುತ್ತದೆ. ಅದಕ್ಕಾಗಿ, ಮೂಲದಲ್ಲಿ ದೋಷವಿರೋಧಿಪದದಿಂದ ಗುಣ ಮತ್ತು ದೋಷಾಭಾವ ಎರಡನ್ನೂ ಪರಿಗ್ರಹಿಸಲಾಗಿದೆ. ಇವೆರಡೂ ದೋಷೇಣ ಸಹ ಅನವಸ್ಥಾಯಿ (ಇರುವುದಿಲ್ಲ). ಆದ್ದರಿಂದ ದೋಷವಿರೋಧಿಗಳಾಗಿವೆ. ಅಥವಾ ದೋಷವಿಷಯಕ–ನಿಶ್ಚಯ–ಪ್ರತಿಬಂಧಕ ನಿಶ್ಚಯವಿಷಯತ್ವಂ, ಇದೇ ದೋಷವಿರೋಧಿತ್ವ. 'ಅಯಂ ದೋಷಃ' ಎಂಬ ನಿಶ್ಚಯಕ್ಕೆ 'ಅಯಂ ಗುಣಃ, ಅಯಂ ದೋಷಾಭಾವಃ' ಎಂಬ ಎರಡೂ ನಿಶ್ಚಯಗಳು ಪ್ರತಿಬಂಧಕಗಳಾಗಿವೆ. ಆದ್ದರಿಂದ ಅವೆರಡೂ ದೋಷವಿರೋಧಿಗಳು. ಇಲ್ಲಿ ಪ್ರತಿಬಂಧಕತ್ವವೆಂದರೆ ತದನುತ್ಪಾದ ವ್ಯಾಪ್ಯತ್ವ.

ಪ್ರಕೃತದಲ್ಲಿ ಗುಣಜ್ಞಾನವು ಪ್ರತಿಬಂಧಕ. ಗುಣಜ್ಞಾನ ಇದ್ದಾಗ ನಿಯಮೇನ ದೋಷಜ್ಞಾನದ ಅನುತ್ಪತ್ತಿ ಇರುತ್ತದೆ. ಆದ್ದರಿಂದ ಗುಣಜ್ಞಾನವು ಪ್ರತಿಬಂಧಕವಾಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನಿತ್ಯಪ್ರಮಾತ್ವಂ, ಕಾರ್ಯತಾವಚ್ಛೇದಕಮ್, ಭಾದಕಂ ವಿನಾ ಕಾರ್ಯ-ಮಾತ್ರವೃತ್ತಿಧರ್ಮತ್ವಾತ್, ಅಪ್ರಮಾತ್ವವತ್, ಇತಿ ಮಣ್ಯುಕ್ತಸ್ಯ (ಪು.325) ಪ್ರತ್ಯನುಮಾನಮ್ ಆಹ–ಅನಿತ್ಯಪ್ರಮಾತ್ವಮಿತಿ ॥**

ಮಣಿಗ್ರಂಥದಲ್ಲಿ ಪ್ರಥಮಾನುಮಾನಕ್ಕೆ ಪೂರಕವಾಗಿ ಇನ್ನೊಂದು ಅನುಮಾನವನ್ನು ಹೇಳಲಾಗಿದೆ.

**ಪಕ್ಷ** — ಅನಿತ್ಯಪ್ರಮಾತ್ವವು

**ಸಾಧ್ಯ** — ಕಾರ್ಯತಾವಚ್ಛೇದಕವಾಗಿದೆ.

**ಹೇತು** — ಅದು ಕಾರ್ಯತಾವಚ್ಛೇದಕವಾಗಲು ಬಾಧಕಗಳೇನೂ ಇಲ್ಲ, ಮಾತ್ರವಲ್ಲದೆ, ಅದು ಕಾರ್ಯದಲ್ಲಿ ಮಾತ್ರವಿರುವ ಧರ್ಮವಾಗಿದೆ.

**ಉದಾಹರಣೆ**— ಅಪ್ರಮಾತ್ವದಂತೆ.

ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗಬೇಕಾದರೆ, ತದವಚ್ಛಿನ್ನಕ್ಕೆ ಒಂದು ಕಾರಣವಿರಬೇಕು. ಅದೇ ಗುಣ. ಹೀಗೆ ಪ್ರಮಾಕ್ಕೆ ಗುಣಜನ್ಯತ್ವವು ಈ ಅನುಮಾನದಿಂದ ಸಿದ್ಧವಾಗುತ್ತದೆ.

ಮಣಿಕಾರೋಕ್ತವಾದ ಈ ಅನುಮಾನಕ್ಕೆ ವಿರುದ್ಧವಾದ ಅನುಮಾನವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ—

**अनित्यप्रमात्वं, न कार्यतावच्छेदकम् । तथात्वे बाधकवत्त्वात् । घटज्ञानत्ववत् । न चासिद्धिः । अनुगतकारणाभावरूपस्य बाधकस्योक्तत्वात् ।।**

**ಪಕ್ಷ**—ಅನಿತ್ಯಪ್ರಮಾತ್ವವು

**ಸಾಧ್ಯ**—ಕಾರ್ಯತಾವಚ್ಛೇದಕವಲ್ಲ.

**ಹೇತು**—ಅದು ಕಾರ್ಯತಾವಚ್ಛೇಕವಾಗಲು ಬಾಧಕವಿರುವುದರಿಂದ.

**ದೃಷ್ಟಾಂತ**—ಘಟಜ್ಞಾನತ್ವದಂತೆ.

ಘಟಜ್ಞಾನತ್ವವು ಪ್ರತ್ಯಕ್ಷಾನುಮಿತಿ-ಶಾಬ್ದಬೋಧ ಈ ಮೂರರಲ್ಲೂ ಇದೆ. ಆ ಮೂರಕ್ಕೂ ಅನುಗತವಾದ ಒಂದು ಕಾರಣವು ಇಲ್ಲ. ಆದ್ದರಿಂದ ಅದು ಕಾರ್ಯತಾವಚ್ಛೇದಕವಲ್ಲ. ಅದರಂತೆ, ಭ್ರಮಕಾರಣವಾದ ದೋಷವು ಇಲ್ಲದಿರುವಾಗ ಜ್ಞಾನಸಾಮಾನ್ಯಕಾರಣದಿಂದಲೇ ಪ್ರಮಾ ಹುಟ್ಟುತ್ತದೆ, ಅದಕ್ಕೆ ಅನುಗತವಾದ ಒಂದು ಗುಣವು ಇಲ್ಲ. ಹೀಗೆ ಪ್ರತ್ಯಕ್ಷಾದಿರೂಪವಾದ ಸಕಲ ಪ್ರಮಾಗಳಿಗೂ ಅನುಗತವಾದ ಒಂದು ಗುಣವು ಇಲ್ಲದಿರುವುದರಿಂದ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ.

ಈ ಅನುಮಾನದಲ್ಲಿ ಅಸಿದ್ಧಿದೋಷವಿಲ್ಲ. ಅಂದರೆ, ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕ ಎಂದು ಹೇಳಲು ಬಾಧಕವು ಇಲ್ಲ, ಎನ್ನಬಾರದು. ಅನುಗತಕಾರಣಾಭಾವವೇ ಬಾಧಕ. ಇದನ್ನು ಹಿಂದಿನ ಪ್ರಕರಣದಲ್ಲಿ ಹೇಳಲಾಗಿದೆ. (ಪ್ರಕರಣ-11)

## ನ್ಯಾಯದೀಪ

**ಅತ್ರ ಪೂರ್ವತ್ರ ಚ ಸಿದ್ಧಸಾಧನತಾನಿರಾಸಾಯ ಅನಿತ್ಯೇತಿ ಪ್ರಮಾತ್ವ-ವಿಶೇಷಣಮ್ । ತಥಾತ್ವೇ ಕಾರ್ಯತಾವಚ್ಛೇದಕತ್ವೇ ಇತ್ಯರ್ಥಃ । ಬಾಧಕೇತಿ ॥ ಸ್ವಾವಚ್ಛಿನ್ನಕಾರ್ಯತಾಪ್ರತಿಯೋಗಿಕ – ಅನುಗತೈಕ – ಕಾರಣಾಸಂಭವ- ರೂಪ-ಬಾಧಕವತ್ವಾತ್, ಇತ್ಯರ್ಥಃ । ಘಟೇತಿ ॥ ಘಟಜ್ಞಾನಮಾತ್ರೇ ಅನುಗತಕಾರಣಾಭಾವಾತ್ ಘಟಜ್ಞಾನತ್ವಂ ನಾವಚ್ಛೇದಕಮ್ ಇತ್ಯುಪಪಾದಿತಮ್ ಅಧಸ್ತಾತ್, ಇತಿ ಭಾವಃ । ಉಕ್ತತ್ವಾದಿತಿ ॥ ಪ್ರಮಾಮಾತ್ರಾನುಗತಗುಣಭಂಗೇ (ಪ್ರ.11) ಇತ್ಯರ್ಥಃ ।**

ಈ ಅನುಮಾನ ಮತ್ತು ಹಿಂದಿನ ಅನುಮಾನಗಳಲ್ಲಿ ಕೇವಲ ಪ್ರಮಾತ್ವವನ್ನು ಪಕ್ಷ ಮಾಡಿದರೆ ಸಿದ್ಧಸಾಧನತಾ ಬರುತ್ತಿತ್ತು. ಏಕೆಂದರೆ, ಅದು ನಿತ್ಯವಾದ ಈಶ್ವರಪ್ರಮಾದಲ್ಲೂ ಇರುವುದರಿಂದ ಕಾರ್ಯತಾನವಚ್ಛೇದಕ ಎಂದು ಪರತಸ್ತ್ವವಾದಿಗಳಿಗೂ ಸಮ್ಮತವಾಗಿದೆ. ಅದಕ್ಕಾಗಿ ಅನಿತ್ಯ ಎಂಬ ವಿಶೇಷಣವನ್ನು ಕೊಡಲಾಗಿದೆ.

ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವಾಗಲು ಬಾಧಕ–ಸ್ವಂ=ಅನಿತ್ಯಪ್ರಮಾತ್ವ. ತದವಚ್ಛಿನ್ನವಾದ ಕಾರ್ಯತಾ, ತನ್ನಿರೂಪಿತ ಕಾರಣತಾವತ್ತಾದ ಅನುಗತಕಾರಣವು ಇಲ್ಲ, ಎಂದು ಅರ್ಥ. ಘಟಜ್ಞಾನತ್ವಾವಚ್ಛಿನ್ನಕ್ಕೂ ಅನುಗತವಾದ ಒಂದು ಕಾರಣವು ಇಲ್ಲದಿರುವುದರಿಂದ ಘಟಜ್ಞಾನತ್ವವು ಕಾರ್ಯತಾವಚ್ಛೇದಕವಲ್ಲ, ಎಂದು ಈ ಹಿಂದೆಯೇ ಹೇಳಲಾಗಿದೆ.

## ಪ್ರಮಾವಿಶೇಷಗಳಿಗೆ ಸ್ವತಸ್ತ್ವಸಾಧನೆ

**प्रत्यक्षादिप्रमासु प्रत्येकानुगता गुणा इति पक्षे अनित्यप्रत्यक्षप्रमात्वं**

**न विषयजन्यतावच्छेदकं, न षड्विधसन्निकर्षान्यतरजन्यतावाच्छेदकं वा । तदजन्यवृत्तित्वात् । घटत्ववत् । न चासिद्धिः । योगिप्रत्यक्षादेर्विषयेण षड्विधसन्निकर्षान्यतरेण चाजन्यत्वात् ।**

ಪ್ರತ್ಯಕ್ಷಪ್ರಮಾಕ್ಕೆ ಅನುಗತವಾದ ಒಂದು ಗುಣವಿದೆ, ಅದರಂತೆ, ಅನುಮಿತಿ-ಶಾಬ್ದಪ್ರಮಾಗಳಿಗೂ ಪ್ರತ್ಯೇಕವಾದ ಒಂದೊಂದು ಗುಣಗಳಿವೆ, ಎಂದು ಮಣಿಕಾರನ ಪಕ್ಷ. ಈ ಪಕ್ಷದಂತೆ, ಗುಣಜನ್ಯತ್ವನಿರಾಸಕವಾದ ಅನುಮಾನ ಹೀಗೆ—

**ಪಕ್ಷ—** ಅನಿತ್ಯಪ್ರತ್ಯಕ್ಷ ಪ್ರಮಾತ್ವವು.

**ಸಾಧ್ಯ-1—** ವಿಷಯಜನ್ಯತಾವಚ್ಛೇದಕವಲ್ಲ.

**ಸಾಧ್ಯ-2—** ಷಡ್ವಿಧ ಸನ್ನಿಕರ್ಷಗಳಲ್ಲಿ ಯಾವುದಾದರೊಂದು ಸನ್ನಿಕರ್ಷದ ಜನ್ಯತಾವಚ್ಛೇದಕವಾಗಿಲ್ಲ.

**ಹೇತು—** ವಿಷಯ ಮತ್ತು ಸನ್ನಿಕರ್ಷಗಳಿಂದ ಅಜನ್ಯವಾದ ಪ್ರತ್ಯಕ್ಷದಲ್ಲೂ ಇದೆಯಾದರಿಂದ.

**ಉದಾಹರಣೆ—** ಘಟತ್ವ

ಯೋಗಿ ಪ್ರತ್ಯಕ್ಷ, ಸಾಮಾನ್ಯ ಲಕ್ಷಣಾಜನ್ಯವಾದ ಪ್ರತ್ಯಕ್ಷಗಳು ಷಡ್ವಿಧಸನ್ನಿಕರ್ಷಗಳಿಂದ ಅಥವಾ, ವಿಷಯದಿಂದ ಜನ್ಯವಲ್ಲ. ಅವುಗಳಲ್ಲೂ ಜನ್ಯಪ್ರತ್ಯಕ್ಷಪ್ರಮಾತ್ವವು ಇದೆ. ಹೀಗೆ ಹೇತ್ವಸಿದ್ಧಿ ಇಲ್ಲ.

## ನ್ಯಾಯದೀಪ

**ಇತಿ ಪಕ್ಷೇ ಇತಿ ॥ ವಿರೋಧ್ಯನುಮಾನಮ್ ಉಚ್ಯತೇ ಇತಿ ಯೋಜ್ಯಮ್ । ವಿಷಯಸತ್ವಂ ಗುಣಃ, ಇತಿ ಪಕ್ಷಮ್ ಉಪೇತ್ಯಾಹ–ನ ವಿಷಯೇತಿ ॥ ಇಂದ್ರಿಯಸನ್ನಿಕರ್ಷೋ ಗುಣಃ ಇತಿ ಪಕ್ಷೇ ಆಹ–ನ ಷಡ್ವಿಧೇತಿ ॥**

**ಅನ್ಯತರೇತಿ ॥ ಅನ್ಯತಮೇತ್ಯರ್ಥಃ । ಸಾಧುತ್ವಂ ಪೂರ್ವಮುಕ್ತಂ ಧ್ಯೇಯಮ್। ಪ್ರಾಗುಪಪಾದಿತಮೇವ (ಪ್ರ.13) ಸ್ಮಾರಯತಿ–ಯೋಗಿಪ್ರತ್ಯಕ್ಷಾದೇರಿತಿ ॥ ಸಾಮಾನ್ಯಪ್ರತ್ಯಾಸತ್ತಿಜಪ್ರತ್ಯಕ್ಷಮ್ ಆದಿಪದಾರ್ಥಃ। ಅನ್ಯತರೇಣೇತಿ ॥ ಅನ್ಯತಮೇನ ಇತ್ಯರ್ಥಃ।**

ತಾರ್ಕಿಕರು ಹೇಳುವ, ಪ್ರತ್ಯಕ್ಷಕಾರಣವಾದ ಎರಡು ಗುಣಗಳ ನಿರಾಸಕ್ಕಾಗಿ ಎರಡು

ಸಾಧ್ಯಗಳನ್ನು ಮಾಡಲಾಗಿದೆ. ಸನ್ನಿಕರ್ಷಗಳು ಆರುವಿಧವಾದುದರಿಂದ ಅವುಗಳಲ್ಲಿ ಅನ್ಯತಮ ಎನ್ನುವ ಬದಲು ಅನ್ಯತರ ಎಂದುದು ಹೇಗೆ? ಅದಕ್ಕೆ ಹಿಂದೆ 13ನೆಯ ಪ್ರಕರಣದಲ್ಲಿ ಹೇಳಿದಂತೆ ಭಾವಗ್ರಾಹಕ ಐದು, ಅಭಾವಗ್ರಾಹಕ ಒಂದು ಎಂದು ಎರಡು ಗುಂಪು ಮಾಡಿ ಇವೆರಡರಲ್ಲಿ ಒಂದು ಎನ್ನುವ ಅರ್ಥದಲ್ಲಿ ಅನ್ಯತರ, ಎಂದು ಹೇಳಲಾಗಿದೆ, ಎಂದು ತಿಳಿಯಬೇಕು.

## ನ್ಯಾಯದೀಪ

**ಅನುಮಿತಿ–ಶಾಬ್ದಪ್ರಮಯೋರಪಿ ಗುಣಜನ್ಯತ್ವೇ ಕ್ರಮೇಣ ಅನುಮಾನೇ ಆಹ–ಅನುಮಿತೀತ್ಯಾದಿನಾ ॥**

ಅನುಮಿತಿ ಪ್ರಮಾ ಗುಣಜನ್ಯ ಎಂದು ಸಾಧಿಸಿರುವ ಮಣಿಕಾರೋಕ್ತ ಅನುಮಾನಕ್ಕೆ ವಿರುದ್ಧವಾದ ಅನುಮಾನವನ್ನು ಇಲ್ಲಿ ಹೇಳಲಾಗಿದೆ.

**अनुमितिप्रमात्वं, सत्यलिङ्गपरामर्शत्वावच्छिन्नकारणताप्रतियोगिक-कार्यतानवच्छेदकं असत्यलिङ्गपरामर्शजन्यवृत्तित्वात् । भ्रमत्ववत् ।**

**ಪಕ್ಷ**—ಅನುಮಿತಿ ಪ್ರಮಾತ್ವವು

**ಸಾಧ್ಯ**—ಯಥಾರ್ಥ ಪರಾಮರ್ಶತ್ವಾವಚ್ಛಿನ್ನಕಾರಣತಾನಿರೂಪಿತ ಕಾರ್ಯತಾದಲ್ಲಿ ಅನವಚ್ಛೇದಕವಾಗಿದೆ. ಅಂದರೆ, ಅನುಮಿತಿಯು ಯಥಾರ್ಥಪರಾಮರ್ಶರೂಪವಾದ ಗುಣದಿಂದ ಜನ್ಯವಾಗಿಲ್ಲ.

**ಹೇತು**—ಅಯಥಾರ್ಥಪರಾಮರ್ಶದಿಂದ ಹುಟ್ಟಿರುವ ಅನುಮಿತಿಯಲ್ಲೂ ಅನುಮಿತಿ ಪ್ರಮಾತ್ವವು ಇದೆಯಾದ್ದರಿಂದ. ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ಪರಾಮರ್ಶವು ಭ್ರಮಾತ್ಮಕವಾಗಿದ್ದರೂ ಅನುಮಿತಿಯು ಪ್ರಮಾತ್ಮಕವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಅನುಮಿತಿಪ್ರಮಾತ್ವವು ಅಯಥಾರ್ಥಪರಾಮರ್ಶಜನ್ಯವಾದ ಅನುಮಿತಿಯಲ್ಲೂ ಇದೆ. ಹೀಗಿರುವಾಗ ಅತಿರಿಕ್ತವೃತ್ತಿಯಾದ ಆ ಧರ್ಮವು ಯಥಾರ್ಥಪರಾಮರ್ಶಜನ್ಯತಾವಚ್ಛೇದಕದವಲ್ಲ.

**ಉದಾಹರಣೆ**—ಭ್ರಮತ್ವ.

ಇದರಂತೆ, ಶಾಬ್ದಪ್ರಮಾವೂ ವಿವಕ್ಷಿತಾರ್ಥತತ್ತ್ವಜ್ಞಾನರೂಪವಾದ ಗುಣಜನ್ಯ ಎನ್ನುವುದನ್ನು ನಿರಾಕರಿಸಲು ಮುಂದಿನ ಅನುಮಾನ—

**शाब्दप्रमात्वं विवक्षितार्थतत्वज्ञानत्वावच्छिन्नकारणताप्रतियोगिक-कार्यतानवच्छेदकं विवक्षितार्थतत्वज्ञानाजन्यवृत्तित्वात् भ्रमत्ववत् ॥**

**ಪಕ್ಷ**—ಶಾಬ್ದಪ್ರಮಾತ್ವವು

**न विषयजन्यतावच्छेदकं, न षड्विधसन्निकर्षान्यतरजन्यतावाच्छेदकं वा । तदजन्यवृत्तित्वात् । घटत्ववत् । न चासिद्धिः । योगिप्रत्यक्षादेर्विषयेण षड्विधसन्निकर्षान्यतरेण चाजन्यत्वात् ।**

ಪ್ರತ್ಯಕ್ಷಪ್ರಮಾಕ್ಕೆ ಅನುಗತವಾದ ಒಂದು ಗುಣವಿದೆ, ಅದರಂತೆ, ಅನುಮಿತಿ-ಶಾಬ್ದಪ್ರಮಾಗಳಿಗೂ ಪ್ರತ್ಯೇಕವಾದ ಒಂದೊಂದು ಗುಣಗಳಿವೆ, ಎಂದು ಮಣಿಕಾರನ ಪಕ್ಷ. ಈ ಪಕ್ಷದಂತೆ, ಗುಣಜನ್ಯತ್ವನಿರಾಸಕವಾದ ಅನುಮಾನ ಹೀಗೆ—

**ಪಕ್ಷ—** ಅನಿತ್ಯಪ್ರತ್ಯಕ್ಷ ಪ್ರಮಾತ್ವವು.

**ಸಾಧ್ಯ-1—** ವಿಷಯಜನ್ಯತಾವಚ್ಛೇದಕವಲ್ಲ.

**ಸಾಧ್ಯ-2—** ಷಡ್ವಿಧ ಸನ್ನಿಕರ್ಷಗಳಲ್ಲಿ ಯಾವುದಾದರೊಂದು ಸನ್ನಿಕರ್ಷದ ಜನ್ಯತಾವಚ್ಛೇದಕವಾಗಿಲ್ಲ.

**ಹೇತು—** ವಿಷಯ ಮತ್ತು ಸನ್ನಿಕರ್ಷಗಳಿಂದ ಅಜನ್ಯವಾದ ಪ್ರತ್ಯಕ್ಷದಲ್ಲೂ ಇದೆಯಾದರಿಂದ.

**ಉದಾಹರಣೆ—** ಘಟತ್ವ

ಯೋಗಿ ಪ್ರತ್ಯಕ್ಷ, ಸಾಮಾನ್ಯ ಲಕ್ಷಣಾಜನ್ಯವಾದ ಪ್ರತ್ಯಕ್ಷಗಳು ಷಡ್ವಿಧಸನ್ನಿಕರ್ಷಗಳಿಂದ ಅಥವಾ, ವಿಷಯದಿಂದ ಜನ್ಯವಲ್ಲ. ಅವುಗಳಲ್ಲೂ ಜನ್ಯಪ್ರತ್ಯಕ್ಷಪ್ರಮಾತ್ವವು ಇದೆ. ಹೀಗೆ ಹೇತ್ವಸಿದ್ಧಿ ಇಲ್ಲ.

## ನ್ಯಾಯದೀಪ

**ಇತಿ ಪಕ್ಷೇ ಇತಿ ॥ ವಿರೋಧ್ಯನುಮಾನಮ್ ಉಚ್ಯತೇ ಇತಿ ಯೋಜ್ಯಮ್ । ವಿಷಯಸತ್ವಂ ಗುಣಃ, ಇತಿ ಪಕ್ಷಮ್ ಉಪೇತ್ಯಾಹ–ನ ವಿಷಯೇತಿ ॥ ಇಂದ್ರಿಯಸನ್ನಿಕರ್ಷೋ ಗುಣಃ ಇತಿ ಪಕ್ಷೇ ಆಹ–ನ ಷಡ್ವಿಧೇತಿ ॥**

**ಅನ್ಯತರೇತಿ ॥ ಅನ್ಯತಮೇತ್ಯರ್ಥಃ । ಸಾಧುತ್ವಂ ಪೂರ್ವಮುಕ್ತಂ ಧ್ಯೇಯಮ್। ಪ್ರಾಗುಪಪಾದಿತಮೇವ (ಪ್ರ.13) ಸ್ಮಾರಯತಿ–ಯೋಗಿಪ್ರತ್ಯಕ್ಷಾದೇರಿತಿ ॥ ಸಾಮಾನ್ಯಪ್ರತ್ಯಾಸತ್ತಿಜಪ್ರತ್ಯಕ್ಷಮ್ ಆದಿಪದಾರ್ಥಃ। ಅನ್ಯತರೇಣೇತಿ ॥ ಅನ್ಯತಮೇನ ಇತ್ಯರ್ಥಃ ।**

ತಾರ್ಕಿಕರು ಹೇಳುವ, ಪ್ರತ್ಯಕ್ಷಕಾರಣವಾದ ಎರಡು ಗುಣಗಳ ನಿರಾಸಕ್ಕಾಗಿ ಎರಡು

ಸಾಧ್ಯಗಳನ್ನು ಮಾಡಲಾಗಿದೆ. ಸನ್ನಿಕರ್ಷಗಳು ಆರುವಿಧವಾದುದರಿಂದ ಅವುಗಳಲ್ಲಿ ಅನ್ಯತಮ ಎನ್ನುವ ಬದಲು ಅನ್ಯತರ ಎಂದುದು ಹೇಗೆ? ಅದಕ್ಕೆ ಹಿಂದೆ 13ನೆಯ ಪ್ರಕರಣದಲ್ಲಿ ಹೇಳಿದಂತೆ ಭಾವಗ್ರಾಹಕ ಐದು, ಅಭಾವಗ್ರಾಹಕ ಒಂದು ಎಂದು ಎರಡು ಗುಂಪು ಮಾಡಿ ಇವೆರಡರಲ್ಲಿ ಒಂದು ಎನ್ನುವ ಅರ್ಥದಲ್ಲಿ ಅನ್ಯತರ, ಎಂದು ಹೇಳಲಾಗಿದೆ, ಎಂದು ತಿಳಿಯಬೇಕು.

## ನ್ಯಾಯದೀಪ

**ಅನುಮಿತಿ–ಶಾಬ್ದಪ್ರಮಯೋರಪಿ ಗುಣಜನ್ಯತ್ವೇ ಕ್ರಮೇಣ ಅನುಮಾನೇ ಆಹ–ಅನುಮಿತೀತ್ಯಾದಿನಾ ॥**

ಅನುಮಿತಿ ಪ್ರಮಾ ಗುಣಜನ್ಯ ಎಂದು ಸಾಧಿಸಿರುವ ಮಣಿಕಾರೋಕ್ತ ಅನುಮಾನಕ್ಕೆ ವಿರುದ್ಧವಾದ ಅನುಮಾನವನ್ನು ಇಲ್ಲಿ ಹೇಳಲಾಗಿದೆ.

**अनुमितिप्रमात्वं, सत्यलिङ्गपरामर्शत्वावच्छिन्नकारणताप्रतियोगिक-कार्यतानवच्छेदकं असत्यलिङ्गपरामर्शजन्यवृत्तित्वात् । भ्रमत्ववत् ।**

**ಪಕ್ಷ**—ಅನುಮಿತಿ ಪ್ರಮಾತ್ವವು

**ಸಾಧ್ಯ**—ಯಥಾರ್ಥ ಪರಾಮರ್ಶತ್ವಾವಚ್ಛಿನ್ನಕಾರಣತಾನಿರೂಪಿತ ಕಾರ್ಯತಾದಲ್ಲಿ ಅನವಚ್ಛೇದಕವಾಗಿದೆ. ಅಂದರೆ, ಅನುಮಿತಿಯು ಯಥಾರ್ಥಪರಾಮರ್ಶರೂಪವಾದ ಗುಣದಿಂದ ಜನ್ಯವಾಗಿಲ್ಲ.

**ಹೇತು**—ಅಯಥಾರ್ಥಪರಾಮರ್ಶದಿಂದ ಹುಟ್ಟಿರುವ ಅನುಮಿತಿಯಲ್ಲೂ ಅನುಮಿತಿ ಪ್ರಮಾತ್ವವು ಇದೆಯಾದ್ದರಿಂದ. ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ಪರಾಮರ್ಶವು ಭ್ರಮಾತ್ಮಕವಾಗಿದ್ದರೂ ಅನುಮಿತಿಯು ಪ್ರಮಾತ್ಮಕವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಅನುಮಿತಿಪ್ರಮಾತ್ವವು ಅಯಥಾರ್ಥಪರಾಮರ್ಶಜನ್ಯವಾದ ಅನುಮಿತಿಯಲ್ಲೂ ಇದೆ. ಹೀಗಿರುವಾಗ ಅತಿರಿಕ್ತವೃತ್ತಿಯಾದ ಆ ಧರ್ಮವು ಯಥಾರ್ಥಪರಾಮರ್ಶಜನ್ಯತಾವಚ್ಛೇಕದವಲ್ಲ.

**ಉದಾಹರಣೆ**—ಭ್ರಮತ್ವ.

ಇದರಂತೆ, ಶಾಬ್ದಪ್ರಮಾವೂ ವಿವಕ್ಷಿತಾರ್ಥತತ್ತ್ವಜ್ಞಾನರೂಪವಾದ ಗುಣಜನ್ಯ ಎನ್ನುವುದನ್ನು ನಿರಾಕರಿಸಲು ಮುಂದಿನ ಅನುಮಾನ—

**शाब्दप्रमात्वं विवक्षितार्थतत्वज्ञानत्वावच्छिन्नकारणताप्रतियोगिक-कार्यतानवच्छेदकं विवक्षितार्थतत्वज्ञानाजन्यवृत्तित्वात् भ्रमत्ववत् ॥**

**ಪಕ್ಷ**—ಶಾಬ್ದಪ್ರಮಾತ್ವವು

**ಸಾಧ್ಯ**—ವಿವಕ್ಷಿತಾರ್ಥ-ತತ್ತ್ವಜ್ಞಾನತ್ವಾವಚ್ಛಿನ್ನ-ಕಾರಣತಾನಿರೂಪಿತ-ಕಾರ್ಯತಾದಲ್ಲಿ ಅವಚ್ಛೇದಕವಾಗಿಲ್ಲ.

**ಹೇತು**—ವಿವಕ್ಷಿತಾರ್ಥತತ್ತ್ವಜ್ಞಾನದಿಂದ ಅಜನ್ಯವಾದ ಯಾದೃಚ್ಛಿಕ ಸಂವಾದಿಯಾದ ಶಾಬ್ದಬೋಧದಲ್ಲಿ ಇದೆಯಾದ್ದರಿಂದ.

**ದೃಷ್ಟಾಂತ**—ಭ್ರಮತ್ವದಂತೆ.

## ನ್ಯಾಯದೀಪ

**ವಿವಕ್ಷಿತಾರ್ಥ ತತ್ತ್ವಜ್ಞಾನಂ ಗುಣಃ ಇತಿ ಮತೇ ಆಹ–ವಿವಕ್ಷಿತೇತಿ ॥**

ಶಾಬ್ದಪ್ರಮಾಕ್ಕೆ ವಕ್ತೃವಿನಲ್ಲಿರುವ ವಿವಕ್ಷಿತಾರ್ಥತತ್ತ್ವಜ್ಞಾನವೇ ಗುಣ, ಎಂದೂ ತಾರ್ಕಿಕರು ಹೇಳುತ್ತಾರೆ. ಆ ಪಕ್ಷದಲ್ಲಿ ಅದನ್ನು ನಿರಾಕರಿಸುವ ಅನುಮಾನ ಇದು. ಯಥಾರ್ಥಯೋಗ್ಯತಾ ಜ್ಞಾನಂ ಗುಣಃ, ಎಂಬ ಪಕ್ಷಕ್ಕೆ ಇದು ಪ್ರತಿಪಕ್ಷಾನುಮಾನವಲ್ಲ.

**न च तर्ह्यावश्यकत्वात् विषयसत्वमेव प्रमाप्रयोजकं, न तु दोषाभावापेक्षेति वाच्यम् । शुक्तौ रूप्यभ्रमकाले शुक्तित्वादेर्विषयस्य सत्वेऽपि दोषरूपप्रतिबन्धेन शुक्तित्वादिप्रमा-व्यतिरेकात् ।।**

(ಈ ಮೂಲವು ಕೆಲವು ಪ್ರತಿಗಳಲ್ಲಿ ಇಲ್ಲ.)

ದೋಷಗಳಿದ್ದರೂ ಯಾದೃಚ್ಛಿಕಸಂವಾದಿಸ್ಥಳದಲ್ಲಿ ಪ್ರಮಾ ಹುಟ್ಟುವುದರಿಂದ ಅಲ್ಲಿ ವಿಷಯಸತ್ವವು ಉತ್ತೇಜಕ ಎಂದು ಹೇಳಬೇಕು. ಹೀಗೆ ವಿಷಯಸತ್ವಕ್ಕೆ ಕಾರಣತ್ವವನ್ನು ಹೇಳಲೇಬೇಕಾದ ಮೇಲೆ ಅದೇ ಪ್ರಮಾ ಹೇತುವಾದ ಗುಣವಾಗಲಿ, ಎಂದರೆ ಇದು ಸರಿಯಲ್ಲ. ಶುಕ್ತಿಯಲ್ಲಿ ರಜತಭ್ರಮೆ ಬರುವಾಗ ಶುಕ್ತಿತ್ವರೂಪವಿಷಯ ಸತ್ತ್ವವು ಇದ್ದರೂ ಪ್ರಮಾ ಬರುವುದಿಲ್ಲ. ಆದಕ್ಕೆ ದೋಷವು ಪ್ರತಿಬಂಧಕ, ಅಂದಮೇಲೆ, ದೋಷಾಭಾವವು ಕಾರಣ ಎಂದು ಹೇಳಲೇಬೇಕು. (ಇದು ಹಿಂದೆ ಬಂದಿದೆ. ಪ್ರ.12)

## ನ್ಯಾಯದೀಪದಲ್ಲಿ ಅವತಾರಿಕೆ

**ಪ್ರತ್ಯೇಕಮುಕ್ತ್ವಾ ಮಿಲಿತ್ವಾಪಿ ದೋಷಾಭಾವಸ್ಯಾಪಿ ಅಹೇತುತ್ವಲಾಭಾಯ ಆಹ–ಪ್ರತ್ಯಕ್ಷೇತಿ ॥**

ಹೀಗೆ, ಪ್ರತ್ಯಕ್ಷಾದಿ ಪ್ರಮಾಗಳಿಗೆ ಪ್ರತ್ಯೇಕವಾದ ಗುಣವನ್ನು ನಿಷೇಧಮಾಡಿ ಎಲ್ಲಾ ಪ್ರಮಾಗಳಿಗೂ ಸಾಧಾರಣವಾಗಿ ದೋಷಾಭಾವವೂ ಕಾರಣವಲ್ಲ, ಎಂದು ಮುಂದೆ ಹೇಳಲಾಗಿದೆ–

**अनित्यप्रत्यक्षप्रमात्वा-नुमितिप्रमात्व-शाब्दप्रमात्वानि दोषविरोधि-वृत्तिधर्मावच्छिन्नकारणताप्रतियोगिककार्यतानवच्छेदकानि दोषजन्य-वृत्तित्वात् भ्रमत्ववत् ।।**

**नचासिद्धिः । करदौ चरणादिभ्रमजन्ये पुरुषज्ञाने प्रमात्वस्य सत्त्वात् ।**

**ಪಕ್ಷ**—ಅನಿತ್ಯವಾದ ಪ್ರತ್ಯಕ್ಷಪ್ರಮಾತ್ವ-ಅನುಮಿತಿ ಪ್ರಮಾತ್ವ-ಶಾಬ್ದಪ್ರಮಾತ್ವಗಳು.

**ಸಾಧ್ಯ**—ದೋಷವಿರೋಧಿಯಾದ ಗುಣ ಮತ್ತು ದೋಷಾಭಾವ ಇವುಗಳಲ್ಲಿರುವ ಧರ್ಮಾವಚ್ಛಿನ್ನವಾದ ಕಾರಣತಾ ನಿರೂಪಿತವಾದ ಕಾರ್ಯತಾದಲ್ಲಿ ಅವಚ್ಛೇದಕವಾಗಿಲ್ಲ.

**ಹೇತು**—ಆ ಧರ್ಮಗಳು ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ದೋಷಜನ್ಯವಾದ ಜ್ಞಾನದಲ್ಲೂ ಇವೆಯಾದ್ದರಿಂದ.

**ದೃಷ್ಟಾಂತ**—ಭ್ರಮತ್ವದಂತೆ.

ಈ ಅನುಮಾನಕ್ಕೆ ಅಸಿದ್ಧಿದೋಷವಿಲ್ಲ. ಕರದಲ್ಲಿ ಚರಣ ಎಂಬ ಭ್ರಮದಿಂದ ಪುರುಷತ್ವ ವ್ಯಾಪ್ಯಚರಣಾದಿಮಾನ್ ಎಂಬ ಭ್ರಮೆ ಬಂದು 'ಅಯಂ ಪುರುಷಃ' ಎಂದು ಅನುಮಿತಿಯೂ ಬಂತು. ಈ ಅನುಮಿತಿ ಪ್ರಮಾತ್ಮಕವಾಗಿದೆ. ಆದರೆ, ಪರಾಮರ್ಶ ಭ್ರಮಾತ್ಮಕವಾದುದರಿಂದ ದೋಷಜನ್ಯವಾಗಿದೆ. ಹೀಗೆ ಅನುಮಿತಿತ್ವಾದಿಧರ್ಮಗಳು ದೋಷಜನ್ಯವೃತ್ತಿಯಾಗಿವೆ. ಆದ್ದರಿಂದ ಅಸಿದ್ಧಿ ಇಲ್ಲ.

## ನ್ಯಾಯದೀಪ

**ದೋಷವಿರೋಧೀತಿ ।। ಸ ಚ, ಗುಣಃ ದೋಷಾಭಾವಶ್ಚ, ಇತಿ ಸ್ವತಸ್ತ್ವಸಿದ್ಧಿರಿತಿ ಭಾವಃ ।**

ಸಾಧ್ಯದಲ್ಲಿ ದೋಷವಿರೋಧಿ ಪದದಿಂದ ಗುಣ ಮತ್ತು ದೋಷಾಭಾವ ಇವೆರಡನ್ನೂ ತೆಗೆದು ಕೊಳ್ಳಬೇಕು. ಆಗ ಇವೆರಡೂ ಪ್ರಮಾ ಹೇತುವಲ್ಲವಾದುದರಿಂದ ಪ್ರಾಮಾಣ್ಯಸ್ವತಸ್ತ್ವ ಸಿದ್ಧಿಯಾಗುತ್ತದೆ.

## ನ್ಯಾಯದೀಪ

**ಅಸಿದ್ಧಿರಿತಿ ।। ಉಕ್ತಹೇತೂನಾಮ್ ಇತ್ಯರ್ಥಃ । ಅಂತ್ಯಹೇತೋಃ 'ಧರ್ಮ್ಯಂಶೇ'**

**ಇತ್ಯಾದಿ ಪೂರ್ವಗ್ರಂಥೇನ ಅಸಿದ್ಧ್ಯುದ್ಧಾರಪ್ರಕಾರಸ್ಯ, ದ್ವಿತೀಯಹೇತೋರಪಿ ಸಂವಾದಿಶುಕಾದಿವಾಕ್ಯಜನ್ಯ ಜ್ಞಾನೇ, ಭ್ರಾಂತಪ್ರತಾರಕವಾಕ್ಯಜನ್ಯಜ್ಞಾನೇ ಚ ಪೂರ್ವೋಕ್ತದಿಶಾ ಸತ್ವೇನ ಸಿದ್ಧತ್ವಾತ್ ಆದ್ಯಸ್ಯ ತಂ ವ್ಯನಕ್ತಿ–ಕರೇತಿ ॥**

**ನ ಚ ಶುಕಾದಿವಾಕ್ಯಜನ್ಯಜ್ಞಾನೇಽಪಿ ತಾದೃಶೇಶ್ವರಜ್ಞಾನ–ಜನ್ಯತ್ವಸತ್ವಾತ್ ಅಸಿದ್ಧಿರೇವ ಇತಿ ಶಂಕ್ಯಮ್ । ತಸ್ಯ ಭ್ರಮಸಾಧಾರಣೋಪಾದಾನಗೋಚರ–ಜ್ಞಾನತ್ವೇನೈವ ಜನಕತಯಾ, ಅತ್ರಾಭಿಮತಸ್ಯ ವಿವಕ್ಷಿತಾರ್ಥ–ತತ್ವಜ್ಞಾನತ್ವಾದಿನಾ ರೂಪೇಣ ಅಜನಕತ್ವಾತ್ ಇತ್ಯುಕ್ತತ್ವಾತ್ ॥**

ಹಿಂದೆ ಪ್ರತ್ಯಕ್ಷಾದಿ ಪ್ರಮಾತ್ರಯಗಳೂ ಗುಣಜನ್ಯವಲ್ಲ, ಎಂದು ಸಾಧಿಸಲು ಮೂರು ಹೇತುಗಳನ್ನು ಹೇಳಿ 'ನ ಚಾಸಿದ್ಧಿಃ' ಎಂದು ಮೂರರಲ್ಲೂ ಅಸಿದ್ಧಿಶಂಕೆಯನ್ನು ಮಾಡಿ ಪರಿಹಾರ ಮಾಡುವಾಗ ಒಂದರಲ್ಲಿ ಮಾತ್ರ ಅಸಿದ್ಧಿಯನ್ನು ಪರಿಹರಿಸಲಾಗಿದೆ. ಅದಕ್ಕೆ ಕಾರಣ— ಕೊನೆಯ ಹೇತು 'ದೋಷಜನ್ಯವೃತ್ತಿತ್ವಾತ್' ಎಂದು. ಈ ಹೇತುವಿಗೆ ಅಸಿದ್ಧಿಯನ್ನು ಪರಿಹರಿಸಲಾಗಿದೆ. ಹಿಂದೆ ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿದೆ, ಎನ್ನುವ ಮೂಲಕ ಅನಿತ್ಯ ಪ್ರತ್ಯಕ್ಷಾದಿ ಪ್ರಮಾತ್ವಗಳು ದೋಷಜನ್ಯವಾದ ಭ್ರಮೆಗಳಲ್ಲಿ ಇವೆ, ಎಂದು ಹೇಳುವ ಮೂಲಕ ಅಸಿದ್ಧಿಯನ್ನು ಪರಿಹರಿಸಿದಂತಾಗಿದೆ. ಎರಡನೆಯ ಹೇತು ವಿವಕ್ಷಿತಾರ್ಥತತ್ವಜ್ಞಾನಾಜನ್ಯವೃತ್ತಿತ್ವಾತ್, ಎಂದು. ಇದಕ್ಕೂ ಹಿಂದೆ ಅಸಿದ್ಧಿಯನ್ನು ಪರಿಹಾರ ಮಾಡಲಾಗಿದೆ— ಸಂವಾದಿ ಶುಕಾದಿವಾಕ್ಯದಿಂದ ಹುಟ್ಟಿದ ಯಥಾರ್ಥಶಾಬ್ದಬೋಧವು ವಿವಕ್ಷಿತಾರ್ಥತತ್ವಜ್ಞಾನದಿಂದ ಜನ್ಯವಲ್ಲ, ಅದರಲ್ಲೂ ಶಾಬ್ದಪ್ರಮಾತ್ವವು ಇದೆ, ಎಂದು. ಅದರಂತೆ ಭ್ರಾಂತ–ಪ್ರತಾರಕವಾಕ್ಯಜನ್ಯಜ್ಞಾನವೂ ಯಥಾರ್ಥವಾಕ್ಯಾರ್ಥಾ ಜನ್ಯವಾಗಿದ್ದು ಅದರಲ್ಲಿ ಶಾಬ್ದಪ್ರಮಾತ್ವವು ಇದೆ. ಹೀಗೆ ಅಲ್ಲೂ ಅಸಿದ್ಧಿಪರಿಹೃತವಾಗಿದೆ. ಅನುಮಿತಿಪ್ರಮಾತ್ವಪಕ್ಷಕಾನುಮಾನದಲ್ಲಿ ಹೇಳಿರುವ ಮೊದಲನೆಯ ಹೇತು— ಅಸತ್ಯಲಿಂಗ ಪರಾಮರ್ಶಜನ್ಯವೃತ್ತಿತ್ವಾತ್, ಎಂದು. ಅದಕ್ಕೆ ಅಸಿದ್ಧಿಯನ್ನು ಇಲ್ಲಿ ಪರಿಹರಿಸಲಾಗಿದೆ. ಕರವನ್ನು ಚರಣವೆಂದು ಭ್ರಮಿಸಿ 'ಪುರುಷತ್ವವ್ಯಾಪ್ಯಕರಾದಿಮಾನ್' ಎಂದು ಪರಾಮರ್ಶ ಬಂದಿದೆ. ಈ ಪರಾಮರ್ಶ ಅಸತ್ಯಲಿಂಗಕ ಪರಾಮರ್ಶ. ಅದರಿಂದ ಜನ್ಯವಾದ 'ಅಯಂ ಪುರುಷಃ' ಎಂಬ ಅನುಮಿತಿಯು ಪ್ರಮಾತ್ಮಕವಾಗಿದೆ. ಇಂತಹ ಅನುಮಿತಿಯಲ್ಲಿ ಅನುಮಿತಿ ಪ್ರಮಾತ್ವವು ಇದೆ. ಆದ್ದರಿಂದ ಅಸಿದ್ಧಿ ಇಲ್ಲ.

'ನ ಚಾಸಿದ್ಧಿಃ' ಎಂಬಲ್ಲಿ ಹಿಂದೆ ಹೇಳಿರುವ ಮೂರೂ ಹೇತುಗಳಲ್ಲಿ ಅಸಿದ್ಧಿ ಇಲ್ಲ ಎಂದು ಅರ್ಥ.[1]

---

1. **ಈ ಮೂರು ಹೇತುಗಳನ್ನು ಬಿಟ್ಟು ಅದರ ಹಿಂದಿರುವ ಹೇತುಗಳಿಗೆ ಅಸಿದ್ಧಿಯನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಅಸಿದ್ಧಿಶಂಕೆಗೆ ಅವಕಾಶವಿರುವ ಈ ಹೇತುಗಳೇ 'ನ ಚಾಸಿದ್ಧಿಃ' ಎಂಬ ಮೂಲದಲ್ಲಿ ವಿವಕ್ಷಿತ. ಕೊನೆಯ ಹೇತುವಿನ, ಅನಂತರ 'ನ ಚಾಸಿದ್ಧಿಃ' ಎಂಬ ವಾಕ್ಯವಿರುವುದರಿಂದ ಅದನ್ನು ಮಾತ್ರ ತೆಗೆದುಕೊಂಡರೆ 'ಕರಾದೌ'**

ಮೊದಲಹೇತು–ಅಸತ್ಯಲಿಂಗಪರಾಮರ್ಶಜನ್ಯವೃತ್ತಿತ್ವಾತ್ ।

ಎರಡನೆ ಹೇತು—ವಿವಕ್ಷಿತಾರ್ಥ–ತತ್ವಜ್ಞಾನಾಜನ್ಯವೃತ್ತಿತ್ವಾತ್ ।

ಮೂರನೆಯ ಹೇತು—ದೋಷಜನ್ಯವೃತ್ತಿತ್ವಾತ್

ಈ ಮೂರರಲ್ಲಿ ಮೊದಲನೆಯ ಹೇತುವಿಗೆ ಅಸಿದ್ಧಿಯನ್ನು ಇಲ್ಲಿ ಪರಿಹರಿಸಲಾಗಿದೆ. ಹೊರತು, ಪ್ರಕೃತವಾದ ದೋಷಜನ್ಯವೃತ್ತಿತ್ವಾತ್ ಎಂಬ ಹೇತುವಿಗೆ ಅಲ್ಲ.

ಶುಕಾದಿ ವಾಕ್ಯಜನ್ಯಶಾಬ್ದಬೋಧವೂ ಈಶ್ವರನ ಯಥಾರ್ಥವಾಕಾರ್ಥಜ್ಞಾನದಿಂದ ಜನ್ಯವಾಗಿರುವುದರಿಂದ ತದಜನ್ಯತ್ವ ಅದರಲ್ಲಿ ಇಲ್ಲ. ಹೀಗೆ ಮತ್ತೆ ದ್ವಿತೀಯಹೇತುವು ಅಸಿದ್ಧವಾಗುತ್ತದೆ, ಎಂಬ ಸಂದೇಹವು ಯುಕ್ತವಲ್ಲ. ಈಶ್ವರನ ಜ್ಞಾನ ಭ್ರಮೆಗೂ ಕಾರಣವಾಗಿದೆ, ಭ್ರಮೆಯೂ ಗುಣಜನ್ಯವಾಗಬೇಕಾದೀತು. ಆದ್ದರಿಂದ ಅದು ಉಪಾದಾನಗೋಚರ ಜ್ಞಾನತ್ವೇನೈವ ಸಕಲಕಾರ್ಯಹೇತು. ವಿವಕ್ಷಿತಾರ್ಥತತ್ತ್ವಜ್ಞಾನತ್ವೇನ ಜನಕವಲ್ಲ. ಆದ್ದರಿಂದ ಅಸಿದ್ಧಿ ಇಲ್ಲ.

## ನ್ಯಾಯದೀಪದಲ್ಲಿ ಅವತಾರಿಕೆ

**ಯೋಗ್ಯತಾಜ್ಞಾನಂ ಗುಣಃ ಇತಿ ಮತೇ ಆಹ–ಯಥಾರ್ಥೇತಿ ॥**

ಹಿಂದೆ ಶಾಬ್ದಪ್ರಮಾಕ್ಕೆ ಯಥಾರ್ಥವಾಕ್ಯಾರ್ಥಜ್ಞಾನಂ ಗುಣಃ, ಎಂಬ ಪಕ್ಷವನ್ನು ನಿರಾಕರಿಸಲಾಯಿತು. ಮುಂದಿನ ಗ್ರಂಥದಲ್ಲಿ ಯೋಗ್ಯತಾಜ್ಞಾನಂ ಗುಣಃ, ಎಂಬ ಪಕ್ಷವನ್ನು ನಿರಾಕರಿಸುತ್ತಾರೆ.

**यथार्थयोग्यताज्ञानं, न शाब्दप्रमाजनकम् । तव्द्यतिरेकापादन-प्रयोजकापादन-विषयव्यतिरेकाप्रतियोगित्वात् । पाकजगन्धे रस-प्रागभाववत् ॥**

**न चात्रासिद्धिः । उक्तरीत्या योग्यतायां स्वरूपतः सत्यामनन्वय-निश्चयविरहेणैव शाब्दप्रमोपपत्त्या 'यदि यथार्थयोग्यताज्ञानं न स्यात्तर्हि शाब्दीप्रमा न स्यात्' इत्यापादनासम्भवात् ॥**

ಪಕ್ಷ—ಯಥಾರ್ಥ ಯೋಗ್ಯತಾಜ್ಞಾನವು.

---

ಎಂಬ ಮುಂದಿನ ಗ್ರಂಥಕ್ಕೆ ಸಾಂಗತ್ಯವಿಲ್ಲ. ಮೂರನ್ನು ತೆಗೆದುಕೊಂಡರೆ ಒಂದಕ್ಕೆ ಮಾತ್ರ ಅಸಿದ್ಧಿಪರಿಹಾರ ಮಾಡಿರುವುದು ಅಸಂಗತವಾಗುತ್ತದೆ. ಆದರೂ, ಆ ಪಕ್ಷದಲ್ಲಿ ಸಾಂಗತ್ಯವನ್ನು ರಾಯರು ತೋರಿಸಿದ್ದಾರೆ. ವಸ್ತುತಃ 'ಕರಾದೌ ಚರಣಾದಿ' ಎಂಬ ವಿಷಯ ಹಿಂದೆ ಸಂಶೋಯೋತ್ತರ ಪ್ರತ್ಯಕ್ಷಕ್ಕೆ ಸಂಬಂಧಪಟ್ಟಂತೆ ಶ್ರುತವಾಗಿದೆ. ಆದರೂ, ಇಲ್ಲಿ ಅದನ್ನು ಅನುಮಿತಿ ಪರವಾಗಿ ಅರ್ಥೈಸಬೇಕು.

**ಸಾಧ್ಯ**—ಶಾಬ್ದಪ್ರಮಾಜನಕವಲ್ಲ.

**ಹೇತು**—ಶಾಬ್ದಬೋಧದ ಅಭಾವಾಪಾದನೆಗೆ ಪ್ರಯೋಜಕವಾದ ಆಪಾದನೆಗೆ ವಿಷಯವಾದ ಅಭಾವಕ್ಕೆ ಅಪ್ರತಿಯೋಗಿಯಾಗಿರುವುದರಿಂದ.

'ಯದಿ ಯಥಾರ್ಥ ಯೋಗ್ಯತಾಜ್ಞಾನಂ ನ ಸ್ಯಾತ್ ತರ್ಹಿ ಶಾಬ್ದಪ್ರಮಾ ನ ಸ್ಯಾತ್' ಎಂದು ಆಪಾನೆ ಮಾಡಲು ಬಂದಿದ್ದಿದ್ದರೆ ಆಗ ಶಾಬ್ದಪ್ರಮಾಭಾವಕ್ಕೆ ಪ್ರಯೋಜಕವಾದುದು ಯಥಾರ್ಥ ಯೋಗ್ಯತಾಜ್ಞಾನಾಭಾವ ಆಗುತ್ತಿತ್ತು. ಅದರಿಂದ ಅಂತಹ ಅಭಾವಕ್ಕೆ ಪ್ರತಿಯೋಗಿಯಾದುದು ಯಥಾರ್ಥಯೋಗ್ಯತಾಜ್ಞಾನವಾಗುತ್ತಿತ್ತು. ಆದರೆ, ಹಾಗೆ ಆಪಾದನೆ ಮಾಡಲು ಬರುವುದಿಲ್ಲ, ಅದನ್ನು ಮುಂದೆ ತಿಳಿಸಲಾಗಿದೆ.

**ಉದಾಹರಣೆ**—ಪಾಕಜಗಂಧಕ್ಕೆ ರಸಪ್ರಾಗಭಾವದಂತೆ.

ರಸಪ್ರಾಗಭಾವಾಭಾವೇ ಗಂಧಾಭಾವಃ, ಎಂದು ಹೇಳಲು ಬರುವುದಿಲ್ಲ, ಗಂಧಪ್ರಾಗಭಾವಕ್ಕೆ ಕಾರಣತ್ವವು ಕ್ಲೃಪ್ತವಾದುದರಿಂದ ಗಂಧಾಭಾವವು ಗಂಧಪ್ರಾಗಭಾವಾಭಾವ ಪ್ರಯುಕ್ತವೇ ಆಗಿದೆ. ಆದ್ದರಿಂದ ಅದರಲ್ಲಿ ಹೇತು ಸಾಧ್ಯಗಳು ಇವೆ.

ಈ ಅನುಮಾನದಲ್ಲಿ ಅಸಿದ್ಧಿದೋಷವಿಲ್ಲ. 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತಾ ಇದೆ. ಆದ್ದರಿಂದ ಶಾಬ್ದಪ್ರಮಾಕ್ಕೆ ಪ್ರತಿಬಂಧಕವಾದ ಅನನ್ವಯನಿಶ್ಚಯ ಇಲ್ಲ. ಆದ್ದರಿಂದಲೇ ಆ ವಾಕ್ಯದಿಂದ ಶಾಬ್ದ ಪ್ರಮಾ ಹುಟ್ಟುತ್ತದೆ. ಹೀಗೆ ಶಾಬ್ದಪ್ರಮಾಕ್ಕೆ ಅನನ್ವಯ ನಿಶ್ಚಯ ಪ್ರತಿಬಂಧಕ. ಅನ್ವಯಜ್ಞಾನವು (ಯೋಗ್ಯತಾಜ್ಞಾನವು) ಕಾರಣವಲ್ಲ, ಹೀಗಾಗಿ ಯೋಗ್ಯತಾಜ್ಞಾನಾಭಾವದಿಂದ ಶಾಬ್ದಪ್ರಮಾಭಾವವು ಬರುವ ಸಂಭವ ಇಲ್ಲ, ಆದ್ದರಿಂದ 'ಯದಿ ಯೋಗ್ಯತಾಜ್ಞಾನಂ ನ ಸ್ಯಾತ್ ತರ್ಹಿ ಶಾಬ್ದಪ್ರಮಾ ನ ಸ್ಯಾತ್' ಎಂದು ಆಪಾದನೆ ಮಾಡಲು ಬರುವುದಿಲ್ಲ.

## ನ್ಯಾಯದೀಪ

**ಯೋಗ್ಯತಾ ಚ ವಾಕ್ಯಾರ್ಥರೂಪ–ಸಂಸರ್ಗಸತ್ವಂ ವಾ ಪ್ರಾಗುಕ್ತದಿಶಾ ತದ್ ವ್ಯಾಪ್ಯಂ ಅನ್ಯದ್ವಾ (ಪ್ರ.13) ಇತಿ ಭಾವಃ। ತದಿತಿ ॥ ಶಾಬ್ದಪ್ರಮಾವ್ಯತಿರೇಕಾಪಾದನೇ ಪ್ರಯೋಜಕಂ=ನಿಮಿತ್ತಂ ಯದಾಪಾದನಂ ತದ್ವಿಷಯೇತ್ಯರ್ಥಃ। ಆಪಾದನ ಪ್ರಕಾರಶ್ಚ ಅಗ್ರೇ ವ್ಯಕ್ತಃ।**

**ಪಾಕಜೇತಿ ॥ ತತ್ರ,ಯದಿ ರಸಪ್ರಾಗಭಾವಃ ನ ಸ್ಯಾತ್ ತದಾ ಗಂಧಃ ನ ಸ್ಯಾತ್ ಇತಿ ನಾಸ್ತಿ। ರಸಪ್ರಾಗಭಾವಸ್ಯ, ಕಾರಣತಾವಾದೇ ಮಣ್ಯುಕ್ತದಿಶಾ ಕ್ಲೃಪ್ತಕಾರಣ–ಗಂಧಪ್ರಾಗಭಾವಸಾಹಿತ್ಯರೂಪಾ–ನ್ಯಥಾಸಿದ್ಧತ್ವೇನ ಗಂಧವ್ಯತಿರೇಕಾಪಾದನ–ಪ್ರಯೋಜಕ–ಆಪಾದನವಿಷಯ–ವ್ಯತಿರೇಕ–ಅಪ್ರತಿಯೋಗಿತ್ವಮತ ಏವ**

**ತದಕಜನಕತ್ವಂ ಚ ಇತಿ ಭಾವಃ। ಉಕ್ತರೀತ್ಯೇತಿ ॥ ಪ್ರತ್ಯಕ್ಷಾದೌ ಅನುಗತಗುಣಭಂಗೇ ಉಕ್ತರೀತ್ಯಾ (ಪ್ರ.13) ಇತ್ಯರ್ಥಃ।**

ಯೋಗ್ಯತಾ ಎಂದರೆ ಪದಾರ್ಥದ್ವಯ ಸಂಸರ್ಗತ್ವರೂಪ ಅಥವಾ ತದ್‌ವ್ಯಾಪ್ಯವಾದ ಧರ್ಮವಿಶೇಷ ಎಂದು ಹಿಂದೆ (ಪು.629) ಹೇಳಲಾಗಿದೆ.

ಹೇತುವಿನಲ್ಲಿ ತತ್ ಎಂದರೆ ಶಾಬ್ದಪ್ರಮಾ. ತದ್‌ವ್ಯತಿರೇಕ ಎಂದರೆ ಶಾಬ್ದಪ್ರಮಾಭಾವ. ಅದರ ಆಪಾದನೆಗೆ ಪ್ರಯೋಜಕ ಎಂದರೆ ನಿಮಿತ್ತವಾದ ಯಾವ ಆಪಾದನೆ ಇದೆಯೋ ಅದಕ್ಕೆ ವಿಷಯವಾದುದು ಯೋಗ್ಯತಾಜ್ಞಾನಾಭಾವ. ಆಪಾದನೆ ಮಾಡುವ ಕ್ರಮವನ್ನು ಮೂಲದಲ್ಲೇ ಮುಂದೆ ಹೇಳಲಾಗಿದೆ.

ದೃಷ್ಟಾಂತದಲ್ಲಿ— 'ಯದಿ ರಸಪ್ರಾಗಭಾವಃ ನ ಸ್ಯಾತ್ ತದಾ ಗಂಧೋ ನ ಸ್ಯಾತ್' ಎಂದು ಆಪಾದನೆ ಮಾಡಲು ಬರುವುದಿಲ್ಲ. ಮಣಿಗ್ರಂಥದಲ್ಲಿ, ಕಾರಣತಾವಾದ ಪ್ರಕರಣದಲ್ಲಿ ರಸಪ್ರಾಗಭಾವಕ್ಕೆ ಗಂಧಪ್ರಾಗಭಾವದ ಸಾಹಿತ್ಯವು ಇದ್ದರೂ ರಸಪ್ರಾಗಭಾವವು ಗಂಧಕ್ಕೆ ಅನ್ಯಥಾಸಿದ್ಧ. ಆದ್ದರಿಂದ ಗಂಧವ್ಯತಿರೇಕಾಪಾದನಕ್ಕೆ ಪ್ರಯೋಜಕವಾದ ಆಪಾದನಾವಿಷಯವಾದ ವ್ಯತಿರೇಕಕ್ಕೆ ಪ್ರತಿಯೋಗಿ ರಸಪ್ರಾಗಭಾವವಲ್ಲ. ಆದ್ದರಿಂದ ಅದು ಗಂಧಜನಕವಲ್ಲ, ಎಂದು ಹೇಳಲಾಗಿದೆ.

**यज्ञपतिमते, अनित्यप्रमात्वं न स्वाश्रयमात्रवृत्तिधर्मावच्छिन्ननानावृत्तिकार्यताश्रयमात्रवृत्ति । विषयमात्रोपाधिकधर्मत्वात् । घटज्ञानत्ववत् ।**

**तत्तत्प्रागभावनिरूपितकार्यताश्रयत्वेन बाध इति शङ्कानिरासाय नानावृत्तीत्युक्तम् । नात्रासिद्धिः । प्रमात्वस्य विषयमात्रोपाधिकत्वात् ॥**

ಯಜ್ಞಪತ್ಯುಪಾಧ್ಯಾಯರ ಮತದಲ್ಲಿ—ಅನಿತ್ಯಪ್ರಮಾತ್ವವು ಗುಣಜನ್ಯತಾವಚ್ಛೇದಕವಲ್ಲದಿದ್ದರೂ ತದಾಶ್ರಯ ಮಾತ್ರವೃತ್ತಿಯಾದ ಪ್ರತ್ಯಕ್ಷಪ್ರಮಾತ್ವಾದಿಗಳಿಗೆ ಅನನುಗತವಾದ ಗುಣಗಳು ಇರುವುದರಿಂದ ಅನಿತ್ಯಪ್ರಮಾ ಗುಣಜನ್ಯವಾಗಿದೆ. ಈ ಮತಕ್ಕೆ ವಿರುದ್ಧವಾಗುವ ಅನುಮಾನ ಹೀಗೆ—

**ಪಕ್ಷ**—ಅನಿತ್ಯಪ್ರಮಾತ್ವವು.

**ಸಾಧ್ಯ**—ಸ್ವಾಶ್ರಯವಾದ ಅನಿತ್ಯಪ್ರಮಾದಲ್ಲಿ ಮಾತ್ರ ಇರುವ ಪ್ರತ್ಯಕ್ಷಪ್ರಮಾತ್ವಾದಿ ಅನೇಕ ಧರ್ಮಾವಚ್ಛಿನ್ನವಾದ, ನಾನಾಕಾರ್ಯಗಳಲ್ಲಿ ಇರುವ ಯಾವ ಕಾರ್ಯತಾ ಇದೆಯೋ ತದಾಶ್ರಯ ಮಾತ್ರದಲ್ಲಿ ಇಲ್ಲ.

ಅನಿತ್ಯಪ್ರಮಾತ್ವವ್ಯಾಪ್ಯವಾದ ಪ್ರತ್ಯಕ್ಷಪ್ರಮಾತ್ವ, ಅನುಮಿತಿಪ್ರಮಾತ್ವ, ಶಾಬ್ದಪ್ರಮಾತ್ವಾದಿ ಪ್ರತ್ಯೇಕ-ಧರ್ಮಾವಚ್ಛಿನ್ನಗಳಿಗೆ ಒಂದು ಕಾರಣಗಳಿಲ್ಲ, ಅವುಗಳಿಗೆ ಪ್ರತ್ಯೇಕವಾದ ಒಂದು ಕಾರಣಗಳು ಇದ್ದಲ್ಲಿ ತತ್ತನಿರೂಪಿತ-ಪ್ರತ್ಯಕ್ಷ-ಪ್ರಮಾತ್ವಾದ್ಯವಚಿನ್ನಕಾರ್ಯತಾಗಳು ಇರಬಹುದು. ತಾದಾತ್ರಯಗಳಲ್ಲಿ ಅನಿತ್ಯಪ್ರಮಾತ್ವವು ಇರುತ್ತಿತ್ತು. ಅಂತಹ ಕಾರಣಗಳು ಇಲ್ಲವಾದುದರಿಂದ ಅನಿತ್ಯ ಪ್ರಮಾತ್ವವು ತಾದೃಶಕಾರ್ಯತಾಶ್ರಯದಲ್ಲಿ ಇಲ್ಲ. ಇದರ ಪರ್ಯವಸಾನ, ಪ್ರತ್ಯಕ್ಷ ಪ್ರಮಾದಿಗಳಿಗೆ ಒಂದು ಅನುಗತಕಾರಣವಿಲ್ಲ, ಎಂದು.

**ಹೇತು**—ಪ್ರಮಾತ್ವವು ವಿಷಯ-ಮಾತ್ರೋಪಾಧಿಕವಾದ ಧರ್ಮವಾಗಿದೆ. ಹೇಗೆಂದರೆ, ಯಥಾವಸ್ಥಿತಾರ್ಥ-ಮಾತ್ರವಿಷಯಕತ್ವಂ ಪ್ರಮಾತ್ವಮ್. ಹೀಗೆ ಪ್ರಮಾತ್ವಶರೀರದಲ್ಲಿ ವಿಷಯವು ಪ್ರವಿಷ್ಟವಾದುದರಿಂದ ಅದು ವಿಷಯಮಾತ್ರ-ಉಪಾಧಿಕ ಧರ್ಮವಾಗಿದೆ.

**ದೃಷ್ಟಾಂತ**—ಘಟಜ್ಞಾನತ್ವ, ತದ್‌ವ್ಯಾಪ್ಯವಾದ ಕಿಂಚಿದ್ಧರ್ಮಾವಚ್ಛಿನ್ನಕಾರ್ಯತಾ ಇಲ್ಲ. ಆದ್ದರಿಂದ ಅದರಲ್ಲಿ ಸಾಧ್ಯವು ಬರುತ್ತದೆ. ಅದೂ ಘಟರೂಪವಾದ ವಿಷಯೋಪಾಧಿಕ ಧರ್ಮವಾದುದರಿಂದ ಹೇತುವೂ ಇದೆ.

ಈ ಅನುಮಾನದ ಸಾಧ್ಯದಲ್ಲಿ, ಕಾರ್ಯತಾದಲ್ಲಿ ನಾನಾವೃತ್ತಿ ಎಂಬ, ಯಜ್ಞಪತ್ಯು ಪಾಧ್ಯಾಯರು ಸೇರಿಸದ ವಿಶೇಷಣವನ್ನು ಸೇರಿಸಲಾಗಿದೆ. ಅದನ್ನು ಸೇರಿಸದಿದ್ದರೆ, ಅನಿತ್ಯಪ್ರಮಾತ್ವವ್ಯಾಪ್ಯಧರ್ಮಗಳು ತತ್ತತ್‌ಪ್ರಮಾತ್ವಗಳು. ತದವಚ್ಛಿನ್ನಕ್ಕೆ ತತ್ತತ್‌ಪ್ರಮಾಪ್ರಾಗಭಾವ ಗಳು ಕಾರಣಗಳು. ಹೀಗೆ ತತ್ತತ್ ಪ್ರಮಾತ್ವಾವಚ್ಛಿನ್ನ ಕಾರ್ಯತಾಶ್ರಯ ಮಾತ್ರವೃತ್ತಿತ್ವವೇ ಅನಿತ್ಯಪ್ರಮಾತ್ವದಲ್ಲಿ ಇದೆ, ತದಭಾವ ಇಲ್ಲ. ಆದ್ದರಿಂದ ಬಾಧದೋಷ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ನಾನಾವೃತ್ತಿ ಎಂಬ ವಿಶೇಷಣವನ್ನು ಕೊಡಲಾಗಿದೆ. ತತ್ತತ್‌ಪ್ರಮಾತ್ವಾವಚ್ಛಿನ್ನ ಕಾರ್ಯತಾವು ಏಕಮಾತ್ರವೃತ್ತಿಯಾದುದರಿಂದ ಬಾಧವಿಲ್ಲ.

ಈ ಅನುಮಾನದಲ್ಲಿ ಹೇತ್ವಸಿದ್ಧಿದೋಷವೂ ಇಲ್ಲ. ಹಿಂದೆ ಹೇಳಿದಂತೆ ಪ್ರಮಾತ್ವವು ವಿಷಯಮಾತ್ರ-ಉಪಾಧಿಕ ಧರ್ಮವಾಗಿದೆ.

## ನ್ಯಾಯದೀಪ

**ಯಜ್ಞಪತೀತಿ ॥ ತನ್ಮತೇ ಹಿ ಸ್ವಾಶ್ರಯಮಾತ್ರವೃತ್ತಿ-ಧರ್ಮಾವಚ್ಛಿನ್ನ-ಕಾರ್ಯತಾಶ್ರಯ-ಮಾತ್ರವೃತ್ತಿತ್ವಮೇವ ಪ್ರಮಾತ್ವಸ್ಯ ಪರತಸ್ತ್ವಮ್, ಇತ್ಯುಪೇತ್ಯ ಅನನುಗತಗುಣಜನ್ಯತ್ವೇನಾಪಿ ಏತತ್ ಸಿದ್ಧ್ಯತಿ, ಇತ್ಯುಕ್ತ್ವಾ ಅನಿತ್ಯಪ್ರಮಾತ್ವಂ, ಸ್ವಾಶ್ರಯಮಾತ್ರವೃತ್ತಿ-ಧರ್ಮಾವಚ್ಛಿನ್ನ-ಕಾರ್ಯತಾಶ್ರಯ**

**ಮಾತ್ರವೃತ್ತಿ, ಇತ್ಯಾದಿ ಅನುಮಾನಮ್ ಉಕ್ತಮ್। (ಪು.572) ತತ್ ಪ್ರತ್ಯನುಮಾನಮಾಹ–ಅನಿತ್ಯೇತಿ॥ ಸಿದ್ಧಸಾಧನತಾನಿರಾಸಾಯ ಅನಿತ್ಯೇತ್ಯುಕ್ತಿಃ।**

ಯಜ್ಞಪತ್ಯುಪಾಧ್ಯಾಯರು, ಅನಿತ್ಯಪ್ರಮಾಸಾಮಾನ್ಯಕ್ಕೆ ಅನುಗತವಾದ ಒಂದು ಗುಣವು ಇಲ್ಲದಿದ್ದರೂ ತದ್ವಿಶೇಷವಾದ ಪ್ರತ್ಯಕ್ಷಾದಿಪ್ರಮಾಗಳಿಗೆ ಗುಣವಿಶೇಷಗಳು ಇರುವುದರಿಂದ, ತಾದೃಶ ಗುಣಜನ್ಯವಾದುದರಲ್ಲಿ ಮಾತ್ರ ಅನಿತ್ಯಪ್ರಮಾತ್ವ ಇದೆ, ಆದ್ದರಿಂದ ಅನಿತ್ಯಪ್ರಮಾತ್ವಕ್ಕೆ ಪರತಸ್ತ್ವವು ಉಪಪನ್ನವಾಗುತ್ತದೆ, ಎನ್ನುವ ಅಭಿಪ್ರಾಯದಿಂದ ಹೀಗೊಂದು ಅನುಮಾನವನ್ನು ಮಾಡಿದ್ದಾರೆ—

ಅನಿತ್ಯಪ್ರಮಾತ್ವವು, ಸ್ವಾಶ್ರಯವಾದ ಅನಿತ್ಯಪ್ರಮಾದಲ್ಲಿ ಮಾತ್ರವೇ ಇರುವ ಪ್ರತ್ಯಕ್ಷ ಪ್ರಮಾತ್ವಾದಿ-ಧರ್ಮಾವಚ್ಛಿನ್ನವಾದ ಕಾರ್ಯತಾಗಳಿಗೆ ಆಶ್ರಯವಾದ ಪ್ರತ್ಯಕ್ಷಪ್ರಮಾದಿಗಳಲ್ಲಿ ಮಾತ್ರ ಇರುವ ಧರ್ಮವಾಗಿದೆ, ಎಂದ. (ಪು.572) ಈ ಅನುಮಾನಕ್ಕೆ ಪ್ರತಿಯಾದ ಅನುಮಾನವನ್ನು ಪ್ರಕೃತ ಮೂಲದಲ್ಲಿ ಹೇಳಲಾಗಿದೆ.

ಈ ಅನುಮಾನದ ಪಕ್ಷದಲ್ಲಿ ಅನಿತ್ಯಪದವನ್ನು ಬಿಟ್ಟರೆ ಪ್ರಮಾತ್ವಂ, ಎಂದಿಷ್ಟೇ ಪಕ್ಷವಾಗುತ್ತದೆ. ಆಗ ಸಿದ್ಧಸಾಧನತಾದೋಷ ಬರುತ್ತದೆ. ಏಕೆಂದರೆ, ಪ್ರಮಾತ್ವವು ಈಶ್ವರಪ್ರಮಾದಲ್ಲೂ ಇದೆ. ಅದು ನಿತ್ಯ. ಆದ್ದರಿಂದ ಪ್ರಮಾತ್ವವು ಕಾರ್ಯಮಾತ್ರ ವೃತ್ತಿ ಅಲ್ಲ, ಎನ್ನುವ ಸಾಧ್ಯ ಪರತಸ್ತ್ವಾದಿಗಳಿಗೂ ಸಿದ್ಧವಾಗಿದೆ. ಅದರ ಪರಿಹಾರಕ್ಕಾಗಿ ಅನಿತ್ಯಪ್ರಮಾತ್ವಂ, ಎಂದು ಪಕ್ಷಮಾಡಲಾಗಿದೆ.

## ನ್ಯಾಯದೀಪ

**ಸ್ವೇತಿ ॥ ಸ್ವಸ್ಯ=ಅನಿತ್ಯಪ್ರಮಾತ್ವಸ್ಯ ಆಶ್ರಯಮಾತ್ರವರ್ತೀ ಧರ್ಮಃ= ಪ್ರತ್ಯಕ್ಷತ್ವಾದಿಃ। ತದವಚ್ಛಿನ್ನಾ, ನಾನಾವೃತ್ತಿಃ=ಅನೇಕವೃತ್ತಿಶ್ಚ ಯಾ ಕಾರ್ಯತಾ, ತದಾಶ್ರಯಮಾತ್ರವೃತ್ತಿ ನ ಭವತಿ, ಇತ್ಯರ್ಥಃ।**

**ಅತ್ರಾದ್ಯಂ ಮಾತ್ರಪದಂ ಅನಿತ್ಯಪ್ರಮಾತ್ವಸ್ಯ ಸ್ವಾಧಿಕದೇಶವೃತ್ತಿನಾ ಅನಿತ್ಯ-ಜ್ಞಾನತ್ವೇನ ಅವಚ್ಛಿನ್ನ–ನಾನಾವೃತ್ತಿ–ಕಾರ್ಯತಾಶ್ರಯೇ ಏವ ವರ್ತನಾತ್ ಬಾಧನಿರಾಸಾಯ।**

**ದ್ವಿತೀಯಮಪಿ ತನ್ನಿರಾಸಾಯೈವ। ಅನ್ಯಥಾ ಅನಿತ್ಯಪ್ರಮಾತ್ವಸ್ಯ ತಾದೃಶ–ಪ್ರತ್ಯಕ್ಷತ್ವ–ಅನುಮಿತಿತ್ವ–ಚಾಕ್ಷುಷತ್ವಾದಿ–ಧರ್ಮಾವಚ್ಛಿನ್ನ–ಕಾರ್ಯತಾಶ್ರಯ ವೃತ್ತಿತಯಾ ಬಾಧಾಪತ್ತೇಃ।**

**ಅತ್ರ, ಅನಿತ್ಯಪ್ರಮಾತ್ವಸ್ಯ ಸ್ವಾಶ್ರಯಮಾತ್ರವೃತ್ತಿ–ಪ್ರತ್ಯಕ್ಷತ್ವಾದಿ–ಧರ್ಮ-ಸಮಾನಾಧಿಕರಣ–ಕಾರ್ಯತಾಶ್ರಯೇ ಏವ ಸತ್ತ್ವೇನ ತದ್–ವೃತ್ತಿತ್ವಾಭಾವೇನ**

**ಸಾಧ್ಯಪರ್ಯವಸಾನೇ ಬಾಧಾತ್, ಜನ್ಯಪ್ರತ್ಯಕ್ಷಪ್ರಮಾತ್ವಾದೇಃ ಪರಾಭಿಮತಾ-ವಚ್ಛೇದಕತ್ವಸ್ಯ ಅಭಾವೇನೈವ ಸಾಧ್ಯಪರ್ಯವಸಾನಮ್, ಇತಿ ಭಾವಃ । ಸ್ವಪದಂ ಸಮಭಿವ್ಯಾಹೃತಪರಮ್ ।**

ಸಾಧ್ಯಸಮನ್ವಯ ಹೀಗೆ— ಸ್ವಸ್ಯ=ಪಕ್ಷವಾದ ಅನಿತ್ಯಪ್ರಮಾತ್ವಕ್ಕೆ ಆಶ್ರಯವಾದ ಅನಿತ್ಯಪ್ರಮಾದಲ್ಲಿ ಮಾತ್ರವೇ ಇರುವ ಧರ್ಮ ಎಂದರೆ, ಪ್ರತ್ಯಕ್ಷತ್ವ. ಯದ್ಯಪಿ ಪ್ರತ್ಯಕ್ಷತ್ವವು ಭ್ರಮೆಯಲ್ಲೂ ಇದೆ. ಆದರೆ, ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆದುದರಿಂದ ಅದರಲ್ಲೂ ಅನಿತ್ಯಪ್ರಮಾತ್ವವು ಇದೆ. ಹೀಗೆ; ಪ್ರತ್ಯಕ್ಷತ್ವವು ಅನಿತ್ಯಪ್ರಮಾತ್ವಾಶ್ರಯ ಮಾತ್ರ ವೃತ್ತಿಯಾಗುತ್ತದೆ. ತದಧಿಕವೃತ್ತಿಯಲ್ಲ. ತಾದೃಶಧರ್ಮ–ಸಮಾನಾಧಿಕರಣಕಾರ್ಯತಾ=ಜನ್ಯಪ್ರತ್ಯಕ್ಷ ಪ್ರಮಾತ್ವಾದ್ಯವಚಿನ್ನಕಾರ್ಯತಾ. ತದಾಶ್ರಯದಲ್ಲೇ ಅನಿತ್ಯಪ್ರಮಾತ್ವ ಇದೆ. ತದಾಶ್ರಯಾವೃತ್ತಿತ್ವ ಎಂಬ ಸಾಧ್ಯವು ಪಕ್ಷದಲ್ಲಿ ಬರುವುದಿಲ್ಲ. ಬಾಧ ಬರುತ್ತದೆ. ಹೀಗಾಗಿ ಪಕ್ಷದಲ್ಲಿ ಸಾಧ್ಯವನ್ನು ಪರ್ಯವಸಾನ ಮಾಡಬೇಕಾದರೆ ಅನಿತ್ಯಪ್ರತ್ಯಕ್ಷಪ್ರಮಾದಿಗಳಿಗೆ ಗುಣವು ಕಾರಣ, ಎಂಬ ಯಜ್ಞಪತ್ಯುಪಾಧ್ಯಾಯರ ಪಕ್ಷವನ್ನು ಬಿಡುವುದು ಅನಿವಾರ್ಯವಾಗುತ್ತದೆ. ಹೀಗೆ ವಿವಕ್ಷಿತಾರ್ಥ ಸಿದ್ಧಿಯಾಗುತ್ತದೆ. ಆದ್ದರಿಂದ ಸಾಧ್ಯಪರ್ಯವಸಾನಮಾಡಬೇಕಾದರೆ ಪರೋಕ್ತವಾದ ಜನ್ಯಪ್ರತ್ಯಕ್ಷ ಪ್ರಮಾತ್ವವು ಗುಣಕಾರ್ಯತಾವಚ್ಛೇದಕವಲ್ಲ, ಅದಕ್ಕೆ ಕಾರಣವಾದ ಗುಣ ಇಲ್ಲ. ಹೀಗೆ ಗುಣನಿರೂಪಿತ ತದವಚ್ಛಿನ್ನಕಾರ್ಯತಾವು ಅಪ್ರಸಿದ್ಧವಾದುದರಿಂದ, ತಾದೃಶಕಾರ್ಯತಾಶ್ರಯ ಮಾತ್ರವೃತ್ತಿತ್ವವು ಅನಿತ್ಯಪ್ರಮಾತ್ವದಲ್ಲಿ ಇಲ್ಲ, ಎಂದು ಹೇಳಿಯೇ ಸಾಧ್ಯವನ್ನು ಪರ್ಯವಸಾನ ಮಾಡಬೇಕಾಗುತ್ತದೆ. ಆದ್ದರಿಂದ ಇದು ಪರೋಕ್ತಾನುಮಾನಕ್ಕೆ ಪ್ರತಿಪಕ್ಷವಾಗುತ್ತದೆ. (ಇದು ಕೊನೆಯ ಪಾರಾದ ಅರ್ಥ)

ಸಾಧ್ಯಶರೀರದಲ್ಲಿರುವ ಮೊದಲನೆಯ ಮಾತ್ರಪದವನ್ನು ಬಿಟ್ಟರೆ ಬಾಧದೋಷ ಬರುತ್ತದೆ. ಅನಿತ್ಯಪ್ರಮಾತ್ವಾಧಿಕರಣವೃತ್ತಿಯಾದ, ಪ್ರಮಾತ್ವಾಧಿಕದೇಶವೃತ್ತಿಯಾದ ಧರ್ಮ ಅನಿತ್ಯಜ್ಞಾನತ್ವ. ತದವಚ್ಛಿನ್ನಕ್ಕೆ ಆತ್ಮಮನೋಯೋಗವು ಕಾರಣ. ತಥಾಚ, ತದವಚ್ಛಿನ್ನಕಾರ್ಯತಾ ಪ್ರಸಿದ್ಧವಾಗಿದೆ. ತದಾಶ್ರಯವಾದ ಅನೇಕ ಅನಿತ್ಯಜ್ಞಾನಗಳು ಇರುವುದರಿಂದ ಆ ಕಾರ್ಯತಾವು ನಾನಾವೃತ್ತಿಯೂ ಆಗಿದೆ. ತಾದೃಶಕಾರ್ಯತಾಶ್ರಯದಲ್ಲೇ ಅನಿತ್ಯಪ್ರಮಾತ್ವವು ಇರುವುದರಿಂದ ತದಭಾವ ಬರುವುದಿಲ್ಲ, ಬಾಧ. ಮೊದಲ ಮಾತ್ರಪದವನ್ನು ಕೊಟ್ಟರೆ ಈ ಬಾಧದೋಷವು ಪರಿಹಾರವಾಗುತ್ತದೆ. ಅನಿತ್ಯಜ್ಞಾನತ್ವವು ಅನಿತ್ಯಪ್ರಮಾತ್ವ ಇಲ್ಲದಿರುವ ಭ್ರಮೆಯಲ್ಲೂ ಇರುವುದರಿಂದ ತದಾಶ್ರಯ ಮಾತ್ರ ವೃತ್ತಿ ಅಲ್ಲ. ಆದ್ದರಿಂದ ಅದರ ಸಂಗ್ರಹವಾಗುವುದಿಲ್ಲ.

ಎರಡನೆಯ ಮಾತ್ರಪದವೂ ಬಾಧವಾರಣೆಗಾಗಿಯೇ ಇದೆ. ಅದನ್ನು ಬಿಟ್ಟರೆ, ಅನಿತ್ಯಪ್ರಮಾತ್ವಾಶ್ರಯಮಾತ್ರ ವೃತ್ತಿಧರ್ಮ ಎಂದರೆ ಪ್ರತ್ಯಕ್ಷತ್ವ–ಅನುಮಿತಿತ್ವ–ಚಾಕ್ಷುಷತ್ವಾದಿ ಧರ್ಮಗಳು. ತದವಚ್ಛಿನ್ನಕಾರ್ಯತಾಶ್ರಯವಾದುದು ಪ್ರತ್ಯಕ್ಷಾದಿಗಳು. ತದ್‌ವೃತ್ತಿಧರ್ಮವಾಗಿದೆ

ಅನಿತ್ಯಪ್ರಮಾತ್ವ. ಅವೃತ್ತಿತ್ವರೂಪ ಸಾಧ್ಯ ಬರಲಿಲ್ಲ, ಬಾಧ. ಮಾತ್ರಪದ ಇದ್ದರೆ, ಹಿಂದೆ ಹೇಳಿದಂತೆ ಪರೋಕ್ತಗುಣಜನ್ಯತ್ವವನ್ನು ನಿರಾಕರಿಸಿ ಸಾಧ್ಯವನ್ನು ಪರ್ಯವಸಾನಗೊಳಿಸಬಹುದು. ಹೇಗೆಂದರೆ,

ಸಾಧ್ಯವನ್ನು ಪಕ್ಷದಲ್ಲಿ ಪರ್ಯವಸಾನಮಾಡಬೇಕಾದರೆ ಯಜ್ಞಪತ್ಯುಪಾಧ್ಯಾಯರು ಒಪ್ಪಿರುವ ಜನ್ಯಪ್ರತ್ಯಕ್ಷಪ್ರಮಾತ್ವಾವಚ್ಛಿನ್ನಂ ಪ್ರತಿ ಗುಣವಿಶೇಷಃ ಕಾರಣಂ, ಇತ್ಯಾದಿ ಕಾರ್ಯಕಾರಣ ಭಾವವನ್ನು ಬಿಡಬೇಕಾಗುತ್ತದೆ. ಇಲ್ಲದಿದ್ದರೆ ಬಾಧ ಬರುತ್ತದೆ–ಅನಿತ್ಯಪ್ರಮಾತ್ವ–ಆಶ್ರಯಮಾತ್ರ ವೃತ್ತಿಯಾದ ಧರ್ಮಗಳು ಪ್ರತ್ಯಕ್ಷತ್ವಾದಿ ಧರ್ಮಗಳು. ತದವಚ್ಛಿನ್ನಂ ಪ್ರತಿ ಕಾರಣವಾದ ಚಕ್ಷುರಾದಿಗಳು ಸಿದ್ಧ. ಅನಿತ್ಯಪ್ರಮಾತ್ವವು ತತೋ ಅಧಿಕ ದೇಶದಲ್ಲಿ ಇಲ್ಲದಿರುವುದರಿಂದ ತತ್ತದವಚ್ಛಿನ್ನಕಾರ್ಯತಾಶ್ರಯ ಮಾತ್ರ ವೃತ್ತಿಧರ್ಮವೇ ಆಗಿದೆ. ಹೀಗೆ ಬಾಧ ಬರುತ್ತದೆ. ಆದ್ದರಿಂದ, ಅನಿತ್ಯಪ್ರಮಾತ್ವಾಧಿಕರಣಮಾತ್ರವೃತ್ತಿಧರ್ಮ ಎಂದರೆ ತದಧಿಕದೇಶದಲ್ಲಿ ಇರದ ಪ್ರತ್ಯಕ್ಷಪ್ರಮಾತ್ವಾದಿ ಧರ್ಮಗಳು. ಅವುಗಳು ಕಾರ್ಯತಾವಚ್ಛೇದಕಗಳು ಅಲ್ಲ. ಏಕೆಂದರೆ, ಪ್ರತ್ಯಕ್ಷಪ್ರಮಾಕ್ಕೆ ಕಾರಣವಾದ ಅನುಗತಗುಣ ಇಲ್ಲ. ತದವಚ್ಛಿನ್ನಕಾರ್ಯತಾ ಅಪ್ರಸಿದ್ಧ. ಆದ್ದರಿಂದ ತಾದೃಶಕಾರ್ಯತಾಶ್ರಯಮಾತ್ರ–ಅವೃತ್ತಿತ್ವವು ಅನಿತ್ಯಪ್ರಮಾತ್ವದಲ್ಲಿ ಬರುತ್ತದೆ.

(ಇದಕ್ಕೆ ವಿರುದ್ಧವಾದ ಯಜ್ಞಪತ್ಯುಪಾಧ್ಯಾಯರ ಅನುಮಾನ, ಪ್ರಕರಣ 12ರಲ್ಲಿ ಇದೆ)

## ನ್ಯಾಯದೀಪ

**ಅಪ್ರಮಾತ್ವೇ ವ್ಯಭಿಚಾರವಾರಣಾಯ ವಿಷಯಮಾತ್ರೋಪಾಧಿಕೇತಿ ಹೇತೌ ವಿಶೇಷಣಮ್ । ಅಪ್ರಮಾತ್ವಸ್ಯ ಅನನುಗತ–ಪಿತ್ತಾದಿದೋಷಜನ್ಯತಾವಚ್ಛೇದಕ–ಧರ್ಮಾವಚ್ಛಿನ್ನ–ನಾನಾವೃತ್ತಿ–ಕಾರ್ಯತಾಶ್ರಯಮಾತ್ರವೃತ್ತಿತ್ವೇನ ವಿಪಕ್ಷತ್ವೇಽಪಿ ಭ್ರಮಾವಿಷಯ–ತದಭಾವಘಟಿತತ್ವೇನ ಹೇತ್ವಭಾವಾತ್ ।**

**ವಿಷಯೋಪಾಧಿಕೇತ್ಯುಕ್ತೌ ಅಪಿ ಉಕ್ತದೋಷತಾದವಸ್ಥ್ಯಾತ್ ಮಾತ್ರೇತ್ಯುಕ್ತಿಃ । ವಿಷಯೋಪಾಧಿಕತ್ವೇ ಸತಿ ತದಿತರಾನುಪಾಧಿಕತ್ವಂ ಹಿ ತದರ್ಥಃ । ತತ್ರ ಜ್ಞಾನಾನ್ಯ–ತದಿತರಾನುಪಾಧಿಕೇತ್ಯರ್ಥಃ ಧ್ಯೇಯಃ । ತೇನ ಚ ಪ್ರಮಾತ್ವಸ್ಯ ವಿಷಯೇತರ–ಜ್ಞಾನೋಪಾಧಿಕತ್ವಾತ್ ಅಸಿದ್ಧಿಃ, ದೃಷ್ಟಾಂತೇ ಸಾಧನವೈಕಲ್ಯಂ ಚ ಇತಿ ಶಂಕಾನವಕಾಶಃ ।**

**ವಿಷಯಪದಂ ಚ ಸ್ವವಿಷಯಪರಮ್ । ತೇನ ಘಟ–ಪಟಾನ್ಯತರತ್ವೇ ಜ್ಞಾನವಿಷಯ–ಘಟ–ಪಟಮಾತ್ರೋಪಾಧಿಕೇ ಹೇತುಮತಿ, ಸ್ವಾಶ್ರಯಮಾತ್ರ–ವೃತ್ತಿ–ಘಟತ್ವ–ಪಟತ್ವಾವಚ್ಛಿನ್ನ–ನಾನಾವೃತ್ತಿಕಾರ್ಯತಾಶ್ರಯೇ ಏವ ವರ್ತಮಾನೇ ಸಾಧ್ಯಾಭಾವಾತ್ ವ್ಯಭಿಚಾರ ಇತಿ ಶಂಕಾನವಕಾಶಃ ।**

**ಯದ್ವಾ, ವಿಷಯತಯಾ ಉಪಾಧಿತ್ವವಿವಕ್ಷಾಯಾಃ ಅಗ್ರೇ ಸ್ಪಷ್ಟತ್ವಾತ್ ಸ್ವೇತಿ ನ ದೇಯಮ್ । ತಾವತಾ ಉಕ್ತಸ್ಥಲೇ ವ್ಯಭಿಚಾರ–ನಿರಾಸಾತ್ ।**

ಹೇತುಘಟಕವಿಶೇಷಣಗಳಿಗೆ ಕೃತ್ಯ ಹೀಗೆ— ಅಪ್ರಮಾತ್ವದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ವಿಷಯಮಾತ್ರೋಪಾಧಿಕ ಎಂಬ ವಿಶೇಷಣವನ್ನು ಹೇತುವಿನಲ್ಲಿ ಕೊಡಲಾಗಿದೆ. ಅದರಲ್ಲಿ ಸಾಧ್ಯ ಇಲ್ಲ. ಏಕೆಂದರೆ, ಅಪ್ರಮಾಕ್ಕೆ ಅನನುಗತವಾದ ಪಿತ್ತಾದಿದೋಷಗಳು ಕಾರಣ. ಆದ್ದರಿಂದ ತತ್ತದ್ದೋಷಜನ್ಯತಾವಚ್ಛೇಕ ಭ್ರಮವೃತ್ತಿಧರ್ಮವಿಶೇಷಾವಚ್ಛಿನ್ನವಾದ, ನಾನಾಕಾರ್ಯ (ಅನೇಕ ಭ್ರಮ) ವೃತ್ತಿಯಾದ ಕಾರ್ಯತಾಕ್ಕೆ ಆಶ್ರಯದಲ್ಲಿ ಮಾತ್ರ ಅಪ್ರಮಾತ್ವವು ವೃತ್ತಿಯಾಗಿದೆ, ಅವೃತ್ತಿಯಾಗಿಲ್ಲ, ಸಾಧ್ಯ ಇಲ್ಲ, ಧರ್ಮತ್ವ ಹೇತು ಇದೆ. ವ್ಯಭಿಚಾರ. ವಿಷಯಮಾತ್ರೋಪಾಧಿಕ ಧರ್ಮತ್ವಾತ್ ಎಂದು ವಿಶೇಷಣಕೊಟ್ಟರೆ ಅದರಲ್ಲಿ ಹೇತುವೂ ಬರುವುದಿಲ್ಲ. 'ತದಭಾವವತಿ ತತ್‌ಪ್ರಕಾರಕತ್ವಂ' ಇದೇ ಭ್ರಮತ್ವ. ಇದರಲ್ಲಿ ಸೇರಿರುವ ಅಭಾವವು ಭ್ರಮೆಯಲ್ಲಿ ವಿಷಯವಲ್ಲ. ಆದ್ದರಿಂದ ಭ್ರಮತ್ವ ವಿಷಯಮಾತ್ರೋಪಾಧಿಕ ಧರ್ಮವಲ್ಲ. ಆದ್ದರಿಂದ ವ್ಯಭಿಚಾರ ಇಲ್ಲ. ಮಾತ್ರಪದಕ್ಕೂ ಇದೇ ಕೃತ್ಯ. ಮಾತ್ರಪದವನ್ನು ಬಿಟ್ಟರೆ ವಿಷಯೋಪಾಧಿಕ–ಧರ್ಮಘಟಿತತ್ವಾತ್ ಎಂದು ಹೇತುವಾಗುತ್ತದೆ. ಭ್ರಮತ್ವದಲ್ಲಿ ವಿಷಯವಾಗಿರುವ ಪ್ರಕಾರವು ಸೇರಿದೆ. ಮಾತ್ರಪದ ಕೊಟ್ಟಾಗ ಅದರಲ್ಲಿ ಸ್ವವಿಷಯವಲ್ಲದ ಅಭಾವರೂಪಧರ್ಮವೂ ಘಟಕವಾದುದರಿಂದ ಹೇತುವು ಬರುವುದಿಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ. ಮಾತ್ರದಕ್ಕೆ ವಿಷಯೋಪಾಧಿಕತ್ವೇ ಸತಿ, ತದಿತರಾನುಪಾಧಿಕತ್ವಂ, ಎಂದರ್ಥ. ಭ್ರಮತ್ವವು ತದಿತರವಾದ ಅಭಾವೋಪಾಧಿಕವೂ ಆಗಿದೆ.

ಇನ್ನೊಂದು ಅಧಿಕಾಂಶವನ್ನೂ ಹೇತುವಿನಲ್ಲಿ ಸೇರಿಸಬೇಕು–ಜ್ಞಾನಾನ್ಯ–ವಿಷಯೇತರಾನು ಪಾಧಿಕತ್ವಂ, ಎಂದು ವಿವಕ್ಷೆ ಮಾಡಬೇಕು. ಇಲ್ಲದಿದ್ದರೆ ಅಸಿದ್ಧಿ ದೋಷ ಬರುತ್ತದೆ. ಏಕೆಂದರೆ, ಪಕ್ಷವಾದ ಪ್ರಮಾತ್ವಸ್ವರೂಪ–ತದ್ವಿತಿ ತತ್‌ಪ್ರಕಾರಕ ಜ್ಞಾನತ್ವ. ಅದರಲ್ಲಿ ಸ್ವವಿಷಯಾನ್ಯವಾದ (ಪ್ರಮಾ ವಿಷಯವಾಗದ) ಜ್ಞಾನರೂಪವಾದ ಉಪಾಧಿಯೂ ಇದೆ. ಅದಕ್ಕಾಗಿ ಜ್ಞಾನಾನ್ಯ ಎಂಬ ವಿಶೇಷಣ ಅಗತ್ಯ. ಇದರಿಂದಾಗಿಯೇ ಘಟಜ್ಞಾನತ್ವರೂಪ ದೃಷ್ಟಾಂತದಲ್ಲಿ ಸಾಧನವೈಕಲ್ಯವೂ ಪರಿಹಾರ ವಾಗುತ್ತದೆ.

ವಿಷಯೋಪಾಧಿಕತ್ವಂ, ಎಂಬಲ್ಲಿ ವಿಷಯ ಎಂದರೆ ಸ್ವವಿಷಯ ಎಂದೇ ವಿವಕ್ಷಿತ. ಸ್ವ ಎಂದರೆ ಪ್ರಕೃತವಾದ ಪ್ರಮಾ. ಅದಕ್ಕೆ ಉಪಾಧಿಯು ವಿಷಯವಾಗಿರಬೇಕು. ಹೀಗೆ ವಿವಕ್ಷೆ ಮಾಡದಿದ್ದರೆ ಘಟ–ಪಟಾನ್ಯತರತ್ವದಲ್ಲಿ ವ್ಯಭಿಚಾರ ಬರುತ್ತದೆ. ಘಟ–ಪಟಗಳೂ ಜ್ಞಾನಕ್ಕೆ ವಿಷಯವಾದುದರಿಂದ ಅನ್ಯತರತ್ವವು ವಿಷಯಮಾತ್ರೋಪಾಧಿಕವಾಯಿತು, ಹೇತು ಬಂತು. ಆದರೆ, ಸಾಧ್ಯ ಇಲ್ಲ. ಅನ್ಯತರತ್ವಾಧಿಕರಣ ಘಟ ಮತ್ತು ಪಟ. ತನ್ಮಾತ್ರವೃತ್ತಿಧರ್ಮಗಳು ಘಟತ್ವ ಮತ್ತು ಪಟತ್ವ. ತದವಚ್ಛಿನ್ನ ಪ್ರತ್ಯೇಕ–ಕಾರ್ಯತಾದ್ವಯಕ್ಕೆ ಆಶ್ರಯವಾದುದು ಘಟ–ಪಟಗಳು. ತನ್ಮಾತ್ರವೃತ್ತಿಯಾಗಿದೆ,

ಅನ್ಯತರತ್ವ ವೃತ್ತಿತ್ವಾಭಾವ ಇಲ್ಲ. ವ್ಯಭಿಚಾರ ಬರುತ್ತದೆ. ಸ್ವವಿಷಯ ಎಂದಾಗ ಪ್ರಕೃತ ಸ್ವ ಅನ್ಯರತ್ವ. ತದ್ವಿಷಯವಾದುದು ಅಪ್ರಸಿದ್ಧ, ಹೇತುವೂ ಬರುವುದಿಲ್ಲ, ವ್ಯಭಿಚಾರ ಇಲ್ಲ.

ಅಥವಾ ಸ್ವಪದದ ಅಗತ್ಯವಿಲ್ಲ. ಮುಂದೆ 'ವಿಷಯತ್ವೇನ ವಿಷಯೋಪಾಧಿಕಂ' ಎಂದು ವಿವಕ್ಷೆ ಮಾಡಲಾಗುತ್ತದೆ. ಪ್ರಮಾತ್ವ ಶರೀರದಲ್ಲಿ ವಿಶೇಷ್ಯತ್ವೇನ, ಪ್ರಕಾರತ್ವೇನ ವಿಷಯಗಳು ಉಪಾಧಿ ಗಳಾಗಿವೆ. ಆದರೆ, ಅನ್ಯತರತ್ವವು ಘಟತ್ವೇನ ಪಟತ್ವೇನ ವಿಷಯೋಪಾಧಿಕವಾಗಿದೆ. ಆದ್ದರಿಂದ ವ್ಯಭಿಚಾರದ ಪ್ರಸಕ್ತಿ ಇಲ್ಲ.

## ನ್ಯಾಯದೀಪ

**ಘಟಜ್ಞಾನತ್ವವದಿತಿ ।। ತತ್ರ ತದ್‌ವ್ಯಾಪ್ಯಸ್ಯ ಕಾರ್ಯತಾವಚ್ಛೇದಕಸ್ಯ ಕಸ್ಯಚಿತ್ ಅಭಾವಾತ್ ಸ್ವಾಶ್ರಯಮಾತ್ರವೃತ್ತಿ-ಧರ್ಮಾವಚ್ಛಿನ್ನ-ಕಾರ್ಯತಾಶ್ರಯಮಾತ್ರ ವೃತ್ತಿತ್ವಾಭಾವರೂಪಸಾಧ್ಯಮಸ್ತಿ । ನ ಚ ತತ್ರಾಪಿ ಘಟಪ್ರತ್ಯಕ್ಷತ್ವಂ, ಘಟಾನುಮಿತಿತ್ವಮ್ ಇತ್ಯಾದಿರೇವ ತದ್‌ವ್ಯಾಪ್ಯೋऽಸ್ತಿ, ಇತಿ ಶಂಕ್ಯಮ್ । ಘಟಪ್ರತ್ಯಕ್ಷತ್ವಾದ್ಯವಚ್ಛಿನ್ನ-ಕಾರ್ಯತಾಪ್ರತಿಯೋಗಿಕ-ಅನುಗತೈಕಕಾರಣಾಭಾವಾತ್ ನ ಘಟಪ್ರತ್ಯಕ್ಷತ್ವಾದಿಕಮ್ ಅವಚ್ಛೇದಕಮ್ । ಅಸ್ತು ವಾ ಅವಚ್ಛೇದಕಮ್ । ಅಥಾಪಿ ಈಶ್ವರಜ್ಞಾನ ಸಾಧಾರಣಂ ಘಟಜ್ಞಾನತ್ವಂ ನ ತನ್ಮಾತ್ರವೃತ್ತಿ, ಇತಿ ಭಾವಃ ।**

ಘಟಜ್ಞಾನತ್ವವು ದೃಷ್ಟಾಂತ. ಅದನ್ನು ಸ್ವಪದದಿಂದ ಪರಿಗ್ರಹಿಸಿದರೆ ಸ್ವಾಶ್ರಯವಾದುದು ಘಟಜ್ಞಾನ. ತದ್‌ವೃತ್ತಿಯಾದ ವ್ಯಾಪ್ಯವಾದ ಧರ್ಮಗಳು ಇಲ್ಲ. ಆದ್ದರಿಂದ ತಾದೃಶಧರ್ಮಾ-ವಚ್ಛಿನ್ನಕಾರ್ಯತಾಶ್ರಯವು ಇಲ್ಲ. ಹೀಗಾಗಿ, ಕಾರ್ಯತಾಶ್ರಯ ಮಾತ್ರವೃತ್ತಿತ್ವ-ಅಭಾವರೂಪ ಸಾಧ್ಯವು ಅದರಲ್ಲಿದೆ. ಘಟಜ್ಞಾನತ್ವವ್ಯಾಪ್ಯವಾದ ಘಟಪ್ರತ್ಯಕ್ಷತ್ವಂ, ಘಟಾನುಮಿತಿತ್ವಂ ಇತ್ಯಾದಿ ಧರ್ಮಗಳು ಇದೆಯಲ್ಲವೆ? ಹೌದು. ಅಂತಹ ಧರ್ಮಗಳು ಇದ್ದರೂ ತದವಚ್ಛಿನ್ನಕ್ಕೆ ಒಂದು ಅನುಗತಕಾರಣ ಇಲ್ಲ. ಆದ್ದರಿಂದ ಆ ಧರ್ಮಗಳು ಕಾರ್ಯತಾವಚ್ಛೇದಕಗಳಲ್ಲ. ಅಥವಾ, ಅವುಗಳಿಗೆ ಒಂದು ಅನುಗತಕಾರಣವು ಇದೆ, ಎಂದಾದರೂ ತಾದೃಶಧರ್ಮಾವಚ್ಛಿನ್ನ ಕಾರ್ಯತಾಶ್ರಯ ಮಾತ್ರವೃತ್ತಿತ್ವವು ಘಟಜ್ಞಾನತ್ವದಲ್ಲಿ ಬರುವುದಿಲ್ಲ. ಏಕೆಂದರೆ, ಘಟಜ್ಞಾನತ್ವಾಚ್ಛಿನ್ನ ಜನ್ಯತಾಕ್ಕೆ ಆಶ್ರಯವಾಗದ ಈಶ್ವರಜ್ಞಾನದಲ್ಲೂ ಘಟಜ್ಞಾನತ್ವ ಇದೆ. ಆದ್ದರಿಂದ ತನ್ಮಾತ್ರವೃತ್ತಿತ್ವಾಭಾವರೂಪವಾದ ಸಾಧ್ಯವು ಅದರಲ್ಲಿದೆ.

## ನ್ಯಾಯದೀಪ

**ನನು ಸಾಧ್ಯೇ ಪರಾನುಕ್ತಂ ನಾನಾವೃತ್ತೀತಿ ಕಾರ್ಯತಾವಿಶೇಷಣಮ್ ಅಧಿಕಂ**

**ಕಿಮರ್ಥಮ್ ಉಪಾತ್ತಮ್? ಇತ್ಯತ ಆಹ–ತತ್ತದಿತಿ ॥ ತತ್ತತ್ ಪ್ರಮಾವ್ಯಕ್ತಿ–ಪ್ರಾಗಭಾವನಿರೂಪಿತ–ಕಾರ್ಯತಾವಚ್ಛೇದಕಮ್ ತತ್ತತ್ ಪ್ರಮಾವ್ಯಕ್ತಿತ್ವಮ್ । ತದವಚ್ಛಿನ್ನಕಾರ್ಯತಾ ಚ ತತ್ತದ್ ವ್ಯಕ್ತಿಮಾತ್ರನಿಷ್ಠಾ । ನ ತು ವ್ಯಕ್ತಿದ್ವಯನಿಷ್ಠಾ । ತಥಾಚ ತಾದೃಶಕಾರ್ಯತಾಶ್ರಯಮಾತ್ರವೃತ್ತಿತ್ವೇನ ತದಭಾವಸಾಧನೇ ಬಾಧಃ ಸ್ಯಾತ್ । ನಾನಾವೃತ್ತೀತ್ಯುಕ್ತ್ಯಾ ತದನ್ಯಕಾರ್ಯತೈವ ಲಭ್ಯತೇ ಇತಿ ತದಾಶ್ರಯಮಾತ್ರವೃತ್ತಿತ್ವಾಭಾವಸಾಧನೇ ತು ನ ಬಾಧ ಇತಿ ಭಾವಃ ।**

ಈ ಅನುಮಾನದ ಪ್ರತ್ಯನುಮಾನದಲ್ಲಿ ಯಜ್ಞಪತ್ಯುಪಾಧ್ಯಾಯರು ಕಾರ್ಯತಾದಲ್ಲಿ ನಾನಾವೃತ್ತಿ ಎಂಬ ವಿಶೇಷಣವನ್ನು ಕೊಟ್ಟಿಲ್ಲ. ಪರಾನುಕ್ತ ಈ ವಿಶೇಷಣವನ್ನು ಪ್ರಕೃತಾನು ಮಾನದಲ್ಲಿ ಸೇರಿಸಲಾಗಿದೆ. ಅದಕ್ಕೆ ಕಾರಣವನ್ನು ಇಲ್ಲಿ ಕೊಡಲಾಗಿದೆ.

ತತ್ತತ್‌ಪ್ರಮಾ ಪ್ರಾಗಭಾವವು ತತ್ತತ್‌ಪ್ರಮಾಕ್ಕೆ ಕಾರಣ. ತನ್ನಿರೂಪಿತ–ಕಾರ್ಯತಾವಚ್ಛೇದಕ ತತ್ತತ್‌ಪ್ರಮಾತ್ವ. ತದವಚ್ಛಿನ್ನಕಾರ್ಯತಾಶ್ರಯಮಾತ್ರ ವೃತ್ತಿತ್ವವೇ ಅನಿತ್ಯಪ್ರಮಾತ್ವದಲ್ಲಿ ಇದೆ. ಸಾಧ್ಯ ಬರಲಿಲ್ಲ, ಬಾಧ ಬರುತ್ತದೆ. ನಾನಾವೃತ್ತಿತ್ವವನ್ನು ಕಾರ್ಯತಾದಲ್ಲಿ ಕೊಟ್ಟರೆ ತತ್ತತ್ ಪ್ರಮಾವ್ಯಕ್ತಿತ್ವಾವಚ್ಛಿನ್ನ ಕಾರ್ಯತಾವು ತತ್ತತ್‌ಪ್ರಮಾವ್ಯಕ್ತಿಯಲ್ಲಿ ಮಾತ್ರವೇ ಇದೆ. ವ್ಯಕ್ತಿದ್ವಯದಲ್ಲಿ ಇಲ್ಲ. ಆದ್ದರಿಂದ ಆ ಕಾರ್ಯತಾವು ಸಂಗ್ರಹೀತವಾಗುವುದಿಲ್ಲ. ನಾನಾವೃತ್ತಿಕಾರ್ಯತಾ ಮಾತ್ರ ಸಂಗ್ರಹವಾಗುತ್ತದೆ. ತದಾಶ್ರಯಮಾತ್ರವೃತ್ತಿತ್ವಾಭಾವವು ಹಿಂದೆ ಹೇಳಿದಂತೆ ಅನಿತ್ಯಪ್ರಮಾತ್ವದಲ್ಲಿ ಇದೆ, ಬಾಧ ಇಲ್ಲ.

**न च विषयजनितं ज्ञानं प्रत्यक्षमिति मते प्रत्यक्षज्ञानत्वे व्यभिचार इति वाच्यम् । विषयस्य विषयतयोपाधित्वस्य विवक्षितत्वात् । प्रत्यक्षज्ञानत्वे च तस्य जनकतयोपाधित्वात् । यथावस्थितार्थविषय-कत्वरूपे प्रमात्वे तु तस्य विषयतयोपाधित्वात् । अप्रमात्वोपाधिभूतं विषयान्यथात्वं तु नाप्रमाया विषय इति नाप्रमात्वे व्यभिचारः ॥**

ವಿಷಯಜನ್ಯವಾದ ಜ್ಞಾನವೇ ಪ್ರತ್ಯಕ್ಷ, ಎಂದು ಕೆಲವು ನೈಯಾಯಿಕರು ಹೇಳುತ್ತಾರೆ. ಆಗ ಪ್ರತ್ಯಕ್ಷಜ್ಞಾನತ್ವವೂ ವಿಷಯಮಾತ್ರೋಪಾಧಿಕಧರ್ಮವಾಗುತ್ತದೆ. ಅದರಲ್ಲಿ ಹೇತು ಬಂತು, ಸಾಧ್ಯ ಇಲ್ಲ. ಏಕೆಂದರೆ ಪ್ರತ್ಯಕ್ಷತ್ವವ್ಯಾಪ್ಯವಾದ ಚಾಕ್ಷುಷಪ್ರತ್ಯಕ್ಷತ್ವಾದಿಗಳು ಕಾರ್ಯತಾವಚ್ಛೇದಕಗಳಾಗಿವೆ. ತದಾಶ್ರಯಮಾತ್ರವೃತ್ತಿತ್ವವು ಪ್ರತ್ಯಕ್ಷಜ್ಞಾನತ್ವದಲ್ಲಿ ಇದೆ. ಆದ್ದರಿಂದ ವ್ಯಭಿಚಾರ. ಇದರ

ಪರಿಹಾರಕ್ಕಾಗಿ ವಿಷಯೋಪಾಧಿಕತ್ವ ಎಂದರೆ ವಿಷಯವು ವಿಷಯತ್ವೇನ ಉಪಾಧಿಯಾಗಿರಬೇಕು, ಎಂದರ್ಥ ಮಾಡಬೇಕು. ಜನ್ಯಪ್ರಮಾತ್ವದಲ್ಲಿ ವಿಷಯವು ಪ್ರಕಾರತಾ, ವಿಶೇಷ್ಯತಾಖ್ಯವಿಷಯತ್ವೇನ ಉಪಾಧಿಯಾಗಿದೆ. ಆದರೆ, 'ವಿಷಯಜನ್ಯಂ ಜ್ಞಾನಂ ಪ್ರತ್ಯಕ್ಷಂ' ಎಂದಾಗ ವಿಷಯವು ಪ್ರತ್ಯಕ್ಷತ್ವದಲ್ಲಿ ಜನಕತ್ವೇನ ಉಪಾಧಿಯಾಗಿದೆ. ವಿಷಯತ್ವೇನ ಅಲ್ಲ. ಪ್ರಮಾತ್ವಂ ಎಂದರೆ 'ಯಥಾವಸ್ಥಿತಾರ್ಥ-ವಿಷಯಕತ್ವಮ್'. ಇಲ್ಲಿ ವಿಷಯವು ವಿಯತ್ವೇನ ಉಪಾಧಿಯಾಗಿದೆ. ಆದ್ದರಿಂದ ಪ್ರಮಾತ್ವದಲ್ಲಿ ಹೇತು ಇದೆ. ಅಪ್ರಮಾತ್ವದಲ್ಲೂ ಈ ಹೇತು ಇಲ್ಲ. ಅಪ್ರಮಾತ್ವ ಎಂದರೆ ತದಭಾವವತಿ ತತ್ಪ್ರಕಾರಕತ್ವ. ಇದರಲ್ಲಿ ಸೇರಿದ ಅಭಾವವು ಅಪ್ರಮಾದಲ್ಲಿ ವಿಷಯವಲ್ಲ. ಆದ್ದರಿಂದ ಅಪ್ರಮಾತ್ವವು ವಿಷಯಮಾತ್ರೋಪಾಧಿಕವಲ್ಲ. ಆದ್ದರಿಂದ ಅದರಲ್ಲೂ ವ್ಯಭಿಚಾರವಿಲ್ಲ.

## ನ್ಯಾಯದೀಪ

**ಇತಿ ಮತೇ ಇತಿ ॥ ವಿಷಯಜನ್ಯತ್ವಂ ಪ್ರತ್ಯಕ್ಷಣಲಕ್ಷಮ್, ಇತಿ ಮತೇ ಇತ್ಯರ್ಥಃ। ಪ್ರತ್ಯಕ್ಷೇತಿ ॥ ತತ್ರ ಸ್ವವ್ಯಾಪ್ಯ-ಚಾಕ್ಷುಷತ್ವ-ರಾಸನತ್ವಾದಿ ಧರ್ಮಾಚ್ಛಿನ್ನ-ನಾನಾಧಿಕರಣನಿಷ್ಠ-ಕಾರ್ಯತಾಶ್ರಯವೃತ್ತಿತ್ವಸ್ಯೈವ ಭಾವೇನ ವಿಪಕ್ಷತ್ವೇನ ವಿಷಯಮಾತ್ರೋಪಾಧಿಕಧರ್ಮತ್ವಸತ್ವಾತ್ ಇತಿ ಭಾವಃ। ಅಪ್ರಮಾತ್ವಸ್ಯ ಸಾಧ್ಯಾಭಾವವತ್ವೇಽಪಿ ಹೇತೋರೇವ ಅಭಾವಾತ್ ನ ವ್ಯಭಿಚಾರ ಇತ್ಯಾಹ-ಅಪ್ರಮಾತ್ವೇತಿ ॥**

ಪ್ರತ್ಯಕ್ಷತ್ವದಲ್ಲಿ ಮತವಿಶೇಷದಂತೆ ವಿಷಯಮಾತ್ರೋಪಾಧಿಕತ್ವ ಎಂಬ ಹೇತು ಇದೆ. ಸಾಧ್ಯವಿಲ್ಲ. ಏಕೆಂದರೆ, ತದ್ವ್ಯಾಪ್ಯವಾದ ಚಾಕ್ಷುಷತ್ವ, ರಾಸನತ್ವಾದಿಧರ್ಮಾವಚ್ಛಿನ್ನವಾದ, ನಾನಾ ಆಶ್ರಯಗತವಾದ ಕಾರ್ಯತಾಶ್ರಯಮಾತ್ರವೃತ್ತಿತ್ವವೇ ಪ್ರತ್ಯಕ್ಷತ್ವದಲ್ಲಿ ಇದೆ, ತದಭಾವರೂಪ ಸಾಧ್ಯವು ಇಲ್ಲ. ಆದ್ದರಿಂದ ವ್ಯಭಿಚಾರ. (ಅದರ ಪರಿಹಾರವನ್ನು ಮೂಲದಲ್ಲಿ ಮಾಡಿದ್ದಾರೆ.)

ಯದ್ಯಪಿ ಅಪ್ರಮಾತ್ವದಲ್ಲೂ ಸಾಧ್ಯವಿಲ್ಲ. ತದ್ವ್ಯಾಪ್ಯಧರ್ಮಗಳು ದೋಷವಿಶೇಷಜನ್ಯತಾವಚ್ಛೇದಕವಾಗಿವೆ. ಅದರಲ್ಲಿ ಸಾಧ್ಯ ಇಲ್ಲ. ಆದರೂ, ಹೇತುವೂ ಇಲ್ಲ, ಆದ್ದರಿಂದ ವ್ಯಭಿಚಾರ ಇಲ್ಲ, ಎಂದು 'ಅಪ್ರಮಾತ್ವೇ ತು' ಎಂಬ ಮೂಲದಲ್ಲಿ ಹೇಳಲಾಗಿದೆ.

**भ्रमे पित्तादिरिव प्रमायाम् अननुगता एव गुणा हेतव इति मते-संशयोत्तरप्रमात्वं, सत्यविशेषदर्शनत्वावच्छिन्न-कारणताप्रतियोगिक-कार्यतानवच्छेदकं, असत्यविशेषदर्शनजन्यवृत्तित्वात्, ज्ञानत्ववत् । संशयोत्तरप्रमा, विशेषप्रमाजन्या न। तां विनाप्युपपन्नत्वात् भ्रमवत् । अत्रासिद्धिः प्रागेवोद्धृता ।**

**भूयोऽवयवेन्द्रियसन्निकर्षो न प्रमायाम् असाधारणकारणम् । भ्रमजनकत्वात्, मनःसंयोगवत् ।**

**प्रमा, भ्रमसाधारणकारणातिरिक्तकारणाजन्या । भ्रमधर्मिकान्योन्याभावाप्रतियोगित्वात् । अनन्यथासिद्धतदन्वयव्यतिरेकानुविधानरहितत्वाच्च । भ्रमवत् ।।**

ಭ್ರಮೆಗೆ ಪಿತ್ತಾದಿ ದೋಷಗಳು ಅನುಗತಗಳಲ್ಲ. ಆದರಂತೆ ಪ್ರಮಾಕ್ಕೂ ಅನನುಗತವಾದ ಗುಣಗಳೇ ಕಾರಣವಾಗಬಹುದು. ಉದಾಹರಣೆಗೆ— ಸ್ಥೂಲಾವಯವಿ ಪ್ರತ್ಯಕ್ಷಕ್ಕೆ ಭೂಯೋऽವಯವೇಂದ್ರಿಯ ಸನ್ನಿಕರ್ಷವು ಗುಣ. ಸಂಶಯೋತ್ತರ ಪ್ರತ್ಯಕ್ಷಕ್ಕೆ ವಿಶೇಷದರ್ಶನವು ಗುಣ, ಎಂದು ಪರತಸ್ತ್ವವಾದಿಗಳ ಪಕ್ಷವನ್ನು ಹಿಂದೆ (ಪು.661, ಪ್ರ.14) ವಿಮರ್ಶಿಸಲಾಗಿತ್ತು. ಆ ಪಕ್ಷದಲ್ಲಿ ಪ್ರತಿಪಕ್ಷಾನುಮಾನ ಹೀಗೆ—

**ಪಕ್ಷ**—ಸಂಶಯೋತ್ತರ ಪ್ರಮಾತ್ವವು

**ಸಾಧ್ಯ**—ಸತ್ಯವಿಶೇಷದರ್ಶನತ್ವಾವಚ್ಛಿನ್ನ-ಕಾರಣತಾನಿರೂಪಿತ-ಕಾರ್ಯತಾದಲ್ಲಿ ಅವಚ್ಛೇಕದವಲ್ಲ. ಅಂದರೆ, ವಿಶೇಷದರ್ಶನವು ಸಂಶಯೋತ್ತರ ಪ್ರತ್ಯಕ್ಷಕ್ಕೆ ಕಾರಣವಲ್ಲ.

**ಹೇತು**—ವಿಶೇಷದರ್ಶನದ ಭ್ರಮೆಯಿಂದ (ಅಸತ್ಯವಿಶೇಷದರ್ಶನದಿಂದ) ಹುಟ್ಟಿದ ನಿಶ್ಚಯದಲ್ಲೂ ಇದೆಯಾದ್ದರಿಂದ. ಕರದಲ್ಲಿ ಚರಣಭ್ರಮೆ ಇದ್ದಾಗ ಪುರುಷತ್ವವ್ಯಾಪ್ಯಚರಣಾದಿಮಾನ್ ಅಯಂ, ಎಂದು ವಿಶೇಷದರ್ಶನ ಹುಟ್ಟುತ್ತದೆ. ಅದು ಭ್ರಮೆ. ಅದರಿಂದ 'ಪುರುಷ ಏವಾಯಂ' ಎಂಬ ಸಂಶಯೋತ್ತರ ಪ್ರತ್ಯಕ್ಷವು ಹುಟ್ಟುತ್ತದೆ. ಅದರಲ್ಲೂ ಸಂಶಯೋತ್ತರ ಪ್ರಮಾತ್ವ ಇದೆ. ಆದರೆ, ಸತ್ಯವಿಶೇಷದರ್ಶನಜನ್ಯತ್ವ ಇಲ್ಲ, ತದ್‌ವ್ಯಭಿಚಾರಿಯಾಗಿದೆ. ಆದ್ದರಿಂದ, ಅದು ತಜ್ಜನ್ಯತಾವಚ್ಛೇದಕವಲ್ಲ.

**ಉದಾಹರಣೆ**—ಜ್ಞಾನತ್ವ. ಅದು ಅತಿಪ್ರಸಕ್ತವಾದುದರಿಂದ ವಿಶೇಷದರ್ಶನ ಜನ್ಯತಾವಚ್ಛೇದಕವಲ್ಲ.

ಅಥವಾ, ಹೀಗೂ ಸಾಧನೆ ಮಾಡಬಹುದು—

**ಪಕ್ಷ**—ಸಂಶಯೋತ್ತರಪ್ರಮಾ

**ಸಾಧ್ಯ**—ವಿಶೇಷಪ್ರಮಾಜನ್ಯವಲ್ಲ,

**ಹೇತು**—ವಿಶೇಷಪ್ರಮಾ ಇಲ್ಲದಿದ್ದಾಗಲೂ ಹುಟ್ಟುವುದರಿಂದ.

**ದೃಷ್ಟಾಂತ**—ಭ್ರಮೆಯಂತೆ.

ಈ ಎರಡೂ ಅನುಮಾನಗಳಲ್ಲಿ ಅಸಿದ್ಧಿಯನ್ನು ಹಿಂದೆಯೇ ಪರಿಹರಿಸಲಾಗಿದೆ. ಕರದಲ್ಲಿ ಚರಣಭ್ರಮೆ ಇದ್ದು ವ್ಯಾಪ್ಯದರ್ಶನ ಬಂದಾಗ ಅದರಿಂದಲೂ ಸಂಶಯೋತ್ತರ ಪ್ರತ್ಯಕ್ಷಪ್ರಮಾವು ಹುಟ್ಟುತ್ತದೆ. ಆದ್ದರಿಂದ ಎರಡೂ ಅನುಮಾನಗಳಲ್ಲಿ ಅಸಿದ್ಧಿ ಇಲ್ಲ.

ಇದರಂತೆ, ಭೂಯೋವಯವಸನ್ನಿಕರ್ಷವೂ ಪ್ರಮಾ ಹೇತುವಲ್ಲ—

**ಪಕ್ಷ**—ಭೂಯೋಽವಯವೇಂದ್ರಿಯ ಸನ್ನಿಕರ್ಷವು

**ಸಾಧ್ಯ**—ಪ್ರಮಾಕ್ಕೆ ಅಸಾಧಾರಣಕಾರಣವಲ್ಲ.

**ಹೇತು**—ಭ್ರಮ ಜನಕವಾದುದರಿಂದ. ಶಂಖದೊಂದಿಗೆ ಭೂಯೋಽವಯವೇಂದ್ರಿಯ ಸನ್ನಿಕರ್ಷವಿದ್ದರೂ ಪಿತ್ತದೋಷವಿದ್ದರೆ, 'ಪೀತಃ ಶಂಖಃ' ಎಂಬ ಭ್ರಮೆ ಬರುತ್ತದೆ. ಹೀಗೆ, ಅದು ಭ್ರಮೆಗೂ ಕಾರಣವಾದುದರಿಂದ ಪ್ರಮಾಕ್ಕೆ ಮಾತ್ರ ಕಾರಣವಲ್ಲ.

**ದೃಷ್ಟಾಂತ**—ಮನಃಸಂಯೋಗ. ಆತ್ಮಮನಃಸಂಯೋಗದಿಂದ ಪ್ರಮೆಯೂ ಹುಟ್ಟುತ್ತದೆ, ಭ್ರಮೆಯೂ ಹುಟ್ಟುತ್ತದೆ. ಅದು ಭ್ರಮಜನಕವಾದುದರಿಂದ ಪ್ರಮಾಕ್ಕೆ ಅಸಾಧಾರಣಕಾರಣವಲ್ಲ.

ಪ್ರಮೆಯು ಭ್ರಮೆಗಿಂತ ವಿಲಕ್ಷಣವಾದುದರಿಂದ ಜ್ಞಾನಹೇತ್ವತಿರಿಕ್ತ ಹೇತುವಿನಿಂದ ಜನ್ಯವಾಗಿದೆ, ಎಂದು ಹಿಂದೆ (ಪ್ರ.10) ಹೇಳಿದ ಅನುಮಾನಕ್ಕೆ ಪ್ರತಿಪಕ್ಷಾನುಮಾನವು ಹೀಗೆ—

**ಪಕ್ಷ**-ಪ್ರಮೆಯು.

**ಸಾಧ್ಯ**—ಭ್ರಮೆಗೂ ಸಾಧಾರಣವಾದ ಕಾರಣಕ್ಕಿಂತ ಅತಿರಿಕ್ತವಾದ ಕಾರಣವಿಶೇಷದಿಂದ ಜನ್ಯವಲ್ಲ.

**ಹೇತು-1**—ಭ್ರಮಧರ್ಮಿಕ ಭೇದಕ್ಕೆ ಅಪ್ರತಿಯೋಗಿಯಾಗಿರುವುದರಿಂದ. ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾವೇ ಆದುದರಿಂದ 'ಭ್ರಮಃ ಪ್ರಮಾ ನ' ಎಂದು ಭೇದವನ್ನು ಹೇಳಲು ಬರುವುದಿಲ್ಲ.

**ಹೇತು-2**—ಅನನ್ಯಥಾಸಿದ್ಧವಾದ ಅನ್ವಯ-ವ್ಯತಿರೇಕಗಳು ಯಾವುದರೊಂದಿಗೂ ಇಲ್ಲವಾದ್ದರಿಂದ.

ಗುಣಾದಿಗಳೊಂದಿಗೆ ಅನ್ವಯವಿಲ್ಲ. ಭೂಯೋಽವಯವೇಂದ್ರಿಯಸನ್ನಿಕರ್ಷ, ವಿಶೇಷ ದರ್ಶನಗಳು ಇದ್ದರೂ ಭ್ರಮೆಯೇ ಹುಟ್ಟುತ್ತದೆ. ದೋಷವಿದ್ದರೂ ಅರ್ಥಾತ್ ದೋಷಾಭಾವ ಇಲ್ಲದೇ ಇದ್ದರೂ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ಪ್ರಮಾ ಇದೆ. ಅಲ್ಲದೆ, ದೋಷಾಭಾವವು ಅನ್ಯಥಾ ಸಿದ್ಧವೂ ಆಗಿದೆ. ಇದನ್ನು ಹಿಂದೆಯೇ ಹೇಳಿದೆ. (ಪ್ರ.15, ಪು.697)

**ಉದಾಹರಣೆ**—ಭ್ರಮ. ಭ್ರಮೆಯಲ್ಲಿ ಭ್ರಮಧರ್ಮಿಕಭೇದಪ್ರತಿಯೋಗಿತ್ವವು ಇಲ್ಲ, ಭ್ರಮಕಾರಣ ವಿಲಕ್ಷಣಕಾರಣ ಜನ್ಯತ್ವವೂ ಇಲ್ಲ.

## ನ್ಯಾಯದೀಪ

**ಇತಿ ಮತೇ ಇತಿ ॥ ವಿರೋಧ್ಯನುಮಾನಂ ಸ್ವತಸ್ತ್ವಸಾಧಕಮ್ ಉಚ್ಯತೇ, ಇತಿ ಯೋಜ್ಯಮ್ । ಸಂಶಯಾದ್ಯುತ್ತರಪ್ರಮಾಯಾಂ ವಿಶೇಷಪ್ರಮಾ ಗುಣಃ, ಇತಿ ವಾದಿನಂ ಪ್ರತ್ಯಾಹ–ಸಂಶಯೇತಿ ॥ ಏತಚ್ಚ ಸಿದ್ಧಸಾಧನತಾವಾರಣಾಯ ವಿಶೇಷಣಮ್ ।**

**ಸಂಶಯೋತ್ತರಪ್ರಮಾ ವಿಶೇಷದರ್ಶನಜನ್ಯಾ ನ, ಇತ್ಯೇವೋಕ್ತೌ, ಜ್ಞಾನವತ್ ಇತಿ ದೃಷ್ಟಾಂತೋಕ್ತೌ ಚ ತತ್ರ ಸಾಧ್ಯಹೀನತಾ ಸ್ಯಾತ್, ಅತಃ ತತ್ರ ಪ್ರಮಾತ್ವಮ್, ಇತ್ಯುಕ್ತಿಃ । ಸತ್ಯೇತಿ ॥ ಯಥಾರ್ಥೇತ್ಯರ್ಥಃ । ಅಸತ್ಯಂ=ಅಯಥಾರ್ಥಮ್ । ಯದ್ವಿಶೇಷದರ್ಶನಂ ಕರಾದೌ ಚರಣಾದಿಭ್ರಮರೂಪಂ ತಜ್ಜನ್ಯಸಂಶಯೋತ್ತರ ಪ್ರಮಾವೃತ್ತಿತ್ವಾತ್, ಇತ್ಯರ್ಥಃ ।**

ಸಂಶಯ, ಭ್ರಮೆ ಇವುಗಳ ನಂತರ ಹುಟ್ಟುವ ಪ್ರಮಾಕ್ಕೆ ವಿಶೇಷದರ್ಶನಾತ್ಮಕ ಪ್ರಮಾವು ಗುಣ, ಎಂದು ಹೇಳುವ ವಾದಿಗಳಿಗೆ ಪ್ರತ್ಯನುಮಾನ ಮೊದಲನೆಯದು. ಈ ಅನುಮಾನದಲ್ಲಿ ಸಂಶಯೋತ್ತರ ಪ್ರಮಾತ್ವವು ಪಕ್ಷ. ಇಲ್ಲಿ ಸಂಶಯ ಪದವನ್ನು ಬಿಟ್ಟರೆ 'ಪ್ರಮಾತ್ವಂ' ಎಂದಿಷ್ಟೇ ಪಕ್ಷವಾಗುತ್ತದೆ. ಅದು ವಿಶೇಷದರ್ಶನ ಜನ್ಯತಾವಚ್ಛೇದಕವಲ್ಲ, ಎಂದು ಸಾಧನೆ ಮಾಡಿದರೆ ಸಿದ್ಧಸಾಧನತಾ. ಪ್ರಮಾಸಾಮ್ಯಾನ್ಯಕ್ಕೆ ವಿಶೇಷದರ್ಶನವು ಕಾರಣ, ಎಂದು ಪರತಸ್ತ್ವವಾದಿಗಳೂ ಒಪ್ಪಿಲ್ಲ. ಅದರ ಪರಿಹಾರಕ್ಕಾಗಿ 'ಸಂಶಯ' ವಿಶೇಷಣವನ್ನು ಸೇರಿಸಲಾಗಿದೆ.

ಪ್ರಮಾತ್ವವನ್ನು ಪಕ್ಷಮಾಡದೆ ಪ್ರಮಾವನ್ನು ಪಕ್ಷಮಾಡಿದರೆ ದೃಷ್ಟಾಂತವೂ ಜ್ಞಾನತ್ವದ ಬದಲು ಜ್ಞಾನವಾಗುತ್ತದೆ. ಹೀಗೆ, ಪಕ್ಷ–ದೃಷ್ಟಾಂತಗಳನ್ನು ಮಾಡಿದರೆ ಬಾಧ ಮತ್ತು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ದೋಷಗಳು ಬರುತ್ತವೆ. ಕೆಲವುಕಡೆ ಪುರುಷತ್ವ ಸಂದೇಹಾನಂತರದಲ್ಲಿ ಪುರುಷತ್ವ ವ್ಯಾಪ್ಯಕರಾದಿಮಾನ್, ಎಂಬ ವ್ಯಾಪ್ಯದರ್ಶನದಿಂದ 'ಅಯಂ ಪುರುಷ ಏವ' ಎಂಬ ನಿರ್ಣಯವು ಬರುತ್ತದೆ. ಈ ನಿರ್ಣಯವು ವಿಶೇಷದರ್ಶನದಿಂದ ಜನ್ಯವೇ ಆಗಿದೆ. ಇದು ಜ್ಞಾನವಾದುದರಿಂದ ಇದರಲ್ಲಿ ತಜ್ಜನ್ಯತ್ವವೇ ಇದೆ, ತದಭಾವರೂಪಸಾಧ್ಯ ಇಲ್ಲ. ಅದರ ಪರಿಹಾರಕ್ಕಾಗಿ ಪ್ರಮಾತ್ವವನ್ನು ಪಕ್ಷವನ್ನಾಗಿಯೂ ಜ್ಞಾನತ್ವವನ್ನು ದೃಷ್ಟಾಂತವನ್ನಾಗಿಯೂ ಮಾಡಲಾಗಿದೆ. 'ಪೀತಃ ಶಂಖಃ' ಎಂಬಲ್ಲಿ ವಿಶೇಷದರ್ಶನಕ್ಕೆ ವ್ಯಭಿಚಾರವಿರುವುದರಿಂದ ಪ್ರಮಾತ್ವವು ಜನ್ಯತಾವಚ್ಛೇದಕವಲ್ಲ. ಬಾಧ ಪರಿಹಾರವಾಗುತ್ತದೆ. ಅದರಂತೆ, ಜ್ಞಾನಸಾಮಾನ್ಯಕ್ಕೆ ಸತ್ಯವಿಶೇಷದರ್ಶನವು ಕಾರಣವಲ್ಲವಾದುದರಿಂದ ಜ್ಞಾನತ್ವವೂ ಜನ್ಯತಾವಚ್ಛೇದಕವಲ್ಲ. ಸಾಧ್ಯವೈಕಲ್ಯ ಪರಿಹಾರವಾಗುತ್ತವೆ.

ಸತ್ಯ ಎಂದರೆ, ಪ್ರಮಾ ಎಂದರ್ಥ. ಅಸತ್ಯ ಎಂದರೆ ಅಯಥಾರ್ಥ. ಯಾವ ವಿಶೇಷ

ದರ್ಶನವು ಕರದಲ್ಲಿ ಚರಣಭ್ರಮದಿಂದ ಜನ್ಯವಾಗಿದೆಯೋ ತಾದೃಶ ಭ್ರಮಾತ್ಮಕ ವಿಶೇಷದರ್ಶನ ದಿಂದ ಹುಟ್ಟಿದ ಸಂಶಯೋತ್ತರಪ್ರಮಾದಲ್ಲಿ ತಾದೃಶಪ್ರಮಾತ್ವವು ಇದೆ, ಎಂದು ಹೇತುವಿನ ಅರ್ಥ.

## ನ್ಯಾಯದೀಪ

**ನನು ಸಂಶಯೋತ್ತರಪ್ರಮಾಯಾಂ ನ ಸರ್ವತ್ರವಿಶೇಷಪ್ರಮಾ ಹೇತುಃ । ಕರಾದೌ ಚರಣಾದಿಭ್ರಮಜನ್ಯ-ಸಂಶಯೋತ್ತರಪ್ರಮಾದಿಭಿನ್ನಸ್ಥಲೇ ಏವ, ಇತ್ಯತಃ ತದನುರೋಧೇನಾಪ್ಯಾಹ-ಸಂಶಯೋತ್ತರೇತಿ ॥ ತಾಂ ವಿನಾಪೀತಿ ॥ ದೋಷಾಭಾವೇನಾಪಿ ಉಪಪನ್ನತ್ವಾತ್, ಇತ್ಯರ್ಥಃ । ಅತ್ರೇತಿ ॥ ಹೇತುದ್ವಯೇ ಇತ್ಯರ್ಥಃ । ಪ್ರಾಗಿತಿ ॥ 'ಕರಾದೌ ಚರಣಾದಿಭ್ರಮಜನ್ಯೇ' ಇತ್ಯಾದಿನಾ 'ಏವಂ ಭ್ರಮೋತ್ತರಪ್ರಮಾಯಾಮಪಿ' ಇತ್ಯಾದಿನಾ ಚ ಗ್ರಂಥೇನ ಅನುಗತಗುಣ ಭಂಗೇ ಏವ(ಪು.673) ಇತ್ಯರ್ಥಃ ।**

**ಭಯೋಽವಯವೇಂದ್ರಿಯಸನ್ನಿಕರ್ಷಃ ಗುಣಃ, ಇತಿ ಪಕ್ಷನಿರಾಸಕಮ್ ಅನುಮಾನಮಾಹ-ಭೂಯ ಇತಿ ॥ ಅತ್ರಾಪ್ಯಸಿದ್ಧಿಃ 'ಪೀತಃ ಶಂಖಃ' ಇತ್ಯಾದಿ ಭ್ರಮಜನಕತ್ವಾದ್ಯುಕ್ತ್ಯಾ ಪ್ರಾಗೇವ ಉದ್ಧೃತಾ ಇತಿ ಭಾವಃ ।**

ವಿಶೇಷಪ್ರಮಾವು ಸಂಶಯೋತ್ತರ ಪ್ರಮಾಕ್ಕೆ ಸರ್ವತ್ರ ಕಾರಣವಲ್ಲ, ಕರದಲ್ಲಿ ಚರಣ ಭ್ರಮಜನ್ಯ-ಸಂಶಯೋತ್ತರ ಪ್ರಮಾಭಿನ್ನ ಪ್ರಮಾಕ್ಕೆ ಮಾತ್ರ ಕಾರಣ. ಹೀಗೆ ಸಮಾಧಾನ ಹೇಳಿದರೆ ಅದಕ್ಕೂ ಪ್ರತ್ಯನುಮಾನವನ್ನು 'ಸಂಶಯೋತ್ತರ' ಎಂದು ಹೇಳಲಾಗಿದೆ. ಈ ಅನುಮಾನದಲ್ಲಿ 'ತಾಂ ವಿನಾಪಿ ಉಪಪನ್ನತ್ವಾತ್' ಎಂದು ಹೇತು. ದೋಷಾಭಾವದಿಂದಲೇ ಅಲ್ಲಿ ಪ್ರಮಾ ಹುಟ್ಟಬಹುದು. ವಿಶೇಷದರ್ಶನವಿದ್ದರೂ ಪಿತ್ತಾದಿದೋಷಗಳು ಪ್ರತಿಬಂಧಕವಾಗಿರುವುದರಿಂದ 'ಶಂಖಃ ಪೀತಃ' ಎಂದು ಭ್ರಮೆ ಬರುವುದೆಂದಾದಲ್ಲಿ ಆವಶ್ಯಕ ದೋಷಾಭಾವವೇ ಕಾರಣವಾಗಲಿ, ಎಂದು ಹಿಂದೆ (ಪು.665. ಪ್ರ.14) ಹೇಳಲಾಗಿದೆ.

ಭಯೋಽವಯವೇಂದ್ರಿಯ ಸನ್ನಿಕರ್ಷವೇ ಗುಣ, ಎನ್ನುವುದಕ್ಕೆ ಪ್ರತ್ಯನುಮಾನವನನ್ನು- 'ಭೂಯಃ' ಇತ್ಯಾದಿವಾಕ್ಯದಲ್ಲಿ ಹೇಳಲಾಗಿದೆ. ಈ ಅನುಮಾನದ ಭ್ರಮಜನಕತ್ವಹೇತುವು ಪಕ್ಷದಲ್ಲಿ ಇದೆ, ಎಂದು 'ಪೀತಃ ಶಂಖಃ' ಎಂಬ ಭ್ರಮೆಯು ಭೂಯೋಽವಯವೇಂದ್ರಿಯ-ಸನ್ನಿಕರ್ಷ ಇದ್ದಾಗಲೂ ಹುಟ್ಟುತ್ತದೆ, ಎಂದು ಹಿಂದೆಯೇ (ಪು.664.ಪ್ರ.14) ಹೇಳಲಾಗಿದೆ. ಆದ್ದರಿಂದ ಅಸಿದ್ಧಿ ಇಲ್ಲ.

## ನ್ಯಾಯದೀಪ

**ಪ್ರಮಾ, ಜ್ಞಾನಹೇತ್ವತಿರಿಕ್ತಹೇತುಜನ್ಯಾ, ಇತಿ ಪ್ರಾಚೀನಾನುಮಾನಸ್ಯ(ಪ್ರ.10)**

**ಪ್ರತ್ಯನುಮಾನಮಾಹ–ಪ್ರಮೇತಿ ॥ ಅತಿರಿಕ್ತಕಾರಣಪದೇನ ಗುಣಃ, ದೋಷಾಭಾವಶ್ಚ ಅಭಿಮತಃ। ಭ್ರಮಧರ್ಮಿಕೇತ್ಯಾದಿ ಹೇತೋರಪಿ ಅಸಿದ್ಧಿಃ 'ಭ್ರಮೇಽಪಿ ಧರ್ಮ್ಯಂಶೇ ಪ್ರಮಾತ್ವಸ್ಯ' (ಪು.713) ಇತ್ಯಾದಿನಾ ಪ್ರಾಗೇವ ಉದ್ಧೃತಾ, ಇತಿ ಭಾವಃ।**

**ತಾರ್ಕಿಕಮತೇಽಪಿ ಅತ್ಯಂತಾಭಾವಸ್ಯ ಅವ್ಯಾಪ್ಯವೃತ್ತಿತ್ವೇನ ಭ್ರಮೇ ಪ್ರಮಾತ್ವ–ತದತ್ಯಂತಾಭಾವಯೋಃ ಅಂಶಭೇದೇನ ಸತ್ವೇಽಪಿ ಅನ್ಯೋನ್ಯಾಭಾವಸ್ಯ ಅವ್ಯಾಪ್ಯವೃತ್ತಿತ್ವಾಭಾವೇನ ಪ್ರಮಾನ್ಯೋನ್ಯಾಭಾವಸ್ಯ ಭ್ರಮೇ ಸರ್ವಥೈವ ಅಭಾವಾತ್ ಇತಿ ಭಾವಃ। ಅನನ್ಯಥೇತಿ ॥ ಅತ್ರಾಪಿ ಗುಣಾನಾಂ ವಿರೋಧಿ ದೋಷನಿರಾಸೋಪಯೋಗಸ್ಯ ಉಕ್ತತ್ವಾತ್ ನಾಸಿದ್ಧಿಃ ಇತಿ ಭಾವಃ।**

ಹಿಂದೆ (ಪು.511) ಪ್ರಮಾವು ಜ್ಞಾನವಿಶೇಷವಾದುದರಿಂದ ಅದಕ್ಕೆ ಜ್ಞಾನಹೇತುವಿಗಿಂತ ಅತಿರಿಕ್ತವಾದ ಕಾರಣವು ಇರಬೇಕು, ಎಂದು ಅನುಮಾನ ಮಾಡಲಾಗಿತ್ತು. ಅದಕ್ಕೆ ವಿರುದ್ಧವಾದ ಅನುಮಾನವನ್ನು 'ಪ್ರಮಾ' ಇತ್ಯಾದಿಯಾಗಿ ಇಲ್ಲಿ ಮಾಡಲಾಗಿದೆ. ಜ್ಞಾನಹೇತು–ಅತಿರಿಕ್ತ ಹೇತುಪದದಿಂದ ಗುಣ ಅಥವಾ ದೋಷಾಭಾವವು ವಿವಕ್ಷಿತ.

ಈ ಅನುಮಾನದ ಹೇತು ಭ್ರಮಧರ್ಮಿಕ–ಅನ್ಯೋನ್ಯಾಭಾವಪ್ರತಿಯೋಗಿತ್ವಾಭಾವ. ಭ್ರಮದಲ್ಲಿ ಪ್ರಮಾತ್ವದ ಅತ್ಯಂತಾಭಾವ ಬರಬಹುದು. ಭ್ರಮೆಯು ಧರ್ಮ್ಯಂಶದಲ್ಲಿ ಪ್ರಮಾ ಆದರೂ ಪ್ರಕಾರಾಂಶದಲ್ಲಿ ಪ್ರಮಾತ್ವವು ಇಲ್ಲದಿರುವುದರಿಂದ ಪ್ರಮಾತ್ವ–ತದಭಾವಗಳೆರಡೂ ಅದರಲ್ಲಿ ಇರಬಹುದು. ಅತ್ಯಂತಾಭಾವವು ಅವ್ಯಾಪ್ಯವೃತ್ತಿ. ಆದರೆ, ಭೇದವು ಅವ್ಯಾಪ್ಯವೃತ್ತಿ ಅಲ್ಲ. ಆದ್ದರಿಂದ 'ಭ್ರಮಃ ಪ್ರಮಾ ನ' ಎಂದು ಭೇದವನ್ನು ಹೇಳಲಾಗುವುದಿಲ್ಲ. ಹೀಗಾಗಿ ಭ್ರಮನಿಷ್ಠಭೇದದಲ್ಲಿ ಪ್ರಮಾ ಪ್ರತಿಯೋಗಿಯಾಗುವುದಿಲ್ಲ. ಪಕ್ಷದಲ್ಲಿ ಹೇತು ಬರುತ್ತದೆ.

ಗುಣಗಳು ದೋಷನಿರಾಸದಲ್ಲೇ ಉಪಕ್ಷೀಣವಾದುದರಿಂದ ಪ್ರಮಾಂ ಪ್ರತಿ ಅವುಗಳು ಅನ್ಯಥಾಸಿದ್ಧವಾಗಿವೆ, ಎಂದು ಹಿಂದೆ ಹೇಳಲಾಗಿದೆ. (ಪು.678) ಆದ್ದರಿಂದ, ಎರಡನೆಯ ಹೇತುವೂ ಅಸಿದ್ಧವಲ್ಲ.

**अत्र सर्वत्रापि हेतूच्छित्तिरेव बाधिकेति नाप्रयोजकतेति दिक् ।**

ಹಿಂದಿನ ಎಲ್ಲಾ ಅನುಮಾನಗಳಲ್ಲೂ ಸಾಧ್ಯವು ಪಕ್ಷದಲ್ಲಿ ಇಲ್ಲದೇ ಹೋದಲ್ಲಿ ಹೇತುವೂ ಇರಲಾರದು, ಎಂದು ಹೇತೂಚ್ಛಿತ್ತಿಯೇ ವಿಪಕ್ಷೇ ಬಾಧಕ. ಆದ್ದರಿಂದ ಹೇತುರಸ್ತು ಸಾಧ್ಯಂ ಮಾಸ್ತು, ಎಂದು ಅಪ್ರಯೋಜಕತ್ವಶಂಕಾ ಇಲ್ಲ.

## ನ್ಯಾಯದೀಪ

**ದಿಗಿತಿ ॥ ಪ್ರಮಾ ಗುಣಜನ್ಯಾ ನ ಭವತಿ, ಪ್ರಮಾತ್ವಾತ್, ಈಶಪ್ರಮಾವತ್। ಪ್ರಮಾ, ದೋಷವಿರೋಧಿಜನ್ಯಾ ನ ಭವತಿ, ಪ್ರಮಾತ್ವಾತ್, ಈಶಪ್ರಮಾವತ್, ಇತ್ಯಾದಿಃ ಊಹನೀಯಾ, ಇತಿ ಭಾವಃ।**

ಮೂಲದಲ್ಲಿ 'ದಿಕ್' ಪದದಿಂದ ಇನ್ನೂ ಅನುಮಾನಗಳನ್ನು ಮಾಡಬಹುದು, ಎಂದು ಸೂಚಿಸಲಾಗಿದೆ. ಅಂತಹ ಎರಡು ಅನುಮಾನಗಳನ್ನು ನ್ಯಾಯದೀಪದಲ್ಲಿ ಸೂಚಿಸಲಾಗಿದೆ.

**एतदप्युक्तम् ''अन्यथेत्यादिना'' । उक्तसाध्यानि विनोक्तहेतूनां पक्षेऽवस्थित्ययोगादित्यर्थः ।।**

ಈ ಪ್ರಕರಣದಲ್ಲಿ ಹೇಳಿರುವ ವಿಷಯವನ್ನೂ 'ಅನ್ಯಥಾ ಅನವಸ್ಥಾನಾತ್' ಎಂಬ ಆಚಾರ್ಯರ ವಾಕ್ಯವು ಸೂಚಿಸುತ್ತದೆ. ಅನ್ಯಥಾ=ಹಿಂದೆ ಹೇಳಿರುವ ಸಾಧ್ಯಗಳು ಪಕ್ಷದಲ್ಲಿ ಇರದ ಹೊರತು ಅನವಸ್ಥಾನಾತ್=ಹೇತುಗಳೂ ಪಕ್ಷದಲ್ಲಿ ಇರಲಾರವು, ಎಂದು ಅರ್ಥ.

**ಇಲ್ಲಿಗೆ ಉತ್ಪತ್ತೌ ಸ್ವತಸ್ತ್ವೇ ಅನುಮಾನ ಪ್ರಕರಣ ಮುಗಿಯಿತು. ॥ 16 ॥**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವಕ್ಕೆ ಅನುಮಾನಪ್ರಮಾಣಗಳನ್ನು ಹೇಳಲಾಗಿದೆ. ಆ ಒಂದೊಂದು ಅನುಮಾನಗಳೂ ತಾರ್ಕಿಕರು ಪರತಸ್ತ್ವಸಾಧಕವಾಗಿ ಹೇಳಿದ ಪ್ರಮಾಣಗಳಿಗೆ ಪ್ರತಿಪಕ್ಷರೂಪವಾಗಿವೆ. ಅವುಗಳನ್ನು ನಾಲ್ಕು ಗುಂಪುಗಳಲ್ಲಿ ವಿಂಗಡಿಸಬಹುದು.

I. ಮಣಿಕಾರ ಅನಿತ್ಯಪ್ರಮಾಸಾಮಾನ್ಯವು ಗುಣಜನ್ಯ ಎಂದು ಮೊದಲು ಹೇಳಿದ್ದಾನೆ. ಅದಕ್ಕೆ ವಿರುದ್ಧವಾಗಿ ಮೂರು ಅನುಮಾನಗಳನ್ನು ಇಲ್ಲಿ ಹೇಳಲಾಗಿದೆ.

II. ಪ್ರಮಾವಿಶೇಷಗಳು ಅಂದರೆ ಪ್ರತ್ಯಕ್ಷ–ಅನುಮಿತಿ–ಶಾಬ್ದಪ್ರಮಾಗಳು ಪ್ರತ್ಯೇಕವಾದ ಗುಣಜನ್ಯ ಎಂದು ಮಣಿಗ್ರಂಥದಲ್ಲಿ ಸಾಧಿಸಲಾಗಿದೆ. ಅದಕ್ಕೆ ವಿರುದ್ಧವಾದ ನಾಲ್ಕು ಅನುಮಾನಗಳು.

III. ಯಜ್ಞಪತ್ಯುಪಾಧ್ಯಾಯರು ಅನಿತ್ಯಪ್ರಮಾಸಾಮಾನ್ಯಕ್ಕೆ ಗುಣಜನ್ಯತ್ವವನ್ನು ಅನುಗತ ಗುಣವಿಲ್ಲದೆಯೂ ಸಾಧಿಸಿದ್ದಾರೆ. ಅದಕ್ಕೆ ಪ್ರತಿಕೂಲವಾದ ಒಂದು ಅನುಮಾನ.

IV. ಭ್ರಮೆಯಂತೆ ಒಂದೊಂದು ಪ್ರತ್ಯಕ್ಷಪ್ರಮಾಕ್ಕೂ ಅನನುಗತವಾದ ಗುಣವು ಕಾರಣ, ಎಂದು ತಾರ್ಕಿಕರು ಸಾಧಿಸಿರುವ ಅನುಮಾನಕ್ಕೆ ನಾಲ್ಕು ಪ್ರತಿಪಕ್ಷಾನುಮಾನ.

**I.** ಮಣಿಕಾರ ಅನಿತ್ಯಪ್ರಮಾತ್ವವು ಕಾರ್ಯಮಾತ್ರವೃತ್ತಿಧರ್ಮವಾದುದರಿಂದ ಕಾರ್ಯತಾವಚ್ಛೇದಕವಾಗಬೇಕು. ಅದು ಕಾರ್ಯತಾವಚ್ಛೇದಕವಾಗಬೇಕಾದರೆ ತದವಚ್ಛಿನ್ನಕ್ಕೆ ಒಂದು ಕಾರಣವಿರಬೇಕು. ಅಂತಹ ಅನುಗತಗುಣದಿಂದ ಅನಿತ್ಯ ಪ್ರಮಾ ಜನ್ಯವಾಗಿದೆ, ಎಂದು ಅನುಮಾನದಿಂದ ಸಾಧಿಸಿದ್ದಾನೆ.

ಇದಕ್ಕೆ ಪ್ರತಿಪಕ್ಷವಾಗಿ ಶ್ರೀವ್ಯಾಸರಾಜರು ಸಾಧಿಸಿರುವ ಅನುಮಾನದ ಅಭಿಪ್ರಾಯ ಹೀಗಿದೆ— ಅನಿತ್ಯಪ್ರಮಾತ್ವ ಮತ್ತು ಅನಿತ್ಯಜ್ಞಾನತ್ವ ಇವೆರಡೂ ಸಮನಿಯತ ಧರ್ಮಗಳು. ಆಪಾತತಃ ಅನಿತ್ಯಜ್ಞಾನತ್ವವು ಪ್ರಮಾ–ಭ್ರಮ ಸಾಧಾರಣವಾದ ಧರ್ಮ, ಅನಿತ್ಯಪ್ರಮಾತ್ವ ಪ್ರಮಾದಲ್ಲಿ ಮಾತ್ರ ಇರುವ ಧರ್ಮ, ಎನಿಸುತ್ತದೆ. ಆದರೆ, ಪ್ರಮಾತ್ವವು ಭ್ರಮೆಯಲ್ಲೂ ಇದೆ. ಎಲ್ಲಾ ಭ್ರಮೆಗಳೂ ಧರ್ಮ್ಯಂಶದಲ್ಲಿ ಪ್ರಮಾ, ಎಂದು ತಾರ್ಕಿಕರೇ ಅಂಗೀಕರಿಸಿದ್ದಾರೆ. ಹೀಗಿರುವಾಗ ಅನಿತ್ಯಜ್ಞಾನಕ್ಕೆ ಯಾವುದು ಕಾರಣವೊ, ಆತ್ಮಮನಃ ಸಂಯೋಗಾದಿಗಳು, ಅದೇ ಅನಿತ್ಯಪ್ರಮಾಕ್ಕೂ ಕಾರಣ. ಜ್ಞಾನಸಾಮಾನ್ಯಕ್ಕೆ ಕಾರಣವಲ್ಲದ ಒಂದು ಗುಣವಿಶೇಷವನ್ನು ಪ್ರಮಾಕ್ಕೆ ಕಾರಣ ಎಂದು ಹೇಳುವ ಅಗತ್ಯವೇ ಇಲ್ಲ. ಜ್ಞಾನಸಾಮಾನ್ಯಕಾರಣದ ಜೊತೆ ದೋಷವಿದ್ದರೆ ಭ್ರಮೆ ಹುಟ್ಟುತ್ತದೆ, ದೋಷವಿಲ್ಲದಾಗ ಪ್ರಮಾ ಹುಟ್ಟುತ್ತದೆ. ಆದ್ದರಿಂದ ಪ್ರಮಾ ಸಾಮಾನ್ಯಕ್ಕೆ ಅನುಗತವಾದ ಒಂದು ಗುಣದ ಅಗತ್ಯವೇ ಇಲ್ಲ.

**ಆ.** ಇನ್ನೊಂದು ಅನುಪಪತ್ತಿ–ಅನಿತ್ಯಯಾಥಾರ್ಥಜ್ಞಾನತ್ವವೂ ಅನಿತ್ಯ ಜ್ಞಾನತ್ವವೂ, ಹಿಂದೆ ಹೇಳಿದಂತೆ ಸಮನಿಯತ ಧರ್ಮಗಳು. ಅವುಗಳಲ್ಲಿ ಲಘುಧರ್ಮ ಜ್ಞಾನತ್ವ. ಅದೇ ಕಾರ್ಯತಾ

ವಚ್ಛೇದಕವಾಗುವಾಗ ಗುರುಧರ್ಮವಾದುದರಿಂದ ಅನಿತ್ಯಪ್ರಮಾತ್ವವು ಕಾರ್ಯತಾವಚ್ಛೇದಕವೇ ಅಲ್ಲ.

**ಇ.** ಅನಿತ್ಯಪ್ರಮಾ ಸಾಮಾನ್ಯಕ್ಕೆ ದೋಷವಿರೋಧಿಯಾದ ಗುಣ ಅಥವಾ ದೋಷಾಭಾವವು ಕಾರಣ, ಎಂದು ಹೇಳಬೇಕು. ಆದರೆ ಅವೆರಡೂ ಪ್ರಮಾವ್ಯಭಿಚಾರಿಗಳಾಗಿವೆ. ಹಿಂದೆ ಹೇಳಿದಂತೆ, ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿದೆ. ಆದರೆ, ಅಲ್ಲಿ ದೋಷ ಇರುವುದರಿಂದ ದೋಷವಿರೋಧಿಯಾದ ಗುಣ ಮತ್ತು ದೋಷಾಭಾವಗಳು, ಇಲ್ಲ. ಹೀಗೆ ವ್ಯತಿರೇಕ ವ್ಯಭಿಚಾರವಿರುವ ಕಾರಣ ಅನಿತ್ಯಪ್ರಮಾಕ್ಕೆ ಮಾತ್ರ ಕಾರಣವಾದ ಒಂದನ್ನು ಹೇಳಲಾಗುವುದಿಲ್ಲ.

ಈ ಮೂರು ವಿರುದ್ಧಾನುಮಾನಗಳಿಗೆ ಮೂಲಭೂತವಾದ ಒಂದು ಅಂಶ ಭ್ರಮೆಯೂ ಪ್ರಮಾ ಆಗಿದೆ, ಎನ್ನುವುದು. ಇದು ತಾರ್ಕಿಕರು ಗಮನಿಸದ ಒಂದು ಅಂಶ.

**2.** ಮಣಿಕಾರ ಸ್ವಸಿದ್ಧಾಂತವಾಗಿ ಅಂಗೀಕರಿಸಿರುವ ಎರಡನೆಯ ಪಕ್ಷ–ಪ್ರತ್ಯಕ್ಷ–ಅನುಮಿತಿ–ಶಾಬ್ದ ಪ್ರಮಾಗಳಿಗೆ ಪ್ರತ್ಯೇಕವಾದ ಗುಣಗಳು ಇವೆ, ಎಂದು. ಈ ಮೂರರಲ್ಲಿ ಪ್ರತ್ಯಕ್ಷಕ್ಕೆ ಎರಡು ಗುಣಗಳನ್ನು ಹೇಳಬಹುದು. ಒಂದು ವಿಷಯಸತ್ತ್ವ, ಎರಡನೆಯದು ಷಡ್ವಿಧ ಸನ್ನಿಕರ್ಷ. ಇವೆರಡನ್ನು ನಿರಾಕರಿಸುವ ಎರಡು ಅನುಮಾನಗಳ ಅಭಿಪ್ರಾಯ ಹೀಗೆ—

**ಅ.** ವಿಷಯಸತ್ತ್ವ, ಷಡ್ವಿಧಸನ್ನಿಕರ್ಷ ಇವುಗಳು ಪ್ರತ್ಯಕ್ಷಪ್ರಮಾಕ್ಕೆ ಕಾರಣ, ಎಂದು ಹೇಳಲು ಬರುವುದಿಲ್ಲ. ಯೋಗಿಗಳಿಗೆ ಅತೀತಾನಾಗತ ವಸ್ತುಗಳ ಪ್ರತ್ಯಕ್ಷವು ಬರುತ್ತದೆ. ಆದರೆ, ಅಲ್ಲಿ ವಿಷಯಗಳೇ ಇರುವುದಿಲ್ಲ. ಸನ್ನಿಕರ್ಷವೂ ಇರುವುದಿಲ್ಲ. ಹೀಗೆ ವಿಷಯ ಮತ್ತು ಸನ್ನಿಕರ್ಷಗಳಿಂದ ಅಜನ್ಯವಾದ ಪ್ರತ್ಯಕ್ಷದಲ್ಲೂ ಪ್ರತ್ಯಕ್ಷತ್ವವು ಇರುವುದರಿಂದ ಅದು ತದುಭಯ ಜನ್ಯತಾವಚ್ಛೇದಕವಲ್ಲ.

**ಆ.** ಅನುಮಿತಿ ಪ್ರಮಾಕ್ಕೆ ಯಥಾರ್ಥಲಿಂಗ ಪರಾಮರ್ಶವು ಗುಣ, ಎಂದು ಮಣಿಕಾರ ಹೇಳಿದ್ದಾನೆ. ಆದರೆ, ಅದು ಅನುಮಿತಿ ಪ್ರಮಾಕ್ಕೆ ಕಾರಣವಲ್ಲ. ಭಾಷ್ಪವನ್ನು ನೋಡಿ ಧೂಮ ಎಂದು ಭ್ರಮಿಸಿದಾಗ 'ವಹ್ನಿವ್ಯಾಪ್ಯಧೂಮವಾನ್ ಅಯಂ ದೇಶಃ' ಎಂಬ ಪರಾಮರ್ಶ ಬರುತ್ತದೆ. ಆದರಿಂದ 'ಅಯಂ ದೇಶಃ ವಹ್ನಿಮಾನ್' ಎಂಬ ಅನುಮಿತಿ ಬರುತ್ತದೆ. ಅಲ್ಲಿ ವಹ್ನಿಯೂ ಆಕಸ್ಮಾತ್ತಾಗಿ ಇದೆ. ಆಗ ಅನುಮಿತಿಯು ಪ್ರಮಾ ಆಗಿದೆ. ಆದರೆ, ಅಲ್ಲಿ ಯಥಾರ್ಥಪರಾಮರ್ಶ ಇಲ್ಲ. ಹೀಗೆ, ವ್ಯಭಿಚಾರವಿರುವುದರಿಂದ ಯಥಾರ್ಥಪರಾಮರ್ಶವು ಅನುಮಿತಿಗೆ ಕಾರಣವಾದ ಗುಣವಲ್ಲ.

**ಇ.** ಶಾಬ್ದಪ್ರಮಾಕ್ಕೆ ವಿವಕ್ಷಿತಾರ್ಥ ತತ್ತ್ವಜ್ಞಾನವು ಗುಣ, ಎಂದು ಮಣಿಕಾರನ ಮತವೂ ಸರಿಯಲ್ಲ. ಶುಕಾದಿ ಉಚ್ಚರಿತ ವಾಕ್ಯಜನ್ಯಶಾಬ್ದಬೋಧವು ಪ್ರಮಾ ಆಗಿದ್ದಾಗ ಅಲ್ಲಿ ಈ ಗುಣ ಇಲ್ಲ.

ಹೀಗೆ ಪ್ರಮಾವಿಶೇಷಗಳಿಗೆ ಗುಣವಿಶೇಷಗಳು ಕಾರಣ, ಎಂಬ ಪಕ್ಷವೂ ಪ್ರತ್ಯನುಮಾನಕ್ಕೆ ವಿರುದ್ಧವಾಗಿದೆ.

**3.** ಯಜ್ಞಪತ್ಯುಪಾಧ್ಯಾಯರು ಪಾರಿಭಾಷಿಕವಾಗಿ ಅನಿತ್ಯಪ್ರಮಾತ್ವವು ಗುಣಜನ್ಯತಾ-ವಚ್ಛೇದಕ ಎಂದು ಸಾಧನೆ ಮಾಡಿದ್ದಾರೆ. ಅನಿತ್ಯಪ್ರಮಾತ್ವವ್ಯಾಪ್ಯಧರ್ಮಗಳಾದ ಪ್ರತ್ಯಕ್ಷ

ಪ್ರಮಾತ್ವಾದಿಗಳು ಗುಣಜನ್ಯತಾವಚ್ಛೇದಕವಾದುದರಿಂದ ತಾದೃಶಧರ್ಮಾಶ್ರಯ ಮಾತ್ರ ವೃತ್ತಿತ್ವವೇ ಅನಿತ್ಯಪ್ರಮಾತ್ವಕ್ಕೆ ಪರತಸ್ತ್ವ ಎಂದು ಅವರ ಪ್ರತಿಪಾದನೆ. ಇದಕ್ಕೆ ವಿರುದ್ಧವಾಗಿ, ಅನಿತ್ಯಪ್ರಮಾತ್ವವು ವಿಷಯಮಾತ್ರೋಪಾಧಿಕಧರ್ಮವಾದುದರಿಂದ ತನ್ಮಾತ್ರವೃತ್ತಿತ್ವವು ಆದಕ್ಕೆ ಇಲ್ಲ, ಎಂದು ಸಾಧನೆ ಮಾಡಲಾಗಿದೆ. ಯಥಾವಸ್ಥಿತ–ಅರ್ಥವಿಷಯೀಕಾರಿತ್ವಂ ಪ್ರಮಾತ್ವಮ್. ಹೀಗೆ, ಪ್ರಮಾತ್ವ ಸ್ವರೂಪದಲ್ಲಿ ಸ್ವವಿಷಯವು ಸೇರಿಕೊಂಡಿದೆ. 'ತದಭಾವವತಿ ತತ್‌ಪ್ರಕಾರಕತ್ವಂ ಭ್ರಮಃ' ಈ ಭ್ರಮಸ್ವರೂಪದಲ್ಲಿ ಅಭಾವವು ಸೇರಿದೆ. ಆದರೆ, ಅದು ಭ್ರಮವಿಷಯವಲ್ಲ. ಆದ್ದರಿಂದ ಪ್ರಮಾ ಮಾತ್ರ ವಿಷಯಮಾತ್ರೋಪಾಧಿಕ ಧರ್ಮ, ಅದು ಗುಣಾದಿ ಜನ್ಯವಲ್ಲ.

**4.** ಭ್ರಮೆಗೆ ಪಿತ್ತಾದಿ ಅನನುಗತದೋಷಗಳು ಕಾರಣವಾದಂತೆ ಪ್ರಮಾಕ್ಕೂ ಅನನುಗತವಾದ ಗುಣವು ಕಾರಣ, ಎಂದೂ ಕೆಲವು ತಾರ್ಕಿಕರು ಹೇಳುತ್ತಾರೆ. ಪ್ರತ್ಯಕ್ಷಪ್ರಮಾಕ್ಕೆ ಸಂಶಯೋತ್ತರೋತ್ಪನ್ನ ವಾದಾಗ ವಿಶೇಷದರ್ಶನವು ಗುಣ. ಸ್ಥೂಲವಸ್ತುಗಳ ಪ್ರಮಾಕ್ಕೆ ಭೂಯಃ ಅವಯವೇಂದ್ರಿಯ ಸನ್ನಿಕರ್ಷವು ಗುಣ. ಹೀಗೆ, ಇಲ್ಲಿ ಎರಡು ಪಕ್ಷಗಳಿವೆ. ಅವೆರಡನ್ನೂ ಪ್ರತಿಪಕ್ಷಾನುಮಾನದಿಂದ ನಿರಾಕರಿಸಲಾಗಿದೆ.

**ಅ.** ಸಂಶಯೋತ್ತರ ಪ್ರಮಾವು ಸತ್ಯವಿಶೇಷದರ್ಶನದಿಂದ ಜನ್ಯವಾದಂತೆ ಅಸತ್ಯವಿಶೇಷ ದರ್ಶನದಿಂದಲೂ ಜನ್ಯವಾಗಿದೆ. 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂದೇಹಾನಂತರದಲ್ಲಿ ಕರದಲ್ಲಿ ಚರಣಭ್ರಾಂತಿ ಬಂದು 'ಪುರುಷತ್ವವ್ಯಾಪ್ಯಕರಾದಿಮಾನ್ ಅಯಮ್' ಎಂದು ವಿಶೇಷದರ್ಶನ ಬರುತ್ತದೆ. ತದುತ್ತರದಲ್ಲಿ 'ಪುರುಷ ಏವಾಯಂ' ಎಂದು ಪ್ರಮಾ ಹುಟ್ಟುತ್ತದೆ. ಈ ಪ್ರಮಾ ಅಸತ್ಯವಿಶೇಷದರ್ಶನದಿಂದ ಜನ್ಯವಾಗಿದೆ. ಆದ್ದರಿಂದ, ಸತ್ಯವಿಶೇಷದರ್ಶನವು ಸಂಶಯೋತ್ತರ ಪ್ರಮಾಕ್ಕೆ ಕಾರಣವಲ್ಲ.

**ಆ.** ಭೂಯೋಽವಯವೇಂದ್ರಿಯಸನ್ನಿಕರ್ಷವಿದ್ದರೂ ಪಿತ್ತದೋಷವಿದ್ದಾಗ 'ಪೀತಃ ಶಂಖಃ' ಎಂಬ ಭ್ರಮೆಯೂ ಬರುತ್ತದೆ. ಆದ್ದರಿಂದ ಅದೂ ಪ್ರತ್ಯಕ್ಷ ಪ್ರಮಾಕಾರಣವಾದ ಗುಣವಲ್ಲ.

**ಇ.** ಇನ್ನು ಕೊನೆಯದಾಗಿ, ತಾರ್ಕಿಕರ ಪ್ರಬಲ ವಾದ–ಪ್ರಮೆಯು ಭ್ರಮೆಗಿಂತ ಭಿನ್ನವಾಗ ಬೇಕಾದರೆ ಅದಕ್ಕೊಂದು ವಿಲಕ್ಷಣವಾದ ಕಾರಣವು ಇರಬೇಕು, ಎಂದು. ಇದಕ್ಕೆ ಇಲ್ಲಿ ಕೊಟ್ಟಿರುವ ಉತ್ತರ—ಭ್ರಮೆಯು ಪ್ರಮಾಕ್ಕಿಂತ ಭಿನ್ನವೇ ಅಲ್ಲ. ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿರುವಾಗ 'ಭ್ರಮಃ ಪ್ರಮಾ ನ' ಎಂಬ ಭೇದವನ್ನು ಹೇಳುವುದು ಹೇಗೆ? ಕೆಲವು ಜ್ಞಾನಗಳು, ಕರಣದಲ್ಲಿ ದೋಷವಿದ್ದಾಗ, ಪ್ರಕಾರಾಂಶದಲ್ಲಿ ಭ್ರಮೆಯಾಗುತ್ತವೆ. ಅದಕ್ಕೆ ಆ ದೋಷಗಳು ಕಾರಣ. ಆ ದೋಷಗಳು ಇಲ್ಲದಿರುವಾಗ ಕರಣಗಳಿಂದ ಸಹಜವಾಗಿಯೇ ಪ್ರಮಾ ಹುಟ್ಟುತ್ತದೆ.

ಹೀಗೆ ಈ ಪ್ರಕರಣದಲ್ಲಿ ತಾರ್ಕಿಕರು ಪರತಸ್ತ್ವವನ್ನು ಸಾಧನೆ ಮಾಡುವ ಎಲ್ಲಾ ಅನುಮಾನಗಳಿಗೂ ಪ್ರತ್ಯನುಮಾನವನ್ನು ಮಾಡಿ ಪ್ರಮಾಕ್ಕೆ ಸ್ವತಸ್ತ್ವವನ್ನು ಸಾಧನೆ ಮಾಡಲಾಗಿದೆ.

**॥ ಪ್ರಕರಣ – 16 ॥**

# ಪ್ರಕರಣ – 17

## ಅಪ್ರಾಮಾಣ್ಯಸ್ಯ ಪರತಸ್ತ್ವಮ್

### ನ್ಯಾಯದೀಪದಲ್ಲಿ ಅವತಾರಿಕೆ

**ನನು ಪ್ರಮಾಯಾಂ ಗುಣಸ್ಯೇವ ಭ್ರಮೇಽಪಿ ಅನ್ವಯವ್ಯತಿರೇಕವ್ಯಭಿಚಾರಾತ್, ಭ್ರಮವಿರೋಧಿ–ಗುಣ ನಿರಾಸಾದೌ ಉಪಕ್ಷಯೇನ ಅನ್ಯಥಾಸಿದ್ಧೇಶ್ಚ ದೋಷಃ ನ ಹೇತುರಿತಿ ಸೋಽಪಿ ಸ್ವತಃ ಸ್ಯಾತ್, ಇತ್ಯತಃ 'ಪರತಃ ಅಪ್ರಾಮಾಣ್ಯಮ್' ಇತಿ ತತ್ತ್ವನಿರ್ಣಯಾದ್ಯುಕ್ತಮ್ ಅಪ್ರಾಮಾಣ್ಯಸ್ಯ ಪರತಸ್ತ್ವಂ ಸಾಧಯಿತುಮ್ ಉಕ್ತದೋಷಂ ನಿರಸ್ಯನ್, ಭ್ರಮೇ ದೋಷಸ್ಯ ಹೇತುತ್ವಮಾಹ– ಅಪ್ರಮಾಯಾಂ ತ್ವಿತಿ ॥**

ಪ್ರಮಾಕ್ಕೆ ಗುಣವು ಹೇತು, ಎನ್ನುವ ಪರತಸ್ತ್ವವಾದಕ್ಕೆ ಎರಡು ದೋಷಗಳನ್ನು ಹೇಳಲಾಗಿದೆ–ಒಂದು ಅನ್ವಯ–ವ್ಯತಿರೇಕ ವ್ಯಭಿಚಾರ. ಎರಡು–ಅನ್ಯಥಾಸಿದ್ಧಿ. ಗುಣವು, ಪ್ರಮಾಕ್ಕೆ ವಿರೋಧಿಯಾದ ದೋಷನಿರಾಸದಲ್ಲಿ ಉಪಕ್ಷೀಣವಾದುದರಿಂದ ಅನ್ಯಥಾಸಿದ್ಧ, ಎಂದು. ಈ ಎರಡು ದೋಷಗಳು ಭ್ರಮಕಾರಣವಾದ ದೋಷಕ್ಕೂ ಹೇಳಬಹುದು–ದೋಷವು ಭ್ರಮವಿರೋಧಿಯಾದ ಗುಣನಿರಾಸದಲ್ಲಿ ಉಪಕ್ಷೀಣ. ಆದ್ದರಿಂದ ಅನ್ಯಥಾಸಿದ್ಧ. ದೋಷಕ್ಕೆ ಭ್ರಮೆಯೊಂದಿಗೆ ಅನ್ವಯ–ವ್ಯತಿರೇಕ ವ್ಯಭಿಚಾರಗಳೂ ಇವೆ. ಹೀಗೆ, ದೋಷವೂ ಅಪ್ರಾಮಾಣ್ಯಕ್ಕೆ ಕಾರಣವಲ್ಲವೆಂದಾಗಿ ಅಪ್ರಾಮಾಣ್ಯವೂ ಸ್ವತಃ, ಎಂದಾದೀತು. ಆದರೆ, 'ಪರತೋ ಅಪ್ರಾಮಾಣ್ಯಮ್' ಎಂದು ತತ್ತ್ವನಿರ್ಣಯಟೀಕಾದಲ್ಲಿ ಹೇಳಲಾಗಿದೆ. ಅದನ್ನು ಸಮರ್ಥಿಸಬೇಕಾಗಿದೆ. ಅದಕ್ಕಾಗಿ ವ್ಯಭಿಚಾರ ಮತ್ತು ಅನ್ಯಥಾಸಿದ್ಧಿದೋಷಗಳನ್ನು ಮೂಲದಲ್ಲಿ ಪರಿಹರಿಸಿ, ದೋಷವು ಭ್ರಮೆಗೆ ಕಾರಣ ಎಂದು ಸಮರ್ಥಿಸುತ್ತಾರೆ—

**अप्रमायां त्वनन्यथासिद्धान्वयव्यतिरेकित्वात् दोषः कारणम्। क्वचित् सादृश्यादिके दोषे सत्यपि भ्रमानुत्पत्तिः असंसर्गाग्रहादिहेत्वन्तरवैकल्यादिति नान्वयव्यभिचारः। विसंवादिशुकादिवाक्येऽपि दोषस्योक्तत्वान्न व्यतिरेकव्यभिचारोऽपि ॥**

ಅಪ್ರಾಮಾಣ್ಯಕ್ಕೆ ದೋಷವು ಕಾರಣ. ಅದು ಅನನ್ಯಥಾಸಿದ್ಧವೂ ಆಗಿದೆ, ಅನ್ವಯ ವ್ಯತಿರೇಕಗಳೂ ಇವೆ. ಕೆಲವೊಮ್ಮೆ ಸಾದೃಶ್ಯಾದಿದೋಷಗಳಿದ್ದರೂ ಭ್ರಮೆಯು ಹುಟ್ಟುವುದಿಲ್ಲ.

ಅಷ್ಟುಮಾತ್ರದಿಂದ ಅನ್ವಯವ್ಯಭಿಚಾರಾತ್ ದೋಷವು ಭ್ರಮೆಗೆ ಕಾರಣವೇ ಅಲ್ಲ, ಎಂದು ನಿರ್ಧರಿಸಬಾರದು. ಅಂತಹ ಸಂದರ್ಭದಲ್ಲಿ ಅಸಂಸರ್ಗಾಗ್ರಹರೂಪವಾದ ಭ್ರಮಕಾರಣವು ಇಲ್ಲದಿರುವುದರಿಂದಾಗಿ ಭ್ರಮೆಯು ಹುಟ್ಟುವುದಿಲ್ಲ. ಶುಕ್ತಿಯಲ್ಲಿ ರಜತಭ್ರಮೆ ಬರಬೇಕಾದರೆ ರಜತತ್ವಧರ್ಮಕ್ಕೂ ಶುಕ್ತಿಗೂ ಅಸಂಸರ್ಗದ ಜ್ಞಾನ ಇರಬಾರದು. ಅದು ಭ್ರಮಗೆ ಕಾರಣ. ಅಸಂಸರ್ಗ ಜ್ಞಾನ ಇದ್ದರೆ ಭ್ರಮೆ ಬರುವುದಿಲ್ಲ. ಸಾದೃಶ್ಯಜ್ಞಾನ ಇದ್ದರೂ ಅಸಂಸರ್ಗಜ್ಞಾನ ಇರುವುದರಿಂದ ಕೆಲವೊಮ್ಮೆ ಭ್ರಮೆ ಹುಟ್ಟುವುದಿಲ್ಲ, ಆದ್ದರಿಂದ ಅನ್ವಯವ್ಯಭಿಚಾರ ಇಲ್ಲ.

ವಿಸಂವಾದಿ ಶುಕಾದಿವಾಕ್ಯಗಳಿಂದ ಭ್ರಮಾತ್ಮಕಶಾಬ್ದಬೋಧ ಬರುವಾಗ, ಆ ವಾಕ್ಯವನ್ನು ಪ್ರಯೋಗಮಾಡಿರುವ ಶುಕಾದಿಗಳಲ್ಲಿ ದೋಷವು ಇಲ್ಲ. ಹೀಗೆ, ದೋಷವಿಲ್ಲದೆಯೂ ಭ್ರಮೆ ಬರುವುದರಿಂದ ವ್ಯತಿರೇಕವ್ಯಭಿಚಾರ, ಎಂಬ ಆಕ್ಷೇಪವೂ ಸರಿಯಲ್ಲ. ಅಂತಹ ಸಂದರ್ಭದಲ್ಲೂ, ವಿವಕ್ಷಿತಾರ್ಥತತ್ತ್ವಜ್ಞಾನಾಭಾವರೂಪವಾದ ದೋಷವು ಇದೆ, ಎಂದು ಹಿಂದೆಯೆ (ಪು.675. ಪ್ರ.14) ಹೇಳಲಾಗಿದೆ. ಆದ್ದರಿಂದ ವ್ಯತಿರೇಕವ್ಯಭಿಚಾರವೂ ಇಲ್ಲ.

## ನ್ಯಾಯದೀಪ

**ಹೇತೋಃ ವಿಶೇಷ್ಯಾಸಿದ್ಧಿಮ್ ನಿರಾಹ–ಕ್ವಚಿದಿತಿ। । 'ಕಾರಣೇ ಸತ್ಯಪಿ ಕಾರ್ಯಾನುತ್ಪಾದಸ್ಯ ಸಾಮಗ್ರ್ಯಭಾವೇನ ಉಪಪತ್ತೇಃ' ಇತಿ ತತ್ತ್ವನಿರ್ಣಯ ಟೀಕಾಂ ಹೃದಿಕೃತ್ವಾ ಆಹ–ಅಸಂಸರ್ಗಾಗ್ರಹಾತ್ ।। ವಿಶೇಷಾದರ್ಶನಾದಿಃ ಆದಿಪದಾರ್ಥಃ ।**

**ಏತೇನ ಯಾದೃಚ್ಛಿಕಸಂವಾದಿನ್ಯಪಿ ದೋಷಸ್ಯ ವ್ಯಭಿಚಾರಃ ನಿರಸ್ತಃ, ತತ್ರ ವಿಷಯಾಽಸತ್ತ್ವಾದಿ ಸಹಕಾರಿವಿರಹಾತ್ ।**

**ಉಕ್ತತ್ವಾದಿತಿ ।। ಭೂಯೋವಯವೇಂದ್ರಿಯ–ಸನ್ನಿಕರ್ಷಾದಿ ಹೇತುತ್ವಭಂಗೇ 'ತತ್ರಾಪಿ ಅನಿತ್ಯವಾಕ್ಯದೋಷಸ್ಯ ವಿವಕ್ಷಿತಾರ್ಥ ತತ್ತ್ವಜ್ಞಾನಾಭಾವಸ್ಯ ಚ' (ಪು.675) ಇತ್ಯಾದಿನಾ ಉಕ್ತತ್ವಾತ್ ಇತ್ಯರ್ಥಃ ।**

ಅಪ್ರಮಾಯಾಂ ದೋಷಃ ಕಾರಣಮ್, ಅನನ್ಯಥಾಸಿದ್ಧಾನ್ವಯ–ವ್ಯತಿರೇಕಿತ್ವಾತ್,ಎಂದು ಮೂಲದಲ್ಲಿ ವಿವಕ್ಷಿತವಾದ ಅನುಮಾನ. ಈ ಅನುಮಾನದ ಹೇತುವಿನಲ್ಲಿ ವಿಶೇಷ್ಯ 'ಅನ್ವಯ–ವ್ಯತಿರೇಕಿತ್ವಾತ್' ಎಂದು. ಈ ಹೇತುವು ಪ್ರಾಮಾಣ್ಯದಲ್ಲಿ ಇಲ್ಲ, ಎಂಬ ಅಸಿದ್ಧಿಯನ್ನು 'ಕ್ವಚಿತ್' ಎಂಬ ಮೂಲದಲ್ಲಿ ನಿರಾಕರಿಸಲಾಗಿದೆ. ಯಾದೃಚ್ಛಿಕಸಂವಾದಿಸ್ಥಲದಲ್ಲಿ ದೋಷಕ್ಕೆ ಅಪ್ರಾಮಾಣ್ಯಕಾರಣತ್ವವು ಇಲ್ಲ, ಎಂದು ಆಕ್ಷೇಪಿಸಿ ನಿರಾಕರಣೆ ಮಾಡುವ ಸಂದರ್ಭದಲ್ಲಿ ತತ್ತ್ವನಿರ್ಣಯ ಟೀಕೆಯಲ್ಲಿ (ಅಪ್ರಾಮಾಣ್ಯ ಚ, ಎಂಬ ಮೂಲ) ಹೀಗಿದೆ– ಕಾರಣವಿದ್ದಾಗಲೂ

ಕಾರ್ಯವು ಹುಟ್ಟದಿರುವುದಕ್ಕೆ ಕಾರಣಾಂತರದ ಅಭಾವವು ಹೇತುವಾಗಿರಬಹುದು–ಎಂದು. ಇದೇ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪ್ರಕೃತವ್ಯಭಿಚಾರವನ್ನು 'ಅಸಂಸರ್ಗಾಗ್ರಹಾತ್' ಎಂಬ ಮೂಲದಲ್ಲಿ ಪರಿಹರಿಸಲಾಗಿದೆ. ಇಲ್ಲಿರುವ ಆದಿಪದದಿಂದ ಭ್ರಮೆಗೆ ಕಾರಣವಾದ ವಿಶೇಷಾದರ್ಶನದ ಅಭಾವವನ್ನು ತೆಗೆದುಕೊಳ್ಳಬೇಕು. ಏವಂ ಚ, ದೋಷವಿದ್ದಾಗಲೂ ಕೆಲವೊಮ್ಮೆ ಭ್ರಮೆ ಹುಟ್ಟದಿರಲು ಅಸಂರ್ಗ–ಅಗ್ರಹಾದಿ ಕಾರಣಾಂತರಾಭಾವವೇ ನಿಮಿತ್ತ.

ಇದರಿಂದ, ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ದೋಷವು ಇದ್ದರೂ ಭ್ರಮೆ ಹುಟ್ಟಿಲ್ಲ, ಎಂಬ ವ್ಯಭಿಚಾರವನ್ನೂ ಪರಿಹರಿಸಿದಂತಾಗಿದೆ. ಅಲ್ಲೂ ಭ್ರಮೆಗೆ ಕಾರಣವಾದ ವಿಷಯಾಸತ್ವವು ಇಲ್ಲ, ಆದ್ದರಿಂದ ಅಲ್ಲೂ ಕಾರಣಾಂತರಾಭಾವದಿಂದಾಗಿಯೇ ಭ್ರಮ ಹುಟ್ಟಿಲ್ಲ.

ಮೂಲದಲ್ಲಿ, 'ಘುಣೋಚ್ಚರಿತ ವಿಸಂವಾದಿಸ್ಥಳದಲ್ಲೂ ಭ್ರಮೆಗೆ ಕಾರಣವಾದ ದೋಷವು ಇದೆ, ಎಂದು ಹಿಂದೆ ಹೇಳಲಾಗಿದೆ' ಎಂದಿದೆ. ಹಿಂದೆ ಪ್ರಮಾ ಹೇತು–ಗುಣನಿರಾಸಸಂದರ್ಭದಲ್ಲಿ (ಪು.675) ಅದನ್ನು ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ಅನನ್ಯಥಾಸಿದ್ಧೇತ್ಯಾದಿ ಹೇತೋಃ ವಿಶೇಷಣಾಸಿದ್ಧಿಮಾಶಂಕ್ಯ ನಿರಾಹ–ನಚೇತಿ॥**

ಹೇತುವಿನಲ್ಲಿ ವಿಶೇಷ್ಯಾಸಿದ್ಧಿದೋಷವನ್ನು ಪರಿಹರಿಸಿ 'ಅನನ್ಯಥಾಸಿದ್ಧ' ಎಂಬ ವಿಶೇಷಣಾಸಿದ್ಧಿಯನ್ನು 'ನಚ' ಎಂದು ಪರಿಹರಿಸಲಾಗಿದೆ.

**न च प्रमायां गुणः प्रतिबन्धकस्य दोषस्येव अप्रमायामपि दोषः प्रतिबन्धकस्य गुणस्य दोषाभावस्य वा निरासक इत्यन्यथासिद्ध इत्यप्रामाण्यमपि स्वतः स्यादिति वाच्यम्। 'पीतः शङ्ख' इत्यादिप्रत्यक्षे भूयोऽवयवेन्द्रियसन्निकर्षशङ्खत्वादिविशेषदर्शनादिरूपे, गन्धप्रागभावावच्छिन्नो घट इत्याद्यनुमाने सत्यपरामर्शरूपे, घटोऽस्तीति वक्तव्ये पटोऽस्तीति वाक्यजन्यज्ञाने विवक्षितार्थतत्वज्ञानरूपे च गुणे सत्यपि पित्त–बाध–प्रमादरूपेण दोषेण भ्रमोत्पादनेन दोषस्य गुणनिरासोपक्षीणत्वायोगात् । स्वाभावनिरसोपक्षीणत्वेनान्यथासिद्धौ च सहकारिमात्रापलापप्रसङ्गात् ।।**

ಗುಣವು, ಪ್ರಮಾಪ್ರತಿಬಂಧಕವಾದ ದೋಷನಿರಾಸಕವಾಗಿ ಅನ್ಯಥಾಸಿದ್ಧವಾದಂತೆ,

ಭ್ರಮೆಗೂ ದೋಷವು, ಪ್ರತಿಬಂಧಕವಾದ ಗುಣ ಅಥವಾ ದೋಷಾಭಾವಕ್ಕೆ ನಿರಾಸಕವಾದುದರಿಂದ ಅನ್ಯಥಾ ಸಿದ್ಧವಾಗಲಿ. ಹೀಗೆ, ದೋಷವು ಭ್ರಮೆಗೆ ಕಾರಣವಲ್ಲವಾದುದರಿಂದ ಅಪ್ರಾಮಾಣ್ಯವೂ ಪ್ರಾಮಾಣ್ಯದಂತೆ ಸ್ವತಃ ಎಂದಾಗಲಿ, ಈ ಆಕ್ಷೇಪ ಸರಿಯಲ್ಲ. 'ಭೂಯೋಽವಯವೇಂದ್ರಿಯ ಸನ್ನಿಕರ್ಷವು ಪ್ರತ್ಯಕ್ಷಕ್ಕೆ ಗುಣ. ಅದರಂತೆ ಪೀತತ್ವಾಭಾವವ್ಯಾಪ್ಯ ಶಂಖತ್ವದ ವಿಶೇಷದರ್ಶನವೂ ಗುಣ. ಪ್ರಮಾಕ್ಕೆ ಬೇಕಾದ ಈ ಗುಣಗಳು ಇದ್ದರೂ ''ಪೀತಃ ಶಂಖಃ'' ಎಂಬ ಭ್ರಮೆಯೇ ಬರುತ್ತದೆ. ಇಲ್ಲಿ ಪಿತ್ತಾದಿದೋಷವು ಗುಣಕ್ಕೆ ನಿರಾಸಕವಾಗಿಲ್ಲ. ನೇರವಾಗಿ ಭ್ರಮೆಗೇ ಕಾರಣವಾಗಿದೆ.

ಇದರಂತೆ, ಅನುಮಿತಿ ಸ್ಥಳದಲ್ಲೂ ದೋಷವೇ ಭ್ರಮಕಾರಣವಾಗಿದೆ– ಗಂಧಪ್ರಾಗಭಾವವಾನ್ ಘಟಃ, ಗಂಧವಾನ್, ಪೃಥಿವೀತ್ವಾತ್ ಎಂಬ ಅನುಮಾನದಲ್ಲಿ ಗಂಧವ್ಯಾಪ್ಯ–ಪೃಥಿವೀತ್ವವಾನ್ ಘಟಃ, ಎಂಬ ಪ್ರಮಾತ್ಮಕಪರಾಮರ್ಶರೂಪವಾದ ಗುಣವಿದೆ. ಬಾಧರೂಪದೋಷವು ಅದಕ್ಕೆ ನಿರಾಸಕವಾಗಿಲ್ಲ.

ಶಾಬ್ದಸ್ಥಳದಲ್ಲಿ–'ಘಟೋಽಸ್ತಿ' ಎನ್ನುವ ಬದಲು ಪ್ರಮಾದವಶಾತ್ 'ಪಟೋಽಸ್ತಿ' ಎಂದು ಹೇಳಿದಾಗ ವಕ್ತೃವಿಗೆ ವಿವಕ್ಷಿತಾರ್ಥತತ್ತ್ವಜ್ಞಾನರೂಪವಾದ ಗುಣವು ಇದೆ. ಅದಕ್ಕೆ ಪ್ರಮಾದರೂಪದೋಷವು ನಿರಾಸವಾಗಿಲ್ಲ. ಶಾಬ್ದಭ್ರಮೆಯೇ ಹುಟ್ಟುತ್ತದೆ.

ಹೀಗೆ, ದೋಷವು ಗುಣ ನಿರಾಸೋಪಕ್ಷೀಣ ಎಂದು ಅನ್ಯಥಾಸಿದ್ಧಿಯನ್ನು ಹೇಳಲಾಗುವುದಿಲ್ಲ. ಇನ್ನು, ದೋಷವು ದೋಷಾಭಾವನಿರಾಸಕವಾದುದರಿಂದ ಅನ್ಯಥಾಸಿದ್ಧವಾಗುವುದಾದಲ್ಲಿ ದಂಡಾದಿಗಳೂ ಘಟಾದಿಗಳಿಗೆ ಕಾರಣವಲ್ಲವೆಂದಾದೀತು. ಅವುಗಳೂ ಘಟಹುಟ್ಟಲು ಪ್ರತಿಬಂಧಕವೆನಿಸಬಹುದಾದ ದಂಡಾಭಾವಕ್ಕೆ ನಿರಾಸಕವಾಗಿವೆ, ಅನ್ಯಥಾಸಿದ್ಧವೆಂದಾದೀತು. ಇದರಿಂದ ಕಾರ್ಯಕ್ಕೆ ಎಲ್ಲಾ ಸಹಕಾರಿಗಳೂ ಅನ್ಯಥಾಸಿದ್ಧವಾಗುವುದರಿಂದ ಲೋಕಸಿದ್ಧವಾದ ಸಹಕಾರಿಗಳನ್ನೇ ಅಪಲಾಪ ಮಾಡಬೇಕಾದೀತು.

## ನ್ಯಾಯದೀಪ

**ಪ್ರತಿಬಂಧಕಸ್ಯೇತಿ ॥ ಪ್ರಮಾಪ್ರತಿಬಂಧಕಸ್ಯ ದೋಷಸ್ಯ ಯಥಾ ನಿರಾಸಕಃ ತಥಾ ಅಪ್ರಮಾಪ್ರತಿಬಂಧಕಸ್ಯ ಗುಣಸ್ಯ, ಇತ್ಯರ್ಥಃ ।**

**ದೋಷಸ್ಯ ಅನ್ಯಥಾಸಿದ್ಧಿಂ ವದತಾ ಹಿ ಗುಣಸ್ಯ ಪ್ರತಿಬಂಧಕತ್ವಂ ಉಪೇತ್ಯ ತದಭಾವಸ್ಯ ಭ್ರಮೇ ಕಾರಣತ್ವಂ ವಾ, ಪ್ರಮಾಯಾಂ ದೋಷಾಭಾವಸ್ಯೇವ ಪ್ರಯೋಜಕತ್ವಂ ವಾ ವಾಚ್ಯಮ್ । ಆದ್ಯೇ ಭ್ರಮಸ್ಯ ನ ಸ್ವತಸ್ತ್ವಾಪತ್ತಿಃ । ದ್ವಿತೀಯೇ ಕಿಂ ಗುಣಾಭಾವ ಏವ ಪ್ರಯೋಜಕಃ, ಅಥ ಉತ್ತೇಜಕಾಭಾವವಿಶಿಷ್ಟಗುಣಃ ಪ್ರತಿಬಂಧಕಃ, ತದಭಾವಶ್ಚ ಪ್ರಯೋಜಕಃ ಇತಿ ವಾ । ನಾದ್ಯಃ । ವ್ಯಭಿಚಾರಾದಿತಿ**

**ಭಾವೇನಾಹ–ಪೀತಃ ಶಂಖಃ ಇತ್ಯಾದಿನಾ ॥ ವಿಶೇಷದರ್ಶನಾದಿರೂಪ ಇತಿ ॥ ಪೀತತ್ವಾದಿ–ಅಸಂಸರ್ಗಗ್ರಹಃ ಆದಿಪದಾರ್ಥಃ। ಸಪ್ತಮ್ಯಂತರೂಪ-ಪದಾನಾಂ ಗುಣಪದೇನ ಅನ್ವಯಃ।**

ದೋಷವು ಭ್ರಮೆಗೆ ಅನ್ಯಥಾ ಸಿದ್ಧವಾಗಲಿ, ಎಂದು ಆಕ್ಷೇಪಿಸುವವರ ಅಭಿಪ್ರಾಯವೇನು?

1. ಗುಣವು ಭ್ರಮೆಗೆ ಪ್ರತಿಬಂಧಕ, ತದಭಾವವು ಭ್ರಮೆಗೆ ಕಾರಣ, ಎಂದೋ ?

2. ಅಥವಾ, ಪ್ರಮೆಗೆ ದೋಷಾಭಾವವು ಪ್ರಯೋಜಕವಾದಂತೆ, ಭ್ರಮೆಗೂ ಗುಣಾಭಾವವೂ ಪ್ರಯೋಜಕವೆಂದೋ?

ಮೊದಲ ಪಕ್ಷದಲ್ಲಿ ಭ್ರಮೆಗೆ ಸ್ವತಸ್ತ್ವವು ಸಿದ್ಧವಾಗುವುದಿಲ್ಲ. ಜ್ಞಾನಕ್ಕೆ ಕಾರಣವಲ್ಲದ ಗುಣಾಭಾವವು ಭ್ರಮೆಗೆ ಕಾರಣವಾಗಿದೆಯಾದ್ದರಿಂದ,

ಎರಡನೆ ಪಕ್ಷದಲ್ಲೂ ಎರಡು ಪ್ರಶ್ನೆಗಳಿಗೆ ಅವಕಾಶವಿದೆ—

2.1. ಗುಣಾಭಾವ ಮಾತ್ರವೇ ಪ್ರಯೋಜಕವೋ?

2.2 ಅಥವಾ, ಉತ್ತೇಜಕಾಭಾವವಿಶಿಷ್ಟವಾದ ಗುಣವು ಪ್ರತಿಬಂಧಕ, ತದಭಾವವು ಪ್ರಯೋಜಕವೋ?

ಇವೆರಡರಲ್ಲಿ ಮೊದಲನೆಯದು (2.1) ಸರಿಯಲ್ಲ ಎಂದು 'ಪೀತಃ ಶಂಖಃ' ಇತ್ಯಾದಿ ಮೂಲದಿಂದ ತಿಳಿಸಲಾಗಿದೆ. ಅಲ್ಲಿ ಗುಣ ಇದ್ದರೂ ಭ್ರಮೆ ಹುಟ್ಟಿದೆ.

## ನ್ಯಾಯದೀಪ

**ನನು ಕ್ವಚಿತ್ ಕಶ್ಚಿದ್ ಗುಣಃ, ಇತಿ ಅನನುಗತಪಕ್ಷೇ 'ಪೀತಃ ಶಂಖಃ' ಇತ್ಯಾದೌ ವಿಪರೀತ ಪ್ರತ್ಯಕ್ಷಾದಿರೇವ ಕಶ್ಚಿದನ್ಯೋ ಗುಣಃ, ಸ ತತ್ರ ನೇತಿ ವದಂತಂ ಪ್ರತ್ಯಾಹ–ಗಂಧೇತಿ ॥**

**ಯದ್ವಾ, ವಿಶೇಷಪ್ರಮಾ ಗುಣಃ ಇತಿ ಮತೇ ವ್ಯಭಿಚಾರೋಕ್ತಿರಿಯಮ್, ಇತ್ಯುಪೇತ್ಯ ಪ್ರತ್ಯಕ್ಷಾದಿಭ್ರಮತ್ರಯೇಽಪಿ ಗುಣಾಭಾವವ್ಯಭಿಚಾರೋಕ್ತಿರಿಯಮ್ ಇತಿ ಬೋಧ್ಯಮ್ ।**

**ಪಿತ್ತೇತಿ ॥ ಪ್ರತ್ಯಕ್ಷೇ ಪಿತ್ತಂ, ಅನುಮಾನೇ ಬಾಧಃ, ಶಬ್ದೇ ಪ್ರಮಾದಃ ದೋಷಃ ಇತಿ ವಿವೇಕಃ । ದೋಷಾಭಾವಸ್ಯ ವಾ ನಿರಾಸಕಃ ಇತ್ಯೇತನ್ನಿರಾಹ–ಸ್ವಾಭಾವೇತಿ॥ ಸಹಕಾರೀತಿ ॥ ದಂಡಚಕ್ರಾದೇರಪಿ ಸ್ವಾಭಾವನಿರಾಸೋಪಕ್ಷಯೇಣ ಮೃತ್ಪಿಂಡಃ**

**ಏಕ ಏವ ಹೇತುಃ, ನ ತ್ವನ್ಯಃ ಕಶ್ಚಿದಪಿ ಇತಿ ಸ್ಯಾತ್, ಇತಿ ಅತಿಪ್ರಸಂಗಃ, ಇತ್ಯರ್ಥಃ ॥**

ಅನನುಗತವಾದ ಗುಣವು ಪ್ರತ್ಯಕ್ಷಕಾರಣ, ಎಂಬ ಪಕ್ಷದಲ್ಲಿ ಕೆಲವು ಕಡೆ, ಯಾವುದೋ ಒಂದು, ಪ್ರಮಾಕ್ಕೆ ಗುಣ, ನಿರ್ದಿಷ್ಟವಾದ ಆ ಒಂದು ಗುಣವು ಸರ್ವತ್ರ ಇಲ್ಲ, ಎಂದು ಅಭಿಪ್ರಾಯ. ಹೀಗಿರುವಾಗ 'ಪೀತಃ ಶಂಖಃ' ಎಂಬ ಸ್ಥಳದಲ್ಲಿ ಭೂಯೋಽವಯವೇಂದ್ರಿಯಸನ್ನಿಕರ್ಷವೇ ಗುಣವಾಗಬೇಕೆಂದೇನಿಲ್ಲ, ಆದ್ದರಿಂದ ಅಲ್ಲಿ ದೋಷವಿದ್ದರೂ ಗುಣವಿದೆ, ಹೀಗೆ ದೋಷವು ಗುಣನಿರಾಸದಲ್ಲಿ ಉಪಕ್ಷೀಣವಾಗುವುದಿಲ್ಲ, ಎಂದು ನಿರ್ಧರಿಸಲಾಗದು. ಅಲ್ಲಿ 'ಪೀತಃ ಶಂಖಃ' ಎಂಬ ಪ್ರತ್ಯಕ್ಷಕ್ಕೆ ವಿರುದ್ಧವಾದ 'ಶಂಖಃ ನ ಪೀತಃ' ಎಂಬ ಪ್ರತ್ಯಕ್ಷವೇ ಗುಣ. ಅಂತಹ ಗುಣಕ್ಕೆ ದೋಷವು ನಿರಾಸಕವಾಗಿದೆ, ಹೀಗೆ ಸಮಾಧಾನ ಹೇಳಿದರೆ, ಬೇರೊಂದು ಕಡೆ ಅದಕ್ಕೆ ನಿದರ್ಶನವನ್ನು–'ಗಂಧಪ್ರಾಗಭಾವಾವಚ್ಛಿನ್ನಃ ಘಟಃ' ಎಂದು ಮೂಲದಲ್ಲಿ ತೋರಿಸಲಾಗಿದೆ.

ಅಥವಾ ಈ ಗ್ರಂಥಕ್ಕೆ ಹೀಗೂ ಸಾಂಗತ್ಯವನ್ನು ಹೇಳಬಹುದು. 'ವಿಶೇಷಪ್ರಮಾ ಗುಣಃ' ಎಂಬ ಪಕ್ಷದಲ್ಲಿ 'ಪೀತಃ ಶಂಖಃ' ಎಂಬ ಸ್ಥಳದಲ್ಲಿ ವ್ಯಭಿಚಾರವನ್ನು ಹೇಳಿ ಮುಂದಿನ ಗ್ರಂಥದಲ್ಲಿ ಪ್ರತ್ಯಕ್ಷಾನುಮಿತಿ–ಶಾಬ್ದಬೋಧ ಈ ಮೂರರಲ್ಲೂ ವ್ಯಭಿಚಾರವನ್ನು ತೋರಿಸಲಾಗಿದೆ.

ಮೂಲದಲ್ಲಿ ಮೂರೂ ದೋಷಗಳನ್ನು ಜೊತೆಯಾಗಿ ಹೇಳಲಾಗಿದೆ. ಅವುಗಳನ್ನು ಹೀಗೆ ವಿಂಗಡಿಸಿಕೊಳ್ಳಬೇಕು–ಪ್ರತ್ಯಕ್ಷೆ ಪಿತ್ತದೋಷ, ಅನುಮಾನಕ್ಕೆ ಬಾಧದೋಷ, ಶಾಬ್ದಬೋಧಕ್ಕೆ ಪ್ರಮಾದದೋಷ, ಎಂದು.

ಗುಣಕ್ಕೆ ನಿರಾಸಕವಲ್ಲ, ಎಂದು ತಿಳಿಸಿ ದೋಷಾಭಾವಕ್ಕೂ ದೋಷವು ನಿರಾಸಕವಾದುದರಿಂದ ಅನ್ಯಥಾಸಿದ್ಧವಲ್ಲ, ಎಂದು ನಿರಾಕರಿಸಲು 'ಸ್ವಾಭಾವ' ಎಂಬ ಮೂಲವಾಕ್ಯವಿದೆ. ಸ್ವಾಭಾವನಿರಾಸಕವಾದುದು ಅನ್ಯತ್ರೋಪಕ್ಷೀಣವಾದುದರಿಂದ ಅನ್ಯಥಾಸಿದ್ಧ, ಎಂದು ಹೇಳಿದರೆ, ದಂಡ–ಚಕ್ರಾದಿಗಳೂ ಸ್ವಾಭಾವ ನಿರಾಸೋಪಕ್ಷೀಣವಾದುದರಿಂದ ಘಟಕ್ಕೆ ಅನ್ಯಥಾಸಿದ್ಧವೆಂದಾಗಿ ಮೃತ್ಪಿಂಡ ಒಂದೇ ಘಟಕ್ಕೆ ಕಾರಣವಾದೀತು, ಇನ್ನಾವುದೂ ಕಾರಣವಾಗಲಿಕ್ಕಿಲ್ಲ, ಎಂದು ಮೂಲದ ಅಭಿಪ್ರಾಯ.

## ನ್ಯಾಯದೀಪದಲ್ಲಿ ಅವತಾರಿಕೆ

**ದ್ವಿತೀಯಕಲ್ಪೇಽಪಿ (2.2) ಉತ್ತೇಜಕಂ ಕಿಂ ವಿಷಯಾಸತ್ತ್ವಂ, ಅಥ ಪಿತ್ತಾದಿದೋಷಃ? ಆದ್ಯಮಾಶಂಕತೇ–ನನ್ವಿತಿ ॥**

ಭ್ರಮೆಗೆ ಗುಣಾಭಾವವು ಪ್ರಯೋಜಕಮಾತ್ರ, ಕಾರಣವಲ್ಲ ಎಂಬ ದ್ವಿತೀಯಕಲ್ಪದಲ್ಲಿ ಎರಡು ವಿಕಲ್ಪಗಳನ್ನು ಮಾಡಲಾಗಿತ್ತು–ಗುಣಾಭಾವ ಮಾತ್ರ ಪ್ರಯೋಜವೋ? ಅಥವಾ,

ಉತ್ತೇಜಕಾಭಾವ ವಿಶಿಷ್ಟವಾದ ಗುಣದ ಅಭಾವವೋ? ಎಂದು. ಎರಡನೆಯ ಕಲ್ಪದಲ್ಲೂ ಮತ್ತೆರಡು ವಿಕಲ್ಪಗಳಿವೆ–

2.2.1 ಭ್ರಮೆಗೆ ಉತ್ತೇಜಕವಾದುದು ವಿಷಯದ ಅಸತ್ತ್ವವೋ,

2.2.2 ಅಥವಾ ಪಿತ್ತಾದಿ ದೋಷವೋ?, ಎಂದು.

ಇವೆರಡರಲ್ಲಿ ಮೊದಲನೆಯ ಉತ್ತೇಜಕವನ್ನು ಪರಿಗಣಿಸಿ 'ನನು' ಎಂದು ಮೂಲದಲ್ಲಿ ಆಶಂಕೆ ಮಾಡಲಾಗಿದೆ.

**ननु तथापि औत्सर्गिकस्याप्रामाण्यस्य क्वचिद्गुणः प्रतिबन्धकः। पीतःशङ्ख इत्यादौ तु विषयासत्वमुत्तेजकम् । त्वन्मते यादृच्छिक-संवादिलिङ्गाभासादौ प्रमाप्रतिबन्धकस्य दोषस्य विषयसत्त्वमिवेति चेन्न । अयथार्थधूमज्ञानेन ज्ञापनीयस्य वह्नेर्दैवात् सत्त्ववद्गुणेन ज्ञापनीयस्य श्वैत्यादेः शङ्खे सत्त्वेन विषयासत्त्वस्याभावात्। आरोप्यपीतत्वासत्त्वस्य च दोषापगमदशायामपि सत्त्वेन तदापि भ्रमापातात् ॥**

ಅಪ್ರಮಾಕ್ಕೆ ಕರಣಗತ ಶಕ್ತಿಯೇ ಕಾರಣ. ಅದಕ್ಕೆ ಗುಣವು ಪ್ರತಿಬಂಧಕ. ಗುಣವಿದ್ದಾಗ ಕರಣಗತವಾದ ಸಹಜಶಕ್ತಿಯು ಪ್ರತಿಬದ್ಧವಾಗಿ ಪ್ರಮಾ ಹುಟ್ಟುತ್ತದೆ. 'ಪೀತಃ ಶಂಖಃ' ಎಂಬ ಸ್ಥಳದಲ್ಲಿ ವಿಶೇಷದರ್ಶನಾದಿಗುಣವು ಪ್ರತಿಬಂಧಕವಾಗಿ ಇದ್ದರೂ ಅದಕ್ಕೆ ವಿಷಯಾಸತ್ತ್ವರೂಪವಾದ ಉತ್ತೇಜಕವು ಇರುವುದರಿಂದ ಭ್ರಮೆಯು ಹುಟ್ಟುತ್ತದೆ. ಅಲ್ಲೂ ಭ್ರಮೆ ಹುಟ್ಟಲು ಬೇಕಾದ ಉತ್ತೇಜಕಾಭಾವ ವಿಶಿಷ್ಟವಾದ ಗುಣದ ಅಭಾವ ಇದೆ. ಸ್ವತಸ್ತ್ವವಾದಲ್ಲೂ ಉತ್ತೇಜಕಾಭಾವ ವಿಶಿಷ್ಟವಾದ ದೋಷದ ಅಭಾವವೇ ಪ್ರಮಾಕ್ಕೆ ಪ್ರಯೋಜಕ. ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ದೋಷರೂಪವಾದ ಪ್ರತಿಬಂಧಕವು ಇದ್ದರೂ ವಿಷಯಸತ್ತ್ವರೂಪವಾದ ಉತ್ತೇಜಕವೇ ಇದೆ, ಎಂದು ಹಿಂದೆಯೇ ಹೇಳಲಾಗಿದೆ. ಪ್ರಮೆಗೆ ವಿಷಯಸತ್ತ್ವವು ಉತ್ತೇಜಕವಾದಂತೆ ಭ್ರಮೆಗೂ ವಿಷಯಾಸತ್ತ್ವವು ಉತ್ತೇಜಕ. ಹೀಗೆ ಪರತಸ್ತ್ವವಾದಿಗಳು ಹೇಳಿದರೆ ಅದು ಯುಕ್ತವಲ್ಲ.

ವಿಷಯ–ಅಸತ್ತ್ವವು ಉತ್ತೇಜಕ ಎಂದರೆ, ಯಾವ ವಿಷಯದ ಅಸತ್ತ್ವ? 'ಪೀತಃ ಶಂಖಃ' ಎಂಬಲ್ಲಿ ಶುಕ್ಲತ್ವವ್ಯಾಪ್ಯ ಶಂಖತ್ವವಾನ್, ಎಂಬ ವಿಶೇಷದರ್ಶನರೂಪವಾದ ಗುಣವು ಇದೆ. ಆದರಿಂದ ಜ್ಞಾಪ್ಯವಾದ ವಿಷಯ ಎಂದರೆ ಶ್ವೇತರೂಪ. ಅದು ಶಂಖದಲ್ಲಿ ಇದೆ. ಆದ್ದರಿಂದ ವಿಷಯಾಸತ್ತ್ವ ಎಂದರೆ ಆ ವಿಷಯದ ಅಸತ್ತ್ವ, ಎಂದು ಹೇಳಲು ಆಗದು. ಇನ್ನು 'ಪೀತಃ ಶಂಖಃ' ಎಂಬ

ಭ್ರಮವಿಷಯವಾದ ಪೀತರೂಪದ ಅಸತ್ವವು ಉತ್ತೇಜಕ, ಎಂದು ಹೇಳಬೇಕು. ಆದರೆ, ಅದು ಉತ್ತೇಜಕವಾದರೆ ಪಿತ್ತದೋಷವು ಹೋದಮೇಲೂ ಪೀತತ್ವಾಭಾವರೂಪವಾದ ಉತ್ತೇಜಕವು ಇರುವುದರಿಂದ ಆಗಲೂ 'ಪೀತಃ ಶಂಖಃ' ಎಂಬ ಭ್ರಮೆ ಬರಬೇಕಾದೀತು. ಆಗ ಪ್ರಮಾಕಾರಣವಾದ ವಿಶೇಷದರ್ಶನರೂಪಗುಣವು ಭ್ರಮೆಗೆ ಪ್ರತಿಬಂಧಕವಾಗಿದ್ದರೂ ಆ ಗುಣವು ಉತ್ತೇಜಕವಿಶಿಷ್ಟವೇ ಆಗಿದೆ, ಉತ್ತೇಜಕಾಭಾವವಿಶಿಷ್ಟವಾಗಿಲ್ಲ. ಆದರಿಂದ ಉತ್ತೇಜಕಾಭಾವವಿಶಿಷ್ಟ-ಗುಣಾಭಾವರೂಪ ಪ್ರಯೋಜಕವಿರುವುದರಿಂದ ಭ್ರಮೆ ಬರಬೇಕಾದೀತು. ಆಗ ದೋಷವಿಲ್ಲವಾದುದರಿಂದ ಭ್ರಮೆಯು ಬರುವುದಿಲ್ಲ, ಎಂದು ಹೇಳಲಾಗದು. ಹಿಂದೆ ಹೇಳಿದಂತೆ ದೋಷವು ಗುಣನಿರಾಸದಲ್ಲೇ ಉಪಕ್ಷೀಣ, ಭ್ರಮೆಗೆ ಅನ್ಯಥಾಸಿದ್ಧ ಎಂದು ಪರತಸ್ತ್ವವಾದಿಗಳೇ ಒಪ್ಪಿದ್ದಾರೆ. ಆದ್ದರಿಂದ ಅಂತಹ ಸಂದರ್ಭದಲ್ಲಿ ಭ್ರಮೆ ಬರಲಿ, ಎಂಬ ಆಪತ್ತಿಯನ್ನು ಪರಿಹಾರ ಮಾಡಲು ಆಗುವುದಿಲ್ಲ. ಹೀಗೆ, ವಿಷಯಾಸತ್ವವು ಉತ್ತೇಜಕವಲ್ಲ.

## ನ್ಯಾಯದೀಪ

**ಔತ್ಸರ್ಗಿಕಸ್ಯೇತಿ ॥ ಕಾರಣಗತ-ಸಹಜಶಕ್ತಿಜನ್ಯಸ್ಯ, ಇತ್ಯರ್ಥಃ । ಕ್ವಚಿದಿತಿ ॥ ಪ್ರಮೋತ್ಪತ್ತಿಸ್ಥಲೇ ಇತ್ಯರ್ಥಃ । ಉತ್ತೇಜಕಮಿತಿ ॥ ತಥಾಚ ತದಭಾವವಿಶಿಷ್ಟ-ಗುಣಾಭಾವಃ ಅಪ್ರಾಮಾಣ್ಯೇ ಪ್ರಯೋಜಕಃ ಇತಿ, ಉಕ್ತಸ್ಥಲೇಷು ತದಭಾವಾದೇವ ಪ್ರಮಾಯಾಃ ಅಭಾವೇ, ಕಾರಣಗತಸಹಜ ಶಕ್ತ್ಯೈವ ಅಪ್ರಮೋತ್ಪಾದಃ, ನ ದೋಷರೂಪ ಹೇತುಬಲೇನ । ದೋಷಸ್ತು ತತ್ರ ಅವರ್ಜನೀಯ ಸನ್ನಿಧಿರೇವ, ಇತಿ ಭಾವಃ । ತ್ವನ್ಮತೇ ಇತಿ ॥ 'ಯಾದೃಚ್ಛಿಕಸ್ಯ ವಿಷಯಸತ್ವಸ್ಯ ಉತ್ತೇಜಕತ್ವೇ' (ಪು.702) ಇತ್ಯಾದಿನಾ ದೋಷಾಭಾವ-ಹೇತುತ್ವಭಂಗೇ ತಥೋಕ್ತೇಃ ಇತಿ ಭಾವಃ ।**

**ವಿಷಯಾಸತ್ವಮಿತ್ಯತ್ರ, ವಿಷಯಪದೇನ ಗುಣೇನ ಜ್ಞಾಪ್ಯಃ ವಿಷಯಃ ಅಭಿಮತಃ ಉತ ಭ್ರಮವಿಷಯಃ? ಇತಿ ವಿಕಲ್ಪ್ಯ ಆದ್ಯಂ ನಿರಾಹ-ಅಯಥಾರ್ಥೇಽತಿ ॥ ದ್ವಿತೀಯಂ ನಿರಾಹ-ಆರೋಪ್ಯೇತಿ ॥ ತದಾಪೀತಿ ॥ ಪ್ರತಿಬಂಧಕಸ್ಯ ಗುಣಸ್ಯ ಉತ್ತೇಜಕಯುಕ್ತತ್ವೇನ ಉತ್ತೇಜಕಾಭಾವವಿಶಿಷ್ಟ-ಗುಣಾಭಾವಸ್ಯ ಸತ್ವಾತ್, ಇತಿ ಭಾವಃ ।**

'ಪೀತಃ ಶಂಖಃ' ಎಂಬಲ್ಲಿ ಗುಣವು ಭ್ರಮೆಗೆ ಪ್ರತಿಬಂಧಕವಾಗಿ ಇದ್ದರೂ ವಿಷಯಾಸತ್ವವು ಉತ್ತೇಜಕವಾದುದರಿಂದ ಉತ್ತೇಜಕಾಭಾವವಿಶಿಷ್ಟವಾದ ಗುಣವು ಇಲ್ಲ, ತದಭಾವರೂಪವಾದ ಅಪ್ರಾಮಾಣ್ಯಪ್ರಯೋಜಕ ಇದೆ. ಆದರಿಂದಾಗಿ ಪ್ರಮಾ ಹುಟ್ಟುವುದಿಲ್ಲ. ಆಗ ಕರಣಗಳು ತಮ್ಮ

ಸಹಜಶಕ್ತಿಯಿಂದಲೇ ಅಪ್ರಮಾಜನಕವಾಗುತ್ತವೆ. ಅದಕ್ಕೆ ದೋಷದ ಸಹಕಾರಬೇಕಿಲ್ಲ. ಹೀಗೆ ದೋಷವು ಸರ್ವತ್ರ ಅಪ್ರಮಾಕ್ಕೆ ಅನ್ಯಥಾಸಿದ್ಧ.

ಮೂಲದಲ್ಲಿ 'ತದಾಪಿ' ಎಂಬುದರ ಅಭಿಪ್ರಾಯ—ಭ್ರಮೆಗೆ ಪ್ರತಿಬಂಧಕವಾದ ಗುಣವು ಉತ್ತೇಜಕ ಸಹಿತವಾದುದರಿಂದ ಉತ್ತೇಜಕಾಭಾವವಿಶಿಷ್ಟವಾದ ಗುಣದ ಅಭಾವವು ಪಿತ್ತದೋಷ ಹೋದ ಮೇಲೂ ಇರುವುದರಿಂದ ಆಗಲೂ 'ಪೀತಃ ಶಂಖಃ' ಎಂಬ ಭ್ರಮೆ ಬರಲಿ, ಎಂದು.

**अस्तु तर्हि पित्तादिदोष उत्तेजक इति चेत्तर्हि दोषाभावविशिष्टस्य गुणस्याभावो भ्रमे प्रयोजक इत्युक्तं स्यात् । ततो वरं दोष एव प्रयोजक इति, लाघवात् । दाहे तु नोत्तेजक एव हेतुः । तस्मिन्नसत्यपि दाहदर्शनात् । भ्रमस्तु नासति दोषे दृष्टः ।।**

ಹಾಗಾದರೆ ವಿಷಯಾಸತ್ವವು ಉತ್ತೇಜಕವಾಗುವುದು ಬೇಡ. ಪಿತ್ತದೋಷವೇ ಗುಣಕ್ಕೆ ಉತ್ತೇಜಕವಾಗಲಿ (2.2.2) 'ಪೀತಃ ಶಂಖಃ' ಎಂಬ ಭ್ರಮೆಗೆ ಪ್ರತಿಬಂಧಕವಾದ ವಿಶೇಷ ದರ್ಶನರೂಪ ಗುಣವು ಪಿತ್ತದೋಷರೂಪವಾದ ಉತ್ತೇಜಕ ವಿಶಿಷ್ಟವಾದುದರಿಂದ ಪ್ರತಿಬಂಧಕ ವಾಗುವುದಿಲ್ಲ, ಆದ್ದರಿಂದ ಭ್ರಮೆಯು ಹುಟ್ಟುತ್ತದೆ, ಎಂದು ಹೇಳಿದರೆ, ಅದೂ ಸರಿಯಲ್ಲ, ಆಗ ದೋಷಾಭಾವರೂಪವಾದ ಉತ್ತೇಜಕಾಭಾವವಿಶಿಷ್ಟವಾದ ಗುಣದ ಅಭಾವವು ಭ್ರಮೆಗೆ ಪ್ರಯೋಜಕ ಎಂದಂತಾಗುತ್ತದೆ. ಇದು ಗೌರವ. ಇದಕ್ಕಿಂತ ದೋಷವೇ ಭ್ರಮೆಗೆ ಪ್ರಯೋಜಕ, ಎಂದು ಹೇಳುವುದು ಲಾಘವ.

**ಆಕ್ಷೇಪ**—ಹಾಗಾದರೆ ತುಲ್ಯಯುಕ್ತ್ಯಾ ದಾಹಕ್ಕೂ ಉತ್ತೇಜಕಾಭಾವ ವಿಶಿಷ್ಟವಾದ ಮಣಿಯ ಅಭಾವವು ಕಾರಣ, ಎಂದು ಹೇಳುವುದಕ್ಕಿಂತ ಉತ್ತೇಜಕವೇ (ಸೂರ್ಯಕಾಂತಮಣಿ) ಕಾರಣ, ಎಂದಾಗಲಿ.

**ಸಮಾಧಾನ**—ದಾಹಕ್ಕೆ ಉತ್ತೇಜಕವು ಕಾರಣವಲ್ಲ. ಉತ್ತೇಜಕವು ಇಲ್ಲದಿದ್ದರೂ ಕೇವಲ ವಹ್ನಿಯಿಂದಾಗಿಯೇ ದಾಹವಾಗುತ್ತದೆ. ಆದರೆ, ಹೀಗೆ ಭ್ರಮೆಯು ಎಂದೂ ದೋಷವಿಲ್ಲದೇ ಬರುವುದಿಲ್ಲ, ಆದ್ದರಿಂದ ಭ್ರಮೆಗೆ ದೋಷವು ಕಾರಣವೆಂದು ಹೇಳಬಹುದಾದರೂ ದಾಹಕ್ಕೆ ಉತ್ತೇಜಕವನ್ನು ಹೇತು ಎಂದು ಹೇಳಲಾಗದು.

## ನ್ಯಾಯದೀಪ

**ದ್ವಿತೀಯಂ (2.2.2) ಶಂಕತೇ–ಅಸ್ತು ಇತಿ ।। ಪಿತ್ತಾದೀತಿ ।। ಕಾಚಕಾಮಲಾದಿಃ ಆದಿಪದಾರ್ಥಃ । ಉತ್ತೇಜಕ ಇತಿ ।। ಔತ್ಸರ್ಗಿಕಾಪ್ರಾಮಾಣ್ಯ-ಪ್ರತಿಬಂಧಕಗುಣಸ್ಯ, ಇತಿ ಯೋಜ್ಯಮ್ ।**

**ದೋಷ ಏವ ಪ್ರಯೋಜಕಃ ಇತೀತಿ ॥ ನನು ಪ್ರಮಾಯಾಂ ದೋಷಾಭಾವ ಇವ ದೋಷಃ ಭ್ರಮಪ್ರಯೋಜಕಶ್ಚೇದಪಿ ನಾಪ್ರಾಮಾಣ್ಯಸ್ಯ ಸ್ವತಸ್ತ್ವಭಂಜಕಃ, ಇತಿ ಚೇನ್ನ। ತದ್ವ್ಯತಿರೇಕ-ಪ್ರಯೋಜಕ-ವ್ಯತಿರೇಕ-ಪ್ರತಿಯೋಗಿತ್ವರೂಪ-ಕುಲಾಲಪಿತೃಸಾಧಾರಣ-ಪ್ರಯೋಜಕತ್ವೇ ಲಾಘವತರ್ಕೇಣ ಅವಶ್ಯಂ ಪ್ರಾಪ್ತೇ ಸತಿ ಪ್ರತಿಬಂಧಕ-ಗುಣನಿರಾಸೋಪಕ್ಷಯಾಭಾವೇ ಚ ಉಕ್ತದಿಶಾ ಸಿದ್ಧೇ ಸತಿ ಪ್ರಾಗುಕ್ತಾನನ್ಯಥಾಸಿದ್ಧ-ಅನ್ವಯ-ವ್ಯತಿರೇಕ-ಹೇತುಬಲೇನ ಕಾರಣತ್ವಮೇವ ದೋಷಸ್ಯ ಸಿದ್ಧ್ಯತೀತಿ ತಾತ್ಪರ್ಯಾತ್। ಅತ ಏವ ಉತ್ತರವಾಕ್ಯೇ ಹೇತುಪದಪ್ರಯೋಗಃ। ದಾಹದರ್ಶನಾದಿತಿ ॥ ಮಣ್ಯಾದ್ಯಭಾವಸ್ಥಲೇ, ಇತಿ ಭಾವಃ। ಅಸ್ತು ಭ್ರಮೇಽಪಿ ಏವಂ, ಇತ್ಯತ ಆಹ-ಭ್ರಮಸ್ತು ಇತಿ ॥**

ಮೂಲದಲ್ಲಿ ಲಾಘವಾತ್ ದೋಷವೇ ಭ್ರಮೆಗೆ ಪ್ರಯೋಜಕವಾಗಲಿ, ಎಂದು ಆಪಾದನೆ ಮಾಡಲಾಗಿದೆ. ಇದೇನೂ ಅನಿಷ್ಟಾಪಾದನೆ ಅಲ್ಲ. ಪ್ರಮಾಕ್ಕೆ ದೋಷಾಭಾವವು ಪ್ರಯೋಜಕವಾದರೂ ಹೇಗೆ ಸ್ವತಸ್ತ್ವಕ್ಕೆ ಭಂಗ ಬರುವುದಿಲ್ಲವೋ ಅದರಂತೆ, ಭ್ರಮೆಗೆ ದೋಷವು ಪ್ರಯೋಜಕವಾದರೂ ಸ್ವತಸ್ತ್ವಭಂಗ ಇಲ್ಲ ಎಂದರೆ, ಇದು ಯುಕ್ತವಲ್ಲ. ಪ್ರಯೋಜಕತ್ವವು, ಹಿಂದೆ ಹೇಳಿದಂತೆ, ಅನ್ಯಥಾಸಿದ್ಧ ಮತ್ತು ಅನನ್ಯಥಾಸಿದ್ಧ, ಎರಡರಲ್ಲೂ ಸಾಧಾರಣವಾದ ತದಭಾವ-ಪ್ರಯುಕ್ತ-ಅಭಾವಪ್ರತಿಯೋಗಿಕಾರ್ಯಕತ್ವರೂಪವಾದ್ದು. ಮೂಲದಲ್ಲಿ ಹೇಳಿದ ಲಾಘವತರ್ಕದಿಂದ ಇಂತಹ ಪ್ರಯೋಜಕತ್ವವು ದೋಷಕ್ಕೆ ಸಿದ್ಧವಾದಾಗ ಅದು ಗುಣನಿರಾಸದಲ್ಲಿ ಉಪಕ್ಷೀಣವಲ್ಲ, ಎಂದೂ ಮೂಲೋಕ್ತರಿತ್ಯಾ ಸಿದ್ಧವಾಗುತ್ತದೆ. ಇದರಿಂದ ಅನನ್ಯಥಾಸಿದ್ಧತ್ವೇ ಸತಿ ನಿಯತಪೂರ್ವವೃತ್ತಿತ್ವರೂಪವಾದ ಕಾರಣತ್ವವನ್ನೇ ದೋಷಕ್ಕೆ ಹೇಳಿದಂತಾಗುತ್ತದೆ, ಎಂದು ಮೂಲದ ತಾತ್ಪರ್ಯ. ಆದ್ದರಿಂದಲೇ ಮುಂದೆ ಮೂಲದಲ್ಲಿ (ಪು.756) 'ದೋಷೋ ಹೇತುಃ' ಎಂದು ಹೇತುಪದವನ್ನು ಪ್ರಯೋಗಿಸಲಾಗಿದೆ. ಹೀಗೆ, ದೋಷಜನ್ಯವಾದುದರಿಂದ ಅಪ್ರಾಮಾಣ್ಯವು ಪರತಃ, ಎಂದೇ ಆಗುತ್ತದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ದೋಷಸ್ಯ ಅನ್ವಯವ್ಯಭಿಚಾರಾತ್ ಉತ್ತೇಜಕತಯಾ ಭ್ರಮಹೇತುತ್ವಮ್ ಅಯುಕ್ತಮ್ ಇತಿ ಭಾವೇನಾಹ-ಕಿಂಚೇತಿ ॥**

ಕೆಲವೊಮ್ಮೆ ದೋಷರೂಪ ಉತ್ತೇಜಕವು ಇದ್ದರೂ, ಗುಣರೂಪವಾದ ಪ್ರತಿಬಂಧಕವಿದ್ದಾಗ ಭ್ರಮೆಯು ಹುಟ್ಟುವುದಿಲ್ಲ. ಹೀಗೆ ಅನ್ವಯವ್ಯಭಿಚಾರವಿರುವುದರಿಂದ ದೋಷವು ಗುಣಕ್ಕೆ ಉತ್ತೇಜವಲ್ಲ, ಎಂದು ಮುಂದೆ ಹೇಳುತ್ತಾರೆ.

**किञ्च यादृच्छिकसंवादिलिङ्गशब्दाभासादिज्ञाने प्रतिबन्धके गुणे त्वन्नयेन विद्यमाने, मन्नयेनाविद्यमाने च उत्तेजकस्य दोषस्य सत्त्वेन औत्सर्गिकमप्रामाण्यं स्यात् ।।**

ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ಲಿಂಗಾಭಾಸ, ಶಬ್ದಾಭಾಸರೂಪ ದೋಷವು ಇರುತ್ತದೆ. ನೈಯಾಯಿಕ ಮತರೀತ್ಯಾ ಅಲ್ಲಿಯೂ ಈಶ್ವರನ ಯಥಾರ್ಥವಾಕ್ಯಾರ್ಥಜ್ಞಾನ ರೂಪವಾದ ಗುಣವು ಇದೆ, ಆದರೆ ನಮ್ಮ ರೀತಿಯಿಂದ ಗುಣ ಇಲ್ಲ. ಇಂತಹ ಸಂದರ್ಭಲ್ಲಿ ಭ್ರಮಾಪ್ರತಿಬಂಧಕವಾದ ಗುಣಕ್ಕೆ ಉತ್ತೇಜಕವಾಗಿರುವ ದೋಷವು ಇದ್ದರೂ ಪ್ರಮಾವೇ ಹುಟ್ಟುತ್ತದೆ. ಗುಣಕ್ಕೆ ದೋಷವು ಉತ್ತೇಜಕವೆಂದಾದಲ್ಲಿ ಅಂತಹ ಸಂದರ್ಭದಲ್ಲಿ ಭ್ರಮೆಯು ಹುಟ್ಟಬೇಕಾಗಿತ್ತು. ಏಕೆಂದರೆ, ಅಪ್ರಾಮಾಣ್ಯಂ ಸ್ವತಃ, ಎಂದು ನಿಮ್ಮ ವಾದ. ಆ ವಾದದಂತೆ ಉತ್ತೇಜಕಾಭಾವವಿಶಿಷ್ಟ-ದೋಷದ ಅಭಾವ ಇರುವುದರಿಂದ ಕರಣಗಳು ತಮ್ಮ ಸಹಜಶಕ್ತಿಯಿಂದ ಭ್ರಮೆಯನ್ನು ಉಂಟುಮಾಡ ಬೇಕಾಗಿತ್ತು. ಆದರೆ, ಪ್ರಮಾವೇ ಹುಟ್ಟುತ್ತದೆ. ಆದ್ದರಿಂದ ಗುಣವು ಪ್ರತಿಬಂಧಕ, ದೋಷವು ಉತ್ತೇಜಕ ಎಂದು ಹೇಳುವುದು ಸರಿಯಲ್ಲ.

## ನ್ಯಾಯದೀಪ

**ಈಶ್ವರಜ್ಞಾನಸ್ಯ ಸಲ್ಲಿಂಗಕ ಪರಾಮರ್ಶರೂಪತ್ವೇನ, ಯಥಾರ್ಥ-ವಾಕ್ಯಾರ್ಥ-ಜ್ಞಾನತ್ವೇನ ಗುಣತ್ವಾಂಗೀಕಾರಾತ್ 'ತ್ವನ್ನಯೇನ' ಇತ್ಯುಕ್ತಮ್ । ಭ್ರಮಸಾಧಾರಣ್ಯೇನ ಹೇತುತಯಾ ಗುಣತ್ವೇನ ಅಹೇತುತ್ವಾತ್ 'ಮನ್ನಯೇನ ಅವಿದ್ಯಮಾನೇ' ಇತ್ಯುಕ್ತಮ್ ।**

**ಔತ್ಸರ್ಗಿಕಂ=ಜ್ಞಾನಜನನಶಕ್ತಿಪ್ರಯುಕ್ತಮ್, ಇತ್ಯರ್ಥಃ । ಸಿದ್ಧಾಂತೇ ತು ಸತ್ಯಪಿ ದೋಷೇ ಭ್ರಮರೂಪ-ಕಾರ್ಯಾನುತ್ಪಾದಃ ಹೇತ್ವಂತರ-ವೈಕಲ್ಯಾತ್ ಇತ್ಯುಕ್ತತ್ವಾತ್ ನಾನ್ವಯವ್ಯಭಿಚಾರಃ, ಇತಿ ಭಾವಃ ॥**

ಮೂಲದಲ್ಲಿ, ನ್ಯಾಯಮತದಲ್ಲಿ ಗುಣವಿದೆ, ನಮ್ಮ ಮತದಂತೆ ಗುಣ ಇಲ್ಲ, ಎಂದಿದೆ. ಇದನ್ನು ಹೀಗೆ ತಿಳಿಯಬೇಕು-ನ್ಯಾಯಮತದ ರೀತ್ಯಾ, ಯಾದೃಚ್ಛಿಕಸಂವಾದಿವಾಕ್ಯಕ್ಕೆ ಈಶ್ವರ ಯಥಾರ್ಥವಾಕ್ಯಾರ್ಥಜ್ಞಾನವೇ ಗುಣ. ನಮ್ಮ ರೀತಿಯಿಂದ, ಈಶ್ವರಜ್ಞಾನವು ಸಕಲಕಾರ್ಯಕ್ಕೂ ಉಪಾದಾನ ಗೋಚರಜ್ಞಾನತ್ವೇನ ನಿಮಿತ್ತಕಾರಣ. ಆದ್ದರಿಂದ ಅದು ಭ್ರಮೆಗೆ ನಿಮಿತ್ತವಾದಂತೆ ಪ್ರಮಾಕ್ಕೂ ನಿಮಿತ್ತಮಾತ್ರ, ಗುಣವಲ್ಲ. ಇದನ್ನು ಹಿಂದೆಯೇ (ಪು.626) ಹೇಳಲಾಗಿದೆ.

ಔತ್ಸರ್ಗಿಕಂ ಅಪ್ರಾಮಾಣಮ್, ಎಂದರೆ ಕರಣಗಳಲ್ಲಿ ಜ್ಞಾನಜನನಶಕ್ತಿಯಿಂದಲೇ ಅಪ್ರಾಮಾಣ್ಯವೂ ಹುಟ್ಟುತ್ತದೆ, ಎಂದರ್ಥ.

ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ಸಿದ್ಧಾಂತರೀತ್ಯಾ ವಾಕ್ಯ ಮತ್ತು ಪರಾಮರ್ಶಗಳಲ್ಲಿ ದೋಷ ವಿದ್ದರೂ ಭ್ರಮ ಏಕೆ ಹುಟ್ಟಲಿಲ್ಲ, ಎನ್ನುವುದಕ್ಕೆ ಹಿಂದೆಯೇ (ಪು.702) ವಿಷಯ–ಸತ್ವ ರೂಪವಾದ ಉತ್ತೇಜಕವು ಇರುವುದರಿಂದ ಭ್ರಮೆ ಹುಟ್ಟುವುದಿಲ್ಲ. ಎಂದು ಕಾರಣವನ್ನು ಹೇಳಲಾಗಿದೆ.

## ನ್ಯಾಯದೀಪದಲ್ಲಿ ಅವತಾರಿಕೆ

**ನನ್ವೇವಂ, ಸತ್ಯಪಿ ಉತ್ತೇಜಕೇ ಕಾರ್ಯಾನುತ್ಪಾದಃ ಹೇತ್ವಂತರವೈಕಲ್ಯನಿಮಿತ್ತಕಃ। ವಿಷಯಾಸತ್ವರೂಪ–ಹೇತ್ವಂತರಸಾಪೇಕ್ಷ–ಜನ್ಯತ್ವಾತ್ ತಸ್ಯ, ಇತಿ ಭಾವೇನ ಶಂಕತೇ–ನನ್ವಿತಿ ॥**

ತಾರ್ಕಿಕರು ಹೀಗೆ ಉತ್ತರ ಕೊಡಬಹುದು— ಹಿಂದೆ ಹೇಳಿರುವ, ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ದೋಷರೂಪವಾದ ಉತ್ತೇಜಕವು ಇದ್ದರೂ ಕಾರಣಾಂತರವೈಕಲ್ಯದಿಂದಾಗಿ ಭ್ರಮೆಯು ಹುಟ್ಟುವುದಿಲ್ಲ. ಭ್ರಮೆಗೆ ವಿಷಯಾಸತ್ವವೂ ಒಂದು ಕಾರಣ. ಯಾದೃಚ್ಛಿಕ ಸಂವಾದಿಸ್ಥಳದಲ್ಲಿ ಅದಿಲ್ಲ. ಹೀಗಾಗಿ ಭ್ರಮೆ ಹುಟ್ಟುವುದಿಲ್ಲ. ಈ ಶಂಕೆಯನ್ನು ಮೂಲದಲ್ಲಿ 'ನನು' ಎಂದು ಮಾಡಲಾಗಿದೆ.

**ननु उत्तेजकस्य दोषस्य विषयसत्त्वं प्रतिबन्धकमिति चेत्तर्हि विषयसत्त्वाभावविशिष्टो यो दोषः तदभावविशिष्टस्य गुणस्याभावो भ्रमप्रयोजक इत्युक्तं स्यात् । स च दोषापेक्षया अतिगुरुः । तस्मात् भ्रमे अर्थस्यासत्त्वेन सन्निकर्षासम्भवेन तत्स्थानीयस्य दोषस्यावश्यकत्वात्, पित्तादिदोषोत्कर्षेण भ्रमोत्कर्षदर्शनात्, अनन्यथासिद्धान्वयव्यतिरेकित्वाच्च अप्रमायां दोषो हेतुरित्यप्रमाण्यं परत एव ।**

ದೋಷವು ಗುಣರೂಪಪ್ರತಿಬಂಧಕಕ್ಕೆ ಉತ್ತೇಜಕವಾದರೂ ಆ ಉತ್ತೇಜಕಕ್ಕೆ ವಿಷಯಸತ್ವವು ಪ್ರತಿಬಂಧಕ. ಆದ್ದರಿಂದ ಯಾದೃಚ್ಛಿಕಸಂವಾದಸ್ಥಳದಲ್ಲಿ ವಿಷಯವು ಇರುವುದರಿಂದ ಭ್ರಮೆಯು ಹುಟ್ಟುವುದಿಲ್ಲ ಎಂದರೆ, ಇದು ಸರಿಯಲ್ಲ. ಹೀಗೆ ಹೇಳಿದರೆ, ವಿಷಯಸತ್ತ್ವರೂಪವಾದ ಉತ್ತೇಜಕದ ಅಭಾವದಿಂದ ವಿಶಿಷ್ಟವಾದ ಯಾವ ದೋಷವಿದೆಯೋ ಅಂತಹ ದೋಷದ ಅಭಾವವಿಶಿಷ್ಟವಾದ ಗುಣದ ಅಭಾವವು ಭ್ರಮೆಗೆ ಪ್ರಯೋಜಕ, ಎಂದಂತಾಗುತ್ತದೆ. ಇದಕ್ಕಿಂತ ದೋಷವೇ ಭ್ರಮೆಗೆ ಕಾರಣ ಎನ್ನುವುದು ಅತಿಲಾಘವ. ಅಲ್ಲದೆ, ದೋಷವು ಭ್ರಮೆಗೆ ಕಾರಣ ಎನ್ನುವುದಕ್ಕೆ ಮೂರು ಸಮರ್ಥನೆಗಳಿವೆ—

1. ಭ್ರಮಸ್ಥಳದಲ್ಲಿ ಆರೋಪ್ಯವಾದ ರಜತವು ಇಲ್ಲದಿರುವುದರಿಂದ (ನ್ಯಾಯಮತದಲ್ಲಿ

ಕಣ್ಣಿನ ಮುಂದೆ ಇಲ್ಲದಿರುವುದರಿಂದ) ಆದರೊಂದಿಗೆ ಇಂದ್ರಿಯಸನ್ನಿಕರ್ಷವು ಇಲ್ಲ. ಆದರೂ ಅದು ಪ್ರತ್ಯಕ್ಷವಿಷಯವಾಗಿದೆ. ಇದಕ್ಕೆ ಸನ್ನಿಕರ್ಷದ ಸ್ಥಾನದಲ್ಲಿ ದೋಷವೇ ಕಾರಣ.

2. ಪಿತ್ತಾದಿದೋಷಗಳು ಹೆಚ್ಚಾದಂತೆ ಭ್ರಮೆಯೂ ದೃಢವಾಗುತ್ತದೆ. ಇದರಿಂದಾಗಿಯೂ ಭ್ರಮೆಗೆ ದೋಷವು ಕಾರಣ.

3. ದೋಷಕ್ಕೆ ಅನ್ಯಥಾಸಿದ್ಧಿಯೂ ಇಲ್ಲ, ಭ್ರಮೆಯೊಂದಿಗೆ ಅನ್ವಯವ್ಯತಿರೇಕಗಳೂ ಇವೆ. ಆದ್ದರಿಂದಲೂ ಅದು ಭ್ರಮೆಗೆ ಕಾರಣ.

ಹೀಗೆ ಅಪ್ರಾಮಾಣ್ಯವು ದೋಷಜನ್ಯವಾದುದರಿಂದ 'ಅಪ್ರಾಮಾಣ್ಯಂ ಪರತಃ'

## ನ್ಯಾಯದೀಪ

**ತಸ್ಮಾದಿತಿ ॥ ದೋಷಸ್ಯ ಗುಣನಿರಾಸೋಪಕ್ಷಯಾಭಾವಾತ್ ಇತ್ಯರ್ಥಃ । ತಾವತಾ ಕಥಂ ಭ್ರಮಹೇತುತ್ವಮ್ ಇತ್ಯತಃ, ಹೇತುತ್ರಯಮಾಹ–ಭ್ರಮ ಇತ್ಯಾದಿನಾ ॥**

ತಸ್ಮಾತ್ ಎಂದರೆ ದೋಷವು ಗುಣನಿರಾಸದಲ್ಲಿ ಉಪಕ್ಷೀಣವಲ್ಲವಾದ ಕಾರಣ ಎಂದು ಅರ್ಥ. ಇಷ್ಟರಿಂದಲೇ ಅದನ್ನು ಭ್ರಮಹೇತು ಎಂದು ನಿರ್ಧರಿಸಲು ಆಗುವುದಿಲ್ಲ. ಆದಕ್ಕಾಗಿ, ಮೂರು ಕಾರಣಗಳನ್ನು ಕೊಡಲಾಗಿದೆ.

**उक्तं हि भगवत्पादैः– "परतोऽप्रामाण्यं" इति । परतः=अपवादात्, न तु प्रामाण्यमिव स्वतः=उत्सर्गत इत्यर्थः ।।**

'ಪರತಃ ಅಪ್ರಾಮಾಣ್ಯಮ್' ಎಂದು ಶ್ರೀಮಧ್ವಾಚಾರ್ಯರೂ ವಿಷ್ಣುತತ್ತ್ವನಿರ್ಣಯದಲ್ಲಿ ಅಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಹೇಳಿದ್ದಾರೆ.

## ನ್ಯಾಯದೀಪ

**ಉಕ್ತಂ ಹೀತಿ ॥ ವಿಷ್ಣುತತ್ತ್ವನಿರ್ಣಯೇ ಇತ್ಯರ್ಥಃ ।**

ಆಚಾರ್ಯರ ಈ ವಚನ ವಿಷ್ಣುತತ್ತ್ವನಿರ್ಣಯ ಗ್ರಂಥದಲ್ಲಿ ಇದೆ.

**ಇಲ್ಲಿಗೆ ಅಪ್ರಾಮಾಣ್ಯ ಪರತಸ್ತ್ವ ಪ್ರಕರಣ ಮುಗಿಯಿತು. ॥ 17 ॥**

## ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ ಭ್ರಮೆಯು ಪ್ರಮಾದಂತೆ ಜ್ಞಾನಕಾರಣಮಾತ್ರದಿಂದ ಜನ್ಯವಲ್ಲ. ಅದಕ್ಕೆ ಜ್ಞಾನಕ್ಕೆ ಕಾರಣವಲ್ಲದ ದೋಷವೂ ಕಾರಣ. ಆದ್ದರಿಂದ ಜ್ಞಾನದಲ್ಲಿ ಅಪ್ರಾಮಾಣ್ಯವು ಪರತಃ ಎಂದು ಸಾಧಿಸಲಾಗಿದೆ.

ದೋಷವಿದ್ದಾಗ ಭ್ರಮೆಯು ಹುಟ್ಟದಿರುವುದೂ ಇಲ್ಲ, ದೋಷವಿಲ್ಲದೆ ಎಂದೂ ಭ್ರಮೆಯು ಹುಟ್ಟುವುದೂ ಇಲ್ಲ. ಯದ್ಯಪಿ, ಹಗ್ಗದಲ್ಲಿ ಹಾವಿನ ಸಾದೃಶ್ಯವು ಭ್ರಮೆಗೆ ಕಾರಣವಾದ ದೋಷ. ಅಂತಹ ದೋಷವು ಇದ್ದಾಗಲೂ 'ಇದು ಹಗ್ಗ, ಹಾವಲ್ಲ' ಎಂಬ ವಿಶೇಷದರ್ಶನವಿದ್ದಾಗ ಭ್ರಮೆಯು ಹುಟ್ಟುವುದಿಲ್ಲ. ಆದರೆ, ಇದರಿಂದಾಗಿ ದೋಷವು ಭ್ರಮೆಗೆ ಕಾರಣವಲ್ಲ, ಎಂದೇನೂ ಆಗುವುದಿಲ್ಲ. ಭ್ರಮೆಗೆ ಕಾರಣವಾದ ದೋಷವು ಇದ್ದರೂ ವಿಶೇಷದರ್ಶನಾಭಾವರೂಪವಾದ ಕಾರಣಾಂತರವು ಇಲ್ಲದ ಕಾರಣದಿಂದ ಅಲ್ಲಿ ಭ್ರಮೆಯು ಹುಟ್ಟುವುದಿಲ್ಲ. ಆದ್ದರಿಂದ ಅನ್ವಯವ್ಯಭಿಚಾರ ಇಲ್ಲ. ವ್ಯತಿರೇಕವ್ಯಭಿಚಾರವೂ ಇಲ್ಲ. ವಿಸಂವಾದಿ ಶುಕವಾಕ್ಯದಲ್ಲಿ ಶುಕಕ್ಕೆ ಅಯಥಾರ್ಥವಾಕ್ಯಾರ್ಥ ಜ್ಞಾನರೂಪವಾದ ದೋಷವು ಇಲ್ಲದಿದ್ದರೂ ವಿವಕ್ಷಿತಾರ್ಥತತ್ತ್ವಜ್ಞಾನಾಭಾವರೂಪವಾದ ದೋಷವು ಇದೆ. ಹೀಗೆ, ಅನ್ವಯ– ವ್ಯತಿರೇಕವ್ಯಭಿಚಾರಗಳು ಇಲ್ಲದಿರುವುದರಿಂದ ಭ್ರಮೆಯು ದೋಷಜನ್ಯ ವಾಗಿದೆ. ಆದರೆ, ಪ್ರಮಾಕ್ಕೆ ಗುಣವು ಕಾರಣವಲ್ಲ, ಅದು ಪ್ರಮಾ ಪ್ರತಿಬಂಧಕವಾದ ದೋಷದ ನಿರಾಸದಲ್ಲಿ ಉಪಕ್ಷೀಣ. ಇದರಂತೆ, ದೋಷವೂ ಗುಣ ನಿರಾಸಕ ಮಾತ್ರ, ಭ್ರಮೆಗೆ ಕಾರಣವಲ್ಲ ಎನ್ನುವಂತಿಲ್ಲ. ದೋಷವಿದ್ದರೂ ಕೆಲವು ಕಡೆ ಗುಣದ ನಿರಾಸವಾಗುವುದಿಲ್ಲ, ಆ ದೋಷದಿಂದ ಭ್ರಮೆಯೂ ಹುಟ್ಟುತ್ತದೆ. ಉದಾಹರಣೆಗೆ—ಪೀತತ್ವಾಭಾವವ್ಯಾಪ್ಯ-ಶಂಖತ್ವವಾನ್, ಎಂಬ ವಿಶೇಷದರ್ಶನವು ಗುಣ. ಅದಿದ್ದರೂ ಪಿತ್ತದೋಷವಿದ್ದಾಗ 'ಪೀತಃ ಶಂಖಃ' ಎಂಬ ಭ್ರಮೆಯೇ ಹುಟ್ಟುತ್ತದೆ. ಅದರಂತೆ 'ಘಟ ಇದೆ' ಎಂದು ಹೇಳುವ ಬದಲು ಪ್ರಮಾದವಶಾತ್ 'ಪಟ ಇದೆ' ಎಂದು ವಾಕ್ಯವನ್ನು ಪ್ರಯೋಗ ಮಾಡಿದಾಗ ವಕ್ತೃವಿಗೆ ಯಥಾರ್ಥವಾಕ್ಯಾರ್ಥಜ್ಞಾನರೂಪವಾದ ಗುಣವಿದೆ, ಅದು 'ಪ್ರಮಾದ' ಎಂಬ ವಕ್ತೃದೋಷದಿಂದ ನಿರಾಸವಾಗಿಲ್ಲ. ಆದ್ದರಿಂದ ಕೇಳುವವನಿಗೆ ಭ್ರಮೆಯೇ ಹುಟ್ಟುತ್ತದೆ. ಹೀಗೆ ದೋಷವಿದ್ದರೂ ಗುಣನಿರಾಸವಾಗುವುದಿಲ್ಲವಾದುದರಿಂದ ದೋಷವು ಗುಣನಿರಾಸೋಪಕ್ಷೀಣ, ಎನ್ನಲಾಗದು, ಅದು ಭ್ರಮೆಗೇ ಕಾರಣ. ಆದರೆ, ಗುಣವಿದ್ದು ದೋಷನಾಶವಾಗದೆ ಪ್ರಮಾ ಹುಟ್ಟಿರುವ ಸಂದರ್ಭ ಇಲ್ಲ. ಆದ್ದರಿಂದ ಗುಣವು ದೋಷನಿರಾಸದಲ್ಲಿ ಉಪಕ್ಷೀಣ, ಪ್ರಮೆಗೆ ಕಾರಣವಲ್ಲ.

ಭ್ರಮೆಗೆ ಪ್ರತಿಬಂಧಕವಾದ ಗುಣಕ್ಕೆ ದೋಷವು ಪ್ರತಿಬಂಧಕ, ಪಿತ್ತದೋಷವು ಉತ್ತೇಜಕ ಎಂದರೂ ಗೌರವ. ಆಗ ಗುಣಾಭಾವವಿಶಿಷ್ಟ ಪಿತ್ತದೋಷದ ಅಭಾವವು ಭ್ರಮೆಗೆ ಕಾರಣ, ಎಂದು ಹೇಳಬೇಕಾಗುತ್ತದೆ. ಅದಕ್ಕಿಂತ ದೋಷವೇ ಭ್ರಮೆಗೆ ಕಾರಣ, ಎಂದು ಹೇಳುವುದು ಉಚಿತ.

ಹೀಗೆ ಇಂದ್ರಿಯಗಳಲ್ಲಿ ಭ್ರಮೆಯನ್ನು ಹುಟ್ಟಿಸುವ ಶಕ್ತಿವಿಶೇಷವು ದೋಷದಿಂದ ಆಹಿತವಾದುದರಿಂದ ಭ್ರಮೆಯು ಜ್ಞಾನಸಾಮಾನ್ಯಜನಕಶಕ್ತಿಯಿಂದ ಜನ್ಯವಾಗಿಲ್ಲ. ಆದ್ದರಿಂದ ಭ್ರಮೆಯಲ್ಲಿ ಸ್ವತಸ್ತ್ವ ಇಲ್ಲ. ಭ್ರಮಜನಕ ಇಂದ್ರಿಯದಲ್ಲೂ ಅಪ್ರಾಮಾಣ್ಯವು ಸ್ವತಃ ಅಲ್ಲ, ಅಂದರೆ ಇಂದ್ರಿಯದಲ್ಲಿ ಅಪ್ರಮಾಜನನಶಕ್ತಿ ಸ್ವಾಭಾವಿಕವಲ್ಲ. ದೋಷದಿಂದ ಆಹಿತ. ಹೀಗೆ ಜ್ಞಾನ ಮತ್ತು ಕರಣಗಳಲ್ಲಿ ಅಪ್ರಾಮಾಣ್ಯಂ ಉತ್ಪತ್ತೌ ಪರತಃ. ಇದನ್ನು ಆಚಾರ್ಯರೂ 'ಪರತೋ ಅಪ್ರಾಮಾಣ್ಯಂ' ಎಂದು ತತ್ತ್ವನಿರ್ಣಯದಲ್ಲಿ ಹೇಳಿದ್ದಾರೆ.

**॥ ಪ್ರಕರಣ – 17 ॥**

# ಪ್ರಕರಣ – 18

## ಕರಣಪ್ರಾಮಾಣ್ಯಸ್ಯ ಸ್ವತಸ್ತ್ವಮ್

### ನ್ಯಾಯದೀಪದಲ್ಲಿ ಅವತಾರಿಕೆ

**ನನು ಅಸ್ತ್ವೇವಮ್ ಉಕ್ತದಿಶಾ ಜ್ಞಾನಪ್ರಾಮಾಣ್ಯಸ್ಯ ಉತ್ಪತ್ತಿ–ಜ್ಞಪ್ತ್ಯೋಃ ಸ್ವತಸ್ತ್ವಮ್ । ಅಥಾಪಿ 'ಸ್ವತಃ ಪ್ರಮಾಣೈರಾಮ್ನಾಯೈಃ' ಇತ್ಯುಕ್ತಿರಯುಕ್ತಾ । ತತ್ಪ್ರಾಮಾಣ್ಯಸ್ಯ ಉತ್ಪತ್ತೌ ಸ್ವತಸ್ತ್ವೇಽಪಿ ಜ್ಞಪ್ತೌ ಪದ್ಧತ್ಯುಕ್ತದಿಶಾ ತದಭಾವಾತ್, ಇತ್ಯತ ಆಹ–ಕರಣೇತಿ ॥**

ಇದುವರೆಗೆ ಹೇಳಿದಂತೆ, ಜ್ಞಾನಗತವಾದ ಪ್ರಾಮಾಣ್ಯ ಉತ್ಪತ್ತೌ, ಜ್ಞಪ್ತೌ ಚ ಸ್ವತಃ, ಎಂದಾಗಲಿ. ಪ್ರಕೃತ ಗ್ರಂಥಮಂಗಲಪದ್ಯದಲ್ಲಿ ಪ್ರಸ್ತುತವಾದುದು ವೇದರೂಪಕರಣ ಪ್ರಾಮಾಣ್ಯ. ಅದು ಉತ್ಪತ್ತೌ ಸ್ವತಃ ಆದರೂ ಜ್ಞಪ್ತೌ ಪರತಃ ಎಂದು ಪ್ರಮಾಣಪದ್ಧತಿಯಲ್ಲಿ ಇದೆ. ಆದ್ದರಿಂದ ಕರಣಪ್ರಮಾಣ್ಯಕ್ಕೆ ಜ್ಞಪ್ತೌ ಸ್ವತಸತ್ತ್ವವು ಇಲ್ಲ, ಎಂದು ಆಕ್ಷೇಪಿಸಿದರೆ ಅದಕ್ಕೆ ಮೂಲದಲ್ಲಿ ಸಮಾಧಾನವನ್ನು ಹೇಳಲಾಗಿದೆ.

**करणगतस्य यथार्थज्ञानसाधनत्वरूपप्रामाण्यस्य तु ज्ञानजनकत्व-ग्राहकमात्रग्राह्यत्वरूपं ज्ञप्तौ स्वतस्त्वम् । अयथार्थज्ञानसाधनत्व-रूपाप्रामाण्यस्य तु ज्ञानजनकत्वग्राहकमात्राग्राह्यत्वरूपं परतस्त्वम् । दोषादिज्ञानं विना भ्रमजनकत्वस्य अज्ञानात् ॥**

ಕರಣಗಳಲ್ಲಿ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವವನ್ನು ಹೀಗೆ ತಿಳಿಯಬೇಕು– ಕರಣಗಳಿಗೆ ಜ್ಞಾನಜನಕತ್ವವು ಯಾವ ಪ್ರಮಾಣದಿಂದ ತಿಳಿಯುವುದೋ ಅದೇ ಪ್ರಮಾಣದಿಂದ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವೂ ತಿಳಿಯುತ್ತದೆ. ಆದರೆ, ಕರಣಗಳ ಅಯಥಾರ್ಥ–ಜ್ಞಾನಜನಕತ್ವರೂಪವಾದ ಅಪ್ರಾಮಾಣ್ಯದ ಜ್ಞಾನವು, ಜ್ಞಾನಜಕತ್ವವು ಯಾವುದರಿಂದ ತಿಳಿಯುವುದೋ ಅದರಿಂದಲೇ ತಿಳಿಯುವುದಿಲ್ಲ. ಕರಣಗಳಲ್ಲಿ ದೋಷಾದಿಜ್ಞಾನ ಬರದಿದ್ದರೆ ಅವುಗಳ ಅಪ್ರಾಮಾಣ್ಯಜ್ಞಾನವೂ (ಭ್ರಮಜನಕತ್ವಜ್ಞಾನ) ಬರುವುದಿಲ್ಲ. ಆದ್ದರಿಂದ ಕರಣಗತವಾದ ಅಪ್ರಾಮಾಣ್ಯಂ ಜ್ಞಪ್ತೌ ಪರತಃ, ಪ್ರಾಮಾಣ್ಯಂ ಜ್ಞಪ್ತೌ ಸ್ವತಃ.

## ನ್ಯಾಯದೀಪ

**ಕರಣೇತಿ ॥ ಸ್ವತಸ್ತ್ವಸ್ಯ ಸ್ಪಷ್ಟತ್ವಾಯ, ಯಥಾರ್ಥಜ್ಞಾನಸಾಧನತ್ವರೂಪೇತಿ ಪ್ರಾಮಾಣ್ಯಂ ವಿಶೇಷಿತಮ್ । ಜ್ಞಾನೇತಿ ॥ ಜ್ಞಾನಜನಕತ್ವಗ್ರಾಹಕಂ ಚ,**

**1. ರೂಪಾದಿಜ್ಞಾನಂ, ಕರಣಸಾಧ್ಯಂ, ಕಾರ್ಯತ್ವಾತ್, ಛಿದಾದಿಕಾರ್ಯವತ್, ಇತ್ಯಾದ್ಯನುಮಾನಂ ವಾ ।**

**2. ಚಕ್ಷುರಾದಿ ಜ್ಞಾನಜನಕಮ್, ಇತ್ಯಾದಿವಾಕ್ಯಂ ವಾ ।**

**ತನ್ಮಾತ್ರಗ್ರಾಹ್ಯತ್ವರೂಪಮ್ ಇತ್ಯರ್ಥಃ । ಜ್ಞಾನಜನನಶಕ್ತೇರೇವ ಪ್ರಮಾಜನನ ಶಕ್ತಿತ್ವಾತ್, ಇತಿ ಭಾವಃ ।**

**'ಅಪ್ರಾಮಾಣ್ಯಂ ತಥಾನ್ಯತಃ' ಇತ್ಯನುವ್ಯಾಖ್ಯಾನೇ 'ಪರತೋಽಪ್ರಾಮಾಣ್ಯಮ್' ಇತಿ ತತ್ತ್ವನಿರ್ಣಯೇ ಚ ಉಕ್ತೇರಾಹ–ಅಯಥಾರ್ಥೇತಿ ॥ ಮಾತ್ರೇತ್ಯುಕ್ತ್ಯಾ ಸೂಚಿತಮ್ ಅಧಿಕಂ ಗ್ರಾಹಕಂ ವ್ಯನಕ್ತಿ–ದೋಷಾದೀತಿ ॥ ಕರಣಗತ–ಕಾಚಕಾಮಲ–ಅಸಿದ್ಧ್ಯವ್ಯಾಪ್ತಿ–ಭ್ರಮಪ್ರಮಾದಾದಿ–ದೋಷಾಣಾಮ್ ಅಜ್ಞಾನೇ, ವಿಸಂವಾದಾಜ್ಞಾನೇ ಚ ಭ್ರಮಜನಕತ್ವಾಜ್ಞಾನಾತ್ । ಪೂರ್ವೋಕ್ತದಿಶಾ ಜ್ಞಾನಜನನ ಶಕ್ತೇಃ ಸಹಜತ್ವೇಽಪಿ ಭ್ರಮಜನನ ಶಕ್ತೇಃ ಕಾಚಾದಿ–ಕರಣಗತ–ದೋಷಾಹಿತತ್ವೇನ ಜ್ಞಾನಜನನಶಕ್ತಿ–ಭ್ರಮಜನನಶಕ್ತ್ಯೋಃ ಭೇದೇನ, ಜ್ಞಾನಜನನಶಕ್ತಿಗ್ರಾಹ ಮಾತ್ರೇಣ ಭ್ರಮಜನನಶಕ್ತೇಃ ಗ್ರಹಣಾಯೋಗಾತ್ । ದೋಷಾದಿಜ್ಞಾನಾನು–ವಿಧಾನಾಚ್ಚ ಭ್ರಮಜನನಶಕ್ತಿಗ್ರಹಸ್ಯ ಇತಿ ಭಾವಃ ॥**

ಮೂಲದಲ್ಲಿ ಅಪ್ರಾಮಾಣ್ಯವನ್ನು 'ಯಥಾರ್ಥಜ್ಞಾನಸಾಧನತ್ವರೂಪ' ಎಂದು ಬಿಡಿಸಿ ಹೇಳಿರುವ ಉದ್ದೇಶ–ಕರಣಗತಪ್ರಾಮಾಣ್ಯದ ಜ್ಞಪ್ತಿ ಸ್ವತಸ್ತ್ವವನ್ನು ಸ್ಪಷ್ಟಗೊಳಿಸುವುದು. ಆದರಿಂದ, ಕರಣದಲ್ಲಿ ಜ್ಞಾನಜನಕತ್ವಶಕ್ತಿಯೂ ಪ್ರಮಾಜನಕತ್ವಶಕ್ತಿಯೂ ಒಂದೇ ಆದುದರಿಂದ ಜ್ಞಾನಜನಕತ್ವವು ಯಾವುದರಿಂದ ತಿಳಿಯುವುದೋ ಅದರಿಂದಲೇ ಯಥಾರ್ಥಜ್ಞಾನಜನಕತ್ವವೂ ತಿಳಿಯುತ್ತದೆ, ಎಂದು ಸ್ಪಷ್ಟವಾಗುತ್ತದೆ. 'ಪ್ರಾಮಾಣ್ಯವು ತಿಳಿಯುತ್ತದೆ' ಎಂದು ಹೇಳಿದ್ದರೆ ಈ ಸ್ಪಷ್ಟತೆ ಬರುತ್ತಿರಲಿಲ್ಲ.

ಕರಣಗಳಲ್ಲಿ ಜ್ಞಾನ ಜನಕತ್ವವನ್ನು ತಿಳಿಯುವುದು ಹೀಗೆ—

1. ರೂಪಜ್ಞಾನವು ಒಂದು ಕ್ರಿಯೆಯಾದುದರಿಂದ ಅದಕ್ಕೊಂದು ಕರಣವು ಇರಲೇಬೇಕು. ಛೇದನಕ್ರಿಯೆಯಂತೆ. ಹೀಗೆ ಅನುಮಾನದಿಂದ ತಿಳಿಯಬಹುದು.

2. ಚಕ್ಷುರಾದಿಗಳು ಜ್ಞಾನಕ್ಕೆ ಜನಕವಾಗಿವೆ, ಎಂಬ ಆಪ್ತವಾಕ್ಯದಿಂದಲೂ ಜ್ಞಾನಜನಕತ್ವವು ತಿಳಿಯುತ್ತದೆ.

ಈ ಎರಡರಿಂದಲೂ ಪ್ರಮಾಜನಕತ್ವವೂ ತಿಳಿಯುತ್ತದೆ. ಹೀಗೆ, ಕರಣಗತವಾದ ಪ್ರಾಮಾಣ್ಯವು ಜ್ಞಪ್ತೌ ಸ್ವತಃ.

ಕರಣಗಳಲ್ಲಿ ಇರುವ ಅಪ್ರಾಮಾಣ್ಯವು ದೋಷಜ್ಞಾನದಿಂದ ಗ್ರಾಹ್ಯ. ಚಕ್ಷುರಾದಿಗಳಲ್ಲಿ ಇರಬಹುದಾದ ದೋಷಗಳು–ಪೊರೆ, ಕಾಮಲೆ ಮುಂತಾದವು. ಅನುಮಾನದಲ್ಲಿ ಅಸಿದ್ಧಿ–ವ್ಯಾಪ್ತಿಭ್ರಮೆ ಇತ್ಯಾದಿ. ಶಬ್ದದಲ್ಲಿ–ಪ್ರಮಾದಾದಿಗಳೂ ದೋಷಗಳು. ಇವುಗಳ ಜ್ಞಾನದಿಂದ ಅಥವಾ ವಿಸಂವಾದಜ್ಞಾನ ಬಂದಾಗ ಕರಣಗಳಲ್ಲಿ ಭ್ರಮಜನಕತ್ವಜ್ಞಾನವು (ಅಪ್ರಾಮಾಣ್ಯಜ್ಞಾನವು) ಬರುವುದು.

ಹಿಂದೆ ಹೇಳಿದಂತೆ, ಕರಣಗಳಲ್ಲಿ ಜ್ಞಾನಜನನಶಕ್ತಿಯು ಸಹಜವಾದರೂ ಭ್ರಮಜನನಶಕ್ತಿಯು ಕರಣಗಳಲ್ಲಿರುವ ಕಾಚಾದಿದೋಷಗಳಿಂದ ಆಹಿತವಾದುದು. ಆದ್ದರಿಂದ ಆ ಎರಡು ಶಕ್ತಿಗಳು ಬೇರೆಬೇರೆ. ಹೀಗಾಗಿ, ಜ್ಞಾನಜನನಶಕ್ತಿಗೆ ಗ್ರಾಹಕ ಬೇರೆ. ಭ್ರಮಜನನಶಕ್ತಿಗೆ ಗ್ರಾಹಕ ಬೇರೆ. ಇದಲ್ಲದೆ, ಭ್ರಮಜನನಶಕ್ತಿಯ ಜ್ಞಾನವು ದೋಷಜ್ಞಾನ ಇದ್ದಾಗ ಮಾತ್ರ ಬರುತ್ತದೆ, ಇಲ್ಲದಿದ್ದರೆ ಬರುವುದಿಲ್ಲ. ದೋಷಜ್ಞಾನ–ಅನ್ವಯವ್ಯತಿರೇಕಗಳ ಅನುವಿಧಾನವು ಭ್ರಮಜನಕಶಕ್ತಿಜ್ಞಾನಕ್ಕೆ ಇರುವುದರಿಂದ ಕರಣಗತವಾದ ಅಪ್ರಾಮಾಣ್ಯಜ್ಞಾನಕ್ಕೆ ದೋಷಜ್ಞಾನವೇ ಕಾರಣ. ಆದ್ದರಿಂದ ಅದು ಜ್ಞಪ್ತೌ ಪರತಃ ಎಂದು ಅಂಗೀಕರಿಸಬೇಕು.

## ನ್ಯಾಯದೀಪದಲ್ಲಿ ಅವತಾರಿಕೆ

**ಸ್ವತಸ್ತ್ವೋಕ್ತೇಃ ಪ್ರಮಾಣಪದ್ಧತಿವಿರೋಧಮ್ ಆಶಂಕ್ಯ ತದಭಿಪ್ರಾಯಮಾಹ–ಯಾ ತು ಇತಿ ॥**

ಪ್ರಮಾಣಪದ್ಧತಿಯಲ್ಲಿ ಕರಣ ಪ್ರಾಮಾಣ್ಯಕ್ಕೆ ಜ್ಞಪ್ತೌ ಪರತಸ್ತ್ವವನ್ನು ಹೇಳಲಾಗಿದೆ. ಅದರ ವಿರೋಧವನ್ನು ಮುಂದಿನ ಮೂಲದಲ್ಲಿ ಪರಿಹರಿಸಲಾಗಿದೆ.

**या तु पद्धतौ ''करणप्रामाण्यज्ञप्तिस्तु परत एव । इन्द्रियलिङ्गशब्दानां यथायथम् अनुमानप्रत्यक्षादिवेद्यत्वात् । यथार्थज्ञानसाधनत्वस्य तु अनुमानवेद्यत्वात्'' इत्युक्तिः सा करणग्राहकमात्रग्राह्यत्वरूपं स्वतस्त्वं नेत्यभिप्रेत्य ।।**

**अत एव सुधायां ''करणानां तु ज्ञप्तौ स्वतस्त्वं नास्त्येव'' इत्यादिना पद्धत्युक्तं पक्षमुक्त्वा ''अथवा ज्ञानजनकत्वं येन गृह्यते तत एव**

**यथार्थज्ञानजनकत्वस्य तदीयस्य ग्राह्यत्वं स्वतस्त्वम्'' इति पक्षान्तरमुक्तम् ।।**

ಪ್ರಮಾಣಪದ್ಧತಿಯಲ್ಲಿ ಶ್ರೀಜಯತೀರ್ಥರು ಕರಣಪ್ರಾಮಾಣ್ಯವು ಜ್ಞಪ್ತೌ ಪರತಃ ಎಂದು ಹೇಳಿದ್ದಾರೆ. ''ಕರಣಪ್ರಾಮಾಣ್ಯವು ಜ್ಞಪ್ತಿಯಲ್ಲಿ ಪರತಃ. ಅದಕ್ಕೆ ಜ್ಞಾನಜನಕ ಗ್ರಾಹಕ ಮಾತ್ರ ಗ್ರಾಹ್ಯತ್ವವು ಇಲ್ಲ. ಜ್ಞಾನಜನಕವಾದ ಇಂದ್ರಿಯಗಳು ಅನುಮಾನವೇದ್ಯಗಳಾಗಿವೆ. ಲಿಂಗ ಮತ್ತು ಶಬ್ದಗಳು ಪ್ರತ್ಯಕ್ಷಾದಿ ವೇದ್ಯಗಳಾಗಿವೆ. ಆದರೆ, ಯಥಾರ್ಥಜ್ಞಾನಜನಕತ್ವವು ಅನ್ವಯ ವ್ಯತಿರೇಕಗಳಿಂದ ಗಮ್ಯವಾಗಿದೆ. ಅರ್ಥಾತ್ ಅನುಮಾನವೇದ್ಯವಾಗಿದೆ'' ಎಂದು. ಇದು 'ಕರಣಗ್ರಾಹಕ ಮಾತ್ರ ಗ್ರಾಹ್ಯತ್ವಂ ಸ್ವತಸ್ತ್ವಂ' ಎಂದು ಸ್ವತಸ್ತ್ವದ ನಿರ್ವಚನಪಕ್ಷದಲ್ಲಿ ಯುಕ್ತವೇ ಆಗಿದೆ. ಆದರೆ, 'ಜ್ಞಾನಜನಕಶಕ್ತಿಗ್ರಾಹಕ ಮಾತ್ರ ಗ್ರಾಹ್ಯ ಶಕ್ತಿಕತ್ವಮ್ ಪ್ರಾಮಾಣ್ಯಸ್ಯ ಸ್ವತಸ್ತ್ವಮ್' ಎಂದು ಜ್ಞಪ್ತೌ ಸ್ವತಸ್ತ್ವವನ್ನು ಪರಿಷ್ಕರಿಸಿದರೆ, ಅಂತಹ ಸ್ವತಸ್ತ್ವವು ಕರಣ ಪ್ರಾಮಾಣ್ಯಕ್ಕೂ ಇದೆ.

ಆದ್ದರಿಂದಲೇ ನ್ಯಾಯಸುಧಾದಲ್ಲಿ ಶ್ರೀಜಯತೀರ್ಥರು ಹೀಗೆ ಹೇಳಿದ್ದಾರೆ– 'ಕರಣಗಳಲ್ಲಿರುವ ಪ್ರಾಮಾಣ್ಯಕ್ಕೆ ಜ್ಞಪ್ತೌ ಸ್ವತಸ್ತ್ವ ಇಲ್ಲ'. ಹೀಗೆ, ಪ್ರಮಾಣಪದ್ಧತಿಯಲ್ಲಿ ತಾವು ಹೇಳಿದ್ದನ್ನು ಮೊದಲು ಹೇಳಿ ಆಮೇಲೆ ಪಕ್ಷಾಂತರವನ್ನು ತಿಳಿಸಿದ್ದಾರೆ— 'ಅಥವಾ ಕರಣಗಳಿಗೆ ಜ್ಞಾನಜನಕತ್ವವು ಯಾವುದರಿಂದ (ಅನ್ವಯವ್ಯತಿರೇಕಗಳಿಂದ) ಗೃಹೀತವಾಗುವುದೋ ಆದರಿಂದಲೇ ಇಂದ್ರಿಯಗಳಲ್ಲಿರುವ ಯಥಾರ್ಥಜ್ಞಾನಜನಕತ್ವವೂ (ಪ್ರಾಮಾಣ್ಯವೂ) ಗೃಹೀತವಾಗುತ್ತದೆ. ಇದೇ ಕರಣಪ್ರಾಮಾಣ್ಯಕ್ಕೆ ಜ್ಞಪ್ತೌ ಸ್ವತಸ್ತ್ವ'' ಹೀಗೆ ಪಕ್ಷಾಂತರವನ್ನೂ ಸುಧಾದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**ಸುಧಾಯಾಮಿತಿ ।। ಜಿಜ್ಞಾಸಾಧಿಕರಣೇ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಮ್' ಇತ್ಯತ್ರ ಇತ್ಯರ್ಥಃ ।**

ನ್ಯಾಯಸುಧಾ ಜಿಜ್ಞಾಸಾಧಿಕರಣದಲ್ಲಿ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಎಂಬ ಅನುವ್ಯಾಖ್ಯಾನ ವನ್ನು ವಿವರಿಸುವಾಗ ಶ್ರೀಜಯತೀರ್ಥರು ಕರಣಪ್ರಾಮಾಣ್ಯಕ್ಕೆ ಜ್ಞಪ್ತೌ ಪರತಸ್ತ್ವ ಮತ್ತು ಸ್ವತಸ್ತ್ವಗಳೆರಡನ್ನೂ ಪಕ್ಷಭೇದೇನ ತಿಳಿಸಿದ್ದಾರೆ.

## ನ್ಯಾಯದೀಪದಲ್ಲಿ ಅವತಾರಿಕೆ

**''ಕರಣಾನಾಂ ಚ ಜ್ಞಾನಜನನಶಕ್ತ್ಯೈವ ತದ್‌ಯಾಥಾರ್ಥ್ಯಜನಕತ್ವಂ ಸ್ವತಸ್ತ್ವಮ್'' ಇತಿ ಸುಧೋಕ್ತಿಂ ದ್ವೇಧಾ ವಿವೃಣ್ವನ್ ಆಹ–ಉತ್ಪತ್ತೌ ಇತಿ ।।**

ಸುಧಾದಲ್ಲಿ ಕರಣಪ್ರಾಮಾಣ್ಯದ ಉತ್ಪತ್ತಿಯ ಬಗ್ಗೆ ಹೀಗೆ ಹೇಳಲಾಗಿದೆ– ''ಕರಣಗಳಲ್ಲಿ ಪ್ರಾಮಾಣ್ಯದ ಸ್ವತಸ್ತ್ವ ಎಂದರೆ ಅವುಗಳಲ್ಲಿ ಸ್ವಹೇತುಗಳಿಂದ ಸಂಪಾದಿತವಾದ ಜ್ಞಾನಜನನಶಕ್ತಿಯು ಹೇಗೆ ಸ್ವಾಭಾವಿಕವೋ ಅದರಂತೆ ಅವುಗಳಲ್ಲಿ ಇರುವ ಯಥಾರ್ಥಜ್ಞಾನಜನನ ಶಕ್ತಿಯೂ ಸಹಜವಾದುದು, ಕಾರಣಾಂತರಾಸಾದಿತವಲ್ಲ'' ಎಂದು. ಈ ಸುಧಾವಾಕ್ಯಕ್ಕೆ ಎರಡು ವಿಧವಾದ ವಿವರಣೆಯನ್ನು ಮೂಲದಲ್ಲಿ ಮಾಡುತ್ತಿದ್ದಾರೆ.

**उत्पत्तौ स्वतस्त्वं तु, करणगतायाः यथार्थज्ञानजननशक्तेः करणगता या करणहेत्वासादिता सहजा ज्ञानजननशक्तिः तद्वत् सहजत्वं वा तदभिन्नत्वं वा ।**

ಕರಣಗಳಲ್ಲಿ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವದ ಸ್ವರೂಪ ಹೀಗೆ— ಜನ್ಯಕರಣಗಳಲ್ಲಿ ಜ್ಞಾನಜನನಶಕ್ತಿಯು ಆ ಕರಣಗಳಿಗೆ ಯಾವುದು ಕಾರಣಗಳೋ ಅವುಗಳಿಂದಲೇ ಸಹಜವಾಗಿ ಬಂದಿದೆ. ಅದರಂತೆಯೇ, ಪ್ರಾಮಾಣ್ಯಜನನಶಕ್ತಿಯೂ ಅವುಗಳಲ್ಲಿ ಸಹಜವಾಗಿಯೇ ಇದೆ. ಆ ಶಕ್ತಿ ಆಗಂತುಕವಲ್ಲ. ಅಥವಾ, ಅವೆರಡೂ ಶಕ್ತಿಗಳೂ ಬೇರೆಬೇರೆಯಲ್ಲ, ಒಂದೇ ಆಗಿವೆ, ಹೀಗೆ ಕರಣಪ್ರಾಮಾಣ್ಯದ ಸ್ವತಸ್ತ್ವವನ್ನು ತಿಳಿಯಬೇಕು.

## ನ್ಯಾಯದೀಪ

**ಉತ್ಪತ್ತೌ ಇತಿ ॥ ಕರಣಗತಸ್ಯ ಪ್ರಾಮಾಣ್ಯಸ್ಯ ಇತ್ಯನುಕರ್ಷಃ । ಶಕ್ತೇರಿತ್ಯಸ್ಯ ಸಹಜತ್ವಮ್, ಇತ್ಯನೇನ ಅನ್ವಯಃ । ಕರಣಹೇತು ಇತಿ ॥ ಏತಚ್ಚ ಜನ್ಯಕರಣಾಭಿಪ್ರಾಯಮ್ । ಶಕ್ತಿಭೇದಮುಪೇತ್ಯ 'ತದ್ವತ್ ಸಹಜತ್ವಮ್' ಇತ್ಯುಕ್ತಿಃ, ದೋಷೇಣ ಪ್ರಮಾಶಕ್ತಿಪ್ರತಿಬಂಧೇಽಪಿ ಜ್ಞಾನಶಕ್ತೇಃ ಅಪ್ರತಿಬಂಧನಿರ್ವಾಹಾರ್ಥಾ । ಶಕ್ತೇರೇಕತ್ವೇಽಪಿ ವಿಷಯಭೇದೇನ ಪ್ರತಿಬಂಧಾಪ್ರತಿಬಂಧಯೋಃ ಉಪಪತ್ತೇಃ ಸುಧೋಕ್ತಿ ಸ್ವಾರಸ್ಯಾನುರೋಧೇನ ಆಹ–ತದಭಿನ್ನತ್ವಂ ಚೇತಿ ॥**

ಮೂಲದಲ್ಲಿ ಕರಣಗಳಲ್ಲಿ ಜ್ಞಾನಜನನಶಕ್ತಿಯು ಅವುಗಳ ಜನಕಗಳಿಂದ ಬಂದಿದೆ, ಎಂದಿರುವುದು ಜನ್ಯವಾದ ಕರಣಗಳ ಅಭಿಪ್ರಾಯದಿಂದ. ಇದು ಸಾಕ್ಷಿ ಮತ್ತು ಅಪೌರುಷೇಯವಾದ ವೇದಕ್ಕೆ ಅನ್ವಯಿಸುವುದಿಲ್ಲ.

ಕರಣಗಳಲ್ಲಿ ಜ್ಞಾನಜನನಶಕ್ತಿ ಮತ್ತು ಪ್ರಮಾಜನನಶಕ್ತಿ ಇವೆರಡೂ ಬೇರೆಬೇರೆ ಎಂದು ಅಂಗೀಕರಿಸಿ ಮೂಲದಲ್ಲಿ 'ಜ್ಞಾನ ಜನನ ಶಕ್ತಿಯಂತೆ ಪ್ರಮಾಜನನ ಶಕ್ತಿಯೂ ಸಹಜ'' ಎಂದು

ಹೇಳಲಾಗಿದೆ. ಇದರಿಂದ, ದೋಷದಿಂದ ಪ್ರಮಾಜನನಶಕ್ತಿಯು ಪ್ರತಿಬದ್ಧವಾದರೂ ಜ್ಞಾನಜನನ ಶಕ್ತಿಯು ಅಪ್ರತಿಬದ್ಧವಾಗಿರುತ್ತದೆ. (ವಹ್ನಿಯಲ್ಲಿರುವ ದಾಹಶಕ್ತಿಯು ಮಣಿಯಿಂದ ಪ್ರತಿಬದ್ಧ ವಾದರೂ ಪ್ರಕಾಶನ ಶಕ್ತಿಯು ಅಪ್ರತಿಬದ್ಧವಾಗಿ ಉಳಿಯುವಂತೆ) ಎರಡೂ ಶಕ್ತಿಗಳು ಬೇರಲ್ಲ ಎನ್ನುವಪಕ್ಷವೇ ಸುಧಾ ವಾಕ್ಯದ ಸ್ವರಸಸಿದ್ಧವಾದ ಅರ್ಥ. ಈ ಪಕ್ಷದಲ್ಲಿ– ಆ ಶಕ್ತಿಯು ಜ್ಞಾನವಿಷಯದಲ್ಲಿ ಅಪ್ರತಿಬದ್ಧವಾದರೂ ಪ್ರಾಮಾಣ್ಯವಿಷಯದಲ್ಲಿ ಪ್ರತಿಬದ್ಧವಾಗುತ್ತದೆ, ಎಂದು ತಿಳಿಯಬೇಕು.

## ನ್ಯಾಯದೀಪದಲ್ಲಿ ಅವತಾರಿಕೆ

**ವಾಕ್ಯಗತಾ ಹಿ ದೋಷಾಃ ತಸ್ಯ ಯಥಾರ್ಥಜ್ಞಾನಜನನಶಕ್ತಿಂ ಪ್ರತಿಬಧ್ಯ, ವಿಪರೀತಜ್ಞಾನಜನನಶಕ್ತಿಮ್ ಆವಿರ್ಭಾವಯಂತಿ, ಇತಿ ತತ್ತ್ವನಿರ್ಣಯ ಟೀಕಾಯಾಮ್ ವಾಕ್ಯಪದಮ್ 'ಇಂದ್ರಿಯಾದೀನಾಮ್ ಔತ್ಸರ್ಗಿಕೀ ಶಕ್ತಿಃ ಪ್ರಾಮಾಣ್ಯಜನನೇ, ದೋಷಾಪವಾದಾತ್...'' ಇತ್ಯಾದಿಸುಧಾನುರೋಧಾತ್ ಉಪಲಕ್ಷಣಮುಪೇತ್ಯ ಆಹ–ಅಪ್ರಮೇತಿ ॥**

'ವಾಕ್ಯದಲ್ಲಿರುವ ದೋಷಗಳು ಅದರಲ್ಲಿರುವ ಯಥಾರ್ಥಜ್ಞಾನಜನಕತ್ವಶಕ್ತಿಯನ್ನು ತಡೆದು ಅದಕ್ಕೆ ವಿರುದ್ಧವಾಗಿ, ಅಯಥಾರ್ಥಜ್ಞಾನಜನನಶಕ್ತಿಯನ್ನು ಅವುಗಳಿಗೆ ತಂದುಕೊಡುತ್ತವೆ'. ಹೀಗೆ ತತ್ತ್ವನಿರ್ಣಯಟೀಕಾದಲ್ಲಿ ಅಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಹೇಳಲಾಗಿದೆ. ಅಲ್ಲಿ ಅದನ್ನು ವಾಕ್ಯಕ್ಕೆ ಮಾತ್ರ ಅನ್ವಯಿಸುವಂತೆ ಹೇಳಲಾಗಿದ್ದರೂ ಸುಧಾದಲ್ಲಿ 'ಇಂದ್ರಿಯಾದೀನಾಂ' ಎಂದು ಎಲ್ಲ ಕರಣಗಳಿಗೂ ಇದೇ ಸ್ವಭಾವವನ್ನು ಹೇಳಿರುವುದರಿಂದ ತತ್ತ್ವನಿರ್ಣಯದಲ್ಲಿರುವ ವಾಕ್ಯಪದವು ಉಪಲಕ್ಷಣ, ಎಂದು ತಿಳಿಯಬೇಕು. ಇದನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ—

**अप्रमाजननशक्तिस्तु न सहजा किन्तु दोषाहिता इत्यप्रामाण्यं परत इति दिक् ।।**

ಕರಣಗಳಲ್ಲಿ ಅಪ್ರಮಾಜನನ ಶಕ್ತಿಯು ಪ್ರಮಾಜನನಶಕ್ತಿಯಂತೆ ಸಹಜವಾದುದಲ್ಲ. ದೋಷದಿಂದಾಗಿ ಬರುವಂತಹುದು. ಆದ್ದರಿಂದ 'ಅಪ್ರಾಮಾಣ್ಯಂ ಪರತಃ'.

## ನ್ಯಾಯದೀಪ

**ಅಪ್ರಮೇತಿ ॥ ಕರಣಗತಾ, ಇತಿ ಅನುಕರ್ಷಃ । ದೋಷಾಹಿತೇತಿ ॥**

**ನನು, ಯದಿ ಪ್ರಮಾಜನನ ಶಕ್ತಿಃ ಜ್ಞಾನಜನಕತ್ವಗ್ರಾಹಕ ಮಾತ್ರ ಗ್ರಾಹ್ಯಾ ತರ್ಹಿ ಭ್ರಮಜನನಶಕ್ತಿರಪಿ ತಥಾ ಸ್ಯಾತ್। ದೋಷಾನುವಿಧಾನಾತ್ ಸಾ ಪರಗ್ರಾಹ್ಯಾ**

**ಚೇತ್ ಪ್ರಮಾಜನನಶಕ್ತಿರಪಿ ಗುಣ–ದೋಷಾಭಾವಜ್ಞಾನಾನುವಿಧಾನಾತ್ ತಥೈವ ಸ್ಯಾತ್ । ಅಪ್ರಮಾಜನಕತ್ವರೂಪ–ವಿರೋಧಿನಿರಾಸೋಪಕ್ಷೀಣಂ ತಚ್ಚೇತ್ ದೋಷಾದಿಜ್ಞಾನಾನುವಿಧಾನಮಪಿ ತಥಾ ಸ್ಯಾತ್ ।**

**ತಥಾ, ಯದಿ ಭ್ರಮಜನನಶಕ್ತಿಃ ದೋಷಾಹಿತಾ, ತರ್ಹಿ ಪ್ರಮಾಜನನಶಕ್ತಿರಪಿ ಗುಣಾಹಿತಾ ಸ್ಯಾತ್ । ತಸ್ಯಾಃ ಸಹಜತ್ವೇ ಭ್ರಮಜನನಶಕ್ತಿರಪಿ ತಥಾ ಸ್ಯಾತ್ । ಯದಿ ದೋಷಾನ್ವಯ–ವ್ಯತಿರೇಕಬಲಾತ್ ಭ್ರಮಜನನಶಕ್ತಿಃ ದೋಷಾಧೀನಾ, ತರ್ಹಿ ಗುಣಾನುವಿಧಾನಾತ್ ಪ್ರಮಾಜನನಶಕ್ತಿರಪಿ ಗುಣಾಧೀನಾ ಸ್ಯಾತ್ । ಗುಣಾನಾಂ ವಿರೋಧಿದೋಷನಿರಾಸೋಪಕ್ಷಯೇಣ ಅನ್ಯಥಾಸಿದ್ಧೌ ದೋಷಾಣಾಮಪಿ ವಿರೋಧಿಗುಣನಿರಾಸೇನ ಅನ್ಯಥಾಸಿದ್ಧಿಃ, ಸಾಮ್ಯಾತ್ । ಗುಣಾಭಾವಸಹಕೃತಸ್ಯ ಕರಣಸ್ಯ ಭ್ರಮಜನಕತ್ವೇನ ಕರಣಾಪ್ರಾಮಾಣ್ಯಸ್ಯ ಪರತಸ್ತ್ವೇ ದೋಷಾಭಾವ ಸಹಕೃತಸ್ಯ ಪ್ರಮಾಜನಕತ್ವಾತ್ ಪ್ರಮಾಜನಕತ್ವಂ ಪರತ ಏವೇತಿ ಸ್ಯಾತ್। ದೋಷಾಭಾವಸ್ಯ ಪ್ರಯೋಜಕತ್ವಮೇವ, ನ ಪ್ರಮಾಜನನ–ಶಕ್ತ್ಯಾಧಾಯಕತ್ವಮ್ ತರ್ಹಿ ಗುಣಾಭಾವಸ್ಯಾಪಿ ಏವಮಿತಿ ಸಮಮ್ ॥**

ರಾಯರು ಮೂಲದಲ್ಲಿರುವ 'ದಿಕ್ ಎಂಬುದಕ್ಕೆ ಅವತಾರಿಕೆಯನ್ನು ಕೊಟ್ಟಿದ್ದಾರೆ- ಕರಣಗತವಾದ ಪ್ರಾಮಾಣ್ಯಕ್ಕೂ ಅಪ್ರಾಮಾಣ್ಯಕ್ಕೂ ವ್ಯತ್ಯಾಸವಿಲ್ಲ, ಪ್ರಾಮಾಣ್ಯವು ಸ್ವತಃ ಆದರೆ ಅಪ್ರಾಮಾಣ್ಯಕ್ಕೂ ಸ್ವತಸ್ತ್ವಬರಲಿ, ಅಪ್ರಾಮಾಣ್ಯವು ಪರತಃ ಆದರೆ ಪ್ರಾಮಾಣ್ಯವೂ ಹಾಗೆಯೇ ಆಗಲಿ, ಎಂದು ನ್ಯಾಯದೀಪದ ಒಟ್ಟು ಭಾವಾರ್ಥ.

ಕರಣದಲ್ಲಿರುವ ಪ್ರಮಾಜನನಶಕ್ತಿಯು ಜ್ಞಾನಜನಕಗ್ರಾಹಕಗಳಿಂದಲೇ ಗ್ರಾಹ್ಯವಾಗುವುದಾದಲ್ಲಿ (ಜ್ಞಪ್ತೌ ಸ್ವತಃ) ಭ್ರಮಜನನ ಶಕ್ತಿಯೂ ಹಾಗೆಯೇ ಆಗಲಿ. ಅದಕ್ಕೂ ಜ್ಞಪ್ತೌ ಸ್ವತಸ್ತ್ವವು ಬರಲಿ.

ದೋಷಜ್ಞಾನದ ಅನ್ವಯವ್ಯತಿರೇಕಾನುವಿಧಾನದಿಂದ ಅಪ್ರಮಾಜನನಶಕ್ತಿಯು ಪರಗ್ರಾಹ್ಯವಾಗುವುದಾದಲ್ಲಿ ಪ್ರಮಾಜನನಶಕ್ತಿಯ ಜ್ಞಾನವೂ, ಗುಣ ಮತ್ತು ದೋಷಾಭಾವಜ್ಞಾನದ ಅನ್ವಯ ವ್ಯತಿರೇಕಾನುವಿಧಾಯಿಯಾದುದರಿಂದ ಪರಗ್ರಾಹ್ಯವಾಗಲಿ.

ಗುಣ ಮತ್ತು ದೋಷಾಭಾವಗಳ ಅನ್ವಯವ್ಯತಿರೇಕಜ್ಞಾನವು, ಅಪ್ರಮಾಜನಕತ್ವಜ್ಞಾನ ರೂಪವಾದ ವಿರೋಧಿಯ ನಿರಾಸದಲ್ಲಿ ಉಪಕ್ಷೀಣವಾದುದರಿಂದ ಅನ್ಯಥಾಸಿದ್ಧವೆನ್ನುವುದಾದಲ್ಲಿ ದೋಷಜ್ಞಾನದ ಅನ್ವಯವ್ಯತಿರೇಕಗಳೂ ವಿರೋಧಿಯಾದ ಪ್ರಮಾಜನಕತ್ವಜ್ಞಾನದ ನಿರಾಸದಲ್ಲಿ ಉಪಕ್ಷೀಣವಾದುದರಿಂದ ಅನ್ಯಥಾಸಿದ್ಧವಾಗಲಿ. ಹೀಗೆ, ಪ್ರಾಮಾಣ್ಯಕ್ಕೆ ಜ್ಞಪ್ತೌ ಸ್ವತಸ್ತ್ವವಿರುವುದಾದರೆ ಅಪ್ರಾಮಾಣ್ಯಕ್ಕೂ ಜ್ಞಪ್ತೌ ಸ್ವತಸ್ತ್ವವು ಬರಲಿ.

ಇದರಂತೆ ಉತ್ಪತ್ತೌ ಸ್ವತಸ್ತ್ವವೂ ಅಪ್ರಾಮಾಣ್ಯಕ್ಕೂ ಬರಬೇಕಾದೀತು— ಕರಣಗಳಲ್ಲಿರುವ ಭ್ರಮಜನನಶಕ್ತಿಯು ದೋಷದಿಂದಾಗಿ ಅಹಿತವಾಗುವುದಾದಲ್ಲಿ ಪ್ರಮಾಜನನಶಕ್ತಿಯೂ ಗುಣದಿಂದ ಆಹಿತವಾಗಲಿ. ಅದು ಸಹಜವಾದರೆ ಭ್ರಮಜನನಶಕ್ತಿಯೂ ಸಹಜವೇ ಆಗಲಿ.

ದೋಷಾನ್ವಯವ್ಯತಿರೇಕಾನುವಿಧಾನದಿಂದಾಗಿ ಭ್ರಮಜನನಶಕ್ತಿಯು ದೋಷದಿಂದ ಆಹಿತ ವಾಗುವುದಾದರೆ ಗುಣಾನ್ವಯ ವ್ಯತಿರೇಕಾನುವಿಧಾನದಿಂದಾಗಿ ಪ್ರಮಾಜನನಶಕ್ತಿಯೂ ಗುಣದಿಂದ ಆಹಿತವಾಗಲಿ.

ಗುಣಗಳು ವಿರೋಧಿಯಾದ ದೋಷಗಳ ನಿರಾಸದಲ್ಲಿ ಉಪಕ್ಷೀಣಗಳಾದುದರಿಂದ ಅನ್ಯಥಾ ಸಿದ್ಧಗಳಾಗುವುದಾದಲ್ಲಿ ದೋಷಗಳೂ ವಿರೋಧಿಗುಣನಿರಾಸೋಪಕ್ಷೀಣಗಳಾದುದರಿಂದ ಅನ್ಯಥಾ ಸಿದ್ಧಗಳಾಗಲಿ. ಎರಡಕ್ಕೂ ಯಾವ ವ್ಯತ್ಯಾಸವೂ ಇಲ್ಲವಾದುದರಿಂದ ಎರಡೂ ಒಂದೇ ರೀತಿಯಾಗಬೇಕು.

ಕರಣಗಳು ಗುಣಾಭಾವದ ಸಹಕಾರವಿದ್ದಾಗ ಮಾತ್ರ ಭ್ರಮಕ್ಕೆ ಜನಕಗಳಾಗುವುದರಿಂದ ಕರಣಗತಾಪ್ರಾಮಾಣ್ಯವು ಪರತಃ ಎನ್ನುವುದಾದಲ್ಲಿ ದೋಷಾಭಾವಸಹಕಾರವಿದ್ದಾಗ ಮಾತ್ರ ಪ್ರಮಾಜನಕವಾಗುವುದರಿಂದ ಕರಣಗತಪ್ರಾಮಾಣ್ಯವೂ ಪರತಃ ಎಂದಾಗಲಿ.

ದೋಷಾಭಾವವು ಪ್ರಮಾಕ್ಕೆ ಪ್ರಯೋಜಕ ಮಾತ್ರ, ಹೊರತು ಅದು ಕರಣದಲ್ಲಿರುವ ಪ್ರಮಾಜನನಶಕ್ತಿಗೆ ಕಾರಣವಲ್ಲ, ಎಂದಾದರೆ ಗುಣಾಭಾವವೂ ಭ್ರಮೆಗೆ ಪ್ರಯೋಜಕ ಮಾತ್ರ, ಅದೂ ಕರಣಗತವಾದ ಭ್ರಮಜನಶಕ್ತಿಗೆ ಕಾರಣವಲ್ಲ, ಎಂದಾಗಲಿ.

ಹೀಗೆ ಕರಣ ಪ್ರಮಾಣ್ಯದಂತೆ ಅಪ್ರಮಾಣ್ಯವೂ ಉತ್ಪತ್ತೌ ಜ್ಞಪ್ತೌ ಚ ಸ್ವತಃ ಏಕಾಗಬಾರದು?

## ನ್ಯಾಯದೀಪ

**ಇತಿ ಚೇನ್ನ । ಜ್ಞಾನಪ್ರಾಮಾಣ್ಯ-ಸ್ವತಸ್ತ್ವಪರತಸ್ತ್ವಯೋಃ ಉಕ್ತಸಾಧಕಕಲಾಪಸ್ಯ ಅಶೇಷಸ್ಯಾಪಿ ಕರಣಪ್ರಾಮಾಣ್ಯಾಪ್ರಮಾಣ್ಯ-ಸ್ವತಸ್ತ್ವಪರಸ್ತ್ವಯೋಃ ಅನುಸಂಧೇಯತ್ವಾತ್ । ಅಭ್ಯಾಸದಶಾಸ್ಥಲೇ ಗುಣಾದ್ಯನುಸಂಧಾನಾಭಾವೇಽಪಿ ಪ್ರಮಾಜನಕತ್ವಜ್ಞಾನಾನುಭವೇನ ವ್ಯಭಿಚಾರಾತ್ । 'ಪೀತಃ ಶಂಖಃ' ಇತ್ಯಾದಿ ಭ್ರಮೇ ವಿಶೇಷದರ್ಶನಾದಿರೂಪೇ ಗುಣೇ ಸತ್ಯಪಿ ಪಿತ್ತಾದಿಕರಣದೋಷೇಣ ಭ್ರಮೋತ್ಪಾದನೇನ ದೋಷಸ್ಯ ಗುಣನಿರಾಸೋಪಕ್ಷೀಣತ್ವಾಯೋಗಾತ್, ಇತ್ಯಾದೇಃ ಉಕ್ತತ್ವಾತ್, ಇತಿ ಭಾವೇನಾಹ-ದಿಗಿತಿ ॥**

ಕರಣದಲ್ಲಿ ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಸ್ವತಃ ಆಗಲಿ, ಎಂದು ಹಿಂದೆ ಮಾಡಿದ ಆಕ್ಷೇಪವು ಸರಿಯಲ್ಲ. ಹಿಂದೆ, ಜ್ಞಾನಗತಪ್ರಾಮಾಣ್ಯ-ಅಪ್ರಾಮಾಣ್ಯದ ಸ್ವತಸ್ತ್ವ-ಪರತಸ್ತ್ವಗಳಿಗೆ ಹೇಳಿರುವ ಎಲ್ಲಾ ಸಾಧಕಗಳೂ ಕರಣ-ಪ್ರಾಮಾಣ್ಯ-ಅಪ್ರಾಮಾಣ್ಯ ಸ್ವತಸ್ತ್ವ-ಪರತಸ್ತ್ವಗಳಿಗೂ

ಅನ್ವಯಿಸುತ್ತವೆ. ಹೇಗೆಂದರೆ, ಅಭ್ಯಾಸದಶಾಪನ್ನ ಜ್ಞಾನವು ಬರುವಾಗ ಗುಣದ ಅನುಸಂಧಾನ ವಿಲ್ಲದೆಯೂ ಕರಣಗಳಲ್ಲಿ ಪ್ರಮಾಜನಕತ್ವವು (ಪ್ರಾಮಾಣ್ಯವು) ತಿಳಿಯಲ್ಪಡುತ್ತದೆ, ಎಂದು ಅನುಭವಸಿದ್ಧವಾಗಿದೆ. ಹೀಗೆ ಗುಣಾನುಸಂಧಾನವು ವ್ಯಭಿಚಾರಿಯಾದುದರಿಂದ ಕರಣಗತ ಪ್ರಾಮಾಣ್ಯಜ್ಞಾನಕ್ಕೆ ಗುಣಜ್ಞಾನವು ಕಾರಣವಲ್ಲ.

ಇನ್ನು ದೋಷವು ಗುಣನಿರಾಸಮಾತ್ರೋಪಕ್ಷೀಣವಾದಂತೆ ಗುಣವೂ ದೋಷನಿರಾಸೋಪಕ್ಷೀಣ ಎನ್ನುವುದೂ ಸರಿಯಲ್ಲ. 'ಪೀತಃ ಶಂಖಃ' ಎಂಬಲ್ಲಿ 'ಶುಕ್ಲತ್ವವ್ಯಾಪ್ಯಶಂಖತ್ವವಾನ್' ಎಂಬ ವಿಶೇಷದರ್ಶನರೂಪವಾದ ಗುಣವು ಪಿತ್ತಾದಿದೋಷಕ್ಕೆ ನಿರಾಸಕವಲ್ಲ. ಅಲ್ಲಿ ಪಿತ್ತಾದಿದೋಷ ದಿಂದಾಗಿಯೇ 'ಪೀತಃ ಶಂಖಃ' ಎಂಬ ಭ್ರಮೆಯು ಹುಟ್ಟುತ್ತದೆ. ಆದ್ದರಿಂದ ಭ್ರಮೆ ಹುಟ್ಟಲು ದೋಷವು ಕಾರಣ. ಕರಣಗಳಲ್ಲಿ, ದೋಷದಿಂದಾಗಿಯೇ ಭ್ರಮಜನಕತ್ವಶಕ್ತಿಯು ಬರುತ್ತದೆ. ಆದ್ದರಿಂದ ಕರಣಪ್ರಾಮಾಣ್ಯವು ಉತ್ಪತ್ತೌ ಮತ್ತು ಜ್ಞಪ್ತೌ ಪರತಃ ಸ್ವತಃ ಅಲ್ಲ. ಇದನ್ನು ಮೂಲದಲ್ಲಿ 'ದಿಕ್' ಎಂಬ ಪದದಿಂದ ಸೂಚಿಸಲಾಗಿದೆ.

## ನ್ಯಾಯದೀಪ

**1. ತಥಾಹಿ ಅನುಮಾನಾನಿ–ಪ್ರಮಾಜನನಶಕ್ತಿಃ, ಜ್ಞಾನಜನನಶಕ್ತಿ–ಗ್ರಾಹಕಮಾತ್ರ ಗ್ರಾಹ್ಯಾ, ತದನ್ಯಾಗ್ರಾಹ್ಯತ್ವೇ ಸತಿ ಗ್ರಾಹ್ಯತ್ವಾತ್, ಸಮ್ಮತವತ್ ।**

**2. ಯಥಾರ್ಥಜ್ಞಾನಜನಕತ್ವಂ, ಜ್ಞಾನಜನಕಹೇತ್ವನ್ಯ–ಹೇತ್ವಧೀನಂ ನ, ಜ್ಞಾನಜನಕತ್ವಾಧಿಕರಣ ಮಾತ್ರವೃತ್ತಿತ್ವಾತ್, ಜ್ಞಾನಜನಕತ್ವತ್ ।**

**ಇತ್ಯಾದಿರೂಪೇಣ ಧ್ಯೇಯಾನಿ । ಭ್ರಮಜನಕೇಽಪಿ ಧರ್ಮ್ಯಂಶೇ ಪ್ರಮಾಜನಕತ್ವಭಾವಾತ್ ನಾಸಿದ್ಧಿಃ । ಭ್ರಮಜನಕತ್ವೇ ಚ ಯಾವತ್–ಜ್ಞಾನಜನಕತ್ವಾಧಿಕರಣೇ ವೃತ್ಯಭಾವಾತ್ ನ ವ್ಯಭಿಚಾರಃ ।**

**ಅಪ್ರಾಮಾಣ್ಯಮಿತಿ ॥ ಕರಣಗತಾಪ್ರಾಮಾಣ್ಯಮ್, ಇತ್ಯರ್ಥಃ ।**

ಕರಣಗತವಾದ ಪ್ರಾಮಾಣ್ಯವು ಜ್ಞಪ್ತೌ ಸ್ವತಃ, ಎನ್ನುವುದಕ್ಕೆ ಅನುಮಾನ ಪ್ರಮಾಣ ಹೀಗಾಗುತ್ತದೆ—

1. ಕರಣಗಳಲ್ಲಿರುವ ಪ್ರಮಾಜನನಶಕ್ತಿಯು ಜ್ಞಾನಜನನಶಕ್ತಿಗೆ ಯಾವುದು ಗ್ರಾಹಕವೋ (ಜ್ಞಾನಾನ್ವಯವ್ಯತಿರೇಕಜ್ಞಾನ) ತದ್ಭಿನ್ನವಾದ ಗ್ರಾಹಕದಿಂದ ಗ್ರಾಹ್ಯವಾಗಿಲ್ಲ, ಆದರೆ, ಗ್ರಾಹ್ಯ ವಾಗಿದೆ. ಆದ್ದರಿಂದ, ಅದು ಜ್ಞಾನಜನನಶಕ್ತಿಗ್ರಾಹಕದಿಂದಲೇ ಗ್ರಾಹ್ಯವಾಗಿದೆ. ರೂಪಾದಿಗಳಂತೆ.

ಕರಣಪ್ರಾಮಾಣ್ಯದ ಉತ್ಪತ್ತೌಸ್ವತಸ್ತ್ವಕ್ಕೆ ಸಾಧಕವಾದ ಅನುಮಾನ ಹೀಗೆ—

2. ಕರಣಗತವಾದ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವು ಜ್ಞಾನಜನಕತ್ವಕ್ಕೆ

ಅಧಿಕರಣವಾದ ಎಲ್ಲಾ ಕರಣಗಳಲ್ಲೂ (ಮಾತ್ರ ಪದಕೃತ್ಸಾರ್ಥಕ) ಇರುವುದರಿಂದ ಅವುಗಳಲ್ಲಿ ಜ್ಞಾನಜನಕತ್ವಕ್ಕೆ ಪ್ರಯೋಜಕ ಯಾವುದೋ ಅದರಿಂದಲೇ ಪ್ರಮಾಜನಕತ್ವವೂ ಪ್ರಯೋಜ್ಯವಾಗಿದೆ. ಇತರ ಕಾರಣಗಳಿಂದಾಗಿ ಅದು ಬಂದಿದ್ದಲ್ಲ. ಇಂದ್ರಿಯಾದಿಗಳಲ್ಲಿರುವ ಜ್ಞಾನಜನಕತ್ವಧರ್ಮದಂತೆ.

**ಆಕ್ಷೇಪ**-ಎರಡನೆಯ ಅನುಮಾನದಲ್ಲಿ ಅಸಿದ್ಧಿದೋಷವಿದೆ-ಭ್ರಮಜನಕವಾದ ಇಂದ್ರಿಯಾದಿಗಳಲ್ಲಿ ಜ್ಞಾನಜನಕತ್ವವು ಇದೆ. ಅವುಗಳಲ್ಲಿ ಪ್ರಮಾಜನಕತ್ವ ಇಲ್ಲ. ಹೀಗೆ ಪ್ರಮಾಜನಕತ್ವವು ಜ್ಞಾನಜನಕ ಮಾತ್ರ (ಸಕಲ) ವೃತ್ತಿಯಾಗಿಲ್ಲ. ಅದರಲ್ಲಿ ಹೇತು ಬರಲಿಲ್ಲವಾದುದರಿಂದ ಅಸಿದ್ಧಿ.

ಆದರೆ, ಈ ಅಸಿದ್ಧಿದೋಷಕ್ಕೆ ಆಸ್ಪದವಿಲ್ಲ. ಭ್ರಮಜನಕವಾದ ಇಂದ್ರಿಯಾದಿಗಳೂ ಧರ್ಮ್ಯಂಶದಲ್ಲಿ ಪ್ರಮಾಜನಕವಾಗಿವೆ. ಆದ್ದರಿಂದ ಅಲ್ಲೂ ಪ್ರಮಾಜನಕತ್ವವು ಇದೆ. ಹೀಗೆ, ಪ್ರಮಾಜನಕತ್ವವು ಜ್ಞಾನಜಕತ್ವಾಧಿಕರಣವಾದ ಎಲ್ಲದರಲ್ಲೂ ಇದೆ. ಅಸಿದ್ಧಿದೋಷ ಇಲ್ಲ.

ಇದರಂತೆ, ಭ್ರಮಜನಕತ್ವವು ಜ್ಞಾನಜನಕವಾದ ಸಕಲದಲ್ಲೂ ಇಲ್ಲ. ಪ್ರಮಾಮಾತ್ರಜನಕವಾದ ಇಂದ್ರಿಯಗಳಲ್ಲಿ ಜ್ಞಾನಜನಕತ್ವ ಇರುವಾಗ ಭ್ರಮಜನಕತ್ವವು ಇಲ್ಲ. ಹೀಗಾಗಿ ಅದರಲ್ಲಿ ಹೇತುವು ಇಲ್ಲ, ವ್ಯಭಿಚಾರಕ್ಕೆ ಅವಕಾಶವಿಲ್ಲ.

**एतदप्युक्तम् । ''परतोऽप्रामाण्यम्'' इति ।। तस्मात् प्रामाण्यस्य स्वतस्त्वादपौरुषेयोऽपि वेदः प्रमाणमेव ।।**

**।। प्रामाण्यवादः समाप्तः ।।**

ಕರಣಗತವಾದ ಅಪ್ರಾಮಾಣ್ಯಂ ಪರತಃ ಎಂಬುದನ್ನು ಆಚಾರ್ಯರು ತತ್ತ್ವನಿರ್ಣಯದಲ್ಲಿ 'ಪರತಃ ಅಪ್ರಾಮಾಣ್ಯಂ' ಎಂದು ಹೇಳಿದ್ದಾರೆ.

ಆದ್ದರಿಂದ ಪ್ರಾಮಾಣ್ಯಂ ಸ್ವತಃ. ಹೀಗಾಗಿ ವೇದವು ಅಪೌರುಷೇಯವಾದರೂ ಪ್ರಮಾಣವೇ ಆಗಿದೆ.

## ನ್ಯಾಯದೀಪ

**ಸ್ವತಸ್ತ್ವೋಕ್ತೇಃ ಉಪಯೋಗಂ ವದನ್ ಉಪಸಂಹರತಿ–ತಸ್ಮಾದಿತಿ।। ಅಪೌರುಷೇಯೋಽಪೀತಿ।। ಆಪ್ತೋಕ್ತತ್ವಾದಿ ಗುಣಾಭಾವೇಽಪಿ ಇತ್ಯರ್ಥಃ।**

ಇದುವರೆಗೆ ಹೇಳಿರುವ ಪ್ರಾಮಾಣ್ಯಸ್ವತಸ್ತ್ವ ನಿರೂಪಣೆಯಿಂದ ಆದ ಪ್ರಯೋಜನವನ್ನು ಹೇಳಿ ಈ ಪ್ರಕರಣದ ಉಪಸಂಹಾರವನ್ನು ತಸ್ಮಾತ್, ಎಂಬ ವಾಕ್ಯದಲ್ಲಿ ಮಾಡಲಾಗಿದೆ. ಮೂಲದ 'ಅಪೌರುಷೇಯೋಽಪಿ' ಎನ್ನುವುದರ ತಾತ್ಪರ್ಯ– ವೇದದಲ್ಲಿ ಆಪ್ತೋಕ್ತತ್ವರೂಪವಾದ ಗುಣವು ಇಲ್ಲದಿದ್ದರೂ, ಪ್ರಾಮಾಣ್ಯವು ಗುಣಜನ್ಯವಲ್ಲದ ಕಾರಣ, ವೇದವು ಪ್ರಮಾಣವಾಗುತ್ತದೆ, ಎಂದು.

**ಇಲ್ಲಿಗೆ ಕರಣಪ್ರಾಮಾಣ್ಯದ ಸ್ವತಸ್ತ್ವಪ್ರಕರಣವು ಮುಗಿಯಿತು. ।। 18 ।।**

# ಈ ಪ್ರಕರಣದ ಸಾರಾಂಶ

ಕರಣಗಳಲ್ಲಿರುವ ಪ್ರಾಮಾಣ್ಯಕ್ಕೆ ಉತ್ಪತ್ತೌ ಸ್ವತಸ್ತ್ವ ಇದ್ದಂತೆ ಜ್ಞಪ್ತೌ ಸ್ವತಸ್ತ್ವವೂ ಇದೆ ಎಂಬ ಪಕ್ಷವೂ ಸರಿ ಇಲ್ಲ, ಎನ್ನುವುದೂ ಸರಿ. ಶ್ರೀಜಯತೀರ್ಥರು ಪ್ರಮಾಣಪದ್ಧತಿಯಲ್ಲಿ ಕರಣಪ್ರಾಮಾಣ್ಯಕ್ಕೆ ಜ್ಞಪ್ತೌ ಸ್ವತಸ್ತ್ವವು ಇಲ್ಲ, ಎಂದು ಹೇಳಿದ್ದಾರೆ. ಆದರೆ, ಸುಧಾದಲ್ಲಿ ಅದಕ್ಕೂ ಸ್ವತಸ್ತ್ವ ಇದೆ, ಎಂದೂ ಹೇಳಿದ್ದಾರೆ. ಇದೆ, ಇಲ್ಲ ಎನ್ನುವುದು ಸ್ವತಸ್ತ್ವ ನಿರೂಪಣೆಯ ಕ್ರಮದ ಮೇಲೆ ಅವಲಂಬಿತವಾಗಿದೆ.

ಜ್ಞಾನಗತ ಪ್ರಾಮಾಣ್ಯದಲ್ಲಿ ಸ್ವತಸ್ತ್ವವನ್ನು ನಿರ್ವಚನೆ ಮಾಡಿದಂತೆ ಕರಣಗತಪ್ರಾಮಾಣ್ಯದ ಸ್ವತಸ್ತ್ವವನ್ನು ನಿರೂಪಿಸಿದರೆ ಆಗ ಸ್ವತಸ್ತ್ವ ಹೀಗಾಗುತ್ತದೆ— ಕರಣ ಗ್ರಾಹಕ ಮಾತ್ರ ಗ್ರಾಹ್ಯತ್ವಂ, ಎಂದು. ಕರಣವು ಯಾವುದರಿಂದ ಗ್ರಾಹ್ಯವಾಗುತ್ತದೋ ತದ್ಗತವಾದ ಪ್ರಾಮಾಣ್ಯವೂ ಅದರಿಂದ ಗ್ರಾಹ್ಯವಾಗುತ್ತದೆ, ಎಂದು. ಆದರೆ, ಇಂತಹ ಸ್ವತಸ್ತ್ವವು ಕರಣಪ್ರಾಮಾಣ್ಯದಲ್ಲಿ ಇಲ್ಲ. ಕರಣಗಳು ಇಂದ್ರಿಯ, ಲಿಂಗ, ಶಬ್ದಗಳು. ಇಂದ್ರಿಯಗಳು ಅತೀಂದ್ರಿಯಗಳು. ಅವುಗಳನ್ನು ಅನುಮಾನದಿಂದ ತಿಳಿಯಬೇಕು. ಲಿಂಗವೆಂದರೆ ಹೇತು. ಕೆಲವು ಹೇತುಗಳು ಪ್ರತ್ಯಕ್ಷವೇದ್ಯ, ಕೆಲವು ಅನುಮಾನಾದಿ ವೇದ್ಯಗಳು. ಶಬ್ದವು ಶ್ರೋತ್ರಗ್ರಾಹ್ಯ. ಇವಾವ ಪ್ರಮಾಣಗಳಿಂದಲೂ ಕರಣಗತವಾದ ಪ್ರಾಮಾಣ್ಯವು ವೇದ್ಯವಲ್ಲ. ಪ್ರಾಮಾಣ್ಯ ಎಂದರೆ ಯಥಾರ್ಥಜ್ಞಾನಜನಕತ್ವ. ಜನ್ಯಜನಕಭಾವ ಸರ್ವದಾ ಅನ್ವಯ–ವ್ಯತಿರೇಕಗಮ್ಯ. ಹೀಗೆ, ಇಂತಹ ಸ್ವತಸ್ತ್ವವು ಕರಣಪ್ರಾಮಾಣ್ಯದಲ್ಲಿ ಇಲ್ಲ.

ಆದರೂ, ಇಂದ್ರಿಯಗಳಲ್ಲಿ ಜ್ಞಾನಜನಕತ್ವವು ಯಾವ ಅನ್ವಯವ್ಯತಿರೇಕಗಳಿಂದ ಗ್ರಾಹ್ಯವಾಗಿದೆಯೋ ಅದೇ ಅನ್ವಯ–ವ್ಯತಿರೇಕಗಳಿಂದ ಯಥಾರ್ಥಜ್ಞಾನಜನಕತ್ವವೂ ಗ್ರಾಹ್ಯವಾಗುತ್ತದೆ. ಇಂತಹ ಜ್ಞಾಪ್ತೌ ಸ್ವತಸ್ತ್ವವು ಕರಣಗತವಾದ ಪ್ರಾಮಾಣ್ಯಕ್ಕೆ ಇದೆ. ಜ್ಞಾನಜನಕವಾದ ಇಂದ್ರಿಯವು ನಿಯಮೇನ ಪ್ರಮಾಜನಕವೂ ಆಗಿದೆ. ಇಂದ್ರಿಯದಿಂದ ಭ್ರಮೆ ಬಂದರೂ ಆ ಭ್ರಮೆಯೂ ಧರ್ಮ್ಯಂಶದಲ್ಲಿ ಪ್ರಮಾ ಆಗಿರುತ್ತದೆ. ಆದರೆ, ಜ್ಞಾನಜನಕವಾದಾಗಲೆಲ್ಲ ಇಂದ್ರಿಯಾದಿಗಳು ಭ್ರಮಜನಕವಾಗಿರುವುದಿಲ್ಲ. ಯಥಾರ್ಥಜ್ಞಾನವು ಇಂದ್ರಿಯದಿಂದ ಬಂದಾಗ ಭ್ರಮಜನಕತ್ವ ಇರುವುದಿಲ್ಲ. ಹೀಗಾಗಿ ಜ್ಞಾನಜನಕತ್ವಗ್ರಹದಿಂದ ಇಂದ್ರಿಯಗಳಲ್ಲಿ ಪ್ರಮಾಜನಕತ್ವ ಗ್ರಹ ಬರಬಹುದು. ಆದರೆ, ಭ್ರಮಜನಕತ್ವಗ್ರಹ ಬರುವುದಿಲ್ಲ. ದೋಷಜ್ಞಾನದಿಂದಲೇ ಭ್ರಮಜನಕತ್ವವು ಗ್ರಾಹ್ಯವಾಗಿದೆ. ಆದ್ದರಿಂದ ಕರಣಗತಪ್ರಾಮಾಣ್ಯವೂ ಜ್ಞಪ್ತೌ ಸ್ವತಃ.

ಪ್ರಾಮಾಣ್ಯಸ್ವತಸ್ತ್ವ ಸಿದ್ಧಾಂತದ ಉಪಯೋಗ ವೇದಾಪೌರುಷೇಯತ್ವ ರಕ್ಷಣೆ. ಜ್ಞಾನಪ್ರಾಮಾಣ್ಯವು ಗುಣಜನ್ಯವಾದರೂ ಅಥವಾ ಕರಣ ಪ್ರಾಮಾಣ್ಯವು ಗುಣಜನ್ಯವಾದರೂ ವೇದಾಪೌರುಷೇಯತ್ವಕ್ಕೆ ಭಂಗ ಬರುತ್ತದೆ. ಅವರೆಡೂ ಸ್ವತಃ ಆದಾಗ ವೇದದ ಅಪೌರುಷೇಯತ್ವ ಉಪಪನ್ನವಾಗುತ್ತದೆ. ಆದ್ದರಿಂದ ಗ್ರಂಥದ ಮಂಗಲಪದ್ಯದಲ್ಲಿ 'ಸ್ವತಃ ಪ್ರಮಾಣೈಃ ಆಮ್ನಾಯೈಃ' ಎಂದುದು ಸರಿಯಾಗಿದೆ.

**॥ ಪ್ರಾಮಾಣ್ಯವಾದ ಮುಗಿಯಿತು ॥ ಪ್ರಕರಣ – 18 ॥**

ತರ್ಕತಾಂಡವ ಗ್ರಂಥದ ಅನುವಾದವನ್ನು ಮಾಡುವಂತೆ ಮಂತ್ರಾಲಯ ಮಠಾಧೀಶರಾದ ಶ್ರೀಶ್ರೀಸುಬುಧೇಂದ್ರತೀರ್ಥಶ್ರೀಪಾದರು, ರಾಯರ ಸನ್ನಿಧಿಯಲ್ಲಿ ಆದೇಶ ಮಾಡಿದ್ದಾರೆ. ತರ್ಕತಾಂಡವದ ಈ ಭಾಗವನ್ನು ಎರಡುಬಾರಿ ಪಾಠ ಹೇಳಿದ ಮೇಲೆ ಈ ಅನುವಾದವನ್ನು ಮಾಡಿದ್ದೇನೆ. ಆದರೂ ಎಲ್ಲ ಅಂಶಗಳನ್ನೂ ಮನವರಿಕೆ ಮಾಡಿಕೊಂಡಿದ್ದೇನೆ, ಎಂಬ ಆತ್ಮವಿಶ್ವಾಸ ನನಗಿಲ್ಲ. ಶ್ರೀಗಳವರು ಮಾಡಿದ ಆದೇಶದಿಂದಾಗಿ ಇದಕ್ಕೆ ಸಂಬಧಪಟ್ಟ ಮಣಿಗ್ರಂಥ, ಕುಸುಮಾಂಜಲಿ, ಅವುಗಳ ವ್ಯಾಖ್ಯಾನ, ಶ್ರೀವಿಜಯೀಂದ್ರಸ್ವಾಮಿಗಳ ವ್ಯಾಖ್ಯಾನದ ಅಮುದ್ರಿತ ಪ್ರತಿಗಳನ್ನು ಓದಿ ನನಗೆ ರಾಯರು ಅರ್ಥಮಾಡಿಸಿದ್ದನ್ನು ನಾನು ಅನುವಾದಿಸಿದ್ದೇನೆ. ಪಾಠವನ್ನೇ ಕೇಳದೆ ಈ ಅನುವಾದದಿಂದಲೇ ತರ್ಕತಾಂಡವದ ಕ್ಲಿಷ್ಟಭಾಗವಾದ ಪ್ರಾಮಾಣ್ಯವಾದ ಗ್ರಂಥವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗಲಿಕ್ಕಿಲ್ಲ. ಆದರೂ, ಪಾಠ ಕೇಳಿದವರಿಗೆ ಮತ್ತೆ ಓದಿ ಅರ್ಥಮಾಡಿಕೊಳ್ಳಲು ಇದು ಸಹಕಾರಿಯಾಗುತ್ತದೆ.

ವ್ಯಾಸತ್ರಯಗಳಲ್ಲಿ ತರ್ಕತಾಂಡವದ ಅಧ್ಯಯನ ಇತ್ತೀಚೆಗೆ ತುಂಬಾ ಅಪರೂಪ. ಅದಕ್ಕೆ ಅದರ ಕ್ಲಿಷ್ಟತೆಯೂ ಒಂದು ಕಾರಣ. ಆದರೆ, ಶ್ರೀವ್ಯಾಸರಾಯರ ಅದ್ಭುತ ವಿಮರ್ಶಾಚಾತುರ್ಯಕ್ಕೆ ಇದೊಂದು ಸ್ಪಷ್ಟ ನಿದರ್ಶನ. ಶ್ರೀಸುಬುಧೇಂದ್ರತೀರ್ಥರು ವ್ಯಾಸತ್ರಯಗಳನ್ನೂ ವಿದ್ವಾಂಸರಿಂದ ಕನ್ನಡಕ್ಕೆ ಅನುವಾದಿಸುವ ಸಂಕಲ್ಪವನ್ನು ಮಾಡಿದ್ದಾರೆ. ಇದರಿಂದಾಗಿ ವ್ಯಾಸತ್ರಯದ ಅಧ್ಯಯನದ ಪ್ರವೃತ್ತಿಯಾಗಲಿ ಎಂದು ಅವರ ಉದ್ದೇಶ. ಇದಕ್ಕೆ ರಾಯರ ಅನುಗ್ರಹವೂ ಸೇರಿದೆ. ಶ್ರೀಗಳವರು ಮಾಡಿರುವ ಅಭಿಮಾನಪೂರ್ವಕ ಒತ್ತಾಯದಿಂದ ಈ ಕೆಲಸ ನನ್ನಿಂದ ನಡೆದಿದೆ. ಅವರ ಸಂಕಲ್ಪದಂತೆ ಇದು ಈ ಮೊದಲೇ ಜಿಜ್ಞಾಸುಗಳ ಕೈಸೇರಬೇಕಿತ್ತು. ಆದರೂ ಅವಸರಿಸದೆ ತಾಳ್ಮೆಯಿಂದ ನನ್ನಿಂದಾದ ವಿಳಂಬವನ್ನು ಅವರು ಸಹಿಸಿಕೊಂಡಿದ್ದಾರೆ. ಅವರಿಗೆ ಪ್ರಣಾಮಪೂರ್ವಕ ಕೃತಜ್ಞತೆಗಳು.


**ವಿ|| ಎ. ಹರಿದಾಸಭಟ್**

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು

ನಿವೃತ್ತ ಪ್ರಾಚಾರ್ಯರು ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು